

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಬ್ರಹ್ಮ ಮಹಾಪುರಾಣ

ಅನುವಾದ- ಲೇಖಕರು ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತರು

-: ಪ್ರಕಾಶಕರು :-

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 22956505, 22956573

ಫ್ಯಾಕ್ಸ್ : 0091-80-22956570

0091-80-22956508

ಬ್ರಹ್ಮ ಮಹಾಪುರಾಣ

**BRAMHA MAHAAPURAANA** of Bhagavan Sri Vedavyasa Maharshi, edited and translated in to Kannada by Rajyaprashasti, Rashtraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveshwara Nagara, Shanthi Colony, Hubli-580032 Ph : (0836) 2250250

First Edition : 1967

Second Edition : 2006

No. of Pages : viii + 627

No. of Copies : 1,000



Price : Rs. 162 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chickmavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ಶ್ರೀ ವೇದವ್ಯಾಸ ಮಹರ್ಷಿಗಳು ರಚಿಸಿರುವ ಹದಿನೆಂಟು ಪುರಾಣಗಳಲ್ಲಿ ಬ್ರಹ್ಮಮಹಾಪುರಾಣ ಅತ್ಯಂತ ಪ್ರಾಚೀನವಾದುದು. ಮತ್ಸ್ಯಮಹಾಪುರಾಣದಲ್ಲಿ, ಬ್ರಹ್ಮಮಹಾಪುರಾಣದಶ್ಲೋಕಗಳ ಸಂಖ್ಯೆಯನ್ನು ಮೂವತ್ತು ಸಾವಿರ ಎಂದು ಹೇಳಲಾಗಿದೆ.

**ಬ್ರಹ್ಮಣಾಭಿಹಿತಂ ಪೂರ್ವಂ ಯಾವನ್ಮಾತ್ರಂ ಮರೀಚಯೇ ।**
**ಬ್ರಾಹ್ಮಂ ತ್ರಿದಶ ಸಾಹಸ್ರಂ ಪುರಾಣಂ ಪರಿಕೀರ್ತ್ಯತೇ ॥**

ಮರೀಚಿ ಮುನಿಗೆ ಹಿಂದೆ ಬ್ರಹ್ಮದೇವರು ಹೇಳಿದ ಮುವತ್ತು ಸಾವಿರ ಗ್ರಂಥಾತ್ಮಕವಾದ ಪುರಾಣವೇ ಬ್ರಹ್ಮಮಹಾಪುರಾಣ ಎಂದು ಹೇಳಲ್ಪಡುತ್ತದೆ. ಪಾಶ್ಚಾತ್ಯ ಪುರಾಣ ವಿಮರ್ಶಕರಾದ ವಿಲ್ಸನ್ನರು "**ತ್ರಿದಶಸಾಹಸ್ರಂ**" ಎಂಬುದಕ್ಕೆ ಬದಲಾಗಿ '**ದಶಸಾಹಸ್ರಂ**' ಎಂದು ಪಾಠಾಂತರವನ್ನು ಹೇಳಿದ್ದಾರೆ. ನಾರದ ಪುರಾಣದಲ್ಲಿಯೂ '**ದಶಸಾಸ್ರ ಮುಚ್ಯತೆ,**' ಎಂದು ಉಲ್ಲೇಖಿಸಲಾಗಿದೆ. ಆದರೆ ಈಗ ಉಪಲಬ್ಧವಿರುವ ಬ್ರಹ್ಮಮಹಾಪುರಾಣದಲ್ಲಿ ಹದಿಮೂರು ಸಾವಿರ ಪದ್ಯಗಳಿದ್ದುದರಿಂದ ಮತ್ಸ್ಯಪುರಾಣದ "**ತ್ರಿದಶಸಾಹಸ್ರ**" ಎನ್ನುವುದಕ್ಕೆ **ತ್ರಿ+ದಶಸಾಹಸ್ರಂ** ಎಂದು ಅರ್ಥೈಸಿದರೆ ಸರಿಯಾಗುತ್ತದೆ.

ಈ ಪುರಾಣದ ಕಾಲವನ್ನು ವಿಲ್ಸನ್ನರು ಕ್ರಿಸ್ತಾಬ್ಧದ ಹದಿಮೂರು ಅಥವಾ ಹದಿನಾಲ್ಕನೆಯ ಶತಮಾನದವರೆಗೂ ಎಳೆದಿದ್ದಾರೆ. ರಾಜೇಂದ್ರಚಂದ್ರ ಹಜರಾರವರು ಹನ್ನೆರಡನೇ ಶತಮಾನದ ಮಧ್ಯದಲ್ಲಿ ರಚಿಸಲ್ಪಟ್ಟಿರಬಹುದೆಂದು ವಾದಿಸಿದ್ದಾರೆ. ನಮ್ಮ ಅಭಿಪ್ರಾಯದಲ್ಲಿ ಇದರ ಮೂಲಭಾಗದ ವ್ಯಾಸಕೃತವೇ ಕ್ರಿಸ್ತಶಕ ಹದಿನಾರನೆಯ ಶತಕದವರೆಗೆ ಇದರ ಸಂಸ್ಕರಣೆ ನಡೆದಿದೆ ಎಂದಿದೆ.

ಇದರಲ್ಲಿ ಕಥಾ ಹಾಗೂ ಪ್ರಮೇಯ, ತತ್ವ, ಆಚಾರಾದಿಗಳು ಕೂಡಿಕೂಡಿಯೇ ಹೇಳಲ್ಪಟ್ಟಿರುವುದರಿಂದ ಈ ಪುರಾಣವು ಬೋಧಪ್ರದವೂ ಮೋದಪ್ರದವೂ ಆಗಿದೆ. ದೇವ ದಾನವ, ಮಾನವ, ಭಕ್ತ-ಭಗವಂತರ ಚಾರ ಚಾರಿತ್ರಿಕ ಚಿತ್ರಣದೊಂದಿಗೆ ವರ್ಣಾಶ್ರಮ ಧರ್ಮ, ದೈನಂದಿನ ಆಚಾರ, ಆಹ್ನಿಕ, ಸಾತ್ವಿಕ ಆಹಾರ, ಸತ್ವಶುದ್ಧಿ, ದೇಹಶುದ್ಧಿ, ಅಂತ್ಯೇಷ್ಟಿ, ಸ್ನಾನ, ದಾನ, ಸ್ತ್ರೀಧರ್ಮ, ಪಾಪಪ್ರಕಾರ, ಜಪತಪ, ವ್ರತ, ಮಾಸಧರ್ಮ ಮುಂತಾದ ಅನೇಕ ಸಾಂಪ್ರದಾಯಿಕವಾದ ಧರ್ಮ-ಕರ್ಮ ಕರ್ತವ್ಯಗಳ ನಿರ್ದೇಶನ ಇರುತ್ತದೆ.

ಈ ಎಲ್ಲ ವಿಷಯಗಳಲ್ಲಿ ಪರಿವರ್ತಿಗಳಾದ ಎಲ್ಲನಿಬಂಧಕಾರರೂ ಸ್ಮೃತಿಕಾರರೂ ಪ್ರಮಾಣಭೂತವಾಗಿ ಬ್ರಹ್ಮಮಹಾಪುರಾಣದಿಂದ ಪದ್ಯಗಳನ್ನು ತಮ್ಮ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಧಾರಾಳವಾಗಿ ಉದಾಹರಿಸಿದ್ದಾರೆ. ಹೇಮಾದ್ರಿ, ಶೂಲಪಾಣಿ, ವಾಚಸ್ಪತಿಮಿಶ್ರ, ಗೋವಿಂದಾನಂದ ಮುಂತಾದ ಅನಂತ ಕಾಲೀನ ನಿಬಂಧಕಾರರೂ ಮಾತ್ರವಲ್ಲದೇ ಅತ್ಯಂತ ಪ್ರಾಚೀನ ನಿಬಂಧ ಹಾಗೂ ಧರ್ಮಶಾಸ್ತ್ರಕಾರರಾದ ಜೀಮೂತವಾಹನ, ಅಪರಾರ್ಕ, ಶ್ರೀದತ್ತ, ಉಪಾಧ್ಯಾಯ, ಚಂಡೇಶ್ವರ, ಅನಿರುದ್ಧಭಟ್ಟ, ಮದನಪಾಲ, ಕುಲ್ಲೂಕಭಟ್ಟ, ಬಲ್ಲಾಳಸೇನ ಮುಂತಾದವರೂ ಕೂಡ ತಾವು ಹೇಳುವ ಧಾರ್ಮಿಕ ಕೃತ್ಯಗಳಿಗೆಲ್ಲ ಪ್ರೇರಕ ಹಾಗೂ ಅನುಶಾಸಕ ಪ್ರಮಾಣ ಪದ್ಯಗಳೆಂದು ಬ್ರಹ್ಮಮಹಾಪುರಾಣದ ಶ್ಲೋಕಗಳನ್ನು ಇಡಿಯಾಗಿ ಒಮ್ಮೊಮ್ಮೆ ಅಧ್ಯಾಯಗಟ್ಟಲೆ ಉದಾಹರಿಸುತ್ತಾರೆ.

ಹೀಗೆ ಉತ್ತರಕಾಲೀನರಾದ ಧಾರ್ಮಿಕ ಧುರೀಣರೆಲ್ಲರಿಂದ ಪರಿಗಣಿತವಾದ ಬ್ರಹ್ಮಮಹಾಪುರಾಣವು, ಆದಿಪುರಾಣ ಎಂದೂ ಕರೆಯಲ್ಪಟ್ಟಿದೆ. ಶ್ರೀ ವೇದವ್ಯಾಸ ಮಹರ್ಷಿಗಳು ರಚಿಸಿರುವ ಹದಿನೆಂಟು ಪುರಾಣಗಳಲ್ಲಿ ಮೊಟ್ಟಮೊದಲನೇಯದು ಬ್ರಹ್ಮಮಹಾಪುರಾಣವೇ ಎಂದು ನಾರದಪುರಾಣದಲ್ಲಿಯೂ ಉಲ್ಲೇಖಿಸಲಾಗಿದೆ.

**"ಬ್ರಾಹ್ಮಂ ಪುರಾಣಂ ತತ್ರಾದೌ ಸರ್ವಲೋಕ ಹಿತಾಯ ಚ**
**ವ್ಯಾಸೇನ ವೇದ ವಿದುಷಾ ಸಮಾಖ್ಯಾತಂ ಮಹಾತ್ಮನಾ"**

ಎಂದು ವ್ಯಾಸರಚಿತ ಪ್ರಪ್ರಥಮ ಪುರಾಣವೇ ಬ್ರಹ್ಮಪುರಾಣ ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಇದರಲ್ಲಿ **ಪೂರ್ವಭಾಗ - ಉತ್ತರಭಾಗ** ಎಂದು ಎರಡು ವಿಭಾಗವಿದ್ದು ಪೂರ್ವಭಾಗದಲ್ಲಿ ದೇವಾಸುರರ ಉತ್ಪತ್ತಿ, ದಕ್ಷಾದಿ ಪ್ರಜಾಪತಿಗಳ ಹಾಗೂ ಸೂರ್ಯನ ವಂಶಗಳ ವಿಸ್ತಾರ, ಶ್ರೀರಾಮಚಂದ್ರನ ಅವತಾರ, ಸೋಮವಂಶ ಬೆಳೆದ ಬಗೆ, ಕೃಷ್ಣಚರಿತ್ರೆ, ನದಿ-ಸಮುದ್ರ ದ್ವೀಪ, ರಾಷ್ಟ್ರಗಳ ವರ್ಣನೆ, ಸ್ವರ್ಗ-ಪಾತಾಳ ನರಕಗಳ ಕ್ಷೇತ್ರವರ್ಣನೆ, ಸೂರ್ಯಸ್ತುತಿ, ಪಾರ್ವತಿಯ ಜನ್ಮ, ವಿವಾಹ, ದಕ್ಷನಕಥೆ, ಏಕಾಮ್ರ ಕ್ಷೇತ್ರವರ್ಣನೆ, ಮುಂತಾದ ವಿಷಯಗಳಿವೆ. ಉತ್ತರಭಾಗ ಎಂಬ ಎರಡನೆಯ ವಿಭಾಗದಲ್ಲಿ ಪುರುಷೋತ್ತಮ ವರ್ಣನೆ ಯೋಗಸಾಂಖ್ಯ ಬ್ರಹ್ಮವಾದಾದಿಗಳ ಉದ್ದೇಶ ಪುರಾಣಾನುಶಾಸನೆ ಮುಂತಾದ ವಿಷಯಗಳು ಪ್ರತಿಪಾದಿಸಲ್ಪಟ್ಟಿದೆ.

ಈ ಬ್ರಹ್ಮಮಹಾಪುರಾಣದ ಭಾಗ-೧ ಹಾಗೂ ಭಾಗ-೨ ಎರಡೂ ಭಾಗಗಳನ್ನು ಸೇರಿಸಿ ಒಂದೇಭಾಗದಲ್ಲಿ ಇತ್ತೀಚೆಗೆ ೨೦೦೬ನೇ ಇಸವಿಯಲ್ಲಿ ಮುದ್ರಣ ಮಾಡಿ ಪ್ರಕಟಿಸಿದ್ದೇವೆ. ಬ್ರಹ್ಮ ಮಹಾಪುರಣದ ಎರಡೂಭಾಗಗಳನ್ನು ಒಂದರಕ್ಷರವೂ ಬಿಡದಂತೆ ಯಥಾವತ್ತಾಗಿ ಕಂಪ್ಯೂಟರ್ ಅಕ್ಷರಜೋಡಣೆ ತಾಂತ್ರಿಕತೆ ಹಾಗೂ ಮುದ್ರಣಕಾರರಾದ ಶ್ರೀವೆಂಕಟೇಶ್ವರ ಪ್ರಿಂಟರ್ಸ್ ಮಾಲೀಕರಾದ ಚಿರಂಜೀವಿ ಕೆ.ವಿ. ಸತ್ಯನಾರಾಯಣರವರ ಶ್ರದ್ಧೆ ಹಾಗೂ ಅವರ ತಂದೆಯವರಿಂದ ಕಲಿತ ಮುದ್ರಣ ಕೌಶಲ್ಯದ ಅಪಾರ ಜ್ಞಾನ ಹಾಗೂ ಆಸಕ್ತಿಯಿಂದ ಒಂದೇ ಭಾಗದಲ್ಲಿಯೇ ಮುದ್ರಣ ಪೂರ್ಣಗೊಳಿಸಲಾಗಿದೆ.

ಇಲ್ಲಿಯ ಪ್ರವಾಹಿ ಶೈಲಿಯಲ್ಲಿ ಅಲ್ಲಲ್ಲಿ ಹಲಕೆಲವು ಅತಿರಂಜಿತ ವರ್ಣನೆ ಒಮ್ಮೊಮ್ಮೆ ಅಧಿಕ ಶೃಂಗಾರ ತಲೆದೋರಿದರೂ ಕಥಾಚಕ್ರ ಉರುಳುತ್ತಲೇ ನೀತಿನಿಯಮ ನೈಋತ್ಯದ ಮಾತುಗಳನ್ನು ಒತ್ತುಕೊಟ್ಟು ಹೇಳುತ್ತಲೇ ಸಾಗುತ್ತದೆ. ಸಿದ್ಧಾಂತ ದೃಷ್ಟಾಂತಗಳ ಮಧುರ ಮಿಶ್ರಣದಿಂದ ಇದರ ಸರಣಿ ಓದುಗರಿಗೆ ರಂಜಕ ರೋಚಕವೂ ಆಗಿ ಶ್ರೀಸಾಮಾನ್ಯರನ್ನು ನೀತಿನಿಷ್ಠರಾದ ಆಧ್ಯಾತ್ಮಿಕ ಪುರುಷರನ್ನಾಗಿ ಮಾರ್ಪಡಿಸುವಲ್ಲಿ ಪುರಾಣವು ಯಶಸ್ವಿಯಾಗಿದೆ.

ವಿವಿಧ ಪ್ರಾಚ್ಯಗ್ರಂಥಾಲಯಗಳಿಂದ ಈ ಪುರಾಣದ ಐದು ಪಾಂಡು ಲಿಪಿಗಳನ್ನು ತಂದು ಅವುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ, ಕಠಿಣಪದ್ಯಗಳ ಭಾಷಾಂತರ ಕಾರ್ಯದಲ್ಲಿ ಸಹಕರಿಸಿದ ಪಂಡಿತ್ ಅಣ್ಣಯ್ಯಾಚಾರ್ಯ ಗಲಗಲಿ, ಪಂಡಿತ್ ನಾರಾಯಣಾಚಾರ್ಯ, ಪಂಡಿತ್ ವಸಂತಾಚಾರ್ಯಮಳಗಿ, ಬಾಬಾಚಾರ್ಯ, ಗೋಪಿನಾಥ ಮೊದಲಾದ ವಿದ್ವಾಂಸರಿಗೆ ನನ್ನ ಕೃತಜ್ಞತೆಗಳು.

3 – 11 – 2006 **ಪಂ. ಪಂಢರೀನಾಥಾಚಾರ್ಯಗಲಗಲಿ**

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**

**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಶ್ರೀಹರಿಖೋಡೆಯವರು. ಶ್ರೀ ವೇದವ್ಯಾಸಮಹರ್ಷಿಗಳಿಂದ ರಚಿತವಾದ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನ ಮೇಲೆ ಮಂದಾರ ಪರ್ವತವನ್ನು ಹೊತ್ತಂತೆ, ಶ್ರೀಹರಿಖೋಡೆಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಒದಗಿಸಿಕೊಡುತ್ತಿದ್ದಾರೆ.

ಈ ಬ್ರಹ್ಮ ಮಹಾಪುರಾಣ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ.3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ (ಸುಶೀಲರಸ್ತೆ ಕ್ರಾಸ್) ಬೆಂಗಳೂರು-560 004 ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೇಳು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಮೊಬೈಲ್ : 9342889827 ಬೆಂಗಳೂರು ಇವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಚಿತ್ರಿಸಿದ್ದಾರೆ. ಶ್ರೀಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ

3 – 11 – 2006 ಪಂಢರೀನಾಥಾಚಾರ್ಯ ಗಲಗಲಿ

ಹುಬ್ಬಳ್ಳಿ ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032

# ಪುರಾಣ ಪ್ರಜ್ಞೆ

ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಇಂದಿಗೂ ಅಳಿಯದೆ ಉಳಿದಿರುವ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಧಾನ್ಯವಿದೆ. ಭಾರತೀಯ ಸಂಸ್ಕೃತಿ ಬೆಳೆದು ಮಹಾವಟ ವೃಕ್ಷವಾಗಿ ನೆರಳು ನೀಡುತ್ತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಭಾರತೀಯರ ಜನಜೀವನದ ಪ್ರತಿಬಿಂಬವೇ ಈ ಪುರಾಣಗಳು.

ವೇದಗಳನ್ನು ಬಿಟ್ಟರೆ ಪುರಾಣಗಳಿಗೆ ಹೆಚ್ಚುಮಹತ್ವ. ಇದಕ್ಕೆ 'ಪಂಚಮವೇದ' ಎಂದೂ ಕರೆಯುತ್ತಾರೆ. ಶ್ರುತಿ, ಸ್ಮೃತಿ ಮತ್ತು ಇತಿಹಾಸಗಳಿಗೆ ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಯಲ್ಲಿ ಸಮಸಮವಾಗಿ ತೂಗುವ, ಸತ್ಯ, ತತ್ವ ಮತ್ತು ಮಹತ್ವವೇನೆ ಇದ್ದರೂ ಆದ ಪುರಾಣಗಳಿಂದ ಬರುತ್ತದೆ.

ಅಮರಸಿಂಹನ ನಾಮಲಿಂಗನುಶಾಸನದಲ್ಲಿ ಪುರಾಣದಲ್ಲಿರುವುದನ್ನು ಈ ರೀತಿ ಹೇಳುತ್ತಾರೆ.

**''ಆಮ್ನಾಯಿಕೋಪಲಬ್ದಾರ್ಥಾಪುರಾಣ ಪಂಚಲಕ್ಷಣಂ,**
**ಸ್ವರ್ಗಶ್ಚ ಪ್ರತಿಸ್ವರ್ಗಶ್ಚ ವಂಶೋಮನ್ವಂತರಾಶಿ ಚ**
**ವಂಶಾನುಚರಿತಂ ಚೈವ ಪುರಾಣಂ ಪ್ರಂಚಲಿಪುಣಂ''**

ಒಟ್ಟು ಹದಿನೆಂಟು ಪುರಾಣಗಳು, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳು ನಾಲ್ಕು ಲಿಪಿ ಶ್ಲೋಕಗಳಲ್ಲಿ ಬಂದಿವೆ.

ಪ್ರಸ್ತುತ ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರು ಬಹುಶ್ರಮದಿಂದ ಈ ಪುರಾಣಗಳನ್ನು ಲೇಖಾನುವಾದ ಮಾಡಿದ್ದಾರೆ. ಭಾರತದೇಶದ, ವಿಶೇಷವಾಗಿ ಕರ್ನಾಟಕದ ಜನತೆಯ ಮನೆ-ಮನದಲ್ಲಿ ಅವರು ಪ್ರಾಥಸ್ಮರಣೀಯರು.

ಆದ್ದರಿಂದ ಈ ಎಲ್ಲಾ ಹದಿನೆಂಟುಪುರಾಣಗಳನ್ನು ಪಠಿಸಿ, ಕೇಳಿ, ಮನನ ಮಾಡಿಕೊಂಡು ಬಾಳನ್ನು ಸಾರ್ಥಕಗೊಳಿಸಿಕೊಳ್ಳೋಣ. ಹಾಗೆಯೇ. ''ಅಬ್ಧಿಗೆ ಅತಿ ಮಿತಿಯುಂಟು, ಆದರೆ ಬುದ್ಧಿಗೆ ಮಿತಿಯಿಲ್ಲ.'' ಆದ್ದರಿಂದ ಪ್ರಜ್ಞರು, ಬಲ್ಲವರು ಈ ಪುರಾಣಗಳಲ್ಲಿ ಬರುವ, ವಸ್ತು, ಪಾತ್ರ, ಶೈಲಿ, ನಿರೂಪಣೆ ಮತ್ತು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯ ಮತ್ತು ಲೋಪದೋಷ, ಜಿಜ್ಞಾಸೆಗಳೇನಾದರೂ ಕಂಡು ಬಂದಲ್ಲಿ ಅದನ್ನು ತಮ್ಮ ಪ್ರತಿಯಲ್ಲಿ ತಿದ್ದಿ ತಿಳಿಸಿದರೆ ಅದರಬದಲು ತಮ್ಮಗೆ ಮತ್ತೊಂದು ಶುದ್ಧಪ್ರತಿಯನ್ನು ನೀಡಲಾಗುವುದು. ಹಾಗೂ ತಾವು ತೋರಿಸಿದ ಲೋಪ- ದೋಷಗಳನ್ನು ಪರಿಷ್ಕರಿಸಿ ದ್ವಿತೀಯ ಮುದ್ರಣದಲ್ಲಿ ಅಳವಡಿಸಿ ಕೊಳ್ಳಲು ಸಂಪಾದಕ ವರ್ಗವು ಸದಾ ಸಿದ್ಧವಿದೆ. ದ್ವಿತೀಯಮುದ್ರಣದ ನಂತರ ತಮಗೆ ಉಡುಗೊರೆಯ ಜೊತೆ ನೂತನ ಪರಿಷ್ಕರಿಸಿದ ಪ್ರತಿಯನ್ನೂ ಸಹ ನೀಡಲಾಗುವುದು. ತಮ್ಮ ಅಭಿಪ್ರಾಯವನ್ನು ಅತ್ಯಂತ ಆದರದಿಂದ ಸ್ವಾಗತಿಸುತ್ತೇವೆ. ದಯವಿಟ್ಟು ಈ ಅನಂತಸಾಗರ ಪುರಾಣಪ್ರಜ್ಞಾ ಕೈಂಕರ್ಯದಲ್ಲಿ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿ. ಹಾಗೂ ದ್ವಿತೀಯ ಮುದ್ರಣವು ಇನ್ನೂ ಉತ್ತಮವಾಗಿ ಹೊರತರಲು ತಮ್ಮೆಲ್ಲರ ಸಹಕಾರ ಅಗತ್ಯ.

**ಎಲ್. ಶ್ರೀಹರಿ ಖೋಡೆ**
ಪ್ರಕಾಶಕರು, ಖೋಡೆ ಫೌಂಡೇಶನ್,
ಗ್ರಂಥಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ,
ಶೇಷಾದ್ರಿ ರಸ್ತೆ, ಗಾಂಧಿನಗರ,
ಬೆಂಗಳೂರು-560 009

# ಬ್ರಹ್ಮ ಮಹಾಪುರಾಣ

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಸಂಖ್ಯೆ

॥ ಶ್ರೀ ವೇದವ್ಯಾಸಃ ಪ್ರಸೀದತು ॥

# ಬ್ರಹ್ಮಪುರಾಣ

## ಸೃಷ್ಟಿಕಥನ

ಅಧ್ಯಾಯ - ೧

**ಯಸ್ಮಾತ್ಸರ್ವಮಿದಂ ಪ್ರಪಂಚರಚನಂ ಮಾಯಾ ಜಗಜ್ಜಾಯತೇ ।**
**ಯಸ್ಮಿಂಸ್ತಿಷ್ಠತಿ ಯಾತಿ ಚಾಂತಸಮಯೇ ಕಲ್ಪಾನುಕಲ್ಪೇ ಪುನಃ ।**
**ಯಂ ಧ್ಯಾತ್ವಾ ಮುನಯಃ ಪ್ರಪಂಚರಹಿತಂ ವಿದಂತಿ ಮೋಕ್ಷಂ ಧ್ರುವಂ ।**
**ತಂ ವಂದೇ ಪುರುಷೋತ್ತಮಾಖ್ಯಮಮಲಂ ನಿತ್ಯಂ ವಿಭುಂ ನಿಶ್ಚಲಮ್ ।**

ಯಾವನಿಂದ ಈ ಸಕಲ ಜಗತ್ತು ಸೃಷ್ಟಿಯಾಗುವುದೋ, ದೃಷ್ಟಿಗೋಚರವಾಗುವ ಸ್ಥಾವರ ಜಂಗಮಾತ್ಮಕವಾದ, ಮಾಯೆಯೆಂಬ ಭಗವಂತನ ಶಕ್ತಿ ವಿಶೇಷದಿಂದ ಉಂಟಾದ ಜಗತ್ತೆಲ್ಲವೂ, ಯಾವ ಪರಮಾತ್ಮನನ್ನೇ ಆಶ್ರಯಿಸಿ ಇರುವುದೋ, ಯುಗಾಂತ ಕಾಲದಲ್ಲಿಯೂ, ಪ್ರತಿಯೊಂದು ಕಲ್ಪಗಳಲ್ಲಿಯೂ ಯಾವ ಭಗವಂತನಲ್ಲಿ ಜಗತ್ತೆಲ್ಲ ಸೂಕ್ಷ್ಮರೂಪದಿಂದ ಇರುವುದೋ, ಪ್ರಪಂಚದಿಂದ ಭೇದವುಳ್ಳ ಯಾರನ್ನು ಧ್ಯಾನಿಸಿ ಋಷಿಗಳು ನಿಶ್ಚಿತವಾದ ಮೋಕ್ಷಪದವನ್ನು ಹೊಂದುವರೋ, ಅಂಥ ಪುರುಷೋತ್ತಮ ಎಂಬ ಹೆಸರಿನ, ನಿಷ್ಕಲಂಕನಾದ, ಅನಾದ್ಯನಂತನಾದ, ವಿಕಾರರಹಿತನಾದ, ಸರ್ವತ್ರ ವ್ಯಾಪಿಸಿರುವ ಸ್ವಾಮಿಗೆ ನಮಿಸುವೆ.

ವಿದ್ವಾಂಸರು ಸಮಾಧಿಯನ್ನು ಹೊಂದಿ, ಯಾರನ್ನು ಅಖಂಡವಾಗಿ ಸ್ಮರಿಸುವರೋ, ಅಂಥ ಪರಿಶುದ್ಧನಾದ, ಆಕಾಶದಂತೆ ಅಪರಿಚ್ಛಿನ್ನನಾದ, ಸದಾ ಆನಂದ ಸ್ವರೂಪಿಯಾದ, ಸದಾ ಪ್ರಸನ್ನನಾದ, ದೋಷಲೇಶ ರಹಿತನಾದ, ಸಕಲಸ್ವಾಮಿಯಾದ ಸತ್ವ, ರಜಸ್, ತಮಸ್ ಎಂಬ ಪ್ರಾಕೃತಿಕ ಗುಣರಹಿತನಾದುದರಿಂದ ನಿರ್ಗುಣನಾದ ವ್ಯಕ್ತ ಹಾಗೂ ಅವ್ಯಕ್ತ ಉಭಯ ಸ್ವರೂಪವುಳ್ಳ, ಪ್ರಾಪಂಚಿಕ ಸಂಬಂಧದಿಂದ ಉಂಟಾಗುವ ದೋಷರಹಿತನಾದ, ಧ್ಯಾನದಿಂದ ಮಾತ್ರ ತಿಳಿಯಲು ಯೋಗ್ಯನಾದ ಯುಗಾಂತ್ಯದಲ್ಲಿ ಪ್ರಪಂಚನಾಶಕ್ಕೆ ಕಾರಣನಾದ, ಮುಪ್ಪು ಮೊದಲಾದವುಗಳಿಲ್ಲದ, ಮೋಕ್ಷದಾಯಕನಾದ ಶ್ರೀಹರಿಯನ್ನು ವಂದಿಸುವೆ.

ಹೀಗೆ ನಾರಾಯಣನನ್ನು ನಮಿಸಿ ಗ್ರಂಥವನ್ನು ಆರಂಭಿಸುತ್ತಿದ್ದಾರೆ. ನೈಮಿಷಾರಣ್ಯ ಎಂಬುದು ಒಂದು ಪುಣ್ಯಕ್ಷೇತ್ರ. ಈ ತಪೋವನದಲ್ಲಿ ಅನೇಕ ಮುನಿಮನೀಷಿಗಳು ತರತರಹದ ತಪಸ್ಸಾಧನೆಗಳಲ್ಲಿ ನಿರತರು. ಆ ಕಾಡಿನ ಪರಿಸರವೂ ಅಲ್ಲಿರುವ ಬಗೆಬಗೆಯ ವೃಕ್ಷಗಳಿಂದ ಬಹುಸುಂದರ, ಆ ವನಾಂತರಗಳಲ್ಲಿ ಸರಲ, ಕರ್ಣಿಕಾರ, ಹಲಸು, ಧವ, ಖದಿರ, ಮಾವು, ನೇರಳೆ, ಬೇಲ, ಆಲ, ದೇವದಾರು, ಅಶ್ವತ್ಥ, ಪಾರಿಜಾತ, ಚಂದನ, ಅಗರು, ಪಾದಲ, ವಕುಲ, ಬಾಳೆ, ಪುನ್ನಾಗ, ನಾಗಕೇಸರ, ಶಾಲಿ, ತಾಲ, ತಮಾಲ, ತೆಂಗು,

ಅಡಿಕೆ, ಅರ್ಜುನ, ಸಂಪಿಗೆ ಮುಂತಾದ ಅಸಂಖ್ಯ ವೃಕ್ಷ ಶ್ರೇಷ್ಠಗಳು ಫಲಪುಷ್ಪ ಭರಿತವಾಗಿ ಆ ಕಾಡಿಗೆ ಶೋಭೆಯನ್ನು ತಂದಿವೆ. ಇಷ್ಟೊಂದು ಬಗೆಯ ವೃಕ್ಷಗಳಿಂದ ಅಲಂಕೃತವಾದ ಈ ಅರಣ್ಯದಲ್ಲಿ ಸಹಜವಾಗಿಯೇ ಸಕಲ ವಿಧ ಪಕ್ಷಿಗಳೂ, ನಾನಾ ಬಗೆಯ ಮೃಗಗಳೂ, ಪಶುಗಳೂ, ಸ್ವಚ್ಛಂದವಾಗಿ ವಿಹಾರರತವಾಗಿವೆ. ಅಲ್ಲಲ್ಲಿ ಕಾಣುವ ದೊಡ್ಡ ಹಾಗೂ ಚಿಕ್ಕ ಸರೋವರಗಳು, ಕೆರೆಗಳು, ಬಾವಿಗಳು, ಪ್ರಕೃತಿ ನಿರ್ಮಿತ ಈಜುಕೊಳಗಳು, ಆ ಪ್ರಾಂತದ ರಮಣೀಯತೆಯನ್ನು ಇನ್ನೂ ಹೆಚ್ಚಿಸಿದೆ. ಸಾತ್ವಿಕರಾದ ದ್ವಿಜರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಮತ್ತಿತರ ಜನರು ಈ ಪರಿಸರದ ಪಾವಿತ್ರ್ಯದಿಂದಾಗಿ ಅಲ್ಲಿಯೇ ನೆಮ್ಮದಿಯ ಜೀವನ ಸಾಗಿಸುತ್ತಿದ್ದಾರೆ. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ ಎಂಬ ನಾಲ್ಕು ಆಶ್ರಮದ ಸಾಧಕರೂ ಅಲ್ಲಿ ಇರುವರು. ಸಮೃದ್ಧವಾಗಿ ಹಾಲು ಹಿಂಡುವ ಗೋವುಗಳು, ಎಮ್ಮೆಗಳೂ ಅಲ್ಲಿ ಸುಖವಾಗಿ ವಾಸಮಾಡಿವೆ. ವನದಲ್ಲಿ ಆಹಾರೋಪಯೋಗಿ ಸಸ್ಯಸಂಪತ್ತೂ ಸಾಕಷ್ಟಿದೆ. ಭತ್ತ, ಗೋಧಿ, ಕಡಲೆ, ಉದ್ದು, ಹೆಸರು, ಎಳ್ಳು, ಕಬ್ಬು ಇವೇ ಮುಂತಾದ ಸಸಿಗಳೂ, ಕರ್ಪೂರವೇ ಮೊದಲಾದ ಸುಗಂಧ ಭರಿತ ವೃಕ್ಷಗಳಿಂದ ಸಂಪದ್ಭರಿತವಾಗಿದೆ ಆ ವನಪ್ರದೇಶ. ಇಂಥ ಸುಸಂಪನ್ನ ರಮಣೀಯ ವನಪ್ರದೇಶದಲ್ಲಿ ಮಹಾಮಹರ್ಷಿಗಳೂ, ಮುನಿಪುಂಗವರೂ ಸೇರಿ ಬೃಹದ್ಯಾಗವನ್ನು ಮಾಡಲು ಸಮಾಲೋಚನೆಗೈದರು. ಯಾಗಕ್ಕೆ ಪೂರಕವಾದ ಅಗ್ನಿ ಪ್ರತಿಷ್ಠಾಪನಾದಿಗಳನ್ನು ಸಾಂಗವಾಗಿ ನೆರವೇರಿಸಿದರು. ಹನ್ನೆರಡು ವರ್ಷಗಳ ಕಾಲ ನಡೆಯಲಿದ್ದ ಆ ಯಾಗವನ್ನು ವೀಕ್ಷಿಸಲು ಪ್ರಪಂಚದ ಬೇರೆ ಬೇರೆ ಭಾಗಗಳಿಂದ ಅನೇಕ ಜನರು ಆಗಮಿಸಿದರು. ಯಜ್ಞವನ್ನು ನೋಡಲು ಬಂದವರಿಗೆಲ್ಲ ಉಚಿತವಾದ ಆಸನಾದಿಗಳನ್ನು ಒದಗಿಸಿ ಮುನಿಜರು ಸತ್ಕರಿಸಿದರು.

ಇದೇ ಸಂದರ್ಭದಲ್ಲಿ ಮಹಾಪ್ರಾಜ್ಞರಾದ ಲೋಮಹರ್ಷಣರೆಂಬ ಸೂತಾಚಾರ್ಯರೂ ಆ ಸ್ಥಳಕ್ಕೆ ಆಗಮಿಸಿದರು. ಲೋಮಹರ್ಷಣರನ್ನು ಕಂಡಾಕ್ಷಣ ಯಾಗವನ್ನು ಮಾಡುತ್ತಿದ್ದ ಮುನಿಗಳಿಗೆ ಮಹದಾನಂದವುಂಟಾಯಿತು. ಧಾವಿಸಿ ಬಂದು ಅವರಿಗೆ ಸ್ವಾಗತ ಬಯಸಿ ಕುಶಲಪ್ರಶ್ನೆ ಮಾಡಿ ಎಲ್ಲ ಮುನಿಗಳೂ ಗೌರವಾದರಗಳನ್ನು ವ್ಯಕ್ತಪಡಿಸಿದರು. ಲೋಮಹರ್ಷಣರು ತಮ್ಮ ಕುಶಲ ವಾರ್ತೆಯನ್ನು ತಿಳಿಸಿ ಎಲ್ಲ ಮುನಿಗಳನ್ನು ಸಂತೋಷಗೊಳಿಸಿದರು. ಅನೇಕ ಮುನಿಗಳನು ಪ್ರತ್ಯೇಕವಾಗಿ ಮಾತನಾಡಿಸಿ ಸುಖ-ದುಃಖ ವಿಚಾರಿಸಿ ಅವರವರ ಸಾಧನೆ ಸಾಗಿದ ಬಗೆಯನ್ನು ಅವರವರೊಡನೆ ವಾತ್ಸಲ್ಯದಿಂದ ಪರ್ಯಾಲೋಚನೆಗೈದರು. ಆಗ ಆ ಮುನಿಗಳು ಶಾಸ್ತ್ರೀಯ ವಿಷಯಗಳಲ್ಲಿ ತಮತಮಗುಂಟಾಗಿದ್ದ ಅನೇಕ ಸಂಶಯಗಳನ್ನು ವ್ಯಾಸಶಿಷ್ಯರೂ, ಬುದ್ಧಿಶಾಲಿಗಳೂ ಆಗಿದ್ದ ಲೋಮಹರ್ಷಣರಲ್ಲಿ ಹೀಗೆ ವ್ಯಕ್ತಪಡಿಸಿ, ಪರಿಹರಿಸಲು ಕೋರಿಕೊಂಡರು.

**ಮಹರ್ಷಿಗಳು:-**

ಯಥಾ ಪೂರ್ವಮಿದಂ ಸರ್ವಮುತ್ಪನ್ನಂ ಸಚರಾಚರಂ ।
ಸಸುರಾಸುರಗಂಧರ್ವಂ ಸಯಕ್ಷೋರಗರಾಕ್ಷಸಂ ॥

ಶ್ರೋತುಮಿಚ್ಛಾಮಹೇ ಸೂತ ಬ್ರೂಹಿ ಸರ್ವಂ ಯಥಾ ಜಗತ್ ।
ಬಭೂವ ಭಯಶ್ಚ ಯಥಾ ಮಹಾಭಾಗ ಭವಿಷ್ಯತಿ ॥

**ಯತಶ್ಚೈವ ಜಗತ್ಸೂತ ಯತಶ್ಚೈವ ಚರಾಚರಂ ।**
**ಲೀನಮಾಸೀತ್ತಥಾ ಯತ್ರ ಲಯಮೇಷ್ಯತಿ ಯತ್ರ ಚ ॥**

ಪ್ರಾಜ್ಞರೆ, ದೇವದಾನವರಿಂದಲೂ, ಯಕ್ಷರಾಕ್ಷಸರಿಂದಲೂ, ಗಂಧರ್ವರಿಂದಲೂ ಕೂಡಿದ ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವು ಹಿಂದಿನ ಕಲ್ಪದಲ್ಲಿ ಹೇಗೆ ಇದ್ದಿತು? ಈ ಕಲ್ಪದಲ್ಲಿ ಇದು ಆವಿರ್ಭೂತವಾದ ಬಗೆ ಹೇಗೆ? ಈ ಪ್ರಪಂಚದ ಇನ್ನು ಮುಂದಿನ ಸ್ಥಿತಿಗತಿಗಳೇನು? ಇದನ್ನು ಸೃಷ್ಟಿ ಮಾಡಿದವ ಯಾರು? ಯಾರಲ್ಲಿ ಇದು ಲೀನ ವಾಗುವುದು? ಈ ವಿಷಯಗಳನ್ನು ತಮ್ಮ ಮುಖದಿಂದ ಕೇಳಿ ತಿಳಿಯುವ ಅಭಿಲಾಷೆ ನಮ್ಮಲ್ಲಿ ಉಂಟಾಗಿದೆ. ವಿಸ್ತಾರವಾಗಿ ಈ ಪ್ರಶ್ನೆಗಳಿಗೆ ಉತ್ತರ ನೀಡಬೇಕೆಂದು ಕೇಳಿಕೊಳ್ಳುತ್ತೇವೆ.

**ಲೋಮಹರ್ಷಣರು:-**

**ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ ।**
**ಸದೈಕರೂಪರೂಪಾಯ ವಿಷ್ಣವೇ ಸರ್ವಜಿಷ್ಣವೇ ॥**

ವಿಕಾರರಹಿತನಾದ, ಶುದ್ಧಸ್ವರೂಪಿಯಾದ, ಆದ್ಯಂತಗಳಿಲ್ಲದ, ಸತ್ವೈಕ ಶರೀರಿಯಾದ, ಸಕಲ ಪ್ರಾಣಿಗಳ ಹೃದಯದಲ್ಲೂ ವಾಸಿಸಿದ ಪರಮಾತ್ಮನಿಗೆ ಇದೋ ನನ್ನ ನಮಸ್ಕಾರ.

**ನಮೋ ಹಿರಣ್ಯಗರ್ಭಾಯ ಹರಯೇ ಶಂಕರಾಯ ಚ ।**
**ವಾಸುದೇವಾಯ ತಾರಾಯ ಸ್ವರ್ಗಸ್ಥಿತ್ಯಂತಕರ್ಮಣೇ ॥**

ಭಗವಂತ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಮೂರು ರೂಪಗಳಿಂದ ಸೃಷ್ಟಿ, ಸ್ಥಿತಿ ಸಂಹಾರವೇ ಮೊದಲಾದ ಕಾರ್ಯಗಳನ್ನು ನಿರ್ವಹಿಸುವವ ನೀನೇ.

**ಏಕಾನೇಕ ಸ್ವರೂಪಾಯ ಸ್ಥೂಲಸೂಕ್ಷ್ಮಾತ್ಮನೇ ನಮಃ ।**
**ಅವ್ಯಕ್ತವ್ಯಕ್ತಭೂತಾಯ ವಿಷ್ಣವೇ ಮುಕ್ತಿಹೇತವೇ ॥**

ನಿನ್ನ ಇಚ್ಛೆಯಿಂದಲೇ, ನೀನು ದೊಡ್ಡ ಹಾಗೂ ಚಿಕ್ಕ ರೂಪಗಳನ್ನು ಧರಿಸುವ. ಅವ್ಯಕ್ತ ಸ್ವರೂಪಿಯಾದರೂ, ಭಕ್ತರ ಮೇಲಿನ ದಯೆಯಿಂದ ವ್ಯಕ್ತನಾಗಿ ಅವರಿಗೆ, ಮುಕ್ತಿಯನ್ನು ಕರುಣಿಸುವೆ.

**ಸ್ವರ್ಗಸ್ಥಿತಿ ವಿನಾಶಾಯ ಜಗತೋ ಯೋಽಜರಾಮರಃ ।**
**ಮೂಲಭೂತೋ ನಮಸ್ತಸ್ಮೈ ವಿಷ್ಣವೇ ಪರಮಾತ್ಮನೇ ॥**

ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳು ನಿನ್ನ ಅಧೀನ. ಜರಾಮಾಣ ಮೊದಲಾದ ದೋಷಗಳಿಂದ ನೀನು ಬಹುದೂರ. ಸಮಸ್ತ ಜಗತ್ತಿಗೆ ಮೂಲ ಶಕ್ತಿಯಾಗಿರುವೆ ನೀನು. ಇಂಥ ನನ್ನ ಸ್ವಾಮಿಯೇ! ನಿನಗೆ ನನ್ನ ವಂದನೆಗಳು.

**ಆಧಾರಭೂತಂ ವಿಶ್ವಸ್ಯಾಪ್ಯಣೀಯಾಂಸಂ ಅಣೀಯಸಾಂ ।**
**ಪ್ರಣಮ್ಯ ಸರ್ವಭೂತಸ್ಥಮಚ್ಯುತಂ ಪುರುಷೋತ್ತಮಂ ॥**

ಬೃಹದಾಕಾರದ ಈ ವಿಶ್ವಕ್ಕೆ ಆಧಾರನಾಗಿದ್ದರೂ ಅಣುವಿಗಿಂತಲೂ ಸೂಕ್ಷ್ಮವಾದ ರೂಪವುಳ್ಳವ, ಸಕಲ ಭೂತಗಳಲ್ಲಿ ಆವಾಸನ ಮಾಡಿದವ. ಇಂಥ ಅದ್ಭುತ ಸ್ವರೂಪದ ಪುರುಷೋತ್ತಮನನ್ನು ನಮಿಸುವೆ.

**ಜ್ಞಾನಸ್ವರೂಪಮತ್ಯಂತಂ ನಿರ್ಮಲಂ ಪರಮಾರ್ಥತಃ ।**
**ತಮೇವಾರ್ಥಸ್ವರೂಪೇಣ ಭ್ರಾಂತಿದರ್ಶನತಃ ಸ್ಥಿತಂ ॥**

ಸ್ವಾಮಿಯು ಜ್ಞಾನಸ್ವರೂಪಿಯು, ನಿರ್ಮಲನು. ಸೃಷ್ಟ್ಯಾದಿಗಳನ್ನು ಮಾಡಲು ಅವನಿಗೆ ಇನಿತೂ ಆಯಾಸವಾಗದು.

**ವಿಷ್ಣುಂ ಗ್ರಸಿಷ್ಣುಂ ವಿಶ್ವಸ್ಯ ಸ್ಥಿತೌ ಸರ್ಗೇ ತಥಾ ಪ್ರಭುಂ ।**
**ಸರ್ವಜ್ಞಂ ಜಗತಾಮೀಶಮಜಮಕ್ಷರಮವ್ಯಯಂ ॥**

ಅವನಿಗೆ ಅದು ಆಟ. ಸರ್ವ ಪದಾರ್ಥಗಳ ಪರಮಾಣು ಪರ್ಯಂತರ ಸುಸೂಕ್ಷ್ಮ ಜ್ಞಾನವುಳ್ಳವ.

**ಆದ್ಯಂ ಸುಸೂಕ್ಷ್ಮಂ ವಿಶ್ವೇಶಂ ಬ್ರಹ್ಮಾದೀನ್ಪ್ರಣಿಪತ್ಯ ಚ ।**
**ಇತಿಹಾಸಪುರಾಣಜ್ಞಂ ವೇದವೇದಾಂಗಪಾರಗಂ ।**
**ಸರ್ವಶಾಸ್ತ್ರಜ್ಞ ತತ್ವಜ್ಞಂ ಪರಾಶರಸುತಂ ಪ್ರಭುಂ ।**
**ಗುರುಂ ಪ್ರಣಮ್ಯ ವಕ್ಷ್ಯಾಮಿ ಪುರಾಣಂ ವೇದಸಂಮಿತಂ ॥**

ಆ ಎಲ್ಲ ಪದಾರ್ಥ ಕ್ರಿಯೆಗಳಿಗೆ ಪ್ರೇರಕ. ಜರಾಮರಣ ರಹಿತನಾಗಿ ನಿತ್ಯ ಎಂದೇ ಲೋಕದಲ್ಲಿ ಪ್ರಖ್ಯಾತ. ಇಂಥ ದೇವದೇವನಾದ ವಿಷ್ಣುವನ್ನು ವಂದಿಸುವೆ, ಬ್ರಹ್ಮಾದಿ ದೇವತೆಗಳನ್ನು ಪ್ರಣಮಿಸುವೆ. ವೇದವೇದಾಂತ ವಿದ್ಯಾಪಾರಂಗತನಾದ, ಪರಾಶರ ಸುತನಾದ, ನನಗೆ ಗುರುವಾದ ವ್ಯಾಸಮಹರ್ಷಿಯನ್ನು ಭಕ್ತಿಯಿಂದ ನಮಸ್ಕರಿಸುವೆ.

ನಿಮ್ಮ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ವೇದತುಲ್ಯವೆಂದು ಪರಿಗಣಿತವಾದ **ಬ್ರಹ್ಮಪುರಾಣ**ವನ್ನು ಹೇಳುವೆ.ಈ ಪುರಾಣವನ್ನು ಹಿಂದೆ ದಕ್ಷನೇ ಮೊದಲಾದ ತಪಸ್ವಿಗಳಿಂದ ಪ್ರಾರ್ಥಿತನಾಗಿ ಸ್ವಯಂ ಬ್ರಹ್ಮನೇ ಅವರಿಗೆ ಉಪದೇಶಿಸಿರುವನು. ಆದಿಕವಿಯಾದ ಬ್ರಹ್ಮನಿಂದ ಪ್ರೋಕ್ತವಾದ **ಬ್ರಹ್ಮಪುರಾಣ**ವನ್ನು ನಿಮಗೆ ಹೇಳುವೆ. ಈ **ಬ್ರಹ್ಮಪುರಾಣ**ವು ವೇದೋಕ್ತವಾದ ತತ್ವಗಳನ್ನು ಅಲ್ಲಲ್ಲಿ ಸೋದಾಹರಣವಾಗಿ ವಿಶದಗೊಳಿಸಿದೆ. ಆದುದರಿಂದ ಶಾಸ್ತ್ರಾರ್ಥಗಳಿಂದ ಯುಕ್ತವಾದ ಈ ಪುರಾಣ ಶ್ರವಣವನ್ನು ಭಕ್ತಿ ಶ್ರದ್ಧಾ ಸಂಯುತನಾಗಿ ಮಾಡಿದವ ಸ್ವವಂಶೋದ್ಧಾರಕನಾಗುವನು. ಸ್ವರ್ಗಾದಿ ಉತ್ತಮ ಲೋಕಗಳಲ್ಲೂ ಸನ್ಮಾನಿತನಾಗುವನು. ಸಾವಧಾನ ಮನಸ್ಕರಾಗಿ ಕೇಳಿರಿ.

**ಅವ್ಯಕ್ತಂ ಕಾರಣಂ ಮತ್ತನ್ನಿತ್ಯಂ ಸದಸದಾತ್ಮಕಂ ।**
**ಪ್ರಧಾನಂ ಪುರುಷಸ್ತಸ್ಮಾನ್ನಿರ್ಮಮೇ ವಿಶ್ವಮೀಶ್ವರಃ ॥**

ಅವ್ಯಕ್ತ ಎಂಬ ಹೆಸರಿನ ನಿತ್ಯ ಪ್ರಕೃತಿಯು ಸದಸದಾತ್ಮಕವಾಗಿ ಸಮಸ್ತ ಸೃಷ್ಟಿಗೆ ಉಪಾದಾನ ಕಾರಣವು. ಈ ಪ್ರಕೃತಿಯಿಂದ ವಿಷ್ಣುವು ಜಗತ್ಸೃಷ್ಟಿಯನ್ನು ಮಾಡಿರುವವನು. ಮಹತ್ ಎಂಬ ತತ್ವದಿಂದ ಜಗತ್ ಸೃಷ್ಟಿಯಾಯಿತು. ತತ್ವದ ಅಭಿಮಾನಿ ದೇವತೆ ಬ್ರಹ್ಮ. ಆದುದರಿಂದ ಬ್ರಹ್ಮನಿಂದ ಜಗತ್ಸೃಷ್ಟಿಯಾಯಿತೆಂದು ಹೇಳುವರು. ಬ್ರಹ್ಮನು ನಾರಾಯಣನ ಅನುಗ್ರಹದಿಂದ ಈ ಜಗತ್ತಿನ ಸೃಷ್ಟಿಗೈದ. ಈ ಮಹತ್ತತ್ವದಿಂದ ಅಹಂಕಾರ ತತ್ವವೂ, ಅಹಂಕಾರ ತತ್ವದಿಂದ ಪಂಚಸೂಕ್ಷ್ಮ ಭೂತಗಳೂ ಉದ್ಭವಿಸಿದವು. ಈ ಪಂಚ ಸೂಕ್ಷ್ಮಗಳಿಂದ ಪೃಥಿವಿ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಪಂಚಮಹಾಭೂತಗಳು ಉತ್ಪನ್ನವಾದವು. ಪಂಚಮಹಾಭೂತಗಳಿಂದ ಸ್ಥೂಲ ಜಗತ್ತಿನ ಸೃಷ್ಟಿಯಾಯಿತು. ಇದು ಸೃಷ್ಟಿಯ ಸಾಮಾನ್ಯ ವಿವರ.

ಇದನ್ನೇ ವಿಸ್ತೃತವಾಗಿ ನನಗೆ ತಿಳಿದಿರುವಷ್ಟನ್ನು ತಿಳಿಸುವೆ ಕೇಳಿರಿ. ಜಡ ಜಗತ್ತಿನ ಸೃಷ್ಟಿಯಾದ ಬಳಿಕ ಪರಮಾತ್ಮನು ಶರೀರಗಳನ್ನು ಹೀಗೆ ಸೃಷ್ಟಿಸಿದನು. ಮೊದಲು ಜಲವನ್ನು ವ್ಯಾಪಕವಾಗಿ ಎಲ್ಲೆಡೆ ಸೃಷ್ಟಿಸಿದನು. ಆ ಜಲದಲ್ಲಿ ತನ್ನ ಶಕ್ತಿಯನ್ನು ವಿಸರ್ಜಿಸಿದನು. ಆದಿ ''ನರ''ನಿಂದ ಸೃಷ್ಟಿಯಾಗಿದೆಯೆಂಬ ಕಾರಣದಿಂದ ನೀರಿಗೆ 'ನಾರ' ಎಂಬ ಹೆಸರು ಬಂದಿತು. ಈ ನಾರ (ಜಲ) ದಲ್ಲಿ ವಾಸವುಳ್ಳವ ಎಂಬ ನಿಮಿತ್ತದಿಂದ ಶ್ರೀಹರಿಗೆ ನಾರಾಯಣ (ನಾರಾಃ ಅಯನಂ ಯಸ್ಯ ಸಃ ನಾರಾಯಣಃ) ಎಂದು ಹೆಸರಾಯಿತು.

ಬ್ರಹ್ಮನಿಂದ ಪರಿತ್ಯಕ್ತವಾದ, ಆ ಸಾಮರ್ಥ್ಯದಿಂದ ಸುವರ್ಣವರ್ಣದ ಬ್ರಹ್ಮಾಂಡ ನಿರ್ಮಾಣವಾಯಿತು. ಅದರಲ್ಲಿಯೇ ಚತುರ್ಮುಖ ಬ್ರಹ್ಮನು ಆವಿರ್ಭವಿಸಿದ. ಈ ಚತುರ್ಮುಖ ಬ್ರಹ್ಮನು ಒಂದು ಸಂವತ್ಸರ ಪರ್ಯಂತರ ಈ ಬ್ರಹ್ಮಾಂಡದಲ್ಲಿ ವಾಸಿಸಿದ. ನಂತರ ಅದನ್ನು ಇಬ್ಭಾಗಿಸಿದ. ಒಂದಕ್ಕೆ ಸ್ವರ್ಗ ಎಂತಲೂ ಇನ್ನೊಂದಕ್ಕೆ ಭೂಮಿ ಎಂತಲೂ ಕರೆದ. ಇವೆರಡರ ಮಧ್ಯೆ ಕಲ್ಪಿತವಾದ ಅಂತರವನ್ನೇ **''ಆಕಾಶ''** ಎಂದ. ಭೂಮಿಯ ಕೆಳಗಿನ ಜಲರಾಶಿಯನ್ನು ನಿಯಂತ್ರಿಸಿ ಅದರ ಮೇಲೆ ದ್ವೀಪದಂತೆ ಭೂಗೋಳವನ್ನು ಇರಿಸಿದ. ಅಷ್ಟ ದಿಕ್ಕುಗಳಿಗೆ ಸ್ವರೂಪ ನೀಡಿದ. ಮನಸ್ಸು, ಕಾಲ, ಮಾತು, ಕಾಮ, ಕ್ರೋಧ, ರತಿ ಮುಂತಾದ ಪ್ರಜಾಸೃಷ್ಟಿಗೆ ಉಪಯುಕ್ತ ಸಾಮಗ್ರಿಸೃಷ್ಟಿಸಿದ. ಪ್ರಜೆಗಳನ್ನು ಸೃಷ್ಟಿಸಿದ. ಸೃಷ್ಟಿ ಪ್ರವಾಹವು ಅವಿಚ್ಛಿನ್ನವಾಗಿ ಸಾಗಲು ಪ್ರಜಾಪತಿಗಳಾದ ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ವಶಿಷ್ಠ, ಕ್ರತು ಎಂಬ ಏಳು ಮಾನಸಕುಮಾರರನ್ನೂ ಸೃಷ್ಟಿಸಿದ. ಈ ಏಳೂ ಜನ ಬ್ರಹ್ಮನ ಮಾನಸಪುತ್ರರನ್ನು ''ಸಪ್ತಬ್ರಹ್ಮ''ರು ಎಂದು ಪುರಾಣಗಳಲ್ಲಿ ಹೆಸರಿಸಲಾಗಿದೆ. ಇವರು ನಾರಾಯಣನಿಂದ ಅಭಿನ್ನರು. ಇಷ್ಟಾದ ನಂತರ ಬ್ರಹ್ಮನಿಗೆ ಸಂತತಿ ಮುಂದುವರಿಯಲಿಲ್ಲ ವೆಂಬ ಕಾರಣಕ್ಕಾಗಿ ಕೋಪ ಉದಯಿಸಿತು. ಆ ಕೋಪದಿಂದ ಕೋಪವೇ ಮೂರ್ತಿಮಂತವೆಂಬಂತಿರುವ ರುದ್ರನು ಉತ್ಪನ್ನನಾದನು. ರುದ್ರನು ಅನೇಕ ಸಂಖ್ಯೆಯಲ್ಲಿ ಪ್ರಜಾಸೃಷ್ಟಿಗೈದ. ಮಾನಸ ಕುಮಾರರೂ ಸೃಷ್ಟಿಕಾರ್ಯದಲ್ಲಿ ಪಾಲ್ಗೊಂಡರು. ಬ್ರಹ್ಮನಿಂದ ಸೃಷ್ಟರಾದವರಲ್ಲಿ ಸನತ್ಕುಮಾರನು ಜ್ಯೇಷ್ಠನೂ ಪ್ರಾಜ್ಞನೂ ಆಗಿರುವನು. ಈ ಸನತ್ಕುಮಾರನು ಪ್ರಜಾಸೃಷ್ಟಿಯ ಕಡೆಗೆ ಲಕ್ಷ ಕೊಡದೇ ಜಿತೇಂದ್ರಿಯನಾಗಿಯೇ ಉಳಿದ. ಇವನನ್ನು ನೋಡಿ ರುದ್ರ ಸುತನಾದ ಸ್ಕಂದನೂ ಜಿತೇಂದ್ರಿಯನಾಗಿಯೇ ಉಳಿದುಬಿಟ್ಟ. ಇವನಿಂದಲೂ ಸೃಷ್ಟಿಕಾರ್ಯಕ್ಕೆ ಉಪಯೋಗವಾಗಲಿಲ್ಲ.

ಮರೀಚಿಯೇ ಮೊದಲಾದ ಸಪ್ತಮಾನಸ ಕುಮಾರರಿಂದ ದೇವತೆಗಳೂ, ಋಷಿಗಳೂ ಹುಟ್ಟಿದರು. ಈ ಋಷಿಗಳೂ ಜಿತೇಂದ್ರಿಯರಾಗಿಯೇ ಉಳಿದರು. ಪ್ರಜೆಗಳು ಮಾತ್ರ ಪ್ರಪಂಚದಲ್ಲಿ ತೊಡಗಿ ಉತ್ತಮಸಂತಾನ ನೀಡಿದರು. ಈ ಪ್ರಜೆಗಳಿಗೋಸ್ಕರ ಬ್ರಹ್ಮನು ಯಜ್ಞೋಪಯೋಗಿಯಾದ ಋಕ್, ಯಜುಃಸಾಮಾದಿ ವೇದಮಂತ್ರಗಳನ್ನು ಉಪದೇಶಿಸಿದನು. ಸಿಡಿಲು, ಮಿಂಚು, ಮೋಡ, ಕಾಮನಬಿಲ್ಲು, ವೃಷ್ಟಿ ಮುಂತಾದವನ್ನು ಪ್ರದರ್ಶಿಸಿದನು. 'ಸಾಧ್ಯರು' ಎಂಬ ಹೆಸರಿನ ದೇವತೆಗಳನ್ನು ವಿಧವಿಧ ಪ್ರಾಣಿಗಳನ್ನೂ ಬ್ರಹ್ಮನು ಸೃಜಿಸಿದ. ಹೀಗೆ ಜಲದಿಂದ ಸೃಷ್ಟಿ ಆರಂಭಗೊಂಡು ಇಲ್ಲಿಗೆ ನಿಂತಿತು. ಮುಂದುವರೆಯಲಿಲ್ಲ. ಸೃಷ್ಟಿಕ್ರಿಯೆ ಅವಿರತವಾಗಿ ಮುಂದುವರೆಯಲು ಬ್ರಹ್ಮನು ಉಪಾಯವೊಂದನ್ನು ಹೀಗೆ ಯೋಚಿಸಿದ. ತನ್ನ ಶರೀರದ ಒಂದು ಭಾಗದಿಂದ ಪುರುಷನನ್ನು ನಿರ್ಮಿಸಿದ. ಇನ್ನೊಂದು ಭಾಗದಿಂದ ಸ್ತ್ರೀಯನ್ನು ನಿರ್ಮಿಸಿದ.

**ಅನಂತರ ವಿಷ್ಣುವೂ ಭೂಸ್ವರ್ಗಗಳೆರಡನ್ನು ವ್ಯಾಪಿಸಿದ ಪುರುಷನನ್ನು ಸೃಷ್ಟಿಸಿದ. ಆ ವಿರಾಟಪುರುಷನು ಇನ್ನೋರ್ವ ಪುರುಷನನ್ನು ಸೃಷ್ಟಿ ಮಾಡಿದ. ಆ ಪುರುಷನೇ "ಮನು" ಎಂದು ಹೆಸರಾದ. ಈ ಮನುವಿನ ಹೆಸರಿನಿಂದಲೇ ಮನ್ವಂತರಗಳು ರೂಪುಗೊಂಡವು. ಈಗ ಎರಡನೇ ಮನ್ವಂತರ ನಡೆದಿದೆ. ಈ ಮನುವೂ ಪ್ರಜೆಗಳನ್ನು ಸೃಷ್ಟಿಸಿದ. ಈ ಮನುವಿನ ಪುತ್ರರು ಶುಕ್ರಶೋಣಿತ ಸಂಬಂಧದಿಂದ ಉದ್ಭವಿಸಿದವರಲ್ಲ. ಆದುದರಿಂದ ಇವರನ್ನು "ಅಯೋನಿಜರು" ಎನ್ನುವರು.**

**ಪ್ರಜೆಗಳಿಗೆ ಒಡೆಯನಾದ** ಮನುವಿಗೆ "ಆಪವ" ಎಂದೂ ಹೆಸರಿದೆ. ಮನುವು **'ಶತರೂಪಾ'** ಎಂಬ ಕನ್ಯೆಯನ್ನು ವಿವಾಹವಾದನು. ಮನುವನ್ನು ವರಿಸಲು ಶತರೂಪಾ ಎಂಬ ಈ ಕನ್ನಿಕೆಯು ನೂರು ವರ್ಷಗಳವರೆಗೆ ಕಠಿಣ ತಪಸ್ಸನ್ನು ಆಚರಿಸಿ, ತತ್ಫಲವಾಗಿ ತೇಜಸ್ವಿಯಾದ ಮನುವನ್ನು ಪತಿಯನ್ನಾಗಿ ಪಡೆದಳು. ಶತರೂಪೆಯ ಪತಿಯಾದ ಈ ಮನುವಿಗೆ **"ಸ್ವಾಯಂಭುವ ಮನು"**ಎಂದೂ ಹೆಸರು ಇದೆ. (ಈಗಿನ ಮನ್ವಂತರಕ್ಕೆ ಈ ಸ್ವಾಯಂಭುವ ಮನುವು ಅಧಿಪತಿ. ಒಂದು ಮನ್ವಂತರ ಎಂದರೆ ಎಪ್ಪತ್ತೊಂದು ಯುಗಗಳು, ಒಟ್ಟು ಮನ್ವಂತರಗಳು ಹದಿನಾರು).

ಸ್ವಾಯಂಭುವ ಮನುವಿಗೆ ಶತರೂಪಳಲ್ಲಿ ಓರ್ವಪುತ್ರ ಜನಿಸಿದ. ಇವನಿಗೆ 'ವೀರ' ಎಂದು ನಾಮಕರಣ ಮಾಡಲಾಯಿತು. ಮುಂದೆ ಈ ವೀರನನ್ನು ಕರ್ದಮ ಪ್ರಜಾಪತಿಯ ಮಗಳಾದ ಕಾಮ್ಯಾಳಿಗೆ ಕೊಡಲಾಯಿತು. ವೀರಕುಮಾರನಿಗೆ ಕಾಮ್ಯಾಳಲ್ಲಿ ಪ್ರಿಯವ್ರತ, ಉತ್ತಾನಪಾದ ಎಂಬ ಈರ್ವರು ಹಾಗೂ ಸಾಮ್ರಾಟ್, ಕುಕ್ಷಿ, ವಿರಾಟ್, ಪ್ರಭು ಎಂಬ ನಾಲ್ವರು ಜನಿಸಿದರು. ಉತ್ತಾನಪಾದನನ್ನು ಅತ್ರಿ ಮುನಿಯು ದತ್ತು ಸ್ವೀಕರಿಸಿದ. ಈ ಉತ್ತಾನಪಾದನಿಗೆ ಸೂನೃತಾದೇವಿ ಎಂಬ ಧರ್ಮರಾಜನ ಮಗಳೊಡನೆ ವಿವಾಹ ಮಾಡಲಾಯಿತು. ಧರ್ಮರಾಜನು ಮಾಡಿದ ಅಶ್ವಮೇಧಯಾಗದ ಪುಣ್ಯಫಲವಾಗಿ ಈ ಪುತ್ರಿಯು ಜನ್ಮ ತಾಳಿದಳು. ಇವಳಿಗೆ ಸುನೀತಿ ಎಂಬ ಇನ್ನೊಂದು ಹೆಸರೂ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಈ ಉತ್ತಾನಪಾದ ಹಾಗೂ ಸುನೀತಿಯರಿಗೆ ಬಾಲ ತಪಸ್ವಿ ಮಹಾಜ್ಞಾನಿ ಧ್ರುವನು ಹುಟ್ಟಿದನು. ಉತ್ತಾನಪಾದನಿಗೆ ಧ್ರುವನು ಮಾತ್ರವಲ್ಲದೇ ಕೀರ್ತಿಮಂತ, ಆಯುಷ್ಮಂತ, ವಸು ಎಂಬ ಮೂರು ಮಕ್ಕಳು ಸುನೀತಿಯಲ್ಲಿ ಹುಟ್ಟಿದರು. ಇವರಲ್ಲಿ ಧ್ರುವನು ಬಾಲ್ಯದಲ್ಲಿಯೇ ತಪಶ್ಚರಣೆಗೆ ಮೊದಲು ಮಾಡಿದನು. ದೇವಮಾನದ ಮೂರುಸಾವಿರ ವರ್ಷಗಳವರೆಗೆ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿದನು. ಬಹುದೀರ್ಘಕಾಲೀನವಾದ ಈ ತಪಸ್ಸಿನಿಂದ ಬ್ರಹ್ಮನು ಸಂತುಷ್ಟಗೊಂಡು ಪ್ರತ್ಯಕ್ಷನಾದ. ವರಕೇಳಲು ಹೇಳಿದ. ಧ್ರುವನ ಅಪೇಕ್ಷೆಯನ್ನು ಆಲಿಸಿ "ಅಸ್ತು" ಎಂದು ಹರಿಸಿದ, ಧ್ರುವಮಂಡಲಕ್ಕೆ ಅವನನ್ನು ಒಡೆಯನಾಗಿಸಿದ. ಈ ಧ್ರುವಮಂಡಲ ಸಪ್ತರ್ಷಿಗಳ ಸ್ಥಾನಕ್ಕಿಂತಲೂ ಉನ್ನತವಾದ ಸ್ಥಾನವಾಗಿದೆ. ದೇವಾಸುರರಿಗೆ ಭೃಗುಮಹರ್ಷಿಯು ಧ್ರುವನ ಈ ಅಸಾಮಾನ್ಯವಾದ ಸಾಧನೆಯನ್ನು ಹೀಗೆ ಬಣ್ಣಿಸಿರುವನು.

**ಅಹೋ ಏಷ್ಯ ತಪಸೋ ವೀರ್ಯಂ ಅಹೋ ಶ್ರುತಮಹೋದ್ಭುತಂ।**
**ಯಮದ್ಯ ಪುರತಃ ಕೃತ್ವಾ ಧ್ರುವಂ ಸಪ್ತರ್ಷಯಃ ಸ್ಥಿತಾಃ ॥**

ಧ್ರುವನ ತಪಶ್ಶಕ್ತಿಯು ಅಗಾಧವಾದುದು. ಧ್ರುವನು ಮಹಾಜ್ಞಾನಿ. ಈ ಅದ್ಭುತ

ಸಾಮರ್ಥ್ಯವುಳ್ಳ ಧ್ರುವನನ್ನು ಮುಂದೆ ಮಾಡಿ (ಮುಖ್ಯಸ್ಥಾನ ಕೊಟ್ಟು) ಅವನ ಹಿಂದೆ ಎಲ್ಲ ಸಪ್ತರ್ಷಿಗಳು ಇರುವರು.

ಇಂಥ ಮಹಾಮಹಿಮನಾದ ಧ್ರುವನಿಗೆ ಶಂಭು ಎಂಬುವವಳು ಪತ್ನಿಯಾಗಿದ್ದಳು. ಧ್ರುವನಿಗೆ ಶಂಭುವಿನಲ್ಲಿ ಶ್ಲಿಷ್ಟಿ, ಭವ್ಯ ಎಂಬ ಈರ್ವರು ಮಕ್ಕಳು ಜನಿಸಿದರು. ಶ್ಲಿಷ್ಟಿಯಿಂದ ಸುಚ್ಛಾಯಾದೇವಿಯು ರಿಪು, ಧನಂಜನ, ವೀರ, ವೃಕಲ, ವೃಕತೇಜ ಎಂಬ ಐದು ಮಕ್ಕಳನ್ನು ಪಡೆದಳು. ರಿಪುರಾಜನಿಂದ ಬೃಹತೀದೇವಿಯು ಚಕ್ಷುಷ ಎಂಬ ಕುಮಾರನನ್ನು ಪಡೆದಳು. ಚಕ್ಷುಷನು ವೀರಬ್ರಹ್ಮನ ಮಗಳಾದ ಪುಷ್ಕರೀಣೀದೇವಿಯಲ್ಲಿ ಚಾಕ್ಷುಷ ಮನುವನ್ನು ಪಡೆದನು. ಚಾಕ್ಷುಷಮನುವಿಗೆ ನವ್ವತಾದೇವಿಯಲ್ಲಿ ಮಹಾತೇಜಸ್ವಿಗಳಾದ ಹತ್ತು ಮಕ್ಕಳು ಜನಿಸಿದರು. ಇವರ ಹೆಸರುಗಳು ಹೀಗಿವೆ. ಕುತ್ಸ, ಪುರು, ಶತದ್ಯುಮ್ನ, ತಪಸ್ವೀ, ಸತ್ಯವಾಕ್, ಕವಿ, ಅಗ್ನಿಷ್ಟುತ್, ಅತಿರಾತ್ರ, ಸುದುಮ್ನ, ಅಭಿಮನ್ಯು. ಪುರುವಿನಿಂದ ಅಗ್ನೇಯಿದೇವಿಯು ಆರು ಮಕ್ಕಳನ್ನು ಪಡೆದಳು. ಅಂಗ, ಸುಮನಸ, ಸ್ವಾತಿ, ಕ್ರತು, ಅಂಗೀರಸ, ಮಯ ಇವರೇ ಆ ಆರು ಸುತರು. ಅಂಗರಾಜನಿಂದ ಸುನಿತೆಯಲ್ಲಿ "ವೇನ"ನು ಜನಿಸಿದ. ಈ ವೇನನು ಪೃಥ್ವಿಯನ್ನು ಆಳುವಾಗ ದುರಾಚಾರಿಯಾದ. ಪ್ರಜೆಗಳ ಮೇಲೆ ದಬ್ಬಾಳಿಕೆ ನಡೆಸಿದ. ಇದರಿಂದ ಋಷಿಗಳಿಗೆ ಕೋಪವುಂಟಾಗಿ ಅವನನ್ನು ಅವರು ಸಂಹರಿಸಿದರು. ವೇನನಿಗೆ ಮಕ್ಕಳಿರಲಿಲ್ಲ. ಆದುದರಿಂದ ಋಷಿಗಳು ಆ ಸತ್ತ ವೇನನ ಕೈಯನ್ನು ಮಂಥನ ಮಾಡಿದರು. ಇದರಿಂದ ತೇಜಸ್ವಿಯಾದ ಓರ್ವ ಕುಮಾರ ಹೊರಬಂದ, ಜ್ಞಾನದೃಷ್ಟಿಯಿಂದ ಈ ಕುಮಾರನನ್ನು ಋಷಿಗಳು ಅವಲೋಕಿಸಿದರು. "ಜ್ವಲಿಸುವ ಅಗ್ನಿಯಂತೆ ತೇಜಸ್ವಿಯಾಗು. ಉತ್ತಮ ಬಿಲ್ಲುಗಾರನಾಗು, ಪ್ರಜೆಗಳನ್ನು ಸುಖವಾಗಿ ಇರಿಸು. ಮಹದ್ ಯಶಸ್ಸನ್ನು ಸಂಪಾದಿಸು" ಎಂದು ಹೃದಯ ತುಂಬಿ ಹರಿಸಿದರು. ಇವನಿಗೆ **ಪೃಥು** ಎಂಬ ಹೆಸರಾಯಿತು. ಋಷಿಗಳ ಆಣತಿಯಂತೆ ಇವನು ಪ್ರಜೆಗಳನ್ನು ಚೆನ್ನಾಗಿ ಪಾಲಿಸಿದ. ಅನೇಕ ಪ್ರಜಾಹಿತ ಕಾರ್ಯಗಳನ್ನು ಮಾಡಿದ. ರಾಜಸೂಯಯಾಗ ನೆರವೇರಿಸಿದ. ರಾಜಸೂಯಯಾಗವನ್ನು ಮೊಟ್ಟ ಮೊದಲು ಮಾಡಿದವನೆಂದರೆ ಪೃಥುರಾಜನೇ.

ಈ ಪೃಥು ಚಕ್ರವರ್ತಿಯಿಂದ ಸೂತ, ಮಾಗಧ ಎಂಬ ಮಕ್ಕಳು ಜನಿಸಿದರು. ಪ್ರಜೆಗಳ ಕಲ್ಯಾಣಕ್ಕಾಗಿ ಈ ಪೃಥುವು ಗೋರೂಪಧಾರಣ ಮಾಡಿದ್ದನು. ಪೃಥ್ವಿಯನ್ನು ಕರೆದು ಸಸ್ಯ ಮೊದಲಾವುಗಳ ಸಮೃದ್ಧಿಯನ್ನು ಪ್ರಜೆಗಳಿಗೆ ಒದಗಿಸಿದ. ಈ ಸಂದರ್ಭಲ್ಲಿ ದೇವತೆಗಳು, ಋಷಿಗಳು, ಪಿತೃಗಳು, ದಾನವರು, ಗಂಧರ್ವರು, ಅಪ್ಸರೆಯರು, ದೈತ್ಯರು ಎಲ್ಲರೂ ಗೋರೂಪಳಾದ ಪೃಥ್ವಿಯನ್ನು ತಮ್ಮ ತಮ್ಮ ಪಾತ್ರೆಗಳಲ್ಲಿ ಹಿಂಡಿಕೊಂಡರು. ಪೃಥ್ವಿಯು ಅವರವರಿಗೆ ಬೇಕಾದ ಪದಾರ್ಥಗಳನ್ನು ಹಾಲನ್ನು ಕೊಡುವಂತೆ ಕೊಟ್ಟಿತು. ಇದರಿಂದ ಜನರೆಲ್ಲ ಸಂಪನ್ನ ಜೀವನ ನಡೆಸುವವರಾದರು.

ಪೃಥುರಾಜನು ರಾಜಸೂಯಯಾಗ ಮಾಡಿದ ನಂತರ ಅವನಿಗೆ ಇರ್ವರು ಸುತರು ಜನಿಸಿದರು. ಇವರಿಗೆ ಅಂತರ್ಧಿ, ಪಾತಿ, ಎಂದು ಹೆಸರು. ಅಂತರ್ಧಿಯಿಂದ ಶಿಖಂಡಿನೀ ದೇವಿಯಲ್ಲಿ ಹವಿರ್ಧಾನ ಎಂಬ ಸುತನು ಜನಿಸಿದ. ಆಗ್ನೇಯ ದೇವಿಯಲ್ಲಿ ಹವಿರ್ಧಾನನಿಗೆ ಪ್ರಾಚೀನಬರ್ಹಿಷ, ಶುಕ್ರ, ಗಯ, ಕೃಷ್ಣ, ವ್ರಜ, ಅಜಿನ ಎಂಬ ಆರು ಜನ ಮಕ್ಕಳು ಜನಿಸಿದರು. ಇವರಲ್ಲಿ ಪ್ರಾಚೀನಬರ್ಹಿಷನು ಬಹುಕಾಲ ತಪಸ್ಸನ್ನು ಆಚರಿಸಿದ. ತಪಾಚರಣೆ ಮುಗಿದ

ಮೇಲೆ ಸಮುದ್ರನ ಮಗಳಾದ ಸವರ್ಣಾದೇವಿಯನ್ನು ವಿವಾಹವಾದ. ಈ ಸವರ್ಣಾದೇವಿಗೆ ಹತ್ತು ಜನ ಮಕ್ಕಳು. ಈ ಹತ್ತು ಕುವರರಿಗೂ **ಪ್ರಚೇತಸರು** ಎಂಬ ಸಾಮಾನ್ಯ ನಾಮಧೇಯವಾಯಿತು. ಈ ದಶಕುಮಾರರು ಧನುರ್ವೇದ ಪಾರಂಗತರು. ಯುದ್ಧಕುಶಲರು, ಪರಾಕ್ರಮಿಗಳು. ಈ ದಶ ಪ್ರಚೇತಸರು ಸಾಗರ ಮಧ್ಯದಲ್ಲಿ ಅಚಲರಾಗಿ ನಿಂತು ದಶಸಹಸ್ರ ವರ್ಷಗಳಷ್ಟು ದೀರ್ಘ ಅವಧಿಯವರೆಗೆ ಘೋರ ತಪಸ್ಸನ್ನು ಆಚರಿಸಿದರು. ಘನಘೋರವಾದ ಈ ದಶಕುಮಾರರ ತಪಸ್ಸಿನ ತಾಪಕ್ಕೆ ಅಲ್ಲಲ್ಲಿ ಮರಗಳು ಬೆಂದು ಕರಟಿದವು. ಅನೇಕ ಜೀವಿಗಳು ನೊಂದು ನಷ್ಟವಾದವು. ಇನ್ನೂ ನಿಲ್ಲಲಿಲ್ಲ ಆ ತಪಸ್ಸು. ಹಾಗೆಯೇ ಕೆಲಕಾಲ ನಡೆಯಿತು. ಶಾಖ ಮಿತಿಮೀರಿ ಗಾಳಿಯೂ ಬೀಸದಾಯಿತು. ಭೂಮಿಯ ಮೇಲಿನ ಮರಗಳೆಲ್ಲ ದಹಿಸಲ್ಪಟ್ಟು ನೆಲಕ್ಕೊರಗಿದವು. ಚಿಕ್ಕಪುಟ್ಟ ಸಸ್ಯಗಳಂತೂ ಭಸ್ಮಾವಶೇಷವಾದವು. ಇಷ್ಟೆಲ್ಲ ಆದರೂ ಯಾವ ದೇವತೆಯೂ ಬರಲಿಲ್ಲ. ತಪಂಗೈಯುತ್ತ ಕುಳಿತಿದ್ದ ಆ ದಶಕುಮಾರರ ತಪಸ್ಸಿನ ತೀವ್ರತೆ ಕಡಿಮೆಯಾಗಲಿಲ್ಲ. ಅವರ ಮುಖದಿಂದ ವಾಯು ಮತ್ತು ಅಗ್ನಿ ಹೊರಹೊರಟು ಜಗತ್ತನ್ನೆಲ್ಲ ಸುಡಲು ಪ್ರಾರಂಭಿಸಿತು. ಆಗ ಚಂದ್ರನು ಅಲ್ಲಿಗೆ ಬಂದ. ಪ್ರಚೇತಸರನನ್ನು ಕುರಿತು ಮಾತನಾಡಿದ. ''ಪ್ರಾಚೀನ ಬರ್ಹಿಷರ ಸುತರಾದ ಪ್ರಚೇತಸರೇ, ಇಗೋ! ನಾನು ಬಂದಿದ್ದೇನೆ. ಇನ್ನಾದರೂ ನಿಮ್ಮ ಕೋಪವನ್ನು ತ್ಯಜಿಸಿ, ನಿಮ್ಮ ಮುಖದಿಂದ ನಿಸೃತವಾದ ವಾಯು, ಅಗ್ನಿ ಒಂದಕ್ಕೊಂದು ಪೂರಕವಾಗಿ ಸಂಚರಿಸುತ್ತ ಜಗತ್ತನ್ನೆಲ್ಲ ದಹಿಸುತ್ತಿವೆ. ಈ ಅಗ್ನಿ ಮತ್ತು ವಾಯುವನ್ನು ಈ ಕ್ಷಣದಲ್ಲಿ ಶಾಂತಗೊಳಿಸಿ. ನಿಮ್ಮಿಂದಾಗಿ ತೊಂದರೆ ಅನುಭವಿಸುತ್ತಿರುವ ನಿಷ್ಪಾಪಿ ಜೀವಿಗಳನ್ನು ಉಳಿಸಿ.''

ಈ ಮಾತುಗಳನ್ನು ಕೇಳಿ ದಶಕುಮಾರರು ತಪಸ್ಸನ್ನು ನಿಲ್ಲಿಸಿದರು. ತಮ್ಮಿಂದ ಬಿಡಲ್ಪಟ್ಟಿದ್ದ ಅಗ್ನಿ, ವಾಯುಗಳನ್ನು ಶಾಂತಗೊಳಿಸಿದರು. ಇದರಿಂದ ಚಂದ್ರ ಸಂತುಷ್ಟನಾದ. ತನ್ನ ಮಗಳಾದ ಮಾರಿಷಾದೇವಿಯನ್ನು ಅವರಿಗೆ ಕೊಟ್ಟು ವಿವಾಹೋತ್ಸವ ನೆರವೇರಿಸಿದ. ದಶಕುಮಾರನನ್ನು ಕುರಿತು ಹೀಗೆ ಹೇಳಿದ. ''ಈ ಮಾರಿಷೆಯು ವೃಕ್ಷಕನ್ಯೆ. ಸ್ತ್ರೀರತ್ನವೆಂದು ಪರಿಗಣಿತವಾದ ಇವಳನ್ನು ಭವಿಷ್ಯತ್ತನ್ನು ಬಲ್ಲ ನಾನೇ ಗರ್ಭದಲ್ಲಿ ಧಾರಣ ಮಾಡಿದ್ದೆ. ಇವಳು ನಿಮಗೆ ಪತ್ನಿಯಾಗಲಿ. ಚಂದ್ರವಂಶವನ್ನು ಬೆಳೆಸಲಿ. ನಿಮಗೆ ಇವಳಲ್ಲಿ ದಕ್ಷ ಪ್ರಜಾಪತಿಯು ಜನಿಸುವನು. ಈ ದಕ್ಷನು ಸಾತ್ವಿಕ ತೇಜಸ್ಸಂಪನ್ನನಾಗಿ, ಮಹಾಪ್ರಾಜ್ಞನಾಗಿ ಬೆಳಗುವನು. ನೀವು ತಪಸ್ಸನ್ನು ಆಚರಿಸುತ್ತಿರುವಾಗ ತಪೋಜ್ವಾಲೆಗೆ ಸುಟ್ಟ ಸಸ್ಯ, ಜೀವಿ, ಭೂಮಿ ಇವುಗಳನ್ನು ಈ ದಕ್ಷನು ರಕ್ಷಿಸುವನು. ಈ ಸಂದರ್ಭದಲ್ಲಿ ನೊಂದಬೆಂದ ಎಲ್ಲ ಚರಾಚರಗಳನ್ನು ಈ ದಕ್ಷನು ಸಮಾಧಾನಿಸಿ ಸರಿಪಡಿಸುವನು. ನಿಮಗೆ ತಿಳಿಯದೇ ಸಂಭವಿಸಿದ ಈ ಲೋಕಹಾನಿಯನ್ನು ನಿಮಗೆ ಮಾರಿಷಳಲ್ಲಿ ಹುಟ್ಟಿದ ಈ ದಕ್ಷನು ಸರಿಪಡಿಸಿ ಕೀರ್ತಿಯನ್ನೂ ಪುಣ್ಯವನ್ನೂ ಸಂಪಾದಿಸುವನು.''

ಹೀಗೆ ಚಂದ್ರನು ಹೇಳಿದ ನಂತರ ಆ ದಶ ಪ್ರಚೇತಸರು ಸಂತೋಷದಿಂದ ಚಂದ್ರಸುತೆಯಾದ ಮಾರಿಷಳನ್ನು ಮದುವೆಯಾದರು. ಕೆಲ ಕಾಲಾನಂತರ ಈ ದಶ ಪ್ರಚೇತಸರಿಂದ ಮಾರಿಷದೇವಿಯಲ್ಲಿ ಮಹಾತೇಜಸ್ವಿಯಾದ ದಕ್ಷಬ್ರಹ್ಮನು ಚಂದ್ರನ ಅಂಶದಿಂದ ಅವತರಿಸಿದನು. ಈ ದಕ್ಷನೇ ಸಮೃದ್ಧವಾಗಿ ಸೃಷ್ಟಿಗೈದು ಸೃಷ್ಟಿಕಾರ್ಯ ಮುಂದೆ ಸಾಗಲು ಅನುವು ಮಾಡಿದ, ಪುರುಷರು, ಸ್ತ್ರೀಯರು, ಪ್ರಾಣಿಗಳು, ಪರ್ವತಾದಿ

ಜಡವಸ್ತುಗಳು ಇವನ್ನೆಲ್ಲ ಸೃಷ್ಟಿಗೈದ. ಈ ದಕ್ಷನಿಗೆ ಐವತ್ತು ಜನ ಮಕ್ಕಳು. ಇವರಲ್ಲಿ ಹತ್ತು ಕನ್ಯೆಯರನ್ನು ಯಮಧರ್ಮನಿಗೆ, ಕಶ್ಯಪನಿಗೆ ಹದಿಮೂರು ಕನ್ಯೆಯರನ್ನು, ಇಪ್ಪತ್ತೇಳು ನಕ್ಷತ್ರ ಕನ್ಯೆಯರನ್ನು ಚಂದ್ರನಿಗೆ ಕೊಟ್ಟು ಮದುವೆ ಮಾಡಿದನು.

ಈ ದಕ್ಷ ಪುತ್ರಿಯರಲ್ಲಿ ದೇವತೆಗಳು, ಪಕ್ಷಿಗಳು, ಪಶುಗಳು, ನಾಗಗಳು, ದೈತ್ಯರು, ದಾನವರು, ಗಂಧರ್ವರು, ಅಪ್ಸರೆಯರು ಇತ್ಯಾದಿಯಾಗಿ ಸಂತಾನ ಸೃಷ್ಟವಾಯಿತು. ಈಗಿನಿಂದಲೇ ಪುರುಷ ಹಾಗೂ ಸ್ತ್ರೀ ಇವರಿಬ್ಬರ ಸಂಪರ್ಕದಿಂದ ಸೃಷ್ಟಿಕಾರ್ಯ ಪ್ರಾರಂಭವಾಯಿತೆನ್ನಬಹುದು. ಇದಕ್ಕಿಂತ ಮೊದಲು ಆಗಿದ್ದ ಸೃಷ್ಟಿ ಬ್ರಹ್ಮನ ಮನಃಸಂಕಲ್ಪ ಹಾಗೂ ಜ್ಞಾನಗಳಿಂದ. ಈ ಮೊದಲ್ಗೊಂಡು ಇನ್ನು ಮುಂದಿನ ಸೃಷ್ಟಿ, ಸ್ತ್ರೀ-ಪುರುಷ ಸಂಪರ್ಕ ಜನ್ಯಸೃಷ್ಟಿಯಾಯಿತು.

**ಮುನಿಗಳು:-** ಸೂತರೆ ದೇವತೆಗಳು, ದಾನವರು, ಗಂಧರ್ವರು, ರಾಕ್ಷಸರು ಮುಂತಾದವರು ಹಾಗೂ ದಕ್ಷನ ಉತ್ಪತ್ತಿಯ ವೃತ್ತಾಂತವನ್ನು ಕೇಳಿದೆವು. ದಕ್ಷಬ್ರಹ್ಮನು ಬ್ರಹ್ಮನ ಬಲಗಾಲಿನ ಅಂಗುಷ್ಠದಿಂದ, ಅವನ ಪತ್ನಿಯು ಎಡಗಾಲಿನ ಅಂಗುಷ್ಠದಿಂದ ಜನಿಸಿದ್ದಾರೆಂದು ಕೇಳಿದ್ದೇವೆ. ಇದು ಸತ್ಯವಾದರೆ ಬ್ರಹ್ಮನ ಮಗನಾದ ದಕ್ಷನು ಮತ್ತೆ ಪ್ರಚೇತಸರ ಮಗನಾಗಿ ಹೇಗೆ ಜನಿಸಿದ? ಚಂದ್ರನ ಮಗಳ ಮಗನಾದ ದಕ್ಷನು ಚಂದ್ರನಿಗೆ ಹೆಣ್ಣುಕೊಟ್ಟ ಮಾವ ಆಗಲು ಹೇಗೆ ಸಾಧ್ಯ? ನಮ್ಮ ಈ ಸಂದೇಹವನ್ನು ಪರಿಹರಿಸಿರಿ.

**ಸೂತ:-** ಮುನಿಗಳೆ, ಇದೆಲ್ಲವೂ ಕಲ್ಪಾಂತರದ ವಿಷಯ, ಚಂದ್ರ, ದಕ್ಷ ಮೊದಲಾದ ದೇವತಾ ಪುರುಷರು ಪ್ರತಿಯೊಂದು ಕಲ್ಪದಲ್ಲೂ ಹುಟ್ಟಿ ಬರುತ್ತಾರೆ. ಹೀಗೆ ಕಲ್ಪ ಭೇದದಿಂದ ಬ್ರಹ್ಮಪುತ್ರನಾದ ದಕ್ಷಪ್ರಜಾಪತಿಯು ಇನ್ನೊಂದು ಕಲ್ಪದಲ್ಲಿ ಪ್ರಚೇತಸಕುಮಾರನಾಗಿ ಜನಿಸಿದ. ಮತ್ತು ಇನ್ನೊಂದು ವಿಷಯ ತಿಳಿಯಿರಿ. ದೇವತೆಗಳಲ್ಲಿ ಹಿರಿತನ, ಕಿರಿತನಗಳು ವಯೋ ಮೂಲಕವಾಗಿ, ಸಂಬಂಧ ಮೂಲಕವಾಗಿ ನಿರ್ಧರಿಸಲ್ಪಡುವದಿಲ್ಲ. ತಪಸ್ಸು, ಸಾಮರ್ಥ್ಯ, ಪ್ರಭಾವ ಈ ಅಂಶಗಳಿಂದ ಅವರವರ ಜ್ಯೇಷ್ಠ-ಕನಿಷ್ಠ ಪ್ರಭಾವಗಳ ಗಣನೆಯಾಗುತ್ತಿದ್ದಿತು. ಹಾಗೆ ನೋಡಿದರೆ ಈ ಪ್ರಪಂಚದಲ್ಲಿನ ಎಲ್ಲ ಮಾನವರು, ದೇವತೆಗಳು, ದೈತ್ಯರು, ಕಶ್ಯಪರೊಬ್ಬರ ಸಂತಾನ, ಆದುದರಿಂದ ಎಲ್ಲರೂ ಅಣ್ಣತಮ್ಮಂದಿರೇ! ಅಕ್ಕತಂಗಿಯರೇ! ಅವರವರಲ್ಲಿ ಗಂಡು-ಹೆಣ್ಣಿನ ಸಂಬಂಧವೇ ಶಾಸ್ತ್ರ ವಿರುದ್ಧ ಆದೀತು. ಆದುದರಿಂದ ಎಲ್ಲರೂ ಬ್ರಹ್ಮನಿಗೆ ಮಕ್ಕಳೇ ಆದರೂ ಅವಾಂತರ ಭೇದಗಳನ್ನು ಗಮನಿಸಿ ಸೋದರ-ಸೋದರೀಭಾವ ನಿರ್ಧರಿತವಾಗುವುದೇ ವಿನಃ ಮೂಲವನ್ನಲ್ಲ. ಸಂಬಂಧಗಳು ಮಾನವರಲ್ಲಿ ನಿರ್ಧರಿಸುವದಕ್ಕೂ ದೇವತೆಗಳಲ್ಲಿ ನಿರ್ಧರಿಸುವದಕ್ಕೂ ಮಹದಂತರವಿದೆ. ಪ್ರಾಜ್ಞರು ಈ ವಿಷಯದಲ್ಲಿ ಸಂದೇಹವುಳ್ಳವರಾಗುವದಿಲ್ಲ. ದಕ್ಷನ ಈ ಚರಾಚರ ಸೃಷ್ಟಿಯನ್ನು ಕುತೂಹಲದಿಂದ ಕೇಳಿ ತಿಳಿದವರು, ಹೇಳಿದವರು ದೀರ್ಘಾಯುಷಿಗಳಾಗುವರು.

**ಶೌನಕರು:-** ಲೋಮಹರ್ಷಣ ಮುನಿಗಳೇ, ನೀವು ನಮಗೆ ದೇವ-ದೈತ್ಯರ ಹಾಗೂ ಗಂಧರ್ವ, ಸರ್ಪ ಮತ್ತು ಅಸುರರ ಹುಟ್ಟು, ಬೆಳವಣಿಗೆಗಳನ್ನು ವಿಸ್ತಾರವಾಗಿ ನಿರೂಪಿಸಿರಿ.

**ಸೂತ:-** ಸೃಷ್ಟಿಯ ಆದಿಕಾಲದಲ್ಲಿ ಬ್ರಹ್ಮದೇವನು ದಕ್ಷ ಪ್ರಜಾಪತಿಗೆ ಸೃಷ್ಟಿಮಾಡು ಎಂದು ಅಪ್ಪಣೆ ಮಾಡಿದ. ಅವನ ಆದೇಶದಂತೆ ಕಾರ್ಯದಕ್ಷನಾದ ದಕ್ಷ ಬ್ರಹ್ಮನು

ಮೊದಲು ತನ್ನ ಮನಃಸಂಕಲ್ಪದಿಂದಲೇ ದೇವ-ದಾನವರನ್ನೂ, ಗಂಧರ್ವ, ಅಸುರ, ಯಕ್ಷ-ರಾಕ್ಷಸರನ್ನೂ ಸೃಷ್ಟಿಸಿದ. ಇದಕ್ಕೆ **ಮಾನಸಸೃಷ್ಟಿ** ಎಂದು ಹೆಸರು.

ಬ್ರಹ್ಮದೇವರೂ ಸಹ ಮೊದಲು ಮಾನಸ ಸೃಷ್ಟಿಯನ್ನೇ ಮಾಡಿ ಸನಕ, ಸನಂದನಾದಿ ಯೋಗೀಶ್ವರರನ್ನೂ ಮರೀಚಿ, ಅತ್ರಿ ಮುಂತಾದ ಪ್ರಜಾಪತಿಗಳನ್ನೂ, ದೇವತೆಗಳನ್ನೂ, ಮಹರ್ಷಿಗಳನ್ನೂ ಸೃಷ್ಟಿಸಿದ್ದರೂ ಈ ಮಾನಸಸೃಷ್ಟಿಯಿಂದ ಪ್ರಜಾವೃದ್ಧಿಯು ಅಪೇಕ್ಷಿತ ಪ್ರಮಾಣದಲ್ಲಿ ಆಗಲಿಲ್ಲ. ಆಗ ಬ್ರಹ್ಮದೇವರು ಅವನಿಗೆ ದಾಂಪತ್ಯ ಧರ್ಮದಿಂದ ಅರ್ಥಾತ್ ಸ್ತ್ರೀ-ಪುರುಷ ಸಂಯೋಗದಿಂದ ಸೃಷ್ಟಿ ಕಾರ್ಯವನ್ನು ಮುಂದುವರೆಸಲು ಆದೇಶ ನೀಡಿದರು. ಅಂತೆಯೇ ದಕ್ಷನು ವೀರಣ ಪ್ರಜಾಪತಿಯ ಮಗಳಾದ, ಸೃಷ್ಟಿಗೆ ಅನುಕೂಲಳಾದ ಅಸಿಕ್ನೀದೇವಿಯನ್ನು ವಿವಾಹವಾದ. ಅಸಿಕ್ನೀದೇವಿಯಲ್ಲಿ ದಕ್ಷ ಬ್ರಹ್ಮನು ಐದುಸಾವಿರ ಮಕ್ಕಳನ್ನು ಪಡೆದನು. ಈ ದಕ್ಷ ಪುತ್ರರೆಲ್ಲರೂ ಮಹಾತ್ಮರು. ಇವರೆಲ್ಲರೂ ತಮ್ಮ ತಂದೆಯ ಅಪ್ಪಣೆಯಿಂದ ಸೃಷ್ಟಿಕಾರ್ಯವನ್ನು ಮುಂದುವರೆಸಲು ಉತ್ಸುಕರಾಗಿದ್ದರು. ಅಷ್ಟರಲ್ಲಿ ದೇವರ್ಷಿಯಾದ ನಾರದನು ಅವರಿದ್ದಲ್ಲಿಗೆ ಆಗಮಿಸಿ, ಅವರನ್ನು ಉದ್ದೇಶಿಸಿ ಹೀಗೆ ನುಡಿದ.

**ನಾರದ:-** ದಕ್ಷಪುತ್ರರೆ, ನೀವು ಸೃಷ್ಟಿಯನ್ನು ಮಾಡಿ ಪ್ರಜಾವೃದ್ಧಿಯನ್ನು ಸಂಪಾದಿಸಲು ಹೊರಟಿರುವಿರಿ. ಆದರೆ ನೀವಿರುವ ಭೂಮಿಯ ವಿಸ್ತಾರ ನಿಮಗೆ ತಿಳಿದಿದೆಯೆ? ಈ ಭೂಮಿಯ ತುದಿ, ಮೊದಲು, ಮೇಲೆ, ಕೆಳಗೆ, ಒಳಗೆ, ಹೊರಗೆ ಏನು ಎಂಬುದನ್ನು ಬಲ್ಲಿರಾ?

ನಾರದರ ಪ್ರಶ್ನೆಯಿಂದ ದಕ್ಷ ಪುತ್ರರು ಗೊಂದಲಕ್ಕೊಳಗಾದರು. ಭೂಮಿಯ ಆಳಗಲಗಳನ್ನು ಒಟ್ಟು ಸ್ವರೂಪವನ್ನು ಕಂಡು ಬರುತ್ತೇವೆ ಎಂದು ನಾರದರಿಗೆ ಹೇಳಿ ದಿಕ್ಕು-ವಿದಿಕ್ಕುಗಳಿಗೆ ಹರಿದು ಹೋದರು. ಸಮುದ್ರವನ್ನು ಸೇರಲು ಹೊರಟ ನದಿಗಳಂತೆ ಅದರಲ್ಲಿ ಹೊರಟವರು, ಯಾರೂ ಮರಳಲಿಲ್ಲ. ಹೀಗೆ ಹರ್ಯಶ್ವರೆಂದು ಹೆಸರುಳ್ಳ ತನ್ನ ಐದು ಸಾವಿರ ಮಕ್ಕಳೂ ಮರಳಿ ಬಾರದ್ದನ್ನು ನೋಡಿ ತಂದೆಯಾದ ದಕ್ಷನಿಗೆ ಬಹು ದುಃಖ ವಾಯಿತು. ಅಸಿಕ್ನಿಯೆಂಬ ತನ್ನ ಹೆಂಡತಿಯಲ್ಲಿ ಮತ್ತೆ ಸಾವಿರ ಮಕ್ಕಳನ್ನು ಉತ್ಪಾದಿಸಿದ. ಇವರಿಗೆ "**ಶಬಲಾಶ್ವ**"ರೆಂದು ಹೆಸರು. ಈ ಶಬಲಾಶ್ವರೂ ಸಹ ತಮ್ಮ ಅಣ್ಣಂದಿರಂತೆ ಉತ್ಸಾಹದಿಂದ ಸೃಷ್ಟಿ ಕಾರ್ಯೋನ್ಮುಖರಾದರು. ಅಲ್ಲಿಗೆ ಮತ್ತೆ ನಾರದರು ಆಗಮಿಸಿದರು. ಈ ಸಹಸ್ರ ದಕ್ಷಕುಮಾರರನ್ನು ಪ್ರಶ್ನಿಸಿದರು. ಪ್ರಜಾ ಸೃಷ್ಟಿಯನ್ನು ಮಾಡಹೊರಟ ನಿಮಗೆ ಈ ಭೂಮಿಯ ಪ್ರಯಾಣ ಪರಿಚಯವಿದೆಯೆ? ಈ ಭೂಮಿಯ ಮೇಲೆ, ಕೆಳಗೆ ಮಧ್ಯದಲ್ಲಿ ತುದಿ, ಮೊದಲು, ಮಧ್ಯ ವಿಸ್ತಾರಗಳೇ ಗೊತ್ತಿಲ್ಲವಲ್ಲ! ಎಂದು ಸೋಜಿಗ ವ್ಯಕ್ತಪಡಿಸಿದ.

ನಾರದನ ಈ ಮಾತುಗಳನ್ನು ಕೇಳಿ ಆ ಶಬಲಾಶ್ವರು ತಮ್ಮ ತಮ್ಮೊಳಗೆ "ಈ ಮುನಿ ಹೇಳಿದ್ದು ಸತ್ಯ. ನಮ್ಮ ಸಹೋದರರಂತೆ ನಾವೂ ಭೂಮಿಯನ್ನು ಸಂಪೂರ್ಣ ತಿಳಿಯಬೇಕು. ಆಗ ಸೃಷ್ಟಿ ಕಾರ್ಯ ಇನ್ನೂ ಸುಲಭವಾಗಬಹುದು" ಎಂದು ಪರಸ್ಪರ ಮಾತನಾಡುತ್ತ ಅನ್ವೇಷಣೆಗೆ ಹೊರಡುವ ದೃಢ ನಿರ್ಧಾರಮಾಡಿ ಹೊರಟರು. ಸಾಗರಗಾಮಿಯಾದ ಸಿಂಧು ಪ್ರವಾಹದಂತೆ, ಅವರೂ ಸಹ ಮರಳಲೇ ಇಲ್ಲ. ಹೀಗೆ ನಾರದ ಮುನಿಯಿಂದ ತನ್ನ ಮಕ್ಕಳಾದ ಹರ್ಯಶ್ವರೂ, ಶಬಲಾಶ್ವರೂ ಸಂಸಾರದಿಂದ ನಿವೃತ್ತರಾಗಿ ಮನೆಗೆ ಮರಳಿಬಾರದೇ ನಷ್ಟಪ್ರಾಯರಾದುದನ್ನು ಕಂಡು ದಕ್ಷಪ್ರಜಾಪತಿಗೆ

ಬ್ರಹ್ಮಾಂಡ ಕೋಪ ಉದಯಿಸಿತು. ದಕ್ಷ ಪ್ರಜಾಪತಿಯು ನಾರದರಿಗೆ ಶಾಪ ಕೊಡಲು ಉದ್ಯುಕ್ತನಾದ. ಆಗ ಕಶ್ಯಪ ಋಷಿಯು ಮಧ್ಯ ಪ್ರವೇಶಿಸಿದರು. ಅನೇಕ ಬ್ರಹ್ಮರ್ಷಿಗಳನ್ನು ಮಧ್ಯಸ್ಥರನ್ನಾಗಿ ಮಾಡಿ ಬ್ರಹ್ಮದೇವರ ಕಡೆಯಿಂದ ಹೇಳಿಸಿ ದಕ್ಷಪ್ರಜಾಪತಿಯನ್ನು ಶಾಂತಗೊಳಿಸಿದರು. ಮತ್ತು ನಾರದರಿಗೂ ದಕ್ಷನಿಗೂ ಮನಸ್ತಾಪ ಆಗದಂತೆ ಸಂಧಿ ಮಾಡಿಸಿದರು. ಮುಂದೆ ದಕ್ಷನು ತನ್ನ ಹೆಣ್ಣು ಮಕ್ಕಳನ್ನು ಕಶ್ಯಪರಿಗೆ ಮದುವೆ ಮಾಡಿಕೊಟ್ಟ ಬಳಿಕ ಅವರಿಂದ ನಾರದ ಮರು ಹುಟ್ಟನ್ನು ಪಡೆದನು.

ದಕ್ಷ ಪ್ರಜಾಪತಿಯು ಅರವತ್ತು ಏನ ಹೆಣ್ಣು ಮಕ್ಕಳನ್ನು ಹಡೆದ. ಅವರಲ್ಲಿ ಧರ್ಮನಿಗೆ ಹತ್ತು ಕನ್ಯೆಯರನ್ನು, ಹದಿಮೂರು ಕನ್ಯೆಯರನ್ನು ಕಶ್ಯಪನಿಗೆ, ಚಂದ್ರನಿಗೆ ಇಪ್ಪತ್ತೇಳು ಕನ್ಯೆಯರನ್ನು, ಅರಿಷ್ಟನೇಮಿಗೆ ನಾಲ್ಕು ಕನ್ಯೆಯರನ್ನು, ಬಹುಪುತ್ರ ಮತ್ತು ಅಂಗೀರಸ್ ಎಂಬ ಮುನಿಗಳಿಗೆ ಇಬ್ಬಿಬ್ಬರು ಕನ್ಯೆಯರನ್ನು ಕೊಟ್ಟು ಮದುವೆ ಮಾಡಿದ. ಈ ಅರವತ್ತು ಕನ್ಯೆಯರು ಸೃಷ್ಟಿಕಾರ್ಯವನ್ನು ಮುಂದುವರೆಸಿದರು. ಧರ್ಮನಿಗೆ ಆರುಂಧತಿ, ವಸುದೇವಿ, ಯಾಮಿದೇವಿ, ಬಂಬಾದೇವಿ, ಭಾನುದೇವಿ, ಮರುತ್ವತಿ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ, ವಿಶ್ವಾದೇವಿ ಎಂಬ ಹತ್ತು ಕನ್ಯೆಯರನ್ನು ದಕ್ಷನು ಮದುವೆ ಮಾಡಿದ್ದ. ಇವರಲ್ಲಿ ಧರ್ಮನಿಗೆ ಜನಿಸಿದ ಸಂತಾನ ವಿವರ ಹೀಗಿದೆ-

ವಿಶ್ವೇದೇವರು ವಿಶ್ವಾದೇವಿಯ ಮಕ್ಕಳು. ಸಾಧ್ಯರನ್ನು ಸಾಧ್ಯಾದೇವಿಯು ಹೆತ್ತಳು. ಜಗನ್ಮಯನಾದ ಸಂಕಲ್ಪನನ್ನು ಸಂಕಲ್ಪಾದೇವಿಯು ಹಡೆದಳು. ವೃಕ್ಷಲನನ್ನು ಯಾಮಿಯ ಮಗಳಾದ ನಾಗವೀಥಿಯು ಹಡೆದಳು. ಮರುತ್ವತಿಯಲ್ಲಿ ಮರುತ್ವಂತ ಎಂಬುವವರು ಜನ್ಮ ತಾಳಿದರು. ವಸುದೇವಿಯ ಮಕ್ಕಳಾಗಿ ವಸುದೇವತೆಗಳು ಜನ್ಮ ತಾಳಿದರು. ಭಾನುದೇವಿಯ ಪುತ್ರರೇ ಭಾನುಗಳು. ಮುಹೂರ್ತಾದೇವಿಯಿಂದ ''ಮುಹೂರ್ತ''ಗಳು ಜನಿಸಿದವು. ಲಂಬಾದೇವಿಯಿಂದ ''ಘೋಷ''ವು ಪ್ರಾದುರ್ಭಾವ ಗೊಂಡಿತು. ಯಾಮಿದೇವಿಯಿಂದ ಪಾತಾಳಲೋಕ ಹುಟ್ಟಿತು. ಈ ಜಗತ್ತಿನಲ್ಲಿ ಇನ್ನುಳಿದ ಅನೇಕಾನೇಕ ವಸ್ತುಗಳು ಅರುಂಧತಿಯಿಂದ ಜನಿಸಿದವು. ದಕ್ಷನು, ಚಂದ್ರನಿಗೆ ಮದುವೆ ಮಾಡಿಕೊಟ್ಟ ಕನ್ಯೆಯರಿಗೆ ನಕ್ಷತ್ರಗಳೆಂದು ಹೆಸರು ಇವರ ಮಹಿಮೆಯು ಜ್ಯೋತಿಃಶಾಸ್ತ್ರದಲ್ಲಿ ವಿಸ್ತೃತವಾಗಿ ಉಕ್ತವಾಗಿದೆ. ಪ್ರಸಿದ್ಧರಾದ ಹಾಗೂ ಮುಖ್ಯರಾದ ಇನ್ನು ಕೆಲ ದೇವತೆಗಳ ಜನ್ಮವೃತ್ತಾಂತ ಹೀಗಿದೆ:- ಆಪದೇವ, ಧ್ರುವ, ಸೋಮ, ಧವ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ, ಈ ಎಂಟು ವಸುದೇವತೆಗಳು.

ಆಪದೇವನ ಪುತ್ರರು ವೈತಂಡ್ಯ, ಶ್ರಮ, ಶ್ರಾಂತ ಎಂಬ ಮುನಿಗಳು. ಸ್ವಸಾಮರ್ಥ್ಯದಿಂದ ಲೋಕವನ್ನೇ ಬದಲಾಯಿಸುವ ಕಾಲಪುರುಷ ಧ್ರುವನ ಮಗ. ವರ್ಚಾ ಎಂಬುವವನು ಸೋಮನ ಮಗ. ಈ ವರ್ಚನ ಅನುಗ್ರಹದಿಂದ ಮಾನವನು ವಚಸ್ವೀ (ಪ್ರಸಿದ್ಧಿ) ಆಗುವನು. ದ್ರವಿಣ, ಹ್ರತ, ಹವ್ಯಹವ, ಶಿಶಿರ, ರಮಣ, ಪ್ರಾಣ ಇವರು ಧವದೇವನ ಮಕ್ಕಳು. ಮನೋಹರಾದೇವಿಯು ಇವರ ತಾಯಿ. ಅನಿಲ (ವಾಯು)ನ ಪತ್ನಿಯ ಹೆಸರು ಶಿವಾದೇವಿ. ಅವಳಲ್ಲಿ ಮನೋಜವ, ಅವಿಜ್ಞಾತಗತಿ ಎಂಬ ಈರ್ವರು ಪುತ್ರರು ಜನಿಸಿದರು. ಮುಳ್ಳು ಕಂಟಿಗಳುಳ್ಳ ಅರಣ್ಯದಲ್ಲಿ ಜನಿಸಿದ ತೇಜಸ್ವಿಯಾದ ಷಣ್ಮುಖನು ಅಗ್ನಿಸುತನು. ಈ ಷಣ್ಮುಖನಿಗೆ ಮೂವರು ಮಕ್ಕಳು. ಅವರ ಹೆಸರು ಶಾಖ, ವಿಶಾಖ,

ನೈಗಮೇಯ ಎಂದಿದೆ. ಈ ಷಣ್ಮುಖನು ಕೃತ್ತಿಕಾ ದೇವಿಯ ಪೋಷಣೆಯಿಂದ ಬೆಳೆದುದರಿಂದ ಇವನಿಗೆ ಕಾರ್ತಿಕೇಯ ಎಂದೂ ಹೆಸರು ಬಂದಿದೆ.

ದೇವಲ ಎಂಬ ಋಷಿಯು ಪ್ರತ್ಯೂಷಸುತನು. ದೇವಲನಿಗೆ ಇಬ್ಬರು ಮಕ್ಕಳು. ಈರ್ವರೂ ಶಾಂತರು, ಜ್ಞಾನಿಗಳು, ಬೃಹಸ್ಪತಿಗೆ ಒಬ್ಬ ಸಹೋದರಿ ಇದ್ದಳು. ಇವಳಿಗೆ ಯೋಗಸಿದ್ಧಾ ಎಂದು ಹೆಸರು. ಇವಳನ್ನು "ಬ್ರಹ್ಮವಾದಿನಿ" (ಆತ್ಮ ಚಿಂತನಾರತಳು) ಎಂದೆನ್ನುವರು. ಯೋಗಸಾಧನೆಗಾಗಿ ಇವಳು ಜಗತ್ಸಂಚಾರ ಮಾಡಿ ಸಾಧನೆಗೈದಳು. ಅಷ್ಟವಸುಗಳು ಎಂದು ಪ್ರಸಿದ್ಧರಾದವರಲ್ಲಿ ಎಂಟನೆಯವನಾದ ಪ್ರಭಾಸನು ಇವಳನ್ನು ವಿವಾಹವಾದ. ಈ ಅಷ್ಟವಸು ಮತ್ತು ಬೃಹಸ್ಪತಿಸುತೆಯಾದ ಯೋಗಸಿದ್ಧೆ ಇವರಿಬ್ಬರ ಮಿಲನದಿಂದ ದೇವಬಡಿಗನಾದ ವಿಶ್ವಕರ್ಮ ಜನಿಸಿದ. ಈ ದೇವಶಿಲ್ಪಿಯು, ಶಿಲ್ಪಶಾಸ್ತ್ರಕ್ಕೆ ಶ್ರೀಕಾರ ಹಾಕಿದ ಮಹಾತ್ಮ. ದೇವತೆಗಳಿಗೆ ಅನೇಕ ಬಗೆಯ ಆಭರಣಗಳು, ದೊಡ್ಡ ದೊಡ್ಡ ಪ್ರಾಸಾದಗಳು, ನಾನಾ ಬಗೆಯ ಶಿಲ್ಪಗಳು ಮುಂತಾದವನ್ನು ರಚಿಸಿ ದೇವತೆಗಳಿಗೆ ಸಂತೋಷ ನೀಡಿದ. ವಿಶ್ವಕರ್ಮನ ಈ ಶಿಲ್ಪಕಲೆಯನ್ನೇ ಅನುಸರಿಸಿ ಮಾನವರಲ್ಲಿ ಶಿಲ್ಪಶಾಸ್ತ್ರ ಆರಂಭವಾಯಿತು.

ಸುರಭಿದೇವಿಯು ತನ್ನ ತಪಸ್ಸಿನಿಂದ ಮಹಾದೇವನನ್ನು ಪ್ರಸನ್ನಗೊಳಿಸಿದಳು. ಈ ಮಹಾದೇವನ ಅನುಗ್ರಹದಿಂದ ಕಶ್ಯಪಬ್ರಹ್ಮನಿಂದ ಏಕಾದಶರುದ್ರನನ್ನು ಪಡೆದಳು. ಅಜೈಕ್‌ಪಾತ್, ಅರ್ಹಿರ್ಬುಧ್ನ್ಯ, ತ್ವಷ್ಟ್ರಾ, ರುದ್ರ, ಬಹುರೂಪಿಹರ, ತ್ರ್ಯಂಬಕ, ವೃಷಾಕಪಿ, ಶಂಭು, ಕಪರ್ದಿ, ರೈವತ, ಮೃಗವ್ಯಾಧ, ಶರ್ವ-ಈ ಹನ್ನೊಂದು ಜನರು ಏಕಾದಶ ರುದ್ರರೆಂದು ಜಗತ್ತಿನಲ್ಲಿ ಖ್ಯಾತರಾಗಿರುವರು.

ಇದಲ್ಲದೇ ನೂರು ಜನ ರುದ್ರರಿದ್ದಾರೆ. ಈ ರುದ್ರರು ಜಗತ್ತನ್ನೆಲ್ಲ ವ್ಯಾಪಿಸಿ ಇರುವರು. ದಿತಿ, ಅದಿತಿ, ದನು, ಅರಿಷ್ಟಾ, ಸುರಸಾ, ಖಸಾ, ಸುರಭಿ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರು, ಮುನಿ ಇಷ್ಟು ಜನರು ಅಂದರೆ ಒಟ್ಟು ಹದಿಮೂರು ಸ್ತ್ರೀಯರು ಕಶ್ಯಪನ ಮಡದಿಯರು. ಇವರಲ್ಲಿ ಜನಿಸಿದ ಪ್ರಜೆಗಳ ವಿವರ ಹೀಗಿದೆ :-

ವೈವಸ್ವತ ಮನ್ವಂತರದಲ್ಲಿಯೇ ತುಷಿತರೆಂದು ಪ್ರಸಿದ್ಧರಾದ ಹನ್ನೆರಡು ಜನ ದೇವತೆಗಳು ಪರಸ್ಪರ ಹೀಗೆ ಸಮಾಲೋಚಿಸಿದರು. "ಮುಂದಿನ ಮನ್ವಂತರ ಚಾಕ್ಷುಷ ಮನ್ವಂತರ. ಇದು ಶ್ರೇಷ್ಠವಾದ ಮನ್ವಂತರವು. ಆದುದರಿಂದ ಆ ಮನ್ವಂತರದಲ್ಲಿ ನಾವೆಲ್ಲರೂ ಕಶ್ಯಪನ ಮಡದಿಯಾಗುವ ಅದಿತಿಯಲ್ಲಿ ಜನ್ಮತಳೆಯೋಣ. ಹೀಗೆ ಮಾತನಾಡುವದು ನಮ್ಮ ಶ್ರೇಯಸ್ಸಿಗೆ ಸಾಧನವಾಗಿದೆ."

ಹೀಗೆ ನಿರ್ಧರಿಸಿದ ಆ ದೇವತೆಗಳು ಚಾಕ್ಷುಷ ಮನ್ವಂತರದಲ್ಲಿ ಅದಿತಿ ಪುತ್ರರಾಗಿ ಜನಿಸಿದರು. ಅದಿತಿಯಲ್ಲಿ ಜನಿಸಿದ ಈ ದೇವತೆಗಳಿಗೆ "ಆದಿತ್ಯ"ರೆಂದು "ಆದಿತೇಯ" ರೆಂದೂ ಹೆಸರು ಬಂದಿದೆ. ಒಟ್ಟು ಹನ್ನೆರಡು ಜನ ದೇವತೆಗಳು ಅದಿತಿಯಲ್ಲಿ ಹುಟ್ಟಿದರು. ಅವರ ಹೆಸರು ಹೀಗಿದೆ. ವಿಷ್ಣು, ಇಂದ್ರ, ಅರ್ಯಮ, ಧಾತೃ, ತ್ವಷ್ಟೃ, ಪೂಷಣ, ವಿವಸ್ವಂತ, ಸವಿತೃ, ಮಿತ್ರ, ವರುಣ, ಅಂಶ, ಭಗ. ಚಂದ್ರನ ಪತ್ನಿಯರಾದ ಇಪ್ಪತ್ತೇಳು ಜನ ಸ್ತ್ರೀಯರಲ್ಲಿ ಅನೇಕ ಮಕ್ಕಳು ಜನಿಸಿದರು. ಇವರೆಲ್ಲರೂ ತೇಜಸ್ವಿಗಳಾಗಿದ್ದಾರೆ. ಅರಿಷ್ಟನೇಮಿಯ ಮಡದಿಗೆ ಹದಿನಾರು ಮಕ್ಕಳು ಹಾಗೂ ಬಹುಪುತ್ರನಿಗೆ ನಾಲ್ವರು ಮಕ್ಕಳು ಜನಿಸಿದರು. ಈ ನಾಲ್ವರು ಸ್ತ್ರೀಯರಿಗೆ "ವಿದ್ಯುತ್ತು" ಎಂದು ಹೆಸರಾಯಿತು.

ಈ ಚಾಕ್ಷುಷ ಮನ್ವಂತರದಲ್ಲಿಯೇ ಬ್ರಹ್ಮರ್ಷಿಗಳು ಕಂಡುಹಿಡಿದ ಋಕ್ಕುಗಳು ಕೃಶಾಶ್ವ ಮುನಿಗೆ ಅಸ್ತ್ರಮಂತ್ರಗಳಾಗಿ ಗೋಚರವಾದವು. ಈ ಅಸ್ತ್ರಮಂತ್ರಗಳು ಸಹ ಸಾವಿರ ಯುಗಗಳು ಕಳೆದ ನಂತರ ಮತ್ತೆ ಜನ್ಮ ತಳೆಯುವವು. ಈಗ ಹೇಳಿದ ಎಲ್ಲ ಮೂವತ್ತ ಮೂರು ಪ್ರಕಾರದ ದೇವತೆಗಳೂ ಸ್ತ್ರೀ ಪುರುಷ ಸಂಬಂಧದಿಂದಲೇ ಜನಿಸಿರುವರು.

ಹೇಗೆ ಸೂರ್ಯನಿಗೆ ಆಕಾಶದಲ್ಲಿ ವ್ಯಕ್ತ-ಅವ್ಯಕ್ತ ಸ್ಥಿತಿಗಳಿವೆಯೋ ಅದರಂತೆ ಈ ದೇವತೆಗಳಿಗೂ ಪ್ರತಿಯೊಂದು ಯುಗದಲ್ಲೂ ಹುಟ್ಟು ಸಾವುಗಳು ಕಲ್ಪಿತವಾಗಿವೆ.

ಇದಿಷ್ಟು ಅದಿತಿಯ ವೃತ್ತಾಂತ, ಇನ್ನು ದಿತಿಯ ಸಂತಾನದ ಬಗ್ಗೆ ಕೇಳಿರಿ. ದಿತಿಗೆ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಎಂಬ ಇಬ್ಬರು ರಾಕ್ಷಸರು ಹುಟ್ಟಿದರು. ಮತ್ತು ''ಸಿಂಹಿಕೆ'' ಎಂಬ ಓರ್ವ ಪುತ್ರಿಯೂ ಜನಿಸಿದಳು. ಈ ಸಿಂಹಿಕೆಯನ್ನು 'ವಿಪ್ರಚಿತ್ತಿ' ಎಂಬುವವರು ವಿವಾಹವಾದರು. ಇವರ ಮಕ್ಕಳೇ ''ಸೈಂಹಿಕೇಯ''ರೆಂದು ಪ್ರಸಿದ್ಧರಾಗಿರುವರು.

ದಿತಿಯ ಮಗನಾದ ಹಿರಣ್ಯಕಶಿಪುವಿಗೆ ಹ್ರಾದ, ಅನುಹ್ರಾದ, ಪ್ರಹ್ಲಾದ, ಸಂಹ್ರಾದ ಎಂಬ ನಾಲ್ವರು ಮಕ್ಕಳು. ಅವರಲ್ಲಿ ಹ್ರಾದನಮಗ ''ಹ್ರದ'' ಎಂಬುವವ. ಈ ಹ್ರದನಿಗೆ ಶಿವ, ಕಾಲ ಎಂಬ ಇಬ್ಬರು ಮಕ್ಕಳು, ಪ್ರಹ್ಲಾದನಿಗೆ ವಿರೋಚನ ಎಂಬ ಮಗ ಜನಿಸಿದ. ಈ ವಿರೋಚನನ ಮಗನೇ ಬಲಿಚಕ್ರವರ್ತಿಯು. ಬಲಿಚಕ್ರವರ್ತಿಗೆ ಧೃತರಾಷ್ಟ್ರ, ಸೂರ್ಯ, ಚಂದ್ರ, ಚಂದ್ರತಾತನ, ಕುಂಭನಾಭ, ಗರ್ದಭಾಕ್ಷ, ಕುಕ್ಷಿ ಇವರೇ ಮೊದಲಾದ ನೂರು ಜನ ಮಕ್ಕಳು ಹುಟ್ಟಿದರು. ಇವರಲ್ಲಿ ಹಿರಿಯವನ ಹೆಸರು ಬಾಣಾಸುರ. ಈ ಬಾಣಾಸುರ ಶಿವಭಕ್ತ, ಮಹಾಪರಾಕ್ರಮಿ. ತನ್ನ ತಪಃಸ್ಸಾಮರ್ಥ್ಯದಿಂದ ಶಿವನನ್ನು ಪ್ರಸನ್ನಗೊಳಿಸಿ ರುದ್ರಗಣಗಳ ಸ್ಥಾನ ಪಡೆದವ.

ಹಿರಣ್ಯಾಕ್ಷನಿಗೆ ಬರ್ಭರ, ಶಕುನಿ, ಭೂತ ಸಂತಾಪನ, ಮಹಾನಾಭ, ವಿಕ್ರಾಂತ ಕಾಲನಾಭ ಎಂಬ ಮಕ್ಕಳು ಜನಿಸಿದರು. ಇವರೆಲ್ಲರೂ ವಿದ್ವಾಂಸರೂ ಪರಾಕ್ರಮಿಗಳೂ ಆಗಿದ್ದರು. ದನದೇವಿಗೆ ನೂರು ಜನ ಮಕ್ಕಳು. ಇವರಲ್ಲಿ ತಪಸ್ವಿಗಳಾದ. ಶೂರರಾದ ಕೆಲವರ ಹೆಸರನ್ನು ಹೇಳುವೆ ಕೇಳಿರಿ. ದ್ವಿಮೂರ್ಧಾ, ಶಂಖುಕರ್ಣ, ಹಯಶಿರಸ್ಸು, ಅಯೋಮುಖ, ಶಂಬರ, ಕಪಿಲ, ವಾಮನ, ಮಾರೀಚಿ, ಮಘವಂತ, ಇಲ್ವಲ ಸ್ವಸ್ರಮ, ವಿಕ್ಷೋಭಣ, ಕೇತು, ಕೇತುವೀರ್ಯ, ಶತಹ್ರದ, ಇಂದ್ರಜಿತು, ಸರ್ವಜಿತು, ವಜ್ರನಾಭ, ಏಕಚಕ್ರ, ತಾರಕ, ವೈಶ್ವಾನರ, ಪ್ರಲೋಮ, ವಿದ್ರಾವಣ, ಮಹಾಶಿರಸ್ಸು, ಸ್ವರ್ಭಾನು, ವೃಷಪರ್ವ, ವಿಪ್ರಚಿತ್ತಿ ಇವರೆಲ್ಲರೂ ಧನುದೇವಿಗೆ ಹುಟ್ಟಿದ ಕಶ್ಯಪ ಋಷಿಯ ಮಕ್ಕಳು. ಇವರಲ್ಲಿ ವಿಪ್ರಚಿತ್ತಿಯು ಮುಖ್ಯನು. ಇವರೆಲ್ಲರಿಗೆ ಮಕ್ಕಳು, ಮೊಮಕ್ಕಳು ಜನಿಸಿ ವಿಸ್ತೃತ ದಾನವಕುಲ ನಿರ್ಮಿತವಾಯಿತು. ಇವರ ಮಕ್ಕಳಲ್ಲಿ ಹೆಸರುವಾಸಿಯಾದವರನ್ನು ಕೆಲವರನ್ನು ಹೆಸರಿಸುವೆ.

ಪ್ರಭೆಯೆಂಬುವವಳು ಸ್ವರ್ಭಾನುವಿನ ಮಗಳು. ಶಚೀದೇವಿಯು ಪ್ರಲೋಮನ ಮಗಳು. ಉಪದೀಪ್ತಿಯು ಹಯಶಿರಸ್ಸಿನ ಮಗಳು. ಶರ್ಮಿಷ್ಠೆ ಎಂಬುವವಳು ಇವರಲ್ಲಿ ಓರ್ವನಾದ ವೃಷಪರ್ವನ ಮಗಳು. ಪುಲೋಮಾ, ಕಾಲಿಕಾ, ಎಂಬೀರ್ವರು ವೈಶ್ವಾನರ ಕುಮಾರಿಕೆಯರು, ಇವರನ್ನು ಮರೀಚಿಯು ಮದುವೆಯಾದ. ಈ ಈರ್ವರೂ ಕನ್ಯೆಯರು ಅರವತ್ತು ಸಾವಿರ ದಾನವರನ್ನು ಹಡೆದರು. ಮರೀಚಿಯು ತನ್ನ ತಪಸ್ಸಿನ ಮಹಿಮೆಯಿಂದ ಸಾವಿರದ ನಾನ್ನೂರು ದಾನವರನ್ನು ಸೃಷ್ಟಿಸಿದ. ಪುಲೋಮದೇವಿಯ ಮಕ್ಕಳು. ಕಾಲಿಕೆಯ ಮಕ್ಕಳೂ ಆದ ಇವರೆಲ್ಲರೂ ಹಿರಣ್ಯಪುರದಲ್ಲಿ ವಾಸಿಸುತ್ತಾರೆ. ಆ ಹಿರಣ್ಯಪುರದಲ್ಲಿ

ವಾಸಿಸುತ್ತಿದ್ದ ದಾನವರು ಅವಧ್ಯರು ಅವರ ಉಪಟಳದಿಂದ ಜನ ಬೇಸತ್ತಾಗ ಇಂದ್ರನು ಬ್ರಹ್ಮನಿಂದ ಅನುಗ್ರಹೀತನಾಗಿ ಬಂದು ಅವರನ್ನು ಸಂಹರಿಸಿದ. ಈ ದಾನವರಿಗಿಂತಲೂ ಶೌರ್ಯವುಳ್ಳ ಕೆಲ ದಾನವರಿದ್ದಾರೆ. ಸಿಂಹಿಕೆಯಲ್ಲಿ ಹುಟ್ಟಿದ ದಾನವರು ಈ ಪರಾಕ್ರಮಿ ಗಳಲ್ಲಿ ಮುಖ್ಯರಾಗಿರುವರು. ವಿಪ್ರಚಿತ್ತಿಯಿಂದ ಸಿಂಹಿಕೆಯಲ್ಲಿ ವಂಶ್ಯ, ಶಲ್ಯ, ನಲ, ಬಲ, ವಾತಾಪಿ, ನಮುಚಿ ಇಲ್ವಲ, ಸ್ವಸೃಮ, ಅಂಜಿಕ, ನರಕ, ಕಾಲನಾಭ, ಸರಮಾನ, ಸ್ವರಕಲ್ಪ ಹೀಗೆ ಹದಿಮೂರು ದಾನವರು ಜನಿಸಿದರು. ಇವರಿಗೆ ಒಟ್ಟು ಸೈಂಹಿಕೇಯರು (ಸಿಂಹಿಕೆಯ ಮಕ್ಕಳು) ಎಂದು ಹೆಸರಾಗಿದೆ. ಪರಾಕ್ರಮಿಗಳಾದ ಇವರಿಂದ ದನುವಂಶವು ಸಾಕಷ್ಟು ವೃದ್ಧಿಯನ್ನು ಹೊಂದಿತು. ಈ ದಾನವರ ಮಕ್ಕಳು, ಮೊಮ್ಮಕ್ಕಳು, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಇರುವರು.

''ಸಂಹ್ರಾದ''ನು ಘೋರ ತಪಸ್ಸನ್ನು ಆಚರಿಸಿ ನಿವಾತಕವಚರೆಂಬ ಅನೇಕ ಮಕ್ಕಳನ್ನು ಪಡೆದ.

ಈ ನಿವಾತಕವಚರಿಗೆ ಮೂರು ಕೋಟಿ ಮಕ್ಕಳು ಹುಟ್ಟಿದರು. ಇವರೆಲ್ಲರೂ ಮಣಿಪುರದಲ್ಲಿ ವಾಸಿಸುತ್ತಿದ್ದರು ಉನ್ಮತ್ತರಾದ ಇವರನ್ನು (ದ್ವಾಪರಯುಗದಲ್ಲಿ) ಅರ್ಜುನನು ಸಂಹರಿಸಿದನು. ತಾಮ್ರಾದೇವಿಗೆ ಆರು ಜನ ಪುತ್ರಿಯರು. ಇವರ ಹೆಸರು ಕ್ರೌಂಚೀ, ಶ್ಯೇನೀ, ಭಾಸೀ, ಸುಗ್ರೀವೀ, ಶುಚಿದೇವಿ, ಗೃಧ್ರಿಕಾದೇವಿ ಎಂದಿದೆ.

ಕ್ರೌಂಚಿಯು ಗೂಬೆಗಳನ್ನು ಸೃಷ್ಟಿಸಿದಳು. ಶ್ಯೇನಿಯು ಹದ್ದುಗಳನ್ನು ಸೃಷ್ಟಿಸಿದಳು. ಭಾಸೀದೇವಿಯು ಭಾಸಗಳನ್ನು ಸೃಷ್ಟಿಸಿದಳು. ಗೃಧ್ರಿದೇವಿಯು ಗೃಧ್ರಗಳನ್ನು (ಗಿಡುಗಗಳನ್ನು) ಸೃಷ್ಟಿಸಿದಳು. ಶುಚಿಯೆಂಬುವವಳು ಜಲದಲ್ಲಿ ವಾಸಿಸುವ ಪಕ್ಷಿಗಳನ್ನು ಹಡೆದಳು. ಸುಗ್ರೀವೀದೇವಿಯು ಕುದುರೆ, ಒಂಟೆ, ಕತ್ತೆ ಇವುಗಳನ್ನು ಪ್ರಸವಿಸಿದಳು. ಹೀಗೆ ತಾಮ್ರಾದೇವಿಯ ಕುಲದಲ್ಲಿ ಪಕ್ಷಿ ಸಂಕುಲದ ಸೃಷ್ಟಿಯಾಯಿತು. ಖ್ಯಾತರಾದ ಗರುಡ ಮತ್ತು ಅರುಣರು ವಿನತೆಯ ಮಕ್ಕಳು. ಇದರಲ್ಲಿ ಗರುಡನು ಪಕ್ಷಿರಾಜನೆಂದೂ ಮಹಾಸಾಹಸಿ ಯೆಂದೂ ಹೆಸರು ಪಡೆದಿರುವನು. ಸರ್ಪಗಳೆಲ್ಲ ಸುರಸೆಯ ಸಂತಾನ. ಹಾವುಗಳೆಲ್ಲ ಕದ್ರುವಿನ ಮಕ್ಕಳು. ಅಂತೆಯೇ ಹಾವುಗಳಿಗೆ 'ಕಾದ್ರವೇಯರು' ಎಂದು ಹೆಸರಾಗಿದೆ. ಈ ಹಾವು-ಸರ್ಪಗಳೆಲ್ಲ ಗರುಡನಿಗೆ ಅಧೀನ. ಈ ಸರ್ಪಗಳಲ್ಲಿ ತಕ್ಷಕ, ವಾಸುಕಿ, ಇವರಿಬ್ಬರು ಪ್ರಧಾನರು. ಸರ್ಪಗಳಲ್ಲಿ ಮುಖ್ಯ ಸರ್ಪಗಳ ಹೆಸರು ಇಂತಿವೆ- ಐರಾವತ, ಮಹಾಪದ್ಮ, ಶಂಖ, ಕರ್ಕೋಟಕ, ಧನಂಜಯ, ಕಂಬಲ, ಅಶ್ವತರ, ಏಲಾಪುತ್ರ, ಮಹಾನೀಲ, ಮಹಾಕರ್ಣ, ಧೃತರಾಷ್ಟ್ರ, ಬಲಾಹಕ, ಕುಹರ, ಪುಷ್ಪದುಷ್ಪ, ದುರ್ಮುಖ, ಸುಮುಖ, ಶಂಖ, ಶಂಖಪಾಲ, ಕಪಿಲ, ವಾಮನ, ನಹುಷ, ಶಂಖರೋಮ, ಮಣಿ. ಈ ಎಲ್ಲ ಸರ್ಪಗಳೂ ಹಿಂದೆ ಹೇಳಿದಂತೆ ಕದ್ರುವಿನ ಸುತರು. ಈ ಸರ್ಪಗಳಲ್ಲಿ ಹದಿನಾಲ್ಕು ಸಾವಿರ ಪ್ರಕಾರಗಳಿರುವವು. ವಿಷಮಯವಾದ ಹಲ್ಲುಗಳು, ಕಡುಕೋಪ ಇವು ಈ ಸರ್ಪಗಳ ಮುಖ್ಯ ಲಕ್ಷಣಗಳು.

ಭೂಮಿಯ ಮೇಲೆ ಚಲಿಸುವ, ಜಲದಲ್ಲಿ ಸಂಚರಿಸುವ ವಿಧವಿಧವಾದ ಪಕ್ಷಿಗಳೆಲ್ಲ ಧರಾದೇವಿಯಿಂದ ನಿರ್ಮಿತವಾದವು. ಎತ್ತು, ಹಸು, ಎಮ್ಮೆ, ಕೋಣ ಮುಂತಾದವು ಸುರಭಿಯ ಸಂತಾನ. ಮರ, ಗಿಡ, ಬಳ್ಳಿ, ಹುಲ್ಲು, ಮುಂತಾದವು ಇರಾದೇವಿಯ ಸೃಷ್ಟಿ.

ಖಸೆಯು ರಾಕ್ಷಸರಿಗೆ ಜನ್ಮವಿತ್ತಳು. ಮುನಿದೇವಿಯು ಅಪ್ಸರೆಯರನ್ನು ಹಡೆದಳು. ಅರಿಷ್ಟದೇವಿಯು ಸಿದ್ಧರನ್ನೂ ಗಂಧರ್ವರನ್ನೂ ಹಡೆದಳು. ಹೀಗೆ ಪ್ರಪಂಚದಲ್ಲಿನ ಚರಾಚರ ಪದಾರ್ಥಗಳೆಲ್ಲವೂ ಕಶ್ಯಪ ಬ್ರಹ್ಮನ ಸೃಷ್ಟಿ ವಿಷಯಗಳೇ.

ಹೀಗೆ ಈ ಸೃಷ್ಟಿಯು ಸ್ವಾರೋಚಿಷ ಮನ್ವಂತರದಲ್ಲಿ ನಡೆಯಿತು. ಇನ್ನು ವೈವಸ್ವತ ಮನ್ವಂತರದಲ್ಲಿ ಆದ ಸೃಷ್ಟಿಯನ್ನು ಹೇಳುವೆ ಕೇಳಿ. ಈ ಮನ್ವಂತರದಲ್ಲಿ ವರುಣನು ಒಂದು ದೊಡ್ಡ ಯಾಗವನ್ನು ಮಾಡಿದ. ಅದಕ್ಕೆ ಸ್ವತಃ ಬ್ರಹ್ಮನೇ ಹೋತೃವಾಗಿದ್ದ. ಈ ಬ್ರಹ್ಮನು ತನ್ನ ಮಾನಸ ಪುತ್ರರಾದ ಏಳು ಜನ ಬ್ರಹ್ಮರ್ಷಿಗಳನ್ನು ಬಳಿಗೆ ಕರೆದು ಸೃಷ್ಟಿ ಕಾರ್ಯ ಮುಂದುವರೆಸಲು ಅಜ್ಞಾಪಿಸಿದ. ಅವರು ಬ್ರಹ್ಮನ ಆಜ್ಞೆಯನ್ನು ಪಾಲಿಸ ಹತ್ತಿದರು. ಇಷ್ಟರಲ್ಲಿ ದೇವ-ದಾನವರಿಗೆ ವೈರ ಬೆಳೆದಿತ್ತು. ದೇವತೆಗಳು ದುಷ್ಟರಾದ ದಾನವರನ್ನೆಲ್ಲ ಕೊಂದು ಹಾಕಿದರು. ಇದರಿಂದ ದಾನವರಿಗೆ ತಾಯಿಯಾದ ದಿತಿಗೆ ಬಹಳ ಶೋಕ ಉಂಟಾಯಿತು. ತನ್ನ ಪತಿಯಾದ ಕಶ್ಯಪನಲ್ಲಿಗೆ ಬಂದು ಅವನನ್ನು ಪ್ರಸನ್ನಗೊಳಿಸಿ ಸಂತಾನಕ್ಕಾಗಿ ಯಾಚಿಸಿದಳು. ಕಶ್ಯಪನು ''ಅಸ್ತು'' ಎಂದ. ತನ್ನ ಮಕ್ಕಳನ್ನು ಸಂಹರಿಸಿದ ದೇವರಾಜ ಇಂದ್ರನನ್ನು ಕೊಲ್ಲಲು ಸಮರ್ಥನಾದ ಮಗನೊಬ್ಬ ಬೇಕು ಎಂಬ ತನ್ನ ಬಹುದಿನದ ಬಯಕೆಯನ್ನು ಕಶ್ಯಪ ಋಷಿಯ ಮುಂದಿಟ್ಟಳು ದಿತಿ. ಆಗ ಕಶ್ಯಪನು ದಿತಿಯನ್ನು ಕುರಿತು ಹೀಗೆ ಹೇಳಿದ.

**ಕಶ್ಯಪ:-** ಇಂದ್ರನನ್ನು ಸಂಹರಿಸುವಂಥ ಪುತ್ರನನ್ನು ನಾನು ಕೊಡಬಲ್ಲೆ. ಆದರೆ ಅದಕ್ಕಾಗಿ ದೀರ್ಘ ಅವಧಿಯ ಸಾಧನೆಗೆ ನೀನು ಸಿದ್ಧಳಾಗಬೇಕಾಗುತ್ತದೆ. ನಾನು ಒಂದು ತೇಜಸ್ಸನ್ನು ನಿನ್ನ ಗರ್ಭದಲ್ಲಿ ಇರಿಸುವೆ. ಅದನ್ನು ನೀನು ನೂರು ವರ್ಷಗಳ ಕಾಲ ಹೊಟ್ಟೆಯಲ್ಲಿ ಇರಿಸಿಕೊಂಡು ರಕ್ಷಿಸಬೇಕು. ಈ ಅವಧಿಯಲ್ಲಿ ಅದು ಬೆಳೆದು ಇಂದ್ರನನ್ನು ಕೊಲ್ಲುವ ಕೂಸಾಗುವದು. ಆದರೆ ಜಾಗ್ರತೆಯಿರಲಿ. ಈ ಸುದೀರ್ಘ ಅವಧಿಯಲ್ಲಿ ನೀನು ಯಾವ ಕ್ಷಣದಲ್ಲೂ ಯಾವ ಭಾಗದಲ್ಲೂ ಅಶುಚಿಯಾಗಿ ಉಳಿಯಬಾರದು. ಹಾಗೇನಾದರೂ ಆದರೆ ಗರ್ಭ ಫಲಿಸುವದಿಲ್ಲ.

ದಿತಿಯು ''ಆಗಲಿ'' ಎಂದಳು. ಕಶ್ಯಪ ಋಷಿಯು ದಿವ್ಯ ತೇಜಸ್ಸನ್ನು ಅವಳ ಗರ್ಭಕ್ಕೆ ಅನುಗ್ರಹಿಸಿದ. ದಿತಿಯು ಪರಿಶುದ್ಧಳಾಗಿ ಗರ್ಭವನ್ನು ಸ್ವೀಕರಿಸಿ ಬಹಳ ಎಚ್ಚರಿಕೆಯಿಂದ ಅದನ್ನು ಪೋಷಿಸತೊಡಗಿದಳು. ಇಂದ್ರನಿಗೆ ಸಮಾಚಾರ ತಿಳಿಯಿತು. ತನ್ನನ್ನು ಕೊಲ್ಲುವ ತೇಜಸ್ಸು ದಿತಿಯ ಗರ್ಭದಲ್ಲಿ ಬೆಳೆಯುತ್ತಿದೆಯೆಂಬುದನ್ನು ಅರಿತ ದೇವರಾಜ ಗಾಬರಿಯಾದ. ದಿತಿಯ ಗರ್ಭವನ್ನು ನಾಶಪಡಿಸಲು ತಕ್ಕ ಸಮಯವನ್ನು ನಿರೀಕ್ಷಿಸುತ್ತ ಮೈಯೆಲ್ಲ ಕಣ್ಣಾಗಿ ಕುಳಿತ ಆ ಸಹಸ್ರಾಕ್ಷ. ಕಾಲ ಸರಿಯಿತು. ನೂರು ವರ್ಷ ಮುಗಿಯುತ್ತ ಬಂದರೂ ದಿತಿಯ ಆಚರಣೆ, ನಿಷ್ಠೆ, ಅಲ್ಪವೂ ಬದಲಾಗಲಿಲ್ಲ. ಪರಮ ಶುದ್ಧಿಯನ್ನು ಕಾಯ್ದುಕೊಂಡು ಈ ಕಾಲವನ್ನು ಕಳೆದಿದ್ದಳಾಕೆ. ಇಂದ್ರನಿಗೆ ನಿರಾಶೆ, ದುಃಖ ಆದರೂ ಪೂರ್ಣ ಅವಧಿ ಮುಕ್ತಾಯವಾಗುವವರೆಗೂ ನಿರೀಕ್ಷೆ ಪರೀಕ್ಷೆಗಳನ್ನು ಬಿಡದೇ ಹೊಂಚು ಹಾಕಿ ಕುಳಿತೇ ಇದ್ದ. ಕೊನೆಗೂ ಇಂದ್ರ ಗೆದ್ದ.

ಒಂದು ದಿನ ಮಲಗುವಾಗ ಕಾಲ್ತೊಳೆಯದೇ ಅಪವಿತ್ರಳಾಗಿಯೇ ಬಂದು ದಿತಿ ಹಾಸಿಗೆಗೆ ಬಂದು ಮಲಗಿದಳು. ಹಠಾತ್ತನೆ ಇಂದ್ರನು ಸೂಕ್ಷ್ಮ ರೂಪದಿಂದ ಅವಳ ಉದರವನ್ನು ಪ್ರವೇಶಿಸಿ ಗರ್ಭವನ್ನು ತುಂಡು ತುಂಡಾಗಿ ಕತ್ತರಿಸಿಬಿಟ್ಟ. ಏಳು ಭಾಗಗಳಾದವು. ಗರ್ಭದಲ್ಲಿನ ಮಗು ಅಳಹತ್ತಿತು. ಏಳು ಭಾಗಗಳಾದರೂ ಸಾಯದೇ ಇನ್ನೂ ಅಳುತ್ತಿದ್ದ ಆ ಮಗುವಿಗೆ ಇಂದ್ರನು ''ಮಾ ರೋದೀಃ'' ''ಮಾ ರೋದೀಃ'' ಎಂದು

ಹೇಳುತ್ತಲೇ ಒಂದೊಂದು ತುಂಡನ್ನೂ ಏಳೇಳನ್ನಾಗಿ ಪುನಃ ಕತ್ತರಿಸಿದ. ಹೀಗೆ ನಲವತ್ತೊಂಭತ್ತು ಬೇರೆ ಬೇರೆ ಭಾಗಗಳಾಗಿಯೇ ಜನ್ಮ ತಳೆದ ಆ ಕಶ್ಯಪರ ತೇಜೋಂಶಗಳನ್ನು ಮಾರುತರು ಎಂದು ಕರೆಯಲಾಯಿತು. ಮಾರುದಃ=ಅಳಬೇಡಿರಿ ಎಂದು ಇಂದ್ರ ಹೇಳಿದ್ದರಿಂದ ಅವರಿಗೆ ಮಾರುತರು ಎಂದು ಹೆಸರಾಯಿತು. ಹೀಗೆ ದೇವತೆಗಳು, ಪ್ರಜೆಗಳು, ಇತ್ಯಾದಿಯಾಗಿ ಜನ್ಮತಳೆದ ಈ ದೊಡ್ಡ ಸೃಷ್ಟಿಯನ್ನು ವಿಂಗಡಿಸಿ ಅನೇಕ ಗಣಗಳನ್ನಾಗಿ ಮಾರ್ಪಡಿಸಿ ಒಂದೊಂದು ಗಣಕ್ಕೆ ಒಬ್ಬೊಬ್ಬ ಬ್ರಹ್ಮರನ್ನು ನಿಯಮಿಸಿದ ಶ್ರೀಹರಿ. ಈ ಪ್ರಜೆಗಳೇ ರಾಜ್ಯಗಳನ್ನು ಕಟ್ಟಿಕೊಂಡು ಆಳ್ವಿಕೆ ನಡೆಸಿದರು. ಇಂಥವರಲ್ಲಿ ಪೃಥು, ಮನು, ಮೊದಲಾದವರು ಮುಖ್ಯರು. ಈ ಸಮಸ್ತ ಸೃಷ್ಟಿಗೆ ಕಾರಣನಾದ ಶ್ರೀಹರಿಯು ಸರ್ವೋತ್ತಮನು, ಭಕ್ತಪ್ರಿಯನು, ಸಕಲ ಸೃಷ್ಟಿಯನ್ನೂ ವ್ಯಾಪಿಸಿ ಇರುವವನು. ಆಯಾ ಪದಾರ್ಥಗಳಲ್ಲಿ ಇದ್ದು ಆಯಾ ಪದಾರ್ಥಗಳ ಕಾರ್ಯ ಸಾಮರ್ಥ್ಯವನ್ನು ಸೃಜಿಸಿ ಪ್ರಚೋದಿಸುವವನು. ಬ್ರಾಹ್ಮಣರೇ, ಈ ಸೃಷ್ಟಿ ಕ್ರಮವನ್ನು ಶ್ರದ್ಧೆಯಿಂದ ಶ್ರವಣಮಾಡಿದವರು ಉತ್ತಮ ಗತಿಯನ್ನು ಹೊಂದುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೊದಲನೆಯ ಅಧ್ಯಾಯ ಮುಗಿದುದು*

—o—

## ಪೃಥುರಾಜ ಜನ್ಮಕಥನ

**ಅಧ್ಯಾಯ - ೨**

**ಸೂತ:-** ದ್ವಿಜಶ್ರೇಷ್ಠರೇ, ವೇನನ ಮಗನಾದ ಪೃಥುವನ್ನು ಬ್ರಹ್ಮನು ಮೊದಲು ಚಕ್ರವರ್ತಿಯಾಗಿ ನಿಯಮಿಸಿದ. ನಂತರ ಉಳಿದ ರಾಜರಿಗೆ ಅವಕಾಶ ಕಲ್ಪಿಸಿದ. ಬ್ರಾಹ್ಮಣರು, ಬಳ್ಳಿಗಳು, ನಕ್ಷತ್ರಗಳು, ಗ್ರಹಗಳು, ಯಜ್ಞ, ತಪಸ್ಸು, ಇವಿಷ್ಟಕ್ಕೆ ಚಂದ್ರನನ್ನು ಅಧೀಶನನ್ನಾಗಿಸಿದ. ಜಲಕ್ಕೆ ವರುಣನನ್ನು ಅಧಿಪತಿ ಮಾಡಿದ. ರಾಜರ ರಾಜನನ್ನಾಗಿ ಕುಬೇರನನ್ನು ನಿಯಮಿಸಿದ. ಆದಿತ್ಯರಿಗೆ ವಿಷ್ಣುವೇ ಒಡೆಯನಾದ. ವಸುಗಳಿಗೆ ಅಗ್ನಿಯನ್ನು ಒಡೆಯನನ್ನಾಗಿ ನಿಯಮಿಸಿದ. ಬೇರೆ ಬೇರೆ ಗಣಗಳಿಗೆ ಅಧಿಪತಿಗಳಾಗಿದ್ದ ಬ್ರಹ್ಮರಿಗೆ ದಕ್ಷನನ್ನು ಮುಖ್ಯನನ್ನಾಗಿಸಿದ. ದೇವತೆಗಳಿಗೆ ಇಂದ್ರನನ್ನು ನಾಯಕನನ್ನಾಗಿ ಮಾಡಿದ. ದೈತ್ಯ ದಾನವರಲ್ಲಿ ಸಾಧು ಸ್ವಭಾವದ ಪ್ರಹ್ಲಾದನನ್ನು ಅವರಿಗೆ ಮುಖ್ಯಸ್ಥನನ್ನಾಗಿಸಿದ. ಪಿತೃಗಳ ಒಡೆತನವನ್ನು ಯಮನಿಗೆ ನೀಡಿದ. ರುದ್ರನನ್ನು ಪಿಶಾಚಿ, ಭೂತ, ಯಕ್ಷ, ಮುಂತಾದವರಿಗೆ ರಕ್ಷಕನನ್ನಾಗಿರಿಸಿದ. ಪರ್ವತಗಳಿಗೆ ಹಿಮಾಲಯನನ್ನು ರಾಜನನ್ನಾಗಿಸಿದ. ನದಿಗಳಿಗೆ ಸಮುದ್ರ, ಕುದುರೆಗಳಿಗೆ ಉಚ್ಚೈಃಶ್ರವಸ್ಸು, ಆನೆಗಳಿಗೆ ಐರಾವತ, ಪಕ್ಷಿಗಳಿಗೆ ಗರುಡ, ಗಂಧರ್ವರಿಗೆ ಚಿತ್ರರಥ, ನಾಗಗಳಿಗೆ ವಾಸುಕಿ, ಸರ್ಪಗಳಿಗೆ ತಕ್ಷಕ, ಮೃಗಗಳಿಗೆ ಸಿಂಹ, ಹಸು ಮತ್ತು ಎತ್ತುಗಳಿಗೆ ಬೀಜದಹೋರಿ, ವನಸ್ಪತಿಗಳಿಗೆ ವಟವೃಕ್ಷ-ಹೀಗೆ ಆಯಾ ಗುಂಪಿನಲ್ಲಿ ಶ್ರೇಷ್ಠರನ್ನು ಆಯಾ ಗುಂಪಿಗೆ ಅಧೀಶರನ್ನಾಗಿ ನಿಯಮಿಸಿದ. ಇದಾದ ನಂತರ ದಿಕ್ಪಾಲಕರನ್ನು ಹೀಗೆ ವ್ಯವಸ್ಥೆಗೊಳಿಸಿದ. ವೈರಾಜಬ್ರಹ್ಮನ ಮಗನಾದ ಸುಧನ್ವನನ್ನು ಪೂರ್ವದಿಕ್ಕಿಗೆ, ಕರ್ದಮ ಪ್ರಜಾಪತಿಯ ಮಗನಾದ ಶಂಖಪದನನ್ನು ದಕ್ಷಿಣದಿಕ್ಕಿಗೆ, ರಜಸ್ಸೆಂಬ ಬ್ರಹ್ಮನ ಮಗನಾದ ಕೇತುಮಂತನನ್ನು

ಪಶ್ಚಿಮದಿಕ್ಕಿಗೆ, ಪರ್ಜನ್ಯ ಬ್ರಹ್ಮನ ಮಗನಾದ ಹಿರಣ್ಯರೋಮನನ್ನು ಉತ್ತರದಿಕ್ಕಿಗೆ ಒಡೆಯರನ್ನಾಗಿ ನಿಯಮಿಸಿದನು.

ಈ ರೀತಿಯಾಗಿ ಬ್ರಹ್ಮದೇವರಿಂದ ನಿಯಮಿತರಾದ ರಾಜರು ಏಳು ದ್ವೀಪಗಳು ಅನೇಕ ಪಟ್ಟಣಗಳು ಇವುಗಳನ್ನು ಒಳಗೊಂಡ ಭೂಮಿಯಲ್ಲಿ ತಮ್ಮ ತಮ್ಮ ಭಾಗಕ್ಕೆ ಸೇರಿದ ಪ್ರದೇಶಗಳನ್ನು ಧರ್ಮದಿಂದ ಪಾಲಿಸುತ್ತಿರುವರು. ಈ ಎಲ್ಲ ರಾಜರನ್ನು ಸೇರಿಸಿ ಶ್ರುತ್ಯುಕ್ತ ಮಾರ್ಗದಲ್ಲಿ ದೊಡ್ಡ ಯಾಗವನ್ನು ನೆರವೇರಿಸಿದವ, ಯಾಗ ಮಾಡಿದವರಲ್ಲಿ ಮೊದಲಿಗ ಪೃಥು ಚಕ್ರವರ್ತಿ.

ಈ ಚಾಕ್ಷುಷ ಮನ್ವಂತರ ಕಳೆದು ವೈವಸ್ವತ ಮನ್ವಂತರ ಪ್ರಾಪ್ತವಾದ ನಂತರ ಸೂರ್ಯನ ಮಗನಾದ ಮನುವಿಗೆ ಈ ಭೂ ಸಾಮ್ರಾಜ್ಯದ ಒಡೆತನವನ್ನು ಬ್ರಹ್ಮನು ವಹಿಸಿಕೊಟ್ಟನು. ವಿವಸ್ವಾನ್ ಎಂದರೆ ಸೂರ್ಯ. ಅವನ ಮಗನಾದುದರಿಂದ ಈ ಮನುವಿಗೆ ವೈವಸ್ವತ ಮನುವೆಂದು ಹೆಸರಾಯಿತು. ವೈವಸ್ವತ ಮನುವಿನ ಚರಿತ್ರೆ ಹೀಗಿದೆ.

ಪೂರ್ವಕಾಲದಲ್ಲಿ ಚಂದ್ರವಂಶದಲ್ಲಿ ಅಂಗ ಎಂಬ ಹೆಸರಿನ ಓರ್ವ ರಾಜ ಧರ್ಮಿಷ್ಠ, ಪ್ರಜಾಹಿತದಲ್ಲಿ ಸದಾಸಕ್ತ, ಮಹಾತ್ಮನಿಂದ ವೇನ ಜನಿಸಿದ. ವೇನನು ತಂದೆಗೆ ವಿರುದ್ಧವಾದ ಗುಣಗಳನ್ನು ಹೊಂದಿದ್ದ. ಅಧರ್ಮಿಯಾದ, ಪ್ರಜಾಪೀಡಕನಾದ. ಇದಕ್ಕೆ ಕಾರಣವೂ ಇದೆ. ಈ ವೇನನ ತಾಯಿ ಮೃತ್ಯುದೇವನ ಮಗಳಾದ ಸುನೀಥೆ. ವೇನನು ಬಾಲ್ಯದಲ್ಲಿ ಮೃತ್ಯುದೇವನ ಮನೆಯಲ್ಲಿಯೇ ಬೆಳೆದ. ಹೀಗಾಗಿ ಮತ್ಯುದೇವನ ದೋಷಗಳೆಲ್ಲ ಪರಿಸರ ಪ್ರಭಾವದಿಂದ ಈ ವೇನನಲ್ಲೂ ಬಂದವು. ವೇನನು ಸ್ವಧರ್ಮವನ್ನು ತ್ಯಜಿಸಿ ಸ್ತ್ರೀಲೋಲುಪನಾದ. ಅತಿಲೋಭಿಯಾದ. ವೇದ ಬ್ರಾಹ್ಮಣ ದ್ವೇಷಿಯಾದ. ತನ್ನ ರಾಜ್ಯದಲ್ಲಿ ಯಜ್ಞ-ಯಾಗಗಳನ್ನು ಆಚರಿಸುವದು, ಪ್ರಾರ್ಥನೆ, ದೇವ ಪೂಜೆಗಳನ್ನು ಮಾಡುವದೂ ನಿಷಿದ್ಧವೆಂದು ಸಾರಿದ. ಹಾಗೆ ಯಾಗಗಳನ್ನು ನೆರವೇರಿಸಿದರೂ ನನ್ನನ್ನು ಕುರಿತು ಆ ಯಾಗಗಳಲ್ಲಿ ಹವಿಸ್ಸನ್ನು ಹಾಕಬೇಕು, ಆ ಯಾಗ ನನಗೆ ಅರ್ಪಿತವಾಗಬೇಕು, ಯಾಗಕ್ಕೆ ಯಜಮಾನ ನಾನೇ. ಈ ನಿಲುವಿಗೆ ವಿರುದ್ಧವಾಗಿ ನಡೆದುಕೊಳ್ಳುವವರ ತಲೆ ಕಡಿಸುವೆ ಎಂದು ಡಂಗುರ ಸಾರಿದ. ಇದರಿಂದ ಋಷಿಮುನಿಗಳಿಗೆ ಬಹಳ ತೊಂದರೆಯಾಯಿತು. ಸಂತ್ರಸ್ತರಾದ ಅವರು ಎಲ್ಲರೂ ಒಂದೆಡೆ ಸೇರಿದರು. ಸಮಾಲೋಚನೆ ಗೈದು ರಾಜನಿಗೆ ಬುದ್ಧಿವಾದವನ್ನು ಹೇಳುವದೆಂದು ತೀರ್ಮಾನಿಸಿದರು. ಎಲ್ಲರೂ ಸೇರಿ ರಾಜನ ಬಳಿಗೆ ಬಂದರು. ಅವನನ್ನು ಉದ್ದೇಶಿಸಿ ಇಂತು ನುಡಿದರು.

**ಮುನಿಗಳು:-** ರಾಜನ್, ನೀನು ಪವಿತ್ರವಾದ ಅತ್ರಿವಂಶದಲ್ಲಿ ಜನಿಸಿರುವೆ. ಸಿಂಹಾಸನವನ್ನು ಆರೋಹಣ ಮಾಡುವಾಗ ಧರ್ಮದಿಂದ ಪಾಲನೆ ಮಾಡುವೆ ಎಂಬುದಾಗಿ ವಚನ ನೀಡಿರುವೆ. ನೀನೇ ಪವಿತ್ರ ಸ್ಥಳದಲ್ಲಿ ನಿಂತು ಘೋಷಿಸಿಕೊಂಡಿರುವ ವಚನವನ್ನು ಉಲ್ಲಂಘಿಸಿ ವಿಶೃಂಖಲನಾಗಿ ವರ್ತಿಸಬೇಡ. ಆದುದು ಆಗಿಹೋಯಿತು. ಇನ್ನಾದರೂ ಸ್ವೈರಾಚಾರಗಳನ್ನು ಬಿಡು. ಲೋಭವನ್ನು ತ್ಯಜಿಸು. ಪ್ರಜೆಗಳ ತೊಂದರೆಗಳತ್ತ ಗಮನ-ಹರಿಸು. ಧರ್ಮಮಾರ್ಗವನ್ನು ಮೀರಬೇಡ. ಮುನಿಗಳಿಗೆ ಸಾತ್ವಿಕರಿಗೆ ಹಿಂಸೆ ನೀಡಬೇಡ. ಎಂದು ಉಪದೇಶಿಸಿದರು. ಮುನಿಮನೀಷಿಗಳ ಈ ಮಾತುಗಳನ್ನು ಕೇಳಿ ಆ ದುಷ್ಟ ವೇನನು ಅಟ್ಟಹಾಸಗೈದು ಅಪಹಾಸ್ಯ ಮಾಡಿ ಅಹಂಕಾರದಿಂದ ಈ ರೀತಿ ಉದ್ಗಾರಗಳನ್ನೆತ್ತಿದ.

**ವೇನ:-** "ಧರ್ಮಕ್ಕೆ ಅಧಿಪತಿ ನನ್ನ ಹೊರತು ಬೇರೆ ಯಾರಿದ್ದಾರೆ? ನನಗಿಂತ ಶ್ರೇಷ್ಠರು ಯಾರೂ ಇಲ್ಲ. ನಾನು ಯಾರ ಮಾತನ್ನೂ ಕೇಳುವದಿಲ್ಲ. ಶಸ್ತ್ರ-ಶಾಸ್ತ್ರಗಳಲ್ಲಿ ನಾನು ಅಸಾಧಾರಣ ಪ್ರತಿಭಾಶಾಲಿಯಾಗಿರುವೆ. ಈ ಲೋಕದಲ್ಲಿ ಮೂಢರಾದ ನೀವು ಮಾತ್ರ ನನ್ನನ್ನು ಸರಿಯಾಗಿ ತಿಳಿಯದೇ ನನಗೆ ಉಪದೇಶಿಸಲು ಬಂದಿರುವಿರಿ. ನಾನು ಇಚ್ಛಿಸಿದರೆ ಭೂಮ್ಯಾಕಾಶಗಳನ್ನು ಒಂದುಗೂಡಿಸಿಯೇನು. ಜಲಪ್ರಳಯವನ್ನೇ ಸೃಷ್ಟಿಸಿ, ಸಕಲ ಲೋಕಗಳನ್ನೂ ಧ್ವಂಸಗೊಳಿಸಬಲ್ಲೆ, ಪಾತಾಳಾದಿ ಸಮಸ್ತ ಲೋಕಗಳನ್ನೂ ಕ್ಷಣಾರ್ಧದಲ್ಲಿ ಸಂಕ್ಷೋಭ ಗೊಳಿಸಬಲ್ಲೆ. ನನಗೆ ನೀವು ಉಪದೇಶ ನೀಡುವ ಬದಲು ನಿಮ್ಮನ್ನು ನೀವು ತಿದ್ದಿಕೊಳ್ಳಿ. ಇನ್ನು ಮೇಲಾದರೂ ನನ್ನನ್ನು ಸರಿಯಾಗಿ ಅನುಸರಿಸಿ. ಇಲ್ಲಿಂದ ಹೊರಡಿರಿ" ಎಂದು ಅಬ್ಬರಿಸಿದ.

ವೇನನ ಈ ಹೂಂಕೃತಿಗಳನ್ನು ಮೌನವಾಗಿಯೇ ಅನುಭವಿಸಿದರು. ಓಂಕಾರ ನುಡಿದು ಸತ್ವಸಂಪನ್ನರಾದ ಆ ಮುನಿಗಳ ಬಾಯಿಂದ ಹೂಂಕಾರ ಶಬ್ದ ಹೊರಬಿದ್ದಿತು. ಕ್ಷಣಾರ್ಧದಲ್ಲಿ ವೇನ ಗತಪ್ರಾಣನಾಗಿ ನೆಲಕ್ಕೆ ಉರುಳಿದ. ಮುನಿಶಾಪದಿಂದ ವೇನರಾಜ ಹತನಾದಾಗ ಎಲ್ಲೆಡೆ ಹಾಹಾಕಾರ ಎದ್ದಿತು. ಅನಾಯಕ ಪರಿಸ್ಥಿತಿ ಉಂಟಾದರೆ ಏನು ಗತಿ ಎಂದು ಋಷಿಗಳಿಗೂ ಋಜುಗಳಿಗೂ ಕೂಡಿಯೇ ಚಿಂತೆ. ಇದನ್ನೆಲ್ಲ ಆಲೋಚಿಸಿ ಆ ಮುನಿ ಮಹರ್ಷಿಗಳು ವೇನರಾಜನ ತೊಡೆಯನ್ನು ಮಥನ ಮಾಡಿದರು. ಅದರಿಂದ ಓರ್ವ ಕಪ್ಪು ಬಣ್ಣದ ಕುಳ್ಳಪುರುಷ ಹುಟ್ಟಿ ಬಂದ. ಕೈ ಮುಗಿದು ಭಯಭ್ರಾಂತನಾಗಿ ನಿಂತ ಅವನನ್ನು ಕಂಡು. ಮುನಿಪುಂಗವರಾದ ಅತ್ರಿಗಳು ನುಡಿದರು. "ನಿಷೀದ" ಕುಳಿತುಕೋ ಎಂದು. ಆದುದರಿಂದ ಅವನು "ನಿಷೀಧ" ಎಂದೇ ಹೆಸರಾದ. ಅವನ ವಂಶದವರಿಗೆಲ್ಲ ನಿಷೀಧ ಎಂದು ಹೆಸರು ಬಂದಿತು. ವಿಂಧ್ಯ ಮೊದಲಾದ ಬೆಟ್ಟಗಳ ತಪ್ಪಲ ಪ್ರದೇಶದಲ್ಲಿ ಇರುವ ಬೇಡರ ಜಾತಿಗೆಲ್ಲ ವೇನರಾಜನ ಪಾಪದಿಂದ ಹುಟ್ಟಿದ ಈ ನಿಷೀದನೇ ಮೂಲ ಪುರುಷ.

ಅನಂತರ ಆ ಮಹರ್ಷಿಗಳು ವೇನರಾಜನ ಬಲಗೈಯನ್ನು ಯಜ್ಞದ ಅರಣಿ ಎಂದರೆ ಶಮೀಕಟ್ಟಿಗೆಯನ್ನು ಕಡೆಯುವಂತೆ ಮಥನ ಮಾಡಿದರು. ಅದರಿಂದ ಜನಿಸಿದವನೇ ಪೃಥು. ಅಗ್ನಿಯಂತೆ ದೇದೀಪ್ಯಮಾನ ಆ ಪೃಥುರಾಜ. ಅಜಗವ ಎಂಬ ದೊಡ್ಡ ಬಿಲ್ಲನ್ನೂ, ದಿವ್ಯ ಕವಚವನ್ನೂ, ಅನೇಕ ಮಹಾಸ್ತ್ರಗಳನ್ನೂ ಧರಿಸಿದ. ಆ ಪೃಥುವನ್ನು ಭೂಮಂಡಲ ಸಾರ್ವಭೌಮ ಸಿಂಹಾಸನದ ಮೇಲೆ ಕುಳ್ಳಿರಿಸಿ ಎಲ್ಲ ದೇವತೆಗಳೊಂದಿಗೆ ಬ್ರಹ್ಮದೇವರು ಪಟ್ಟಾಭಿಷೇಕ ಮಾಡಿದರು. ತನ್ನ ತಂದೆಯಿಂದ ತೊಂದರೆಗೆ ಒಳಗಾದ ಪ್ರಜೆಗಳನ್ನೂ ಆ ಪೃಥುಚಕ್ರವರ್ತಿಯು ಪ್ರೀತಿಯಿಂದ ಪಾಲಿಸಿದ. ಧರ್ಮದಿಂದ ಪೋಷಿಸಿದ. ಅವರಿಂದ ಅವನು ನಿಜವಾದ ಅರ್ಥದಲ್ಲಿ ರಾಜ ಎನಿಸಿದ.

**ಅನುರಾಗಾತ್ತತಸ್ತಸ್ಯ ನಾಮರಾಜಾಭ್ಯಜಾಯತ ।**
**ಪಿತ್ರಾ ಪರಂಜಿತಾಸ್ತಸ್ಯ ಪ್ರಜಾಸ್ತೇನಾನುರಂಜಿತಾಃ ॥**

ಆ ಪೃಥುವಿನ ರಾಜ್ಯದಲ್ಲಿ ಹದಮಾಡಿದ ಹೊಲಗಳಲ್ಲಿ ಧಾನ್ಯ ಬೆಳೆದು ಸಮೃದ್ಧವಾಗಿ ಅನ್ನವನ್ನು ಉತ್ಪಾದಿಸುವ ಪದ್ಧತಿ ಆರಂಭವಾಯಿತು. ಹಸುಗಳೆಲ್ಲವೂ ಚೆನ್ನಾಗಿ ಹಾಲು ಕರೆಯುತ್ತಿದ್ದವು. ವನೋಪವನಗಳಲ್ಲಿಯೂ ವೃಕ್ಷಕೋಟರಗಳಲ್ಲಿಯೂ, ಬೆಟ್ಟ ಬಯಲು ಗಳಲ್ಲಿಯೂ, ಜೇನು ಹುಟ್ಟಿಗಳಿಂದ ಜೇನುತುಪ್ಪ ಸಮೃದ್ಧವಾಗಿ ಜಿನುಗುತ್ತಿತ್ತು.

ಆ ಕಾಲದಲ್ಲಿ ಋಷಿಗಳ ಯಜ್ಞದಲ್ಲಿ ಹುಟ್ಟಿದ ಸೂತ ಮಾಗಧ ಎಂಬ ಈರ್ವರು ಪುರುಷರು ಯಜ್ಞದೀಕ್ಷಿತರಾದ ಮುನಿಗಳ ಪ್ರೇರಣೆಯಿಂದ ಪೃಥುರಾಜನ ಬಳಿಗೆ ಬಂದು ಹಾಡಿ ಹೊಗಳಿದರು. ತನ್ನನ್ನು ಸ್ತೋತ್ರ ಮಾಡುವ ಈ ವಂಧಿಮಾಗಧರಿಗೆ ಪೃಥುಚಕ್ರವರ್ತಿಯು ಸೂತನಿಗೆ ಅನೂಪದೇಶವನ್ನೂ ಮಾಗಧನಿಗೆ ಮಾಗಧ ದೇಶವನ್ನೂ ದಾನ ನೀಡಿದ.

ಅನಂತರ ಮಹರ್ಷಿಗಳ ಪ್ರೇರಣೆಯಂತೆ ಪ್ರಜೆಗಳು ಪೃಥುರಾಜನ ಬಳಿಗೆಬಂದು ''ಮಹಾರಾಜ, ನಮಗೆ ಜೀವನವನ್ನು ಕಲ್ಪಿಸು'' ಎಂದು ಕೇಳಿಕೊಂಡರು. ಆಗ ಲೋಕ ಕ್ಷೇಮಕ್ಕಾಗಿ ಅಂದಿನ ಆ ಅವನೀತಲದ ಅರಸ ತನ್ನ ಬಿಲ್ಲಿನ ಹೆದೆಯನ್ನು ಠೇಂಕರಿಸಿದ. ಬಾಣವನ್ನು ಹೂಡಿದ. ಹಸುವಿನ ರೂಪ ಧರಿಸಿಕೊಂಡು ಹೆದರಿ ಓಡುತ್ತಿರುವ ಭೂಮಿಯನ್ನು ಬೆನ್ನಟ್ಟಿದ. ಕೊನೆಗೆ ಆ ಭೂದೇವಿ ಆ ಚಕ್ರವರ್ತಿಗೆ ಮಣಿದು ಶರಣು ಬಂದಳು. ಭಯಭ್ರಾಂತಳಾಗಿ ನುಡಿದಳು. ಮಹಾರಾಜ ಸ್ತ್ರೀಹತ್ಯೆ ಮಹಾಪಾಪವಲ್ಲವೆ?. ಪ್ರಜೆಗಳೆಲ್ಲರೂ ನಮ್ಮ ಮೇಲೆಯೇ ನಿಂತಿರುವರು. ನನ್ನಿಂದಲೇ ಬಾಳಿ ಬದುಕುವವರು, ನಾನು ನಷ್ಟವಾದರೆ ನಿನ್ನ ಪ್ರಜೆಗಳು ನಿಲ್ಲುವುದೆಲ್ಲಿ? ನೀನು ಪ್ರಜೆಗಳ ಕ್ಷೇಮವನ್ನು ಬಯಸುತ್ತಿದ್ದರೆ ಕಾಮಿತಾರ್ಥಗಳನ್ನು ಕರೆಯುವ ಕಾಮಧೇನುವಿನಂತಿರುವ ನನ್ನಿಂದ ನಿನ್ನ ಪ್ರಜೆಗಳಿಗೂ ಬೇಕಾದ ವಸ್ತುಗಳನ್ನು ಹಿಂಡಿಕೊಳ್ಳಿರಿ ಯೋಗ್ಯವಾದ ಕರುವನ್ನು ಹುಡುಕಿ ತಂದು ನೀವೆಲ್ಲರೂ ನಿಮಗೆ ಅಭೀಷ್ಟವಾದ ವಸ್ತುಗಳನ್ನು ನನ್ನಿಂದ ಹಿಂಡಿಕೊಳ್ಳಿರಿ. ಇದಕ್ಕಿಂತ ಮೊದಲು ತಗ್ಗು, ದಿನ್ನೆ, ತೆವರು ಮಿಟ್ಟೆಗಳಿಂದ ತುಂಬಿದ ಈ ನನ್ನ ಪೃಥ್ವಿಯ ಮೇಲ್ಭಾಗವನ್ನು ನಿನ್ನ ಧನುಸ್ಸಿನ ತುದಿಯಿಂದ ಕಡಿದು ಸಮನಾಗಿ ಮಾಡು. ಭೂಮಿಯ ಬೆನ್ನಿನ ಮೇಲೆ ಅಲ್ಲಲ್ಲಿ ಅಡ್ಡ ದಿಡ್ಡಿಯಾಗಿ ಬೆಳೆದ ಗುಡ್ಡಗಳನ್ನು ಕೂಡ ಕಡಿದು ಕತ್ತರಿಸಿ ನೆಲದೆಡೆಯೆಲ್ಲವೂ ಸಮತಟ್ಟಾಗುವಂತೆ ಮಾಡು. ಅನಂತರ ನಿನ್ನ ಪ್ರಜೆಗಳು ಹರವಾದ ನನ್ನ ಬೆನ್ನ ಮೇಲೆ ನೆಲವನ್ನು ಹರಗಿ ಕಾಳುಕಡ್ಡಿ ಪೈರು ದವಸ ಧಾನ್ಯ ಮುಂತಾದವುಗಳನ್ನು ಬೆಳೆದು ಹೊಟ್ಟೆತುಂಬಿಕೊಳ್ಳುವಂತೆ ಆಗಲಿ, ಮತ್ತು ಸಮನಾದ ಪ್ರದೇಶದಲ್ಲಿ ಮನೆಗಳನ್ನು ಕಟ್ಟಿಕೊಂಡು ವಾಸಿಸಲು ಅನುಕೂಲ ಮಾಡಿಕೊಡು.

ಋಷಿಮುನಿಗಳ ಆದೇಶದಂತೆ ಪೃಥುಚಕ್ರವರ್ತಿಯು ಮೊದಲು ಕೇವಲ ಗಡ್ಡೆ ಗೆಣಸು ಹಣ್ಣು ಕಾಯಿಗಳನ್ನು ಮಾತ್ರ ಒದಗಿಸುತ್ತಿದ್ದ ಭೂಮಿಯನ್ನು ಕೃಷಿಗೆ ಯೋಗ್ಯವಾಗಿ ಹದ ಮಿದುಗೊಂಡು ಬೆಳೆಯನ್ನು ಬೆಳೆಯಲು ಹವಣುಗೊಳಿಸಿದ, ಆದುದರಿಂದ ಈ ಭೂಮಿಗೆ ಪೃಥುರಾಜನಿಂದ **''ಪೃಥ್ವಿ''** ಎಂದು ಹೆಸರು ಬಂದಿತು. ಪೃಥುರಾಜನು ಸ್ವಾಯಂಭುವ ಮನುವನ್ನು ಕರುವನ್ನಾಗಿ ಮಾಡಿ ಮೊದಲು ಭೂಮಿಯನ್ನು ತನ್ನ ಕೈಯಿಂದ ಹಿಂಡಿ ಸಸ್ಯಸಮೃದ್ಧಿಯನ್ನು ಕರೆದ. ಋಷಿಗಳು ಚಂದ್ರನನ್ನು ಕರುವನ್ನಾಗಿ ಮಾಡಿಕೊಂಡು ಛಂದಸ್ಸು ಎಂಬ ಪಾತ್ರೆಯಲ್ಲಿ ತಪಸ್ಸು ಅಧ್ಯಯನಗಳೆಂಬ ಕ್ಷೀರವನ್ನು ಕರೆದರು. ಸೂರ್ಯನು ಇಂದ್ರನನ್ನು ಕರುವಾಗಿಸಿ ಚಿನ್ನದ ಪಾತ್ರೆಯಲ್ಲಿ ದೇವತೆಗಳಿಗೆ ಉಪಯುಕ್ತವಾದ ಅಮೃತವೆಂಬ ಹಾಲನ್ನು ಕರೆದ. ಅನಂತರ ಹೀಗೆಯೇ ಬೇರೆ ಬೇರೆ ವ್ಯಕ್ತಿಗಳು ಭಿನ್ನ ಭಿನ್ನ ಕರು-ಪಾತ್ರೆಗಳನ್ನು ಮಾಡಿ ತಮಗೆ ಬೇಕುಬೇಕಾದ ಹಾಲನ್ನು ಹಿಂಡಿಕೊಂಡರು. ಮೃತ್ಯುದೇವತೆ ದೋಗ್ಧಾರ, ಯಮ ಕರು, ಬೆಳ್ಳಿಯ ಪಾತ್ರೆಯಲ್ಲಿ ಪಿತೃದೇವತೆಗಳಿಗಾಗಿ ಹಿಂಡಿದ ಹಾಲೇ ಸುಧೆ. ಐರಾವತ ಎಂಬ ಸರ್ಪ ತಕ್ಷಕನನ್ನು ಕರುವಾಗಿಸಿ ಸೋರೆಬುರುಡೆಯ ಪಾತ್ರೆಯಲ್ಲಿ ಕರೆದ ಹಾಲೇ ವಿಷ. ಯಕ್ಷರು ಕುಬೇರನೆಂಬ

ಕರುವಿನಿಂದ ರಜತನಾಭನ ಮುಖಾಂತರ ಅಣಿಮಾ, ಮಹಿಮಾ ಮುಂತಾದ ಅಷ್ಟಸಿದ್ಧಿಗಳನ್ನು ಕರೆದುಕೊಂಡರು. ಗಂಧರ್ವರು ಚಿತ್ರರಥನೆಂಬ ವತ್ಸನನ್ನು ಮುಂದೆಮಾಡಿ ಸುರುಚಿಯ ಮುಖಾಂತರ ಸುಗಂಧವನ್ನು ಪಡೆದರು. ಪರ್ವತಗಳು ಹಿಮಾಲಯವನ್ನು ವತ್ಸವಾಗಿಸಿ ಮೇರುವಿನಿಂದ ರತ್ನೌಷಧಿಗಳನ್ನು ಕರೆದುಕೊಂಡವು. ಮಧುಕೈಟಭರೆಂಬ ದೈತ್ಯರ ಮೇದಸ್ಸಿನಿಂದ (ಕೊಬ್ಬಿನಿಂದ) ತುಂಬಿದ್ದಕ್ಕಾಗಿ ''ಮೇದಿನೀ'' ಎಂಬ ಹೆಸರು ಪಡೆದ ಭೂಮಿಗೆ ಈ ಪೃಥುವಿನಿಂದ ಮುಂದೆ ''ಪೃಥ್ವಿ'' ಎಂಬ ಹೆಸರು ಇಂದಿನವರೆಗೂ ಪುರಾಣಾದಿಗಳಲ್ಲಿ ಕಥಿತ ಪ್ರಥಿತವಾಗಿದೆ.

ಪುಣ್ಯಶ್ಲೋಕನಾದ ಈ ಪೃಥುಚಕ್ರವರ್ತಿಯನ್ನು ವೇದವೇದಾಂತಕೋವಿದರಾದ ಬ್ರಾಹ್ಮಣರು ಸಹ ವಂದಿಸುತ್ತಿದ್ದರು. ಎಲ್ಲ ರಾಜರೂ ಇವನನ್ನು ಸ್ಮರಿಸಿದರೆ ವಿಜಯಶಾಲಿಗಳಾಗುವರು. ವೈಶ್ಯಶೂದ್ರರೂ ಸಹ ಈ ಪೃಥುರಾಜನನ್ನು ನೆನೆದರೆ ಶ್ರೇಯೋಭಾಗಿಗಳಾಗುವರು.

**ಋಷಿಗಳು:-** ಈ ಮನುಗಳು ಎಷ್ಟು ಜನ? ಒಂದೊಂದು ಮನ್ವಂತರಗಳ ಕಾಲ ಎಷ್ಟು? ಹದಿನಾಲ್ಕು ಮನುಗಳ ಹೆಸರುಗಳು ಏನು? ಇದೆಲ್ಲವನ್ನು ಹೇಳಿರಿ.

**ಲೋಮಹರ್ಷಣ:-** ಸ್ವಾಯಂಭುವ ಮನು ಮೊದಲನೆಯ ಮನು. ಅನಂತರ ಸ್ವಾರೋಚಿಷ, ಉತ್ತಮ, ತಾಮಸ, ರೈವತ ಎಂಬ ಐದು ಮನುಗಳು ಈ ಭೂಮಂಡಲವನ್ನು ಆಳಿದರು. ಒಟ್ಟಾರೆ ಹಿಂದೆ ಆಗಿ ಹೋದ ಮನುಗಳು ಆರು. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರ ಏಳನೆಯ ಮನ್ವಂತರ. ಮುಂದೆ ಸಾವರ್ಣೀ, ಸೂರ್ಯಸಾವರ್ಣೀ, ದಕ್ಷಸಾವರ್ಣೀ, ಮೇರುಸಾವರ್ಣೀ, ರುದ್ರಸಾವರ್ಣೀ ಭೌತ್ಯ, ಶೌಚ್ಯ ಎಂದು ಏಳು ಮನುಗಳು ಈ ಮಹೀಮಂಡಲದ ಶಾಸನವನ್ನು ಕೈಗೊಳ್ಳುವರು. ಪ್ರತಿಯೊಂದು ಮನ್ವಂತರದಲ್ಲಿಯೂ ಮನು, ಮನುಪುತ್ರರು, ಸಪ್ತರ್ಷಿಗಳೂ ಹಾಗೂ ದೇವತೆಗಳು ಬೇರೆ ಬೇರೆಯಾಗಿಯೇ ಇರುವರು.

ಮೊದಲನೆಯದಾದ ಸ್ವಾಯಂಭುವ ಮನ್ವಂತರದಲ್ಲಿ ಮರೀಚಿ, ಅತ್ರಿ, ಅಂಗೀರಸ್, ಪುಲಹ, ಕ್ರತು, ಪುಲಸ್ತ್ಯ, ವಶಿಷ್ಠ ಈ ಏಳು ಜನರು ಸಪ್ತರ್ಷಿಗಳ ಸ್ಥಾನದಲ್ಲಿ ಇದ್ದು ಆ ಮನ್ವಂತರದ ಧರ್ಮ ನಿರ್ದೇಶನವನ್ನು ಮಾಡುತ್ತಿದ್ದರು. ಅಗ್ನೀಧ್ರ, ಅಗ್ನಿಬಾಹು, ಮೇಧ್ಯ, ಮೇಧಾತಿಥಿ, ವಸು, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಸಬಲ, ಪುತ್ರ ಎಂಬ ಹತ್ತು ಜನ ಸ್ವಾಯಂಭುವ ಮನುವಿನ ಮಕ್ಕಳು ಪ್ರಜಾಪಾಲನ ತತ್ಪರರಾಗಿ ಇದ್ದರು.

ಎರಡನೆಯ ಸ್ವಾರೋಚಿಷ ಮನ್ವಂತರದಲ್ಲಿ ಔರ್ವ, ಕಶ್ಯಪ, ಬೃಹಸ್ಪತಿ, ವಾಸಿಷ್ಠ, ದತ್ತಾತ್ರೇಯ, ಅತ್ರಿ, ಚ್ಯವನ ಇವರು ಏಳು ಮಹಾಮುನಿಗಳು ಸಪ್ತರ್ಷಿಗಳಾಗಿದ್ದರು. ಹವಿಷ್ನ, ಸುಕೃತಿ, ಜ್ಯೋತಿಷ್, ಆಪದೇವ, ಮೂರ್ತಿ, ಪ್ರತೀತ, ನಭಸ್ಯ, ನಭಸ್, ಊರ್ಜಸ್ಮೃತ, ಇವರು ಹತ್ತು ಜನ ಮನುಪುತ್ರರು.

ಮೂರನೆಯ ಉತ್ತಮ ಮನ್ವಂತರದಲ್ಲಿ ಬ್ರಹ್ಮದೇವರ ಮಕ್ಕಳಾದ ಊರ್ಜ ಎಂಬ ಋಷಿಗಳೂ, ವಶಿಷ್ಠರ ಮಕ್ಕಳೂ ಸಪ್ತರ್ಷಿ ಪದವಿಯಲ್ಲಿ ವಿರಾಜಮಾನರಾಗಿದ್ದರು. ಉತ್ತಮಮನುವಿನ ಪುತ್ರರಾದ ಇಷ್ವ, ಊರ್ಜ, ತನೂಜ, ಮಧು, ಮಾಧವ, ಶುಚಿ, ಶುಕ್ರ, ಸಹ, ನಭಸ್ಯ, ನಭ ಇವರೇ ದಶಮನುಪುತ್ರರು. ಭಾನು ಎಂಬ ದೇವತೆಗಳ ಗುಂಪು ಆ ಕಾಲದ ದೇವತೆಗಳು.

ನಾಲ್ಕನೆಯ ತಾಮಸ ಮನ್ವಂತರದಲ್ಲಿ ಕಾವ್ಯ, ಪೃಥು, ಅಗ್ನಿ, ಜಹ್ನು, ಧಾತೃ, ಕಪೀವಾನ್, ಅಕಪೀವಾನ್ ಎಂಬ ಏಳುಜನ ಸಪ್ತರ್ಷಿಗಳೂ ದ್ಯುತಿ, ತಪಸ್ಯ, ಸುತಪ ತಪೋಭೂತ, ಸನಾತನ, ತಪೋರತಿ, ಅಕಲ್ಮಷ, ತನ್ವೀ, ಧನ್ವೀ, ಪರಂತಪ ಮುಂತಾದ ಮನುಪುತ್ರರು, ಶಕ್ತಿಮಂತರೆಂಬ ದೇವತೆಗಳೂ ಶಾಸಕರಾಗಿ ಇದ್ದರು. ಐದನೆಯ ರೈವತ ಮನ್ವಂತರದಲ್ಲಿ ದೇವಬಾಹು, ಯದುಧ್ರ, ವೇದಶಿರಸ್ಸು, ಹಿರಣ್ಯ ರೋಮ, ಪರ್ಜನ್ಯ, ಊರ್ಧ್ವಬಾಹು, ಸತ್ಯನೇತ್ರ ಎಂಬ ಸಪ್ತರ್ಷಿಗಳು, ಭೂತರಜಸ್ಸು ಗಳೆಂಬ ದೇವತೆಗಳು, ಪ್ರಕೃತಿ ಎಂಬ ಮಾತೆಯರು, ಪಾರಿಪ್ಲವ, ರೈಭ್ಯ ಎಂಬ ಋಷಿಗಳು ಇದ್ದರು. ಧೃತಿಮಾನ್, ಅವ್ಯಯ, ಯುಕ್ತ, ತತ್ವದರ್ಶಿ, ನಿರುತ್ಸಕ, ಅರಣ್ಯ, ಪ್ರಕಾಶ, ನಿರ್ಮೋಹ, ಸತ್ಯವಾಕ್, ಕೃತಿ, ಇವರು ಮನುಪುತ್ರರು ಆಗಿದ್ದರು.

ಆರನೆಯ ಮನ್ವಂತರದಲ್ಲಿ ಭೃಗು, ನಭ, ವಿವಸ್ವಾನ್, ಸುಧಾಮ, ವಿರಜ, ಅತಿನಾಮ, ಸಹಿಷ್ಣು ಎಂಬುವವರು ಸಪ್ತರ್ಷಿಗಳು, ಇಂದ್ರನೇ ಮೊದಲಾದವರು ದೇವತೆಗಳು, ಲೇಖರೆಂಬ ದೇವತಾಗಣಗಳೂ ಈ ಆರನೆಯ ಚಾಕ್ಷುಷ ಮನ್ವಂತರದ ನಿರ್ವಾಹಕರು. ರುರುಕುಮಾರ ಮೊದಲಾದವರು ಹತ್ತು ಜನ ಚಾಕ್ಷುಷ ಮನುವಿನ ಮಕ್ಕಳು.

ಪ್ರಕೃತ ಏಳನೆಯದಾದ ವೈವಸ್ವತ ಮನ್ವಂತರದಲ್ಲಿ ಭಗವಾನ್ ವಶಿಷ್ಠ, ಕಶ್ಯಪ, ಗೌತಮ, ಭರದ್ವಾಜ, ವಿಶ್ವಾಮಿತ್ರ, ಋಚೀಕ, ಜಮದಗ್ನಿ ಇವರು ಏಳು ಜನ ಮಹರ್ಷಿಗಳು ಸಪ್ತರ್ಷಿಪೀಠದಲ್ಲಿ ವಿರಾಜಮಾನರಾಗಿದ್ದಾರೆ. ಇವರನ್ನು ಈಗಲೂ ಗಗನ ಮಂಡಲದಲ್ಲಿ ನಕ್ಷತ್ರ ರೂಪದಿಂದ ಹೊಳೆಯುತ್ತಲಿರುವರು. ಸಾಧ್ಯರು, ಏಕಾದಶ ರುದ್ರರು, ವಿಶ್ವೇದೇವತೆಗಳು, ಮರುದ್ಗಣ, ಹನ್ನೆರಡು ಆದಿತ್ಯರು ಇವರೆಲ್ಲ ಈ ಮನ್ವಂತರದ ದೇವತೆಗಳು ಇಕ್ಷ್ವಾಕು ಮೊದಲಾದ ಹತ್ತು ಜನ ರಾಜರು ವೈವಸ್ವತ ಮನುವಿನ ಮಕ್ಕಳು. ಸಪ್ತರ್ಷಿಗಳು ಪ್ರತಿಯೊಂದು ಮನ್ವಂತರದಲ್ಲಿಯೂ ಧರ್ಮ ವ್ಯವಸ್ಥೆಯನ್ನು ಮಾಡಲಿಕ್ಕಾಗಿ ಭಗವಂತನಿಂದ ನಿಯುಕ್ತರಾಗಿರುತ್ತಾರೆ. ಪ್ರತಿಯೊಂದು ಮನ್ವಂತರ ಕಳೆದ ಬಳಿಕ ಈ ಸಪ್ತರ್ಷಿಗಳಲ್ಲಿ ನಾಲ್ಕು ಜನ ಮಹರ್ಷಿಗಳು ಜೀವನ್ಮುಕ್ತರಾಗಿ ಸತ್ಯಲೋಕಕ್ಕೆ ತೆರಳುವವರು. ಆಗ ಬೇರೆ ಮಹರ್ಷಿಗಳು ತೆರವು ಬಿದ್ದ ಆ ನಾಲ್ಕು ಸ್ಥಾನಗಳನ್ನು ತುಂಬಿ ಸಪ್ತರ್ಷಿ ಮಂಡಲದಲ್ಲಿ ವಿರಾಜಮಾನರಾಗುವರು. ಮುಂದಿನ ಸಾವರ್ಣಿ ಮನ್ವಂತರದಲ್ಲಿ ಪರಶುರಾಮ, ಅತ್ರಿಗೋತ್ರದ ವೇದವ್ಯಾಸ, ಭರದ್ವಾಜ ಗೋತ್ರದ ಅಶ್ವತ್ಥಾಮ, ಗೌತಮಗೋತ್ರದ ಅಜರಮುನಿ ಹಾಗೂ ಶರದ್ವಾನ್ ಮುನಿಗಳು, ಕೌಶಿಕ ಗೋತ್ರದ ಗಾಲವಮುನಿಗಳು, ಕಾಶ್ಯಪಗೋತ್ರದ ಔರ್ವಮುನಿ ಈ ಏಳು ಜನ ಮುನಿಗಳು ಸಪ್ತರ್ಷಿ ಪದವಿಯನ್ನು ಅಲಂಕರಿಸುವರು. ಸಾವರ್ಣಿ ಮನುವಿನ ಮಕ್ಕಳಾದ ವೈರಿ, ಅಧ್ವರ್ಯ್ಯ ವಾನ್, ಶಮನ, ದ್ಯುತಿಮಂತ, ವಸು, ಅರಿಷ್ಟ, ಅದೃಷ್ಟ, ವಾಜಿ, ಸುಮತಿ, ಈ ಒಂಬತ್ತು ಜನ ರಾಜಕುಮಾರರು ಮುಂದಿನ ಸಾವರ್ಣಿ ಮನ್ವಂತರದ ಶಾಸಕರಾಗಿ ಬರುವರು.

ಈ ಸಾವರ್ಣಿ ಮನುಗಳು ಐದುಜನ. ಅವರಲ್ಲಿ ಒಬ್ಬನು ವೈವಸ್ವತಮನು. ಎಂದರೆ ಸೂರ್ಯನಿಂದ ಜನಿಸಿದವ. ಮಿಕ್ಕ ನಾಲ್ವರೂ ಪ್ರಜಾಪತಿಯ ಮಕ್ಕಳು. ದಕ್ಷಪ್ರಜಾಪತಿಯ ಮಗಳಾದ ಪ್ರಿಯಾದೇವಿಯಲ್ಲಿ ಪ್ರಜಾಪತಿಗಳಿಂದ ಜನಿಸಿದ ಇವರೆಲ್ಲರೂ ಮೇರುಪರ್ವತದಲ್ಲಿ ಮಹಾತಪಸ್ಸನ್ನು ಮಾಡಿದ್ದರಿಂದ ಮೇರುಸಾವರ್ಣಿಗಳು ಎಂದು ಪ್ರಸಿದ್ಧರಾದರು. ಹೀಗೆ ಬ್ರಹ್ಮಸಾವರ್ಣಿ, ದಕ್ಷಸಾವರ್ಣಿ, ರುದ್ರಸಾವರ್ಣಿ, ಸೂರ್ಯ

ಸಾವರ್ಣ, ಮೇರುಸಾವರ್ಣ ಎಂದು ಪ್ರಸಿದ್ಧರಾದ ಐದು ಸಾವರ್ಣಗಳ ಅನಂತರ ಬರುವ ಆರನೆಯ ಮನ್ವಂತರದ ಅಧಿಪತಿಯೇ ಖೌಚ್ಯಮನು. ಖುಚಿ ಎಂಬ ಪ್ರಜಾಪತಿಯಿಂದ ಜನಿಸಿದ್ದರಿಂದ ಅವನಿಗೆ ಖೌಚ್ಯಮನು ಎಂದು ಹೆಸರುಬಂದಿತು ಅದೇ ಖುಚಿಪ್ರಜಾಪತಿಯ ಮತ್ತೊಬ್ಬ ಮಡದಿಯಾದ ಭೂತಿದೇವಿಯಲ್ಲಿ ಜನಿಸಿದ್ದರಿಂದ ಭೌತ್ಯ ಎಂದು ಹೆಸರಾದ ಮನುರಾಜನು ಕೊನೆಯದಾದ ಏಳನೆಯ ಅರ್ಥಾತ್ ಹದಿನಾಲ್ಕನೇಯ ಮನ್ವಂತರದ ಅಧಿಪತಿಯಾಗಿ ಜನಿಸುವನು.

ಈ ಏಳು ಮನುಗಳು ಮುಂದಿನ ಮನ್ವಂತರಗಳಿಗೆ ಅಧಿಶಾಸಕರಾಗಿ ಏಳುದ್ವೀಪಗಳು, ಅಸಂಖ್ಯನಗರ, ಗ್ರಾಮಾರಾಮ, ನಗ, ವೃಕ್ಷ, ನದ, ನದಿ, ಬೆಟ್ಟ ಬಯಲುಗಳಿಂದ ಒಡಗೂಡಿದ ಅಖಂಡ ಭೂಮಂಡಲವನ್ನು ಸಾವಿರ ಯುಗಗಳು ಮುಗಿಯುವವರೆಗೆ ಪಾಲಿಸುವರು. ಕೃತಯುಗ ಮೊದಲಾದ ಎಪ್ಪತ್ತು ಮಹಾಯುಗಗಳಿಗೆ ಒಂದು ಮನ್ವಂತರ ಆಗುವುದು. ಮನ್ವಂತರ ಎಂದರೆ ಒಬ್ಬ ಮನುವಿನ ಆಳ್ವಿಕೆಯ ಕಾಲ. ಈ ಮನ್ವಂತರಗಳಲ್ಲಿ ಸೃಷ್ಟಿ, ಪ್ರಳಯ, ಸಂಹಾರಾದಿ ಕಾರ್ಯಗಳು ನಿರಂತರವಾಗಿ ನಡೆಯುವವು. ಒಂದು ಸಹಸ್ರ ಯುಗಪರ್ಯಂತವಾದ ಒಂದು ಕಲ್ಪಕಾಲವು ಕಳೆದ ಬಳಿಕ ಮಹಾಪ್ರಳಯವು ಉಂಟಾಗುವದು. ಆಗ ಚರಾಚರ ಪ್ರಪಂಚವೆಲ್ಲವೂ ಸೂರ್ಯನ ಅಗ್ನಿಕಿರಣಗಳಿಂದ ದಗ್ಧವಾಗಿ ಘೋರವೃಷ್ಟಿಯಿಂದ ಮಹಾಪ್ರಳಯದಲ್ಲಿ ಮಗ್ನವಾಗಿ ಹೋಗುವದು. ಆಗ ಎಲ್ಲ ದೇವತೆಗಳೂ, ಮಹರ್ಷಿಗಳೂ, ಬ್ರಹ್ಮನನ್ನು ಮುಂದೆ ಮಾಡಿಕೊಂಡು ಎಲ್ಲ ಆದಿತ್ಯ ರೊಡನೆ ಸರ್ವದೇವತಾ ಶ್ರೇಷ್ಠನಾದ ಶ್ರೀಮನ್‌ನಾರಾಯಣನ ಶರೀರದಲ್ಲಿ ಪ್ರವೇಶಿಸುವರು. ಮತ್ತೆ ಸಾವಿರವರ್ಷದ ಮಹಾರಾತ್ರಿಯ ಕಾಲದಲ್ಲಿ ಎಲ್ಲ ಜೀವರಾಶಿ ಗಳನ್ನೂ ತನ್ನ ಉದರದಲ್ಲಿ ಇಟ್ಟುಕೊಂಡು ಭಗವಾನ್ ನಾರಾಯಣನು ಯೋಗನಿದ್ರಾ ಲೀನನಾಗುವನು. ಆ ಕಲ್ಪಾಂತಕಾಲದ ಅನಂತರ, ಆ ಭಗವಂತನು ಹೊಸಕಲ್ಪದ ಆದಿಯಲ್ಲಿ ಮತ್ತೆ ಹೊಸ ಸೃಷ್ಟಿಯನ್ನು ಪ್ರಾರಂಭಿಸುವನು. ಪ್ರಕೃತ ಈ ವೈವಸ್ವತ ಮನ್ವಂತರದಲ್ಲಿ ಶ್ರೀಹರಿಯು ಯಾದವಕುಲದಲ್ಲಿ ಶ್ರೀಕೃಷ್ಣನಾಗಿ ಅವತರಿಸಿದನು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಎರಡನೆಯ ಅಧ್ಯಾಯ ಮುಗಿದುದು*

—○—

## ಆದಿತ್ಯೋತ್ಪತ್ತಿ ಕಥನ

**ಅಧ್ಯಾಯ - ೩**

**ಲೋಮಹರ್ಷಣ:-** ವಿಪ್ರವರ್ಯರೆ, ಸೂರ್ಯನು ಅದಿತಿದೇವಿಯಲ್ಲಿ ಕಶ್ಯಪರಿಂದ ಜನಿಸಿದ. ದೇವತೆಗಳ ಬಡಿಗನಾದ ವಿಶ್ವಕರ್ಮನ ಮಗಳಾದ ಸಂಜ್ಞಾದೇವಿಯು ಸೂರ್ಯನ ಧರ್ಮಪತ್ನಿ. ಅವಳಿಗೆ ಸುರೇಶ್ವರಿ ಎಂದೂ ಹೆಸರು. ಆ ಸಂಜ್ಞೆ ಚೆಲುವಿನ ಖಣಿ, ಸಾಧ್ವೀಮಣಿ, ಅವಳಿಗೆ ತನ್ನ ಪತಿಯಾದ ಸವಿತೃದೇವನ ಬಗ್ಗೆ ಬಹಳ ಹೆಮ್ಮೆ. ಆದರೆ ತನ್ನ ಪತಿದೇವನ ನಿತ್ಯವೂ ಉದಿತೋದಿತವಾಗಿ ಅತ್ಯುಜ್ವಲವಾಗಿಯೇ ಬೆಳೆದು ಬೆಳಗುತ್ತಲಿರುವ ತೇಜೋಸ್ತೋಮ ಸಹಿಸಲು ಅಶಕ್ಯವಾಗಿದ್ದಿತು. ತೇಜೋನಿಧಿಯಾದ ತನ್ನ ಒಲವಿನ ನಲ್ಲನೊಡನೆ ಸರಸವೆಂದರೆ ಬೆಂಕಿಯೊಡನೆ ಚೆಲ್ಲಾಟ. ಅದರಿಂದ ಅವಳ ಅಂಗಾಂಗಗಳಿಗೆಲ್ಲ ಸ್ಫುಲಿಂಗ ಸಂಘವನ್ನೇ ಆಲಿಂಗಿಸಿದ ಅನುಭವ. ಪತಿಯ ಸಾಮೀಪ್ಯವೆಂದರೆ ಅವಳಿಗೆ

ಅಗ್ನಿಪರ್ವತದ ಎದುರು ಕುಳಿತಷ್ಟು ಬೇಗುದಿ ಉಂಟಾಗುತ್ತಿತ್ತು. ಆದುದರಿಂದ ಅವಳು ಘೋರ ತಪಸ್ಸನ್ನು ಮಾಡಿದಳು. ತನ್ನ ಪತಿಯ ತೇಜಸ್ಸು ಕಡಿಮೆಯಾಗಬೇಕು ಎಂದು ಆಚರಿಸಿದ ಅತ್ಯುಗ್ರ ತಪೋನುಷ್ಠಾನದಿಂದ ಸೂರ್ಯನ ತೇಜವು ತುಸು ಕಡಿಮೆಯಾದಂತೆ ತೋರಿತು. ಆದರೂ ಆ ಸವಿತ್ರ ಮಂಡಲವು ಪ್ರಶಾಂತವಾಗಿರಲಿಲ್ಲ. ಆ ತಪನಾಮಂಡಲವು ಬೆಂಕಿಯ ಮೊಟ್ಟೆಯಂತೆ ದಹಿಸುತ್ತಲೇ ಇತ್ತು. ಅದನ್ನು ನೋಡಿ ಸಂಜ್ಞೆಯು ಈ ಬೆಳಕಿನ ಅಂಡವು ಮೃತವಾಗಲಿಲ್ಲವಲ್ಲ ಎಂದು ಪರಿಹಾಸಕ್ಕಾಗಿ ನುಡಿದಳು. ಅದರಿಂದ ಸೂರ್ಯನಿಗೆ ಮಾರ್ತಾಂಡ ಎಂದು ಹೆಸರಾಯಿತು. ಇಷ್ಟಾದರೂ ಆ ಸೂರ್ಯನ ತೇಜಸ್ಸು ದಿನೇ ದಿನೇ ಬೆಳೆಯುತ್ತಲೇ ಇತ್ತು. ಅದರಿಂದ ಲೋಕಗಳೆಲ್ಲವೂ ಹುರುಪಳಿಸುತ್ತಲೇ ಇದ್ದವು. ಸಂಜ್ಞಾದೇವಿಯಲ್ಲಿ ಸೂರ್ಯನಿಗೆ ವೈವಸ್ವತಮನು, ಯಮಧರ್ಮ ಎಂಬ ಇಬ್ಬರು ಗಂಡು ಮಕ್ಕಳು, ಯಮುನಾ ಎಂಬ ಹೆಣ್ಣುಮಗಳೂ ಹುಟ್ಟಿದರು. ಸೂರ್ಯನ ತೀಕ್ಷ್ಣತರವಾದ ತೇಜೋದೀಧಿತಿಗಳು ಪ್ರಜ್ವಲೋಜ್ವಲವಾಗಿ ಬೆಳೆಯುತ್ತ ನಡೆದಂತೆ ಅವನೊಡನೆ ಬಾಳುವದು ಅಶಕ್ಯವಾಯಿತು ಆ ಸಂಜ್ಞಾದೇವಿಗೆ. ಗಂಡನ ಪ್ರೇಮಾಮೃತಸಿಂಚನದಿಂದ ಪ್ರತಿದಿನವೂ ಅವಳಿಗೆ ದೇಹದಾಹ ದುಸ್ಸಹವಾಗ ತೊಡಗಿತು. ಉಪಾಯಗಾಣದೇ ತನ್ನಂತೆಯೇ ರೂಪವುಳ್ಳ ತನ್ನ ಛಾಯೆಯಲ್ಲಿ ಜೀವ ತುಂಬಿದಳು. ತನ್ನ ನೆರಳಿನಲ್ಲಿಯೇ ಚೈತನ್ಯದ ತಿರುಳು ತುಂಬಿ ಛಾಯಾದೇವಿ ಎಂದು ಹೆಸರು ಇಟ್ಟು ಅವಳಿಗೆ ಹೇಳಿದಳು. ತಂಗಿ ಛಾಯೆ, ನಾನು ನನ್ನ ತಂದೆ ಮನೆಗೆ ತೆರಳುವೆ. ನೀನು ನನ್ನ ಸ್ಥಾನದಲ್ಲಿ ಇದ್ದು ನನ್ನ ಹೆಸರಿನಿಂದಲೇ ಸೂರ್ಯನೊಡನೆ ಸಂಸಾರಮಾಡು. ನನ್ನ ಮಕ್ಕಳಾದ ಶ್ರಾದ್ಧದೇವ ಅಥವಾ ವೈವಸ್ವತಮನು ಹಾಗೂ ಯಮಧರ್ಮ ಮತ್ತು ಯಮುನೆ ಮೂವರನ್ನೂ ನೀನು ಪ್ರೀತಿಯಿಂದ ರಕ್ಷಿಸು. ನಾನು ನಿನ್ನನ್ನು ಇಲ್ಲಿ ಇರಿಸಿ ಇಲ್ಲಿಂದ ತವರು ಮನೆಗೆ ತೆರಳಿದ್ದನ್ನು ನನ್ನ ಪತಿದೇವನಿಗೆ ತಿಳಿಸಬೇಡ.''

**ಛಾಯಾ:-** ದೇವಿ, ನಾನು ನಿನ್ನ ಮಾತಿನಂತೆ ನಿನ್ನ ಪತಿದೇವನಿಗೆ ಈ ಗುಟ್ಟನ್ನು ಬಿಟ್ಟು ಕೊಡುವದಿಲ್ಲ. ನೀನು ನಿಶ್ಚಿಂತಳಾಗಿರು. ಆದರೆ ನನ್ನ ಪತಿ ಕೂದಲು ಹಿಡಿದು ಎಳೆದು ನನ್ನನ್ನು ದಂಡಿಸುವ ಪ್ರಸಂಗ ಬಂದರೆ ಮಾತ್ರ ಬೇರೆ ದಾರಿ ತೋಚದಾಗ ನಿಜಸ್ಥಿತಿಯನ್ನು ಹೇಳುವ ಪ್ರಸಂಗ ಬರಬಹುದು. ಅಂಥ ಪ್ರಸಂಗ ಬಾರದೇ ಇದ್ದರೆ ಈ ಗೌಪ್ಯ ಸ್ಫೋಟವನ್ನು ನಾನು ಎಂದಿಗೂ ಮಾಡುವದಿಲ್ಲ.

ಛಾಯಾದೇವಿಯಿಂದ ಹೀಗೆ ವಚನ ತೆಗೆದುಕೊಂಡು ಸಂಜ್ಞಾದೇವಿಯು ತನ್ನ ತಂದೆಯಾದ ವಿಶ್ವಕರ್ಮನ ಮನೆಗೆ ನಡೆದಳು. ಆದರೆ ನ್ಯಾಯನಿಷ್ಠುರನಾದ ಆ ದೇವತೆಗಳ ಬಡಿಗ, ಪತಿಗೆ ಹೇಳದೇ ಬಂದ ಆ ಮಗಳನ್ನು ಮನೆಯಲ್ಲಿ ಇರಿಸಿಕೊಳ್ಳಲಿಲ್ಲ ''ಮಗಳೇ, ಏನಾದರೂ ಎಂತಿದ್ದರೂ ಪತಿಯೇ ಗತಿ ಸತಿಮಣಿಗೆ. ನೀನು ಅಲ್ಲಿಗೇ ನಿನ್ನ ಮನೆಗೆ ಮರಳು'' ಎಂದು ನಿಷ್ಠುರವಾಗಿ ಹೇಳಿದ. ಆಗ ಸಂಜ್ಞೆಯು ತನಗೆ ತನ್ನ ಮನೆ ಹಾಗೂ ತಂದೆಯ ಮನೆ ಎರಡೂ ತಪ್ಪಿ ಹೋದವು ಎಂದು ಮನದಲ್ಲಿ ಮಿಡುಕಿ ಉತ್ತರ ಕುರುದೇಶಕ್ಕೆ ನಡೆದಳು. ತನ್ನ ರೂಪ ಸೌಂದರ್ಯದಿಂದ ಮುಗ್ಧರಾಗಿ ದೈತ್ಯದಾನವರು ತನ್ನೆಡೆಗೆ ಆಕರ್ಷಿತರಾಗಿ ಬರಬಹುದೆಂಬ ಅಂಜಿಕೆಯಿಂದ ತನ್ನ ದೇವತಾ ಸ್ತ್ರೀಯ ದಿವ್ಯರೂಪವನ್ನು ತ್ಯಜಿಸಿದಳು. ಹೆಣ್ಣು ಕುದುರೆಯ ರೂಪವನ್ನು ತಾಳಿ ಮನಸ್ಸಿನಿಂದ ತನ್ನ ಪತಿದೇವನನ್ನೇ ಧ್ಯಾನಗೈಯುತ್ತ ಉತ್ತರ ಕುರುದೇಶದ ಹುಲ್ಲುಗಾವಲಿನಲ್ಲಿ

ಜೀವಿಸುತ್ತಿದ್ದಳು. ಇತ್ತ ಸೂರ್ಯದೇವನು ತನ್ನ ಹೊಸ ಹೆಂಡತಿಯಾದ ಛಾಯಾದೇವಿಯು ತನ್ನ ಮೊದಲಿನ ಮಡದಿಯಾದ ಸಂಜ್ಞಾದೇವಿಯೇ ಎಂದು ಭಾವಿಸಿ ಪ್ರೀತಿಯಿಂದ ಸಂಸಾರ ಮಾಡುತ್ತಲೇ ಇದ್ದ. ಅವನಿಗೆ ಸಂಜ್ಞಾದೇವಿಯ ವರ್ಣದಂತೆಯೇ ಇದ್ದುದರಿಂದ ಸವರ್ಣಾ ಎಂದು ಮುಂದೆ ಪ್ರಸಿದ್ಧಳಾದ ಛಾಯಾದೇವಿಯಲ್ಲಿ ಮತ್ತೊಬ್ಬ ಗಂಡು ಮಗ ಜನಿಸಿದ. ಅವನು ರೂಪದಲ್ಲಿ ಸಂಜ್ಞೆಯ ಹಿರಿಯ ಮಗನಾದ ವೈವಸ್ವತಮನುವಿನ ವರ್ಣಕ್ಕೆ ಸಮಾನನಾದುದರಿಂದ ಸಾವರ್ಣ್ಯಮನು ಎಂದು ಹೆಸರಾದ. ಅನಂತರದಲ್ಲಿ ಛಾಯಾದೇವಿಯ ಎರಡನೆಯ ಮಗನಾದ ಶನೈಶ್ವರ ಜನಿಸಿದ. ಹೀಗೆ ಛಾಯಾದೇವಿಗೆ ಸೂರ್ಯನಿಂದ ಸಾವರ್ಣ್ಯಮನು, ಶನೈಶ್ವರ ಎಂಬ ಇಬ್ಬರು ಮಕ್ಕಳು ಆದಬಳಿಕ ತನ್ನ ಸವತಿಯ ಮಕ್ಕಳಾದ ವೈವಸ್ವತಮನು ಮತ್ತು ಯಮಧರ್ಮರಲ್ಲಿ ಪ್ರೀತಿ ಕಡಿಮೆಯಾಯಿತು. ತನ್ನ ಮಕ್ಕಳು ಹಾಗೂ ತನ್ನ ಅಕ್ಕನ ಮಕ್ಕಳಲ್ಲಿ ಸ್ಪಷ್ಟವಾಗಿ ಭೇದವನ್ನು ಮಾಡತೊಡಗಿದಳು. ಅದರಲ್ಲಿಯೂ ತುಸು ನಿಷ್ಠುರವಾದಿಯಾದ ಯಮನ ಮೇಲೆ ಅವಳಿಗೆ ತುಂಬ ಸಿಟ್ಟು ತನ್ನ ಮಕ್ಕಳ ಮೇಲಿನ ಮೋಹ ಮಮತೆಯಿಂದ ಮನು, ಯಮ, ಯಮುನೆ ಯರನ್ನು ಅಸಡ್ಡೆಯಿಂದಲೇ ಕಾಣುತ್ತಿದ್ದಳು. ಹೀನ ದೃಷ್ಟಿಯಿಂದ ನೋಡುತ್ತಿದ್ದಳು. ಒಂದು ದಿನ ಬಾಲ್ಯ ಸಹಜವಾದ ಕೋಪದಿಂದ ಯಮನು ಕ್ರುದ್ಧನಾಗಿ ಛಾಯಾದೇವಿಯನ್ನು ಗದರಿಸಿದನು. ಕಾಲಿನಿಂದ ಒದ್ದು ಹಾಕುವದಾಗಿ ಹೆದರಿಸಿದ. ಆಗ ಅವಳು ದುಃಖ ದುಮ್ಮಾನ ಕೋಪಗಳಿಂದ ವ್ಯಾಕುಲಳಾಗಿ ''ಮೂರ್ಖ, ನಿನ್ನ ಕಾಲು ಬಿದ್ದು ಹೋಗಲಿ'' ಎಂದು ಶಪಿಸಿದಳು. ಅದರಿಂದ ಯಮನು ಭಯಭೀತನಾಗಿ ತನ್ನ ತಂದೆ ಸೂರ್ಯದೇವನ ಬಳಿಗೆ ಹೋಗಿ ಹೇಳಿದ.

**ಯಮ**:- ತಂದೆಯೇ, ತಾಯಿಯಾದವಳು ಎಲ್ಲ ಮಕ್ಕಳಲ್ಲಿಯೂ ಸಮನಾಗಿ ಪ್ರೀತಿ ಮಾಡಬೇಕು. ಆದರೆ ಈ ನಮ್ಮ ತಾಯಿಯು ಎರಡು ಬಗೆಯುತ್ತಲಿದ್ದಾಳೆ. ಅವಳಿಗೆ ಸಾವರ್ಣ್ಯಮನು, ಶನೈಶ್ಚರರಲ್ಲಿ ಮಾತ್ರ ಪಕ್ಷಪಾತ. ನಾನು ಹಾಗೂ ವೈವಸ್ವತಮನು ಇಬ್ಬರ ಮೇಲೆ ಏಕೋ ಅಸಡ್ಡೆ. ನಮ್ಮಲ್ಲಿ ಅವಳು ಭೇದವೆಣಿಸುವದನ್ನು ಕಂಡು ನಮಗೆ ಕೋಪ ಬಂದಿತು. ಅವಳನ್ನು ಹೆದರಿಸಲಿಕ್ಕಾಗಿ ನಾನು ಕಾಲನ್ನು ತೋರಿಸಿದೆ ಅಷ್ಟೇ. ಕಾಲಿನಿಂದ ಒದೆಯಲಿಲ್ಲ. ಬಾಲ್ಯ ಸಹಜವಾದ ಚಾಪಲ್ಯ ಹಾಗೂ ಅಜ್ಞಾನಗಳಿಂದ ನಾನು ಈ ಕೃತ್ಯವೆಸಗಿದೆ. ಅದನ್ನು ನೀನು ಕ್ಷಮಿಸು. ನನ್ನ ತಾಯಿ ನನ್ನ ಕಾಲು ಬಿದ್ದುಹೋಗಲಿ ಎಂದು ಶಪಿಸಿರುವಳು. ನೀನು ಅನುಗ್ರಹ ಮಾಡು. ನನ್ನ ಕಾಲು ಬೀಳದಂತೆ ನೋಡು.

**ಸೂರ್ಯ**:- ಮಾತೃ ಶಾಪವನ್ನು ಬದಲಿಸಲು ಬರದು. ನಿನ್ನ ಕಾಲಿನ ಮಾಂಸವನ್ನು ಕ್ರಿಮಿಗಳು ಕಿತ್ತುಕೊಂಡು ಭೂಮಿಗೆ ಹೋಗುವವು. ಇದರಿಂದ ನಿನ್ನ ತಾಯಿಯ ಮಾತು ಹುಸಿಯಾಗುವದಿಲ್ಲ. ನಿನ್ನ ಶಾಪವು ಪರಿಹಾರವಾಗುವದು.

ಬಳಿಕ ಸೂರ್ಯನು ತಾನಾಗಿ ಈ ವಿಷಯವನ್ನು ಜ್ಞಾನದೃಷ್ಟಿಯಿಂದ ನೋಡಿ ನಿಜ ಸಂಗತಿಯನ್ನು ತಿಳಿದುಕೊಂಡ. ತನ್ನ ಎರಡನೆಯ ಹೆಂಡತಿಯಾದ ಛಾಯಾ ಅಥವಾ ಸುವರ್ಣಾದೇವಿಯನ್ನು ಕೂದಲು ಹಿಡಿದು ಎಳೆದು ''ನಿಜ ಸ್ಥಿತಿಯನ್ನು ಹೇಳು'' ಎಂದು ನಿರ್ಬಂಧಪಡಿಸಿದ. ಅದರಿಂದ ಹೆದರಿ ಹೌಹಾರಿದ ಸುವರ್ಣಾದೇವಿಯು ಹಿಂದೆ ನಡೆದ ಸಮಾಚಾರವನ್ನೆಲ್ಲ ತಿಳಿಸಿದಳು. ಅದನ್ನು ಕೇಳಿ ಸೂರ್ಯನಿಗೆ ಕೋಪಬಂದು ಅವನು ಮಾವನ ಮನೆಗೆ ನಡೆದ. ಆಗ ವಿಶ್ವಕರ್ಮನು ಅವನನ್ನು ಸಮಾಧಾನ ಪಡಿಸಿ ''ಸೂರ್ಯ ನಿನ್ನ ತೇಜಸ್ಸು

ಅತೀ ಉಗ್ರ. ಆ ತೇಜಃ ಪ್ರಕರ್ಷವನ್ನು ತಾಳಲಾರದೇ ನನ್ನ ಮಗಳು ಈಗ ವನವಾಸವನ್ನು ಅಂಗೀಕರಿಸಿದ್ದಾಳೆ. ಉತ್ತರ ಕುರುದೇಶದಲ್ಲಿ ತಪಸ್ಸನ್ನಾಚರಿಸುತ್ತಲಿದ್ದ ಅವಳನ್ನು ನೀನು ನಿನ್ನ ಯೋಗ ದೃಷ್ಟಿಯಿಂದ ನೋಡಬಹುದು. ನೀನು ಸಮ್ಮತಿಸಿದರೆ ನಿನ್ನ ಈ ಅತ್ಯಂತ ಉಗ್ರವಾದ ರೂಪವನ್ನು ಬದಲಿಸಿ ಸೌಮ್ಯ ಸುಂದರವೂ ಶಾಂತ ಮನೋಹರವೂ ಆದ ರೂಪವು ನಿನಗೆ ಬರುವಂತೆ ಮಾಡುವೆನು.

ಮುಂದೆ ಸೂರ್ಯನು ಸಮ್ಮತಿಸಲು ಆ ತ್ವಷ್ಟಾರನು ತನ್ನ ತೇಜೋಮಯವಾದ ಸಾಣೆಯ ಚಕ್ರಕ್ಕೆ ಸೂರ್ಯಬಿಂಬವನ್ನು ಸಾಣೆ ಹಿಡಿದು ತೇಜಸ್ಸನ್ನು ಕಡಿಮೆಮಾಡಿದನು. ಅದರಿಂದ ಸೂರ್ಯನ ಅತ್ಯಧಿಕವಾದ ಉಗ್ರರೂಪವು ಪ್ರಕಾಶಮಯವಾಗಿದ್ದರೂ ಪ್ರೇಕ್ಷಣೀಯವಾಗಿ ನಯನ ಮನೋಹರವಾಗಿ ಕಂಗೊಳಿಸಿತು. ಹೀಗೆ ವಿಶ್ವಕರ್ಮನು ಗಾಡಕ್ಕೆ ಏರಿಸಿ ಸಾಣೆ ಹಿಡಿದು ಸೂರ್ಯದೇವನನ್ನು ಸೌಮ್ಯ ಶಾಂತ ಸ್ವರೂಪದವನನ್ನಾಗಿ ಮಾರ್ಪಡಿಸಿದ ಬಳಿಕ ಅವನು ಉತ್ತರ ಕುರುದೇಶದಲ್ಲಿ ಹಸಿರು ಮೇಯುತ್ತಲಿದ್ದ ಸಂಜ್ಞೆಯ ಬಳಿಗೆ ಬಂದನು. ತನ್ನ ಧರ್ಮಪತ್ನಿ ಹೆಣ್ಣು ಕುದುರೆಯಾಗಿ ಸಂಚರಿಸುವದನ್ನು ಕಂಡು ತಾನೂ ಅಶ್ವರೂಪವನ್ನು ಧರಿಸಿದ. ಹೀಗೆ ಕುದುರೆ ರೂಪದಲ್ಲಿ ಇದ್ದ ಆ ಸೂರ್ಯ ದಂಪತಿಗಳಿಂದ ಜನಿಸಿದ ಅವಳಿ ಮಕ್ಕಳೇ ದೇವವೈದ್ಯರಾದ ಅಶ್ವಿನೀ ಕುವರರು. ಒಬ್ಬನ ಹೆಸರು ನಾಸತ್ಯ, ಇನ್ನೊಬ್ಬನ ಹೆಸರು ದಸ್ರ. ಈ ಅಶ್ವಿನೀ ದೇವತೆಗಳು ಎಂಟನೆಯ ಪ್ರಜಾಪತಿಯಾದ ಸವಿತೃದೇವನ ಮಕ್ಕಳು. ಅವರ ಮೊದಲಿನ ಮಗನಾದ ಯಮಧರ್ಮನು ದಕ್ಷಿಣ ದೇಶದ ಲೋಕಪಾಲಕನಾಗಿ ಪಿತೃಗಳಿಗೆಲ್ಲ ಅಧಿಪತಿಯೆನಿಸಿದ. ಅವನ ತಮ್ಮನಾದ ಸಾವರ್ಣಿಮನವು ಘೋರ ತಪವನ್ನು ಆಚರಿಸಿದ್ದರಿಂದ ಆಗಾಮಿ ಸಾವರ್ಣಿ ಮನ್ವಂತರಕ್ಕೆ ಅಧಿಪತಿಯೆನಿಸಿದ. ಅವನ ಸೋದರನಾದ ಶನೈಶ್ವರನು ನವಗ್ರಹ ಗಳಲ್ಲಿ ಪರಿಗಣಿತನಾದ. ಕೊನೆಯವಳಾದ ಸೂರ್ಯನ ಮಗಳು ಲೋಕಪಾವನಳಾದ ಯಮುನಾ ಎಂಬ ಪವಿತ್ರ ನದಿಯಾದಳು. ವಿಶ್ವಕರ್ಮನು ಸಾಣೆ ಹಿಡಿದು ತೆಗೆದ ತೇಜಸ್ಸಿನ ತುಣುಕುಗಳಿಂದ ವಿಷ್ಣು ಚಕ್ರವನ್ನು ನಿರ್ಮಿಸಿದ.

**ಲೋಮಹರ್ಷಣ:-** ವಿಪ್ರೋತ್ತಮರೇ, ವೈವಸ್ವತಮನುವಿಗೆ ಇಕ್ಷ್ವಾಕು, ನಾಭಾಗ, ದೃಷ್ಟ, ಶರ್ಯಾತಿ, ನರಿಷ್ಯಾಂತ, ಪ್ರಾಂಶು, ಕರೂಷ, ಪೃಷಧ ಎಂದು ನವರತ್ನದಂತಿರುವ ಒಂಭತ್ತು ಜನ ಗಂಡು ಮಕ್ಕಳು. ಈ ನವಪುತ್ರರು ಜನಿಸುವದಕ್ಕಿಂತ ಮೊದಲು ವೈವಸ್ವತಮನು ಮಕ್ಕಳನ್ನು ಪಡೆಯಬೇಕೆಂಬ ಹೆಬ್ಬಯಕೆ ಹೊತ್ತು ಪುತ್ರಕಾಮೇಷ್ಠಿ ಯಾಗವನ್ನು ಮಾಡಿದ. ದೇವತಾ ಶ್ರೇಷ್ಠರಾದ ಮಿತ್ರಾವರುಣರನ್ನು ಉದ್ದೇಶಿಸಿ ಭಕ್ತಿಯಿಂದ ಆಹುತಿಯನ್ನು ನೀಡಿದ. ಆ ಯಜ್ಞದಲ್ಲಿ ಇಳಾದೇವಿಯು ಜನಿಸಿದಳು. ಅವಳು ಆಭರಣಗಳಿಲ್ಲದಿದ್ದರೂ ತನ್ನ ಸೌಂದರ್ಯದಿಂದ ಸ್ವರ್ಗ ಸುಂದರಿಯಂತೆ ಒಪ್ಪುತ್ತಿದ್ದಳು. ಜನ್ಮ ಜಾತವಾದ ಮನೋಹರವಾದ ಕನಕಮಣಿರತ್ನಾಭರಣಗಳು ಅವಳ ಸ್ವಾಭಾವಿಕವಾದ ಸೌಂದರ್ಯಕ್ಕೆ ಅತ್ಯಧಿಕ ಶೋಭೆಯನ್ನು ತಂದುಕೊಟ್ಟಿದ್ದವು. ಮನು ಮಹಾರಾಜನಿಗೆ ಗಂಡುಮಗು ಆಗಬೇಕೆಂಬ ಬಯಕೆ ಇದ್ದಿತು. ಆದರೂ ಯಜ್ಞಫಲವಾಗಿ ಜನ್ಮತಳೆದು ಬಂದ ಆ ಇಳಾಕುಮಾರಿಗೆ ಅವನು ಪ್ರೀತಿಯಿಂದ ''ಇಳಾಕುಮಾರಿ, ನನ್ನನ್ನು-ನನ್ನ ಮಗನಾಗಿ ಅನುಸರಿಸು'' ಎಂದು ಹೇಳಿದ.

**ಇಳಾ:-** ಮಹಾರಾಜ, ನಾನು ಮಿತ್ರಾವರುಣರ ಅಂಶ ಹಾಗೂ ಪ್ರಸಾದದಿಂದ ಉತ್ಪನ್ನಳಾಗಿರುವೆ. ಆದುದರಿಂದ ನಾನು ಅವರ ಬಳಿಗೇ ತೆರಳುವೆ. ನನ್ನನ್ನು ನಿರ್ಬಂಧ ಪಡಿಸಬೇಡ.

ಹೀಗೆ ಹೇಳಿ ಅವಳು ನೇರವಾಗಿ ಬಂದಳು ಮಿತ್ರಾವರುಣರ ಬಳಿಗೆ, ಕೈ ಮುಗಿದು ಕೇಳಿದಳು ಆ ದೇವಶ್ರೇಷ್ಠರನ್ನು.

**ಇಳಾಕುಮಾರಿ:-** ದೇವೋತ್ತಮರೇ, ನಾನು ಜನಿಸಿದ್ದು ನಿಮ್ಮ ಅಂಶದಿಂದ. ಆದರೆ ನನ್ನ ಈ ಪಾರ್ಥಿವ ದೇಹದ ಹುಟ್ಟು ಆದದ್ದು ಸೂರ್ಯ ವಂಶದಲ್ಲಿ. ವೈವಸ್ವತಮನವು ನನಗೆ ತನ್ನನ್ನೇ ಅನುಸರಿಸಲು ಅಜ್ಞಾಪಿಸುತ್ತಿದ್ದಾನೆ, ನಾನು ಈಗ ಮಾಡಬೇಕಾದುದು ಏನು?

**ಮಿತ್ರಾವರುಣ:-** ವತ್ಸೆ, ನಿನ್ನ ನಯ ವಿನಯ ಧರ್ಮ ನಿಷ್ಠೆಗಳಿಂದ ನಾವು ತೃಪ್ತರೂ, ತುಷ್ಟರೂ ಆಗಿರುವೆವು. ನೀನು ಮುಂದೆ ಜಗತ್ತಿನಲ್ಲಿ ನಮ್ಮ ಅರ್ಥಾತ್ ಮಿತ್ರಾವರುಣರ ಕನ್ನೆಯೆಂದೇ ಪ್ರಸಿದ್ಧಿ ಹೊಂದುವೆ. ನೀನು ಕೆಲವು ಕಾಲದ ಬಳಿಕ ಅದೇ ವೈವಸ್ವತ ಮನುವಿನಿಂದ ಮರುಹುಟ್ಟನ್ನು ಪಡೆದು ಸುದ್ಯುಮ್ನ ಎಂದು ಕೀರ್ತಿ ಪಡೆಯುವೆ. ಮನುವಂಶವು ಸುದ್ಯಮ್ನಕುಮಾರ ಎಂದು ಪ್ರಸಿದ್ಧನಾದ ನಿನ್ನಿಂದ ಅಭಿವೃದ್ಧಿಯನ್ನು ಪಡೆಯುವದು. ಮಿತ್ರಾವರುಣರಿಂದ ಅಪ್ಪಣೆ ಆಶೀರ್ವಾದ ಪಡೆದು ಇಳಾಕುಮಾರಿಯು ಅಲ್ಲಿಂದ ಹೊರಟಳು. ದಾರಿಯಲ್ಲಿ ಬರುವಾಗ ಆ ಚೆಲುವಿನ ಚಂದ್ರಮುಖಿಯನ್ನು ಚಂದ್ರನ ಮಗನಾದ ಬುಧ ಸಂಧಿಸಿದ. ಅವಳ ಹರೆಯದ ರೂಪಸಿರಿಗೆ ಮಾರುಹೋದ ಬುಧ ಅವಳನ್ನು ವರಿಸಿದ. ಚಂದ್ರಕುಮಾರನಾದ ಬುಧನಿಂದ ಇಳಾದೇವಿಗೆ ಪುರೂರವ ಎಂಬ ಪುಣ್ಯಪುರುಷ ಪುತ್ರನಾಗಿ ಜನಿಸಿದ. ಹೀಗೆ ಪುರೂರವನನ್ನು ಪಡೆದು ಇಳಾದೇವಿಯು ಅದೇ ವೈವಸ್ವತ ಮನುವಿನಿಂದ ಮತ್ತೆ ಸುದ್ಯುಮ್ನನಾಗಿ ಜನಿಸಿ ಬಂದ. ಮನುಪುತ್ರನಾದ ಸುದ್ಯುಮ್ನನಿಗೆ ಉತ್ಕಲ, ಗಯ, ವಿನತಾಶ್ವ ಎಂಬ ಮೂವರು ಮಕ್ಕಳು ಜನಿಸಿದರು. ಅವರು ಮೂವರೂ ಧರ್ಮನಿಷ್ಠರು, ಉತ್ಕಲನು ಉತ್ಕಲ ಎಂಬ ದೇಶವನ್ನು ಆಳಿದ. ವಿನತಾಶ್ವ ಪೂರ್ವ-ಪಶ್ಚಿಮ ದಿಕ್ಕಿನ ನಾಡುಗಳಿಗೆ ಒಡೆಯನಾಗಿ ಶಾಸನಗೈದ. ಗಯಕುಮಾರನ ಅಂಕಿತಕ್ಕೆ ಒಳಪಟ್ಟ ನಾಡು ಗಯಾಪ್ರದೇಶ ಎಂದು ಪ್ರಸಿದ್ಧವಾಯಿತು. ಗಯಾ ಪಟ್ಟಣವೇ ಅದರ ರಾಜಧಾನಿ.

ಸುದ್ಯುಮ್ನನ ಅನಂತರ ವೈವಸ್ವತಮನುವಿಗೆ ಒಂಭತ್ತು ಜನ ಹಿಂದೆ ಹೇಳಿದ ರಾಜಕುಮಾರರು ಜನಿಸಿದರು. ಮುಂದೆ ಅವರೆಲ್ಲರೂ ಪ್ರಬುದ್ಧರಾದ ಬಳಿಕ ತಂದೆಯ ಆದೇಶದಂತೆ ಬೇರೆ ಬೇರೆ ದೇಶಗಳನ್ನು ವಿಭಾಗ ಮಾಡಿಕೊಂಡು ನ್ಯಾಯನಿಷ್ಠರಾಗಿ ಧರ್ಮದಿಂದ ರಾಜ್ಯಗಳನ್ನು ಆಳತೊಡಗಿದರು. ಸುದ್ಯುಮ್ನನಿಗೆ ಮಾತ್ರ, ಅದು ಇಳಾದೇವಿಯ ಅವತಾರವಾದುದರಿಂದ "ಗಂಡು ಮಗ ಅಲ್ಲ" ಎಂಬ ನೆಪ ಹೇಳಿ ಅವನ ಸೋದರರು ತಂದೆಯ ರಾಜ್ಯದಲ್ಲಿ ಸಮಭಾಗ ಕೊಡಲು ಒಪ್ಪಲಿಲ್ಲ. ಮುಂದೆ ವೈವಸ್ವತಮನುವು ಅಂತ್ಯಕಾಲದಲ್ಲಿ ಸೂರ್ಯನಲ್ಲಿ ಲೀನನಾದ ಬಳಿಕ ಕುಲಪುರೋಹಿತರಾದ ವಶಿಷ್ಠ ಋಷಿಗಳು ಮನುಕುಮಾರರಿಗೆ ಹೇಳಿ ಪ್ರತಿಷ್ಠಾನ ನಗರವನ್ನು ಅದರ ಸುತ್ತಮುತ್ತಲಿನ ರಾಜ್ಯವನ್ನು ಸುದ್ಯುಮ್ನನಿಗೆ ಕೊಡಿಸಿದರು. ಸುದ್ಯುಮ್ನನು ಅಲ್ಲಿ ತಾನು ಇರುವವರೆಗೆ ರಾಜ್ಯವಾಳಿ ಅನಂತರ ಆ ಸಾಮ್ರಾಜ್ಯವನ್ನು ತನ್ನ ಹಿಂದಿನ ಇಳಾಕುಮಾರಿಯ ರೂಪದಲ್ಲಿ ಜನಿಸಿದ ಪುರೂರವನಿಗೆ ಕೊಟ್ಟ. ಸುದ್ಯುಮ್ನನು ಸ್ತ್ರೀಲಕ್ಷಣ ಹಾಗೂ ಪುರುಷಲಕ್ಷಣ ಎರಡರಿಂದಲೂ ಕೂಡಿದ್ದ. ಆದುದರಿಂದ ಇಳಾದೇವಿ, ಸುದ್ಯುಮ್ನ ಎಂಬ ಎರಡು ಹೆಸರಿನಿಂದಲೂ ಅವನನ್ನು ಕರೆಯುತ್ತಿದ್ದರು.

ವೈವಸ್ವತಮನುವಿನ ನರಿಷ್ಯಂತ ಎಂಬ ರಾಜಕುಮಾರನಿಗೆ ಅನೇಕ ವೀರವರೇಣ್ಯರಾದ ಬಲಿಷ್ಠ ಪುತ್ರರು ಇದ್ದರು. ಅವರೆಲ್ಲರೂ ಶಕರು ಎಂದು ಪ್ರಸಿದ್ಧರಾದರು. ವೈವಸ್ವತ

ಮನುವಿನ ಎರಡನೆಯ ಮಗನಾದ ನಾಭಾಗನಿಗೆ ಅಂಬರೀಷ ಎಂಬ ಒಬ್ಬ ಸತ್ಪುತ್ರ ಹುಟ್ಟಿದ. ಮೂರನೇ ಮಗ ಧೃಷ್ಟನಿಗೆ ಧಾರ್ಷ್ಟಕ ಎಂಬ ಹೆಸರಿನ ವೀರಕ್ಷತ್ರಿಯರು ಪುತ್ರರಾಗಿ ಜನಿಸಿದರು. ಕರೂಷ ಎಂಬ ಇಕ್ಷ್ವಾಕು ಪುತ್ರನಿಂದ ಜನಿಸಿದ ಕಾರೂಷ ಎಂಬ ಮನುವಿನ ಮೊಮ್ಮಕ್ಕಳು ಬಹಳ ಪರಾಕ್ರಮಶಾಲಿಗಳು ಆಗಿದ್ದರು. ನಾಭಾಗ ಮತ್ತು ಧೃಷ್ಟನ ಮಕ್ಕಳಲ್ಲಿ ಕೆಲವರು ಮುಂದೆ ತಮ್ಮ ಕರ್ಮಕಲಾಪಗಳಿಂದ ವೈಶ್ಯರಾದರು. ಪ್ರಾಂಶುರಾಜನಿಗೆ ಪ್ರಜಾಪತಿ ಎಂಬ ಪುತ್ರ ಉತ್ಪನ್ನವಾದ. ಮತ್ತೊಬ್ಬ ಮನುಕುಮಾರನಾದ ಶರ್ಯಾತಿರಾಜನಿಗೆ ಆನರ್ತ ಎಂಬ ಗಂಡು ಮಗು, ಸುಕನ್ಯಾ ಎಂಬ ಹೆಣ್ಣು ಮಗು ಇದ್ದಿತು. ಆನರ್ತನ ಮಗನಾದ ರೈವನು ಮಹಾಪರಾಕ್ರಮಿ. ಅವನು ಆನರ್ತದೇಶದ ರಾಜಧಾನಿಯಾದ ಕುಶಸ್ಥಲಿಯನ್ನು ಆಳುತ್ತಿದ್ದ. ಆ ರೈವನಿಗೆ ರೈವತ, ಕಕುದ್ಮಿ ಎಂಬ ಇಬ್ಬರು ಗಂಡುಮಕ್ಕಳು. ರೈವನ ಅನಂತರ ಅವನ ಹಿರಿಯ ಮಗನಾದ ರೈವತನೇ ಕುಶಸ್ಥಲಿಯ ಶಾಸಕನಾಗಿ ಆಳುತ್ತಿದ್ದ. ರೈವತನಿಗೆ ರೇವತಿ ಎಂಬ ಒಬ್ಬ ಕನ್ಯೆ. ಅವಳಿಗೆ ಅನುರೂಪನಾದ ವರ ಬಹುಕಾಲ ಸಿಕ್ಕಲೇ ಇಲ್ಲ. ರೇವತಿಗೆ ಗಂಡು ಹುಡುಕುವದರಲ್ಲಿಯೇ ಬೇಸತ್ತು ಹೋದ ಆ ಕುಶಸ್ಥಲಿಯ ಅರಸ. ಕೊನೆಗೆ ಈ ತನ್ನ ಮಗಳಿಗೆ ಯಾವ ವರನನ್ನು ಬ್ರಹ್ಮ ಗಂಟು ಹಾಕಿದ್ದಾನೆ ಎಂಬುದನ್ನು ವಿಚಾರಿಸಿ ಬರಲು ಸಮರ್ಥನಾದ ಆ ರೈವತ ಮಹಾರಾಜ ಬ್ರಹ್ಮಲೋಕಕ್ಕೆ ತೆರಳಿದ. ಆಗ ಆ ಸತ್ಯಲೋಕದಲ್ಲಿ ಬ್ರಹ್ಮದೇವರ ಎದುರು ಯಾವದೋ ಒಂದು ಕಾರ್ಯಕ್ರಮ ನಡೆದಿತ್ತು. ಅದು ಮುಗಿಯಲಿ ಎಂದು ಒಂದು ಮುಹೂರ್ತಕಾಲ ಅಲ್ಲಿಯೇ ಕುಳಿತುಕೊಂಡ ಈ ಕುಶಸ್ಥಲಿಯ ದೊರೆ. ಆ ಬ್ರಹ್ಮಲೋಕದ ಒಂದು ಮುಹೂರ್ತದಲ್ಲಿ ಅನೇಕ ಯುಗಗಳು ಕಳೆದುಹೋದವು. ಬ್ರಹ್ಮದೇವರನ್ನು ಅವನು ವಿಚಾರಿಸಿದಾಗ ಕೃಷ್ಣನ ಅಣ್ಣನಾದ ಬಲರಾಮನೇ ನಿನ್ನ ಮಗಳಾದ ರೇವತಿಗೆ ನಿಯಮಿತನಾದ ಪತಿ ಎಂದು ಬ್ರಹ್ಮದೇವರು ಹೇಳಿದರು. ಅದನ್ನು ಕೇಳಿಕೊಂಡು ರೈವತ ಭೂಲೋಕಕ್ಕೆ ಮರಳಿದ. ಅವನು ಇಲ್ಲಿಗೆ ಬಂದಾಗ ಕೃತ, ತ್ರೇತಾ, ದ್ವಾಪರ ಈ ಮೂರು ಯುಗಗಳು ತಿರುಗಿ, ದ್ವಾಪರಯುಗದ ಕೊನೆಗಾಲವು ಬಂದಿತ್ತು. ಅವನು ಮೊದಲಿನ ತನ್ನ ಊರಿಗೆ ಬಂದ. ಆಗಲೇ ಅನೇಕ ತಲೆಮಾರುಗಳು ಉರುಳಿ ಹೋಗಿ ಕುಶಸ್ಥಲಿಯೆಂಬ ಅವನ ಪಟ್ಟಣವು ಪೂರ್ಣ ಬದಲಾಗಿತ್ತು. ಶ್ರೀಕೃಷ್ಣನು ಅದೇ ಕುಶಸ್ಥಲಿಯಲ್ಲಿ ದ್ವಾರಕಾ ಅಥವಾ ದ್ವಾರಾವತಿ ಎಂಬ ತನ್ನ ಹೊಸ ನಗರವನ್ನು ಕೂಡಿಸಿದ್ದ. ಅದು ಈಗ ಯಾದವರ ರಾಜಧಾನಿ ಆಗಿದ್ದಿತು. ರೈವತ ರಾಜನು ಅಲ್ಲಿಗೆ ಬಂದು ಬ್ರಹ್ಮದೇವರ ಆದೇಶದಂತೆ ಶ್ರೀಕೃಷ್ಣನ ಅಣ್ಣ ಬಲರಾಮನಿಗೆ ಮದುವೆ ಮಾಡಿಕೊಟ್ಟನು. ತನ್ನ ಮಗಳಾದ ರೇವತಿಯನ್ನು, ಅನಂತರ ಭೂಲೋಕದ ತನ್ನ ಕೆಲಸವು ಮುಗಿಯಿತು ಎಂದು ತಿಳಿದು ತಪಸ್ಸಿಗೆ ಹೊರಟ ಮೇರು ಪರ್ವತಕ್ಕೆ. ಬಲರಾಮನು ತನ್ನ ರೂಪವತಿಯಾದ ರಮಣಿ ರೇವತಿಯೊಂದಿಗೆ ಸ್ವಚ್ಛಂದ ವಿಹಾರಗೈಯುತ್ತ ಆನಂದದಿಂದ ದ್ವಾರಕಾಪಟ್ಟಣದಲ್ಲಿ ನೆಲೆಸಿದ.

**ಶೌನಕಾದಿ ಮುನಿಗಳು:-** ಸೂತಾಚಾರ್ಯ, ರೇವತಿ ಹಾಗೂ ರೈವತರು ಬ್ರಹ್ಮಲೋಕಕ್ಕೆ ಹೋಗಿ ತಿರುಗಿ ಭೂಲೋಕಕ್ಕೆ ಮರಳಿ ಬರುವಷ್ಟರಲ್ಲಿ ಅನೇಕ ಯುಗಗಳು ಕಳೆದು ಹೋಗಿದ್ದವಷ್ಟೇ. ಅವರೆಲ್ಲರೂ ಮುಪ್ಪಿನ ಮುದುಕರಾಗಿ ಹೇಗೋ ಬಾಗಿ ಬದುಕಿರಬೇಕು ಅಷ್ಟೇ. ಅಂಥ ಮುಪ್ಪು ಅಡರಿದ ವೃದ್ಧಕನ್ಯೆಯನ್ನು ಬಲರಾಮನು ಹೇಗೆ ಮದುವೆಯಾದ? ''ಗಂಡ ಚಿಕ್ಕದು ಹೆಂಡತಿ ಹಿರಿಯದು'' ಎಂಬಂತೆ ನಗೆಗೀಡು ಆಗಲಿಲ್ಲವೆ? ರೈವತನು ತಪಸ್ಸಿಗೆ ತೆರಳಿದ ಬಳಿಕ ಅವನ ವಂಶ ಬೆಳೆದುದು ಹೇಗೆ? ಇದನ್ನೆಲ್ಲ ಹೇಳಿರಿ.

**ಸೂತ:-** ಬ್ರಾಹ್ಮಣರೆ, ಮುಪ್ಪು, ಮರಣ, ಹಸಿವು, ನೀರಡಿಕೆಗಳು ನೆಲದ ಉಪ್ಪು ಉಂಡವರಿಗೆ ಮಾತ್ರ ತಪ್ಪಿದ್ದಲ್ಲ. ಸತ್ಯಲೋಕದಲ್ಲಿ ಇದ್ದವರನ್ನು ಮುಪ್ಪು ಮಾಸಲಾರದು. ಮೃತ್ಯು ಕಬಳಿಸಲಾರದು. ಹಸಿವೆ ನೀರಡಿಕೆಗಳು ಅವರನ್ನು ಎಂದಿಗೂ ಬಳಲಿಸಲಾರವು. ರೈವತ ಹಾಗೂ ರೇವತಿ ಈ ಇಬ್ಬರೂ ತಂದೆ ಮಗಳು ಬ್ರಹ್ಮಲೋಕಕ್ಕೆ ಹೋದಾಗ ಯಾವ ವಯಸ್ಸು ತಾರುಣ್ಯದಲ್ಲಿ ಇದ್ದರೋ ಮರಳಿ ಭೂಲೋಕಕ್ಕೆ ಬಂದಾಗಲೂ ಅದೇ ಸ್ಥಿತಿಯಲ್ಲಿಯೇ ಅಕ್ಷೀಣಯೌವ್ವನರಾಗಿ ಕಂಗೊಳಿಸುತ್ತ ಕಳೆಕಾಂತಿಗಳಿಂದ ಶೋಭಿಸುತ್ತಿದ್ದರು. ರೇವತಿಗೆ ಇಲ್ಲಿಂದ ಅಲ್ಲಿಗೆ ಹೋಗುವಾಗ ಇದ್ದ ಹದಿಹರೆಯದ ಸಿರಿ ಸೊಬಗುಗಳು ಯಾವುದೇ ನ್ಯೂನತೇ ಇಲ್ಲದೆ ಪರಿಪೂರ್ಣ ಲಾವಣ್ಯ ವಿಶೇಷದಿಂದ ಹಾಗೆಯೇ ಉಳಿದುಕೊಂಡಿತ್ತು. ಆದುದರಿಂದಲೇ ಸುರಸುಂದರಿಯರ ಚೆಲುವನ್ನು ಮೀರಿಸುವ ಅವಳ ಮುಗ್ಧ ಸೌಂದರ್ಯವನ್ನು ಕಂಡು ಬಲರಾಮ ಪ್ರೀತಿಯಿಂದ ಅವಳನ್ನು ವರಿಸಿದ.

ರೈವತನು ತನ್ನ ಮಗಳನ್ನು ಕರೆದುಕೊಂಡು ಕುಶಸ್ಥಲವನ್ನು ಬಿಟ್ಟು ವರಾನ್ವೇಷಣೆಗಾಗಿ ಸತ್ಯಲೋಕಕ್ಕೆ ಪಯಣಿಸಿದ ಬಳಿಕ ರಾಕ್ಷಸರು ಆ ಕುಶಸ್ಥಲಿಯನ್ನು ಆಕ್ರಮಿಸಿದರು. ಆ ರೈವತನಿಗೆ ನೂರುಮಂದಿ ಸೋದರರು. ಆದರೇನು! ಆ ಶತವೀರರಲ್ಲಿ ಒಬ್ಬನಿಗೂ ರೈವತನ ಆ ಅದಟು, ಅದಮ್ಯ ಉತ್ಸಾಹ, ವೈರಿವಿಧ್ವಂಸನ ಪಟುತರ ಪರಾಕ್ರಮ ಇರಲಿಲ್ಲ. ರೈವತನ ನಿರ್ಗಮನವನ್ನೇ ಕಾದುಕೊಂಡು ಕುಳಿತಿದ್ದರು ದುಷ್ಟ ರಕ್ಕಸರು. ಅವನು ಸತ್ಯಲೋಕಕ್ಕೆ ತೆರಳಿದ ಕೂಡಲೇ ಕುಶಸ್ಥಲಿಯ ಮೇಲೆ ಎರಗಿದರು. ಸುತ್ತು ಹತ್ತು ಕಡೆಯಿಂದ ಲಗ್ಗೆ ಇಟ್ಟು ಎಲ್ಲರೂ ಒಗ್ಗೂಡಿ ಒಮ್ಮೆಲೇ ಪಟ್ಟಣಕ್ಕೆ ನುಗ್ಗಿ ನೂರುಜನ ರೈವತಸೋದರರನ್ನು ಹಣೆದು ಹೊಡೆದು ಓಡಿಸಿದರು. ರಾಕ್ಷಸರಿಂದ ತಾಡಿತಪೀಡಿತರಾದ ಆ ರೈವತ ಬಂಧುಗಳು ದೇಶದ ನಾಲ್ಕು ಕಡೆ ಓಡಿ ಅಲ್ಲಲ್ಲಿ ನೆಲೆಸಿದರು. ಅವರು ಇದ್ದಲ್ಲಿಯೇ ಅವರವರ ವಂಶಗಳು ಪುತ್ರಪೌತ್ರ ಪರಂಪರೆಯಾಗಿ ಮುಂದುವರೆದವು. ಈ ಸಂತತಿಯವರಿಗೆ ಶರ್ಯಾತ ಎಂದು ಹೆಸರು. ನಾಭಾಗ, ರಿಷ್ಟಿ, ಇವರೀರ್ವರ ಮಕ್ಕಳು ಮೊದಲು ತಮ್ಮ ವೃತ್ತಿಯಿಂದ ವೈಶ್ಯರಾದರೂ ಮುಂದೆ ತಮ್ಮ ತಪೋಮಹಿಮೆಯಿಂದ ಬ್ರಾಹ್ಮಣರಾದರು. ಕರೂಷನ ಮಕ್ಕಳಾದ ಕಾರೂಷರು ತಮ್ಮ ವೀರವೃತ್ತಿಯಿಂದ ಕೊನೆಯವರೆಗೂ ಕ್ಷತ್ರಿಯರಾಗೇ ಉಳಿದು ಬಾಳು ಸಾಗಿಸಿದರು.

ವೈವಸ್ವತಮನುವಿನ ಚೊಚ್ಚಲ ಗಂಡು ಮಗನಾದ ಇಕ್ಷ್ವಾಕು ರಾಜನಿಗೆ ವಿಕುಕ್ಷಿಯೇ ಮೊದಲಾಗಿ ನೂರು ಜನ ಪುತ್ರರು, ವೀರರಿಗೆ ಉಚಿತವಾದ ಬಲವಾದ ಕುಕ್ಷಿ ಅವನಿಗೆ ಇರಲಿಲ್ಲ. ಆದುದರಿಂದ ವೀರೋಚಿತವಾದ ನಡು ಅಥವಾ ಸೊಂಟದ ಭಾಗ ಇಲ್ಲದಿರುವ ತುಸು ದುರ್ಬಲನಾದ ಆ ವಿಕುಕ್ಷಿಯು ಧರ್ಮನಿಷ್ಠನಾಗಿ ಅಯೋಧ್ಯೆಯಲ್ಲಿಯೇ ನ್ಯಾಯದಿಂದ ರಾಜ್ಯಪಾಲನೆಮಾಡಿದ ಆ ವಿಕುಕ್ಷಿಗೆ ಐದು ಜನ ವೀರಪುತ್ರರು. ಕೆಲವರು ಉತ್ತರಾಪಥವನ್ನು ಆಳಿದರೆ ವಶಾತಿ ಮೊದಲಾದ ಐವತ್ತೆಂಟು ಜನರು ಭಾರತದ ದಕ್ಷಿಣ ಭಾಗವನ್ನು ಆಳಿದರು. ವಿಕುಕ್ಷಿಯು ಒಂದು ದಿನ ತಂದೆಯ ಅಪ್ಪಣೆಯಿಂದ ಅಷ್ಟಕ ಶ್ರಾದ್ಧಕ್ಕಾಗಿ ಮೃಗಗಳನ್ನು ಕೊಂದು ಮಾಂಸ ತರಲು ಅರಣ್ಯಕ್ಕೆ ಹೋಗಿದ್ದನು. ಬೇಟೆಯಿಂದ ಬಳಲಿದ ಅವನಿಗೆ ಆ ಕಾಡಿನಲ್ಲಿ ಬಹು ಹಸಿವೆಯೆನಿಸಿತು. ಹಸಿವೆ ತಡೆಯಲಾಗದೆ ಶ್ರಾದ್ಧಕ್ಕಾಗಿ ಎಂದು ಸಂಹರಿಸಿದ ಮೊಲಗಳಲ್ಲಿ ಒಂದನ್ನು ತಾನು ತಿಂದು ಉಳಿದವನ್ನು ಮನೆಗೆ ಹಿಡಿದು ಬಂದ. ಮೊಲದ ಮಾಂಸ ತಿಂದುದರಿಂದ ಅವನಿಗೆ 'ಶಶಾದ' ಎಂದು ಹೆಸರು ಬಂದಿತು. (ಶಶ

ಎಂದರೆ ಮೊಲ) ಶ್ರಾದ್ಧಕ್ಕಾಗಿ ಮೀಸಲಾಗಿದ್ದ ಮಾಂಸವನ್ನು ತಿಂದದ್ದರಿಂದ ಆ ವಿಕುಕ್ಷಿಯನ್ನು ಇಕ್ಷ್ವಾಕು ರಾಜನು ವಶಿಷ್ಠರ ಮಾತಿನಂತೆ ರಾಜ್ಯ ಬಿಟ್ಟು ಹೊರಗೆ ಹಾಕಿದ. ಮುಂದೆ ಇಕ್ಷ್ವಾಕು ರಾಜನ ಮರಣದ ಅನಂತರ ವಶಿಷ್ಠ ಮುನಿಗಳು ಕಾಡಿನಲ್ಲಿದ್ದ ಆ ವಿಕುಕ್ಷಿಯನ್ನು ಕರೆದು ಅಯೋಧ್ಯೆಯ ಸಿಂಹಾಸನದ ಮೇಲೆ ಪಟ್ಟಾಭಿಷೇಕ ಮಾಡಿದರು.

ಆ ವಿಕುಕ್ಷಿ ಅಥವಾ ಶಶಾದನಿಗೆ ಕಕುಸ್ಥ, ಕಕುಸ್ಥನಿಗೆ, ಅನೇನಸ್, ಅನೇನಸನಿಗೆ ಪೃಥು, ಪೃಥುವಿಗೆ ವಿಷ್ಟರಾಶ್ವ, ವಿಷ್ಟರಾಶ್ವನಿಗೆ ಆರ್ದ್ರ, ಆದ್ರನಿಗೆ ಯುವನಾಶ್ವ ಯುವನಾಶ್ವನಿಗೆ ಶ್ರಾವಸ್ತ ಎಂಬ ಮಕ್ಕಳು ಜನಿಸಿ, ಹೀಗೆಯೇ ಪುತ್ರಸಂತತಿ ಮುಂದುವರಿದು ಆ ಅಯೋಧ್ಯಾ ಸಾಮ್ರಾಜ್ಯವನ್ನು ನ್ಯಾಯನಿಷ್ಠರಾಗಿ ಆಳಿದರು. ಆ ಶ್ರಾವಸ್ತನು ಶ್ರಾವಸ್ತಿ ಎಂಬ ಹೊಸ ನಗರವನ್ನು ನಿರ್ಮಿಸಿದ. ಅದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ. ಶ್ರಾವಸ್ತನ ಮಗ ಬೃಹದಶ್ವ. ಬೃಹದಶ್ವನಿಗೆ ಕುಮಾಶ್ವ ಎಂಬ ಧಾರ್ಮಿಕ ಪ್ರವೃತ್ತಿಯ ರಾಜನು ಪುತ್ರನಾಗಿ ಶ್ರಾವಸ್ತಿಯನ್ನು ಆಳಿದ. ಅವನು ಧುಂಧು ಎಂಬ ಮಹಾಬಲಿಷ್ಠನಾದ ದೈತ್ಯಾಗ್ರೇಸರನನ್ನು ಕೊಂದದ್ದರಿಂದ ಧುಂಧುಮಾರ ಎಂದು ಹೆಸರಾದ.

**ಶೌನಕಾದಿ ಮುನಿಗಳು:-** ವೀರವರ್ಯನಾದ ಕುಮಾಶ್ವನು ಮದಾಂಧನಾದ ಧುಂಧುವನ್ನು ಕೊಂದುದು ಎಂತು? ಧುಂಧುವಿನ ಸಂಹಾರದ ವೃತ್ತಾಂತವನ್ನು ತುಸು ವಿಸ್ತರಿಸಿ ಹೇಳಿರಿ.

**ಸೂತ:-** ಕುಮಾಶ್ವನಿಗೆ ನೂರು ಜನ ಮಕ್ಕಳು. ಅವರೆಲ್ಲರೂ ಒಳ್ಳೇ ಬಿಲ್ಲುಗಾರರು ವಿದ್ಯಾವಂತರು, ಧಾರ್ಮಿಕರು, ಬಲಿಷ್ಠರು, ವೀರಮಗ, ಶೂರಮೊಮಕ್ಕಳು ಇವರನ್ನು ಕಣ್ಣಿಂದ ಕಂಡು ತೃಪ್ತಿಪಟ್ಟ ಬೃಹದಶ್ವನು ತನ್ನ ಮಗನಾದ ಕುಮಾಯಾಶ್ವನಿಗೆ ರಾಜ್ಯದ ಭಾರವನ್ನೆಲ್ಲ ವಹಿಸಿ ತಪಸ್ಸಿಗಾಗಿ ಅರಣ್ಯಕ್ಕೆ ಹೊರಟು ನಿಂತಿದ್ದ. ಆಗ ಉತ್ತಂಕ ಮುನಿಗಳು ಅಲ್ಲಿಗೆ ಆಗಮಿಸಿ ಅರಣ್ಯಕ್ಕೆ ಪ್ರಸ್ಥಾನ ಹೊರಟ ಆ ಬೃಹದಶ್ವನನ್ನು ತಡೆದು ನುಡಿದರು.

**ಉತ್ತಂಕ:-** ಮಹಾರಾಜ, ರಾಜನಾದವನ ಮುಖ್ಯ ಕರ್ತವ್ಯ ತಪಸ್ಸಲ್ಲ. ಪ್ರಜಾರಕ್ಷಣೆ. ನೀನು ಈಗ ತಪಸ್ಸಿಗೆ ತೆರಳಬೇಡ. ತಪಸ್ಸಿನಿಂದ ಬರುವ ಪುಣ್ಯ ನಿನಗೆ, ನಮ್ಮಂಥ ತಪಸ್ವಿಗಳಿಗೆ ಬಂದ ತೊಂದರೆಗಳನ್ನು ತೊಡೆದು ಹಾಕಿದರೆ ತಾನಾಗಿಯೇ ಇನ್ನೂ ಅತ್ಯಧಿಕವಾಗಿ ಪುಣ್ಯ ಬರುವದು. ನಮ್ಮ ತಪೋನುಷ್ಠಾನಗಳಿಗೆ ಧುಂಧು ಎಂಬ ಮದಾಂಧ ರಾಕ್ಷಸನಿಂದ ಗಂಡಾಂತರ ಒದಗಿದೆ. ನನ್ನ ಆಶ್ರಮದ ಸಮೀಪದಲ್ಲಿಯೇ ಮರಳುರಾಶಿಗಳಿಂದ ತುಂಬಿದ ಸಮುದ್ರ ದಂಡೆಗುಂಟ ಮೈಚಾಚಿದ ಒಂದು ಬೆಂಗಾಡು ಇದೆ. ಅದಕ್ಕೆ ಉದ್ದಾಲಕ ಎಂದು ಹೆಸರು. ಅಲ್ಲಿ ಮಧು ರಾಕ್ಷಸನ ಮಗನಾದ ಧುಂಧು ದೈತ್ಯನು ಲೋಕನಾಶಕ್ಕಾಗಿ ಘೋರತಪವನ್ನು ಕೈಕೊಂಡಿದ್ದಾನೆ. ಉಗ್ರತಪಸ್ಸನ್ನು ಆಚರಿಸುತ್ತಲಿರುವ ಆ ದುಷ್ಟನು ವರ್ಷಕ್ಕೆ ಒದು ಸಲ ನಿಟ್ಟುಸಿರನ್ನು ಬಿಟ್ಟಾಗ ಬೆಟ್ಟ ಬಯಲು ಸಹಿತವಾದ ಭೂಮಿಯೆಲ್ಲವೂ ಅಲುಗಾಡುವದು. ಅವನ ನಿಟ್ಟುಸಿರಿನ ಗಾಳಿಯಿಂದ ಧೂಳು ಎದ್ದು ಸೂರ್ಯ ಮಂಡಲವನ್ನೆಲ್ಲ ಮುಚ್ಚಿಹಾಕುತ್ತದೆ. ಏಳು ದಿನಗಳವರೆಗೆ ಭೂಕಂಪ, ಬೆಂಕಿಯ ಮಳೆ, ಹೊಗೆ, ದಗೆ, ಎಲ್ಲ ಕಡೆಗೂ ಅಗ್ನಿ ತಾಂಡವ, ಪ್ರಾಣಿಸಂಹಾರ ಅವಿಚ್ಛಿನ್ನವಾಗಿ ನಡೆಯುತ್ತದೆ. ಆ ಮಾಯಾವಿಯಾದ ರಾಕ್ಷಸ ಯಾರ ಕಣ್ಣಿಗೂ ಬೀಳುವದಿಲ್ಲ. ಮರಳುರಾಶಿಯ ಮಧ್ಯದಲ್ಲಿಯೇ ಅವಿತುಕೊಂಡು ತನ್ನ ಉಸಿರಿನ ಅಲೆಗಳಿಂದಲೇ ಇಷ್ಟೆಲ್ಲ ಅನರ್ಥಗಳನ್ನು ಉಂಟುಮಾಡುತ್ತಾನೆ. ಆದುದರಿಂದ ನೀನು ಈಗ ತಪಸ್ಸಿಗೆ ಹೋಗುವದನ್ನು ಬಿಟ್ಟು ಆ ದುಷ್ಟ

ದಾನವನನ್ನು ನಿಗ್ರಹಿಸು. ಆದರಿಂದ ನಿನಗೆ ಪುಣ್ಯ, ಜನರಿಗೆ ಸುಖ, ನಮಗೆಲ್ಲ ಆನಂದ, ನೀನು ಈ ಮಹತ್ಕಾರ್ಯ ಸಾಧಿಸಿದರೆ, ನಿನಗೆ ಶ್ರೀಹರಿಯ ಆಜ್ಞೆಯಂತೆ, ನಾನು ಅನುಗ್ರಹಗೈದು ಕಲ್ಯಾಣವು ಉಂಟಾಗುವಂತೆ ಮಾಡುತ್ತೇನೆ.

**ಬೃಹದಶ್ವ:-** ''ಪೂಜ್ಯರೇ, ನಾನು ಈಗ ಶಸ್ತ್ರಸನ್ಯಾಸ ಮಾಡಿರುವೆ. ವಾನಪ್ರಸ್ಥದ ವ್ರತವನ್ನು ಹಿಡಿದಿರುವೆ. ಮತ್ತೆ ಈಗ ಘೋರವಾದ ಆ ಶಸ್ತ್ರಾಸ್ತ್ರಗಳನ್ನು ಹಿಡಿಯಲಾರೆ. ರಾಜಸಸ್ವಭಾವವನ್ನು ತಳೆಯಲಾರೆ. ಆದರೆ ನಿಮ್ಮ ತಪಸ್ಸಿಗೆ ವಿಘ್ನವನ್ನುಂಟುಮಾಡಿ ಲೋಕಕ್ಕೆ ಕಂಟಕನಾದ ಆ ದೈತ್ಯನನ್ನು ನಾಶಮಾಡುವ ಹೊಣೆ ನನ್ನದು. ನನ್ನ ಮಗನಾದ ಕುಮಾಶ್ವನಿಗೆ ಹೇಳಿ ಅವನ ಸಂಹಾರ ಮಾಡಿಸುವೆ. ನನಗಿಂತಲೂ ನನ್ನ ಮಗ ಶಕ್ತಿಶಾಲಿ, ಬಲಿಷ್ಠ. ತಾವು ಈ ವಿಷಯದಲ್ಲಿ ಚಿಂತೆ ಮಾಡಬೇಡಿರಿ'' ಎಂದು ಹೇಳಿ ಮಗನಾದ ಕುಮಾಶ್ವನನ್ನು ಕರೆದು ಅವನಿಗೆ ''ಧುಂಧು ದೈತ್ಯನನ್ನು ಕೊಂದು ಬರಬೇಕು. ಈ ನನ್ನ ಮಾತಿಗೆ ತಪ್ಪಕೂಡದು'' ಎಂದು ಆದೇಶವಿತ್ತು ಮುನಿಗಳನ್ನು ಸಂತೈಸಿ ಕುಮಾಶ್ವನಿಗೆ ಕಟ್ಟಪ್ಪಣೆ ಮಾಡಿ ತಾನು ತಪಸ್ಸಿಗಾಗಿ ಕಾಡಿಗೆ ತೆರಳಿದನು.

**ಸೂತ:-** ಅನಂತರ ತಂದೆಯ ಮಾತು ವೇದ ವಚನ ಎಂದು ಭಾವಿಸಿ ಕುಮಾಶ್ವ ತನ್ನ ವೀರವರೇಣ್ಯರಾದ ನೂರು ಜನ ಮಕ್ಕಳೊಡನೆ ಧುಂಧುವನ್ನು ಕೊಲ್ಲಬೇಕು ಎಂದು ಸಂಕಲ್ಪಿಸಿ ಉತ್ತಂಕ ಮುನಿಯೊಡನೆ ದಂಡಯಾತ್ರೆಗೆ ಹೊರಟ. ಸಾಕ್ಷಾತ್ ಶ್ರೀಹರಿಯು ದುಷ್ಟದೈತ್ಯ ದಮನ ರೂಪವಾದ ಸತ್ಯ ಸಂಕಲ್ಪವನ್ನು ಮಾಡಿ ಹೊರಟ ಕುಮಾಶ್ವನ ದೇಹದಲ್ಲಿ ತೇಜೋರೂಪದಿಂದ ಪ್ರವೇಶಿಸಿದ. ವೀರಾಗ್ರಣಿಯಾದ ಕುಮಾಶ್ವ, ಮಹಾಶೂರರಾದ ತನ್ನ ಶತಸುತರೊಡನೆ ಸಮುದ್ರದಂಡೆಗೆ ತೆರಳಿದ ಅಲ್ಲಿ ಉದ್ದಾಲಕ ಎಂಬ ಮರಳು ಮೈದಾನವನ್ನು ಸುತ್ತಿ ಕಡೆಗೂ ಆ ಕುಮಾಶ್ವಕುಮಾರರು ಅಗೆದು ತೋಡಿ ಮರಳನ್ನೆಲ್ಲ ತಿರುವಿ ಹಾಕಿದರು. ಅಲ್ಲಿನ ಪುಲಿನಗರ್ಭದಲ್ಲಿ ಅಡಗಿ ಕುಳಿತ ಧುಂಧುರಾಕ್ಷಸ ಪಶ್ಚಿಮ ನಿಟ್ಟಿನಲ್ಲಿ ಅವರಿಗೆ ಗೋಚರಿಸಿದ. ತಾನಿದ್ದ ಸ್ಥಳಕ್ಕೆ ಸಾರಿ ಬಂದ ಆ ವೀರಕುಮಾರರನ್ನು ಕಂಡು ಆ ದೈತ್ಯ ಕಡುಕೋಪದಿಂದ ಉರಿದೆದ್ದ. ಜಗತ್ತನ್ನೇ ಕಬಳಿಸುವಂತೆ ಭೀಕರ ಆಕಾರದಿಂದ ಬಾಯಿಂದ ಬೆಂಕಿಯನ್ನು ಉಗುಳುತ್ತ ಆ ರಾಜಕುಮಾರರ ಮೇಲೆ ಧಾರಾಕಾರವಾಗಿ ಮರಳು ನೀರು ಸುರಿಸಿದ. ಅವನ ಮುಖದಿಂದ ಹೊಮ್ಮಿ ಹರಿದ ಅಗ್ನಿಜ್ವಾಲೆಗಳು ಮತ್ತು ಮರಳುಮಿಶ್ರಿತ ನೀರಿನ ಪ್ರವಾಹಗಳು ಕುಮಾಶ್ವನ ತೊಂಭತ್ತೇಳು ಜನ ಮಕ್ಕಳನ್ನು ಕೊಂದುಹಾಕಿದವು. ಅನಂತರ ಆ ಕುಮಾಶ್ವ ಮಹಾರಾಜನು ತನ್ನ ಮೂರು ಮಕ್ಕಳನ್ನು ಉಳಿದು ಮಕ್ಕಳೆಲ್ಲರೂ ಹತರಾಗಿದ್ದರೂ ಧೈರ್ಯಗೆಡದೆ, ದುಃಖಪಡದೆ ಕರ್ತವ್ಯದಿಂದ ವಿಮುಖನಾಗದೇ, ಆ ದುಷ್ಟದೈತ್ಯನನ್ನು ಅಟ್ಟಿಸಿಕೊಂಡು ಬಂದ. ಆಗ ಧುಂಧು ರಾಕ್ಷಸ ಕುಮಾಲಾಶ್ವನ ಎದುರು ಬಂದು ದೈತ್ಯಾಕಾರದ ಜಲಸ್ತಂಭವನ್ನೇ ನಿರ್ಮಿಸಿ ಆದರಲ್ಲಿ ಈ ಮಹಾರಾಜನನ್ನು ಮುಳುಗಿಸಿ ಬಿಡಬೇಕೆಂದು ಯತ್ನಿಸಿದ. ಆಗ ಶ್ರೀಹರಿಯ ಸನ್ನಿಧಾನದಿಂದ ಬಲೋದ್ದೀಪಿತನಾದ ಆ ಕುಮಾಶ್ವನು ತನ್ನ ಯೋಗಶಕ್ತಿಯಿಂದ ದೈತ್ಯನು ತನ್ನೆದುರು ತಂದಿರಿಸಿದ ಸಲಿಲಸ್ತಂಭನಿಕುಂಬಗಳನ್ನೆಲ್ಲ ತನ್ನ ಯೋಗಶಕ್ತಿಯಿಂದ ಕುಡಿದು ಬಿಟ್ಟ. ಹಾಗೂ ಆ ದೈತ್ಯನು ತನ್ನ ಮುಖದಿಂದ ಉಗುಳಿ ಭೂಮಂಡಲದ ತುಂಬ ಹಬ್ಬಿಸಿದ ಅಗ್ನಿಜ್ವಾಲೆಯ ಉರಿಯ ತೆರೆಗಳನ್ನೆಲ್ಲ ಅರೆಚಣದಲ್ಲಿ ಅಡಗಿಸಿಬಿಟ್ಟ. ಅನಂತರ

ಭೀಮಕಾಯನಾದ ಆ ಜಲರಾಕ್ಷಸನನ್ನು ಅರೆಚಣದಲ್ಲಿ ಹೊಡೆದು ಕೊಂದು ಸುಪ್ರೀತನಾಗಿ ಉತ್ತಂಕಮುನಿಗೆ ಬಂದು ನಮಸ್ಕರಿಸಿದ.

ಅದರಿಂದ ಸಪ್ರೀತನಾದ ಉತ್ತಂಕ ಮುನಿಯು ಮುಂದೆ ಅವನ ಸಾಮ್ರಾಜ್ಯಕ್ಕೆ ಯಾವುದೇ ಭಯಾಪಾಯ ಇಲ್ಲದಂತೆ ಹಾಗೂ ಅಪಾರವಾದ ಅವನ ಸಂಪತ್ತು ಸ್ಥಿರವಾಗಿ ಇರುವಂತೆ ವರವಿತ್ತು ಅನುಗ್ರಹಿಸಿದ. ಧುಂಧುದೈತ್ಯನೊಂದಿಗೆ ನಡೆದ ದಾರುಣ ಸಮರದಲ್ಲಿ ಮರಣಹೊಂದಿದ ಅವನ ತೊಂಭತ್ತೇಳು ಮಕ್ಕಳಿಗೆಲ್ಲ ಅಕ್ಷಯವಾದ ಪುಣ್ಯ ಪ್ರಾಪ್ತವಾಗುವಂತೆಯೂ ವರನೀಡಿದ.

ಕುಮಾಶ್ವನ ನೂರುಮಕ್ಕಳಲ್ಲಿ ಈಗ ಬದುಕಿ ಉಳಿದವರು ಮೂವರು ಮಾತ್ರ: ದೃಢಾಶ್ವ, ಕಪಿಲಾಶ್ವ, ಚಂದ್ರಾಶ್ವ ಎಂದು ಅವರ ಹೆಸರು. ಧುಂಧು ದೈತ್ಯನನ್ನು ಕೊಂದದ್ದರಿದ ಕುಮಾಶ್ವನಿಗೆ ಧುಂಧುಮಾರ ಎಂಬ ಹೆಸರು ಅಂದಿನಿಂದಲೇ ಬಂದಿತು ಧುಂಧುಮಾರನ ಅನಂತರ ಅವನ ವಂಶವು ದೃಢಾಶ್ವ. ಹರ್ಯಶ್ವ, ನಿಕುಂಭ, ಸಿಂಹತಾಶ್ವ ಎಂದು ಮುಂತಾಗಿ ರಾಜಮಹಾರಾಜರಿಂದ ಮುಂದುವರೆಯಿತು. ಸಿಂಹತಾಶ್ವರಿಗೆ ಅಕೃಶಾಶ್ವ, ಕೃಶಷಾಶ್ವ, ಹೈಮವತಿ ಎಂಬ ಮೂರು ಮಕ್ಕಳು. ಹೈಮವತಿಗೆ ದಕ್ಷದ್ವತೀ ಎಂಬ ಮತ್ತೊಂದು ಹೆಸರು. ಪ್ರಸೇನಜಿತ್ ಎಂಬುವವನು ಆ ದಕ್ಷದ್ವತಿಯ ಮಗ. ಆ ಪ್ರಸೇನಜಿತನ ಮಡದಿಯಾದ ಗೌರೀದೇವಿಯು ಪರಮ ಪತಿವ್ರತೆ ಆದರೂ ಅವನು ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ಆ ತನ್ನ ಧರ್ಮಪತ್ನಿಗೆ ಶಾಪಕೊಟ್ಟ. ಅದರಿಂದ ನೊಂದುಕೊಂಡ ಆ ಗೌರಿಯು ಬಾಹುದಾ ಎಂಬ ನದಿಯಾಗಿ ಹರಿದಳು. ಆ ಪ್ರಸೇನಜಿತ್ ಹಾಗೂ ಗೌರೀ ದಂಪತಿಗಳ ಮಗನೇ ಯುವನಾಶ್ವ. ಯುವನಾಶ್ವನ ಮಗ ಮಾಂಧಾತ. ಮೂರು ಲೋಕಗಳನ್ನು ಗೆದ್ದು ಚಕ್ರವರ್ತಿ ಮಹಾತ್ಮ ಎಂದು ಮೆರೆದ ಈ ಮಾಂಧಾತ. ಶಶಿಬಿಂದುವಿನ ಮಗಳಾದ ಬಿಂದುಮತಿಯೇ ಈ ಮಾಂಧಾತ ಮಹಾರಾಜನ ಕೈಹಿಡಿದ ಸಾಧ್ವೀಮಣಿ. ಅವಳಿಗೆ ಚೈತ್ರರಥಿ ಎಂದೂ ಇನ್ನೊಂದು ಹೆಸರು. ಈ ಬಿಂದುಮತಿ ಪರಮ ಪತಿವ್ರತೆ. ಅಷ್ಟೇ ರೂಪವತಿ, ಮೇಲೆ ಗುಣವತಿ. ಆ ಬಿಂದುಮತಿಯಲ್ಲಿ ಮಾಂಧಾತ ಮಹಾರಾಜನಿಗೆ ಕುರುಕುತ್ಸ ಮತ್ತು ಮುಚುಕುಂದ ಎಂಬ ಧರ್ಮಿಷ್ಠರಾದ ಮಕ್ಕಳು ಜನಿಸಿದರು. ಆ ಕುರುಕುತ್ಸನಿಗೆ ನರ್ಮದಾದೇವಿ ಎಂಬ ಪತ್ನಿಯಲ್ಲಿ ತ್ರಸದಸ್ಯು ಮಗನಾಗಿ ಜನಿಸಿದ. ತ್ರಸದಸ್ಯುವಿನ ಮಗ ಸಂಭೂತ, ಸಂಭೂತನ ಪುತ್ರ ತಿಧನ್ವನ ಅವನ ತನಯನೇ ತ್ರೈಯ್ಯಾರುಣ, ತ್ರೈಯ್ಯಾರುಣನ ಸತ್ಪುತ್ರ ಸತ್ಯವ್ರತ. ಸತ್ಯವ್ರತ ಹೆಸರಿಗೆ ಒಳ್ಳೆಯವ. ಸ್ವಭಾವ ಹೆಸರಿಗೆ ವಿರುದ್ಧವಾದುದು. ಮಹಾಕಾಮಿ. ಸ್ವಚ್ಛಂದಭೋಗಪ್ರಿಯ. ಒಂದು ಕಡೆ ಮದುವೆ ನಡೆದಿತ್ತು. ಬ್ರಾಹ್ಮಣರು ಮಂತ್ರಘೋಷ ಮಾಡುತ್ತಿದ್ದರು. ರಾಜಕುಮಾರನಾದ ಸತ್ಯವ್ರತ ಆಕಸ್ಮಿಕವಾಗಿ ಅಲ್ಲಿಗೆ ಆಗಮಿಸಿದ. ಹಸೆಯ ಮೇಲೆ ನಿಂತ ಕನ್ಯಾಮಣಿಯನ್ನು ನೋಡಿದ. ಚೆಲುವಿನ ಖಣಿಯಂತೆ ಇದ್ದಳು ಆ ಮದುಮಗಳು. ಅವಳ ಆ ಅನಿಂದ್ಯ ಸೌಂದರ್ಯವನ್ನು ಕಂಡು ಉನ್ಮತ್ತನಾದ ಆ ರಾಜಕುಮಾರ. ಒಮ್ಮೆಲೇ ಅಕ್ಷತಾರೋಪಣ ಮಂತ್ರಗಳನ್ನು ಹೇಳುತ್ತಲಿದ್ದ ಬ್ರಾಹ್ಮಣರನ್ನು ಗದರಿಸಿ ಸುಮ್ಮನಿರಿಸಿದ. ಎಲ್ಲರೂ ನೋಡ ನೋಡುತ್ತಿರುವಂತೆಯೇ ಹುಡುಗಿಯನ್ನು ಹಾರಿಸಿಕೊಂಡು ಹೋಗಿಬಿಟ್ಟ. ಬೇರೊಬ್ಬನಿಗೆ ಗೊತ್ತುಪಡಿಸಿದ ಕನ್ಯೆಯನ್ನು ಕಾಮೋನ್ಮಾದದಿಂದ ಹೊತ್ತುಕೊಂಡು ಬಲಾತ್ಕಾರದಿಂದ ತನ್ನೊಂದಿಗೆ ಕರೆದೊಯ್ದು ತಾನೇ ವಿವಾಹ ಮುಗಿಸಿದ. ಹೀಗೆ ಧರ್ಮವಿರುದ್ಧವಾಗಿ ನಡೆದ

ಆ ದುರಾಚಾರಿ ಮಗನನ್ನು ಮಹಾರಾಜ ತ್ರಯಾರುಣನು ರಾಜ್ಯಬಿಟ್ಟು ಹೊರಹಾಕಿದ. ಆಗ ದುಃಖಿತನಾದ ರಾಜಕುಮಾರನು ತಂದೆಯ ಮುಂದೆ ಬಂದು ದೀನನಾಗಿ ತಲೆತಗ್ಗಿಸಿ ''ನಾನು ಎಲ್ಲಿಗೆ ಹೋಗಲಿ? ಯಾರ ಜೊತೆಗೆ ಇರಲಿ?''... ಎಂದು ಕೇಳಿದ. ಅದಕ್ಕೆ ತಂದೆಯಾದ ಮಹಾರಾಜ ''ನೀನು ಎಲ್ಲಿಯಾದರೂ ಹೊಲೆಯರೊಡನೆ ವಾಸಮಾಡಲು ಯೋಗ್ಯ. ನಿನ್ನಂತಹ ಕುಲದೂಷಕ ಮಗ ಬೇಡವೇ ಬೇಡ'' ಎಂದು ನುಡಿದ.

ತಂದೆಯ ಮಾತಿನಿಂದ ನೊಂದ ಆ ರಾಜಕುಮಾರ ಗತಿಕಾಣದೇ ಅಯೋಧ್ಯೆಯಿಂದ ಹೊರಟು ಹೊರಬಂದ. ತಂದೆಯ ಮಾತಿನಂತೆ ಹರಿಜನಕೇರಿಯಲ್ಲಿಯೇ ಅವರೊಡನೆ ವಾಸ ಮಾಡಬೇಕಾಯಿತು. ಮಗ ಹೋದ ನಂತರ ದುಃಖದಿಂದ ತಂದೆಗೂ ಜೀವನದಲ್ಲಿ ವಿರಕ್ತಿ ಬಂದಿತು. ''ಸಂಸಾರ ಸಾಕಿನ್ನು'' ಎಂದು ಸಂಕಲ್ಪಿಸಿ ಸಾಧನೆಗೈಯ್ಯಲು ಕಾಡಿಗೆ ತೆರಳಿದ. ರಾಜಕುಟುಂಬದ ಈ ಅಧರ್ಮ ನಡತೆಯಿಂದ ಆ ರಾಜ್ಯದಲ್ಲಿ ಹನ್ನೆರಡು ವರ್ಷ ಮಳೆಯೇ ಆಗಲಿಲ್ಲ. ಭೀಕರ ಬರಗಾಲ ತಲೆದೋರಿತು.

ವಿಶ್ವಾಮಿತ್ರ ಋಷಿಯು ಈ ಘಟನೆ ನಡೆಯುವದಕ್ಕಿಂತ ಮೊದಲು ಅಯೋಧ್ಯೆಯ ರಾಜ್ಯದಲ್ಲಿಯೇ ತನ್ನ ಹೆಂಡತಿ ಮಕ್ಕಳನ್ನು ಇರಿಸಿ ದ್ವಾದಶವರ್ಷದ ದೀರ್ಘಕಾಲೀನವಾದ ತಪೋನುಷ್ಠಾನಕ್ಕಾಗಿ ಹೈಮಾಚಲದ ಶೈಲಶೃಂಗವನ್ನು ಏರಿದ್ದ. ಭೀಕರ ಕ್ಷಾಮವು ಆ ರಾಜ್ಯವನ್ನೆಲ್ಲ ಗಂಡಾಂತರಕ್ಕೆ ಈಡುಮಾಡಿದಾಗ ವಿಶ್ವಾಮಿತ್ರನ ಹೆಂಡತಿಗೆ ಜೀವನವನ್ನು ನಡೆಸುವದೇ ದುಸ್ತರವಾಯಿತು. ಆಗ ಅವಳು ತನ್ನ ಒಂದು ಮಗುವನ್ನು ಮಾರಿ ಉಳಿದ ಮಕ್ಕಳನ್ನು ಬದುಕಿಸಬೇಕು ಎಂದು ನಿರ್ಧರಿಸಿದಳು. ತನ್ನ ಕೊರಳಿಗೆ ಕಟ್ಟಿದ ಬಟ್ಟೆಯೊಂದರಲ್ಲಿ ಮಗುವನ್ನು ಮಲಗಿಸಿಕೊಂಡು ''ನೂರು ಗೋವುಗಳನ್ನು ಕೊಟ್ಟವರಿಗೆ ನನ್ನ ಮಗನನ್ನು ಮಾರುವೆ'' ಎಂದು ಸಾರುತ್ತ ಊರೂರು ಅಲೆದಾಡಿದಳು. ಮಾರಾಟಕ್ಕಾಗಿ ತನ್ನ ಕೊರಳಲ್ಲಿ ಕಟ್ಟಿಕೊಂಡಿದ್ದರಿಂದ ಆ ಮಗುವಿಗೆ ಮುಂದೆ ಗಾಲವ ಎಂದು ಹೆಸರು ಬಂದಿತು. ವಿಶ್ವಾಮಿತ್ರರಂಥ ಬ್ರಹ್ಮರ್ಷಿಗಳ ಕುಟುಂಬಕ್ಕೆ ಬಂದ ಘೋರ ಕುತ್ತನ್ನು ಕಂಡು ಕರುಳು ಕರಗಿತು ರಾಜಕುಮಾರ ಸತ್ಯವ್ರತನಿಗೆ. ಅವನು ಧರ್ಮಬುದ್ಧಿಯಿಂದ ವಿಶ್ವಾಮಿತ್ರರ ಮಡದಿಯ ಬಳಿಗೆ ಬಂದು ಅವರ ಜೀವನಕ್ಕೆ ಪರ್ಯಾಪ್ತವಾಗುವಷ್ಟು ಧನಧಾನ್ಯವಿತ್ತು ಆ ಮಗುವನ್ನು ಮಾರಾಟದಿಂದ ಬಿಡಿಸಿದ. ವಿಶ್ವಾಮಿತ್ರಮುನಿಗೆ ಪ್ರೀತಿಯುಂಟಾಗಿ ಅವನಿಂದ ತಾನು ಮುಂದೆ ಅನುಗ್ರಹ ಪಡೆಯಬೇಕು. ಎಂದು ಯೋಚಿಸಿ ಆ ಬರಗಾಲ ಮುಗಿಯುವವರೆಗೆ ಅಂದರೆ ಹನ್ನೆರಡು ವರ್ಷಗಳ ಕಾಲ ಸತ್ಯವ್ರತನು ಆ ಮುನಿ ಕುಟುಂಬವನ್ನು ಅನ್ನ ಪಾನಾದಿಗಳನ್ನು ಇತ್ತು ಗೌರವದಿಂದ ರಕ್ಷಿಸಿದ.

**ಲೋಮಹರ್ಷಣ:-** ದ್ವಿಜರೆ, ಹೀಗೆಯೇ ಸತ್ಯವ್ರತನು ಮುಂದೆಯೂ ಸಹ ವಿಶ್ವಾಮಿತ್ರನ ಕುಟುಂಬವನ್ನು ಭಕ್ತಿ ಶ್ರದ್ಧೆಯಿಂದ ರಕ್ಷಣೆ ಮಾಡಿದ. ಕಾಡಿಗೆ ಹೋಗಿ ಬೇಟೆಯಾಡಿ ದೊರೆತ ಮೃಗಗಳಿಂದ ಮಾಂಸವನ್ನು ಬೇರ್ಪಡಿಸಿ ವಿಶ್ವಾಮಿತ್ರನ ಆಶ್ರಮದ ಬಳಿ ಇಟ್ಟು ಬರುತ್ತಿದ್ದ. ಸತ್ಯವ್ರತನ ತಂದೆಯಾದ ತ್ರಯ್ಯಾರುಣಿಯು ರಾಜ್ಯತ್ಯಾಗಮಾಡಿ ಅರಣ್ಯಕ್ಕೆ ಹೋದ ನಂತರವೂ ಸತ್ಯವ್ರತನು ತಂದೆಯ ಮಾತನ್ನು ಪರಿಪಾಲಿಸುತ್ತ ಹನ್ನೆರಡು ವರ್ಷಗಳವರೆಗೆ ಕಾಡಿನಲ್ಲಿ ಅಜ್ಞಾತವಾಸ ಮಾಡಿದ. ನಾಯಕನಿಲ್ಲದೇ ಅರಾಜಕವಾದ ಅಯೋಧ್ಯೆಯನ್ನೂ ಅಂತಃಪುರವನ್ನೂ ಆ ಕಾಲದಲ್ಲಿ ವಶಿಷ್ಠ ನೋಡಿಕೊಂಡನು.

ವಶಿಷ್ಠನ ಮೇಲೆ ಸತ್ಯವ್ರತನಿಗೆ ತುಂಬ ಅಸಮಾಧಾನವಿತ್ತು. ತಾನು ಕಾಡುಪಾಲಾಗಲು, ತನ್ನ ತಂದೆಗೆ ಸಂಸಾರದಲ್ಲಿ ವಿರಕ್ತಿ ಹುಟ್ಟಿ ಅವನೂ ರಾಜ್ಯತ್ಯಾಗಮಾಡಲು ವಶಿಷ್ಠನೇ ಕಾರಣ ಎಂದು ಭಾವಿಸಿದ್ದ. ತನ್ನ ತಂದೆಯು ತನ್ನನ್ನು ರಾಜ್ಯದಿಂದ ಹೊರದಬ್ಬುವಾಗ ವಶಿಷ್ಠ ಮನಸ್ಸು ಮಾಡಿದ್ದರೆ ತನ್ನ ತಂದೆಯಾದ ತ್ರಯ್ಯಾರುಣಿಗೆ ಹೇಳಿ ತನ್ನನ್ನು ರಾಜ್ಯದಲ್ಲೇ ಇರುವಂತೆ ಮಾಡಬಹುದಿತ್ತು. ಹಾಗೆ ಮಾಡುವ ಸಾಮರ್ಥ್ಯ, ಅನುಕೂಲಗಳು ವಶಿಷ್ಠನಿಗಿದ್ದೂ ಅವನು ಮಾಡಲಿಲ್ಲ ಎಂಬುದನ್ನು ನೆನೆದಾಗಲೆಲ್ಲ ಸತ್ಯವ್ರತನಿಗೆ ವಶಿಷ್ಠನ ಮೇಲಿನ ಈ ಕೋಪ ಇಮ್ಮಡಿಸುತ್ತಿತ್ತು. ಆದರೆ ವಾಸ್ತವ ಬೇರೆಯೇ ಇದ್ದಿತು. ಮುಂದಾಗುವದನ್ನು ಮೊದಲೇ ಊಹಿಸುವ ಅಸಾಧಾರಣ ದೃಷ್ಟಿಯಿಂದ ವಶಿಷ್ಠನು, ಸತ್ಯವ್ರತನು ರಾಜ್ಯತ್ಯಾಗಮಾಡಿ ಕಾಡಿಗೆ ಹೋದರೆ ಅಲ್ಲಿ ಪತಿಯಿಲ್ಲದೇ ತೊಂದರೆಗೊಳಗಾದ ವಿಶ್ವಾಮಿತ್ರ ಋಷಿಯ ಸಹಧರ್ಮಿಣಿಗೆ ಇವನಿಂದ ಆಸರೆ ದೊರೆತು ಅವಳ ಕಷ್ಟ ಕಡಿಮೆಯಾಗುವದು ಮತ್ತು ಅಂಥ ಮುನಿಮನಿಷೀಯ ಸೇವೆಯ ಫಲವಾಗಿ ಸತ್ಯವ್ರತನಿಗೂ ಒಳ್ಳೆಯದಾಗುವದು ಎಂದು ಸಮಾಲೋಚಿಸಿ ಸತ್ಯವ್ರತ ಕಾಡಿಗೆ ಹೋಗುವದನ್ನು ಪ್ರತಿಬಂಧಿಸಿರಲಿಲ್ಲ. ಮುಂದೆ ವಶಿಷ್ಠ ಆಲೋಚಿಸಿದಂತೆಯೇ ನಡೆಯಿತು. ಆದರೆ ಸತ್ಯವ್ರತನಿಗೆ ವಶಿಷ್ಠ ಮಹರ್ಷಿಯ ದೂರಾಲೋಚನೆ ಅರ್ಥವಾಗಿರದೇ ವಶಿಷ್ಠ ಮುನಿಯ ಮೇಲೆ ಗುಪ್ತವಾಗಿ ದ್ವೇಷತಾಳಿದ್ದ.

ಸತ್ಯವ್ರತನು ಹನ್ನೆರಡು ವರ್ಷಗಳ ಕಾಲ ಮುನಿವೃತ್ತಿಯಿಂದಿದ್ದು ಜಪ ತಪೋನುಷ್ಠಾನ ಗೈದರೆ ಆ ಪುಣ್ಯದಿಂದ ಅವನ ಹಿಂದಿನ ಪಾಪ ಕಳೆದು ಅವನಿಗೆ ಮುಂದೆ ರಾಜ್ಯಾರೋಹಣ ಮಾಡಲು ಅರ್ಹತೆ ಉಂಟಾಗುವದು, ಅವನ ಕುಲವೂ ಪವಿತ್ರವಾಗುವದು ಎಂದು ಅರಿತು ವಶಿಷ್ಠರು ಅವನ ರಾಜ್ಯತ್ಯಾಗವನ್ನು ತಡೆಯಲಿಲ್ಲ. ಸತ್ಯವ್ರತನ ಅಧರ್ಮಾಚರಣೆಯಿಂದ ಆ ರಾಜ್ಯದಲ್ಲಿ ಹನ್ನೆರಡು ವರ್ಷ ಕ್ಷಾಮಡಾಮರಗಳು ಉಂಟಾಗಿದ್ದವು. ಒಂದು ಹನಿ ನೀರು, ಒಂದು ತುತ್ತು ಅನ್ನ ಕಾಣದೇ ಜನ ಕಂಗಾಲಾಗಿದ್ದರು. ವಿಶ್ವಾಮಿತ್ರನ ಕುಟುಂಬವು ಕಂಗೆಟ್ಟು ಹೋಗಿದ್ದಿತು. ಈ ಸಂದರ್ಭದಲ್ಲಿ ವಿಶ್ವಾಮಿತ್ರನ ಕುಟುಂಬವನ್ನು ಸಾಕುವ ಹೊಣೆ ಹೊತ್ತ ಸತ್ಯವ್ರತ ಒಂದು ದಿನ ಆ ಮುನಿಪರಿವಾರಕ್ಕೆ ಆಹಾರ ಯಾವುದೂ ದೊರಕದಂತಾದಾಗ ದುಡುಕಿ ಒಂದು ಅಚಾತುರ್ಯದ ಕಾರ್ಯ ಮಾಡಿದ. ಅಲ್ಲಿಯೇ ಹುಲ್ಲುಗಾವಲಿನಲ್ಲಿ ವಶಿಷ್ಠರ ಹಸು ಮೇಯುತ್ತಲಿತ್ತು. ಮೊದಲಿನಿಂದಲೂ ವಶಿಷ್ಠರ ಮೇಲೆ ಬೇಸರವಿದ್ದ ಸತ್ಯವ್ರತನು ವಶಿಷ್ಠನ ಆಕಳನ್ನು ಕೊಂದ. "ನನಗೋಸ್ಕರ ಕೊಂದಿಲ್ಲ. ಮುನಿಕುಟುಂಬದ ಪೋಷಣೆಗಾಗಿ" ಎಂದು ತಾನೇ ಸಮಾಧಾನಿಸಿಕೊಂಡು ಅದನ್ನು ಬೇಯಿಸಿ ವಿಶ್ವಾಮಿತ್ರನ ಕುಟುಂಬಕ್ಕೆ ಬಡಿಸಿದ. ಇದನ್ನು ತಿಳಿದ ವಶಿಷ್ಠರು ಕೆರಳಿ ಕೆಂಡವಾದರು. ಇಂತು ನುಡಿದರು "ಪಾಪಿಯಾದ ರಾಜಕುಮಾರ! ನೀನು ಈಗ ಹೊಸ ಎರಡು ಪಾಪಗಳನ್ನು ಮಾಡಿರದಿದ್ದರೆ ನಿನ್ನ ಮೊದಲಿನ ಪಾಪವನ್ನು ಹೋಗಲಾಡಿಸುತ್ತಿದ್ದೆ. ಗುರುವಿನ ಗೋವನ್ನು ವಧಿಸಿದ್ದು, ತಂದೆಗೆ ದುಃಖವನ್ನು ಉಂಟುಮಾಡಿದ್ದು, ಹೆರವರಿಗೆ ಗೊತ್ತಾದ ಹೆಣ್ಣನ್ನು ಅಪಹರಿಸಿದ್ದು ಹೀಗೆ ಮೂರು ಪಾಪಗಳನ್ನು ಆಚರಿಸಿದ್ದರಿಂದ ತ್ರಿಶಂಕು ಎಂದು ನಿನಗೆ ಹೆಸರು ಬರಲಿ." ವಶಿಷ್ಠರ ಈ ಮಾತಿನಂತೆ ಮುಂದೆ ಸತ್ಯವ್ರತನಿಗೆ ತ್ರಿಶಂಕು ಎಂದು ಪ್ರಸಿದ್ಧಿ ಆಯಿತು. ಹನ್ನೆರಡು ವರ್ಷದ ಬಳಿಕ ಸುವೃಷ್ಟಿ ಆಗಿ ಬರಗಾಲದ ಬರ ತಪ್ಪಿತು. ವಿಶ್ವಾಮಿತ್ರರ ಹನ್ನೆರಡು ವರ್ಷದ ಗಡುವಿನ ತೀಕ್ಷ್ಣ ತಪೋನುಷ್ಠಾನವು ಮುಕ್ತಾಯವಾಯಿತು. ಅವರು ಹೈಮಾಚಲದ ಉತ್ತುಂಗ

ಶೃಂಗದಿಂದ ಇಳಿದು ತಮ್ಮ ಮಡದಿ ಮಕ್ಕಳು ಇದ್ದ ಸ್ಥಾನಕ್ಕೆ ಬರುವಾಗ ದಾರಿಯಲ್ಲಿಯೇ ಈ ರಾಜ್ಯದಲ್ಲಿ ಹನ್ನೆರಡುವರ್ಷ ಭೀಕರಬರಗಾಲ ಬಂದುದರ ಸಮಾಚಾರ ತಿಳಿಯಿತು. ಇಲ್ಲಿಯೇ ವಾಸಿಸಿದ್ದ ತನ್ನ ಹೆಂಡತಿ ಮಕ್ಕಳ ಪರಿಸ್ಥಿತಿ ಏನಾಗಿದೆಯೋ ಎಂಬ ಚಿಂತೆಯೂ ಆಯಿತು. ಮನೆಗೆ ಬಂದು ನೋಡಿದರು. ಪತ್ನಿ ಪುತ್ರರೆಲ್ಲರೂ ಸುರಕ್ಷಿತರಾಗಿ ಆ ಪ್ರದೇಶದಲ್ಲೆಲ್ಲ ಹಬ್ಬಿದ ಕ್ಷಾಮಡಾಮರಗಳಿಂದ ಕೊಂಚವೂ ಕ್ಷೀಣರಾಗದೇ ಹೃಷ್ಟಪುಷ್ಟರಾಗಿಯೇ ಇದ್ದರು. ಬರಗಾಲದ ಈ ಘೋರಕಾಲದಲ್ಲಿ ಹನ್ನೆರಡು ವರ್ಷ ಸತ್ಯವ್ರತನೇ ತನ್ನ ಮಡದಿ ಮಕ್ಕಳನ್ನು ಕಾಪಾಡಿದ ಎಂಬ ಸುದ್ದಿ ತಿಳಿದು ವಿಶ್ವಾಮಿತ್ರರಿಗೆ ಸತ್ಯವ್ರತನಲ್ಲಿ ಪ್ರಸನ್ನತೆ ಉಂಟಾಯಿತು. ತ್ರಿಶಂಕುವನ್ನು ಕೂಡಲೇ ಬಳಿಗೆ ಕರೆಯಿಸಿದರು. ''ನನಗೆ ನಿನ್ನ ಕಾರ್ಯದಿಂದ ಸಂತೋಷವಾಗಿದೆ. ಬೇಡಿದ ವರ ನೀಡುತ್ತೇನೆ, ಬೇಕಾದ ವರ ಬೇಡು'' ಎಂದರು.

ತ್ರಿಶಂಕುವಿನ ಮನದಲ್ಲಿ ಬಹುಕಾಲದಿಂದ ಬಯಕೆಯೊಂದು ಮನೆಮಾಡಿತ್ತು. ತಾನು ಸ್ವರ್ಗಕ್ಕೆ ಹೋಗಬೇಕು. ಆ ದೇವಲೋಕದಲ್ಲಿ ಮಂದಾಕಿನೀ ತೀರದಲ್ಲಿ ನಂದನವನದಲ್ಲಿ ರಂಭಾ, ಊರ್ವಶೀ ಮೊದಲಾದ ಸುರಸುಂದರಿಯರ ಜೊತೆಗೆ ಸ್ವಚ್ಛಂದವಾಗಿ ವಿಹರಿಸಬೇಕು. ಅಮೃತವನ್ನು ಅನುಭವಿಸಬೇಕು. ಆದರೆ ಇದೆಲ್ಲ ಸತ್ತಮೇಲಲ್ಲ. ಬದುಕಿ ಇದ್ದಾಗಲೇ ಇದೇ ಮಾನವ ದೇಹದಿಂದ ಸ್ವರ್ಗೀಯ ಸುಖವನ್ನು ಸವಿಯಬೇಕು. ಆದರೆ ಈ ಬಯಕೆ ಪೂರ್ಣವಾಗುವದೆಂತು? ತಾನು ಸಾಯದೇ ಸ್ವರ್ಗ ಸಿಗುವಂತಿಲ್ಲ. ಸ್ವರ್ಗವಿಲ್ಲದೇ ದಿವ್ಯ ಸುಖವಿಲ್ಲ. ಆದುದರಿಂದ ಅವನು ತನ್ನ ಈ ಅತ್ಯುತ್ಕಟವಾದ ಆಕಾಂಕ್ಷೆಯನ್ನು ಅಶಕ್ಯ ಎಂದು ಅದುಮಿ ಹಿಡಿದಿದ್ದ. ಈಗ ವಿಶ್ವಾಮಿತ್ರನಂಥ ಮಹಾಮುನಿ ಬೇಡಿದ್ದನ್ನು ಕೊಡುವೆನೆಂದು ಅಭಯಹಸ್ತದ ವರಮುದ್ರೆಯನ್ನು ತೋರಿ ಹೇಳಿದಾಗ ಅವನು ಇದೇ ದೇಹದಿಂದಲೇ ತನ್ನನ್ನು ಸ್ವರ್ಗಕ್ಕೆ ಕಳಿಸಬೇಕೆಂದು ಕೇಳಿಕೊಂಡ. ಹನ್ನೆರಡು ವರ್ಷ ಮಡದಿ ಮಕ್ಕಳನ್ನು ಕಾಪಾಡಿ ಅವನು ಮಾಡಿದ ಉಪಕಾರಕ್ಕಾಗಿ ವಿಶ್ವಾಮಿತ್ರಮುನಿ ಕೃತಜ್ಞತಾ ಭಾರದಿಂದ ಬಗ್ಗಿ ಹೋಗಿದ್ದ. ಅವನು ಕೇಳಿದ ಯಾವ ಮಾತಿಗೂ ''ಇಲ್ಲ'' ಎಂದು ಹೇಳುವ ಮನಸ್ಥಿತಿಯೇ ವಿಶ್ವಾಮಿತ್ರಮುನಿಯದಾಗಿರಲಿಲ್ಲ. ಮೊದಲು ವಿಶ್ವಾಮಿತ್ರರು ತ್ರಿಶಂಕುವನ್ನು ಅಯೋಧ್ಯಾ ಸಾಮ್ರಾಜ್ಯದ ಸಾರ್ವಭೌಮ ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜ್ಯಾಭಿಷೇಕಮಾಡಿದರು. ಅನಂತರ ತಾವೇ ಪುರೋಹಿತರಾಗಿ ಅವನ ಕಡೆಯಿಂದ ಯಜ್ಞ ಮಾಡಿಸಿದರು. ಎಲ್ಲ ದೇವತೆಗಳೂ, ಋಷಿಗಳೂ, ವಶಿಷ್ಠ ಮೊದಲಾದ ಬ್ರಹ್ಮಜ್ಞಾನಿಗಳೂ ನೋಡನೋಡುತ್ತಿರುವಂತೆಯೇ ಮರ್ತ್ಯಲೋಕದ ಮಾನವ ಮಾತ್ರನಾದ ಆ ಸತ್ಯವ್ರತನನ್ನು ಸ್ವರ್ಗದ ಸೀಮೆಗೆ ಸೇರಿಸಿದರು.

ಆ ತ್ರಿಶಂಕುವಿಗೆ ಸತ್ಯರಥಾದೇವಿಯೆಂಬ ಹೆಂಡತಿ ಇದ್ದಳು. ಅವಳು ಕೇಕಯ ರಾಜನ ಮಗಳು. ಈ ತ್ರಿಶಂಕು ಸತ್ಯರಥಾ ದಂಪತಿಗಳಿಂದ ಹುಟ್ಟಿದ ಸತ್ಯಸಂಧನಾದ ರಾಜರ್ಷಿಯೇ ಹರಿಶ್ಚಂದ್ರ. ಈ ಹರಿಶ್ಚಂದ್ರ ತಾನು ಚಕ್ರವರ್ತಿಯಾಗಿ ಇದ್ದಾಗ ದೊಡ್ಡ ಪ್ರಮಾಣದಲ್ಲಿ ಮಹತ್ತರವಾದ ರಾಜಸೂಯಯಾಗವನ್ನು ನೆರವೇರಿಸಿದ. ಅವನ ಮಗ ರೋಹಿತಾಶ್ವ. ರೋಹಿತಾಶ್ವನ ಪುತ್ರ ಹರಿತ. ಹರಿತನ ತನುಜ ಚಂಚುಕುಮಾರ. ಆ ಚಂಚುರಾಜನ ಸತ್ಪುತ್ರನೇ ವಿಜಯಕುಮಾರ. ಸಮಗ್ರ ಪೃಥ್ವೀ ಮಂಡಲವನ್ನೆಲ್ಲ ಗೆದ್ದುದರಿಂದ ಅವನಿಗೆ 'ವಿಜಯ' ಎಂಬ ಶೌರ್ಯ ಮೂಲಕವಾದ ಶುಭನಾಮ ಬಂದಿತ್ತು. ರುರುಕ ಈ ವಿಜಯನ ಪುತ್ರ. ಅವನು ಧರ್ಮನಿಷ್ಠ. ಈ ರುರುಕನ ಮಗನೇ ವೃಕ. ಬಾಹುರಾಜ ಈ ವೃಕರಾಜನ

ಚಿರಂಜೀವ. ಈ ಬಾಹುರಾಜನ ಆಡಳಿತ ಕಾಲದಲ್ಲಿ ಹೈಹಯ ಮತ್ತು ತಾಲಜಂಘರೆಂಬ ವೈರಿವೃಂದದ ವೀರರಾಜರು ಬಲಿತು ಅಂಜಿಕ್ಕರಾಗಿ ಕುಳಿತಿದ್ದರು. ಅವರೆಲ್ಲರೂ ಪ್ರಚಂಡ ಸೇನಾ ಸನ್ನಾಹದೊಂದಿಗೆ ಏರಿ ಬಂದು ಸೌಮ್ಯ ಶಾಂತಸ್ವಭಾವದ ಬಾಹುರಾಜನನ್ನು ಸೋಲಿಸಿದರು. ಎಲ್ಲವನ್ನೂ ಕಳೆದುಕೊಂಡು ಕಾಡುಪಾಲಾದ ಈ ಬಾಹುರಾಜ. ಅವನಿಗೆ ಇಬ್ಬರು ಮಡದಿಯರು.ಈ ರಾಜಕುಟುಂಬವೆಲ್ಲವೂ ತಲೆಮರೆಸಿಕೊಂಡು ಗಹನ ಗಾಢವಾದ ಕಾಡು ಬೀಡುಗಳಲ್ಲಿ ಕಷ್ಟದಿಂದ ಕಾಲ ಹಾಕುತ್ತಿದ್ದರು. ಶಕ, ಯವನ, ಪಾರದ, ಕಾಂಭೋಜ, ಪನ್ಹವ ಎಂಬ ಗುಂಪಿನ ರಾಜರು ಹೈಹಯ ಹಾಗೂ ತಾಲಜಂಘರಿಗೆ ಸಹಾಯಮಾಡಿದರು. ಎಲ್ಲರೂ ಸೇರಿ ಬಾಹುರಾಜನ ಸಾಮ್ರಾಜ್ಯವನ್ನೆಲ್ಲಾ ಅಪಹರಿಸಿದರು. ಬಾಹುರಾಜನ ಸೇನಾಧಿಪತಿ, ಅನುಯಾಯಿಗಳು ಎಲ್ಲರೂ ಇವರಿಗೆ ಸೋತು ಶರಣು ಹೋದರು. ಅರಣ್ಯದಲ್ಲಿ ಬಗೆಬಗೆಯ ಕಷ್ಟನಷ್ಟಗಳನ್ನು ಅನುಭವಿಸಿದ ಬಾಹುರಾಜನು ಇದೇ ಚಿಂತೆಯಲ್ಲಿ ಮರಣ ಹೊಂದಿದ. ಆಗ ಅವನ ಧರ್ಮಪತ್ನಿಯಾದ ಯಾದವೀ ದೇವಿಯು ಗರ್ಭಿಣಿಯಾಗಿದ್ದಳು. ಪತಿಯು ಮರಣಿಸಿದ್ದನ್ನು ಕಂಡು ಅವಳು ಸತೀ ಹೋಗಲು ನಿರ್ಧರಿಸಿದಳು. ಚಿತೆಯನ್ನು ಸಿದ್ಧಪಡಿಸಿದಳು. ಈ ಸಮಾಚಾರವನ್ನು ತಿಳಿದು ಭೃಗುವಂಶದ ಔರ್ವ ಮುನಿಗಳು ಅಲ್ಲಿಗೆ ಧಾವಿಸಿ ಬಂದು ಅವಳನ್ನು ತಡೆದರು. ಗರ್ಭಿಣೀ ಸ್ತ್ರೀಯರು ಸಹಗಮನ ಮಾಡಕೂಡದು ಎಂದು ಹೇಳಿ ಚಿತೆ ಏರಲು ಹೊರಟ ರಾಣಿಯನ್ನು ತಡೆದರು. ಅವರ ಮಾತು ಕೇಳಿ ಮಹಾರಾಣಿಯು ಸಹಗಮನದಿಂದ ಪರಾವೃತ್ತಳಾದಳು. ಆದರೆ ಅವಳ ಸವತಿಗೆ ಇವಳು ಗರ್ಭಿಣಿಯಾದದ್ದು ಸಹನವಾಗದೇ ಇವಳಿಗೆ ವಿಷವಿಕ್ಕಿದಳು. ಇದನ್ನು ಕೇಳಿ ತಿಳಿದ ಔರ್ವ ಮುನಿಗಳು ಮಹಾರಾಣಿಯನ್ನು ತಮ್ಮ ಆಶ್ರಮಕ್ಕೆ ಕರೆಯಿಸಿಕೊಂಡರು. ಅಲ್ಲಿಯೇ ಅವಳ ಸುಖಪ್ರಸವ ಆಗಿ ಗಂಡು ಮಗುವನ್ನು ಹೆತ್ತಳು. ಸವತಿ ಉಣಿಸಿದ 'ಗರ' ಎಂದರೆ ನಂಜಿನೊಂದಿಗೆ ಹುಟ್ಟಿಬಂದದ್ದರಿಂದ ಆ ಮಗು ಸಗರ ಎಂದು ಪ್ರಸಿದ್ಧವಾಯಿತು. ಆ ರಾಜಕುಮಾರನಿಗೆ ಕ್ಷತ್ರಿಯೋಚಿತವಾದ ಜಾತಕರ್ಮಾದಿ ಸಂಸ್ಕಾರಗಳನ್ನು ಔರ್ವ ಮುನಿಗಳು ಮಾಡಿದರು. ಶಸ್ತ್ರ ಹಾಗೂ ಶಾಸ್ತ್ರ ಎರಡರಲ್ಲೂ ಪಳಗಿ ಪರಿಣತ ಪ್ರಜ್ಞನಾಗುವಂತೆ ಮಾಡಿದರು. ಎಲ್ಲವನ್ನು ಆ ರಾಜಕುಮಾರನಿಗೆ ಕಲಿಸಿ ಕೊನೆಗೆ ಅಮೋಘವಾದ ಆಗ್ನೇಯಾಸ್ತ್ರವನ್ನು ಉಪದೇಶಿಸಿದರು. ಪ್ರಚಂಡವಾದ ಆಗ್ನೇಯಾಸ್ತ್ರ ದೇವತೆಗಳಿಗೆ ದುಸ್ಸಹ, ದಾನವರಿಗೆ ದುರ್ಭರ. ಮಾನವರಿಗಂತೂ ತಕ್ಷಣದಲ್ಲಿಯೇ ದಾಹಕ ಮತ್ತು ಮಾರಕ. ಆ ಅಗ್ನೇಯಾಸ್ತ್ರದ ಬಲದಿಂದ ಸಗರ ಕುಮಾರ ಶಕ, ಯಮನ, ಕಾಂಭೋಜ, ಪಾರದ, ಪನ್ಹವರಿಂದ ಒಡಗೂಡಿದ ಹೈಹಯ ತಾಲಜಂಘರನ್ನು ಹೋರಾಡಿ ಹಣಿದ. ಅವನಿಂದ ನಿರ್ದಯವಾಗಿ ಮರ್ದಿಸಲ್ಪಟ್ಟ ಆ ಎಲ್ಲ ವೈರಿ ವೃಂದದ ವೀರವರೇಣ್ಯರು ತರುಣ ರಾಜಕುಮಾರನಾದ ಸಗರನ ಘೋರಾಸ್ತ್ರ ಪ್ರಹಾರಗಳನ್ನು ತಾಳಲಾರದೇ ವಶಿಷ್ಠರಿಗೆ ಶರಣು ಹೋದರು. ಆಗ ವಶಿಷ್ಠರು ಅಭಯ ನೀಡಿ ಅವರನ್ನು ಕೊಲ್ಲಬಾರದು ಎಂದು ಹೇಳಿ ಸಗರ ಕುಮಾರರನ್ನು ತಡೆದರು. ಆಗ ಸಗರನು ಗುರುಗಳ ಅಣತಿಗೆ ತಲೆಬಾಗಿ ಅವರನ್ನು ಕೊಲ್ಲದೇ ಅವರ ವೇಷವನ್ನು ಬದಲಾಯಿಸಿ ತನ್ನ ಪ್ರತಿಜ್ಞೆಯನ್ನು ಪೂರಯಿಸಿಕೊಂಡ. ಶಕರತಲೆಯನ್ನು ಅರ್ಧ ಬೋಳಿಸಿದ. ಯವನ ಮತ್ತು ಕಾಂಭೋಜರ ತಲೆಗಳನ್ನು ಪೂರ್ಣ ಮುಂಡನ ಮಾಡಿ ಬೀಳ್ಕೊಟ್ಟ. ಪಾರದರಿಗೆ ಪೂರ್ಣ ಕೂದಲು

ಗಳನ್ನು ಸ್ವಲ್ಪವೂ ಕತ್ತರಿಸದೆಯೇ ಹಾಗೆಯೇ ಬಿಡಬೇಕು ಎಂದು ಕರಾರಿನ ಮೇಲೆ ಕಳಿಸಿದ. ಗಡ್ಡ ಇರಿಸಿ ತಲೆ ಪೂರ್ಣ ದೋಳಿಸಲು ಆಜ್ಞಾಪಿಸಿದ ಪನ್ಹವರಿಗೆ ಮತ್ತು ಅವರಾರಿಗೂ ವೇದಾಧ್ಯಯನ ಹಾಗೂ ಯಜ್ಞಗಳಲ್ಲಿ ಅಧಿಕಾರವಿಲ್ಲದಂತೆ ಮಾಡಿದ.

ಹೀಗೆ ಸಗರರಾಜನು ವೈರಿ ವೃಂದದ ಮಂಡಲಾಧೀಶ್ವರರನ್ನೆಲ್ಲ ಕೊಲ್ಲದೇ ಪರಾಜಯದ ಚಿಹ್ನೆಯಾಗಿ ಅವರಿಗೆಲ್ಲ ಅವಮಾನ ಆಗುವಂತೆ ವೇಷ-ಭೂಷಣದಲ್ಲಿ ಅದಲು ಬದಲು ಮಾಡಿಸಿ ಜೀವಂತ ಬಿಡಿಸಿದನು.

ಬಾಲ್ಯದಿಂದಲೇ ಧರ್ಮಿಷ್ಠ ಆ ಸಗರಭೂಪಾಲ, ಶತ್ರು ಸಮೂಹವನ್ನೆಲ್ಲ ಗೆದ್ದು ರಾಜ್ಯದಲ್ಲಿ ಸುಸ್ಥಿರತೆ ಏರ್ಪಟ್ಟು ಎಲ್ಲೆಡೆಗೂ ಶಾಂತಿ ಸಾಮ್ರಾಜ್ಯವು ಸುಪ್ರತಿಷ್ಠವಾದ ಬಳಿಕ ಅವನು ದೊಡ್ಡದಾದ ಅಶ್ವಮೇಧಯಾಗವನ್ನು ಕೈಕೊಂಡ. ಆ ಯಜ್ಞದ ಕುದುರೆಯನ್ನು ಹಿಂಬಾಲಿಸಿ ಅನೇಕ ವೀರ ಸೇನಾಪತಿಗಳನ್ನು ಕಳಿಸಿದ. ಅವನ ಕುದುರೆಯನ್ನು ದೇವೇಂದ್ರ ಅಪಹರಿಸಿ ಪಾತಾಳಲೋಕದಲ್ಲಿ ಕಪಿಲ ಮುನಿಯ ಹಿಂದೆ ಮೇಯಲು ಬಿಟ್ಟ. ಸಗರರಾಜನ ಮಕ್ಕಳು ಕುದುರೆಯನ್ನು ಹುಡುಕುತ್ತ ಭೂಮಂಡಲದಲ್ಲಿ ಎಲ್ಲಿಯೂ ಕಾಣದೇ ನಿರಾಶರಾಗಿ ಭೂಮಿಯನ್ನು ಅಗೆದು ಪಾತಾಳಕ್ಕೆ ಇಳಿದರು. ಅಲ್ಲಿ ತಮ್ಮ ಯಜ್ಞಾಶ್ವವು ಕಂಡಿತು. ಸಗರ ಪುತ್ರರು ಕುದುರೆಯನ್ನು ಹುಡುಕಲು ಭೂಮಿಯನ್ನು ಅಗೆಯುತ್ತಿರುವಾಗ ಆದ ಸದ್ದು ಸಪ್ಪಳ ಹಾಗೂ ಗೌಜು ಗದ್ದಲಗಳಿಂದಾಗಿ ಕಪಿಲಮುನಿಯ ತಪಸ್ಸಮಾಧಿ ಭಂಗವಾಯಿತು. ಆಗ ಕಪಿಲ ಮುನಿಗೆ ಕೋಪ ಬಂದು ಅವನ ಕೆಂಗಣ್ಣಿನ ಕಿಡಿ ಹಾರಿತು. ಆ ಕಿಡಿ ಕಿಚ್ಚಾಗಿ ಸಗರ ಕುಮಾರರ ಪಾಲಿಗೆ ಪ್ರಳಯಾಗ್ನಿಯಾಗಿ ಎಲ್ಲರನ್ನೂ ಸುಟ್ಟುಹಾಕಿತು. ಬರ್ಹಿಕೇತು, ಸುಕೇತು, ಧರ್ಮರಥ, ಪಂಚನದ ಎಂಬ ನಾಲ್ಕು ಜನ ಮಾತ್ರ ಸಗರ ಪುತ್ರರು ಬದುಕಿ ಉಳಿದರು. ಅವರಿಂದಲೇ ಮುಂದೆ ಆ ಸಗರ ಸಂತತಿ ಅಭಿವೃದ್ಧಿ ಹೊಂದಿತು. ಸಗರ ಪುತ್ರರು ಅಗೆದ ದೊಡ್ಡ ತೆಗ್ಗಿನಲ್ಲಿ ನೀರು ತುಂಬಿ ತುಂಬಿ ವಿಸ್ತೃತವಾಗಿ ಅದೇ ಮುಂದೆ ಸಾಗರ ಎಂದು ಕರೆಯಲ್ಪಟ್ಟಿತು. ಅನಂತರ ಸಗರನು ಸಮುದ್ರರಾಜನಿಂದ ತನ್ನ ಅಶ್ವಮೇಧ ಕುದುರೆಯನ್ನು ಪಡೆದು ತಾನು ಪ್ರಾರಂಭಿಸಿದ ಅಶ್ವಮೇಧವನ್ನು ಪೂರ್ಣಗೊಳಿಸಿದನು. ಆ ಸಗರ ರಾಜನಿಗೆ ಅರವತ್ತು ಸಾವಿರ ಜನ ಗಂಡು ಮಕ್ಕಳು.

**ಶೌನಕಾದಿ ಋಷಿಗಳು:-** ಸರ್ವಜ್ಞನಾದ ಸೂತಾಚಾರ್ಯ, ಸಗರರಾಜನಿಗೆ ಅರವತ್ತು ಸಾವಿರ ಮಕ್ಕಳು ಜನಿಸಿದ್ದು ಹೇಗೆ?

**ಸೂತ:-** ಸಗರರಾಜನಿಗೆ ಕೇಶಿನೀ, ಸುಮತೀ ಎಂಬ ಇಬ್ಬರು ಪತ್ನಿಯರು. ವಿದರ್ಭ ರಾಜನ ಮಗಳಾದ ಕೇಶಿನಿಯೇ ಹಿರಿಯ ಹೆಂಡತಿ. ಅರಿಷ್ಟನೇಮಿಯ ಮಗಳಾದ ಸುಮತಿಯು ಎರಡನೇ ಹೆಂಡತಿ. ಇವಳು ಪರಮ ಪತಿವ್ರತೆ. ಧರ್ಮಿಷ್ಠೆ ಮತ್ತು ಸೌಂದರ್ಯಶಾಲಿನಿ. ಎಷ್ಟೋ ದಿನಗಳ ವರೆಗೆ ಸಗರರಾಜನ ಇಬ್ಬರು ಪತ್ನಿಯರು ಸಂತಾನ ಪಡೆಯಲೇ ಇಲ್ಲ. ಆಗ ಅವರು ಔರ್ವ ಮುನಿಯ ಬಳಿಗೆ ಹೋಗಿ ಪುತ್ರ ಸಂತಾನವನ್ನು ಕರುಣಿಸಬೇಕು ಎಂದು ಬಿನ್ನವಿಸಿಕೊಂಡರು. ಯಾರಿಗೆ ಎಷ್ಟು ಮಕ್ಕಳು ಬೇಕು ಎಂದು ಮುನಿಗಳು ಅವರನ್ನೇ ವಿಚಾರಿಸಿದರು. ಅವರವರ ಅಪೇಕ್ಷೆಯಂತೆ ಸುಮತಿಗೆ ಅರವತ್ತು ಸಾವಿರ ಮಕ್ಕಳು, ಕೇಶಿನಿಗೆ ವಂಶ ವೃದ್ಧಿಯನ್ನು ಮಾಡುವ ಒಬ್ಬ ಗಂಡು ಮಗನು ಆಗುವಂತೆ ಅನುಗ್ರಹಿಸಿದರು. ವಂಶಾಭಿವೃದ್ಧಿಗೆ ಮಗನನ್ನು ಬೇಡಿದ. ಕೇಶಿನಿಯು

''ಪಂಚಜನ'' ಎಂಬ ಕುಲಭೂಷಣನಾದ ಪುತ್ರನನ್ನು ಹೆತ್ತಳು. ಇನ್ನೊಬ್ಬ ಸಗರಸೀಮಂತಿನಿಯಾದ ಸುಮತಿಯು ನವಮಾಸ ತುಂಬಿದ ಬಳಿಕ ಗರ್ಭಬೀಜಗಳಿಂದ ತುಂಬಿದ ಒಂದು ಪಿಂಡವನ್ನು ಹೆತ್ತಳು. ಅದರಲ್ಲಿ ಎಳ್ಳಿನಷ್ಟು ಚಿಕ್ಕ ಚಿಕ್ಕ ಗಾತ್ರದ ಅರವತ್ತು ಸಾವಿರ ಗರ್ಭ ಬೀಜಗಳು ಘಲೋನ್ಮುಖವಾಗಿ ಇದ್ದವು. ಅವೆಲ್ಲವೂ ಎಳ್ಳಿನಷ್ಟು ಅತ್ಯಂತ ಚಿಕ್ಕದಾದ ಆಕಾರದಿಂದ ಸುಮತಿಯ ಗರ್ಭ ಗುಡಿಯನ್ನು ತುಂಬಿದ್ದವು. ಸಗರರಾಜನು ಆ ಗರ್ಭಗಳನ್ನೆಲ್ಲ ಬೇರೆ ಬೇರೆ ಘೃತಕುಂಭಗಳಲ್ಲಿ ಇರಿಸಿದ. ಅವು ದಿನ ದಿನಕ್ಕೆ ಬೆಳೆದು ಅರವತ್ತು ಸಾವಿರ ದಾಸದಾಸಿಯರ ಆರೈಕೆ ಹಾರೈಕೆಗಳಲ್ಲಿ ಪೋಷಿತವಾಗಿ ದಶಮಾಸಗಳು ಉರುಳಿದ ಬಳಿಕ ಒಬ್ಬೊಬ್ಬರಾಗಿ ಅರವತ್ತುಸಾವಿರ ಮಕ್ಕಳು ಗರ್ಭದಿಂದ ಹೊರಕ್ಕೆ ಬಂದರು. ಅವರು ತಮ್ಮ ಬಾಲ್ಯ ಸಹಜವಾದ ಲೀಲೆಗಳಿಂದ ತಂದೆ ಸಗರರಾಜನಿಗೆ ಸಂತೋಷಾತಿಶಯವನ್ನು ಉಂಟು ಮಾಡಿದರು. ಇದೇ ಸಗರ ಕುಮಾರರು ಪ್ರಬುದ್ಧರಾದ ಬಳಿಕ ತಂದೆ ಕೈಕೊಂಡ ಅಶ್ವಮೇಧಯಾಗದಲ್ಲಿ ಕುದುರೆಯ ರಕ್ಷಣೆಗಾಗಿ ಅದರ ಹಿಂದೆ ಹೋಗಿದ್ದರು. ಇಂದ್ರನು ಯಜ್ಞದ ಕುದುರೆಯನ್ನು ಕದ್ದು ಒಯ್ದಾಗ ಅವರೆಲ್ಲರೂ ಅಶ್ವಸಂಶೋಧನೆಗಾಗಿ ಪಾತಾಳ ಲೋಕಕ್ಕೆ ಹೋಗಿ ಅಲ್ಲಿ ಕಪಿಲಮುನಿಗೆ ಮಾಡಿದ ಅಪಚಾರದಿಂದ ಅವನ ಕೋಪಾಗ್ನಿಗೆ ತುತ್ತಾಗಿ ಸುಟ್ಟು ಬೂದಿಯಾಗಿ ಬಿದ್ದರು. ಹೀಗೆ ಸುಮತಿಯ ಮಕ್ಕಳೆಲ್ಲರೂ ನಷ್ಟರಾದ ಬಳಿಕ ಕೇಶಿನಿಯ ಮಗನಾದ ಪಂಚಜನ ಕುಮಾರನೇ ರಾಜ್ಯಾಭಿಷಿಕ್ತನಾದ. ಅವನ ಮಗ ಅಂಶುಮಂತ. ಅಂಶುಮಂತನ ಮಗ ದಿಲೀಪರಾಜ. ಈ ದಿಲೀಪನೇ ಖಟ್ವಾಂಗ, ಖಟ್ವಾಂಗ ಮಹಾರಾಜನು ಸತ್ಯಪ್ರತಿಜ್ಞ. ಅವನು ಒಮ್ಮೆ ದೇವತೆಗಳಿಗೆ ಸಹಾಯ ಮಾಡಲು ಸ್ವರ್ಗಕ್ಕೆ ಹೋಗಿ ಮರಳಿ ಬರುವಾಗ ಅವನ ಆಯುಷ್ಯದ ಅವಧಿ ಇನ್ನು ಒಂದು ಮುಹೂರ್ತ ಮಾತ್ರ ಇದೆ ಎಂದು ತಿಳಿಯಿತು. ಕೂಡಲೇ ತಪಸ್ಸಮಾಧಿಗಿಳಿದ. ಅಸಂಪ್ರಜ್ಞಾತ ಸಮಾಧಿಗೆ ಪ್ರವೇಶಿಸಿ ಅಖಂಡ ಧ್ಯಾನಗೈದ. ಭಕ್ತ್ಯುದ್ರೇಕದಿಂದ ಮಾಡಿದ ಆ ಧ್ಯಾನಯೋಗದಿಂದ ಒಂದು ಮುಹೂರ್ತದಲ್ಲಿಯೇ ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡು ಉದ್ಧೃತನಾದ. ರುದ್ರಗಣದಲ್ಲಿ ಒಬ್ಬನಾದ ಖಟ್ವಾಂಗ ಎಂಬ ದೇವತಾ ಪುರುಷನು ಸ್ವರ್ಗದಿಂದ ದಿಲೀಪನಾಗಿ ಅವತರಿಸಿ ಭೂಲೋಕದಲ್ಲಿ ಕೆಲಕಾಲ ರಾಜ್ಯವಾಳಿ ದೇವತೆಗಳಿಗೆ ಸಹಾಯ ಸಲ್ಲಿಸಿ ತನ್ನ ಆಯುಷ್ಯದ ಗಡುವನ್ನು ತಿಳಿದು ಭಗವದ್ಧ್ಯಾನದಿಂದ ಮುಕ್ತನಾದ. ಈ ದಿಲೀಪನಿಗೆ ಪುತ್ರನಾಗಿ ಜನಿಸಿದ ಭಗೀರಥ ದೇವಲೋಕದಿಂದ ಗಂಗಾನದಿಯನ್ನು ಭೂಲೋಕಕ್ಕೆ ಬರಮಾಡಿಕೊಂಡ. ಗಂಗೆಯನ್ನು ತನ್ನ ಮಗಳನ್ನಾಗಿ ಮಾಡಿಕೊಂಡಿದ್ದರಿಂದ ಅವಳಿಗೆ ಭಾಗೀರಥಿ ಎಂದು ಹೆಸರು ಬಂದಿತು. ಭಗೀರಥನ ಮಗ ಶ್ರುತ. ಶ್ರುತನ ಮಗ ನಾಭಾಗ. ನಾಭಾಗನ ತನುಜಾತ ಅಂಬರೀಷ. ಅಂಬರೀಷನ ಆತ್ಮಜ ಸಿಂಧುದ್ವೀಪ. ಸಿಂಧುದ್ವೀಪನ ಸುತನೇ ಅಯುತಾಜಿತ. ಪುಣ್ಯಶ್ಲೋಕನಾದ ಋತುಪರ್ಣರಾಜ ಅಯುತಾಜಿನ ವರಪುತ್ರ. ನಳಚಕ್ರವರ್ತಿಯ ಆಪ್ತಮಿತ್ರನಾದ ಋತುಪರ್ಣ ದ್ಯೂತ (ಪಗಡೆಯಾಟದ) ರಹಸ್ಯವನ್ನೆಲ್ಲ ಬಲ್ಲವನಾಗಿದ್ದ. ಆಪ್ತಪರ್ಣಿಋತುಪರ್ಣನ ಚಿರಂಜೀವ. ಅವನಿಗೆ ಸುದಾಸ ಮಗ. ಈ ಸುದಾಸ ದೇವರಾಜನಾದ ಇಂದ್ರನ ಪ್ರಿಯ ಮಿತ್ರ. ಸುದಾಸನ ತನುಜಾತನೇ ಸೌದಾಸ. ಕಲ್ಮಾಷಪಾದ ಈ ಸೌದಾಸನ ಸತ್ಪುತ್ರ. ಇವನು ತನ್ನ ಪರಾಕ್ರಮದಿಂದ ವೈರಿಮಂಡಲವನ್ನೆಲ್ಲ ಮರ್ದಿಸಿ ಶೂರಾಗ್ರಣಿ ಎಂದು ಪ್ರಸಿದ್ಧನಾಗಿದ್ದ. ಸರ್ವಕರ್ಮಕಲ್ಮಾಷಪಾದನ ಆತ್ಮಜ, ಅವನ

ತನುಜನೇ ಅನರಣ್ಯ. ಅನರಣ್ಯನ ಮಗ ನಿಘ್ನ. ಆ ನಿಘ್ನರಾಜನಿಗೆ ಅನಮಿತ್ರ, ರಘು ಎಂಬ ಇಬ್ಬರು ಮುತ್ತಿನಂಥ ಮಕ್ಕಳು ಹುಟ್ಟಿದರು. ಇಬ್ಬರೂ ಚಕ್ರವರ್ತಿಗಳಾಗಿ ಮೆರೆದರು. ದುಲಿದುಹನು ಅನಮಿತ್ರನ ವರಪುತ್ರ. ಆ ದುಲಿದುಹನಿಗೆ ಎರಡನೆಯ ದಿಲೀಪರಾಜ ವರಕುಮಾರನಾಗಿ ಜನಿಸಿದ. ಆ ದಿಲೀಪನ ಆತ್ಮ ಸಂಭೂತನಾದ ರಾಜಕುಮಾರನೇ ರಘುರಾಜ. ಮಹಾಪರಾಕ್ರಮಶಾಲಿ ಈ ರಘುಮಹಾರಾಜ. ಅಯೋಧ್ಯೆಯ ಶಾಸಕರಲ್ಲಿ ರಘುರಾಜ ತನ್ನದೇ ಆದ ಒಂದು ಇತಿಹಾಸವನ್ನೇ ನಿರ್ಮಿಸಿದ. ರಘುವಿನ ಅನಂತರದಲ್ಲಿ ಅಯೋಧ್ಯೆಯ ಪಟ್ಟಣದಲ್ಲಿ ಅಭಿಷಿಕ್ತನಾದವ ಅಜಮಹಾರಾಜ. ಅಜಮಹಾರಾಜನ ಪುಣ್ಯ ಪುತ್ರನೇ ದಶರಥರಾಜ. ದಶರಥನ ಮಗನೇ ಸಾಕ್ಷಾತ್ ಶ್ರೀಹರಿಯ ಅವತಾರ ಭೂತನಾದ ಶ್ರೀರಾಮಚಂದ್ರ ಮಹಾಪ್ರಭು. ಆ ರಾಮನ ಹಿರಿಯ ಮಗನೇ ಕುಶ, ಆ ಕುಶನಿಂದ ಮುಂದೆ ಅತಿಥಿ, ನಿಷಧ, ನಲ, ನಭ, ಪುಂಡಲೀಕ, ಕ್ಷೇಮಧನ್ವ, ದೇವಾನೀಕ, ಅಹೀನಗು, ಸುಧನ್ವ, ಶಲ, ಉಕ್ಕ, ವಜ್ರನಾಭ, ದ್ವಿತೀಯನಲ ಮುಂತಾದ ರಾಜಕುಮಾರರು ಒಬ್ಬರಾದ ಮೇಲೆ ಒಬ್ಬರು ಪಿತೃಪರಂಪರೆಯಿಂದ ಪಟ್ಟಾಭಿಷಕ್ತರಾಗಿ ಅಖಂಡ ಭೂಮಂಡಲವನ್ನು ಧರ್ಮ, ನ್ಯಾಯ, ನೀತಿಗಳಿಂದ ಯಶಸ್ವಿಯಾಗಿ ಆಳಿದರು.

ಪುರಾಣದಲ್ಲಿ ವೀರಸೇನನ ಮಗನಾದ ಒಬ್ಬ ಚಕ್ರವರ್ತಿಯೂ ಇಕ್ಷ್ವಾಕು ಕುಲದಲ್ಲಿ ಇನ್ನೊಬ್ಬ ಚಕ್ರವರ್ತಿಯೂ ಪ್ರಸಿದ್ಧರಾಗಿದ್ದಾರೆ. ಇಕ್ಷ್ವಾಕು ವಂಶದ ರಾಜರಲ್ಲಿ ಮುಖ್ಯ ಮುಖ್ಯರಾದವರನ್ನು ನಾನು ಹೇಳಿದ್ದೇನೆ. ಸೂರ್ಯವಂಶದ ರಾಜಮಹಾರಾಜರ ಈ ವಿಸ್ತಾರವನ್ನು ಕೇಳಿದವರು ಇಹದಲ್ಲಿ ಸಂತಾನ ಸೌಭಾಗ್ಯಗಳನ್ನು ಪಡೆದು, ಪರದಲ್ಲಿ ಲೋಕವನ್ನು ಹೊಂದುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂರನೇಯ ಅಧ್ಯಾಯ ಮುಗಿದುದು*

—o—

## ಸೋಮೋತ್ಪತ್ತಿ

**ಅಧ್ಯಾಯ - ೪**

**ಲೋಮಹರ್ಷಣ:-** ಮುನಿಗಳೆ, ನಿಮಗೆ ನಾನು ಈ ವರೆಗೆ ಸೂರ್ಯವಂಶವು ಭುವನ ಮಂಡಲದ ತುಂಬ ಹಬ್ಬಿ ಬೆಳೆದ ಬಗೆಯನ್ನು ವಿಸ್ತಾರವಾಗಿ ನಿರೂಪಿಸಿದೆ. ಈಗ ಚಂದ್ರ ಹಾಗೂ ಚಂದ್ರವಂಶದ ಹುಟ್ಟು-ಹರವು ಮಹಾತ್ಮ್ಯಗಳನ್ನು ಹೇಳುತ್ತೇನೆ ಕೇಳಿರಿ. ಸೃಷ್ಟಿಯ ಆದಿಕಾಲ, ಬ್ರಹ್ಮನಲ್ಲಿ ಮೊಟ್ಟಮೊದಲು ಸಿಸೃಕ್ಷೆಯ ಅಂಕುರೋದಯ. ಅವನ ಸಂಕಲ್ಪದಂತೆ ಮೊದಲು ಜನಿಸಿದವರು ಬ್ರಹ್ಮಮಾನಸ ಪುತ್ರರಾದ ಪ್ರಜಾಪತಿಗಳು. ಅವರಲ್ಲಿ ಅತ್ರಿಯೂ ಒಬ್ಬ. ಶಾರದಾ ಪತಿಯ ಮನಸ್ಸಿನಿಂದ ಹುಟ್ಟಿದ ಮಹನೀಯ ಈ ಅತ್ರಿಮುನಿ. ಈ ಮುನಿಪುಂಗವನು ಅನುತ್ತರ ಎಂಬ ಉಗ್ರ ತಪಸ್ಸನ್ನು ಮಾಡಿದ ಎಂದು ಲೋಕದಲ್ಲಿ ಪ್ರತೀತಿ. ಅವನ ಈ ತಪಶ್ಚರ್ಯ ನಡೆದುದು ಮೂರು ಸಾವಿರ ವರ್ಷಗಳ ಸುದೀರ್ಘಕಾಲಪರ್ಯಂತ. ಇದು ಮಾನವಮಾನದಿಂದ ಅಲ್ಲ, ದೇವಮಾನದ ಮೂರುಸಾವಿರ ವರ್ಷ ಅವನ ತಪೋನುಷ್ಠಾನ. ಊರ್ಧ್ವರೇತಸ್ಕನಾದ ಆ ಮಹಾಮುನಿಯ ತೇಜಸ್ಸು ಮೇಲೆ ಕಣ್ಣಿನ ಅಂಚಿಗೆ ಬಂದಾಗ ಅದು ಹೊಮ್ಮಿ ಚಂದ್ರನ ರೂಪವನ್ನು

ತಳೆಯಿತು. ಮಹರ್ಷಿಯ ಮಂಗಳ ಕಂಗಳಿಂದ ಹರಿದ ಸುರಿದ ನೀರು ಹತ್ತು ದಿಕ್ಕುಗಳನ್ನು ಬೆಳಗಿ ಬೆಳಕನ್ನು ಉಂಟುಮಾಡಿತು. ಆ ಚಂದ್ರರೂಪವಾದ ಗರ್ಭವನ್ನು ಬ್ರಹ್ಮದೇವರಿಂದ ನಿರ್ದಿಷ್ಟರಾಗಿ ಹತ್ತು ಜನ ದೇವತಾ ಸ್ತ್ರೀಯರು ಧರಿಸಿದರು. ಅವರಾರಿಗೂ ಅತ್ರಿ ಮಹರ್ಷಿಯ ಊರ್ಧ್ವರೇನ್ಮುಖವಾಗಿ ಹಬ್ಬಿ ಹೊಮ್ಮಿ ಚಂದ್ರರೂಪದಿಂದ ರೂಪುಗೊಂಡ ರೇತಸ್ಸನ್ನು ಸಹಿಸಲು ಆಗಲಿಲ್ಲ. ಅವರೆಲ್ಲರೂ ಅದನ್ನು ಕೆಳಗೆ ಬಿಟ್ಟರು. ಆ ಗರ್ಭವು ಭೂಮಿಯಲ್ಲಿ ಬಿದ್ದಿತು. ಅದನ್ನು ಕಂಡ ಲೋಕಪಿತಾಮಹನಾದ ಬ್ರಹ್ಮ, ಭೂಮಿಯ ಮೇಲೆ ಬಿದ್ದ ಆ ಬ್ರಹ್ಮರ್ಷಿಯ ಗರ್ಭವನ್ನು ಎತ್ತಿ ರಥದ ಮೇಲೆ ಇರಿಸಿದ. ಅತ್ರಿಮುನಿಯ ಪುತ್ರನಾದ ಆ ಚಂದ್ರನು ಭೂಲೋಕದಲ್ಲಿ ಬಿದ್ದಾಗ ದೇವತೆಗಳೂ ಬ್ರಹ್ಮ ಮಾನಸಪುತ್ರರೂ ಮಹರ್ಷಿಗಳೂ ಆ ಚಂದ್ರನನ್ನು ಸ್ತೋತ್ರ ಮಾಡಿದರು. ಲೋಕಕ್ಕೆಲ್ಲ ಆಹ್ಲಾದವನ್ನುಂಟುಮಾಡುವ ಆ ಚಂದ್ರನ ಚೆಲ್ಲುವಕಾಂತಿ ಎಲ್ಲೆಡೆಯಲ್ಲಿಯೂ ಚೆಲ್ಲುವರಿಯಿತು. ಬ್ರಹ್ಮದೇವರು ನೀಡಿದ ಆ ದಿವ್ಯರಥವನ್ನು ಚಾರುಚಂದ್ರನು ಆರೋಹಣ ಮಾಡಿ ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆ ಗೈದ. ನೆಲದ ಪಾಲಾದ ಆ ಚಂದ್ರನ ಗರ್ಭದ ಕೊಂಚ ಕಿಂಚಿತ್ ತೇಜಸ್ಸಂಶ್ರಾವದಿಂದಲೇ ಈ ಭೂಲೋಕದಲ್ಲಿ ಔಷಧಿ ಲತೆಗಳು ಜನಿಸಿದವು. ಆ ವಲ್ಲೀವನಸ್ಪತಿಗಳು ಭೂಲೋಕದಲ್ಲಿ ಜನರನ್ನು ಅನೇಕ ರೋಗ ರುಜಿನಗಳಿಂದ ಸಂಜೀವಿನೀ ರೂಪದಿಂದ ಔಷಧಗಳಾಗಿ ಕಾಪಾಡುತ್ತವೆ. ಅತ್ರಿಮುನಿಯ ಮೂರು ಸಹಸ್ರ ವರ್ಷಗಳ ತೀಕ್ಷ್ಣ ತಪಸ್ಸಿನಿಂದ ತೇಜಸ್ಸನ್ನು ದೇವತಾ ಪುರುಷರ ಹರಕೆ ಹಾರೈಕೆಗಳಿಂದ ವಿಚಿತ್ರ ಶಕ್ತಿಯನ್ನು ಪಡೆದ ಚಂದ್ರಲೋಕ ಪದ್ಮಗಳ ದರ್ಶನಕ್ಕಾಗಿ ತಪಸ್ಸನ್ನು ಆಚರಿಸಿದ. ಅನಂತರ ಬ್ರಹ್ಮದೇವರು ಆ ಚಂದ್ರನನ್ನು ಬೀಜ, ಔಷಧಿ, ಲತಾ, ಬ್ರಾಹ್ಮಣ, ನೀರು, ವನಸ್ಪತಿ ಮುಂತಾದವರಿಗೆಲ್ಲ ಅಧಿರಾಜನನ್ನಾಗಿ ನಿಯಮಿಸಿದರು. ಹೀಗೆ ದ್ವಿಜರಾಜನು, ವನಸ್ಪತಿರಾಜನೂ ಎಂದೂ ಬ್ರಹ್ಮನಿಂದ ನಿಯುಕ್ತನಾದ ಶಾಂತ ಸುಂದರ ಮೂರ್ತಿಯಾದ ಆ ಚಂದ್ರನು ರಾಜಸೂಯಯಾಗ ಮಾಡಿದ. ಅದರಲ್ಲಿ ಬ್ರಾಹ್ಮಣರಿಗೆ ಕೋಟಿ ರೂಪಾಯಿ ದಕ್ಷಿಣೆ ನೀಡಿದ. ಯಜ್ಞದಲ್ಲಿ ಮುಖ್ಯ ಭಾಗವಹಿಸಿದ ಋತ್ವಿಜರಿಗೆಲ್ಲ ಮೂರು ಲೋಕಗಳನ್ನೇ ದಕ್ಷಿಣೆಯಾಗಿ ನೀಡಿದ. ಚಂದ್ರನು ಮಾಡಿದ ಆ ಯಜ್ಞದಲ್ಲಿ ಸ್ವಯಂ ಬ್ರಹ್ಮನೇ ಯಜ್ಞದ ಬ್ರಹ್ಮಸ್ಥಾನದಲ್ಲಿ ಕುಳಿತಿದ್ದ. ಅತ್ರಿ ಮತ್ತು ಭೃಗುಮುನಿಗಳು ಋತ್ವಿಜರು, ನಾರಾಯಣನು ಎಲ್ಲ ಮುನಿಗಳೊಂದಿಗೆ ಸದಸ್ಯನಾಗಿದ್ದ. ಆ ಚಂದ್ರನನ್ನು ಸಿನೀದೇವಿ, ಕುಹೂದೇವಿ, ದ್ಯುತಿ, ಪುಷ್ಪ, ಪ್ರಭಾ, ಕೀರ್ತಿ, ಧೃತಿ, ಲಕ್ಷ್ಮೀ, ವಸು ಈ ಒಂಭತ್ತು ದೇವತಾ ಗಣದ ನವನಾರೀಮಣಿಗಳು ಒಲವುದುಂಬಿ ಸೇವೆಗೈದರು. ಆ ಚಂದ್ರನು ಯಜ್ಞದ ಕೊನೆಯಲ್ಲಿ ಅವಭೃತಸ್ನಾನಮಾಡಿ ದೇವತೆಗಳಿಂದಲೂ ಋಷಿಗಳಿಂದಲೂ ಪೂಜಿತನಾದ, ಅವನ ತೇಜಸ್ಸು ಹತ್ತು ದಿಕ್ಕುಗಳಲ್ಲಿಯೂ ತಪೋದ್ದೀಪ್ತವಾಯಿತು.

ಹೀಗೆ ಹಿಂದೆ ಎಂದೂ ಯಾರೂ ಹೊಂದದ ಐಶ್ವರ್ಯ ಪಡೆಯದ ಭಾಗ್ಯ, ಲೋಕೋತ್ತರ ಗೌರವ ಇವುಗಳನ್ನು ಹೊಂದಿ ಚಂದ್ರ ಐಶ್ವರ್ಯ ಮದದಿಂದ ದಾರಿ ತಪ್ಪಿದ. ದೇವಗುರು ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರಾದೇವಿಯನ್ನು ಅಪಹರಿಸಿದ. ಎಲ್ಲ ಸುರಸತ್ತಮರು ಮುನಿಮನುಜ ಮಾನನೀಯರಾದ ಮಹನೀಯರೂ ಗುರುಪತ್ನಿಯನ್ನು ಮರಳಿ ಒಪ್ಪಿಸಲು ಹೇಳಿದರು. ಅದಕ್ಕೆ ಚಂದ್ರ ಒಪ್ಪಲಿಲ್ಲ.

ತಾರಾದೇವಿಯನ್ನು, ಅವಳ ಗಂಡನಾದ ಬೃಹಸ್ಪತ್ಯಾಚಾರ್ಯರ ಎದುರಾಳಿಯಾದ ಶುಕ್ರಾಚಾರ್ಯರು ಚಂದ್ರನ ಪಕ್ಷವನ್ನು ವಹಿಸಿದರು. ಅವರ ಶಿಷ್ಯರಾದ ದೈತ್ಯರ ಮೇಲಿನ ಅಭಿಮಾನದಿಂದ ರುದ್ರದೇವರು ಸಹ ತಮ್ಮ ಪಿನಾಕಧನುವನ್ನು ಹಿಡಿದು ಚಂದ್ರನ ಪಕ್ಷವನ್ನೇ ಬೆಂಬಲಿಸಿದರು. ಸುರಾಸುರರ ನಡುವೆ ಘನಘೋರವಾದ ಕದನವು ತಾರಾದೇವಿಯ ಮೂಲಕವಾಗಿ ಏರ್ಪಟ್ಟಿತು. ಅದಕ್ಕೆ ತಾರಕಾಮಯ ಸಂಗ್ರಾಮ ಎಂದೇ ಹೆಸರು ಬಂದಿತು. ಆ ಯುದ್ಧದಲ್ಲಿ ಮೃತರಾಗದೇ ಉಳಿದ ತುಷಿತ ಎಂಬ ದೇವತೆಗಳು ಬ್ರಹ್ಮದೇವರಿಗೆ ಶರಣುಹೋದರು. ಆಗ ಬ್ರಹ್ಮದೇವರು ಧಾವಿಸಿ ಬಂದು ಮಧ್ಯಸ್ಥರಾಗಿ ಉಭಯಪಕ್ಷದವರಿಗೂ ಹೇಳಿ ಆ ಯುದ್ಧವನ್ನು ನಿಲ್ಲಿಸಿದರು. ಆಗ ತಾರಾದೇವಿಯು ಗರ್ಭವನ್ನು ಧರಿಸಿದ್ದಳು. ಆ ಬ್ರಹ್ಮದೇವರ ಮಧ್ಯಸ್ಥಿಕೆಯಿಂದ ಚಂದ್ರನನ್ನು ತ್ಯಜಿಸಿ ತನ್ನ ಪತಿಯಾದ ಬೃಹಸ್ಪತ್ಯಾಚಾರ್ಯರ ಬಳಿಗೆ ಬಂದಳು. ಆಚಾರ್ಯರು ಕ್ರುದ್ಧರಾಗಿ ''ಆ ಗರ್ಭವನ್ನು ತ್ಯಜಿಸಿ ಬಾ'' ಎಂದು ಅಬ್ಬರಿಸಿದರು. ಆಗ ಅವಳು ಅದನ್ನು ಗಂಗಾತೀರದ ಒಂದು ಹುಲ್ಲು ಜೊಂಡಿನ ಮೇಲೆ ಇಳಿಸಿದಳು. ಹುಟ್ಟಿದೊಡನೆಯೇ ಆ ಗರ್ಭವು ಕಾಂತಿಕಿರಣದಿಂದ ಪ್ರಕಾಶಪುಂಜವಾಗಿ ಹೊಳೆಯ ತೊಡಗಿತು. ಆಗ ಬ್ರಹ್ಮದೇವರು ಇದು ಯಾರ ಮಗು? ಎಂದು ತಾರಾದೇವಿಯನ್ನೇ ಕೇಳಿದರು. ಅದಕ್ಕೆ ತಾರೆಯು ನಸುನಾಚಿ ಚಂದ್ರನದು ಈ ಗರ್ಭ ಎಂದು ಹೇಳಿದಳು. ಆಗ ಚಂದ್ರನು ಆನಂದದಿಂದ ತೇಜಸ್ಸಿನ ತಳಿಗೆಯಂತಿರುವ ಆ ಪುಟ್ಟಮಗುವನ್ನು ಎತ್ತಿಕೊಂಡು ತನ್ನ ಮನೆಗೆ ನಡೆದ. ಅವನಿಗೆ ''ಬುಧ'' ಎಂದು ಹೆಸರನ್ನು ಇಟ್ಟ. ನಕ್ಷತ್ರಮಂಡಲದ ಗ್ರಹಗಣದಲ್ಲಿ ಸೇರಿದ ಆ ಬುಧನು ತನ್ನ ತಂದೆಯಾದ ಚಂದ್ರನಿಗೆ ಎದುರಾಗಿಯೇ ಉದಿಸುವನು. ತೇಜಸ್ವಿಯಾದ ಈ ಬುಧನೇ ಮುಂದೆ ಮಿತ್ರಾವರುಣರ ಪುತ್ರಿಯಾದ ಇಳಾದೇವಿಯಲ್ಲಿ ಪುರೂರವ ಎಂಬ ರಾಜರ್ಷಿಗೆ ಜನ್ಮಕೊಟ್ಟ. ಮಹಾತ್ಮನಾದ ಪುರೂರವ ರಾಜನಿಗೆ ದೇವಲೋಕದ ಊರ್ವಶಿ ದೇವಿಯಲ್ಲಿ ಏಳು ಜನ ಮಕ್ಕಳು ಜನಿಸಿದರು. ಚಂದ್ರನ ಈ ಜನನ ಹಾಗೂ ಅಭಿವೃದ್ಧಿ ಕಥೆಯನ್ನು ಕೇಳಿದವರು ಕೀರ್ತಿವಂತರಾಗುವರು.

**ಸೂತ:-** ಮುನಿವರ್ಯರೇ ಬುಧನ ಮಗನಾದ ಪುರೂರವ ಶ್ರೇಷ್ಠರಾಜ. ದೊಡ್ಡ ಪಂಡಿತ. ಮಹಾಪರಾಕ್ರಮಿ. ನಿತ್ಯವೂ ಅಗ್ನಿಹೋತ್ರ ನೆರವೇರಿಸುತ್ತಿದ್ದ. ಸತ್ಯವಾದಿ, ಪುಣ್ಯವಂತ, ಭಾಗ್ಯವಂತ, ಭೂಲೋಕದಲ್ಲಿ ಇದ್ದೂ ಸ್ವರ್ಗೀಯ ಸೌಂದರ್ಯವನ್ನು, ದೇವತಾ ಗೌರವವನ್ನು ಪಡೆದು ಮೆರೆದ. ಊರ್ವಶಿ ಎಂಬ ದೇವಲೋಕದ ಗಣಿಕೆ ಅವನ ರೂಪ ಗುಣಗಳಿಗೆ ಮಾರುಹೋಗಿ ತಾನು ದೇವತಾ ಸ್ತ್ರೀ ಎಂಬ ಹಮ್ಮು ಬಿಮ್ಮುಗಳನ್ನು ಬಿಟ್ಟು ಅವನನ್ನು ವರಿಸಿದಳು. ಆ ಸುರಸುಂದರಿಯೊಡನೆ ಪುರೂರವನು ಭೂಲೋಕದಲ್ಲಿಯೇ ಇದ್ದು ಐವತ್ತೊಂಭತ್ತು ವರ್ಷಗಳ ಕಾಲ ಕಾಮ ಕೇಳಿ ಸುಖವನ್ನು ಅನುಭವಿಸುತ್ತ ಸ್ವಚ್ಛಂದ ವಿಹಾರಗೈದ. ಚೈತ್ರರಥ, ಅಲಕಾಪುರಿ, ನಂದನವನ, ಗಂಧಮಾದನಪರ್ವತ, ಮೇರುಪರ್ವತದ ಉತ್ತರ ದಿಕ್ಕಿನ ಶೃಂಗಾಂಗಣ ಮುಂತಾದ ನಿಸರ್ಗ ಸುಂದರವಾದ ರಮಣೀಯ ಸ್ಥಾನಗಳೆಲ್ಲೆಲ್ಲ ವಿಹಾರ ನಡೆಯಿತು. ಆ ಊರ್ವಶೀ ಪುರೂರವರ ಮಧುಚಂದ್ರ ವಿಹಾರ, ಗಂಗಾನದಿಯ ಉತ್ತರ ತೀರದಲ್ಲಿ ಇರುವ ಪರಮ ಪವಿತ್ರ ಕ್ಷೇತ್ರ ಎನಿಸಿದ ಪ್ರತಿಷ್ಠಾನನಗರದ (ಪ್ರಯಾಗ)ವರೆಗೂ ಹಬ್ಬಿದ್ದಿತು. ಅದು ಆ ಪುರೂರವನ ಮುಖ್ಯ ರಾಜಧಾನಿ ಆಗಿದ್ದಿತು. ಆ ಊರ್ವಶೀ ಪುರೂರವ ದಂಪತಿಗಳಿಗೆ ಆಯು, ಅಮಾವಸು,

ವಿಶ್ವಾಯು, ಶ್ರುತಾಯು, ದೃಢಾಯು, ವನಾಯು, ಬಹ್ವಾಯು ಎಂಬ ಏಳು ಜನ ರತ್ನದಂಥ, ಪುತ್ರರು ಜನಿಸಿದರು. ಪುರೂರವ ಪುತ್ರನಾದ ಅಮಾವಸುವಿನಿಂದ ಮುಂದೆ ಭೀಮ ಚಕ್ರವರ್ತಿ, ಅವನಿಗೆ ಕಾಂಚನಪ್ರಭಾ, ಅವನಿಂದ ಸುಹೋತ್ರಾ ಮುಂತಾದ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಜನಿಸಿದರು. ಸುಹೋತ್ರನಿಗೆ ಕೇಳಿನೀ ದೇವಿಯಲ್ಲಿ ಜಹ್ನು ಎಂಬ ಪರಾಕ್ರಮ ಶಾಲಿಯಾದ ಪುತ್ರ ಜನಿಸಿದ. ಈ ರಾಜಕುಮಾರ ಸರ್ಪಯಾಗವನ್ನು ಮಾಡಿ ದುಷ್ಟ ನಾಗರನ್ನೆಲ್ಲ ಸಂಹರಿಸಿದ. ಮುಂದೆ ಕೆಲಕಾಲದ ನಂತರ ಅವನಿಗೆ ವೈರಾಗ್ಯ ಉದಿಸಿತು. ರಾಜ್ಯ ಐಶ್ವರ್ಯವನ್ನೆಲ್ಲ ಪರಿತ್ಯಜಿಸಿದ. ಪುಣ್ಯಾರಣ್ಯಗಳಲ್ಲಿ ನಿಂತು ತಪಸ್ಸುಗೈದ. ಮಹರ್ಷಿ ಎನಿಸಿದ.

ಹೀಗೆ ರಾಜತೇಜ, ಬ್ರಹ್ಮತೇಜ ಎರಡರಿಂದಲೂ ಕೂಡಿ ದೇದೀಪ್ಯಮಾನನಾಗಿ ಹೊಳೆದು ತೊಳಗುವ ಆ ಜಹ್ನು ಮಹರ್ಷಿಯನ್ನು ಒಲಿಸಬೇಕೆಂದು ಬಯಸಿದಳು ದೇವನದಿಯಾದ ಗಂಗೆ. ಆದರೆ ವೀತರಾಗ ಪೂತಾತ್ಮನಾದ ಆ ಮಹಾಮಹರ್ಷಿಯು ಒಲಿದು ಬಂದ ಆ ನೀರ ನಾರಿಯನ್ನು ಒಪ್ಪಲಿಲ್ಲ. ಆದರಿಂದ ಆ ದೇವನದಿಯು ಕ್ರುದ್ಧಳಾದಳು. ತನ್ನ ಪ್ರಚಂಡ ಪ್ರವಾಹವನ್ನು ಅವನ ಯಜ್ಞಶಾಲೆಯ ಮೇಲೆ ಹರಿಸಿದಳು ಆಶ್ರಮ, ಯಜ್ಞವಾಟ ಎಲ್ಲವೂ ಮುಳುಗಿ ಹೋಯಿತು ಗಂಗೆಯ ತರಂಗಾಂತದಲ್ಲಿ ಇದನ್ನು ಕಂಡು ಕಡುಕೋಪ ಉದಯಿಸಿತು, ಆ ಜಹ್ನು ಮುನಿಗೆ. ಸಿಡಿದು ಕಿಡಿಕಿಡಿ ಯಾಗಿ ಅವನು ನುಡಿದ.

**ಜಹ್ನು**:- ಮದೋನ್ಮತ್ತಳಾದ ಮಂದಾಕಿನೀ, ನೀನು ನಿಜವಾಗಿಯೂ ಮಂದಳೇ ಅಹುದು. ನಿನಗೆ ಗರ್ವ ಬಂದಿದೆಯಷ್ಟೆ. ಆ ಕೊಬ್ಬಿನಿಂದಲೇ ಇಷ್ಟು ಉಬ್ಬು ನೀರಿನ ಸೆಳೆವಿನಿಂದ ಅಬ್ಬರಿಸಿ ನನ್ನ ಆಶ್ರಮವನ್ನೆಲ್ಲ ಮುಳುಗಿಸಿಬಿಟ್ಟ, ನಿನ್ನ ಗರ್ವಕ್ಕೆ ತಕ್ಕ ಶಾಸ್ತಿ ಮಾಡುವೆ. ನಿನ್ನ ನೀರನ್ನೆಲ್ಲ ಕುಡಿದುಬಿಡುವೆ. ನಿಲ್ಲು ! ನಿಲ್ಲು ! ಎಂದು ಹೇಳಿ ಆ ನದಿಯ ನೀರನ್ನೆಲ್ಲ ನಿಮಿಷಾರ್ಧದಲ್ಲಿ ಗಟಗಟ ಕುಡಿದು ಬಿಟ್ಟ ಆ ಜಹ್ನುಮುನಿ. ಆಗ ಮಹರ್ಷಿಗಳಿಗೆಲ್ಲ ಗಾಬರಿ. ಸ್ನಾನಪಾನಕ್ಕೆಲ್ಲ ಪರಮ ಪಾವನವಾದ ದೇವನದಿಯೇ ಇನ್ನು ಇಲ್ಲದಂತಾಯಿತಲ್ಲ! ಎಂಬ ಕೊರಗು, ಆ ಮುನಿ ಮನುಜರಿಗೆಲ್ಲ. ಅವರೆಲ್ಲ ಧಾವಿಸಿ ಬಂದರು. ಜಹ್ನುಮುನಿಗೆ ಹರಿಯ ಅಡಿಯಿಂದ ಉದಿಸಿ ಬಂದ ಆ ಪುಣ್ಯ ಪಯಸ್ವಿನಿಯ ಮಹಾಮಹಿಮೆಯನ್ನು ಹೇಳಿ ಅವಳನ್ನು ಬಿಡಬೇಕು ಎಂದು ಪ್ರಾರ್ಥಿಸಿಕೊಂಡರು. ಆ ಋಷಿ ಮುನಿಮಾನ್ಯರ ಮಾತನ್ನು ಮನ್ನಿಸಿ ಜಹ್ನು ಋಷಿಯು ಗಂಗೆಯನ್ನು ಕಿವಿಯಿಂದ ಹೊರಗೆಬಿಟ್ಟ. ಅಂದಿನಿಂದ ಅವಳು ಜಹ್ನುವಿನಿಂದ ಹುಟ್ಟಿಬಂದವಳಾದುದರಿಂದ "ಜಾಹ್ನವೀ" ಎಂದು ಹೆಸರಾದಳು.

ಯುವನಾಶ್ವನ ಮಗಳಾದ ಕಾವೇರಿಯನ್ನು ಮುಂದೆ ಕೈ ಹಿಡಿದ ಜಹ್ನುಮುನಿ. ಅನಂತರ ಯುವನಾಶ್ವನ ಶಾಪದಿಂದ ಗಂಗೆಯು ಕಾವೇರಿಯನ್ನು ತನ್ನ ಅರ್ಧಭಾಗದಿಂದ ಸೇರಿಕೊಂಡಳು. ಜಹ್ನುಋಷಿಯು ತನ್ನ ನದೀನಾರಿಯಾದ ಕಾವೇರಿಯಲ್ಲಿ ಸುನದ್ಯ ಎಂಬ ಪುತ್ರನನ್ನು ಪಡೆದ. ಅಜಕ ಸುನದ್ಯನ ಪುತ್ರ. ಈ ಅಜಕನ ಮಗ ಬಲಾಕಾಶ್ವ, ಬಲಾಕಾಶ್ವನಿಗೆ ಕುಶ ಎಂಬ ಸತ್ಪುತ್ರ ಜನಿಸಿದ. ಕುಶನಿಗೆ ಕುಶಿಕ, ಕುಶನಾಭ, ಕುಶಾಂಬ ಮೂರ್ತಿಮಾನ್ ಎಂಬ ನಾಲ್ಕು ಜನ ಮಕ್ಕಳು ಜನಿಸಿದರು. ಈ ಕುಶರಾಜನು ಇಂದ್ರನಿಗೆ ಸರಿದೂಗುವ ಸಮರ್ಥ ಹಾಗೂ ಸುಂದರನಾದ ಪುತ್ರನನ್ನು ಪಡೆಯಬೇಕೆಂದು ಅಪೇಕ್ಷೆಪಟ್ಟಿದ್ದ. ಅದನ್ನು ಸಾಧಿಸಲಿಕ್ಕಾಗಿ ತಪಸ್ಸಿನ ಹೊರತು ಬೇರೆ ಉಪಾಯ ಯಾವದು? ಸಾವಿರ ವರ್ಷ ಆಚರಿಸಿದ

ಉಗ್ರತಪವನ್ನು. ಅವನ ಈ ಘೋರ ತಪಸ್ಸಿಗೆ ಸುಪ್ರೀತನಾದ ಸುರೇಂದ್ರ. ಕುಶಿಕನ ಹೆಂಡತಿಯಾದ ಕಾರುದೇವಿಯಲ್ಲಿ ತಾನೇ ಗಾಧಿರಾಜ ಎಂಬ ಹೆಸರಿನಿಂದ ಹುಟ್ಟಿಬಂದ. ಗಾಧಿರಾಜನಿಗೆ ಸತ್ಯವತಿ ಎಂಬ ಹೆಸರಿನ ಒಬ್ಬ ಮಗಳಿದ್ದಳು. ಅವಳು ಬಹು ಚೆಲುವೆ. ಶುಕ್ರಾಚಾರ್ಯರ ಚಿರಂಜೀವನಾದ ಋಚೀಕ ಮುನಿ ಆ ಮೋಹನಾಂಗಿಯ ಕೈ ಹಿಡಿದ. ರಾಜಕುಮಾರಿಯಾದ ಸತ್ಯವತಿ ಮದುವೆಯಾದ ಬಳಿಕ ಹಗಲಿರುಳೂ ಪತಿಯ ಸೇವೆಯಲ್ಲಿಯೇ ಸವೆದು ಹಣ್ಣಾದಳು. ಅವಳ ಪರಿಪರಿಯ ಸೇವೆಯಿಂದ ಸಂತಸ ದುಂಬಿದ ಪತಿ ಋಚೀಕ ಋಷಿಯು ಅವಳ ಅಪೇಕ್ಷೆಯಂತೆ ಅವಳಿಗೂ ಅವಳ ತಾಯಿಗೂ ಮಹಾತ್ಮರಾದ ಪುತ್ರರು ಜನಿಸುವಂತೆ ಮಂತ್ರಪೂತವಾದ ಚರುವನ್ನು ಸಿದ್ಧಪಡಿಸಿದ. ಮಡದಿಯನ್ನು ಕರೆದ ಮತ್ತು ಹೇಳಿದ.

**ಋಚೀಕ:-** ಶುಭಾಂಗಿ! ನಿಮ್ಮಿಬ್ಬರಿಗಾಗಿ ಎರಡು ಬೇರೆ ಬೇರೆ ಚರುಗಳನ್ನು ಸಿದ್ಧಪಡಿಸಿದ್ದೇನೆ. ಇದರಲ್ಲಿ ಒಂದನ್ನು ನೀನು, ಮತ್ತೊಂದನ್ನು ನಿನ್ನ ತಾಯಿ ಭಕ್ಷಿಸಿರಿ. ಇದರಲ್ಲಿ ಅದಲು ಬದಲು ಮಾಡಬೇಡಿರಿ ನಿಮ್ಮ ನಿಮ್ಮ ಜಾತಿ ಮನೆತನಗಳಿಗೆ ತಕ್ಕಂತೆ ಮಕ್ಕಳು ಜನಿಸಲಿ ಎಂದು ಇವುಗಳನ್ನು ನಾನು ಅಭಿಮಂತ್ರಿಸಿ ಇಟ್ಟಿದ್ದೇನೆ.

ಹೀಗೆ ಹೇಳಿ ಆ ಮುನಿ ತಪೋನುಷ್ಠಾನಕ್ಕಾಗಿ ಅರಣ್ಯಕ್ಕೆ ತೆರಳಿದ. ಇದೇ ಸಮಯದಲ್ಲಿ ಮಡದಿಯೊಡನೆ ತೀರ್ಥಯಾತ್ರೆಗೆ ಹೊರಟಿದ್ದ ಗಾಧಿರಾಜ. ಮಗಳನ್ನು ನೋಡಲು ಋಚೀಕನ ಆಶ್ರಮಕ್ಕೆ ಬಂದ. ಸತ್ಯವತಿಯು ಅವೆರಡೂ ಸಂತಾನಪ್ರದವಾದ ಚರುಗಳನ್ನು ತಾಯಿಗೆ ತೋರಿಸಿದಳು. ಅವೆರಡರ ಮಹಿಮೆಗಳನ್ನು ಹೇಳಿ ತನ್ನ ತಾಯಿಗೆ ಕೊಟ್ಟಳು. ಆದರೆ ಅವಳ ಅನವಧಾನದಿಂದ ಚರುವು ಬದಲಾಗಿ ತನ್ನ ಚರುವನ್ನು ತಾಯಿಗೆ ಕೊಟ್ಟು ತಾಯಿಯದನ್ನು ತಾನು ಭಕ್ಷಿಸಿದಳು. ಸತ್ಯಪತಿಯು ಆ ಚರುವಿನ ಮಹಿಮೆಯಿಂದ ಕ್ಷತ್ರ ಜಾತಿಗೇ ಘೋರವಾದ ಗರ್ಭವನ್ನು ಧರಿಸಿದಳು. ಗರ್ಭದ ಪ್ರಭಾವದಿಂದ ಆಗ ಅವಳು ನೋಡಲು ಕೂಡ ಭಯಂಕರಳಾಗಿದ್ದಳು. ಋಚೀಕ ಮುನಿಯು ತನ್ನ ಅಲ್ಪಾವಧಿಯ ತಪೋನುಷ್ಠಾನ ಮುಗಿಸಿ ಮನೆಗೆ ಮರಳಿದ. ಹೆಂಡತಿ ಮುಖ ನೋಡಿದ ಕೂಡಲೇ ಅವನಿಗೆ ತಿಳಿದು ಹೋಯಿತು. ಚರುಗಳ ಅದಲು ಬದಲು ಅಧ್ವಾನವಾಗಿದೆ ಎಂದು. ಆಗ ಅವನು ಉದ್ವಿಗ್ನನಾಗಿ ತನ್ನ ಕಾಂತೆಯನ್ನು ಕರೆದು ಹೇಳಿದ.

**ಋಚೀಕ:-** ಪ್ರಿಯೆ! ನಿನ್ನ ತಾಯಿಯಿಂದ ನೀನು ವಂಚಿಸಲ್ಪಟ್ಟಿರುವೆ. ನಿನ್ನನ್ನು ಮರುಳು ಮಾಡಿ ಅವಳು ನಿನ್ನ ಚರುವನ್ನು ಭಕ್ಷಿಸಿ ಬಿಟ್ಟಿದ್ದಾಳೆ. ಅವಳ ಪಾಲಿನ ಚರುವನ್ನು ನೀನು ಉಪಯೋಗಿಸಿರುವೆ. ಇದರಿಂದ ನಿನಗೆ ಹುಟ್ಟುವ ಮಗ ಕ್ರೂರ, ಕಠೋರ, ಲೋಕ ಭಯಂಕರನಾಗುವನು. ಆದರೆ ನಿನ್ನ ತಾಯಿಯ ಹೊಟ್ಟೆಯಿಂದ ಹುಟ್ಟುವ ನಿನ್ನ ತಮ್ಮನು ಮಾತ್ರ ಮಹಾತಪಸ್ವಿಯೂ ಬ್ರಹ್ಮಜ್ಞಾನಿಯೂ ಎನಿಸುವನು. ಬ್ರಹ್ಮಧರ್ಮದ ಸಾರಸರ್ವಸ್ವವೆಲ್ಲವೂ ಅವನಲ್ಲಿ ಆವಿರ್ಭವಿಸುವಂತೆ ಆ ಚರುವಿನಲ್ಲಿ ಅಂತರ್ಗರ್ಭಿತವನ್ನಾಗಿ ತುಂಬಿಸಿ ಇಟ್ಟಿದ್ದೆ. ಅಂಥಹ ಮಹಾ ಬ್ರಾಹ್ಮಣ ಮಗನಾಗಿ ಹುಟ್ಟುವ ನಿನ್ನ ತಾಯಿಗೆ; ತಮ್ಮನಾಗಿ ಬರುವ ನಿನಗೆ. ಆದರೆ ನಿನ್ನ ಹೊಟ್ಟೆಯಿಂದ ಹುಟ್ಟಿಬರುವ ಮಗನು ಮಾತ್ರ ಘೋರಾತ್ ಘೋರತರ, ಕ್ರೂರಾತ್ ಕ್ರೂರತರ. ಅವನಿಂದ ಪ್ರಚಂಡ ಪ್ರಮಾಣದಲ್ಲಿ ಕ್ಷತ್ರಿಯರ ಹಿಂಸಾಕಾಂಡ ನಡೆಯುವದು. ನೆತ್ತರು ಹೊಳೆಯಾಗಿ ಹರಿಯುವದು.

ಪತಿವ್ರತೆಯಾದ ಸತ್ಯವತಿ ಪತಿಯ ಮಾತನ್ನು ಕೇಳಿ ನಡುಗಿ ಹೋದಳು. ಕೈ ಜೋಡಿಸಿದಳು, ತಲೆಬಾಗಿಸಿದಳು. ಕಂಬನಿಗಳನ್ನು ಉದುರಿಸಿ ದೀನಳಾಗಿ ಮಾತನಾಡಿದಳು.

**ಸತ್ಯವತಿ:-** ಸ್ವಾಮಿ, ಪ್ರಸನ್ನರಾಗಿರಿ. ನನ್ನ ತಪ್ಪನ್ನು ಮನ್ನಿಸಿರಿ. ನನ್ನ ಉದರದಲ್ಲಿ ತಮ್ಮಂಥ ಬ್ರಹ್ಮಜ್ಞಾನಿಗಳಿಂದ ಕ್ರೂರ ಕರ್ಮನಾದ ಬ್ರಾಹ್ಮಣಾಧಮನು ಜನಿಸುವದು ಎಂಥ ಅನ್ಯಾಯ. ಇದನ್ನು ಹೇಗಾದರೂ ಮಾಡಿ ತಪ್ಪಿಸಿರಿ.

**ಋಚೀಕ:-** ಕಲ್ಯಾಣಿ, ನಿನಗೆ ಅಂಥ ಘೋರಗೈಮೆಯ ಗಂಡುಮಗು ಜನಿಸಲೆಂದು ನಾನೂ ಸಂಕಲ್ಪಿಸಿರಲಿಲ್ಲ. ನಿನ್ನ ಮಗನೆಂದರೆ ನನ್ನ ಮಗನೇ ತಾನೆ? ಆದರೆ ನಿನ್ನ ತಾಯಿಯ ವಂಚನೆಯಿಂದ ಎಲ್ಲವೂ ತಲೆಕೆಳಗಾಯಿತು. ನನ್ನ ಯೋಚನೆಯೆಲ್ಲವೂ ತಿರುವು ಮರುವಾಯಿತು. ಕ್ರೂರಪುತ್ರ ನಿನಗೆ ಜನಿಸುವದು ಈಗ ಅನಿವಾರ್ಯ.

**ಸತ್ಯವತಿ:-** ಪತಿಪರಮೇಶ್ವರ, ಕೈ ಹಿಡಿದ ಮಡದಿಯಾದ ನಾನು ಅರಿಯೆನೇ ನಿಮ್ಮ ಪ್ರಭಾವವನ್ನು, ಮನಸ್ಸು ಮಾಡಿದರೆ ಮತ್ತೊಂದು ಸೃಷ್ಟಿಯನ್ನೇ ನಿರ್ಮಿಸಬಲ್ಲಿರಿ ನೀವು. ಇಂಥ ತಪೋಬಲದಿಂದ ಒಡಗೂಡಿದ ನಿಮಗೆ ಓರ್ವಸತ್ಪುತ್ರನನ್ನು ಸೃಷ್ಟಿಸುವದು ಅಶಕ್ಯವೇ? ಏನಾದರೂ ಮಾಡಿರಿ. ಹೇಗಾದರೂ ಮಾಡಿರಿ. ನನಗೊಬ್ಬ ಬ್ರಾಹ್ಮಣ ಪುತ್ರನನ್ನು ಕರುಣಿಸಿರಿ. ಅವನು ''ಶಾಂತೋ ದಾಂತೋ ಉಪರತಃ ತಿತಿಕ್ಷುಃ ಸಮಾಹಿತಃ'' ಎಂದು ಉಪನಿಷತ್ತಿನಲ್ಲಿ ಹೇಳಿದಂತೆ ಶಾಂತಮೂರ್ತಿಯಾಗಬೇಕು ಧಾಂತಿ ಧಾಮನಾಗಬೇಕು. ಸೌಮ್ಯಸುಂದರನಿರಬೇಕು. ಈಗ ನನ್ನ ಹೊಟ್ಟೆಯಲ್ಲಿ ಮೂಡಿದ ಮಗುವನ್ನು ಹೇಗಾದರೂ ಮಾಡಿ ಪ್ರಶಾಂತ, ಪ್ರಸನ್ನ, ಬ್ರಹ್ಮಜ್ಞಾನಿ, ಸೌಮ್ಯ ಸತ್ಪುತ್ರನನ್ನಾಗಿ ಮಾರ್ಪಡಿಸಿರಿ. ಮೊಮ್ಮಗನು ಬೇಕಾದರೆ ಕ್ರೂರಕರ್ಮಿಯಾಗಲಿ. ಈ ನನ್ನ ಸಾಕ್ಷಾತ್ ಹೊಟ್ಟೆಯಲ್ಲಿ ಮಂತ್ರ ಪ್ರಭಾವದಿಂದ ಬರಬೇಕಾದ ಧೈರ್ಯ, ಶೌರ್ಯ, ಕ್ರೌರ್ಯ, ಕಾಠಿಣ್ಯ, ನಿಷ್ಕಾರುಣ್ಯ, ನಿರ್ದಾಕ್ಷಿಣ್ಯಾದಿ ಕ್ಷಾತ್ರ ಗುಣಗಳನ್ನೆಲ್ಲ ಒಂದು ತಲೆಮಾರು ಮುಂದಕ್ಕೆ ಹಾಕಿರಿ. ಮೊಮ್ಮಗನಿಗೆ ವರ್ಗಾಯಿಸಿರಿ.

ಋಚೀಕನು ತನ್ನ ಬುದ್ಧಿವಂತಳಾದ ಭಾರ್ಯೆಯು ಮಾಡಿದ ಹಂಚಿಕೆಯನ್ನು ಒಪ್ಪಿದ. ಅದರಂತೆ ತನ್ನ ತಪೋಮಹಿಮೆಯಿಂದ ಪುತ್ರನ ಬದಲಾಗಿ ಕ್ಷಾತ್ರನ ತಲೆಗೆ ಸಾಗು ಹಾಕಿದ ರಾಜಸಭಾವವನ್ನೆಲ್ಲ. ಮುಂದೆ ಸತ್ಯವತಿಯು ಪತಿಯ ಅನುಗ್ರಹದಿಂದ ಜಮದಗ್ನಿ ಮುನಿಗೆ ಜನ್ಮವಿತ್ತಳು. ಋಚೀಕರ ತಪಃಪ್ರಭಾವದಿಂದ ಆ ಮುನಿಪರಮಶಾಂತ, ಮಹಾತಪಸ್ವಿ, ಜಿತೇಂದ್ರಿಯ, ಶಾಂತಾಕಾರ, ಸೌಮ್ಯ ಸುಂದರ. ಮುಂದೆ ಸತ್ಯವತಿಯೂ ಧರ್ಮಿಷ್ಠಳೂ ಆಗಿ ಬದುಕಿ ಇರುವವರೆಗೂ ಪತಿಸೇವೆಗೈದು ಕೊನೆಗೆ ಕೌಶಿಕೀ ಎಂಬ ಮಹಾನದಿಯಾಗಿ ಹರಿದಳು.

ಇಕ್ಷ್ವಾಕು ವಂಶದಲ್ಲಿ ರೇಣು ಎಂಬ ರಾಜನು ಇದ್ದ. ಅವನ ಮಗಳು ಕಾಮಾಲಿಗೆ ರೇಣುಕಾ ಎಂದೂ ಹೆಸರಿದ್ದಿತು. ಅವಳನ್ನು ತಪೋನಿಧಿಯಾದ ಜಮದಗ್ನಿಗೆ ಮದುವೆ ಮಾಡಿ ಧಾರೆಯೆರೆದು ಕೊಟ್ಟ ರೇಣು ರಾಜ. ಕ್ಷತ್ರಿಯಾಂತಕನಾದ ಪರಶುರಾಮ ರೇಣುಕೆಯ ಮಗನಾಗಿ ಜನಿಸಿದ. ಆ ಭಾರ್ಗವ ರಾಮ ಒಂದು ಉರಿಯುವ ಅಗ್ನಿ ಪರ್ವತ, ಸಕಲ ವಿದ್ಯಾ ಪಾರಂಗತ, ಶಂಕರನ ಮುಖದಿಂದಲೇ ಧನುರ್ವೇದವನ್ನೆಲ್ಲ ಚೆನ್ನಾಗಿ ಅರಿತುಕೊಂಡಿದ್ದ. ಅವನಿಗೆ ಶುನಃಶೇಪ, ಶುನಃಪುಚ್ಛ ಎಂಬ ಇಬ್ಬರು ಸಹೋದರರು ಹುಟ್ಟಿದರು. ಅತ್ತ ಬ್ರಾಹ್ಮಣ್ಯದ ಸತ್ವಸಾರವನ್ನು ಗರ್ಭೀಕರಿಸಿದ ಚರುವನ್ನು ಭಕ್ಷಿಸಿದ

ಅವಳ ತಾಯಿಗೆ ಗಾಧಿರಾಜನಿಂದ ಮಹಾತಪಸ್ವಿಯೂ ಶಾಂತಿಸಾಗರನೂ ಆದ ವಿಶ್ವಾಮಿತ್ರ ಎಂಬ ಪುತ್ರರತ್ನ ಜನಿಸಿದ. ಧರ್ಮಾತ್ಮನಾದ ಆ ವಿಶ್ವಾಮಿತ್ರ ಬ್ರಹ್ಮನಿಷ್ಠನಾಗಿದ್ದು ಅದ್ಭುತವಾದ ತೆರವಿಲ್ಲದ ತಪೋನುಷ್ಠಾನಗೈದು ಬ್ರಹ್ಮರ್ಷಿ ಪದವಿಗೆ ಏರಿದ. ವಿಶ್ವಕ್ಕೆಲ್ಲ ಹಿತಸಾಧಿಸಿ ಮಿತ್ರತ್ವವನ್ನು ಬೆಳೆಸಿದ ಆ ವಿಶ್ವಾಮಿತ್ರ ಮುನಿಯು ಋಚೀಕ ಮುನಿಯ ಅನುಗ್ರಹದಿಂದ ಗಾಧಿಪುತ್ರನಾಗಿ ಜನಿಸಿ ಕುಶಿಕ ವಂಶವನ್ನು ವೃದ್ಧಿಗೊಳಿಸಿದ. ಆ ವಿಶ್ವಾಮಿತ್ರನಿಗೆ ಶಾಲಾವತಿ ಎಂಬ ಹೆಂಡತಿಯಲ್ಲಿ ದೇವರಾತ, ಕತಿ, ಹಿರಣ್ಯಾಕ್ಷ, ರೇಣುಕ, ಸಾಂಕೃತಿ, ಮುದ್ಗಲ, ಗಾಲವ, ಮಧುಚ್ಛಂದ, ದೇವಲ, ಅಷ್ಟಕ, ಕಚ್ಛಪ, ಹಾರೀತ ಮುಂತಾದ ಮಹಾನುಭಾವರಾದ ಮಕ್ಕಳು ಜನಿಸಿದರು. ಕತಿಮುನಿಯಿಂದ ಹುಟ್ಟಿದ ಕಾತ್ಯಾಯನರು ವಿಶ್ವಾಮಿತ್ರರ ಮೊಮ್ಮಕ್ಕಳಲ್ಲಿ ಹೆಚ್ಚಿನ ಸಿದ್ಧಿ, ಪ್ರಸಿದ್ಧಿಯನ್ನು ಪಡೆದರು. ವಿಶ್ವಾಮಿತ್ರರ ಸಾಕ್ಷಾತ್ ಮಕ್ಕಳಲ್ಲಿ ಕೆಲವರು ರಾಜರಾಗಿ ನಾಡಿನ ಆಡಳಿತ ಸೂತ್ರವನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡು ಶ್ರೇಷ್ಠ ಶಾಸಕರೂ ಆದರ್ಶ ಅರಸರೂ ಆಗಿ ಮೆರೆದರು. ದೇವರಾತ ಶಾಂಕಲಾಯನ, ಬಾಷ್ಕಲ, ಲೋಹಿತ, ಯಮದೂತ, ಕಾರೂಷ ಮುಂತಾದವರು ಬ್ರಾಹ್ಮಣರಾಗಿ, ಮಹರ್ಷಿಗಳ ಶ್ರೇಣಿಗಳಲ್ಲಿ ಸೇರಿದರು. ಭಾರ್ಗವ ವಂಶದಲ್ಲಿ ಜನಿಸಿದ ಅನಾಥನಾದ ಶುನಃಶೇಪನನ್ನು ವಿಶ್ವಾಮಿತ್ರರು ಪರಿಗ್ರಹಿಸಿ ತಮ್ಮ ಮಕ್ಕಳಲ್ಲಿ ಹಿರಿಯನನ್ನಾಗಿ ಮಾಡಿಕೊಂಡರು. ವಿಶ್ವಾಮಿತ್ರರ ಅನುಗ್ರಹದಿಂದ ಕೌಶಿಕ ವಂಶವನ್ನು ಸೇರಿದ ಆ ಶುನಃಶೇಪ. ಹರಿರಶ್ವರಾಜನ ಯಜ್ಞದಲ್ಲಿ ಈ ಮೊದಲು ಪಶುವಾಗಿ ಪಶುಸ್ಥಾನದಲ್ಲಿ ಬಂಧಿಸಲ್ಪಟ್ಟ ಶುನಃಶೇಪ, ವಿಶ್ವಾಮಿತ್ರರು ಉಪದೇಶಿಸಿದ ಮಂತ್ರಗಳಿಂದ ದೇವತೆಗಳನ್ನು ಸ್ತುತಿಸಿದ. ಅವರು ಸುಪ್ರೀತರಾಗಿ ಅವನನ್ನು ಪಶುವಾಗಿ ಸ್ವೀಕರಿಸದೇ ಅವರನ್ನು ವಿಶ್ವಾಮಿತ್ರರಿಗೆ ಕೊಟ್ಟುಬಿಟ್ಟರು. ಹೀಗೆ ದೇವತೆಗಳು ಬಿಟ್ಟುಕೊಟ್ಟದ್ದರಿಂದ ಅವನಿಗೆ ದೇವರಾತ ಎಂದು ಹೆಸರು ಬಂದಿತು. ದೃಶದ್ವತಿಯಲ್ಲಿ ಅಷ್ಟಕ ಎಂಬ ಎಂಟನೆಯ ಮಗ ಹುಟ್ಟಿದ. ಆ ಅಷ್ಟಕನ ಮಗನೇ ತಾಹಿ.

**ಸೂತ:-** ಮುನಿಗಳೇ! ನಿಮಗೆ ಈ ವರೆಗೆ ಜಹ್ನು ಋಷಿಯ ವಂಶವು ವೃದ್ಧಿಗೊಂಡ ಬಗೆಯನ್ನು ನಿರೂಪಿಸಿದೆ. ಮುಂದೆ ಆಯುರಾಜನ ವಂಶ ವಿಸ್ತಾರವನ್ನು ಹೇಳುತ್ತೇನೆ ಕೇಳಿ.

**ಲೋಮಹರ್ಷಣ:-** ಮುನಿಗಳೇ, ಆಯುರಾಜನಿಗೆ ಸ್ವರ್ಭಾನುವಿನ ಮಗಳಾದ ಪ್ರಭಾದೇವಿಯಲ್ಲಿ ಪಂಚಪುತ್ರರು ಉತ್ಪನ್ನರಾದರು. ಅವರೆಲ್ಲರೂ ವೀರಾಧಿವೀರರು ಧರ್ಮದುರಂಧರರು, ನಹುಷ, ವೃದ್ಧಶರ್ಮ, ರಂಬ, ರಜಿ, ಅನೇನಸ್ ಇವರೇ ಐದುಜನ ಆಯುರಾಜನ ಪಂಚಪುತ್ರರು, ಅವರಲ್ಲಿ ರಜದಾಜನಿಗೆ ಹುಟ್ಟಿದ್ದು ಐನೂರು ಜನ ಮಕ್ಕಳು. ಅವರೆಲ್ಲರಿಗೂ ರಾಜೇಯ ಎಂಬ ಹೆಸರಿನಿಂದಲೇ ಲೋಕ ಪ್ರಸಿದ್ಧಿ. ಇಂದ್ರನಿಗೂ ಹೆದರಿಕೆ ಈ ರಾಜಪುತ್ರರಾದ ರಾಜೇಯರ ಹೆಸರನ್ನು ಕೇಳಿದ ಮಾತ್ರಕ್ಕೆ, ಹಿಂದೆ ಒಂದು ಕಾಲದಲ್ಲಿ ಘೋರ ಸಂಗ್ರಾಮ ಮಸಗಿತು ದೇವದಾನವರಲ್ಲಿ. ವಿಜಯಲಕ್ಷ್ಮಿ ಎಲ್ಲಿಯೂ ಒಂದೆಡೆ ನಿಲ್ಲದೆ ಅತ್ತೊಮ್ಮೆ ಇತ್ತೊಮ್ಮೆ ಉಯ್ಯಾಲೆ ಆಡುತ್ತಿದ್ದಳು ಜಯಮಾಲೆಯನ್ನು ಹಿಡಿದುಕೊಂಡು. ಗೆಲುವಿನ ಅನಿಶ್ಚತತೆಯಿಂದ ದೇವತೆಗಳು ಉದ್ಭ್ರಾಂತ, ದೈತ್ಯರು ಸಂಭ್ರಾಂತ. ಇಬ್ಬರೂ ಓಡಿದರು ಬ್ರಹ್ಮನ ಬಳಿಗೆ. ''ಜಗದೊಡೆಯ ಒಮ್ಮೆ ಖಚಿತವಾಗಿ ಹೇಳಿಬಿಡು. ನಮ್ಮಲ್ಲಿ ಗೆಲ್ಲುವವರು ಯಾರು, ಕೊಲ್ಲುವವರು ಯಾರು. ಗೆಲವು ಯಾರಿಗೆ ಅಳಿವು ಯಾರಿಗೆ? ನಮ್ಮ ಹಣೆಯ ಬರಹದಲ್ಲಿ ನೀನು ಬರೆದದ್ದಾದರೂ ಏನು?

**ಬ್ರಹ್ಮ:-** ಅಯ್ಯಾ, ನಿಮ್ಮೆಲ್ಲರಿಗೂ ನಾನು ಗೆಲುವಿನ ಗುಟ್ಟನ್ನು ಹೇಳುತ್ತೇನೆ ಕೇಳಿ. ರಜರಾಜ ಯಾರ ಪಕ್ಷದಲ್ಲಿ ನಿಂತು ಸಹಾಯ ಸಲ್ಲಿಸುವನೋ ಅಲ್ಲಿ ಗೆಲುವು ಗೋಪುರಗಟ್ಟುವದು. ಅವನ ಸಹಾಯ ಇದ್ದವರು ಮೂರು ಲೋಕಗಳನ್ನೇ ಗೆಲ್ಲಬಲ್ಲರು. ರಜಿಯು ಇದ್ದಲ್ಲಿ ಧೈರ್ಯ, ಧೈರ್ಯವಿದ್ದಲ್ಲಿ ಲಕ್ಷ್ಮಿ, ಧೈರ್ಯ ಲಕ್ಷ್ಮಿ ಎರಡೂ ಇದ್ದಲ್ಲಿ ಧರ್ಮ, ಧರ್ಮವಿದ್ದಲ್ಲಿ ಜಯ ''ಯತೋಧರ್ಮಃ ತತೋ ಜಯಃ''

ಬ್ರಹ್ಮನ ಈ ನುಡಿಯನ್ನು ಕೇಳಿ ಸಂತುಷ್ಟರಾದರು ದೈತ್ಯರು. ಸಂತೃಪ್ತರಾದರು ದೇವತೆಗಳು. ಇಬ್ಬರೂ ರಜಿಯ ರಾಜಧಾನಿಯ ಕಡೆಗೆ ಹೆಜ್ಜೆ ಹಾಕಿದರು. ಸಹಾಯ ಯಾಚನೆಗಾಗಿ ಬಂದ ದೇವದಾನವರಿಬ್ಬರನ್ನೂ ಕಂಡು ಹಿಗ್ಗಾಯಿತು ರಜಿಗೆ. ಹೆಮ್ಮೆಯಾಯಿತು ಅವನ ಮಕ್ಕಳಿಗೆ. ಸುರಾಸುರರಿಬ್ಬರೂ ಸೇರಿ ಒಕ್ಕೊರಲಿನಿಂದ ತಮಗೆ ಸಹಾಯ ಮಾಡಬೇಕೆಂದು ದೈನ್ಯದಿಂದ ಕೇಳಿಕೊಂಡರು. ಇಬ್ಬರ ಬೇಡಿಕೆಗಳನ್ನು ರಜಿ ಗಂಭೀರವಾಗಿ ಪರ್ಯಾಲೋಚಿಸಿದ. ಪ್ರಬುದ್ಧರಾದ ಮಕ್ಕಳೊಡನೆ ಗುಪ್ತಾಲೋಚನೆಗೈದ. ಕೊನೆಗೆ ನಿಷ್ಪಕ್ಷವಾಗಿ ಮಾತನಾಡಿದ.

**ರಜಿರಾಜ:-** ಬ್ರಹ್ಮದೇವರ ಮಾತಿನಿಂದ ನಾನು ಇದ್ದಲ್ಲಿ ಜಯ ಖಂಡಿತ. ದಾನವರೆಲ್ಲರಿಗೂ ನಾನು ಸಹಾಯ ಮಾಡಿದರೆ ಅವರು ದೇವತೆಗಳನ್ನೆಲ್ಲ ಸೋಲಿಸಿ ಸುರಸಾಮ್ರಾಜ್ಯವನ್ನು ಗೆದ್ದು ಕೊಳ್ಳುವದು ನಿಶ್ಚಿತ. ಅನಂತರ ಆ ಇಂದ್ರ ಪದವಿಯಲ್ಲಿ ನನ್ನನ್ನೇ ಕೂಡಿಸಿ ಪಟ್ಟಾಭಿಷೇಕ ಮಾಡುವದಾದರೆ ದೈತ್ಯರಿಗೆ ಸಹಾಯ ಮಾಡುತ್ತೇನೆ.

**ದೈತ್ಯರು:-** ಮಹಾರಾಜ, ನಮಗೆ ಪ್ರಲ್ಹಾದನೇ ಸಾರ್ವಭೌಮ. ಅವನಿಗೆ ಇಂದ್ರ ಸಿಂಹಾಸನವನ್ನು ದೊರಕಿಸಿ ಕೊಡಲಿಕ್ಕಾಗಿಯೇ ಈ ನಮ್ಮ ಪ್ರಯತ್ನ. ಆ ಸುರ ಸಾಮ್ರಾಜ್ಯದ ಸಿಂಹಾಸನದಲ್ಲಿ ನಿನ್ನನ್ನು ಎಂದಿಗೂ ಕೂಡಿಸಲಾರೆವು. ಆ ಅಧಿಕಾರವನ್ನು ಎಂದಿಗೂ ನಿನಗೆ ಕೊಡಲಾರೆವು ಆದರೂ ನಮಗೆ ಸಹಾಯ ಮಾಡು ಮುಂಬರುವ ಮಹಾಸಂಗರದಲ್ಲಿ.

ಅನಂತರ ಆ ರಜಿ ಮಹಾರಾಜ ತನ್ನ ಸಹಾಯವನ್ನು ಬೇಡಿ ಬಂದ ದೇವತೆಗಳಿಗೂ ಅದೇ ಮಾತನ್ನು ಹೇಳಿದ. ನನ್ನ ಸಹಾಯದಿಂದ ದಾನವರನ್ನು ಗೆದ್ದ ಬಳಿಕ ನಿಷ್ಕಂಟಕವಾದ ಆ ಸುರ ಸಾಮ್ರಾಜ್ಯದ ಸಿಂಹಾಸನದಲ್ಲಿ ನನ್ನನ್ನು ಕೂಡಿಸಿ ಪಟ್ಟಾಭಿಷೇಕ ಮಾಡಬೇಕು. ಇಂದ್ರನ ಸ್ಥಾನದಲ್ಲಿ ನನ್ನನ್ನು ದೇವೇಂದ್ರ ಎಂದು ಒಪ್ಪಿ ದೇವಲೋಕದ ಸರ್ವಾಧಿಕಾರವನ್ನು ನನಗೆ ಒಪ್ಪಿಸಬೇಕು.

ರಜಿರಾಜನ ಈ ಕರಾರಿಗೆ ದೇವತೆಗಳು ಆನಂದದಿಂದ ಒಪ್ಪಿಕೊಂಡರು. ನಿನ್ನ ಇಷ್ಟದಂತೆಯೇ ಆಗಲಿ ಎಂದು ಹೇಳಿದರು. ಆಗ ರಜಿಯು ಸ್ವಯಂ ಶಸ್ತ್ರಪಾಣಿಯಾಗಿ ಸೈನ್ಯದ ಮಂಚೂಣಿಯಲ್ಲಿ ನಿಂತುಕೊಂಡು ಕಲಿತನದಿಂದ ಕಾದಾಡಿದ. ಬ್ರಹ್ಮದೇವರ ಮಾತು ನಿಜವಾಗಲೇಬೇಕಷ್ಟೆ. ರಜಿರಾಜನು ಮುಂದಾಗಿ ಯುದ್ಧ ಮಾಡುತ್ತಲಿದ್ದ ದೇವಸೇನೆಗೆ ಒಲಿದು ಬಂದಳು ವಿಜಯಶ್ರೀ. ಅಪ್ರತಿಮ ವೀರನಾದ ರಜಿಮಹಾರಾಜ ತನ್ನ ಅಮೋಘವಾದ ಶಸ್ತ್ರಾಸ್ತ್ರಗಳಿಂದ ತರಿದು ಹಾಕಿದ ಘೋರದಾನವರ ದಳವೆನ್ನೆಲ್ಲ. ಸೋಲಿನ ಹಾಗೂ ಸಾವಿನ ಮತ್ತು ಅವಮಾನದ ಪರಂಪರೆಗೆ ಈಡಾದರೂ ದೈತ್ಯ ದಾನವರೆಲ್ಲರೂ ರಜಿರಾಜನ ಘೋರಾಸ್ತ್ರಗಳ ಹೊಡೆತಗಳನ್ನು ತಾಳಲಾರದೇ ಅಸಂಖ್ಯ ದೈತ್ಯ ಶ್ರೇಣಿಯ ಶೂರ ಸೇನಾಪತಿಗಳು ಓಡಿಹೋಗಿ ಜೀವ ಉಳಿಸಿಕೊಂಡರು ದೇವತೆಗಳು

ವಿಜಯಲಕ್ಷ್ಮಿಯನ್ನು ಒಲಿಸಿಕೊಂಡು ಜಯಘೋಷದೊಂದಿಗೆ ಮರಳಿದರು ಅಮರಾವತಿಗೆ. ಸ್ವರ್ಗದ ರಾಜಧಾನಿಯಲ್ಲಿ ಸುರಪುರದ ನಾಗರೀಕರಿಂದ ಅಬ್ಬರದ ವಿಜಯೋತ್ಸವ. ಇಂದ್ರನಿಗಿಂತ ಅತ್ಯುಚ್ಚವಾದ ಆಸನದ ಮೇಲೆ ರಜಿರಾಜನ ಪ್ರತಿಷ್ಠಾಪನೆ. ಸ್ವಯಂ ದೇವೇಂದ್ರನಿಂದ ಮನುಷ್ಯಕುಲದ ಈ ಮಹಾರಾಜನಿಗೆ ಅತ್ಯಾದರದ ಪ್ರಶಂಸೆ ಸ್ವರ್ಗಾಧಿಪತಿಯಾದ ಶಚೀಪತಿಯೇ ಎದ್ದು ನಿಂತು "ದೈತ್ಯರ ಜೊತೆಗೆ ಯುದ್ಧ ಮಾಡಿ ನಮ್ಮೆನ್ನೆಲ್ಲ ಮೃತ್ಯು ಸಂಕಟದಿಂದ ಪಾರುಮಾಡಿದ ರಜಿರಾಜ ನಮಗೆಲ್ಲ ತಂದೆಯಿದ್ದಂತೆ. ನಾನು ಅವನಿಗೆ ಪುತ್ರನಿದ್ದಂತೆ. ಈ ಸ್ವರ್ಗದ ಸಾಮ್ರಾಜ್ಯವೆಲ್ಲವೂ ರಜಿರಾಜನಿಗೆ ಸಮರ್ಪಿತ ಅವನ ಭೂಮಿಯಲ್ಲಿ ಇದ್ದರೂ ನಮಗೆ ಅವನೇ ಅಧಿಪತಿ. ನಾವೆಲ್ಲರೂ ಅವನ ಆಜ್ಞಾಧಾರಕರು ಎಂದು ಘೋಷಣೆ ಮಾಡಿದ. ಸಹಸ್ರಾಕ್ಷನ ಈ ಪ್ರಶಂಸೆಯ ಅಕ್ಷರಗಳನ್ನು ಕೇಳಿಯೇ ಉಚ್ಚಾಸನದ ಮೇಲೆ ಮಂಡಿತನಾದ ರಜಿರಾಜನಿಗೆ ಮೈತುಂಬ ರೋಮಾಂಚನ. ಕಣ್ಣುಗಳಲ್ಲಿ ಆನಂದಬಾಷ್ಪ. ಮನದಲ್ಲಿ ಧನ್ಯತೆಯ ಭಾವ, ಹರ್ಷ ಹಾಗೂ ಹೆಮ್ಮೆಯಿಂದ ಬೀಗಿ ಆ ರಜಿಮಹಾರಾಜ ಭೂಮಂಡಲಕ್ಕೆ ಮರಳಿದ. ಇಂದ್ರನು ಅಷ್ಟು ಮಾತನಾಡಿದ್ದೇ ಅವನಿಗೆ ಸುರಸಭೆಯಲ್ಲಿ ಅಭೂತಪೂರ್ವವಾದ ಗೌರವವನ್ನು ತಂದುಕೊಟ್ಟಿತ್ತು. ಆ ದೇವಲೋಕದ ತನ್ನ ಸತ್ಕಾರ ಸಮಾರಂಭವನ್ನೇ ಅವನು ಭೂಮಿಯಲ್ಲಿ ನೆನೆನೆನೆದು ತೃಪ್ತಿಯಿಂದ ಬಾಳಿ ಬದುಕಿದ. ಮುಂದೆ ಹಲವಾರು ವರ್ಷಗಳ ಮೇಲೆ ಕಾಲಪ್ರಾಪ್ತವಾಗಿ ಮರಣ ಹೊಂದಿದ. ಈ ರಜಿರಾಜನಿಗೆ ಐದುನೂರು ಜನ ಗಂಡು ಮಕ್ಕಳು. ಎಲ್ಲರೂ ಚಂಡ ಪ್ರಚಂಡರು. ಐದನೂರು ಜನರೂ ಸಹ ಘೋರಕದನದಲ್ಲಿ ಕಲಿಗಳು. ದೈತ್ಯದಾನವರಿಗಿಂತ ಮಹಾಬಲಿಗಳು. ರಜಿರಾಜನು ಇರುವವರೆಗೂ ಅವರಿಗೆ ಏನೂ ಮಾಡಲೂ ಬರುವಂತೆ ಇರಲಿಲ್ಲ. ಅವನು ಮರಣಿಸಿದ ಮರುದಿನವೇ ಲಗ್ಗೆ ಇಟ್ಟರು ಸ್ವರ್ಗಕ್ಕೆ ತನ್ನ ಪರಾಕ್ರಮದಿಂದ ದೇವಲೋಕದ ಮೇಲೆ ದಾಳಿಧೂಳಿ ನಡೆಸಿ ಸುರ ಸಮೂಹಕ್ಕೆಲ್ಲ ಸೋಲಿನ ರುಚಿ ತೋರಿಸಿದರು. ರಜಿರಾಜನ ಪ್ರತಿರೂಪದಂತಿರುವ ಪ್ರಬಲ ಪರಾಕ್ರಮಿಗಳಾದ ಪಂಚಶತ ರಜಿಪುತ್ರರ ಪ್ರಬಲದಾಳಿಯಲ್ಲಿ ಅಭೂತಪೂರ್ವವಾದ ಶಸ್ತ್ರಾಸ್ತ್ರಗಳ ದಾಳಿಗೆ ತತ್ತರಿಸಿ ಹೋದರು ದೇವಸೇನಾಪತಿಗಳು. ಪರಾಜಿತರಾದ ಅವರೆಲ್ಲರೂ ಪಲಾಯನ ಸೂಕ್ತಪಡಿಸಿದರು. ರಜಿಯ ಆ ವೀರ ಕುಮಾರರು ಅಮರಾವತಿಯನ್ನು ಆಕ್ರಮಿಸಿದರು. ತಮ್ಮ ಪರಾಕ್ರಮದಿಂದ ಸುರಸಾಮ್ರಾಜ್ಯದ ಸಿರಿಸಂಪತ್ತುಗಳನ್ನೆಲ್ಲ ಸೂರೆಗೊಂಡರು. ಸ್ವರ್ಗದ ಸುಖ ಸರ್ವಸ್ವವನ್ನು ಅನುಭವಿಸಿದರು. ಸ್ವರ್ಗ ಸಾಮ್ರಾಜ್ಯ ಅಧಿಕಾರವೆಲ್ಲ ಈ ಭೂಲೋಕದ ತರುಣ ರಾಜಕುಮಾರರ ಕೈಯಲ್ಲಿ ಬಂದ ಬಳಿಕ ಅವರೆಲ್ಲರೂ ದಾರಿ ತಪ್ಪಿದರು. ಪಾನ, ಹೆಣ್ಣು, ಹೊನ್ನು, ವಿಲಾಸ, ವಿಹಾರಗಳಲ್ಲಿ ಅರಿವುಗೆಟ್ಟು ಅಧಃಪಾತದ ಆಳಕ್ಕೆ ಇಳಿದರು. ಮಾನಿನಿಮದಿರಾಲಂಪಟತೆಗಳ ಮದ ತಲೆಗೇರಿ ಅತಿಪಾನ, ಅತಿವಿಹಾರಗಳಿಂದ ಮಾನವ ಪ್ರಕೃತಿಯ ಆ ಎಲ್ಲ ರಜಿಕುಮಾರರ ಆರೋಗ್ಯವು ಕೆಲವೇ ದಿನಗಳಲ್ಲಿ ಕೆಟ್ಟು ಅವರೆಲ್ಲರೂ ರೋಗಿಷ್ಠರೂ, ದುರ್ಬಲರೂ ಆದರು. ನೀತಿಯ ನೆಲೆಗಟ್ಟು ತಪ್ಪಿದ ಬಳಿಕ ಅವರಿಗೆ ಮೊದಲಿನ ಆರೋಗ್ಯದ ಮೈಕಟ್ಟೂ ಉಳಿಯಲಿಲ್ಲ. ಫಲಮಾತ್ರ ಉಳಿಯಿತು. ಬಲಹೋಯಿತು. ದೈಹಿಕಬಲ, ನೈತಿಕಬಲ, ಎರಡನ್ನೂ ಕಳೆದುಕೊಂಡ ಆ ರಜಿಕುಮಾರರನ್ನು ದೇವೇಂದ್ರನು, ಸುರಸೇನಾ ನಾಯಕರು ಬಂದು ಹೊಡೆದು ಓಡಿಸಿದರು. ಧರ್ಮಭ್ರಷ್ಟರಾದ ಹಾಗೂ ನೀತಿಭ್ರಷ್ಟರಾದ ಆ ರಜಿರಾಜಪುತ್ರರು ಕೆಲವೇ ಕ್ಷಣಗಳಲ್ಲಿ ಸ್ವರ್ಗಭ್ರಷ್ಟರಾಗಿ ಮರಳಿ ಮಹೀಮಂಡಲಕ್ಕೆ ಬಂದರು.

**ಲೋಮಹರ್ಷಣ:-** ಆಯುಕುಮಾರನ ಐದು ಮಂದಿ ಮಕ್ಕಳಲ್ಲಿ ರಜಿಯ ಪುತ್ರರದು ಈ ಪಾಡು ಆದರೆ, ಇನ್ನೊಬ್ಬ ಆಯುವಿನ ಮಗನಾದ ರಂಭನಿಗೆ ಮಕ್ಕಳೇ ಇರಲಿಲ್ಲ. ಆಯುಕುಮಾರನ ಮೂರನೆಯ ಮಗನಾದ ಅನೇನಸ ರಾಜನ ವಂಶ ವಿಸ್ತಾರವನ್ನು ಹೇಳುವೆ ಕೇಳು. ಅನೇನಸನ ಔರಸ ಪುತ್ರನಾದ ಪ್ರತಿಕ್ಷತ್ರ ಕೀರ್ತಿ ಸಂಪನ್ನ. ಮಹಾಶೂರ. ದಿಗಂತ ವಿಶ್ರಾಂತ ಅವನ ಕೀರ್ತಿ, ಪ್ರತಿಕ್ಷತ್ರನ ಪುತ್ರನೇ ಸಂಜಯ. ಸಂಜಯನ ಮಗ ಜಯ, ಜಯನ ಮಗ ವಿಜಯ, ವಿಜಯನ ಮಗ ಕೃತಿ. ಕೃತಿಪುತ್ರ ಹರ್ಯತ್ವತ. ಹರ್ಯತ್ವತನ ಸುಕುಮಾರನಾದ ಸಹದೇವ ಪ್ರಪಂಚದಲ್ಲಿಯೇ ಪ್ರಬಲ ಪ್ರತಾಪಶಾಲಿ ಎಂದು ಪ್ರಸಿದ್ಧಿ ಪಡೆದ. ಸಹದೇವನಿಗೆ ನದೀನ ಕುಮಾರನಾಗಿ ಜನಿಸಿದ. ಈ ನದೀನ ಧರ್ಮವರ್ಮ. ಜಯತ್ಸೇನ ನದೀನನ ಏಕಮಾತ್ರ ಪುತ್ರ. ಜಯತ್ಸೇನನ ಮಗನೇ ಪುರಾಣ ಪ್ರಸಿದ್ಧನಾದ ಸುಕೃತಿ ಮಹಾರಾಜ. ಸುಕೃತಿಯ ಸುಕಮಾರ ಕುಮಾರನಾದ ಕ್ಷತ್ರವೃದ್ಧ, ಪುರಾಣ ಪ್ರಸಿದ್ಧ ಮತ್ತು ಧರ್ಮನಿಷ್ಠ.

ಇನ್ನು ಆಯುರಾಜನ ವಂಶದಲ್ಲಿಯೇ ಅತ್ಯಂತ ಕೀರ್ತಿಸಂಪನ್ನ ವ್ಯಕ್ತಿ ಎಂದು ಹೆಸರಾದ ಈ ಕ್ಷತ್ರವೃದ್ಧನಿಂದ ಆ ಕುಲವು ವಿಶೇಷವಾಗಿ ಅಭಿವೃದ್ಧಿಯನ್ನೂ ಪ್ರಸಿದ್ಧಿಯನ್ನೂ ಪಡೆಯಿತು. ಕ್ಷತ್ರವೃದ್ಧನ ಮಗನಾದ ಸುನಹೋತ್ರ. ಧವಲಯ ಶೋಭಾಸುರ ಸುನಹೋತ್ರದ ಪುತ್ರರಾದ ಕೌಶ, ಶಲ, ಗೃತ್ಸಮದ ಎಂಬ ಮೂವರು ಮಹಾಧರ್ಮಿಷ್ಠರು ಹಾಗೂ ಬಲಿಷ್ಠರು. ಗೃತ್ಸಮದನ ಪುತ್ರನೇ ಶುನಕ. ಈ ಶುನಕನ ಗೋತ್ರದಲ್ಲಿ ಬ್ರಾಹ್ಮಣರು. ಕ್ಷತ್ರಿಯರು, ವೈಶ್ಯರು, ಶೂದ್ರರು ಜನಿಸಿ ತಮ್ಮ ಕುಲ ಕೌಶಲವನ್ನು ಮೆರೆದರು. ಶಲನಿಗೆ ಆರ್ಷ್ಟಿಸೇನ ಎಂಬ ಮಗ ಇದ್ದ. ಆರ್ಷ್ಟಿಸೇನನ ಮಗನಾದ ಕಾಶ್ಯಪನ ಪ್ರಚಂಡಪುತ್ರನೇ ದೀರ್ಘತಪ. ಈ ದೀರ್ಘತಪನು ತೇಜಸ್ವಿಯೂ ಆಗಿದ್ದ. ತಪಸ್ವಿಯೂ ಆಗಿದ್ದ. ಅವನು ಕಾಶಿಯನ್ನು ರಾಜನಾಗಿ ಆಳಿದ. ವಿರಕ್ತನಾಗಿಯೂ ಆ ಗಂಗಾತಟದಲ್ಲಿ ಜ್ಞಾನ, ಭಕ್ತಿ, ವೈರಾಗ್ಯ ಸಂಪನ್ನನಾಗಿ ಬಾಳಿದ. ಈ ದೀರ್ಘತಪನ ಶ್ರೇಷ್ಠ ಪುತ್ರ ಧನುರಾಜ. ಧನುರಾಜನ ಮಗನೇ ಧನ್ವಂತರಿ. ಆಯುರ್ವೇದ ಶಾಸ್ತ್ರಕ್ಕೆ ಮುಖದ್ರಷ್ಟಾರನಾದ ಮೂಲಪುರುಷ. ಅವನಿಂದ ಆ ವೈದ್ಯ ವಿಜ್ಞಾನವು ಪ್ರವರ್ತಿತ ವಾಯಿತು. ಈ ಆರೋಗ್ಯ ಶಾಸ್ತ್ರಕ್ಕೆ ಆಯುರ್ವೇದ ಎಂಬ ಹೆಸರು ಬಂದಿದ್ದು ದೇವತಾ ಸ್ವರೂಪಿಯಾದ ಈ ಪುಣ್ಯ ಪುರುಷನಿಂದಲೇ. ಧನುರಾಜನ ಉಗ್ರ ತಪಸ್ಸಿಗೆ ಮೆಚ್ಚಿ ಸಾಕ್ಷಾತ್ ಶ್ರೀಹರಿಯೇ ಧನ್ವಂತರೀ ದೇವರಾಗಿ ಧನುರಾಜನ ಪುತ್ರತ್ವವನ್ನು ಪಡೆದು ಅವತರಿಸಿದ. ಆ ಧನ್ವಂತರಿಯು ಕಾಶೀಖಂಡದ ಸಾರ್ವಭೌಮ ಸಿಂಹಾಸನದಲ್ಲಿ ಅಭಿಷಿಕ್ತನಾಗಿ ಭಕ್ತಜನರನ್ನೆಲ್ಲ ಅಕಾಲ ಮೃತ್ಯು ಸಂಕಟದಿಂದ ಮುಕ್ತರನ್ನಾಗಿ ಮಾಡಿದ. ಭರದ್ವಾಜ ಮುನಿಯಿಂದ ಹೊಳವು ಹಾಕಲ್ಪಟ್ಟ ಈ ವೈದ್ಯ ವಿದ್ಯೆಯನ್ನು ಸುಸಂಗತವಾಗಿ ಬರೆದು. ಬೆಳೆಸಿ ಅದಕ್ಕೊಂದು ಶಾಸ್ತ್ರದ ಸ್ವರೂಪವನ್ನು ತಂದುಕೊಟ್ಟ ಮಹಾಪ್ರಭು ಧನ್ವಂತರೀದೇವ. ದೀನದಲಿತರೂ ದರಿದ್ರದುಃಖಿತರೂ ರೋಗ ಸಂತ್ರಸ್ತರೂ ಆದ ಪ್ರಜಾಜನರನ್ನೆಲ್ಲ ಸಾಮಾನ್ಯ ವೈದ್ಯನಂತೆ ಕರುಣೆಯಿಂದಲೇ ಚಿಕಿತ್ಸೆಮಾಡಿ ಆರೋಗ್ಯಭಾಗ್ಯವನ್ನು ತಂದುಕೊಟ್ಟು ದೀರ್ಘಾಯುಷಿಗಳನ್ನಾಗಿ ಮಾಡಿದ. ವೈದ್ಯಶಾಸ್ತ್ರಕ್ಕೆ ವೇದಸಮಾನವಾದ ಸ್ಥಾನಮಾನಗಳನ್ನು ತಂದುಕೊಟ್ಟು "ಆಯುರ್ವೇದ" ಎಂಬ ಹೊಸ ಹೆಸರನ್ನು ರೂಢಿಗೆ ತಂದವ ಈ ಧನ್ವಂತರಿಯೇ, ಧನ್ವಂತರಿಯು ಆಯುರ್ವೇದವನ್ನು ಎಂಟು ವಿಭಾಗ ಮಾಡಿ ಎಂಟು ಜನ ಶಿಷ್ಯರಿಗೆ ಉಪದೇಶ ಮಾಡಿದ.

ಕಾಶೀರಾಜನಾದ ಧನ್ವಂತರಿಗೆ ಕೇತುಮಂತ ಎಂಬ ಒಬ್ಬ ಮಗನು ಇದ್ದ. ಆ ಕೇತುಮಂತನ ವರಪುತ್ರನೇ ಭೀಮರಥ. ದಿವೋದಾಸ ಈ ಭೀಮದಾಸನ ಪುತ್ರಪ್ರವರ ಈ ದಿವೋದಾಸ ಅತ್ಯಂತ ಧರ್ಮಾತ್ಮನಾಗಿದ್ದು ಪುರಾಣಗಳಲ್ಲಿ ಪ್ರಸಿದ್ಧನಾಗಿದ್ದಾನೆ. ಈ ದಿವೋದಾಸನ ಕಾಲದಲ್ಲಿಯೇ ಕಾಶಿಪಟ್ಟಣವನ್ನು ಕ್ಷೇಮಕ ಎಂಬ ರಾಕ್ಷಸನು ಆಕ್ರಮಿಸಿ ಹಾಳುಮಾಡಿದ. ಹಿಂದೆ ನಿಕುಂಭ ಎಂಬ ಓರ್ವ ಶಿವಭಕ್ತನಾದ ತಪಸ್ವಿ ಕಾಶೀಪಟ್ಟಣವು ಸಾವಿರ ವರ್ಷಗಳ ವರೆಗೆ ಶೂನ್ಯವಾಗಲಿ ಎಂದು ಶಾಪಕೊಟ್ಟ. ಹೀಗೆ ಶಿವ ಭಕ್ತರ ಶಾಪದಗ್ಧವಾದ ಕಾಶೀಪಟ್ಟಣವನ್ನು ದಿವೋದಾಸನು ತ್ಯಜಿಸಿ 'ಗೋಮತಿ' ಎಂಬಲ್ಲಿಗೆ ತನ್ನ ರಾಜಧಾನಿಯನ್ನು ಸ್ಥಳಾಂತರಿಸಿದ.

ಕಾಶೀಕ್ಷೇತ್ರಕ್ಕೆ ತನ್ನದೇ ಆದ ಒಂದು ಇತಿಹಾಸವಿದೆ. ಅದನ್ನು ಮೊದಲು ಆಳಿದವರೆಷ್ಟೋ. ಅಲ್ಲಿ ಬಂದು ಆಳಿದು ಹೋದವರೆಷ್ಟೋ ಲೆಕ್ಕವಿಲ್ಲ. ಮೊದಲು ಭದ್ರಶ್ರೇಣ್ಯ ಎಂಬ ರಾಜ ಕಾಶೀಖಂಡವನ್ನು ಆಳುತ್ತಿದ್ದ. ಅವನಿಗಿಂತ ಶೂರನಾದ ದಿವೋದಾಸ ಭದ್ರಶ್ರೇಣ್ಯನ ನೂರು ಮಂದಿ ಮಕ್ಕಳನ್ನು ಕೊಂದು ಆ ವಾರಣಾಸಿಯನ್ನು ಆಕ್ರಮಿಸಿದ. ಭದ್ರಶ್ರೇಣ್ಯನ ಕೊನೆಯ ಮಗ ದುರ್ದಮ. ಅದು ಆಗ ಇನ್ನೂ ಚಿಕ್ಕ ಮಗು. ಅದರ ಮೇಲಿನ ಕರುಣೆಯಿಂದ ದಿವೋದಾಸ ಅದೇ ಹುಟ್ಟಿದ ಆ ಪುಟ್ಟ ಮಗುವನ್ನು ಕೊಲ್ಲದೇ ಬಿಟ್ಟುಬಿಟ್ಟ. ಈ ಎಳೇ ಕಂದ ತನಗೆ ಏನು ಮಾಡೀತು? ಭದ್ರಶ್ರೇಣ್ಯನಂಥ ಮಹಾರಾಜ ಹಾಗೂ ಅವನ ನೂರು ಜನ ದರ್ಪಿಷ್ಠ ರಾಜಕುಮಾರರು, ಇದಲ್ಲದೇ ಶೂರಸೇನಾಪತಿಗಳೂ ಎಲ್ಲರೂ ತನ್ನ ಪ್ರಚಂಡ ಪರಾಕ್ರಮದ ಎದುರು ಮಣ್ಣು ಮುಕ್ಕಿ ಹೋದಾಗ ಇದೀಗ ಕಣ್ತೆರೆದ ಈ ಸಣ್ಣ ಮಗು ತನಗೆ ಎಂದೂ ಏನೂ ಅಪಾಯವನ್ನು ಉಂಟು ಮಾಡಲಾರದು ಎಂದು ಅಸಡ್ಡೆಯಿಂದ ಆ ಮಗುವನ್ನು ಬಿಟ್ಟುಕೊಟ್ಟಿದ್ದ ದಿವೋದಾಸ. ಆದರೆ ದುರ್ದೈವದಿಂದ ಮುಂದೆ ಆ ದುರ್ದಮನೇ ಪ್ರಚಂಡ ಪರಾಕ್ರಮಿಯಾಗಿ ದಿವೋದಾಸನೊಡನೆ ಹೋರಾಡಿ ಹಣಿದು ಸೋಲಿಸಿದ. ದಿವೋದಾಸನನ್ನು ಅಪಹರಿಸಿದ. ತಂದೆಯ ರಾಜ್ಯವನ್ನೆಲ್ಲ, ಅವನನ್ನು ಸೋಲಿಸಿ ಕಸಿದುಕೊಂಡ ಮತ್ತು ತನ್ನ ತಂದೆಗೆ ಅಪಚಾರ ಮಾಡಿದ ದಿವೋದಾಸನ ಮೇಲೆ ಸಮರ್ಥ ರೀತಿಯಿಂದ ಪ್ರತೀಕಾರ ಮಾಡಿ ಸೇಡನ್ನು ತೀರಿಸಿಕೊಂಡ. ದಿವೋದಾಸ ಹಾಗೂ ಭದ್ರಶ್ರೇಣ್ಯರ ವೈರವು ಒಂದೇ ತಲೆಮಾರಿಗೆ ಕೊನೆಗೊಳ್ಳಲಿಲ್ಲ. ದಿವೋದಾಸನಿಂದ ದೃಷದ್ವತೀ ದೇವಿಯಲ್ಲಿ ಪ್ರತರ್ದನ ಜನಿಸಿದ. ಇವನು ನಿಜವಾಗಿಯೂ ವೈರಿ ಪ್ರತರ್ದನನೇ ಆಗಿದ್ದ. ವಯಸ್ಸಿಗೆ ಬಂದ ಕೂಡಲೇ ಭದ್ರಶ್ರೇಣ್ಯನ ಮಗನಾದ ದುರ್ದಮನು ತನ್ನ ತಂದೆಯ ರಾಜ್ಯವನ್ನು ಅಪಹರಿಸಿದ ಸಮಾಚಾರ ಕೇಳಿ ಉರಿದೆದ್ದ. ತನ್ನ ತಂದೆ ದಿವೋದಾಸ ಸಣ್ಣಮಗು ಎಂದು ಕರುಣೆಯಿಂದ ಕೊಲ್ಲದೇ ಬಿಟ್ಟ ದುರ್ದಮ ದಿವೋದಾಸನ ಉಪಕಾರವನ್ನು ಮನ್ನಿಸುವದನ್ನು ಬಿಟ್ಟು ಪ್ರತೀಕಾರದ ನೀಚ ಕೃತ್ಯಕ್ಕೆ ಎಳೆಸಿದ್ದನ್ನು ಕಂಡು ಅವನ ಹೃದಯ ಸಂತೃಪ್ತವಾಯಿತು. ತನ್ನ ತಂದೆಗೆ ಬಗೆದ ಈ ಅಪಚಾರಕ್ಕೆ ಸರಿಯಾಗಿ ಪ್ರತೀಕಾರ ಮಾಡುವದು ಪುತ್ರನಾದ ತನ್ನ ಮುಖ್ಯ ಕರ್ತವ್ಯ ಎಂದು ಅವನು ಭಾವಿಸಿದ. ವೀರಾಗ್ರಣಿಯಾದ ಅವನು ಸೇಡಿನ ಸಿಡಿಲುಗುದುರೆಯ ಸವಾರಿ ಮಾಡಿ ದುರ್ದಮನ ಮೇಲೆ ದಾಳಿ ಮಾಡಿದ. ದುರ್ದಮ ತನ್ನ ಹೆಸರಿಗೆ ತಕ್ಕಂತೆ ಶೌರ್ಯದಿಂದ ದುರ್ದಮನೇ ಆಗಿದ್ದರೂ ಪ್ರತರ್ದನ ಕುಮಾರ ತನ್ನ ಲೋಕೋತ್ತರವಾದ ಶೌರ್ಯ ಸಾಮರ್ಥ್ಯಗಳಿಂದ ಆ

ದುರ್ದಮನನ್ನೂ ಮರ್ದನ ಮಾಡಿದ. ಅವನ ರಾಜ್ಯವನ್ನು ಕಿತ್ತುಕೊಂಡು ಅವನ ಮೇಲಿನ ಸೇಡನ್ನು ತೀರಿಸಿದ. ಈ ಪ್ರತರ್ದನನಿಗೆ ಇಬ್ಬರು ಮಕ್ಕಳು, ವತ್ಸ, ಗರ್ಗ ಎಂದು. ವತ್ಸನ ಮಗನೇ ಅಲರ್ಕ. ಅಲರ್ಕನ ಪುತ್ರನೇ ಸನ್ನತಿ. ವತ್ಸರಾಜನ ಮಗನಾದ ಅಲರ್ಕ ಬ್ರಾಹ್ಮಣಪ್ರಿಯ. ಸತ್ಯನಿಷ್ಠ, ದೇವತಾರಾಧಕ, ಭಕ್ತಶ್ರೇಷ್ಠ, ಸ್ವಯಂ ರಾಜನಾದರೂ ಋಷಿಗಳಂತೆ ವಿರಕ್ತ ಜೀವನ ನಡೆಸಿದ. ಅರವತ್ತು ಸಾವಿರದ ಆರನೂರು ವರ್ಷಗಳವರೆಗೆ ರಾಜ್ಯವಾಳಿದ. ಕೊನೆಯವರೆಗೂ ನವತರುಣನಾಗಿಯೇ ಉಳಿದ. ಮುಪ್ಪು ಅವನನ್ನು ಎಂದೂ ಮೂಸಲಿಲ್ಲ. ಅಶಕ್ತಿ ಯಾವ ಕಾಲಕ್ಕೂ ಉಂಟಾಗಲಿಲ್ಲ. ಬದುಕಿ ಇರೋವರೆಗೂ ಆರೋಗ್ಯವಂತನಾಗಿ ಶ್ರೀಹರಿಯ ಆರಾಧನೆಯಲ್ಲಿಯೇ ಆಸಕ್ತನಾಗಿ ನಿತ್ಯ ಸತ್ಕರ್ಮಾನುಷ್ಠಾನಮಾಡುತ್ತ ತನ್ನ ಕುಲವನ್ನು ಉದ್ಧಾರ ಮಾಡಿದ. ಈ ಅಲರ್ಕ ರಾಜನಿಗೆ ಇಷ್ಟು ಸುಧೀರ್ಘ ಆಯುಷ್ಯ ಹಾಗೂ ಆರೋಗ್ಯಭಾಗ್ಯಗಳು ಲಭಿಸಲು ಅಗಸ್ತ್ಯರ ಮಡದಿಯಾದ ಲೋಪಾಮುದ್ರೆಯ ಅನುಗ್ರಹ ಕಾರಣ. ನಿಶುಂಭಮುನಿಯ ಶಾಪದ ಗಡುವು ಮುಗಿದ ಬಳಿಕ ಅಲರ್ಕನು ವಾರಣಾಸಿಯನ್ನು ತನ್ನ ವಶದಲ್ಲಿ ತೆಗೆದುಕೊಂಡ. ರಾಕ್ಷಸನಿಂದ ಹಾಳುಮಾಡಲ್ಪಟ್ಟ ಪುರಾಣ ಪ್ರಸಿದ್ಧವಾದ ಆ ಪುಣ್ಯ ನಗರಿಯನ್ನು ಜೀರ್ಣೋದ್ಧಾರ ಮಾಡಿ ಅನೇಕ ಸುಂದರವಾದ ಮಂದಿರಗಳನ್ನೂ ದಿವ್ಯ ಭವ್ಯವಾದ ಕಟ್ಟಡಗಳನ್ನೂ ಕಟ್ಟಿಸಿದ. ಅದೊಂದು ಭೂಲೋಕದ ಅಮರಾವತಿಯಂತೆ ಕಂಗೊಳಿಸತೊಡಗಿತು. ಪುನರ್ನಿಮಿತವಾದ ಆ ವಾರಣಾಸಿ ಕ್ಷೇತ್ರವು ಮೊದಲಿಗಿಂತ ಮಿಗಿಲಾದ ಅತ್ಯಧಿಕ ಶೋಭೆಯಿಂದ ಹಾಗೂ ವೈಭವದಿಂದ ಅಸಾಧಾರಣವಾದ ನಗರವೆಂದು ಜಗತ್ತಿನಲ್ಲಿ ಪ್ರಖ್ಯಾತವಾಯಿತು. ಅಲರ್ಕನ ಮಗನಾದ ಸನ್ನತಿಗೆ ಸುನೀಥ ಎಂಬ ವೇದಶಾಸ್ತ್ರ ಹಾಗೂ ಧರ್ಮಕರ್ಮಗಳಲ್ಲಿ ಬದ್ಧಶ್ರದ್ಧನಾದ ಸತ್ಪುತ್ರನು ಹುಟ್ಟಿದ. ಆ ಸುನೀಥನಿಗೆ ಕ್ಷೇಮರಾಜ ಎಂಬ ಕೀರ್ತಿಶಾಲಿಯಾದ ಮಗನು ಜನಿಸಿದ. ಆ ಕ್ಷೇಮರಾಜನ ಮಗನೇ ಸುಕೇತು. ಸುಕೇತುವಿನ ಪುತ್ರ ಧರ್ಮಕೇತು. ಧರ್ಮಕೇತುವಿನ ಚಿರಂಜೀವ ಸತ್ಯಕೇತು. ಸತ್ಯಕೇತುವಿನ ಆತ್ಮಜನೇ ವಿಭುರಾಜ. ವಿಭುರಾಜನ ಪುತ್ರಪ್ರವರನೇ ಆನರ್ತ. ಆನರ್ತನ ಮಗ ಸುಕುಮಾರ. ಸುಕುಮಾರನ ಕುಮಾರ ದೃಷ್ಟಿಕೇತು. ಈ ದೃಷ್ಟಿಕೇತು ಪರಮ ಧಾರ್ಮಿಕ. ದೃಷ್ಟಿಕೇತುವಿನ ಮಗ ವೇಣುಹೋತ್ರ. ವೇಣುಹೋತ್ರುವಿನ ಚಿರಂಜೀವ ಭಾರ್ಗ ಮಹಾರಾಜ. ದಿವೋದಾಸನ ಮಗನಾದ ಪ್ರತರ್ದನಪುತ್ರ ವತ್ಸನಿಗೆ ವತ್ಸಭೂಮಿ ಎಂಬ ಮತ್ತೊಬ್ಬ ಪುತ್ರನು ಇದ್ದ. ಭಾರ್ಗರಾಜನ ಮಗ ಭಾರ್ಗಭೂಮಿ. ಇವರೆಲ್ಲರೂ ಪುರೂರವನ ವಂಶದವರು. ಈ ವಂಶದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಈ ಮೂರು ಜಾತಿಯ ಜನರು ಸಹಸ್ರಾರು ಸಂಖ್ಯೆಯಲ್ಲಿ ಜನಿಸಿ ಬೆಳೆದು ಭಾಗ್ಯವಂತರಾಗಿ ಧರಣೀ ಮಂಡಲವನ್ನು ಆಳಿ ಕಾಲಗರ್ಭದಲ್ಲಿ ಅಗಿ ಹೋದರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಾಲ್ಕನೆಯ ಅಧ್ಯಾಯ*

—o—

**ಲೋಮಹರ್ಷಣ:-** ಆಯುರಾಜ ಹಾಗು ಪ್ರಭಾದೇವಿ ಈ ದಂಪತಿಗಳ ಹೊಟ್ಟೆಯಿಂದ ಹುಟ್ಟಿದ ಪಂಚಪುತ್ರರಲ್ಲಿ ನಹುಷನೇ ಜ್ಯೇಷ್ಠ. ತನ್ನ ಕೀರ್ತಿ ಕೌಮುದಿಯನ್ನು ಸ್ವರ್ಗ ಸೀಮೆಯವರೆಗೂ ಪಸರಸಿದ ರಾಜಶ್ರೇಷ್ಠ. ಈ ನಹುಷ ಕುಮಾರರಲ್ಲಿ ನಾಲ್ವರ ವಂಶವು ಬೆಳೆದ ಬಗೆಯನ್ನೂ ಅಳಿದ ಕಾರಣವನ್ನೂ ಉಳಿದ ರೀತಿಯನ್ನೂ ಈ ಮೊದಲು ನಾನು ನಿಮಗೆ ಚಿತ್ರಿಸಿದೆ. ಈಗ ಆಯುವಿನ ಚೊಚ್ಚಲು ಮಗನಾದ ನಹುಷ ಮಹಾರಾಜನ ವಂಶ ಹಾಗೂ ವಂಶೀಯರ ವೃತ್ತಾಂತವನ್ನು ಅರುಹುವೆ ಕೇಳಿರಿ. ನಹುಷ ಚಕ್ರವರ್ತಿಗೆ ಪಿತೃದೇವತೆಗಳು ತಮ್ಮ ಮಗಳಾದ ವಿರಜೆಯನ್ನು ಮದುವೆ ಮಾಡಿಕೊಟ್ಟರು. ನಹುಷನಿಗೆ ಆ ದೇವಕನ್ಯೆಯಲ್ಲಿ ಆರು ಜನ ಗಂಡು ಮಕ್ಕಳು ಜನಿಸಿದರು. ಅವರೆಲ್ಲರೂ ಇಂದ್ರನಂತೆ ತೇಜಸ್ವಿಗಳು ಅಗ್ನಿಯಂತೆ ವರ್ಚಸ್ವಿಗಳು. ಯತಿ, ಯಯಾತಿ, ಸಂಯಾತಿ, ಆಯಾತಿ, ಪಾರ್ಶ್ವಕ, ಈ ಐದು ಜನ ನಹುಷನ ಮಕ್ಕಳಲ್ಲಿ ಸುಪ್ರಸಿದ್ಧರು. ಬಾಲ್ಯದಿಂದಲೇ ಧಾರ್ಮಿಕ ಪ್ರವೃತ್ತಿಯವನಾದ ಯತಿಯು ಕಕುಸ್ಥರಾಜನ ಮಗಳಾದ ಗೋದೇವಿಯನ್ನು ಮದುವೆಯಾದ. ವಿವಾಹ ಮಾಡಿಕೊಂಡರೂ ಅವನ ಮನಸ್ಸು ಯಾವಾಗಲೂ ಬ್ರಹ್ಮಚಿಂತನದಲ್ಲಿಯೇ ಆಸಕ್ತ. ಗೃಹಸ್ಥಾಶ್ರಮಿಯಾದರೂ ಹೆಸರಿಗೆ ತಕ್ಕಂತೆ ಅವನು ಯತಿಯೂ ವ್ರತಿಯೂ ಭಗವನ್ಮತಿಯೂ ಆಗಿದ್ದ. ಸಂಸಾರದಲ್ಲಿ ಅವನಿಗೆ ಸದಾ ಅಸಾರತಾ ಬುದ್ಧಿ. ವಿಷಯ ಸುಖವೆಂದರೆ ವಿಷವೆಂದು ಬಗೆದು ರಾಗಭೋಗ ಗಳೆಂದರೆ ಜಿಗುಪ್ಸೆಪಟ್ಟುಕೊಳ್ಳುತ್ತಲಿದ್ದ. ಕೊನೆಕೊನೆಗೆ ಎಲ್ಲಬಿಟ್ಟು ಬ್ರಹ್ಮಚಿಂತನೆ ಮಾಡುತ್ತ ಮಾಡುತ್ತ ಮುಕ್ತಿಯನ್ನೇ ಪಡೆದ. ಮಿಕ್ಕ ನಹುಷನ ಐದು ಮಕ್ಕಳಲ್ಲಿ ಯಯಾತಿಯು ತನ್ನ ಶೌರ್ಯ ಪರಾಕ್ರಮಗಳಿಂದ ಎಲ್ಲರನ್ನೂ ಗೆದ್ದು ಜಗಜ್ಜೇತಾರ ಎನಿಸಿದ. ದೈತ್ಯ ಗುರು ಶುಕ್ರಾಚಾರ್ಯರ ಮಗಳಾದ ದೇವಯಾನಿಯನ್ನೂ, ರಾಕ್ಷಸೇಶ್ವರನಾದ ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನೂ ವಿವಾಹವಾದ. ಯಯಾತಿಗೆ ದೇವಯಾನಿಯಲ್ಲಿ ಯದು, ತುರ್ವಸು ಎಂಬ ಮಕ್ಕಳೂ, ಶರ್ಮಿಷ್ಠೆಯಲ್ಲಿ ದ್ರುಹ್ಯು, ಅನು, ಪೂರು ಎಂಬ ಮೂವರು ಮಕ್ಕಳೂ ಹುಟ್ಟಿದರು. ಆ ಯಯಾತಿಗೆ ದೇವೇಂದ್ರನು ಶ್ರೇಷ್ಠವಾದ ಹಾಗೂ ಸೂರ್ಯನಂತೆ ಹೊಳೆಯುವ ಒಂದು ರಥವನ್ನೂ, ಗಾಳಿಯ ವೇಗದಲ್ಲಿ ಓಡುವ ಶುಭ್ರ ಹಯಗಳನ್ನೂ ಸುವರ್ಣದ ಭುಜಕಿರೀಟವನ್ನೂ ಕೊಟ್ಟ. ಇಂದ್ರದತ್ತವಾದ ಆ ದಿವ್ಯರಥದಲ್ಲಿ ಕುಳಿತು ಯಯಾತಿಯು ದಿಗ್ದೇಶಗಳನ್ನೆಲ್ಲ ಸುತ್ತಾಡಿ ದಿಗ್ವಿಜಯ ಮಾಡಿ ಅಖಂಡ ಭೂಮಂಡಲವನ್ನೆಲ್ಲ ತನ್ನ ಪಾದಾಕ್ರಾಂತ ಮಾಡಿಕೊಂಡ. ದೇವತೆಗಳೂ ಅವನಿಗೆ ಹಣದುಮಣಿದರು. ಮಾನವರಂತೂ ಅವನು ಹೇಳಿದಂತೆ ಕುಣಿದರು. ದೈತ್ಯದಾನವರೂ ಸಹ ಅವನಿಗೆ ಸೋತು ಶರಣಾಗತರಾದರು. ಆ ಯಯಾತಿ ರಾಜನಿಗೆ ಸುರರಾಜನ ಕಾಣಿಕೆಯಾಗಿ ಬಂದ ಆ ದಿವ್ಯ ರಥವು ಕುರುವಂಶದ ರಾಜಮನೆತನದ ಅಧೀನದಲ್ಲಿಯೇ ಬಹುಕಾಲ ಇದ್ದಿತು. ಕೊನೆಗೆ ಪರೀಕ್ಷಿತ ಪುತ್ರನಾದ ಜನಮೇಜಯನ ಕಾಲದಲ್ಲಿ ಗರ್ಗ ಮುನಿಯ ಶಾಪದಿಂದ ಕೌರವ ಕುಲದ ಕೈಯಿಂದ ತಪ್ಪಿ ಬೇರೆಯವರ ಕೈ ಸೇರಿತು. ಗರ್ಗಮುನಿಯ ಪುತ್ರನೋರ್ವನನ್ನು ಜನಮೇಜಯರಾಜನು ಕಾಲಚೋದಿತನಾಗಿ ಕೊಂದದ್ದರಿಂದ ಅವನಿಗೆ ಬ್ರಹ್ಮಹತ್ಯಾದೋಷ ತಗುಲಿತ್ತು. ಬ್ರಹ್ಮಹತ್ಯಾದೋಷದಿಂದ

ಕೂಡಿದ ಆ ಜನಮೇಜಯ ರಾಜನನ್ನು ಪ್ರಜೆಗಳೆಲ್ಲರೂ ಸೇರಿ ಸಿಂಹಾಸನದಿಂದ ಕೆಳಗೆ ಇಳಿಸಿದರು. ಬ್ರಾಹ್ಮಣನನ್ನು ಕೊಂದ ರಾಜ ರಾಜ್ಯದ ಶಾಸನ ಸೂತ್ರಗಳನ್ನು ಹಿಡಿಯಲು ಅನರ್ಹ ಎಂದು ಧೈರ್ಯವಾಗಿ ಹೇಳಿ ಆ ಮಹಾರಾಜನಿಗೆ ಸಾಮಾಜಿಕ ಬಹಿಷ್ಕಾರ ಹಾಕಿದರು. ಆದರಿಂದ ರಾಜಧಾನಿಯನ್ನು ಬಿಟ್ಟು ಜನಮೇಜಯ ರಾಜ ಪ್ರಜಾಪರಿವಾರದಿಂದ ಪರಿತ್ಯಕ್ತನಾಗಿ ಊರೂರುಗಳಲ್ಲಿ ಅಲೆದಾಡಿದ. ಕಾಡುಮೇಡುಗಳಲ್ಲಿ ತಿರುಗಿದ. ಎಲ್ಲಿಯೂ ಅವನಿಗೆ ಶಾಂತಿ ಸಿಗಲಿಲ್ಲ. ಕೊನೆಗೆ ಕಂಡ ಕಂಡ ಕಡೆಯಲ್ಲಿ ಅಲೆದು ಬಳಲಿ ಬೆಂಡಾಗಿ ಬಸವಳಿದು ಬೇಸತ್ತು ಆ ಜನಮೇಜಯರಾಜ ಕೊನೆಗೆ ಶರಣುಹೋದ ಶೌನಕಮುನೀಂದ್ರರಿಗೆ. ಮಹಾಜ್ಞಾನಿಗಳು ಆ ಶೌನಕರು. ಧರ್ಮಶಾಸ್ತ್ರದ ಮರ್ಮ, ರಹಸ್ಯ ಎಲ್ಲವೂ ಅವರಿಗೆ ಅಂಗೈಯಲ್ಲಿಯ ನೆಲ್ಲಿ. ಬ್ರಹ್ಮಹತ್ಯೆಯ ದೋಷದಿಂದ ನಿಸ್ತೇಜನೂ ಕ್ಷೀಣಾಕ್ಷಾಮನೂ, ಕಳೆಗಟ್ಟು ಅಂದಗೆಟ್ಟ ಬಣ್ಣವುಳ್ಳವನೂ ಆದ ಪುರುಷಸಾರ್ವ ಭೌಮನನ್ನು ಕಂಡು ಮುನಿಹೃದಯ ಕರಗಿತು. ಜೀವನದಲ್ಲಿಯೇ ನಿರಾಶೆಗೊಂಡ ಆ ಕುರುಚಕ್ರವರ್ತಿಗೆ ಸಮಾಧಾನ ಹೇಳಿ ಅವನ ಮನಸ್ಸಿನಲ್ಲಿ ಧೈರ್ಯತುಂಬಿದ. ಬ್ರಹ್ಮಹತ್ಯೆಯನ್ನು ನಿನ್ನಿಂದ ತೊಲಗಿಸುತ್ತೇನೆ ಎಂದು ಭರವಸೆ ನೀಡಿದರು. ಬ್ರಹ್ಮಹತ್ಯೆಯ ಪಾಪದಿಂದಾಗಿ ಅವನ ದೇಹವೆಲ್ಲವೂ ದುರ್ಗಂಧದಿಂದ ನಾರುತ್ತಿತ್ತು. ಅವನ ಮೈತುಂಬ ತೊನ್ನುರೋಗ ಹಿಡಿದಿತ್ತು. ಕುಷ್ಠರೋಗದಿಂದ ಅವನ ಅವಯವಗಳೂ ಸಹ ಕಳಚಿ ಬೀಳತೊಡಗಿದವು. ಅವನ ದೀನ ದುಃಖಿತವಾದ ಈ ದಯನೀಯ ಸ್ಥಿತಿಯನ್ನು ಕಂಡು ಮಮ್ಮಲನೇ ಮರಗಿದ ಆ ಶೌನಕ ಮಹರ್ಷಿಗಳು ಜನಮೇಜಯ ರಾಜನಿಂದ ತಾವೇ ನಿಂತು ಅಶ್ವಮೇಧಯಾಗವನ್ನು ಮಾಡಿಸಿದರು. ಶೌನಕರ ಸಮರ್ಥವಾದ ನೇತೃತ್ವದಲ್ಲಿ ಯಾವದೇ ಕುಂದು, ಕೊರತೆ, ಲೋಪ, ದೋಷ, ನ್ಯೂನತೆಗಳು ಇಲ್ಲದೇ ಆ ಯಜ್ಞಕಾರ್ಯವು ಸಾಂಗೋಪಾಂಗವಾಗಿ ಯಶಸ್ವಿಯಾಗಿ ನೆರವೇರಿತು. ಯಜ್ಞಸಮಾಪ್ತಿಯ ಅನಂತರ ಆ ಮಹಾಮುನಿಗಳು ಮಹಾರಾಜನಿಗೆ ಅವಭೃಥಸ್ನಾನ ಮಾಡಿಸಿದರು. ಮಂತ್ರಪೂತವಾದ ಆ ಜಲದಲ್ಲಿ ಮಹಾರಾಜ ಮುಳುಗಿ ಮೇಲಕ್ಕೆ ಎದ್ದ. ಇದೇನು ಆಶ್ಚರ್ಯ! ಮುಳುಗು ಹಾಕಿ ಮೇಲೆದ್ದ ಮರುಚಣದಲ್ಲಿಯೇ ಅವನ ಮೈಯಿಂದ ಇಷ್ಟುದಿನಗಳಿಂದ ಸೂಸುತ್ತಿದ್ದ ದುರ್ಗಂಧ ಪೂರ್ಣವಾಗಿ ಇಲ್ಲವಾಗಿತ್ತು. ಅವನ ಸರ್ವಾಂಗವನ್ನು ಕಬಳಿಸಿದ ತೊನ್ನುರೋಗ ತೊಲಗಿ ಹೋಗಿತ್ತು. ಬ್ರಹ್ಮಹತ್ಯೆಯ ಗುರುತಾದ ಸುಟ್ಟ ಕಬ್ಬಿಣದ ವಾಸನೆ, ದುರ್ಗಂಧ, ಮುಂತಾದವು ದೂರವಾಗಿದ್ದವು. ಜನಮೇಜಯನ ದೇಹವು ಮೊದಲಿನಂತೆ ಪುಟ್ಟಕ್ಕೆ ಹಾಕಿದ ಬಂಗಾರ ಬಣ್ಣದಿಂದ ಮತ್ತೆ ಮಿಂಚತೊಡಗಿತು. ಮುಂಚಿನ ಅವನ ದೇಹದ ಸ್ವಾಭಾವಿಕ ಕಳೆ, ಕಾಂತಿ, ಸೌಂದರ್ಯ ದೇಹದಲ್ಲಿ ನಳನಳಿಸತೊಡಗಿದವು. ಅಶ್ವಮೇಧ ಯಜ್ಞದ ಪ್ರಭಾವದಿಂದಲೂ, ಶೌನಕರಂಥ ಗುರುಗಳ ಅನುಗ್ರಹದಿಂದಲೂ ಬ್ರಹ್ಮಹತ್ಯೆ ಆ ರಾಜಪಿಂಡವನ್ನು ಬಿಟ್ಟುಹೋಗಿತ್ತು. (ಈ ಜನಮೇಜಯ ಹಾಗೂ ಅವನ ತಂದೆ ಪರೀಕ್ಷಿತರಾಜರು ಪಾಂಡವರ ಮೊಮ್ಮಗನಾದ ಪರೀಕ್ಷಿತ ಹಾಗೂ ಪರೀಕ್ಷಿತನ ಮಗ ಜನಮೇಜಯ ಅಲ್ಲ. ಆದರೆ ಇವರೂ ಸಹ ಕುರುವಂಶದವರೇ).

ದೇವೇಂದ್ರನು ಯಾಯಾತಿಗೆ ಕೊಟ್ಟ ಆ ದಿವ್ಯರಥವು ಈ ಕುರುವಂಶದಲ್ಲಿ ಈಗ ಇಲ್ಲಿ ಪ್ರಸಕ್ತನಾದ ಮೊದಲನೆಯ ಜನಮೇಜಯನ ಕಾಲದವರೆಗೂ ಇದ್ದಿತು. ಈ ಜನಮೇ ಜಯನಿಗೆ ಬ್ರಹ್ಮಹತ್ಯೆ ತಗಲಿದ ಬಳಿಕ ದೇವೇಂದ್ರನು ಅದನ್ನು ಈ ಜನಮೇಜಯನಿಂದ ತಿರುಗಿ ತೆಗೆದುಕೊಂಡು ಚೇದಿರಾಜನಿಗೆ ಕೊಟ್ಟ. ಈ ಮಹಾರಥವು ಬಂದ ಬಳಿಕ

ಆ ಚೇದಿರಾಜನಿಗೆ ಬೃಹದ್ರಥ ಎಂಬ ಹೆಸರು ಬಂದಿತು. ಬೃಹದ್ರಥನ ಅನಂತರ ಆ ಇಂದ್ರ ರಥವು ವಂಶಪಾರಂಪರ್ಯದಿಂದ ಜರಾಸಂಧನಿಗೆ ಲಭಿಸಿತು. ಜರಾಸಂಧನನ್ನು ಬಲಭೀಮನು ಕೊಂದ ಬಳಿಕ ಆ ರಥವು ಭೀಮನ ಕೈವಶವಾಯಿತು. ಅದನ್ನು ಭೀಮಸೇನನು ಶ್ರೀಕೃಷ್ಣನಿಗೆ ಒಪ್ಪಿಸಿ ಕೈ ಮುಗಿದ.

ಯಯಾತಿಯು ಏಳು ದ್ವೀಪಗಳನ್ನು ಹಾಗೂ ಸಮುದ್ರಗಳನ್ನೂ ಒಳಗೊಂಡ ಭೂಮಿಯನ್ನೆಲ್ಲ ಗೆದ್ದು ಅಖಂಡ ಭೂಮಂಡಲಕ್ಕೆಲ್ಲ ಏಕಛತ್ರಾಧಿಪತಿ ಎನಿಸಿದ. ಈ ಮಹೀಮಂಡಲವನ್ನೆಲ್ಲ ಐದು ಭಾಗ ಮಾಡಿ ತನ್ನ ಒಬ್ಬೊಬ್ಬ ಮಕ್ಕಳನ್ನು ಒಂದೊಂದು ದೇಶಕ್ಕೆ ಅಧಿಪತಿಯಾಗಿ ನಿಯಮಿಸಿದ. ಪೂರ್ವದಿಕ್ಕಿಗೆ ಮಧುಕುಮಾರನನ್ನೂ ಮಧ್ಯದಿಕ್ಕಿಗೆ ಪೂರುವನ್ನೂ, ಆಗ್ನೇಯ ದಿಕ್ಕಿನ ಭೂಭಾಗಕ್ಕೆಲ್ಲ ತುರ್ವಸುವನ್ನೂ, ಉಳಿದೆಲ್ಲ ದಿಕ್ಕುಗಳಿಗೆ ತನ್ನ ಮಿಕ್ಕ ಮಕ್ಕಳನ್ನೂ ಅಧೀಶ್ವರರನ್ನಾಗಿ ನಿಯೋಜಿಸಿದ. ಮುಂದೆ ಮುದುಕನಾದ ಬಳಿಕ ಯಯಾತಿಯು ರಾಜ್ಯಭಾರವನ್ನೆಲ್ಲ ತನ್ನ ಮಕ್ಕಳಿಗೆ ಒಪ್ಪಿಸಿದ. ದೇಹಕ್ಕೆ ಮುಪ್ಪು ಬಂದರೂ ಅವನ ಮನಸ್ಸು ಇನ್ನೂ ತಾರುಣ್ಯದ ತರಳತೆಯಲ್ಲೇ ತೇಲಾಡುತ್ತಿತ್ತು. ಬಹು ದಿನದ ಅನುಭವದಿಂದ ಕಾಮವಾಸನೆ ಇನ್ನೂ ಉದ್ದೀಪ್ತವಾಗಿತ್ತು. ರಾಜ್ಯವನ್ನು ಮಕ್ಕಳಿಗೆ ಪಾಲು ಮಾಡಿ ಮಕ್ಕಳಿಗೆ ಕೊಟ್ಟ ಬಳಿಕ ಅವನು ಯದುವನ್ನು ಕರೆದು ಹೇಳಿದ "ಕುಮಾರ, ನೀನು ನನ್ನ ರಾಜ್ಯವನ್ನು ತೆಗೆದುಕೊಂಡಂತೆ ಈ ಮುಪ್ಪನ್ನು ತೆಗೆದುಕೋ, ನಿನ್ನ ತಾರುಣ್ಯವನ್ನು ನನಗೆ ಕೊಡು. ನಾನು ತರುಣನಾಗಿ ರಾಜ್ಯವನ್ನು ಆಳುತ್ತೇನೆ. ಸುಖೋಪಭೋಗಗಳನ್ನೂ ಭೋಗಿಸುತ್ತೇನೆ.

**ಯದುರಾಜ:-** ತಂದೆಯೇ, ನನ್ನಲ್ಲಿ ಹಿಂದೆ ಒಬ್ಬ ಬ್ರಾಹ್ಮಣ ಭಿಕ್ಷೆ ಬೇಡಲು ಬಂದಿದ್ದ. ಅವನಿಗೆ ನಾನು "ನೀನು ಕೇಳಿದ್ದನ್ನೆಲ್ಲ ಕೊಡುವೆ" ಎಂದು ವಚನ ಕೊಟ್ಟಿರುವೆ. ಈಗ ನಾನು ನನ್ನ ತಾರುಣ್ಯವನ್ನು ನಿನಗೆ ಕೊಟ್ಟು ವೃದ್ಧಾಪ್ಯ ಸ್ವೀಕರಿಸಿ, ಮುದುಕನಾಗಿ ಕುಳಿತರೆ ಆ ಬ್ರಾಹ್ಮಣರ ಅಪೇಕ್ಷೆಗಳನ್ನು ಪೂರೈಸುವದು ಎಂತು? ಆ ಬ್ರಾಹ್ಮಣ ಏನು ಕೇಳುತ್ತಾನೋ, ಏನೇನು ಬೇಕು ಎನ್ನುತ್ತಾನೋ ಯಾರಿಗೆ ಗೊತ್ತು? ಅವನು ಬೇಡಿ ಬಯಸಿದ್ದನ್ನೆಲ್ಲ ಪೂರ್ಣಮಾಡಲು ಅವನಿಗೆ ಬೇಡವಾದವರನ್ನು ಸದೆಬಡೆಯಲು ಸಾಮರ್ಥ್ಯ ಬೇಡವೇ? ನಾನು ಮುಪ್ಪುಹೊಂದಿ ಮೂಲೆ ಹಿಡಿದು ಕುಳಿತರೆ ಪರಾಧೀನನಾದ ನನಗೆ ಇನ್ನೊಬ್ಬರ ಆಶೆ ಆಕಾಂಕ್ಷೆಗಳನ್ನು ಪೂರ್ಣಗೊಳಿಸುವದು ಶಕ್ಯವಾಗಲಾರದು. ಅಪ್ಪ! ಮುಪ್ಪು ಬಹಳ ಘೋರ. ತಿನ್ನುವ ಆಶೆ ಕಡಿಮೆ ಆಗುವದಿಲ್ಲ. ತಿಂದರೆ ತಡೆಯುವದಿಲ್ಲ. ತಿರುಗಾಡುವ ಭೋಗಿಸುವ ಆಶೆ ತಪ್ಪಿರುವದಿಲ್ಲ. ಬೇಕು ಬೇಕಾದಲ್ಲಿ ಹೋಗಿ ತಿಂದು ತಿರುಗಿ ಕುಣಿದು ಕುಪ್ಪಳಿಸಲು ಇಂದ್ರಿಯಗಳಲ್ಲಿ ಶಕ್ತಿಯೇ ಇರುವದಿಲ್ಲ. ಇಂತಹ ಮುಪ್ಪನ್ನು ನಾನು ತೆಗೆದುಕೊಳ್ಳಲಾರೆ. ನಿನಗೆ ನಾನೊಬ್ಬನೇ ಮಗನೇ? ನನಗಿಂತ ಅಧಿಕ ಪ್ರಿಯರಾದ ಬೇರೆ ಮಕ್ಕಳೂ ನಿನಗೆ ಇದ್ದಾರೆ. ಅವರಲ್ಲಿ ಯಾರಾದರೂ ತಂದೆಗಾಗಿ ತ್ಯಾಗವನ್ನು ಮಾಡಬಹುದು.

ಇದನ್ನು ಕೇಳಿ ಯಯಾತಿ ರಾಜನಿಗೆ ಕಡುಕೋಪ ಬಂದಿತು. ಸಿಡಿದು ನುಡಿದ.

**ಯಯಾತಿ:-** "ದುಷ್ಟ! ತಂದೆಯನ್ನು ತಿರಸ್ಕರಿಸಿ ಮಾತನಾಡುವ ನಿನಗೆ ಯಾವ ಧರ್ಮ ಇದೆ? ನೀನು ಮಾಡುವ ಪುಣ್ಯಕರ್ಮ, ಸೇವೆ, ಶುಶ್ರೂಷೆಗಳೆಲ್ಲ ವ್ಯರ್ಥ. ನಿನ್ನ ಸಂತತಿಗೆ ರಾಜ್ಯಾಧಿಕಾರವೇ ಇಲ್ಲದಂತಾಗಲಿ."

ಹೀಗೆ ಯಯಾತಿಯು ಯದುಕುಮಾರನಿಗೆ ಶಾಪಕೊಟ್ಟು ತನ್ನ ಉಳಿದ ಮಕ್ಕಳಾದ ದ್ರುಹ್ಯ, ತುರ್ವಸು, ಅನು ಎಂಬ ತನ್ನ ಉಳಿದ ಮೂರು ಮಕ್ಕಳನ್ನು ಕರೆದು ತನ್ನ ವೃದ್ಧಾಪ್ಯ ತೆಗೆದುಕೊಂಡು ತಾರುಣ್ಯ ಕೊಡಲು ಹೇಳಿದ. ಆದರೆ ಅವರು ಯಾರೂ ಅದಕ್ಕೆ ಒಪ್ಪಲಿಲ್ಲ. ಯದುವಿನಂತೆ ಎಲ್ಲರೂ ತಂದೆಯ ಮಾತನ್ನು ತಿರಸ್ಕರಿಸಿದರು. ಅವರೆಲ್ಲರಿಗೂ ಶಾಪಕೊಟ್ಟು ಕೊನೆಗೆ ಪೂರುಕುಮಾರನನ್ನು ಕೇಳಿದ. ಪರಮಪಿತೃಭಕ್ತ ಆ ಪೂರುಕುಮಾರ. ಉಳಿದ ಸೋದರರಂತೆ ತಂದೆಯ ಮಾತಿನಲ್ಲಿ ಅನಾದರ ತೋರದೇ ಕೂಡಲೇ ಅವನು ಪಿತ್ರಾಜ್ಞೆಯನ್ನು ಮನ್ನಿಸಿದ. ತನ್ನ ತಾರುಣ್ಯವನ್ನು ತಂದೆಗೆ ಕೊಟ್ಟು, ಅವರ ಮುಪ್ಪನ್ನು ಅಂಗೀಕರಿಸಿದ. ಇದರಿಂದ ಯಯಾತಿಗೆ ಪರಮಾನಂದವಾಯಿತು. ಹೊಸ ಹರೆಯ ಏರುಜವ್ವನವನ್ನು ಪಡೆದ ಯಯಾತಿಯು ನವನವ ವಿಷಯಾಸ್ವಾದನೆಗೆ ಉತ್ಸುಕನಾಗಿ ನಿಂತುಕೊಂಡ. ಪೂರುಕುಮಾರನ ನವತಾರುಣ್ಯ ಅವನಲ್ಲಿ ಉತ್ಸಾಹ ಉದ್ರೇಕವನ್ನು ಉಂಟುಮಾಡಿತ್ತು. ಆದರೆ ಅವನು ಹಿಂದಿನ ಇಬ್ಬರು ಮಡದಿಯರು ಮುಪ್ಪಿನ ಮುದುಕಿಯರಾಗಿದ್ದರು. ಅದರಿಂದ ಅವನು ವಿಶ್ವಾಚಿ ಎಂಬ ಅಪ್ಸರೆಯೊಡನೆ ಚೈತ್ರರಥ ಉದ್ಯಾನ, ಗಂಧಮಾದನ ಪರ್ವತ, ಮಂದ್ರದ್ರೋಣಿ ಮುಂತಾದ ಪ್ರಕೃತಿ ಸುಂದರವಾದ ನಿಸರ್ಗ ರಮಣೀಯ ಸ್ಥಾನಗಳಲ್ಲಿ ಮಧುಚಂದ್ರ ವಿಹಾರ ಮಾಡಿ ಸ್ವಚ್ಛಂದ ಕ್ರೀಡೆಯಿಂದ ಆನಂದ ಅನುಭವಿಸಿದ. ಬಹುಕಾಲ ಪರ್ಯಂತ ಸ್ವರ್ಗದ ಬೆಲೆವೆಣ್ಣನೊಡನೆ ಮಾಡಿದ ವಿಹಾರದಿಂದಲೂ ಅವನ ಮನಸ್ಸು ತಣಿಯಲಿಲ್ಲ. ಇಂದ್ರಿಯಗಳು ತೃಪ್ತವಾಗಲಿಲ್ಲ. ಕಾಮವಾಸನೆ ಕೆರಳುತ್ತಲೇ ಇತ್ತು. ಭೋಗಾಭಿಲಾಷೆ ಬಲಿಯುತ್ತಲೇ ಇತ್ತು. ಕೊನೆಗೆ ಅವನು ಈ ಭೋಗಾನುಭೋಗಗಳಿಂದ ಬೇಸತ್ತು "ತ್ಯಾಗದಲ್ಲಿ ಸುಖವಿದೆ; ಭೋಗದಲ್ಲಿ ಇಲ್ಲ" ಎಂಬ ಸತ್ಯ ತತ್ವವನ್ನು ಕಂಡುಕೊಂಡ. ಅವನ ಬಾಯಿಂದಲೆ ವಿಷಯ ಭೋಗಕ್ಕೆ ಅಲಂಬುದ್ಧಿ ಇಲ್ಲ ಎಂಬ ಉದ್ಗಾರ ಹೊರಟಿತು.

ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ।
ಹವಿಷಾ ಕೃಷ್ಣವರ್ತ್ಮೇವ ಭೂಮ ಏವಾಭಿವರ್ಧತೇ॥

ವಿಷಯ ಸುಖವನ್ನು ಅನುಭವಿಸುವದರಿಂದ ಆ ಭೋಗದ ಆಶೆಯು ಎಂದಿಗೂ ಶಾಂತವಾಗುವದಿಲ್ಲ. ಉಪಭೋಗ ಮಾಡಿದಂತೆ ಅದು ತುಪ್ಪ ಹೊಯ್ದ ಬೆಂಕಿಯಂತೆ ಮತ್ತಿಷ್ಟು ಅಭಿವೃದ್ಧವೇ ಆಗುತ್ತದೆ. ಸುಖಾನುಭವದ ಆಸೆಯು ಚಿಗುರುತ್ತಲೇ ಹೋಗುತ್ತದೆ. ಭೂಮಿಯಲ್ಲಿರುವ ದವಸಧಾನ್ಯ, ಬಂಗಾರ, ಪಶು, ಸ್ತ್ರೀ ಎಲ್ಲವನ್ನೂ ಒಬ್ಬನಿಗೆ ಕೊಟ್ಟರೂ ಸಾಕು ಎನಿಸುವದಿಲ್ಲ. ಆದುದರಿಂದ ಈ ವಿಷಯಗಳನ್ನು ಪರಿತ್ಯಾಗ ಮಾಡುವದೇ ಅವುಗಳನ್ನು ಗೆಲ್ಲಲು ಇರುವ ಏಕಮಾತ್ರ ಉಪಾಯ.

ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ।
ಯೋಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಂ॥

ಮೂಢರು ಆಸೆಯನ್ನು ಬಿಡಲು ಅಸಮರ್ಥರು. ಇಂಥವರ ಶರೀರವೆಲ್ಲವೂ ಜೀರ್ಣವಾದರೂ ಆಸೆ ಮಾತ್ರ ಜೀರ್ಣವಾಗದೇ ಹಾಗೇ ಉಳಿಯುವದು. ಆಸೆ ಎಂಬುದು ಸಾಯುವವರೆಗೂ ಇರುವ ಮಹಾ ಒಳರೋಗ. ಇಂಥ ದುರ್ಲಕ್ಷಣೋಪೇತವಾದ ಆಸೆಗಳನ್ನು ತ್ಯಜಿಸಿದವನೇ ಸುಖಿಯಾಗುವನು. ದುರ್ಮತಿಯು ಆಸೆಗಳನ್ನು ತ್ಯಜಿಸದೇ ದುಃಖಕ್ಕೆ ಒಳಗಾಗುವನು.

**ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ।**
**ಧನಾಶಾ ಜೀವಿತಾಶಾ ಚ ಜೀರ್ಯತೋಽಪಿ ನ ಜೀರ್ಯತಿ॥**

ವೃದ್ಧನಾದ ಮೇಲೆ ಅವನ ತಲೆ ಕೂದಲುಗಳು ಉದುರುವವು. ಹಲ್ಲುಗಳು ಬಿದ್ದು ಹೋಗುವವು. ಆದರೆ ಧನಾಶೆ, ಬದುಕೆಂಬ ಆಶೆ (ಜೀವಿತಾಶೆ) ಇವೆರಡೂ ನಷ್ಟವಾಗುವದಿಲ್ಲ.

**ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಂ।**
**ತೃಷ್ಣಾಕ್ಷಯ ಸುಖಸ್ಯೈತೇ ನಾರ್ಹಂತಿ ಷೋಡಶೀಂ ಕಲಾಂ॥**

ಲೋಕದಲ್ಲಿರುವ ವಿಷಯ ಸುಖ ಮತ್ತು ಸ್ವರ್ಗಲೋಕದ ಮಹಾಸುಖ ಇವೆಲ್ಲ ಸೇರಿದರೂ ಸಹ ಆಸೆಯನ್ನು ಪರಿತ್ಯಜಿಸುವದರಿಂದ ಉಂಟಾಗುವ ನೈಜಸುಖದ ಹದಿನಾರನೆಯ ಒಂದಂಶವನ್ನೂ ಸರಿ ತೂಗಲಾರವು.

ಹೀಗೆ ಹೇಳಿ ರಾಜರ್ಷಿಯಾದ ಯಯಾತಿಯು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಹೆಂಡತಿಯ ಜೊತೆಗೆ ಅರಣ್ಯಕ್ಕೆ ತೆರಳಿದ. ಅಲ್ಲಿ ಬಹುಕಾಲದವರೆಗೆ ಘೋರ ತಪಸ್ಸನ್ನು ಆಚರಿಸಿದ ತಪಸ್ಸನ್ನು ಅಂತ್ಯಗೊಳಿಸುವ ಸಂದರ್ಭದಲ್ಲಿ ನಿರಶನವ್ರತ ಆಚರಿಸಿದ. ತತ್ಪರಿಣಾಮವಾಗಿ ಕೆಲಕಾಲ ಕಳೆದ ನಂತರ ಭೃಗುತುಂಗ ಎಂಬ ಕ್ಷೇತ್ರದಲ್ಲಿ ದೇಹತ್ಯಾಗ ಮಾಡಿ, ಪತ್ನಿಯೊಡನೆ ಸ್ವರ್ಗ ಸೇರಿದ.

ಯಯಾತಿಯ ಮಕ್ಕಳಾದ ಐದು ಜನ ರಾಜರ್ಷಿಗಳು ಭೂಮಂಡಲವನ್ನೆಲ್ಲ ಆಳಿದರು. ಇವರಲ್ಲಿ ಯದುರಾಜನು ಶ್ರೇಷ್ಠನು. ಇವನ ವಂಶದಲ್ಲೇ ಸಾಕ್ಷಾತ್ ಶ್ರೀಮನ್ನಾರಾಯಣನು ಶ್ರೀಕೃಷ್ಣರೂಪದಿಂದ ಅವತರಿಸಿ ಭೂಭಾರ ಹರಣಮಾಡಿದ ಲೋಕಕಲ್ಯಾಣ ಸಾಧಿಸಿದ.

**ಶೌನಕಾದಿ ಬ್ರಾಹ್ಮಣರು:-** ಸೂತ ಮುನಿಗಳೇ, ಪೂರು, ದ್ರುಹ್ಯು, ಅನು, ಯದು, ತುರ್ವಸು ಮುಂತಾದ ರಾಜಕುಮಾರರ ವಂಶದ ವಿಸ್ತಾರವನ್ನು ನಮಗೆ ಹೇಳಿರಿ.

**ಸೂತ:-** ಪೂರುವಿನ ಮಗ ಸುವೀರ. ಸುವೀರನಿಂದ ಮರಸ್ಯು, ಮನಸ್ಯುಪುತ್ರ. ಅಭಯದ. ಅಭಯದನ ಮಗ ಸುಧನ್ವ. ಸುಧನ್ವನ ಮಗ ಸುಬಾಹು. ರೌದ್ರಾಶ್ವ ಸುಬಾಹುವಿನ ವರಪುತ್ರ. ರೌದ್ರಾಶ್ವನಿಗೆ ಹತ್ತು ಜನ ಗಂಡುಮಕ್ಕಳು. ಹತ್ತು ಜನ ಹೆಣ್ಣು ಮಕ್ಕಳು. ಇವರಿಂದ ಪೂರುವಿನ ವಂಶ ಅತ್ಯಧಿಕವಾಗಿ ಅಭಿವೃದ್ಧಿಯನ್ನು ಪಡೆಯಿತು. ದಶಾರ್ಣೇಯ, ಕಕ್ಷೇಯು, ಖಗೇಯು, ಕೃಕರ್ಣೇಯು, ಸ್ಥಂಡಿಲೇಯು, ಸ್ಥಲೇಯು, ಜಲೇಯು, ಧನೇಯು, ವನೇಯು, ಸನ್ನತೇಯು ಇವರೇ ಆ ರೌದ್ರಾಶ್ವನಿಂದ ಹುಟ್ಟಿದ ದಶಕುಮಾರರು. ಅವನ ಹತ್ತು ಹೆಣ್ಣು ಮಕ್ಕಳ ಹೆಸರು ಭದ್ರಾ, ಶೂದ್ರಾ, ಮದ್ರಾ, ಶಲದಾ, ಮಲದಾ, ಬಲದಾ, ನಲದಾ, ಸುರಸಾ, ಗೋಚಪಲಾ, ಸ್ತ್ರೀರತ್ನಕೂಟಾ ಎಂದು ಇದ್ದಿತು. ಅತ್ರಿ ವಂಶದ ಪ್ರಭಾಕರ ಎಂಬ ಋಷಿಯು ರೌದ್ರಾಶ್ವನ ಹಿರಿಯ ಮಗಳಾದ ಭದ್ರಾದೇವಿಯ ಕೈ ಹಿಡಿದು ಅವಳಲ್ಲಿ ಸೋಮ ಎಂಬ ಪುತ್ರನನ್ನು ಪಡೆದ. ಅತ್ರಿವಂಶದಲ್ಲಿ ಈ ಪ್ರಭಾಕರ ಋಷಿ ಮಹಾಪ್ರಭಾವಶಾಲಿ. ಹಿಂದೆ ಒಮ್ಮೆ ಸೂರ್ಯನು ರಾಹುವಿನಿಂದ ಹತನಾಗಿ ಗಗನದಿಂದ ಭೂಮಿಗೆ ಬೀಳತೊಡಗಿದ. ಲೋಕದ ತುಂಬ ಎತ್ತೆತ್ತಲೂ ಕತ್ತಲೆ. ಎಲ್ಲರಿಗೂ ಅಂಧತಮಸ್ಸಿನಲ್ಲಿಯೇ ಮಿಂದು ಬಂದಂತೆ ಅಂಧತೆಯ ಅನುಭವ. ಜಗತ್ತೆಲ್ಲವೂ ಕತ್ತಲೆಯ ಮೊತ್ತದಲ್ಲಿ ಅತ್ತಿತ್ತ ಚಲಿಸಲೂ ಸಹ ಆಗದೇ

ತತ್ತರಿಸಿ ಹೋಯಿತು. ಜಗದ್ವ್ಯಾಪಾರಗಳೆಲ್ಲವೂ ಪ್ರತಿಬದ್ಧವಾದವು. ಆಗ ಪ್ರಭಾಕರ ಮಹರ್ಷಿಯು ತನ್ನ ತಪೋಮಹಿಮೆಯಿಂದ ಬೆಳಕನ್ನು ಉಂಟುಮಾಡಿದ. ಕತ್ತಲೆಯನ್ನೆಲ್ಲ ಕಳೆದ. ಪ್ರಪಂಚಕ್ಕೆಲ್ಲ ಪ್ರಕಾಶ ನೀಡಿ ತಾಮಸ ರಾಜ್ಯದಿಂದ ಜನರನ್ನೆಲ್ಲ ಪಾರುಮಾಡಿದ. ರಾಹುವಿನ ಪ್ರಹಾರದಿಂದ ಭೂಮಿಗೆ ಬೀಳುತ್ತಲಿರುವ ಸೂರ್ಯನನ್ನು ತಡೆದು ನಿಲ್ಲಿಸಿ ''ನಿನಗೆ ಮಂಗಳವಾಗಲಿ'' ಎಂದು ಹೇಳಿದ. ಪತನೋನ್ಮುಖನಾದ ಸೂರ್ಯನನ್ನು ಹಿಡಿದು ಎತ್ತಿ ನಿಲ್ಲಿಸಿ ಮತ್ತೆ ಸ್ವಸ್ಥಾನದಲ್ಲಿ ಪ್ರತಿಷ್ಠಾಪನೆಗೈದ. ಈ ಪ್ರಭಾಕರ ಮುನಿಯು ತನ್ನ ತಪಃ ಪ್ರಭಾವ ಹಾಗೂ ತೇಜಃ ಪ್ರಕರ್ಷಗಳಿಂದ ಪ್ರಭಾಕರನೇ ಆಗಿ ಪ್ರಕಾಶಪುಂಜದಿಂದ ಧಾಮನಿಧಿಯಾಗಿ ಮೆರೆದ. ಈ ಪ್ರಭಾಕರ ಮುನಿಗೆ ಹತ್ತು ಜನ ಹೆಂಡಂದಿರು. ಅದರಲ್ಲಿ ಹತ್ತು ಜನ ಮಹಾನುಭಾವರಾದ ಮಕ್ಕಳನ್ನು ಪಡೆದ ಆ ಪ್ರಭಾಕರ. ಪ್ರಭಾಕರನ ಪುತ್ರರಾದ ಈ ಹತ್ತು ಜನರೂ ಮಹಾತಪಸ್ವಿಗಳು. ತಂದೆಯಂತೆಯೇ ಸೂರ್ಯನ ಸಮಾನ ವರ್ಚಸ್ವಿಗಳು. ಇವರೆಲ್ಲರೂ ವೇದವೇದಾಂತಗಳಲ್ಲಿ ವಿದ್ವಾಂಸರು. ಪ್ರಭಾಕರನು ಆಕಾಶದಿಂದ ಕೆಳಗೆ ಬೀಳುತ್ತಿದ್ದ ಸೂರ್ಯನಿಗೆ ಸ್ವಸ್ತಿ ಎಂದು ಸ್ವಸ್ತಿವಾಚನ ಮಾಡಿ ಅವನ ಭೂಮಿಪಾತವನ್ನು ತಡೆದು ನಿಲ್ಲಿಸಿದ್ದರಿಂದ ಅವನು ಎಂದರೆ ಅತ್ರಿ ವಂಶದ ಪ್ರಭಾಕರನು 'ಸ್ವಸ್ತ್ಯತ್ರಿ' ಎನಿಸಿದ. ಮುಂದೆ ಆ ವಂಶದವರು ಸ್ವಸ್ತ್ಯಾತ್ರೇಯರು ಎಂಬುದಾಗಿ ಪುರಾಣ ಗ್ರಂಥಗಳಲ್ಲಿ ಪ್ರಸಿದ್ಧಿ ಪಡೆದರು. ಈ ಸ್ವಸ್ತ್ಯಾತ್ರೇಯರು ಅಯಾಚಿತ ವೃತ್ತಿಯವರು. ಅಪರಿಗ್ರಹ ಅವರ ಮುಖ್ಯ ಧರ್ಮ. ಅದರಿಂದ ದಾರಿದ್ರ್ಯವು ಅವರ ಮನೆತನದ ಬಳುವಳಿಯಾಗಿ ಬೆಳೆದು ಬಂದಿತು. ಆದರೆ ಜ್ಞಾನ ವೈರಾಗ್ಯಗಳ ಸಿರಿವಂತಿಕೆ, ವೇದ ವೇದಾಂತಗಳ ಧೀಮಂತಿಕೆ ಮಾತ್ರ ಎಂದೂ ಆ ವಂಶದವರಲ್ಲಿ ಕುಗ್ಗಲಿಲ್ಲ.

ಕಕ್ಷೇಯು ರಾಜನಿಗೆ ಸಭಾನರ, ಚಾಕ್ಷುಷ, ಪರಮನು ಎಂಬ ಮೂವರು ವೀರರಾದ ಮಕ್ಕಳು ಇದ್ದರು. ಸಭಾನರನ ಮಗನೇ ಕಾಲಾನಲ. ಕಾಲಾನಲನಿಂದ ಸೃಂಜಯ ಜನಿಸಿದ. ಧರ್ಮಜ್ಞನಾದ ಈ ಸೃಂಜಯ ಧರ್ಮಶಾಸ್ತ್ರದ ಮರ್ಮಜ್ಞನೂ ಆಗಿದ್ದ. ಪುರಂಜಯನೆಂದು ಇತಿಹಾಸ ಪ್ರಸಿದ್ಧನಾದ ಮಹಾರಾಜ ಈ ಸೃಂಜಯನ ವರಪುತ್ರ. ರಾಜರ್ಷಿಯಾದ ಜನಮೇಜಯ ಈ ಪುರಂಜಯನ ಚಿರಂಜೀವ. ಜಯಮೇಜಯನ ತನುಜಾತನಾದ ಮಹಾಶಾಲ ತ್ರಿಲೋಕ ಪ್ರಸಿದ್ಧ. ಅವನ ಕೀರ್ತಿ ಮಾನವಲೋಕವನ್ನು ಮೀರಿ ಸುರಸಾಮ್ರಾಜ್ಯದ ಸೀಮೆಗುಂಟ ಹರಡಿ ಅವನಿಗೆ ದೇವಲೋಕದಲ್ಲಿಯೂ ಗೌರವ ಬರುವಂತೆ ಮಾಡಿತು. ಮಹಾಶಾಲನಿಗೆ ಮಹಾಮನಸ್ ಎಂಬ ತಂದೆಯಂತೆಯೇ ಕೀರ್ತಿಶಾಲಿಯಾದ ಪುತ್ರ ಜನಿಸಿದ. ದೇವತೆಗಳಿಗೂ ಗೌರವ ಬುದ್ಧಿ ಆ ಮಹಾಮನಸ್ ಮಹಾರಾಜನಲ್ಲಿ. ಆ ಮಹಾರಾಜನಿಗೆ ಉಶೀನರ, ದಿತಿಕ್ಷು ಎಂಬ ಹೆಸರಿನ ಇಬ್ಬರು ಮಕ್ಕಳು. ದಿತಿಕ್ಷುವು ಬಲಿಷ್ಠನಾದರೆ ಉಶೀನರ ಧರ್ಮಿಷ್ಠ. ಈ ಉಶೀನರ ಮಹಾರಾಜ ನೃಗಾದೇವಿ, ಕ್ರಿಮಿದೇವಿ, ನವಾದೇವಿ, ದುರ್ವಾದೇವಿ, ದೃಷದ್ವತಿದೇವಿ ಎಂಬ ಪಂಚಕನ್ಯೆಯರನ್ನು ಕೈಹಿಡಿದು ಮದುವೆಯಾದ. ಈ ಐವರು ಧರ್ಮಪತ್ನಿಯರಲ್ಲಿ ಅವನಿಗೆ ಕುಲಕ್ಕೆ ಕೀರ್ತಿಯನ್ನು ತರುವ ಪಂಚಪುತ್ರರು ಉತ್ಪನ್ನರಾದರು. ಮೊದಲು ಈ ಉಶೀನರಿಗೆ ಆಗಿರಲೇ ಇಲ್ಲ ಸಂತಾನ. ವೃದ್ಧಾಪ್ಯದಲ್ಲಿ ಉಗ್ರ ತಪಸ್ಸನ್ನು ಕೈಗೊಂಡ ಆ ರಾಜರ್ಷಿ. ಸಂತಾನಕ್ಕಾಗಿ ದೇವತೆಗಳು ಅವನ ತಲೆಯ ಮೇಲೆ ವರದ ಹಸ್ತ ಇಟ್ಟರು. ಅದರಿಂದ ಅವನಿಗೆ ಪಂಚಪುತ್ರರು ಉತ್ಪನ್ನರಾದರು. ಈ ಉಶೀನರ ಮಹಾರಾಜನಿಗೆ ಹಿರಿಯ

ಧರ್ಮಪತ್ನಿಯಾದ ನೃಗಾದೇವಿಯಲ್ಲಿ ನೃಗರಾಜ, ಕ್ರಿಮಿದೇವಿಯಲ್ಲಿ ಕ್ರಿಮಿರಾಜ, ನವಾದೇವಿಯಲ್ಲಿ ನವಕುಮಾರ, ದೂರ್ವಾದೇವಿಯಲ್ಲಿ ಸುವ್ರತ, ದೃಷದ್ವತಿಯಲ್ಲಿ ಶಿಬಿಚಕ್ರವರ್ತಿ ಮಕ್ಕಳಾಗಿ ಹುಟ್ಟಿದರು. ಶಿಬಿಚಕ್ರವರ್ತಿಗೆ ವೃಷದರ್ಭ, ಸುವೀರ, ಕೇಕಯ, ಮದ್ರಕ ಎಂದು ಸುಪ್ರಸಿದ್ಧರಾದ ನಾಲ್ಕುಜನ ಮಕ್ಕಳು, ಅವರು ಆಳುವ ದೇಶಗಳಿಗೂ ಆ ಶಿಬಿಕುಮಾರರ ಹೆಸರೇ ಬಂದು ಅವೆಲ್ಲವೂ ಕೇಕಯ ಮದ್ರಕ, ಸುವೀರ, ವೃಷದರ್ಭಿ ದೇಶಗಳು ಎಂದು ಭಾರತದ ಭೂಗೋಲದಲ್ಲಿ ಪ್ರಸಿದ್ಧವಾದವು.

ಮಹಾಮನನ ಇನ್ನೊಬ್ಬ ಮಗನಾದ ತಿತಿಕ್ಷು ಪೂರ್ವ ದಿಕ್ಕಿನಲ್ಲಿ ರಾಜ್ಯವಾಳುತ್ತಿದ್ದ. ಅವನಿಗೆ ಯಷದ್ರಥ, ಫೇನ ಎಂಬ ಇಬ್ಬರು ಗಂಡುಮಕ್ಕಳು ಹುಟ್ಟಿದರು. ಫೇನರಾಜನ ಮಗನೇ ಸುತಪಸ, ಸುತಪಸನ ಔರಸ ಪುತ್ರನೇ ಬಲಿರಾಜ. ದೈತೇಶ್ವರನಾದ ಬಲಿ ಚಕ್ರವರ್ತಿಯೇ ಮನುಷ್ಯರೂಪದಿಂದ ಸುತಪನ ಮಗನಾಗಿ ಹುಟ್ಟಿದ. ಮಾನವನಾಗಿ ಮೈದಾಳಿದ ಈ ಬಲಿರಾಜ ಮಹಾಯೋಗಿ. ಅವನಿಗೂ ಅಂಗ, ಮಗ, ಸುಂಹ, ಪುಂಡ್ರ, ಕಲಿಂಗ ಎಂಬ ಐದು ಜನ ವೀರಾಗ್ರಣಿಗಳಾದ ಮಕ್ಕಳು ಆದರು. ಈ ರಾಜಕುಮಾರರ ಹೆಸರುಗಳಿಂದಲೇ ಅವರು ಆಳಿದ ನಾಡುಗಳು ಇಂದಿಗೂ ಪ್ರಸಿದ್ಧವಾಗಿವೆ. ಈ ಬಲಿರಾಜನು ಮಾಡಿದ ಧರ್ಮನಿಷ್ಠವಾದ ರಾಜ್ಯಪರಿಪಾಲನೆ, ಯಜ್ಞ, ಯಾಗ, ಮುಂತಾದ ಧರ್ಮ ಕರ್ಮಗಳಿಂದ ಪರಮಪ್ರೀತನಾದ ಚತುರ್ಮುಖಬ್ರಹ್ಮ. "ಕಲ್ಪಕಾಲದವರೆಗೆ ಯೋಗೀಶ್ವರನಾಗಿ ಜೀವಿಸು" ಎಂದು ಆಶೀರ್ವದಿಸಿದ. "ಧರ್ಮಧುರೀಣನೂ, ಯುದ್ಧದಲ್ಲಿ ಅಜೇತನೂ ಆದ ನೀನು ಮನುಷ್ಯ ಶರೀರದಿಂದಲೇ ಅಪ್ರತಿಹತವಾದ ಗತಿಯಿಂದ ಮೂರು ಲೋಕದಲ್ಲಿಯೂ ಮನಬಂದತ್ತ ಸಂಚರಿಸು. ಸತ್ಸಂತಾನಪಡೆ, ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರ ನಾಲ್ಕೂ ವರ್ಣಗಳನ್ನು ಶಾಸ್ತ್ರೋಕ್ತ ರೀತಿಯಿಂದ ಸ್ಥಾಪಿಸಿ ಕೀರ್ತಿವಂತನಾಗಿ ಬಾಳು" ಎಂದು ಆಶೀರ್ವದಿಸಿದ.

ಹೀಗೆ ಬ್ರಹ್ಮನಿಂದ ವರಪಡೆದ ಬಲಿರಾಜ ಧರ್ಮದಿಂದ ರಾಜ್ಯವಾಳಿ ಮೂರು ಲೋಕಗಳನ್ನೆಲ್ಲ ಶಾಂತಿಸಾಗರವನ್ನಾಗಿ ಮಾಡಿದ. ಬಹುಕಾಲದವರೆಗೆ ಧರ್ಮದಿಂದ ರಾಜ್ಯವಾಳುತ್ತ ಕೊನೆಗೆ ಕಾಲ ಪ್ರಾಪ್ತವಾದ ಅವಸಾನ ಹೊಂದಿ ತನ್ನ ಹಿಂದಿನ ಬಲಿಚಕ್ರವರ್ತಿ ಸ್ಥಾನಕ್ಕೆ ತೆರಳಿದ. ಅಂಗ, ವಂಗ, ಕಳಿಂಗ, ಪುಂಡ್ರ, ಸುಂಹ ಎಂದು ಈ ಬಲಿಪುತ್ರರ ಹೆಸರಿನಿಂದಲೇ ಪ್ರಸಿದ್ಧವಾದ ಈ ಐದು ದೇಶಗಳಲ್ಲಿ ರಾಮರಾಜ್ಯವೇ ತಲೆ ಎತ್ತಿದಂತೆ ಇತ್ತು. ಪ್ರಜೆಗಳೆಲ್ಲರೂ ಪರಮಪ್ರೀತರು, ನಿತ್ಯತೃಪ್ತರೂ ಆಗಿ ತಮ್ಮ ರಾಜರನ್ನು ಹಾಡಿಹರಸುತ್ತಿದ್ದರು. ಅಂಗರಾಜನ ಮಗನಾದ ದಧಿವಾಹನ. ದಧಿವಾಹನನಿಗೆ ದಿವ್ಯರಥ, ದಿವ್ಯರಥನಿಗೆ ಧರ್ಮರಥ ಎಂಬ ಮಕ್ಕಳು ಜನಿಸಿದರು. ಈ ಧರ್ಮರಥ ಇಂದ್ರನಂತೆ ಪರಾಕ್ರಮಿ. ಬೃಹಸ್ಪತಿಯಂತೆ ವಿದ್ವಾಂಸ. ಈ ಧರ್ಮರಥ ಕಾಲಂಜರ ಪರ್ವತದಲ್ಲಿ ಯಜ್ಞಮಾಡಿ ದೇವೇಂದ್ರನೊಡನೆ ಸೋಮಪಾನಮಾಡಿದ. ಮಹಾತ್ಮನಾದ ಈ ಧರ್ಮರಥನಿಗೆ ಪುಣ್ಯಾತ್ಮನಾದ ಚಿತ್ರರಥ ಎಂಬ ಮಗನು ಇದ್ದ. ಆ ಚಿತ್ರರಥನ ಚಿರಂಜೀವನಾದ ಲೋಮಪಾದನಿಗೆ ದಶರಥರಾಜನು ತನ್ನ ಮಗಳಾದ ಶಾಂತಾದೇವಿಯನ್ನು ದತ್ತು ನೀಡಿದ. ಆ ಲೋಮಪಾದನಿಗೆ ದಶರಥ ಎಂದೂ ಹೆಸರು ಇದ್ದಿತು. ಈ ದಶರಥ ಕುಮಾರಿಯಾದ ಶಾಂತಾದೇವಿಯನ್ನು ವಿಭಾಂಡಕ ಸೂನುವಾದ ಋಷ್ಯಶೃಂಗನಿಗೆ ಮದುವೆ ಮಾಡಿಕೊಟ್ಟರು. ಆ ಋಷ್ಯಶೃಂಗನ ಪ್ರಸಾದದಿಂದ ಲೋಮಪಾದ ರಾಜನಿಗೆ ಚತುರಂಗನ

ಎಂಬ ಓರ್ವ ವಂಶಾಭಿವೃದ್ಧಿಯನ್ನು ಸಾಧಿಸುವ ಸತ್ಪುತ್ರ ಜನಿಸಿದ. ಈ ಚತುರಂಗನ ಮಗನೇ ಪೃಥುಲಾಕ್ಷ. ಪೃಥುಲಾಕ್ಷನ ಮಗ ಚಂಪ. ಚಂಪನು ನಿರ್ಮಿಸಿದ ರಮ್ಯವಾದ ನಗರಿಯೇ ಚಂಪಾ. ಈ ಚಂಪರಾಜನು ಪೂರ್ಣಭದ್ರ ಮುನಿಯ ಅನುಗ್ರಹದಿಂದ ಹರ್ಯಂಗ ಎಂಬ ಪುತ್ರನನ್ನು ಪಡೆದ. ಋಷ್ಯಶೃಂಗನು ತನ್ನ ಮಂತ್ರಬಲದಿಂದ ಇಂದ್ರನ ವಾಹನವಾದ ಐರಾವತವನ್ನು ಇಳಿಸಿ ಈ ಹರ್ಯಂಗ ರಾಜನಿಗೆ ವಾಹನವನ್ನಾಗಿ ಮಾಡಿದ. ಭದ್ರರಥ ಈ ಹರ್ಯಂಗನ ಮಗ. ಹರ್ಯಂಗನಿಂದ ಮುಂದೆ ಇವರ ವಂಶವು ಭದ್ರರಥ, ಬೃಹತ್‌ಕರ್ಮ, ಬೃಹದ್ದರ್ಭ, ಬೃಹನ್ಮನ, ಜಯದ್ರಥ, ದೃಢರಥ, ಜನಮೇಜಯ, ಕರ್ಣ ರಾಜ, ವಿಕರ್ಣ ಮುಂತಾದ ರಾಜ ಮಹಾರಾಜರ ಪರಂಪರೆಯಿಂದ ಮುಂದುವರೆಯಿತು. ಆ ವಿಕರ್ಣನಿಗೆ ನೂರುಜನ ಮಕ್ಕಳು. ಅವರಿಂದ ಆ ವಂಶ ಇನ್ನೂ ಬಿತ್ತರಗೊಂಡಿತು.

**ಸೂತ:-** ಬ್ರಾಹ್ಮಣೋತ್ತಮರೇ, ರೌದ್ರಾಶ್ವ ರಾಜನ ಮಗನಾದ ಋಚೇಯ ರಾಜನ ವಂಶಾಭಿವೃದ್ಧಿಯ ಕಥೆಯನ್ನು ಹೇಳುತ್ತೇನೆ ಕೇಳಿರಿ. ಋಚೇಯು ರಾಜನಿಗೆ ಮತಿನಾರ ಎಂಬ ವಿನಯಾನ್ವಿತನಾದ ತನಯ ಇದ್ದ. ಅವನಿಗೆ ಮೂರುಮಂದಿ ಮಕ್ಕಳು, ವಸುರೋಧ, ಪ್ರತಿರಥ, ಸುಬಾಹು ಎಂದು ಎಲ್ಲರೂ ವೇದವಿದರು. ಶಾಸ್ತ್ರಕೋವಿದರು, ಬ್ರಾಹ್ಮಣ ಪ್ರಿಯರು, ಸತ್ಯವಾದಿಗಳು, ಧರ್ಮಾತ್ಮರು. ಮತಿನಾರನಿಗೆ ಇಳಾದೇವಿಯೆಂಬ ಒಬ್ಬ ಹೆಣ್ಣುಮಗಳೂ ಇದ್ದಳು. ಆತ್ಮಜ್ಞಾನ ಕೆನೆಗಟ್ಟಿತ್ತು. ತತ್ವದರ್ಶಿನಿಯಾದ ಆ ಮಹಿಳಾಮಣಿಯಲ್ಲಿ ತಂಸು ಎಂಬ ರಾಜರ್ಷಿ. ಅವಳ ಪಾಣಿಗ್ರಹಣ ಮಾಡಿದ. ಆ ಇಲಾ, ತಂಸು ದಂಪತಿಗಳ ಸತ್ಪುತ್ರನೇ ಧರ್ಮನೇತ್ರ. ಅವನು ತಾಯಿಯಂತೆ ಬ್ರಹ್ಮವಾದಿ. ತಂದೆಯಂತೆ ಪರಾಕ್ರಮಿ. ಅವನ ಹೆಂಡತಿ ವದಾನವಿ. ಈ ಧರ್ಮನೇತ್ರ ದಂಪತಿಗಳಿಂದ ದುಷ್ಯಂತ, ಸುಷ್ಮಂತ, ಪ್ರವೀರ, ಅನಘು ಎಂಬ ನಾಲ್ಕು ಜನ ಮಕ್ಕಳು ಹುಟ್ಟಿದರು. ದುಷ್ಯಂತನಿಗೆ ಮಹಾಪರಾಕ್ರಮ ಶಾಲಿಯಾದ ಸರ್ವದಮನ ಎಂಬ ಗಂಡು ಮಗು ಜನಿಸಿದ. ಅವನಲ್ಲಿ ಹತ್ತು ಸಾವಿರ ಆನೆ ಬಲ ಇದ್ದಿತು. ಅವನು ಶ್ರೀಹರಿಯಂತೆ ದುಷ್ಟಶಿಕ್ಷಣ, ಶಿಷ್ಟಪರಿಪಾಲನ ಮಾಡಿ ರಾಜ ಎಂದರೆ ವಿಷ್ಣುವಿನ ಪ್ರತಿರೂಪ ಎಂಬ ಹಿರಿಯ ಉಕ್ತಿಯನ್ನು ಸತ್ಯವನ್ನಾಗಿ ಮಾಡಿದ. ಈ ಸರ್ವದಮನನಿಗೆ ಭರತ ಎಂದು ಇನ್ನೊಂದು ಹೆಸರು. ದುಷ್ಯಂತನಿಂದ ಶಕುಂತಲೆಯಲ್ಲಿ ಜನಿಸಿದ. ಈ ಸರ್ವದಮನ ಭೂಮಂಡಲಕ್ಕೆಲ್ಲ ಚಕ್ರವರ್ತಿ ರಾಜನಾಗಿದ್ದ. ಅವನ ಹೆಸರು ಭರತ ಇದ್ದುದರಿಂದ ಅವನು ಆಳುತ್ತಿದ್ದ ಈ ದೇಶಕ್ಕೆ ಭಾರತ ಎಂಬುದಾಗಿ ಹೆಸರು ಬಂದಿತು. ಭರತನ ಮಕ್ಕಳೆಲ್ಲರೂ ಮಾತೃಶಾಪದಿಂದ ನಾಶವಾದರು. ಆಗ ಅಂಗಿರಸ ಮುನಿಯ ಮಗನಾದ ಭರದ್ವಾಜ ಮಹರ್ಷಿಯು ಯಜ್ಞಮಾಡಿಸಿ ಭರತ ಚಕ್ರವರ್ತಿಗೆ ಓರ್ವ ಪುತ್ರನು ಜನಿಸುವಂತೆ ಮಾಡಿದ. ಭರತರಾಜನ ಹಿಂದಿನ ಮಕ್ಕಳೆಲ್ಲರೂ ವಿತಥ (ನಷ್ಟ) ರಾದ ಬಳಿಕ ಭರದ್ವಾಜನ ಅನುಗ್ರಹದಿಂದ ಜನಿಸಿದ ಕಾರಣ ಈ ಭರತಪುತ್ರನಿಗೆ 'ವಿತಥ' ಎಂಬ ಹೆಸರನ್ನೇ ಇಟ್ಟರು. ವಿತಥನು ಜನಿಸಿದ ಕೆಲಕಾಲದ ಮೇಲೆ ಭರತಚಕ್ರವರ್ತಿ ದಿವಂಗತನಾದ. ಭರದ್ವಾಜಮುನಿಯು ವಿತಥನ್ನು ಪಟ್ಟದ ಮೇಲೆ ಕೂಡಿಸಿ ಅಭಿಷೇಕಮಾಡಿ ತಾನು ತಪಸ್ಸಿಗಾಗಿ ಕಾಡಿಗೆ ತೆರಳಿದ. ವಿತಥರಾಯನು ಸುಹೋತ್ರ, ಸಹೋತಾಯಿ, ಗಯ, ಗರ್ಗ, ಕಪಿಲ ಎಂಬ ಐದು ಪುತ್ರರಿಗೆ ತಂದೆಯಾಗಿದ್ದ. ಅವನ ಜ್ಯೇಷ್ಠಪುತ್ರನಾದ ಸುಹೋತ್ರನಿಗೆ ಸತ್ಯವಂತನಾದ ಕೌಶಿಕ, ಗೃತ್ಸಮತಿ ಎಂಬ ಇಬ್ಬರು ಮಕ್ಕಳು.

ಗೃತ್ಸಮತಿಯ ಸಂತತಿಯವರು ಹಲವರು ಬ್ರಾಹ್ಮಣರಾದರೆ ಕೆಲವರು ಕ್ಷತ್ರಿಯರಾದರು. ಇನ್ನೂ ಕೆಲವರು ವೃತ್ತಿಯಿಂದ ಹಾಗೂ ಪ್ರವೃತ್ತಿಯಿಂದ ವೈಶ್ಯರೆಂದು ಪರಿಗಣಿತರಾದರು. ಕೌಶಿಕರಾಜನಿಗೆ ದೀರ್ಘತಪಸ ಎಂಬ ಮಹಾತ್ಮನಾದ ಮಗ ಜನಿಸಿದ. ದೀರ್ಘತಪಸನ ವಂಶವು ಧನ್ವಂತರೀ, ಕೇತುಮಂತ, ದೀವೋದಾಸ ಮುಂತಾದವರ ಮುಖಾಂತರ ಮುಂದುವರೆದ ಸಮಾಚಾರವನ್ನು ಹಿಂದೆಯೇ ತಿಳಿಸಲಾಗಿದೆ.

ವಿತಥರಾಜನ ಮಗನಾದ ಸುಹೋತ್ರನಿಗೆ ಬೃಹತ್ ಎಂಬ ಮತ್ತೊಬ್ಬ ಮಗನು ಇದ್ದ. ಆ ಬೃಹದ್ರಾಜನಿಗೆ ಅಜಮೀಢ, ದ್ವಿಮೀಢ, ಪುರುಮೀಢ ಎಂಬುದಾಗಿ ಮೂವರು ಮಕ್ಕಳು. ಅವರಲ್ಲಿ ಅಜಮೀಢನಿಗೆ ನೀಲಿನಿ, ಕೇಶಿನಿ, ಧೂಮಿನಿ ಎಂಬುದಾಗಿ ಮೂವರು ಮಹಿಳಾಮಣಿಯರು ಮಡದಿಯರಾಗಿದ್ದರು. ಅಜಮೀಢನಿಂದ ಕೇಶೀನೀದೇವಿಯಲ್ಲಿ ಜಹ್ನು ಎಂಬ ಪುತ್ರನು ಜನಿಸಿ ವಿಶ್ವಜಿತ್ ಎಂಬ ಯಾಗವನ್ನು ಮಾಡಿ ಗಂಗೆಯನ್ನು ಕುಡಿದು ಕಿವಿಯಿಂದ ಬಿಟ್ಟ ಸಮಾಚಾರವನ್ನೂ ಈ ಮೊದಲೇ ತಿಳಿಸಲಾಗಿದೆ. ಆ ಅಜಮೀಢನಿಂದ ನೀಲಿನೀದೇವಿಯಲ್ಲಿ ಸುಶಾಂತಿ ಎಂಬ ಪುತ್ರನು ಉದಯಿಸಿದ. ಆ ಸುಶಾಂತನಿಂದ ಮುಂದೆ ಪುರುಜಾತಿ ಎಂಬ ಮಗನೂ, ಅವನ ಮಗನಾಗಿ ಬಾಹ್ಯಾಶ್ವನೂ ಹುಟ್ಟಿದರು. ಬಾಹ್ಯಾಶ್ವನಿಗೆ ಐದು ಜನ ವೀರಪುತ್ರರು. ಮುದ್ಗಲ, ಸೃಂಜಯ, ಬೃಹದಿಕ್ಷು, ಯುವೀನರ, ಕೃಮಿಲಾಶ್ವ. ಮಹಾಪರಾಕ್ರಮಶಾಲಿಗಳಾದ ಈ ಬಾಹ್ಯಾಶ್ವನ ಪಂಚಪುತ್ರರು ದೇವತೆಗಳನ್ನು ಸಹ ರಕ್ಷಿಸಲು ಸಮರ್ಥರು. ಈ ಪಂಚಕುಮಾರರು ಪ್ರಪಂಚವನ್ನೇ ರಕ್ಷಿಸಲು ಅಲಂ ಅಂದರೆ ಸಾಕು. "ಪಂಚ+ಅಲಂ=ಪಾಂಚಾಲಂ" ಎಂದು ಅವರು ಪ್ರಸಿದ್ಧರಾದರು. ಈ ಪಂಚ ರಾಜಕುಮಾರರು ಆಳುವ ದೇಶಕ್ಕೆ 'ಪಾಂಚಾಲ' ಎಂದು ಹೆಸರಾಯಿತು. ಈ ಐವರಲ್ಲಿ ಮುದ್ಗಲನ ಪ್ರೀತಿಯ ಪುತ್ರನೇ ಮೌದ್ಗಲ್ಯ. ಆ ಮೌದ್ಗಲ್ಯನಿಂದ ಇಂದ್ರಸೇನಾದೇವಿಯು ಗರ್ಭವನ್ನು ಧರಿಸಿದಳು. ಆದರೆ ಅದು ಬೆಳೆಯದೇ ವ್ಯರ್ಥವಾಯಿತು. ಸೃಂಜಯ ಎಂಬ ಬಾಹ್ಯಾಶ್ವನ ಎರಡನೇ ಮಗನಿಗೆ ಪಂಚಜನ ಎಂಬ ಕುಮಾರರು. ಆ ಪಂಚಜನರಿಂದ ಸೋಮದತ್ತನೂ, ಆ ಸೋಮದತ್ತನಿಂದ ಸಹದೇವರಾಜನೂ ಸಹದೇವನಿಂದ ಸೋಮಕ, ಹೀಗೆಲ್ಲ ಪುತ್ರ ಪೌತ್ರಾದಿ ಪರಂಪರೆಯಿಂದ ಈ ವಂಶವು ವಿಸ್ತಾರವಾಗುತ್ತ ನಡೆಯಿತು. ಜನಿಸಿದ ಮಕ್ಕಳೆಲ್ಲರೂ ಬಾಲ್ಯದಲ್ಲಿಯೇ ಮರಣಿಸಿದ್ದರಿಂದ ಅಜಮೀಢನು ಈ ಸೋಮಕನನ್ನೇ ತನ್ನ ಮಗನನ್ನಾಗಿ ಮಾಡಿಕೊಂಡ. ಅನಂತರ ಆ ಸೋಮಕನಿಗೆ 'ಜಂತು' ಎಂಬ ಪುತ್ರ ಹುಟ್ಟಿದ. ಜಂತುವಿನ ಮಗನೇ ಪೃಕ್ಷತರಾಜ. ಪೃಕ್ಷತನ ಪುತ್ರನೇ ದ್ರುಪದರಾಜ. ಅಜಮೀಢನ ಮೂರನೇ ಹೆಂಡತಿಯಾದ ಧೂಮಿನೀದೇವಿಯು ಮಹಾಪತಿವ್ರತೆ. ಸತ್ಕುಲ ಪ್ರಸೂತೆ. ಅವಳಿಗೆ ಬಹುಕಾಲ ಮಕ್ಕಳು ಆಗಲಿಲ್ಲ. ಅದಕ್ಕಾಗಿ ಅವಳು ಘೋರ ತಪಸ್ಸನ್ನು ಮಾಡಿದಳು. ದೇವತಾ ಅನುಗ್ರಹದಿಂದ ಆ ಧೂಮಿನಿಯಲ್ಲಿ 'ಋಕ್ಷ' ಎಂಬ ಸುಂದರವಾದ ಸತ್ಪುತ್ರ ಜನಿಸಿದ. ಋಕ್ಷನಿಂದ ಮಹಾತಪಸ್ವಿಯೂ ವರ್ಚಸ್ವಿಯೂ ಆದ ಸುವರ್ಣನು ಜನಿಸಿದ. ಸುವರ್ಣನ ಮಗನೇ ಕುರುರಾಜ. ಕುರುರಾಜನು ಈ ಕ್ಷೇತ್ರವನ್ನು ನಿರ್ಮಿಸಿ ಅಲ್ಲಿ ರಾಜ್ಯ ಆಳಿದ ಈ ಕುರುಕ್ಷೇತ್ರವು ಪವಿತ್ರವೂ ಮನೋಹರವೂ ಋಷಿಮುನಿಗಳಿಂದ ಸೇವಿತವೂ ಆಗಿರುತ್ತದೆ. ಬಹಳ ದೊಡ್ಡ ವಂಶ ಈ ಕುರುವಂಶ. ಭೂಲೋಕದ ಎಲ್ಲ ಕಡೆಗೂ ಇದರ ವ್ಯಾಪ್ತಿ. ಆ ವಂಶದಲ್ಲಿ ಹುಟ್ಟಿದವರಿಗೆಲ್ಲ ಕೌರವರು ಎಂದು ಹೆಸರು. ಸುಧನು, ಪರೀಕ್ಷಿತ್, ಸುಧನ್ವ,

ಅರಿಮೇಜಯ ಎಂದು ಕುರುರಾಜನಿಗೆ ನಾಲ್ಕು ಜನ ಚತುರ ಮತಿಗಳಾದ, ಅಷ್ಟೇ ವೀರ್ಯ ಶೌರ್ಯವುಳ್ಳ ನಾಲ್ಕು ಮಕ್ಕಳು ಆದರು. ಅವರಲ್ಲಿ ವಯಸ್ಸಿನಿಂದಲೂ, ವರ್ಚಸ್ಸಿನಿಂದಲೂ, ಪರಾಕ್ರಮದಿಂದಲೂ ಪರೀಕ್ಷಿತನೆ ಹಿರಿಯ. ಪರೀಕ್ಷಿತನಿಗೆ ಜನಮೇಜಯ, ಶ್ರುತಸೇನ, ಉಗ್ರಸೇನ, ಭೀಮಸೇನ ಎಂದು ನಾಲ್ಕು ಜನ ಮಕ್ಕಳು. ಇವರೆಲ್ಲರೂ ಮಹಾಮಹಿಷ್ಠರೂ ಅತ್ಯಂತ ಬಲಿಷ್ಠರೂ, ಶೂರಶ್ರೇಷ್ಠರೂ ಆಗಿದ್ದರು. ಜನಮೇಜಯ ಭೂಪಾಲನ ಮಗನೇ ಸುರಥ. ಸುರಥನ ಮಗ ವಿದೂರಥ. ವಿದೂರಥನ ಮಗ ಋಕ್ಷರಾಜ. ವಿದೂರಥನಿಗೆ ಭರದ್ವಾಜ ಮುನಿಯ ಅನುಗ್ರಹದಿಂದ ಮತ್ತೊಬ್ಬ ಕುಮಾರ ಜನಿಸಿದ. ಅದಕ್ಕಾಗಿಯೇ ಅವನಿಗೆ ಭಾರದ್ವಾಜ ಎಂದು ಹೆಸರು ಇಡಲಾಯಿತು. ಮುನಿಗಳೆ, ಚಂದ್ರವಂಶದಲ್ಲಿ ಋಕ್ಷ ಎಂಬ ಹೆಸರಿನ ರಾಜರು ಇಬ್ಬರು ಇದ್ದರು. ಪರೀಕ್ಷಿತ ಎಂಬ ಹೆಸರಿನ ರಾಜರೂ ಈರ್ವರು. ಭೀಮಸೇನ ಎಂಬ ಹೆಸರಿನ ರಾಜರೂ ಮೂವರು. ಜನಮೇಜಯ ಎಂಬ ಹೆಸರಿನ ಇಬ್ಬರು ರಾಜರೂ ಪುರಾಣದಲ್ಲಿ ಪ್ರಸಿದ್ಧರಾಗಿದ್ದಾರೆ.

ಎರಡನೆಯ ಋಕ್ಷರಾಜನ ಮಗನೇ ಭೀಮಸೇನ. (ಇವನು ಪಾಂಡುರಾಜನ ಮಗನಾದ ಭೀಮಸೇನನಿಂದ ಭಿನ್ನ) ಆ ಭೀಮಸೇನನಿಗೆ ಪ್ರತೀಪ ಎಂಬ ಹೆಸರಿನ ಪುತ್ರ ಹುಟ್ಟಿದ. ಪ್ರತೀಪನಿಗೆ ಶಾಂತನು, ದೇವಾಪಿ, ಬಾಹ್ಲಿಕ ಎಂಬ ಮೂವರು ಮಕ್ಕಳು ಮೂವರು ಮಹಾರಥಿಕರು, ಈ ಶಂತುವಿನ ಮಗನೇ ದೇವವ್ರತ ಭೀಷ್ಮ. ಪ್ರತೀಪನ ಎರಡನೆಯ ಮಗನಾದ ದೇವಾಪಿಯು ಮುನಿಯಾಗಿದ್ದು ದೇವತೆಗಳಿಗೂ ಉಪಾಧ್ಯಾಯ ನಾಗಿದ್ದ. ಚ್ಯವನ ಮಹರ್ಷಿಯ ಪುತ್ರನಾದ ಕೃತಕ ಮುನಿಯು ಈ ದೇವಾಪಿಯ ಪ್ರಿಯಬಂಧು ಆಗಿದ್ದ. ದೇವಾಪಿಯು ವಿರಕ್ತನಾಗಿ ಮನೆಮಾರು ತೊರೆದು ಅರಣ್ಯದಲ್ಲಿ ಮುನಿವೃತ್ತಿಯಿಂದ ಇದ್ದು ಆತ್ಮಸಾಧನೆ ಮಾಡಿಕೊಂಡ. ಅವನಿಂದ ಮುಂದೆ ವಂಶ ಬೆಳೆಯಲಿಲ್ಲ. ಪ್ರತೀಪನ ಮೂರನೇ ಮಗನಾದ ಬಾಹ್ಲಿಕನ ವಂಶದ ವಿಸ್ತೃತಿಯನ್ನು ತಿಳಿಸುತ್ತೇನೆ ಕೇಳಿರಿ. ಬಾಹ್ಲಿಕನಿಗೆ ಸೋಮದತ್ತ ಎಂಬ ಸುಪ್ರಸಿದ್ಧನಾದ ಮಗನು ಇದ್ದ. ಆ ಸೋಮದತ್ತನಿಂದ ಭೂರಿ, ಭೂರಿಶ್ರವ, ಶ್ರಲ ಎಂಬ ಪುತ್ರತ್ರಯವು ಜನಿಸಿತು. ಪ್ರತೀಪನ ಹಿರಿಯ ಮಗನಾದ ಶಂತನು ರಾಜ ಕುರುಕುಲದಲ್ಲಿ ಅಗ್ರಗಣ್ಯ. ಅವನ ವಂಶ ಮೂರು ಲೋಕಗಳಲ್ಲಿಯೇ ಪ್ರಸಿದ್ಧವಾಯಿತು. ಶಂತನು ಚಕ್ರವರ್ತಿಗೆ ಗಂಗಾದೇವಿಯಲ್ಲಿ ಭೀಷ್ಮ ಎಂದು ಹೆಸರಾದ ದೇವಪುತ್ರನು ಜನಿಸಿದ ಬಳಿಕ ಆ ಶಂತನುರಾಜ ಕಾಲಿ ಅಥವಾ ಯೋಜನಗಂಧಿ ಎಂಬ ಹೆಸರಿನ ಎರಡನೇಯ ಹೆಂಡತಿಯನ್ನು ವಿವಾಹವಾದ. ಅವನಿಗೆ ಆ ಕಾಳಿದೇವಿಯಲ್ಲಿ ವಿಚಿತ್ರವೀರ್ಯ ಎಂಬ ಒಬ್ಬ ಧರ್ಮಾತ್ಮನಾದ ಮಗನು ಹುಟ್ಟಿದ. ಆ ವಿಚಿತ್ರವೀರ್ಯ ಮಕ್ಕಳಿಲ್ಲದೇ ಹರೆಯದ ವಯಸ್ಸಿನಲ್ಲಿಯೇ ಮೃತನಾದ. ಆಗ ವ್ಯಾಸ ಮಹಾಮುನಿಯು ತಾಯಿಯಾದ ಸತ್ಯವತೀದೇವಿಯ ಅಪೇಕ್ಷೆಯಂತೆ ವಿಚಿತ್ರವೀರ್ಯನ ಹೆಂಡಂದಿರಲ್ಲಿ ನಿಯೋಗ ವಿಧಿಯಿಂದ ಧೃತರಾಷ್ಟ್ರ, ಪಾಂಡು, ವಿದುರ ಎಂದು ಮೂವರು ಮಕ್ಕಳನ್ನು ಉತ್ಪಾದಿಸಿದ. ಧೃತರಾಷ್ಟ್ರನು ಗಾಂಧಾರೀದೇವಿಯಲ್ಲಿ ನೂರು ಮಕ್ಕಳನ್ನು ಪಡೆದ. ಅವರಲ್ಲಿ ದುರ್ಯೋಧನನೇ ಹಿರಿಯ. ಅವನು ಕುರುರಾಜ್ಯವನ್ನು ಕೆಲದಿನ ಆಳಿದ. ಪಾಂಡುರಾಜನಿಗೆ ಕುಂತೀದೇವಿಯಲ್ಲಿ ಧರ್ಮ, ಭೀಮ, ಅರ್ಜುನ ಎಂಬ ಮೂವರು ಮಕ್ಕಳು. ಮಾದ್ರಿದೇವಿಯಲ್ಲಿ ನಕುಲ, ಸಹದೇವರು ಜನಿಸಿದರು. ಈ ಪಾಂಡುಕುಮಾರರು ''ಪಾಂಡವರು'' ಎಂದು ಲೋಕ ಪ್ರಸಿದ್ಧಿ ಪಡೆದರು.

ಮಧ್ಯಮ ಪಾಂಡವನಾದ ಅರ್ಜುನನಿಗೆ ಸುಭದ್ರೆಯಲ್ಲಿ ಅಭಿಮನ್ಯು ಹುಟ್ಟಿದ. ಅಭಿಮನ್ಯುವಿನ ಮಗನೇ ಪರೀಕ್ಷಿತ. ಪರೀಕ್ಷಿತನ ಮಗನೇ ಜನಮೇಜಯ. ಜನಮೇಜಯ ರಾಜನಿಗೆ ಕಾಶೀರಾಜಕುಮಾರಿಯಲ್ಲಿ ಚಂದ್ರಾಪೀಡ, ಸೂರ್ಯಾಪೀಡ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಅವರಲ್ಲಿ ಸೂರ್ಯಾಪೀಡನು ಸಂಸಾರದಲ್ಲಿ ವಿರಕ್ತಿ ತಾಳಿ ಮೋಕ್ಷ ಮಾರ್ಗ ಹಿಡಿದು ಆತ್ಮೋದ್ಧಾರ ಮಾಡಿಕೊಂಡ. ಚಂದ್ರಾಪೀಡನಿಗೆ ನೂರುಜನ ಮಕ್ಕಳು. ಅವರೆಲ್ಲರೂ ಜನಮೇಜಯರು ಎಂದೇ ಪ್ರಸಿದ್ಧಿಯನ್ನು ಪಡೆದಿದ್ದರು. ಈ ಜನಮೇಜಯರಲ್ಲಿ ಹಿರಿಯನಾದ ಸತ್ಯಕರ್ಣನು ವೀರಾಧಿವೀರ. ಮತ್ತು ಯಜ್ಞಯಾಗ ದೀಕ್ಷಿತ. ವಾರಣಾಸಿಯನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಈ ವಿಶಾಲ ಮಹೀತಲವನ್ನೆಲ್ಲ ಅವನು ಶಾಸನಗೈದ. ಸತ್ಯಕರ್ಣನಿಗೆ ಶ್ವೇತಕರ್ಣ ಎಂಬ ಪ್ರತಾಪಶಾಲಿಯಾದ ಪುತ್ರನಿದ್ದ. ಆ ಶ್ವೇತಕರ್ಣನಿಗೆ ಬಹುಕಾಲ ಮಕ್ಕಳೇ ಆಗಲಿಲ್ಲ. ಧರ್ಮಾತ್ಮನಾದ ಆತ ವಿರಕ್ತನಾಗಿ ಸಂಸಾರವನ್ನೇ ತ್ಯಜಿಸಿ ತಪಸ್ಸು ಮಾಡಲು ಅರಣ್ಯಕ್ಕೆ ತೆರಳಿದ. ಅವನ ಧರ್ಮಪತ್ನಿಯಾದ ಮಾಲಿನೀದೇವಿಯು ಯದುವಂಶದ ಸುಚಾರು ರಾಜನ ಮಗಳು. ಗ್ರಾಹಮಾಲಿನಿ ಎಂದೂ ಅವಳಿಗೆ ಹೆಸರು. ಅವಳೂ ಪತಿಯೊಡನೆ ಅರಣ್ಯಕ್ಕೆ ಪ್ರಯಾಣ ಬೆಳೆಸಿದಳು. ಅವರಿಬ್ಬರೂ ದಂಪತಿಗಳು ಆ ವಿಜನವನಾಂತರದ ಏಕಾಂತದಲ್ಲಿ ಭಕ್ತಿಯಿಂದ ಆಚರಿಸದರು ಉಗ್ರತಪಸ್ಸನ್ನು. ಆ ತಪೋವನದಲ್ಲಿಯೇ ಗ್ರಾಹಮಾಲಿನಿಯು ಗರ್ಭ ಧರಿಸಿದಳು. ಶ್ವೇತಕರ್ಣ ಜನಿಸಿದ. ಬಹುವರ್ಷದ ಮೇಲೆ ತೇಜಃಪುಂಜನಾದ ಗಂಡುಮಗ ಹುಟ್ಟಿದ್ದರೂ ಶ್ವೇತಕರ್ಣನಿಗೆ ಮತ್ತೆ ಸಂಸಾರ ಪಾಕದಲ್ಲಿ ಬೀಳಲು ಇಚ್ಛೆ ಇರಲಿಲ್ಲ. ಅವನ ಮನಸ್ಸು ಹೇಯವೂ, ಅಶಾಶ್ವತವೂ ಆದ ಈ ಪ್ರಪಂಚದಿಂದ ವಿಮುಖವಾಗಿತ್ತು. ಶ್ರೀಹರಿಯ ಧ್ಯಾನದಕಡೆ ಅಭಿಮುಖವಾಗಿತ್ತು. ಅವನ ದೃಷ್ಟಿಯೆಲ್ಲವೂ ಅಧ್ಯಾತ್ಮದತ್ತ. ಮನಸ್ಸು ಭಗವಂತನಲ್ಲಿ. ಅದಕ್ಕಾಗಿ ಅವನು ಪುತ್ರ ರಕ್ಷಣೆಗಾಗಿ ಎಲ್ಲ ಏರ್ಪಾಡನ್ನು ಮಾಡಿ ಮಾಲಿನಿಗೆ ಸುಖವಾಗಿ ಸಂಸಾರವನ್ನು ಸಾಗಿಸಲು ಪರ್ಯಾಪ್ತವವಾದ ಧನ, ಧಾನ್ಯ, ಬಟ್ಟೆ, ಮನೆ, ಮಾರು ಎಲ್ಲ ಸಲಕರಣೆಗಳನ್ನೂ ಒದಗಿಸಿ ಕುಟುಂಬ ಪೋಷಣೆಯ ಏರ್ಪಾಡನ್ನು ಮಾಡಿ ಅಧ್ಯಾತ್ಮ ಸಾಧನೆಗಾಗಿ ಗಹನಾರಣ್ಯಕ್ಕೆ ಹೊರಟು ನಿಂತ. ಪರಮ ಪತಿವ್ರತೆಯೂ ಅನಿಂದ್ಯ ಸುಂದರಿಯೂ ಆದ ಮಾಲಿನಿಗೆ ಅದೇ ಹುಟ್ಟಿದ ಸುಕಮಾರ ಸುಂದರನಾದ ಶ್ವೇತಕರ್ಣ ಎಂಬ ಎಳೆಕಂದನ ಮೇಲೆ ವಾತ್ಸಲ್ಯ ಉಕ್ಕುತ್ತಿತ್ತು. ಮನಸ್ಸು ಸೆಳೆಯುತ್ತಿತ್ತು. ಆದರೆ ಪತಿಯ ವಿರಹವೂ ಕೂಡ ಅವಳಿಗೆ ಅಸಹ್ಯವಾಗಿತ್ತು. ಜೀವನ ಯಾತ್ರೆಯ ಕೊನೆಯ ಗುರಿಯಾದ ಮಹಾಪ್ರಸ್ಥಾನಕ್ಕಾಗಿ ಹೊರಟು ನಿಂತ ಪತಿಯನ್ನು ಬಿಟ್ಟು ಒಬ್ಬಳೇ ನವಜಾತ ಶಿಶುವಿನ ಲಾಲನೆ ಪಾಲನೆಯಲ್ಲಿ ಇರಲು ಅವಳ ಮನಸ್ಸು ಒಪ್ಪಲಿಲ್ಲ. ಮಗನ ಮೇಲಿನ ಮೋಹ ತೊರೆದು ಮನಸ್ಸನ್ನು ಕಲ್ಲು ಮಾಡಿಕೊಂಡು ಅವಳು ಆ ಹಾಲ್ಗಲ್ಲದ ಹಸುಳೆಯನ್ನು ಬಿಟ್ಟು ಪತಿಯನ್ನೇ ಹಿಂಬಾಲಿಸಿದಳು. ವಿರಕ್ತನಾದ ತಂದೆ, ಪತಿರಕ್ತಳಾದ ತಾಯಿ ಇವರಿಬ್ಬರೂ ಅದೀಗ ಜನಿಸಿದ ಸುಂದರ ಶಿಶುವನ್ನು ಬಿಟ್ಟು ಅಧ್ಯಾತ್ಮ ಸಾಧನೆಗಾಗಿ ಹೊರಟುಹೋದರು. ತಾಯಿ-ತಂದೆಗಳು ತ್ಯಜಿಸಿ ತಪೋನುಷ್ಠಾನಕ್ಕೆಂದು ಹೈಮಾಚಲದ ಉತ್ತುಂಗ ಶೃಂಗದ ಶೈಲಶ್ರೇಣಿಯನ್ನು ಏರಿದಾಗ ಅವರು ತ್ಯಜಿಸಿದ ಆ ಬಾಲಕ ಆ ಪರ್ವತದ ತಪ್ಪಲಪ್ರದೇಶದಲ್ಲಿ ದೊಡ್ಡ ದನಿ ತೆಗೆದು ಅಳತೊಡಗಿದ. ಆಗ ಆಗಸದ ಅಂಗಳದಲ್ಲಿಯ ಮೋಡ ಪಡೆಗಳು ಆ ಮಗುವಿನ ಮೇಲೆ ನೆರಳನ್ನು ಉಂಟುಮಾಡಿದವು. ಶ್ರವಿಷ್ಠಾದೇವಿಯ

ಮಕ್ಕಳಾದ ಪೈಪ್ಪಲಾದಿ, ಕೌಶಿಕ ಎಂಬ ಈರ್ವರು ಮುನಿಕುಮಾರರು ಅಲ್ಲಿಗೆ ಬಂದು ಚೀರಿ ಚೀರಿ ರೋದಿಸುತ್ತಲಿರುವ ಆ ಎಳೆಕಂದನನ್ನು ನೋಡಿದರು. ಆ ಮಗವನ್ನು ನೋಡಿ ಅವರ ಹೃದಯದಲ್ಲಿ ಕರುಣೆಯಕೋಡಿಯೊಡೆಯಿತು. ಆ ಶಿಶುವನ್ನು ಎತ್ತಿಕೊಂಡು ನೀರಿನಲ್ಲಿ ಅದರ ಶರೀರವನ್ನು ಚೆನ್ನಾಗಿ ತೊಳೆದರು. ಆ ಮಗುವಿನ ತಾಯಿ ಹೋಗುವಾಗ ಆಶ್ರಮದ ಹಾಸುಗಲ್ಲಿನ ಮೇಲೆ ಮಲಗಿಸಿ ಹೋಗಿದ್ದಳು. ಅದು ಅಳುವಾಗ ಅದರ ಎರಡೂ ಪಕ್ಕೆಗಳೂ ಕಲ್ಲಿಗೆ ಉಜ್ಜದಂತಾಗಿ ರಕ್ತವು ಕಂದುಗಟ್ಟಿದಂತಾಗಿತ್ತು. ಇದರಿಂದ ಎರಡೂ ಪಕ್ಕೆಗಳಲ್ಲಿ ಆ ಮಗು ಕರಿಯ ಬಣ್ಣವುಳ್ಳ ಆಡಿನಂತೆ ತೋರುತ್ತಿತ್ತು. ಅದರಿಂದ ಆ ಕುಮಾರನಿಗೆ ಅಜಪಾರ್ಶ್ವ ಎಂದು ಹೆಸರು ಬಂದಿತು. ಮುಂದೆ ಆ ಬಾಲಕನು ರೇಮಕ ಮುನಿಯ ಆಶ್ರಮದಲ್ಲಿ ಪೈಪ್ಪಲಾದಿ ಹಾಗೂ ಕೌಶಿಕ ಇಬ್ಬರೂ ಮುನಿಕುಮಾರರ ಪೋಷಣೆಯಲ್ಲಿ ಬೆಳೆಯತೊಡಗಿದ. ರೇಮಕ ಮುನಿಯ ಭಾರ್ಯೆಯಾದ ರೇಮತೀ ದೇವಿಯು ಆ ಮಗುವನ್ನು ತನ್ನ ಹೊಟ್ಟೆಯ ಮಗುವೆಂದೇ ತಿಳಿದು ಕಕುಲಾತಿಯಿಂದ ಕಾಪಾಡಿದಳು. ಆ ಮುನಿಗಳ ಮಕ್ಕಳು ಈ ಮಾಲಿನೀ ಕುಮಾರ, ಇವರೆಲ್ಲರೂ ಆಶ್ರಮದಲ್ಲಿ ಒಟ್ಟಿಗೇ ಆಟಪಾಠಗಳನ್ನಾಡುತ್ತ ಬೆಳೆದರು. ಈ ಪೂರುರಾಜನ ವಂಶವೇ ಮುಂದೆ ಪಾಂಡವರ ವಂಶವೆಂದು ಜಗತ್ತಿನಲ್ಲಿ ಪ್ರಸಿದ್ಧವಾಯಿತು.

ಮುನಿಗಳೇ, ನಾನು ನಿಮಗೆ ಯಯಾತಿಯ ಮಗನಾದ ಪೂರುವಿನ ವಂಶ ಬೆಳೆದ ಬಗೆಯನ್ನು ಬಿತ್ತರಿಸಿದೆ. ಈಗ ಅದೇ ಯಯಾತಿಯ ತುರ್ವಸು, ದ್ರುಹ್ಯ, ಅನು, ಯದು ಈ ನಾಲ್ಕು ರಾಜಕುಮಾರರ ಕುಲದ ಬಳ್ಳಿಯು ಬಿತ್ತರಗೊಂಡ ಬಗೆಯನ್ನು ನಿರೂಪಿಸುವೆ ಕೇಳಿರಿ. ತುರ್ವಸುವಿನ ಮಗ ವಹ್ನಿರಾಜ, ವಹ್ನಿರಾಜನಿಂದ ಮುಂದೆ ಈ ಮನೆತನವು ಗೋಹಾನು, ಐಶಾನು, ಕರಂಥಮ, ಮರುತ್ ಮುಂತಾದ ರಾಜಪರಂಪರೆಯಿಂದ ಮುಂದುವರೆಯಿತು. ಹಿಂದೆ ಹೇಳಿದ ಅವಿಕ್ಷಿತ ರಾಜನ ಮಗನಾದ ಮರುತ್ತನು ಬೇರೆ. ತುರ್ವಸುವಿನ ವಂಶದ ಈ ಮರುತ್ತನು ಬೇರೆ. ಈ ಮರುತ್ತ ಮಹಾರಾಜ ಕರ್ಮಿಷ್ಠ ಮತ್ತು ಧರ್ಮಿಷ್ಠ. ಆ ಪೂರ್ವಕಾಲದ ಮರುತ್ತನಂತೆಯೇ ಇವನಾದರೂ ಸಹ ಅಸಂಖ್ಯ ಯಜ್ಞ-ಯಾಗ ನೆರವೇರಿಸಿ ಸುವರ್ಣನಾಣ್ಯಗಳಿಂದ ದಾನ ದಕ್ಷಿಣೆ ನೀಡಿದ. ಆ ರಾಜನಿಗೆ ಗಂಡು ಸಂತತಿ ಆಗಲಿಲ್ಲ. ಸಂಯತ ಎಂಬ ಏಕಮಾತ್ರ ಪುತ್ರಿ ಇದ್ದಳು. ಇವನು ಒಂದು ದೊಡ್ಡ ಯಜ್ಞ ಮಾಡಿ ತನ್ನ ಮಗಳಾದ ಸಂಯತಾದೇವಿಯನ್ನು ಮಹಾತ್ಮನಾದ ಸಂವರ್ತಮಹಾಮುನಿಗೆ ದಕ್ಷಿಣೆಯಾಗಿ ನೀಡಿದ. ಮರುತ್ ಮಹಾರಾಜನಿಗೆ ಪುತ್ರ ಸಂತಾನ ಇಲ್ಲದ್ದರಿಂದ ಪೂರುವಂಶದ ದುಷ್ಯಂತ ರಾಜನನ್ನೇ ತನ್ನ ಮಗನನ್ನಾಗಿ ಸ್ವೀಕರಿಸಿದ. ತುರ್ವಸುವಿನ ವಂಶವು ಯಯಾತಿ ರಾಜನ ಶಾಪದಿಂದ ಮರುತ್ತ ರಾಜನ ಕಾಲದಲ್ಲಿ ಪೂರುವಂಶದಲ್ಲಿಯೇ ಸೇರಿಹೋಯಿತು.

ದುಷ್ಯಂತನ ಮಗ ಕರೂರೋಮ. ಅವನ ಮಗ ಅಹ್ರೀದ. ಅಹ್ರೀದನಿಗೆ ಪಾಂಡ್ಯ, ಕೇರಲ, ಕಾಲ, ಚೋಲ ಎಂದು ನಾಲ್ವರು ಮಕ್ಕಳು. ದ್ರುಹ್ಯುವಿನ ಆ ವಂಶವು ಆವನ ಮಗನಾದ ಬಭ್ರುಸೇತು, ಅಂಗಾರಸೇತು ಮುಂತಾದ ರಾಜರಿಂದ ವಂಶ ಪರಂಪರೆಯಾಗಿ ಮುಂದುವರೆಯಿತು. ಅಂಗಾರಸೇತು ರಾಜನು ಯೌವನಾಶ್ವಭೂಪನೊಡನೆ ಯುದ್ಧ ಮಾಡಿದ. ಹತ್ತು ತಿಂಗಳವರೆಗೆ ಘೋರ ಸಂಗ್ರಾಮ ನಡೆಯಿತು. ಅಂಗಾರಸೇತು ಸಸೇನಾ ಪರಿವಾರಸಹಿತನಾಗಿ ಧಾರಾತೀರ್ಥದಲ್ಲಿ ದೇಹಬಿಟ್ಟ. ಅಂಗಾರ ಸೇತುವಿನ ಮಗ ಗಾಂಧಾರ. ಅವನು ಶಾಸನಗೈಯುವ ಆ ದೇಶಕ್ಕೂ ಅವನದೇ ಹೆಸರು ಬಂದು ಗಾಂಧಾರ ದೇಶ ಎಂದು ಪ್ರಸಿದ್ಧಿ ಆಯಿತು. ಗಾಂಧಾರ ದೇಶದ ಕುದುರೆಗಳು ಈಗಲೂ ಖ್ಯಾತಿ ಇದೆ.

ಯಯಾತಿಯ ಮತ್ತೊಬ್ಬ ಮಗನಾದ ಅನುವಿಗೆ ಧರ್ಮ ಎಂಬ ಒಬ್ಬ ಮಗನು ಇದ್ದ. ಆ ಧರ್ಮನಿಂದ ಮುಂದೆ ಆ ವಂಶದಲ್ಲಿ ದ್ಯೂತರಾಜ, ವನದುಹ, ಪ್ರಚೇತಸ. ಸುಚೇತಸ ಎಂಬ ರಾಜರು ಆಗಿ ಹೋದರು. ಸುಚೇತಸನ ತಲೆಗೆ ಅವನು ನಿಪುತ್ರಿಕನಾದುದರಿಂದ ಅನುವಿನ ವಂಶ ನಿಂತುಹೋಯಿತು.

ದೇವಯಾನಿ ಹಾಗೂ ಯಯಾತಿಗಳ ಹಿರಿಯ ಮಗನಾದ ಯದುವಿಗೆ ಸಹಸ್ರಾಡ, ಪ್ರಮೋದ, ಕ್ರೋಷ್ಟಾ, ನೀಲ, ಅಂಜಿಕ ಎಂಬುದಾಗಿ ಐವರು ಮಕ್ಕಳು ಇದ್ದರು. ಅವರೆಲ್ಲರೂ ದೇವೋಪಮರು. ಧರ್ಮೋತ್ತಮರು. ಮಾನವರಿಗೆಲ್ಲ ಪೂಜ್ಯತಮರು. ಅವರಲ್ಲಿ ಯದುವಿನ ಹಿರಿಯ ಮಗನಾದ ಸಹಸ್ರಾದನಿಗೆ ಹೈಹಯ, ಹಯ, ವೇಣುದಯ ಎಂಬುದಾಗಿ ಮೂವರು ಮಕ್ಕಳು. ಹೈಹಯನ ಮಗನೇ ಧರ್ಮನೇತ್ರ. ಧರ್ಮನೇತ್ರನ ಮಗ ಕಾರ್ತರಾಜ. ಕಾರ್ತರಾಜನ ಮಗ ಸಾಹಂಜ. ಈ ಸಾಹಂಜನು ಸಾಹಂಜನೀ ಎಂಬ ನಗರ ನಿರ್ಮಾಣ ಮಾಡಿ ಅಲ್ಲಿಯೇ ರಾಜ್ಯವಾಳುತ್ತಿದ್ದ. ಮಹಿಷ್ಮತ ರಾಜನಿಗೆ ಭದ್ರಶ್ರೇಣ್ಯ, ಭದ್ರಶ್ರೇಣ್ಯನಿಗೆ ದುರ್ದಮ, ದುರ್ದಮನಿಗೆ ಕನಕರುಜ, ಕನಕರಾಜನಿಗೆ ಕೃತವೀರ್ಯ, ಕೃತೌಜ, ಕೃತಧನ್ವ, ಕೃತಾಗ್ನಿ ಎಂದು ನಾಲ್ವರು ಮಕ್ಕಳು. ಅವರಲ್ಲಿ ಕೃತವೀರ್ಯನ ಮಗನೇ ಕಾರ್ತವೀರ್ಯಾರ್ಜುನ. ಈ ಕಾರ್ತವೀರ್ಯಾರ್ಜುನನಿಗೆ ಸಾವಿರತೋಳು. ಸೂರ್ಯನಂತೆ ತೇಜಸ್ವಿಯಾದ ರಥ. ಅಪ್ರತಿಮವಾದ ತೇಜಸ್ಸು. ಲೋಕೋತ್ತರವಾದ ಪ್ರತಾಪ. ಅಪ್ರತಿಹತವಾದ ಗತಿ. ಅಚಿಂತ್ಯಾದ್ಭುತವಾದ ಮಹಾಮಹಿಮೆಗಳು. ಮೇಳವಿಸಿದ್ದವು. ಶ್ರೀವಿಷ್ಣುವಿನ ಸನ್ನಿಧಾನ ಶೇಷದಿಂದ, ಅವನು ಚತುಸ್ಸಾಗರಪರ್ಯಂತವಾದ ಮಹೀಮಂಡಲವನ್ನೆಲ್ಲ ತನ್ನ ಪರಾಕ್ರಮದಿಂದ ಗೆದ್ದು ಏಳು ದ್ವೀಪಗಳಿಗೂ ನಿಸ್ಸಪತ್ನರಾಜಾಧಿರಾಜನಾಗಿ ಏಕಮಾತ್ರ ಚಕ್ರವರ್ತಿಯಾಗಿ ಮೆರೆದ. ಈ ಕಾರ್ತವೀರ್ಯನು, ಹತ್ತುಸಾವಿರ ವರ್ಷಗಳವರೆಗೆ ಘೋರ ತಪಸ್ಸನ್ನು ಆಚರಿಸಿ ಅತ್ರಿಮುನಿಯ ಮಗನಾದ ದತ್ತಾತ್ರೇಯನನ್ನು ಒಲಿಸಿಕೊಂಡ. ಶ್ರೀಹರಿ ಸ್ವರೂಪಿಯಾದ ದತ್ತಾತ್ರೇಯನು ಇವನಿಗೆ ನಾಲ್ಕು ವರಗಳನ್ನು ದಯಪಾಲಿಸಿದ. ಇದರಲ್ಲಿ ಮೊದಲನೆಯ ವರ ಕಾರ್ತವೀರ್ಯನಿಗೆ ಬೇಕು ಎಂದಾಗ ಸಾವಿರ ತೋಳುಗಳು ಉಂಟಾಗುವದು. ಎಂದಾದರೂ ಈ ಅರ್ಜುನನು ಅಧರ್ಮ ಮಾರ್ಗದಲ್ಲಿ ನಡೆಯುವ ಪ್ರಸಂಗ ಬಂದರೆ ಸಜ್ಜನರು ಅದನ್ನು ತಡೆಯಬೇಕು. ಇದು ಎರಡನೆಯ ವರ. ಭೂವಲಯವನ್ನೆಲ್ಲ ಸ್ವಯಂ ಪರಾಕ್ರಮದಿಂದ ಗೆದ್ದು ಧರ್ಮದಿಂದ ರಾಜ್ಯವಾಳುವಂತಾಗಬೇಕು ಇದು ಮೂರನೇ ವರ. ಯುದ್ಧದಲ್ಲಿ ಸಾವಿರಾರು ವೈರಿ ವೀರಾಗ್ರಣಿಗಳನ್ನು ಕೊಂದು ಕೊನೆಯಲ್ಲಿ ಓರ್ವ ಮಹಾಪುರುಷನಿಂದಲೇ ಮರಣ ಹೊಂದುವದು. ಇದು ನಾಲ್ಕನೇ ವರ.

ಆ ಕಾರ್ತವೀರ್ಯನು ಯುದ್ಧಮಾಡುವಾಗ ಯೋಗೀಶ್ವರನಂತೆ ಅವನಿಗೆ ಯೋಗ ಮಾಯೆಯಿಂದ ಸಾವಿರ ತೋಳುಗಳು ಪುನಃ ಪುನಃ ಹುಟ್ಟುತ್ತಿದ್ದವು. ಆ ಕಾರ್ತ ವೀರ್ಯಾರ್ಜುನನು ಕರ್ಕೋಟಕನ ಮಕ್ಕಳಾದ ನಾಗಕುಮಾರರನ್ನು ಗೆದ್ದು ತನ್ನ ರಾಜಧಾನಿಯಾದ ಮಾಹಿಷ್ಮತಿ ನಗರದಲ್ಲಿ ಅವರೆಲ್ಲರೂ ಮನುಷ್ಯ ರೂಪದಿಂದ ಇರುವಂತೆ ಮಾಡಿದ. ತನ್ನ ನಗರದಿಂದ ದೂರ ಹರಿಯುವ ನರ್ಮದಾ ನದಿಯನ್ನು ತನ್ನ ಜಲವಿಹಾರಕೇಳಿಯಲ್ಲಿ ಸಾವಿರ ತೋಳುಗಳಿಂದ ಅಡ್ಡಗಟ್ಟಿ ತನ್ನ ರಾಜಧಾನಿಯ ಸಮೀಪದಲ್ಲಿಯೇ ಹರಿಯುವಂತೆ ಮಾಡಿದ. ಇನ್ನೊಂದು ಸಂದರ್ಭಲ್ಲಿ ಲಂಕಾಧಿಪತಿಯಾದ ರಾವಣನನ್ನು ಸೋಲಿಸಿ ಮೂರ್ಛೆಗೊಳಿಸಿ ಸೆರೆಹಿಡಿದು ತನ್ನ ಬಂಧೀಖಾನೆಯಲ್ಲಿ ಇರಿಸಿದ.

ಅವನ ಅಜ್ಜನಾದ ಪುಲಸ್ತ್ಯ ಪ್ರಜಾಪತಿಯು ಬಂದು ಬಹುವಿಧವಾಗಿ ಪ್ರಾರ್ಥನೆ ಮಾಡಿದ ಬಳಿಕ ಅವನನ್ನು ಸೆರೆಯಿಂದ ಬಿಡುಗಡೆಮಾಡಿದ. ಒಂದು ದಿನ ನೀರಡಿಸಿದ ಅಗ್ನಿಯು ಕಾರ್ತವೀರ್ಯನ ಬಳಿಗೆ ಬಂದು ತನ್ನ ಬಾಯಾರಿಕೆಯನ್ನು ಹೋಗಲಾಡಿಸಬೇಕೆಂದು ಬೇಡಿಕೊಂಡ. ಬೇಕಾದ ದೇಶವನ್ನು ಕಬಳಿಸಿ ನಿನ್ನ ಹಸಿವೆ ನೀರಡಿಕೆಗಳನ್ನು ಇಂಗಿಸಿಕೋ ಎಂದು ಕಾರ್ತವೀರ್ಯ ಅಪ್ಪಣೆ ಕೊಟ್ಟ. ಆಗ ಅಗ್ನಿಯು ಉತ್ಸಾಹಿತನಾಗಿ ಬೆಟ್ಟ, ಬಯಲು, ಪಟ್ಟಣ, ಗ್ರಾಮಾರಾಮಧಾಮಸ್ತೋಮಗಳನ್ನೆಲ್ಲ ಸುಟ್ಟು ಹಾಕಿದ, ವಶಿಷ್ಠ ಋಷಿಯ ರಮ್ಯವಾದ ತಪೋವನವು ಕೂಡ ಕಾರ್ತವೀರ್ಯನ ಬೆಂಬಲ ಪಡೆದ ಅಗ್ನಿಗೆ ಆಹುತಿಯಾಯಿತು. ತಮ್ಮ ರಮ್ಯವಾದ ಆಶ್ರಮವೆಲ್ಲವೂ ಭಸ್ಮೀಭೂತವಾದುದನ್ನು ಕಂಡು ಕ್ರುದ್ಧರಾದರು ಆ ಆಪವವಶಿಷ್ಠರು "ಬ್ರಾಹ್ಮಣೋತ್ತಮನಾದ ಪರಶುರಾಮ! ನಿನ್ನ ಸಾವಿರ ತೋಳುಗಳನ್ನು ಒಂದೊಂದಾಗಿ ಕಡಿದು ಕತ್ತರಿಸಿ ಕೊನೆಗೆ ನಿನ್ನನ್ನೂ ಕೊಂದು ಹಾಕಲಿ ಎಂದು ಶಾಪಕೊಟ್ಟರು. ಹುಸಿಯಾಗುವದುಂಟೇ ಅಂಥ ಬ್ರಹ್ಮಜ್ಞಾನಿಗಳ ಶಾಪ! ತಂದೆ ಜಮದಗ್ನಿ ಮುನಿಗೆ ಕಾರ್ಯವೀರ್ಯಾರ್ಜುನ ಹಾಗೂ ಅವನ ಮಕ್ಕಳು ಮಾಡಿದ ಅಪಚಾರ, ಅಪಕಾರ, ಇವುಗಳಿಂದ ಸಿಡಿದೆದ್ದ ಆ ಕೊಡಲಿಯ ರಾಮ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನು ಕಡಿದು ಕೊಚ್ಚಿ ಹಾಕಿದ. ಕೊನೆಗೆ ಅವನನ್ನು ಕೊಂದು ಅವನ ತೊಂಭತ್ತೈದು ಮಕ್ಕಳನ್ನೂ ಸವರಿ ಸಾಯಿಸಿದ. ರಾಮನ ಕೊಡಲಿಯ ಏಟಿಗೆ ತುತ್ತಾಗದೇ ಉಳಿದ ಕಾರ್ತವೀರ್ಯನ ಪುತ್ರರೆಂದರೆ ಐವರು ಮಾತ್ರ. ಅವರ ಹೆಸರು-ಶೂರ, ಶೂರಸೇನ, ವೃಷಣ, ಮಧತಧ್ವಜ, ಜಯಧ್ವಜ. ಈ ಜಯಧ್ವಜ ಅವಂತೀ ದೇಶದ ಅಧಿಪತಿಯಾಗಿ ಶಾಸನಗೈದ. ಕಾರ್ತವೀರ್ಯಾರ್ಜುನನ ಈ ಪಂಚಪುತ್ರರು ಶಾಸ್ತ್ರ, ಶಸ್ತ್ರ ಎರಡರಲ್ಲೂ ಪರಿಣತರು, ಧರ್ಮಾತ್ಮರೂ, ಕೀರ್ತಿವಂತರೂ ಆಗಿದ್ದರು. ಜಯಧ್ವಜನ ಮಗನೇ ತಾಲಜಂಘ. ಅವನಿಗೆ ನೂರು ಜನ ಮಕ್ಕಳು. ಅವರೆಲ್ಲರಿಗೂ ತಾಲಜಂಘರೆಂದೇ ಹೆಸರು. ಹೈಹಯರ ಕುಲದಲ್ಲಿ ಭೀತಿಹೋತ್ರರು, ಸುಜಾತರು, ಭೋಜರು, ಆವಂತೇಯರು ತಾಂಡಿಕೇಯರು, ತಾಲಜಂಘರು, ಭರತರು ಮೊದಲಾದ ಕ್ಷತ್ರಿಯರು ಇರುವರು. ಅವರೆಲ್ಲರ ಸಂತತಿಯು ಅತೀ ವಿಸ್ತಾರವಾಗಿ ಬೆಳೆದುದರಿಂದ ಅದನ್ನೆಲ್ಲ ಇಲ್ಲಿ ಹೇಳಲು ಸಾಧ್ಯವಿಲ್ಲ.

ವೃಷರಾಜ ಮೊದಲಾದವರು ಯಾದವರು. ವೃಷರಾಜನ ಮಗ ಮಧುರಾಜ. ಆ ಮಧುವಿನಗೆ ನೂರುಜನ ಮಕ್ಕಳು. ಅವರಲ್ಲಿ ವೃಷಣ ಎಂಬುವವ ಸಂತತಿಯನ್ನು ಅಭಿವೃದ್ಧಿ ಗೊಳಿಸಿದ. ಮಧುವಿನ ಮಕ್ಕಳೆಲ್ಲರೂ ಮಾಧವರು. ವೃಷನ ಸಂತತಿಯವರೆಲ್ಲ ವೃಷ್ಣಿಗಳು. (ಯಾದವರು)

ಯಯಾತಿರಾಜನ ಐದು ಮಂದಿ ಮಕ್ಕಳ ವಂಶವಿಸ್ತಾರದ ವರ್ಣನೆಯನ್ನು ನಾನು ಈಗ ನಿನಗೆ ಹೇಳಿದೆ. ಇನ್ನು ಮುಂದೆ ಈ ಯದುವಂಶವನ್ನು ಅಭಿವೃದ್ಧಿಗೊಳಿಸಿ ಅನೇಕ ಯಜ್ಞಯಾಗಮಾಡಿದ ಕ್ರೋಷ್ಟು ರಾಜನ ವಂಶವು ವೈವಿಧ್ಯಪೂರ್ಣವಾಗಿ ಅಭಿವೃದ್ಧಿ ಹೊಂದಿದ ರೀತಿಯನ್ನು ತಿಳಿಸುವೆ ಕೇಳಿರಿ. ಈ ಕ್ರೋಷ್ಟುವಿನ ವಂಶದಲ್ಲಿಯೇ ಮಹಾವಿಷ್ಣುವು ಶ್ರೀಕೃಷ್ಣನಾಗಿ ಅವತರಿಸಿದ. ಈ ವಂಶ ಹಾಗೂ ವಂಶೀಯರ ವೈಚಿತ್ರ್ಯ ಪೂರ್ಣವಾದ ಇತಿಹಾಸ ಶ್ರವಣ ಮಾಡುವುದರಿಂದ ಸಕಲ ಪಾಪಗಳು ಪರಿಹಾರವಾಗುವವು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಐದನೆಯ ಅಧ್ಯಾಯ ಮುಗಿದುದು*

—o—

**ಸೂತ:**- ಕ್ರೋಷ್ಟು ರಾಜನಿಗೆ ಗಾಂಧಾರಿ, ಮಾದ್ರಿ ಎಂಬ ಇಬ್ಬರು ಪತ್ನಿಯರು. ಗಾಂಧಾರಿಯು ಅನಪುತ್ರ ಎಂಬ ಮಗನನ್ನೂ, ಮಾದ್ರಿದೇವಿಯು ಯುಧಜಿತ, ದೇವಮೀಢ ಎಂಬ ಪುತ್ರದ್ವಯರನ್ನು ಪಡೆದಳು. ಈ ಮೂರು ಕ್ರೋಷ್ಟು ಪುತ್ರರ ವಂಶದ ಬಳ್ಳಿಗಳು ಚಿಗಿತು ಚೆಲ್ವರಿದವು. ಮಾದ್ರಿಯ ಮಕ್ಕಳಾದ ಯುಧಾಜಿತನಿಗೆ ವೃಷ್ಣ, ದೇವಮೀಢನಿಗೆ ಅಂಧಕ ಎಂಬ ಪುತ್ರರು ಹುಟ್ಟಿದರು. ಶ್ವಫಲ್ಕ, ಚಿತ್ರ ಇವರು ವೃಷ್ಣಿಯ ಮಕ್ಕಳು. ಧರ್ಮಾತ್ಮನಾದ ಶ್ವಫಲ್ಕ ಇದ್ದಲ್ಲಿ ರೋಗರುಜಿನ, ಕ್ಷಾಮಡಾಮರಗಳು, ಬಿಸಿಲುಬಿರುಗಾಳಿ ಇವುಗಳ ತಲೆದೋರುವುದಿಲ್ಲ. ಒಮ್ಮೆ ಕಾಶೀರಾಜನು ಈ ಶ್ವಫಲ್ಕನನ್ನು ದ್ವಾರಕೆಯಿಂದ ತನ್ನ ದೇಶಕ್ಕೆ ಕರೆಯಿಸಿದ. ಪೂಜೆ, ಪುನಸ್ಕಾರ ಮಾಡಿದ. ಆದರಿಂದ ಚೆನ್ನಾಗಿ ಮಳೆ, ಸಮೃದ್ಧವಾಗಿ ಬೆಳೆ ಬಂದಿತು. ಕಾಶಿಯ ದೇಶದ ಭೂಮಿಯೆಲ್ಲವೂ ಸುಜಲಾ, ಸುಫಲಾ, ಸಸ್ಯಶಾಮಲಾ ಆಗಿ ಕಂಗೊಳಿಸಿತು. ಇದರಿಂದ ಆನಂದ ಭರಿತನಾದ ಕಾಶೀರಾಜ. ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದ ಆ ಶ್ವಫಲ್ಕನಿಗೆ. ದಿನ ದಿನವೂ ಅವಳು ಗೋದಾನ ಮಾಡುತ್ತಿದ್ದಳು ಬ್ರಾಹ್ಮಣರಿಗೆ. ಆದರಿಂದಲೆ ಅವಳಿಗೆ ಹೆಸರು "ಗಾಂಧಿನೀ" ಎಂದು ಬಳಕೆಯಲ್ಲಿ ಬಂದಿತು. ಆ ಶ್ವಫಲ್ಕನ ಮಗನೇ ಅಕ್ರೂರ. ಹುಟ್ಟಾ ಉದಾರಿ. ಜಾತ್ಯಾವೀರ. ಸ್ವಭಾವದಿಂದಲೇ ಭಗವದ್ಭಕ್ತ. ಯಜ್ಞ-ಯಾಗ ವಿಭಾಗದಲ್ಲಿ ಅತ್ಯಂತ ಅಭಿಜ್ಞ. ಅತಿಥಿ ಸತ್ಕಾರ ಪರಾಯಣ. ಶಾಸ್ತ್ರಗ್ರಂಥಗಳ ಶ್ರೌತ ಸಂಪ್ರದಾಯದಲ್ಲಿ ಹೇಳಿದ ಎಲ್ಲ ಯಜ್ಞಗಳನ್ನು ಮಾಡಿ ಮುಗಿಸಿದ. ಪ್ರತಿಯೊಂದು ಯಜ್ಞದಲ್ಲಿಯೂ ಕೈತುಂಬ ದಕ್ಷಿಣೆ, ಮುಕ್ತಹಸ್ತದದಾನ. ಆ ಅಕ್ರೂರನ ಕೈ ಹಿಡಿದ ಧರ್ಮಪತ್ನಿ ಉಗ್ರಸೇನಾದೇವಿ. ರೂಪದಲ್ಲಿ ಅವಳು ಬಹಳ ಚೆಲುವೆ, ಸ್ವಭಾವದಲ್ಲಿ ಸತಿ ಶಿರೋಮಣಿ. ಅವಳಲ್ಲಿ ಅಕ್ರೂರನಿಗೆ ಸುಂದರಿ ಎಂಬ ಹೆಸರಿನ ಸಾರ್ಥಕನಾಮದ ಕನ್ಯಾಮಣಿ ಮತ್ತು ಮದ್ಗು, ಉಪಮದ್ಗು ಮೇದುರ, ಅರಿಮೇಜಯ, ಅವೀಕ್ಷೇತ, ಆಕ್ಷೇಪ, ಶತ್ರುಘ್ನ, ಧರ್ಮಧೃಕ್, ಯತಿಧರ್ಮಾ, ಧರ್ಮೋಕ್ಷಾ, ಅಂಧಕರು, ಆವಾಹ, ಪ್ರತಿಪ್ರವಾಹ ಎಂಬ ಹದಿಮೂರು ಗಂಡು ಮಕ್ಕಳು ಹುಟ್ಟಿದರು. ವೃಷ್ಣಯ ಎರಡನೆಯ ಮಗನಾದ ಚಿತ್ರಕನು ಪ್ರಸೇನ ಉಪದೇವ ಎಂಬ ಇಬ್ಬರು ಗಂಡು ಮಕ್ಕಳಿಗೆ ತಂದೆಯಾದ. ಈ ಇಬ್ಬರೂ ಚಿತ್ರಕಪುತ್ರರು ತೇಜಸ್ವಿಗಳು ದೇವತೆಗಳಂತೆ, ಧಾರ್ಮಿಕರು ಮುನಿಗಳಂತೆ. ಈ ಇಬ್ಬರು ಮಕ್ಕಳಲ್ಲದೆ ಆ ಚಿತ್ರಕನಿಗೆ ಪೃಥು, ವಿಪ್ಪಥು, ಅಶ್ವಗ್ರೀವ, ಅಶ್ವಬಾಹು, ಸುಪಾರ್ಶ್ವಕ, ಗವೇಷಣ, ಅರಿಷ್ಟನೇಮಿ, ಅಶ್ವ, ಸುಧರ್ಮ, ಸುಬಾಹು,ಎಂಬ ಹತ್ತು ಗಂಡು ಮಕ್ಕಳು ಶ್ರಲಿಷ್ಠಾ, ಶ್ರವಣಾ, ಎಂಬ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದರು. ಆ ಚಿತ್ರಕ ಅಸಿಕ್ನೀ ಎಂಬ ಮತ್ತೊಬ್ಬ ಮಡದಿಯಲ್ಲಿ ದೇವಮೀಢ ಎಂಬ ಶೂರ ಪುತ್ರನನ್ನೂ ಭೋಜ್ಯಾದೇವಿಯಲ್ಲಿ ಮತ್ತೆ ಬೇರೆ ಹತ್ತು ಜನ ಮುತ್ತಿನಂಥ ಕುಮಾರರನ್ನೂ ಪಡೆದ. ಚಿತ್ರಕನಿಗೆ ಭೋಜ್ಯಾ ಎಂಬ ಭಾರ್ಯೆಯಲ್ಲಿ ಹುಟ್ಟಿದ ಹತ್ತು ಮಕ್ಕಳಲ್ಲಿ ವಸುದೇವನೇ ಜ್ಯೇಷ್ಠನು. ಗುಣದಿಂದ ಶ್ರೇಷ್ಠನು, ಧರ್ಮನಿಷ್ಠನು, ಅವನು ಹುಟ್ಟಿದೊಡನೆ ದೇವದುಂದುಭಿಗಳು ಮೊಳಗಿದವು. ದೇವತೆಗಳು ನುಡಿಸಿದ ಕಹಳೆಗಳ ಧ್ವನಿಯೂ ಕೇಳಿಸಿತು. ಆದುದರಿಂದ ವಸುದೇವನಿಗೆ ಆನಕದುಂದುಭಿ ಎಂದು ಹೆಸರಾಯಿತು. ಪುಷ್ಪವೃಷ್ಟಿಯು ಅವನು ಹುಟ್ಟಿದಾಗ ಆಯಿತು ಸುರಲೋಕದಿಂದ. ಅಂದಿನ ಪ್ರಪಂಚದಲ್ಲಿ ವಸುದೇವನಂಥ ಸುಂದರ ಪುರುಷರೇ ಯಾರೂ

ಇರಲಿಲ್ಲ. ಅವನೊಬ್ಬ ಚೆಲುವಿನ ಚಂದ್ರಮ. ಚಂದ್ರನಂತೆ ಕಾಂತಿ ಕಿರಣಗಳು ಅವನ ಕಲೇವರಕ್ಕೆ ವಲಯಗಟ್ಟುತ್ತಿತ್ತು. ಪರಾಕ್ರಮದಲ್ಲಿಯಂತೂ ಅವನೊಬ್ಬ ಸಿಂಹಶಾರ್ದೂಲ, ಶೌರ್ಯ- ಸೌಂದರ್ಯಗಳು ಒಂದು ನಿಟ್ಟಿನಲ್ಲಿ ಒಟ್ಟಿದಂತಾದ ವ್ಯಕ್ತಿಯೇ ವಸುದೇವ. ಆ ವಸುದೇವನಿಗೆ ದೇವಭಾಗ, ದೇವಶ್ರವ, ಅನಾಧೃಷ್ಟ, ಕನವಕಗ್ರಂಜಮ, ವತ್ಸವಂತ, ಶ್ಯಾಮ, ಶಮೀಕ, ಗಂಡೂಕ್ಷ ಎಂಬ ಗಂಡು ಮಕ್ಕಳೂ, ಪೃಥುಕೀರ್ತಿ, ಪೃಥಾ, ಶೃತದೇವ, ಶೃತಶ್ರವ, ರಾಜಾಧಿದೇವಿ ಎಂಬ ಐದು ಹೆಣ್ಣುಮಕ್ಕಳು ಜನಿಸಿದರು. ಈ ಪಂಚಕನ್ಯೆಯರ ಪುತ್ರರೆಲ್ಲರೂ ಮುಂದೆ ಪ್ರಚಂಡ ಪರಾಕ್ರಮಿಗಳಾಗಿ ಪೃಥ್ವೀಮಂಡಲದಲ್ಲಿ ಮೆರೆದು ಮನ್ನಣೆ ಪಡೆದದ್ದರಿಂದ ವೀರಮಾತೆಯರು ಎಂದು ಪ್ರಸಿದ್ಧರಾದರು ಲೋಕದಲ್ಲಿ. ಪೃಥಕೀರ್ತಿ ಎಂಬ ವಸುದೇವ ಕುಮಾರಿಯು ವೃದ್ಧ ಶರ್ಮನಿಂದ ಜನಿಸಿದವನೇ ದಂತ ವಕ್ರ. ಮಹಾಬಲಿಷ್ಠ ಆದರೆ ದುಷ್ಟ ಅವನು ಆಳುವ ದೇಶ ಕರೂಷ. ಮತ್ತೊಬ್ಬ ವಸುದೇವ ಪುತ್ರಿ ಶ್ರುತಶ್ರವಾದೇವಿಯಲ್ಲಿ ಚೇದಿರಾಜನಾದ ಶಿಶುಪಾಲನ ಜನನ. ಜನ್ಮಾಂತರದ ಹಿರಣ್ಯಕಶಿಪುವೇ ಅವ. ವಸುದೇವನ ಮೂರನೇ ಮಗಳಾದ ಪೃಥಾದೇವಿಗೆ ಕುಂತಿ ಎಂಬ ಬೇರೊಂದು ಹೆಸರು. ಇದ್ದಿತು. ಆ ಕುಂತಿಯ ಕೈಹಿಡಿದವ ಪಾಂಡುರಾಜ. ಆ ಕುಂತೀದೇವಿಗೆ ಯಮಧರ್ಮನಿಂದ ಯುಧಿಷ್ಠಿರ, ವಾಯುದೇವನಿಂದ ಭೀಮಸೇನ, ದೇವೇಂದ್ರನಿಂದ ಅರ್ಜುನ ಎಂಬ ಮಕ್ಕಳು ಜನಿಸಿದರು. ಕಿರೀಟಿ, ಧನಂಜಯ, ಫಲ್ಗುಣ, ವಿಜಯ, ಗಾಂಢೀವಿ ಎಂದು ನಾನಾ ನಾಮಗಳು ಆ ಅರ್ಜುನನಿಗೆ. ಶೌರ್ಯದಲ್ಲಿ ಸರಿಸಾಟಿ ಯಾರೂ ಇಲ್ಲ ಆ ಧನಂಜಯನಿಗೆ. ಅದೇ ಪಾಂಡುರಾಜನಿಗೆ ಮತ್ತೊಬ್ಬ ಮಡದಿ ಮಾದ್ರಿದೇವಿಯಿಂದ ಅಶ್ವಿನೀ ದೇವತೆಗಳ ಅನುಗ್ರಹದಿಂದ ನಕುಲ, ಸಹದೇವರು ಜನ್ಮತಾಳಿದರು.

ವೃಷ್ಣಿಯ ಕಿರಿಯ ಮಗನಾದ ಅನಮಿತ್ರನಿಂದ ಜನಿಸಿದವನೇ ಶಿನಿ. ಈ ಶಿನಿಯ ಪುತ್ರ ಸತ್ಯಕ. ಸತ್ಯಕನಿಗೆ ಯುಯುಧಾನ ಮತ್ತು ಸಾತ್ಯಕಿ ಎಂಬ ಇಬ್ಬರು ಮಕ್ಕಳು ಉತ್ಪನ್ನರಾದರು. ಮಹಾಜ್ಞಾನಿಯಾದ ಉದ್ಧವ ದೇವಭಾಗನ ಮಗ. ಅರ್ಥಾತ್ ವಸುದೇವನ ಮೊಮ್ಮಗ. ವಸುದೇವನ ಇನ್ನೊಬ್ಬ ಮಗನಾದ ದೇವಶ್ರವಸ ಮಹಾಪಂಡಿತ. ಅನಾದೃಷ್ಟಿ ಎಂಬ ವಸುದೇವನ ಪುತ್ರನು ಅಶ್ಮಾಕ ಎಂಬ ಪುತ್ರನನ್ನು ಪಡೆದ. ವಸುದೇವನ ಮಗಳಾದ ಶ್ರುತಾದೇವಿಯು ಶತ್ರುಘ್ನನನ್ನೂ, ಏಕಲವ್ಯನನ್ನೂ ಪಡೆದಳು. ಏಕಲವ್ಯ ಕಾರಣಾಂತರದಿಂದ ಕಿರಾತಕುಲದಲ್ಲಿ ಬೆಳೆದು ದೊಡ್ಡವನಾದ. ಅವನಿಗೆ ನೈಷಾದಿ ಎಂದೂ ಕರೆಯುತ್ತಿದ್ದರು. ವಸುದೇವನ ಮಕ್ಕಳಲ್ಲಿ ಸಂತತಿ ಇಲ್ಲದವನೆಂದರೆ ವತ್ಸವಂತ. ಅವನಿಗೆ ವಸುದೇವನು ತನ್ನ ಮಗನಾದ ಕೌಶಿಕನನ್ನೇ ದಾನಕೊಟ್ಟುಬಿಟ್ಟ. ವಸುದೇವನ ಗಂಡೂಷಾ ಎಂಬ ಪುತ್ರನಿಗೂ ಸಂತತಿ ಇರಲಿಲ್ಲ. ಸಂತಾನದ ಚಿಂತೆಯಿಂದ ಕೊರಗುತ್ತಲಿದ್ದ ಆ ಗಂಡೂಷನಿಗೆ ಶ್ರೀಕೃಷ್ಣ ತನಗೆ ರುಕ್ಮಿಣಿಯಲ್ಲಿ ಹುಟ್ಟಿದ ಚಾರುದೇಷ್ಣಾ, ಸುದೇಷ್ಣಾ, ಪಂಚಾಲ, ಕೃತಲಕ್ಷಣ ಎಂಬ ನಾಲ್ಕು ಮಕ್ಕಳನ್ನು ದತ್ತುಕೊಟ್ಟ. ಕೃಷ್ಣಕುಮಾರರಲ್ಲಿ ಚಾರುದೇಷ್ಣನೇ ರುಕ್ಮಿಣಿಯ ಕಡೆ ಹುಟ್ಟ ಮಗ. ಮಹಾ ಪರಾಕ್ರಮಿ. ಯುದ್ಧಕ್ಕೆ ಹೋದರೆ ಗೆಲುವು ತಾರದೇ ಎಂದೂ ಹಿಂತಿರುಗುತ್ತಿರಲಿಲ್ಲ. ಚಾರುದೇಷ್ಣನ ಯುದ್ಧವೆಂದರೆ ಕಾಗೆಗಳ ಹಿಂಡಿಗೆ ಹಬ್ಬ. ಇವನು ಯುದ್ಧದಲ್ಲಿ ಕೊಂದು ಹಾಕಿದ ವೈರಿಗಳ ಮಾಂಸ ಸವಿಯಲು ಇವನು ಸಜ್ಜಾಗಿ ಹೊರಟಾಗ ತಪ್ಪದೇ ಹಿಂಬಾಲಿಸುತ್ತಿದ್ದವು. ತಂತ್ರಿಜ, ತ್ರಂತ್ರಿಪಾಲರೆಂಬ ವೀರರು ಕನವಕನ ಮಕ್ಕಳು, ವೀರು, ಅಶ್ವಹನುಗಳಿಂಬೀರ್ವರು ವೀರರು ಗೃಹಮನ ಮಕ್ಕಳು. ಶಾಮನೆಂಬುವನ ಮಗ

ಶಮೀಕ. ಅವನು ರಾಜ್ಯವಾಳುತ್ತಿದ್ದು ಆ ರಾಜ್ಯವಾಳುವದ ರಿಂದುಂಟಾಗಬಹುದಾದ ಪಾತದಿಂದ ಬೇಸತ್ತು ರಾಜಸೂಯಮಾಡಿದ. ಈ ಶಮೀಕನಿಗೆ ಅಜಾತಶತ್ರುವೆಂಬ ಪುತ್ರ ಜನಿಸಿದ. ತಂದೆಯ ಶತ್ರುಗಳನ್ನೆಲ್ಲ ನಾಶಪಡಿಸಿದ. ಇನ್ನು ವಸುದೇವನ ಕೆಲ ವೀರಪುತ್ರರ ಬಗೆಗೆ ಹೇಳುವೆ ಕೇಳಿರಿ. ಪೂರ್ವದಲ್ಲಿ ಉಕ್ತವಾದಂತೆ ವೃಷ್ಣಿಕುಲವು ಅವನಿಂದ ಮೂರು ಶಾಖೆಗಳಿಂದ ಹೊರಟು ಅನೇಕ ಶಾಖೆಗಳಾಗಿ ಕವಲೊಡೆದವು.

ವಸುದೇವನಿಗೆ ಪುರುವಂಶದ ರೋಹಿಣಿ, ಮದಿರಾದೇವಿ, ವೈಶಾಖೀ, ಭದ್ರಾದೇವಿ, ಸುನಾಮ್ನಿದೇವಿ, ಸಹದೇವಾದೇವಿ, ಶಾಂತಿದೇವಾದೇವಿ, ಶ್ರೀದೇವಿ, ದೇವರಕ್ಷಿತಾದೇವಿ, ವೃಕದೇವಿ, ಉಪದೇವಿ, ದೇವಕೀ-ಎಂಬ ಹನ್ನೆರಡು ಸ್ತ್ರೀಯರು ಪ್ರಧಾನಮಹಿಷಿಯರು ಹಾಗೂ ಸುತನ, ವಡವಾ ಎಂಬ ಇಬ್ಬರು ಪರಿಚಾರಿಕೆಯರೂ ಇದ್ದರು. ಇವರೆಲ್ಲರೂ ಸುಂದರಿಯರೂ ಸಾಧ್ವಿಗಳೂ, ಪತಿಭಕ್ತಿ ಪರಾಯಣರೂ ಆಗಿದ್ದರು. ಪುರುವಂಶದ ರೋಹಿಣೀದೇವಿಯೆಂಬ ಬಾಹ್ಲಿಕ ರಾಜನ ಮಗಳು, ವಸುದೇವನಿಗೆ ಇವರಲ್ಲಿ ಪ್ರೀತ್ಯಾಸ್ಪದಳಾದ ಸಹಧರ್ಮಿಣಿಯಾಗಿದ್ದಳು. ಇವಳೇ ಉಳಿದೆಲ್ಲರಿಗಿಂತ ಹಿರಿಯಳೂ ಆಗಿದ್ದಳು. ಈ ಪ್ರೀತಿಯ ಹೆಂಡತಿಯಲ್ಲಿ ಬಲರಾಮ, ಶರಣ್ಣ, ಶಠ, ದುರ್ದಮ, ದಮನ, ಶುಭ್ರ, ಪಿಂಡಾರಕ, ಉಶೀನರ, ಎಂಬ ಎಂಟು ಗಂಡು ಮಕ್ಕಳೂ ಸುಭದ್ರೆ ಎಂಬ ಹೆಣ್ಣುಮಗಳೂ ಜನಿಸಿದರು. ಈ ಸುಭದ್ರೆಗೆ ಚಿತ್ರಾ ಎಂದೂ ಕರೆಯುವರು ವಸುದೇವನಿಗೆ ದೇವಕಿಯಲ್ಲಿ ಶ್ರೀಕೃಷ್ಣ ಜನಿಸಿದ. ಬಲರಾಮನಿಂದ ರೇವತಿ ದೇವಿಯಲ್ಲಿ ನಿಶಠ ಎಂಬ ಪುತ್ರ ಜನಿಸಿದ. ಸುಭದ್ರಾದೇವಿಯಲ್ಲಿ ಅರ್ಜುನನಿಂದ ವೀರನಾದ ಅಭಿಮನ್ಯು ಜನಿಸಿದ. ಅಕ್ರೂರನಿಂದ ಕಾಶಿರಾಜನ ಮಗಳಲ್ಲಿ ಸತ್ಯಕೇತುವು ಹುಟ್ಟಿದ. ಭೋಜ, ವಿಜಯ ಎಂಬ ಈರ್ವರು ವಸುದೇವನಿಂದ ಶಾಂತಿದೇವಿಯಲ್ಲಿ ಜನಿಸಿದರು. ವೃಕದೇವ, ಗದರ ಎಂಬ ಈರ್ವರು ಸುನಾಮಾಳಲ್ಲಿ ಜನಿಸಿದರು. ಆಗಾವಹನೆಂಬುವವನು ವೃಕದೇವಿಯಲ್ಲಿ ಜನಿಸಿದ. ಈ ವೃಕದೇವಿಯು ತ್ರಿಗರ್ತ ರಾಜನ ಮಗಳು.

ಗಾರ್ಗ್ಯ ಎಂಬ ಋಷಿಯು ಹನ್ನೆರಡು ವರ್ಷಗಳವರೆಗೆ ಬ್ರಹ್ಮಚರ್ಯ ವ್ರತ ಪಾಲಿಸಿ ಸಾಧನೆಗೈದ. ವ್ರತ ಮುಗಿಸಿದ ನಂತರ ಗೋಪ ಸುಂದರಿಯನ್ನು ವಿವಾಹವಾದ ಪೂರ್ವಜನ್ಮದಲ್ಲಿ ಅಪ್ಸರೆಯಾಗಿದ್ದ ಆ ಗೋಪ ಸುಂದರಿಗೆ ಗರ್ಗಮುನಿಯಿಂದ ಕಾಲಯವನ ಎಂಬ ಮಗ ಹುಟ್ಟಿದ. ಇವನು ಮಹಾಬಲಶಾಲಿಯಾಗಿದ್ದ. ಈ ಕಾಲಯವನನ ದೇಹವು ಎಲ್ಲ ಮಕ್ಕಳ ದೇಹದಂತೆ ಇರದೇ ವಿಲಕ್ಷಣವಾಗಿತ್ತು. ಶರೀರದ ಪೂರ್ವಾರ್ಧ ಗುಂಡಗೆ ಇತ್ತು, ನಡುವು ಸಿಂಹದಂತೆ ಚಿಕ್ಕದಾಗಿದ್ದು ಸುಂದರವಾಗಿತ್ತು. ಕಾರಣಾಂತರದಿಂದ ಈ ಶಿಶುವು ಯವನರಾಜನ ಅಂತಃಪುರದಲ್ಲಿ ಬೆಳೆಯಿತು. ಅಂತೆಯೇ ಕಾಲಯವನ ಎಂದು ಹೆಸರು ಹೊಂದಿತು. ಅತುಲ ಪರಾಕ್ರಮಿಯಾಗಿದ್ದ ಈ ಕಾಲಯವನನ್ನು ಕಂಡರೇ ಶತ್ರುಗಳು ದಿಕ್ಕಾಪಾಲಾಗಿ ಓಡುತ್ತಿದ್ದರು. ಸೆಣಸಾಡಲು ಯಾರೂ ಇಲ್ಲದೇ ಬೇಸರವೆನಿಸಿತು ಕಾಲಯವನನಿಗೆ. ನಾರದರ ಬಳಿಗೆ ಬಂದು ತನ್ನ ತೊಂದರೆ ತೋಡಿಕೊಂಡು ಸ್ವಪರಾಕ್ರಮ ಪ್ರದರ್ಶನಕ್ಕೆ ಸ್ಥಳವೊಂದನ್ನು ಸೂಚಿಸಬೇಕೆಂದು ಯಾಚಿಸಿದ. ನಾರದ ಮಥುರೆಯನ್ನು ತೋರಿಸಿದ. ಅಲ್ಲಿನ ಯಾದವರು ನಿನ್ನ ಜೊತೆಗೆ ಯುದ್ಧಮಾಡಬಲ್ಲರು ಎಂದ. ಇಷ್ಟು ಕೇಳಿದ ಕೂಡಲೇ ಕಾಲಯವನ ಸೈನ್ಯ ಸಹಿತನಾಗಿ ಮಥುರೆಗೆ ಲಗ್ಗೆ ಇಟ್ಟ. ಯಾದವರಿಗೆ ಭಯವಾಯಿತು. ಎಲ್ಲರೂ ರಾಜತಂತ್ರ ಕುಶಲನಾದ ಕೃಷ್ಣನಲ್ಲಿಗೆ ಬಂದರು. ಕೃಷ್ಣ ಹೇಳಿದ,

''ಕಾಲಯವನನು ಶಂಕರನ ಉಪಾಸನೆ ಮಾಡಿ ಅಜೇಯತ್ವವನ್ನು ವರವನ್ನಾಗಿ ಪಡೆದಿದ್ದಾನೆ. ಅದನ್ನು ನಾನು ಉಲ್ಲಂಘಿಸ ಬಹುದಾದರೂ ಈಗ ಉಲ್ಲಂಘಿಸುವದು ಬೇಡ. ನೀವೆಲ್ಲರೂ ಇನ್ನೊಂದು ದ್ವಾರದಿಂದ ಹೊರಹೊರಟು ಕುಶಸ್ಥಲಿಯನ್ನು ಪ್ರವೇಶಿಸಿ. ಮಧುರೆಯೊಳಗೆ ಕಾಲಯವನ ಪ್ರವೇಶ ಮಾಡುವದರೊಳಗಾಗಿ ಮಧುರಾಪಟ್ಟಣ ಖಾಲಿಯಾಗಲಿ. ಇಲ್ಲಿರುವವರೆಲ್ಲ ಕುಶಸ್ಥಲಿಗೆ ಸಾಗಲಿ. ಕಾಲಯವನ ನಮಗೆ ಅಜಿಂತ್ಯನಲ್ಲದಿದ್ದರೂ ಶಂಕರನ ಮೇಲಿನ ಅಭಿಮಾನದಿಂದ, ಅವನು ''ಕಾಲಯವನಿಗೆ ಕೊಟ್ಟ ವರವನ್ನು ಉಳಿಸೋಣ. ಗೌರವಿಸೋಣ'' ಎಂದನು.

ಕೃಷ್ಣನ ಈ ಮಾತುಗಳನ್ನು ಯಾದವರು ಒಪ್ಪಿದರು. ದ್ವಾರಾವತೀ ಎಂಬ ಅಪರನಾಮ ವುಳ್ಳ ಕುಶಸ್ಥಲಿಗೆ ಆಗಮಿಸಿದರು. ಆ ಸುಂದರ ಪಟ್ಟಣದಲ್ಲಿ ವಾಸಮಾಡತೊಡಗಿದರು.

**ಸೂತ:-** ಋಷಿಗಳೇ, ಕೋಷ್ಟು ರಾಜನಿಗೆ ವೃಜೇನೀವಾನ್ ಎಂಬ ಇನ್ನೊಬ್ಬ ಸುತನಿದ್ದ ವೃಜನೀವಾನನ ಪುತ್ರನ ಹೆಸರು ಸ್ವಾಹಿ. ಸ್ವಾಹಿಯ ಮಗ ಉಷದ್ಗುರಾಜ. ಈ ಉಷದ್ಗುವು ವಿದ್ವಾಂಸನಾಗಿದ್ದು ಅನೇಕ ಯಜ್ಞಯಾಗಗಳನ್ನು ಮಾಡಿದ. ವಿದ್ವಾಂಸರನ್ನು ಪ್ರೋತ್ಸಾಹಿಸಿದ. ಸಂತತಿಯನ್ನು ಬೆಳೆಸಿದ. ಇವನಿಗೆ ಚಿತ್ರರಥ ಎಂಬ ವೀರ, ಧರ್ಮಿಷ್ಠ ಪುತ್ರನಿದ್ದ. ಚಿತ್ರರಥನ ಮಗ ಶಶಬಿಂದು, ಶಶಬಿಂದುವು ಸ್ವಸಾಮರ್ಥ್ಯದಿಂದ ರಾಜರ್ಷಿಯೆನಿಸಿದ್ದ. ಪೃಥುಶ್ರವ, ಪೃಥುಯಶ ಎಂಬ ಈರ್ವರು ಶಶಬಿಂದುವಿನ ಪುತ್ರರು. ಅಂತರ ಎಂಬುವವ ಪೃಥುಶ್ರವನ ಮಗ. ಅಂತರನ ಮಗ ಸುಯಜ್ಞ. ಸುಯಜ್ಞನ ಮಗ ಉಷತನು. ಈ ಉಷತನುವು ರಾಜಧರ್ಮವನ್ನು ಸರಿಯಾಗಿ ಪಾಲಿಸುವವರಲ್ಲಿ ಹೆಸರುವಾಸಿ ಯಾಗಿದ್ದ. ಉಷತನುವಿನ ಮಗನೇ ಶಿನೇಯುರಾಜ. ಈತನು ಮಹಾವೀರ. ಇವನಿಗೆ ಮರುತ ಎಂಬ ಮಗನಿದ್ದ. ಶಶಬಿಂದುವಿನಂತೆ ಇವನೂ ರಾಜರ್ಷಿಯೆನಿಸಿದ್ದ. ಇವನಿಗೆ ಕಂಬಲಬರ್ಹಿಷ ಎಂಬ ಮಗನಿದ್ದ. ಕಂಬಲಬರ್ಹಿಷನಿಗೆ ರುಕ್ಮಕವಚ ಎಂಬ ಸುತನು ಜನಿಸಿದ. ಕಂಬಲಭರ್ಹಿಷನ ಹೆಂಡತಿ ಶ್ರುತಪ್ರಸವತಾದೇವಿ. ರುಕ್ಮಕವಚನು ಕಠಿಣ ಕವಚವನ್ನು ಧರಿಸಿದವರೂ, ಉತ್ತಮ ಬಿಲ್ಲುಗಾರರೂ ಆದ ನೂರಾರು ಶತ್ರುಗಳನ್ನು ಹರಿತ ಬಾಣಗಳಿಂದ ಸಂಹರಿಸಿ ಜಯಲಕ್ಷ್ಮಿ ಹಾಗೂ ಧನಲಕ್ಷ್ಮಿ ಎರಡನ್ನೂ ಸಂಪಾದಿಸಿದ. ರುಕ್ಮಕವಚನಿಂದ ಪರಾಜಿತ ಜನಿಸಿದ. ಈತ ಮಹಾಶೂರ, ಪರಾಜಿತನಿಗೆ ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪಾಲಿತ, ಹರಿ ಮುಂತಾದ ಐದು ಮಕ್ಕಳು. ಇವರಲ್ಲಿ ಪಾಲಿತ ಮತ್ತು ಈ ಈರ್ವರು ಪರಾಜಿತನಿಂದ ವಿದೇಹರಾಜನಿಗೆ ದತ್ತು ಕೊಡಲ್ಪಟ್ಟರು. ಪೃಥುರುಕ್ಮನ ಸಹಾಯದಿಂದ ರುಕ್ಮೇಷುವು ರಾಜ್ಯ ಆಳಲು ಪ್ರಾರಂಭಿಸಿದ. ಇಬ್ಬರೂ ಸೇರಿ ತಮ್ಮ ತಂದೆಯಾದ ಜ್ಯಾಮಘನನ್ನು ಓಡಿಸಿದರು. ಜ್ಯಾಮಘನನು ಅರಣ್ಯಕ್ಕೆ ಹೋಗಿ ತಪಶ್ಚರಣೆಗೆ ತೊಡಗಿದ. ಪ್ರಶಾಂತನಾದ ಜ್ಯಾಮಘನನ್ನು ಆಶ್ರಮದ ಮುನಿಗಳು ತಮ್ಮ ಬಳಿ ಇರಿಸಿಕೊಂಡರು. ಕ್ರಮೇಣ ಅವನಿಗೆ ಉಪದೇಶ ನೀಡಿ ''ರಾಜನಾದವನ ಕರ್ತವ್ಯ ನ್ಯಾಯಮಾರ್ಗದಿಂದ ರಾಜ್ಯ ಆಳುವದೇ ವಿನಾ ತಪಸ್ಸನ್ನು ಆಚರಿಸುವದಲ್ಲ'' ಎಂಬುದನ್ನು ಮನದಟ್ಟು ಮಾಡಿಸಿದರು. ತ್ಯಜಿಸಿದ ಬಿಲ್ಲು-ಬಾಣಗಳನ್ನು ರಾಜ ಮತ್ತೆ ಧರಿಸಿದ. ನರ್ಮದಾ ದಡದ ಮೇಲಿರುವ ಮೇಕಲಾ, ಮತ್ತು ಮೃತ್ತಿಕಾವತೀ, ಶುಕ್ತಿವತೀ ಎಂಬ ನಗರಗಳನ್ನು ಆಳುತ್ತ ಶುಕ್ತಿವತಿಯಲ್ಲಿಯೇ ತಾನೂ ವಾಸಮಾಡಿದನು. ಜ್ಯಾಮಘನಿಗೆ ಶೈಬ್ಯೆಯೆಂಬ ಪತಿವ್ರತೆಯಾದ ಹೆಂಡತಿ ಇದ್ದಳು. ಅವಳಿಗೆ ಮಕ್ಕಳಾಗಲಿಲ್ಲ. ಆದರೂ ಸಹ

ರಾಜನು ಪತ್ನಿಯ ಮೇಲೆ ಇದ್ದ ಅನುರಾಗಾತಿಶಯದಿಂದ ಬೇರೊಬ್ಬಳನ್ನು ವಿವಾಹವಾಗಲಿಲ್ಲ. ಒಂದು ಸಲ ಜ್ಯಾಮಘನನು ಯುದ್ಧವೊಂದಕ್ಕೆ ಹೋಗಿದ್ದ. ಶತ್ರುಗಳನ್ನೆಲ್ಲ ಸದೆಬಡೆದ. ಸೋತು ಶರಣಾದರು ಕೆಲವರು, ರಣರಂಗಕ್ಕೆ ಬೆನ್ನು ತೋರಿಸಿ ಓಡಿದರು. ಮತ್ತೆ ಹಲವರು. ಯುದ್ಧದ ರಭಸ ಮುಗಿದಾದ ಮೇಲೆ ರಾಜನಿಗೆ ಆ ರಣರಂಗದಲ್ಲಿ ಕನ್ನೆಯೊಬ್ಬಳು ಕಂಡಳು. ತನ್ನನ್ನು ಅನಾಥೆಯೆಂದು ಹೇಳಿಕೊಂಡು ರಕ್ಷಿಸಲು ರಾಜನನ್ನು ಪ್ರಾರ್ಥಿಸಿದಳು. ರಾಜನು ಆ ಅನಾಥ ಬಾಲಿಕೆಯನ್ನು ಮನೆಗೆ ಕರೆತಂದ. ಹೆಂಡತಿಗೆ ಅವಳನ್ನು ಒಪ್ಪಿಸಿ ಇಂತೆಂದ. ''ಇವಳು ನಿನ್ನ ಸೊಸೆ. ಇನ್ನು ಮುಂದೆ ಇವಳ ಪೋಷಣೆಯ ಜವಾಬ್ದಾರಿ ನಿನ್ನದು'' ರಾಜನ ಮಡದಿಗೆ ಆಶ್ಚರ್ಯವಾಯಿತು. ಅವಳು ಕೇಳಿದಳು. ಇವಳಿಗೆ ಪತಿಯಾಗಬಹುದಾದ ಮಗ ತಮಗಿದ್ದರೆ ಮಾತ್ರ ಇವಳು ಸೊಸೆಯಾಗಬಹುದಲ್ಲವೇ? ಆ ಭಾಗ್ಯ ನಮಗೆಲ್ಲಿದೆ?. ಆಗ ರಾಜ ಉತ್ತರಿಸಿದ ಇನ್ನು ಮುಂದೆ ನಿನಗೊಬ್ಬ ಮಗ ಹುಟ್ಟುತ್ತಾನೆ ಮತ್ತು ಅವನಿಗೆ ಇವಳು ಹೆಂಡತಿಯಾಗಲೆಂದು ತಂದಿರುವೆ.

**ಸೂತ:-** ಹೀಗೆ ರಾಜನು ಹೆಂಡತಿಗೆ ಹೇಳಿ ಒಬ್ಬ ಸತ್ಪುತ್ರನನ್ನು ಪಡೆಯಲು ಭಗವಂತನ ಉಪಾಸನೆ ಮಾಡಿದ. ತಪಸ್ಸನ್ನು ಕೈಗೊಂಡ. ಇವನ ನಿಷ್ಠೆಗೆ ಮೆಚ್ಚಿ ಭಗವಂತ ಅನುಗ್ರಹಿಸಿದ. ಶೈಬ್ಯೆ ಗರ್ಭವತಿಯಾದಳು. ರಣರಂಗದಲ್ಲಿ ದೊರಕಿದ್ದ ಆ ಕನ್ನೆಗೆ ಅನುರೂಪನಾದ ಪತಿಯನ್ನು ಪ್ರಸವಿಸಿದಳು. ಆ ಕನ್ನೆಯಲ್ಲಿ ಕ್ರಥ, ಕೃಶಿಕ ಎಂಬ ಮಕ್ಕಳು ಜನಿಸಿದರು ಭೀಮ ಎಂಬ ವಿದರ್ಭನ ಮಗನಿಗೆ ಕುಂತಿರಾಜ ಹುಟ್ಟಿದ. ಕುಂತಿರಾಜನಿಗೆ ಧೃಷ್ಟ, ಧೃಷ್ಟನಿಂದ ಧಾರ್ಮಿಕರೂ, ಶೂರರೂ ಆದ ಆವಂತ, ದಶಾರ್ಹ, ಬಲಿಯೆಂಬ ಮೂವರು ಸುತರು ಹುಟ್ಟಿದರು. ಇವರಲ್ಲಿ ಬಲಿಯು ವಿಷಜನ್ಯವಾದ ಬಾಧೆಯನ್ನು ಪರಿಹರಿಸುತ್ತಿದ್ದನು. ದಶಾರ್ಹನ ಮಗ ವ್ಯೋಮರಾಜ. ವ್ಯೋಮನ ಮಗ ಜೀಮೂತ. ಜೀಮೂತನ ಮಗ ವಿಕೃತಿ. ವಿಕೃತಿಯ ಮಗ ಭೀಮರಥ. ಭೀಮರಥನ ಪುತ್ರ ನವರಥ, ನವರಥನ ಮಗ ದಶರಥ. ದಶರಥನ ಮಗ ಶಕುನಿ. ಶಕುನಿಯ ಸುತ ಕರಂಭ, ಕರಂಭನ ಪುತ್ರ ದೇವರಾತ. ದೇವರಾತನ ಮಗ ದೇವಕ್ಷತ್ರ. ದೇವಕ್ಷತ್ರನ ಮಗ ವೃದಕ್ಷತ್ರ.

ಈ ವೃದಕ್ಷತ್ರನು ದೇವತೆಗಳಿಗೆ ಸಮಾನವಾದ ಕಾಂತಿಯುಳ್ಳವನು. ಇವನಿಂದಲೇ ಮಧುವಂಶದ ಮೂಲಪುರುಷನಾದ ಮಧುವು ಜನಿಸಿದ. ಇವನು ಹೆಸರಿಗೆ ತಕ್ಕಂತೆ ಸವಿಯಾಗಿ ಮಾತನಾಡುತ್ತಿದ್ದ. ಮಧುವಿನಿಂದ ವೈದರ್ಭೀ ದೇಶದಲ್ಲಿ ಪುರುದ್ವಾನ್ ಜನಿಸಿದ. ಇದಲ್ಲದೇ ಇಕ್ಷ್ವಾಕು ವಂಶದ ರಾಜಪುತ್ರಿಯಲ್ಲಿ ಸತ್ವಾನ್ ಎಂಬ ಪುತ್ರ ಜನಿಸಿದ. ಇವನು ಸತ್ವಶಾಲಿಯಾಗಿದ್ದ. ಉತ್ತಮ ಗುಣವುಳ್ಳವನೂ ಅಂತೆಯೇ ಕೀರ್ತಿಶಾಲಿಯೂ ಆಗಿದ್ದ. ಜಾಮಘನ ಈ ವಂಶಾವಳಿಯನ್ನು ತಿಳಿದವನು ಸತ್ಪುತ್ರಶಾಲಿಯಾಗುವನು.

**ಸೂತ:-** ಈ ಸತ್ವನೆಂಬುವವನಿಂದ ಕೋಸಲ ರಾಜಕುಮಾರಿಯಲ್ಲಿ ಭಾಗಿ, ಭಜಮಾನ, ದಿವ್ಯ ದೇವವೃಧ, ಅಂಧಕ, ವೃಷ್ಣಿ ಎಂಬ ಕೀರ್ತಿಶಾಲಿಗಳಾದ ಮಕ್ಕಳು ಜನಿಸಿದರು. ಇವರಿಂದ ನಾಲ್ಕು ವಂಶಗಳು ಕವಲು ಒಡೆದವು. ಅವು ಹೀಗಿವೆ. ಭಜಮಾನ ರಾಜನಿಗೆ ಸಂಜಯನ ಮಕ್ಕಳಾದ ಬಾಹ್ಯಕಾದೇವಿ ಉಪಬಾಹ್ಯಕಾದೇವಿ ಎಂಬ ಇಬ್ಬರು ಹೆಂಡಂದಿರು. ಇವರೀರ್ವರಿಂದ ಅನೇಕ ಮಕ್ಕಳು ಹುಟ್ಟಿದರು. ಬಾಹ್ಯಕಾದೇವಿಯಲ್ಲಿ ಭಜಮಾನನಿಂದ ಕ್ರಿಮಿ, ಕ್ರಮಣ, ಧೃಷ್ಟ, ಶೂರ, ಪುರಂಜಯ ಎಂಬ ಮಕ್ಕಳು ಜನಿಸಿದರು. ಉಪಬಾಹ್ಯಕಾದೇವಿಯಲ್ಲಿ ದಾಸಕ, ಶತಾಜಿತ್, ಸಹಸ್ರಾಜಿತ್, ಅಮುತಾಜಿತ್ ಎಂಬ

ಮಕ್ಕಳು ಭಜಮಾನನಿಂದ ಹುಟ್ಟಿದರು. ದೇವವೃಧ ಎಂಬ ರಾಜನು ತನಗೆ ಗುಣಶಾಲಿಯಾದ ಪುತ್ರನು ಜನಿಸಬೇಕೆಂಬ ಅಪೇಕ್ಷೆಯಿಂದ ದೊಡ್ಡ ತಪಸ್ಸನ್ನೇ ಆಚರಿಸಿದ. ಆ ರಾಜನು ಪ್ರತಿದಿನ ಪರ್ಣಾಶಾ ನದಿಯಲ್ಲಿ ಸ್ನಾನ ಮಾಡುತ್ತಿದ್ದ. ನದಿಯ ದಡದ ಮೇಲೆ ಕುಳಿತು ನಿಷ್ಠೆಯಿಂದ ತಪಸ್ಸನ್ನು ಆಚರಿಸಿದ. ರಾಜನ ನಿಷ್ಠೆಯಿಂದ ಕರುಣಾಶಾಲಿಯಾದ ಆ ನದಿಗೆ ರಾಜನ ಮೇಲೆ ಅನುರಾಗವುಂಟಾಯಿತು. ಸದ್ಗುಣಗಳ ಖನಿಯಂತಿರುವ ಈ ರಾಜನಿಗೆ ಅನುರೂಪ ಕನ್ಯೆಯೇ ಇಲ್ಲವೆಂದು ಆಲೋಚಿಸಿದ ಆ ನದಿಯು ಒಂದು ದಿನ ಸ್ವಯಂ ಕನ್ಯೆಯ ವೇಷಧರಿಸಿ ರಾಜನ ಎದುರು ಬಂದು ನಿಂತಳು. ರಾಜ ಅವಳನ್ನು ಪತ್ನಿಯನ್ನಾಗಿ ಸ್ವೀಕರಿಸಿದ. ಈ ನದೀಕನ್ಯೆಯಲ್ಲಿ ರಾಜನಿಗೆ ತೇಜಸ್ವಿಯಾದ ಬಭ್ರು ಎಂಬ ಸುತನು ಜನಿಸಿದನು. ಈ ಬಭ್ರುವು, ಶೌರ್ಯ, ತೇಜಸ್ಸು ಮುಂತಾದ ಗುಣಗಳಿಂದ ದೇವತೆಗಳಿಗೆ ಸಮಾನನು. ಇವನ ಕೀರ್ತಿಯು ಭೂ-ಸ್ವರ್ಗಗಳೆರಡರಲ್ಲೂ ವ್ಯಾಪಿಸಿತು. ಸ್ವಯಂ ತಾನು ಮಾತ್ರ ಉದ್ಧಾರವಾಗದೇ ತನ್ನೊಡನೆ ಏಳು ಸಾವಿರದ ಅರವತ್ತಾರು ಪುರುಷರನ್ನು ಪುಣ್ಯ ಹೊಂದುವಂತೆ ಮಾಡಿದ. ಅನೇಕ ಯಜ್ಞಯಾಗಗಳನ್ನು ನೆರವೇರಿಸಿ ಬ್ರಾಹ್ಮಣರಿಗೆ, ವಿದ್ವಾಂಸರಿಗೆ ಭೂರಿದಾನ ದಕ್ಷಿಣೆಗಳನ್ನಿತ್ತ. ಬಭ್ರುವಿನ ಸಂತತಿಯೂ ವಿಸ್ತೃತವಾದುದು. ಸಾರ್ತಿಕಾವತರು, ಭೋಜರು ಮೊದಲಾದ ಶ್ರೇಷ್ಠ ಕ್ಷತ್ರಿಯರು ಇವನ ವಂಶದಲ್ಲಿಯೇ ಹುಟ್ಟು ಪಡೆದಿರುವರು. ಅಂಧಕನಿಂದ ಕಾಶೀರಾಜನ ಮಗಳಲ್ಲಿ ಕುಕುರ, ಭಜಮಾನ, ಸಸಕ, ಬಲಬರ್ಹಿಷ ಎಂಬ ನಾಲ್ಕು ಮಂದಿ ಮಕ್ಕಳು ಜನಿಸಿರುವರು. ಕುಕುರನ ಮಗ ವೃಷ್ಟ. ವೃಷ್ಟಿಯ ಮಗ ಕಪೋತರೋಮ. ಕಪೋತರೋಮನ ಮಗ ತಿಲಿರಿ. ತಿಲಿರಿಯ ಮಗ ಪುನರ್ವಸು. ಪುನರ್ವಸುವಿನ ಮಗ ಅಭಿಜಿತ್. ಈ ಅಭಿಜಿತ್‌ನಿಗೆ ಆಹುಕ, ಶ್ವಾಹುಕ, ಎಂಬ ಮಕ್ಕಳು ಇದ್ದರು. ಈ ಆಹುಕನು ಹಾಗೂ ಅವನ ಸುತರು ಪುರಾಣ ಪ್ರಸಿದ್ಧರು. ಆಹುಕನ ವಿಷಯದಲ್ಲಿ ಪ್ರಾಚೀನವಾದ ಗಾದೆಯೊಂದು ಹೀಗಿದೆ.

ಆಹುಕನ ರಾಜ್ಯವು ಸುಸಮೃದ್ಧವಾಗಿದ್ದಿತು. ಎಂಭತ್ತು ಕವಚ ಹಾಗೂ ಶ್ವೇತ ಪರಿವಾರ ಸಹಿತನಾಗಿ ಇವನು ಯುದ್ಧಕ್ಕೆ ತೆರಳುತ್ತಿದ್ದನು. ಆಹುಕನ ರಾಜ್ಯದಲ್ಲಿ ನಿಪುತ್ರಕನು ಓರ್ವನೂ ಇರಲಿಲ್ಲ. ಒಬ್ಬನೂ ಜಿಪುಣನಿರಲಿಲ್ಲ. ಅಲ್ಪಾಯುಷಿಗಳು ಹುಡುಕಿದರೂ ಸಿಗುತ್ತಿರಲಿಲ್ಲ. ಎಲ್ಲರೂ ಸಹಸ್ರವರ್ಷ ಪರ್ಯಂತ ಆಯುಷ್ಯವುಳ್ಳವರು. ಪಾಪ ಕರ್ಮರು ಯಾರೂ ಇರಲಿಲ್ಲ. ಪ್ರಜೆಗಳು ದೈವಭಕ್ತಿ ಹಾಗೂ ಸ್ವಕರ್ತವ್ಯಾಸಕ್ತಿಯಿಂದ ಕೂಡಿದ್ದರು. ಆಹುಕನು ಎಂದಾದರೂ ಯುದ್ಧಕ್ಕೆ ಹೊರಟನೆಂದರೆ ಇವನೊಡನೆ ಬಲಿಷ್ಠ ಆನೆಗಳಿಂದ ಕೂಡಿದ ಇಪ್ಪತ್ತೊಂದು ಸಾವಿರ ಮಹಾರಥಗಳು ಹೊರಡುತ್ತಿದ್ದವು. ಈ ರಥಗಳ ಧ್ವಜಗಳು ಚಂದ್ರಮಂಡಲವನ್ನು ಚುಂಬಿಸುತ್ತಿದ್ದವು. ರಥಗಳ ಧ್ವನಿಯು ಮೇಘನಾದದಂತೆ ಭಾಸವಾಗುತ್ತಿತ್ತು. ರಥಗಳಲ್ಲಿನ ಚೌಕಟ್ಟು ಗೋಪುರ ಮೊದಲಾದವು ಶ್ರೇಷ್ಠ ದರ್ಜೆಯ ಚಿನ್ನ, ರಜತ ಮುಂತಾದ ಲೋಹಗಳಿಂದ ನಿರ್ಮಿತವಾಗಿರುತ್ತಿದ್ದವು. ಇಂಥ ವೈಭವೋಪೇತವಾದ ಬಲಕ್ಕೆ ರಾಜನು ನಿರಂಕುಶ ಪ್ರಭುವಾಗಿ ಬಹುಕಾಲ ಆಳ್ವಿಕೆಯನ್ನು ಮಾಡಿದ.

ಈ ಭೋಜ ವಂಶದವರು ಭೂಮಿಯಲ್ಲಿ ರಾಜ ಸಂತತಿ ಇರುವವರೆಗೂ ಇರುವರು. ಆಹುಕನ ಮಗಳನ್ನು ಅವಂತಿ ದೇಶದ ರಾಜಕುಮಾರನಿಗೆ ಅಂಧಕ ಕುಮಾರರು ಮದುವೆ ಮಾಡಿಕೊಟ್ಟರು. ಆಹುಕನಿಗೆ ಕಾಶೀರಾಜಕುಮಾರಿಯಲ್ಲಿ ದೇವಕ, ಉಗ್ರಸೇನ ಎಂಬ ಇಬ್ಬರು ಮಕ್ಕಳು ಜನಿಸಿದರು. ಅವರು ದೇವಕುಮಾರರಂತಿದ್ದರು. ದೇವಕನಿಗೆ ತೇಜಸ್ವಿಗಳಾದ ದೇವ,

ಉಪದೇವ, ಸುದೇವ, ದೇವರಕ್ಷಿತ ಎಂಬ ನಾಲ್ವರು ತೇಜಸ್ವಿ ಪುತ್ರರು ಇದ್ದರು. ದೇವನಿಗೆ ದೇವಕಿ, ಶಾಂತಿದೇವಿ, ಸುದೇವಿ, ದೇವರಕ್ಷಿತಾ, ವೃಕದೇವೀ, ಉಪದೇವಿ, ಸುನಾಮ್ನಿ ಎಂಬ ಏಳು ಕುಮಾರಿಯರು. ಇವರನ್ನು ವಸುದೇವನಿಗೆ ಮದುವೆ ಮಾಡಿಕೊಟ್ಟರು.

ಉಗ್ರಸೇನನಿಗೆ ಕಂಸ, ನ್ಯಗ್ರೋಧ, ಸುನಾಮಾ, ಕಂಕ, ಸುಭೂಷಣ, ರಾಷ್ಟ್ರಪಾಲ, ಸುತನು, ಅನಾವೃಷ್ಟ, ಪುಷ್ಟಮಂತ ಎಂಬ ಒಂಭತ್ತು ಮಕ್ಕಳು. ಇವರಲ್ಲಿ ಕಂಸನು ಜ್ಯೇಷ್ಠ. ಕಂಸನಿಗೆ ಕಂಸಾವತೀ ಮತ್ತು ಕಂಸಾ ಎಂಬ ಇಬ್ಬರು ಹೆಣ್ಣು ಮಕ್ಕಳು, ಸುತನುವಿನ ಮಗಳೇ ಸುತನೂದೇವಿ. ರಾಷ್ಟ್ರಪಾಲಿಯು ರಾಷ್ಟ್ರಪಾಲನ ಸುತೆಯು, ಕಂಕಾದೇವಿಯು ಕಂಕನ ಮಗಳು.

ಈವರೆಗೆ ಉಗ್ರಸೇನ ಹಾಗೂ ಅವನ ಮಕ್ಕಳ ಚರಿತ್ರೆಯನ್ನು ಹೇಳಿರುವೆ. ಪರಾಕ್ರಮಿಗಳಾದ ಕುಕುರ ವಂಶದ ಚರಿತ್ರೆಯನ್ನು ಶ್ರವಣ ಮಾಡಿದವರಿಗೆ ಶೌರ್ಯಶಾಲಿಯಾದ ಸಂತಾನ ಅಭಿವೃದ್ಧವಾಗುವದು.

**ಸೂತ**:- ಮುನಿಗಳೇ, ಮಹಾರಥನು ಭಜಮಾನನ ಮಗನು. ರಾಜಾಧಿದೇವನು ವಿದೂರಥನ ಪುತ್ರ. ಇವನು ಮಹಾಶೂರ. ರಾಜಾಧಿದೇವನಿಗೆ ಹತ್ತು ಜನ ಮಕ್ಕಳು. ಅವರ ಹೆಸರು ಇಂತಿವೆ. ದತ್ತ, ಅತಿದತ್ತ, ಶೋಣಾಶ್ವ, ಶ್ವೇತ, ವಾಹನ, ಶಮಿ, ದಂಡಶರ್ಮಾ, ದಂತಶತ್ರು, ಶ್ರವಣಾದೇವಿ, ಶ್ರವಿಷ್ಠಾದೇವಿ. ಶಮಿಯ, ಸುತ ಪ್ರತಿಕ್ಷತ್ರ. ಪ್ರತಿಕ್ಷತ್ರನ ಮಗ ಸ್ವಯಂಭೋಜ. ಸ್ವಯಂಭೋಜನಿಗೆ ಧದಿಕ ಎಂಬ ಕುಮಾರನಿದ್ದ. ಧದಿಕನಿಗೆ ದೇವಾಂತ, ನರಾಂತ, ಶತಧನ್ವಾ, ಧಿಷ್ಣ್ಯ, ಸುದಾಂತ, ತರಣ, ನಿಕಾಶ್ಯ, ಅಲಿದಾಂತ, ಕಾಮದಂಭಿ ಎಂಬ ಮಕ್ಕಳು ಜನಿಸಿದರು. ಇವರೆಲ್ಲರೂ ಪರಾಕ್ರಮಿಗಳು. ಇವರಲ್ಲಿ ಹಿರಿಯ ಕೃತವರ್ಮ ದೇವಾಂತನ ಮಗ ಕಂಬಲಬರ್ಹಿಷ. ಇವನು ವಿದ್ವಾಂಸ. ಇವನಿಗೆ ಅಸಮೌಜ, ನಾಸಮೌಜ ಎಂಬ ಈರ್ವರು ಸುತರು. ಅಸಮೌಜ ನಿಪುತ್ರಕ, ಸಂದಷ್ಟು, ಸುಚಾರು ಇವರಿಂದ ಮಕ್ಕಳನ್ನು ದತ್ತು ಪಡೆದ. ಇವರೆಲ್ಲ ಅಂಧಕ ವಂಶಜರು.

ಕ್ರೋಷ್ಟುವಿಗೆ ಗಾಂಧಾರೀ, ಮಾದ್ರೀ ಎಂಬ ಇಬ್ಬರು ಸಹಧರ್ಮಿಣಿಯರು. ಗಾಂಧಾರಿಗೆ ಅನಮಿತ್ರ ಎಂಬ ಮಗ. ಅನಮಿತ್ರನು ಶತ್ರುಗಳನ್ನು ಬಗ್ಗುಬಡಿಯುವಲ್ಲಿ ಸಮರ್ಥನೆಂದು ಪ್ರಖ್ಯಾತ. ಮಾದ್ರೀದೇವಿಗೆ ಯುಧಾಜಿತ, ದೇವಮೀಢುಷ ಎಂಬ ಈರ್ವರು ಸುತರು. ಅನಮಿತ್ರನ ಮಗ ನಿಘ್ನ. ನಿಘ್ನನಿಗೆ ಸತ್ರಾಜಿತ. ಪ್ರಸೇನ ಎಂಬ ಇಬ್ಬರು ಮಕ್ಕಳು. ಇವರೀರ್ವರೂ ಪರಾಕ್ರಮಿಗಳಾಗಿದ್ದು ಶತ್ರುಭಯಂಕರರಾಗಿರುವರು. ಪ್ರಸೇನ, ಸತ್ರಾಜಿತ ಈರ್ವರೂ ದ್ವಾರಾವತಿಯಲ್ಲಿಯೇ ವಾಸಮಾಡುತ್ತಿದ್ದರು. ಸತ್ರಾಜಿತನಿಗೆ ಸೂರ್ಯನು ಪ್ರಾಣಸ್ನೇಹಿತನಾಗಿದ್ದು ಅವನಿಗೆ ಸ್ಯಮಂತಕ ಎಂಬ ಹೆಸರಿನ ಅನರ್ಘ್ಯವಾದ ಮಣಿಯೊಂದನ್ನು ಸ್ನೇಹದ ಸವಿನೆನಪಿಗಾಗಿ ದಯಪಾಲಿಸಿದ. ಸೂರ್ಯನು ಅನುಗ್ರಹಿಸಿದ ಈ ಮಣಿಯು ಸೂರ್ಯನಂತೆ ಪ್ರಕಾಶಮಾನವಾಗಿದ್ದಿತು. ಈ ಮಣಿಯನ್ನು ಕೊರಳಲ್ಲಿ ಕಟ್ಟಿಕೊಂಡು ಸತ್ರಾಜಿತನು ಊರೊಳಗೆಲ್ಲ ತಿರುಗುತ್ತಿದ್ದ. ಆ ಮಣಿಯ ಕಾಂತಿ ಎಷ್ಟಿತ್ತೆಂದರೆ ಮಣಿಯನ್ನು ಕಟ್ಟಿಕೊಂಡು ಸತ್ರಾಜಿತ ಬಂದ ಕೂಡಲೇ ಜನರು ಸೂರ್ಯನೇ ಬಂದನೆಂದು ತಿಳಿದು ಗಲಿಬಿಲಿಗೊಳ್ಳುತ್ತಿದ್ದರು. ಅನೇಕ ಯುವಕರು ಈ ಅದ್ಭುತ ಮಣಿಯನ್ನು ಧರಿಸಿದ ಸತ್ರಾಜಿತ ಎಲ್ಲೆಲ್ಲಿ ಹೋಗುತ್ತಾನೋ ಅಲ್ಲೆಲ್ಲ ಹಿಂಬಾಲಿಸಿದರು. ಸತ್ರಾಜಿತನಿಗೆ ಒಬ್ಬ ಸಹೋದರನಿದ್ದ. ಅವನ ಹೆಸರು ಪ್ರಸೇನ. ಪ್ರಸೇನನಿಗೆ ಸತ್ರಾಜಿತನು ಆ ಮಣಿಯನ್ನು ಕೆಲಕಾಲ ಧರಿಸಲು ಕೊಟ್ಟ. ಕೆಲದಿನ ಪ್ರಸೇನನು ಆ ಮಣಿಯನ್ನು ಧರಿಸಿ ಮೆರೆದ.

ಆ ಮಣಿಯು ಪ್ರತಿನಿತ್ಯ ಸುವರ್ಣವನ್ನು ನೀಡುತ್ತಿತ್ತು. ಆ ಮಣಿ ಇರುವ ದೇಶದಲ್ಲಿ ಕಾಲಕಾಲ್ಕಕೆ ಸರಿಯಾಗಿ ಮಳೆಬೆಳೆಗಳು ಆಗುತ್ತಿದ್ದವು.

ಒಮ್ಮೆ ಶ್ರೀಕೃಷ್ಣನು ಈ ಮಣಿಯನ್ನು ಅಪೇಕ್ಷಿಸಿ ಸತ್ರಾಜಿತನಿಗೆ ಕೊಡಲು ಕೇಳಿದ. ಪ್ರಸೇನನು ಕೊಡಲು ನಿರಾಕರಿಸಿದ. ಶ್ರೀಕೃಷ್ಣನು, ಕೊಡಲು ಒತ್ತಾಯಿಸದೇ ತಟಸ್ಥನಾಗಿದ್ದು ಬಿಟ್ಟ.

ಒಂದು ದಿನ ಪ್ರಸೇನನು ಬೇಟೆಗೆ ಹೊರಟನು. ಹೊರಡುವಾಗ ಆ ದಿವ್ಯ ಮಣಿಯನ್ನು ಕೊರಳಲ್ಲಿ ಹಾಕಿಕೊಂಡೇ ಹೋದ. ಬೇಟೆ ಆಡುತ್ತ ಆಡುತ್ತ ಗಹನಾರಣ್ಯ ಪ್ರವೇಶ ಮಾಡಿದ. ಭಾರೀ ಸಿಂಹ ಎದುರು ಬಂದಿತು. ಪ್ರಸೇನ ಅದರೊಡನೆ ಹೋರಾಡಿದ. ಆದರೆ ಆ ಬಲಿಷ್ಠ ಸಿಂಹದ ಮುಂದೆ ಪ್ರಸೇನನ ಆಟ ಸಾಗಲಿಲ್ಲ. ಪ್ರಸೇನ ಸತ್ತು ಬಿದ್ದ. ಪ್ರಸೇನನ ಕೊರಳಲ್ಲಿ ಹೊಳೆಯುತ್ತಿದ್ದ ಸ್ಯಮಂತಕಮಣಿಯನ್ನು ನೋಡಿ ಸಿಂಹಕ್ಕೆ ಕೌತುಕವೆನಿಸಿತು. ಆ ಮಣಿಯನ್ನು ತನ್ನ ಕೈಯಲ್ಲಿ ಹಿಡಿದು ಅರಣ್ಯದೊಳಗೆ ಓಡಿತು. ಆ ಸಿಂಹವನ್ನು ಜಾಂಬವಂತ ಎಂಬ ಹೆಸರಿನ ಕರಡಿಯು ಕೊಂದಿತು. ಅದು ಆ ಸ್ಯಮಂತಕ ಮಣಿಯನ್ನು ತೆಗೆದುಕೊಂಡು ತನ್ನ ಗುಹೆಗೆ ಹೋಯಿತು.

ಇತ್ತ ಬೇಟೆಗೆ ಹೋಗಿದ್ದ ಪ್ರಸೇನನು ಬಹುಕಾಲ ಬರದಂತಾಗಲು ಮಣಿಗೋಸ್ಕರ ಅವನನ್ನು ಕೃಷ್ಣ ಕೊಂದಿರಬಹುದು ಅಥವಾ ಅಪಹರಿಸಿರಬಹುದು ಎಂಬ ಶಂಕೆ ಮೂಡಿತು ಸತ್ರಾಜಿತನ ಪರಿವಾರದದರಿಗೆ. ನಿರಪರಾಧಿಯಾದ ಶ್ರೀಕೃಷ್ಣ ತನ್ನದೇನೂ ತಪ್ಪಿಲ್ಲದಿದ್ದರೂ ತನಗೆ ಬಂದೊದಗಿದ ಈ ಅಪವಾದವನ್ನು ಕಳೆದುಕೊಳ್ಳಲು ಮಣಿಯನ್ನು ಅನ್ವೇಷಿಸುತ್ತ ಹೊರಟ. ಪ್ರಸೇನನು ಬೇಟೆಗೆ ಹೋಗಿದ್ದನೆಂಬುದನ್ನು ತಿಳಿದ ಕೃಷ್ಣ ಅರಣ್ಯಗಳಲ್ಲಿ ಪ್ರಸೇನನನ್ನು ಹುಡುಕಿದ. ಋಕ್ಷವಂತಪರ್ವತ, ವಿಂಧ್ಯಪರ್ವತ ಮುಂತಾದೆಡೆಗಳಲ್ಲೆಲ್ಲ ಹುಡುಕಿಯೇ ಹುಡುಕಿದ. ಎಲ್ಲಿಯೂ ಪ್ರಸೇನನ ಸುಳಿವು ಸಿಗಲಿಲ್ಲ. ಹುಡುಕಾಟ ಮುಂದುವರಿಸಿದ. ಒಂದು ದಿನ ಒಂದೆಡೆ ಕುದುರೆಯೊಡನೆ ಮೃತನಾಗಿ ಬಿದ್ದಿದ್ದ ಪ್ರಸೇನನನ್ನು ಕಂಡ. ಆದರೆ ಅಲ್ಲಿ ಸುತ್ತುಮುತ್ತು ನೋಡಿದಾಗ ಸ್ಯಮಂತಕಮಣಿಯೇ ಕಾಣಿಸಲಿಲ್ಲ. ಆದರೆ ಅನತಿ ದೂರದಲ್ಲಿ ಸಿಂಹದ ಹೆಜ್ಜೆಗಳು ಕಾಣಿಸಿದವು. ಸಿಂಹವು ಪ್ರಸೇನನನ್ನು ಕೊಂದಿದೆ ಎಂಬುದಾಗಿ ನಿರ್ಧರಿಸಿ ಅದೇ ಸಿಂಹವು ಸ್ಯಮಂತಕ ಮಣಿಯನ್ನು ತೆಗೆದುಕೊಂಡು ಹೋಗಿರಬಹುದು ಎಂದು ಊಹಿಸಿ ಶ್ರೀಕೃಷ್ಣನು ಸಿಂಹದ ಹೆಜ್ಜೆಗಳನ್ನು ಹಿಂಬಾಲಿಸುತ್ತ ಹೊರಟನು ಅಲ್ಲಿ ಸಿಂಹ ಸತ್ತು ಬಿದ್ದಿತ್ತು. ಸಿಂಹವನ್ನು ಕೊಂದದ್ದು ಯಾರು? ಎಂದು ಯೋಚಿಸಬೇಕಾಗಿಯೇ ಇರಲಿಲ್ಲ. ಅಲ್ಲಿಯ ಕರಡಿ ಹೆಜ್ಜೆ ಗುರುತುಗಳು ನಡೆದ ಘಟನೆಯನ್ನು ಸಾರುತ್ತಿದ್ದವು ಕರಡಿಯ ಹೆಜ್ಜೆಯನ್ನು ಅನುಸರಿಸಿ, ಶ್ರೀಕೃಷ್ಣ ಮುನ್ನಡೆದ. ಆ ಹೆಜ್ಜೆಗಳು ಒಂದು ಗುಹೆಯ ಒಳಗೆ ಪ್ರವೇಶಿಸಿದ್ದವು. ಕೃಷ್ಣನೂ ಗುಹೆಯೊಳಗೆ ನಡೆದ. ಒಳಹೋಗಿ ನೋಡಿ ಕೃಷ್ಣ ಆಶ್ಚರ್ಯಚಕಿತನಾದ ಅಲ್ಲಿನ ದೃಶ್ಯ ಕಂಡು. ಗುಹೆಯೊಳಗೆ ದಾದಿಯೊರ್ವಳು ಜಾಂಬುವತನ (ಕರಡಿಯ) ಮಗನಿಗೆ ಸ್ಯಮಂತಕಮಣಿಯನ್ನು ತೋರಿಸುತ್ತ, ಅದರ ಕಥೆ ಹೇಳುತ್ತ, ಹಾಡುತ್ತ ಅಳುತ್ತಿರುವ ಅವನನ್ನು ರಮಿಸುತ್ತಿದ್ದಳು. ಅವಳು ಹೀಗೆ ಹಾಡುತ್ತಿದ್ದಳು.

**ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬುವತಾ ಹತಃ ।**
**ಸುಕುಮಾರಕ ಮಾರೋದೀಃ ತವಹ್ಯೇಷ ಸ್ಯಮಂತಕಃ ॥**

"ಮುದ್ದು ಮಗು, ಇಲ್ಲಿರುವ ಈ ಸ್ಯಮಂತಕಮಣಿ ನಿನ್ನದೇ. (ಇದರ ಕಥೆ ಹೀಗಿದೆ ಕೇಳು) ಈ ಮಣಿಯುಳ್ಳ, ಪ್ರಸೇನನನ್ನು ಸಿಂಹ ಕೊಂದಿತು. ಜಾಂಬುವಂತನು ಆ ಸಿಂಹವನ್ನು ಕೊಂದು ಈ ಮಣಿಯನ್ನು ತಂದಿರುವನು" ಅಳಬೇಡ, ಈ ಮಣಿ ನಿನ್ನದೇ. ಹೀಗೆ ರಮಿಸುತ್ತಿರುವದನ್ನು ಕೇಳಿದ ಕೃಷ್ಣನಿಗೆ ನಡೆದ ಸಂಗತಿಯೆಲ್ಲ ಅರ್ಥವಾಯಿತು. ಗುಹೆಯೊಳಗೆ ಬಂದ ಜಾಂಬವಂತನನ್ನು ಕಂಡು ಆ ಮಣಿಯನ್ನು ಕೊಡಬೇಕೆಂದು ಹೇಳಿದ. ಜಾಂಬವಂತ ಕೇಳಲಿಲ್ಲ. ಇಬ್ಬರಿಗೂ ಮುಷ್ಟಿಯುದ್ಧ ನಡೆಯಿತು. ಇಪ್ಪತ್ತೊಂದು ದಿನಗಳು ಕಳೆದವು. ಸ್ಯಮಂತಕಮಣಿಯನ್ನು ಹುಡುಕಲು ಕೃಷ್ಣನೊಡನೆ ಬಂದು ಗುಹೆಯ ಹೊರಗೆ ಕೃಷ್ಣ ಮರಳಿ ಬರುವದನ್ನೇ ಕಾಯುತ್ತ ನಿಂತಿದ್ದ ಬಲರಾಮನು ಇಪ್ಪತ್ತೊಂದು ದಿನಗಳಾದರೂ ಕೃಷ್ಣ ಬಾರದಿರಲು ಮರಣಿಸಿರುವನೆಂದು ಭಾವಿಸಿ ದ್ವಾರಕೆಗೆ ಮರಳಿದನು. ಅಲ್ಲಿ ಕೇಳಿದವರಿಗೆಲ್ಲ ಕೃಷ್ಣ ಮಡಿದನೆಂದೇ ಸುದ್ದಿ ಹೇಳಿದನು. ಇತ್ತ ಕೃಷ್ಣನು ಜಾಂಬವಂತನನ್ನು ಸೋಲಿಸಿದ. ಸ್ಯಮಂತಕಮಣಿಯನ್ನು ಜಾಂಬವಂತ ಕೃಷ್ಣನಿಗೆ ಒಪ್ಪಿಸಿ ಕೈ ಮುಗಿದ. ಅದರ ಜೊತೆಗೆ ತನ್ನ ಮಗಳಾದ ಜಾಂಬವತಿ ಎಂಬ ಕನ್ಯಾಮಣಿಯನ್ನೂ ಒಪ್ಪಿಸಿ, ಅವಳ ಪಾಣಿಗ್ರಹಣಮಾಡಲು ಪ್ರಾರ್ಥಿಸಿದ. ಇಷ್ಟು ದಿನ ತಿಳಿಯದೇ ಮಾಡಿದ ಅಪರಾಧಕ್ಕಾಗಿ ಕ್ಷಮಾಯಾಚನೆ ಮಾಡಿದ. ಶ್ರೀಕೃಷ್ಣನು ಜಾಂಬವಂತನನ್ನು ಅನುಗ್ರಹಿಸಿ ಸ್ಯಮಂತಕಮಣಿ ಹಾಗೂ ಜಾಂಬವಂತಿಯೊಡನೆ ಅಲ್ಲಿಂದ ಹೊರಟು ದ್ವಾರಕೆಗೆ ಬಂದ. ಯಾದವ ಪ್ರಮುಖರ ಎದುರಿಗೆ ಬಂದು ನಡೆದ ಘಟನೆ ತಿಳಿಸಿ ಹೇಳಿ ಸತ್ರಾಜಿತನಿಗೆ ಸ್ಯಮಂತಕ ಮಣಿಯನ್ನು ಕೊಟ್ಟು ಎಲ್ಲರಿಗೂ ಸಂತೋಷವನ್ನುಂಟುಮಾಡಿದನು.

**ಸೂತ:-** ಮುನಿಗಳೇ, ಹೀಗೆ ಶ್ರೀಕೃಷ್ಣನು ತನ್ನದೇನೂ ತಪ್ಪಿಲ್ಲದಿದ್ದರೂ ಅಪವಾದ ಹೋಗಲಾಡಿಸಿಕೊಳ್ಳಲು ತನ್ನ ಪರಾಕ್ರಮದಿಂದ ಸ್ಯಮಂತಕಮಣಿಯನ್ನು ಗೆದ್ದು ತಂದು ಸಕಲರಿಗೂ ಸಮಾಧಾನ ಸಂತಸಗಳನ್ನು ತುಂಬಿದ.

ಸತ್ರಾಜಿತನಿಗೆ ಹತ್ತು ಜನ ಹೆಂಡಂದಿರು. ಇವರಲ್ಲಿ ಸತ್ರಾಜಿತನಿಗೆ ಶತಪುತ್ರರು ಜನಿಸಿದರು. ಇವರಲ್ಲಿ ಭಗಂಕಾರ, ವಾತಪತಿ, ವಸುಮೇಧ ಇವರು ಮುಖ್ಯಸ್ಥರು. ಇವರಲ್ಲಿ ಭಗಂಕಾರ ಹಿರಿಯ. ನೂರು ಪುತ್ರರಲ್ಲದೇ ಸತ್ರಾಜಿತನಿಗೆ ಮೂವರು ಸುಂದರಿಯರಾದ ಪುತ್ರಿಯರೂ ಇದ್ದರು. ಇವರಲ್ಲಿ ಸತ್ಯಭಾಮೆ ಗುಣಗಳಿಂದ ಗರಿಷ್ಠಳು. ಇವಳನ್ನೇ ಸತ್ರಾಜಿತನು ಶ್ರೀಕೃಷ್ಣನಿಗೆ ಮದುವೆ ಮಾಡಿಕೊಟ್ಟ. ಭಗಂಕಾರಿಗೆ ಸಭಾಕ್ಷ, ನಾವೇಯ ಎಂಬ ಈರ್ವರು ಸುಂದರ ಹಾಗೂ ಗುಣಶಾಲಿಗಳಾದ ಮಕ್ಕಳು ಇದ್ದರು.

ಮಾದ್ರೀ ದೇವಿಯಲ್ಲಿ ಯುಧಾಜಿತನಿಂದ ಶ್ವಫಲ್ಕ, ಚಿತ್ರಕ ಎಂಬ ಇಬ್ಬರು ಮಕ್ಕಳು ಜನಿಸಿದರು. ಗಾಂದಿನೀದೇವಿ ಎಂಬ ಕಾಶೀರಾಜನ ಮಗಳನ್ನು ಶ್ವಫಲ್ಕನು ವಿವಾಹವಾದ. ಗಾಂದಿನೀದೇವಿಯಲ್ಲಿ ಅಕ್ರೂರ ಜನಿಸಿದ. ಅಕ್ರೂರನು ಮಹಾಭಗವದ್ಭಕ್ತ. ಉದಾರ, ವಿದ್ವಾಂಸ, ಭಾಗ್ಯಶಾಲಿ. ಶ್ವಫಲ್ಕನಿಗೆ ಹದಿನೈದು ಜನ ಮಕ್ಕಳು. ಅವರ ಹೆಸರು ಇಂತಿವೆ. ಅಂಧಕ, ಭೋಜ, ಅರಿಮರ್ದನ, ಗೃಧ್ರ, ಮೇದುರ, ಧರ್ಮ, ಮದ್ಗು, ಧರ್ಮಭೃತ್, ಉಪಮದ್ಗು, ಅರಿಮೇಜಯ, ಉಪೇಕ್ಷ, ಅರಿಕ್ಷೇಪ, ಆವಾಹ, ಪ್ರತಿವಾಹ, ಸುಂದರೀದೇವಿ. ಸುಂದರೀದೇವಿಯನ್ನು ವಿಶ್ರುತಾಶ್ವ ಮದುವೆಯಾದ. ಇವರಿಗೆ ವಸುಂಧರಾ ಎಂಬ ಕನ್ಯೆ ಜನಿಸಿದಳು. ಇವಳು ಮನೋಹರ ರೂಪವುಳ್ಳವಳಾಗಿದ್ದಳು.

ಅಕ್ರೂರನಿಂದ ಉಗ್ರಸೇನಾ ದೇವಿಯಲ್ಲಿ ದೇವತೆಗಳಂತೆ ತೇಜಸ್ವಿಗಳಾದ ವಸುದೇವ, ಉಪದೇವ ಎಂಬ ಈರ್ವರು ಮಕ್ಕಳು ಜನಿಸಿದರು. ಚಿತ್ರಕನಿಗೆ ಪೃಥು, ಅಶ್ವಗ್ರೀವ, ಸುಪಾರ್ಶ್ವಕ, ಅಶ್ವಬಾಹು, ಗವೇಷಣ, ಧರ್ಮ, ಅರಿಷ್ಟನೇಮಿ, ಧರ್ಮಭೃತ್, ಸುಬಾಹು, ಶ್ರವಿಷ್ಠದೇವಿ, ಧರ್ಮಬಾಹು, ಶ್ರವಣಾದೇವಿ ಎಂಬ ಮಕ್ಕಳು ಜನಿಸಿದರು.

ಶ್ರೀಕೃಷ್ಣನ ಮಹಿಮೆಯನ್ನು ಬಣ್ಣಿಸುವ ಈ ಸ್ಯಮಂತಕೋಪಾಖ್ಯಾನವನ್ನು ಶ್ರವಣಮಾಡುವವರಿಗೆ ಮಿಥ್ಯಾಪವಾದ ಬರುವದಿಲ್ಲ.

**ಸೂತ:-** ಮುನಿಗಳೇ, ಹಿಂದೆ ಹೇಳಿದಂತೆ ಕೊನೆಗೂ ಆ ಸ್ಯಮಂತಕಮಣಿಯು ಸತ್ರಾಜಿತನ ಕೈಗೆ ಸೇರಿತು. ಕೃಷ್ಣನ ಮೇಲಿದ್ದ ಅಪವಾದ ಕಳೆಯಿತು. ಮುಂದೆ ಶತಧನ್ವನನ್ನು ಪ್ರಚೋದಿಸಿ ಅಕ್ರೂರನು ಆ ಮಣಿಯನ್ನು ತನ್ನ ವಶಮಾಡಿಕೊಂಡ. ಅಕ್ರೂರನಿಗೆ ಮೊದಲಿನಿಂದಲೂ ಆ ಮಣಿಯ ಬಗ್ಗೆ ಬಹಳ ಅಪೇಕ್ಷೆಯಿದ್ದಿತು. ಅದಕ್ಕಾಗಿ ಸತ್ರಾಜಿತನ ಮಗಳಾದ ಸತ್ಯಭಾಮೆಯನ್ನು ನಯವಾಗಿ ಅನೇಕ ಬಾರಿ ಕೇಳಿಯೂ ಇದ್ದ. ಅವಳು ತಿರಸ್ಕರಿಸಿದ್ದಳು. ಅಕ್ರೂರನಿಗೆ ಆ ಮಣಿಯನ್ನು ಪಡೆಯಲು ಕ್ರೂರ ಉಪಾಯವೊಂದು ಹೊಳೆಯಿತು. ಅವನು ಶತಧನ್ವನಲ್ಲಿಗೆ ಬಂದು ತನ್ನ ಆಲೋಚನೆಯನ್ನು ಹೀಗೆ ತಿಳಿಸಿದ ''ಶತಧನ್ವ! ನನಗಾಗಿ ನೀನು ಒಂದು ಕಾರ್ಯವನ್ನು ಮಾಡಬೇಕು. ಸತ್ರಾಜಿತನನ್ನು ಹೇಗಾದರೂ ಕೊಂದು ನನಗೆ ಆ ಸ್ಯಮಂತಕಮಣಿಯನ್ನು ತಂದುಕೊಡಬೇಕು. ಶ್ರೀಕೃಷ್ಣನು ನಿನಗೇನಾದರೂ ಮಾಡಲು ಬಂದರೆ ನಾವು ಕೃಷ್ಣನನ್ನು ನೋಡಿಕೊಳ್ಳುವೆವು. ಸದ್ಯಕ್ಕೆ ದ್ವಾರಕಾ ನಗರವೆಲ್ಲ ನನ್ನ ಅಧೀನದಲ್ಲಿದೆ. ಕೃಷ್ಣ ಏನೂ ಮಾಡಲಾರ. ನನಗಾಗಿ ಈ ಕಾರ್ಯವನ್ನು ಮಾಡಲೇಬೇಕು. ಬಲಿಷ್ಠನಾದ ನಿನ್ನಿಂದಲೇ ಇದು ಸಾಧ್ಯವೆಂದು ನನಗೆ ಪರಮಮಿತ್ರನಾದ ನಿನ್ನನ್ನು ಯಾಚಿಸುತ್ತಿರುವೆ. ಇಲ್ಲವೆನ್ನಬೇಡ'' ಎಂದು ಪುಸಲಾಯಿಸಿದ. ಶತಧನ್ವ ಒಪ್ಪಿದ. ಸತ್ರಾಜಿತನು ಮಲಗಿದಾಗ ಕೊಂದು ಅವನ ಕೊರಳಲ್ಲಿನ ಸ್ಯಮಂತಕ ಮಣಿಯನ್ನು ತಂದು ಯಾರಿಗೂ ಗೊತ್ತಾಗದಂತೆ ಅಕ್ರೂರನಿಗೆ ಕೊಟ್ಟ. ಅಕ್ರೂರ ಆ ಮಣಿಯನ್ನು ಸ್ವೀಕರಿಸಿ ಅವನನ್ನು ಶ್ಲಾಘಿಸಿ, ಈ ಮಣಿ ತನ್ನ ಬಳಿಯಲ್ಲಿದೆಯೆಂಬುದನ್ನು ಯಾರಿಗೂ ಹೇಳಬೇಡ ಎಂದು ಭಾಷೆ ತೆಗೆದುಕೊಂಡ.

ಇತ್ತ ತಂದೆಯು ಮರಣ ಹೊಂದಿದ್ದನ್ನು ನೋಡಿ ಸತ್ಯಭಾಮೆಯು ದುಃಖದಿಂದ ಶ್ರೀಕೃಷ್ಣನಿರುವಲ್ಲಿಗೆ ಬಂದು ಶತಧನ್ವನು ತಂದೆಯನ್ನು ಕೊಂದ ಸಮಾಚಾರ ತಿಳಿಸಿದಳು. ಆ ಸಂದರ್ಭದಲ್ಲಿ ಪಾಂಡವರು ಅರಗಿನಮನೆಯಲ್ಲಿ ಬೆಂಕಿಗೆ ಆಹುತಿಯಾದರು ಎಂಬ ವಾರ್ತೆ ಎಲ್ಲೆಡೆ ಅದೇ ತಾನೇ ಹರಡಿತ್ತು. ಕೃಷ್ಣನು ಸತ್ಯಾಂಶ ತಿಳಿದಿದ್ದರೂ ದುರ್ಯೋಧನನು ಹೇಳಿ ಕಳುಹಿಸಿದ್ದರಿಂದ ಪಾಂಡವರ ಶ್ರಾದ್ಧಕ್ಕೆ ಹೋಗಿದ್ದ. ತರ್ಪಣಾದಿ ವಿಧಿ-ವಿಧಾನಗಳನ್ನು ಮುಗಿಸಿ ದ್ವಾರಕೆಗೆ ಬಂದ. ವಿಷಯ ತಿಳಿದಕೂಡಲೇ ಬಲರಾಮನನ್ನು ಜೊತೆಗೆ ಕರೆದುಕೊಂಡು ಶತಧನ್ವನ ಮೇಲೆ ಯುದ್ಧಕ್ಕೆ ಹೋದ. ಶತಧನ್ವನಿಗೂ ಕೃಷ್ಣನಿಗೂ ಯುದ್ಧ ಆರಂಭವಾಯಿತು. ಶತಧನ್ವನು ಕೃಷ್ಣನೊಡನೆ ಯುದ್ಧ ಮಾಡುವಷ್ಟು ಸಮರ್ಥನಾಗಿರಲಿಲ್ಲ. ಇದನ್ನು ತಿಳಿದೂ ಇದ್ದ. ಹೀಗಾಗಿ ಕೃಷ್ಣನನ್ನು ಕಂಡೊಡನೆಯೇ ವೇಗವಾಗಿ ಓಡುವ ಹೃದಯ ಎಂಬ ಹೆಸರಿನ ಹೆಣ್ಣು ಕುದುರೆಯನ್ನು ಆರೋಹಣಮಾಡಿ ಪ್ರಾಣಭಯದಿಂದ ಓಡಹತ್ತಿದ. ಕೃಷ್ಣನೂ ರಥದಲ್ಲಿ ಕುಳಿತು ಅವನನ್ನು ಬೆನ್ನಟ್ಟಿದ.

ನೂರು ಯೋಜನ ದೂರ ಓಡಿದ ಮೇಲೆ ಹೃದಯ ಎಂಬ ಹೆಸರಿನ ಕುದುರೆಗೆ ಸುಸ್ತಾಗಿ ಅದರ ಗತಿ ಮಂದವಾಯಿತು. ಕೃಷ್ಣನ ರಥದ ವೇಗ ಹೆಚ್ಚಾಗುತ್ತಲೇ ನಡೆಯಿತು. ಕೃಷ್ಣನು ಸಹಿತನಾದ ಶತಧನ್ವನಿಗೆ ಕುದುರೆಯಿಂದ ಅಡ್ಡಬಂದನು. ಶತಧನ್ವನ ಕುದುರೆ ಆಯಾಸ ದಿಂದ ಮರಣವನ್ನಪ್ಪಿತು. ಕೃಷ್ಣ ರಥದಿಂದಿಳಿದು ಕಾಲ್ನಡಿಗೆಯಿಂದ ಹೋಗಿ ಶತಧನ್ವನನ್ನು ಹಿಡಿಯಹೊರಟ. ಕುದುರೆಯಿಲ್ಲದೇ ಕಲ್ಲು ಮುಳ್ಳುಗಳಿಂದ ತುಂಬಿದ ಅಡ್ಡರಸ್ತೆಯಿಂದ ಓಡಿದ. ಈ ಅವಧಿಯಲ್ಲಿ ಅಕ್ರೂರನೇನಾದರೂ ತನ್ನ ಸಹಾಯಕ್ಕೆ ಬರುವನೋ, ಎಂದು ದಿಕ್ಕುದಿಕ್ಕುಗಳಿಗೆ ಆಶಾದೃಷ್ಟಿ ಹರಿಸಿದ. ಅಕ್ರೂರನಿಗೆ ಶತಧ್ವನನ ಸ್ಥಿತಿ ತಿಳಿದೂ ಕೃಷ್ಣನ ಎದುರಿಗೆ ಬರುವ ಧೈರ್ಯಬಾರದೇ ತಟಸ್ಥನಾಗಿ ಉಳಿದ. ಕೃಷ್ಣ ಕೊನೆಗೂ ಅಸ್ತ್ರ ಪ್ರಯೋಗಮಾಡಿ ಶತಧನ್ವನನ್ನು ಕೊಂದ. ಬಳಿಗೆ ಬಂದು ನೋಡಿದಾಗ ಅವನ ಕೊರಳಿನಲ್ಲಿ ಸ್ಯಮಂತಕಮಣಿಯೇ ಇರಲಿಲ್ಲ. ಕೃಷ್ಣ ನಿರಾಶೆಯಿಂದ ಹಿಂದಿರುಗಿದ. ಕೃಷ್ಣ ಹಿಂದಿರುಗುವದನ್ನೇ ಕಾಯುತ್ತ ಕುಳಿತಿದ್ದ ಬಲರಾಮ ಕೃಷ್ಣನನ್ನು ಕಂಡಾಕ್ಷಣ 'ಶತಧನ್ವ ಸಿಕ್ಕನೇ' ಎಂದು ಕೇಳಿದ. ''ಸಿಕ್ಕ, ಕೊಂದೆ'' ಎಂದುತ್ತರಿಸಿದ ಕೃಷ್ಣ. ''ಮಣಿ ಎಲ್ಲಿದೆ ಕೊಡು'' ಎಂದು ಕೇಳಿದ ಬಲರಾಮ. 'ಶತಧನ್ವನಲ್ಲಿ ಮಣಿಯಿರಲಿಲ್ಲ'' ಎಂದು ಕೃಷ್ಣ ಹೇಳಿದ. ಬಲರಾಮನಿಗೆ ನಂಬುಗೆಯಾಗಲಿಲ್ಲ. ಮಣಿಯನ್ನು ತನಗೆ ತೋರಿಸಿದರೆ ಎಲ್ಲಿ ತಾನೇ ಇಟ್ಟುಕೊಂಡು ಬಿಡುತ್ತೇನೋ ಎಂಬ ಶಂಕೆಯಿಂದ, ಕೃಷ್ಣ ತನ್ನ ಬಳಿಯಲ್ಲಿರುವ ಮಣಿಯನ್ನು ತೋರಿಸುತ್ತಿಲ್ಲ ಎಂದು ಭಾವಿಸಿದ. ಕೃಷ್ಣನನ್ನು ''ದ್ರೋಹಿ, ಕಪಟಿ, ಸ್ವಾರ್ಥಿ'' ಎಂದು ಹಳಿದು ದ್ವಾರಕಾ ಪಟ್ಟಣವನ್ನೇ ತ್ಯಜಿಸಿ ಮಿಥಿಲಾನಗರಿಗೆ ಬಂದ.

ಸ್ಯಮಂತಕಮಣಿಯನ್ನು ಹೊಂದಿದ್ದ ಅಕ್ರೂರನು ಸ್ಯಮಂತಕಮಣಿಯ ಪ್ರಭಾವದಿಂದ ಪ್ರಾಪ್ತವಾಗುತ್ತಿದ್ದ ಸುವರ್ಣ ಮೊದಲಾದ ಸಂಪತ್ತನ್ನು ಬಹುಸಂಖ್ಯೆಯಲ್ಲಿ ಯಜ್ಞ-ಯಾಗಾದಿಗಳನ್ನು ಮಾಡಿ, ಅನ್ನದಾನ, ಧನದಾನ ಮುಂತಾದವುಗಳಿಗೆ ವಿನಿಯೋಗಿಸಿದ. ಈ ಯಜ್ಞಗಳು 'ಅಕ್ರೂರ ಯಜ್ಞಗಳು' ಎಂದೇ ಲೋಕದಲ್ಲಿ ಖ್ಯಾತವಾಗಿವೆ.

ಬಲರಾಮನು ಮಿಥಿಲಾನಗರಕ್ಕೆ ಬಂದುದನ್ನು ತಿಳಿದು ದುರ್ಯೋಧನನು ಮಿಥಿಲಾ ನಗರಕ್ಕೆ ಬಂದ. ಬಲರಾಮನಿಂದ ಗದಾಯುದ್ಧವನ್ನು ಅಭ್ಯಾಸ ಮಾಡಿದ. ಕೆಲಕಾಲ ಕಳೆಯಿತು. ಶ್ರೀಕೃಷ್ಣನೂ ಕೆಲ ಯಾದವಮುಖ್ಯರೂ ಸೇರಿ ಬಲರಾಮನನ್ನು ಸಮಾಧಾನಿಸಿ ಪುನಃ ದ್ವಾರಕಾ ಪಟ್ಟಣಕ್ಕೆ ಕರೆದುಕೊಂಡು ಬಂದರು. ದ್ವಾರಕೆಗೆ ಭೀಕರ ಬರಗಾಲ ಪ್ರಾಪ್ತವಾಗಿತ್ತು. ಜನರೆಲ್ಲ ಮಳೆಯಿಲ್ಲದೇ ಕಂಗೆಟ್ಟಿದ್ದರು. ಅಕ್ರೂರ ಬಂದಲ್ಲಿ ಮಳೆ ಬೆಳೆಗಳ ಸಮೃದ್ಧಿ ಉಂಟಾಗುತ್ತಿತ್ತು. ಅವನಲ್ಲಿ ಇದ್ದ ಆ ಸ್ಯಮಂತಕಮಣಿಯ ಮಹಿಮೆಯಿಂದ ದ್ವಾರಕೆಯ ಜನರು ಅಕ್ರೂರನನ್ನು ದ್ವಾರಕೆಗೆ ಬರಲು ಅನುನಯಿಸಿ ಒಪ್ಪಿಸಿದರು. ಅಕ್ರೂರ ಬಂದಾಕ್ಷಣ ದ್ವಾರಕೆಯಲ್ಲಿ ಮಳೆ ಸುರಿಯಿತು. ಎಲ್ಲೆಡೆ ಸಂತಸ ಸಮಾಧಾನದ ವಾತಾವರಣ ಕಾಣಿಸಿತು. ಕೃಷ್ಣನಿಗೆ ತಿಳಿದು ಹೋಯಿತು ಅಕ್ರೂರನಲ್ಲಿಯೇ ಸ್ಯಮಂತಕಮಣಿ ಇದೆಯೆಂಬುದು. ಅಕ್ರೂರನು ಆಲೋಚನೆ ಮಾಡಿ ಕೃಷ್ಣನನ್ನು ಸಂತೋಷಪಡಿಸಲು ತನ್ನ ಮಗಳನ್ನು ಅವನಿಗೆ ಮದುವೆ ಮಾಡಿಕೊಟ್ಟ. ಆದರೆ ಕೃಷ್ಣ ಇಷ್ಟಕ್ಕೆ ಸುಮ್ಮನಾಗದೆಯೇ ಮದುವೆಗೆ ಆಗಮಿಸಿದ ಸಭಿಕರ ಮುಂದೆ ಅಕ್ರೂರನನ್ನು ಉದ್ದೇಶಿಸಿ ಮಾತನಾಡಿದ: ''ಎಲೈ ಅಕ್ರೂರ, ಸುಳ್ಳಾಡಬೇಡ. ಅನ್ಯಾಯವೆಸಗಲು ಯತ್ನಿಸಬೇಡ. ಸ್ಯಮಂತಕಮಣಿ ನಿನ್ನಲ್ಲಿರುವದು ಸುಸ್ಪಷ್ಟ. ಅದನ್ನು ನನಗೆ ಒಪ್ಪಿಸು''

ಎಂದಾಕ್ಷಣ ಅಕ್ರೂರನು ತಪ್ಪನ್ನು ಒಪ್ಪಿಕೊಂಡು ಸ್ಯಮಂತಕಮಣಿಯನ್ನು ಕೃಷ್ಣನಿಗೆ ಒಪ್ಪಿಸಿದ. ಬಲರಾಮನಿಗೆ ಕೃಷ್ಣ ನಿರ್ದೋಷಿಯೆಂದು ತಿಳಿಯಿತು. ಕೃಷ್ಣನು ಅದನ್ನು ಮತ್ತೆ ಅಕ್ರೂರನಿಗೆ ಕೊಟ್ಟು ಆಶೀರ್ವದಿಸಿದ. ಕೃಷ್ಣನ ಅನುಗ್ರಹ ಪಡೆದ ಅಕ್ರೂರ ಆ ಸ್ಯಮಂತಕಮಣಿಯನ್ನು ಧರಿಸಿ ಸೂರ್ಯನಂತೆ ರಾರಾಜಿಸಿದ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಆರನೇಯ ಅಧ್ಯಾಯ ಮುಗಿದುದು*

—○—

## ಭುವನಕೋಶ ವರ್ಣನೆ

**ಅಧ್ಯಾಯ - ೭**

**ಮುನಿಗಳು:-** ಸೂತರೇ, ಮಹತ್ವ ಪೂರ್ವವಾದ ಆಖ್ಯಾನವನ್ನು ನೀವು ಈ ವರೆಗೆ ನಿರೂಪಿಸಿದಿರಿ. ಭರತಖಂಡದ ರಾಜರ ವಂಶಗಳನ್ನು ತಿಳಿಯಪಡಿಸಿದಿರಿ. ಆಶ್ಚರ್ಯಕರವಾದ ಈ ವೃತ್ತಾಂತಗಳನ್ನು ಆಲಿಸಿ ನಮಗೆ ಸಂತಸವಾಗಿದೆ. ದೇವತೆಗಳ, ರಾಕ್ಷಸರ, ಗಂಧರ್ವರ, ಸರ್ಪಗಳ, ದಾನವರ, ದೈತ್ಯರ, ಸಿದ್ಧರ, ಯಕ್ಷರ, ಅಪ್ಸರೆಯರ, ಪ್ರಜಾಪತಿಗಳ-ಇವರೆಲ್ಲರ ಹುಟ್ಟು, ಜೀವನ, ಸಾಧನೆಗಳನ್ನು ವಿವರಿಸಿದಿರಿ. ಚತುರ್ಮುಖ ಬ್ರಹ್ಮನ ಸೃಷ್ಟಿಕ್ರಮವನ್ನೂ ಯಥಾವತ್ತಾಗಿ ನಿರೂಪಿಸಿದ್ದೀರಿ. ಈ ಜಗತ್ತಿನ ಉತ್ಪತ್ತಿ, ಸ್ಥಿತಿಗಳು ಹೇಗೆಂಬುದನ್ನು ಮನೋಜ್ಞವಾಗಿ ತಿಳಿಯಪಡಿಸಿರುವಿರಿ. ಕೇಳುವಾಗಲೇ ಆನಂದದಾಯಕವಾಗಿರುವ. ನಂತರದಲ್ಲಿಯೂ ಪುಣ್ಯದಾಯಕವಾದ ಪುರಾಣ ಪ್ರಮೇಯಗಳನ್ನು ಪ್ರವಚನ ಮಾಡಿದಿರಿ. ಇದರಿಂದ ನಮಗೆ ಅಮೃತಪಾನ ಮಾಡಿದಂಥ ಆನಂದವಾಗಿದೆ. ಇಂಥ ನಿಮ್ಮಿಂದ ಭೂಮಂಡಲದ ಸಾರಭೂತ ಪ್ರಮೇಯವನ್ನೆಲ್ಲ ಕೇಳುವ ಇಚ್ಛೆಯುಂಟಾಗಿದೆ. ಭೂಮಿಯಲ್ಲಿ ಇರುವ ಸಮುದ್ರಗಳ ಸಂಖ್ಯೆ ಎಷ್ಟು? ಒಟ್ಟು ದೇಶಗಳು ಎಷ್ಟು? ಮಹಾ ಪರ್ವತಗಳು, ಮಹಾರಣ್ಯಗಳು, ಪುಣ್ಯಕ್ಷೇತ್ರಗಳು ಇವುಗಳ ಬಗೆಗೆ ದಯವಿಟ್ಟು ತಿಳಿಸಿರಿ.

**ಸೂತ:-** ನೀವು ಕೇಳಿದ ಪ್ರಶ್ನೆಗೆ ವಿಸ್ತೃತವಾಗಿ ಹೇಳಲು ಸಾಕಾಗದು ನೂರು ವರುಷ. ಆದರೂ ಸಂಕ್ಷಿಪ್ತವಾಗಿ ನಿರೂಪಿಸುತ್ತೇನೆ ಕೇಳಿರಿ. ಈ ಭೂಮಂಡಲದಲ್ಲಿ ಜಂಬೂ, ಪ್ಲಕ್ಷ, ಶಾಲ್ಮ, ಕುಶ, ಕ್ರೌಂಚ, ಶಾಕ, ಪುಷ್ಕರ, ಎಂಬ ಏಳು ಮಹಾದ್ವೀಪಗಳು ಇರುತ್ತವೆ. ಇವುಗಳಲ್ಲಿ ಜಂಬೂದ್ವೀಪವು ಉಪ್ಪಿನ ಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಪ್ಲಾಕ್ಷ ದ್ವೀಪವು ಇಕ್ಷು (ಕಬ್ಬಿನ ಹಾಲು) ಸಮುದ್ರದಿಂದಲೂ, ಶಾಲ್ಮದ್ವೀಪವು ಮದ್ಯದ ಸಮುದ್ರದಿಂದಲೂ, ಕುಶದ್ವೀಪವು ತುಪ್ಪದ ಸಮುದ್ರದಿಂದಲೂ, ಕ್ರೌಂಚದ್ವೀಪವು ಮೊಸರಿನ ಸಮುದ್ರದಿಂದಲೂ, ಶಾಕದ್ವೀಪವು ಹಾಲಿನ ಸಮುದ್ರದಿಂದ, ಪುಷ್ಕರದ್ವೀಪವು ಸಿಹಿನೀರಿನ ಸಮುದ್ರದಿಂದಲೂ ಸುತ್ತುವರಿಯಲ್ಪಟ್ಟಿವೆ. ಈ ಸಪ್ತದ್ವೀಪಗಳ ಮಧ್ಯದಲ್ಲಿರುವದೇ ಜಂಬೂದ್ವೀಪ. ಆ ಜಂಬೂದ್ವೀಪದ ನಟ್ಟನಡುವೆ ಇರುವದೇ ಮೇರುಪರ್ವತ. ಇದೊಂದು ಬಂಗಾರದ ಬೆಟ್ಟ. ಇದರ ಎತ್ತರ ೮೪ ಸಾವಿರ ಯೋಜನ. ತಳಭಾಗದಲ್ಲಿ ೧೬ ಸಾವಿರ ಯೋಜನವರೆಗೆ ಭೂಮಿಯ ಒಳಭಾಗದಲ್ಲಿ ಪ್ರವೇಶಿಸಿದೆ. ಈ ಮೇರುಪರ್ವತ ಮೇಲ್ಭಾಗದಲ್ಲಿ ೩೨ ಸಾವಿರ ಯೋಜನ ಅಗಲವಾಗಿದೆ. ಈ ಪರ್ವತದ ಸುತ್ತಲಿರುವ ಪ್ರಸ್ಥಭೂಮಿಯ ಹರವು ೧೬ ಸಾವಿರ ಯೋಜನೆ ವಿಸ್ತೀರ್ಣ.

ಭೂಮಂಡಲವೆಂಬ ಕರ್ಮಲಕ್ಕೆ ಕರಣಿಕೆಯಂತೆ ಕಂಗೊಳಿಸುತ್ತಲಿದೆ ಈ ಮೇರು ಮಹಾಚಲ. ಮೇರು ಮಹಾದ್ರಿಯ ದಕ್ಷಿಣ ದಿಕ್ಕಿನಲ್ಲಿ ಹಿಮಾಲಯ, ಹೇಮಕೂಟ ನಿಷಧಗಿರಿ ಎಂಬ ತುಂಗೋತ್ತುಂಗವಾದ ಬೆಟ್ಟಗಳು. ಉತ್ತರದಲ್ಲಿ ನೀಲಗಿರಿ, ಶೈಲಾದ್ರಿ, ಶೃಂಗಗಿರಿ ಎಂಬ ಪರ್ವತಗಳು ಇರುತ್ತವೆ. ಇನ್ನು ವರ್ಷಗಳು ಅಥವಾ ಭೂಭಾಗಗಳನ್ನು ಹೇಳುತ್ತೇನೆ ಕೇಳಿರಿ. ಮೇರು ಪರ್ವತದ ದಕ್ಷಿಣ ಭಾಗದಲ್ಲಿ ಭಾರತ ವರ್ಷ, ಹರಿವರ್ಷ, ಪುರುಷವರ್ಷ ಎಂಬ ಭೂಭಾಗಗಳು, ಉತ್ತರದಲ್ಲಿ ಉತ್ತರಪ್ರದೇಶದಿಂದ ಒಳಗೂಡಿದ ರಮ್ಯಕ ಪ್ರದೇಶವು ಇರುತ್ತದೆ. ವರ್ಷ ಎಂಬ ಹೆಸರಿನ ಪ್ರತಿಯೊಂದು ಭೂಭಾಗವು ೯ ಸಾವಿರ ಯೋಜನ ವಿಸ್ತಾರವಾಗಿದೆ. ಇಲಾವೃತ ಖಂಡವೂ ಅಷ್ಟೇ ವಿಸ್ತಾರ, ಇದರ ಮಧ್ಯದಲ್ಲಿಯೇ ಸುಮೇರು ಪರ್ವತ. ಈ ಇಲಾವೃತವು ಮೇರು ಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ೯ ಸಾವಿರ ಯೋಜನ ವಿಸ್ತಾರವಾಗಿದೆ. ಈ ಇಳಾವೃತ್ತದಲ್ಲಿ ೧೦ ಸಾವಿರ ಯೋಜನ ವಿಸ್ತಾರದ ನಾಲ್ಕು ಗಿರಿಗಳು ಭೂಮಂಡಲದ ಬಾಗಿಲದ ಅಗಳಿಗಳಿದ್ದಂತೆ ಇರುತ್ತವೆ. ಮೇರುಶೈಲದ ಪೂರ್ವಕ್ಕೆ ಮಂದರಗಿರಿ, ದಕ್ಷಿಣಕ್ಕೆ ಗಂಧಮಾದನಗಿರಿ. ಪಶ್ಚಿಮ ನಿಟ್ಟಿನಲ್ಲಿ ವಿಪುಲಾಚಲ ಉತ್ತರದಲ್ಲಿ ಸುಪಾರ್ಶ್ವಪರ್ವತ, ಆ ಪರ್ವತಗಳಲ್ಲಿ ತಾಳೆ, ನೇರಳೆ, ಅರಳೇ, ಆಲ ಮುಂತಾದ ಲಕ್ಷ ಲಕ್ಷ ವೃಕ್ಷಗಳು ಆ ಪರ್ವತದ ವಿಜಯಧ್ವಜಗಳಂತೆ ಶೋಭಿಸುತ್ತವೆ. ಜಂಬೂ ದ್ವೀಪದಲ್ಲಿ ಜಂಬೂವೃಕ್ಷಗಳು (ನೇರಳೆಮರ) ಹೇರಳ ವಾಗಿರುವದರಿಂದ ಆ ದ್ವೀಪಕ್ಕೆ ಜಂಬೂದ್ವೀಪವೆಂದು ಹೆಸರು ಬಂದಿದೆ. ಆ ಹೆಮ್ಮರಗಳ ಹಣ್ಣುಗಳು ಆನೆಯ ಗಾತ್ರದ್ದು ಇದ್ದು ಪಕ್ವವಾಗಿ ಕಳಿತು ಮರಗಳಿಂದ ಬಿದ್ದು, ಶಿಖರ ಶ್ರೇಣಿಗಳಲ್ಲಿ ಸದಾ ಬೀಳುತ್ತಲೇ ಇರುತ್ತವೆ. ಆ ಜಂಬೂ ಫಲಗಳ ರಸದಿಂದ ಜಂಬೂ ನದಿ ಹೊರಟಿರುತ್ತದೆ. ಜಂಬೂದ್ವೀಪ ವಾಸಿಗಳು ಅದರ ಸಿಹಿಯಾದ ನೀರನ್ನು ಕುಡಿಯುವರು. ಅದಕ್ಕೆ ದುರ್ವಾಸನೆ ಇರುವದಿಲ್ಲ. ಆ ಜಂಬೂನದಿಯ ನೀರನ್ನು ಪಾನಮಾಡಿದವರಿಗೆ ಮುಪ್ಪು ಬರುವುದಿಲ್ಲ, ಇಂದ್ರಿಯ ಶೈಥಿಲ್ಯ ಬರುವದಿಲ್ಲ. ಆ ನದೀತೀರದ ಮಣ್ಣೇ 'ಜಾಂಬೂನದ' ಎಂಬ ಹೆಸರಿನಿಂದ ಚಿನ್ನವಾಗುವದು.

ಮೇರು ಪರ್ವತದ ಪೂರ್ವದಲ್ಲಿ ಭದ್ರಾಶ್ವವರ್ಷ, ಪಶ್ಚಿಮದಲ್ಲಿ ಕೇತುಮಾಲವರ್ಷ, ಇವೆಲ್ಲದರ ಮಧ್ಯದಲ್ಲಿ ಇಲಾವ್ರತವರ್ಷ. ಮೇರುವಿನ ಪೂರ್ವದಿಕ್ಕಿನಲ್ಲಿ ಚೈತ್ರರಥ ಎಂಬ ಸುಂದರವಾದ ಉದ್ಯಾನವು ಶೋಭಿಸುತ್ತದೆ. ದಕ್ಷಿಣದಲ್ಲಿ ಗಂಧಮಾದನ ಎಂಬ ಉಪವನವು ಇರುತ್ತದೆ. ಪಶ್ಚಿಮದಲ್ಲಿ ವೈಭಾಜವನ, ಉತ್ತರದಲ್ಲಿ ನಂದನವನ, ಇದರಂತೆ ಈ ಎಲ್ಲ ನಾಲ್ಕು ಬೆಟ್ಟಗಳಲ್ಲಿ ದೇವತೆಗಳು ಮಾತ್ರ ಉಪಯೋಗಿಸುವ ಅರುಣೋದ, ಮಹಾಭದ್ರ, ಅಸಿತೋದ, ಮಾನಸ ಎಂಬ ನಾಲ್ಕು ಸರೋವರಗಳು ಕಣ್ಗೆಸೆಯುತ್ತವೆ. ಮೇರುವಿನ ಪೂರ್ವದಿಕ್ಕಿನಲ್ಲಿ ಶಾಂತವಂತ, ಚಕ್ರಕುಂಜ, ಟರರೀಗಿರಿ, ಮಾಲ್ಯವಂತ, ವೈಕಂಡ ಎಂಬ ಪರ್ವತಗಳೂ, ದಕ್ಷಿಣದಲ್ಲಿ ಕೇಸರಿಮೃಗಗಳು ಹೆಚ್ಚಿರುವದರಿಂದ ಕೇಸರಪರ್ವತವೆಂದು ಹೆಸರಾದ ತ್ರಿಕೂಟಾಚಲ, ಶಶಿರಗಿರಿ, ಪತಂಗ ಪರ್ವತ, ರುಚಕಗಿರಿ, ನಿಷಿದ್ಧಾಚಲಗಳು ಇರುತ್ತವೆ. ಮೇರುವಿನ ಪಶ್ಚಿಮದಲ್ಲಿ ಶಿಖಿವಾಸಗಿರಿ ವೈಡೂರ್ಯ ಪರ್ವತ, ಕಪಿಲಗಿರಿ, ಗಂಧಮಾದನಾಚಲ, ಜಾನುಧಿಪರ್ವತ ಮೊದಲಾದವುಗಳು ಕೇಸರಾಚಲವೆಂದು ಪ್ರಸಿದ್ಧವಾಗಿವೆ. ಈ ಮೇರುಪರ್ವತದ ಮೇಲ್ಭಾಗದಲ್ಲಿ ಬ್ರಹ್ಮದೇವರ ರಾಜಧಾನಿ ಇದ್ದು, ೧೪ ಸಾವಿರ ಯೋಜನ ವಿಸ್ತೃತವಾಗಿವೆ. ಆ ರಾಜಧಾನಿಯ ಸುತ್ತಲೂ

ಎಂಟೂ ದಿಕ್ಕುಗಳಲ್ಲಿ ಇಂದ್ರನೇ ಮೊದಲಾದ ಅಷ್ಟದಿಕ್ಪಾಲಕರ ಪಟ್ಟಣಗಳಿರುತ್ತವೆ. ಶ್ರೀಹರಿಯ ಪಾದದಿಂದ ಹೊರಟ ಗಂಗಾನದಿಯು ಚಂದ್ರಮಂಡಲಕ್ಕೆ ಬಂದು ಅಲ್ಲಿಂದ ಬ್ರಹ್ಮದೇವರ ಸದನದಲ್ಲಿ ಬಂದು ಬೀಳುವದು. ಅಲ್ಲಿಂದ ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂದು ನಾಲ್ಕು ಹೆಸರುಗಳಿಂದ ನಾಲ್ಕು ನದಿಯಾಗಿ ಹೊಮ್ಮಿ ಹರಿಯುವದು. ಸೀತಾನದಿಯು ಪೂರ್ವದಿಕ್ಕಿಗೆ ಹೊರಟು ಅಂತರಿಕ್ಷ ಮಾರ್ಗದಿಂದ ಹರಿದು ಗಿರಿಶಿಖರಗಳಿಂದ ಶೈಲ, ಶ್ರೇಣಿಗಳಿಗೆ ಧೀಂಕಿಟ್ಟು ಹರಿಯುತ್ತಾ ಸಾಗರ ಗರ್ಭದಲ್ಲಿ ಸೇರಿಕೊಳ್ಳುವದು. ಆಲಕನಂದೆಯು ದಕ್ಷಿಣ ದಿಕ್ಕಿನಿಂದ ಹೊರಟು ಭಾರತ ದೇಶಕ್ಕೆ ಬಂದು ಅಲ್ಲಿ ಏಳು ಭಾಗಗಳಾಗಿ ಹರಿದು ಕೊನೆಗೆ ಸೇರುವದು ಸಿಂಧುರಾಜನಲ್ಲಿ. ಇದರಂತೆ ಚಕ್ಷು ನದಿಯು ಕೂಡಾ ಪಡುವಲ ದಿಕ್ಕಿನಿಂದ ಹೊರಟು, ಉತ್ತುಂಗವಾದ ಶೈಲ ಶೃಂಗಾಂಗಗಳನ್ನು ಉಲ್ಲಂಘಿಸಿ ಕೇತುಮಾಲದಲ್ಲಿ ಹೊಕ್ಕು ಹರಿದು, ಪಡುವಲ ಕಡಲನ್ನು ಕೂಡಿಕೊಳ್ಳುತ್ತದೆ. ಭದ್ರಾ ನದಿಯು ಉತ್ತರ ದಿಕ್ಕಿನಿಂದ ಹೊರಟು ಔತ್ತರೇಯ ಶೈಲಶ್ರೇಣಿಗಳಲ್ಲಿ ಧುಮ್ಮಿಕ್ಕಿ ಹರಿದು ಉತ್ತರ ಸಮುದ್ರದೊಡನೆ ಸಂಗಮಿಸುವದು.

ಮಾಲ್ಯವಂತ ಹಾಗೂ ಗಂಧಮಾದನ ಪರ್ವತಗಳು ನೀಲಗಿರಿ ಮತ್ತು ನಿಷಧ ಗಿರಿವರೆಗೆ ಮೈಚಾಚಿದೆ. ಆ ಗಿರಿಗಳ ಮಧ್ಯದಲ್ಲಿ ಮೇರು ಮಹೀಧರವು ಭೂಮಂಡಲ ವೆಂಬ ಕಮಲದ ಕರಣಿಕೆಯಂತೆ ಇರುವದು. ಆ ಮೇರು ಪರ್ವತದ ಪೂರ್ವದಲ್ಲಿರುವ ತ್ರಿಶೃಂಗ, ಜಾರುಧಿ ಎಂಬ ಪರ್ವತಗಳು ನೀಲಗಿರಿ ನಿಷಿಧಗಿರಿಗಳವರೆಗೆ ವ್ಯಾಪಿಸಿದ್ದು ಉತ್ತರ ದಿಕ್ಕಿನಲ್ಲಿ ಹಬ್ಬಿರುತ್ತವೆ. ಈ ಎರಡೂಬೆಟ್ಟಗಳು ಮೇರುವಿನ ಪಶ್ಚಿಮ ದಿಕ್ಕಿಗೂ ಹರಡಿದ್ದು ಸಮುದ್ರ ಒಳಭಾಗವನ್ನು ವ್ಯಾಪಿಸುತ್ತವೆ. ಈ ಬೆಟ್ಟಗಳ ತಪ್ಪಲು ಪ್ರದೇಶಗಳಲ್ಲಿ ಅನೇಕ ವನೋಪವನಗಳು, ಪಟ್ಟಣ, ಗ್ರಾಮಾರಾಮಗಳು ಶೋಭಿಸುತ್ತಲಿದ್ದು, ಅನೇಕ ಸಿದ್ಧರೂ ಚಾರಕರೂ ಅಲ್ಲಿ ವಿಹರಿಸುತ್ತಾರೆ. ಲಕ್ಷ್ಮಿ, ವಿಷ್ಣು, ಸೂರ್ಯ, ಅಗ್ನಿ, ಇಂದ್ರ ಮಹಾದೇವ ಮುಂತಾದ ದೇವತೆಗಳ ಮಂದಿರಗಳು ಅಲ್ಲಿ ಕಂಗೊಳಿಸುತ್ತವೆ. ಬಹು ದೊಡ್ಡ ಪ್ರಮಾಣದಲ್ಲಿ ಅನೇಕ ದೇವ ಮಾನವ, ಕಿನ್ನರ ಕಿಂಪುರುಷರು ಆ ದೇವಾಲಯಗಳಲ್ಲಿ ದೇವತಾ ಸೇವೆಗೈಯುವರು. ಅಲ್ಲಿಯ ಸುಂದರವಾದ ಶೈಲ ಕಂದರಗಳಲ್ಲಿ ವಿಜನವನಾಂತರ ಏಕಾಂತ ಪುಣ್ಯಾರಣ್ಯಗಳಲ್ಲಿ ಮುನಿ ಮನುಜ ಮಾನನೀಯರಾದ ಬ್ರಹ್ಮರ್ಷಿಗಳು ತಪಃಸ್ವಾಧಾಯ ನಿರತರಾಗಿ ನೆಲೆಸಿರುತ್ತಾರೆ. ಅನೇಕ ದೇವಗಂಧರ್ವಯಕ್ಷರಾಕ್ಷಸರು ಅಲ್ಲಿಯ ನಿಸರ್ಗಸುಂದರತಾಣಗಳಲ್ಲಿ ವಿವಿಧ ವಿಹಾರ ಲೀಲಾ ವಿನೋದಗಳನ್ನು ಮಾಡುತ್ತಿರುತ್ತಾರೆ. ಮೇಲೆ ಹೇಳಿದ ಎಲ್ಲ ಪ್ರದೇಶಗಳು ನೆಲದ ಮೇಲಿನ ನಾಕಲೋಕಗಳಿದ್ದಂತೆ ಇರುತ್ತವೆ. ಅಲ್ಲಿ ಇರುವವರೆಲ್ಲರೂ ಧರ್ಮಿಷ್ಠರೇ ಕರ್ಮಠರೇ.

ಭಗವಾನ್ ಮಹಾವಿಷ್ಣುವು ಒಂದೊಂದು ದೇಶದಲ್ಲಿ ಒಂದೊಂದು ರೂಪದಿಂದ ಭಕ್ತಾನುಕಂಪಿಯಾಗಿ ನೆಲೆಸಿದ್ದಾನೆ. ಭದ್ರಾಶ್ವ ವರ್ಷದಲ್ಲಿ ಹಯಗ್ರೀವ ರೂಪದಿಂದಲೂ, ಕೇತುಮಾಲವರ್ಷದಲ್ಲಿ ವರಾಹರೂಪದಿಂದಲೂ, ಭರತಖಂಡದಲ್ಲಿ ಕೂರ್ಮ ರೂಪದಿಂದಲೂ ಉತ್ತರ ಕುರುದೇಶದಲ್ಲಿ ಮತ್ಸ್ಯರೂಪದಿಂದಲೂ ಉಳಿದೆಲ್ಲದೇಶಗಳಲ್ಲಿ ವಿಶ್ವರೂಪದಿಂದಲೂ ಇದ್ದು ಸರ್ವೇಶ್ವರ ನೆನಿಸಿದ್ದಾನೆ. ಕಿಷ್ಪುರುಷ ಮೊದಲಾದ ಎಂಟು ವರ್ಷಗಳಲ್ಲಿ ದುಃಖವೆಂಬುದೇ ಇಲ್ಲಾ, ದಣಿವೂ ಇರುವದಿಲ್ಲ, ಹಸಿವೆ ಬಾಯಾರಿಕೆ ಭಯ ಭ್ರಾಂತಿ ಒಂದೂ ಇರುವದಿಲ್ಲ. ಅಲ್ಲಿಯ ಜನರಿಗೆ ೨೨ ಸಾವಿರ ವರ್ಷಆಯುಷ್ಯ. ಅಲ್ಲಿರುವ

ಯಾರಿಗೂ ಎಂದೂ ಹಸಿವೆ ಹುಟ್ಟುವದಿಲ್ಲ. ಬಾಯಾರಿಕೆ ಆಗುವುದಿಲ್ಲ. ನಿತ್ಯತೃಪ್ತಿ ಸದಾ ಸಂತೋಷ. ಆಶಿ ಪುರುಷ ಮೊದಲಾದ ಸ್ಥಾನಗಳಲ್ಲಿ ಕೃತಯುಗ ತ್ರೇತಾಯುಗಗಳ ಕಲ್ಪನೆಯೇ ಇರುವದಿಲ್ಲ. ಪ್ರತಿಯೊಂದು ವರ್ಷಗಳಲ್ಲಿಯೂ ಏಳೇಳು ಪರ್ವತಗಳು ಇರುತ್ತವೆ. ಆ ಪರ್ವತಗಳಿಂದ ನೂರಾರು ಪುಣ್ಯನದಿಗಳು ಹೊರಹೊಮ್ಮಿ ಹರಿಯುತ್ತವೆ.

## ಜಂಬೂದ್ವೀಪ ನಿರೂಪಣೆ

**ಲೋಮಹರ್ಷಣ:-** ಶೌನಕಾದಿ ಮುನಿಗಳೇ, ಸಮುದ್ರದ ಉತ್ತರದಲ್ಲಿಯೂ ಹಿಮಾಲಯದ ದಕ್ಷಿಣದಲ್ಲಿಯೂ ಇರುವ ಮಧ್ಯಭೂಮಿಗೆ ಭಾರತವರ್ಷ ಎಂದು ಹೆಸರು. ಪೂರ್ವಕಾಲದಲ್ಲಿ ಭರತ ಎಂಬ ಸುಪ್ರಸಿದ್ಧ ರಾಜನು ಈ ನಾಡನ್ನು ತಂದೆಯಂತೆ ಆಳಿದ. ಧರ್ಮದಿಂದ ಪಾಲಿಸಿದ. ಈ ದೇಶದ ಕೀರ್ತಿಪತಾಕೆಯನ್ನು ಗಗನದ ಗೋಪುರಕ್ಕೆ ಏರಿಸಿದ. ಅವನ ಹೆಸರಿನಿಂದ ಈ ರಾಷ್ಟ್ರಕ್ಕೆ ಭರತವರ್ಷ ಎಂದು ಹೆಸರು ಬಂದಿತು. ಈ ಭರತಖಂಡದ ವಿಸ್ತಾರ ಒಂಭತ್ತು ಸಾವಿರ ಯೋಜನ. ಸ್ವರ್ಗ ಅಥವಾ ಮೋಕ್ಷವನ್ನು ಅಪೇಕ್ಷಿಸುವವರು ಸಾಧನ ಮಾಡಿಕೊಳ್ಳುವದು ಈ ಭಾರತ ದೇಶದಲ್ಲಿಯೇ. ಆದುದರಿಂದಲೇ ಕರ್ಮಭೂಮಿ ಎಂದು ಪ್ರಸಿದ್ಧಿ ಈ ನಾಡಿಗೆ. ಇಲ್ಲಿಯ ಕುಲಪರ್ವತಗಳು ಏಳು. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಂತ, ಯಕ್ಷಗಿರಿ, ವಿಂಧ್ಯ, ಪಾರಿಯಾತ್ರ. ಈ ಭಾರತದಲ್ಲಿ ಧರ್ಮಕರ್ಮವನ್ನು ಆಚರಿಸಿ ಪಡೆಯಬಹುದು ಸ್ವರ್ಗ ಅಥವ ಅಪವರ್ಗಗಳನ್ನು. ದುರಿತ ಅಥವಾ ದುಷ್ಕರ್ಮಗಳನ್ನು ಆಚರಿಸಿದರೆ ನರನು ಹೊಂದುವುದು ನರಕಾದಿ ಘೋರ ಲೋಕಗಳನ್ನು. ಈ ಭರತಖಂಡದಲ್ಲಿ ಇಂದ್ರದ್ವೀಪ, ಕೇತುಮಾನದ್ವೀಪ, ತಾಮ್ರಪರ್ಣೆ, ಗಭವರ್ತಿಮಂತ, ನಾಗದ್ವೀಪ, ಸೌಮ್ಯದ್ವೀಪ, ಗಂಧರ್ವದ್ವೀಪ, ವಾರುಣದ್ವೀಪ, ಭಾರತದ್ವೀಪ, ಹೀಗೆ ನವದ್ವೀಪಗಳು ಇರುತ್ತವೆ. ಒಂಭತ್ತನೆಯದಾದ ಭಾರತದ್ವೀಪದ ಸುತ್ತಲೂ ಸಮುದ್ರಗಳು ಆವರಿಸಿರುತ್ತವೆ. ಈ ದ್ವೀಪವು ದಕ್ಷಿಣದಿಂದ ಉತ್ತರದವರೆಗೆ ಸಾವಿರ ಯೋಜನ ವಿಸ್ತಾರವಾಗಿದ್ದು ಇಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣದವರು ಸ್ವಯೋಗ್ಯವಾದ ಕರ್ಮಾನುಷ್ಠಾನ ಮಾಡಿಕೊಂಡು ಇರುತ್ತಾರೆ. ನಾಡಿನ ಉದ್ದಗಲಕ್ಕೂ ಹರಿಯುವ ಶತದ್ರು, ಚಂದ್ರಭಾಗ ಮುಂತಾದ ನದಿಗಳು ಹಿಮಾಲಯದಿಂದ, ವೇದಸ್ಮೃತಿ, ನದಿಗಳು ಪಾರಿಯಾತ್ರ ಪರ್ವತದಿಂದ ನರ್ಮದಾ, ಸುರಮಾ ನದಿಗಳು, ವಿಂಧ್ಯಗಿರಿಯಿಂದ, ತಾಪಿ, ಪಯೋಷ್ಣಿ, ನಿರ್ವಿಂಧ್ಯ, ಕಾವೇರಿ ಮೊದಲಾದ ನದಿಗಳು ವೃಕ್ಷಪರ್ವತದಿಂದ, ಗೋದಾವರಿ, ಭೀಮನದಿ, ಕೃಷ್ಣವೇಣಿ ಸಹ್ಯಾದ್ರಿಯಿಂದ, ಕೃತಮಾಲ ತಾಮ್ರಪರ್ಣಿ ನದಿಗಳು ಮಲಯಾಚಲದಿಂದ ಕ್ರಿಸಾಂಧ್ಯ ಋಷಿಕುಲ್ಯಾ ಮೊದಲಾದ ನದಿಗಳು ಮಹೇಂದ್ರ ಗಿರಿಯಿಂದ ಹುಟ್ಟಿ ದೇಶದ ಬೇರೆ ಬೇರೆ ಭಾಗದಲ್ಲಿ ಹರಿದು ಆ ಪ್ರದೇಶಗಳನ್ನು ಪವಿತ್ರ ಹಾಗೂ ಸಂಪನ್ನವಾಗಿ ಮಾಡುವವು. ಈ ನದಿಗಳ ತೀರದಲ್ಲಿ ವಾಸ ಮಾಡಿದ ಕುರು, ಪಾಂಚಾಲ, ಮಧ್ಯದೇಶ, ಕಾಮರೂಪ, ಕಲಿಂಗ, ಮಗಧ, ಸೌರಾಷ್ಟ್ರ, ಮಾಲವ, ಪಾರಿಯಾದ, ಸೌವೀರ, ಶಾಕಲ, ಮತ್ರ ಮುಂತಾದ ದೇಶದ ಜನರು ಈ ನದಿಗಳ ಪವಿತ್ರ ಜಲವನ್ನು ಸ್ನಾನಮಾಡಿ, ಪಾನಮಾಡಿ ಆರೋಗ್ಯವಂತರೂ, ಸುಖಿವಂತರು ಆಗಿರುತ್ತಾರೆ. ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ಕಾಲಭೇದವು. ಯೌಗಿಕ ಗಣನೆಯು ಭಾರತ ಹೊರತು ಬೇರೆ ಎಲ್ಲಿಯೂ ಇರುವುದಿಲ್ಲ. ಕರ್ಮಭೂಮಿಯಾದ ಈ ಭಾರತವರ್ಷದಲ್ಲಿ ಜನ್ಮಯೆತ್ತಿ ಕರ್ಮಾನುಷ್ಠಾನಮಾಡಿ ಮಾನವರು, ಮುನಿಮಾನ್ಯರು, ದೇವತೆಗಳು, ಪರಮೇಶ್ವರ ಅರ್ಪಣ

ಬುದ್ಧಿಯಿಂದ ವೇದಶಾಸ್ತ್ರದಲ್ಲಿ ಹೇಳಿದಂತೆ ಆಚರಣೆಗೈದು ಕೊನೆಯಲ್ಲಿ ಶ್ರೀಹರಿಯ ದಿವ್ಯವಾದ ಸ್ಥಾನವನ್ನು ಪಡೆಯುವರು. ಈ ಜಂಬೂದ್ವೀಪದ ಸುತ್ತಳತೆ ಒಂದು ಲಕ್ಷ ಯೋಜನ ವಿಸ್ತಾರವಾಗಿದ್ದು ಇದರ ಸುತ್ತಲೂ ಹೊರಗಡೆ, ಲಕ್ಷ ಯೋಜನ ವಿಸ್ತಾರವಾದ ಕ್ಷಾರ ಸಮುದ್ರವು ಚಕ್ರದ ಆಕಾರವಾಗಿ ವ್ಯಾಪಿಸಿರುವವು.

## ಸಮುದ್ರದ್ವೀಪ ಪರಿಮಾಣವರ್ಣನ

**ಲೋಮಹರ್ಷಣ:-** ಮುನಿಗಳೇ, ಜಂಬೂದ್ವೀಪದ ಸುತ್ತಲೂ ಉಪ್ಪಿನಕಡಲು, ಆವರಿಸಿದಂತೆ ಪ್ಲಕ್ಷದ್ವೀಪದ ಸುತ್ತೂ ಕಬ್ಬಿನಹಾಲಿನ ಸಮುದ್ರವು ಭೋರ್ಗರೆಯುತ್ತಿದೆ. ಜಂಬೂದ್ವೀಪದ ವಿಸ್ತಾರ ಲಕ್ಷ ಯೋಜನವಾದರೆ, ಪ್ಲಕ್ಷದ್ವೀಪದ ಹರವು ಇದರ ಎರಡು ಪಟ್ಟು ಎಂದರೆ ಎರಡು ಲಕ್ಷ. ಮೇಧಾತಿಥಿ ಈ ದ್ವೀಪದ ಅಧಿಪತಿ. ಅವನಿಗೆ ಏಳುಜನ ಗಂಡು ಮಕ್ಕಳು, ಶಾಂತಭವ, ಶಿಶಿರ, ಸುಕೋದಯ, ಆನಂದ, ಶಿವ, ಕ್ಷೇಮಕ, ಧೃವ ಎಂದು. ಶಾಂತಭವ ಹಿರಿಯ, ಧೃವ ಕುಮಾರನೆ ಕಿರಿಯ. ಈ ಏಳು ರಾಜಕುಮಾರರ ಹೆಸರಿನಿಂದಲೇ ಅಲ್ಲಿ ಏಳು ದೇಶಗಳು ಇರುತ್ತವೆ. ಗೋಮೇಧ, ಗಿರಿಚಂದ್ರ, ನಾರದಪರ್ವತ, ದುಂದುಭಿಗಿರಿ, ಸುಮನಗಿರಿ, ಸೋಮಕಾಚಲ, ವೈಭ್ರಾಜಾಚಲ ಎಂಬ ಏಳು ಗಿರಿಗಳು. ಆ ಪ್ಲಕ್ಷದ್ವೀಪವನ್ನು. ಏಳು ಖಂಡಗಳಾಗಿ ವಿಭಾಗಿಸುತ್ತವೆ. ಆ ದ್ವೀಪದ ಜನರೆಲ್ಲರೂ ವೀರರೂ ಪುಣ್ಯವಂತರೂ, ಆಗಿದ್ದು ಅವರಿಗೆ ಮುಪ್ಪು ಬರುವುದಿಲ್ಲ, ಮೃತ್ಯು ಮೂಸುವುದಿಲ್ಲ, ರೋಗ ಕಾಡಿಸುವುದಿಲ್ಲ. ದುಃಖಗಳು ಯಾರಿಗೂ ಉಂಟಾಗುವುದೇ ಇಲ್ಲ. ಅಲ್ಲಿ ಹರಿಯುವ ನದಿಗಳು ಅನುತಪಾ, ಶಿಖಿ, ಶಿಪ್ರಾ, ಶ್ರಿದಿವ, ಕ್ರಮುನಿಧಿ, ಅಮೃತಾ, ಸುಕೃತಾ ಎಂಬ ಹೆಸರಿನಿಂದ ಆ ನಾಡಿನ ನಾಡಿಗಳಂತೆ ಅಲ್ಲಿಯ ಜಲಾಂತರಂಗವನ್ನು ಉತ್ತುರಂಗಿಕವನ್ನಾಗಿ ಮಾಡುತ್ತಾ ಪ್ರವಹಿಸುತ್ತವೆ. ಇನ್ನೂ ಅಲ್ಲಿ ಇರುವ ಉಪನದಿ ಉಪಗಿರಿಗಳಿಗೆ ಲೆಕ್ಕವೇ ಇಲ್ಲ. ಅಲ್ಲಿ ಯುಗ ವ್ಯವಸ್ಥೆ ಇಲ್ಲ. ಅಲ್ಲಿಯ ಜನರ ಆಯುಷ್ಯ ಐದು ಸಾವಿರ ವರ್ಷ. ಇಲ್ಲಿಯಂತೆಯೂ ಅಲ್ಲಿಯೂ ಚತುರ್ವರ್ಣ ವ್ಯವಸ್ಥೆ ಇದೆ. ಅವರಿಗೆ ಆರ್ಯಕ, ಕುರು, ವಿವಿಶ್ವಾ, ಭಾವಿ, ಇವರೇ ಅಲ್ಲಿಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು. ಆ ದ್ವೀಪದ ಮಧ್ಯದಲ್ಲಿ ಬಾನೆತ್ತರ ಬೆಳೆದು ನಿಂತ ಪ್ಲಕ್ಷವೃಕ್ಷ ಎಂದರೆ ಅರಳಿಯ ಮರ ಇರುವದು. ಅದರಿಂದಲೇ ಅದಕ್ಕೆ ಪ್ಲಕ್ಷದ್ವೀಪ ಎಂದು ಹೆಸರು. ಅಲ್ಲಿಯ ನಾಲ್ಕು ವರ್ಣದವರೂ ಶ್ರೀಹರಿಯನ್ನು ಚಂದ್ರರೂಪಿಯನ್ನಾಗಿ ಆರಾಧಿಸುವರು. ಆ ಪ್ಲಕ್ಷ ದ್ವೀಪವನ್ನು ಅರವತ್ತು ಎರಡು ಲಕ್ಷ ಯೋಜನ ವಿಸ್ತಾರವಾದ ಇಕ್ಷು (ಕಬ್ಬಿನ ರಸ) ರಸದ ಸಾಗರವು ಸೂರ್ಯ ಚಂದ್ರರ ಸುತ್ತಲೂ ಕಟ್ಟುವ ಕಣದಂತೆ ಮಂಡಲಾಕಾರವಾಗಿ ಸುತ್ತುವರಿದಿರುವುದು.

ಶಾಲ್ಮಲೀ ದ್ವೀಪದ ಭೌಗೋಳಿಕ ಸ್ಥಿತಿಯನ್ನು ಹೇಳುತ್ತೇನೆ ಕೇಳಿರಿ. ಆ ಶಾಲ್ಮಲಿ ದ್ವೀಪಕ್ಕೆ ಅರಸ ವಪುಷ್ಮಂತ. ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ, ಸುಪ್ರಭ ಎಂಬ ಏಳು ದೇಶಗಳ ಅಧಿಪತಿಗಳಾದ ಅದೇ ಹೆಸರಿನ ಏಳು ರಾಜಕುಮಾರರು ಈ ದ್ವೀಪದ ವಿಸ್ತಾರ ನಾಲ್ಕು ಲಕ್ಷ ಯೋಜನ. ಈ ದ್ವೀಪದಲ್ಲಿ ಮೇಲೆ ಹೇಳಿದ ಏಳು ವರ್ಷಗಳನ್ನು ಪ್ರತ್ಯೇಕಿಸುವ ಕುಲಗಿರಿಗಳು ಕುಮದ, ಉನ್ನತ, ಬಲಹರ, ದ್ರೋಣಗಿರಿ, ಕಂಕಗಿರಿ, ಮಹೇಶಗಿರಿ, ಕಕುದ್ಮಂತ ಎಂದು ಏಳು ಇರುತ್ತವೆ. ಈ ಪರ್ವತಗಳಿಂದ ಶ್ರೋಣಿ, ತೋಯ, ವಿಕೃಷ್ಣಾ, ಚಂದ್ರಾ, ಶುಕ್ರಾ, ವಿಮೋಂತನಿ, ನಿವೃತ್ತಿ ಏಳು ನದಿಗಳು ಹರಿದು ಆ ನಾಡನ್ನೆಲ್ಲಾ ಸುಜಲಾ, ಸುಫಲಾ ಆಗಿ ಮಾಡುತ್ತವೆ. ಇಲ್ಲಿಯೂ ಕಪಿಲ, ಅರುಣ, ವೀತ,

ಕೃಷ್ಣರೆಂಬ ನಾಲ್ಕು ಜಾತಿಯ ಜನರು ನಮ್ಮ ದೇಶದಂತೆ ಚಾತುರ್ವರ್ಣ ವ್ಯವಸ್ಥೆಯ ಕಟ್ಟುಪಾಡಿಗೆ ಒಳಗಾಗಿ ವಾಯುರೂಪದಿಂದ ಇರುವ ಹರಿಯನ್ನು ಆರಾಧಿಸುತ್ತಾರೆ. ಇಲ್ಲಿಯ ಶ್ರೋತ್ರಿಯರು ನಿರಂತರವೂ ಹೋಮ ಹವನಗಳಿಂದ ಯಜ್ಞಪುರುಷನನ್ನು ಆರಾಧಿಸುತ್ತಾರೆ. ಈ ದೇಶದ ತುಂಬಾ ದೇವಾಧಿದೇವತೆಗಳು ನಿತ್ಯವೂ ಸನ್ನಿಹಿತರಾಗಿರುತ್ತಾರೆ. ಶಾಲ್ಮಲೀ ಎಂಬ ಬೂರುಗು ಮರವು ಗಗನಚುಂಬಿತವಾಗಿ ಬೆಳೆದು ಬೀಗಿ ನಿಂತಿರುವುದರಿಂದ ಇದಕ್ಕೆ ಶಾಲ್ಮಲಿ ದೀಪ ಎಂದು ಸಾರ್ಥಕ ಹೆಸರು ಪ್ರಾಪ್ತವಾಗಿರುತ್ತದೆ. ಇದರ ಹರಹು ನಾಲ್ಕು ಯೋಜನ. ಈ ದ್ವೀಪವನ್ನು ಸುತ್ತುವರೆದ ಸೆರೆಯ ಸಮುದ್ರದ ವಿಸ್ತಾರ ನಾಲ್ಕು ಲಕ್ಷ ಯೋಜನ.

ಅದರ ಮುಂದಿನ ಕುಶದ್ವೀಪ ಎಂಟು ಲಕ್ಷಯೋಜನ ವಿಸ್ತಾರ. ಅಲ್ಲಿಯ ರಾಜ ಜ್ಯೋತಿಷ್ಮಂತ, ಅವನಿಗೆ ಉದಬಿದಾ, ವೇಣುಮಂತಾ, ಸ್ವೈರಂಧಾ, ರಂಧನಾ, ಧೃತಿ, ಪ್ರಭಾಕರ, ಕಪಿಲ ಎಂದು ಏಳು ಜನ ಮಕ್ಕಳು. ಅವರೆಲ್ಲರೂ ತಮ್ಮ ತಮ್ಮ ಹೆಸರಿನ ದೇಶಗಳನ್ನೇ ಆಳುತ್ತಾರೆ. ಆ ದ್ವೀಪದಲ್ಲಿ ಮನುಷ್ಯರು, ದೈತ್ಯರು, ದಾನವರು, ಗಂಧರ್ವರು, ಯಕ್ಷರು, ಕಿನ್ನರರು ವಾಸಮಾಡುತ್ತಾರೆ. ಈ ದ್ವೀಪದಲ್ಲಿ ಭಕ್ತಿಪ್ರಿಯನಾದ ನಾರಾಯಣನನ್ನು ಜನರು ಉಗ್ರ ರೂಪದಿಂದ ಆರಾಧಿಸುತ್ತಾರೆ. ವಿದ್ರುಮ, ಹೇಮಶೈಲ, ದ್ಯುತಿಮರಿಕ, ಪುಷ್ಪಿಮಂತ, ಪ್ರಶೇಷಯ, ಹರಿ, ಮಂದರ, ಏಳು ಪರ್ವತಗಳು ಕುಲಪರ್ವತಗಳಾಗಿ ಆ ದೇಶಗಳ ಅಂಚಿನಲ್ಲಿ ಇರುತ್ತದೆ. ಧೂತಪಾಪ, ಶಿವಾ, ಪವಿತ್ರ, ಸಮ್ಮತಿ, ವಿದ್ಯುತ, ಅಂಭಾಸಾ, ಮಹಿ ಎಂದು ಏಳು ನದಿಗಳು ಅಲ್ಲಿ ನಾಡಿನ ತುಂಬಾ ಹರಿಯುತ್ತವೆ. ಆ ದ್ವೀಪದಲ್ಲಿ ದೊಡ್ಡದಾದ ಒಂದು ಕುಶಸ್ತಂಭ (ದರ್ಭೆಗಳ ವನವು) ಇರುತ್ತದೆ. ಕುಶದ್ವೀಪ ಎಂದು ಹೆಸರು ಬರಲು ಈ ಕುಶಸ್ತಂಭವೇ ಕಾರಣ. ವಿಸ್ತಾರವಾದ ತುಪ್ಪದ ಸಮುದ್ರವು ಎಂಟು ಲಕ್ಷ ಯೋಜನ ವಿಸ್ತಾರದಲ್ಲಿ ಆ ದ್ವೀಪವನ್ನು ಸುತ್ತುವರೆದಿರುತ್ತದೆ.

ಕುಶದ್ವೀಪದ ಎರಡು ಪಟ್ಟು ಎಂದರೆ ಹದಿನಾರು ಲಕ್ಷ ಯೋಜನ ವಿಸ್ತಾರವಾಗಿದೆ ಕ್ರೌಂಚದ್ವೀಪ. ಅಲ್ಲಿ ಆಳುವವ ದ್ಯುತಿಮಂತ. ಅವನಿಗೆ ಕುಶಗ, ಮಂದಗ, ಉಷ್ಣಗ, ಪೀವರ, ಅಧಕಾರ, ದುಂದುಭಿ ಎಂಬ ಏಳು ಜನ ಮಕ್ಕಳು ತಮ್ಮ ಹೆಸರಿನಿಂದ ಪ್ರಸಿದ್ಧವಾದ ದ್ವೀಪಗಳನ್ನು ಆಳುತ್ತಾರೆ. ಕ್ರೌಂಚಗಿರಿ, ವಾಮನಾಚಲ, ಅಂಧಕಾಕ, ದೇವಪುರ, ದೇವಗಿರಿ, ಪುಂಡರೀಕ, ದುಂದುಭಿಗಿರಿ ಇವು ಕ್ರೌಂಚ ದ್ವೀಪದ ದೇಶ ವಿಭಾಜಕವಾದ ಮರ್ಯಾದ ಗಿರಿಗಳು ಈ ದೀಪದಲ್ಲಿ ಪ್ರಜೆಗಳು ದೇವತೆಗಳ ಯಾವ ಭಯಾಪಾಯದ ಶಂಕೆ ಇಲ್ಲದೆ ಸುಖದಿಂದ ಇರುವರು.

ಗೌರಿ, ಕುಮುದ್ವತಿ, ಸಂಧ್ಯಾರಾತ್ರಿ, ಮನೋಜವ, ಖ್ಯಾತಿ, ಪುಂಡರೀಕಾ, ಎಂಬ ಪುರ್ಣ್ಯಪಯಸ್ವಿನಿಗಳು ಇಲ್ಲಿಯ ನದಿಗಳು. ಇಲ್ಲಿಯ ಜನರು ದ್ರಾಂತರ್ಗನ ಹರಿಯನ್ನು ಆರಾಧಿಸುತ್ತಾರೆ. ಈ ಕ್ರೌಂಚದ್ವೀಪವನ್ನು ಹದಿನಾರು ಲಕ್ಷ ಯೋಜನ ವಿಸ್ತಾರವಾದ ಮೊಸರಿನ ಸಮುದ್ರವು ಎಲ್ಲೆಡೆಯಲ್ಲಿ ವ್ಯಾಪಿಸಿ ಸುತ್ತುವರೆದಿದೆ. ಈ ದಧಿಸಮುದ್ರವು ಕ್ರೌಂಚ ದ್ವೀಪದ ಎರಡು ಪಟ್ಟು, ಅಂದರೆ ಮೂವತ್ತೆರಡು ಲಕ್ಷ ಯೋಜನ ವಿಸ್ತಾರವಾಗಿದೆ. ಮೊಸರಿನ ಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ. ಈ ಮೊಸರಿನ ಸಮುದ್ರವು ಕ್ರೌಂಚ ದ್ವೀಪದ ಎರಡರಷ್ಟು ವಿಸ್ತಾರವಾದ ಕಾಶೀದ್ವೀಪದಿಂದ ಸುತ್ತುವರೆಯಲ್ಪಟ್ಟಿದೆ. ಮಹಾತ್ಮನಾದ ಭವ್ಯ ಚಕ್ರವರ್ತಿ ಅದರ ಒಡೆಯ. ಜಲದಕುಮಾರ,

ಸುಕುಮಾರ, ಮನೀರಕ, ಕುಸುಮೋರದ, ಮೋದಾತಿ, ಮಹಾದ್ರುಮ ಎಂಬ ಮಕ್ಕಳು ಇದ್ದರು. ಇವರ ಹೆಸರಿನಿಂದಲೇ ಆ ರಾಜನು ಆ ದೇಶಗಳನ್ನು ಹೆಸರಿಸಿ ಅಲ್ಲಿ ತನ್ನ ಮಕ್ಕಳಿಗೆ ಪಟ್ಟಾಭಿಷೇಕ ಗೈದನು. ಆ ದ್ವೀಪದಲ್ಲಿ ಸುಕುಮಾರಿ, ನಳಿನಿ, ರೇಣುಕ, ಕುಮಾರಿ. ಇಕ್ಷನದಿ, ಧೇನುಕಾ, ಗಭಸ್ತಿನಿ ಎಂದು ಏಳು ನದಿಗಳು, ಸಾವಿರಾರು ಉಪನದಿಗಳು ತಮ್ಮ ಜುಳು ಜುಳು ಮಂಜುಳ ನಿನಾದದಿಂದ ಮನೋಹರವಾಗಿವೆ. ಇವೆಲ್ಲವು ಸ್ವರ್ಗದಿಂದಲೇ ಭೂಮಿಗೆ ಇಳಿದು ಬಂದದ್ದರಿಂದ ಪುಣ್ಯ "ಪಯಸ್ಸಿನಿ" ಎಂದು ಲೋಕ ಪ್ರಸಿದ್ಧಿ ಅವುಗಳಿಗೆ. ಇಲ್ಲಿಯ ಜನ ಧರ್ಮವರ್ಮರು, ಮಗಮಾಗಧ, ಮಾನನ, ಮಂಗದ ಎಂದು ನಾಲ್ಕು ವರ್ಗದ ಜನ ಚಾತುರ್ವರ್ಣ್ಯದ ಚೌಕಟ್ಟಿನಲ್ಲಿಯೇ ಇದ್ದು ಮುಂದೆ ಅವರೇ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎಂದು ಮಾರ್ಪಡುವರು. ಅಲ್ಲಿ ಇರುವ ನಾಲ್ಕು ಜನರು ಸೂರ್ಯಾಂತರ್ಗತನಾದ ಶ್ರೀಹರಿಯನ್ನು ಆರಾಧಿಸಿದರು. ಈ ಶಾಖ ದ್ವೀಪವನ್ನು ಮೂವತ್ತೆರಡು ಲಕ್ಷ ಯೋಜನ ವಿಸ್ತಾರವಾದ ಕ್ಷೀರಸಾಗರವು ಮಂಡಲಾಕಾರವಾಗಿ ದೊಡ್ಡ ಬಳೆಯಂತೆ ಸುತ್ತುವರೆದಿದೆ.

ಪುಷ್ಕರ ದ್ವೀಪದಲ್ಲಿ ಸವನ ಎಂಬ ಚಕ್ರವರ್ತಿ ಇರುತ್ತಾನೆ. ಅವನಿಗೆ ಮಹಾವೀತ, ಧಾತಕಿ ಎಂಬ ಇಬ್ಬರು ಗಂಡು ಮಕ್ಕಳು. ಅವರ ಹೆಸರಿನ ಮೇಲಿಂದ ಅವರು ಆಳುವ ಎರಡು ದೇಶಗಳಿಗೂ ಮಹಾವೀರವರ್ಷ ಧಾತಕಿವರ್ಷ ಎಂದು ಪ್ರಸಿದ್ಧಿ ಬಂದಿದೆ. ಆ ಸಮಗ್ರ ಪುಷ್ಕರ ದ್ವೀಪದಲ್ಲಿ ಒಂದೇ ಒಂದಾದ ಮಾನಸೋತ್ತರ ಎಂಬ ವರ್ಷ ಪರ್ವತವು ಮಂಡಲಾಕಾರವಾಗಿ ಇದ್ದು ಆ ಎರಡೂ ದೇಶಗಳನ್ನು ವಿಭಾಗಿಸುತ್ತದೆ. ಉಭಯ ದೇಶಗಳ ನಟ್ಟನಡುವೆ ಇರುವ ಈ ಮಾನಸೋತ್ತರವು ಐವತ್ತು ಸಾವಿರ ಯೋಜನ ಅಗಲವಾಗಿದ್ದು ಅಷ್ಟೇ ಎತ್ತರಬಿತ್ತರವಾಗಿ ಆಕಾರದಲ್ಲಿ ಮಂಡಲಾಕಾರವಾಗಿದೆ. ಆದುದರಿಂದಲೇ ಆ ಎರಡೂ ದೇಶಗಳೂ ವಲಯಾಕಾರದಲ್ಲಿಯೇ ಇರುವವು. ಆ ದ್ವೀಪದ ಜನರ ಆಯುಷ್ಯ ಹತ್ತುಸಾವಿರ ವರ್ಷ. ಅಲ್ಲಿ ನೆಲೆಸಿದ ಜನರಿಗೆ ರೋಗವಿಲ್ಲ. ದುಃಖವಿಲ್ಲ. ರಾಗದ್ವೇಷಗಳಿಲ್ಲ. ಮೇಲು, ಕೀಳು, ಭೇದಭಾವ, ಅಹಂಕಾರ, ಮಾತ್ಸರ್ಯ, ಲೋಭ, ಮೋಹ, ಭಯ, ರೋಷ ಮುಂತಾದ ದುರ್ಗುಣಗಳು ಇರುವದಿಲ್ಲ. ಈ ಮಾನಸೋತ್ತರದ ಹೊರಭಾಗದಲ್ಲಿ ಮಹಾವೀರ, ಹೊರಭಾಗದಲ್ಲಿ ಧಾತಕೀ ದೇಶಗಳು ಇರುತ್ತವೆ. ಅಲ್ಲಿ ದೇವತೆಗಳು, ದಾನವರು, ಮಾನವರು ಮುಂತಾದವರು ಸತ್ಯವಂತರಾಗಿಯೇ ಇರುವರು. ಅಲ್ಲಿ ಇರುವ ಮನುಷ್ಯರಿಗೂ ದೇವತೆಗಳಿಗೂ ವೇಷ ಮಾತ್ರ ಒಂದೇ ತರಹ. ಅಲ್ಲಿ ನೆಲೆಸಿದ ಜನರಲ್ಲಿ ವರ್ಣ, ಆಶ್ರಮ ತದುಚಿತವಾದ ಆಚಾರಗಳು ಇರುವದಿಲ್ಲ. ಅದೊಂದು ಭೂಲೋಕದ ಸ್ವರ್ಗ, ಮುಪ್ಪು-ಮರಣಗಳು ಅಲ್ಲಿ ಸುಳಿಯುವದಿಲ್ಲ. ಆ ದ್ವೀಪದಲ್ಲಿ ದೊಡ್ಡದೊಂದು ವಟವೃಕ್ಷವು ಬೆಳೆದು ಆಗಸಕ್ಕೆ ಮುತ್ತಿಡುತ್ತದೆ. ಅಲ್ಲಿಯ ಸುರಾಸುರರಿಂದ ಪೂಜಿಸಲ್ಪಡುತ್ತಾನೆ ಪರಬ್ರಹ್ಮ ಪರಮಾತ್ಮ. ಆ ಪುಷ್ಕರ ದ್ವೀಪವನ್ನು ಅದರಷ್ಟೇ ಎಂದರೆ ಅರವತ್ನಾಲಕು ಲಕ್ಷ, ಯೋಜನ ವಿಸ್ತಾರವಾದ ಸಿಹಿ ನೀರಿನ ಸಮುದ್ರವು ಮಂಡಲಾಕಾರವಾಗಿ ಸುತ್ತುವರೆದಿದೆ. ಹೀಗೆ ಹಿಂದೆ ಹೇಳಿದ ಏಳು ದ್ವೀಪಗಳೂ ಏಳು ಸಮುದ್ರಗಳಿಂದ ಆವರಿಸಲ್ಪಟ್ಟಿವೆ. ಹಿಂದಿನ ದ್ವೀಪಸಾಗರಗಳೆಲ್ಲವೂ ಒಂದೇ ರೀತಿಯ ವಿಸ್ತಾರವುಳ್ಳವುಗಳು. ಅವುಗಳ ಮುಂದಿನ ದ್ವೀಪಸಾಗರಗಳೂ ಹಿಂದಿನ ದ್ವೀಪಸಾಗರಗಳಿಗಿಂತ ಎರಡು ಪಟ್ಟು ಅಧಿಕ ವಿಸ್ತೃತಿಯನ್ನು ಹೊಂದಿರುತ್ತವೆ. ಒಂದು

ಪಾತ್ರೆಯಲ್ಲಿ ನೀರನ್ನು ಇರಿಸಿ ಒಲೆಯ ಮೇಲೆ ಇಟ್ಟು ಕೆಳಗೆ ಉರಿ ಹಾಕಿದರೆ ನೀರು ಕಾದು ಮೇಲೆ ಉಕ್ಕಿ ಬರುವಂತೆ ಸಮುದ್ರವೂ ಸಹ ಚಂದ್ರನು ಉದಯ ಹೊಂದಿದಾಗ ಉಕ್ಕಿ ಮಿಕ್ಕಿ ಭರತಿ ಬರುವದು. ಆದರೆ ನೀರಿನ ಪ್ರಮಾಣವು ಮಾತ್ರ ಹೆಚ್ಚು ಆಗುವುದಿಲ್ಲ. ಶುಕ್ಲಪಕ್ಷ ಮತ್ತು ಕೃಷ್ಣಪಕ್ಷಗಳಲ್ಲಿ ಚಂದ್ರ ಉದಯಿಸುವಾಗ ಮತ್ತು ಅಸ್ತ ಹೊಂದುವಾಗ ಸಮುದ್ರವು ಉಕ್ಕಿ ಮೊರೆದು ಮತ್ತೆ ಕೆಳಗೆ ಇಳಿಯುವದು. ಸಾಗರವು ಉಕ್ಕುವ ಕಾಲದಲ್ಲಿ ಅದರ ನೀರು ಐದುನೂರು ಅಂಗುಲ ಮಾತ್ರ ಮೇಲೇರಿ ಕೊನೆಗೆ ಕೆಳಗೆ ಇಳಿಯುತ್ತದೆ. ಈ ಪುಷ್ಕರ ದ್ವೀಪದಲ್ಲಿ ಷಡ್ರಸಗಳಿಂದ ಕೂಡಿದ ರುಚಿರುಚಿಯಾದ ಆಹಾರ ತಾನಾಗಿಯೇ ದೊರೆಯುವದು. ಅದಕ್ಕಾಗಿ ಯಾರೂ ಪ್ರಯತ್ನ ಪಡುವದಿಲ್ಲ. ಅಯಾಚಿತವಾಗಿ ಉತ್ಪನವಾದ ಮತ್ತು ಅಪ್ರಯತ್ನ ಲಬ್ಧವಾದ ಆ ಸ್ವಾದಿಷ್ಠ ಆಹಾರವನ್ನು ಅಲ್ಲಿಯ ಪ್ರಜೆಗಳು ಆನಂದದಿಂದ ಉಂಡು ಸುಖದಿಂದ ಇರುತ್ತಾರೆ. ಎಲ್ಲ ಲೋಕಗಳು ಇರುವದೂ ಆ ಸಿಹಿ ನೀರಿನ ಸಮುದ್ರದವರೆಗೆ ಮಾತ್ರ. ಅದರ ಮುಂದೆ ಪುಷ್ಕರ ದ್ವೀಪದ ಎರಡರಷ್ಟು ಪ್ರಮಾಣದಲ್ಲಿ ಅರ್ಥಾತ್ ಒಂದನೂರಾಇಪ್ಪತ್ತೆಂಟುಲಕ್ಷ ಯೋಜನ ವಿಸ್ತಾರವಾದ ಸುವರ್ಣಮಯವಾದ ಭೂಮಿ ಇರುವದು. ಅಲ್ಲಿ ಯಾವ ಜನರೂ, ಪ್ರಾಣಿಗಳೂ ನಮ್ಮ ಕಣ್ಣಿಗೆ ಬೀಳುವದಿಲ್ಲ. ಅದರ ಮುಂದೆಯೇ ಲೋಕಾಲೋಕಪರ್ವತ. ಹತ್ತು ಸಾವಿರ ಯೋಜನ ಎತ್ತರ ಮತ್ತು ಹತ್ತು ಸಾವಿರ ಯೋಜನ ಅಗಲವುಳ್ಳದ್ದು ಅದಾಗಿದೆ. ಆ ಲೋಕಾಲೋಕಗಿರಿಯನ್ನು ಅದರ ಅರ್ಧ ಭಾಗದಿಂದ ಕತ್ತಲೆ ವ್ಯಾಪಿಸಿದೆ. ಈ ಕತ್ತಲೆಗೆ ಆವರಕವಾಗಿ ಬ್ರಹ್ಮಾಂಡ ಕಟಾಹವಿದೆ, ಎಂದರೆ ಆ ಪರ್ವತದ ಮುಂದಿನ ಭಾಗವೆಲ್ಲ ಕತ್ತಲೆಮಯವಾಗಿದೆ. ಏಳು ದ್ವೀಪಗಳು, ಪರ್ವತಗಳು, ಅಂಡಕಟಾಹಗಳು ಇವುಗಳನ್ನೊಡಗೊಂಡ ಭೂಮಿಯು ಐವತ್ತು ಕೋಟಿ ಯೋಜನ ವಿಸ್ತೃತವಾಗಿರುವದು. ಮುನಿಗಳೆ, ಈ ಭೂಮಿಯಲ್ಲಿಯೇ ಸಕಲ ಪ್ರಾಣಿಗಳು, ಜಡವಸ್ತುಗಳೂ ಮೈದಳೆಯುವವು. ಪಂಚಭೂತಗಳಲ್ಲಿ ಭೂಮಿಯು ಮುಖ್ಯವಾದುದು. ಎಲ್ಲ ಭೂತಗಳಿಗಿಂತಲೂ ಈ ಭೂಮಿಯಲ್ಲಿ ಗುಣಗಳು (ರೂಪ, ರಸ, ಗಂಧ, ಶಬ್ದ, ಸ್ಪರ್ಶ) ಹೆಚ್ಚಾಗಿ ಇರುವವು ಸಕಲ ಚೇತನಾಚೇತನಗಳಿಗೆ ಈ ಭೂಮಿಯೇ ಆಶ್ರಯವಾಗಿರುವದು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಏಳನೆಯ ಅಧ್ಯಾಯ ಮುಗಿದುದು*

—○—

## ಪಾತಾಲ ಪ್ರಮಾಣವರ್ಣನ

**ಅಧ್ಯಾಯ - ೮**

**ಸೂತ:-** ಮುನಿಗಳೆ, ಹಿಂದೆ ಹೇಳಿದುದು ಭೂಮಿಯ ಅಗಲವು, ಭೂಮಿಯ ಎತ್ತರ ಎಪ್ಪತ್ತು ಸಾವಿರ ಯೋಜನ, ಪಾತಾಳದಲ್ಲಿ ಏಳು ಲೋಕಗಳು ಇರುವವು. ಅತಲ, ವಿತಲ, ಸುತಲ, ರಸಾತಲ, ನಿತಲ, ತಲಾತಲ, ಪಾತಾಳ ಎಂಬುದಾಗಿ ಆ ಸಪ್ತಲೋಕಗಳಿಗೆ ಹೆಸರು. ಒಂದೊಂದು ಲೋಕದ ವಿಸ್ತಾರ ಹತ್ತು ಸಾವಿರ ಯೋಜನಗಳು ಈ ಲೋಕಗಳಲ್ಲಿ ಬಗೆ ಬಗೆಯ ಭೂಮಿಗಳಿವೆ. ಕೃಷ್ಣಾ, ಶುಕ್ಲಾ, ಅರುಣಾ, ಪೀತಾ, ಶರ್ಕರಾ, ಶೈಲಾ, ಕಾಂಚನೀ ಎಂದು ಒಂದೊಂದಕ್ಕೆ ಹೆಸರಿದೆ. ಈ ವರ್ಣಮಯ ಭೂಭಾಗಗಳಲ್ಲಿ ದೊಡ್ಡ ದೊಡ್ಡ ಪ್ರಾಸಾದಗಳು ಇವೆ. ಈ ಪಾತಾಳದಲ್ಲಿ ದೈತ್ಯರು, ದಾನವರು, ದೊಡ್ಡ ದೊಡ್ಡ ನಾಗಗಳು, ಅವುಗಳ ಬಂಧುಗಳೂ ಇರುವರು.

ಒಂದು ಸಲ ನಾರದ ಮಹರ್ಷಿಯು ಪಾತಾಲವನ್ನೆಲ್ಲ ಸಂಚರಿಸಿ ನಂತರ ದೇವತೆಗಳ ನಾಡಿಗೆ ಬಂದ. ದೇವತೆಗಳ ವಾಸಸ್ಥಾನವಾದ ಸ್ವರ್ಗಕ್ಕಿಂತಲೂ ಪಾತಾಳಲೋಕ ರಮ್ಯವಾಗಿದೆ ಎಂದು ದೇವತೆಗಳ ಮುಂದೆ ಪಾತಾಳ ಲೋಕವನ್ನು ಹೊಗಳಿ ಹಾಡಿದ. ಪಾತಾಳ ಲೋಕದಲ್ಲಿ ಭಾರೀ ಬೆಳಕನ್ನು ಬೀರುವ ನಾಗರತ್ನಗಳು, ಅನರ್ಘ್ಯಮಣಿಗಳೂ ಇರುವವು. ಈ ರತ್ನಗಳಿಗೆ ಸಮನಾದ ರತ್ನಗಳು ದೇವಲೋಕದಲ್ಲೇನು, ಯಾವ ಲೋಕದಲ್ಲೂ ಇಲ್ಲ. ಪಾತಾಳ ಲೋಕದಲ್ಲಿ ಸುಂದರಿಯರಾದ ಕನ್ಯೆಯರು ಅನೇಕರು ಇರುವರು. ಸರ್ವಸಂಗ ಪರಿತ್ಯಾಗ ಮಾಡಿದ ವೀತರಾಗ ಪೂತಾತ್ಮರೂ ಸಹ ಅಲ್ಲಿ ನೆಲೆಸಬೇಕು ಎಂದು ಬಯಸುವಷ್ಟು ನಯನ ಮನೋಹರವಾಗಿದೆ ಆ ಪಾತಾಳ ಲೋಕ. ಹಗಲಿನ ಹೆಗಲು ಏರಿದ ರವಿ ತನ್ನ ಕಿರಣಗಳಿಂದ ಅಲ್ಲಿ ಪ್ರಕಾಶವನ್ನು ಬೀರಿದರೂ ಉರಿಬಿಸಿಲು ಮಾತ್ರ ಅಲ್ಲಿ ಯಾವಾಗಲೂ ಇರುವದಿಲ್ಲ. ಚಂದ್ರನು ಅಲ್ಲಿ ರಮಣೀಯವಾದ ರಾತ್ರಿ ಕಾಲದಲ್ಲಿ ಬೆಳದಿಂಗಳನ್ನು ಬೀರುತ್ತಾನೆ. ಆದರೆ ಚಂದ್ರ ಜ್ಯೋತ್ಸ್ನೆಯಿಂದ ಶೀತಬಾಧೆ ಎಂದೂ ಆಗುವದಿಲ್ಲ. ಆ ಅಧೋ ಲೋಕದಲ್ಲಿ ಇರುವವರು ದಾನವರು ಮಾತ್ರ. ಅವರೆಲ್ಲರಿಗೂ ಅಲ್ಲಿ ಯಥೇಚ್ಛ ಭೋಜನ. ರುಚಿರುಚಿಯಾದ ತಿಂಡಿ ತೀರ್ಥಗಳು. ಸ್ವಚ್ಛಂದ ಸುರಾಪಾನ. ಅಲ್ಲಿ ಇರುವ ದಾನವರಿಗೆ ಜೊತೆಗಾರರು ಎಂದರೆ ಸರ್ಪಗಳು. ಅಲ್ಲಿಯ ವನೋಪವನಗಳೆಲ್ಲವೂ ನಂದನವನದಂತೆ ಸುಂದರವಾಗಿ ಇರುತ್ತವೆ. ನದಿಗಳು ನಿರ್ಮಲ ನೀರಿನಿಂದ ಮನೋಹರವಾಗಿ ಕಂಗೊಳಿಸುತ್ತವೆ. ಅಲ್ಲಿಯ ಸರೋವರಗಳ ತುಂಬ ತಾವರೆಗಳು ಅರಳಿರುತ್ತವೆ. ಕೋಗಿಲೆಗಳ ಇಂಚರ ಯಾವಾಗಲೂ ಇಂಪಾಗಿ ಕೇಳಿಬರುವದು. ಬೆಲೆಬಾಳುವ ಬಟ್ಟೆ, ಪೀತಾಂಬರ, ಬಂಗಾರದ ಉಡಿಗೆ ತೊಡಿಗೆಗಳಿಂದ ಎಲ್ಲರೂ ಶೃಂಗಾರಿತರಾಗಿ ಮೈಗೆಲ್ಲ ಸುಗಂಧವನ್ನು ಪೂಸಿಕೊಂಡು ಮಿಂಚಿನ ಮೂರ್ತಿಗಳಂತೆ ಸಂಚರಿಸುತ್ತಾರೆ. ವೀಣೆ, ವೇಣು, ತಾಳ, ತಂಬೂರಿ, ಮದ್ದಲೆ, ಮೃದಂಗ ಮುಂತಾದ ವಾದ್ಯಗಳ ಮಧುರನಾದ ತರಂಗಗಳು ಅಲ್ಲಿ ಯಾವಾಗಲೂ ಶ್ರಾವಕರ ಅಂತರಂಗದಲ್ಲಿ ಸಂತಸದ ಊರ್ಮಿಗಳನ್ನು ಉಂಟುಮಾಡುತ್ತವೆ. ಈ ಪಾತಾಳದಲ್ಲಿ ದಾನವ ದೈತ್ಯರುಗಳ ದೊಡ್ಡ ಬಳಗಗಳು ದೊಡ್ಡ ದೊಡ್ಡ ನಾಗನಾಯಕರ ಸಹಸ್ರಾರು ಬಂಧು ವೃಂದಗಳು ಆನಂದದಿಂದ ವಾಸಮಾಡುವರು.

ಈ ಏಳು ಪಾತಾಳ ಲೋಕಗಳ ಕೆಳ ಭಾಗಗಳಲ್ಲಿ ವಿಷ್ಣುವಿನ ತಮೋಗುಣದ ಅಂಶನಾದ ಆದಿಶೇಷನು ಇರುತ್ತಾನೆ. ಅವನನ್ನು ಅನಂತ ಎಂದು ಎಲ್ಲರೂ ಸ್ತುತಿಸುತ್ತಾರೆ. ದೇವತೆಗಳೂ, ದೇವರ್ಷಿಗಳೂ ಅವನನ್ನು ಯಾವಾಗಲೂ ಭಜನೆ ಮಾಡುತ್ತಲೇ ಇರುತ್ತಾರೆ. ಆ ಅನಂತನಿಗೆ ಸಾವಿರ ಹೆಡೆಗಳು, ಅವನ ತಲೆಯ ಮೇಲೆ ಸ್ವಸ್ತಿಕ ಎಂಬ ಆಭರಣ ಇರುತ್ತದೆ. ಆ ಆದಿಶೇಷನು ತನ್ನ ಸಹಸ್ರ ಫಣಾಮಂಡಲಗಳಲ್ಲಿ ಮಿಂಚುವ ಅನರ್ಘ್ಯವಾದ ರತ್ನಗಳ ಪ್ರಭಾಪುಂಜದಿಂದ ದಶದಿಕ್ಕುಗಳನ್ನೂ ಬೆಳಗುವನು, ತನ್ನ ಉಕ್ಕುವ ಹಾಗೂ ಮಿಕ್ಕುವ ಪ್ರಕೃಷ್ಟ ಪ್ರಕಾಶದಿಂದ ದೈತ್ಯರ ಕಣ್ಣು ಕುಕ್ಕಿ ಅವರನ್ನು ನಿರ್ವೀರ್ಯರನ್ನಾಗಿಸುತ್ತಾನೆ. ನಿರಂತರವಾಗಿ ಹೊಳೆಯುತ್ತಲಿರುವ ಒಂದು ಕುಂಡಲ, ಕಿರೀಟ, ಹಾರ ಇವುಗಳನ್ನು ಧರಿಸಿದ ಆ ಆದಿಶೇಷನು ಅಗ್ನಿ ಗೋಲಕದಂತೆ ಇರುವ ತನ್ನ ಕಣ್ಣುಗಳನ್ನು ಮಿಂಚಿನಂತೆ ಪಿಳಿಕಿಸುತ್ತ ಬೆಂಕಿಯ ಬೆಟ್ಟದಂತೆ ದೇದಿಪ್ಯಮಾನವಾಗಿ ತೋರುತ್ತಾನೆ. ಕಪ್ಪು ವಸ್ತ್ರವನ್ನು ಧರಿಸಿ ಶುಭ್ರವಾದ ಹಾರಗಳನ್ನು ಅಲಂಕಾರಕ್ಕಾಗಿ ಧಾರಣೆ ಮಾಡಿದ ಆದಿಶೇಷನು ಆಕಾಶದಿಂದ ಬೀಳುವ ದೇವಗಂಗೆಯನ್ನು ಧರಿಸಿದ ಕೈಲಾಸ ಪರ್ವತದಂತೆ ತೋರುತ್ತಾನೆ. ಒನಕೆ,

ನೇಗಿಲುಗಳೇ ಅವನ ಆಯುಧ. ಮಧ್ವಪಾನದಿಂದ ಅರೆಮುಚ್ಚಿದ ಲೋಚನವುಳ್ಳ ಆ ಆದಿಶೇಷನು ತನ್ನದೇ ಆದ ವಿಶಿಷ್ಟ ಕಾಂತಿಯಿಂದ ಕಂಗೊಳಿಸುತ್ತಾನೆ. ಪ್ರಳಯ ಕಾಲದಲ್ಲಿ ಈ ಆದಿಶೇಷನ ಮುಖಗಳಿಂದ ವಿಷಾಗ್ನಿಯ ಜ್ವಾಲೆಗಳನ್ನು ಎಲ್ಲೆಡೆಗೆ ಹರಡಿ ಸಂಕರ್ಷಣರೂಪಿಯಾದ ವಿಷ್ಣುವು ಮೂರುಲೋಕಗಳನ್ನು ಸಂಹರಿಸುತ್ತಾನೆ. ಇಂಥ ಮಹಾಮಹಿಮೋಪೇತನಾದ ಈ ಆದಿಶೇಷನು ಎಲ್ಲ ಲೋಕಗಳ ಕೆಳಗೆ ತಾನು ನಿಂತು ಶಿಖರದಂತೆ ಇರುವ ಭೂಮಂಡಲವನ್ನೆಲ್ಲ ತನ್ನ ಸಾವಿರ ಹೆಡೆಗಳಲ್ಲಿ ಹೊತ್ತಿರುತ್ತಾನೆ. ಈ ಭೂಮಿಯೆಲ್ಲವೂ ಆದಿಶೇಷನ ಫಣಾಮಂಡಲದ ನಾಗರತ್ನ ಪ್ರಭೆಯಿಂದ ಕೆಂಪುವರ್ಣದ್ದಾಗಿ ಅವನ ಶಿರೋಮಾಲೆಗಳ ಮೇಲೆ ಸುಂದರವಾದ ಒಂದು ಹೂವಿನ ಸರದಂತೆ ತೋರುವದು. ಈ ಅನಂತನು ಮದಮತ್ತಲೋಚನನಾಗಿ ಎಂದಾದರೂ ಒಂದು ಸಲ ಕೋಪದಿಂದ ವಿಜೃಂಭಿಸಿದಾಗ ಬೆಟ್ಟ-ಬಯಲು ಭಾನು, ಸಾನು, ಕಾನು, ದೇಶ, ಪರ್ವತ ಗ್ರಾಮಸ್ತೋಮ ಸಹಿತವಾಗಿ ಸಮಗ್ರ ಭೂತಳವೆಲ್ಲವೂ ಭೂಕಂಪದಿಂದ ನಡುಗಿ ಹೋಗುವದು. ದೇವಗಂಧರ್ವ, ನರ, ನಾಗ, ಸಿದ್ಧ, ಕಿನ್ನರರು ಎಲ್ಲರೂ ಸೇರಿ ಅವನ ಗುಣಗಳನ್ನು ಹೊಗಳುತ್ತಿದ್ದರೂ ಅವುಗಳ ಅಂತ ಪಾರವನ್ನೂ ತಿಳಿಯದೇ ನಿಂತಿರುತ್ತಾರೆ. ಆದುದರಿಂದಲೇ ಅವನಿಗೆ ಅನಂತ ಎಂದು ಹೆಸರು. ಈ ಅನಂತನಿಗೆ ಪಾತಾಳಲೋಕದ ಅಪ್ಸರೆಯರಂತಿದ್ದ ನಾಗಕನ್ಯೆಯರು ಮೈಗೆ ಸುಗಂಧ ಪೂಸಿ ತಮ್ಮ ಕಣ್ಣಿನ ಕದಲಾರತಿಯೊಂದಿಗೆ ಎಂದಿಗೂ ಆರದ ಮಣಿ ದೀಪಗಳ ಮುತ್ತಿನಾರತಿಯನ್ನು ಎತ್ತಿ ಬೆಳಗಿದರು. ಈ ಆದಿಶೇಷನನ್ನು ಆರಾಧಿಸಿ ಹಿಂದೆ ಮಹರ್ಷಿಯಾದ ಗರ್ಗಮುನಿಯು ಜ್ಯೋತಿಷ್ಯಶಾಸ್ತ್ರವನ್ನೂ, ಶಕುನ ಶಾಸ್ತ್ರವನ್ನೂ ಅಧ್ಯಕ್ಷನ ಮಾಡಿ ಪಾಂಡಿತ್ಯವನ್ನು ಪಡೆದ. ದೇವದಾನವ, ದೈತ್ಯಮಾನವ, ನಾಗ, ಯಕ್ಷ, ಕಿನ್ನರ, ಕಿಂಪುರುಷರಿಂದ ಕೂಡಿದ ಎಲ್ಲ ಲೋಕಗಳನ್ನೂ, ಭುವನ ಶ್ರೇಣಿಯನ್ನೂ ಸಮಗ್ರವಾದ ಜೀವಜಡಾತ್ಮವಾದ ಪ್ರಪಂಚವನ್ನೂ ಈ ಆದಿಶೇಷನು ಲೀಲಾಜಾಲವಾಗಿ ಧರಿಸಿ ನಿಂತಿದ್ದಾನೆ.

## ಪಾತಾಲನರಕ ಕೀರ್ತನ

**ಸೂತ:**- ವಿಪ್ರೋತ್ತಮರೆ, ಈಗ ನಾನು ಪಾಪಿಗಳನ್ನು ಘೋರ ಶಿಕ್ಷೆಗೆ ಒಳಪಡಿಸುವ ರೌರವ ಮುಂತಾದ ನರಕಗಳನ್ನು ವರ್ಣಿಸುತ್ತೇನೆ ಕೇಳಿರಿ. ರೌರವ, ಶೌಕರ, ವಿಶಸನ, ರೋಧ, ತಾನ, ಮಹಾಜ್ವಾಲ, ಮಹಾಲೋಭ, ವಿಮೋಹನ, ತಪ್ತಕುಡ್ಯ, ರುಜಿರಾಂಧ, ವಸಾತಪ್ತ ಕ್ರಿಮೀಶ, ಕ್ರಿಮಿಭೋಜನ, ಅಸಿಪತ್ರವನ, ಕೃಷ್ಣಲಾಲಾಭಕ್ಷ, ಪೂಲವ, ಪಾಪ, ವಹ್ನಿ, ಜ್ವಾಲ, ಅಧಃಶಿರ, ಸಂದಂಶ, ಕೃಷ್ಣಸೂತ್ರ, ತಮಸ್ಸು, ಅವೀಚಿ, ಶ್ವಭೋಜನ, ಅಪ್ರತಿಷ್ಠ, ಮಾವೀಚಿ, ಶಸ್ತ್ರದರ್ಶಿ, ಅಗ್ನಿದರ್ಶಿ, ವಿಷದರ್ಶಿ ಮುಂತಾಗಿ ನಾನಾ ಬಗೆಯ ನರಕಗಳು ಯಮನ ರಾಜ್ಯದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಇರುತ್ತವೆ. ಈ ನರಕ ಲೋಕಗಳಲ್ಲಿ ಬಿದ್ದು ಬವಣೆಪಡುವವರು ದುಸ್ಸಹವಾದ ದಾರುಣ ದುಃಖಗಳಲ್ಲಿ ಬೀಳುವವರು ಮಹಾಪಾಪಿಗಳು ಮಾತ್ರ. ಸುಳ್ಳು ಹೇಳುವವರು ಸುಳ್ಳು ಸಾಕ್ಷಿ ನುಡಿಯು ವವರು, ಪಕ್ಷಪಾತದಿಂದ ಅನ್ಯಾಯ ಮಾಡಿ ಮೋಸ ಗೈಯುವವರು, ರೌರವ ನರಕದಲ್ಲಿ ಬೀಳುವರು. ಇದಲ್ಲದೇ ಗರ್ಭಪಾತ ಮಾಡಿಸಿದವರು, ಪುರಗ್ರಾಮಗಳನ್ನು ಹಾಳು ಮಾಡಿದವರು, ಗೋಹತ್ಯೆ ಗೈದವರು, ಕತ್ತುಹಿಸುಕಿ ಮನುಷ್ಯರನ್ನು ಕೊಂದವರು ಇದೇ ರೌರವ ನರಕಕ್ಕೆ ಹೋಗುವರು. ಸೆರೆ ಕುಡಿಯುವವರು, ಬ್ರಾಹ್ಮಣರನ್ನು ಕೊಂದವರು, ಚಿನ್ನ

ಕದ್ದವರು ಹೋಗುವದು ಶೂಕರ ಎಂಬ ನರಕಕ್ಕೆ. ಇಂಥ ಪಾಪಿಗಳ ಸಂಬಂಧ ಬೆಳೆಸಿದವರು ಸಹ ಇದೇ ನರಕಕ್ಕೇ ದುಃಖ ಅನುಭವಿಸಲು ಬರುವರು. ಕ್ಷತ್ರಿಯ, ವೈಶ್ಯರನ್ನು ಅನ್ಯಾಯವಾಗಿ ಸಂಹರಿಸಿದವರು, ಗುರುದಾರದರ್ಪಣ ಮಾಡಿದವರು, ಸಹೋದರಿಯಲ್ಲಿ ಸಂಭೋಗ ಮಾಡಿದವರೂ, ರಾಜಭಟರನ್ನು ಕೊಂದವರೂ, ತಪ್ತಕುಂಭ ಎಂಬ ನರಕವನ್ನು ಹೊಂದಿ ಕಾಯಿಸಿದ ಕಬ್ಬಿಣದ ಕಟಾಹದಲ್ಲಿ ಕುದಿಯುವ ಎಣ್ಣೆಯಲ್ಲಿ ಬೇಯಬೇಕಾಗುತ್ತದೆ. ಮದ್ಯ ಮಾರಾಟ ಮಾಡುವವರು, ವಿಶ್ವಾಸ ದ್ರೋಹಗೈದವರು, ತಪ್ತ ಲೋಹವೆಂಬ ನರಕ ಶಿಕ್ಷೆಯನ್ನು ಅನುಭವಿಸುವರು. ಮಗಳು, ಸೊಸೆಯಂದಿರ ಜೊತೆಗೆ ಸರಸ ಆಡುವವರು ಮಹಾಜ್ವಾಲ ಎಂಬ ನರಕದಲ್ಲಿ ಘೋರ ದುಃಖವನ್ನು ಅನುಭವಿಸುವರು.

ಗುರುಗಳನ್ನು ಧಿಕ್ಕರಿಸುವವರು, ವೇದ ನಿಂದೆ ಮಾಡುವವರು. ಸಂಬಳ ತೆಗೆದು ಕೊಂಡು ಪಾಠ ಹೇಳುವವರು. ಶಟಲ ಎಂಬ ನರಕ ಹೊಂದುವರು. ಕಳವು, ಕೊಲೆ, ಸುಲಿಗೆ ಮಾಡುವವರು, ವೇದಮಾರ್ಗ ನಿಂದನೆ ಮಾಡುವವರು ವಿಮೋಹ ಎಂಬ ನರಕದಲ್ಲಿ ಬೀಳುವರು. ದೇವ ಬ್ರಾಹ್ಮಣ ನಿಂದಕರು, ಪಿತೃದ್ವೇಷಿಗಳು ಕ್ರಿಮಿಭೋಜ್ಯ ಎಂಬ ನರಕವನ್ನು ಪಡೆಯುವರು. ಶ್ಯೇನಯಾಗ ಮುಂತಾದ ಕೆಟ್ಟ ಯಾಗಗಳನ್ನು ಮಾಡುವವರು ಕ್ರಿಮೀಶ ನರಕದಲ್ಲಿ ಹೊರಳಾಡುವರು. ಪಿತೃಗಳಿಗೂ ದೇವತೆಗಳಿಗೂ ಅತಿಥಿಗಳಿಗೂ ನಿವೇದಿಸುವ ಮೊದಲೇ ಊಟ ಮಾಡುವ ಸ್ವಾರ್ಥಿ ಮನುಷ್ಯ ಲಾಲಾಭಕ್ಷ ಎಂಬ ನರಕದಲ್ಲಿ ಬೀಳುವರು. ಲಾಲಾಭಕ್ಷ ಎಂಬ ಈ ನರಕದಲ್ಲಿ ನರಕ ಭಾಜನನು "ಲಾಲಾ" ಎಂದರೆ ಜೊಲ್ಲು ರಸವನ್ನು ಮಾತ್ರ ಸೇವಿಸಿ ಅಸಹ್ಯವೆನಿಸುವ ಬದುಕನ್ನು ಬದುಕಬೇಕಾಗುವದು. ಹಿಂಸಾಚಾರಿಯು ಮತ್ತು ಅವನನ್ನು-ಶಸ್ತ್ರ ಪೂರೈಕೆಯೇ ಮೊದಲಾದವುಗಳಿಂದ ಪ್ರಚೋದಿಸುವವ ವಿಶಸನ ಎಂಬ ನರಕವನ್ನು ಹೊಂದುತ್ತಾನೆ. ದುರ್ದಾನ ಸ್ವೀಕಾರ ಮಾಡುವವ, ಯಾಗಾಧಿಕಾರ ಇಲ್ಲದವರಿಗೆ ಯಾಗ ಮಾಡಿಸುವವ, ಮಿಥ್ಯಾ ಭವಿಷ್ಯವಾದಿ ಇವರನ್ನು ಅಧೋಮುಖ ಎಂಬ ನರಕಕ್ಕೆ ಹಾಕುವರು. ಈ ನರಕದಲ್ಲಿ ಅವರನ್ನು ತಲೆಕೆಳಗು, ಕಾಲುಮೇಲು ಮಾಡಿ ನೇತು ಹಾಕುತ್ತಾರೆ. ಜೀವನದಲ್ಲಿ ಒಂದು ಬಾರಿಯೂ ಅನ್ನದಾನ ಮಾಡದೇ, ಸ್ವಯಂ ಸಮೃದ್ಧ ಮೃಷ್ಟಾನ್ನವನ್ನು ಭುಂಜಿಸುವವ ಕ್ರಿಮಿಪೂಯ ಎಂಬ ನರಕ ಭಾಜನನಾಗುವನು. "ಕ್ರಿಮಿಪೂಯ" ಎಂದರೆ ಕ್ರಿಮಿಗಳಿಂದ ತುಂಬಿರುವ ಕೀವುಳ್ಳ ಪ್ರದೇಶ ಎಂದರ್ಥ.

ಬೆಕ್ಕು, ನಾಯಿ, ಆಡು, ಹಂದಿ, ಹಕ್ಕಿ, ಇವುಗಳನ್ನು ಉಪಜೀವನಕ್ಕಾಗಿ ಸಾಕುವ ಬ್ರಾಹ್ಮಣನು ಈ 'ಕ್ರಿಮಿಪೂಯ' ಎಂಬ ನರಕದಲ್ಲೇ ಶಿಕ್ಷೆಗೆ ಒಳಗಾಗುವನು. ನಾಟ್ಯ, ಅಭಿನಯ ಮುಂತಾದ ಕಲೆಗಳಿಂದ ದುಸ್ವಾರ್ಥವನ್ನು ಸಾಧಿಸುವವ, ಅಡುಗೆ ಪಾತ್ರೆಯಲ್ಲಿಯೇ ಊಟ ಮಾಡುವವ, ಇನ್ನೊಬ್ಬರಿಗೆ ವಿಷಾನ್ನ ಇಕ್ಕುವವ, ಚಾಡಿಕೋರ, ಎಮ್ಮೆ, ಕೋಣಗಳ ವಿಕ್ರಯದಿಂದ ಲಾಭ ಪಡೆದು ಐಷಾರಾಮಿ ಜೀವನ ನಡೆಸುವವ, ಅಮವಾಸ್ಯೆ, ಹಗಲು ಹೊತ್ತು ಮತ್ತು ಪರ್ವಕಾಲಗಳಲ್ಲಿ ಸ್ತ್ರೀಸಂಭೋಗಮಾಡುವ ಬ್ರಾಹ್ಮಣ, ಪರರ ಮನೆಗೆ ಬೆಂಕಿ ಇಡುವವ, ಮಿತ್ರದ್ರೋಹಿ, ಪಕ್ಷಿಗಳನ್ನು ಸುಟ್ಟು ತಿನ್ನುವವ, ಸೆರೆ ಮಾಡುವವ, ಈ ಇಷ್ಟು ಜನರು ರುಧಿರಾಂಧ (ರಕ್ತಮಯ) ಎಂಬ ನರಕಕ್ಕೆ ಹೋಗುವರು. ಜೇನು ಕೀಳುವವ, ಗ್ರಾಮನಾಶ ಮಾಡುವವ ಈ ಇಬ್ಬರು ವೈತರಣೀ ನದಿಯನ್ನು ಹೊಂದುವರು. ವೀರ್ಯಪಾನ ಮತ್ತು ರಕ್ತಪಾನ ಮಾಡುವವರು, ವೇದಗಳಿಗೆ ಸಲ್ಲದ ಅರ್ಥವನ್ನು ಪ್ರಸಿದ್ಧಿ ಪಡಿಸುವವ, ಅನಾಚಾರಿ, ಶ್ವಪಚನಂತೆ ಜೀವಿಸುವವ, ಇನ್ನೊಬ್ಬರನ್ನು ಮೋಸಮಾಡಿ ಬದುಕುವವ, ತನ್ನ

ಅವಶ್ಯಕತೆಗಿಂತ ಹೆಚ್ಚು ವನವನ್ನು ಕಡಿಯುವವ, ಇಷ್ಟೆಲ್ಲ ಜನರು ಅಸಿಪತ್ರ ಎಂಬ ನರಕವನ್ನು ಅನುಭವಿಸುವವರು. ಮೋಜಿಗಾಗಿ ಮೃಗಗಳನ್ನು ಬೇಟೆಯಾಡುವವ, ಜನರು ಮಲಗಿರುವಾಗ ಮನೆಗೆ ಬೆಂಕಿಯಿಡುವವ, ಇವರೆಲ್ಲ ವಹ್ನಿಜ್ವಾಲ ಎಂಬ ಬೆಂಕಿಗೆ ಬೀಳುವರು.

ವ್ರತವನ್ನು ನಾಶ ಮಾಡುವವ, ಸ್ವಧರ್ಮವನ್ನು ತ್ಯಜಿಸಿದವ, ಇವರಿರ್ವರೂ ಸಂದಂಶ ಎಂಬ ನರಕ ಭಾಗಿಗಳಾಗುವರು. ಹಗಲು ನಿದ್ರೆಮಾಡಿ ಆಲಸ್ಯದಿಂದ ಕಾಲಯಾಪನೆ ಮಾಡಿದವ, ಬ್ರಹ್ಮಚರ್ಯ ನಷ್ಟವಾದ ವೇದಾಧ್ಯಾಯೀ, ಸ್ವಪುತ್ರರಿಂದ ವೇದವನ್ನು ಕಲಿಯುವ ಪಿತೃಗಳೂ, ಶ್ವಭೋಜನ ಎಂಬ ನರಕದಲ್ಲಿ ಸಂಕಟಪಡುವರು. ಈ ಮೇಲೆ ಹೇಳಿದ ನರಕಗಳಲ್ಲದೆ ಇನ್ನೂ ಅನೇಕಾನೇಕ ನರಕಗಳಿವೆ. ಹೇಳಿದ ಪಾಪಗಳಲ್ಲದೇ ಇನ್ನೂ ಅನೇಕ ಬಗೆಯ ಪಾಪಾಚರಣೆಗಳೂ ಇರುವವು. ಆಯಾ ಪಾಪಗಳನ್ನು ಆಚರಿಸಿದವರು ಆಯಾ ನರಕಗಳಿಗೆ ಹೋಗುವರು. ಸ್ವಶ್ರಮ ವಿರೋಧೀ ಕರ್ಮಗಳಲ್ಲಿ ತೊಡಗಿದವರೂ ನರಕ ವಾಸಿಗಳಾಗುತ್ತಾರೆ. ನರಕದಲ್ಲಿ ಈ ಪಾಪಿಷ್ಠರು ತಲೆಕೆಳಗಾಗಿ ಹಾಕಲ್ಪಟ್ಟಿರುತ್ತಾರೆ. ಹೀಗಾಗಿ ಅವರು ಸ್ವರ್ಗದಲ್ಲಿರುವ ದೇವತೆಗಳನ್ನು ನೋಡುವರು. ದೇವತೆಗಳೂ ಸಹ ತಮ್ಮ ಕಡೆ ಮುಖವಾಗುವಂತೆ ತಲೆಕೆಳಗಾಗಿ ನೇತಾಡುತ್ತಿರುವ ನರಕವಾಸಿಗಳನ್ನು ಕಾಣುತ್ತಾರೆ.

ದೇಹಿಗಳು ಪ್ರಾಥಮಿಕವಾಗಿ ಶಿಲೆ ಮುಂತಾದ ಅಚಲ ಜನ್ಮವನ್ನೇ ಪಡೆಯುವರು. ನಂತರ ಕ್ರಿಮಿಗಳಾಗುವರು. ತದನಂತರ ಜಲಚರಗಳಾಗುವರು. ಬಳಿಕ ಪಕ್ಷಿಗಳಾಗುವರು. ನಂತರ ಪಶುಗಳಾಗುವರು. ಅನಂತರ ಮನುಷ್ಯರಾಗುವರು. ಮನುಷ್ಯರಾದ ನಂತರ ಸಾಧನಾ ಜೀವನ ನಡೆಸಿದರೆ ಧಾರ್ಮಿಕ ಪುರುಷರಾಗಿ ಪರಿವರ್ತಿತರಾಗುವರು. ಅನಂತರ ದೇವತೆಗಳಾಗುವರು. ಸುಖ ಸೌಭಾಗ್ಯಗಳನ್ನು ಅನುಭವಿಸಿ ಕೊನೆಗೆ ಮೋಕ್ಷ ಹೊಂದುವರು. ಒಮ್ಮೆ ಮೋಕ್ಷಕ್ಕೆ ಹೋದ ನಂತರ ಅಖಂಡ ಸುಖವನ್ನನುಭವಿಸುತ್ತ ಅಲ್ಲಿಯೇ ಇದ್ದು ಬಿಡುವರು. ಪುನಃ ಬರುವಂತೆಯೇ ಇಲ್ಲ. ಸ್ಥಾವರದಿಂದ ಆರಂಭಿಸಿ ಹಂತ ಹಂತವಾಗಿ ಮೋಕ್ಷದವರೆಗೆ ಬರುವಲ್ಲಿ ಮೊದಲನೆಯದಕ್ಕಿಂತ ಎರಡನೆಯದು ಶ್ರೇಷ್ಠವಾದುದು.

ಸ್ವರ್ಗದಲ್ಲಿ ಇರುವಂತೆಯೇ ಬಹು ಸಂಖ್ಯಾಕರಾದ ಜನರು ನರಕದಲ್ಲೂ ಇರುವರು. ಪಾಪಾಚಾರಿಯಾಗಿ ಪ್ರಾಯಶ್ಚಿತ್ತವನ್ನು ಸಾಯುವವರೆಗೂ ಮಾಡಿಕೊಳ್ಳದಿರುವವನಿಗೆ ನರಕ ನಿಶ್ಚಿತ. ಯಾವ ಯಾವ ಪಾಪ ಕೃತ್ಯಗಳಿಗೆ ಪರದಲ್ಲಿ ಎಂಥ ಶಿಕ್ಷೆ. ತನ್ಮೂಲಕವಾದ ದುಃಖ ನಿಗದಿ ಮಾಡಲ್ಪಟ್ಟಿದೆ ಎಂಬುದನ್ನು ಸರ್ವಜ್ಞರಾದ ಋಷಿ ಮುನಿಗಳು ಧರ್ಮಶಾಸ್ತ್ರ ಗ್ರಂಥಗಳಲ್ಲಿ ಬರೆದಿರುವರು. ಪಾಪ ದೊಡ್ಡದಾಗಿದ್ದರೆ ಅದಕ್ಕೆ ವಿಧಿಸಲ್ಪಡುವ ಶಿಕ್ಷೆಯೂ ದೊಡ್ಡ ಪ್ರಮಾಣದ್ದೇ. ಅಂದರೆ ದೀರ್ಘಾವಧಿಯ ಹಾಗೂ ಬಹು ದುಃಖದಾಯಕವಾದ ಶಿಕ್ಷೆ ವಿಧಿಸಲ್ಪಡುತ್ತದೆ. ಪಾಪವು ಚಿಕ್ಕದಾಗಿದ್ದರೆ ಅದರಿಂದ ಬರುವ ಶಿಕ್ಷೆಯ ಪ್ರಮಾಣವೂ ಅಲ್ಪವು. ಸ್ಮೃತಿಗಳಲ್ಲಿ ಈ ಬಗ್ಗೆ ವಿಸ್ತೃತವಾಗಿ ಉಕ್ತವಾಗಿದೆ.

ಪ್ರಾಯಶ್ಚಿತ್ತವನ್ನು ಹೇಗೆ ಮಾಡಿಕೊಳ್ಳಬೇಕೆಂಬ ಬಗ್ಗೆ ಹೇಳುವೆ ಕೇಳಿರಿ. ಪ್ರಾಯಶ್ಚಿತ್ತಗಳಲ್ಲಿ ತಪಸ್ಸು ಮತ್ತು ಕರ್ಮ ಇವು ಮುಖ್ಯ. ಇವುಗಳಲ್ಲಿ ಶ್ರೀಕೃಷ್ಣಸ್ಮರಣೆ ಪ್ರಧಾನವೆನಿಸಿದೆ. ಈ ವಿಷಯದಲ್ಲಿ ಶಾಸ್ತ್ರದಲ್ಲಿ ಹೀಗೆ ಹೇಳಲ್ಪಟ್ಟಿದೆ.

ಕೃತೇ ಪಾಪೇಽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ ।
ಪ್ರಾಯಶ್ಚಿತ್ತಂ ತು ತಸ್ಯೈಕಂ ಹರಿಸಂಸ್ಮರಣಂ ಪರಮ್ ॥

ಪಾಪಕೃತ್ಯ ಎಸಗಿದ ನಂತರ ಯಾವನಿಗೆ ಅನುತಾಪ (ತಾನು ಈ ತಪ್ಪನ್ನು ಮಾಡಬಾರದಿತ್ತು ಎಂಬ ವ್ಯಥೆ) ಉಂಟಾಗುವದೋ ಅವನು ಭಕ್ತಿಯಿಂದ ಹರಿಸ್ಮರಣೆ ಮಾಡತಕ್ಕದ್ದು. ಅದೇ ಅವನಿಗೆ ಮುಖ್ಯವಾದ ಪ್ರಾಯಶ್ಚಿತ್ತವು.

ಹಗಲುರಾತ್ರಿ, ಸಂಧಿಕಾಲಗಳಲ್ಲಿ ಮತ್ತು ನೆನಪಾದಾಗಲೆಲ್ಲ ಭಕ್ತಿ ಪುರಸ್ಸರವಾಗಿ ನಾರಾಯಣನನ್ನು ನೆನೆದರೆ ಮಾಡಿದ ಪಾಪವು ತ್ವರಿತವಾಗಿ ನಷ್ಟವಾಗುವದು.

**"ಕ್ವ ನಾಕಪೃಷ್ಠ ಗಮನಂ ಪುನರಾವೃತ್ತಿಲಕ್ಷಣಮ್ ।**
**ಕ್ವ ಜಪೋ ವಾಸುದೇವೇತಿ ಮುಕ್ತಿಬೀಜಮನುತ್ತಮಮ್ ॥"**

ಸ್ವರ್ಗಕ್ಕೆ ಹೋದರೆ ಪುಣ್ಯವು ಕಳೆದ ಮೇಲೆ ಭೂಮಿಗೆ ತಿರುಗಿ ಬರಬೇಕು. ವಾಸುದೇವ ಎಂಬ ಸ್ಮರಣ ಮಾಡುವದರಿಂದ ಮುಕ್ತಿಯು ಪ್ರಾಪ್ತವಾಗುವದು. ಪುನಃ ಜನ್ಮವಿಲ್ಲ. ಅಂದ ಮೇಲೆ ಸ್ವರ್ಗವೆಲ್ಲಿ? ವಾಸುದೇವ ಸ್ಮರಣೆಯಲ್ಲಿ? ಇವೆರಡೂ ಎಂದಿಗೂ ಸಮನಾಗಲಾರವು. ಈ ಕಾರಣದಿಂದ ಶ್ರೇಷ್ಠವಾದ ವಾಸುದೇವನ ಸ್ಮರಣೆಯನ್ನು ಮಾಡುತ್ತಿರುವವ ಇಂದ್ರಪದವಿಯನ್ನೂ ಅಪೇಕ್ಷಿಸಬಾರದು.

**ತಸ್ಮಾದಹರ್ನಿಶಂ ವಿಷ್ಣುಂ ಸಂಸ್ಮರನ್ ಪುರುಷೋ ದ್ವಿಜಃ ।**
**ನ ಯಾತಿ ನರಕಂ ಶುದ್ಧಃ ಸಂಕ್ಷೀಣಾಖಿಲಪಾಶಕಃ ॥**

ಆದುದರಿಂದ ಹಗಲು, ರಾತ್ರಿ ವಿಷ್ಣುವನ್ನು ಸ್ಮರಿಸುತ್ತ ಮಾನವನು ಪಾಪವನ್ನು ಕಳೆದುಕೊಂಡು ಶುದ್ಧನಾದರೆ ನರಕಕ್ಕೆ ಹೋಗುವದಿಲ್ಲ.

ವಸ್ತುತಃ ಯಾವ ಪದಾರ್ಥವೂ ದುಃಖದಾಯಕವೂ ಅಲ್ಲ ; ಸುಖದಾಯಕವೂ ಅಲ್ಲ. ನಮ್ಮ ದೃಷ್ಟಿಗೆ ಅದು ಕೆಲವೊಮ್ಮೆ ದುಃಖದಾಯಕವೂ ಕೆಲವೊಮ್ಮೆ ಸಂತೋಷದಾಯಕವೂ ಆಗಿ ತೋರುವದು. ಒಂದು ವಸ್ತುವು ನಮಗೆ ಲಭಿಸಿದರೆ ಸುಖವಾಗುವದು. ಪರರಿಗೆ ಲಭಿಸಿದರೆ, ನಮಗೆ ದಕ್ಕದೇ ಇದ್ದರೆ ಅದೇ ದುಃಖದಾಯಕವಾಗುವದು. ಹೀಗಿರುವಾಗ ಆ ವಸ್ತು ದುಃಖದಾಯಕವೆಂದಾಗಲೀ, ಸುಖದಾಯಕವೆಂದಾಗಲೀ ಹೇಗೆ ಹೇಳುವದು? ಸುಖ-ದುಃಖಗಳು ಅಂತಃಕರಣದ ಪರಿಣಾಮಗಳು, ವಸ್ತು ನಿಷ್ಠವಾದ ವಿಷಯಗಳಲ್ಲ. ಈ ಸುಖದಾತ್ಮಕವಾದ ಅವಸ್ಥೆಯಿಂದ ಮುಕ್ತನಾಗಲು ಬ್ರಹ್ಮಜ್ಞಾನವೊಂದೇ ಮಾರ್ಗ. ಬ್ರಹ್ಮನ ಅಜ್ಞಾನದಿಂದಲೇ ಈ ಸಾಂಸಾರಿಕ ದುಃಖ ಪ್ರಾಪ್ತವಾಗಿದೆ. ಅವಿದ್ಯೆಯಿಂದಾಗಿ ಉಂಟಾದ ದುಃಖವು ಜ್ಞಾನಪ್ರಾಪ್ತಿಯಿಂದಾಗಿ ನಷ್ಟವಾಗುವದು. ಸ್ವರೂಪಭೂತವಾದ ಸುಖ ಅನುಭವಿಸಲು ಪ್ರತಿಬಂಧಕವಾಗಿದ್ದ ಅಜ್ಞಾನಾವರಣ ನಷ್ಟವಾದ ಕೂಡಲೇ ಸ್ವಾಭಾವಿಕವಾಗಿ ಸುಖ ಲಭಿಸುವದು.

ಮುನಿಗಳೇ, ನಿಮಗೆ ಜಗತ್ತನ್ನೂ, ಅದರ ಸಾರಭೂತತತ್ವವನ್ನೂ ಸಂಕ್ಷಿಪ್ತವಾಗಿ ನಿರೂಪಿಸಿರುವೆ. ಇನ್ನೇನು ತಿಳಿಯಬೇಕೆಂಬ ಇಚ್ಛೆ ಇದೆ?" ಎಂದು ಸೂತ ಮುನಿಗಳು ನುಡಿದರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಎಂಟನೆಯ ಅಧ್ಯಾಯ ಮುಗಿದುದು*

—o—

**ಮುನಿಗಳು:-** ಸೂತ ಮುನಿಯೇ, ನಾವು ಕೇಳಿದುದೆಲ್ಲವನ್ನೂ ನೀನು ಹೇಳಿರುವೆ. ಈ ಭುವರ್ಲೋಕ ಮುಂತಾದ ಲೋಕಗಳನ್ನು ಕೇಳಬೇಕೆಂದಿದ್ದೇವೆ. ಅದನ್ನು ತಿಳಿಸು. ಅಲ್ಲದೆ ಗ್ರಹಗಳ ಸ್ಥಿತಿಯನ್ನೂ ಲೋಕಗಳ ಪ್ರಮಾಣಗಳನ್ನೂ ಯಥಾವತ್ತಾಗಿ ಹೇಳು.

**ಸೂತಮುನಿ:-** ಸೂರ್ಯಚಂದ್ರರ ಕಿರಣಗಳು ಎಲ್ಲಿಯವರೆಗೆ ಹೋಗುವವೋ ಅಲ್ಲಿಯವರೆಗೆ ಈ ನದಿ, ಸಮುದ್ರ, ಬೆಟ್ಟಗಳಿಂದೊಡಗೂಡಿದ ಭೂಮಿಯು ಇರುವದು. ಈ ಭೂಮಿಯು ಎಷ್ಟು ಅಗಲ ಮತ್ತು ಸುತ್ತಳತೆಯುಳ್ಳದಾಗಿರುವದೋ ಆಕಾಶವೂ ಸಹ ಅಷ್ಟೇ ಅಗಲವೂ ಸುತ್ತಳತೆಯುಳ್ಳದ್ದೂ ಆಗಿರುವದು. ಭೂಮಿಯಿಂದ ಲಕ್ಷ ಯೋಜನ ದೂರದಲ್ಲಿ ಸೂರ್ಯಮಂಡಲವಿದೆ. ಸೂರ್ಯಮಂಡಲದಿಂದ ಲಕ್ಷಯೋಜನ ದೂರದಲ್ಲಿ ಚಂದ್ರಮಂಡಲವಿದೆ. ಚಂದ್ರಮಂಡಲದಿಂದ ಲಕ್ಷ ಯೋಜನ ದೂರದಲ್ಲಿ ನಕ್ಷತ್ರ ಮಂಡಲವು ಪ್ರಕಾಶಿಸುತ್ತದೆ. ನಕ್ಷತ್ರಮಂಡಲದಿಂದ ಎರಡು ಲಕ್ಷ ಯೋಜನ ದೂರದಲ್ಲಿ ಬುಧಗ್ರಹ ಮಂಡಲವಿರುವದು. ಬುಧ ಮಂಡಲದಿಂದ ಎರಡು ಲಕ್ಷ ಯೋಜನ ದೂರದಲ್ಲಿ ಶುಕ್ರಮಂಡಲವಿರುವದು. ಶುಕ್ರನಿಂದ ಎರಡು ಲಕ್ಷ ಯೋಜನ ದೂರದಲ್ಲಿ ಅಂಗಾರಕನ ಮಂಡಲವಿದೆ. ಅಂಗಾರಕನಿಂದ ಎರಡು ಲಕ್ಷ ಯೋಜನ ದೂರದಲ್ಲಿ ಬೃಹಸ್ಪತಿಯ ಮಂಡಲವಿದೆ. ಬೃಹಸ್ಪತಿಯಿಂದ ಎರಡು ಲಕ್ಷ ಯೋಜನ ದೂರದಲ್ಲಿ ಶನೈಶ್ಚರನ ಮಂಡಲವಿರುವದು. ಶನೈಶ್ಚರನಿಂದ ಲಕ್ಷಯೋಜನ ದೂರದಲ್ಲಿ ಸಪ್ತರ್ಷಿಗಳ ಮಂಡಲವಿರುವದು. ಋಷಿಮಂಡಲದಿಂದ ಧ್ರುವಮಂಡಲಕ್ಕೆ ಒಂದು ಲಕ್ಷ ಯೋಜನ ದೂರ. ಈ ಗ್ರಹಮಂಡಲಗಳಿಗೆಲ್ಲ ಕೊನೆಯದಾದಂಥ ಮಂಡಲವೆಂದರೆ ಧ್ರುವಮಂಡಲವೇ. ಈ ಧ್ರುವಮಂಡಲದ ಮೇಲೆ ಮಹರ್ಲೋಕ. ಈ ಮಹರ್ಲೋಕದ ನಿವಾಸಿಗಳ ಆಯುಷ್ಯ ಒಂದು ಕಲ್ಪಕಾಲ ಪರ್ಯಂತ. ಈ ಮಹರ್ಲೋಕದ ಪ್ರಮಾಣ ಒಂದು ಕೋಟಿ ಯೋಜನ. ಧ್ರುವಮಂಡಲದ ಮೇಲೆ ಒಂದು ಕೋಟಿ ಯೋಜನ ಮೈಲುಗಳ ಮೇಲೆ ಈ ಮಹರ್ಲೋಕವು ವಿರಾಜಮಾನವಾಗಿದೆ. ಮಹರ್ಲೋಕದಿಂದ ಎರಡು ಕೋಟಿ ಯೋಜನದ ಮೇಲೆ ಜನಲೋಕ. ಅಲ್ಲಿ ಬ್ರಹ್ಮದೇವರ ಮಕ್ಕಳಾದ ನಿಷ್ಕಲ್ಮಷ ತೇಜಸ್ಕರಾದ ಸನಕ, ಸನಾತನ, ಸನಂದಾದಿ ಬ್ರಹ್ಮಮಾನಸಪುತ್ರರು ನೆಲೆಸಿರುವರು. ಜನೋಲೋಕದ ಮೇಲ್ಭಾಗದಲ್ಲಿ ನಾಲ್ಕು ಕೋಟಿ ಯೋಜನದ ಅಂತರದ ಮೇಲೆ ಇದೆ ತಪೋಲೋಕ. ಅಲ್ಲಿ ಇರುವ ದೇವತೆಗಳಿಗೆ ಶರೀರವಿರುವದಿಲ್ಲ. ವೈರಾಜದೇವತೆಗಳು ಎಂದು ಅವರಿಗೆ ಹೆಸರು. ತಪೋಲೋಕಕ್ಕಿಂತ ಮೇಲೆ ಅದಕ್ಕಿಂತ ಆರುಪಟ್ಟು ಹೆಚ್ಚಿನ ದೂರದ ಅಂತರದಲ್ಲಿ ಸತ್ಯಲೋಕವಿರುವದು. ಅಲ್ಲಿ ಹೋದವರು ತಿರುಗಿ ಸಂಸಾರಕ್ಕೆ ಬರುವದಿಲ್ಲ. ಸಿದ್ಧರು ಮೊದಲಾದ ಮುನಿಗಳು ಅಲ್ಲಿ ಇರುವರು.

ಕಾಲಿನಿಂದ ನಡೆಯುವಂಥಹುದು ಭೂಮಿಯ ರೂಪವೂ ಆದ ಲೋಕವನ್ನು ಈ ಮೊದಲೇ ಹೇಳಿದ್ದೇನೆ. ಅದಕ್ಕೆ ಭೂಲೋಕ ಎಂದು ಹೇಳುವರು. ಭೂಮಿಗೂ ಸೂರ್ಯನಿಗೂ ನಡುವೆ ಇರುವ ಲೋಕವೇ ಭುವರ್ಲೋಕ. ಇಲ್ಲಿಯೂ ವಾಸಮಾಡುವವರು ಸಿದ್ಧಮಹರ್ಷಿಗಳು ಮಾತ್ರ. ಧ್ರುವಮಂಡಲಕ್ಕೂ ಸೂರ್ಯನಿಗೂ ಮಧ್ಯದಲ್ಲಿರುವದೇ ಸ್ವರ್ಗಲೋಕ. ಅದರ ವಿಸ್ತಾರ ಹದಿನಾಲ್ಕು ಲಕ್ಷ ಯೋಜನ. ಭೂಲೋಕ, ಭುವರ್ಲೋಕ,

ಸ್ವರ್ಗಲೋಕಗಳು ಕತಿಪಯಕಾಲಪರ್ಯಂತ ಮಾತ್ರ ಸ್ಥಿರವಾಗಿರುತ್ತವೆ. ಜನೋಲೋಕ ತಪೋಲೋಕ, ಸತ್ಯಲೋಕಗಳು ಮಾತ್ರ ಕಲ್ಪಾಂತ ಕಾಲದವರೆಗೆ ನಾಶವಾಗದಿರುವ ಲೋಕಗಳು. ಆ ಲೋಕಗಳಿಗೆ ಅಕೃತಕ ಲೋಕಗಳೆಂದು ಹೆಸರು. ಈ ಕೃತಕ, ಅಕೃತಕ ಲೋಕಗಳ ಮಧ್ಯದಲ್ಲಿಯೇ ಮಹರ್ಲೋಕ ಇರುವದು. ಮಹಾಕಲ್ಪದ ಕೊನೆಯಲ್ಲಿ ಮಾತ್ರ ಅವು ಶೂನ್ಯವಾಗುವವು. ಹೀಗೆ ಕೆಳಗಿನ ಏಳುಲೋಕಗಳನ್ನೂ ಮೇಲಿನ ಏಳು ಲೋಕಗಳನ್ನೂ ನಾನು ನಿಮಗೆ ಹೇಳಿದೆ ಇದೇ ಬ್ರಹ್ಮಾಂಡದ ವಿಸ್ತಾರ. ಈ ಬ್ರಹ್ಮಾಂಡವು ಮೇಲೆ ಕೆಳಗೆ ಸುತ್ತಲೂ ಬ್ರಹ್ಮಾಂಡಕಟಾಹದಿಂದ ಬೇಲದಬೀಜವು ಸಿಪ್ಪೆಯಿಂದ ಸುತ್ತುವರಿಯಲ್ಪಟ್ಟಂತೆ ಆವೃತವಾಗಿರುವದು. ಈ ಬ್ರಹ್ಮಾಂಡ ಕಟಾಹವು ಅದಕ್ಕಿಂತ ಹತ್ತುಪಟ್ಟು ವಿಸ್ತಾರವಾದ ಜಲರಾಶಿಯಿಂದ ಸುತ್ತುವರಿಯಲ್ಪಟ್ಟಿದೆ. ಅದಕ್ಕೆ ಜಲಾವರಣ ಎನ್ನುವರು. ಈ ಜಲಾವರಣವು ಅಗ್ನಿಯ ಆವರಣದಿಂದಲೂ, ಅಗ್ನಿಯು ವಾಯುದಾವರಣ ದಿಂದಲೂ, ವಾಯುವು ಆಕಾಶದಿಂದಲೂ ಸುತ್ತುವರಿಯಲ್ಪಟ್ಟಿರುತ್ತವೆ. ಆ ಆಕಾಶವನ್ನು ಹೊರಗೆ ಮಹತ್ತತ್ವವು ಸುತ್ತುವರಿದಿದೆ. ಆ ಮಹತ್ತತ್ವವನ್ನು ಪ್ರಕೃತಿಯು ಸುತ್ತುವರೆದಿರುತ್ತದೆ. ಈ ಅಂಡಕಟಾಹ, ಜಲರಾಶಿ, ಅಗ್ನಿ, ವಾಯು, ಆಕಾಶ, ಮಹತ್ತತ್ವ ಪ್ರಕೃತಿ ಎಂಬ ಈ ಏಳು ವಸ್ತುಗಳು ಒಂದಕ್ಕಿಂತ ಇನ್ನೊಂದು ಹತ್ತರಷ್ಟು ವಿಸ್ತಾರವಾಗಿ ಇರುತ್ತವೆ. ಮೂಲಭೂತವಾದ ಪ್ರಕೃತಿಗಂತೂ ಕೊನೆಯೇ ಇಲ್ಲ. ಅದನ್ನು ವರ್ಣಿಸಲಿಕ್ಕೂ ಶಕ್ಯವಿಲ್ಲ. ಈ ಪ್ರಕೃತಿಯು ಅನಂತ ಹಾಗೂ ಪ್ರಮಾಣ ಅತೀತ. ಜಗತ್ತಿಗೆಲ್ಲ ಕಾರಣ ಈ ಮೂಲ ಪ್ರಕೃತಿಯು. ಇದರಿಂದಲೇ ಲಕ್ಷಾವಧಿ ಬ್ರಹ್ಮಾಂಡಗಳು ಕೋಟಿ ಕೋಟಿ ಲೋಕಗಳೂ ಉತ್ಪನ್ನವಾಗುತ್ತವೆ. ಕಾಷ್ಠದಲ್ಲಿ ಅಗ್ನಿಯಂತೆ, ಎಳ್ಳಿನಲ್ಲಿ ಎಣ್ಣೆಯಂತೆ ಈ ಪ್ರಕೃತಿಯನ್ನು ಸಂಪೂರ್ಣವಾಗಿ ವ್ಯಾಪಿಸಿಕೊಂಡು ಪುರುಷ ಇರುತ್ತಾನೆ. ಅವನು ಚೈತನ್ಯರೂಪಿ. ಒಂದನ್ನೊಂದು ವ್ಯಾಪಿಸಿರುವ ಈ ಪ್ರಕೃತಿ ಪುರುಷರು ಸರ್ವಾಂತರ್ಯಾಮಿ ಯಾದ ವಿಷ್ಣುವಿನ ಮಹಾಶಕ್ತಿಯಿಂದ ಧರಿಸಲ್ಪಟ್ಟಿರುವರು. ಈ ಪ್ರಕೃತಿ ಪುರುಷರು ಒಟ್ಟಾಗಲಿಕ್ಕೂ ಭಿನ್ನಭಿನ್ನವಾಗಿರುವದಕ್ಕೂ ಆ ಮಹಾವಿಷ್ಣುವೇ ಕಾರಣ. ಸೃಷ್ಟಿಕಾಲದಲ್ಲಿ ವಿಷ್ಣುಮಾಯೆ ಅಥವಾ ಪ್ರಕೃತ್ಯಭಿಮಾನಿಯಾದ ಮಹಾಶಕ್ತಿಯು ಈ ಪ್ರಕೃತಿ ಪುರುಷರನ್ನು ಪ್ರಕ್ಷುಬ್ಧಗೊಳಿಸಿ ಸೃಷ್ಟಿಕಾರ್ಯಕ್ಕೆ ಉನ್ಮುಖರನ್ನಾಗಿ ಮಾಡುವದು. ಆಗ ಭಗವಂತನಿಂದ ಪ್ರೇರಿತನಾದ ಮತ್ತು ಅವನ ಸಹಾಯ ಪಡೆದ ಪುರುಷನ ಆ ವಿಷ್ಣುವಿನ ಸಹಾಯದಿಂದಲೇ ಸೃಷ್ಟಿಯನ್ನು ಸಮರ್ಥರೀತಿಯಿಂದ ಮಾಡುವನು. ಗಾಳಿಯು ನೀರಿನ ತುಂತುರು ಗಳೊಂದಿಗೆ ಶೈತ್ಯವನ್ನು ಧರಿಸುವಂತೆ ವಿಷ್ಣುಶಕ್ತಿಯು ಪ್ರಕೃತಿ ಪುರುಷರ ಆಟದಂತೆ ಇರುವ ಈ ಜಗತ್ತನ್ನು ಧರಿಸುವದು. ಆ ವಿಷ್ಣುವೇ ಪರಬ್ರಹ್ಮ.

**ಸ ಚವಿಷ್ಣುಃ ಪರಂಬ್ರಹ್ಮ ಯತಸ್ಸರ್ವಮಿದಂ ಜಗತ್**
**ಜಗಚ್ಚಯೋ ಯಂತ್ರಚೇದಮ್ ಯಸ್ಮಿನ್ ವಿಲಯಮೇಷ್ಯತಿ**

ಈ ಜಗತ್ತೆಲ್ಲವೂ ಯಾವನಿಂದ ಹುಟ್ಟಿದೆಯೋ ಯಾವನನ್ನು ಆಧರಿಸಿ ಇರುವದೋ ಯಾವನಿಂದಲೇ ಸ್ಥಿತಿಗತಿಯನ್ನು ಹೊಂದಿರುವದೋ ಕೊನೆಗೆ ಯಾವನಲ್ಲಿ ಲೀನವಾಗುವದೋ ಆದುದರಿಂದಲೇ ಯಾವನು ಜಗದಾತ್ಮ ಎಂದು ಹೇಳಲ್ಪಡುತ್ತಾನೋ ಅವನೇ ಮಹಾವಿಷ್ಣು.

"ಹರೇರ್ನ ಕಿಂಚಿದ್ ವ್ಯತಿರಿಕ್ತಮಸ್ತಿ ತತ್"

ಹರಿಯ ಹೊರತಾಗಿ ಈ ಪ್ರಪಂಚದಲ್ಲಿ ಬೇರೆ ಯಾವ ಸ್ವತಂತ್ರವಸ್ತುವೂ ಇರುವುದಿಲ್ಲ. ಈ ಜಗತ್ತಿನ ಹುಟ್ಟು, ಅಳಿವು, ಉಳಿವು, ನಲಿವು, ನೋವು, ಸಾವು ಎಲ್ಲವೂ ಆ ಭಗವಂತನಿಂದಲೇ ಆಗುವವು. ಆದುದರಿಂದ ಅವನೇ ಜಗನ್ಮಯ ಜಗದೀಶ್ವರ.

## ಧ್ರುವ ಸಂಸ್ಥಿತಿ ನಿರೂಪಣ

**ಲೋಮಹರ್ಷಣ:-** ಮುನಿಪುಂಗವರೇ, ಆಕಾಶದಲ್ಲಿ ಇರುವ ತೇಜೋಮಯವಾದ ಎಲ್ಲ ಗಗನಾಕಾರದ ನಕ್ಷತ್ರ ಗ್ರಹಮಂಡಲಗಳನ್ನು ನಿಯಂತ್ರಿಸುವ ಒಂದು ಭಗವದ್ರೂಪವು ಇರುತ್ತದೆ. ಅದು ಕೆಂಪು ಮೀನು ಅಥವಾ ಚೇಳಿನ ಆಕಾರವುಳ್ಳದ್ದು ಆಗಿರುತ್ತದೆ. ನಕ್ಷತ್ರಮಯವಾದ ಆ ಭಗವಂತನ ಗ್ರಹಕಾರ್ಯಕ್ಕೆ ಶುಂಶುಮಾರ ಎಂದು ಹೇಳುತ್ತಾರೆ. ಈ ಶುಂಶುಮಾರದ ಬಾಲದ ಭಾಗದಲ್ಲಿ ಧ್ರುವಮಂಡಲವಿರುತ್ತದೆ. ಈ ಧ್ರುವನು ತನ್ನ ಅತಿ ಸೂಕ್ಷ್ಮವಾದ ವೃತ್ತದಲ್ಲಿಯೇ ಪರಿವೃತ್ತಿಗೊಳ್ಳುತ್ತ ಸ್ವಸ್ಥಾನದಲ್ಲಿ ಇದ್ದುಕೊಂಡೇ ಸೂರ್ಯ, ಚಂದ್ರ ಹಾಗೂ ಉಳಿದ ಎಲ್ಲ ನಕ್ಷತ್ರಗಳೂ ಚಲಿಸುವಂತೆ ಮಾಡುತ್ತಾನೆ.ಸೂರ್ಯ, ಚಂದ್ರ ಹಾಗೂ ಇತರ ಎಲ್ಲ ಗ್ರಹ, ನಕ್ಷತ್ರ ತಾರಿಕೆ ನಿಹಾರಿಕೆಗಳು ಎಲ್ಲವೂ ಗಾಳಿಯ ರೂಪವಾದ ಹಗ್ಗಗಳಿಂದ ಧ್ರುವಮಂಡಲದಲ್ಲಿ ಬಂಧಿಸಲ್ಪಟ್ಟಿರುವವು. ಶುಂಶುಮಾರಾಕಾರದ ಜ್ಯೋತಿರ್ಮಯವಾದ ನಕ್ಷತ್ರ ಸಂಸ್ಥಾನಕ್ಕೆ ನಾರಾಯಣನೇ ಆಧಾರ. ಆ ನಾರಾಯಣನು ಎಲ್ಲರ ಹೃದಯದಲ್ಲಿಯೂ ನೆಲೆಸಿರುವನು. ಉತ್ತಾನಪಾದ ಚಕ್ರವರ್ತಿಯ ಸುಕುಮಾರನಾದ ಧ್ರುವಕುಮಾರನು ಪರಂಜ್ಯೋತಿ ಸ್ವರೂಪನಾದ ಆ ಶ್ರೀಮನ್ನಾರಾಯಣನನ್ನು ಆರಾಧಿಸಿ ಜ್ಯೋತಿರ್ಮಯವಾದ ಆ ಶುಂಶುಮಾರದ ಪುಚ್ಛದಲ್ಲಿ ಪ್ರತಿಷ್ಠಿತನಾದ. ಗ್ರಹಮಂಡಲಕ್ಕೆಲ್ಲ ಧ್ರುವಮಂಡಲ ಆಧಾರ. ಆ ಧ್ರುವಮಂಡಲಕ್ಕೆ ಶುಂಶುಮಾರ ಚಕ್ರ. ಆ ಶುಂಶಮಾರ ಚಕ್ರಕ್ಕೆ ತತ್‌ಸ್ವರೂಪಿಯೇ ಆದ ಸಾಕ್ಷಾತ್ ಶ್ರೀಹರಿಯೇ ಆಧಾರ.

ಸೂರ್ಯನು ಕೂಡ ಈ ಧ್ರುವಮಂಡಲದಿಂದಲೇ ನಿಯಮಿತ ಹಾಗೂ ನಿಯಂತ್ರಿತ. ಆ ಸೂರ್ಯನ ಆಧಾರದಿಂದಲೇ ದೇವತೆಗಳೂ, ಅಸುರರೂ ಮಾನವರನ್ನೊಳಗೊಂಡ ಈ ಜಗತ್ತೆಲ್ಲವೂ ನಿಂತಿರುವದು. ಅದರ ಕ್ರಮವನ್ನು ಹೇಳುತ್ತೇನೆ ಕೇಳಿರಿ. ಈ ಸೂರ್ಯನು ವರ್ಷದಲ್ಲಿ ಎಂಟು ತಿಂಗಳು ತನ್ನ ಕರ ಕಿರಣಗಳಿಂದ ಧರಣೀತಲದಲ್ಲಿರುವ ರಸವಾದ ನೀರನ್ನು ಹೀರಿಕೊಳ್ಳುತ್ತಾನೆ. ಅನಂತರ ನಾಕು ತಿಂಗಳು ಮೋಡಪಡೆಯಿಂದ ನೆಲದ ಮೇಲೆ ಮಳೆಯನ್ನು ಸುರಿಸುವನು. ಆ ಮಳೆಯಿಂದ ಬೆಳೆ, ಸಸ್ಯ, ಧಾನ್ಯ ಮುಂತಾದ ಆಹಾರ ವಸ್ತುಗಳು ಉತ್ಪನ್ನವಾಗುವವು. ಜನರಿಗೆಲ್ಲ ಅದೇ ಅನ್ನ. ಸೂರ್ಯನು ತನ್ನ ತೀಕ್ಷ್ಣವಾದ ಕಿರಣಗಳಿಂದ ಜಗತ್ತಿನ ನೀರನ್ನೆಲ್ಲ ಹೀರಿ ಅದನ್ನು ಚಂದ್ರಮಂಡಲಕ್ಕೆ ಸೇರಿಸುವನು. ಆ ಸುಧಾಕರನು ವಾಯುವಿನ ಮೂಲಕವಾಗಿ ಹೊಗೆ, ಬೆಂಕಿ, ಗಾಳಿ ರೂಪವಾದ ಮೇಘದಲ್ಲಿ ಆ ನೀರನು ಸೇರಿಸುವನು. ಆ ಮೇಘಗಳಿಂದ ನೀರು ಸೋರುವದಿಲ್ಲ. ಭ್ರಂಶ ಹೊಂದುವದಿಲ್ಲ. ಆದುದರಿಂದಲೇ ಅವುಗಳಿಗೆ ಅಭ್ರ ಎಂದು ಹೆಸರು. ಗಾಳಿ ಬಂದು ತಂಪನ್ನು ತಗಲಿಸಿದಾಗ ಮಾತ್ರ ಆ ವಾತಾಹತಿಯಿಂದ ವಿಧ್ವತವಾಗಿ ಮೇಘಗಳು ವೃಷ್ಟಿರೂಪವಾಗಿ ನೀರನ್ನು ಕೆಳಗೆ ಬೀಳಿಸುತ್ತವೆ. ಅನಂತರ ಆ ನೀರು ಕಾಲಾನುಸಾರವಾಗಿ ಸಂಸ್ಕಾರಹೊಂದಿ ಸಮೀಪದಲ್ಲಿರುವ ನದಿ, ಸಮುದ್ರ, ಕೆರೆ ಹಾಗೂ ಪ್ರಾಣಿಗಳ

ದೇಹಗಳಲ್ಲಿ ಸೇರಿಕೊಂಡುಬಿಡುವದು. ಈ ನಾಲ್ಕು ಸ್ಥಾನಗಳಲ್ಲಿಯೂ ಒಂದೊಂದು ವಿಧವಾದ ಸಂಸ್ಕಾರ ಹೊಂದಿದ ಆ ನೀರನ್ನು ಸವಿತೃದೇವನು ಮತ್ತೆ ಬೇಸಿಗೆಯಲ್ಲಿ ಹೀರಿಕೊಳ್ಳುವನು. ಭೂಲೋಕದಲ್ಲಿಯ ನೀರೆಲ್ಲವೂ ಮೋಡವಾಗಿ ಮಾರ್ಪಟ್ಟ ಮೇಲೆಯೇ ಮತ್ತೆ ನೆಲಕ್ಕೆ ಸುರಿದು ಹರಿದು ಬರುವವು. ಆದರೆ ಆ ದಿವಾಕರನು ಆಕಾಶ ಗಂಗೆಯ ನೀರನ್ನು ಮಾತ್ರ ಯಾವದೇ ಮೋಡ ಮಾರ್ಪಾಡು ಇಲ್ಲದೇ ಆ ನೀರನ್ನು ನೇರವಾಗಿ ತನ್ನ ಕಿರಣಗಳಿಂದ ಪ್ರವಾಹ ರೂಪವಾಗಿ ಭೂಮಿಗೆ ಹರಿಸುವನು. ಗಂಗೆಯ ಪ್ರವಾಹವು ಮೇಘಗಳ ಸಂಬಂಧವಿಲ್ಲದೇ ಸೂರ್ಯಮಂಡಲವನ್ನು ಪಡೆದು, ಅವನ ಕಿರಣಗಳ ಪ್ರೇರಣೆಯಿಂದ ಭೂಮಿಗೆ ಬೀಳುವದು. ಕೃತ್ತಿಕಾ ಮೊದಲಾದ ವಿಷಮ ನಕ್ಷತ್ರಗಳಲ್ಲಿ ಸೂರ್ಯಮಂಡಲದ ಸಂಬಂಧವನ್ನು ಹೊಂದಿ ಗಂಗಾ ಪ್ರವಾಹವು ಆ ನದಿಯ ಮಧ್ಯದಲ್ಲಿ ನೀರಾಟವಾಡುವ ದಿಗ್ಗಜಗಳಿಂದ ಎರಚಲ್ಪಟ್ಟಿರುತ್ತದೆ. ಸಮಸಂಖ್ಯೆ ನಕ್ಷತ್ರದಲ್ಲಿ ಸೂರ್ಯನ ಕಿರಣಗಳ ಪ್ರೇರಣೆಯಿಂದ ಭೂಮಿಗೆ ಬೀಳುವ ಆಕಾಶ ಗಂಗೆಯು ನೀರು ಮತ್ತೆ ಬೇಸಿಗೆಯಲ್ಲಿ ಆ ರವಿಯ ಚರಣ ಕಿರಣಗಳಿಂದ ಹೀರಲ್ಪಡುತ್ತದೆ. ಗಂಗೆಯ ದ್ವಿವಿಧವಾದ ಜಲವು ಕೂಡ ಪರಮ ಪವಿತ್ರ. ಪಾಪ ಪರಿಹಾರಕ ಎಂದಿಗೂ ಪಾವನ ಭಾಗೀರಥಿ ಜಲಸ್ನಾನ. ಮೋಡಗಳಿಂದ ಬೀಳುವ ಮಳೆಯಿಂದ ಪ್ರಾಣಿಗಳ ಜೀವನ. ಔಷಧೀಲತಾ ವನಸ್ಪತಿಗಳ ಸಂಜೀವನ ಅಭಿವೃದ್ಧಿ ಆಗುತ್ತದೆ. ಪ್ರಾಣಿಗಳಿಗೆಲ್ಲ ಜಲವೇ ಜೀವನ. ಅದು ಅಮೃತಕ್ಕೆ ಸಮಾನ. ಎಲ್ಲ ವಿಧವಾದ ಸಸ್ಯ, ಔಷಧಿ, ವನಸ್ಪತಿ, ಮರಬಳ್ಳಿಗಳು ಹುಟ್ಟಿ ಬೆಳೆದು ಹಣ್ಣು ಕಾಯಿಗಳನ್ನು ನೀಡುವದು ಔಷಧಿಗಳನ್ನು ಒದಗಿಸುವದು ಮಳೆಯ ನೀರಿನ ಆಸರೆಯಿಂದಲೇ ಹಾಗೆ ಸಸ್ಯಾದಿಗಳಿಂದ ದವಸ ಧಾನ್ಯಗಳಿಂದ ಫಲವು ಲಭಿಸಿದ್ದರಿಂದಲೇ ಮಾನವರು ಬಗೆ ಬಗೆಯ ಯಜ್ಞ ಯಾಗಗಳನ್ನು ಮಾಡಿ ವೃಷ್ಟಿಯ ಮೂಲಕವಾಗಿ ತಮಗೆ ಸಸ್ಯಸಮೃದ್ಧಿಯನ್ನು ಕರುಣಿಸಿದ ದೇವತೆಗಳನ್ನು ಸಂತೋಷ ಪಡಿಸುವರು. ಯಾಗ, ಯಜ್ಞ, ನಾಲ್ಕು ವರ್ಣದೇವತೆಗಳು ಪಶು ಮೊದಲಾದ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಮಳೆಯ ಆಸರೆಯಿಂದಲೇ ಜೀವಿಸಿರುವವು. ಆ ಮಳೆಯನ್ನು ಕರುಣಿಸುವವ ಸೂರ್ಯನಾರಾಯಣ. ಆ ಸೂರ್ಯನಿಗೆ ಧ್ರುವಮಂಡಲವೇ ಆಧಾರ. ಆ ಧ್ರುವನಿಗೆ ಶಿಂಶುಮಾರ ರೂಪವಾದ ತೇಜೋಮಂಡಲವೇ ಆಧಾರ. ಆ ಶಿಂಶುಮಾರಕ್ಕೆ ನಾರಾಯಣನೇ ಆಧಾರ. ಆ ನಾರಾಯಣನು ಶಿಂಶುಮಾರದ ಹೃದಯದಲ್ಲಿ ಇರುತ್ತಾನೆ. ಈ ಜಗತ್ತನ್ನೆಲ್ಲ ಧರಿಸಿ ಸಲಹುವವನು ಜಗದಾದಿಯಾದ ಪುರಾಣ ಪುರುಷ ಶ್ರೀಹರಿಯೇ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಒಂಬತ್ತನೆಯ ಅಧ್ಯಾಯ ಮುಗಿದುದು*

—○—

ಸೂತಮುನಿಯೇ, ಈ ಭೂಲೋಕದಲ್ಲಿ ಯಾವ ಯಾವ ಪುಣ್ಯತೀರ್ಥಗಳು ಇರುತ್ತವೆ? ಕ್ಷೇತ್ರಗಳಲ್ಲೆಲ್ಲ ಅತಿ ಪವಿತ್ರವಾದವುಗಳು ಯಾವವು? ಇದನ್ನೆಲ್ಲ ಕೇಳಬೇಕೆಂಬ ಬಯಕೆ ಉಂಟಾಗಿದೆ ನಮಗೆಲ್ಲ. ಅದನ್ನೆಲ್ಲ ತಿಳಿಸಿರಿ ದಯಮಾಡಿ.

**ಸೂತ**:- ವಿಪ್ರವರ್ಯರೇ, ಯಾವನ ಕೈಕಾಲು ಮುಖ್ಯವಾಗಿ ಮನಸ್ಸು ಪರಿಶುದ್ಧ ವಾಗಿದೆಯೋ ಮತ್ತು ಅಧ್ಯಾತ್ಮ ವಿದ್ಯೆಯನ್ನು ಸಂಪಾದಿಸಿ ಸ್ವಾಧ್ಯಾಯ ರೂಪವಾದ ತಪಸ್ಸನ್ನು ಜ್ಞಾನ ವಿದ್ಯೆಯನ್ನು ಯಾವನು ಕೀರ್ತಿಯ ಕಡೆ ಗಮನ ಕೊಡದೇ ಮಾಡುತ್ತ ಇರುವನೋ ಅವನು ತೀರ್ಥ ಯಾತ್ರೆಯ ಸಂಪೂರ್ಣ ಫಲವನ್ನು ಹೊಂದುತ್ತಾನೆ.

**ಮನೋ ವಿಶುದ್ಧಂ ಪುರುಷೋಸ್ಯ ತೀರ್ಥಂ**
**ವಾಚಸ್ತಥಾಚೇಂದ್ರಿಯನಿಗ್ರಹಶ್ಚ**

ಪರಿಶುದ್ಧವಾದ ಮನಸ್ಸೇ ಮನುಷ್ಯನಿಗೆ ಒಂದು ಒಳ್ಳೆಯ ತೀರ್ಥವಿದ್ದಂತೆ. ಕೊಂಕು ಮತ್ತು ಕಾಲುಷ್ಯವಿಲ್ಲದ ವಿನಯಬಂಧುರವಾದ ಮಾತೇ ಒಂದು ತೀರ್ಥವಿದ್ದಂತೆ. ಇಂದ್ರಿಯಗಳನ್ನು ನಿಗ್ರಹಮಾಡುವದು ಒಂದು ತೀರ್ಥವೆಂದೇ ತಿಳಿಯಬೇಕು ಮದ್ಯದಿಂದ ತುಂಬಿದ ಕೊಡವನ್ನು ಹೊರಗಡೆ ಎಷ್ಟು ತಿಕ್ಕಿ ತೊಳೆದರೂ ಅದು ಪರಿಶುದ್ಧವಾಗುವದಿಲ್ಲ. ಅದರಂತೆ ಮನುಷ್ಯನ ಮನಸ್ಸೇ ಶುದ್ಧವಿಲ್ಲದಿದ್ದರೆ ಎಷ್ಟು ತೀರ್ಥಸ್ನಾನ ಮಾಡಿದರೂ ಪರಿಶುದ್ಧತೆಯು ಬರಲಾರದು. ಇಂದ್ರಿಯಗಳ ಮೇಲೆ ನಿಯಂತ್ರಣವಿಲ್ಲದೇ ದುಷ್ಟ ಮನಸ್ಸು, ಕೆಟ್ಟ ಆಧಾರವುಳ್ಳ ಗರ್ವಿಷ್ಠ ಮಾನವನನ್ನು ಯಾವ ತೀರ್ಥಗಳೂ, ದಾನಗಳೂ, ಆಶ್ರಮಗಳೂ, ವ್ರತಗಳೂ ಪಾವನಗೊಳಿಸಲಾರವು. ಇಂದ್ರಿಯಗಳನ್ನು ತನ್ನ ಅಧೀನದ ಲ್ಲಿಟ್ಟುಕೊಂಡ ಪುರುಷನು ಎಲ್ಲಿಯೇ ಇದ್ದರೂ ಅದೇ ಪ್ರಯಾಗ ಕ್ಷೇತ್ರ, ಅದೇ ಕುರುಕ್ಷೇತ್ರ, ಅದೇ ಪುಷ್ಕರ ಕ್ಷೇತ್ರ. ಆದರೂ ಕೂಡ ತೀರ್ಥ ಸ್ನಾನವು ಮನುಷ್ಯರ ಅಂತಃಕರಣ ಶುದ್ಧಿಯನ್ನು ಮಾಡಿ ಅವನಿಗೆ ಜ್ಞಾನ ಲಾಲಸೆಯನ್ನು ಉಂಟು ಮಾಡುತ್ತದೆ. ವೈರಾಗ್ಯವನ್ನು ಹುಟ್ಟಿಸುತ್ತದೆ. ಭಗವಂತನ ವಿಷಯದಲ್ಲಿ ಭಕ್ತಿ ಅಂಕುರಿತವಾಗುವಂತೆ ಮಾಡುತ್ತದೆ. ಆದುದರಿಂದ ನೀವು ಕೇಳಿದ ತೀರ್ಥಕ್ಷೇತ್ರಗಳ ಹಲವಾರು ಹೆಸರು, ಕೆಲವು ಮಹಿಮೆಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳಿರಿ. ಪುಷ್ಕರ, ನೈಮಿಷಾರಣ್ಯ, ಮಗಧಾರಣ್ಯ. ದಂಡಕಾರಣ್ಯ, ಧೇನುಕಾರಣ್ಯ, ಚಂಪಕಾರಣ್ಯ, ಸೈಂಧವಾರಣ್ಯ, ಇವೆಲ್ಲವೂ ಪವಿತ್ರವಾದ ಕ್ಷೇತ್ರಗಳು. ಮತ್ತು ಪ್ರಯಾಗ, ಧರ್ಮಾರಣ್ಯ, ಗಯೆ, ಪ್ರಭಾಸ ಕ್ಷೇತ್ರ, ಶ್ರೀ ತೀರ್ಥ, ಕನಖಲ ಕ್ಷೇತ್ರ, ಭೃಗುತುಂಗ ತೀರ್ಥ, ಹಿರಣ್ಯಾಕ್ಷ ಕ್ಷೇತ್ರ, ಭೀಮಾರಣ್ಯ, ಕುಶಸ್ಥಲೀ ತೀರ್ಥ, ಲೋಹಾಕುಲ, ಕೇದರಕ್ಷೇತ್ರ, ಮಂದಕಾರಣ್ಯ, ಮಹಾಬಲಕ್ಷೇತ್ರ, ಕೋಟಿತೀರ್ಥ, ರೂಪತೀರ್ಥ, ಶೂಕರವ ಕ್ಷೇತ್ರ, ಚಕ್ರತೀರ್ಥ, ಮಹಾಫಲಕ್ಷೇತ್ರ ಇವೆಲ್ಲವೂ ಪರಮ ಪವಿತ್ರವಾದ ಕ್ಷೇತ್ರಗಳು.

ಯೋಗ ತೀರ್ಥ, ಸೋಮತೀರ್ಥ ಸಾಹೋಟಕ ತೀರ್ಥ, ಕೋಕಾಮುಖ ತೀರ್ಥ, ಬದರೀಕ್ಷೇತ್ರ, ತುಂಗಕೂಟ ಎಂಬ ಪಾಪನಾಶಕವಾದ ಕ್ಷೇತ್ರ, ಅಗ್ನಿಪದವೆಂಬ ಕೋಟಿತೀರ್ಥ, ಪಂಚಶಿಖರವೆಂಬ ತೀರ್ಥ, ಧರ್ಮೋದ್ಭವವೆಂಬ ಕೋಟಿ ತೀರ್ಥ, ಬಾಧ

ಪ್ರಮೋಚನ ತೀರ್ಥ, ಗಂಗಾದ್ವಾರ ತೀರ್ಥ, ಪಂಚಕೂಟ ಕ್ಷೇತ್ರ, ಚಕ್ರಪ್ರಭ, ಮತಂಗ, ಋಷದಂಡ, ದೌಷ್ಟಾಕುಂಡ ತೀರ್ಥ, ಸಕಲಫಲವನ್ನೂ ಕೊಡುವಂಥ ಕೋಟಿತೀರ್ಥ, ಮತ್ಸ್ಯತಿಲತೀರ್ಥ, ಬದರೀತೀರ್ಥ, ಸುಪ್ರಭ, ಬ್ರಹ್ಮಕುಂಡತೀರ್ಥ, ವಹ್ನಿಕುಂಡತೀರ್ಥ, ಸತ್ಯತೀರ್ಥ, ಚತುಃಸ್ರೋತತತೀರ್ಥ, ಚತುಃಶೃಂಗ ಶೈಲ, ದ್ವಾದಶಧಾರಾತೀರ್ಥ, ಮಾನಸ ಸರೋವರ, ಸ್ಥೂಲಶೃಂಗ ಶೈಲ, ಸ್ಥೂಲದಂಡಕ್ಷೇತ್ರ, ಊರ್ವಶೀ ತೀರ್ಥ, ಲೋಕಪಾಲತೀರ್ಥ, ಮನುವರತೀರ್ಥ, ಸೋಮಶೈಲ, ಸದಾಪ್ರಭಾತೀರ್ಥ, ಮೇರುಕುಂಡ, ಸೋಮಭಿಷೇಕ ಮಹಾಸ್ರೋತ, ಕೋಟರಕ ಕ್ಷೇತ್ರ, ಪಂಚಾಧಾರಾತೀರ್ಥ, ತ್ರೀಧಾರಾತೀರ್ಥ, ಸಪ್ತಧಾರಾತೀರ್ಥ, ಏಕಧಾರಾತೀರ್ಥ, ಅಮರಕಂಠಕತೀರ್ಥ. ಶಾಲಿಗ್ರಾಮಕ್ಷೇತ್ರ, ಚಕ್ರತೀರ್ಥ, ಕೋಟಿಧ್ರುವಕ್ಷೇತ್ರ, ದಿವ್ಯಪ್ರಭಕ್ಷೇತ್ರ, ದೇಹಹೃದಯತೀರ್ಥ, ವಿಷ್ಣುಹೃದಯತೀರ್ಥ, ಶಂಖಪ್ರಭತೀರ್ಥ, ದೇವಕುಂಡತೀರ್ಥ, ವಜ್ರಾಯುಧತೀರ್ಥ, ಅಗ್ನಿಪ್ರಭತೀರ್ಥ, ಪುಣ್ಣಾಗ ಕ್ಷೇತ್ರ, ದೇವಪ್ರಭ ಕ್ಷೇತ್ರ, ವಿದ್ಯಾಧರತೀರ್ಥ, ಗಾಂಧರ್ವತೀರ್ಥ, ಶ್ರೀತೀರ್ಥ, ಬ್ರಹ್ಮಹೃದ, ಸಾತೀರ್ಥ, ಲೋಕಪಾಲತೀರ್ಥ, ಮಣಿಪೂರಗಿರಿ ಪಂಚಹೃದ ತೀರ್ಥ, ಪಿಂಡಾರಕ ಕ್ಷೇತ್ರ, ಮಲವ್ಯ ಕ್ಷೇತ್ರ, ಗೋಷ ಪ್ರಭಾವ ಕ್ಷೇತ್ರ, ಗೋವರ ಕ್ಷೇತ್ರ, ವಟಮೂಲಕ ಕ್ಷೇತ್ರ ಸ್ನಾನದಂಡಕ್ಷೇತ್ರ, ಪ್ರಯಾಗತೀರ್ಥ, ಗುಹ್ಯತೀರ್ಥ, ವಿಷ್ಣುಪಾದಕ್ಷೇತ್ರ, ಕನ್ಯಾಶ್ರಮ, ವಾಯುಕುಂಡ, ಜಂಬೂ ಮಾರ್ಗ ಇವು ಸಹ ಪವಿತ್ರ ತೀರ್ಥಕ್ಷೇತ್ರಗಳು. ಗಭಸ್ತೀತೀರ್ಥ, ಯಯಾತಿ ಪತನವೆಂಬ ನಿರ್ಮಲವಾದ ತೀರ್ಥ, ಭದ್ರವಟವೆಂಬ ಕೋಟಿತೀರ್ಥ, ಮಹಾಕಾಲವನ, ಪಿಂಗುತೀರ್ಥ, ವಾಸಿಷ್ಠತೀರ್ಥ, ಪೃಥುಸಂಗಮತೀರ್ಥ, ನರ್ಮದಾತೀರ್ಥ, ತೀರ್ಥವಜ್ರ, ಅರ್ಬುದತೀರ್ಥ, ದುರ್ವಾಸತೀರ್ಥ, ಪಿಂಜರಕ ತೀರ್ಥ, ಋಷಿತೀರ್ಥ, ಬ್ರಹ್ಮತುಂಗತೀರ್ಥ, ವಸುತೀರ್ಥ, ಕುಮಾರೀತೀರ್ಥ, ಶಕ್ರತೀರ್ಥ, ಪಂಚನದತೀರ್ಥ, ರೇಣುಕಾತೀರ್ಥ, ಪಿತಾಮಹತೀರ್ಥ, ರುದ್ರಪಾದ ಕ್ಷೇತ್ರ, ಮಣಿಮತ್ತ, ಕಾಮತೀರ್ಥ, ಕೃಷ್ಣತೀರ್ಥ, ಕುಶಾವಿಲತೀರ್ಥ, ಯಜನಯಾಜನ, ಬ್ರಹ್ಮವಾಲುಕತೀರ್ಥ, ಪುಷ್ಪನ್ಯಾಸ, ಪುಂಡರೀಕ, ಮಣಿಪೂರ, ದೀರ್ಘಸತ್ರ ಹಯಪದ, ಅನಶನತೀರ್ಥ ಇವೆಲ್ಲವೂ ಪರಮ ಪವಿತ್ರವಾದ ತೀರ್ಥಕ್ಷೇತ್ರಗಳು.

ಗಂಗೋದ್ಭೇದ (ಗಂಗಾಮಾಲ) ಶಿವೋದ್ಭೇದ, ನರ್ಮದೋದ್ಭೇದ (ನರ್ಮದಾ ಮಾಲ) ವಸ್ತ್ರಾಪದ, ದಾರುವಾಲ, ಛಾಯಾರೋಹಣ, ಸಿದ್ಧೇಶ್ವರ, ಮಿತ್ರಬಲ, ಕಾಲಿಕಾಶ್ರಮ, ವಟಾವಟ, ಭದ್ರವಟ, ಕೌಶಾಂಬಿ, ದಿವಾಕರ ತೀರ್ಥ, ಸರಸ್ವತೀ ದ್ವೀಪ, ವಿಜಯಕ್ಷೇತ್ರ, ಕಾಮದಕ್ಷೇತ್ರ, ರುದ್ರಕೋಟಿ ತೀರ್ಥ, ಸುಮಾನಸಕ್ಷೇತ್ರ, ಸದ್ರಾವನಾಮಿತ ತೀರ್ಥ, ಸ್ಯಮಂತಕ ಪಂಚಕತೀರ್ಥ, ಸುದರ್ಶನ ಬ್ರಹ್ಮತೀರ್ಥ, ಪೃಥ್ವೀತೀರ್ಥ ಪೃಥೂದಕ ತೀರ್ಥ, ಪಾರಿಪ್ಲವತೀರ್ಥ, ದಶಾಶ್ವಯೋಧಿಕತೀರ್ಥ, ಸರ್ಪಿಸ್ತೀರ್ಧ, ವಿಷಯಾಂತಿಕ ತೀರ್ಥ, ಪಂಚನಂದವೆಂಬ ಕೋಟಿತೀರ್ಥ, ಯಕ್ಷಣೀಹೃದ ವರಾಹತೀರ್ಥ, ಪುಂಡರೀಕ ತೀರ್ಥ, ಸೋಮತೀರ್ಥ, ಮುಂಜವಟತೀರ್ಥ, ಬದರೀವನ ರತ್ನಮಾಲ ಲೋಕದ್ವಾರಾತೀರ್ಥ, ಪಂಚತೀರ್ಥ, ಕಪಿಲಾತೀರ್ಥ, ಸೂರ್ಯತೀರ್ಥ, ಶಂಖಿನಿ ತೀರ್ಥ, ದೋಭವನ ತೀರ್ಥ, ಯಕ್ಷತೀರ್ಥ, ಬ್ರಹ್ಮಾವರ್ತ, ಕಾಮೇಶ್ವರ, ಮಾತೃತೀರ್ಥ,

ಶೀತವನತೀರ್ಥ, ಸ್ನಾನ ಲೋಮಾಪಹತೀರ್ಥ, ಮಾಸಸಂಸರಕತೀರ್ಥ, ದಶಾಶ್ವಮೇಧ ಕ್ಷೇತ್ರ, ಕೇದಾರಕ್ಷೇತ್ರ, ಬ್ರಹ್ಮೋದುಂಬುರಕ್ಷೇತ್ರ, ಸಪ್ತರ್ಷಿಕುಂಡ, ಸುಜಂಭಕವೆಂಬ ದೇವೀತೀರ್ಥ, ಈಹಾಸ್ಪದತೀರ್ಥ, ಕೋಟಿ ಕೂಟ ತೀರ್ಥ, ಕಿಂದಾನತೀರ್ಥ, ಕಿಂಜಪತೀರ್ಥ, ಕಾರುಂಡವತೀರ್ಥ, ಅವೇಧ್ಯತೀರ್ಥ, ತ್ರಿವಿಷ್ಟಪ, ಪಾಣಿಖಾತತೀರ್ಥ, ಮಿಶ್ರತೀರ್ಥ, ಮಧೂವಟ ಕ್ಷೇತ್ರ, ಮನೋಜವತೀರ್ಥ, ಕೌಶಕೀತೀರ್ಥ, ದೇವತೀರ್ಥ, ಋಣವಿಮೋಚನತೀರ್ಥ, ನೃಗಧೂಮತೀರ್ಥ, ವಿಷ್ಣುಪಾದ, ಅಮರ ಹ್ರದ, ಕೋಟಿತೀರ್ಥ, ಶ್ರೀಕುಂಜ, ಶಾಲಿತೀರ್ಥ, ನೈಮಿಷಾರಣ್ಯದ ತೀರ್ಥ, ಬ್ರಹ್ಮಸ್ಥಾನ, ಸೋಮತೀರ್ಥ, ಕನ್ಯಾತೀರ್ಥ, ಬ್ರಹ್ಮತೀರ್ಥ, ಮನಸ್ತೀರ್ಥ, ಕಾರುಪಾವನ ತೀರ್ಥ, ಸೌಗಂಧೀಕವನ, ಮಣಿತೀರ್ಥ, ಸರಸ್ವತಿ, ಶ್ರೇಷ್ಠವಾದಈಶಾನ್ಯತೀರ್ಥ, ಪವಿತ್ರವಾದ ಪಂಚಯಜ್ಞ್ಯತೀರ್ಥ ಇವೆಲ್ಲವೂ ಪವಿತ್ರವಾದ ತೀರ್ಥಕ್ಷೇತ್ರಗಳು, ತ್ರಿಶೂಲ ಧಾರಾತೀರ್ಥ, ಮಹೇಂದ್ರತೀರ್ಥ ದೇವಾಲಯಗಳು, ಶಾಕಂಬರೀತೀರ್ಥ, ಸುವರ್ಣವೆಂಬ ದೇವತೀರ್ಥ ಕಲಿಹೃದ, ಕ್ಷೀರಶ್ರವ, ವಿರೂಪಾಕ್ಷ, ಭೃಗುತೀರ್ಥ, ಕುಶೋದ್ಭವ, ಬ್ರಹ್ಮ ತೀರ್ಥ, ಬ್ರಹ್ಮಯೋನಿ, ನೀಲಪರ್ವತ, ಕುಬ್ಜಾಂಬಕ, ಭದ್ರವಟ, ವಶಿಷ್ಠಾಶ್ರಮ, ಪ್ರಜಾದ್ವಾರ, ಕಾಲಿಕಾಶ್ರಮ, ರುದ್ರಾವರ್ತ, ಸುಗಂಧಾಶ್ವ ಕಪಿಲಾವನ, ಭದ್ರಕರ್ಣ ಹ್ರದ, ಶಂಕುಕರ್ಣ ಹ್ರದ, ಸಪ್ತಸರಸ್ವತತೀರ್ಥ, ಶುಕ್ರತೀರ್ಥ, ಕಪಾಲ ಮೋಚನತೀರ್ಥ, ಅವಕೀರ್ಣ ತೀರ್ಥ, ಕಾಮ್ಯಕವನ, ಚತುಸ್ಸಾಮುದ್ರಿಕತೀರ್ಥ, ಶತಕಸಹಸ್ರಕ, ರೇಣುಕತೀರ್ಥ, ಪಂಚವಟವಿಮೋಚನತೀರ್ಥ, ಔಜಸತೀರ್ಥ, ಸ್ಥಾಣುತೀರ್ಥ, ಕುರುತೀರ್ಥ ಸ್ವರ್ಗದ್ವಾರ ತೀರ್ಥ, ಕುಶಧ್ವಜತೀರ್ಥ, ವಿಶ್ವೇಶ್ವರಕ್ಷೇತ್ರ, ಮಾನವಕ, ನಾರಾಯಣ ರೂಪ, ಇವೆಲ್ಲವೂ ಪರಮ ಪವಿತ್ರವಾದ ತೀರ್ಥಕ್ಷೇತ್ರಗಳು.

ಗಂಗಾಹ್ರದ, ವಟಬದರೀಪಾಟನ, ಇಂದ್ರಮಾರ್ಗ, ಏಕರಾತ್ರ, ಕ್ಷಿರಕಾವಾಸ, ಸೋಮತೀರ್ಥ, ದಧೀಚತೀರ್ಥ, ಶ್ರುತತೀರ್ಥ, ಕೋಟಿತೀರ್ಥ ಸ್ಥಲಗಳು ಭದ್ರಕಾಲೀಹ್ರದ, ಆರುಂಧತೀವನ, ಬ್ರಹ್ಮಾವರ್ತ, ಅಶ್ವವೇದೀಕುಬ್ಜಾವನ, ಯಮುನಾ ನದಿಯ ಮೂಲ, ನೀರತೀರ್ಥ, ಪಮೋಕ್ಷತೀರ್ಥ, ಸಿಂಧುತೀರ್ಥ, ಋಷಿಕಲ್ಯಾತೀರ್ಥ, ಕೃತ್ತಿಕಾ ತೀರ್ಥ, ಭೂಸಂಕ್ರಮಣ, ಮಾಯಾವಿದ್ಯೋದ್ಭವತೀರ್ಥ, ಮಹಾಶ್ರಮ, ಚೊಂಡು ರೂಪವಾದ ಸುಂದರ್‍ಯಾಶ್ರಮ, ಬಾಹುತೀರ್ಥ, ಚಾರುನದೀ, ಅಶೋಕಕ್ಷೇತ್ರ, ತಪಸ್ವಿಯಾದ ಮಾರ್ಕಂಡೇಯನ ಪಂಚನದತೀರ್ಥ, ಸೋಮತೀರ್ಥ, ಸಿತೋದ, ಮತ್ಸ್ಯೋದರೀ ಕ್ಷೇತ್ರ ಪ್ರಕಾಶಮಾನವಾದ ಸೂರ್ಯತೀರ್ಥ, ಅಶೋಕವನ, ಅರುಣತೀರ್ಥ, ಕಾಮತೀರ್ಥ, ಶುಕ್ರತೀರ್ಥ, ವಾಲುಕಾತೀರ್ಥ, ಪಿಶಾಚಮೋಚನಾತೀರ್ಥ, ಸುಭದ್ರಾಹ್ರದ, ವಿಮಲದಂಡ ಕುಂಡ, ಚಂಡೇಶ್ವರತೀರ್ಥ, ಜ್ಯೇಷ್ಠಸ್ಥಾನಹ್ರದ, ಬ್ರಹ್ಮಸರಸ್ಸು, ಜೈಗೀಷವ್ಯಗುಹೆ, ಹರಿಕೇಶವನ ಅಜಾಮುಖಸರಸ್ಸು, ಘಂಟಾಕರ್ಣಹ್ರದ, ಪುಂಡರೀಕಹ್ರದ, ಕರ್ಕೋಟವಾಪಿ, ಸುವರ್ಣವಾಪಿ, ಶ್ವೇತತೀರ್ಥಹ್ರದ, ಘರ್ಘರಿಕಾಕುಂಡ, ಶ್ಯಾಮರೂಪ, ಚಂದ್ರಿಕಾ ತೀರ್ಥ, ಸ್ಮಸಾನಸ್ತಂಭಕೂಪ, ವಿನಾಯಕಹ್ರದ, ಸಿಂಧೂರೂಪ, ಬ್ರಹ್ಮಸರಸ್ಸು ರುದ್ರತೀರ್ಥ, ನಾಗತೀರ್ಥ, ಪ್ರಲೋಮತೀರ್ಥ, ಭಕ್ತಹ್ರದ, ಕ್ಷೀರಸರಸ್ಸು, ಪ್ರೇಧಾರತೀರ್ಥ, ಕುಮಾರತೀರ್ಥ, ಬ್ರಹ್ಮಾವರ್ತ, ಕುಶಾವರ್ತ, ದಧಿಕರ್ಣ ಸರಸ್ಸು, ಶೃಂಗ ತೀರ್ಥ,

ಮಹಾತೀರ್ಥ, ತೀರ್ಥೋತ್ತಮವಾದ ಮಹಾನದಿ, ಸ್ವರ್ಗಲೋಕದ ಬ್ರಹ್ಮಸರಸ್ಸು, ಗಯಾ ಶೀರ್ಷದಲ್ಲಿರುವ ಅಕ್ಷಯ ವಟ, ದಕ್ಷಿಣ ತೀರ್ಥ, ಉತ್ತರ ತೀರ್ಥ, ಗೋಮಯಕ್ಷೇತ್ರ, ರೂಪಶೀತಿಕತೀರ್ಥ, ಕಪಿಲಾಹ್ರದ, ಗೃಧ್ರವಟ, ಸಾವಿತ್ರೀಹ್ರದ, ಪ್ರಭಾಸನಕ್ಷೇತ್ರ, ಸೀತವನ, ಯೋನಿ ದ್ವಾರ, ಧೇನುಕವನ, ಧನ್ಯಕವನ, ಕೋಕಿಲವನ, ಮತಂಗಹ್ರದ, ಪಿತೃರೂಪ ರುದ್ರತೀರ್ಥ, ಶಕ್ರತೀರ್ಥ, ಸುಮಾಲಿತೀರ್ಥ, ಬ್ರಹ್ಮಸ್ಥಾನ, ಸಪ್ತಕುಂಡ, ಮಣಿರತ್ನಹ್ರದ, ಕೌಶಿಕ್ಯ ತೀರ್ಥ, ಭರತತೀರ್ಥ, ಜ್ಯೇಷ್ಠಾಲಿಕಾ ತೀರ್ಥ, ವಿಶ್ವೇಶ್ವರತೀರ್ಥ, ಕಲ್ಪಸರಸ್ಸು, ಕನ್ಯಾಹ್ರದ, ನಿಶ್ಚೀವಾತೀರ್ಥ, ವಶಿಷ್ಠಾಶ್ರಮ ದೇವಕೂಟ, ದೇವಕೂಪ, ವೀರಾಶ್ರಮ, ಬ್ರಹ್ಮಸರಸ್ಸು, ಬ್ರಹ್ಮವೀರಾವರಾಪಿಲೀತೀರ್ಥ, ಕುಮಾರಧಾರಾತೀರ್ಥ, ಶ್ರೀಧಾರಾತೀರ್ಥ, ಗೌರೀಶಿಖರ, ಶ್ವಕುಂಡ, ನಂದಿತೀರ್ಥ, ಇವೆಲ್ಲವೂ ಪವಿತ್ರವಾದ ತೀರ್ಥಕ್ಷೇತ್ರಗಳು.

ಮುನಿಗಳೇ, ಈ ತೀರ್ಥಕ್ಷೇತ್ರಗಳಲ್ಲಿ ಮಾನವನು ಜಿತೇಂದ್ರಿಯನಾಗಿ ಉಪವಾಸವಿದ್ದು ವಿಧಿವತ್ತಾಗಿ ಸ್ನಾನಮಾಡಿ ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ ತರ್ಪಣವನ್ನು ಕೊಡಬೇಕು. ಮನುಷ್ಯರಿಗೆ ಸಂತರ್ಪಣೆ ಮಾಡಬೇಕು. ಅಂತಹ ತೀರ್ಥಗಳಲ್ಲಿ ದೇವತೆಗಳನ್ನರ್ಚಿಸುತ್ತಾ ಮೂರು ರಾತ್ರಿಗಳಿರಬೇಕು. ಹೀಗೆ ಪ್ರತಿಯೊಂದು ತೀರ್ಥದಲ್ಲಿಯೂ ಮಾಡಿದರೆ ಒಂದೊಂದು ಕಡೆಯೂ ಅಶ್ವಮೇಧಯಾಗ ಮಾಡಿದುದರ ಫಲವನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ. ಅಲ್ಲದೇ ವಾಲಖಿಲ್ಯ ಹೃದವೂ ಮಿಕ್ಕ ಮಹರ್ಷಿಗಳ ಪವಿತ್ರವಾದ ಹೃದಗಳೂ ಇರುವವು.

ಈ ತೀರ್ಥಮಹಾತ್ಮ್ಯವನ್ನು ಕೇಳಿದವರ, ಓದಿದವರ ಹಾಗೂ ಇನ್ನೊಬ್ಬರಿಗೆ ಹೇಳಿದವರ ಸಕಲ ಪಾಪಗಳೂ ನಾಶವಾಗುವವು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹತ್ತನೇಯ ಅಧ್ಯಾಯ ಮುಗಿದುದು*

—o—

## ಬ್ರಹ್ಮಬ್ರಹ್ಮರ್ಷಿ ಸಂವಾದದಲ್ಲಿ ಪ್ರಶ್ನ ನಿರೂಪಣ | ಅಧ್ಯಾಯ - ೧೧

**ಶೌನಕಾದಿ ಮುನಿಗಳು:-** ಸೂತಮುನಿಯೆ, ಈ ಭೂಲೋಕದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಹೆಸರಿನ ನಾಲ್ಕು ಪುರುಷಾರ್ಥಗಳಿಗೂ ಸಾಧಕವಾಗುವಂಥ ಉತ್ತಮ ಭೂಮಿ ಯಾವುದು? ತೀರ್ಥಗಳಲ್ಲಿ ಉತ್ತಮ ತೀರ್ಥ ಯಾವುದು? ಇದನ್ನೆಲ್ಲ ನೀನು ನಮಗೆ ಹೇಳು. ನೀನು ಪುರಾಣ ಪ್ರವಚನಕಾರರಲ್ಲಿ ಸರ್ವಶ್ರೇಷ್ಠನು.

**ಸೂತಮುನಿ:-** ಬ್ರಾಹ್ಮಣರೇ, ಈಗ ನೀವು ನನಗೆ ಕೇಳಿದ ಪ್ರಶ್ನೆಯನ್ನೇ ಹಿಂದೆ ನಮ್ಮ ಗುರುಗಳಾದ ವೇದವ್ಯಾಸರಿಗೆ ಮಹರ್ಷಿಗಳು ಕೇಳಿದ್ದರು. ಆ ಭಗವಾನ್ ಬಾದರಾಯಣರು ಋಷಿಗಳಿಗೆ ಹೇಳಿದ ಉತ್ತರವನ್ನೇ ನಾನು ನಿಮಗೆ ಹೇಳುತ್ತೇನೆ ಕೇಳಿರಿ. ಶ್ರೀ ವೇದವ್ಯಾಸರು ತಮ್ಮ ಆಶ್ರಮದಲ್ಲಿ ಕುಳಿತಿದ್ದರು. ಅಲ್ಲಿ ಹೂವಿನ ಹಂದರಗಳಂತೆ ಇರುವ ಅನೇಕ ಸುಂದರ ಮರಬಳ್ಳಿಗಳು, ಹೂ, ಹಣ್ಣು, ಕಾಯಿ, ಚಿಗುರು, ಕುಡಿಮಿಡಿಗಳ ಭಾರದಿಂದ ತೊನೆದು ತೂಗಾಡುತ್ತಿದ್ದವು.ಪುನ್ನಾಗ ಕರ್ಣಿಕಾರ, ದೇವದಾರು, ಸರಲ, ಖದಿರ, ಪಾದರಿ, ಸಂಪಿಗೆ, ತಾಳೆ, ಮತ್ತಿ ಮುಂತಾದ ಬಗೆಬಗೆಯ ತರುಸ್ತೋಮಗಳು. ಲತಾಪ್ರತಾನಗಳು ಆಶ್ರಮದ

ಸುತ್ತುಮುತ್ತು ಒಂದು ಕಾನನದ ಕಾವಣವನ್ನೇ ನಿರ್ಮಿಸಿದ್ದವು. ಕುರುಕ್ಷೇತ್ರದಲ್ಲಿ ಇದ್ದಿತು ಪರಮಪವಿತ್ರವಾದ ಈ ವ್ಯಾಸಾಶ್ರಮ. ಆಶ್ರಮದ ಸುತ್ತಮುತ್ತಲಿನ ಪರಿಸರ ಪ್ರದೇಶದಲ್ಲಿ ಇರುವ ಫಲಪುಷ್ಪ ಭರಿತವಾದ ಈ ಎಲ್ಲ ಹೆಮ್ಮರಗಳ ಗುಂಪು ಹಾಗೂ ಲತಾಕುಂಜ-ನಿಕುಂಜಗಳು ಆ ಪುಣ್ಯಾರಣ್ಯದ ಮಧ್ಯದಲ್ಲಿರುವ ಪವಿತ್ರ ಆಶ್ರಮಕ್ಕೆ ಒಂದು ಆಧ್ಯಾತ್ಮಿಕ ಹಿನ್ನೆಲೆಯನ್ನು ಒದಗಿಸಿದ್ದವು. ಇಂತಹ ವಿಜನವನಾಂತದ ಏಕಾಂತ ರಮಣೀಯವಾದ ಪವಿತ್ರ ಆಶ್ರಮದಲ್ಲಿ ಮಹಾಭಾರತದಂತ ಹೆಬ್ಬೊತ್ತಿಗೆಯನ್ನೂ, ಬ್ರಹ್ಮಸೂತ್ರಗಳನ್ನೂ, ಅಷ್ಟಾದಶ ಪುರಾಣಗಳನ್ನೂ ಬರೆದ ಪ್ರಪಂಚದ ತುಂಬ ಜ್ಞಾನಪ್ರಸಾರ ಕಾರ್ಯಮಾಡಿದ ಭಗವಾನ್ ಬಾದರಾಯಣರು ಆತ್ಮಚಿಂತನ ಮಾಡುತ್ತ ಕುಳಿತುಕೊಂಡಿದ್ದರು. ತಿಳುವಳಿಕೆಯ ತಡಸಲಿನಂತೆ ಇರುವ ತಾವರೆಗಣ್ಣಿನ ಆ ಭಗವಾನ್ ಬಾದರಾಯಣರನ್ನು ಕಾಣಲು ಒಂದು ದಿನ ಒಂದು ಬ್ರಹ್ಮಜ್ಞಾನಿಗಳ ತಂಡವೇ ಆ ಆಶ್ರಮಕ್ಕೆ ಆಗಮಿಸಿತು. ಕಶ್ಯಪ, ಜಮದಗ್ನಿ, ಭರದ್ವಾಜ, ಗೌತಮ, ವಶಿಷ್ಠ, ಜೈಮಿನಿ, ಧೌಮ್ಯ, ಮಾರ್ಕಂಡೇಯ, ವಾಲ್ಮೀಕಿ, ವಿಶ್ವಾಮಿತ್ರ, ಶತಾನಂದ, ವಾತ್ಸಾಯನ, ಗಾರ್ಗ್ಯ, ಆಸುರಿ, ಸುಮಂತು, ಭಾರ್ಗವ, ಕಣ್ವ, ಮೇಧಾತಿಥಿ, ಮಾಂಡವ್ಯ, ಚ್ಯವನ, ಧೂಮ್ರ, ಸಿತ, ದೇವಲ, ಮೌದ್ಗಲ್ಯ, ತೃಣಯಜ್ಞ, ಪಿಪ್ಪಲಾದ, ಅಕೃತವ್ರಣ ಸಂವರ್ತ, ಕೌಶಿಕ, ರೈಭ್ಯ, ಮೈತ್ರೇಯ, ಹರಿತ, ಶಾಂಡಿಲ್ಯ, ವಿಭಾಂಡಕ, ದುರ್ವಾಸ, ಲೋಮಶ, ನಾರದ, ಪರ್ವತ, ವೈಶಂಪಾಯನ, ಗಾಲವ, ಭಾಸ್ಕರೀ, ಪೂರಣ, ಸೂತಮುನಿ, (ಸ್ವಯಂ) ಪುಲಸ್ತ್ಯ, ಕಪಿಲ, ಉಲೂಕ, ಪುಲಹ, ಸನತ್ಕುಮಾರ, ಪೈಲ, ಕೃಷ್ಣಭಕ್ತ ಕೃಷ್ಣಮುನಿಯೇ ಮೊದಲಾದ ಅನೇಕಾನೇಕ ಮಹಾನುಭಾವರಾದ ಬ್ರಹ್ಮರ್ಷಿಗಳು ವ್ಯಾಸರ ದರ್ಶನಕ್ಕಾಗಿ ಅಲ್ಲಿಗೆ ಆಗಮಿಸಿದರು. ಅವರೆಲ್ಲರಿಗೂ ಬಾದರಾಯಣರು ಸ್ವಾಗತ ಕೋರಿ ಆಸನವಿತ್ತು ಉಪಚರಿಸಿದರು. ಪರಸ್ಪರ ಕುಶಲ ಪ್ರಶ್ನೆಗಳು ಆದನಂತರ ಆಗಮನಿಸಿದ ಆ ಎಲ್ಲ ಮುನಿಗಳು ಸತ್ಯವತೀ ಕುಮಾರರಾದ ಆ ದ್ವೈಪಾಯನರಿಗೆ ಪ್ರಶ್ನೆ ಮಾಡಿದರು.

**ಮುನಿಗಳು:-** ವೇದವ್ಯಾಸರೇ, ವೇದಶಾಸ್ತ್ರಗಳನ್ನೂ ಪುರಾಣಗಳನ್ನು ಭಾರತ ಗಳನ್ನೂ ಚೆನ್ನಾಗಿ ತಿಳಿದು ಗ್ರಂಥ ರಚನೆ ಮಾಡಿದ ತಾವು ಸರ್ವಜ್ಞರೇ ಸರಿ. ತ್ರಿಕಾಲದಲ್ಲಿ ನಡೆಯುವುದೆಲ್ಲವೂ ತಮಗೆ ತಿಳಿದಿರುತ್ತದೆ. ಘೋರವಾದ ಈ ಸಂಸಾರ ಸಮುದ್ರವನ್ನು ದಾಟಲಾರದೇ ಈ ಪ್ರಾಣಿಗಳು ಮುಳುಗಿ ಸಾಯುತ್ತಲಿವೆ. ಮೇಲೆ ಬರಲು ಅವುಗಳಿಗೆ ಯಾವ ಆಧಾರವೂ ಇಲ್ಲ: ಶಕ್ತಿಯೂ ಇಲ್ಲ; ಅದಕ್ಕೆ ಉಪಾಯವನ್ನು ಕೇಳಲು ನಾವು ನಿಮ್ಮ ಬಳಿಗೆ ಬಂದಿದ್ದೇವೆ. ಈ ಸಂಸಾರ ನಿಜವಾಗಿಯೂ ಭಯಂಕರ. ಅದರ ನೆನಪಾದರೆ ಮೈಯಲ್ಲಿ ನಡುಕ ಬರುವದು. ಮೈತುಂಬ ಭೀತಿಯಿಂದ ರೋಮರಾಜಿ ನಿಮಿರಿ ನಿಲ್ಲುವದು. ಇಂತಹ ಘೋರತರವಾದ ಸಂಸಾರವೆಂಬ ಶರಧಿಯನ್ನು ಸುಖರೂಪವಾಗಿ ದಾಟುವ ಸುಲಭೋಪಾಯ ಯಾವುದು? ಅದನ್ನು ಹೇಳಿ ತಾವು ಜನರನ್ನು ಉದ್ಧರಿಸಬೇಕು. ಈ ಭವಬಂಧನದಿಂದ ಜೀವಿಗಳ ಬಿಡುಗಡೆ ಮಾಡುವ ಪವಿತ್ರ ತೀರ್ಥ ಯಾವುದು? ಶ್ರೇಷ್ಠ ಕ್ಷೇತ್ರ ಯಾವುದು? ಈ ಮರ್ತ್ಯಲೋಕದಲ್ಲಿ ಕರ್ಮಭೂಮಿಯೆಂದು ಯಾವ ಸ್ಥಳವನ್ನು ಹೇಳುತ್ತಾರೆ? ಇದೆಲ್ಲವನ್ನೂ ತಾವು ನಮಗೆ ಹೇಳಿರಿ.

**ವೇದವ್ಯಾಸ:-** ಬ್ರಾಹ್ಮಣೋತ್ತಮರೇ, ನೀವು ಕೇಳಿದ ವಿಷಯದ ಬಗೆಗೆ ಪೂರ್ವ ಕಾಲದಲ್ಲಿ ಬ್ರಹ್ಮದೇವರಿಗೂ, ಕೆಲವು ಬ್ರಹ್ಮರ್ಷಿಗಳಿಗೂ ಮಾತುಕತೆಗಳು ನಡೆದಿದ್ದವು.

ಅದನ್ನೇ ನಾನು ನಿಮಗೆ ಹೇಳುವೆ ಕೇಳಿ. ಒಂದಾನೊಂದು ದಿನ ಮೇರುಗಿರಿಯ ಉತ್ತುಂಗವಾದ ಶೃಂಗಾಂಗಣದಲ್ಲಿ ಬ್ರಹ್ಮದೇವರು ಕುಳಿತು ಕೊಂಡಿದ್ದರು. ಆ ಪ್ರದೇಶವು ಅನೇಕ ಗೈರಿಕಾಧಾತುಗಳಿಂದಲೂ, ಸೊಂಪಾಗಿ ಬೆಳೆದ ಮರಬಳ್ಳಿಗಳಿಂದಲೂ, ಹೂವು ಹಣ್ಣುಗಳಿಂದಲೂ ಮನೋಹರವಾಗಿ ಕಂಗೊಳಿಸುತ್ತಿತ್ತು. ಹಕ್ಕಿಗಳ ಕಲಕಲ ಮಧುರ ನಾದವು ಇಂಪಾಗಿ ಕೇಳಿ ಬರುತ್ತಿತ್ತು. ಅನೇಕ ತಪಸ್ವಿಗಳು ಅಲ್ಲಿ ಆಶ್ರಮಗಳನ್ನು ಕಟ್ಟಿಕೊಂಡು ತಪಸ್ಸನ್ನು ಆಚರಿಸುತ್ತಿದ್ದರು. ಮಲಯ ಮಾರುತವು ಅಲ್ಲಿನ ತರುವೃಂದದ ಸೌಗಂಧವನ್ನು ತೀಡುತ್ತ ಮಂದಮಂದವಾಗಿ ಬೀಸುತ್ತಿತ್ತು. ಈ ಸಂದರ್ಭದಲ್ಲಿ ಋಷಿಗಳು ಕೇಳುವ ಪ್ರಶ್ನೆಗೆ ಭಗವಾನ್ ವ್ಯಾಸ ಮುನಿಗಳು ಉತ್ತರವನ್ನು ಈ ರೀತಿಯಾಗಿ ಹೇಳಿದರು.

## ಭಾರತವರ್ಷ ಕೀರ್ತನ

**ಬ್ರಹ್ಮ:-** ಮಹರ್ಷಿಗಳೇ, ಈ ಜಗತ್ತಿನಲ್ಲಿ ಭಾರತ ವರ್ಷವೇ ಕರ್ಮಭೂಮಿ. ಇಲ್ಲಿ ಮಾಡಿದ ಕರ್ಮಗಳ ಫಲವನ್ನು ಅನುಭವಿಸುವದು ಸ್ವರ್ಗ ಮತ್ತು ನರಕಾದಿಲೋಕಗಳಲ್ಲಿ. ಭಾರತವೆಂಬ ಈ ಭೂಖಂಡದಲ್ಲಿ ಪುಣ್ಯಕಾರ್ಯ ಮಾಡಿದವರು ಸ್ವರ್ಗದಲ್ಲಿ ಒಳ್ಳೆಯ ಫಲವನ್ನು, ದುಷ್ಕರ್ಮ ಮಾಡಿದವನು ನರಕದಲ್ಲಿ ಅದರ ಕೆಟ್ಟ ಫಲವನ್ನು ಅನುಭವಿಸುವರು. ಈ ಭರತಖಂಡದಲ್ಲಿ ಎಲ್ಲ ಜಾತಿ ಜನಾಗಂದ ಜನರು ತಮ್ಮ ತಮ್ಮ ವರ್ಣ ಮತ್ತು ಆಶ್ರಮಗಳಿಗೆ ವಿಹಿತವಾದ ಧರ್ಮಕರ್ಮಾನುಷ್ಠಾನ ಮಾಡುತ್ತ ಇಂದ್ರಿಯಗಳನ್ನೆಲ್ಲ ವಶದಲ್ಲಿ ಇಟ್ಟುಕೊಂಡು, ಶಾಸ್ತ್ರೋಕ್ತವಾದ ವ್ರತನಿಯಮಗಳನ್ನು ಮಾಡುತ್ತ, ಸ್ವಧರ್ಮನಿಷ್ಠರಾಗಿ ಇದ್ದರೆ ಅರ್ಥವನ್ನೂ, ಕಾಮವನ್ನೂ, ಧರ್ಮವನ್ನೂ, ಕೊನೆಯಲ್ಲಿ ಮುಕ್ತಿಯನ್ನೂ ಸಹ ಪಡೆಯುತ್ತಾರೆ. ಹಿಂದೆ ಇಂದ್ರಾದಿ ದೇವತೆಗಳೂ ಸಹ ಈ ಭರತಖಂಡದಲ್ಲೇ ಇದ್ದು ಪುಣ್ಯಕರ್ಮಗಳನ್ನು ಮಾಡಿ ದೇವೋತ್ತಮಪದವಿಗಳನ್ನು ಹೊಂದಿದ್ದಾರೆ. ಈಗ ಸ್ವರ್ಗಗಳಲ್ಲಿದ್ದು ವಿಮಾನದಲ್ಲಿ ಸುರಸುಂದರಿಯರೊಡನೆ ಚಕ್ಕಂದ ವಿಹಾರಗೈಯುವ ಪುಣ್ಯವಂತರೆಲ್ಲ ಹಿಂದೆ ಈ ಭರತಖಂಡದಲ್ಲಿ ಶಾಸ್ತ್ರೋಕ್ತ ಕ್ರಮಗಳನ್ನು ಆಚರಿಸಿ ಭಗವದ್ಭಕ್ತರಾಗಿ ಇದ್ದವರೇ. ಸುರಲೋಕದ ದೇವತೆಗಳೂ ಕೂಡ ಈ ಭಾರತವರ್ಷದಲ್ಲಿ ನೆಲೆಸಬೇಕು ಎಂದು "ನಾವು ಎಂದು ಸಾಧನಭೂಮಿಯಾದ ಈ ಭರತಭೂಮಿಯಲ್ಲಿ ಹುಟ್ಟಿ ಬರುವೆವು?" ಎಂಬಂಥ ಕುತುಹಲವುಳ್ಳವರಾಗಿರುತ್ತಾರೆ.

**ಮುನಿಗಳು:-** ಈ ಭಾರತ ದೇಶದಲ್ಲಿ ಹುಟ್ಟಿಯೇ ಕರ್ಮಮಾಡಿ ಆಧ್ಯಾತ್ಮ ಸಾಧನೆಗೈದು ಮಾನವರು ಸ್ವರ್ಗವನ್ನಾಗಲೀ, ಅಪವರ್ಗವನ್ನಾಗಲೀ ಪಡೆಯಬಹುದು ಎಂದು ತಾವು ಹೇಳಿದಿರಷ್ಟೇ. ಭರತಖಂಡದ ಹೊರತು ಬೇರೆಡೆಗೆ ಮಾಡಿದ ಕರ್ಮಗಳೆಲ್ಲವೂ ನಿಷ್ಫಲ. ಕರ್ಮ ಮಾಡಬೇಕಾದರೆ ಭಾರತಕ್ಕೆ ಬರಬೇಕು. ಎಂದು ತಾವು ಹೇಳಿದಿರಿ. ಅಂಥ ಪುಣ್ಯಭೂಮಿಯಾದ ಭಾರತದ ವಿಸ್ತಾರವಾದ ಸ್ಥಿತಿಗಳನ್ನು ಹೇಳಿರಿ. ಈ ಭರತಖಂಡದಲ್ಲಿ ಎಷ್ಟು ದೇಶಗಳು ಇವೆ? ಎಷ್ಟು ವರ್ಷಪರ್ವತಗಳು ಇರುತ್ತವೆ? ಇತ್ಯಾದಿ ವಿಷಯಗಳನ್ನು ನಿರೂಪಿಸಿರಿ.

**ಬ್ರಹ್ಮದೇವ:-** ಮಹನಿಯರೆ, ಈ ಭರತಖಂಡವು ಒಂಬತ್ತು ಉಪಖಂಡಗಳಿಂದ ಒಡಗೂಡಿದೆ. ಈ ಒಂಬತ್ತು ಭಾಗಗಳ ನಡುವೆ ಸಮುದ್ರ, ಇಂದ್ರದ್ವೀಪ, ಕಶೇರು, ತಾಮ್ರವರ್ಣ, ಗಭಸ್ತಿಮಾನ್, ನಾಗದ್ವೀಪ, ಸೌಮ್ಯ, ಗಾಂಧರ್ವ, ವರುಣ ಎಂಬುದಾಗಿ ಎಂಟು ದ್ವೀಪಗಳು ಇರುತ್ತವೆ. ಭಾರತವೇ ಒಂಬತ್ತನೇ ದ್ವೀಪ. ಇದರ ಸುತ್ತಲೂ

ಸಾವಿರಯೋಜನ ವಿಸ್ತೀರ್ಣವಾದ ಅಗಾಧಸಾಗರ ದಕ್ಷಿಣೋತ್ತರದವರೆಗೆ ಹರಡಿರುತ್ತದೆ. ಇದರ ಪೂರ್ವ ನಿಟ್ಟಿನಲ್ಲಿ ಕಿರಾತರಿರುತ್ತಾರೆ. ಪಶ್ಚಿಮದಲ್ಲಿ ಯವನರು. ಮಧ್ಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚತುರ್ವರ್ಣದ ಜನ ಇರುತ್ತಾರೆ. ಬ್ರಾಹ್ಮಣರು ಯಜ್ಞಯಾಗಾದಿಗಳಿಂದ, ಕ್ಷತ್ರಿಯರು ದೇಶದ ರಕ್ಷಣೆಗಾಗಿ ಯುದ್ಧ ಮಾಡುವದರಿಂದ, ವೈಶ್ಯರು ವ್ಯಾಪಾರ ಮಾಡುವದರಿಂದ, ಶೂದ್ರರು ಗೋಸೇವೆ ಹಾಗೂ ಉತ್ತಮ ವರ್ಣದವರ ಸೇವೆಮಾಡುವದರಿಂದ ಜೀವನ ಸಾಗಿಸುವರು. ಇವರು ಸ್ವರ್ಗಾದಿ ಲೋಕಗಳಿಗೆ ಕಾರಣವಾಗಬಹುದಾದ ಪುಣ್ಯ ಸಂಪಾದನೆ ಮಾಡುತ್ತಾರೆ. ಅಯೋಗ್ಯ ಜೀವರು ಸ್ವಕೀಯ ಕರ್ತವ್ಯಗಳಿಂದ ಭ್ರಷ್ಟರಾಗಿ ನರಕಕ್ಕೆ ಕಾರಣವಾದ ಪಾಪವನ್ನು ಸಂಪಾದಿಸುವರು. ಇಹಜೀವನ ಗತಿಸಿದ ನಂತರ ಈರ್ವರೂ ತಮ್ಮ ತಮ್ಮ ಕರ್ಮಾನುಸಾರ ಫಲಪಡೆಯುವರು. ಮಹೇಂದ್ರ, ಮಲಯ, ಶುಕ್ತಿಮಾನ, ಋಕ್ಷಪರ್ವತ, ವಿಂಧ್ಯ, ಪಾರಿಯಾತ್ರ ಎಂಬ ಏಳು ಕುಲಪರ್ವತಗಳು ಭಾರತದಲ್ಲಿ ಇರುವವು. ಈ ಗಿರಿಗಳ ಸಮೀಪದಲ್ಲಿ ಇನ್ನೂ ಅನೇಕ ಆಶ್ಚರ್ಯಕರವಾದ ತಪ್ಪಲುಗಳುಳ್ಳ ಮನೋಹರವಾದ, ಗಾತ್ರದಲ್ಲಿ ಔನ್ನತ್ಯದಲ್ಲಿ ಹಿರಿದಾದ ಪರ್ವತಗಳು ಇರುವವು. ಸಹಸ್ರಾರು ಪ್ರಸಿದ್ಧ ಪರ್ವತಗಳು ಭಾರತದಲ್ಲಿವೆ. ಅವುಗಳಲ್ಲಿ ಕೋಲಾಹಲ, ವೈಭ್ರಾಜ, ಮಂದರ, ದುರ್ದರಾಚಲ, ವಾತಂಧಯ, ವೈದ್ಯುತ, ಮೈನಾಕ, ಸುರಸ, ತುಂಗಪ್ರಸ್ಥ, ನಾಗಗಿರಿ, ಗೋವರ್ಧನ, ಪಾಂಡರಾಚಲ, ಪುಷ್ಪಗಿರಿ, ವೈಜಯಂತ, ರೈವತ, ಅರ್ಬುದಗಿರಿ, ಋಷ್ಯಮೂಕ, ಗೋಮಂಥ, ಕೃತಶೈಲ, ಕೃತಾಚಲ, ಶ್ರೀಪರ್ವತ, ಚಕೋರ ಇವು ಮಾತ್ರವಲ್ಲದೇ ಇನ್ನೂ ಅನೇಕ ಗಿರಿಗಳು ಈ ಭರತಖಂಡದಲ್ಲಿವೆ. ಈ ಬೆಟ್ಟಗಳು ಎಷ್ಟು ವಿಸ್ತೃತವಾಗಿವೆಯೆಂದರೆ ಇವುಗಳಲ್ಲಿ ಕೆಲಕೆಲ ಬೆಟ್ಟಗಳು ಯವನದೇಶಗಳಲ್ಲೂ ವ್ಯಾಪಿಸಿವೆ. ಇದು ಇಲ್ಲಿನ ಬೆಟ್ಟಗಳ ವಿವರ.

ಇನ್ನು ನದಿಗಳ ಬಗೆಗೆ ಹೇಳುವೆ ಕೇಳಿರಿ. ಗಂಗಾ, ಸರಸ್ವತೀ, ಸಿಂಧು, ಚಂದ್ರಭಾಗಾ, ಯಮುನಾ, ಶತದ್ರು, ವಿಪಾಶಾ, ವಿತಸ್ತಾ, ಇರಾವತೀ, ಕುಹೂ, ಗೋಮತೀ, ಧೂತಪಾಪಾ, ಬಾಹುದಾ, ದೃಷದ್ವತೀ, ದೇವಿಕಾ, ಚಕ್ಷುಃ, ನಿಷ್ಠೀವಾ ಗಂಡಕೀ, ಕೌಶಿಕೀ, ಈ ನದಿಗಳು ಹಿಮಾಲಯದಿಂದ ಹೊರಟಿರುವ ನದಿಗಳು, ಇನ್ನು ಪಾರಿಯಾತ್ರ ಗಿರಿಯಿಂದ ಹೊರಟ ನದಿಗಳು ಇಂತಿವೆ :- ದೇವಸ್ಮೃತಿ, ದೇವವತೀ, ವಾತಘ್ನೀ, ಸಿಂಧು, ವೇಣ್ಯಾ, ಚಂದನಾ, ಸದಾನೀರಾ, ಮಹೀ, ಚರ್ಮಣ, ವೃಷೀ, ವಿದಿಶಾ, ಸಿಪ್ರಾ ಮತ್ತು ಅವಂತೀ. ಋಕ್ಷಗಿರಿಯಿಂದ ಹೊರಟ ನದಿಗಳು ಹೀಗಿವೆ :- ಶೋಣಾನದಿ, ಮಹಾನದಿ, ನರ್ಮದಾನದಿ, ಸುರಥಾನದಿ, ಕ್ರಿಯಾನದಿ, ಮಂದಾಕಿನಿನದಿ, ದಶಾರ್ಣಾನದಿ, ಚಿತ್ರಕೂಟಾನದಿ, ಚಿತ್ರೋತ್ಪಲಾನದಿ, ನೇತ್ರವತಿ ನದಿ, ಕರಮೋದಾ ನದಿ, ಪಿಶಾಚಿಕಾ ನದಿ, ಅತಿಲಘುಶ್ರೋಣಿ ನದಿ, ವಿಪಾಪ್ಮಾ ನದಿ, ಶೈವಲಾ ನದಿ, ಧೇರುಜಾ ನದಿ, ಶಕ್ತಿಮತಿ ನದಿ, ಶಕುನೀ ನದಿ, ತ್ರಿದಿವಾ ನದಿ, ಕ್ರಮುನದಿ ಮತ್ತು ವೇಗವಾಹಿನಿ, ಶ್ರೀಪಾ, ಪಯೋಷ್ಣೀ, ನಿರ್ವಿಂಧ್ಯಾ, ತಾಪಿ, ವೇಣಾ, ವೈತರಣಿ, ಸಿನೀವಾಲಿ, ಕಮುದ್ವತಿ, ತೋಯಾ, ಮಹಾಗೌರೀ, ದುರ್ಗಾ, ಅಂತಶ್ಶಿಲಾ, ಈ ಪಾವನ ನದಿಗಳು ವಿಂಧ್ಯಗಿರಿಯಿಂದ ಪ್ರವಹಿಸಿವೆ. ಗೋದಾವರಿ, ಭೀಮರಥಿ, ಕೃಷ್ಣವೇಣಿ, ತುಂಗಭದ್ರಾ, ಸುಪ್ರಯೋಗಾ, ಪಾಪನಾಶಿನೀ, ಈ ನದಿಗಳು ಸಹ್ಯಪರ್ವತದಿಂದ ಹೊರಟಿವೆ. ಪುಷ್ಯಜಾನದಿ, ತಾಮ್ರಪರ್ಣಿ, ಪ್ರತ್ಯಲಾವತೀ ನದಿ, ಕೃತಮಾಲಾ ಈ ತಂಪಾದ ನೀರುಳ್ಳ ನದಿಗಳು ಮಲಯಗಿರಿಯಿಂದ ಹೊರಟಿವೆ. ವಂಶಕರಾ, ವಂಜುಲಾ, ತ್ರಿದಿವಾಲಾಂಗುಲಿನೀ, ಪಿತೃಕುಲ್ಯಾ, ಸೋಮಕುಲ್ಯಾ, ಋಷಿಕುಲ್ಯಾ ನದಿಗಳು ಮಹೇಂದ್ರಗಿರಿಯಿಂದ ಹೊರಟಿವೆ. ಈ

ನದಿಗಳು ಬಹಳೇ ಪವಿತ್ರ ಆಗಿವೆ. ಇವುಗಳ ನೀರು ಮಧುರವಾದುದು. ಈ ಎಲ್ಲ ನದಿಗಳು ಸಮುದ್ರವನ್ನು ಸೇರುತ್ತವೆ. ಈ ನದಿಗಳು ಪ್ರಾಣಿಗಳ ಪಾಪವನ್ನು ಹೋಗಲಾಡಿಸುವದರಿಂದ ಇವುಗಳನ್ನು ಜಗತ್ತಿನ ಮಾತೆ ಎಂದು ಗೌರವಿಸುತ್ತಾರೆ. ಕೆಲವು ನದಿಗಳು ಮಳೆಗಾಲದಲ್ಲಿ ಮಾತ್ರ ಹರಿಯುವವು. ಕೆಲವು ಯಾವಾಗಲೂ ಹರಿಯುವವು. ಇಂತಹ ಚಿಕ್ಕನದಿಗಳು ಸಾವಿರಾರು ಇರುವವು. ಮತ್ಸ್ಯದೇಶ, ಮುಕುಟ, ಕುಲ್ಯದೇಶ, ರಾಶಿಕೋಪಲ, ಆಂಧ್ರ, ಕಲಿಂಗದೇಶ, ಶಮಕದೇಶ, ವೃಕದೇಶ ಇವುಗಳು ಭರತಖಂಡದ ಮಧ್ಯದೇಶಗಳು.

ಗೋದಾವರಿ ನದಿಯು ಹರಿಯುವ ಸಹ್ಯಗಿರಿಯಿಂದುತ್ತರಕ್ಕಿರುವ ಪ್ರದೇಶವು ಭೂಮಿಯಲ್ಲೆಲ್ಲಾ ತುಂಬಾ ಮನೋಹರವಾದುದು. ಗೋವರ್ಧನಪುರ, ವಾಹೀದೇಶ ಮತ್ತು ಭಾರ್ಗವವನ ಕರಾಡದೇಶ, ಧಾನದೇಶ ಇವುಗಳಲ್ಲಿ ಯಾವಾಗಲೂ ಮಳೆಯು ಕಾಲಕಾಲಕ್ಕೆ ಆಗುವದು. ಅಪರಾಂತ ದೇಶಗಳು, ಶೂದ್ರದೇಶಗಳು, ಬಾಹ್ಲಿದೇಶಗಳು, ಕೇರಲದೇಶ, ಗಾಂಧಾರದೇಶ, ಯವನದೇಶ, ಸೌವೀರದೇಶ, ಮಾಠರದೇಶ, ಕನಕದೇಶ, ಕೇಕಯದೇಶ, ದುಧಮಾಲಿಕದೇಶ, ಕ್ಷತ್ರಿಯೋಪಮದೇಶ, ವೈಶ್ಯಕುಲ, ಶೂದ್ರಕುಲ, ಕಾಂಭೋಜದೇಶ, ಬರ್ಬರದೇಶ, ಲೌಕಿಕದೇಶ ಈ ದೇಶಗಳೆಲ್ಲವೂ ಉತ್ತರ ದೇಶಗಳು, ವೀರದೇಶ, ತುಷಾರದೇಶ, ಪಹ್ಲವದೇಶ, ಧಾಯತದೇಶ, ಆತ್ರೇಯಗೋತ್ರದ ಜನಗಳಿರುವ ದೇಶ, ಭಾರದ್ವಾಜಗೋತ್ರದ ಜನಗಳಿರುವ ದೇಶ ಪುಷ್ಕಲದೇಶ, ದಶೇರಕದೇಶ, ಲಂಪಕದೇಶ, ಶುನಶೋಶದೇಶ, ಕುಲಿಕದೇಶ, ಜಾಂಗಲದೇಶ, ಔಷಧಿಲತೆಗಳಿರುವ ದೇಶ, ಚಲಚಂದ್ರದೇಶ, ಮಗಧದೇಶ, ಕಿರಾತದೇಶ, ತೋಮರದೇಶ, ಹಂಸಮಾರ್ಗದೇಶ, ಕಾಶ್ಮೀರದೇಶ, ಕರುಣದೇಶ, ಶೂಲಿಕಾದೇಶ, ಕುಹಕದೇಶ ಇವೆಲ್ಲವೂ ಉತ್ತರದೇಶಗಳು. ಇನ್ನು ಪೂರ್ವದೇಶಗಳನ್ನು ಹೇಳುವೆನು ಕೇಳಿರಿ. ಅಂಧ್ರದೇಶ, ವಾಮಾಂಕುದೇಶ, ವಲ್ಲಕದೇಶ, ಮುಖಾಂತಕದೇಶ, ಅಂಗದೇಶ, ವಂಗದೇಶ, ಮಲದೇಶ, ಮಾಲದೇಶ, ಭದ್ರತುಂಗದೇಶ, ಪ್ರತಿಜಯದೇಶ, ಭಾರ್ಯಾಂಗದೇಶ, ಅಪಮರ್ದದೇಶ, ಪ್ರಾಗ್ಜ್ಯೋಟಿಪ್ರದೇಶ, ಮದ್ರದೇಶ, ವಿದೇಹದೇಶ, ತಾಮ್ರಲಿಪ್ತಕದೇಶ, ಮಲ್ಲದೇಶ, ಮಗಧದೇಶ, ನಂದದೇಶ ಈ ದೇಶಗಳು ಪೂರ್ವದೇಶಗಳು. ಪೂರ್ಣದೇಶ, ಕೇವಲದೇಶ, ಗೋಲಾಂಗುಲದೇಶ, ಋಷಿಕದೇಶ, ಕುಮಾರದೇಶ, ರಾಮಠದೇಶ, ಶಕದೇಶ, ಮಹಾರಾಷ್ಟ್ರದೇಶ, ಮಾಹಿಷಕದೇಶ, ಕಲಿಂಗದೇಶ, ಆಭೀರದೇಶ, ವೈಶಿಕ್ಯದೇಶ, ಆಚವ್ಯದೇಶ, ಸರವದೇಶ, ಪುಲಿಂದದೇಶ, ಮೌಲೇಯದೇಶ, ವಿದರ್ಭದೇಶ, ದಂಡಕದೇಶ, ಪೌಲಿಕದೇಶ, ಮೌಲಿಕದೇಶ, ಆಶ್ಮಕದೇಶ, ಭೋಜನವರ್ಧನದೇಶ, ಕೌಲಿಕದೇಶ, ಕುಂತಲದೇಶ, ದಂಭಕದೇಶ, ನೀಲಕಾಲದೇಶ ಇವು ಎಲ್ಲವೂ ದಕ್ಷಿಣ ದೇಶಗಳು, ಶೂರ್ಪಾರಕ, ಕಾಲಿಧನ, ಲೋಲ, ತಾಲಕಟ ಈ ದೇಶಗಳು ಅಪರಾಂತ ದೇಶಗಳು. ವಿಂಧ್ಯಗಿರಿಯ ತಪ್ಪಲಲ್ಲಿರುವ ದೇಶಗಳನ್ನು ಕೇಳಿರಿ. ಮಲಜ, ಕರ್ಕಶ, ಮೇಲಕ, ಚೋಲ, ಉತ್ತಮರ್ಣ ದಶಾರ್ಣಭೋಜ, ಕಿಷ್ಕಿಂಧ, ತೋಷಲ, ಕೋಶಲ, ತ್ರೈಪುರ, ವೈದಿಶ, ತುಂಬುರ, ಚರಯವನ, ಪವನ, ಅಭಯ, ಚರ್ಚರ, ಹೋತ್ರಧರ್ತಿ, ದಂಡಿಕೇರ ಈ ದೇಶಗಳು ವಿಂಧ್ಯಪರ್ವತದಲ್ಲಿನ ದೇಶಗಳು. ಮಿಕ್ಕ ಪರ್ವತಗಳೂ ಇರುವ ದೇಶಗಳನ್ನು ಹೇಳುವೆನು. ನಿಹಾರ ದೇಶ, ತುಷಮಾರ್ಗ, ಕುರು, ತುಂಗಣ, ಖಸ, ಕರ್ಣಪಾವರಣ, ಊರ್ಣ, ದೀರ್ಘ, ಕುಂತಕ, ಚಿತ್ರಮಾರ್ಗ, ಮಾಲವ, ಕಿರಾತ, ತೋಮರ ಈ ದೇಶಗಳು ಮಿಕ್ಕ ಪರ್ವತಗಳ ತಪ್ಪಲಲ್ಲಿರುವವು.

ಹೀಗೆ ಭಾರತವು ಒಂಭತ್ತು ದೇಶಗಳುಳ್ಳದ್ದಾಗಿದೆ. ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಈ ನಾಲ್ಕು ಯುಗಗಳ ನಿಯಮವು ಇಲ್ಲಿ ಇದೆ. ಈ ಭಾರತದ ದಕ್ಷಿಣ ಮತ್ತು ಪೂರ್ವ-ಪಶ್ಚಿಮಗಳಲ್ಲಿ ಸಾಗರವಿರುವದು. ಉತ್ತರದಲ್ಲಿ ಹಿಮಾಲಯವು ಬಿಲ್ಲಿನ ಹೆದೆಯಂತೆ ತೋರುತ್ತಲಿರುವುದು. ಈ ಭಾರತವು ಎಲ್ಲಕ್ಕೂ ಕಾರಣ ವಾಗಿರುವುದು. ಇಲ್ಲಿಂದಲೇ ಪುಣ್ಯಕರ್ಮಗಳನ್ನು ಮಾಡಿ ಬ್ರಹ್ಮಪದವಿ, ದೇವೇಂದ್ರ ಪದವಿಗಳನ್ನು ಪಡೆಯಬಹುದು. ದೇವತ್ವವನ್ನು ಪಡೆಯಬಹುದು. ವಾಯು, ಯಕ್ಷರು, ಅಪ್ಸರೆಯರೂ ಆಗಬಹುದು. ಪಾಪಕರ್ಮಗಳನ್ನು ಮಾಡಿದರೆ ಮೃಗ, ಹಾವು, ಕಲ್ಲು, ಮರ ಮುಂತಾದ ಜನ್ಮಗಳೂ ಉಂಟಾಗುವವು. ಈ ಭಾರತ ಭೂಮಿಯನ್ನು ಬಿಟ್ಟರೆ ಬೇರೆ ಕರ್ಮ ಭೂಮಿ ಇಲ್ಲ. ದೇವತೆಗಳೂ ಸಹ ದೈವತ್ವವು ಕಳೆದ ಮೇಲೆ ನಾವು ಭಾರತದಲ್ಲಿ ಮನುಷ್ಯರಾಗಿ ಜನಿಸುವೆವೇ? ಎಂದು ಸದಾ ಅಪೇಕ್ಷಿಸುವರು. ಮನುಷ್ಯರು ಮಾಡಬಹುದಾದ ಕರ್ಮಗಳನ್ನು ದೇವತೆಗಳೂ, ಅಸುರರೂ ಮಾಡಲಾರರು. ಅವರೆಲ್ಲರೂ ತಾವು ತಾವು ಮಾಡಿದ ಕರ್ಮಗಳ ಹಿಡಿತಕ್ಕೊಳಪಟ್ಟು ಅದರ ಬಂಧನದಲ್ಲಿರುವರು. ಆ ಕರ್ಮಬಂಧನವು ಹೋಗಲೆಂದು ಸದಾ ದೇವ ದಾನವರು ಆಶಿಸುವರು. ಭೂಮಿಯಲ್ಲಿ ಭಾರತದಂತಹ ದೇಶವೇ ಇಲ್ಲ. ಇಲ್ಲಿ ಬ್ರಾಹ್ಮಣ ಮೊದಲಾದವರು ತಮ್ಮ ತಮ್ಮ ಕರ್ಮಗಳನ್ನು ಮಾಡಿ ಇಷ್ಟಾರ್ಥಗಳನ್ನು ಪಡೆಯುವರು. ಭಾರತದಲ್ಲಿ ಹುಟ್ಟುವ ಮಾನವ ಶ್ರೇಷ್ಠರೇ ಧನ್ಯರು. ಅಲ್ಲಿ ಅವರು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಈ ನಾಲ್ಕು ಪುರುಷಾರ್ಥಗಳನ್ನೂ ಪಡೆಯುವರು. ಆ ಭಾರತದಲ್ಲಿ ಮಾನವರು ತಪಸ್ಸನ್ನು ಮಾಡಿ ದುರ್ಲಭವಾದಂತಹ ಮಹಾಫಲಗಳನ್ನೂ ಪಡೆಯುವರು. ದಾನವನ್ನು ಮಾಡಿ ಅದರ ಫಲವನ್ನು ಪಡೆಯುವರು. ದೇವತೆಗಳೂ ಜನ್ಮವನ್ನು ಅಪೇಕ್ಷಿಸುವ ಈ ಭಾರತ ಭೂಮಿಯಲ್ಲಿ ಮಾನವರು ಅನೇಕ ಬಗೆಯ ವ್ರತಗಳನ್ನು ಮಾಡಿ ಫಲವನ್ನು ಪಡೆಯುವರು. ಶಾಸ್ತ್ರಗಳನ್ನೋದಿ ಅದರಂತೆ ಆಚರಿಸಿ ತಕ್ಕ ಫಲವನ್ನು ಪಡೆಯುವರು. ಅಹಿಂಸೆಯ ಫಲವನ್ನು ಪಡೆಯುವರು. ಬ್ರಹ್ಮಚರ್ಯಾಶ್ರಮ, ಗೃಹಸ್ಥಾಶ್ರಮ, ವಾನಪ್ರಸ್ಥಾಶ್ರಮ, ಸಂನ್ಯಾಸಾಶ್ರಮ ಇವುಗಳನ್ನು ಆಚರಿಸಿ ಅವುಗಳಿಗೆ ತಕ್ಕ ಫಲವನ್ನು ಪಡೆಯುವರು. ಕೆರೆ ಕಟ್ಟೆಗಳನ್ನು ಕಟ್ಟಿಸಿ, ಭಾವಿಗಳನ್ನು ತೋಡಿಸಿ, ಸಾಲು ಮರಗಳನ್ನು ಹಾಕಿಸಿ ಉಪವನಗಳನ್ನು ನಿರ್ಮಿಸಿ ಅದಕ್ಕೆ ತಕ್ಕ ಫಲವನ್ನು ಪಡೆಯುವರು. ಈ ಭಾರತದಲ್ಲಿ ಇನ್ನೂ ಶುಭ ಕರ್ಮಗಳನ್ನು ಮಾಡಿ ಫಲವನ್ನು ಅನುಭವಿಸುವರು. ಇನ್ನೆಲ್ಲಿಯೂ ಹೀಗಿರುವದಿಲ್ಲ. ಇಂತಹ ಭಾರತದ ಗುಣಗಳನ್ನು ಎಲ್ಲವನ್ನೂ ವರ್ಣಿಸಲು ಯಾವನು ಸಮರ್ಥನಾಗುವನು? ಹೀಗೆ ನಾನು ಭಾರತವನ್ನು ನಿಮಗೆ ವರ್ಣಿಸಿರುವೆ. ಈ ಭಾರತವು ಪುಣ್ಯಪ್ರದವಾದುದು. ಈ ಭಾರತ ಚರಿತ್ರೆಯನ್ನು ಕೇಳಿದವರಿಗೆ ಮೇಲಿನ ಫಲಗಳೆಲ್ಲವೂ ಲಭಿಸುವದಲ್ಲದೇ ಬುದ್ಧಿಯೂ ವಿಶಾಲವಾಗುವುದು. ಈ ಭಾರತದ ಮಹಾತ್ಮೆಯನ್ನು ಶ್ರದ್ಧೆಯಿಂದ ಕೇಳಿದರೂ ಇಲ್ಲವೇ ಓದಿದರೂ ಮಾನವನು ಸಕಲ ಪಾಪಗಳನ್ನು ಕಳೆದುಕೊಂಡವನಾಗಿ ವಿಷ್ಣುಲೋಕವನ್ನು ಪಡೆಯುವನು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿದುದು*

—○—

## ಕೋಣಾದಿತ್ಯ ಮಹಾತ್ಮ್ಯ ವರ್ಣನ



ಬ್ರಹ್ಮನು ಋಷಿಗಳಿಗೆ ''ಭಾರತ ದೇಶದಲ್ಲಿ ಸ್ವರ್ಗ ಸಮಾನವಾದ ಹಾಗೂ ಮುಕ್ತಿಗೆ ನೆಲೆವೀಡಾದ ಓಂಡ್ರವೆಂಬ ದೇಶವಿದ್ದು, ಅದು ಸಮುದ್ರದಿಂದ ಉತ್ತರ ದಿಶೆಯಲ್ಲಿರುವ ವಿರಜಮಂಡಲಪರಿಯಂತ ಪಸರಿಸಿದೆ. ಅಲ್ಲಿ ಪುಣ್ಯಕಾರ್ಯ ನಿರಂತರಾದ ಮನುಷ್ಯರು ವಾಸವಾಗಿರುವರು'' ಆ ಓಂಡ್ರ ದೇಶದ ಗುಣ ಕಥನಮಾಡುತ್ತ ಚತುರ್ಮುಖನು ಮಾತು ಮುಂದು ವರಿಸುತ್ತಾ ನುಡಿದದ್ದೇನೆಂದರೆ-ಆ ದೇಶದಲ್ಲಿ ವಿಪ್ರರು ಜಿತೇಂದ್ರಿಯರಾಗಿದ್ದು, ಸದಾ ವೇದಾಧ್ಯಯನ ನಿರತರಾಗಿರುತ್ತಾರೆ. ತ್ರಿಕಾಲಗಳಲ್ಲಿ ವೇದೋಕ್ತ ಧರ್ಮಾಚರಣೆ ಯಲ್ಲಿ ನಿರತರಾಗಿರುತ್ತಾರೆ. ಆ ಓಂಡ್ರ ದೇಶಕ್ಕೆ ಉತ್ಕಲವೆಂದೂ ಕರೆಯಲಾಗುತ್ತಿದ್ದು ಆಚಾರತ್ವ ದಲ್ಲಿ ಆದರ್ಶಪ್ರಿಯರಾಗಿದ್ದು, ಬ್ರಾಹ್ಮಣರು ಪಿತೃಕರ್ಮಾಚರಣೆ ಹಾಗೂ ಯಜ್ಞ ಯಾಗಾದಿಗಳಲ್ಲಿ ಸದಾ ನಿರತರಾಗಿರುತ್ತಾರೆ. ಹಾಗೂ ಬ್ರಾಹ್ಮಣರು ಅನುಸರಿಸಲೇ ಬೇಕಾದ-ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಮುಂತಾದ ಷಟ್ಕರ್ಮಗಳನ್ನು ತಪ್ಪದೇ ಆಚರಿಸುತ್ತಾರೆ. ಅವರು ವೇದ ವೇದಾಂತಗಳನ್ನು ಬಲ್ಲವರೂ, ಪುರಾಣೇತಿಹಾಸಗಳನ್ನು ಬಲ್ಲ ನಿಪುಣರೂ ಆಗಿರುತ್ತಾರೆ. ಅಲ್ಲಿರುವ ಬ್ರಾಹ್ಮಣರು, ನಿತ್ಯ ಅಗ್ನಿಹೋತ್ರ ವಿಧಿ ಅನುಸರಿಸುತ್ತಾರೆ. ಶಾಸ್ತ್ರಗಳನ್ನು ಬಲ್ಲವರಿದ್ದು, ಮಾತ್ಸರ್ಯ, ಮದಗಳಿಂದ ದೂರವಿರುವರು. ಆ ಉತ್ಕಲ ದೇಶವಾಸಿ ಬ್ರಾಹ್ಮಣರು ಸದಾಚರಣ ನಿರತರಾಗಿದ್ದು, ಪ್ರತಿ ಕುಟುಂಬವೂ ಸಕಲ ಸುಖ, ಶಾಂತಿ, ಸಮೃದ್ಧಿ ಯಿಂದ ತುಂಬಿದ್ದಿರುತ್ತದೆ. ಅಸತ್ಯ, ಅನ್ಯಾಯ, ಅಪಚಾರವನ್ನೆಂದೂ ಅವರು ಮಾಡಲಾರರು.

ಸದಾಚಾರ ಬ್ರಾಹ್ಮಣ ವರ್ಣದವರಂತೆ, ಇನ್ನುಳಿದ ಕ್ಷತ್ರಿಯರೂ ಸಹ ಜಿತೇಂದ್ರಿಯರೂ ಶಾಂತರೂ ಆಗಿದ್ದು ಸತ್ಯ, ನ್ಯಾಯ, ಧರ್ಮ ಅನುಸರಿಸುತ್ತಾರೆ. ತಮ್ಮ ವರ್ಣೋಚಿತ ಕರ್ಮಾನುಷ್ಠಾನದಿಂದ ಸದಾ ಸಂಪನ್ನರಾಗಿರುತ್ತಾರೆ. ಈ ದೇಶದಲ್ಲಿ ಸೂರ್ಯನು ಕೋಣಾದಿತ್ಯನೆಂಬ ಹೆಸರಿನಿಂದ ಕರೆಯಲ್ಪಡುತ್ತಾನೆ. ಆ ಸೂರ್ಯ ಮೂರ್ತಿಯನ್ನು ದರ್ಶನ ಮಾಡಿದರೆ ಸಾಕು, ಸಕಲ ಪಾಪಗಳೂ ಪಲಾಯನ ಮಾಡುತ್ತವೆ.''

ಆಗ ಋಷಿಗಳು ಚತುರ್ಮುಖನನ್ನು ಕುರಿತು 'ಬ್ರಹ್ಮದೇವಾ, ಸೂರ್ಯನು ಆ ದೇಶದಲ್ಲಿ ನೆಲೆಯಾಗಿರುವ ತಾಣ ಯಾವದು? ಹಾಗೂ ಕೋಣಾದಿತ್ಯ ಎಂದು ಹೆಸರು ಬರಲು ಕಾರಣವೇನು?' ಎಂದು ಪ್ರಶ್ನಿಸಿದಾಗ, ಕಮಲಸಂಭವನು ನುಡಿದನು- ಉಪ್ಪು ನೀರ ತೆರೆಗಳಿಂದ ಭೋರ್ಗರೆಯುವ ಕಡಲು ದಂಡೆಯ ಮೇಲೆ ಅಲ್ಲಲ್ಲಿ ಕೆಲವು ಪುಣ್ಯಕ್ಷೇತ್ರಗಳಿದ್ದು, ಅವುಗಳಲ್ಲಿ ಕೋಣಾದಿತ್ಯ ಕ್ಷೇತ್ರವು ಪ್ರಸಿದ್ಧವಾಗಿದೆ. ಆ ಕ್ಷೇತ್ರವು ಸೃಷ್ಟಿ ಸೌಂದರ್ಯದ ನೆಲೆವೀಡಾಗಿದ್ದು, ಸದಾಕಾಲ ಹಸಿರು, ಹೂವುಗಳಿಂದ ರಮಣೀಯವಾಗಿ ಕಾಣುತ್ತದೆ. ಸಂಪಿಗೆ, ಪುನ್ನಾಗ, ತಗರ, ಗೊರಂಟಿ, ಪಾದರಿ, ಮಾಲತಿ, ಮಲ್ಲಿಗೆ ಮುಂತಾದ ಅನೇಕ ಸುಗಂಧ ಪರಿಮಳ ಬೀರುವ ಹಲವಾರು ಬಗೆಯ ಹೂಗಿಡಗಳಿಂದ ತುಂಬಿದೆಯಲ್ಲದೆ, ಅಲ್ಲಲ್ಲಿ ಕೇದಿಗೆ ವನಗಳೂ ಇರುವವು. ಅಲ್ಲದೆ ತಾಳೆ, ಲಿಂಬೆ, ದೇವದಾರು, ಮತ್ತಿ, ಹೊನ್ನೆ ಮುಂತಾದ ದೈತ್ಯಾಕಾರದ ಮರಗಳು ಮುಗಿಲವರೆಗೆ ಬೆಳೆದು ನಿಂತು ಭವ್ಯವಾಗಿ ಕಾಣುತ್ತವೆ. ಇವುಗಳಲ್ಲದೆ, ಅಶ್ವತ್ಥ, ಅಡಿಕೆ, ತೆಂಗು, ಬೇಲ, ಕಾಡುಮಾವು, ತಾಳ ಮುಂತಾದ ಗಿಡ, ಮರಗಳು ದಟ್ಟವಾಗಿ ಬೆಳೆದಿದ್ದು, ಅನೇಕ ನಮೂನೆಯ ಬಳ್ಳಿಗಳು

ಆವುಗಳಿಗೆ ಹಬ್ಬಿರುತ್ತವೆ. ಇಂತಹ ವನಾಂತರ ಮಧ್ಯದಲ್ಲಿ ಆದಿತ್ಯನ ಪವಿತ್ರಕ್ಷೇತ್ರ ಇರುತ್ತದೆ. ಈ ಸುಂದರ ವನದೇಶದಲ್ಲಿ ಸಾವಿರ ಕಿರಣಗಳಿಂದ ಲೋಕ ಬೆಳಗುವ ಸೂರ್ಯದೇವನು **'ಕೋಣಾದಿತ್ಯ'**ನೆಂಬ ಹೆಸರಿನಿಂದ ನೆಲಸಿದ್ದು, ಭಕ್ತಿಯಿಂದ ಅವನನ್ನು ಉಪಾಸನೆ ಮಾಡಿದರೆ ಭೋಗ ಭಾಗ್ಯಗಳನ್ನೂ ಮೋಕ್ಷವೆಂಬ ದಿವ್ಯ ಪದವಿಯನ್ನೂ ಕೊಡುವನು. ಈ ಕ್ಷೇತ್ರವು ಈ ಅರಣ್ಯದಲ್ಲಿ ಸುಮಾರು ಒಂದು ಯೋಜನ ವಿಸ್ತಾರವಾಗಿ ಹಬ್ಬಿರುವದು; ಪುಣ್ಯಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಮಾಘಮಾಸದ ಶುದ್ಧ ಸಪ್ತಮಿ ದಿನದಂದು, ಕೋಣಾದಿತ್ಯ ಕ್ಷೇತ್ರಕ್ಕೆ ಬಂದು ಅರುಣೋದಯ ಕಾಲದಲ್ಲಿ ಸಮುದ್ರ ಸ್ನಾನಮಾಡಿ, ಶುಚಿರ್ಭೂತನಾಗಿ ಜಿತೇಂದ್ರಿಯನಾಗಿದ್ದು, ಸೂರ್ಯೋಪಾಸನೆ ಹಾಗೂ ಉಪವಾಸ ವ್ರತಗಳಿಂದ, ಪಿತೃ ತರ್ಪಣ ನೀಡಬೇಕು. ಸ್ನಾನಾನಂತರ ಮಡಿಬಟ್ಟೆ ಉಟ್ಟುಕೊಂಡು, ಸೂರ್ಯೋದಯ ಕಾಲದಲ್ಲಿ ಸಮುದ್ರ ದಂಡೆಯ ಮೇಲೆ ಕುಳಿತು ಆಚಮನಮಾಡಿ ನಂತರ ರಕ್ತಚಂದನದಿಂದ ಅಷ್ಟದಳವುಳ್ಳ ಪದ್ಮಾಕೃತಿ ರಚಿಸಬೇಕು. ಆ ಪದ್ಮದಲ್ಲಿ ಕೇಸರಗಳನ್ನು ಬಿಡಿಸಬೇಕು ಹಾಗೂ ಮೇಲುಮುಖವಾಗಿ ಕರ್ಣಿಕೆಗಳನ್ನು ಸಹ ಬಿಡಿಸಬೇಕು. ನಂತರ ಒಂದು ತಾಮ್ರದ ಪಾತ್ರೆಯಲ್ಲಿ ಎಳ್ಳು, ಅಕ್ಕಿ, ರಕ್ತಚಂದನ, ನೀರು, ದರ್ಭೆ, ಕೆಂಪು ಹೂ ಇವುಗಳನ್ನು ಇಡಬೇಕು (ಸ್ಥಾಪಿಸಬೇಕು). ಬಳಿಕ ಪಾತ್ರೆಯನ್ನು ಪಾತ್ರೆಯಿಂದಾಗಲಿ ಅಥವಾ ಎಲೆಯಿಂದಾಗಲಿ (ಎಕ್ಕದ ಎಲೆ) ಮುಚ್ಚಬೇಕು. ಕೈ ಮತ್ತು ಹೃದಯ ಮೊದಲಾದ ಅಂಗಗಳಿಂದ 'ಅಂಗನ್ಯಾಸ' ಮಾಡಿ ತಾನೇ ಭಾಸ್ಕರನೆಂಬ ಅಭೇದ ಬುದ್ಧಿಯಿಂದ ಸಂಕಲ್ಪಿಸಿ, ಧ್ಯಾನ ಮಾಡಬೇಕು. ಆ ಕಮಲದ ಮಧ್ಯ ಹಾಗೂ ಆಗ್ನೇಯ, ಈಶಾನ್ಯ, ನೈಋತ್ಯ, ವಾಯವ್ಯ ದಳಗಳಲ್ಲಿಯೂ ಪುನಃ ಮಧ್ಯದಲ್ಲಿಯೂ ಭಕ್ತಿಯಿಂದ ಪೂಜೆ ಮಾಡಬೇಕು.

ಈ ರೀತಿಯಾಗಿ ಐದು ದಿಕ್ಕುಗಳಲ್ಲಿಯೂ-ಮಧ್ಯಕ್ಕೆ-ಪ್ರಭೂತಾಯ ನಮಃ, ಆಗ್ನೇಯಕ್ಕೆ ವಿಮಲಾಯನಮಃ, ನೈಋತ್ಯಕ್ಕೆ ಸಾರಾಯನಮಃ, ವಾಯವ್ಯಕ್ಕೆ ಆರಾಯನಮಃ, ಈಶಾನ್ಯಕ್ಕೆ ಪರಮಾಯನಮಃ ಮಧ್ಯಕ್ಕೆ ಸುಖಾಯನಮಃ ಎಂದು ಅನುಕ್ರಮದಲ್ಲಿ ಪೂಜೆ ಮಾಡಿ, ಆಕಾಶದಲ್ಲಿರುವ ಸೂರ್ಯನನ್ನು ಕಮಲದ ಕರ್ಣಿಕೆಯ ಮಧ್ಯದಲ್ಲಿ ಆವಾಹನೆ ಮಾಡಿ ಆಮೇಲೆ ಮುದ್ರೆಗಳನ್ನು ತೋರಿಸಬೇಕು. ಬಳಿಕ ಸ್ನಾನ ಮಾಡಿಸಿ, ತೇಜೋಮಂಡಲದಲ್ಲಿ ಬಿಳಿಯ ಕಮಲದಲ್ಲಿ ಕುಳಿತ ಕೆಂಪು ನೇತ್ರವುಳ್ಳವನೂ, ಕೆಂಪುಬಣ್ಣದ ದೇಹವುಳ್ಳವನೂ, ಎರಡು ಕೈಗಳುಳ್ಳವನೂ, ಸಕಲಾಭರಣ ಭೂಷಣನೂ, ಸುಂದರನೂ, ಶಾಂತನೂ, ಕಾಂತಿಯುಕ್ತನೂ ಆದ ಸೂರ್ಯದೇವನನ್ನು ಏಕಾಂತ ಚಿತ್ತದಲ್ಲಿ ಧ್ಯಾನ ಮಾಡಬೇಕು. ಬಳಿಕ ಉದಯೋನ್ಮುಖನಾದ ಕೆಂಬಣ್ಣದ ಸೂರ್ಯನನ್ನು ನೋಡಿ ಭೂಮಿಯ ಮೇಲೆ ಮಂಡಿಯೂರಿ, ಕೆಳಗೆ ಇಟ್ಟ ತಾಮ್ರದ ಪಾತ್ರೆಯನ್ನು (ಅರ್ಘ್ಯಪಾತ್ರೆ) ತೆಗೆದುಕೊಂಡು ತಲೆಯ ಮೇಲಿಟ್ಟುಕೊಂಡು ಭಕ್ತಿ ಪುರಸ್ಸರವಾಗಿ, ಮೌನದಿಂದ **"ಸೂರ್ಯಾಯ"** ಎಂಬ ಮೂರಕ್ಷರ ಮಂತ್ರೋಚ್ಚಾರಣೆಯಿಂದ ಆ ಸೂರ್ಯದೇವನಿಗೆ ಅರ್ಘ್ಯ ಕೊಡಬೇಕು. ಶೂದ್ರವರ್ಣೀಯನು ಸೂರ್ಯನ ಯಾವುದಾದರೊಂದು ಹೆಸರಿನಿಂದ ಅರ್ಘ್ಯ ನೀಡಿದರೂ, ಸೂರ್ಯನಿಗೆ ಮೆಚ್ಚಿಕೆಯಾಗುತ್ತದೆ. ಭಕ್ತಿಪೂರ್ವಕವಾಗಿ, ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ, ಮಧ್ಯ ಹಾಗೂ ಪೂರ್ವ ಮೊದಲಾದ ದಿಕ್ಕುಗಳಲ್ಲಿ ಹೃದಯ, ಶಿರಸ್ಸು, ಶಿಖೆ, ಕವಚ, ನೇತ್ರ, ಅಸ್ತ್ರ ಇವುಗಳನ್ನು ಪೂಜಿಸಬೇಕು. ಅರ್ಘ್ಯವನ್ನು ಕೊಟ್ಟು, ಆ ಮೇಲೆ ಧೂಪ ದೀಪಾದಿಗಳಿಂದಲೂ, ನೈವೇದ್ಯಾದಿ ಪೂಜಾನುಷ್ಠಾನ ಮಾಡಿ,

ಸೂರ್ಯಜಪಮಾಡಿ, ನಮಸ್ಕರಿಸಿ ಮುದ್ರೆಗಳನ್ನು ಪ್ರದರ್ಶಿಸಿ, ವಿಸರ್ಜನೆ ಮಾಡಬೇಕು. ಈ ರೀತಿ ಚಾತುರ್ವರ್ಣದವರೂ, ಸ್ತ್ರೀಯರಾದಿಯಾಗಿ ಭಕ್ತಿಯಿಂದ ಸೂರ್ಯೋಪಾಸನೆ ಮಾಡಿದರೆ, ಇಹದಲ್ಲಿ ಸರ್ವ ಸುಖಭೋಗಗಳನ್ನೂ ಕೊನೆಯಲ್ಲಿ ಸದ್ಗತಿಯನ್ನೂ ಹೊಂದುತ್ತಾರೆ. ಮಾನವರು ಸರ್ವದಾ ಸೂರ್ಯೋಪಾಸನೆಗೈದರೆ, ಸಕಲ ಸುಖ, ಶಾಂತಿ, ಸಮೃದ್ಧಿ ಹೊಂದುವ ರೆಂಬುದರಲ್ಲಿ ಸಂದೇಹವಿಲ್ಲ. ಪ್ರತಿದಿನವೂ ತಪ್ಪದೆ, ಸ್ನಾನಾನಂತರ, ಶುಚಿರ್ಭೂತರಾಗಿ, ಸೂರ್ಯನಿಗೆ ಅರ್ಘ್ಯ ಕೊಡಬೇಕು. ವಿಧಿವತ್ತಾಗಿ ಸೂರ್ಯನಿಗೆ ಅರ್ಘ್ಯವನ್ನು ಕೊಡದೇ ದೇವ ಪೂಜೆಮಾಡಿದರೆ ಕಿಂಚಿತ್ ಫಲವೂ ದೊರಕದು. ಮಾಘ ಶುಕ್ಲ ಸಪ್ತಮಿಯಲ್ಲಿ ವಿಧಿವತ್ತಾಗಿ ಸೂರ್ಯನಿಗೆ ಅರ್ಘ್ಯ ನೀಡಿದಲ್ಲಿ ಮನುಷ್ಯನ ಸಕಲ ಕ್ಲೇಶ ಪರಿಹಾರವಾಗುವದಲ್ಲದೆ, ಸಕಲಸಂಪತ್ತು, ಆರೋಗ್ಯಾಭಿವೃದ್ಧಿ ಹೊಂದುತ್ತಾನೆ. ನಿತ್ಯ ಸೂರ್ಯೋಪಾಸನೆಯಿಂದ ಮನುಷ್ಯನು ಆರೋಗ್ಯವಂತನೂ, ಧನಿಕನೂ, ವಿದ್ಯಾವಂತನೂ, ಆಗುವದಲ್ಲದೆ ಸಂತಾನಭಾಗ್ಯವೂ ಲಭಿಸುವದು. ಅಲ್ಲದೆ ವಿಶೇಷವಾಗಿ ಭಕ್ತಿಪೂರ್ವಕವಾಗಿ ಸೂರ್ಯೋಪಾಸನೆಯ ಸಾಧನೆಯಿಂದ ಮನುಷ್ಯನ ಸಂಕಲ್ಪಸಿದ್ಧಿ ಕೈಗೂಡುವದು.

ಕೋಣಾದಿತ್ಯ ಕ್ಷೇತ್ರದಲ್ಲಿ, ಸಮುದ್ರಸ್ನಾನಮಾಡಿ, ಸೂರ್ಯನಿಗೆ ಅರ್ಘ್ಯ ಪ್ರದಾನ ಮಾಡುವದರಿಂದ ಹಾಗೂ ಸೂರ್ಯದೇವಾಲಯದಲ್ಲಿ ಭಕ್ತಿಯಿಂದ ಮೂರು ಪ್ರದಕ್ಷಿಣೆ ಮಾಡುವದರಿಂದ, ಹೂವು ಹಣ್ಣುಗಳಿಂದ ಅರ್ಚನೆ ಮಾಡುವದರಿಂದ ಸಕಲ ಮನೋರಥ ಈಡೇರುತ್ತವೆ. ಈ ಕೋಣಾದಿತ್ಯನನ್ನು ಏಕಾಂತ ಚಿತ್ತದಿಂದ, ಭಕ್ತಿಭಾವದಿಂದ, ಗಂಧ, ಹೂವು, ಧೂಪ, ದೀಪ, ನೈವೇದ್ಯಾದಿಗಳಿಂದ ಪೂಜಿಸಬೇಕು, ನಮಸ್ಕರಿಸಬೇಕು. ಹೀಗೆ ಭಕ್ತಿಯಿಂದ ಕೋಣಾದಿತ್ಯನನ್ನು ಪೂಜಿಸಿದರೆ, ಹತ್ತು ಅಶ್ವಮೇಧಯಾಗದ ಫಲವು ದೊರಕುತ್ತದೆ. ಅಲ್ಲದೆ ಆ ಸೂರ್ಯೋಪಾಸಕನ ಹಿಂದಿನ ಏಳು ತಲೆಮಾರಿನವರು ಉದ್ಧರಿಸಲ್ಪಡುತ್ತಾರೆ. ಅಲ್ಲದೆ ಅವನು ಮರಣಾನಂತರ ಸುಂದರ ಶರೀರ ಹೊಂದಿ, ಯುವಕನಾಗಿ, ತೇಜಸ್ಸು ಓಜಸ್ಸುಗಳಿಂದ ಆಕರ್ಷಕ ವ್ಯಕ್ತಿಯಾಗಿ ಗಂಧರ್ವರಿಂದ ಗುಣಗಾನ ಮಾಡಿಸಿಕೊಳ್ಳುತ್ತಾ ಸೂರ್ಯಲೋಕಕ್ಕೆ ಹೋಗುವನು. ಆ ಸೂರ್ಯಲೋಕದಲ್ಲಿ ಒಂದು ಕಲ್ಪಾವಧಿ ಪರ್ಯಂತ, ಸಕಲ ಭೋಗಭಾಗ್ಯಗಳನ್ನು ಸವಿದು ಮರಳಿ, ಯೋಗಿಗಳ ಕುಲದಲ್ಲಾಗಲಿ ಇಲ್ಲವೆ ಉತ್ತಮ ಬ್ರಾಹ್ಮಣಕುಲದಲ್ಲಿ ಜನ್ಮ ತಳೆಯುತ್ತಾನೆ. ವೇದಾಂತಿಯಾಗಿ, ಮೇಧಾವಿಯಾಗಿ ಸದಾಚಾರಿಯಾಗಿ ಸದಾ ಸತ್ಕರ್ಮ ನಿರತನಾಗಿ, ಬ್ರಹ್ಮಜ್ಞಾನಿಯಾಗಿ ಮುಕ್ತಿಯನ್ನೂ ಹೊಂದುತ್ತಾನೆ. ಮೇಲಾಗಿ, ಇದರಂತೆ ಚೈತ್ರ ಶುದ್ಧದಲ್ಲಿ ಈ ಕೋಣಾದಿತ್ಯ ಕ್ಷೇತ್ರದಲ್ಲಿ ಸೂರ್ಯೋಪಾಸನೆಯನ್ನು ಭಕ್ತಿ ಪುರಸ್ಸರವಾಗಿ ಮಾಡಿದಲ್ಲಿ ಇವೇ ರೀತಿ ಸತ್ಫಲ ಹೊಂದುವನು. ಇದಲ್ಲದೇ ಪರ್ವ ಕಾಲಗಳಲ್ಲಿ ಸೂರ್ಯನ ಶಯನ, ಜಾಗರಣ, ಸಂಕ್ರಮಣ ಭಾನುವಾರ, ಸಪ್ತಮಿತಿಥಿ, ಅಮವಾಸ್ಯೆ ಮೊದಲಾದ ಸಂದರ್ಭಗಳಲ್ಲಿ ಈ ಕೋಣಾದಿತ್ಯ ಕ್ಷೇತ್ರದರ್ಶನ, ಪೂಜೆ, ಪುರಸ್ಕಾರ ಸಲ್ಲಿಸಿದ ಮತ್ತು ಮರಣಾನಂತರ ಸೂರ್ಯಲೋಕ ಹೊಂದಿ ಸರ್ವ ಸುಖ ಮತ್ತು ಮುಕ್ತಿ ಹೊಂದುವರು.

ಅಲ್ಲಿರುವ ದಕ್ಷಿಣದಿಶೆಯ ಸಮುದ್ರದ ದಂಡೆಯಲ್ಲಿ ಮಹಾದೇವನು ರಾಮೇಶ್ವರನೆಂಬ ಹೆಸರಿನಿಂದ ಖ್ಯಾತನಾಗಿದ್ದಾನೆ; ಈ ರಾಮೇಶ್ವರನು, ಕಾಮನ ವೈರಿಯಾಗಿದ್ದು, ಸಮುದ್ರ ಸ್ನಾನಮಾಡಿ ವಿಧಿವತ್ತಾಗಿ ಇವನನ್ನು ಪೂಜೆಗೈದರೆ, ರಾಜಸೂಯ ಯಾಗದ ಫಲವನ್ನು ಇಲ್ಲವೆ ಅಶ್ವಮೇಧಯಾಗದ ಫಲವನ್ನು ಹೊಂದುತ್ತಾರೆ. ಈ ರಾಮೇಶ್ವರನನ್ನು ಭಕ್ತಿಪೂರ್ವಕವಾಗಿ

ಸೇವೆ ಮಾಡಿದ ಮನುಷ್ಯನು, ಸಕಲ ಸುಖ ಭೋಗಗಳನ್ನು ಅನುಭವಿಸಿ, ಮರಣಾ ವಿಮಾನದಲ್ಲಿ ಕುಳಿತುಕೊಂಡು ಗಂಧರ್ವ ರಿಂದ ಹೊಗಳಿಸಿಕೊಳ್ಳುತ್ತಾ ಶಿವಲೋಕಕ್ಕೆ ಹೋಗುತ್ತಾನೆ. ಶಿವಲೋಕದಲ್ಲಿ ಒಂದು ಕಲ್ಪ ಕಾಲಾವಧಿವರೆಗೆ ಸಕಲ ಸುಖ ಭೋಗಗಳನ್ನು ಅನುಭವಿಸಿ, ಪುಣ್ಯವು ಕ್ಷಯಿಸಲು ಮರಳಿ ಭೂಲೋಕದಲ್ಲಿ ಬ್ರಾಹ್ಮಣ ವಂಶದಲ್ಲಿ ಜನ್ಮ ತಳೆಯುತ್ತಾನೆ. ಬ್ರಹ್ಮಜ್ಞಾನಿಯಾಗಿ ಶಂಕರನ ಯೋಗವನ್ನು ಅನುಷ್ಠಾನಮಾಡಿ ಶಾಶ್ವತಮುಕ್ತಿಯನ್ನು ಹೊಂದುತ್ತಾನೆ. ಈ ಕೋಣಾದಿತ್ಯ ಕ್ಷೇತ್ರದಲ್ಲಿ ಮರಣವನ್ನಪ್ಪಿದವನು, ಸೂರ್ಯಲೋಕ ಹೊಂದಿ ಸಕಲ ಸುಖ ಭೋಗಗಳನ್ನು ಅನುಭವಿಸುವನು. ಪುಣ್ಯವು ಕಳೆದಂತೆಲ್ಲ ಮರಳಿ ಧಾರ್ಮಿಕನಾದ ಕ್ಷತ್ರಿಯನಾಗಿ ಜನಿಸಿ ಬಹುಕಾಲ ರಾಜ್ಯವಾಳುತ್ತಾನೆ. ಕೊನೆಗೆ ಸೂರ್ಯನ ಯೋಗವನ್ನು ಅನುಷ್ಠಾನ ಮಾಡಿ ಅದರ ಬಲದಿಂದ ಶಾಶ್ವತ ಮುಕ್ತಿ ಹೊಂದುವದರಲ್ಲಿ ಸಂದೇಹವೇ ಇಲ್ಲ.

ಋಷಿಗಳಿರಾ, ಈ ರೀತಿಯಾಗಿ ಸಮುದ್ರತೀರದಲ್ಲಿರುವ ಅಪೂರ್ವ ಪುಣ್ಯಕ್ಷೇತ್ರ ವೆನಿಸಿದ ಕೋಣಾದಿತ್ಯ ಕ್ಷೇತ್ರದ ಮಹಿಮಾ ವಿಶೇಷವನ್ನು ನಿಮಗೆ ಇದುವರೆಗೆ ವಿವರಿಸಿರುವೆ ಎಂದನು.

## ಸೂರ್ಯಪೂಜಾ ನಿಯಮ

ಮುನಿವೃಂದವು ಚತುರ್ಮುಖನಿಂದ ಕೋಣಾದಿತ್ಯ ಕ್ಷೇತ್ರ ವಿಚಾರವನ್ನು ಕೇಳುತ್ತ, ಭಕ್ತಿಪರವಶರಾಗಿ ಪಾಪನಾಶಕನಾದ ಭಾಸ್ಕರನ ದಿವ್ಯಚರಿತ್ರೆಯನ್ನು ಇನ್ನಷ್ಟು ಕೇಳಬೇಕೆಂಬ ಲವಲವಿಕೆಯನ್ನು ವ್ಯಕ್ತಮಾಡಿ, ಬ್ರಹ್ಮದೇವನಿಗೆ ದೇವಪೂಜೆಯ ಫಲ ಹಾಗೂ ದಾನದ ಫಲವನ್ನು ವಿವರಿಸಲು ಪ್ರಾರ್ಥಿಸಿಕೊಂಡಿತು.

ಆ ಮುನಿ ಸಂಕುಲದ ಪ್ರಾರ್ಥನೆಯಂತೆ ಆ ಚತುರ್ಮುಖನು ನುಡಿಯುತ್ತಾನೆ. ಉಪವಾಸ ಮಾಡುವದು, ರಾತ್ರಿಯಲ್ಲಿ ಮಾತ್ರ ಊಟ ಮಾಡಿ ಪೂಜಿಸುವದು. ಹಾಗೂ ಅರ್ಘ್ಯಪ್ರದಾನದ ವಿಧಾನವನ್ನು ನಿಮಗೆ ವಿವರಿಸುತ್ತೇನೆ ಎಂದಾಗ ಮುನಿಗಳು ಸಾವಧಾನ ಚಿತ್ತದಿಂದ ಆಲಿಸತೊಡಗಿದರು.

ಬಳಿಕ ಬ್ರಹ್ಮನು ಹೇಳುತ್ತಾನೆ- ಮನಸ್ಸಿನ ಭಾವನೆ (ದೇವರಲ್ಲಿ ಶ್ರದ್ಧೆ) ಎನ್ನುವುದೇ ಭಕ್ತಿ. ಇಲ್ಲವೇ ಅಚಲವಾದ ಆಸಕ್ತಿಯೇ ಭಕ್ತಿ ಎನ್ನಬಹುದು. ಏಕಚಿತ್ತದಿಂದ ಧ್ಯಾನಿಸುವ ವಿಧಾನವೇ ಸಮಾಧಿ ಎನಿಸುವದು. ಸೂರ್ಯನ ಮಹಿಮಾ ಕಥೆಯನ್ನು ಆದರದಿಂದ ಕೇಳುವವರು, ಅಲ್ಲದೇ ಅವನ ಭಕ್ತರನ್ನು ಪೂಜಿಸುವವರು, ಮತ್ತು ಅಗ್ನಿಯನ್ನು ಪೂಜಿಸುವವರೆಲ್ಲ ನಿಜವಾದ ಸೂರ್ಯ ಭಕ್ತರೆನಿಸುವರು. ಸರ್ವ ಸಮರ್ಪಣ ಭಾವದಿಂದ ಭಾಸ್ಕರನನ್ನೂ, ನಿತ್ಯ ಧ್ಯಾನ, ಪೂಜೆಗೈಯ್ಯುವವರೆಲ್ಲ ಸೂರ್ಯ ಭಕ್ತರೆನಿಸುವರು. ನಿಜವಾದ ಸೂರ್ಯೋಪಾಸಕನಿಗೆ ಇನ್ನುಳಿದ ಸೂರ್ಯಭಕ್ತರ ಬಗ್ಗೆ ಅಸೂಯೆ ಇರಬಾರದು. ಶಿವ, ವಿಷ್ಣು ಮುಂತಾದ ದೇವತೆಗಳನ್ನು ನಿಂದಿಸಬಾರದು. ಹೀಗಿದ್ದು ಆದಿತ್ಯನನ್ನು ಅಂತರಂಗದಲ್ಲಿ ಆರಾಧಿಸುವವನು ಭಕ್ತರಲ್ಲಿ ಉತ್ತಮನೆಂದು ಪರಿಗಣಿಸಲ್ಪಡುತ್ತಾನೆ. ಮಾನವನು ತನ್ನ ದೈನಂದಿನ ಚಟುವಟಿಕೆಗಳಾದ, ಕುಳಿತಾಗ, ನಿಂತಾಗ, ಉಣ್ಣುವಾಗ, ಮಲಗಿದಾಗ, ಅಷ್ಟೇ ಏಕೆ ಕಣ್ಣುರೆಪ್ಪೆ ಬಡಿಯುವಾಗಲೂ ಸಹ ಸೂರ್ಯನನ್ನು ಸದಾ ಧ್ಯಾನಿಸುವವನು ಸೂರ್ಯಭಕ್ತನು. ಸದ್ಭಕ್ತಿಯಿಂದ ಮಾಡಿದ ಧ್ಯಾನ, ಪೂಜೆ, ಜಪ,

ತಪಾದಿಗಳಿಂದ ಹಾಗೂ ಸದಾಚಾರವುಳ್ಳ ಬ್ರಾಹ್ಮಣನಿಗೆ ದಾನಮಾಡಿದರೆ ದೇವತೆಗಳು ಸಂತುಷ್ಟರಾಗುವರು. ಅಲ್ಲದೆ ಪಿತೃದೇವತೆಗಳು ಪರಮಾನಂದಪಡುವರು. ಭಕ್ತಿಯಿಲ್ಲದ ಪೂಜೆ ಪುರಸ್ಕಾರಗಳಾಗಲಿ ತರ್ಪಣ, ನೈವೇದ್ಯಗಳಿಂದ ದೇವತೆಗಳು ಎಂದೂ ತೃಪ್ತರಾಗುವದಿಲ್ಲ. ಆದುದರಿಂದ ನಿಯಮ, ನೀತಿ, ಸದಾಚಾರಗಳಿಂದ ಅಂತರಂಗವನ್ನು ಪರಿಶುದ್ಧಗೊಳಿಸಿ ಮಾಡಿದ ಅಲ್ಪಭಕ್ತಿಯೇ ಮಹತ್ಫಲ ಕೊಡುವದು. ಸಕಲ ಲೋಕಕ್ಕೆಲ್ಲ ಬೆಳಕನ್ನೂ, ಜ್ಞಾನವನ್ನೂ ಕೊಡುವ ಸೂರ್ಯದೇವನಿಗೆ ಶಿರಸ್ಸು ನೆಲಕ್ಕೆ ತಾಗುವಂತೆ ಭಕ್ತಿಯಿಂದ ನಮಸ್ಕಾರ ಮಾಡಿದರೆ ಸಕಲ ಪಾಪಗಳು ನಾಶವಾಗುತ್ತವೆ. ಭಕ್ತಿಯಿಂದ ಪ್ರದಕ್ಷಿಣೆ ಮಾಡಿದರೆ ಸೂರ್ಯನು ಸುಪ್ರೀತನಾಗುವದಲ್ಲದೆ ಭೂಪ್ರದಕ್ಷಿಣೆ ಹಾಕಿದ ಪುಣ್ಯ ಲಭಿಸುವದು. ಅಷ್ಟೇ ಏಕೆ ಭಕ್ತಿಭಾವದಿಂದ ಭಾಸ್ಕರನನ್ನು ಧ್ಯಾನ ಮಾಡುತ್ತ ಆಕಾಶ ಪ್ರದಕ್ಷಿಣೆಯನ್ನೂ ಮಾಡಿದಾಗ ಕೋಟ್ಯಾನುಕೋಟಿ ದೇವತೆಗಳಿಗೆ ಪ್ರದಕ್ಷಿಣೆ ಹಾಕಿದಂತಾಗಿ ಅಲಭ್ಯವಾದ ಶ್ರೇಯಸ್ಸು ಲಭಿಸುವದು.

ವಿಶೇಷವಾಗಿ ಷಷ್ಠಿ, ಸಪ್ತಮಿ ದಿನಗಳಲ್ಲಿ ಒಪ್ಪೊತ್ತು ಉಪವಾಸವ್ರತ ಮಾಡಿ ವಿಧಿವತ್ತಾಗಿ ಸೂರ್ಯೋಪಾಸನೆ ಮಾಡಿದರೆ ಅಶ್ವಮೇಧಯಾಗ ಫಲ ದೊರಕುವದು. ಷಷ್ಠಿ ಅಥವಾ ಸಪ್ತಮಿಯಲ್ಲಿ ಹಗಲು ಹಾಗೂ ರಾತ್ರಿ ಉಪವಾಸದಿಂದಿದ್ದು, ಏಕಾಂತಚಿತ್ತದಿಂದ ಭಾಸ್ಕರನನ್ನು ಅರ್ಚಿಸಿದರೆ ಅವನು ಉತ್ತಮ ಗತಿ ಹೊಂದುವನು. ಕೃಷ್ಣಪಕ್ಷದ ಸಪ್ತಮಿದಿನ ಉಪವಾಸವಿದ್ದು, ಜಿತೇಂದ್ರಿಯತ್ವದಿಂದ, ಸೂರ್ಯನನ್ನು ಶ್ರೇಷ್ಠ, ಪೂಜಾ ದ್ರವ್ಯಾದಿಗಳಿಂದ, ರತ್ನಗಳಿಂದ ಪೂಜಿಸಿದರೆ ಕಮಲದಂತಹ ಕೆಂಬಣ್ಣದ ವಿಮಾನವನ್ನೇರಿ ಸೂರ್ಯಲೋಕಕ್ಕೆ ತೆರಳುವನು. ಅದರಂತೆ ಶುಕ್ಲಪಕ್ಷದ ಸಪ್ತಮಿದಿನ ಉಪವಾಸವಿದ್ದು ಬಿಳಿಯ ಪೂಜಾವಸ್ತುಗಳನ್ನು ಸಮರ್ಪಿಸಿ ಸೂರ್ಯನ ಪೂಜೆಯನ್ನು ಮಾಡಿದವನು ತನ್ನೆಲ್ಲ ಪಾಪಕರ್ಮಗಳಿಂದ ಮುಕ್ತನಾಗಿ ಸೂರ್ಯಲೋಕಕ್ಕೆ ಪ್ರಯಾಣ ಮಾಡುವನು.

ಋಷಿಗಳಿರಾ, ಇನ್ನು 'ಅರ್ಕಸಪ್ತಮಿ ವ್ರತ'ದ ಬಗ್ಗೆ ವಿವರಿಸುತ್ತೇನೆ. ಚಿತ್ತಗೊಟ್ಟು ಆಲಿಸಿರಿ. ಈ ವ್ರತದ ಪ್ರಕಾರ ಮೊದಲನೆಯ ದಿನ ಸೂರ್ಯದೇವನ ಮಂತ್ರದ ಸಂಪುಟೀಕರಣದಿಂದ ಅಭಿಮಂತ್ರಿತವಾದ ಒಂದು ಸೇರು ಹಿಡಿಯುವಷ್ಟು ನೀರನ್ನು ಮಾತ್ರ ಕುಡಿಯಬೇಕು. ಎರಡನೆಯ ದಿನ ಎರಡು ಸೇರು, ಹೀಗೆ ಕ್ರಮೇಣ ನೀರಿನ ಪ್ರಮಾಣವನ್ನು ಹೆಚ್ಚು ಮಾಡುತ್ತ ಇಪ್ಪತ್ತುನಾಲ್ಕು ದಿನಗಳ ವರೆಗೆ ಬರಿಯ ನೀರನ್ನೇ ಕುಡಿದು ಇರಬೇಕು. ಅನಂತರ ದಿನಕ್ಕೊಂದು ಸೇರಿನಂತೆ ನೀರನ್ನು ಕಡಿಮೆ ಮಾಡುತ್ತ ಇಪ್ಪತ್ತನಾಲ್ಕು ದಿನಗಳವರೆಗೆ ಈ ನಿಯಮ ಮುಂದುವರಿಸಬೇಕು. ಈ ರೀತಿ ನಲವತ್ತೆಂಟು ದಿನಗಳವರೆಗೆ ವ್ರತವನ್ನು ಮಾಡಿ ಆದಿತ್ಯನನ್ನು ಪೂಜಿಸಬೇಕು. ಸಪ್ತಮಿಯ ದಿನ ಈ ವ್ರತವನ್ನು ಸಂಕಲ್ಪ ಮಾಡಿ ಆರಂಭಿಸಬೇಕು. ಎರಡು ವರ್ಷಗಳವರೆಗೆ ಈ ವ್ರತವನ್ನು ದೃಢಸಂಕಲ್ಪದಿಂದ ಮಾಡಿ ಪೂರೈಸಿದರೆ ಮನುಷ್ಯನ ಸಕಲಾವಾಂಛಿತಾರ್ಥಗಳು ಕೈಗೂಡುತ್ತವೆ.

ಇದರಂತೆ 'ವಿಜಯಸಪ್ತಮಿ' ಎಂಬ ಚಿಕ್ಕ ವ್ರತವಿದೆ. ಶುಕ್ಲಪಕ್ಷದ ಸಪ್ತಮಿದಿನದಂದು ಶುಭ್ರಸ್ನಾತನಾಗಿ, ಭಕ್ತಿಭಾವದಿಂದ ಸೂರ್ಯನನ್ನು ಅರ್ಚಿಸಿ ಧ್ಯಾನ ಮಾಡಬೇಕು. ಅಲ್ಲದೆ, ದಾನ, ತಪಸ್ಸು, ಹೋಮ, ಹವನಗಳನ್ನು ನೆರವೇರಿಸಿದರೆ ಮಹಾಫಲವು ಲಭಿಸುತ್ತದೆ. ಮೇಲಾಗಿ ಇದೇ ದಿನ ಪಿತೃಶ್ರಾದ್ಧ ಮಾಡಿದರೆ, ಅತಿ ಶುಭ್ರನಾದ ಭಾಸ್ಕರನನ್ನು ಪೂಜಿಸಿದರೆ ಸಕಲ ಮನೋರಥಗಳು ಕ್ಷಿಪ್ರವಾಗಿ ನೆರವೇರುತ್ತವೆ. ಸದಾ ಯಾರು ಸೂರ್ಯನನ್ನು

ಸೇವೆ ಮಾಡಿದ ಮನುಷ್ಯನು, ಸಕಲ ಸುಖ ಭೋಗಗಳನ್ನು ಅನುಭವಿಸಿ, ಮರಣಾ ವಿಮಾನದಲ್ಲಿ ಕುಳಿತುಕೊಂಡು ಗಂಧರ್ವ ರಿಂದ ಹೊಗಳಿಸಿಕೊಳ್ಳುತ್ತಾ ಶಿವಲೋಕಕ್ಕೆ ಹೋಗುತ್ತಾನೆ. ಶಿವಲೋಕದಲ್ಲಿ ಒಂದು ಕಲ್ಪ ಕಾಲಾವಧಿವರೆಗೆ ಸಕಲ ಸುಖ ಭೋಗಗಳನ್ನು ಅನುಭವಿಸಿ, ಪುಣ್ಯವು ಕ್ಷಯಿಸಲು ಮರಳಿ ಭೂಲೋಕದಲ್ಲಿ ಬ್ರಾಹ್ಮಣ ವಂಶದಲ್ಲಿ ಜನ್ಮ ತಳೆಯುತ್ತಾನೆ. ಬ್ರಹ್ಮಜ್ಞಾನಿಯಾಗಿ ಶಂಕರನ ಯೋಗವನ್ನು ಅನುಷ್ಠಾನಮಾಡಿ ಶಾಶ್ವತಮುಕ್ತಿಯನ್ನು ಹೊಂದುತ್ತಾನೆ. ಈ ಕೋಣಾದಿತ್ಯ ಕ್ಷೇತ್ರದಲ್ಲಿ ಮರಣವನ್ನಪ್ಪಿದವನು, ಸೂರ್ಯಲೋಕ ಹೊಂದಿ ಸಕಲ ಸುಖ ಭೋಗಗಳನ್ನು ಅನುಭವಿಸುವನು. ಪುಣ್ಯವು ಕಳೆದಂತೆಲ್ಲ ಮರಳಿ ಧಾರ್ಮಿಕನಾದ ಕ್ಷತ್ರಿಯನಾಗಿ ಜನಿಸಿ ಬಹುಕಾಲ ರಾಜ್ಯವಾಳುತ್ತಾನೆ. ಕೊನೆಗೆ ಸೂರ್ಯನ ಯೋಗವನ್ನು ಅನುಷ್ಠಾನ ಮಾಡಿ ಅದರ ಬಲದಿಂದ ಶಾಶ್ವತ ಮುಕ್ತಿ ಹೊಂದುವದರಲ್ಲಿ ಸಂದೇಹವೇ ಇಲ್ಲ.

ಋಷಿಗಳಿರಾ, ಈ ರೀತಿಯಾಗಿ ಸಮುದ್ರತೀರದಲ್ಲಿರುವ ಅಪೂರ್ವ ಪುಣ್ಯಕ್ಷೇತ್ರ ವೆನಿಸಿದ ಕೋಣಾದಿತ್ಯ ಕ್ಷೇತ್ರದ ಮಹಿಮಾ ವಿಶೇಷವನ್ನು ನಿಮಗೆ ಇದುವರೆಗೆ ವಿವರಿಸಿರುವೆ ಎಂದನು.

## ಸೂರ್ಯಪುಜಾ ನಿಯಮ

ಮುನಿವೃಂದವು ಚತುರ್ಮುಖನಿಂದ ಕೋಣಾದಿತ್ಯ ಕ್ಷೇತ್ರ ವಿಚಾರವನ್ನು ಕೇಳುತ್ತ, ಭಕ್ತಿಪರವಶರಾಗಿ ಪಾಪನಾಶಕನಾದ ಭಾಸ್ಕರನ ದಿವ್ಯಚರಿತ್ರೆಯನ್ನು ಇನ್ನಷ್ಟು ಕೇಳಬೇಕೆಂಬ ಲವಲವಿಕೆಯನ್ನು ವ್ಯಕ್ತಮಾಡಿ, ಬ್ರಹ್ಮದೇವನಿಗೆ ದೇವಪೂಜೆಯ ಫಲ ಹಾಗೂ ದಾನದ ಫಲವನ್ನು ವಿವರಿಸಲು ಪ್ರಾರ್ಥಿಸಿಕೊಂಡಿತು.

ಆ ಮುನಿ ಸಂಕುಲದ ಪ್ರಾರ್ಥನೆಯಂತೆ ಆ ಚತುರ್ಮುಖನು ನುಡಿಯುತ್ತಾನೆ. ಉಪವಾಸ ಮಾಡುವದು, ರಾತ್ರಿಯಲ್ಲಿ ಮಾತ್ರ ಊಟ ಮಾಡಿ ಪೂಜಿಸುವದು. ಹಾಗೂ ಅರ್ಘ್ಯಪ್ರದಾನದ ವಿಧಾನವನ್ನು ನಿಮಗೆ ವಿವರಿಸುತ್ತೇನೆ ಎಂದಾಗ ಮುನಿಗಳು ಸಾವಧಾನ ಚಿತ್ತದಿಂದ ಆಲಿಸತೊಡಗಿದರು.

ಬಳಿಕ ಬ್ರಹ್ಮನು ಹೇಳುತ್ತಾನೆ- ಮನಸ್ಸಿನ ಭಾವನೆ (ದೇವರಲ್ಲಿ ಶ್ರದ್ಧೆ) ಎನ್ನುವುದೇ ಭಕ್ತಿ. ಇಲ್ಲವೇ ಅಚಲವಾದ ಆಸಕ್ತಿಯೇ ಭಕ್ತಿ ಎನ್ನಬಹುದು. ಏಕಚಿತ್ತದಿಂದ ಧ್ಯಾನಿಸುವ ವಿಧಾನವೇ ಸಮಾಧಿ ಎನಿಸುವದು. ಸೂರ್ಯನ ಮಹಿಮಾ ಕಥೆಯನ್ನು ಆದರದಿಂದ ಕೇಳುವವರು, ಅಲ್ಲದೇ ಅವನ ಭಕ್ತರನ್ನು ಪೂಜಿಸುವವರು, ಮತ್ತು ಅಗ್ನಿಯನ್ನು ಪೂಜಿಸುವವರೆಲ್ಲ ನಿಜವಾದ ಸೂರ್ಯ ಭಕ್ತರೆನಿಸುವರು. ಸರ್ವ ಸಮರ್ಪಣ ಭಾವದಿಂದ ಭಾಸ್ಕರನನ್ನೂ, ನಿತ್ಯ ಧ್ಯಾನ, ಪೂಜೆಗೈಯ್ಯುವವರೆಲ್ಲ ಸೂರ್ಯ ಭಕ್ತರೆನಿಸುವರು. ನಿಜವಾದ ಸೂರ್ಯೋಪಾಸಕನಿಗೆ ಇನ್ನುಳಿದ ಸೂರ್ಯಭಕ್ತರ ಬಗ್ಗೆ ಅಸೂಯೆ ಇರಬಾರದು. ಶಿವ, ವಿಷ್ಣು ಮುಂತಾದ ದೇವತೆಗಳನ್ನು ನಿಂದಿಸಬಾರದು. ಹೀಗಿದ್ದು ಆದಿತ್ಯನನ್ನು ಅಂತರಂಗದಲ್ಲಿ ಆರಾಧಿಸುವವನು ಭಕ್ತರಲ್ಲಿ ಉತ್ತಮನೆಂದು ಪರಿಗಣಿಸಲ್ಪಡುತ್ತಾನೆ. ಮಾನವನು ತನ್ನ ದೈನಂದಿನ ಚಟುವಟಿಕೆಗಳಾದ, ಕುಳಿತಾಗ, ನಿಂತಾಗ, ಉಣ್ಣುವಾಗ, ಮಲಗಿದಾಗ, ಅಷ್ಟೇ ಏಕೆ ಕಣ್ಣುರೆಪ್ಪೆ ಬಡಿಯುವಾಗಲೂ ಸಹ ಸೂರ್ಯನನ್ನು ಸದಾ ಧ್ಯಾನಿಸುವವನು ಸೂರ್ಯಭಕ್ತನು. ಸದ್ಭಕ್ತಿಯಿಂದ ಮಾಡಿದ ಧ್ಯಾನ, ಪೂಜೆ, ಜಪ,

ತಪಾದಿಗಳಿಂದ ಹಾಗೂ ಸದಾಚಾರವುಳ್ಳ ಬ್ರಾಹ್ಮಣನಿಗೆ ದಾನಮಾಡಿದರೆ ದೇವತೆಗಳು ಸಂತುಷ್ಟರಾಗುವರು. ಅಲ್ಲದೆ ಪಿತೃದೇವತೆಗಳು ಪರಮಾನಂದಪಡುವರು. ಭಕ್ತಿಯಿಲ್ಲದ ಪೂಜೆ ಪುರಸ್ಕಾರಗಳಾಗಲಿ ತರ್ಪಣ, ನೈವೇದ್ಯಗಳಿಂದ ದೇವತೆಗಳು ಎಂದೂ ತೃಪ್ತರಾಗುವದಿಲ್ಲ. ಆದುದರಿಂದ ನಿಯಮ, ನೀತಿ, ಸದಾಚಾರಗಳಿಂದ ಅಂತರಂಗವನ್ನು ಪರಿಶುದ್ಧಗೊಳಿಸಿ ಮಾಡಿದ ಅಲ್ಪಭಕ್ತಿಯೇ ಮಹತ್ಫಲ ಕೊಡುವದು. ಸಕಲ ಲೋಕಕ್ಕೆಲ್ಲ ಬೆಳಕನ್ನೂ, ಜ್ಞಾನವನ್ನೂ ಕೊಡುವ ಸೂರ್ಯದೇವನಿಗೆ ಶಿರಸ್ಸು ನೆಲಕ್ಕೆ ತಾಗುವಂತೆ ಭಕ್ತಿಯಿಂದ ನಮಸ್ಕಾರ ಮಾಡಿದರೆ ಸಕಲ ಪಾಪಗಳು ನಾಶವಾಗುತ್ತವೆ. ಭಕ್ತಿಯಿಂದ ಪ್ರದಕ್ಷಿಣೆ ಮಾಡಿದರೆ ಸೂರ್ಯನು ಸುಪ್ರೀತನಾಗುವದಲ್ಲದೆ ಭೂಪ್ರದಕ್ಷಿಣೆ ಹಾಕಿದ ಪುಣ್ಯ ಲಭಿಸುವದು. ಅಷ್ಟೇ ಏಕೆ ಭಕ್ತಿಭಾವದಿಂದ ಭಾಸ್ಕರನನ್ನು ಧ್ಯಾನ ಮಾಡುತ್ತ ಆಕಾಶ ಪ್ರದಕ್ಷಿಣೆಯನ್ನೂ ಮಾಡಿದಾಗ ಕೋಟ್ಯಾನುಕೋಟಿ ದೇವತೆಗಳಿಗೆ ಪ್ರದಕ್ಷಿಣೆ ಹಾಕಿದಂತಾಗಿ ಅಲಭ್ಯವಾದ ಶ್ರೇಯಸ್ಸು ಲಭಿಸುವದು.

ವಿಶೇಷವಾಗಿ ಷಷ್ಠಿ, ಸಪ್ತಮಿ ದಿನಗಳಲ್ಲಿ ಒಪ್ಪೊತ್ತು ಉಪವಾಸವ್ರತ ಮಾಡಿ ವಿಧಿವತ್ತಾಗಿ ಸೂರ್ಯೋಪಾಸನೆ ಮಾಡಿದರೆ ಅಶ್ವಮೇಧಯಾಗ ಫಲ ದೊರಕುವದು. ಷಷ್ಠಿ ಅಥವಾ ಸಪ್ತಮಿಯಲ್ಲಿ ಹಗಲು ಹಾಗೂ ರಾತ್ರಿ ಉಪವಾಸದಿಂದಿದ್ದು, ಏಕಾಂತಚಿತ್ತದಿಂದ ಭಾಸ್ಕರನನ್ನು ಅರ್ಚಿಸಿದರೆ ಅವನು ಉತ್ತಮ ಗತಿ ಹೊಂದುವನು. ಕೃಷ್ಣಪಕ್ಷದ ಸಪ್ತಮಿದಿನ ಉಪವಾಸವಿದ್ದು, ಜಿತೇಂದ್ರಿಯತ್ವದಿಂದ, ಸೂರ್ಯನನ್ನು ಶ್ರೇಷ್ಠ, ಪೂಜಾ ದ್ರವ್ಯಾದಿಗಳಿಂದ, ರತ್ನಗಳಿಂದ ಪೂಜಿಸಿದರೆ ಕಮಲದಂತಹ ಕೆಂಬಣ್ಣದ ವಿಮಾನವನ್ನೇರಿ ಸೂರ್ಯಲೋಕಕ್ಕೆ ತೆರಳುವನು. ಅದರಂತೆ ಶುಕ್ಲಪಕ್ಷದ ಸಪ್ತಮಿದಿನ ಉಪವಾಸವಿದ್ದು ಬಿಳಿಯ ಪೂಜಾವಸ್ತುಗಳನ್ನು ಸಮರ್ಪಿಸಿ ಸೂರ್ಯನ ಪೂಜೆಯನ್ನು ಮಾಡಿದವನು ತನ್ನೆಲ್ಲ ಪಾಪಕರ್ಮಗಳಿಂದ ಮುಕ್ತನಾಗಿ ಸೂರ್ಯಲೋಕಕ್ಕೆ ಪ್ರಯಾಣ ಮಾಡುವನು.

ಋಷಿಗಳಿರಾ, ಇನ್ನು 'ಅರ್ಕಸಪ್ತಮಿ ವ್ರತ'ದ ಬಗ್ಗೆ ವಿವರಿಸುತ್ತೇನೆ. ಚಿತ್ತಗೊಟ್ಟು ಆಲಿಸಿರಿ. ಈ ವ್ರತದ ಪ್ರಕಾರ ಮೊದಲನೆಯ ದಿನ ಸೂರ್ಯದೇವನ ಮಂತ್ರದ ಸಂಪುಟೀಕರಣದಿಂದ ಅಭಿಮಂತ್ರಿತವಾದ ಒಂದು ಸೇರು ಹಿಡಿಯುವಷ್ಟು ನೀರನ್ನು ಮಾತ್ರ ಕುಡಿಯಬೇಕು. ಎರಡನೆಯ ದಿನ ಎರಡು ಸೇರು, ಹೀಗೆ ಕ್ರಮೇಣ ನೀರಿನ ಪ್ರಮಾಣವನ್ನು ಹೆಚ್ಚು ಮಾಡುತ್ತ ಇಪ್ಪತ್ತುನಾಲ್ಕು ದಿನಗಳ ವರೆಗೆ ಬರಿಯ ನೀರನ್ನೇ ಕುಡಿದು ಇರಬೇಕು. ಅನಂತರ ದಿನಕ್ಕೊಂದು ಸೇರಿನಂತೆ ನೀರನ್ನು ಕಡಿಮೆ ಮಾಡುತ್ತ ಇಪ್ಪತ್ತನಾಲ್ಕು ದಿನಗಳವರೆಗೆ ಈ ನಿಯಮ ಮುಂದುವರಿಸಬೇಕು. ಈ ರೀತಿ ನಲವತ್ತೆಂಟು ದಿನಗಳವರೆಗೆ ವ್ರತವನ್ನು ಮಾಡಿ ಆದಿತ್ಯನನ್ನು ಪೂಜಿಸಬೇಕು. ಸಪ್ತಮಿಯ ದಿನ ಈ ವ್ರತವನ್ನು ಸಂಕಲ್ಪ ಮಾಡಿ ಆರಂಭಿಸಬೇಕು. ಎರಡು ವರ್ಷಗಳವರೆಗೆ ಈ ವ್ರತವನ್ನು ದೃಢಸಂಕಲ್ಪದಿಂದ ಮಾಡಿ ಪೂರೈಸಿದರೆ ಮನುಷ್ಯನ ಸಕಲಾವಾಂಛಿತಾರ್ಥಗಳು ಕೈಗೂಡುತ್ತವೆ.

ಇದರಂತೆ 'ವಿಜಯಸಪ್ತಮಿ' ಎಂಬ ಚಿಕ್ಕ ವ್ರತವಿದೆ. ಶುಕ್ಲಪಕ್ಷದ ಸಪ್ತಮಿದಿನದಂದು ಶುಭ್ರಸ್ನಾತನಾಗಿ, ಭಕ್ತಿಭಾವದಿಂದ ಸೂರ್ಯನನ್ನು ಅರ್ಚಿಸಿ ಧ್ಯಾನ ಮಾಡಬೇಕು. ಅಲ್ಲದೆ, ದಾನ, ತಪಸ್ಸು, ಹೋಮ, ಹವನಗಳನ್ನು ನೆರವೇರಿಸಿದರೆ ಮಹಾಫಲವು ಲಭಿಸುತ್ತದೆ. ಮೇಲಾಗಿ ಇದೇ ದಿನ ಪಿತೃಶ್ರಾದ್ಧ ಮಾಡಿದರೆ, ಅತಿ ಶುಭ್ರನಾದ ಭಾಸ್ಕರನನ್ನು ಪೂಜಿಸಿದರೆ ಸಕಲ ಮನೋರಥಗಳು ಕ್ಷಿಪ್ರವಾಗಿ ನೆರವೇರುತ್ತವೆ. ಸದಾ ಯಾರು ಸೂರ್ಯನನ್ನು

ಪೂಜೆ, ಧ್ಯಾನ ಮಾಡುತ್ತಾರೋ ಅವರ ವಂಶದವರಿಗೆ ದಾರಿದ್ರ್ಯವಾಗಲಿ, ರೋಗವಾಗಲಿ ಅಂಟುವದಿಲ್ಲ. ಅಲ್ಲದೆ ಅವರೆ ಮುಂದಿನ ಪೀಳಿಗೆಯು ಸಕಲ ಸುಖ, ಶಾಂತಿ ಸಮೃದ್ಧಿ, ಸತ್ಫಲ ಅನುಭವಿಸುತ್ತದೆ.

ಪೂಜಾ ವಿಧಾನದಲ್ಲೂ ಸೂರ್ಯೋಪಾಸನೆಯು ವೈಶಿಷ್ಟ್ಯಪೂರ್ಣವಾಗಿದೆ. ಬಿಳಿಯ ಗಂಧ ಇಲ್ಲವೆ ಕೆಂಪುಗಂಧ ಇಲ್ಲದಿದ್ದರೆ ಶುದ್ಧವಾದ ಮಣ್ಣು ಸೂರ್ಯನಿಗೆ ಲೇಪನ ಮಾಡಿದರೆ ಮಾನವನ ಸಕಲ ಇಷ್ಟಾರ್ಥಗಳು ನೆರವೇರುವವು. ಸೂರ್ಯನು ಸದಾ ಪುಷ್ಪ ಪ್ರಿಯನಾಗಿದ್ದು ಪೂಜಾಕಾಲದಲ್ಲಿ ತುಪ್ಪದ ದೀಪ ಇಲ್ಲವೆ ಎಳ್ಳೆಣ್ಣೆಯ ದೀಪವನ್ನಾಗಲಿ ಹಚ್ಚಿಟ್ಟು ಆದಿತ್ಯನನ್ನು ಪೂಜಿಸಿದರೆ ಮಾನವನ ಕಣ್ಣುಗಳು ಸದಾ ಹೊಳೆಯುವಂತಾಗುತ್ತವೆ. ದಾನವನ್ನೂ ಮಾಡಿದವನು ಸದಾ ಜ್ಞಾನಜ್ಯೋತಿಯಿಂದ ಲೋಕ ಬೆಳಗುತ್ತಾನೆ. ಎಳ್ಳು ಮತ್ತು ಎಣ್ಣೆಗಳು ಪವಿತ್ರವಾದವುಗಳು, ಹೋಮಹವನಾದಿಗಳಲ್ಲಿ ಎಳ್ಳಿನ ದಾನ ಹಾಗೂ ಗೋದಾನವು ಉತ್ತಮವೆಂದು ಪರಿಗಣಿಸಲಾಗಿದೆ. ದೀಪದಾನದಲ್ಲಿ ಎಳ್ಳೆಣ್ಣೆ ದಾನ ಮಾಡಿದರೆ ಮಹಾ ಪಾಪನಾಶ, ಅಷ್ಟೇ ಅಲ್ಲ; ದೇವಾಲಯ, ಸಾರ್ವಜನಿಕ ರಸ್ತೆಗಳಲ್ಲಿ ದೀಪ ಹಚ್ಚಿ ಇಟ್ಟವನು ಮುಂದಿನ ಜನ್ಮದಲ್ಲಿ ರೂಪವಂತನೂ, ಸೌಭಾಗ್ಯವಂತನೂ ಆಗಿ ಜನಿಸುವನು.

ದೇವತೆಗಳನ್ನು ಹವಿಸ್ಸುಗಳಿಂದ ಪೂಜೆ ಮಾಡುವದು ಶ್ರೇಷ್ಠ. ಔಷಧಿ ರಸಗಳಿಂದ ಪೂಜಿಸುವದು ಮಧ್ಯಮ. ಕೊಬ್ಬು, ಮೇದಸ್ಸು, ರಸಿಕೆಗಳಿಂದ ಪೂಜಿಸುವದು ಸರ್ವಥಾ ಸಲ್ಲ. ದೀಪದಾನದಿಂದ ಮಾನವನು ಸದ್ಗತಿ ಹೊಂದುವನು. ಅಲ್ಲದೆ ಸ್ವರ್ಗದಲ್ಲಿ ದೀಪದ ಸಾಲಿನಂತೆ ಬೆಳಗುವನು. ಪ್ರಶಾಂತವಾಗಿ ಉರಿಯುತ್ತಿರುವ ದೀಪವನ್ನು ಸ್ಥಳಾಂತರ ಮಾಡಬಾರದು. ದೀಪ ನಂದಿಸಬಾರದು. ದೀಪನಾಶದಿಂದ ಅಜ್ಞಾನವೂ, ಅಂಧತ್ವವೂ ಬರುವದಲ್ಲದೆ ಕೋಪಿಷ್ಠನಾಗಿ ಶೀಘ್ರನಾಶ ಹೊಂದುವನು. ಕುಂಕುಮ, ಅಗರು ಚಂದನಗಳಿಂದ ಸೂರ್ಯನನ್ನು ಪೂಜಿಸುವವನು ಮುಂದಿನ ಜನ್ಮದಲ್ಲಿ ಧನವಂತನೂ, ಕೀರ್ತಿವಂತನೂ, ಸುಖಿಯೂ ಆಗುವನು. ದಿನಾಲೂ ಪ್ರಾತಃಕಾಲದಲ್ಲಿ ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಮಡಿಯಿಂದ ಕೆಂಪು ಹೂವು, ಗಂಧಗಳೊಂದಿಗೆ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಿದರೆ ಒಂದು ವರ್ಷದೊಳಗೆ ಸಿದ್ಧಿಯನ್ನು ಪಡೆಯುವರು. ಸೂರ್ಯೋದಯದ ಆರಂಭದಿಂದ ಅಸ್ತಂಗತ ನಾಗುವವರೆಗಿನ ಅವಧಿಯ ಪರ್ಯಂತ ಸೂರ್ಯನಿಗೆ ಎದುರಾಗಿ ನಿಂತಿದ್ದು, ಸೂರ್ಯ ಮಂತ್ರ ಜಪಿಸಿದರೆ ಮಾನವನ ಸಕಲ ಪಾಪಗಳೂ ಪರಿಹಾರಗಳಾಗುತ್ತವೆ. ಇದಕ್ಕೆ 'ಆದಿತ್ಯವ್ರತ'ವೆಂದು ಕರೆಯುತ್ತಾರೆ. ಸೂರ್ಯೋದಯ ಸಮಯದಲ್ಲಿ ಅರ್ಘ್ಯದೊಂದಿಗೆ ಎಲ್ಲವನ್ನು ಸಮರ್ಪಿಸಿದರೆ ಸಕಲಕ್ಲೇಶಗಳೂ ಸಮೂಲನಾಶವಾಗುತ್ತವೆ. ಸೂರ್ಯದೇವನಿಗೆ ಅರ್ಘ್ಯಪ್ರದಾನಮಾಡಿ, ಗೋದಾನ, ವೃಷಭದಾನ, ವಸ್ತ್ರದಾನ ಮಾಡಿದರೆ ಏಳು ಜನ್ಮಗಳವರೆಗೂ ಪುಣ್ಯಪ್ರಾಪ್ತಿ ಇದೆ. ಯಾವಾಗಲೂ ಸೂರ್ಯನಿಗೆ ಎದುರಾಗಿಯೇ ಅರ್ಘ್ಯ ಕೊಡಬೇಕು. ಆ ಸಮಯದಲ್ಲಿ ತುಪ್ಪ, ಧೂಪಗಳನ್ನು ಉಪಯೋಗಿಸಬೇಕು. ಅಗ್ನಿ, ನೀರು, ಆಕಾಶ, ಶುದ್ಧವಾದ ಭೂಮಿ, ಸೂರ್ಯ ವಿಗ್ರಹ, ಹಿಟ್ಟಿನ ವಿಗ್ರಹ ಇವುಗಳಲ್ಲಿ ಶ್ರದ್ಧೆಯಿಂದ ಅರ್ಘ್ಯವನ್ನು ಕೊಡಬೇಕು. ಸೂರ್ಯನಿಗೆ ಅರ್ಘ್ಯ ಕೊಡುವಾಗ ಎಡಕ್ಕಾಗಲಿ, ಬಲಕ್ಕಾಗಲಿ ಕೊಡದೆ, ವಿಧಿವಿಧಾನಗಳಿಂದ ಅರ್ಘ್ಯ ಕೊಡಬೇಕು. ಇದರಿಂದ ಸಕಲ ಪಾಪಗಳೂ ದೂರವಾಗುತ್ತವೆ. ಚತುರಸ್ರ, ಸುರಹೊನ್ನೆ ಹೂವುಗಳಿಂದ ಹಾಗೂ ಕರ್ಪುರ, ಅಗರು

ಧೂಪಗಳನ್ನು ಸೂರ್ಯನಿಗೆ ಅರ್ಪಿಸಿದರೆ ಸ್ವರ್ಗ ಲಭಿಸುತ್ತದೆ. ಅದರಲ್ಲಿಯೂ ಉತ್ತರಾಯಣ, ದಕ್ಷಿಣಾಯನಗಳಲ್ಲಿ ಸೂರ್ಯನನ್ನು ಭಕ್ತಿಯಿಂದ ಪೂಜಿಸಿದರೆ ಸಕಲಪಾಪಗಳೂ ದೂರವಾಗುತ್ತವೆ. ವಿಶೇಷತಃ ಗ್ರಹಣ, ಷಡಶೀತಿ (೮೬) ಮುಂತಾದ ಪರ್ವಕಾಲದಲ್ಲಿ ಸೂರ್ಯನನ್ನು ಪೂಜೆಗೈದರೆ ಸಕಲ ಪಾಪಕರ್ಮಗಳು ನಶಿಸುತ್ತವೆ.

ಮೇಲೆ ಹೇಳಿದ ಕಾಲಗಳಲ್ಲಿ ಅಥವಾ ಉಳಿದ ಕಾಲಗಳಲ್ಲಿ ಸೂರ್ಯನನ್ನು ಸದ್ಭಕ್ತಿಯಿಂದ ಪೂಜಿಸಿದವನು ಸೂರ್ಯಲೋಕ ಹೊಂದುವನು, ಸಕಲ ಭೋಗಗಳನ್ನು ಅನುಭವಿಸುವನು. ಎಳ್ಳನ್ನ, ತಂಬಿಟ್ಟು, ಪಾಯಸ, ಹಣ್ಣು, ತುಪ್ಪದನ್ನ ಮುಂತಾದವುಗಳನ್ನು ನೈವೇದ್ಯಮಾಡಿಪೂಜಿಸಿದರೆ ಸಕಲ ಕಾಮನೆಗಳೂ ಕೈಗೂಡುವವು. ಅಷ್ಟೇ ಅಲ್ಲ; ತುಪ್ಪದಿಂದ ಸೂರ್ಯತರ್ಪಣದಿಂದ ಸಕಲ ಸಿದ್ಧಿಯಾಗುವವು. ಹಾಲಿನ ತರ್ಪಣದಿಂದ ಮನಸ್ಸಿನ ತಾಪ ದೂರ. ಮೊಸರಿನ ತರ್ಪಣ ಸಂಕಲ್ಪಸಾಧಿತವಾಗುವವು. ಜಲತರ್ಪಣದಿಂದ ಉತ್ತಮ ಗತಿ ಪ್ರಾಪ್ತಿ. ಅಲ್ಲದೆ ಛತ್ರಿ, ಧ್ವಜ, ಪತಾಕೆ ಚಾಮರಗಳ ಸೇವೆಯಿಂದ ಅತ್ಯುತ್ತಮ ಗತಿ ಸಂಪ್ರಾಪ್ತಿಯಾಗುವದು. ನಾವು ಸೂರ್ಯನಿಗೆ ಯಾವ ವಸ್ತುಗಳನ್ನು ಸದ್ಭಕ್ತಿ-ಭಾವದಲ್ಲಿ ಸಮರ್ಪಿಸುವೆವೊ ಆಯಾ ವಸ್ತುಗಳನ್ನು ಸಾವಿರ ಸಾವಿರ ಸಂಖ್ಯೆಯಲ್ಲಿ ನಮಗೇ ಮರಳಿ ಅನುಗ್ರಹಿಸುತ್ತಾನೆ. ಅವನ ಕೃಪಾಕಟಾಕ್ಷದಿಂದ ತ್ರಿಕರಣಪೂರ್ವಕವಾಗಿ ಮಾಡಿದ ಪಾಪ ಪರಿಹಾರವಾಗುತ್ತದೆ ಮತ್ತು ಉತ್ತಮಗತಿಯು ಪ್ರಾಪ್ತವಾಗುತ್ತದೆ. ನೂರಾರು ಯಾಗಗಳಿಂದ ದೊರಕುವ ಪುಣ್ಯಫಲವು ಕೇವಲ ಒಂದು ದಿನ ಭಕ್ತಿಯಿಂದ, ತ್ರಿಕರರ್ಣಪೂರ್ವಕವಾಗಿ ಸದ್ಭಕ್ತಿ, ಪೂಜೆ, ಧ್ಯಾನ, ಜಪ, ತಪಗಳಿಂದ ದೊರಕುವದೆಂಬುವ ಮಾತು ಶತಸತ್ಯವಾಗಿದೆ.

## ಆದಿತ್ಯವರ್ಣನ

ಋಷಿಗಳು, ಚತುರ್ಮುಖನನ್ನು ಕುರಿತು ''ಸೂರ್ಯನ ಮಹಿಮೆಯು ವರ್ಣಮಯವಾಗಿದ್ದು, ಅದನ್ನು ಇನ್ನೂ ಕೇಳಬೇಕೆಂದಿನಿಸಿದೆ. ಅಲ್ಲದೆ ಬ್ರಹ್ಮಚಾರಿ, ಗೃಹಸ್ಥ ವಾನಪ್ರಸ್ಥದಲ್ಲಿರುವವನು ಹಾಗೂ ಸನ್ಯಾಸಿ ಇವರು ಯಾವ ದೇವನನ್ನು ಪೂಜಿಸಬೇಕು? ನಮಗೆ ಸ್ವರ್ಗ ಲಭಿಸಲು ಯಾವ ದೇವರನ್ನು ಪೂಜಿಸಬೇಕು? ಈ ಚರಾಚರ ಸೃಷ್ಟಿಯನ್ನು ರಚಿಸಿದವನು ಯಾರು? ಪ್ರಳಯಕಾಲದಲ್ಲಿ ಜಗತ್ತು ಯಾರನ್ನು ಸೇರುವದು? ಮುಂತಾದ ಸಂದೇಹಗಳಿಗೆ ಸಮಾಧಾನ ಹೇಳಬೇಕು''-ಎಂದು ಪ್ರಾರ್ಥಿಸಿದಾಗ ಕಮಲಾಸನನು ನಸು ನಕ್ಕು ನುಡಿದನು- 'ಋಷಿಗಳಿರಾ, ಸಕಲಲೋಕದ ಕತ್ತಲೆ ಕಳೆಯುವವನೇ ಸೂರ್ಯದೇವನು. ಇವನ ಸಮಾನ ದೇವರಿಲ್ಲ. ಅಲ್ಲದೆ ಈ ಜಗದ ಸೃಷ್ಟಿ, ಸ್ಥಿತಿ, ಲಯಗಳಿಗೆಲ್ಲ ಅವನೇ ಮೂಲವಾಗಿದ್ದು ಅದನ್ನು ವಿವರಿಸುತ್ತೇನೆ ಕೇಳಿರಿ' ಎಂದು ವಿವರಿಸಲಾರಂಭಿಸಿದನು.

ಸೂರ್ಯನು ಆದಿ ಅಂತ್ಯವಿಲ್ಲದ ಸನಾತನನು, ಪುರಾಣಪುರುಷ ಹಾಗೂ ದೇವ ದೇವೋತ್ತಮನು. ಇವನಿಗೆ ನಾಶವೆಂಬುದೇ ಇಲ್ಲ. ಇವನು ಜಗತ್ತಿಗೆಲ್ಲ ಒಡೆಯನು. ಸಕಲ ದೇವತಾ ಸ್ವರೂಪನು, ಜಗತ್ತಿನ ಚರಾಚರಗಳ ನಿಯಂತ್ರಕನು. ಅವನು ಸರ್ವತಂತ್ರ ಸ್ವತಂತ್ರನೂ ಅಹುದು. ಅವನು ಋತುಗಳನ್ನು ಸೃಷ್ಟಿಸಿ ಸಮಸ್ತಸೃಷ್ಟಿಗೆ ಆಧಾರಭೂತ ನಾಗಿದ್ದಾನೆ. ಸೂರ್ಯಮಂಡಲವೇ ಸ್ಥಿರವಾದ ನೆಲೆಯಾಗಿದ್ದು ಅದಕ್ಕೊಡೆಯನಾದ

ಸೂರ್ಯನು ಪಿತೃಗಳಿಗೆ ಪಿತೃವಾಗಿದ್ದಾನೆ. ಅಲ್ಲದೆ ದೇವತೆಗಳಿಗೆ ದೇವನಾಗಿದ್ದಾನೆ. ಹೊಸ ಸೃಷ್ಟಿಗೆ ಅವನೇ ಕಾರಣೀಭೂತ, ಲಯಕ್ಕೂ ಅವನೇ ಕಾರಣ. ಪ್ರಳಯಕಾಲದಲ್ಲಿ ಈ ಭೂಮಂಡಲವು ಅವನಲ್ಲಿಯೇ ಲೀನವಾಗುವುದು. ಆ ಕಾಲದಲ್ಲಿ ಯೋಗಿಗಳು, ಯೋಗಸಿದ್ಧಿ ಬಲದಿಂದ ಶರೀರವೆಂಬ ಮನೆಯನ್ನು ಬಿಟ್ಟು ವಾಯುರೂಪ ಧರಿಸಿ ತೇಜೋಮಯ ಸೂರ್ಯಮಂಡಲ ಸೇರುವರು. ಇವರೊಂದಿಗೆ ತಪಸ್ವಿಗಳು ಈ ಸೂರ್ಯಕಿರಣಗಳನ್ನು ಆಶ್ರಯಿಸಿ ದೇವತೆಗಳೊಡನೆ ವಿಹರಿಸುವರು. ಅವರಂತೆ ಜನಕರಾಜ ಮೊದಲಾದ ಸದ್ಗೃಹಸ್ಥರೂ, ವಾಲಿಖಿಲ್ಯ ಮೊದಲಾದ ಬ್ರಹ್ಮಜ್ಞಾನಿಗಳೂ, ವಾನಪ್ರಸ್ಥಾಶ್ರಮಿಗಳೂ, ವ್ಯಾಸರಂತಹ ಮೊದಲಾದ ಸಂನ್ಯಾಸಿಗಳೂ ಯೋಗಾನುಷ್ಠಾನ ಬಲದಿಂದ ಸೂರ್ಯಮಂಡಲ ಪ್ರವೇಶಿಸುವರು. ಅಲ್ಲದೆ ವ್ಯಾಸಮುನಿಯ ಮಗನಾದ ಬ್ರಹ್ಮಚಾರಿ ಶುಕನು ಆದಿತ್ಯಮಂಡಲ ಪ್ರವೇಶಿಸಿ ಶಾಶ್ವತ ಮುಕ್ತಿಯನ್ನು ಹೊಂದಿದನು. ಬ್ರಹ್ಮರುದ್ರೇಂದ್ರಾದಿ ದೇವತೆಗಳ ನಿಜಸ್ವರೂಪವು ವೇದಪುರಾಣಾದಿಗಳಿಂದ ಮಾತ್ರ ಕಂಡು ತಿಳಿಯಬಲ್ಲೆವು. ಆದರೆ ಸೂರ್ಯದೇವನನ್ನು ಪ್ರತ್ಯಕ್ಷ, ಕಾಣಬಹುದಾಗಿದೆ. ಸಾಮಾನ್ಯ ದೃಷ್ಟಿಗೆ ಹರಿಯ ಸ್ವರೂಪ ನಿಲುಕದು. ಆದರೆ ಸೂರ್ಯನಾರಾಯಣನು ಸಹಜವಾಗಿ ನಿತ್ಯವೂ ಪ್ರತ್ಯಕ್ಷ ದರ್ಶನ ಕೊಡುವವನು. ಅಲ್ಲದೆ ಅವನೇ ಲೋಕಕ್ಕೆ ತಂದೆ, ತಾಯಿ ಮತ್ತು ಗುರುವೂ ಸಹ. ಆದ್ದರಿಂದ ಅವನನ್ನು ಪೂಜಿಸಬೇಕು. ಸೂರ್ಯೋಪಾಸನೆಯಿಂದ ಮನುಜನಿಗೆ ಸಹಜ ಮುಕ್ತಿ ಲಭಿಸುವದು. ಅವನು ಆದಿ, ಅಂತ್ಯವಿಲ್ಲದ ಪ್ರಶಾಂತ ಕಿರಣಬೀರುವ ಪರಬ್ರಹ್ಮ ಸ್ವರೂಪನು, ನಿತ್ಯಾನಂದ ರೂಪನು, ಭಗವಾನ್ ಸೂರ್ಯದೇವನು ಜಗತ್ತಿಗೆ ಮಿತ್ರನೂ, ನಿತ್ಯನೂ ಆಗಿದ್ದಾನೆ.

ಒಮ್ಮೆ ಚಂದ್ರಭಾಗ ನದಿಯ ದಂಡೆಯಲ್ಲಿ ತಪಸ್ಸು ಪೂರ್ಣಗೊಳಿಸಿ, ಭಗವಾನ್ ಸೂರ್ಯನಾರಾಯಣನು ಸಂಕಲ್ಪಗೈದು ಸೃಷ್ಟಿಯನ್ನು ಮಾಡತೊಡಗಿದನು. ಅವನು ಸೃಷ್ಟಿಸಿದ ವೈಖರಿಯನ್ನು ಸಾದ್ಯಂತವಾಗಿ ನಿರೂಪಿಸುತ್ತೇನೆ ಕೇಳಿರಿ ಎಂದು ಚತುರ್ಮುಖನು ವಿವರಿಸತೊಡಗಿದನು.

ಭಗವಾನ್ ಸೂರ್ಯನಾರಾಯಣನು ಆರಂಭದಲ್ಲಿ ಸಾಗರ ಹಾಗೂ ದ್ವೀಪಗಳೊಂದಿಗೆ ಹದಿನಾಲ್ಕು ಲೋಕಗಳನ್ನು ಸೃಷ್ಟಿಸಿದನು. ಲೋಕಕ್ಷೇಮದ ಸಂಕಲ್ಪ ಸಾಧನೆಗಾಗಿ ಚಂದ್ರಭಾಗಾ ನದಿಯ ತೀರದಲ್ಲಿ ತಪಸ್ಸನ್ನೂ ಆಚರಿಸಿ, ಒಂಭತ್ತು ಜನ ಪ್ರಜಾಪತಿಗಳನ್ನು ಸೃಷ್ಟಿಸಿದನು. ಅವರ ಮೂಲಕ ಅನೇಕ ಪ್ರಜೆಗಳನ್ನು ನಿರ್ಮಾಣ ಮಾಡಿದನು. ನಂತರ ಸಾವಿರ ಕಿರಣಗಳುಳ್ಳ ಸೂರ್ಯ, ಇಂದ್ರಿಯಗಳಿಗೆ ಗೋಚರಿಸದ ತನ್ನ ಸ್ವರೂಪವನ್ನು ಹನ್ನೆರಡು ವಿಭಾಗ (ರೂಪ)ವಾಗಿ ದ್ವಾದಶಾದಿತ್ಯರನ್ನುಂಟು ಮಾಡಿದನು. ಆ ದ್ವಾದಶಾದಿತ್ಯರೆಂದರೆ- ಇಂದ್ರ, ಧಾತಾ, ಪರ್ಜನ್ಯ, ತ್ವಷ್ಟಾ, ಪೂಷಾ, ಅರ್ಯಮಾ, ಭಗ, ವಿವಸ್ವಾನ್, ವಿಷ್ಣು, ಅಂಶ, ವರುಣ, ಮಿತ್ರ ಮುಂತಾದವರು ಈ ದ್ವಾದಶಾದಿತ್ಯರು ಈ ಜಗತ್ತನ್ನೆಲ್ಲ ವ್ಯಾಪಿಸಿರುವರು. ಈ ದ್ವಾದಶಾದಿತ್ಯರಲ್ಲಿ ಇಂದ್ರಮೂರ್ತಿಯು ದೇವೇಂದ್ರನೆಂದು ಪ್ರಸಿದ್ಧವಾಗಿ ದೇವತೆಗಳ ವೈರಿಗಳಿಗೆಲ್ಲ ಸಿಂಹಸದೃಶನಾಗಿರುವನು. ಸೂರ್ಯನ ಎರಡನೆಯ ಮೂರ್ತಿ ಧಾತೃವು ಬ್ರಹ್ಮನಾಗಿದ್ದು ನಾನಾ ಬಗೆಯ ಪ್ರಜೆಗಳನ್ನು ಸೃಷ್ಟಿಸುವನು. ಪರ್ಜನ್ಯನು ಮೇಘಮಂಡಲದಲ್ಲಿದ್ದು ಆಕಾಶದಿಂದ ಮಳೆ ಸುರಿಸುವನು. ನಾಲ್ಕನೆಯ ಮೂರ್ತಿಯು ತ್ವಷ್ಟೃವು ವನೌಷಧಿಗಳಲ್ಲಿ

ವಾಸವಾಗಿದ್ದು ರೋಗ ಪರಿಹಾರ ಮಾಡುತ್ತಾನೆ. ಸೂರ್ಯನ ಐದನೆಯ ಮೂರ್ತಿಯಾದ ಪೂಷನು ಆಹಾರ ಪದಾರ್ಥಗಳಲ್ಲಿದ್ದುಕೊಂಡು ಪ್ರಜೆಗಳಿಗೆ ಪ್ರಾಣಾಧಾರನಾಗಿದ್ದಾನೆ. ಆರನೆಯ ಮೂರ್ತಿಯಾದ ಅರ್ಯಮನು ವಾಯುವನ್ನು ಪ್ರೇರೇಪಿಸುವ ಕಾರ್ಯನಿರತನಾಗಿದ್ದಾನೆ. ಭಗನೆಂಬ ಏಳನೆಯ ಮೂರ್ತಿಯು ಮಾನವ ಶರೀರ ಹಾಗೂ ಐಶ್ವರ್ಯ ಸಂಪನ್ನನಾಗಿದ್ದಾನೆ. ಎಂಟನೆಯವನು ವಿವಸ್ವಾನ್ ಅಗ್ನಿಯಲ್ಲಿದ್ದು ಆಹಾರ ಪಾಕ ಮಾಡುವವನಾಗಿದ್ದಾನೆ. ಒಂಭತ್ತನೆಯವನಾದ ವಿಷ್ಣುವು ದೇವತೆಗಳ ವೈರಿಗಳನ್ನು ನಾಶ ಮಾಡುವವನು. ಹತ್ತನೆಯವನಾದ ಅಂಶುಮಾನ್‌ನು ಗಾಳಿಯಲ್ಲಿದ್ದುಕೊಂಡು ಆಹ್ಲಾದಗೊಳಿಸುವನು. ಹನ್ನೊಂದನೆಯ ಮೂರ್ತಿ ವರುಣನು ನೀರಿನಾಶ್ರಯ ಹೊಂದಿ ಪ್ರಾಣಗಳ ಆಧಾರ ಭೂತನಾಗಿದ್ದಾನೆ. ಹನ್ನೆರಡನೆಯವನೇ ಮಿತ್ರನೆಂಬುವನು ಚಂದ್ರಭಾಗಾ ನದಿಯ ತೀರದಲ್ಲಿ ಸನ್ನಿಹಿತನಾಗಿದ್ದಾನೆ.

ಆ ನದೀ ತೀರದಲ್ಲಿ 'ಮಿತ್ರ'ನು ವಾಯುವನ್ನು ಮಾತ್ರ ಸೇವಿಸಿ ಲೋಕಸುಕ್ಷೇಮ ಸುಖಕ್ಕಾಗಿ ಸ್ವಲ್ಪಕಾಲ ತಪಗೈದನು. ಅಲ್ಲದೆ ಅಲ್ಲಿ ನಾನಾ ವಿಧದಲ್ಲಿ ಭಕ್ತರಿಗೆ ಅನುಗ್ರಹ ಮಾಡಿದನು. ಹೀಗಾಗಿ ಅವನು ವಿಶ್ವಕ್ಕೆ ಮಿತ್ರನೆಂದು ಖ್ಯಾತನಾದನು. ಈ ರೀತಿಯಾಗಿ ಭಗವಾನ್ ಸೂರ್ಯನಾರಾಯಣನು ತನ್ನ ಹನ್ನೆರಡು ಮೂರ್ತಿಗಳಿಂದ ಸಕಲ ಭೂಮಂಡಲವನ್ನೇ ವ್ಯಾಪಿಸಿರುವನು. ಆದುದರಿಂದ ನಿತ್ಯವೂ ಹನ್ನೆರಡು ಮೂರ್ತಿಗಳಲ್ಲೂ ಸರಿಸಮಾನ ಭಕ್ತಿಶ್ರದ್ಧೆಯಿಂದ ಸೂರ್ಯನನ್ನು ಪೂಜಿಸಬೇಕು. ಈ ದ್ವಾದಶಾದಿತ್ಯರ ಮಹಿಮೆಯ ವರ್ಣನೆಯನ್ನು ಶ್ರವಣ ಮಾಡಿದವರು ಸೂರ್ಯಲೋಕ ಸೇರಿ, ಸಕಲ ಸುಖ, ಭೋಗಗಳನ್ನು ಅನುಭವಿಸುವರು.

ಬಳಿಕ ಮುನಿಗಳು, ಬ್ರಹ್ಮನನ್ನು ಕುರಿತು- 'ದೇವಾ, ಈ ಸೂರ್ಯನು ಅಗಾಧ ಮಹಿಮಾವಂತನೂ, ದೇವರದೇವನೆಂದು ಹೆಸರಾಗಿದ್ದರೂ, ಅದೇಕೆ ಸಾಮಾನ್ಯ ಮನುಷ್ಯನ ರೀತಿಯಲ್ಲಿ ತಪಸ್ಸು ಆಚರಿಸಲು ಉದ್ಯುಕ್ತನಾದ? ಅವನ ತಪಸ್ಸಿನ ಸಂಕಲ್ಪವೇನಿತ್ತು? ಎಂಬುದನ್ನು ವಿವರಿಸಿ ಹೇಳಬೇಕು' ಎಂದು ಪ್ರಾರ್ಥಿಸಲು, ಅವರ ಕೇಳಿಕೆಯಂತೆ ಬ್ರಹ್ಮನು ಸೂರ್ಯ ತಪಸ್ಸಿನ ಸಂಕಲ್ಪ ಹಿನ್ನೆಲೆಯನ್ನು ವಿವರಿಸಲಾರಂಭಿಸಿದನು.

ಆಗ ಬ್ರಹ್ಮನು, ಋಷಿ ಗಣವನ್ನು ಕುರಿತು 'ಬಹುಕಾಲದ ಹಿಂದೆ, ಸೂರ್ಯನ ತಪಸ್ಸಿನ ಹಿನ್ನೆಲೆ ಕಾರಣ ಕುರಿತು ಬ್ರಹ್ಮರ್ಷಿ ನಾರದರು 'ಮಿತ್ರ'ನನ್ನೇ ಪ್ರಶ್ನಿಸಿದಾಗ ಅವನು ನಾರದನಿಗೆ ಎಲ್ಲವನ್ನು ಸಾದ್ಯಂತ ನಿರೂಪಿಸಿದ್ದನ್ನೇ ವಿವರಿಸುತ್ತೇನೆ, ಕೇಳಿರಿ' ಎಂದು ಮಾತನ್ನು ಮುಂದುವರೆಸಿದನು.

ಬಹುಕಾಲದ ಹಿಂದೆ, ಈ ಹನ್ನೆರಡು ಜನ ಆದಿತ್ಯರಲ್ಲಿ ಮಿತ್ರ ಹಾಗೂ ವರುಣರು ತಪಸ್ಸುಗೈದರು. ಅವರಿಬ್ಬರ ತಪಸ್ಸು ಉಗ್ರತರವಾಗಿದ್ದಿತು. ಪಶ್ಚಿಮ ಸಮುದ್ರತೀರದಲ್ಲಿ ವರುಣನು ಅನ್ನಾಹಾರ ತ್ಯಜಿಸಿ, ಬರೀ ನೀರನ್ನೇ ಅಲ್ಪಪ್ರಮಾಣದಲ್ಲಿ ಸೇವಿಸಿ ತಪವನ್ನಾಚರಿಸಿದರೆ, 'ಮಿತ್ರ'ನು ಮಿತ್ರ ವನಸ್ಥಳದಲ್ಲಿ ಬರೀ ಗಾಳಿಯನ್ನೇ ಸೇವಿಸಿ, ಅನ್ನಾಹಾರ ತ್ಯಾಗಮಾಡಿ, ಉಗ್ರತರ ತಪಕ್ಕೆ ಕುಳಿತನು. ಹೀಗೆಯೇ ಹಲವಾರು ವರ್ಷಗಳು ಉರುಳಿದವು. ಅವರ ತಪಸ್ಸು ನಿರಾತಂಕವಾಗಿ ಸಾಗಿಯೇ ಇತ್ತು. ಹೀಗಿರಲು ಒಂದು ದಿನ ಮಹರ್ಷಿ ನಾರದನು ಗಂಧಮಾದನಗಿರಿಯಿಂದ ಸಂಚರಿಸುತ್ತ, ಮಿತ್ರವನ ಸ್ಥಳಕ್ಕೆ

ಬಂದನು. ಅಲ್ಲಿ ತುಸು ದೂರದಲ್ಲಿ ತಪೋ ಸಮಾಧಿಯಲ್ಲಿ ನಿರತನಾದ ಮಿತ್ರದೇವನನ್ನು ಕಂಡಾಗ ಅಚ್ಚರಿಯಾಯಿತು. ಮನಸ್ಸಿನಲ್ಲಿಯೇ ನಾರದನು 'ಮೂರುಲೋಕ ದೊಡೆಯನಾದ ಈ ಮಿತ್ರನು ದೇವತೆಗಳಿಗೆ ಪಿತೃವೆನಿಸಿರುವನು. ಹೀಗಿರುವಾಗ, ಈ ಮಿತ್ರನು ಯಾವ ದೇವರನ್ನು ಕುರಿತು ತಪಸ್ಸನ್ನಾಚರಿಸುತ್ತಿರಬಹುದು' ಎಂದು ಕುತೂಹಲದಿಂದ ಮಿತ್ರದೇವನನ್ನು ಕುರಿತು,

'ಓ ಮಿತ್ರದೇವ! ಸಕಲ ಸೃಷ್ಟಿಗೂ ನೀನು ಸ್ವಾಮಿ; ಆಶ್ರಯಭೂತನು. ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಾದಿ ಕಾರ್ಯಗಳೂ ನಿನ್ನ ಸಂಕಲ್ಪ ಮಾತ್ರದಿಂದ ಜರುಗತಕ್ಕವು. ಜಗತ್ತಿನಲ್ಲಿರುವ ಚಾತುರ್ವರ್ಣದವರೆಲ್ಲ ನಿನ್ನ ನಿತ್ಯ ಆರಾಧನೆಮಾಡಿ ಸಕಲಇಷ್ಟಾರ್ಥಗಳನ್ನು ಪಡೆಯುತ್ತಿದ್ದಾರೆ. ಬ್ರಹ್ಮಾಂಡಕ್ಕೆಲ್ಲ ನೀನು ಮಾತ, ಪಿತ, ದೇವನಾಗಿರುವೆ. ಹಾಗಿದ್ದೂ ನೀನು ಯಾವ ದೇವರನ್ನು ಒಲಿಸಿಕೊಳ್ಳಲು ಇಂತಹ ನಿಶ್ಚಲ ಮನದಿಂದ ತಪಸ್ಸನ್ನು ಆಚರಿಸುತ್ತಿರುವೆ?' ಎಂದು ಪ್ರಶ್ನಿಸಿದಾಗ ಮಿತ್ರದೇವನು ನಾರದನಿಗೆ-

'ನಾರದ ಮುನಿಯೆ, ನೀನು ಕೇಳಿದ ಪ್ರಶ್ನೆ ತುಂಬಾ ಗಹನವಾದದ್ದು. ಅಲ್ಲದೆ ಇದನ್ನು ಬೇರಾರಿಗೂ ಹೇಳುವಂತಹದಲ್ಲ. ಆದರೂ ಭಕ್ತನಾದ ನಿನಗೆ ಹೇಳುವದು ನ್ಯಾಯಸಮ್ಮತ. ಹೇಳುತ್ತೇನೆ ಕೇಳು' ಎಂದು ವಿವರಿಸಲಾರಂಭಿಸಿದನು.

ಈ ಸಮಸ್ತ ಭೂಮಂಡಲದಲ್ಲಿ ಜಗತ್ತಿಗೆ ಮೊದಲೆನಿಸುವ ವಸ್ತುವಿದ್ದು, ಇಂದ್ರಿಯಗಳಿಗೆ ಅಗೋಚರವಾಗಿದೆ. ಬುದ್ಧಿಶಕ್ತಿಗೆ, ವಿಚಾರದ ಅಳವಿಗೆ ಹೊರತಾಗಿದೆ ಅದಕ್ಕೆ 'ಪರಮಾತ್ಮ'ವೆನ್ನುತ್ತಾರೆ. ಪರಮಾತ್ಮನಿಗೆ ಇಂದ್ರಿಯಗಳು, ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯವಾಸನೆಗಳಾವವೂ ಇಲ್ಲವೇ ಇಲ್ಲ. ಈ ಪರಮಾತ್ಮ ವಸ್ತುವೇ ಸರ್ವಪ್ರಾಣಿಗಳ ಹೃದಯದಲ್ಲಿದ್ದು, ಜೀವಾತ್ಮ ಇಲ್ಲವೇ ಅಂತರಾತ್ಮವೆನಿಸುತ್ತದೆ. ಸರ್ವ ಪ್ರಾಣಿಗಳಲ್ಲಿ ಹೃದಯದಲ್ಲಿರುವ ಈ ಜೀವಾತ್ಮಕ್ಕೆ 'ಕ್ಷೇತ್ರಜ್ಞ'ನೆಂದೂ ತಿಳಿಯ ಲಾಗುತ್ತದೆ. ಈ ಜೀವಾತ್ಮನು ಸತ್ವ, ರಜ ಹಾಗೂ ತಮೋಗುಣ ವಿವರ್ಜಿತನು, ಮಾಯೆಯಿಂದ ಜೀವನಾಗಿರುವನು. ಅವನನ್ನು ಹಿರಣ್ಯಗರ್ಭನೆಂತಲೂ ಕರೆಯುತ್ತಾರೆ. ಈ ಜೀವಾತ್ಮನನ್ನು ಶಾಸ್ತ್ರಗಳು ಬೇರೆಬೇರೆ ನಾಮಾಂಕಿತದಿಂದ ಗುರುತಿಸಿವೆ. ಸಾಂಖ್ಯಶಾಸ್ತ್ರ, ಯೋಗಶಾಸ್ತ್ರಗಳಲ್ಲಿ ಜೀವಾತ್ಮನನ್ನು ಅನೇಕ ಹೆಸರುಗಳಿಂದ ಉಲ್ಲೇಖಿಸಲಾಗಿದ್ದು, ಮುಖ್ಯವಾಗಿ ಅವನು ವಿಶ್ವಾತ್ಮಾ, ಶರ್ವ, ಅಕ್ಷರ ಈ ಮೂರು ರೂಪಗಳನ್ನು ಹೊಂದಿರುತ್ತಾನೆ. ಆ ಪರಮಾತ್ಮನೇ ಮೂರು ಲೋಕಗಳನ್ನೂ ವ್ಯಾಪಿಸಿದ್ದು, ತನಗೆ ಇಂದ್ರಿಯಗಳಿಲ್ಲದಿದ್ದರೂ, ಮಾಯೆಯ ಬಲದಿಂದ ಪ್ರಾಣಿ ಶರೀರಗಳಲ್ಲಿ ಜೀವ ರೂಪದಿಂದ ವಾಸವಾಗಿರುತ್ತಾನೆ.

ಈ ಜೀವಾತ್ಮನನ್ನು ಚರ್ಮಚಕ್ಷುಗಳಿಂದ ನೋಡಲಾರರು. ಅವನಿಗೆ ಕರ್ಮಲೇಪವಿಲ್ಲ. ಎಲ್ಲ ಪ್ರಾಣಿಗಳಲ್ಲಿರುವ, ಅಂತರಾತ್ಮನು, ಶರೀರದ ಎಲ್ಲ ದೈನಂದಿನ ಚಟುವಟಿಕೆಗಳನ್ನು ನೋಡಲು ಸಾಕ್ಷಿ ಎನಿಸಿದ್ದಾನೆ. ನಿಜವಾಗಿಯೂ ಅವನು ನಿರ್ಗುಣ, ನಿರಾಕಾರ ಎನಿಸಿದರೂ ಮಾಯೆಯಿಂದ ಸಗುಣನಾಗುವನು. ಜಗದ್ರೂಪಧಾರಣ ಮಾಡುವನು. ಇಂತಹ ಜೀವಾತ್ಮನ ವಿಷಯದಲ್ಲಿ ಅರಿಯುವ ಜಿಜ್ಞಾಸೆಯುಳ್ಳವರು ಜ್ಞಾನ ಮಾರ್ಗದ ಮೊರೆ ಹೋಗುವದು ಅನಿವಾರ್ಯವಾಗಿದೆ. ಈ ಪರಮಾತ್ಮನು ವಿರಾಟ್‌ರೂಪಿ.

ಜಗತ್ತೆಲ್ಲವನ್ನು ತನ್ನ ಕೈ, ಕಾಲು, ಕಿವಿ, ಕಣ್ಣು, ತಲೆಗಳು ಎಲ್ಲೆಡೆಗೂ ತುಂಬಿವೆ. ಪ್ರಾಣಿಗಳ ಸಕಲಾವಯವಗಳೇ ಅವನ ಅವಯವಗಳು. ಜಗತ್ತಿಗೆ ಒಬ್ಬನೇ ಆದ ಅವನು ಪ್ರತಿಯೊಂದು ಶರೀರದಲ್ಲಿ ವಾಸವಾಗಿದ್ದು ಸುಖವಾಗಿ ಜೀವರೂಪ ಧಾರಣ ಮಾಡಿಕೊಂಡಿದ್ದಾನೆ. ಶರೀರಗಳಿಗೆ ಕ್ಷೇತ್ರವೆಂದು ಹೆಸರು. ಅವನು ಶರೀರದ ಚಟುವಟಿಕೆಗಳ ಸಾಕ್ಷೀಭೂತನಾಗಿರುವದರಿಂದ ಕ್ಷೇತ್ರಜ್ಞನೆಂದು ಕರೆಯುತ್ತಾರೆ. ಇಂದ್ರಿಯಗಳಿಗೆ ಅಗೋಚರವಾದ ಅಂತಃಕರಣವೆಂಬ ಅಂತಃಪುರದಲ್ಲಿ ಅವನು ಸದಾ ವಾಸಿಸಿರುತ್ತಾನೆ. ಅವನಿಗೆ ಪುರುಷನೆಂದೂ ಕರೆಯುವದುಂಟು. ಈ ಜಗತ್ತು ಪರಮಾತ್ಮರೂಪ ಉಳ್ಳದ್ದು. ಅವನು ಅಂದರೆ ಪರಮಾತ್ಮನು ಪುರುಷನಷ್ಟೇ ಅಲ್ಲ. ಜಗತ್ತಿನಲ್ಲಿ ಅವನೇ ಸರ್ವತ್ರ ವ್ಯಾಪಕನಾದುದರಿಂದ ಅವನು 'ಮಹಾ ಪುರುಷ'ನೂ ಅಹುದು. ಇವನು ಮಾಯೆಯಿಂದ ಅನೇಕ ಜೀವ ರೂಪಧಾರಣ ಮಾಡುವನು. ಮುಗಿಲಿನಿಂದ ಬಿದ್ದ ಮಳೆಯನೀರು ಭೂಮಿ ಗುಣಕ್ಕನುಸಾರವಾಗಿ ವಿವಿಧ ಬಣ್ಣ, ರುಚಿ ಹೊಂದುವಂತೆ ಶರೀರಗಳಲ್ಲಿ ಪರಮಾತ್ಮನು ನಾನಾ ಗುಣಗಳನ್ನು ಹೊಂದಿರುತ್ತಾನೆ.

ಸ್ಥಾನಭೇದದಿಂದ ಜೀವಾತ್ಮನು (ಗುಣಾದಿಗಳಿಂದ) ವೈವಿಧ್ಯ ತಾಳಿರುವಂತೆ, ವಾಯುವು, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬುದಾಗಿ ಪಂಚಭೇದ ಹೊಂದಿದ್ದಾನೆ. ಅದರಂತೆ ಅಗ್ನಿಯೂ ಸಹ ಸ್ಥಾನಭೇದ ವಿಶೇಷದಿಂದ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಮುಂತಾದ ಸಂಜ್ಞೆ ಹೊಂದಿದ್ದಾನೆ. ಅದರಂತೆ ಈ ಪರಮಾತ್ಮನಾದರೂ ಸ್ಥಾನಭೇದದ ಪರಿಣಾಮವಾಗಿ ಬ್ರಹ್ಮ, ವಿಷ್ಣು, ಶಿವರೆಂದು ಸಂಜ್ಞೆ ಹೊಂದಿದ್ದಾನೆ. ಈ ಪರಮಾತ್ಮನೋರ್ವನಿಂದ ಸಾವಿರಾರು ಸಂಖ್ಯೆಯಲ್ಲಿ ದೇವ, ಮನುಷ್ಯ ಮುಂತಾದ ರೂಪಗಳಾಗಿವೆ. ಜೀವರೂಪದಲ್ಲಿರುವ ಈ ಪರಮಾತ್ಮನು ತನ್ನ ಪರಮಾತ್ಮಸ್ವರೂಪ ಜ್ಞಾನಪಡೆದಾಗಲೇ ಅದ್ವಿತೀಯನೆನಿಸುವನು. ಮಾಯೆಯಿಂದ ಅದ್ವಿತೀಯತ್ವ ಮುಸುಕಿದಾಗ ನಾನಾ ರೂಪಧರಿಸಿ ಜೀವನಾಗುವದೇ ಜೀವಬ್ರಹ್ಮರ ರಹಸ್ಯ ತತ್ವವು. ಚರಾಚರ ವಸ್ತುಗಳಿಂದ ತುಂಬಿದ ಈ ಜಗತ್ತು ಸ್ಥಿರವಲ್ಲ, ನಿತ್ಯವೆನಿಸುವದಿಲ್ಲ. ಆದರೆ ಪರಮಾತ್ಮ ಮಾತ್ರ ನಿತ್ಯವಾಗಿದ್ದು ಎಲ್ಲೆಡೆಯೂ ವ್ಯಾಪಕನಾಗಿದ್ದರೂ, ಅಗೋಚರನು, ಇಂಥ ಪರಮಾತ್ಮನು ಅವ್ಯಕ್ತ (ಸತ್ವ, ರಜ, ತಮೋಗುಣಗಳು)ದ ಹುಟ್ಟಿಗೆ ಕಾರಣನಾದನು. ಇದಕ್ಕೆ 'ಪ್ರಕೃತಿ' ಎಂದು ಸಂಬೋಧಿಸುತ್ತಾರೆ. ಈ ಪ್ರಕೃತಿಯಿಂದ ಈ ಜಗತ್ತು ಜನ್ಮ ತಳೆಯಿತು. ಈ ಪ್ರಕೃತಿಯಿಂದ ಆದಿಯಲ್ಲಿ ಭಾವ ಮತ್ತು ಅಭಾವ ರೂಪನಾದ ಹಿರಣ್ಯಗರ್ಭ ಉದಿಸಿದನು. ಲೋಕದಲ್ಲಿ ಜನರು ಸರ್ವ ದೇವತಾ, ಹಾಗೂ ಪಿತೃಕಾರ್ಯಾದಿಗಳಲ್ಲಿ ಪೂಜಿಸುವದು ವಿಧಿವತ್ತಾದ ನಿಯಮ. ಈ ರೀತಿಯಾಗಿ ಆ ಪರಮಾತ್ಮನ ವಿನಃ ಈ ಜಗತ್ತಿನಲ್ಲಿ ಸರ್ವಶಕ್ತ ಪಿತನಾಗಲಿ ದೇವನಾಗಲಿ ಬೇರೆ ಯಾರೂ ಇಲ್ಲ. ಇಂತಹ ಪರಮಾತ್ಮನನ್ನು ಆತ್ಮಚಿಂತನೆಯ ಮೂಲಕ ಅರಿಯಲು ಸಾಧ್ಯ. ಇಂತಿರುವ ಪರಮಾತ್ಮನನ್ನೇ ನಾನು ಪೂಜೆ ಮಾಡುತ್ತಿದ್ದೇನೆ. ಈ ಪರಮಾತ್ಮನನ್ನು ಮನಸಾ ಶುದ್ಧಾಂತಃಕರಣದಿಂದ, ಶಿವ, ವಿಷ್ಣು, ಮೊದಲಾದ ಮೂರ್ತಿ ರೂಪ ಪೂಜೆಗೈದು, ಉತ್ತಮಗತಿಯನ್ನು ಹೊಂದುತ್ತಾರೆ. ಅಲ್ಲದೆ ಸ್ವರ್ಗದಲ್ಲಿಯೂ ಸಹ ಈ ಪರಮಾತ್ಮನ ಪೂಜೆ ಮಾಡಿ, ಪರಮಗತಿ ಅಥವಾ ಮೋಕ್ಷವೆಂಬುದನ್ನು ಪಡೆಯುತ್ತಾರೆ. ಪರಮಾತ್ಮನು ನಿರ್ಗುಣನೂ, ನಿರಾಕಾರನೂ ಆಗಿದ್ದು ಅಗೋಚರನೆಂದು ವೇದಗಳು ಸಾರುತ್ತಿದ್ದು ಅಂತಹ ಪರಮಾತ್ಮ ರೂಪಿಯಾದ ಸೂರ್ಯನನ್ನು ನಾನು ವಿಧಿಪೂರ್ವಕ

ಆರಾಧಿಸುತ್ತಿದ್ದೇನೆ. ಪ್ರಳಯಕಾಲದಲ್ಲಿ ಈ ಸೃಷ್ಟಿಯ ಚರಾಚರವೂ ಅವನಲ್ಲಿಯೇ ಐಕ್ಯವಾಗುತ್ತದೆ. ಎಲೈ ದೇವಮುನಿವರನಾದ ನಾರದನೆ, ಈ ರೀತಿಯಾಗಿ ರಹಸ್ಯವಾದ ಪರಮಾತ್ಮನ ಸ್ವರೂಪ ಮಹಿಮೆಯನ್ನು ವಿಶೇಷವಾಗಿ ನಿನಗೆ ಇದುವರೆಗೆ ಸಾರಿದ್ದೇನೆ. ಸೂರ್ಯನು ದೇವಾನುದೇವತೆಗಳ ಏಕೈಕ ಒಡೆಯನಾಗಿದ್ದು. ಅವನು ಸೃಷ್ಟಿಗೆ, ಸ್ಥಿತಿ, ಲಯಗಳಿಗೆ ಕಾರಣೀಭೂತನಾಗಿದ್ದಾನೆ. ಆದುದರಿಂದ ಮನುಷ್ಯ ಮಾತ್ರರಷ್ಟೇ ಅಲ್ಲ, ದೇವತೆಗಳೂ, ಮುನಿಸಂಕುಲವೂ ಸದ್ಭಾವ ಭಕ್ತಿಯಿಂದ ಸದಾಕಾಲ ಸೂರ್ಯನನ್ನೇ ಉಪಾಸನೆ ಮಾಡುತ್ತಿರುವದು ನ್ಯಾಯವೂ, ಸೂಕ್ತವೂ ಆಗಿದೆ.

ಈ ರೀತಿಯಾಗಿ ಬ್ರಹ್ಮನು ಸೂರ್ಯನ ಪೂಜಾರ್ಹತೆ, ಮಹತ್ವ ವಿವರಿಸಿದ ನಂತರ 'ಬ್ರಾಹ್ಮಣೋತ್ತಮರೇ, ಇದುವರೆಗೆ ನಾರದಮುನಿಗೆ ಮಿತ್ರನು ಹೇಳಿದಂತೆ ಪರಮಾತ್ಮ ತತ್ವನಿರೂಪಣೆಯನ್ನು ನಿಮಗೆ ವಿವರಿಸಿದೆನು. ಈ ಸೂರ್ಯನ ತತ್ವವು ನಿಗೂಢವಾದದ್ದಲ್ಲದೆ ಫಲಪ್ರದವಾಗಿದೆ' ಎಂದು ನುಡಿದು, ಸೂರ್ಯತತ್ವ ಆಖ್ಯಾನವನ್ನು ವಿವರಿಸಿದ್ದೇನೆಂದರೆ.

ಈ ಸೂರ್ಯತತ್ವವನ್ನು ಸೂರ್ಯಭಕ್ತನಲ್ಲದವನಿಗೆ ಎಂದೂ ಹೇಳಬಾರದು. ಈ ಸೂರ್ಯಖ್ಯಾನ ಶ್ರವಣಮಾಡಿದಲ್ಲಿ ಸಹಸ್ರ ಕಿರಣದೊಡೆಯನ ಲೋಕವನ್ನು ಹೊಂದಬಲ್ಲನು. ಅಷ್ಟೇ ಅಲ್ಲ ಈ ಕಥಾನಕ ಅಥವಾ ವ್ಯಾಖ್ಯಾನವನ್ನೂ ಏಕಾಗ್ರಚಿತ್ತದಿಂದ ಆಲಿಸಿದ ಎಂತಹ ರೋಗಿಷ್ಠ ಮನುಷ್ಯನೂ ರೋಗಮುಕ್ತನಾಗುವದರಲ್ಲಿ ಸಂದೇಹವಿಲ್ಲ. ಆರೋಗ್ಯವಂತನಂತೂ ಸದ್ಭಾವದಿಂದ ಆಲಿಸಿದರೆ ಅಥವಾ ಕೇಳಿದರೆ ಇಲ್ಲವೆ ಓದಿದರೆ ಮಹಾಜ್ಞಾನಿಯಾಗುವನು ಹಾಗೂ ಸೂರ್ಯದೇವನ ಸುಪ್ರೀತಿಗೆ ಪಾತ್ರನಾಗುವನು. ಜೀವನದ ದಾರಿಯಿಂದ ಜಾರಿಬಿದ್ದವನು ಸನ್ಮಾರ್ಗ ಪ್ರವೃತ್ತನಾಗುವನು. ಒಟ್ಟಿನಲ್ಲಿ, ಸದಾ ಸೂರ್ಯನಾರಾಯಣನ ಅಮೋಘ ವ್ಯಾಖ್ಯಾನ ಆಲಿಸಿದಲ್ಲಿ ಸಕಲ ಮನೋರಥಗಳು ಶೀಘ್ರಗತಿಯಲ್ಲಿ ಕೈಗೂಡುತ್ತವೆ; ಆದುದರಿಂದ, ಋಷಿಗಳಿರಾ! ನೀವು ಸದಾ ರವಿಯ ನಾಮಸಂಕೀರ್ತನೆ ಹಾಗೂ ಪೂಜೆಗಳಲ್ಲಿ ನಿರತರಾಗಿರಿ. ಯಾಕೆಂದರೆ ಅವನೇ ಜಗದ್ರಕ್ಷಕನು; ನಿಯಾಮಕನು, ಮರಣಾನಂತರ ಮೋಕ್ಷಪ್ರದನೂ ಆಗಿದ್ದಾನೆ.

## ಮಾರ್ತಾಂಡ್ಯೆಕವಿಂಶತಿ ನಾಮಾನುಕೀರ್ತನ

ಆ ನಂತರ ಚತುರ್ಮುಖನು ಋಷಿಗಳಿಗೆ ಸೂರ್ಯನ ಮಹಿಮಾ ವಿಶೇಷವನ್ನು ವಿವರಿಸುತ್ತ, ಲೋಕದ ಸಮಸ್ತ ಚಟುವಟಿಕೆಗಳನ್ನು ಅವನು ಹೇಗೆ ನಿಯಂತ್ರಿಸುತ್ತಾನೆ ಎಂಬುದನ್ನು ಹೇಳಲು ಆರಂಭಿಸಿದನು. ಅವನು ಋಷಿಸಮೂಹ ಕುರಿತು, 'ಎಲೈ ಮುನಿಗಳಿರಾ! ಸೂರ್ಯನು ಮೂರು ಲೋಕಗಳಿಗೂ ಒಡೆಯನಾಗಿದ್ದು ದೇವತೆ, ಅಸುರ, ಮಾನವ ಮೊದಲಾದ ಪ್ರಾಣಿಗಳು ಅವನ ಅಧಿಕಾರಕ್ಕೊಳಪಟ್ಟು ಜೀವಿಸುತ್ತಿರುವ ಬಗೆಯನ್ನು ನಿಮಗೆ ನಿರೂಪಿಸುವೆ' ಎಂದು ಸಾದ್ಯಂತವಾಗಿ ಹೇಳಲು ಉಪಕ್ರಮಿಸಿದನು.

ಸೂರ್ಯನಾರಾಯಣನು, ರುದ್ರ, ವಿಷ್ಣು, ದೇವೇಂದ್ರ ಮೊದಲಾದವರ ತೇಜೋರೂಪ ಗುಣಸಂಪನ್ನನಾಗಿದ್ದು, ಮೂರುಲೋಕಗಳಿಗೂ ಬೆಳಕು (ಜ್ಞಾನ) ಬೀರುವವನಾಗಿದ್ದಾನೆ. ಅವನು ಎಲ್ಲಾ ಪ್ರಾಣಿಗಳಿಗೆ ಆತ್ಮನು, ಜಗತ್ತಿಗೆಲ್ಲ ಸೂರ್ಯನೇ 'ಬ್ರಹ್ಮಾಂಡನಾಯಕ'ನೆಂದು ಹೆಸರಾಗಿದ್ದಾನೆ. ಈ ಜಗತ್ತಿನ ಸಕಲ ಪ್ರಾಣಿಕೋಟಿಗೆ ಅವನೇ

ಆಧಾರಭೂತನಾಗಿದ್ದು, ಜಗತ್ತಿನ ಹುಟ್ಟು, ಸಾವು ಅವನನ್ನೇ ಅವಲಂಬಿಸಿದೆ. ಅಲ್ಲದೆ ಭೂಮಂಡಲದಲ್ಲಿಯ ಸಮಸ್ತ ಚಟುವಟಿಕೆಗಳೂ ಅವನ ಇಚ್ಛಾನುವರ್ತಿಗಳಾಗಿವೆ. **"ಲೋಕದ ಚೇಷ್ಟೆಗೆ ರವಿಯೇ ಬೀಜ."** ಹೋಮಹವನಾದಿ ಕಾಲದಲ್ಲಿ ಅಗ್ನಿಯಲ್ಲಿ ಅರ್ಪಿಸಿದ ಹವಿಸ್ಸು ಅವನನ್ನೇ ಸೇರುವದು. ಅವನು ಸುಪ್ರೀತನಾಗಿ ಮಳೆ ಸುರಿಸುತ್ತಾನೆ. ಮಳೆಯಿಂದ ಭೂಮಿ ಹಸಿರು; ಪ್ರಾಣಿಕೋಟಿಗಳ ಉಸಿರು. ಅವುಗಳಿಂದ ಪ್ರಜೆಗಳ ಉತ್ಪತ್ತಿಯಾಗುವದು. ಇಂತಹ ಸೂರ್ಯನಾರಾಯಣನನ್ನು ಧ್ಯಾನಮಾಡಿ ಅವನ ಒಲುಮೆ ಗಳಿಸಿದವರೇ ಧನ್ಯರು. ಜ್ಞಾನಿಗಳಾದವರೆಲ್ಲ ಆ ಸೂರ್ಯಲೋಕದಲ್ಲಿ ಮುಕ್ತಿಯನ್ನು ಹೊಂದುವರು. ಅಷ್ಟೇ ಅಲ್ಲ ಪ್ರಳಯಾನಂತರ ಪುನರಪಿ ಹೊಸಸೃಷ್ಟಿಯೂ ಸಹ ಅವನಿಂದಲೇ ಮೊದಲಾಗುವದು. ಅವನು ಕಾಲನಿಯಮಿಯೂ ಆಗಿದ್ದು, ಕ್ಷಣ, ಮುಹೂರ್ತ, ದಿವಸ, ಹಗಲು, ರಾತ್ರಿ ಪಕ್ಷ, ತಿಂಗಳು, ವರ್ಷ, ಯುಗಾದಿಗಳೆಲ್ಲ ಅವನ ಸ್ವರೂಪಗಳಾಗಿವೆ. ಅವನು ಇಲ್ಲದೇ ಹೋದಲ್ಲಿ ಕಾಲಗಣನೆ ಅಸಾಧ್ಯ. ಕಾಲವಿಲ್ಲದಿದ್ದರೆ ನಿಯಮಕ್ಕೆ ನೆಲೆಯೇ ಇಲ್ಲ. ಯಜ್ಞ ಯಾಗಾದಿಗಳೂ ನಡೆಯಲಾರವು. ಅರ್ಥಾತ್ ಇವೆಲ್ಲವೂ ಒಂದು ಕ್ಲಿಪ್ತಕಾಲಕ್ಕನುಸರಿಸಿ ನಡೆಯುವಂತಹ ಚಟುವಟಿಕೆಗಳೇ ಸರಿ. ಸೂರ್ಯನಿಲ್ಲದಿದ್ದರೆ ಋತುಗಳು ಸಂಭವಿಸಲಾರವು. ಋತುಗಳಿಲ್ಲದೇ ಹೋದರೆ ಪೃಥ್ವಿಯಲ್ಲಿ ಹೂ, ಹಣ್ಣು, ಕಾಯಿ, ಸಸ್ಯ ಸಮೃದ್ಧಿ ಕಾಣಲೂ ಸಿಗದು, ಔಷಧಿ ವನಸ್ಪತಿಗಳು ಸಹ ಹುಟ್ಟಿ ಬಾಳಿ ಬದುಕಲಾರವು. ಸೂರ್ಯನ ಪ್ರಭಾವ ಪರಿಣಾಮವಾಗಿ, ಭೂಲೋಕ, ಸ್ವರ್ಗಲೋಕಗಳಲ್ಲಿ ವ್ಯವಹಾರವೇ ಸ್ಥಗಿತವಾಗುವದು. ಸೂರ್ಯನಿಗೂ ನೀರಿಗೂ ಅಗಾಧ ಮೈತ್ರಿ ಇದೆ. ಬೇಸಿಗೆಯಲ್ಲಿ ತನ್ನ ಉಗ್ರ ಕಿರಣಗಳಿಂದ ಜಲಾಶಯಗಳಲ್ಲಿ ನೀರನ್ನು ಆವಿಯಾಗಿ ಮಾಡುತ್ತಾನೆ, ಇದರಿಂದ ಮಳೆ ಸುರಿಯುತ್ತದೆ. ನೀರಿನಿಂದಲೇ ಸೂರ್ಯನು ಪ್ರಕಾಶಿಸುತ್ತಾನೆ.

ಭಗವಾನ್ ಸೂರ್ಯನಾರಾಯಣನು ಋತುಮಾನಕ್ಕೆ ತಕ್ಕಂತೆ ತನ್ನ ಬಣ್ಣವನ್ನು ಬದಲಿಸುತ್ತಾನೆ. ವಸಂತ ಋತು ಬಂದಾಗ ಕಪ್ಪುಮಿಶ್ರಕೆಂಪು (ಕಪಿಲ) ವರ್ಣದವನಾಗಿ ಕಂಡರೆ, ಗ್ರೀಷ್ಮದಲ್ಲಿ ಬಂಗಾರದ ಬಣ್ಣದವನಾಗಿರುತ್ತಾನೆ. ಮಳೆಗಾಲ ಹಾಗೂ ಶರದೃತುವಿನಲ್ಲಿ ಶ್ವೇತವರ್ಣೀಯ. ಹೇಮಂತಋತುವಿನಲ್ಲಿ ತಾಮ್ರದ ಬಣ್ಣ ಹೊಂದಿರುತ್ತಾನೆ. ಶಿಶಿರ ಋತುವಿನಲ್ಲಿ ಕೆಂಪುವರ್ಣ ಹೀಗೆ ಋತುಮಾನಕ್ಕೆ ತಕ್ಕಂತೆ ತನ್ನದೇ ಆದ ವರ್ಣದಿಂದ ರಂಜಿಸುತ್ತಾನೆ. ಅವನ ಭಕ್ತರೂ ಸಹ ಋತುಮಾನಕ್ಕನುಸರಿಸಿ ಆಯಾ ವರ್ಣಗಳಿಂದ ಧ್ಯಾನಿಸುತ್ತಾನೆ.

ಈಗ, ಸೂರ್ಯನಿಗೆ ಇರುವ ಹನ್ನೆರಡು ಹೆಸರುಗಳನ್ನೂ ಅವುಗಳ ಹಿನ್ನೆಲೆಯನ್ನೂ ವಿವರಿಸುತ್ತೇನೆ ಕೇಳಿರಿ. ಅವನಿಗೆ ಆದಿತ್ಯ, ಸವಿತ್ರ, ಸೂರ್ಯ, ಮಿಹಿರ, ಅರ್ಕ, ಪ್ರಭಾಕರ, ಮಾರ್ತಾಂಡ, ಭಾಸ್ಕರ, ಭಾನು, ಚಿತ್ರಭಾನು, ದಿವಾಕರ ಈ ರೀತಿಯಾಗಿ ಸಾಮಾನ್ಯ ನಾಮಗಳಿವೆ.

ದ್ವಾದಶಾದಿತ್ಯರು ಒಬ್ಬೊಬ್ಬರು ಒಂದೊಂದು ಮಾಸಕ್ಕೆ ಅಧಿಪತಿಗಳಾಗಿದ್ದು ವಿಷ್ಣುವು ಎಂಬ ಆದಿತ್ಯನು ಚೈತ್ರದಲ್ಲಿ, ಆರ್ಯಮನು ವೈಶಾಖದಲ್ಲಿ, ವಿವಸ್ವತನು ಜ್ಯೇಷ್ಠದಲ್ಲಿಯೂ, ಅಂಶುಮಂತನು ಆಷಾಢದಲ್ಲಿಯೂ, ಶ್ರಾವಣ ಭಾದ್ರಪದಗಳಲ್ಲಿ ಕ್ರಮವಾಗಿ ಪರ್ಜನ್ಯ, ವರುಣರು ಪ್ರಕಾಶಿಸುತ್ತಾರೆ. ಆದರಂತೆ ಇಂದ್ರನು ಆಶ್ವಯುಜದಲ್ಲಿ

ಮತ್ತು ಕಾರ್ತಿಕದಲ್ಲಿ ಧಾತೃ ಹಾಗೂ ಮಾರ್ಗಶಿರದಲ್ಲಿ "ಮಿತ್ರ"ರೂ ಪ್ರಕಾಶ ಬೀರುತ್ತಾರೆ. ಪುಷ್ಯಮಾಸದಲ್ಲಿ ಪೂಷನೂ, ಮಾಘದಲ್ಲಿ ಭಗನೆಂಬ ಆದಿತ್ಯರೂ ಉದಯಿಸುತ್ತಾರೆ. ಫಾಲ್ಗುಣ ಮಾಸಕ್ಕೆ ತ್ವಷ್ಟೃವು ಅಧಿದೇವನಿರುವನು. ಈ ದ್ವಾದಶಾದಿತ್ಯರು ಬೀರುವ ಕಿರಣಗಳನ್ನೂ ಸಹ ವಿವರಿಸಲಾಗಿದೆ. ವಿಷ್ಣುವು ಒಂದು ಸಾವಿರದ ಇನ್ನೂರು ಕಿರಣಗಳನ್ನು ಹೊಂದಿದರೆ, ಅರ್ಯಮನು ಸಾವಿರದ ಮುನ್ನೂರು, ವಿವಸ್ವತನು ಸಾವಿರದ ನೂರು, ಅಂಶುವಂತನು ಸಾವಿರದ ಐದನೂರು ಕಿರಣಗಳನ್ನು ಹೊಂದಿರುತ್ತಾರೆ. ವಿವಸ್ವತನಂತೆ, ವರುಣ ಪರ್ಜನ್ಯರು ಸಾವಿರದಾರುನೂರು ಕಿರಣಕಾಂತಿಯಿಂದ ಬೆಳಗುತ್ತಾರೆ. ಮಿತ್ರನ ಹಾಗೆ ಭಗದೇವನು ಸಾವಿರ ಕಿರಣಗಳ ಲೋಕ ಬೆಳಗಿದರೆ, ತ್ವಷ್ಟೃವಿಗೆ ಸಾವಿರದನೂರು ಕಿರಣಗಳಿವೆ. ಇಂದ್ರನಿಗೆ ಸಾವಿರದ ಆರುನೂರು, ಧಾತೃವಿಗೆ ಸಾವಿರದನೂರು ಅದರಂತೆ ಮಿತ್ರನಿಗೆ ಸಾವಿರ ಕಿರಣಗಳು ಹಾಗೂ ಪೂಷನಿಗೆ ಒಂಭೈನೂರು ಕಿರಣಗಳ ಸಮುದಾಯ ಹೊಂದಿದ್ದಾರೆ. ಸಾಮಾನ್ಯವಾಗಿ ಉತ್ತರಾಯಣದ ಆರಂಭಕ್ಕೆ ಸೂರ್ಯ ಕಿರಣಗಳು ವರ್ಧಿಸುತ್ತವೆ. ದಕ್ಷಿಣಾಯನದಲ್ಲಿ ಕಡಿಮೆಯಾಗುತ್ತದೆ. ಸೂರ್ಯನ ಔದಾರ್ಯದ ಫಲವಾಗಿ ಪ್ರತಿ ದಿನ ಭೂಮಿಯ ಮೇಲೆ ಸಾವಿರಾರು ಕಿರಣಗಳು ಪಸರಿಸುತ್ತವೆ. ಈ ಲೋಕಕ್ಕೆಲ್ಲ ಸೂರ್ಯನು ಒಬ್ಬನಾದರೂ ಅವನಿಗೆ ಇಪ್ಪತ್ತನಾಲ್ಕು ಹೆಸರುಗಳಿವೆ. ಅಲ್ಲದೆ ಅವನಿಗೆ ಸಾವಿರಾರು ನಾಮಾಂಕಿತಗಳಿವೆ.

**ಋಷಿ**ಗಳು, ಬ್ರಹ್ಮನನ್ನು ಕುರಿತು "ದೇವಾ! ಸೂರ್ಯ ಸಹಸ್ರ ನಾಮಾವಳಿ ಜಪದಿಂದ ಯಾವ ಫಲಪ್ರಾಪ್ತಿಯಾಗುವದು? ಎಂಬುದನ್ನು ವಿವರಿಸಿ ಹೇಳಬೇಕು. ಎಂದು ಪ್ರಾರ್ಥಿಸಿದಾಗ ಕಮಲಾಸನನು ಅವರ ಸಹಜ ಕುತೂಹಲವನ್ನು ಅರಿತು ನುಡಿದನು-

"ಮುನಿಶ್ರೇಷ್ಠರೇ, ಸೂರ್ಯನಿಗೆ ಪ್ರಿಯಕರವಾದ ಸ್ತೋತ್ರವೊಂದನ್ನು ನಿಮಗೆ ಹೇಳುತ್ತೇನೆ. ಅದು ಸಹಸ್ರನಾಮದ ಫಲವನ್ನು ಕೊಡುವಂತಹದಿದ್ದು ಅದನ್ನು ಬ್ರಹ್ಮಜ್ಞಾನ ಪಡೆಯುವವರು ನಿತ್ಯವೂ ಜಪಿಸುತ್ತಾರೆ. ಅದರಿಂದ ಬರುವ ಪುಣ್ಯ ಫಲಪ್ರಾಪ್ತಿಯ ಕುರಿತು ವಿವರಿಸುತ್ತೇನೆ ಕೇಳಿರಿ" ಎಂದು ಹೇಳಲಾರಂಭಿಸಿದನು.

ಭಾಸ್ಕರನಿಗೆ ರಹಸ್ಯಪೂರಿತವಾದ ಹಾಗೂ ಮಂಗಳವನ್ನುಂಟುಮಾಡುವ ಶುಭ ನಾಮಗಳು ಹಲವಾರು ಇವೆ. ಅವನಿಗೆ, ವಿಕರ್ತನ, ವಿವಸ್ವಾನ್, ಮಾರ್ತಾಂಡ, ಭಾಸ್ಕರ, ರವಿ, ಲೋಕಪ್ರಕಾಶನ, ಶ್ರೀಮಾನ್, ಲೋಕಚಕ್ಷು, ಮಹೇಶ್ವರ, ಲೋಕಸಾಕ್ಷಿ, ತ್ರಿಲೋಕೇಶ, ಕರ್ತಾ ಎಂಬ ಹೆಸರುಗಳಿವೆ. ಅಲ್ಲದೆ ಅವನನ್ನು ಹರ್ತಾ, ತಮಿಸ್ರಹಾ, ತಪನ, ತಾಪನ, ಶುಚಿ, ಸಪ್ತಾಶ್ವವಾಹನ, ಗಭಸ್ತಿ ಎಂತಲೂ ಸಂಬೋಧಿಸುತ್ತಾರೆ. ಮೇಲಾಗಿ ಅವನಿಗೆ ಹಸ್ತ, ಬ್ರಹ್ಮ, ಸರ್ವದೇವ, ನಮಸ್ಕೃತ ಎಂಬ ಇಪ್ಪತ್ತೊಂದು ನಾಮಧೇಯ ಗಳಿದ್ದು ಅವು ಅವನಿಗೆ ಬಹು ಪ್ರಿಯವಾಗಿವೆ. ಈ ನಾಮಾಂಕಿತವುಳ್ಳ ಸ್ತೋತ್ರವು **"ಸೂರ್ಯಸ್ತವರಾಜ"**ವೆಂದು ಲೋಕಪ್ರಸಿದ್ಧ ವಾಗಿದ್ದು ಮಹಾಮುನೀಶ್ವರರೆಲ್ಲ ಭಕ್ತಿಯಿಂದ ಪಾರಾಯಣಮಾಡುತ್ತಾರೆ. ಈ ಸ್ತೋತ್ರವನ್ನು ನಿತ್ಯ ಸದ್ಭಕ್ತಿಭಾವದಿಂದ ಪಠಣಮಾಡಿದರೆ ಆರೋಗ್ಯ, ಐಶ್ವರ್ಯ ಸಂಪದಭಿವೃದ್ಧಿಯಾಗಿ ಸಕಲ ವಾಂಛಿತಾರ್ಥಗಳು ನೆರವೇರುತ್ತವೆ. ಈ ಸೂರ್ಯಸ್ತವವನ್ನು ಪ್ರಾತಃಕಾಲ ಹಾಗೂ ಸಾಯಂಕಾಲದಲ್ಲಿ ತಪ್ಪದೇ ಪಠಿಸಿದರೆ ಸಕಲಪಾಪಗಳು ನಾಶವಾಗುತ್ತವೆ. ಅಷ್ಟೇಅಲ್ಲ, ಈ ಸೂರ್ಯಸ್ತವ ಜಪದಿಂದ

ಮನಸ್ಸು, ಶರೀರ ವಾಕ್ಕುಗಳು ಪರಿಶುದ್ಧವಾಗಿ ಪಾಪಗಳು ದೂರವಾಗುತ್ತವೆ. ಈ **''ಸೂರ್ಯಸ್ತವರಾಜ''** ಹೋಮಮಂತ್ರ, ಸಂಧ್ಯೋಪಾಸನೆಯಮಂತ್ರ, ಅರ್ಘ್ಯಮಂತ್ರ ಮತ್ತು ಬಲಮಂತ್ರವೂ ಎನಿಸುತ್ತದೆ. ಹೋಮಹವನಾದಿ ಕಾರ್ಯಗಳಲ್ಲಿ ಇದನ್ನು **''ಶುಭಸ್ತವ''** ಎಂಬರ್ಥದಲ್ಲಿ ಪಠಣ ಮಾಡಿದರೆ ಸಕಲ ಪಾಪಗಳೂ ನಿರ್ಮೂಲವಾಗುತ್ತವಲ್ಲದೆ ಅನ್ನದಾನ ಮೊದಲಾದ ದಾನಗಳಲ್ಲಿ ಹಾಗೂ ಪ್ರದಕ್ಷಿಣೆ ನಮಸ್ಕಾರಗಳಲ್ಲಿ ಈ ಮಂತ್ರವು ಪ್ರಯೋಜನಕಾರಿಯೂ ಫಲಕಾರಿಯೂ ಆಗಿದೆ. ಆದುದರಿಂದ ಮುನಿಶ್ರೇಷ್ಠರೇ, ನೀವು ಈ ಸ್ತವರಾಜವನ್ನು ನಿತ್ಯವೂ ಜಪಿಸಿ ಸಕಲ ಅಭೀಷ್ಟಗಳನ್ನು ನೆರವೇರಿಸಿಕೊಳ್ಳಿರಿ' ಎಂದು ನುಡಿದನು.

## ಮಾರ್ತಾಂಡಜನ್ಮ. ಶರೀರ ವರ್ಣನ

ಮುನಿಜನರು ಬ್ರಹ್ಮದೇವನನ್ನು ಕುರಿತು-ದೇವಾ, ಸೂರ್ಯನು ಹನ್ನೆರಡು ರೂಪಧರಿಸಿ ಲೋಕ ಬೆಳಗುತ್ತಿದ್ದು, ಅವನು ಜನಿಸಿದ್ದು ಹೇಗೆ? ಅವನಿಗೆ ಜನನಿ ಯಾರು? ಮುಂತಾದವುಗಳ ಕುರಿತು ವಿವರಿಸು. ಎಂದು ಪ್ರಾರ್ಥಿಸಿದಾಗ, ಚತುರಾನನನು ಸೂರ್ಯನ ಜನನದ ಹಿನ್ನೆಲೆಯನ್ನು ವಿವರಿಸಲಾರಂಭಿಸಿದನು.

ದಕ್ಷ ಬ್ರಹ್ಮನಿಗೆ ಅದಿತಿ, ದಿತಿ, ದನು, ಧಿನ ಎಂಬುದಾಗಿ ಅರವತ್ತು ಮಂದಿ ಸುಂದರಿಯರಾದ ಕನ್ಯೆಯರು ಜನಿಸಿದರು. ಅವರ ಪೈಕಿ ತಂದೆಯಾದ ದಕ್ಷನು ಹದಿಮೂರು ಜನ ಕನ್ಯೆಯರನ್ನು ಕಶ್ಯಪನಿಗೆ ಧಾರೆ ಎರೆದುಕೊಟ್ಟನು. ಅವರಲ್ಲಿ ಅದಿತಿಯ ಗರ್ಭದಲ್ಲಿ ಜಗದ ಒಡೆಯರೆನಿಸಿದ ದೇವತೆಗಳು ಜನಿಸಿದರು.

ದಿತಿಯು ದೈತ್ಯರಿಗೆ ಜನ್ಮ ನೀಡಿದಳು. ದನುದೇವಿಯು ಮಹಾ ಉಗ್ರಸ್ವಭಾವ--ದವರಾದ ದಾನವರನ್ನು ಹೆತ್ತಳು. ವಿನತಾದೇವಿ ಹಾಗೂ ಇನ್ನಿತರರು ಪ್ರಾಣಿಗಳಿಗೆ ಜನ್ಮ ನೀಡಿದರು. ಈ ರೀತಿಯಾಗಿ ಕಾಲಾನುಕ್ರಮದಲ್ಲಿ, ಕಶ್ಯಪನಿಂದ ಸಂತಾನ ಸಮೃದ್ಧಿಯು ಅಪರಂಪಾರವಾಗಿ ಸಮೃದ್ಧಿಗೊಂಡಿತು.

ಕಶ್ಯಪನ ಮಕ್ಕಳಲ್ಲಿ ದೇವತೆಗಳು ಮುಖ್ಯರೆನಿಸಿದ್ದು, ಸ್ವಭಾವದಿಂದ ಸಾತ್ವಿಕರಾಗಿದ್ದರು. ಉಳಿದವರು ರಜೋಗುಣ ಹಾಗೂ ತಮೋಗುಣ ಸ್ವಭಾವದವರೆಂದು ಹೆಸರಾದರು. ಬ್ರಹ್ಮ ನಿಯಮಾನುಸಾರ ದೇವತೆಗಳು ಯಜ್ಞಯಾಗಾದಿಗಳಲ್ಲಿ ನೀಡಲಾಗುವ ಹವಿಸ್ಸು, ಭಕ್ಷಿಸುವವರಾದರು. ಇದನ್ನರಿತ ದೈತ್ಯರು, ದಾನವರು ತಮ್ಮ ಪ್ರಾಬಲ್ಯದಿಂದ ದೇವತೆಗಳನ್ನು ಸ್ವರ್ಗದಿಂದ ಓಡಿಸಿದರು. ದೇವತೆಗಳಿಗೆ ಹವಿಸ್ಸು ದೊರೆಯದೆ ಕಂಗೆಟ್ಟರು. ಹವಿಸ್ಸಿನ ಕಚ್ಚಾಟದಿಂದ ಮೂರು ಲೋಕವೂ ಹಾಳಾಗಿ ಹಾಹಾಕಾರ ಉಂಟಾಯಿತು. ತನ್ನ ಸಂತಾನಕ್ಕೊದಗಿದ ದುರ್ಗತಿಗಾಗಿ ದೇವಮಾತೆ ಅದಿತಿದೇವಿಯು ಸೂರ್ಯಾರಾಧನೆಯನ್ನು ಸದ್ಭಕ್ತಿಭಾವದಿಂದ ಕೈಕೊಂಡಳು. ನಿತ್ಯ ಅನ್ನಾಹಾರ ತ್ಯಜಿಸಿ ಭಗವಾನ್ ಸೂರ್ಯ ನಾರಾಯಣನನ್ನು ತನ್ನ ಸಂತಾನಕ್ಕೊದಗಿದ ಸಂಕಷ್ಟ ನಿವಾರಣೆಗಾಗಿ ಬೇಡಿಕೊಂಡಳು. ತ್ರಿಕಾಲದಲ್ಲಿಯೂ ಭಾಸ್ಕರನನ್ನು ಭಕ್ತಿಭಾವದಿಂದ ಪ್ರಾರ್ಥಿಸಿ ಕೊಂಡಿದ್ದೇನೆಂದರೆ-

ಓ ಬ್ರಹ್ಮವಸ್ತುವಿನ ಸಾಕಾರಸ್ವರೂಪ ಸೂರ್ಯದೇವಾ, ಜಗತ್ತಿಗೆ ಸುಖವಾಗಲೆಂದು ಹಾರೈಸಿ ನಿನಗೆ ಶರಣು ಬಂದಿದ್ದೇನೆ. ಋಗ್ವೇದ, ಸಾಮವೇದ ಹಾಗೂ ಯಜುರ್ವೇದಗಳ

ಸ್ವರೂಪನೆ, ನಿನಗೆ ಅನಂತವಂದನೆಗಳು. ನೀನು ಪುರಾಣಪುರುಷನು, ಓಂಕಾರ ರೂಪಿಯು, ಸದಾ ಭಕ್ತರ ಅಂತರಂಗದ ವೇದನೆಯನ್ನು ಅರಿಯಬಲ್ಲ ಪ್ರಾಣ ಸ್ವರೂಪನು ನೀನು ಎಂದು ಸರ್ವದಾ ರಾತ್ರಿ, ಹಗಲು ಏಕಾಗ್ರಚಿತ್ತದಿಂದ ಸೂರ್ಯನನ್ನು ಧ್ಯಾನಿಸುತ್ತಿದ್ದಳು.

ಹೀಗೆ ಕೆಲವು ಕಾಲ ಕಳೆಯಲು ತೇಜೋಮಂಡಲದಿಂದ ಕಣ್ಣು ಕೋರೈಸುವ ಬೆಳಕಿನ ಸೂರ್ಯನಾರಾಯಣನು ಅದಿತಿದೇವಿಗೆ ಪ್ರಸನ್ನನಾಗಿ ಪ್ರತ್ಯಕ್ಷವಾದನು. ಅಂತಹ ಕಾಂತಿಪುರುಷನಾದ ಸೂರ್ಯನು ತನ್ನ ಭಕ್ತಿಗೆ ಒಲಿದು ಬಂದು ನಿಂತಾಗ ಅದಿತಿಗೆ ಆನಂದ ಅಚ್ಚರಿಗಳುಂಟಾದವು. ಪರಮಾನಂದ ಭರಿತಳಾಗಿ, ಭಕ್ತಿಭಾವದಿಂದ ನಮಿಸಿ, ಜಗತ್ಕಾರಣ ದಿನಮಣಿಯೇ! ನಿನ್ನ ಉಗ್ರರೂಪವನ್ನು ನಾನು ನೋಡಲಾರೆ. ನೀನು ಸೌಮ್ಯರೂಪಧರಿಸಿ ಕರುಣಿಸು. ಭಕ್ತವತ್ಸಲನೆ, ನನ್ನ ಮಕ್ಕಳನ್ನು ಕಾಪಾಡು ಕಾಪಾಡು' ಎಂದು ದೀನಭಾವದಲ್ಲಿ ಮೊರೆಯಿಟ್ಟಳು. ಅವಳ ಪ್ರಾರ್ಥನೆಯಂತೆ ಆ ತೇಜೋಮಂಡಲ ಮಧ್ಯದಿಂದ ಕಾಯ್ದತಾಮ್ರದ ಮೈಬಣ್ಣವುಳ್ಳ ಸೌಮ್ಯರೂಪಧರಿಸಿ ಸೂರ್ಯದೇವನು ನಸುನಗುತ್ತ ಅದಿತಿಯ ಮುಂದೆ ಬಂದು ನಿಂತನು.

ಆ ಬಳಿಕ ಸೂರ್ಯನನ್ನು ನೋಡಿ, ಅದಿತಿಯು ಭಕ್ತಿಭಾವದಿಂದ ಮತ್ತೊಮ್ಮೆ ನಮಸ್ಕರಿಸಿದಾಗ ದಯಾಮಯನಾದ ದಿನಕರನು ಅವಳಿಗೆ ಬೇಕಾದ ವರ ಕೇಳಿಕೊಳ್ಳಲು ಸೂಚಿಸಿದನು. ಅವನ ಮಾತಿನಿಂದ ಹರ್ಷಭರಿತಳಾದ ಅದಿತಿಯು ಸೂರ್ಯದೇವನಿಗೆ 'ದೇವಾ, ದೈತ್ಯ ದಾನವರ ಕ್ರೂರ ವರ್ತನೆಯಿಂದಾಗಿ ನನ್ನ ಮಕ್ಕಳಿಗೆ ಹವಿಸ್ಸು ದೊರೆಯದಂತಾಗಿದೆ. ಸ್ವರ್ಗದ ಅಧಿಕಾರದಿಂದ ವಂಚಿತರಾಗಿದ್ದಾರೆ. ನೀನು ದೇವತೆಗಳ ಸಹೋದರನಾಗಿ, ಆಪದ್ಬಂಧುವಾಗಿ, ಅವರ ಸ್ವರ್ಗದ ಅಧಿಕಾರ ಮರಳಿಕೊಡಿಸಲು, ಅವರ ಶತ್ರುಗಳಾದ ದೈತ್ಯ, ದಾನವರನ್ನು ನಾಶಮಾಡು. ಮರಳಿ ನನ್ನ ಸಂತಾನ (ದೇವತೆಗಳು) ಹವಿಸ್ಸನ್ನು ಸವಿಯುವಂತಾಗಲಿ. ಕರುಣಾಕರನಾದ ನೀನು ನನ್ನ ಪ್ರಾರ್ಥನೆಯನ್ನು ಮನ್ನಿಸಲು ಕಾರ್ಯ ಪ್ರವರ್ತನಾಗಬೇಕು' ಎಂದು ಪರಿಪರಿಯಾಗಿ ಬೇಡಿಕೊಂಡಳು.

ಅವಳ ಪ್ರಾರ್ಥನೆಯನ್ನು ಆಲಿಸಿದ ಸಹಸ್ರಕಿರಣನು ನಸುನಕ್ಕು ಅದಿತಿಗೆ ಅಭಯ ನೀಡುವ ಸ್ವರದಲ್ಲಿ 'ನೀನು ನಿಶ್ಚಿಂತಳಾಗಿರು. ನಿನ್ನ ಮಕ್ಕಳು ಶತ್ರುಗಳನ್ನು ಸದೆಬಡಿದು ಸಮೂಲ ನಾಶಮಾಡಲು ನಾನೇ ಸ್ವಯಂ ನಿನ್ನ ಪುತ್ರನಾಗಿ ಜನಿಸಿ ಬರಲಿದ್ದೇನೆ' ಎಂದು ನುಡಿದು ಅಂತರ್ಧಾನ ಹೊಂದಿದನು. ಇತ್ತ ಅದಿತಿಯು ಮನದಿಷ್ಟಾರ್ಥ ಸಿದ್ಧಿ ಪಡೆದು ಗೆಲವಿನಿಂದ ಮನೆಗೆ ತೆರಳಿದಳು. ಸುಮಾರು ಒಂದು ವರ್ಷಾವಧಿನಂತರ ಸೂರ್ಯದೇವನು ತನ್ನ **'ಸುಷುಮ್ನಾ'** ಕಿರಣದ ಪ್ರಭಾವದಿಂದ ಅದಿತಿಯ ಗರ್ಭ ಪ್ರವೇಶಿಸಿದನು. ಗರ್ಭವತಿಯಾದ್ದಾಗ್ಯೂ ಸಹ, ಅದಿತಿಯು ಕೃಚ್ಛ್ರ ಚಾಂದ್ರಾಯಣ ವ್ರತ ಉಪವಾಸ ಬಿಡಲಿಲ್ಲ. ಇದನ್ನರಿತ ಪತಿಯಾದ ಕಶ್ಯಪನು ಉಪವಾಸದಿಂದ ಗರ್ಭವನ್ನು ಹಾಳು ಮಾಡಿಕೊಳ್ಳಬಾರದೆಂದು ಸ್ವಲ್ಪ ಬಿರುಸಾಗಿ ನುಡಿದಾಗ, ಮಾತಿಗೆಮಾತು ಬೆಳೆದು ಅದಿತಿಯೂ ಸ್ವಲ್ಪ ಸಿಟ್ಟಾಗಿ ಗರ್ಭವನ್ನು ವಿಸರ್ಜಿಸಿದಳು. ಪ್ರಚಂಡ ಪ್ರಕಾಶದಿಂದ ಬೆಳಗುತ್ತಿರುವ ಆ ದಿವ್ಯಪಿಂಡವನ್ನು ಕಂಡ ಕಶ್ಯಪನು ಪತ್ನಿಯ ಮಾತು ನಿಜವೆನಿಸಿ, ಎದುರಿನಲ್ಲಿರುವ ವಿಸೃಜಿತ ಗರ್ಭಕ್ಕೆ ನಮಸ್ಕರಿಸಿ ವೇದಸೂಕ್ತದಿಂದ ಸ್ತುತಿಸಿದನು. ಅವನ ಸ್ತುತಿ ನಡೆದಿರುವಾಗಲೇ ಆ ಗರ್ಭಾಂಡದಿಂದ ಓರ್ವ ತೇಜಸ್ವೀ ಪುರುಷನು ಹೊರಬಂದನು.

ಕಶ್ಯಪನಿಗೆ ಅಚ್ಚರಿ ಹಾಗೂ ಭಯಮಿಶ್ರಿತ ಭಾವನೆಯಿಂದಿರುವಾಗ ಆಕಾಶವಾಣಿಯಾಗಿ "ಓ ಮುನಿವರಾ, ನೀನು ಕೋಪದ ಭರದಲ್ಲಿ ಅದಿತಿಗೆ, ಗರ್ಭವನ್ನು ಉಪವಾಸದಿಂದ ಹಾಳುಮಾಡುವೆ ಎಂದ ಕಾರಣ ಈ ಗರ್ಭದಿಂದ ಉತ್ಪನ್ನವಾದ ಮಗನು ಮುಂದೆ ಮಾರ್ತಾಂಡನೆಂದು ಕರೆಯಲಾಗುವದು. ಇವನೇ ದೈತ್ಯ, ದಾನವರನ್ನೂ ಸಮೂಲನಾಶ ಮಾಡುವ ಕಾರಣಪುರುಷನಾಗುವನು ಎಂದು ನುಡಿಯಿತು. ದೇವತೆಗಳೆಲ್ಲರಿಗೂ ಈ ಅಭಯಪೂರ್ಣ ಅಶರೀರವಾಣಿಯಿಂದ ಹೋದಜೀವ ಬಂದಂತಾದರೆ ದೈತ್ಯ ದಾನವರು ಕಂಗಲಾದರು. ದೇವತೆಗಳೆಲ್ಲ ದೇವೇಂದ್ರನ ಮುಂದಾಳುತನದಲ್ಲಿ ರಣೋತ್ಸಾಹದಿಂದ ದೈತ್ಯರ ಹಾಗೂ ದಾನವರ ದಮನಕ್ಕಾಗಿ ಯುದ್ಧ ಸನ್ನದ್ಧರಾದರು. ದೇವ ದಾನವರ ನಡುವೆ ಘನಘೋರ ಸಂಗ್ರಾಮ ನಡೆಯಿತು. ಉಭಯ ಪಕ್ಷಗಳು ವೀರಾವೇಶದಿಂದ ಹೋರಾಡುವಾಗ, ಪರಸ್ಪರ ಶಸ್ತ್ರಾಸ್ತ್ರಗಳ ತಾಕಲಾಟದಿಂದ ಜಗತ್ತೆಲ್ಲವೂ ಉರಿಯ ತೊಡಗಿತು. ಆ ಯುದ್ಧದಲ್ಲಿ ಮಾರ್ತಂಡನ ಕ್ರೂರದೃಷ್ಟಿ, ಹೂಂಕಾರಗಳಿಂದಲೇ ಹಲವಾರು ಅಸಮಬಲ ಅಸುರರೆಲ್ಲ ಅಸುನೀಗಿಸಿದರೆ, ಕೆಲವರು ಪಲಾಯನ ಮಾಡಿದರು. ಇನ್ನುಳಿದವರು ಮಾರ್ತಾಂಡನ ತೇಜಸ್ಸಿನಿಂದ ಸುಡಲ್ಪಟ್ಟು ಬೂದಿಯಾಗಿ ಬಿದ್ದರು.

ಯುದ್ಧ ಮುಕ್ತಾಯವಾಗಿ ದೇವತೆಗಳು ಗೆಲವು ಪಡೆದು ಹರ್ಷಿಸಿದರು. ತಮ್ಮ ಗೆಲುವಿನಲ್ಲಿ ಮೂಲಕಾರಣರಾದ ಸೂರ್ಯನನ್ನೂ, ಅದಿತಿಯನ್ನೂ ಪರಿಪರಿಯಾಗಿ ಸ್ತುತಿಸಿದರು. ದೇವತೆಗಳು ಅಂದಿನಿಂದ ಹವಿಸ್ಸನ್ನು ಮೊದಲಿನಂತೆ ಪಡೆಯುವಂತಾಯಿತು. ಸ್ವರ್ಗದ ಸರ್ವಾಧಿಕಾರವೂ ಪ್ರಾಪ್ತವಾಯಿತು. ಭಗವಾನ್ ಮಾರ್ತಂಡನೂ ಸಹ ತನ್ನ ಅಧಿಕಾರ ನಡೆಯಿಸತೊಡಗಿದನು. ಅಂದಿನಿಂದ ಅವನ ಸ್ವರೂಪದಲ್ಲಿ ಕೊಂಚ ಮಾರ್ಪಾಟಾಯಿತು. ಅಗ್ನಿಪಿಂಡದಂತೆ ಸೂರ್ಯನು ಮೇಲೂ, ಕೆಳಗೂ ಕಿರಣ ಉಳ್ಳವನಾಗಿದ್ದರೂ ಪ್ರಖರತೆ ಸ್ವಲ್ಪ ಕಡಿಮೆ ಮಾಡಿದನು. ಸೌಮ್ಯ ಸುಂದರರೂಪವನ್ನು ಧರಿಸಿದನು.

ಕಾಲಾನಂತರದಲ್ಲಿ, ವಿಶ್ವಕರ್ಮ ಪ್ರಜಾಪತಿಯು ಸೂರ್ಯನನ್ನು ಪ್ರಸನ್ನಗೊಳಿಸಿ ಅವನಿಗೆ ತನ್ನ ಮಗಳಾದ ಸಂಜ್ಞಾದೇವಿಯನ್ನು ಧಾರೆಯೆರೆದು ಕೊಟ್ಟನು. ಅವಳಲ್ಲಿ ಸೂರ್ಯನು ಮಹಿಮಾವಂತರಾದ ಇಬ್ಬರು ಗಂಡುಮಕ್ಕಳನ್ನೂ ಹಾಗೂ ಯಮುನೆಯೆಂಬ ಹೆಣ್ಣುಮಗಳು ಹೀಗೆ ಮೂರು ಮಕ್ಕಳನ್ನು ಪಡೆದನು. ಬರಬರುತ್ತ ಸೂರ್ಯನು ತನ್ನ ಉಗ್ರ ತೇಜಸ್ಸಿನಿಂದ ಮೂರು ಲೋಕಗಳಿಗೂ ಅಸಾಧ್ಯವಾದ ಬೇಗೆಯನ್ನುಂಟುಮಾಡಿದನು. ಹೀಗಿರುವಾಗ ಸೂರ್ಯನ ಉಗ್ರತೇಜಸ್ಸನ್ನು ಎದುರಿಸಲು ಸಾಧ್ಯವಾಗದೆ ಸಂಜ್ಞಾದೇವಿಯು ತನ್ನ ನೆರಳನ್ನು ಉದ್ದೇಶಿಸಿ ಹೀಗೆಂದಳು : ಛಾಯಾದೇವಿ, ನಾನೀಗ, ನನ್ನ ತಂದೆಯ ಮನೆಗೆ ಹೋಗಿ ಬರುತ್ತೇನೆ. ಅಲ್ಲಿಯವರೆಗೂ ನೀನು ನಿರ್ಭಯದಿಂದ ಇರು. "ಈ ಕುಮಾರರಿಬ್ಬರನ್ನು ಹಾಗೂ ಮಗಳನ್ನು ಪ್ರೀತಿ-ವಾತ್ಸಲ್ಯದಿಂದ ಪೋಷಿಸು. ನಾನು ಹೋದ ವಿಷಯವನ್ನು ಭಗವಂತನಾದ ಸೂರ್ಯನಿಗೆ ಹೇಳಕೂಡದು" ಎಂದಾಗ ಛಾಯೆಯು ರಹಸ್ಯ ಕಾಪಾಡುವಲ್ಲಿ ನಾನು ಜಾಗೃತಳಾಗಿರುವೆ. ಆದರೆ ರಹಸ್ಯ ಬಯಲಾಗಿ ಸೂರ್ಯನು ಕೋಪದಿಂದ ಶಾಪ ಕೊಡುವತನಕ ನಾನು ನಿನ್ನ ಅಂತರಂಗದಲ್ಲಿಯ ರಹಸ್ಯ ಕಾಪಾಡುತ್ತೇನೆ, ಆಯಿತೆ" ಎಂದು ನುಡಿದಳು. ಸಂಜ್ಞಾದೇವಿಯು ಅವಳ ಮಾತಿನ ಭರವಸೆ ಪಡೆದು ತನ್ನ ತಂದೆಯ ಮನೆಗೆ ಹೋಗಿ ಅಲ್ಲಿ ಸಾವಿರ ವರ್ಷ ಸುಖವಾಗಿದ್ದಳು. ಒಂದು ದಿನ ತಂದೆಯು ಬೇಸರಗೊಂಡು ಮಗಳಿಗೆ

ಗಂಡನ ಮನೆಗೆ ಹಿಂದಿರುಗಿ ಹೋಗಲು ಹೇಳಿದರೂ, ಕೇಳದೆ ಅವಳು ಹೆಣ್ಣು ಕುದುರೆಯ ರೂಪ ಧರಿಸಿ ಕುರುದೇಶಕ್ಕೆ ತೆರಳಿದಳು. ಅಲ್ಲಿ ಬಹಳ ವರ್ಷ ಪತಿವ್ರತಾ ಧರ್ಮದಿಂದಿದ್ದು, ಅನ್ನಾಹಾರ ವರ್ಜಿಸಿ ನಿಷ್ಠೆಯಿಂದ ತಪವನ್ನಾಚರಿಸಿದಳು.

ಇತ್ತ ಸಂಜ್ಞೆಯು ತಂದೆಯ ಮನೆಗೆ ಹೋದ ನಂತರ, ಸಂಜ್ಞೆಯ ಹೇಳಿಕೆಯಂತೆ ಛಾಯೆಯು ಅವಳ ರೂಪ ಧರಿಸಿ ಸೂರ್ಯನನ್ನು ಸೇವಿಸಲಾರಂಭಿಸಿದಳು. ಸೂರ್ಯನಿಗೆ ಇದಾವುದೂ ತಿಳಿಯದು ಪಾಪ ! ಛಾಯೆಯಲ್ಲಿಯೂ ಎಂದಿನಂತೆ ಅನುರಕ್ತನಾಗಿದ್ದು ಅವಳಿಂದ ಮತ್ತೆ ಇಬ್ಬರು ಗಂಡು ಮಕ್ಕಳು ಹಾಗೂ ಹೆಣ್ಣು ಮಗುವೊಂದನ್ನು ಪಡೆದನು. ಛಾಯಾ ರೂಪಳಾದ ಸಂಜ್ಞೆಯು ತನ್ನ ಸವತಿಯ ಮಕ್ಕಳಲ್ಲಿ ಮೊದಲಿನ ಪ್ರೀತಿ ವಾತ್ಸಲ್ಯ ತೋರಲಿಲ್ಲ. ಮನುವು ಮಲತಾಯಿಯಿಂದಾಗುವ ಹಿಂಸೆ ಸಹಿಸಿಕೊಂಡಿದ್ದನು. ಆದರೆ ಯಮನಿಗೆ ತಡೆಯುವುದಾಗಲಿಲ್ಲ. ಒಮ್ಮೆಮ್ಮೆ ಕೋಪದಲ್ಲಿ ಯಮನು ಮಲತಾಯಿಗೆ ಕಾಲಿನಿಂದ ಒದೆಯುವದಾಗಿ ಗದ್ದರಿಸಿದನು. ಆದರೆ ಒದೆಯಲಿಲ್ಲ. ಅವನ ಉದ್ಧಟ ಮಾತಿಗೆ ಮಲತಾಯಿಯು ರೋಷಕಾಷಾಯಿತಳಾಗಿ ''ನಿನಗೆ ಪೂಜ್ಯಳಾಗಿ ಮಾತೃಸಮಾನಳಾದ ನನ್ನನ್ನು ಒದೆಯುವೆಯಾ? ಹಾಗೆ ಒದೆಯಲು ಮುಂದಾಗುವ ಕಾಲು ಬಿದ್ದು ಹೋಗಲಿ'' ಎಂದು ಶಪಿಸಿದಳು. ಅವಳ ಮಾತಿನಿಂದ ಯಮನು ಮತ್ತಷ್ಟು ನೊಂದು, ಮನುವಿನೊಡನೆ ಒಂದು ದಿನ ಈ ಸಮಾಚಾರವನ್ನು ತಂದೆಗೆ ವಿವರಿಸಿದನು. ''ನಮ್ಮ ತಾಯಿಯು ನಮ್ಮಲ್ಲಿ ಸರಿಸಮಾನ ಪುತ್ರವಾತ್ಸಲ್ಯ ತೋರುತ್ತಿಲ್ಲ. ಹಿರಿಯವನನ್ನು ಕಡೆಗಣಿಸಿ, ಕಿರಿಯವನನ್ನೇ ಹೆಚ್ಚಾಗಿ ಪ್ರೀತಿಸುತ್ತಾಳೆ'' ಎಂದು ದೂರಿತ್ತನು. ಅವನು ಮಲತಾಯಿಯೊಡನೆ ನಡೆದ ಜಗಳವನ್ನು ವಿವರಿಸಿ ಹೇಳುತ್ತ ''ಬಾಲಕನಾದ ನಾನು ಕೋಪದಲ್ಲಿ ಕಾಲಿನಿಂದ ಒದೆಯುತ್ತೇನೆ ಅಂದದ್ದಕ್ಕೆ ನನ್ನನ್ನು ನಂತರ ಕ್ಷಮಿಸದೆ ಬದಲಾಗಿ ''ಕಾಲು ಬಿದ್ದು ಹೋಗಲಿ'' ಎಂದು ಶಪಿಸಿದಳು.'' ಎಂದು ನುಡಿದು, ''ಬಹುಶಃ ಇವಳು ನನ್ನ ನಿಜವಾದ ತಾಯಿಯೇ ಆಗಿರಲಾರಳು'' ಎಂದು ಸಂಶಯ ವ್ಯಕ್ತಪಡಿಸಿದನು. ಅಲ್ಲದೆ ಮಾತೃಶಾಪದಿಂದ ಕಾಪಾಡುವಂತೆ ತಂದೆಯ ಮೊರೆ ಹೊಕ್ಕನು. ಸೂರ್ಯನು ಮಗನ ಮಾತಿನಿಂದಲೇ ಎಲ್ಲವನ್ನು ಚೆನ್ನಾಗಿ ಊಹಿಸಿದ, ಮಗನನ್ನು ಸಂತೈಸುತ್ತ ''ಶಾಪಗಳೆಲ್ಲಕ್ಕೂ ಪರಿಹಾರವಿರುವದು. ಆದರೆ ಮಾತೃಶಾಪಕ್ಕೆ ಪರಿಹಾರವೇ ಇಲ್ಲ'' ಎಂದು ನುಡಿದು ಪಾಪ ಪರಿಹಾರ ಮಾರ್ಗವನ್ನು ಮಗನಿಗೆ ಸೂಚಿಸುತ್ತ ''ನಿನ್ನ ಕಾಲಿನ ಮಾಂಸವನ್ನು ಹುಳಗಳು ತಿಂದು ಭೂಮಿಯನ್ನು ಸೇರುವವು, ಆದರಿಂದ ನಿನ್ನ ತಾಯಿಯ ಶಾಪವೂ ನಡೆದಂತಾಗುವದು. ನೀನು ಬದುಕುವೆ'' ಎಂದು ಅಭಯ ನುಡಿದ.

ಒಂದು ದಿನ ಸೂರ್ಯನು ಛಾಯೆಯನ್ನು ವಾತ್ಸಲ್ಯ ತೋರುವಲ್ಲಿ ತಾರತಮ್ಯ ತೋರುವ ಕಾರಣ ಕುರಿತು ಪ್ರಶ್ನಿಸಿದ. ಸೂಕ್ಷ್ಮವಾಗಿ ತಾನೇ ತನ್ನಲ್ಲಿ ವಿಚಾರಿಸಿದ ಎಲ್ಲವೂ ಸೂರ್ಯನಿಗೆ ಹೊಳೆಯಿತು. ಕೋಪದಿಂದ ಕನಲಿ ಕಿಡಿಕಿಡಿಯಾದ. ಅವನ ಕೋಪಕ್ಕೆ ಭಯಭೀತಳಾಗಿ ಛಾಯೆಯು ನಡೆದ ಎಲ್ಲ ಸಮಾಚಾರವನ್ನೂ ವಿವರಿಸಿ ಹೇಳಿದಳು. ಕೇಳಿದ ನಂತರ ಬಿರುಗಾಳಿಯಂತೆ ಕೋಪಾವೇಶದಲ್ಲಿ ಮಾವನ ಮನೆಗೆ ಹೊರಟ.

ಆಗಮಿಸಿದ ಅಳಿಯನನ್ನು ಆದರಿಸಿದ ಮಾವ ವಿಶ್ವಕರ್ಮನು, ಸೂರ್ಯನ ಉಗ್ರರೂಪವು ಸೌಮ್ಯ ರೂಪ ಹೊಂದುವಂತೆ ಆಶಿಸಿ ಸಂಜ್ಞೆಯು ಉಗ್ರತಪಸ್ಸು ಕೈಕೊಳ್ಳಲು ಕಾಡಿಗೆ ಹೋಗಿರುವದಾಗಿ ತಿಳಿಸಿದನಲ್ಲದೆ, ಅವನ ಉಗ್ರತೇಜಸ್ಸು ಕಡಿಮೆ ಮಾಡಲು ಬ್ರಹ್ಮನು

ಒಂದು ಚತುರೋಪಾಯ ಹೇಳಿರುವದಾಗಿ ಹೇಳಿದನು. ಅಳಿಯನ ಸಮ್ಮತಿ ಕೇಳಿದನು. ಸೂರ್ಯನಾದರೂ ಸಹ ಮಾವನ ಹಿತವಚನಕ್ಕೆ ಸಮ್ಮತಿ ಇತ್ತನು. ಅವನ ಸಲಹೆಯಂತೆ ಅವನು ತನ್ನ ರೂಪವನ್ನು ಒಂದು ತೇಜೋಮಂಡಲವಾಗಿ ಮಾರ್ಪಡಿಸಿ ಕೊಂಡನು.

ವಿಶ್ವಕರ್ಮನು ಸೂರ್ಯಮಂಡಲವನ್ನೇ ಸಾಣೆಯ ಚಕ್ರಕ್ಕೇರಿಸಿ ಅವನ ತೇಜಸ್ಸನ್ನು ಸಾಣೆ ಹಿಡಿದು ಕಡಿಮೆಮಾಡಿದನು. ಸಾಣೆ ಹಿಡಿಯುತ್ತಿರುವಾಗ ಸಮುದ್ರ, ಬೆಟ್ಟ ಅಡವಿಗಳೊಡನೆ ಭೂಮಿಯು ಗಗನಕ್ಕೇರಿತು, ತಲೆಕೆಳಗಾಯಿತು, ಆಕಾಶವು ನಕ್ಷತ್ರ, ಚಂದ್ರರೊಡನೆ ಕೆಳಗೆ ಬಂದು; ಎಲ್ಲವೂ ಮೇಲೆಕೆಳಗಾಯಿತು. ಸಮುದ್ರ ಅಲ್ಲೋಲಕಲ್ಲೋಲವಾಯಿತು. ಪರ್ವತಗಳು ಸಿಡಿದವು. ಧ್ರುವ ಮಂಡಲ ಆಧಾರಭೂತವಾದ ಜ್ಯೋತಿರ್ಮಂಡಲಗಳೆಲ್ಲವೂ ಕಿರಣಬಂಧನವು ಕಡಿದು ಕೆಳಗೆ ಬಿದ್ದವು.

ಸೂರ್ಯಭಗವಾನನಿಗೆ ಸೌಮ್ಯ ಸುಂದರರೂಪ ಕೊಡುವುದಕ್ಕೆ ವಿಶ್ವಕರ್ಮನು ಸಾಣೆಯ ಚಕ್ರಕ್ಕೇರಿಸಿದಾಗ, ಸಮಸ್ತ ಭೂಮಂಡಲದಲ್ಲಿ, ಸೂರ್ಯಮಂಡಲದಲ್ಲಿ ಮಹಾಬಿರುಗಾಳಿ ಗಳೆದ್ದು, ದೈತ್ಯಕಾರದ ಮೇಘಗಳು ಪರಸ್ಪರ ತಿಕ್ಕಾಟದಿಂದ ಸಿಂಹಗರ್ಜನೆಯಂತೆ ಗುಡುಗುತ್ತ ಮೋಡಗಳೆಲ್ಲ ಒಡೆದ ಗಾಜಿನ ಚೂರುಗಳಾದಂತಾದವು. ಮೂರು ಲೋಕಗಳೂ ತಲೆಕೆಳಗಾದಂತಾಗಿ ಸಕಲ ಜೀವಜಂತುಗಳೂ, ಮಾನವರಾದಿಯಾಗಿ ಹೌಹಾರಿದರು. ಜಗತ್ತು ತಳಮಳಗೊಂಡಿತು. ಪ್ರಳಯಕಾಲವೇ ಸನ್ನಿಹಿತವಾದಂತಾಗಿ, ಕಳವಳಿಸಿ ಪ್ರಾಣರಕ್ಷಣೆಗಾಗಿ ಹಾಗೂ ಲೋಕದ ಉಳುವಿಗಾಗಿ ಸಮಸ್ತ ದೇವತೆಗಳೂ, ದೇವಮುನಿಗಳೂ ಸಹ ಬ್ರಹ್ಮನೊಡನೆ ಮೊರೆಹೊಕ್ಕರು. ''ಓ ಸೂರ್ಯದೇವ, ನೀನೇ ಜಗದ್ರಕ್ಷಕನು. ಸೃಷ್ಟಿಸ್ಥಿತಿಲಯಾದಿಗಳಿಗೆಲ್ಲ ನೀನೇ ಬ್ರಹ್ಮ, ವಿಷ್ಣು, ಮಹೇಶ್ವರ ರೂಪ ಧರಿಸಿ ಉದ್ಧರಿಸು'' ಎಂದು ಆರ್ತರಾಗಿ ಪ್ರಾರ್ಥಿಸಿದರು.

ಇಂದ್ರಾದಿ ಸಮಸ್ತ ದೇವತೆಗಳೂ ಸಹ ಸೂರ್ಯನನ್ನು ಭಕ್ತಿಪುರಸ್ಸರವಾಗಿ ಪ್ರಾರ್ಥಿಸಿ ಲೋಕವನ್ನು ರಕ್ಷಿಸಲು ಬೇಡಿಕೊಂಡರಲ್ಲದೆ ಸೂರ್ಯದೇವನಿಗೆ ಮಂಗಳವಾಗಲಿ ಎಂದು ಶುಭಹಾರೈಸಿದರು. ವಾಲಖಿಲ್ಯ ಮುನಿಗಳು ವೇದಸೂಕ್ತ ಪಠಿಸಿದರೆ, ವಶಿಷ್ಠ, ಅತ್ರಿ ಮೊದಲಾದ ಋಷಿಗಳು ಭಕ್ತಿಪರವಶತೆಯಲ್ಲಿ ಸೂರ್ಯಸೂಕ್ತ ಮುಂತಾದವುಗಳನ್ನು ಅನ್ನುತ್ತ ಲೋಕದ ಕ್ಷೇಮಾಭಿವೃದ್ಧಿಗಾಗಿ, ಮೂಲ ಕಾರಣಪುರುಷನಾದ ಭಗವಾನ್ ಸೂರ್ಯನಾರಾಯಣನಿಗೆ ಮಂಗಳವಾಗಲಿ ಎಂದು ಶುಭಹಾರೈಸಿದರು.

ಅಗ್ನಿದೇವನು ಸೂರ್ಯನನ್ನು ಕುರಿತು ದೀನವಾಣಿಯಲ್ಲಿ ''ಓ ದೇವರ ದೇವ, ಚತುಷ್ಪಾದ ಪಶುಗಳಿಗೂ, ಎರಡು ಕಾಲುಗಳುಳ್ಳ ಮಾನವ ಪ್ರಾಣಿಗಳಿಗೂ ಹಾಗೂ ಉಳಿದೆಲ್ಲ ಜಗತ್ತಿಗೂ ಪ್ರಾಣರಕ್ಷಣೆ ನೀಡು. ಅದರಂತೆ ನಮಗೂ ಮೂರುಲೋಕಕ್ಕೂ ಪ್ರಾಣಾಪಾಯ ಇಲ್ಲದಂತೆ ಮಾಡು'' ಎಂದು ಪ್ರಾರ್ಥಿಸಿದನು.

ಸೂರ್ಯನನ್ನು ಪ್ರಸನ್ನವಾಗಿಸಲು, ಸಕಲ ವಿದ್ಯಾಧರರು, ಯಕ್ಷರು, ರಾಕ್ಷಸರು, ನಾಗಪುರುಷರು ಇಂಪಾದ ಸ್ವರದಿಂದ ಸ್ತೋತ್ರಮಾಡಿ, ಮಾಡಿ, ದಣಿದು, ''ಓ ಸೂರ್ಯದೇವನೇ, ನಿನ್ನ ತೇಜಸ್ಸನ್ನು ನೋಡಿ ಎಲ್ಲರೂ ಸಹಿಸುವಂತಾಗಲಿ'' ಎಂದು ಬೇಡಿಕೊಂಡರು. ಅದರಂತೆ ಹಾಹಾಹೂಹೂ, ನಾರದ, ತುಂಬರು ಮೊದಲಾದ ಸಂಗೀತ ರಸಾಭಿಜ್ಞರು ಸೂರ್ಯನನ್ನು ಭಕ್ತಿಪರವಶರಾಗದಲ್ಲಿ ಸುತ್ತಿಸಿದರು. ಸಪ್ತಸ್ವರಯುಕ್ತವಾದ

ಸ್ವರಮಾಧುರ್ಯದಿಂದ ಗಂಧರ್ವರು ಸೂರ್ಯನ ಗುಣಗಾನಮಾಡುತ್ತ ನರ್ತನ ಮಾಡುತ್ತ ತಣಿದರು. ಮೂರು ಲೋಕಗಳಿಗೆ ಒದಗಿದ ಗಂಡಾಂತರದಿಂದ ಪಾರುಮಾಡಲು ಸೂರ್ಯದೇವನಿಗೆ ಶರಣಾಗತಿ ಕೋರುವ ಅನೇಕ ವಿವಿಧ ರಾಗಾಲಾಪನೆ ಮಾಡಿದರು. ಸೂರ್ಯನನ್ನು ಹಾಗೆ ಸಾಣೆಹಿಡಿಯುತ್ತಿರಲು, ಊರ್ವಶಿ, ತಿಲೋತ್ತಮೆ, ಮೇನಕೆ ಮೊದಲಾದವರು ತಮ್ಮ ಅಂಗಾಂಗ ಮೋಹಕ ಸೌಂದರ್ಯ ಬೀರುತ್ತ, ವಿವಿಧ ಹಾವಭಾವ ವಿಲಾಸಾದಿಗಳನ್ನು ಪ್ರದರ್ಶಿಸುತ್ತ ಸೂರ್ಯನನ್ನು ಪ್ರಸನ್ನಗೊಳಿಸಲು ಪ್ರಚ್ಛನ್ನ ನರ್ತನ, ಗಾಯನಮಾಡಿದರು. ಹೀಗೆ ಗಂಧರ್ವರ ಗಾಯನ, ಅಪ್ಸರೆಯರ ನರ್ತನ! ವೀಣೆ, ಮದ್ದಳೆ, ದುಂದುಭಿ ನಾದಲಹರಿ, ತಾಳಮೇಳಗಳಿಂದ ಕಿವಿ ಗಡಚಿಕ್ಕುವಂತೆ ಕೋಲಾಹಲ ಉಂಟಾಯಿತು. ಅದು ಸಾಲದೆಂಬಂತೆ, ಕೊಳಲು, ವೀಣೆ, ಪಣವ, ಕಹಳೆ ಮೊದಲಾದ ವಾದ್ಯಗಳ ನಾದ ತರಂಗಗಳೂ ಮೇಳೈಸಿದ್ದವು. ಸಾಣೆಯ ಚಕ್ರದಲ್ಲಿ ತನ್ನ ಉಗ್ರ ತೇಜಸ್ಸನ್ನು ಕಡಿದುಕೊಳ್ಳುತ್ತಿರುವ ಸೂರ್ಯನನ್ನು ಭಯಭಕ್ತಿಯಿಂದ ಸಕಲ ದೇವಾನುದೇವತೆಗಳು ನಮಸ್ಕರಿಸಿ, ಬಹು ವಿಧವಾಗಿ ಬೇಡಿಕೊಂಡರು.

ಈ ಗಾಯನ, ನರ್ತನ, ವಾದ್ಯವೃಂದದ ಹಿಮ್ಮೇಳದಲ್ಲಿ ವಿಶ್ವಕರ್ಮನು ಸೂರ್ಯನ ತೇಜಸ್ಸನ್ನು ಸಾಣೆ ಹಿಡಿದು ನಿಯಮಿತ ರೂಪಕ್ಕೆ ತಂದನು. ಮೊಳಕಾಲಿನವರೆಗೆ ಚೆನ್ನಾಗಿ ಸಾಣೆ ಹಿಡಿಯಲಾಯಿತು. ಕೆಲಸ ಪೂರೈಸಿದ ನಂತರ ಸಾಣೆಯ ಚಕ್ರದಿಂದ ಸೂರ್ಯನು ಬಿಡುಗಡೆ ಹೊಂದಿದನು. ಹಾಗೆ ವಿಶ್ವಕರ್ಮನು ಸಾಣೆ ಹಿಡಿದ ಪರಿಣಾಮವಾಗಿ ಸೂರ್ಯನ ಉಗ್ರತೇಜಸ್ಸು ಕಡಿಮೆ ಆಯಿತೆ ಹೊರತು, ಅವನ ಅಂದ, ಚಂದ ಕಳೆಗುಂದಲಿಲ್ಲ. ಮೊದಲಿಗಿಂತ ಮತ್ತಷ್ಟೂ ಮಿಂಚಿನ ಸೌಮ್ಯ ಸುಂದರ ದೇಹ ಕಾಂತಿಪುರುಷನಾದ.

ಅನಾದಿಯಿಂದಲೂ ಹರಿ, ಹರ, ಬ್ರಹ್ಮಾದಿಗಳಿಂದ ವಂದಿತನಾದ ಭಗವನ್ ಸೂರ್ಯನಾರಾಯಣನ ತೇಜಸ್ಸನ್ನು ಸಾಣೆಹಿಡಿದು ಕಡಿಮೆಮಾಡಿದ ಈ ಕಥೆಯು ಮನೋರಂಜಕವಲ್ಲದೆ, ಭಕ್ತಿಯಿಂದ ಶ್ರವಣಮಾಡಿದರೆ ಸಕಲ ಪಾಪಗಳು ಕರಗಿ ನೀರಾಗಿ, ಸೂರ್ಯಲೋಕವನ್ನು ಪಡೆಯಬಹುದಾಗಿದೆ. ಈ ರೀತಿಯಾಗಿ ಸೂರ್ಯನ ಜನ್ಮ ಹಾಗೂ ಅವನಿಗೆ ಸುಂದರ ರೂಪ ಬಂದ ಬಗೆಯನ್ನು ನಿಮಗೆ ಇದುವರೆಗೆ ವಿವರಿಸಿದೆನು. ಎಂದು ಮುನಿಗಣಕ್ಕೆ ಬ್ರಹ್ಮನು ನುಡಿದನು.

## ಸೂರ್ಯಾಷ್ಟೋತ್ತರ ಶತನಾಮ ವರ್ಣನ

ಇದುವರೆಗೆ ಸೂರ್ಯನ ಜನ್ಮದ ವಿಶದ ನಿರೂಪಣೆಯನ್ನು ಬ್ರಹ್ಮನಿಂದ ಆಲಿಸಿದ ಋಷಿಗಣವು ಸೂರ್ಯನ ಸಂಬಂಧವಾದ ಇತಿಹಾಸವನ್ನು ಇನ್ನಷ್ಟೂ ವಿಸ್ತರಿಸಿ ಹೇಳಲು ಕುತೂಹಲ ವ್ಯಕ್ತಪಡಿಸಿದಾಗ, ಚತುರಾನನನು ಹೇಳುತ್ತಾನೆ.

ಪ್ರಳಯದ ಪರಿಣಾಮವಾಗಿ ಈ ವಿಶ್ವವೆಲ್ಲವೂ ಸರ್ವನಾಶ ಹೊಂದಿ, ಬರಿ ಕತ್ತಲೆ, ಗಾಢಮೌನ ವ್ಯಾಪಿಸಿದ್ದವು. ಪ್ರಕೃತಿಯ ಗುಣಗಳಿಂದ ಬುದ್ಧಿ ಎಂಬುದು ಜನ್ಮ ತಳೆಯಿತು, ಆ ಬುದ್ಧಿಯಿಂದ ಅಹಂಕಾರ, ಮುಂದೆ ಅಹಂಕಾರದಿಂದ, ವಾಯು, ಅಗ್ನಿ, ಜಲ, ಆಕಾಶ, ಭೂಮಿಗಳೆಂಬ ಮಹಾಭೂತಗಳು ಉದಯಿಸಿದವು. ನಂತರದ ಕಾಲಾವಧಿಯಲ್ಲಿ ಬ್ರಹ್ಮಾಂಡವು ರೂಪತಾಳಿತು. ಆ ಬ್ರಹ್ಮಾಂಡದಲ್ಲಿ ಏಳು ಲೋಕಗಳು ಪ್ರತಿಷ್ಠಿತಗೊಂಡು ಏಳುದ್ವೀಪ, ಏಳು ಸಮುದ್ರ ಇವುಗಳನ್ನು ಕೂಡಿಕೊಂಡ ಆ ಭೂಮಿಯೂ ಸಹ ಆ

ಖಂಡದಲ್ಲಿ ಅಂತರ್ಗತವಾಗಿರುತ್ತದೆ. ಆ ಬ್ರಹ್ಮಾಂಡದಲ್ಲಿಯೇ ನಾನೂ, ಹರಿಯೂ, ಮಹೇಶ್ವರನೂ ಕತ್ತಲೆಯ ವಿಷವರ್ತುಲದಲ್ಲಿದ್ದು, ಪರಮೇಶ್ವರನನ್ನು ಭಕ್ತಿಭಾವದಿಂದ ಧ್ಯಾನಿಸುತ್ತಿದ್ದೆವು. ಹೀಗಿರುವಾಗ ಒಮ್ಮೆ ಕತ್ತಲೆಯ ಅಂತರಾಳದಿಂದ ಕಾಂತಿಕಿರಣ ಬೀರುವ ಪ್ರಶಾಂತ ದಿವ್ಯ ಪುರುಷನೊಬ್ಬನು ಮೂಡಿಬಂದನು. ನಾವೆಲ್ಲ ಅವನನ್ನು ಸೂರ್ಯನಾರಾಯಣನೆಂದೇ ಭಾವಿಸಿದೆವು. ಅವನೇ ಪರಮಾತ್ಮನೆಂಬ ಆಶಾಭಾವನೆಯಿಂದ ನಾವೆಲ್ಲರೂ ಬೇರೆ ಬೇರೆಯಾಗಿ, ದಿವ್ಯವಾದ ಸ್ತೋತ್ರಗಳಿಂದ ಹೀಗೆ ಸ್ತುತಿಸಿದೆವು.

**ಆದಿದೇವೋ ಏಸಿ ದೇವಾನಾಮೈಶ್ವರ್ಯಾಚ್ಚತ್ಸಮೀಶ್ವರಃ ।**
**ಆದಿಕರ್ತಾ ಏಸಿ ಭೂತಾನಾಂ ದೇವದೇವೋ ದಿವಾಕರಃ ॥**

ಓ ದೇವ ದೇವ, ನೀನು ದೇವಾನುದೇವತೆಗಳಲ್ಲಿ ಅಗ್ರಗಣ್ಯನು. ಸರ್ವವಿಧ ಸಂಪತ್ತಿಗೆ ಸರ್ವಾಧಿಕಾರಿಯಾದ ಈಶ್ವರ, ಪ್ರಾಣಿಗಳನ್ನು ಮೊದಲನೆಯದಾಗಿ ಸೃಷ್ಟಿಸುವ ಸೃಷ್ಟಾರ ನೀನು. ಜಗತ್ತನ್ನು ನಿನ್ನ ಕಿರಣ ಕಾಂತಿಯಿಂದ ಬೆಳಗುವವ ಬೆಳಕಿನ ಮೂಲ ನೀನು.

**ಜೀವನಃ ಸರ್ವಭೂತಾನಾಂ ದೇವಗಂಧರ್ವರಾಕ್ಷಸಾಂ ।**
**ಮುನಿ ಕಿನ್ನರ ಸಿದ್ಧಾನಾಂ ತಥೈವೋರಗ ಪಕ್ಷಿಣಾಂ ॥**

ದೇವತೆಗಳಾದಿಯಾಗಿ, ಗಂಧರ್ವ, ರಾಕ್ಷಸ, ಯಕ್ಷರು, ಸಿದ್ಧರು, ಮುನಿಗಳು, ಸರ್ಪ, ಪಕ್ಷಿಗಳಿಗೆಲ್ಲಾ ನಿಶ್ಚಿತ ಜೀವನವನ್ನು ಕಲ್ಪಿಸಿ ಕೊಡುವವ ನೀನೇ.

**ತ್ವಂ ಬ್ರಹ್ಮಾತ್ವಂ ಮಹದೇವಸ್ತ್ವಂ ವಿಷ್ಣುಸ್ತ್ವಂ ಪ್ರಜಾಪತಿಃ ।**
**ವಾಯುರಿಂದ್ರಶ್ಚ ಸೋಮಶ್ಚ ವಿವಸ್ವಾನ್ವರುಣಸ್ತಥಾ ॥**

ದೇವದೇವೋತ್ತಮನೆ, ನೀನು ಹರಿಹರ ಬ್ರಹ್ಮ ತ್ರಿಗುಣ ಸ್ವರೂಪನು ನೀನಾಗಿದ್ದು ಇಂದ್ರ, ಚಂದ್ರ, ಸೂರ್ಯ, ವರುಣ, ವಾಯು ಹಾಗೂ ಪ್ರಜಾಪತಿಯೂ ನೀನಾಗಿದ್ದೀಯ.

**ತ್ವಂ ಕಾಲಃ ಸೃಷ್ಟಿಕರ್ತಾ ಚಹರ್ತಾ ಭರ್ತಾ ತಥಾ ಪ್ರಭುಃ ।**
**ಸರಿತಃ ಸಾಗರಾಃ ಶೈಲಾ ವಿದ್ಯುದಿಂದ್ರ ಧನೂಂಷಿ ಚ ॥**

ನೀನು ಕಾಲ ನಿಯಾಮಕನಾಗಿದ್ದು, ಜಗತ್ತನ್ನು ಸಲಹುವ ದಯಾವಾರಿಧಿ ನೀನು. ಜಗತ್ತಿನ ಹುಟ್ಟು ಸಾವುಗಳಿಗೆ ನೀನೇ ಆದಿಮೂಲ. ಸೃಷ್ಟಿಯಲ್ಲಿ ಕಾಣುವ ಬೆಟ್ಟ, ಬಯಲು, ಬಾನು, ಕಾಮನ ಬಿಲ್ಲು, ಸಿಡಿಲು, ಮಿಂಚು, ಮಳೆ, ಬೆಳೆ ನೀನಾಗಿರುವಿ. ಸ್ವರೂಪದಲ್ಲಿ ಅಣುವೂ ನೀನು. ಬೃಹದಾಕಾರ ಧರಿಸಲೂ ಬಲ್ಲೆ. ನೀನು ಆದ್ಯಂತವಿಲ್ಲದ ಘನವಂತ, ಗಹನನೂ, ಪುರಾಣ ಪುರುಷನು ನೀನು.

**ಪ್ರಲಯಃ ಪ್ರಭವಶ್ಚೈವ ವ್ಯಕ್ತಾವ್ಯಕ್ತಃ ಸನಾತನಃ ।**
**ಈಶ್ವರಾತ್ಪರತೋ ವಿದ್ಯಾ ವಿದ್ಯಾಯಾಃ ಪರತಃ ಶಿವಃ ॥**

ವಿದ್ಯೆಯು ಈಶ್ವರನಿಗಿಂತ ಹೆಚ್ಚಿನದು. ವಿದ್ಯೆಗೆ ಹಿರಿದಾದುದು ಶಿವನು. ಶಿವನಿಗಿಂತಲೂ ಪರಮೇಶ್ವರನು ಸರ್ವಶ್ರೇಷ್ಠನು. ಅಂತಹ ಆ ಪರಮೇಶ್ವರನೇ ನೀನಾಗಿದ್ದಿ.

**ಶಿವಾತ್ಪರತರೋ ದೇವಸ್ತಮೇವ ಪರಮೇಶ್ವರಃ ।**
**ಸರ್ವತಃ ಪಾಣಿಪಾದಾಂತಃ ಸರ್ವತೋಕ್ಷಿ ಶಿರೋಮುಖಃ ॥**

ನೀನು ವಿಶ್ವವ್ಯಾಪಿ, ನಿನಗೆ ಸಾವಿರಾರು ಅವಯವಗಳು ಕಣ್ಣು, ಕಿವಿ, ಕಾಲು, ಮುಖಗಳು ಸಾವಿರಾರು ಸಂಖ್ಯೆಯಲ್ಲಿವೆ. ನೀನು ವಿರಾಟ್ ಪುರುಷನು.

**ಸಹಸ್ರಾಂಶುಃ ಸಹಸ್ರಾಸ್ಯಃ ಸಹಸ್ರಚರಣೇಕ್ಷಣಃ ।**
**ಭೂತಾದಿಭೂಭುವಃ ಸ್ವಶ್ಚ ಮಹಃ ಸತ್ಯಂ ತಪೋ ಜನಃ ॥**

ಪ್ರಾಣಿಗಳಿಗಿಂತಲೂ ನೀನು ಆದಿಯಲ್ಲಿರುವವನು. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಸತ್ಯಲೋಕ ಮೊದಲಾದ ಲೋಕಗಳು ಸಹ ನೀನೇ ಆಗಿರುವಿ.

**ಪ್ರದೀಪ್ತಂ ದೀಪನಂ ದಿವ್ಯ ಸರ್ವಲೋಕ ಪ್ರಕಾಶಕಂ ।**
**ದುರ್ನಿರೀಕ್ಷ್ಯಂ ಸುರೇಂದ್ರಾಣಾಂ ಯದ್ರೂಪಂ ತಸ್ಯ ತೇ ನಮಃ ॥**

ಸರ್ವಲೋಕಗಳನ್ನು ಬೆಳಕಾಗಿಸುವ, ದೇವತೆಗಳಿಗೂ ಸಹ ನೋಡಲು ಅಸಾಧ್ಯ ವೆನಿಸುವಂತ ನಿನ್ನ ಉಗ್ರರೂಪಕ್ಕೆ ನಮನಮಾಡುತ್ತೇವೆ.

**ಸುರಸಿದ್ಧಗಣೈರ್ಜುಷ್ಟಂ ಭೃಗ್ವತ್ರಿ ಪುಲಹಾದಿಭಿಃ ।**
**ಸುತ್ರಂ ಪರಮವ್ಯಕ್ತಂ ಯದ್ರೂಪಂ ತಸ್ಯ ತೇ ನಮಃ ॥**

ಸಿದ್ಧರಿಂದಲೂ ದೇವತೆಗಳಿಂದ ಸದಾ ಸೇವೆಗೈಯಲ್ಪಟ್ಟವನೂ, ಭೃಗು, ಅತ್ರಿ, ಪುಲಹ ಮಹಾಮುನಿಗಳಿಂದ ಸ್ತುತಿಸಲ್ಪಡುವಂತವನೂ, ಅತೀಂದ್ರಯನಾದ ನಿನಗೆ ನಿನ್ನ ಪರಮಾತ್ಮ ಸ್ವರೂಪವನ್ನೂ ನಮಿಸುವೆವು.

**ವೇದ್ಯಂ ವೇದವಿದಾಂ ನಿತ್ಯಂ ಸರ್ವಜ್ಞಾನ ಸಮನ್ವಿತಂ ।**
**ಸರ್ವದೇವಾಧಿದೇವಸ್ಯ ಯದ್ರೂಪಂ ತಸ್ಯ ತೇ ನಮಃ ॥**

ನಿನ್ನ ದಿವ್ಯಸ್ವರೂಪ ಜ್ಞಾನವನ್ನು ವೇದಜ್ಞರು ಮಾತ್ರ ವಿವರಿಸಬಲ್ಲರು. ನೀನು ಜ್ಞಾನರೂಪನಿರುವಿ. ಇಂಥ ಜ್ಞಾನಜ್ಯೋತಿ ಮೂರ್ತಿಗೆ ನಮಸ್ಕರಿಸುತ್ತೇವೆ.

**ವಿಶ್ವಕೃದ್ವಿಶ್ವಭೂತಂ ಚ ವೈಶ್ವಾನರ ಸುರಾರ್ಜಿತಂ ।**
**ವಿಶ್ವಸ್ಥಿತಮಚಿಂತ್ಯಂ ಚ ಯದ್ರೂಪಂ ತಸ್ಯ ತೇನಮಃ ॥**

ಈ ಚರಾಚರ ಸೃಷ್ಟಿಯಲ್ಲಿ ನೀನು ವ್ಯಾಪ್ತನಾಗಿದ್ದು ಅಗ್ನಿ ಮೊದಲಾದವರು ನಿನ್ನ ದಿವ್ಯರೂಪಕ್ಕೆ ತಲೆಬಾಗಿ ನಮಿಸುವರು; ಪೂಜಿಸುವರು. ಮತ್ತು ನಿನ್ನ ಪರಮಾತ್ಮ ರೂಪವು ಜಗತ್ತನ್ನು ರಚಿಸುತ್ತದೆ.

**ಪರಂ ಯಜ್ಞಾತ್ಪರಂ ವೇದಾತ್ಪರಂ ಲೋಕಾತ್ಪರಂ ದಿವಃ ।**
**ಪರಮಾತ್ಮೇತ್ಯಭಿಖ್ಯಾತಂ ಯದ್ರೂಪಂ ತಸ್ಯತೇ ನಮಃ ॥**

ನಿನ್ನ ದಿವ್ಯರೂಪವು ವೇದವರ್ಣನೆಗೂ ಮಿಗಿಲಾದದ್ದು, ಯಜ್ಞ-ಯಾಗಗಳಿಗಿಂತ ಸಾವಿರ ಪಾಲು ಶ್ರೇಷ್ಠವಾಗಿದೆ. ಅದಕ್ಕೆ ಪರಮಾತ್ಮನೆಂದು ಕರೆಯುತ್ತಾರೆ. ಅಂತಹ ಪರಮಾತ್ಮ ರೂಪಕ್ಕೆ ನಾವು ನಮಸ್ಕಾರ ಮಾಡುತ್ತೇವೆ.

**ನಮೋ ನಮಃ ಕಾರಣಕಾರಣಾಯ ।**
**ನಮೋ ನಮಃ ಪಾಪವಿಮೋಚನಾಯ ।**
**ನಮೋ ನಮಸ್ತೇ ದಿತಿಜಾರ್ದನಾಯ ।**

ನಮೋ ನಮೋ ರೋಗವಿಮೋಚನಾಯ ॥
ನಮೋ ನಮಃ ಸರ್ವವರಪ್ರದಾಯ ।
ನಮೋ ನಮಃ ಸರ್ವಸುಖಪ್ರದಾಯ ॥
ನಮೋ ನಮಃ ಸರ್ವಧನಪ್ರದಾಯ ।
ನಮೋ ನಮಃ ಸರ್ವಮತಿಪ್ರದಾಯ ॥

ವೇದ ವೇದಾಂತಗಳನ್ನು ತಿರುವಿ ಹಾಕಿದರೂ ನಿನ್ನ ನಿಶ್ಚಿತ ಸ್ವರೂಪವನ್ನು ಅರಿಯಲು ಅಶಕ್ಯ ಅಲ್ಲದೆ ಅದು ಇಂದ್ರಿಯಗೋಚರವಲ್ಲ. ನಿನ್ನ ರೂಪಕ್ಕೆ ಆದಿ ಅಂತ್ಯಗಳಿಲ್ಲ. ಧ್ಯಾನದಿಂದ ನಿನ್ನ ರೂಪವನ್ನು ಅರಿಯಲು ಶಕ್ಯವಿಲ್ಲ. ಇಂತಹ ಸ್ವರೂಪವಾದ ಪರಮಾತ್ರಕ್ಕೆ ನಾವು ವಂದಿಸುತ್ತೇವೆ. ಜಗತ್ತಿನ ಮೂಲ ಬ್ರಹ್ಮನು. ಅವನಿಗೂ ಸಹ ಮೂಲಪುರುಷ ನಾಗಿರುವಿ. ನೀನು ರೋಗನಾಶಕನು, ರಾಕ್ಷಸರಿಗೆ ಸಿಂಹಸ್ವಪ್ನನು ಮೇಲಾಗಿ ಪಾಪನಾಶಕನು. ಸರ್ವರೋಗ ನಾಶಕನಾದ ನಿನಗೆ ಅನಂತ ವಂದನೆಗಳು. ಭಕ್ತಿಭಾವದಿಂದ ಪೂಜಿಸಿದರೆ, ಸಕಲ ವರಗಳನ್ನು ನೀಡುವ ದಯಾಳು ನೀನು. ಸಕಲ ಸಂಪತ್ತು, ಸದ್ಬುದ್ಧಿ, ಸಿರಿಸಂಪದ, ಆಯುರಾರೋಗ್ಯ, ಭೋಗಭಾಗ್ಯಗಳನ್ನು ಅನುಗ್ರಹ ಮಾಡುವ ನಿನಗೆ ವಂದನೆಗಳು.

ಈ ರೀತಿಯಾಗಿ ಅನನ್ಯ ಭಕ್ತಿಭಾವದಿಂದ ತೇಜೋರೂಪಿ ಸೂರ್ಯನನ್ನು ಸ್ತುತಿಸಲು ಪ್ರಸನ್ನನಾಗಿ ದೇವತೆಗಳಿಗೆ 'ನಿಮಗೆ ಯಾವ ವರ ಅನುಗ್ರಹಿಸಲಿ' ಎಂದು ಕೇಳಿದಾಗ ದೇವತೆಗಳು 'ಓ ಸ್ವಾಮಿಯೇ, ಜಗತ್ತಿನ ಹಿತಕ್ಕಾಗಿ ನಿನ್ನ ರೂಪವನ್ನು ಎಲ್ಲರೂ ನೋಡುವಂತೆ ಸೌಮ್ಯ ಹಾಗೂ ಸಹಜ ಸುಂದರ ರೂಪವನ್ನು ಪ್ರದರ್ಶಿಸುವ ಮೂಲಕ ಅನುಗ್ರಹ ತೋರು'' ಎಂದು ಪ್ರಾರ್ಥಿಸಲು, ಲೋಕದ ಆದಿಕರ್ತನೂ ಮಳೆ, ಬಿಸಿಲು, ಹಿಮವನ್ನು ಉಂಟುಮಾಡುವ ಸರ್ವಶಕ್ತನು ಲೋಕಕ್ಷೇಮಕ್ಕಾಗಿ ಹಾಗೆ ಮಾಡಲು ಸಮ್ಮತಿಸಿದನು.

ಸೂರ್ಯನ ಉಪಾಸನೆಯು ಮಹಾಫಲಕಾರಿಯಾಗಿದೆ, ಶ್ರೇಯಸ್ಕರವಾಗಿದೆ. ಇದಕ್ಕಾಗಿಯೇ ಸಾಂಖ್ಯರು, ಯೋಗಿಗಳು, ಜ್ಞಾನಿಗಳು, ಮೋಕ್ಷಾಭಿಲಾಷಿಗಳು ಅಂತರಂಗದಲ್ಲಿ ಸದಾ ಸೂರ್ಯನ ಧ್ಯಾನ ನಿಮಗ್ನರಾಗಿರುತ್ತಾರೆ. ಸೂರ್ಯನಿಗೆ ಶರಣಾಗಿ ನಿತ್ಯ ಧ್ಯಾನಮಾಡುವವನು ಸಕಲ ಪಾಪಗಳಿಂದ ಮುಕ್ತನಾಗುತ್ತಾನೆ. ಅಗ್ನಿಹೋತ್ರ, ವೇದಗಳು, ಸೂರ್ಯನನ್ನು ಕುರಿತು ಮಾಡುವ ಭಕ್ತಿ ಹಾಗೂ ಅದರಿಂದ ಬರುವ ಲಾಭಕ್ಕೆ ಸರಿತೂಗಲಾರವು. ನಿಜವಾಗಿಯೂ ಸೂರ್ಯನು ತೀರ್ಥಗಳಲ್ಲಿಯೇ ಸರ್ವಶ್ರೇಷ್ಠನು, ಮಂಗಳಕಾರಕನು. ಪವಿತ್ರ ವಸ್ತು ಅಥವಾ ಕ್ಷೇತ್ರಗಳಲ್ಲಿಯೇ ಮಿಗಿಲಾದವನು, ಅದಕ್ಕಾಗಿ ಇಂತಹ ಸರ್ವಶ್ರೇಷ್ಠ ಮಹಾಪುರುಷನಾದ ಸೂರ್ಯನನ್ನೇ ಜ್ಞಾನಿಗಳು ಹೆಚ್ಚಾಗಿ ಉಪಾಸನೆಮಾಡುತ್ತಾರೆ. ಅಷ್ಟೇ ಏಕೆ ದೇವರ ದೇವನಾದ ಇಂದ್ರನೂ ಸಹ ಭಾಸ್ಕರನನ್ನು ನಿತ್ಯ ಧ್ಯಾನಿಸುತ್ತಾನೆ. ಅಂದಮೇಲೆ ಮಾನವರು ಸೂರ್ಯನನ್ನು ನಮಸ್ಕಾರ, ಪೂಜೆ, ವ್ರತಗಳಿಂದ ಪ್ರಸನ್ನೀಕರಿಸಿಕೊಳ್ಳುವದು ಇಹ ಪರ ಸುಖದ ಸಾಧನವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಸೂರ್ಯೋಪಾಸಕನು ಮರಣಾನಂತರ ಖಂಡಿತವಾಗಿ ಸೂರ್ಯಲೋಕ ಪಡೆದು ಕಲ್ಪಾಂತರ ಕಾಲ ಸುಖಿಸುವನು.

ಋಷಿ ಸುಕುಲವು ಬ್ರಹ್ಮನನ್ನು ಕುರಿತು ''ಬ್ರಹ್ಮನೇ, ಇದುವರೆಗೆ ನಾವು ಸೂರ್ಯನ ನೂರೆಂಟು ನಾಮಾಂಕಿತಗಳನ್ನು ಕೇಳಲು ಕಾತರಗೊಂಡಿರುತ್ತೇವೆ. ಇದೀಗ ನೀನು ವಿವರಿಸಿ ಹೇಳಬೇಕು'' ಎನ್ನಲು ಬ್ರಹ್ಮನು ಅವರ ಮಾತಿಗೆ ಹರ್ಷಚಿತ್ತನಾಗಿ ಸೂರ್ಯನ ನೂರೆಂಟು

ಹೆಸರುಗಳನ್ನು ಕೇಳಲು ನೀವು ಕುತೂಹಲಿಯಾಗಿರುವದು ಸಂತೋಷಕಾರಕ. ಇರಲಿ, ಈಗ ನಿಮ್ಮ ಇಚ್ಛೆಯಂತೆ ಸೂರ್ಯನ ನೂರೆಂಟು ಹೆಸರುಗಳನ್ನು ಹೇಳುವೆನು, ಕೇಳಿರಿ. ಈ ನೂರೆಂಟು ಹೆಸರುಗಳನ್ನು ಸ್ತೋತ್ರ ರೂಪವಾಗಿ ಪಠಿಸುವ ಪರಿಪಾಠವೂ ಉಂಟು. ಈ ದಿವ್ಯ ಸ್ತೋತ್ರ ಮಹಿಮಾ ಪೂರಿತವಾಗಿದ್ದು, ಆಸಕ್ತಿಯಿಂದ ಆಲಿಸಿರಿ'' ಎಂದು ವಿವರಿಸತೊಡಗಿದನು.

॥ ಬ್ರಹ್ಮೋವಾಚ ॥

ಓಂ ಸೂರ್ಯೋಽರ್ಯಮಾ ಭಗಸ್ತ್ವಷ್ಟಾ ಪೂಷಾಽರ್ಕಃ ಸವಿತಾ ರವಿಃ ।
ಗಭಸ್ತಿಮಾನಜಃ ಕಾಲೋ ಮೃತ್ಯುರ್ಧಾತಾ ಪ್ರಭಾಕರಃ ॥

ಪೃಥಿವ್ಯಾಪಶ್ಚ ತೇಜಶ್ಚ ಖಂ ವಾಯುಶ್ಚ ಪರಾಯಣಂ ।
ಸೋಮೋ ಬೃಹಸ್ಪತಿಃ ಶುಕ್ರೋ ಬುಧೋಽಙ್ಗಾರಕ ಏವ ಚ ।
ಇಂದ್ರೋ ವಿವಸ್ವಾನ್ ದೀಪ್ತಾಂಶುಃ ಶುಚಿಃ ಶೌರಿಃ ಶನೈಶ್ಚರಃ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸ್ಕಂದೋ ವೈಶ್ರವಣೋ ಯಮಃ ॥

ವೈದ್ಯುತೋ ಜಾಠರಶ್ಚಾಗ್ನಿರೈಂಧನಸ್ತೇಜಸಾಂ ಪತಿಃ ।
ಧರ್ಮಧ್ವಜೋ ವೇದಕರ್ತಾ ವೇದಾಂಗೋ ವೇದವಾಹನಃ ॥

ಕೃತಂ ತ್ರೇತಾ ದ್ವಾಪರಶ್ಚ ಕಲಿಃ ಸರ್ವಾದಿರಾಶ್ರಯಃ ।
ಕಾಲಾಕಾಷ್ಠಾ ಮುಹೂರ್ತಾಶ್ಚಕ್ಷ ಪಾಯಮಾಸ್ತಥಾಕ್ಷಣಾಃ ॥

ಸಂವತ್ಸರಕರೋಽಶ್ವತ್ಥಃ ಕಾಲಚಕ್ರೋ ವಿಭಾವಸುಃ ।
ಪುರುಷಃ ಶಾಶ್ವತೋ ಯೋಗೀ ವ್ಯಕ್ತಾವ್ಯಕ್ತ ಸನಾತನಃ ॥

ಕಾಲಾಧ್ಯಕ್ಷಃ ಪ್ರಜಾಧ್ಯಕ್ಷೋ ವಿಶ್ವಕರ್ಮಾ ತಮೋನುದಃ ।
ವರುಣಃ ಸಾಗರೋಂ ಶಶ್ಚ ಜೀಮೂತೇ ಜೀವರೋಽರಿಹಾ ॥

ಭೂತಾಶ್ರಯೋ ಭೂತಪತಿಃ ಸರ್ವಲೋಕನಮಸ್ಕೃತಃ ।
ಸ್ರಷ್ಟಾ ಸಂವರ್ತಕೋ ವಹ್ನಿಃ ಸರ್ವಸ್ಯಾದಿರಲೋಲುಪಃ ॥

ಅನಂತಕಪಿಲೋ ಭಾನುಃ ಕಾಮದಃ ಸರ್ವತೋಮುಖಃ ।
ಜಯೋ ವಿಶಾಲೋ ವರದಃ ಸರ್ವಭೂತನಿಷೇವಿತಃ ॥

ಮನಃ ಸುಪರ್ಣೋ ಭೂತಾದಿಃ ಶೀಘ್ರಗಃ ಪ್ರಾಣಧಾರಣಃ ।
ಧನ್ವಂತರಿರ್ಧೂಮಕೇತುರಾದಿವೋಽದಿತೇಃ ಸುತಾಃ ॥

ದ್ವಾದಶಾತ್ಮಾರವಿರ್ದಕ್ಷಃ ಪಿತಾ, ಮಾತಾ, ಪಿತಾಮಹಃ ।
ಸ್ವರ್ಗದ್ವಾರಂ ಪ್ರಜಾದ್ವಾರಂ ಮೋಕ್ಷದ್ವಾರಂ ತ್ರಿವಿಷ್ಟಪಂ ॥

ದೇಹಕರ್ತಾ ಪ್ರಶಾಂತಾತ್ಮಾ ವಿಶ್ವಾತ್ಮಾ ವಿಶ್ವತೋಮುಖಃ ।
ಚರಾಚರಾತ್ಮಾ ಸೂಕ್ಷ್ಮಾತ್ಮಾಯ ಮೈತ್ರೇಃ ಕರುಣಾನ್ವಿತಃ ॥

ಏತದ್ವೈ ಕೀರ್ತನೀಯಸ್ಯ ಸೂರ್ಯಸ್ಯಾಮಿತತೇಜಸಃ ।
ನಾಮ್ನಾಂ ಅಷ್ಟಮಶತಂ ರಮ್ಯಂ ಮಯಾ ಪ್ರೋಕ್ತಂ ದ್ವಿಜೋತ್ತಮಾಃ ॥

ಸುರಗಣ ಯಕ್ಷ ಸೇವಿತಂ ಹ್ಯಸುರನಿರಾಕರ ಸಿದ್ಧವಂದಿತಂ ।
ವರಕನಕ ಹುತಾಶನ ಪ್ರಭಂ ಪ್ರಣಿಪತಿತೋSಸ್ಮಿ ಹಿತಾಯ ಭಾಸ್ಕರಂ ॥

ಸೂರ್ಯೋದಯೆ ಯಃ ಸುಸಮಾಹಿತಃ ಪಠೇತ್ಸ ಪುತ್ರದಾರಾನ್ ಧನರತ್ನ ಸಂಚಯಾನ್ ।
ಲಭೇತ್ ಜಾತಿ ಸ್ಮರತಾಂ ನರಃ ಸತುಸ್ಮೃತಿ ಚಮೇಧಾಂ ಚ ಸ ವಿಂದತೇ ಪರಾಂ ॥

ಇಮಂ ಸ್ತವಂ ದೇವವರಸ್ಯ ಯೋ ನರಃ ಪ್ರಕೀರ್ತಯೇಚ್ಛುದ್ಧಮನಾಃ ಸಮಾಹಿತಃ ।
ವಿಮುಚ್ಯತೇ ಶೋಕವಾಗ್ನಿ ಸಾಗರಾಲ್ಲಭೇತ್ ಕಾಮಾನ್ಮನಸಾಯಥೇಪ್ಸಿತಾನ್ ॥

ಸೂರ್ಯ, ಅರ್ಯಮಾ, ಭಗ, ತ್ವಷ್ಟಾ, ಪೂಷಾ, ಅರ್ಕ, ಸವಿತಾ, ರವಿ, ಗಭಸ್ತಿಮಾನ್, ಅಜ, ಕಾಲ, ಮತ್ಯು, ಧಾತ್ರ, ಪ್ರಭಾಕರ, ಪೃಥವಿ, ಆಪ, ತೇಜ, ಖ, ವಾಯು, ಪರಾಯಣ, ಸೋಮ, ಬೃಹಸ್ಪತಿ, ಶುಕ್ರ, ಬುಧ, ಅಂಗಾರಕನೆಂಬುದಾಗಿ ಸೂರ್ಯನ ಹೆಸರುಗಳಿವೆ. ಅಲ್ಲದೆ ಅವನ ಮಹಿಮೆಯನ್ನು ಸಾರುವಂತಹ ಇಂದ್ರ, ವಿವಸ್ವಾನ್, ದೀಪ್ತಾಂಶು, ಶುಚಿ, ಶೌರಿ, ಶನೈಶ್ಚರ, ಬ್ರಹ್ಮ, ವಿಷ್ಣು, ರುದ್ರಸ್ಕಂದ, ವೈಶ್ರವಣ, ಯಮ ಮುಂತಾದ ನಾಮಧೇಯಗಳೂ ಉಂಟು. ಇದಲ್ಲದೆ ಸೂರ್ಯನನ್ನು ವೈದ್ಯುತ, ಜಾಠರಾಗ್ನಿ, ಐಂಧನ, ತೇಜಃಪತಿ, ಧರ್ಮಧ್ವಜ, ವೇದಕರ್ತಾ, ವೇದಾಂಗ, ವೇದವಾಹನ, ಕೃತ, ತ್ರೇತಾ, ದ್ವಾಪರ, ಕಲಿ, ಸರ್ವಾಮರಾಶ್ರಯನೆಂದು ಕರೆಯುತ್ತಾರೆ. ಇದರಂತೆ ಸೂರ್ಯನನ್ನು ಕಾಲಸೂಚಕ ನೆನ್ನುವ ಅರ್ಥದಲ್ಲಿ ಕಲಾ, ಕಾಷ್ಠಾ, ಮುಹೂರ್ತ, ಕ್ಷಪಾ, ಯಾಮ, ಕ್ಷಣ, ಸಂವತ್ಸರಕರ, ಅಶ್ವತ್ಥ, ಕಾಲಚಕ್ರ, ವಿಭಾವಸು ಪುರುಷ, ಶಾಶ್ವತ, ಯೋಗಿ, ವ್ಯಕ್ತಾವಕ್ತ, ಸನಾತನ ನೆಂದಲ್ಲದೆ ಅವನನ್ನು ಕಾಲಾಧ್ಯಕ್ಷ ಪ್ರಜಾಧ್ಯಕ್ಷನೆಂದೂ ಕರೆಯುತ್ತಾರೆ.

ಇದೇ ರೀತಿಯಾಗಿ ಸೂರ್ಯನನ್ನು ವಿಶ್ವಕರ್ಮಾ, ತಮೋನುದ, ವರುಣ, ಸಾಗರಾಂಶ, ಜೀಮೂತ, ಜೀವನ, ಅರಿಹಾ, ಭೂತಾಶ್ರಯ, ಭೂತಪತಿ, ಸರ್ವಲೋಕ, ನಮಸ್ಕೃತ, ಸ್ರಷ್ಟಾ, ಸಂವರ್ತಕ, ವಹ್ನಿ, ಸರ್ವಾದಿ, ಅಲೋಲುಪ, ಅನಂತ, ಕಪಿಲ, ಭಾನು, ಕಾಮದ, ಸರ್ವತೋ ಮುಖ, ಜಯ, ವಿಶಾಲ, ವರದ, ಸರ್ವಭೂತನಿಷೇವಿತ ಎಂದೂ ಸಂಬೋಧಿಸುತ್ತಾರೆ. ಸೂರ್ಯನು ಪ್ರಾಣಾಧಾರಕನೆಂಬುದನ್ನು ವರ್ಣಿಸುತ್ತ ಅವನನ್ನು ಮನ, ಸುಪರ್ಣ, ಭೂತಾದಿ, ಶೀಘ್ರಗ, ಪ್ರಾಣಧಾರಣ, ಧನ್ವಂತರಿ, ಧೂಮಕೇತು, ಆದಿದೇವ, ಅದಿತಿಸುತ, ದ್ವಾದಶಾತ್ಮಾ, ರವಿ, ದಕ್ಷ, ಪಿತೃ, ಮಾತೃವೆಂದೂ ಕರೆಯುತ್ತಾರಲ್ಲದೆ ಅವನು ಸರ್ವಲೋಕಕ್ಕೆ ಒಡೆಯನೆಂಬುದನ್ನು ವಿವರಿಸಲು ಪಿತಾಮಹ, ಸ್ವರ್ಗದ್ವಾರ, ಪ್ರಜಾದ್ವಾರ, ಮೋಕ್ಷದ್ವಾರ, ತ್ರಿವಿಷ್ಟಪ, ದೇಹಕರ್ತೃ, ಪ್ರಶಾಂತಾತ್ಮಾ, ವಿಶ್ವಾತ್ಮಾ, ವಿಶ್ವತೋಮುಖ, ಚರಾಚರಾತ್ಮಾ, ಸೂಕ್ಷ್ಮಾತ್ಮಾ, ಮೈತ್ರೇಯ, ಕರುಣಾನ್ವಿತ ಮುಂತಾದ ನೂರೆಂಟು ಹೆಸರುಗಳಿಂದ ಅವನನ್ನು ಸ್ತುತಿಮಾಡುತ್ತಾರೆ. ಈ ನೂರೆಂಟು ಹೆಸರುಗಳನ್ನು ಆಧರಿಸಿ "ಸೂರ್ಯಅಷ್ಟೋತ್ತರಶತನಾಮ ಸ್ತೋತ್ರ"ವನ್ನು ಜ್ಞಾನಿಗಳು ನಿತ್ಯ ಪಾರಾಯಣ ಮಾಡುತ್ತಾರೆ. ಈ ಸ್ತೋತ್ರವು ಅತ್ಯಂತ ರಹಸ್ಯವಾದದ್ದಿದ್ದು ಸರ್ವಶ್ರೇಷ್ಠ ಫಲವೀಯುವ ಕಲ್ಪವೃಕ್ಷವೆನಿಸಿದೆ. ಸುವರ್ಣಮಯ ವರ್ಣರೂಪಧಾರಿಯೂ ಅಗ್ನಿಯಂತೆ ಪ್ರಭೆಯುಳ್ಳ ಈ ಸೂರ್ಯನು ಸದಾಕಾಲವೂ ದೇವ, ಪಿತೃ, ಯಕ್ಷರಲ್ಲದೆ ಅಸುರರು ಸಿದ್ಧರಿಂದಲೂ ವಂದಿಸಲ್ಪಡು ತ್ತಿರುವನು. ಇಂತಹ ಲೋಕಾಧ್ಯಕ್ಷನಾದ ಸೂರ್ಯದೇವನಿಗೆ ನನ್ನ ನಮಸ್ಕಾರ.

ಸೂರ್ಯೋದಯ ಕಾಲದಲ್ಲಿ ಈ ಅಷ್ಟೋತ್ತರವನ್ನು ಭಕ್ತಿಯಿಂದ ಪಠಣ ಮಾಡಿದರೆ ಸುಂದರ ಹೆಂಡತಿಯನ್ನೂ, ಒಳ್ಳೆಯ ಮಕ್ಕಳನ್ನೂ ಪಡೆಯುವನಲ್ಲದೆ ಸರ್ವ ಸಂಪತ್ತು, ಸುಖಭೋಗಗಳೂ ಲಭಿಸುತ್ತವೆ. ದೇವದೇವೋತ್ತಮನಾದ ಈ ಸೂರ್ಯನಾರಾಯಣನನ್ನು ಅಷ್ಟೋತ್ತರನಾಮಸ್ತೋತ್ರದಿಂದ ಜಪ, ತಪ, ಧ್ಯಾನ, ಸಂಕೀರ್ತನೆ ಮಾಡಿದವನು ಸಂಸಾರದ ಸಕಲ ಕ್ಲೇಶಗಳಿಂದ ಮುಕ್ತಿ ಹೊಂದುವನು. ಅವನ ಸಕಲ ಇಷ್ಟಾರ್ಥಗಳು ಶೀಘ್ರದಲ್ಲಿ ನೆರವೇರುತ್ತವೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹನ್ನೆರಡನೆಯ ಅಧ್ಯಾಯ ಮುಗಿದುದು*

—o—

## ಸ್ವಯಂಭೂ ಋಷಿ ಸಂವಾದ

ಅಧ್ಯಾಯ - ೧೩

**ಚತುರ್ಮುಖ:-** ಅದುವರೆಗೆ ಆಸಕ್ತಿಯಿಂದ ಆಲಿಸುತ್ತ ಕುಳಿತ ಮುನಿಗಳಿಗೆ ನುಡಿದ ಹಿಂದೊಮ್ಮೆ ದಕ್ಷಬ್ರಹ್ಮನು ಬೃಹತ್ ಪ್ರಮಾಣದಲ್ಲಿ ಅತ್ಯಂತ ವೈಭವಪೂರ್ಣವಾದ ಮಹಾಯಜ್ಞ ನೆರವೇರಿಸಿದ. ಅಂದಿನ ಆ ಯಜ್ಞಸಮಾರಂಭಕ್ಕೆ ಸಮಸ್ತ ದೇವಾನುದೇವತೆಗಳು, ಸಿದ್ಧ, ವಿದ್ಯಾಧರ, ಯಕ್ಷ, ಗಂಧರ್ವ, ಕಿನ್ನರ ಕಿಂಪುರುಷಾದಿಯಾಗಿ ಆಗಮಿಸಿದ್ದರು. ಗಣನೀಯ ಪ್ರಮಾಣದಲ್ಲಿ ಋಷಿ, ಮುನಿಗಣವೂ ಯಜ್ಞ ಸಮಾರಂಭದಲ್ಲಿ ಪಾಲುಗೊಂಡಿದ್ದರು. ಯಜ್ಞ, ಕಾರ್ಯಕಲಾಪಗಳು ವಿಧಿಯುಕ್ತವಾಗಿ ನೆರವೇರುತ್ತಲಿದ್ದವು. ವೇದಪಠನ, ಮಂತ್ರಪಠನಗಳು, ದಶದಿಕ್ಕುಗಳಲ್ಲಿ ಘಂಟಾರವದೊಂದಿಗೆ ಮಾರ್ದನಿಸುತ್ತಿದ್ದವು. ಪರಿಮಳಯುಕ್ತವಾದ ಯಜ್ಞದ ಧೂಮವೆಲ್ಲ ಸುತ್ತಲ ಪರಿಸರವನ್ನೆಲ್ಲ ವ್ಯಾಪಿಸಿತ್ತು. ಹೀಗೆ ಯಜ್ಞದ ಕಾರ್ಯಕ್ರಮಗಳು ವಿಜೃಂಭಣೆಯಿಂದ ನಡೆದಿರುವಾಗ ಅನಿರೀಕ್ಷಿತವಾಗಿ ಮಹಾದೇವನು ಯಜ್ಞ ಸಮಾರಂಭವನ್ನೆಲ್ಲ ಧ್ವಂಸಗೊಳಿಸಲು ತನ್ನ ಅಸಂಖ್ಯ ಗಣಗಳೊಡನೆ ಭೀಕರ ದಾಳಿಮಾಡಿದ. ಶಾಂತಿ ಸುವ್ಯವಸ್ಥೆಯಿಂದ ನಡೆಯುತ್ತಿದ್ದ ಯಜ್ಞ ಸಮಾರಂಭ ಹಾಹಾಕಾರದಿಂದ ರಣರಂಗವಾಯಿತು. ಪರಶಿವನು ಕೋಪಾಟೋಪದಲ್ಲಿ ಯಜ್ಞಮಂಟಪವೆಲ್ಲಾ ಧೂಳಿಪಟ ಮಾಡಿ, ಸಾಧನ, ಸಲಕರಣೆಗಳನ್ನೆಲ್ಲಾ ಎಸೆದು ಚೆಲ್ಲಾಪಿಲ್ಲಿಗೊಳಿಸಿದ. ಪ್ರಶಾಂತನೂ, ಪರಮಮಂಗಲಕರನೂ ಆದ ಸದಾಶಿವನು ಇಂದು ಪ್ರಳಯರುದ್ರನಾಗಿದ್ದನ್ನು ಕಂಡು ಸಮಸ್ತ ದೇವಾಧಿದೇವತೆಗಳೂ ತತ್ತರಿಸಿದರು, ಕಂಗೆಟ್ಟು ಹೋದರು.

ಶಂಕರನ ಪ್ರತಾಪ, ಕೋಪದಿಂದ ಇಂದ್ರಾದಿ ದೇವತೆಗಳು ಕೊನೆಗೂ ಅವನಿಗೇ ಮೊರೆಹೊಕ್ಕರು. ಅವನ ಮಹಿಮೆಯನ್ನು ಹಲವು ರೀತಿಯಿಂದ ಕೊಂಡಾಡಿದರು. ಭಯಭಕ್ತಿಯಿಂದ ಏಕಕಂಠದಲ್ಲಿ ಶಿವಮಹಿಮೆ ಸಾರುವ ಸ್ತೋತ್ರಗಳನ್ನು ಹಾಡಿದರು. ಕ್ರಮೇಣ ಅವನ ಪ್ರಚಂಡ ಕೋಪ, ತಾಪ, ತಗ್ಗುತ್ತ, ತಣ್ಣಗಾಗುತ್ತ ಹೋಯಿತು.

ಈ ರೀತಿಯಾಗಿ, ದಕ್ಷನ ಮಹಾಯಜ್ಞವನ್ನೇ ಕೋಪಾವೇಶದ ಭರದಲ್ಲಿ ತುಳಿದು ಧ್ವಂಸಮಾಡಿದ ಮಹೇಶ್ವರನು ನಂದಿವಾಹನನಾಗಿ, ಕೈಗಳಲ್ಲಿ ತ್ರಿಶೂಲ, ಪಿನಾಕಗಳನ್ನು ಹಿಡಿದು ನಿಂತು ಪವಿತ್ರವಾದ ಏಕಾಮ್ರ ಕ್ಷೇತ್ರದಲ್ಲಿ ನೆಲೆಸಿದ್ದಾನೆ. ಭಕ್ತರ ಅಭೀಷ್ಟಗಳನ್ನು ಬಿಡದೇ ಪೂರೈಸುವ ಕಾಮಧೇನು ಸ್ವರೂಪನಾಗಿದ್ದಾನೆ.

ಮುನಿಗಳು ಬ್ರಹ್ಮನನ್ನು ಕುರಿತು ಪ್ರಶ್ನಿಸುತ್ತಾರೆ. ದಕ್ಷಯಜ್ಞ ಧ್ವಂಸಮಾಡಿದ ಸದಾಶಿವನು ಅಷ್ಟು ಕೋಪೋದ್ರಿಕನಾಗಿ ದಾಳಿಮಾಡಲು ಕಾರಣವೇನು? ದೇವದೇವನಾದ ಶಿವನೇ ಸ್ವತಃ ದೇವತೆಗಳಿಂದ ಅಲಂಕೃತವಾಗಿದ್ದ ಯಜ್ಞ ಹಾಳುಗೆಡವಲು ಮುಂದಾಳತ್ವ ವಹಿಸಬೇಕಾದರೆ ಅದಕ್ಕೊಂದು ಬಲವಾದ ಕಾರಣವಿರಬೇಕು ಅಲ್ಲವೆ?

ಅವರ ಮಾತು ಕೇಳುತ್ತ ಚತುರಾನನ ನುಡಿದ-ನಿಜ, ಅದಕ್ಕೆ ಕಾರಣವೂ ಇದೆ. ದಕ್ಷನ ಮೇಲೆ ಶಿವನು ಇಷ್ಟು ಕೋಪಾವಿಷ್ಟನಾಗಲು ಹಿಂದೆ ದಕ್ಷ-ಶಿವರಲ್ಲಿ ಸೇಡಿನ, ವೈರತ್ವದ ಮನೋಭಾವನೆಯ ಬೀಜ ಮೊಳೆತು ಬೆಳೆದದ್ದೇ ಕಾರಣ. ದಕ್ಷಬ್ರಹ್ಮನಿಗೆ ಎಂಟು ಜನ ಹೆಣ್ಣು ಮಕ್ಕಳು. ಅವರನ್ನೊಮ್ಮೆ ತಂದೆಯು ಅವರವರ ಗಂಡಂದಿರೊಡನೆ ತನ್ನ ಮನೆಗೆ ಕರೆಸಿ ಸತ್ಕರಿಸಿದ್ದ. ಆದರೆ ಹಿರಿಯ ಮಗಳಾದ ಸತೀದೇವಿಯನ್ನು ಕರೆಕಳುಹಿಸದೇ ಕಡೆಗಣಿಸಿದ. ಇದಕ್ಕೆ ಮಗಳ ಮೇಲಿನ ತಾತ್ಸಾರಕ್ಕಿಂತ ಅಳಿಯನಾದ ಮಹಾದೇವನ ಮೇಲೆ ಮತ್ಸರಪೂರಿತ ವೈರವೇ ಕಾರಣ. ಆ ದಕ್ಷಬ್ರಹ್ಮ ಶಿವನ ಮೇಲೆ ದ್ವೇಷವನ್ನು ಸಾಧಿಸಲಿಕ್ಕಾಗಿಯೇ ಈ ಕುತಂತ್ರ ಹೂಡಿದ್ದ. ಅವರ ಈ ವೈರಭಾವನೆಗೂ ಒಂದು ಸಣ್ಣ ಕಾರಣವಿದೆ. ಹಿಂದೊಮ್ಮೆ ಶಂಕರನು ಮಾವನಾದ ದಕ್ಷನಿಗೆ ನಮಸ್ಕರಿಸಲಿಲ್ಲ. ಅದು ತನಗೆ ಅಪಮಾನವೆಂದು ಭಾವಿಸಿ ದಕ್ಷ ಮನದಲ್ಲಿ ಬಿಗುಮಾನ ತಾಳಿದ. ಹೀಗಾಗಿ ಅಳಿಯನಾದ ಶಂಕರನ ಮೇಲೆ ದಕ್ಷನಿಗೆ ಹಿಡಿಸಲಾರದಷ್ಟು ಸಿಟ್ಟು ಹಾಗೂ ಒಂದು ರೀತಿಯ ಸೇಡು. ಈ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿಯೇ ಹಿರಿಯ ಮಗಳಾದ ಸತಿಯನ್ನೂ ಅವಳ ಪತಿಶಂಕರನನ್ನೂ ಯಜ್ಞಕ್ಕೆ ಬರಲು ಆಮಂತ್ರಣ ಕಳಿಸಿರಲಿಲ್ಲ. ಸತೀದೇವಿಯು ತನ್ನ ತಂಗಿಯರೆಲ್ಲರೂ ತಂದೆಯ ಮನೆಗೆ ಹೋಗಿರುವದನ್ನು ತಿಳಿದು, ತಂದೆ ಕರೆಯದಿದ್ದರೂ ತವರು ಮನೆಯ ಮೋಹದಿಂದ ತಾನಾಗಿಯೇ ಹೋದಳು. ಆದರೆ ತಂದೆಯ ಮನೆಯಲ್ಲಿ ಸತೀಗೆ ಉಳಿದ ತಂಗಿಯರಿಗೆ ದೊರೆತ ಆದರ ಸತ್ಕಾರಗಳು ದೊರಕಲಿಲ್ಲ. ತನ್ನ ಮೇಲೆ ತಂದೆಯ ವಾತ್ಸಲ್ಯ, ಪ್ರೀತಿಗಳು ಕಡಿಮೆಯಾಗಿರುವದನ್ನು ಕಂಡುಕೊಂಡು ಮಿಡುಕಿದಳು ಸತೀದೇವಿ. ತಾನು ಹುಟ್ಟಿದ ಮನೆಯಲ್ಲಿಯೇ ತನಗೆ ವಿನಾಕಾರಣ ಅನಾದರ ತೋರಿದ ತಂದೆಯನ್ನು ಒಂದು ದಿನ ಕೇಳಿದಳು; ನಾನು ನಿನ್ನ ಮಕ್ಕಳಲ್ಲಿ ಹಿರಿಯಳು, ಹಾಗೂ ಶ್ರೇಷ್ಠಳು. ಉಳಿದ ತಂಗಿಯರಿಗೆ ಇರುವಷ್ಟು ಆದರ, ಗೌರವ ನನಗೇಕಿಲ್ಲ? ನನಗೆ ಈ ರೀತಿ ಅನಾದರ ತೋರಿ ಅಪಮಾನ ಮಾಡುವ ಉದ್ದೇಶ, ಅಥವಾ ಅಗತ್ಯವಾದರೂ ಏನು?

ದಕ್ಷ ಸತಿಯ ಮೇಲೆ ಕೆರಳಿ, ಕೋಪೋದ್ರಿಕ್ತ ಸ್ವರದಲ್ಲಿ ನುಡಿದ. ನಿನಗಿಂತಲೂ ನಿನ್ನ ತಂಗಿಯರು, ನನಗೆ ಶ್ರೇಷ್ಠರೂ, ಪೂಜ್ಯರೂ ಆಗಿರುವರು. ಅವರಂತೆ ಅವರವರ ಗಂಡಂದಿರೂ ಸಹ. ನನ್ನ ದೃಷ್ಟಿಯಲ್ಲಿ, ನಿನ್ನ ಗಂಡನನ್ನು ಹೊರತುಪಡಿಸಿ, ಉಳಿದವರ ಗಂಡಂದಿರು ಬ್ರಹ್ಮಜ್ಞಾನಿಗಳು, ಯೋಗಿಗಳು, ತಪಸ್ವಿಗಳು, ಗುಣಶಾಲಿಗಳೂ ಕೂಡ; ಅಷ್ಟೇ ಅಲ್ಲ, ಆ ನಿನ್ನ ಪತಿ ಶಂಕರನಿಗಿಂತಲೂ ಎಷ್ಟೋ ಪಾಲು ವಾಸಿ.

ಸತಿಯು ಮಾತನಾಡದೇ ತಂದೆಯ ಮಾತು ಆಲಿಸುತ್ತಿದ್ದಳು. ಮತ್ತೆ ದಕ್ಷ ಸಿಟ್ಟಿನ ಸ್ವರದಲ್ಲಿ ನುಡಿದನು. ವಶಿಷ್ಠ, ಪುಲಸ್ತ್ಯ, ಅಂಗಿರಸ, ಪುಲಹ, ಕೃತು, ಭೃಗು,' ಮರೀಚಿ ಮುನಿಗಳೆಲ್ಲ ನಿನ್ನ ತಂಗಿಯರ ಗಂಡಂದಿರು ನಿನ್ನ ಗಂಡನಿಗಿಂತಲೂ ಸಾವಿರ ಪಾಲು ಉತ್ತಮ. ನಯವಾದ ನಡೆನುಡಿ ಉಳ್ಳವರು, ಅಂತೆಯೇ ನನ್ನ ದೃಷ್ಟಿಯಲ್ಲಿ ಅವರು ಶ್ರೇಷ್ಠರಾಗಿದ್ದಾರೆ.

ಆದರೆ ನೋಡು, ನಿನ್ನ ಗಂಡನಾದ ಶಿವನ ವರ್ತನೆ ನನಗೆ ಸರಿಬರದು, ಅವನದು ಬರೀ ವಕ್ರನಡೆ ನುಡಿ, ಅಷ್ಟೇ ಅಲ್ಲ, ಶ್ರೇಷ್ಠ ಗುಣಮಟ್ಟದ ನನ್ನ ಇನ್ನುಳಿದ ಅಳಿಯಂದಿರೊಡನೆ ಸ್ಪರ್ಧೆಮಾಡುತ್ತಾನೆ. ಮೇಲಾಗಿ ನಿನ್ನ ಪತಿ ನನಗೆ ವಿರುದ್ಧವಾಗಿ ಶತ್ರುವಿನಂತೆ, ವೈರತ್ವ ಸಾಧಿಸುತ್ತಿದ್ದಾನೆ. ಆದಕ್ಕಾಗಿ ನಿನ್ನನ್ನು ನಾನು ಗೌರವಾದರದಿಂದ ನೋಡುವದು ಸಾಧ್ಯವಿಲ್ಲದ ಮಾತು.

ತಂದೆಯ ದುರಾಗ್ರಹಪೂರಿತ ಮಾತು ಕೇಳಿ ಸತೀದೇವಿಯು ನಿಷ್ಠುರವಾಗಿ ನುಡಿದಳು. ನೀನು ಬಲ್ಲೆ, ನಾನು ಯಾವಾಗಲೂ ತ್ರಿಕರಣಪೂರ್ವಕವಾಗಿ ಪರಿಶುದ್ಧಳು. ನಿನ್ನ ವಿಷಯದಲ್ಲಿ ನಾನೆಂದೂ ಕನಸುಮನಸಿನಲ್ಲಿಯೂ ಕೇಡು ಬಯಸಿದವಳಲ್ಲ. ಇಂತಹ ನನ್ನನ್ನು ನಿಂದಿಸುತ್ತಿರುವೆ; ಅವಮಾನಪಡಿಸುತ್ತಿರುವೆ. ನೀನೊಬ್ಬ ಅವಿವೇಕಿ ತಂದೆ; ನಾನೊಬ್ಬ ಅದೃಷ್ಟಹೀನಳು. ನಿನ್ನಂತವನ ಹೊಟ್ಟೆಯಲ್ಲಿ ಜನಿಸಿದ ನನಗೆ ಜೀವನದಲ್ಲಿ ಜುಗುಪ್ಸೆ ಬಂದಂತಾಗಿದೆ. ಇನ್ನು ಮೇಲೆ ಈ ಭೂಮಿಯ ಮೇಲೆ ನನ್ನಂತವಳು ಬದುಕಿರಬಾರದು, ಬದುಕಿರಬಾರದು. ತನಗೆ ತನ್ನ ತಂದೆಯಿಂದಾದ ಅಪಮಾನ, ಗಂಡನ ವಿಷಯವಾಗಿ ಕೇಳಿದ ನಿಂದನೆಗಳಿಂದ ಸತೀದೇವಿಗೆ ದುಃಖ ಉಮ್ಮಳಿಸಿತು. ಹೊಟ್ಟೆಯಲ್ಲಿ ತಳಮಳವೆನಿಸಿತು. ದುಃಖ ಅಸಮಾಧಾನದಲ್ಲಿಯೇ ಅಲ್ಲಿ ನಿಲ್ಲಲಾರದೆ ಹೊರಟುಬಂದಳು. ಸತೀದೇವಿಯು ಪ್ರಾಣತ್ಯಾಗಮಾಡಲು ಪಣಮಾಡಿದಳು. ಭಯಭಕ್ತಿಯಿಂದ ಬ್ರಹ್ಮನಿಗೆ ತನ್ನ ಅಂತಿಮ ಪ್ರಣಾಮ ಸಲ್ಲಿಸುತ್ತ ನುಡಿದಳು. "ದೇವಾಧಿದೇವಾ, ಯಾವ ಶಂಕರನಿಗಾಗಿ ಜೀವನವನ್ನೆಲ್ಲಾ, ಸದಾ ಅವನ ಧ್ಯಾನದಲ್ಲಿ ಲೀನಳಾಗಿ ಕಳೆದೆನೊ, ಅವನಿಗಾಗಿ ಪ್ರಾಣತ್ಯಾಗ ಮಾಡುತ್ತೇನೆ. ಮುಂದಿನ ಜನ್ಮದಲ್ಲಿಯೂ ಅವನೇ, ಆ ಶಂಕರನೇ ಆ ಪತಿಯಾಗಿರುವಂತೆ ಅನುಗ್ರಹಿಸು."

ಅವಳು ಮೌನವ್ರತಾಧಾರಿಯಾದಳು. ಗಂಭೀರ ಮುಖಮುದ್ರೆಯಲ್ಲಿ ಒಂದೆಡೆ ಪದ್ಮಾಸನಹಾಕಿ, ಇಂದ್ರಿಯಾದಿಗಳನ್ನೆಲ್ಲ ಮನೋಬಲದ ಪಾಶದಿಂದ ಬಂಧಿಸಿದಳು. ಶಂಕರನನ್ನು ಒಲಿಸಿಕೊಳ್ಳುವ ಛಲತೊಟ್ಟಳು. ಆದಕ್ಕಾಗಿ ಸಂಕಲ್ಪಿಸಿದಳು. ತಪಸ್ಸಿಗಾಗಿ ಅಗ್ನಿಯೋಗವನ್ನು ಆರಂಭಿಸಿದಳು. ಆಗ ಯೋಗವಾಯುವಿನಿಂದ ಆ ಸತಿಯ ಕೋಮಲ ಶರೀರವೆಲ್ಲ ಶುಷ್ಕ ಕಾಷ್ಠವಾದಂತಾಗಿ, ಯೋಗಾಗ್ನಿಯು ಪ್ರಜ್ವಲಿಸಿತು; ಶರೀರವನ್ನೆಲ್ಲಾ ವ್ಯಾಪಿಸಿ, ಭಸ್ಮೀಭೂತವಾಗಿಸಿತು. ಸತಿಯ ಸುಂದರ ಸುಕುಮಾರ ಶರೀರ ಭೌತಿಕವಾಗಿ ಕಣ್ಮರೆಯಾಯಿತು. ಅವಳು ಈ ಲೋಕದಿಂದ ದೂರ ಬಹುದೂರ ಹೊರಟುಹೋದಳು ಸತೀ ಶಿರೋಮಣಿ.

ಕೈಲಾಸದಲ್ಲಿ ಶೂಲಪಾಣಿ ನಡೆದ ಘಟನೆಗಳನ್ನೆಲ್ಲ ಜ್ಞಾನದೃಷ್ಟಿಯಿಂದ ಅವಲೋಕಿಸಿ ಅರಿತು ಬಿರುಗಾಳಿಗೆ ಸಿಕ್ಕ ಸಮುದ್ರದಂತೆ ಪ್ರಕ್ಷುಬ್ಧವಾದ; ದಕ್ಷ ಬ್ರಹ್ಮನ ದುರಾಗ್ರಹ ನೀತಿಗೆ ಕೆರಳಿದ. ಪ್ರಚಂಡ ಪ್ರಕೋಪದಲ್ಲಿಯೇ ದಕ್ಷನ ಎದುರು ನಿಂತು ಆಕ್ರೋಶದ ಧ್ವನಿಯಲ್ಲಿ ಹೇಳಿದ. "ತಾನಾಗಿಯೇ ಬಂದ ಮಗಳು ಸತಿಯನ್ನೂ ಅವಮಾನಗೊಳಿಸಿದೆ ಅಷ್ಟೇ ಅಲ್ಲ. ಈ ನಿನ್ನ ಇತರ ಮಕ್ಕಳೂ ಅವರ ಗಂಡಂದಿರೂ ಅಪಮಾನಗೊಳಿಸಿರುವರು. ನಮ್ಮ ಈ ಅಪಮಾನದ ಅಗ್ನಿ ಶಮನವಾಗಲು ಒಂದೇ ದಾರಿ ಶಾಪ ಉಗ್ರಶಾಪ. ನೀನೂ, ನಿನ್ನ ಉಳಿದ ಹೆಣ್ಣು ಮಕ್ಕಳೂ ಹಾಗೂ ಗಂಡಂದಿರೂ ತಕ್ಷಣವೇ ನಾಶಹೊಂದುವಿರಿ. ಎಲ್ಲೈ

ದಕ್ಷನೆ ಕೇಳು, ನೀನೂ ಸಹ ಚಾಕ್ಷುಷ ಮನ್ವಂತರದಲ್ಲಿ ಮತ್ತೆ ಮನುಷ್ಯನಾಗಿ ಕ್ಷತ್ರಿಯಕುಲದಲ್ಲಿ ಜನಿಸಿ ಬರುವೆ. ವರುಣ ಮಾರಿಷಾದೇವಿಯರ ಸಂಜಾತ ನೀನಾಗುವೆ. ಆಗಲೂ ನೀನು ದಕ್ಷನೆಂದೇ ಹೆಸರಾಗುವೆ. ವೈವಸ್ವತ ಮನ್ವಂತರದಲ್ಲಿ ಮತ್ತೆ ನಿನ್ನ ಹೆಣ್ಣು ಮಕ್ಕಳು ನಿನ್ನಿಂದ ಮರುಜನ್ಮ ಪಡೆಯುತ್ತಾರೆ. ಆಗ ನೆರವೇರಿಸುವ ನಿನ್ನ ಎರಡನೇಯ ಮಹಾಯಜ್ಞವನ್ನು ನಾನು ತುಳಿದು ಧ್ವಂಸ ಮಾಡುವೆನು....

ರುದ್ರನ ಶಾಪವನ್ನು ಕೇಳಿ ಕ್ರುದ್ಧನಾದ ದಕ್ಷನೂ ನುಡಿದನು ಕ್ರೂರನಾದ ಶಿವನೇ, ನನ್ನ ತಪ್ಪಿಗಾಗಿ ನೀನು ಋಷಿಗಳನ್ನು ಕಾರಣವಿಲ್ಲದೆ ಶಪಿಸಿರುವೆ. ನಿನ್ನ ತಪ್ಪಿಗಾಗಿ ಯಜ್ಞದಲ್ಲಿ ಯಾರೂ ದೇವತೆಗಳೊಡನೆ ನಿನಗೆ ಆಹುತಿ ನೀಡದಿರಲಿ. ಒಂದು ವೇಳೆ, ಆಹುತಿಯನ್ನು ಕೊಟ್ಟರೂ ಅಪವಿತ್ರ ವಸ್ತು ಎಂದೆನಿಸಿ, ಕೈ ತೊಳೆದುಕೊಳ್ಳುವಂತಾಗಲಿ. ನೀನು, ನಿನ್ನ ಪ್ರಭಾವ ಇರುವದು ಒಂದು ಯುಗದವರೆಗಷ್ಟೇ. ಆಗ ನಿನಗೆ ದೇವತೆಗಳೊಂದಿಗೆ ಪೂಜೆ ಪುರಸ್ಕಾರಗಳಿಲ್ಲ. ಇದು ನನ್ನ ಪ್ರತಿಶಾಪ.

ದಕ್ಷನ ಶಾಪ ಕೇಳುತ್ತ ಒಂದಿನಿತೂ ಬೆದರದೆ, ಗಹಗಹಿಸಿ ನಗುತ್ತ ನುಡಿದ ಶಿವ "ಓ...! ದೇವತೆಗಳೋ! ಅವರು ನಾಲ್ಕು ವರ್ಣದವರು ಕೊಟ್ಟ ಹವಿಸ್ಸನ್ನು ಎಲ್ಲರೂ ಒಂದೆಡೆ ಯಲ್ಲಿಯೇ ನಿಯಮ ನೀತಿಗಳಿಲ್ಲದೆ ಸೇವಿಸುವರು. ಅವರೊಡನೆ ಬೆರೆತು ಆಹಾರ ಸೇವಿಸುವ ಪರಿಪಾಠ ನನಗಿಲ್ಲ. ಅದರಿಂದ ಪ್ರತ್ಯೇಕವಾಗಿದ್ದೇ ಆಹಾರ ಸೇವಿಸುತ್ತೇನೆ ನಾನು. ಸರ್ವ ಲೋಕಗಳಿಗೆಲ್ಲ ಭೂಲೋಕವೇ ಆದಿ, ಆಧಾರ. ಅಂತಹ ಭೂಲೋಕ ನನ್ನ ಇಚ್ಛಾನುಸಾರ ಧರಿಸಿದ್ದೇನೆ, ವಾಸಿಸಿದ್ದೇನೆ. ಅದಕ್ಕೆ ನಿನ್ನ ಅಪ್ಪಣೆ ಕೇಳುವ ಅವಶ್ಯಕತೆಯೇ ನನಗಿಲ್ಲ."

ರುದ್ರಶಾಪದ ಫಲವಾಗಿ ದಕ್ಷನು ಬ್ರಹ್ಮ ಶರೀರವನ್ನು ಬಿಟ್ಟು ಮನುಷ್ಯ ರೂಪದಿಂದ ಜನ್ಮವೆತ್ತಿದನು. ಮುಂದೆ ವೈವಸ್ವತ ಮನ್ವಂತರ ಕಾಲಿರಿಸಿತು. ದಕ್ಷ ಬ್ರಹ್ಮನೀಗ ಹಿಮವಂತ, ಹೆಂಡತಿ ಮೈನಾದೇವಿ, ಸತೀದೇವಿ ಉಮಾ ಎಂಬ ಹೆಸರಿನಿಂದ ಅವರಲ್ಲಿ ಜನಿಸಿದ್ದಾಳೆ. ಉಮಾಮಹೇಶ್ವರರ ಪ್ರೇಮ, ಅಮರ, ಅಜರಾಮರ, ಅಷ್ಟೇ ಅವರ ಮನಸ್ಸುಗಳೂ ಅಚಲ! ಯುಗ ಉರುಳಿ, ಮರಳಿ ಜನ್ಮ ಪಡೆದರೂ ಅವರು ಎಂದಿನಂತೆ ಸತಿಪತಿಗಳು. ಒಬ್ಬರನ್ನು ಬಿಟ್ಟು ಇನ್ನೊಬ್ಬರು ಬದುಕಿರಲಾರರು. ಅದಿತಿ-ಕಶ್ಯಪ, ಲಕ್ಷ್ಮೀ-ನಾರಾಯಣ, ಶಚೀ-ದೇವೇಂದ್ರ, ಉಷಾ-ರವಿ, ಆರುಂಧತಿ-ವಶಿಷ್ಠರಂತೆ ಆತ್ಮೀಯ ಪ್ರಣಯ ಅವರದು.

ಶಿವಶಾಪದನುಗುಣ ದಕ್ಷ ಪ್ರಾಚೇತಸರ ಮಗನಾಗಿ ಮರುಜನ್ಮ ತಾಳಿ ಬಂದ. ಅವನಂತೆ ಶಿವನ ಶಾಪಕ್ಕೆ ಗುರಿಯಾದ ಭೃಗು ಮೊದಲಾದ ಋಷಿಗಳು ವೈವಸ್ವತ ಮನ್ವಂತರ ಆರಂಭದ ತ್ರೇತಾಯುಗದಲ್ಲಿ ಮಹರ್ಷಿಗಳಾಗಿ ಭೂಲೋಕದಲ್ಲಿ ಹುಟ್ಟಿದರು. ಅಂದಿನಿಂದ ಮಹಾದೇವನೂ ಭೂಲೋಕ ವಾಸಿಯಾದ. ಈ ಜನ್ಮಾಂತರದ ಕಥೆ, ವ್ಯಥೆಗೆ ಕಾರಣ ದಕ್ಷ ಹಾಗೂ ಮಹೇಶ್ವರರಲ್ಲಿ ಹುಟ್ಟಿದ ವೈರಭಾವ. ಅದಕ್ಕಾಗಿಯೇ ಅನುಭವಿಗಳು ಹೇಳುವಂತೆ

ತಸ್ಮಾನ್ನಾನುಶಯಃ ಕಾರ್ಯೋ ವರೇಷ್ವಿಹ ಕದಾಚನ ।
ಜಾತ್ಯಂತರಗತಸ್ಯಾಪಿ ಭಾವಿತಸ್ಯ ಶುಭಾಶುಭೈಃ ।
ಜಂತೋರ್ನ ಭೂತಯೇಖ್ಯಾತಿ ಸ್ತನ್ನ ಕಾರ್ಯಂ ವಿಜಾನತಾ ॥

ಉತ್ತಮ ಜನರಲ್ಲಿ ನಾವು ವೈರತ್ವ ಮಾಡಬಾರದು. ಅವರನ್ನೆಂದೂ ಅಪಮಾನಿಸ ಬಾರದು. ಸಜ್ಜನರಿಗೆ ಕೇಡು ಬಗೆದರೆ ನಮಗೇ ಕೇಡು ಮಾಡಿಕೊಂಡಂತೆ ಅದರಿಂದ

ಎಳ್ಳಷ್ಟೂ ಲಾಭವಾಗಲಾರದು. ಮನುಷ್ಯ ತನ್ನಷ್ಟಕ್ಕೆ ತಾನೇ ಮಹಾಪುರುಷನೆಂದು ಕೊಂಡು ಮೆರೆಯುವದರಲ್ಲಿ ಏನೂ ಅರ್ಥವಿಲ್ಲ. ಆದರಿಂದ ಒಳಿತಿಗಿಂದ ಕೆಡಕೇ ಹೆಚ್ಚು. ಲಾಭಕ್ಕಿಂತ ಹಾನಿಯೇ ಹೆಚ್ಚು. 'ತುಂಬಿದ ಕೊಡ ತುಳುಕದು' ಎನ್ನುವ ಮಾತಿನಂತೆ ಸುಜ್ಞಾನಿಯು ಅಹಂಕಾರ ಪಡಬಾರದು.

ಬಳಿಕ ಮುನಿಗಳು ಬ್ರಹ್ಮನನ್ನು ಕುರಿತು ನುಡಿದರು. ದಕ್ಷನ ಮಗಳಾದ ಸತೀದೇವಿಯು ಮರುಜನ್ಮ ಪಡೆದು ಉಮೆಯಾಗಿ ಜನಿಸಿದಳಷ್ಟೆ. ಉಮೆಗೂ ಶಂಕರನಿಗೂ ಸ್ನೇಹ ಸಂಬಂಧ ಹೇಗೆ ಬೆಳೆಯಿತೆಂಬುದನ್ನು ವಿವರಿಸು.

ಬ್ರಹ್ಮ ಅವರ ಕುತೂಹಲ ಕಂಡು ಹರ್ಷಿತನಾಗಿ ನುಡಿದನು. ಉಮಾಶಂಕರರ ಕಥೆಯು ಮನೋಹರವೂ, ಪುಣ್ಯಕರವೆನಿಸಿದೆ, ಅಲ್ಲದೆ ಸಕಲ ಮನೋರಥ ಈಡೇರಿಸುವಂತಹದು, ಪರಮಪವಿತ್ರವೆಂದೂ, ಲೋಕಾದರ ಪಡೆದಿದೆ. ಅದನ್ನೀಗ ನಿಮಗೆ ವಿವರಿಸುವೆ, ಕೇಳಿರಿ.

ಹಿಂದೊಮ್ಮೆ ಒಂದು ದಿನ ಹಿಮವಂತನ ಮನೆಗೆ, ಕಶ್ಯಪಮುನಿಯು ಬಂದನು. ಅವನನ್ನು ಆದರಿಸಿ ಸತ್ಕರಿಸಿದನು. ಲೋಕಾಭಿರಾಮನಾಗಿ ಮಾತನಾಡುತ್ತ ಹಿಮವಂತನು ಲೋಕದಲ್ಲಿ ಕೀರ್ತಿ ತರುವಂತಹ ಹಾಗೂ ಹಿತಕಾರಕವೆನಿಸುವ ವಸ್ತು ಯಾವದೆಂಬುದು ಹೇಳುವಿರಾ? ಎಂದು ಕಶ್ಯಪರನ್ನು ಪ್ರಶ್ನಿಸಿದ. ಅವನ ಪ್ರಶ್ನೆ ಅರ್ಥವಾಗದೇ ಯೋಚಿಸುತ್ತ ಕುಳಿತ ಕಶ್ಯಪರನ್ನು ಮತ್ತೊಮ್ಮೆ ಕೇಳಿದ ಹಿಮವಂತ ಯಾವುದರ ಸಹಾಯದಿಂದ ಪುಣ್ಯಲೋಕಗಳು ದೊರಕುತ್ತವೆ? ಕೀರ್ತಿ ಬರುವದಕ್ಕೆ ಏನು ಮಾಡಬೇಕು? ಗಣ್ಯರ ನಡುವೆ ಇದ್ದು ಗೌರವ ಸಂಪಾದಿಸುವದು ಹೇಗೆ?'

ಅವನ ಪ್ರಶ್ನೆಗಳನ್ನು ಆಲಿಸಿದ ಕಶ್ಯಪ ನುಡಿದನು. ನೀನು ಇದುವರೆಗೆ ಕೇಳಿದ ಪ್ರಶ್ನೆಗಳಿಗೆಲ್ಲ ಒಂದೇ ಉತ್ತರ-ಪುತ್ರ ಪ್ರಾಪ್ತಿ. ನೀನು ಕೇಳಿದಂತೆ ಪುಣ್ಯಲೋಕ ಪ್ರಾಪ್ತಿಯಾಗಲಿ, ಸತ್ಕೀರ್ತಿಯಾಗಲಿ, ಲೋಕದಲ್ಲಿ ಗೌರವಾದರಗಳಾಗಲಿ ದೊರಕುವದು-ಮನುಷ್ಯನ ಗಳಿಕೆಯಿಂದಲ್ಲ, ಅವನು ಕೈಕೊಂಡ ತೀರ್ಥಯಾತ್ರೆಗಳಿಂದಲೂ ಅಲ್ಲ-ಮಕ್ಕಳಿಂದ ಮಾತ್ರ ಈ ಮಾತನ್ನು ನಾನು ಸ್ವಾನುಭವದಿಂದ ಹೇಳುತ್ತೇನೆ. ಪುತ್ರ ಪ್ರಾಪ್ತಿಯಿಂದ, ನೀನು ಪ್ರಶ್ನಾವಳಿ ಮೂಲಕ ಕೇಳಿದ ಎಲ್ಲವೂ ಸಿಗುತ್ತದೆ. ಅಷ್ಟೇ ಏಕೆ ನೋಡು, ನನಗೂ ಸಹ ನನ್ನ ಮಹಾಮಹಿಮರಾದ ಮಕ್ಕಳಿದ್ದದ್ದರಿಂದ ಬ್ರಹ್ಮನೊಡನೆ ಹಾಗೂ ಋಷಿಗಳೊಡನೆ ಗೌರವಾದರಗಳು ನಾನು ಹೋದಲ್ಲೆಲ್ಲ ದೊರಕುತ್ತವೆ. ಈ ವಿಷಯವಾಗಿ ನಾನು ಬಹುಕಾಲದ ಹಿಂದೆ ಪ್ರತ್ಯಕ್ಷವಾಗಿ ಮನಗಂಡ ಸಮಾಚಾರ ಹೇಳುತ್ತೇನೆ ಕೇಳು. ಕೆಲವು ದಿವಸಗಳ ಕೆಳಗೆ ನಾನು ಕಾಶಿಯಾತ್ರೆಗೆ ಹೊರಟ್ಟಿದ್ದೆ. ಆಗ ಆಕಾಶದಲ್ಲಿ ಸುಂದರವಾದ ದಿವ್ಯ ಕಾಂತಿಯಿಂದ ಬೆಳಗುತ್ತ ಹಾರಿ ಬರುತ್ತಿರುವ ವಿಮಾನವನ್ನು ನೋಡಿದೆ. ಆ ವಿಮಾನದ ಕೆಳಗಡೆಗೆ ದೊಡ್ಡದೊಂದು ಹಳ್ಳವಿದೆ ಅದರಿಂದ ಆರ್ತನಾದವೊಂದು ಕೇಳಿಬರುತ್ತಿತ್ತು. ಆರ್ತನಾದ ಕಿವಿಗೆ ಬಿದ್ದೊಡನೆ ಗಕ್ಕನೇ ಅಲ್ಲಿಯೇ ನಾನು ನಿಂತುಬಿಟ್ಟೆ. ಜ್ಞಾನದೃಷ್ಟಿಯಿಂದ ವಿಚಾರಿಸುತ್ತಲಿದ್ದೆ ಅದರ ಕಾರಣವನ್ನು. ಅದೇ ಸಮಯಕ್ಕೆ ಸದಾಚಾರಿಯಾದ ಬ್ರಾಹ್ಮಣನೊಬ್ಬನು ಕಾಶಿಯ ತೀರ್ಥ ಸ್ನಾನ ಮುಗಿಸಿಕೊಂಡು ಅಲ್ಲಿಗೆ ಬರುತ್ತಿದ್ದ. ಅವನು ಬರುವ ದಾರಿಗೆ ಅಡ್ಡಲಾಗಿ ಹೆಬ್ಬುಲಿಯೊಂದು ಅಡ್ಡಾಡುತ್ತ ಗುಡುಗುತ್ತಿತ್ತು. ಪ್ರಾಣಭಯದಿಂದ ಅವನು ಹಳ್ಳವಿರುವ ಪ್ರದೇಶಕ್ಕೆ ಅವಿತುಕೊಳ್ಳಲು ಓಡಿದನು.

ಆದರೆ ಅಲ್ಲಿ-ಆ ಹಳ್ಳದಲ್ಲಿ ಅವನು ನೋಡಿದ್ದೇನು ಗೊತ್ತೆ? ಆ ಹಳ್ಳದಲ್ಲಿ ಕೆಲವರು ಮುನಿಗಳು, ವೀರಣಸ್ತಂಬಕ್ಕೆ ಕಟ್ಟಲ್ಪಟ್ಟು ತಲೆಕೆಳಗಾಗಿ ನೇತಾಡುತ್ತಿದ್ದರು. ದುಃಖಯಾತನೆಯಿಂದ ನರಳುತ್ತಿದ್ದರು. ಅವರನ್ನು ಕಂಡು ಬ್ರಾಹ್ಮಣನಿಗೆ ಅವರ ಮೇಲಿನ ಕರುಣೆಯಿಂದ ಅವರು ಯಾರೆಂದು ಪ್ರಶ್ನಿಸಿದಾಗ ಅವರು ಅದೇ ಬ್ರಾಹ್ಮಣನ ಮೃತರಾದ ತಂದೆ, ಅಜ್ಜ, ಮುತ್ತಜ್ಜರೆಂದು ಅವರ ಮುಖದಿಂದ ಅರಿತುಕೊಂಡ. ಆ ಹಳ್ಳದಲ್ಲಿ ನೇತಾಡುತ್ತಿರುವವರು- ಅವನ ಪಿತೃ ಪರಿವಾರ, ಹಳ್ಳ ಅವರ ಪಾಲಿನ ನರಕ. ಇಂತಹ ಘೋರ ಶಿಕ್ಷೆಗೆ ಗುರಿಯಾಗಲು ಕಾರಣವೇನೆಂದು ಮತ್ತೆ ಆ ಬ್ರಾಹ್ಮಣನ ಪ್ರಶ್ನೆ. ಅವರ ಬಿಡುಗಡೆಗೆ ಪರಿಹಾರೋಪಾಯವನ್ನು ಅವರಿಂದ ಕೇಳಿ ಅರಿತ. ಆ ಬ್ರಾಹ್ಮಣನು ಮದುವೆ ಮಾಡಿಕೊಂಡು ಗುಣಶಾಲಿಯಾದ ಮಗನನ್ನು ಪಡೆದಾಗ ವೀರಣಸ್ತಂಭದಲ್ಲಿ ನೇತಾಡುವ ಪಿತೃಗಳಿಗೆ ಮುಕ್ತಿ, ತಪಸ್ಸು, ತೀರ್ಥಯಾತ್ರೆಗಳಿಂದ ಪಿತೃಗಳ ಉದ್ಧಾರವಿಲ್ಲವೆಂಬುದನ್ನು ಅವರ ಮುಖದಿಂದ ಕೇಳಿ ಅರಿತುಕೊಂಡ. ಅವರ ಉಪದೇಶದಂತೆ ಬ್ರಾಹ್ಮಣನು, ನಂದಿವಾಹನನನ್ನು ಅನುದಿನ ಆರಾಧಿಸಿದ; ಮದುವೆ ಮಾಡಿಕೊಂಡು ಸತ್ಪುತ್ರರನ್ನು ಪಡೆದು, ಪಿತೃಗಳನ್ನು ನರಕದಿಂದ ಉದ್ಧರಿಸಿದ; ಅವರಿಗೆ ರುದ್ರಗಣ ಪದವಿ ದೊರಕುವಂತೆ ಪ್ರಾಮಾಣಿಕನಾಗಿ ಧರ್ಮ-ಕರ್ಮ ಸದಾಚಾರ ಆಚರಣೆ ಮಾಡಿದ. ತಾನೂ ಸಹ ಪರಮೇಶ್ವರನನ್ನು ತ್ರಿಕಾಲ ಆರಾಧನೆ ಮಾಡಿ, ಅಂತ್ಯಕಾಲದಲ್ಲಿ ಅವನ ಸಾಕ್ಷಾತ್ಕಾರ ಮಾಡಿಕೊಂಡ. ರುದ್ರನ ಅನುಗ್ರಹದಿಂದ 'ಸುವೇಶ' ನೆಂದು ಹೆಸರಿನಿಂದ ರುದ್ರಗಣನಾಯಕನಾಗಿ ಅವನಿಗೆ ಪ್ರಿಯನಾದ. ಗಿರಿರಾಜಾ, ಸುವೇಶನಂತೆ, ನೀನೂ, ತಪವನ್ನಾಚರಿಸಿ, ಶಿವನ ಒಲುಮೆ ಹಾಗೂ ಅನುಗ್ರಹಬಲದಿಂದ ಸಂತಾನಫಲವನ್ನು ಹೊಂದಲು ಪ್ರಯತ್ನಿಸಿ ಸಫಲನಾಗು, ದೇವರು ನಿನಗೆ ಸಕಲಸುಖ, ಶಾಂತಿ, ಸೌಭಾಗ್ಯ ನೀಡಲಿ ಎಂದನು.

ಹಿಮವಂತ ಯೋಗಾನುಷ್ಠಾನ ಬಲದಿಂದ ನನ್ನನ್ನು (ಬ್ರಹ್ಮ) ಕುರಿತು ಬಹುಕಾಲ ತಪಸ್ಸನ್ನು ಮಾಡಿದ. ಅವನ ತಪಸ್ಸು ಫಲಿಸಿತು. ಭಗವಂತ (ನಾನು) ಅವನು ಕೇಳಿದ ವರ ನೀಡುತ್ತ ನುಡಿದನು. ನಿನ್ನ ತಪಸ್ಸಿಗನುಗುಣವಾಗಿ ಗುಣವಂತೆಯಾದ ಕನ್ಯೆಯು ಜನಿಸುವಳು. ಅವಳಿಂದ ನಿನ್ನ ಹಾಗೂ ನಿನ್ನ ವಂಶದ ಕೀರ್ತಿ ಪರಿಮಳವು ದಶದಿಕ್ಕುಗಳಿಗೂ ವ್ಯಾಪಿಸುವದು. ಗುಣವತಿಯಾದ ಕನ್ಯೆಯು ನಿನಗೆ ಜ್ಯೇಷ್ಠಪುತ್ರಿಯಾಗಿ ಜನಿಸುವಳು. ಇವಳಲ್ಲದೆ ಇನ್ನಿಬ್ಬರು ಕನ್ಯೆಯರು ಜನಿಸುವರು.

ಕೆಲವು ಕಾಲದ ನಂತರ ಹಿಮವಂತನಿಗೆ ಮೇನಾದೇವಿಯಲ್ಲಿ ಅಪರ್ಣಾ, ಏಕಪರ್ಣಾ, ಏಕಪಾಟಲಾ ಎಂಬ ಮೂವರು ಕನ್ಯೆಯರು ಜನ್ಮವೆತ್ತಿದರು. ಮೂವರು ಕನ್ಯೆಯರ ಹೆಸರುಗಳು ಅಷ್ಟೇ ಅರ್ಥಪೂರ್ಣವಾಗಿವೆ. ಏಕಪರ್ಣಾ ಅಂದರೆ ಒಂದೇ ಆಲದ ಎಲೆ, ಏಕಪಾಟಲ ಎಂದರೆ, ಪಾಟಲ ಮರದ ಎಲೆ. ಇವರಲ್ಲಿ ಏಕಪರ್ಣೆಯು ದಿನಕ್ಕೊಂದೇ ಆಲದ ಎಲೆಯನ್ನು ತಿಂದು ಒಂದು ಲಕ್ಷ ವರ್ಷ ಪರಿಯಂತ ದೀರ್ಘ ತಪವನ್ನಾಚರಿಸಿದರೆ, ಏಕಪಾಟಲೆಯು ಅಕ್ಕನಂತೆ ಒಂದೇ ಪಾಟಲ ಎಲೆ ಭಕ್ಷಿಸಿ ಬಹುವರ್ಷ ತಪಸ್ಸಾಚರಿಸಿದಳು. ಇವರಿಗಿಂತಲೂ ಅಪರ್ಣೆಯದು ಉಗ್ರತರ ತಪಸ್ಸು. ತನ್ನ ತಂಗಿಯಂತೆ ಎಲೆಯನ್ನೂ ಸಹ ಮೆಲ್ಲದೆ, ಅನ್ನಾಹಾರ ವರ್ಜಿಸಿ, ಕೋಮಲ ಶರೀರವನ್ನು ಕಾಷ್ಠವಾಗುವಂತೆ ಘನಘೋರ ತಪಗೈದಳು. ದೇವಾನುದೇವತೆಗಳಿಗೂ ಪೂಜನೀಯಳಾದಳು. ಹೀಗೆ ಅಪರ್ಣಾದೇವಿಯು ಆಹಾರ ಸೇವಿಸದೆ ತಪಸ್ಸಿಗೆ ಕುಳಿತುಕೊಳ್ಳುವದನ್ನು ತಿಳಿದಾಗ ತಾಯಿ ವಾತ್ಸಲ್ಯದಿಂದ ಮಗಳಿಗೆ

ಉಮೆ( ಉ:-ಎಲೌ ಮಗಳೆ, ಮಾ= ಈ ಘೋರ ತಪವು ಬೇಡ) ಎಂದಳಂತೆ. ಅದೇ ಅವಳಿಗೆ ಅನ್ವರ್ಥಕವಾಯಿತು. ಹಿಮವಂತನ ಮೂವರು ಕುಮಾರಿಯರು ಸದಾ ಚಿರಯೌವನದಿಂದ ಬೆಳಗುತ್ತಿದ್ದ ಯೋಗವನ್ನಾಶ್ರಯಿಸಿದ್ದ ವೀರವಿರಾಗಿಣಿಯರು. ಲೋಕಮಾತೆಯರಾದ ಹಿಮಾಲಯನ ಕುವರಿಯರು ತಪಸ್ಸೆಂಬ ಶರೀರದಿಂದ ಬೆಳಕು ಬೀರುತ್ತಿರುವ ಮಣಿಗಳು; ಬ್ರಹ್ಮಚಾರಿಣಿಯರು, ಈ ಮೂವರಲ್ಲಿ ಉಮಾದೇವಿ ಜ್ಯೇಷ್ಠಳೂ; ಶ್ರೇಷ್ಠಳೂ ಸಹ ಮಹಾಯೋಗಾನುಷ್ಠಾನ ಮಾಡಿ ಪರಶಿವನನ್ನು ಆಶ್ರಯಿಸಿದಳು. ಏಕಪರ್ಣಾದೇವಿಯನ್ನು ಭೃಗು ಮಹರ್ಷಿ ದತ್ತುಮಗ ಶುಕ್ರನಿಗೆ ಧಾರೆಯೆರೆದು ಕೊಡಲಾಗಿತ್ತು. ಮೂರನೆಯವಳೇ ಏಕಪಾಟಲಾದೇವಿ, ಅಲರ್ಕನಪುತ್ರ ಜೈಗೀಷವ್ಯನನ್ನು ವರಿಸಿದ್ದಳು.

ಹಿಮವಂತನ ಹಿರಿಯ ಮಗಳು ಉಮಾದೇವಿ ಘೋರ ತಪವನ್ನಾಚರಿಸಿದಳು. ಅವಳ ಉಗ್ರ ತಪಸ್ಸಿನ ತಪೋಜ್ವಾಲೆಗಳು ಮೂರು ಲೋಕಕ್ಕೂ ತಾಕಲು, ಭಸ್ಮವಾಗುವ ಸನ್ನಿವೇಶ ತಲುಪಿತು. ಮೂರು ಲೋಕಗಳಿಗೂ ಅಳಿಗಾಲದ ಅನಾಹುತವನ್ನು ತಪ್ಪಿಸಲು ನಾನೇ (ಬ್ರಹ್ಮ) ಮುಂದಾಗಿ ಅವಳ ಬಳಿಗೆ ಹೋಗಿ, ಉಮೆಗೆ ನುಡಿದೆ- ನಿನ್ನ ಉಗ್ರತಪದ ಜ್ವಾಲೆ ಝಳಕ್ಕೆ ಮೂರು ಲೋಕಗಳೂ ಹುರುಪಳಿಸುತ್ತಿವೆ. ಆದಿ ಮಾಯೆಯಾದ ನೀನೇ ಈ ಜಗತ್ತನ್ನು ಸೃಷ್ಟಿಸಿ, ನೀನೇ ಕೈಯಾರ ನಾಶಮಾಡಬೇಡ. ನೀನು ಯಾರನ್ನು ಕುರಿತು ಇಂತಹ ಉಗ್ರತಪಸ್ಸು ಆಚರಿಸುತ್ತಿರುವೆ ಎಂಬುದು ನಾನು ಬಲ್ಲೆ. ಆ ಶಿವನೇ ನಿನಗೆ ಅನುರೂಪನಾದ ಪತಿ. ಅವನ ಅಧೀನರಾಗಿ ಲೋಕದೊಡೆಯರಾಗಿ ನಾವು ಅವನ ಅಪ್ಪಣೆ ಪರಿಪಾಲಿಸುತ್ತಿದ್ದೇವೆ. ನೀನು ಮನಸಾ ಮೆಚ್ಚಿದ ಏಕೈಕ ರೂಪವಂತ ಗುಣವಂತನಾದ ಆ ಮಹೇಶ್ವರ ನಿನ್ನನ್ನು ಪರೀಕ್ಷಿಸಲು ವಿಕಾರ ರೂಪದಿಂದ ಬರಲಿದ್ದಾನೆ. ಅವನಿಗೆ ಉತ್ಪತ್ತಿ ಮೊದಲಾದ ವಿಕಾರಗಳಿಲ್ಲದಿದ್ದರೂ ಸಹ ತನ್ನ ಮಾಯೆಯಿಂದ ತಾನು ಇಚ್ಛಿಸಿದ ರೂಪಧರಿಸಬಲ್ಲ ಸರ್ವಶಕ್ತನಾಗಿದ್ದಾನೆ. ಈ ಪರಮೇಶ್ವರನ ಪರಮ ದಿವ್ಯ ಸ್ವರೂಪವನ್ನು ಚರ್ಮಚಕ್ಷುಸ್ಸುಗಳಿಂದ ನೋಡಿ ಅರಿಯಲು ಯಾರಿಗೂ ಸಾಧ್ಯವಿಲ್ಲ. ಅವನು ಯೋಗಾನುಷ್ಠಾನ ಬಲದಿಂದ, ಜ್ಞಾನನೇತ್ರ ದಿಂದ ಕಾಣಬಲ್ಲವನಾಗಿದ್ದಾನೆ. ಇಂತಹ ಲೋಕೈಕ ಸುಂದರನು ಇಂದ್ರನಂತೆ ತೇಜಸ್ವಿಯಾದ ತನ್ನ ಅಲಂಕಾರವೆನಿಸಿದ ಚಂದ್ರನನ್ನು ಬಿಟ್ಟು ವಿಕಾರರೂಪ ಧರಿಸಿ, ನಿನ್ನ ಬಳಿಗೆ ಬರುವನು. ನೀನಿನ್ನು ಚಿಂತಿಸದಿರು. ನಿನ್ನ ಮನೋರಥ ಶೀಘ್ರದಲ್ಲಿ ನೆರವೇರುವ ಸಮಯ ಒದಗಿಬರಲಿದೆ. ನಿನಗೆ ಜಯವಾಗಲಿ.

## ಪಾರ್ವತಿಯ ಸತ್ತ್ವದರ್ಶನ

ಮತ್ತೆ ಮುನಿಗಳಿಗೆ ಬ್ರಹ್ಮ ಹೇಳಿದ:- ದೇವತೆಗಳೆಲ್ಲರೂ ಒಂದಾಗಿ ಉಮಾದೇವಿಯು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಧಾವಿಸಿ ಬಂದರು. ಇಂತಹ ಘನಘೋರ ತಪಸ್ಸಿನಿಂದ ಮೂಲೋಕಗಳು ತಪೋಜ್ವಾಲೆಯಿಂದ ತತ್ತರಿಸಿ ಹೋಗಿರುವದಾಗಿ ಹೇಳಿದರು. ''ನಿನ್ನ ತಪಸ್ಸು ಸಿದ್ಧಿಸುವ ಕಾಲ ಸನ್ನಿಹಿತವಾಗಲಿದ್ದು. ಶೀಘ್ರದಲ್ಲಿಯೇ ಪರಮೇಶ್ವರನು ನಿನ್ನನ್ನು ಮದುವೆಯಾಗುವದು ಖಂಡಿತ. ನಿನ್ನ ಈ ಉಗ್ರತಪಸ್ಸನ್ನು ಸಾಕು ಮಾಡೆಂದು'' ಪ್ರಾರ್ಥಿಸಿಕೊಂಡು ತಮ್ಮ ಲೋಕಗಳಿಗೆ ತೆರಳಿದರು.

ಉಮಾದೇವಿಯಾದರೂ ದೇವತೆಗಳ ಮಾತಿನಲ್ಲಿ ನ್ಯಾಯವಿರುವದನ್ನು ಮನಗಂಡು ತಪಸ್ಸನ್ನು ಅಲ್ಲಿಗೆ ಮುಕ್ತಾಯಮಾಡಿದಳು. ತನ್ನ ಆಶ್ರಮದಲ್ಲಿ ವಿರಾಗಿಣಿಯಂತೆ,

ಪರಿಶುದ್ಧ ಮನಸ್ಸಿನಿಂದ ಪರಶಿವನ ಧ್ಯಾನಮಾಡುತ್ತ ಇದ್ದಳು. ಒಂದು ದಿನ ಆಶ್ರಮದ ಅಶೋಕವೃಕ್ಷದ ನೆರಳಿನಲ್ಲಿ ಕುಳಿತಾಗ ಅಲ್ಲಿಗೆ ಹರನು ವಿಕಾರರೂಪ ಧರಿಸಿ ಗಿರಿಜೆಯ ಬಳಿಗೆ ಮೆಲ್ಲನೆ ಬಂದನು. ಚಿಕ್ಕದಾದ ಬಡಕಲು ಶರೀರ, ಸೊರಗಿದ ಕೈಗಳು, ವಿಕಾರಬಾಯಿ, ಅಂಕುಡೊಂಕಾದ ಮೂಗು, ನೋಡಲು ಅನಾಕರ್ಷಕ ವ್ಯಕ್ತಿ. ಗಿರಿಜೆಯ ಬಳಿಗೆ ಬರುತ್ತ ಅವಳನ್ನೇ ನೆಟ್ಟದೃಷ್ಟಿಯಿಂದ ನೋಡುತ್ತ 'ನಿನ್ನನ್ನು ಮದುವೆಯಾಗ ಬಯಸಿದ್ದೇನೆ' ಎಂದಾಗ ಅವನ ಹೃದ್ಗತವನ್ನು ಅರ್ಥ ಮಾಡಿಕೊಂಡ ಉಮೆಯು ಮಾತನಾಡದೆ ಮೌನವಾಗಿದ್ದಳು. ಯೋಗಿನಿಯಾದ ಗಿರಿಜೆಯು ಜ್ಞಾನನೇತ್ರದಿಂದೊಮ್ಮೆ ಅವಲೋಕಿಸಿ ವಿಚಾರಿಸಿದಳು. 'ಈ ವಿಪ್ರ ವೇಷಧಾರಿ ಸಾಮಾನ್ಯ ಬೈರಾಗಿಯಲ್ಲ. ನನ್ನ ಆರಾಧ್ಯಮೂರ್ತಿ ಮಹೇಶ್ವರನೇ' ಎಂದು ಮನಸ್ಸಿಗೆ ಖಚಿತವಾಯಿತು, ಮನಸ್ಸಿಗೆ ನೆಮ್ಮದಿ, ಉತ್ಸಾಹ ಮೂಡಿದವು. ಆಶ್ರಮಕ್ಕೆ ಬಂದ ಬ್ರಾಹ್ಮಣನನ್ನು ಅರ್ಘ್ಯ, ಪಾದ್ಯ, ಫಲಾದಿಗಳಿಂದ ಪೂಜಿಸಿದಳು; ಭಯಭಕ್ತಿ ಭಾವದಿಂದ ನಮಿಸಿದಳು.

ಅವನ ಪ್ರಶ್ನೆಗೆ ಉತ್ತರರೂಪವಾಗಿ ಉಮಾದೇವಿ ನುಡಿದಳು :- ಓ ಭಗವಂತನಾದ ವಿಪ್ರಸ್ವರೂಪಿಯೇ, ನಾನು ನನ್ನ ಹೃದ್ಗತ ಬಹಿರಂಗ ಪಡಿಸಲು ಸ್ವತಂತ್ರಳಲ್ಲ ಮನೆಯಲ್ಲಿ ನನ್ನ ತಂದೆ ಇರುವನು. ಅಲ್ಲಿಗೆ ಹೋಗಿ ಅವನನ್ನೇ ಕೇಳಬಹುದು.

ಭಗವಂತನಾದ ಶಿವನು ಅದೇ ವಿಕಾರ ಆಕಾರದಲ್ಲಿಯೇ ಹಿಮವಂತನ ಹತ್ತರ ಹೋಗಿ ''ಗಿರಿರಾಜಾ, ನಿನ್ನ ಮಗಳನ್ನು ನನಗೆ ಧಾರೆ ಎರೆದುಕೊಡು'' ಎಂದು ಕೇಳಿದ. ಹಿಮವಂತನಿಗೂ ಆ ಬ್ರಾಹ್ಮಣನಮಾತಿನಿಂದ ಒಮ್ಮೆಲೆ ಉತ್ತರಿಸುವದಾಗಲಿಲ್ಲ. ಸ್ವಲ್ಪಕಾಲ ಅವನೂ ವಿಚಾರಗಳ ತಾಕಲಾಟದಲ್ಲಿ ತೊಳಲಾಡಿದ. ಬ್ರಾಹ್ಮಣನೆಂದು ತಿಳಿದು ನಿರಾಕರಿಸಿದರೆ ಕೋಪ ಶಾಪಕ್ಕೆ ಗುರಿಯಾಗುವೆ. ಇಲ್ಲವೆನ್ನಲು ಮನಸ್ಸಿಗೆ ಒಂದು ವಿಧ ವ್ಯಥೆಯೂ ಆಯಿತು. ಕೊನೆಗೆ ವಿಪ್ರನಿಗೆ ಹೇಳಿದ-ದಯವಿಟ್ಟು ಅನ್ಯಥಾ ಭಾವಿಸಬಾರದು. ನಿಮ್ಮನ್ನು ಅವಮಾನಿಸುವ ಉದ್ದೇಶ ನನಗಿಲ್ಲ. ಭೂಮಿಯಲ್ಲಿ ಬ್ರಾಹ್ಮಣರು ದೇವತೆಗಳಂತೆ ಪೂಜ್ಯರು. ಆದರೆ ನಾನೊಂದು ವಿಷಯ ಈಗಾಗಲೇ ಮನಸಾ ನಿಶ್ಚಯ ಮಾಡಿದ್ದೇನೆ. ನನ್ನ ಮಗಳನ್ನು ಸ್ವಯಂವರ ವಿಧಾನದಿಂದ ಮದುವೆ ಮಾಡಿಕೊಡಲು ನಿರ್ಧರಿಸಿದ್ದೇನೆ. ಅಲ್ಲಿ ಅವಳು ಯಾವನನ್ನು ಮೆಚ್ಚುವಳೋ ಅವನ ಕೊರಳಲ್ಲಿ ಮಾಲೆ ಹಾಕಲಿ. ಅವನೇ ಅವಳ ಗಂಡ. ಅಂತಹ ಅದೃಷ್ಟಶಾಲಿಗೆ ಅವಳನ್ನು ಧಾರೆಯೆರೆದು ಕೊಡಲು ಸಂಕಲ್ಪಿಸಿದ್ದೇನೆ.

ಹಿಮವಂತನ ಮಾತು ಕೇಳಿದ ನಂತರ ಭಗವಂತನಾದ ಶಂಕರ ಉಮಾದೇವಿಯ ಬಳಿಗೆ ಬಂದು ನುಡಿದ : ''ನಿನ್ನ ತಂದೆ ನಿನಗಾಗಿ ಸ್ವಯಂವರ ಏರ್ಪಾಡು ಮಾಡಲಿದ್ದಾನೆ. ಅದರಲ್ಲಿ ನೀನು ಯಾರನ್ನ ವರಿಸುವೆಯೋ ಅವನೇ ನಿನಗೆ ಪತಿಯಾಗುವನಂತೆ. ಆದುದರಿಂದ ನೀನು ನನ್ನಂತಹ ಕುರೂಪಿಯನ್ನು ವರಿಸುವೆಯಾ?'' ನಿರಾಶೆಯ ನಿಟ್ಟುಸಿರು ಬಿಡುತ್ತ ಮತ್ತೆ ನುಡಿದ :- 'ಇದು ಅಸಾಧ್ಯ, ಎಂದಿಗೂ ಸಾಧ್ಯವಾಗದ ಮಾತು.'

ಆ ಕುರೂಪಿಯ ನಿರಾಶೆಯ ನುಡಿ ಉಮೆಯನ್ನು ಆಲೋಚನೆಗೆ ಈಡುಮಾಡಿದವು. ಅವಳು ಯೋಚಿಸುತ್ತಿರುವಲ್ಲಿ ಒಂದು ನಿರ್ಧಾರದ ನಿಲುಗಡೆಗೆ ಬಂದಳು. ಮಹೇಶ್ವರನಲ್ಲಿ ತನಗಿರುವ ಅನುರಾಗ ಅಚಲ. ಈ ಕುರೂಪಿಯನ್ನು ಮದುವೆಯಾಗು ವದರಲ್ಲಿ ತನ್ನ ಮನಸ್ಸು ದುಃಖ ಅಥವಾ ನಿರಾಶಾಭಾವ ತಾಳುವ ಬದಲು ಹರ್ಷವನ್ನೇ

ಸೂಚಿಸುವದರಿಂದ- ಈ ಕುರೂಪಿ ನಿಜವಾಗಿ ರುದ್ರನೇ ಇರಬೇಕು ಎಂದು ಖಚಿತವಾಯಿತು. ಅದೇ ನಿರ್ಧಾರದಲ್ಲಿ ಅವನಿಗೆ ಹೇಳಿದಳು :- ವಿಪ್ರೋತ್ತಮ, ನೀನು ಚಿಂತಿಸಬೇಡ, ವಿಪರೀತ ಭಾವಿಸಬೇಡ. ಸ್ವಯಂವರದಲ್ಲಿ ನಾನು ಮೆಚ್ಚಿ ಮಾಲೆ ಹಾಕುವದಾದರೂ ನಿನ್ನ ಕೊರಳಿಗೇನೆ, ನನ್ನಲ್ಲಿ ನಂಬಿಕೆ ಇಡು. ನಿನಗೆ ಸಂದೇಹವಿದ್ದರೆ ನನ್ನ ಮನಸ್ಸಿಗೊಪ್ಪಿರುವ ನಿನ್ನನ್ನು ಇಲ್ಲಿಯೇ ಮದುವೆಯಾಗುತ್ತೇನೆ. ಮಾತು ಮುಗಿಸುತ್ತ, ಗಿರಿಜೆಯು ಬದಿಯಲ್ಲಿದ್ದ ಅಶೋಕವೃಕ್ಷದ ಗೊಂಚಲನ್ನು ಶಿವನ ಭುಜದ ಮೇಲಿಡುತ್ತ 'ಓ ಮಹಾದೇವ ಇಗೋ! ನಾನು ಇಂದಿನಿಂದ ನಿನ್ನ ಸಹಚರಿಯಾಗಿರುವೆ' ಎಂದಳು.

ಉಮಾಮಹೇಶ್ವರರು ಪರಸ್ಪರರು ಒಲಿದು ಮದುವೆಯಾದರು. ಶಿವನು ಎದುರಿಗಿರುವ ಅಶೋಕ ವೃಕ್ಷವನ್ನು ಕುರಿತು ಹೇಳಿದ-ನಿನ್ನ ಪುಣ್ಯಕರವಾದ ಹೂ ಗೊಂಚಲಿನಿಂದ ಗಿರಿಜೆಯು ನನ್ನನ್ನು ಮದುವೆಯಾದಳು. ಇಂದಿನಿಂದ ನೀನು ನನಗೆ ಅತ್ಯಂತ ಪ್ರಿಯವಸ್ತು. ನಿನಗಿನ್ನು ಲೋಕದಲ್ಲಿ ಹೆಚ್ಚಿನ ಗೌರವಾದರಗಳು ಪ್ರಾಪ್ತವಾಗಲಿ. ನಿನ್ನಲ್ಲಿ ಸರ್ವ ಋತುಗಳಲ್ಲಿ ಚಿರತಾರುಣ್ಯ, ಲಾವಣ್ಯ, ಹೊಮ್ಮುತ್ತಿರಲಿ ನಿನ್ನ ಹೂವು ಇನ್ನೂ ಹೆಚ್ಚು ಸುಂದರವಾಗಿ ಮನಸ್ಸು ಮೋಹಗೊಳ್ಳುವಂತೆ ರಸ, ಗಂಧ, ಪರಿಮಳ ಬೀರಲಿ. ದೇವಾನುದೇವತೆಗಳಿಗೂ, ಮಾನವ ದಾನವರಿಗೂ ಪ್ರಿಯ ಹಾಗೂ ಪೂಜ್ಯವಸ್ತುವಾಗಿ ಲೋಕದಲ್ಲಿ ನಿನ್ನ ಹೆಸರು ಅಜರಾಮರವಾಗಲಿ.

ಉಮಾ ಮಹೇಶ್ವರರನ್ನು ಒಂದುಗೂಡಿಸಲು ಕಾರಣವಾದ ಆಶ್ರಮ ಕುರಿತು ಶಿವನೆಂದ- ಈ ಆಶ್ರಮದಲ್ಲಿ ಮರಣ ಹೊಂದಿದವನು ಬ್ರಹ್ಮಲೋಕ ಪಡೆಯುತ್ತಾನೆ. ಈ ಆಶ್ರಮದಲ್ಲಿ ದೇವಿ ಪಾರ್ವತಿಯಂತೆ, ಸದಾಚಾರ, ಬ್ರಹ್ಮಚರ್ಯ ಕೈಕೊಂಡು ತಪಸ್ಸನ್ನಾಚರಿಸಿ ಪ್ರಾಣ ಬಿಡುವವನು ನನ್ನ ರುದ್ರಗಣಗಳ ನಾಯಕನಾಗುವನು.

ಉಮೆಯನ್ನೊಮ್ಮೆ ಪ್ರೀತಿಪ್ರೇಮದಿಂದ ನೋಡಿ ಪರಶಿವ ಅಂತರ್ಧಾನನಾದ. ಅವನು ಹೊರಟು ಹೋದ ದಾರಿಯನ್ನೇ ನೋಡುತ್ತ, ದಿನದಿನವೂ ವಿರಹವೇದನೆಯಿಂದ ಉಮೆಯು ಬಳಲುತ್ತ ಬಡಕಲು ಶರೀರದವಳಾಗುತ್ತ ನಡೆದಳು, ಚಂದ್ರನಿಲ್ಲದ ರಾತ್ರಿಯಂತೆ. ಅವಳ ದೈನಂದಿನ ಬಾಳಲ್ಲಿ ವಿರಹ ವ್ಯಥೆಯಕಾವಳ ಕಾಲಿರಿಸಿತು. ಅಲ್ಲಿದ್ದ ಒಂದು ಬಂಡೆಗಲ್ಲಿನ ಮೇಲೆ ಒಬ್ಬಳೇ ಕುಳಿತುಕೊಂಡು ಚಿಂತಾಮಗ್ನಳಾಗಿ ಪರಶಿವನ ಧ್ಯಾನದಲ್ಲಿ ತನ್ನನ್ನು ತಾನೇ ಮರೆಯುತ್ತಿದ್ದಳು.

ಒಂದು ದಿನ ಆಶ್ರಮದ ಸಮೀಪವಿರುವ ಸರೋವರದಲ್ಲಿ ಚಿಕ್ಕಮಗುವು ಅಳುವ ದನಿ ಕೇಳಿ ಬರಹತ್ತಿತು. ಲೀಲಾವಿಲಾಸಕ್ಕಾಗಿ ಮುಕ್ಕಣ್ಣನೇ ಮುಗ್ಧ ಬಾಲಕನಾಗಿ ಸರೋವರದಲ್ಲಿ ಮೊಸಳೆಯ ಬಾಯಿಗೆ ಸಿಲುಕಿ ಅಳಲಾರಂಭಿಸಿದ್ದ-ಇದೆಲ್ಲ ಪ್ರಪಂಚಕ್ಕೆ ಕಾರಣವಾದ ತನ್ನ ಆದಿಮಾಯೆಯ ಪ್ರಭಾವ. ಆ ಸರೋವರದ ಮಧ್ಯದಲ್ಲಿ ಮೊಸಳೆಯ ಬಾಯಿಗೆ ಸಿಲುಕಿದ ಮಗುವು ಮನಸ್ಸು ಕರುಗವಂತೆ ದೀನ ಧ್ವನಿಯಲ್ಲಿ ಕೂಗುತ್ತಿತ್ತು : ''ದುಷ್ಟವಾದ ಈ ಮೊಸಳೆಯ ಬಾಯಲ್ಲಿ ಬಿದ್ದು ನಾನು ಸಾಯುತ್ತಿದ್ದೇನೆ. ಅಯ್ಯೋ! ನನ್ನನ್ನು ಮೊಸಳೆ ನುಂಗುತ್ತಿದೆ. ನನ್ನ ತಂದೆ- ತಾಯಿಗಳಿಗೆ ನಾನೊಬ್ಬನೇ ಮಗನು. ನಾನು ಮೊಸಳೆಗೆ ಬಲಿಯಾದರೆ ನನ್ನ ದುರಂತ ಸಾವನ್ನು ಕೇಳಿದ ತಂದೆ ತಾಯಿಗಳು ಹೌಹಾರಿ ಪ್ರಾಣ ಬಿಡುತ್ತಾರೆ. 'ಅಯ್ಯೋ ತುಂಬಾ ಕಷ್ಟ! ನಾನಿನ್ನೂ ಬಾಲಕ. ಗೃಹಸ್ಥಾಶ್ರಮದ ಸುಖವನ್ನೂ

ಕಾಣದವ. ಈ ಮೊಸಳೆಯ ರೂಪದಿಂದ ಮರಣ ಬಂದೆರಗಿ ನನ್ನನ್ನು ಸೆಳೆದೊಯ್ಯುತ್ತಲಿದೆ... ಕಾಪಾಡಿರಿ ಕಾಪಾಡಾರಿ....'

ಬಾಲಕನ ಆರ್ತಧ್ವನಿ ಕೇಳಿ ಉಮೆ ಗಡಿಬಿಡಿಯಿಂದ ಓಡಿಬಂದಳು ಸರೋವರದ ತೀರಕ್ಕೆ. ನೋಡ ನೋಡುವಷ್ಟರಲ್ಲಿ, ಬಾಲಕನನ್ನು ಕಟ್ಟಿದ ದೈತ್ಯಾಕಾರದ ಮೊಸಳೆ, ವೇಗದಿಂದ ಈಜುತ್ತ ಸರೋವರದ ಮಧ್ಯಕ್ಕೆ ತೆರಳಿತು. ಹಾಗೆ ಎಳೆದೊಯ್ಯುವ ಬಾಲಕನು ಪ್ರಾಣಾಪಾಯ ರಕ್ಷಣೆಗಾಗಿ ಮತ್ತಷ್ಟೂ ಕೂಗುತ್ತಿದ್ದ. ಅವನ ಆರ್ತಧ್ವನಿ ಕೇಳಿ ಅವಳ ಕರುಳು ಮಿಡಿಯಿತು. ದೇವಿಯು ದುಃಖಿತಳಾಗಿ ಮೊಸಳೆಗೆ ನುಡಿದಳು : ಈ ಬಾಲಕನನ್ನು ಬಿಟ್ಟುಬಿಡು. ತಂದೆ ತಾಯಿಗಳಿಗೆ ಏಕಮಾತ್ರ ಪುತ್ರನನ್ನು ನೀನು ಈ ರೀತಿ ಹಿಂಸಿಸಿ ಕೊಲ್ಲುವದು ತರವಲ್ಲ.

ದೇವಿಯ ಮಾತಿಗೆ ಮೊಸಳೆ ಮನಕರಗದೆ, ಮಾರುತ್ತರ ನೀಡುತ್ತ- "ಓ ದೇವಿ ನನಗೆ ಆರು ದಿನಗಳಿಗೊಮ್ಮೆ ಆಹಾರಕೊರತೆ ಬೀಳುವದು. ನಾನಿಂದು ಬಹಳ ಹಸಿದು ಬಳಲಿದ್ದೇನೆ. ಅಲ್ಲದೆ ಇಂದು ನನ್ನದು ಆರನೆಯ ದಿನ. ಈ ದಿನ ಮೊದಲು ನನಗೆ ಯಾವ ಬಲಿಪಶುವು ದೊರೆಯುವದೋ ಅದೇ ನನಗೆ ಆಹಾರವೆಂದು ಜಗದೀಶನೇ ನಿಯಮ ವಿಧಿಸಿದ್ದಾನೆ. ಈ ಬಾಲಕನಾದರೂ ವಿಧಿ ಪ್ರೇರಣೆಯಿಂದಲೇ ನನಗೆ ಆಹಾರರೂಪವಾಗಿ ದೊರಕಿದ್ದಾನೆ. ಖಂಡಿತ ನಾನು ಬಿಡಲಾರೆನು.

ದೇವಿಯು ಬಾಲಕನನ್ನು ಪ್ರಾಣಾಪಾಯದಿಂದ ಪಾರುಮಾಡಲು ನುಡಿದಳು : ಹಾಗಿದ್ದರೆ ನಾನು ಹಿಮವತ್ಪರ್ವತದ ಶಿಖರದಲ್ಲಿ ಮಾಡಿದ ತಪಸ್ಸಿನ ಫಲವನ್ನೆಲ್ಲ ನಿನಗೆ ಕೊಡುವೆ ನಿನಗೆ ಕೈ ಮುಗಿದು ಬೇಡಿಕೊಳ್ಳುತ್ತೇನೆ. ಬಾಲಕನನ್ನು ಜೀವ ಸಹಿತವಾಗಿ ಬಿಟ್ಟು ಪುಣ್ಯಕಟ್ಟಿಕೊ.

ದೇವಿಯ ಮಾತಿಗೆ ಮೊಸಳೆಯು ತನ್ನದೊಂದು ಸಲಹೆ ನೀಡಿತು "ಈ ಬಾಲಕನಲ್ಲಿ ಸುಮ್ಮನೆ ದಯತೋರಿಸಲು, ನಿನ್ನ ತಪಸ್ಸಿನ ಫಲವನ್ನು ವ್ಯರ್ಥ ವ್ಯಯ ಮಾಡಬೇಡ. ಆದರೆ ಬೇರೊಂದು ಉಪಾಯವಿದೆ."

'ಅದೇನು ಜಾಗ್ರತೆಯಾಗಿ ಹೇಳು. ಬ್ರಾಹ್ಮಣರು ನನಗೆ ಪ್ರಿಯರು ಹಾಗೂ ಪೂಜ್ಯರು. ಈ ಬ್ರಾಹ್ಮಣ ಕುಮಾರನನ್ನು ಸಾವಿನ ದವಡೆಯಿಂದ ಪಾರು ಮಾಡಬೇಕಾದದ್ದು ನನ್ನ ಧರ್ಮ. ಅದಕ್ಕಾಗಿ ನಾನು ಎಂತಹ ತ್ಯಾಗ ಮಾಡಲೂ ಸದಾಸಿದ್ಧ- ಎಂದಳು ದೇವಿ. ಅವಳ ಮಾತಿಗೆ ಮೊಸಳೆಯು ಮಾರ್ನುಡಿಯಿತು :- "ದೇವಿ, ನೀನು ಉತ್ತಮವಾದ ತಪಸ್ಸನ್ನು ಸ್ವಲ್ಪಮಟ್ಟಿಗೆ ಮಾಡಿರುವೆ, ಆ ತಪಸ್ಸಿನ ಫಲವೆಲ್ಲ ನನಗೆ ಕೊಟ್ಟುಬಿಡು; ತಕ್ಷಣ ಈ ಬ್ರಾಹ್ಮಣ ಕುಮಾರನನ್ನು ಬಿಡುವೆ."

ತಕ್ಷಣವೆ ದೇವಿಯು ನಿರ್ಧರಿಸಿ, ಬಾಲ್ಯ ಮೊದಲುಗೊಂಡು ಇಂದಿನವರೆಗೆ ಮಾಡಿದ ಪುಣ್ಯವನ್ನೆಲ್ಲ ಮೊಸಳೆಗೆ ಸ್ವಸಂತೋಷದಿಂದ ಪ್ರದಾನಮಾಡಿದಳು. ಅವಳ ತಪಃ ಪ್ರಭಾವದಿಂದ ಆ ಮೊಸಳೆಯು ದಿವ್ಯವಾದ, ಕಾಂತಿಮಯವಾದ, ಪ್ರಕಾಶರೂಪ ತೇಜಸ್ಸು ಪಡೆಯಿತು. ಹರ್ಷ ಚಿತ್ತದಿಂದ, ಗೆಲುವಿನಲ್ಲಿ ನುಡಿಯಿತು : "ಲೋಕಮಾತೆ ಇದೇನಿದು! ಕಷ್ಟಪಟ್ಟು ಸಂಪಾದಿಸಿದ ತಪಸ್ಸಿನ ಫಲವನ್ನು ಪರಾರ್ಥಕ್ಕಾಗಿ ವ್ಯಯ ಮಾಡುವದೆ! ಇರಲಿ, ಇರಲಿ, ನಿನ್ನ ಬ್ರಾಹ್ಮಣ ಭಕ್ತಿಯಿಂದ ಸಂತುಷ್ಟವಾಗಿದೆ. ಇದೋ, ನಿನ್ನ ತಪಸ್ಸನ್ನೂ ಬಾಲಕನನ್ನೂ ತೆಗೆದುಕೊ."

ಲೋಕಮಾತೆ ದೇವಿ ನುಡಿದಳು : ''ಹೊತ್ತು ಬಂದರೆ ಈ ದೇಹವನ್ನಾದರೂ ಬಲಿಗೊಟ್ಟು ಬ್ರಾಹ್ಮಣ ಕುಮಾರನನ್ನು ಬದುಕಿಸಬೇಕಾದದ್ದು ನನ್ನ ಧರ್ಮ. ತಪಸ್ಸಿನ ಅನುಗ್ರಹ ಬಲವನ್ನು ಮತ್ತೆ ಮರಳಿ ಸಂಪಾದಿಸಬಹುದು. ಆದರೆ ಹೋದ ಜೀವ ಮರಳಿ ಬರಲು ಸಾಧ್ಯವೇ? ಇದನ್ನೆಲ್ಲವನ್ನು ಚೆನ್ನಾಗಿ ಯೋಚನೆ ಮಾಡಿಯೇ ತಪಸ್ಸನ್ನೂ ನಿನಗೆ ಕೊಟ್ಟು ಬಾಲಕನನ್ನು ಬಿಡಿಸಿರುವೆ... ನಿನಗೆ ತಪಸ್ಸನ್ನೂ ಕೊಟ್ಟದ್ದಾಗಿದೆ. ಕೊಟ್ಟದ್ದನ್ನು ಅದರಲ್ಲೂ ದಾನವಾಗಿ ನೀಡಿದ್ದನ್ನು ಹಿಂದಕ್ಕೆ ಪಡೆಯುವದು ಧರ್ಮವಲ್ಲ. ನೀತಿಯಲ್ಲ. ಆದ್ದರಿಂದ ತಪಸ್ಸು ನೀನಿಟ್ಟುಕೊಂಡು ಬ್ರಾಹ್ಮಣ ಬಾಲಕನನ್ನು ಬಿಟ್ಟುಬಿಡು. ದೇವಿಯ ಮಾತಿಗೆ ಸಮ್ಮತಿಸಿ ಮೊಸಳೆಯು ಬಾಲಕನನ್ನು ಬಿಟ್ಟು ನೀರಿನಲ್ಲಿ ಕಣ್ಮರೆ ಯಾಯಿತು, ಬಾಲಕನೂ ಸಹ ಕಾಣದಾದನು. ಈ ರೀತಿಯಾಗಿ ತಪಸ್ಸು ವ್ಯಯವಾದ್ದರಿಂದ ಗಿರಿಜೆಗೆ ಅಸಮಾಧಾನವಾಯಿತು. ಮತ್ತೆ ಮರಳಿ ತಪಸ್ಸು ಮಾಡಲು ಅಣಿಯಾದಳು. ಅದನ್ನು ತಿಳಿದ ಮಹೇಶ್ವರನು ಅವಳಿಗೆ ತಪಸ್ಸಿಗೆ ಹೋಗದಂತೆ ಹಿತೋಪದೇಶ ಹೇಳಿದ :

ಲೀಲಾ ವಿನೋದಕ್ಕಾಗಿ ಬ್ರಾಹ್ಮಣ ಬಾಲಕನ ರೂಪಧರಿಸಿ ಬಂದ ನನಗಾಗಿ ನೀನು ಇದುವರೆಗೆ ಸಂಪಾದಿಸಿದ ತಪಸ್ಸನ್ನೆಲ್ಲಾ ಧಾರೆ ಎರೆದೆ. ಅದರಿಂದ ನೀನು ತಿಳಿದಂತೆ ತಪಸ್ಸು ವ್ಯಯವಾಗಿಲ್ಲ. ಅದರ ಬದಲು ಸಾವಿರಪಾಲು ವೃದ್ಧಿಯಾಗಿ ಅಕ್ಷಯವಾಗಿದೆ, ಇನ್ನು ನೀನು ತಪಸ್ಸಿಗೆ ತೆರಳುವ ಅಗತ್ಯವಿಲ್ಲ. ಪರಶಿವನ ಅಭಯವಚನ ಕೇಳಿದ ಉಮಾದೇವಿಯ ಮನಸ್ಸಿಗೆ ನೆಮ್ಮದಿ ಎನಿಸಿತು. ಶಿವನಿಂದ ವರವನ್ನು ಪಡೆದು ಗೆಲುವಿನಿಂದ ಸ್ವಯಂವರದ ಶುಭಗಳಿಗೆ ನಿರೀಕ್ಷಿಸುತ್ತ ಇದ್ದಳು. ಶಿವನು ಬಾಲಕನಂತೆ ಲೀಲೆ ತೋರಿದ ಸುಂದರ ಕಥಾನಕವನ್ನು ಓದುವವನು, ಅಥವಾ ಕೇಳುವವನು ಮುಂದಿನ ಜನ್ಮದಲ್ಲಿ ಶಿವನ ಗಣಗಳಲ್ಲಿ ಪ್ರಧಾನನಾಗಿ, ಸರ್ವ ಸುಖ, ಶಾಂತಿ, ಭೋಗಾದಿಗಳನ್ನು ಅನುಭವಿಸುತ್ತ ರುದ್ರಲೋಕದಲ್ಲಿ ಗೌರವಾದರ ಹೊಂದುವನು.

## ಉಮಾ-ಮಹೇಶ್ವರರ ವಿವಾಹ ವರ್ಣನೆ

ಮುನಿವೃಂದ ಕುರಿತು ಕಮಲಾಸನನು ಮಾತು ಮುಂದುವರೆಸಿದ- ಹಿಮವತ್ಪರ್ವತದ ಮೇಲೆ ವಿಶಾಲವಾದ ತಪ್ಪಲುಪ್ರದೇಶದಲ್ಲಿ ವೈಭವದಿಂದ ಸ್ವಯಂವರದ ಏರ್ಪಾಡುಗಳು ಆರಂಭವಾದವು. ಸ್ವಯಂವರವು ಸಂಭ್ರಮಪೂರಿತವಾಗಿ, ನವ್ಯವಾಗಿ ಭವ್ಯವಾಗಿ ನಡೆಯಬೇಕೆಂದು ಹಿಮವಂತನ ಅಭಿಲಾಷೆ. ಉತ್ಸಾಹದಿಂದ ಅವನ ನಿರೀಕ್ಷೆಗೆ ತಕ್ಕಂತೆ ಸಕಲ ಸುವ್ಯವಸ್ಥೆಯನ್ನು ಅಣಿಮಾಡಲಾಯಿತು. ಗಿರಿಜೆಯ ಸ್ವಯಂವರಕ್ಕೆ ದೇವಾಧಿದೇವತೆಗಳೂ ದಿವ್ಯ ವಿಮಾನಾರೂಢರಾಗಿ ಆಗಮಿಸಿದರು.

ಪರ್ವತರಾಜನು ಈ ಮೊದಲು ಮಾರುವೇಷದಲ್ಲಿ ಬಂದು ಉಮೆಯನ್ನು ವರಿಸಿ ಅಭಿಲಾಷೆ ತೋರಿದವನು - ಪರಶಿವನೇ ಎಂಬುದು ಅರಿತುಕೊಂಡಿದ್ದ. ಆದರೂ ತನ್ನ ಮನೋಸಂಕಲ್ಪ ಸಾಧನೆಗಾಗಿ ಉಮಾದೇವಿಯ ಸ್ವಯಂವರದ ಏರ್ಪಾಡುಮಾಡಿ, ಎಲ್ಲ ಲೋಕಗಳಿಗೂ ಪ್ರಸಿದ್ಧಪಡಿಸಿದ್ದ. ಅವನ ಉದ್ದೇಶವಿಷ್ಟೇ : ದೇವತೆಗಳು, ದಾನವರು, ಸಿದ್ಧರು, ನಾಗರು, ಗಂಧರ್ವರು ಮೊದಲಾದ ವಿವಿಧ ಲೋಕದ ಜನರು ಕಲೆತಿರುವಾಗ ಅವರೆದುರಿನಲ್ಲಿ ಪ್ರತ್ಯಕ್ಷ ಪರಮೇಶ್ವರನ ಕೊರಳಿಗೆ ತನ್ನ ಮಗಳು ಮಾಲೆಹಾಕಿದರೆ ಅದಕ್ಕೊಂದು ಲೋಕಪ್ರಸಿದ್ಧಿ ಬರುವದು ಹಾಗೂ ಯಥಾಯೋಗ್ಯವೂ ಆಗುವದು.

ಇದರಿಂದ ನನಗೂ ಶ್ರೇಯಸ್ಸಾಗುವದು ಎಂದು ಮುಂದಾಲೋಚನೆ ಮಾಡಿದ್ದ. ಅಷ್ಟೇ ಅಲ್ಲ. ಹೀಗೆಂದೂ ನಿರ್ಧಾರ ಕೈಕೊಂಡು ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸಿ ಸ್ವಯಂವರಕ್ಕೆ ಬರಲು ದೇವತೆಗಳಿಗೆಲ್ಲ ಆಹ್ವಾನ ಕಳುಹಿಸಿದ್ದ.

ಸ್ವಯಂವರವೆಂದು ಬಹಿರಂಗವಾಗಿ ಡಂಗೂರ ಸಾರಿದಾಗ, ಸಾಲಂಕೃತ ಸುಂದರ ರಾಜಧಾನಿಗೆ ದೇವತೆಗಳು, ಜಗನ್ನಾಯಕರು ಸುಂದರ ವೇಷಧರಿಸಿ ವಾಹನಾರೂಢರಾಗಿ ಪರ್ವತರಾಜನ ಅರಮನೆಯ ಅಂಗಣಕ್ಕೆ ಬಂದಿಳಿದರು.

ಹಿಮವಂತನ ವಿಜ್ಞಾಪನೆ-ಆದರದ ಕರೆಗೆ ಓಗೊಟ್ಟು ನಾನು (ಬ್ರಹ್ಮ) ಹಲವು ತಪಸ್ವಿಗಳೊಂದಿಗೆ ಅರಳಿದ ಕಮಲದ ಮೇಲೆ ಕುಳಿತು ಹಿಮವಂತನ ರಾಜಧಾನಿಗೆ ಪ್ರಯಾಣ ಮಾಡಿದೆ.

ಸಾವಿರ ಕಣ್ಣಿನ ದೇವೇಂದ್ರ, ದಿವ್ಯ ಸುಗಂಧ ದ್ರವ್ಯ ಮೈಗೆ ಲೇಪಿಸಿಕೊಂಡು ಹಲವು ಬಗೆಯ ಹಾರಗಳನ್ನು ಧರಿಸಿ, ಕೈಯಲ್ಲಿ ವಜ್ರಾಯುಧ ಹಿಡಿದುಕೊಂಡು ಅಲಂಕೃತ ಐರಾವತನ್ನೇರಿ ಮುಗುಳುನಗೆ ತೇಲಿಸುತ್ತ ಗಾಳಿಯಲ್ಲಿ ಗಂಧ ಬೀರುತ್ತ ನವಿರಾಗಿ ತೇಲುವಂತೆ ರಾಜಧಾನಿಗೆ ಬಂದ. ಅವನೊಡನೆ ಅನೇಕ ದೇವತೆಗಳೂ ಬಂದರು. ಸಾವಿರ ಸುಂದರ ಕಿರಣಗಳ ದಿವ್ಯ ತೇಜಸ್ವೀ ಸೂರ್ಯನಾರಾಯಣನು, ಸುವರ್ಣ ಕಾಂತಿಯಿಂದ ಕಂಗೊಳಿಸುವ ಧ್ವಜ ಪತಾಕೆಗಳಿಂದ ಅಲಂಕರಿಸಿದ ಚಿನ್ನದ ವಿಮಾನವೇರಿ ದಿಕ್ಕುಗಳನ್ನು ದೀಪ್ತಗೊಳಿಸುತ್ತ ಬಂದ. ಭಗನೆಂಬ ಆದಿತ್ಯನು ಧರಿಸಿದ ದೇದೀಪ್ಯಮಣಿಗಳಿಂದ ನಿರ್ಮಿತವಾದ ತೇಜೋ ಮಯವಾದ ಕುಂಡಲಗಳು ಭೂಮಂಡಲವನ್ನೆಲ್ಲ ಬೆಳಗುತ್ತಿರುವಂತೆಯೇ, ದಿವ್ಯ ಭವ್ಯವಾದ ವಿಮಾನದಲ್ಲಿ ಹಿಮವಂತನ ರಾಜಧಾನಿಗೆ ಹೊಂಬೆಳಕು ಚೆಲ್ಲುತ್ತ ಬಂದ. ಹುರಿಕಟ್ಟಿನ ಮೈಯುಳ್ಳವನೂ, ಕಠೋರ ಸ್ವಭಾದವನೂ, ಮಹಾತೇಜಸ್ವಿಯೂ, ಬಲಶಾಲಿಯೂ ಆದ ಯಮನು ಅಲಂಕೃತನಾಗಿ ಕೈಯಲ್ಲಿ ಯಮದಂಡವನ್ನು ಝಳಿಪಿಸುತ್ತ ಸೊಕ್ಕಿನಿಂದ ಮುಸುಗುಡುತ್ತಿರುವ ಕೊಬ್ಬಿದ ಕೋಣವನ್ನೇರಿ ಬಂದ. ಅಜಾನುಬಾಹು ದೇಹವುಳ್ಳವನೂ, ಜಗತ್ತಿಗೆ ಪ್ರಾಣಾಧಾರನೂ ಎಂದು ಹೆಸರಾದ ವಾಯುದೇವರು ಹಲವಾರು ವಿಧದ ರತ್ನಹಾರ ಹಾಗೂ ಆಭರಣಗಳನ್ನು ಧರಿಸಿ, ಆಕರ್ಷಕ ರೀತಿಯಲ್ಲಿ ಅಲಂಕೃತನಾಗಿ ವಿಮಾನವನ್ನೇರಿ ಗಿರಿಜೆಯ ಸ್ವಯಂವರಕ್ಕೆ ಆಗಮಿಸಿದ. ಸರ್ವನಿಧಿಗಳ ಸರ್ವಾಧಿಕಾರಿ ಕುಬೇರನು ನಾನಾ ವರ್ಣಗಳ ರತ್ನಗಳ ಹಾರ ಹಾಗೂ ಕಿರೀಟ ಧರಿಸಿ, ಶರೀರವನ್ನು ಮತ್ತಷ್ಟೂ ಮನೋಹರವಾಗಿ ಕಾಣುವಂತೆ ಅಲಂಕರಿಸಿ ಕೊಂಡು, ಸುಂದರ ವೇಷಭೂಷಣ ತೊಟ್ಟುಕೊಂಡು, ಪುಷ್ಪಕ ವಿಮಾನಾರೂಢನಾಗಿ ಹಿಮವಂತನ ರಾಜಧಾನಿಗೆ ಬಂದಿಳಿದ. ಚಂದ್ರನ ರೂಪವೇ ದಿವ್ಯ ಭವ್ಯ ಸುಂದರ, ಅವನ ಕೊರಳಲ್ಲಿಯ ವರ್ಣಮಯ ರತ್ನಹಾರಗಳು. ಭೂಷಣಾದಿ ಅಲಂಕಾರಗಳು ದಿವ್ಯ ಕಾಂತಿಯಿಂದ ಕಣ್ಣು ಕೋರೈಸು ವಂತಿರಲು, ತನ್ನ ಆಗಮನದಿಂದ ಹಾಗೂ ಮುಗುಳನಗೆಯಿಂದ ದೇವಾಸುರರನ್ನು ಆನಂದ ಪಡಿಸುತ್ತ ರಜನೀಕಾಂತ ಹಿಮವಂತನ ರಾಜಧಾನಿಗೆ ಸಡಗರದಿಂದ ಬಂದ. ನೀಲವರ್ಣದ ಶರೀರವುಳ್ಳ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಕೊರಳಲ್ಲಿ ತುಳಸಿ ಮಾಲೆ ಧರಿಸಿ, ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮ ಧಾರಿಯಾಗಿ, ಸುಂದರ ವೇಷ ಧರಿಸಿ ಗರುಡ ವಾಹನನಾಗಿ ಸಡಗರದಿಂದ ತಡಮಾಡದೆ, ಹಿಮವಂತನ ರಾಜಧಾನಿಗೆ ಆಗಮಿಸಿದ.

ದೇವ ವೈದ್ಯರಾದ ಅಶ್ವಿನೀಕುಮಾರದ್ವಯರು ಸುಂದರವಾದ ವೇಷಭೂಷಣಾದಿಗಳಿಂದ ಅಲಂಕೃತರಾಗಿ, ನವರಂಗಗಳ ರತ್ನಹಾರಗಳನ್ನು ಧರಿಸಿ ವಿಮಾನವನ್ನೇರಿ ಗಿರಿಜೆಯ ಸ್ವಯಂವರಕ್ಕೆ ಉಪಸ್ಥಿತರಾದರು. ಸಾವಿರ ಹೆಡೆಗಳುಳ್ಳ ಆದಿಶೇಷನೂ ಸಹ, ನಾಗಕುಮಾರರೊಡನೆ, ತನ್ನ ತೇಜಸ್ವಿಯಾದ ಶರೀರದಿಂದ ಬೆಳಗುತ್ತ ದಿವ್ಯ ವಿಮಾನವನ್ನೇರಿ, ಗಿರಿಜೆಯ ಸ್ವಯಂವರದಲ್ಲಿ ಪಾಲುಗೊಳ್ಳಲು ಮುಂದಾಗಿ ಬಂದ. ದೇವತೆಗಳು ಸರ್ವಾಲಂಕಾರ ಭೂಷಿತರಾಗಿ ಗಿರಿಜೆಯ ಸ್ವಯಂವರಕ್ಕೆ ಬಂದ ರೀತಿಯಲ್ಲಿ: ದೈತ್ಯರೂ 'ನಿಮಗಿಂತ ನಾವೇನೂ ಕಡಿಮೆಯವರಲ್ಲ' ಎನ್ನುವಂತೆ ವರನಿಗೆ ಅನುರೂಪವಾದ ರೀತಿಯಲ್ಲಿ ಸುಂದರಾಂಗರಂತೆ ಕಂಗೊಳಿಸುತ್ತ, ದೇವತೆಗಳಿಗೆ ಎದುರಿನ ಸಾಲಿನಲ್ಲಿ ನಿಂತುಕೊಂಡರು. ಗಂಧರ್ವ ರಾಜನಾದ ಚಿತ್ರರಥನು ಮುಂದಾಗಿಯೇ ದೇವೇಂದ್ರನ ಅಪ್ಪಣೆ ಪಡೆದು, ಸುಂದರ ವೇಷದಿಂದೊಪ್ಪುತ್ತ ಹಲವಾರು ಗಂಧರ್ವ ಅಪ್ಸರೆಯರೊಡನೆ ಮಂದಹಾಸ ದೊಂದಿಗೆ ದಿವ್ಯ ವಿಮಾನವನ್ನೇರಿ ಹಿಮವಂತನ ಅರಮನೆಗೆ ಬಂದ. ಇನ್ನು ಹಲವಾರು ದೇವತೆಗಳಲ್ಲದೆ ಯಕ್ಷರು, ನಾಗರು, ಕಿನ್ನರ, ಕಿಂಪುರುಷರು ವಿದ್ಯಾಧರರು, ವೈವಿಧ್ಯಮಯ ವೇಷಭೂಷಣಗಳಿಂದ ಚಿತ್ರವಿಚಿತ್ರ ವಾಹನಗಳನ್ನೇರಿ ಬಂದರು. ದೇವರ ದೇವನಾದ ದೇವೇಂದ್ರ ದೇವನಾಯಕರ ಮಧ್ಯದಲ್ಲಿ ತನ್ನದೇ ಆದ ಆಕರ್ಷಕ ವ್ಯಕ್ತಿತ್ವ ಹಾಗೂ ತೇಜಸ್ಸಿನಿಂದ ಸ್ವಯಂವರ ಮಂಟಪದಲ್ಲಿ ಉಪಸ್ಥಿತ ನಿದ್ದು ತನಗೆ ಉಚಿತವಾದ ಆಸನದಲ್ಲಿ ಕುಳಿತಿದ್ದ.

ಆದಿ ಪ್ರಕೃತಿ ರೂಪಿಣಿ ಉಮಾದೇವಿ ಮೂರು ಲೋಕಗಳಿಗೂ ಅವಳು ಲೋಕಮಾತೆ ಆದಿಶಕ್ತಿಯ ಅವತಾರ. ದಕ್ಷಬ್ರಹ್ಮನ ಮೇಲಿನ ಕೋಪದಿಂದ ಶರೀರವನ್ನು ತ್ಯಜಿಸಿ, ಪರ್ವತರಾಜನ ಮಮತೆಯ ಪುತ್ರಿಯಾಗಿ ಉಮಾದೇವಿಯೆಂಬ ಹೆಸರಿನಿಂದ ಜನಿಸಿದವಳು. ಇವಳನ್ನು ಸ್ವಯಂವರದಲ್ಲಿ ವರಿಸಲು ಸೌಂದರ್ಯ, ಸಾಹಸ, ಐಶ್ವರ್ಯ, ವಿಕ್ರಮಗಳಲ್ಲಿ ಪರಾಕ್ರಮಿಗಳೆನಿಸಿದ ವಿವಿಧ ಲೋಕಗಳಿಂದ ಜನರು ಕಾತರಿಸಿ ಬಂದಿರಲು ಸ್ವಯಂವರ ಮಂಟಪ, ಸಭಾಂಗಣ ಸಡಗರ, ಸಂಭ್ರಮಗಳಿಂದ ತುಂಬಿ ತುಳುಕಿತು. ಸ್ವಯಂವರವಿನ್ನು ಆರಂಭವಾಗಬೇಕಷ್ಟೆ.

ಉಮಾದೇವಿಯು ಮಣಿಮಯವಾದ ವಿಮಾನವನ್ನೇರಿ ಅಶೋಕವೃಕ್ಷದಿಂದಾಯ್ದು ಅಣಿಗೊಳಿಸಿದ ಹೂಮಾಲೆಯನ್ನು ಹಿಡಿದು ಸ್ವಯಂವರಕ್ಕಾಗಿ ಸಭೆಗೆ ಹೊರಟಳು. ಅವಳ ಎಡಬಲ ಪಾರ್ಶ್ವಗಳಲ್ಲಿ ಸಖಿಯರು ಚಾಮರ ಬೀಸುತ್ತಿದ್ದರು.

ಬ್ರಹ್ಮನು ಮಾತನ್ನು ಮುಂದುವರೆಸುತ್ತ ಋಷಿಗಳಿಗೆ ಹೇಳಿದ-ದೇವೇಂದ್ರ ಮೊದಲಾದ ದೇವತೆಗಳು ಹಾಗೂ ಇನ್ನಿತರ ಲೋಕಗಳಿಂದ ಆಗಮಿಸಿದ ಜನನಾಯಕರು ಕಿಕ್ಕಿರಿದು ತುಂಬಿದ ಸಭೆಗೆ ಉಮಾದೇವಿಯು ಸ್ವಯಂವರಕ್ಕಾಗಿ ಅಣಿಯಾಗಿ ಬರಲು, ಮಹೇಶ್ವರನು ಅವಳನ್ನು ಪರೀಕ್ಷಿಸಲು ಆ ದೇವಿಯ ತೊಡೆಯ ಮೇಲೆ ಐದು ಶಿಬೆಗಳುಳ್ಳ ಸಣ್ಣ ಮಗುವಾಗಿ ಮಲಗಿಕೊಂಡನು. ಉಮಾದೇವಿಯು ತನ್ನ ತೊಡೆಯ ಮೇಲಿನ ಮಗುವೇ ಶಿವನೆಂಬುದನ್ನು ಜ್ಞಾನದೃಷ್ಟಿಯಿಂದ ತಕ್ಷಣ ತಿಳಿದಳು. ಪ್ರೀತಿ-ಪ್ರೇಮದಿಂದ ಆ ಮಗುವನ್ನು ಎತ್ತಿಕೊಂಡಳು.

ಆ ಶಿಶುರೂಪದ ಶಿವನನ್ನು ಎದೆಗಪ್ಪಿಕೊಂಡು, ತನ್ನ ಪತಿಯನ್ನೂ ಪಡೆದವಳಂತೆ ತೃಪ್ತಿ ಭಾವದಿಂದ, ಸ್ವಯಂವರ ಮಂಟಪದಿಂದ ಹಿಂತಿರುಗಿ ಹೊರಡಲು ಸಿದ್ಧಳಾದಳು.

ಶಿವನ ಮಾಯೆ ದೇವತೆಗಳಿಗೂ ತಿಳಿಯದು. ಅವರು ಅಜ್ಞಾನದಿಂದ ಈ ಸಣ್ಣ ಮಗುವು ಯಾರೆಂಬ ಜಿಜ್ಞಾಸೆಗೆ ತೊಡಗಿದರು. ಹಲವರು ಆ ಕುಮಾರನ ಮೇಲೆ ಕಡುಕೋಪದಿಂದ ಹರಿಹಾಯ್ದರು. ದೇವೇಂದ್ರನಿಗೆ ಸಿಟ್ಟು ತಡೆಯಲಾಗಲಿಲ್ಲ. ಕೂಡಲೇ ವಜ್ರಾಯುಧ ಝಳಪಿಸಿ ಆ ಮಗುವನ್ನು ಕೊಲ್ಲಲು ಸಿದ್ಧನಾದ. ಆದರೆ ಆಯುಧ ಮೇಲೆತ್ತಿದ ಕೈ ಅಲುಗಾಡದೆ (ನಿಶ್ಚಲವಾಗಿ) ಹಾಗೆಯೇ ನಿಂತಿತು. ಶಿವನು, ಇಂದ್ರನ ತೋಳು ಚಲಿಸದಂತೆ ಮಾಯೆಯಿಂದ ಸ್ತಂಭನಗೊಳಿಸಿದನು. ಇದರಿಂದ ಬಲಶಾಲಿಯಾದ ಇಂದ್ರನಿಗೆ ಒಂದಂಗುಲವೂ ಚಲಿಸದಷ್ಟು ನಿಶ್ಶಕ್ತಿ ಆವರಿಸಿತು ಶರೀರದಲ್ಲೆಲ್ಲ. ಭಗನೆಂಬ ಬಲಶಾಲಿ ಆದಿತ್ಯನು ತನ್ನ ಆಯುಧದಿಂದ ಕುಮಾರನನ್ನು ಕತ್ತರಿಸಲು ಹವಣಿಸಿದ. ಶಿಶುರೂಪಿಯಾದ ಶಿವನು ಕೂಡಲೇ ಅವನ ಮೇಲೆತ್ತಿದ ತೋಳು ನಿಂತಲ್ಲಿಯೇ ನಿಲ್ಲುವಂತೆ ಮಾಡಿದ. ಯೋಗಶಕ್ತಿ, ತೇಜಸ್ಸೆಲ್ಲವೂ ಉಡುಗಿಹೋಯಿತು.

ನಾರಾಯಣನು ಇದೇನು ಮಹಾಕಾರ್ಯವೆಂದು ಒಂದು ಬಗೆಯ ತಿರಸ್ಕಾರದ ಗೌಣ ಭಾವನೆಯಿಂದ ನೋಡಿದನು. ಶಿಶುರೂಪಿಯಾದ ಶಂಕರನನ್ನು ನಾನು (ಬ್ರಹ್ಮ) ಕೂಡಲೇ ಮೇಲೆದ್ದು, ಶಿವರಹಸ್ಯಾಸ್ತೋತ್ರ ಪಾರಾಯಣಗೈಯುತ್ತ ಲೋಕ ಶಿಕ್ಷಾರ್ಥವಾಗಿ ಸುತ್ತಿಸಿದೆ. ''ಓ ದೇವದೇವ ಮಹಾದೇವ, ನೀನು ಹುಟ್ಟು, ಮುಪ್ಪು, ಸಾವುಗಳಿಂದಾಚೆ ಇರುವವನು. ನಿನಗೆ ಜನ್ಮ, ಜರಾ, ಮರಣಗಳ ಭಯವೇ ಇಲ್ಲ. ಪರಬ್ರಹ್ಮನೂ ನೀನೇ. ಅಪರಬ್ರಹ್ಮನೂ ನೀನೇ. ಅಮೃತರೂಪಿಯಾದ ನೀನು ಜಗದ ಆದಿಕಾರಣ. ನಿನ್ನ ಸೃಷ್ಟಿ, ದೃಷ್ಟಿಗಳಿಗೆ ಆದ್ಯಂತಗಳು ಇಲ್ಲವೇ ಇಲ್ಲ. ಪ್ರಕೃತಿ ಪುರುಷರನ್ನು ಸೃಜಿಸಿ ತನ್ಮೂಲಕ ಜಗತ್ತನ್ನು ವಿರಚಿಸುವೆ. ಉಮಾದೇವಿ ಪ್ರಕೃತಿ ಸ್ವರೂಪಿಣಿ. ನಿನ್ನ ಸೃಷ್ಟಿ ಕಾರ್ಯಕ್ಕೆ ಅವಳೇ ಸಹಾಯಕಳು. ಆ ದೇವಿಯೇ ನಿನ್ನನ್ನು ಪತ್ನೀಭಾವದಿಂದ ಆಶ್ರಯಿಸಿರುವಳು. ದೇವಿಯಿಂದ ಕೂಡಿರುವ ನಿನಗೆ ನಮಸ್ಕಾರ. ನಿನ್ನ ಸಲಹೆಯಂತೆ ನಾನು ಈ ದೇವತೆಗಳನ್ನು ಚರಾಚರ ಸೃಷ್ಟಿಯನ್ನು ರೂಪಿಸಿದ್ದೇನೆ. ಆದರೆ ಈಗವರು ನಿನ್ನ ಆದಿ ಮಾಯೆಯಿಂದಾಗಿ ಮೋಹಿತರಾಗಿ ಅಜ್ಞಾನಿಗಳಾಗಿರುವರು. ಪರಶಿವನೇ, ಅವರ ಈ ಅಜ್ಞಾನವನ್ನು ಕ್ಷಮಿಸು, ಇವರು ಮೊದಲಿಗಿದ್ದ ರೀತಿಯಲ್ಲಿ ಇರುವಂತೆ ಮಾರ್ಪಡಿಸಿ ಕಾಪಾಡು.

ಪರಮೇಶ್ವರನನ್ನು ಈ ರೀತಿ ಬಣ್ಣನೆಮಾಡಿ, ನಾನು ಅಲ್ಲಿ ಕೂಡಿದ ದೇವತೆಗಳಿಗೆಲ್ಲ ಪರಮೇಶ್ವರನಿಗೆ ಶರಣಾಗತರಾಗಲು ಸೂಚಿಸಿದೆ. ನನ್ನ ಮಾತಿಗೆ ಸಮ್ಮತಿಸಿ ಅವರೆಲ್ಲ ಭಕ್ತಿ ಭಯದಿಂದ ಪರಮೇಶ್ವರನನ್ನು ಸ್ತೋತ್ರಮಾಡಿದರು. ನಾನೂ ಸಹ ಪುನಃ ಭಕ್ತಿಯಿಂದ ಅವರೊಡನೆ ಭಜಿಸಿದೆ. ಆಗ ದೇವನು ಪ್ರಸನ್ನನಾಗಿರಲು, ದೇವತೆಗಳ ಅಂಗಾಂಗಗಳು ಸರಿಯಾದವು. ಅವರ ಅಹಂಕಾರ ನಾಶ ಹೊಂದಿದಾಗ, ಪರಶಿವನು ಮುಕ್ಕಣ್ಣನಾಗಿ ತನ್ನ ನಿಜರೂಪ ತೋರಿದನು. ಶಿಶುರೂಪದಿಂದ ನಿಜರೂಪದಲ್ಲಿ ಪರಶಿವನು ಪ್ರತ್ಯಕ್ಷ ನಿಂತಾಗ, ಅವನ ಉಗ್ರಪ್ರಕಾಶ ಕಣ್ಣು ಕುಕ್ಕಿಸುತ್ತಿರಲು, ದೇವತೆಗಳಿಗೆ ಕಣ್ಣು ತೆರೆಯುವದಾಗಲಿಲ್ಲ. ಮತ್ತೆ ಮಹೇಶ್ವರ ಅವರಿಗೆ ದಿವ್ಯದೃಷ್ಟಿ ಪ್ರದಾನ ಮಾಡಿದ. ಈ ರೀತಿ ದೇವೇಂದ್ರಾದಿ ಸಕಲ ದೇವತೆಗಳು ಮುಕ್ಕಣ್ಣನಾದ ಪರಮೇಶ್ವರನ ನಿಜರೂಪ ಕಂಡರು. ಆಗ ದೇವಿಯು ಹರ್ಷ ಗೊಂಡವಳಾಗಿ ಶಿವನ ಕೊರಳಿಗೆ ಮಾಲೆ ಹಾಕಿದಳು. ಅವನ ಚರಣ ಕಮಲಗಳಿಗೆ ಬೊಗಸೆ ತುಂಬ ಹೂವನ್ನರ್ಪಿಸಿದಳು. ಅಲ್ಲಿ ನೆರೆದ ದೇವತೆಗಳು ಒಕ್ಕೊರಲಿನಿಂದ ಉಮಾಮಹೇಶ್ವರರಿಗೆ ಜಯ ಜಯಕಾರ ಮಾಡಿ ನಲಿದಾಡಿದರು.

ಪರ್ವತರಾಜನಿಗೆ ನಾನು ಸಂತೋಷದಿಂದ-ಪರ್ವತೇಶ, ಇಂದಿನಿಂದ ನೀನು ಪರಮೇಶ್ವರನೊಂದಿಗೆ ಸಂಬಂಧ ಬೆಳೆಸಿ, ಲೋಕಖ್ಯಾತಿಯನ್ನು ಪಡೆದೆ. ನಿನ್ನ ಕುಲ ಗೌರವ ಇಮ್ಮಡಿಯಾಯಿತು. ನೀನೇ ಧನ್ಯ. ಇನ್ನು ಕಾಲ ವಿಳಂಬ ಮಾಡಬೇಡ. ಬೇಗನೇ, ಉಮಾಮಹೇಶ್ವರರಿಗೆ ವಿವಾಹ ಕಾರ್ಯ ನೆರವೇರಿಸು ಎಂದು ಹೇಳಿದೆ. ನನ್ನ ಮಾತಿಗೆ ಹಿಮವಂತ ವಿನಯದ ಸ್ವರದಲ್ಲಿ ನುಡಿದ-ಪಿತಾಮಹನೆ, ನನ್ನ ಈ ಸಂತೋಷ, ಶ್ರೇಯೋಭಿವೃದ್ಧಿಗೆ ನೀವೇ ಕಾರಣರು. ನಿಮ್ಮ ಅನುಗ್ರಹದ ಫಲವಾಗಿ ಶಿವನ ಸಂಬಂಧ ಬೆಳೆಸಲು ನನಗೆ ಸುಲಭವಾಯಿತು. ಇದು ನನ್ನ ಸುದೈವ! ಪೂರ್ವಾರ್ಜಿತ ಪುಣ್ಯ ವಿಶೇಷ!

ಹಿಮಗಿರಿಯು ಬಳಿಕ ಉಮೆ-ಶಿವರ ಮದುವೆಯ ಮುಹೂರ್ತ, ವಿಧಾನಗಳ ಕುರಿತು ನನ್ನೊಡನೆ ವಿಚಾರ ವಿನಿಮಯ ಮಾಡಿದ, ಶಿವನೊಂದಿಗೆ ಸಮಾಲೋಚಿಸಿ, ಮದುವೆಯ ವಿಧಾನ, ಮುಹೂರ್ತಗಳನ್ನು ನಿರ್ಧರಿಸಿದೆವು. ನಮ್ಮ ಸಲಹೆಗೆ ಶಿವನೂ ಸಮ್ಮತಿಸಿದ.

ನಾವೆಲ್ಲರೂ ಕೂಡಲೇ ಮಹಾದೇವನ ಮದುವೆ ತಯಾರಿ ಮಾಡಲಾರಂಭಿಸಿದೆವು. ಮದುವೆಯ ಮಂಟಪವನ್ನು ಆಕರ್ಷಕ ರೀತಿಯಲ್ಲಿ ಅಲಂಕರಿಸಿದೆವು. ರತ್ನಗಳು, ವಿಚಿತ್ರವಾದ ವರ್ಣಮಯಮಣಿಗಳು, ಮುತ್ತು, ರತ್ನ, ಸುವರ್ಣಗಳು ತಾವೇ ಮುಂದಾಗಿ ಬಂದು ಆ ವಿವಾಹಪುರ (ಸ್ಥಳ)ವನ್ನು ಅಲಂಕರಿಸಿ ಶೋಭೆ ತಂದವು, ಆ ಮಂಟಪದಲ್ಲಿ ಮರಕತದ ಸುಳುವು ಹೊಳವು ಸಮ್ಮಿಳಿತವಾದ ಒಂದು ಜಗುಲಿ ನಿರ್ಮಾಣ ಮಾಡಿದೆವು. ಸ್ಫಟಿಕದ ಗೋಡೆಗಳು, ಚಿನ್ನದ ಭವ್ಯವಾದ ಕಂಬಗಳು ಮಿರಮಿರನೇ ಮಿರುಗುತ್ತಿದ್ದವು. ಆ ಕಂಬಗಳಿಗೆ ಕಲಾತ್ಮಕವಾಗಿ ಮುತ್ತಿನ ಹಾರಗಳನ್ನು ನೇತು ಹಾಕಲಾಯಿತು. ಸ್ವಯಂಸೂರ್ಯಚಂದ್ರರೇ ಮಹಾದೇವನ ಮದುವೆಯಲ್ಲಿ ಪಾಲುಗೊಂಡಾಗ ಬೆಳಕಿಗೇನುಕೊರತೆ! ಅವರ್‍ಬಿಬರು ಸೂರ್ಯಕಾಂತ, ಚಂದ್ರಕಾಂತ ಮಣಿಗಳಲ್ಲಿ ನೆಲೆಸಿ, ಒಂದೇ ತೆರನಾಗಿ ಕಣ್ಣಿಗೆ ಹಬ್ಬವನ್ನುಂಟುಮಾಡುವ ದಿವ್ಯಪ್ರಕಾಶ ಬೀರುತ್ತಿದ್ದರು. ವಾಯುದೇವನು, ಮಂದಾನಿಲನು ಒಂದಾಗಿ ಗಂಧ ಪರಿಮಳ ಬೀರುತ್ತ ಮನಸ್ಸಿಗೆ ಆಹ್ಲಾದ ವನ್ನುಂಟುಮಾಡುತ್ತಿದ್ದರು. ಶಿವ-ಉಮೆಯರ ಮದುವೆಗಾಗಿ, ಅಮಿತಉತ್ಸಾಹದಲ್ಲಿ ನಾಲ್ಕು ಸಮುದ್ರಗಳೂ ಅದೇ ಸಮಯಕ್ಕೆ ಶರೀರಧರಿಸಿ ಬಂದವು. ದೇವನದಿ, ಮಹಾನದಿ, ಸುರನದಿಗಳು ಸರಸ ಸಂಭ್ರಮದಿಂದ ಸಶರೀರದಿಂದ ಬಂದವು. ದೇವೇಂದ್ರ ಮೊದಲಾದ ದೇವನಾಯಕರು ಮದುವೆಗಾಗಿ ಅತ್ಯಂತ ಆನಂದದಿಂದ ಮುಂದಾಗಿ ಬಂದರು. ಸಿದ್ಧರು, ಮುನಿಗಣರು, ಯಕ್ಷರು, ಗಂಧರ್ವರು, ಅಪ್ಸರೆಯರು, ಕಿನ್ನರರು, ಚಾಣೂರರು ಅನೇಕ ವಿಧ ಜಲಚರಗಳು, ಪಕ್ಷಿಗಳೆಲ್ಲ ಶಿವನ ಮದುವೆಗೆ ಸಾಕ್ಷಿಭೂತರಾಗಿರಲು ಆ ಕ್ಷಣದಲ್ಲಿಯೇ ಉಪಸ್ಥಿತರಾದರು.

ಮದುವೆಯ ಕಾರ್ಯಕಲಾಪಗಳು ಆರಂಭವಾಗುವ ಸಮಯ, ತುಂಬುರ, ನಾರದ, ಹಾಹಾಹೂಹೂ ಮೊದಲಾದ ಸಂಗೀತಗಾರರು ವಾದ್ಯಗಳನ್ನು ಬಾರಿಸುತ್ತ ಇಂಪಾದ ಸ್ವರದಲ್ಲಿ ಹಾಡುತ್ತ ಶಿವ-ಉಮೆಯರ ಮದುವೆಗೆ ಬಂದರು, ತಪೋಧನರು, ಅನೇಕ ಋಷಿಗಳು, ಪುರಾಣ ಪುಣ್ಯಕಥನ, ಭಗವನ್ನಾಮ ಸಂಕೀರ್ತನೆ ಮಾಡುತ್ತ ಪುಣ್ಯಕರ ವಿವಾಹ ಮಂತ್ರಪಠಣಮಾಡುತ್ತ ವಿವಾಹಪುರಕ್ಕೆ ಆಗಮಿಸಿದರು. ಜಗನ್ಮಾತೆಯರಾದ ಬ್ರಾಹ್ಮೀ ಮೊದಲಾದ ಸಪ್ತ ಮಾತೃಕೆಯರು, ದೇವಕನ್ಯೆಯರು ಅವಿರತ ಉತ್ಸಾಹದಿಂದ ಇಂಪಾಗಿ

ಹಾಡುತ್ತ ಗುಂಪಾಗಿ ಬರುತ್ತಿದ್ದರು. ಇಂಪಾದ ಗಾಯನಲಹರಿಯನ್ನು ಅನುಸರಿಸಿ ಋತುಗಳೊಡನೆ ವಸಂತನೂ ಆಗಮಿಸುತ್ತ, ಸುಖ, ಶಾಂತಿ, ಸಂತಸದ ಹೊನಲು ಹರಿಸಿದ. ಗಿಳಿ, ಕೋಗಿಲೆ, ನವಿಲುಗಳು ವಿವಾಹ ಮಂತ್ರಧ್ವನಿಯಾಲಿಸುತ್ತ ತಮ್ಮದೇ ಆದ ರೀತಿಯಲ್ಲಿ ಕೂಗುತ್ತಿದ್ದವು. ನಲಿದು ನರ್ತನ ಮಾಡುತ್ತಿದ್ದವು.

ಮಳೆಗಾಲವು ಆರಂಭವಾಗಲು, ಕೋಲ್ಮಿಂಚು, ಗಿರಿಮಲ್ಲಿಗೆಯ ಗೊಂಚಲುಗಳಿಂದ ಹೂ ಹಾರದಂತೆ ಕಾಣುವ ಬೆಳ್ಳಕ್ಕಿಗಳಿಂದ ಚಂದ ಕಾಣುತ್ತಿತ್ತು. ಗಿಡಬಳ್ಳಿಗಳಲ್ಲಿ ಆಗ ತಾನೇ ಕೋಮಲ ಚಿಗುರು ಮೂಡತೊಡಗಿದ್ದಿತು. ಕಪ್ಪೆಗಳು, ಜಲಾಶಯಗಳಲ್ಲಿ ಆನಂದ, ತೃಪ್ತಿಯಿಂದ ಧ್ವನಿಮಾಡುತ್ತಿದ್ದವು. ತಮ್ಮ ಪ್ರಿಯಕರರಲ್ಲಿ ಸುಂದರಿಯರು ಪ್ರಣಯ ಕೋಪಬಿಟ್ಟು ನವಿಲುಗಳ ಕೇಕಾರವದಿಂದ ಪ್ರಚೋದಿತರಾಗಿ ಪ್ರಿಯಕರರನ್ನು ಒಲವು ನಲಿವಿನಿಂದ ನೋಡತೊಡಗಿದರು. ಮೇಘಮಾಲೆಗಳಲ್ಲಿ ಅಂಧಃಕಾರ ಕವಿದಿರುವಾಗ, ಮಿಂಚಿನ ಬಳ್ಳಿಗಳು ಮೂಡಿದಾಗ ನೆಲ-ಮುಗಿಲುಗಳಲ್ಲಿ ಸೌಂದರ್ಯ ಕಂಡು ಬರುತ್ತಿತ್ತು. ಸಾವಿರಾರು ವಿಧದ ಹೂವುಗಳ ಪರಿಮಳ ಮಾದಕವಾಗಿ, ಮಂದಾನಿಲ ಬೀಸಿ ಬರುತ್ತಿರುವಾಗ ತಂಪೆನಿಸಿ ಮನಕ್ಕೆ ಹಿತಕರವೆನಿಸುತ್ತಿತ್ತು. ಮಳೆಯ ತುಂತುರ ಹನಿ ನಿರಂತರ ಬೀಳುವದರಿಂದ ಹುಲ್ಲುಗರಿಕೆ ತುಂಬಿದ ಭೂಮಿ ತೊಯ್ದುಹೋಗಿದ್ದಿತು. ಚಂದ್ರನು ಮೋಡದಲ್ಲಿ ಅಡಗಿ ಆಗಾಗ ಕಾಣಿಸಿಕೊಳ್ಳುತ್ತಿದ್ದನು. ಕರಿ ಮೋಡಗಳ ಗಂಭೀರ ಗರ್ಜನೆಯಿಂದ ಹಂಸಗಳು ಹೆದರಿ ಚದುರಿ ಮರೆಯಾಗಿ ಹೋಗುತ್ತಿದ್ದವು. ಸರೋವರಗಳಲ್ಲಿ ಕಪ್ಪುಕಮಲ, ಕೆಂಪುಕಮಲಗಳು ಆಗ ತಾನೇ ಸುರಿದ ಹೊಸ ಮಳೆಯ ನೀರನ್ನುಂಡು ಆನಂದದಿಂದ ನಗುವಂತೆ ಅರಳುತ್ತಿದ್ದವು.

ಬಳಿಕ ಶರತ್‌ಋತು ಕಾಲಿರಿಸಿತು. ಭೂಮಿ ಹಚ್ಚ ಚಿಗುರು ಹಸರಿನಿಂದ ಕಂಗೊಳಿಸಿತು. ನೋಡಿದಲ್ಲೆಲ್ಲ ಅಶೋಕ, ಬಾಳೆಗಿಡಗಳಲ್ಲಿ ಕೆಂಪುಬಣ್ಣದ ಮೊಗ್ಗು, ಹೂವುಗಳಾಗಿ ಹಿಗ್ಗಿನಿಂದ ತಂಗಾಳಿಯಲ್ಲಿ ತಲೆದೂಗುತ್ತಲಿದ್ದವು. ಹೂವುಗಳಿಗೆ ಮನಸೋತು ಬರುವ ದುಂಬಿಗಳ ಝೇಂಕಾರದ ಇಂಚರದಿಂದ ಎಲ್ಲೆಲ್ಲೂ ಋತುವಿಗೆ ಸಂಭ್ರಮ ! ಅತಿಶಯ ವಾದ ಹಿಮದ ತುಂತುರುಹನಿಗಳು ಬೀಸಿ ಬರುವ ಗಾಳಿಯಲ್ಲಿ ತೇಲುತ್ತಿದ್ದವು. ದಶದಿಕ್ಕು ಗಳಲ್ಲಿಯೂ ತುಂತುರುಹನಿಗಳು ಹಂಚಿಹೋಗಿ ವಾತಾವರಣವೇ ಆರ್ದ್ರವಾಗಿತ್ತು.

ಹೇಮಂತ ಶಿಶಿರ ಋತುಗಳೆರಡೂ ಜೊತೆಗಾರರಾಗಿ ವಿವಾಹ ಮಂಟಪಕ್ಕೆ ಬಂದವು. ಹೇಮಂತ ಶಿಶಿರಗಳೊಡನೆ ತಾನಿರುವಾಗ ಹಿಮಾಲಯನು ಬಿಳಿಯ ಮೇಘಗಳಿಂದ ಕೂಡಿದ್ದನು. ದೂರದಿಂದ ನೋಡಲು ಕ್ಷೀರಸಾಗರದಂತೆ ಕಾಣುತ್ತಿದ್ದನು. ಹಿಮಾಲಯನು ಆ ಋತುಗಳ ಆಗಮನದಿಂದ ಧನ್ಯತೆ ಹೊಂದಿದನು. ಹಿಮಾಲಯನ ಬಳಿಯಲ್ಲಿ ಎಲ್ಲ ಋತುಗಳು ತಮ್ಮ ಸಂಪತ್ತಿನ ಸಮೃದ್ಧಿಯನ್ನೇ ತಂದು ರಾಶಿ ಹಾಕಿದ್ದವು. ಹಿಮಗಡ್ಡೆಗಳಿಂದ ಹಿಮಾಲಯವು ತುಂಬಿದ್ದಿತು. ಹಿಮವಂತನು ಶ್ವೇತ ಛತ್ರ ಹಿಡಿಸಿಕೊಂಡಿರುವ ಚಕ್ರವರ್ತಿಯಂತೆ ಕಾಣುತ್ತಿದ್ದನು.

ವಸಂತಋತುವಿನ ಆಗಮನದಿಂದ ಗಾಳಿಯು ತಂಪಾಗಿದ್ದಿತು; ಕಮಲಗಳ ಸುವಾಸನೆಯಿಂದ ಮಂದವಾಗಿ ಆಹ್ಲಾದಕರವಾಗಿ ಬೀಸುತ್ತಿತ್ತು. ಆ ಮಂದಾನಿಲ ಮೈಗೆ ಬಡಿದಾಗ ದೇವತೆಗಳಿಗೂ ದೇವಸುಂದರಿಯರಿಗೂ ಮನದಲ್ಲಿ ಕಾಮಾಸಕ್ತಿಯನ್ನು ಕೆರಳಿಸುತ್ತಿತ್ತು. ಈ ಋತುವಿನಲ್ಲಿ ಅಲ್ಲಲ್ಲಿ ಆಕಾಶದಲ್ಲಿ ಬಿಳಿಯ ಮೋಡಗಳು ಕಾಣುತ್ತಿದ್ದವು. ಸರೋವರದಲ್ಲಿ ನೀರು ಧಾರೋಷ್ಣ ಗುಣದಂದ ಕೂಡಿದ್ದು

ಹಿತಕರವಾಗಿತ್ತು. ಸರೋವರದಲ್ಲಿ ಚಕ್ರವಾಕ, ಹಂಸ ಪಕ್ಷಿಗಳು ಹಾಯಾಗಿ ತೇಲುತ್ತಿದ್ದವು. ಇಂತಹ ಸುಂದರ ವಸಂತಋತು ಹಾಗೂ ಅಷ್ಟ ದಿಗ್ಗಜಗಳೂ ಜೊತೆಗೂಡಿ ಗಿರಿಜೆಯ ಸ್ವಯಂವರಕ್ಕೆ ಬಂದವು. ಈ ವಸಂತ ಋತುವಿನಲ್ಲಿ, ಮಾವಿನಮರಗಳು ಹೂತು, ಹೂಗೊಂಚಲು ಬಿಟ್ಟು ಮಂದಗಾಳಿಯಲ್ಲಿ ತಲೆದೂಗುತ್ತಿದ್ದವು. ಹಿಮಾಲಯದ ಶಿಖರಗಳಲ್ಲಿ ತಿಲಪುಷ್ಪಗಳು ಅರಳಿದ್ದವು. ಬಿಳಿಯ ತಲೆಗೂದಲುಗಳಲ್ಲಿ ಹೂವುಗಳನ್ನು ಮುಡಿದ ವೃದ್ಧ ಮುತ್ತೈದೆಯಂತೆ ಕಂಡು ಬರುತ್ತಿದ್ದವು. ಅರಳಿದ ಹೂವುಗಳಿಂದ ತುಂಬಿದ ಸಾಲವೃಕ್ಷಗಳಿಗೆ ಹಬ್ಬಿಕೊಂಡಿದ್ದ ಅಶೋಕ ಲತೆಗಳನ್ನು ನೋಡಿದಾಗ ಪ್ರಿಯಪತಿಯರನ್ನು ಆಲಂಗಿಸಿಕೊಂಡ ಕಾಮಿನಿಯರಂತೆ ಕಂಡು ಬರುತ್ತಿತ್ತು. ಈ ಸಮಯದಲ್ಲಿ ತಾಳೇಮರ, ಈಚಲುಮರ, ಹೊಂಗೆಮರ, ದೇವದಾರುಮರ, ಅಲ್ಲದೆ ಅಶೋಕ, ಪುನ್ನಾಗ, ನಾಗಕೇಸರಿ, ಲವಂಗಲತೆ, ಧೂಪದಮರ, ತೆಂಗಿನಮರಗಳು ಹಣ್ಣು ಹೂವು ಕಾಯಿಗಳನ್ನು ಬಿಟ್ಟು ಚಂದ ಕಾಣುತ್ತಿದ್ದವು. ನದಿ, ಸರೋವರಗಳ ನೀರು ನಿರ್ಮಲವಾಗಿತ್ತು. ಅವುಗಳಲ್ಲಿ ಕಮಲಗಳು ಅರಳಿದ್ದವು. ಮರಿಮೀನುಗಳು ಸೂರ್ಯಪ್ರಕಾಶದಲ್ಲಿ ಚಿನ್ನಾಟ, ಚೆಲ್ಲಾಟ ಆಡುತ್ತಿದ್ದವು. ದಾಡುಗೋಳಿ, ಕಲಹಂಸ, ಚಕ್ರವಾಕ ಪಕ್ಷಿಗಳು ಅವುಗಳಲ್ಲಿ ತೇಲುತ್ತ ನಲಿದಾಡುತ್ತಿದ್ದವು. ಬಣ್ಣಬಣ್ಣದ ಹಕ್ಕಿಗಳು ಮರದಿಂದ ಮರಕ್ಕೆ ಸಂಚರಿಸುತ್ತ ಧ್ವನಿಮಾಡುತ್ತ ಹಾರಾಡುತ್ತಲಿದ್ದವು. ಗಿರಿಜೆಯ ಮದುವೆಯ ಸಮಯದಲ್ಲಿ ಆ ಹಿಮಾಲಯದಲ್ಲಿ ಮಂದ ಮಾರುತವು ಗಿಡಬಳ್ಳಿಗಳಿಂದ ಸುವಾಸನೆಯ ಹೂವುಗಳನ್ನು ಅಲ್ಲಲ್ಲಿ ಉದುರಿಸುತ್ತ ತಂಪಾಗಿ ಸುಳಿದಾಡುತ್ತಲಿತ್ತು. ಮಾಲತಿ ಬಳ್ಳಿಗಳಲ್ಲಿಯ ಹೂವುಗಳಲ್ಲಿ ಮಕರಂದ ಸವಿಯುತ್ತ ಭ್ರಮರಗಳು ಝೇಂಕಾರನಾದ ಮೊಳಗಿಸುತ್ತಿದ್ದವು.

ಸರೋವರದಲ್ಲಿ ಅರಳಿನಿಂತ ಬಿಳಿ ಹಾಗೂ ನೀಲಕಮಲಗಳ ಬಣ್ಣವನ್ನೇ ನೀರು ಪ್ರತಿಫಲಿಸುತ್ತಿತ್ತು. ಕೆಲವುಕಡೆ ದುಂಬಿಗಳು ತುಂಬಿರುವ ಕೆಂದಳಗಳಿಂದ ಕೆಂಪಾಗಿ ಕಾಣುತ್ತಿತ್ತು. ಕೆಲವು ಸರೋವರಗಳಲ್ಲಿ ಸುವರ್ಣದ ಕಮಲಗಳು ಅರಳಿದ್ದವು. ಕೆಲವು ಕಡೆಗೆ ರತ್ನಮಯವಾದ ದಂಟುಗಳುಳ್ಳ ಬಂಗಾರದ ಕಮಲಗಳೂ ಅರಳಿದ್ದವು. ಅಲ್ಲಲ್ಲಿ ಕಲ್ಯಾಣಿಗಳಲ್ಲಿ ಕಮಲಗಳು ಅನೇಕ ಅರಳಿದ್ದವು. ಕಪ್ಪುಕಮಲ ಮತ್ತು ಕಮಲಗಳಲ್ಲಿಯ ಪುಷ್ಪರಸ (ಮಕರಂದ) ಕುಡಿದು ಪಕ್ಷಿಗಳು ಮಧುರವಾಗಿ ಧ್ವನಿ ಮಾಡುತ್ತ ಹಾರಾಡುತ್ತಿದ್ದವು. ಆ ಸರೋವರಗಳಿಗೆ ಬಂಗಾರದ ಮೆಟ್ಟಿಲುಗಳಿದ್ದವು.

ಹಿಮಾಲಯ ಪರ್ವತದ ಶಿಖರಗಳಲ್ಲಿ ಅತ್ಯುನ್ನತ ಮರಗಳಾದ ಕರ್ಣಿಕಾರ ಮರಗಳು ಹೂ ಬಿಟ್ಟಿದ್ದವು. ಶಿಖರಗಳು ಚಿನ್ನದ ಲೇಪ ಮಾಡಿದಂತೆ ಕಾಣುತ್ತಿದ್ದವು ಅರಳಿ ನಿಂತ ಪಾಟಲ ಪುಷ್ಪಗಳಿಂದ ದಿಕ್ಕುಗಳೆಲ್ಲವೂ ಕೆಂಪುವರ್ಣದಿಂದ ಕಂಗೊಳಿಸುತ್ತಿದ್ದವು. ಕೃಷ್ಣಾರ್ಜುನ ಹಾಗೂ ನೀಲೀಶೋಕ ವೃಕ್ಷಗಳು ಸಮೃದ್ಧವಾಗಿ ಬೆಳೆದು ಹೂವುಗಳಿಂದ ಚಂದ ಕಾಣುತ್ತಿದ್ದವು. ಮುತ್ತುಗದ ಮರಗಳು, ಹೊಂಗೆಯ ಮರಗಳು ಚಂದನ, ಸಂಪಿಗೆ ವನಗಳು ಪುಷ್ಪ ಸಮೃದ್ಧಿಯಿಂದ ಸಂಪದ್ಭರಿತವಾಗಿದ್ದವು. ಆ ವನಗಳಲ್ಲಿ ಮಧುರ ಮಂದ ಧ್ವನಿಮಾಡುತ್ತ ಮದವೇರಿದ ಗಂಡುಕೋಗಿಲೆಗಳು ಹಾರಾಡುತ್ತಿದ್ದವು. ಈ ಮದವೇರಿದ ಕೋಗಿಲೆಗಳ ಮೃದುಮಧುರ ಗಾನ ಕೇಳಿದ ನವಿಲುಗಳು ಗರಿಗೆದರಿಸಿ, ಆನಂದದಿಂದ ಮೈಮರೆತು ನರ್ತನಮಾಡುತ್ತಿದ್ದವು. ಮನ್ಮಥನು ಉತ್ಸಾಹದಲ್ಲಿ ಹೂಬಾಣ ಬಿಲ್ಲುಗಳನ್ನು ಹಿಡಿದುಕೊಂಡು ದೇವ ಸುಂದರಿಯರಿಗೆ ಗುರಿ ಇಟ್ಟು ಬಾಣ ಬಿಡಲು ಅಣಿಯಾದನು.

ಗ್ರೀಷ್ಮ ಋತುವು ಕಾಲಿಟ್ಟಿತು. ತುಂಬು ತೀಕ್ಷ್ಣ ಬಿಸಿಲು ನೋಡಿದಲ್ಲೆಲ್ಲ ಬಿಸಿಲಿನ ಬೇಗೆಯಿಂದ ನದಿಗಳಲ್ಲಿ ಸರೋವರಗಳಲ್ಲಿ ನೀರೆಲ್ಲ ಬತ್ತಿ ಹೋಗಿದ್ದಿತು. ಆಗ ಆ ಗಿರಿಯಲ್ಲಿ ಪಾಟಲ, ತಾಳೆ ಮುಂತಾದ ಹೂಗಳ ಗಂಧವು ಗಾಳಿಯಲ್ಲಿ ತೇಲಿಬರುತ್ತಿದ್ದಿತು. ಕಲ್ಯಾಣಿಗಳಲ್ಲಿ ಕಮಲಗಳು ಅರಳಿದ್ದವು. ದಡದಲ್ಲಿಯ ಕಲಹಂಸಗಳು ತಾವರೆಯ ತೆಳುದೆಂಟನ್ನು ತಿಂದು ಮದವೇರಿ ಕೂಗುತ್ತಲಿದ್ದವು. ಹಿಮಾಲಯದಲ್ಲಿರುವ ತಪ್ಪಲು ಪ್ರದೇಶದಲ್ಲಿ ಬಕುಲವೃಕ್ಷಗಳು ಸುಂದರವಾದ ಬಣ್ಣಬಣ್ಣಗಳ ಹೂವುಗಳು ಬಿಡುತ್ತಿದ್ದವು. ಅದರಂತೆ ವಿವಿಧ ಜಾತಿಯ ಬಗೆಬಗೆಯ ಬಣ್ಣದ ಹಕ್ಕಿಗಳು ಹಾರಾಡುತ್ತ ಧ್ವನಿಮಾಡುತ್ತಿದ್ದವು. ಇಂತಹ ಸೃಷ್ಟಿಸೌಂದರ್ಯದ ಸನ್ನಿವೇಶಗಳಿಂದ ಕೂಡಿದ ಎಲ್ಲ ಋತುಗಳು ಸಕಾಲಕ್ಕೆ ಮೇಳವಿಸಿ, ಉಮಾದೇವಿಯ ಮದುವೆಗಾಗಿ ಹಿಮರಾಜನ ಅರಮನೆಗೆ ಬಂದರು.

ಎಲೈ ಮುನಿಗಳೇ, ಈ ರೀತಿಯಾಗಿ ಮಹೇಶ್ವರನ ಮದುವೆಗಾಗಿ ಸಕಲ ಪ್ರಾಣಿಗಳು, ಪಕ್ಷಿಗಳು, ಉತ್ಸಾಹದಿಂದ ಕೂಡಿದ್ದವು. ವಿವಿಧ ಬಗೆಯ ವಾದ್ಯಗಳು ಧ್ವನಿಮಾಡುತ್ತಿದ್ದವು. ಒಂದು ಸುಮುಹೂರ್ತದಲ್ಲಿ ನಾನು (ಬ್ರಹ್ಮ) ಮುನಿಗಳೊಡನೆ ಉಮಾದೇವಿಯನ್ನು ಸುಂದರವಾದ ಆಭರಣಗಳಿಂದ ಅಲಂಕರಿಸಿ ಅವಳನ್ನು ವಿವಾಹ ಮಂಟಪಕ್ಕೆ ಕರೆದು ತಂದೆನು. ಬಳಿಕ ಬಳಿಯಲ್ಲಿದ್ದ ಶಿವನನ್ನು ಕುರಿತು ನಾನು ಆಚಾರ್ಯನಾಗಿದ್ದು ವಿವಾಹ ಮಾಡಿಸುವದಾಗಿ ಹೇಳಿದೆ. ಅದಕ್ಕೆ ಶಿವನೂ ಸಮ್ಮತಿಸಿದ. ಆಮೇಲೆ ನಾನು ಸಂತೋಷದಿಂದ ದರ್ಭೆಗಳನ್ನು ತೆಗೆದುಕೊಂಡೆನು. ಉಮಾದೇವಿ ಹಾಗೂ ಮಹಾದೇವರ ಹಸ್ತಗಳನ್ನು ಯೋಗಬಂಧನದಿಂದ ಕಟ್ಟಿದೆನು. ಸ್ವಯಂ ಅಗ್ನಿಯೇ ಭಕ್ತಿಯಿಂದ ಕೈಮುಗಿದುಕೊಂಡು ನೀಡುತ್ತಿರುವ ಹವಿಸ್ಸು ಸ್ವೀಕರಿಸುತ್ತಿದ್ದನು. ವಿವಾಹ ಮಂತ್ರೋಚ್ಚರಣೆಯೊಂದಿಗೆ (ಮಂತ್ರಗಳೇ ಅಲ್ಲಿ ಮೂರ್ತಿ ವೆತ್ತು ನಿಂತಿರಲು) ನಾನು ವಿಧಿವತ್ತಾಗಿ ತುಪ್ಪದೊಂದಿಗೆ ಹವಿಸ್ಸು ಅರ್ಪಿಸಿದೆನು. ಈ ರೀತಿ ವಿವಾಹವನ್ನು ವಿಧಿವತ್ತಾಗಿ ಮುಕ್ತಾಯಗೊಳಿಸಿದೆ. ಶಿವ ಪಾರ್ವತಿಯರು ಅಗ್ನಿ ಪ್ರದಕ್ಷಿಣೆ ಹಾಕಿದರು; ಪ್ರಾರ್ಥನೆ ಮಾಡಿದರು. ಅವರೀರ್ವರ ಹಸ್ತ ಬಂಧನ ಬಿಚ್ಚಿದೆನು. ಇನ್ನುಳಿದ ದೇವತೆಗಳು, ಮಾನಸಪುತ್ರರು ಹಾಗೂ ಸಿದ್ಧ ಮುನಿಗಳೊಡನೆ ಶಿವನನ್ನು ನಮಸ್ಕರಿಸಿದರು.

ಮುನಿಗಳೇ, ಶಿವ-ಉಮೆಯರ ಮದುವೆಯು ಈ ರೀತಿ ವಿಜೃಂಭಣೆಯಿಂದ ಸಾಂಗವಾಗಿ ನೆರವೇರಿದ್ದು, ಯೋಗಾಯೋಗವೆಂದೇ ಹೇಳಬಹುದು. ಇಂತಹ ಅಪೂರ್ವ ಮದುವೆ ಜರುಗಿದ್ದನ್ನು ಈ ಹಿಂದೆ ಯಾವ ದೇವತೆಗಳೂ ನೋಡಿರಲಿಲ್ಲ. ಈ ಶಿವ-ಪಾರ್ವತಿ ವಿವಾಹದ ಕಥನವು ಸುರಮ್ಯವೂ, ಪುಣ್ಯಕರವೂ ಆಗಿದೆ.

## ಶಿವಸ್ತುತಿ ನಿರೂಪಣ

**ಚತುರ್ಮುಖ:-** ತನ್ನೆದುರು ಅತ್ಯಾಸಕ್ತಿಯಿಂದ ಆಲಿಸುತ್ತಿರುವ ಋಷಿ ಸಂಕುಲಕ್ಕೆ ನುಡಿದನು. ಮದುವೆಯನಂತರ ಇಂದ್ರಾದಿ ದೇವತೆಗಳು ಆನಂದಭರಿತರಾಗಿ ಆ ಮಹೇಶ್ವರನಿಗೆ ವಂದಿಸಿ, ಅವನ ಗುಣಗಾನಮಾಡಿದರು. ಲಿಂಗರೂಪದಲ್ಲಿರುವ ಮಹಾಲಿಂಗನಿಗೆ ನಮಸ್ಕಾರ. ಕೈಲಾಸಪತಿಗೆ ವಂದನೆ. ವಾಯುವೇಗವುಳ್ಳ ಭಯಂಕರ ರೂಪನಾದ ಜಗದೀಶ್ವರನಿಗೆ ನಮನ. ದುಃಖ ದುರಿತಗಳನ್ನು ದೂರಮಾಡಿ ಸುಖ, ಸಂಪದ ಕೊಡುವ ಮಹಾದೇವನಿಗೆ ನಮಸ್ಕಾರ. ನೀಲಕೇಶವುಳ್ಳವನಾದ ಪಾರ್ವತೀಪತಿಗೆ

ನಮಸ್ಕಾರ. ವಾಯುರೂಪಧರನಾದ ವಿವಿಧ ರೂಪವುಳ್ಳ ಇಂದುಧರನಿಗೆ ವಂದನೆಗಳು. ಮೂರು ಕಣ್ಣುಳ್ಳ, ಬೇಕೆಂದಾಗ ಸಾವಿರ ಕಣ್ಣು, ಕಾಲುಗಳನ್ನು ಹೊಂದಬಲ್ಲ ಸರ್ವಶಕ್ತನಾದ ಕಾಲಭೈರವನಿಗೆ ನಮಸ್ಕಾರ. ವೇದಮಯನಾಗಿದ್ದು, ದೇವತೆಗಳಿಗೆ ಹಿತಕೋರುವ, ಶುಭಕರನಾದ ಶಂಭುವಿಗೆ ನಮಸ್ಕಾರ. ದೇವೇಂದ್ರನ ತೋಳನ್ನೂ ಬಂಧಿಸಿ, ಅವನ ಅಹಂಕಾರವನ್ನು ನಿರ್ನಾಮ ಮಾಡಿದ ಓಂಕಾರರೂಪಿಗೆ ನಮಸ್ಕಾರ. ತನ್ನ ನಿಟ್ಟುಸಿರ ಮಾತ್ರದಿಂದಲೇ ವೇದಾದಿಗಳನ್ನೆಲ್ಲ ಹೊರಗೆಡಹುವ ದೇವನಿಗೆ ವಂದನೆಗಳು.

ಜಗತ್ತಿಗೆಲ್ಲ ಏಕಮಾತ್ರ ಒಡೆಯನೆಂದು ಹೆಸರಾದ, ಗಿರಿಜಾಪತಿಗೆ ಅಡಿಗಡಿಗೆ ವಂದನೆಗಳು. ಜಲಲಿಂಗನೂ, ಪ್ರಳಯರುದ್ರನೂ ತಾನೇ ತಾನಾಗಿ ಮೆರೆವ ಮಹಾರುದ್ರನಿಗೆ ನಮಸ್ಕಾರ. ಕೊರಳಲ್ಲಿ ಕಪಾಲಮಾಲೆ ಧರಿಸಿ, ಕೈಗಳಲ್ಲಿ ಕಪಾಲಸೂತ್ರ, ದಂಡ ಹಿಡಿದ ಸದಾ ಸ್ಮಶಾನದಲ್ಲಿರುವ, ಅಹರ ಒಡೆಯನಾದ ಸ್ಮಶಾನ ಭೈರವನಿಗೆ ನಮಸ್ಕಾರ. ಮೂರೋಕಗಳಿಗೆ ಸರ್ವೇಶ್ವರನೂ ಪಶುಗಳನ್ನು ರಕ್ಷಿಸುವವನೂ ಆದ ಪಶುಪತಿಗೆ ನಮಸ್ಕಾರ. ಯೋಗದಂಡ ಧರಿಸಿದ, ಪ್ರಮಥಗಣಗಳ ದುಃಖ ದೂರಮಾಡುವ ಖಟ್ವಾಂಗ ಭೈರವನಿಗೆ ನಮಸ್ಕಾರ. ಯಜ್ಞಪುರುಷನ ಶಿರಸ್ಸು ಮುರಿದು ಮೂಲೆಗುಂಪು ಮಾಡಿದವನೂ, ಯಮನ ಜುಟ್ಟನ್ನು ಕಿತ್ತು ಬಿಸುಟವನೂ, ಸೂರ್ಯನ ದಂತಭಗ್ನಗೈದ ಕಾಲಭೈರವನಿಗೆ ನಮಸ್ಕಾರ. ಪಿನಾಕ, ತ್ರಿಶೂಲ, ಕತ್ತಿ, ಖಡ್ಗ, ಮುದ್ಗರ ಮೊದಲಾದ ಆಯುಧ ಹೊಂದಿದ, ಮೂರು ಕಣ್ಣು ಹೊಂದಿರುವ, ಮೃತ್ಯುವಿಗೆ ಮೃತ್ಯು ಸ್ವರೂಪಿಯಾದ ಮೃತ್ಯುಂಜಯನಿಗೆ ನಮಸ್ಕಾರ. ಯಮನನ್ನೇ ಸಂಹಾರ ಮಾಡಬಲ್ಲವನಾದ, ಗಿರಿಗುಹೆಗಳಲ್ಲಿ ವಾಸಿಸುವ ಗಿರೀಶನಿಗೆ ನಮಸ್ಕಾರ. ಸುವರ್ಣಮಯ ವೀರ್ಯವುಳ್ಳ, ಕುಂಡಲಗಳನ್ನೂ ಧರಿಸಿದ ಜಗದೀಶ ವೀರನಾದ ಹರನಿಗೆ ನಮಸ್ಕಾರ. ದೈತ್ಯರ ಯೋಗಬಲ ಮುರಿಯುವವನೂ, ಯೋಗಿಗಳಿಗೆಲ್ಲ ಗುರುಸ್ಥಾನದಲ್ಲಿರುವ ದಕ್ಷಿಣಾಮೂರ್ತಿಗೆ ನಮಸ್ಕಾರ, ಚಂದ್ರ, ಸೂರ್ಯ, ಅಗ್ನಿಗಳ ಪ್ರತೀಕವಾದ ಮೂರು ಕಣ್ಣುಳ್ಳ ಮುಕ್ಕಣ್ಣನಿಗೆ ನಮಸ್ಕಾರ. ಭಕ್ತರಿಗೆ ಬೇಡಿದಲ್ಲಿಯೇ ವರನೀಡುವ ಸ್ಮಶಾನವಾಸಿ, ರುದ್ರನಿಗೆ ನಮಸ್ಕಾರ. ಮಹಾಗೃಹಸ್ಥನೂ, ವಾನಪ್ರಸ್ಥನೂ, ಬ್ರಹ್ಮಚಾರಿಯೂ ಆದ ಶಿವನಿಗೆ ನಮಸ್ಕಾರ. ಪಶುಗಳನ್ನೂ ಪ್ರೇಮ ವಾತ್ಸಲ್ಯದಿಂದ ಪೋಷಿಸುವ ಪರಮಕರುಣೆಯಾದ ಪಶುಪತಿಗೆ ನಮಸ್ಕಾರ. ನೀರಿನಲ್ಲಿ ನಿಂತು ಯೋಗದಿಂದ ತಪಸ್ಸು ಮಾಡುವವರಿಗೆ ಐಶ್ವರ್ಯ ಸಿದ್ಧಿಗಳನ್ನು ವರವಾಗಿ ನೀಡುವ ಪರಮ ಕರುಣೆಗೆ ನಮಸ್ಕಾರ. ಜಗದ ಸೃಷ್ಟಿ, ಸಂಹಾರಕ್ಕೆಲ್ಲ ಮೂಲ ಕಾರಣನೆನಿಸಿದ ಜಗದೀಶನಿಗೆ ನಮಸ್ಕಾರ. ಜಗತ್ತನ್ನು ಪಾಲಿಸುವವ ಶಕ್ತಿಮೂಲನೂ, ಭಕ್ತಾನುಕಂಪಿಯೂ, ಭಕ್ತವತ್ಸಲನೂ ಆದ ಹರನಿಗೆ ನಮಸ್ಕಾರ. ವಸುರೂಪನೂ, ಆದಿತ್ಯರೂಪನೂ, ಅಶ್ವಿನಿದೇವತೆಗಳ ರೂಪನೂ ಆದ ರುದ್ರನಿಗೆ ನಮಸ್ಕಾರ. ಸಾಂಖ್ಯರೆನ್ನುವಂತೆ ಸಾಕ್ಷಿಪುರುಷನೂ, ಪಿತೃದೇವತೆಗಳ ರೂಪನೂ, ವಿಶ್ವೇದೇವ ರೂಪನೂ ಆದ ಸರ್ವೇಶ್ವರನಿಗೆ ನಮಸ್ಕಾರ. ದುಷ್ಟರನ್ನು ಶಿಕ್ಷಿಸುವವನೂ, ಮಂಗಲರೂಪನೂ, ವರಪ್ರದಾಯಕನೂ, ಆದ ಮಹೇಶ್ವರನಿಗೆ ನಮಸ್ಕಾರ. ಪ್ರಕೃತಿ ರೂಪನಾಗಿದ್ದು ಪ್ರತ್ಯಕ್ಷ ಪ್ರಮಾಣಗಳಿಗೆ ಹೊರತಾದವನಾದ ಚಿತ್ರರೂಪನೂ, ಆಶ್ಚರ್ಯಕರನೂ ಆದ ಶಿವನಿಗೆ ನಮಸ್ಕಾರ. ಕಾರಣರೂಪಿಯೂ, ಪುಣ್ಯರೂಪಿಯೂ ಆದ ಪರಶಿವನಿಗೆ ನಮಸ್ಕಾರ.

ಪುರುಷ ಸಂಬಂಧದಿಂದ ಪ್ರಕೃತಿಯಲ್ಲಿ ಸತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳು ಉದ್ಭವಿಸಿ ಸೃಷ್ಟಿಕಾರ್ಯಕ್ಕೆ ಚಾಲನೆಯನ್ನು ಪ್ರೇರೇಪಿಸುವ ಪರಮೇಶ್ವರನಿಗೆ ನಮಸ್ಕಾರ. ಪ್ರಕೃತಿ ಪುರುಷರಲ್ಲಿ ಪ್ರವೃತ್ತಿ ಪ್ರೇರೇಪಿಸಿ ತನ್ಮೂಲಕ ಜಗದ ಸೃಷ್ಟಿ, ಸ್ಥಿತಿ, ಲಯ, ಕಾಯಕಕ್ಕೆ ಪ್ರೇರಕ ಶಕ್ತಿ ಮೂಲವೆನಿಸಿದ ಪರಮಾತ್ಮನಿಗೆ ನಮಸ್ಕಾರ. ಮುಂದೆ ಜರುಗಲಿರುವ ಘಟನೆಗಳ ಹಾಗೂ ಕರ್ಮಗಳ ಫಲಾಫಲ ಕೊಡುವವನಾದ ಮಹೇಶ್ವರನಿಗೆ ನಮಸ್ಕಾರ. ಭೂಮಿಯ ಮೇಲೆ ಜನ ಹಾಗೂ ಜನಾಂಗಗಳನ್ನು ಸೃಷ್ಟಿಸಿ, ಗುಣಕರ್ಮಗಳಿಗನುಸಾರ ವೃತ್ತಿಧರ್ಮಗಳನ್ನು ವಿಧಿಸುವವನೂ ಆದ ಸರ್ವಾಧಿಕಾರಿ ಶಿವನಿಗೆ ನಮಸ್ಕಾರ. ದೇವದೇವನಾದ ಮಹಾದೇವನೆ, ನಿನಗೆ ನಮಸ್ಕಾರ. ಓ ! ಶಿವನೆ, ನಾವು ನೋಡುವಂತೆ ಶಾಂತ, ಸೌಮ್ಯ, ಮುಖ ಉಳ್ಳವನಾಗು, ಪ್ರಸನ್ನ ಭಾವದಿಂದ ನಮ್ಮ ಕಡೆಗೆ ನೋಡು. ನಮ್ಮ ಮೇಲೆ ಕರುಣೆ ತೋರಿ ಪರಮಾನುಗ್ರಹ ಮಾಡು.

ಅವರ ಭಕ್ತಿಪೂರಿತ ಭಜನೆ, ಸ್ತೋತ್ರಗಳಿಂದ ಪರಮೇಶ್ವರ ಪ್ರಸನ್ನನಾದ. ಅವರ ಪ್ರಾರ್ಥನೆಯಂತೆ ಸೌಮ್ಯಸ್ವರೂಪ ತೋರಿದ. ದೇವತೆಗಳಿಗೆ ಬೇಕಾದ ವರಕೇಳಲು ಹೇಳಿದ. ದೇವತೆಗಳು ವರ ಕೇಳಲು ಹಾತೊರೆಯದೆ ಅವನ ನಿರಂತರ ಅನುಗ್ರಹ ಕೋರಿದರು. ಅವರ ಕೋರಿಕೆಯನ್ನು ಶಿವ ಮನ್ನಿಸಿದ. ದೇವತೆಗಳನ್ನೂ ಉಳಿದ ಜನಗಳನ್ನೂ ಬೀಳ್ಕೊಟ್ಟು ಪ್ರಮಥ ಗಣಗಳೊಡನೆ ತನ್ನ ಸ್ಥಾನಕ್ಕೆ ತೆರಳಿದ.

ಎಲೈ ಮುನಿಗಳಿರಾ, ದೇವತೆಗಳು ಭಕ್ತಿಭಾವದಿಂದ ಮಾಡಿದ ಈ ಶಿವಸ್ತುತಿಯನ್ನು ಸದ್ಭಕ್ತಿಯಿಂದ ಆಲಿಸಿದವನು, ಹೇಳುವವನು ಪುಣ್ಯಲೋಕ ಪಡೆದು ಸುಖಿಸುತ್ತಾರೆ.

## ಉಮಾ-ಮಹೇಶ್ವರರು ಹಿಮವತ್ಪರ್ವತ ಬಿಟ್ಟುಹೋದುದು

**ಚತುರ್ಮುಖ:-** ಮಹದೇವನು ತನ್ನ ಸ್ಥಾನಕ್ಕೆ ಮರಳಿ ಮತ್ತೆ ತನ್ನ ಉಚಿತ ಆಸನದಲ್ಲಿ ಕುಳಿತನು. ಆಗ ಮನ್ಮಥನ ದೃಷ್ಟಿ ಶಿವನ ಮೇಲೆ ಬಿದ್ದಿತು. ತನ್ನ ಕೈಯಲ್ಲಿಯ ಹೂಬಾಣವನ್ನು ಹೂಡಿದ ಮನೋಜವ. ಮಹಾಮಾಯಾವಿ ಮನೋಜವ. ತನ್ನ ಪ್ರಭಾವದಿಂದ ಎಲ್ಲ ಲೋಕಗಳಲ್ಲಿಯೂ ಜನರನ್ನು ಹೂಬಾಣ ಹೊಡೆದು ನಾನಾ ರೀತಿಯ ಯಾತನೆಗೆ ಗುರಿಪಡಿಸುವನು. ಇಂದ್ರಿಯಗಳನ್ನು ನಿಗ್ರಹಿಸಬಲ್ಲ ಋಷಿಗಳ ವ್ರತ ನಿಯಮಗಳನ್ನು ಸಹ ತನ್ನ ಬಾಣದೇಟಿನಿಂದ ಮುರಿಯಬಲ್ಲ ಚತುರ. ಶಿವನೆದುರಿನಲ್ಲಿಯೇ, ಚಕ್ರವಾಕ ಪಕ್ಷಿಯ ರೂಪದಿಂದ ರತಿಯೊಂದಿಗೆ ಪ್ರಣಯ ಲೀಲೆ ತೋರಲು ಪ್ರಾರಂಭಿಸಿದ.

ಅವಿರತ ಪ್ರಣಯಕೇಳಿಯಲ್ಲಿ ತೊಡಗಿದ ಚಕ್ರವಾಕ ರೂಪದಲ್ಲಿಯ ರತಿ-ಮನ್ಮಥ ರತ್ತ ಹೋಯಿತು ಅವನ ಕಣ್ಣೋಟ. ಅವನ ಮನದಲ್ಲಿ ತಿರಸ್ಕಾರ ತುಂಬಿತ್ತು. ಪಕ್ಕನೇ ಮೂರನೆಯ ಕಣ್ಣನ್ನು ತೆರೆದ. ಆಗ ಸಾವಿರಾರು ಜ್ವಾಲೆಗಳೊಡನೆ ಅಗ್ನಿಯು ಹೊರಟು ತಕ್ಷಣವೇ ಮನ್ಮಥನನ್ನೂ ಅವನ ಪರಿವಾರವನ್ನೂ ಸುಟ್ಟು ಹಾಕಿತು. ಆಗ ಮನ್ಮಥನು ಶಿವನ ಉರಿಗಣ್ಣಿನ ಕೋಪ ಪ್ರತಾಪ ತಾಳಲಾಗದೆ, 'ದೇವ, ದೇವಾ ಕಾಪಾಡು ಕಾಪಾಡು' ಎಂದು ಆರ್ತನಾದದಿಂದ ಕೂಗುತ್ತ ಭೂಮಿಯ ಮೇಲೆ ಬಿದ್ದ. ಹಾಗೇ ಬಿದ್ದ ಮನ್ಮಥ ಮೂರ್ಛೆ ಹೋದನು. ಪತಿಯು ಮೂರ್ಛೆ ಹೋದದ್ದನ್ನು ಕಂಡು ಮನ್ಮಥನ ಸಹಚರಿ, ರತಿಯು ದುಃಖಾತಿರೇಕದಿಂದ ಅಳುತ್ತ ತನ್ನ ಪತಿಗೆ ಜೀವದಾನ ಮಾಡಲು ಪಾರ್ವತಿ ಪರಮೇಶ್ವರರನ್ನು ಪರಿಪರಿಯಾಗಿ ಪ್ರಾರ್ಥಿಸಿದಳು. ರತೀದೇವಿಯ ಕರುಣಾಜನಕ

ಸ್ಥಿತಿಯನ್ನು ಕಂಡು ಪಾರ್ವತಿ ಪರಮೇಶ್ವರರು ಅನುಕಂಪತೋರಿ, ಅವಳನ್ನು ಸಮಾಧಾನ ಪಡಿಸುತ್ತ ನುಡಿದರು-ರತಿಯೆ, ವ್ಯರ್ಥ ದುಃಖ ಮಾಡಬೇಡ. ನಿನ್ನ ಪತಿಯು ಸುಟ್ಟುಹೋದ. ಇನ್ನು ಅವನನ್ನು ನೀನು ಮರಳಿಪಡೆಯಲಾರೆ, ಶರೀರವಿರದಿದ್ದರೂ ಅವನಿಗೆ ಸಾವಿಲ್ಲ. ಅವನು ಎಂದಿನಂತೆ ತನ್ನ ಕಾರ್ಯವನ್ನು ಮುಂದುವರಿಸುತ್ತಾನೆ. ನಿನ್ನನ್ನೂ ಸುಖಪಡಿಸುತ್ತಾನೆ. ಮುಂದೆ ಶ್ರೀಹರಿಯು ಕೃಷ್ಣಾವತಾರ ಮಾಡಲಿದ್ದು, ಆ ಮಾಧವನಿಗೆ ಮನ್ಮಥ ಮಗನಾಗಿ ಜನಿಸುವನು. ಅವನನ್ನು ನೀನು ಮದುವೆಯಾಗುವೆ. ಶಿವಪಾರ್ವತಿಯರ ಮಾತಿನಿಂದ ರತಿಗೆ ಸಮಾಧಾನವಾಯಿತು. ನೆಮ್ಮದಿಯಿಂದ ತನ್ನ ಮನೆಗೆ ತೆರಳಿದಳು.

ಮನ್ಮಥನು ಹೀಗೆ ಶಿವನಿಂದ ಮರಣಕ್ಕೀಡಾಗಲು, ಮಹಾದೇವನು ಉಮೆಯೊಡನೆ ಮನೋಹರವಾದ ಹಿಮಾಲಯದ ತಪ್ಪಲಿನಲ್ಲಿ ಸುಖ ವಿಹಾರ ಮಾಡುತ್ತಿದ್ದನು. ಭವ್ಯವಾದ ಗುಹೆಗಳು, ಕಮಲದ ಹೂವುಗಳಿಂದ ತುಂಬಿದ ತಣ್ಣೀರ ಸರೋವರಗಳು, ಸುಂದರವಾದ ವನ ಪ್ರದೇಶಗಳು 'ಜುಳು ಜುಳು' ಎಂದು ಮಂಜುಳಗಾನ ಮಾಡುತ್ತ ತುಳುಕಿ-ಬಳುಕಿ ಹರಿಯುವ ನದಿಗಳು. ಅವುಗಳೆಲ್ಲೆಲ್ಲ ಶಿವನು ಪಾರ್ವತಿಯೊಡನೆ ರಸನಿಮಿಷ ಕಳೆಯುತ್ತಿದ್ದನು. ವಿದ್ಯಾಧರರು, ಕಿನ್ನರ ಸುಂದರಿಯರು ವಿಹರಿಸುವ ಸುಂದರ ತಾಣವಾದ ಹಿಮಾಲಯದ ಮನೋಹರ ಶಿಖರಗಳಲ್ಲಿ, ಪಕ್ಷಿಗಳು ಮಧುರ ಗಾಯನ ಮಾಡುತ್ತ ರಮ್ಯ ವನಾಂತರಗಳಲ್ಲಿ ಪವಿತ್ರ ತೀರ್ಥಗಳುಳ್ಳ ಆಶ್ರಮಗಳಲ್ಲಿ ಶಿವನು ತನ್ನ ಸತಿಯೊಡನೆ ಕಾಲಕ್ಷೇಪ ಮಾಡುತ್ತಿದ್ದನು. ಗಂಧರ್ವರು, ಸುಂದರ ಯಕ್ಷರು, ದೇವಾನುದೇವತೆಗಳು, ವಿಹಾರಮಾಡುವ ರಮಣೀಯ ಪ್ರದೇಶಗಳಲ್ಲಿ ಮಹಾದೇವನು ಪಾರ್ವತಿಯೊಡನೆ ಮನರಂಜನೆ ಪಡೆಯುತ್ತಿದ್ದನು. ದೇವತೆಗಳು, ಮುನಿಗಳು, ಯಕ್ಷರು, ವಿದ್ಯಾಧರರು, ಕಿನ್ನರರು ದೈತ್ಯನಾಯಕರೊಡನೆ ಸುಖಕಥಾ ವಿನೋದದಲ್ಲಿ ಪಾರ್ವತಿಯೊಡನೆ ಕಾಲ ಕಳೆಯುತ್ತಿದ್ದನು. ಆಗ ಶಿವಪಾರ್ವತಿಯರ ಎದುರಿನಲ್ಲಿ ಅಪ್ಸರಾ ಸ್ತ್ರೀಯರು ಅಂಗಾಂಗ ಸೌಂದರ್ಯ ಪ್ರದರ್ಶಿಸಿ ನರ್ತಿಸುತ್ತಿದ್ದರು. ಗಂಧರ್ವರು ಮನದುಂಬಿ ಸ್ವರಮಾಧುರ್ಯದೊಂದಿಗೆ ಗಾಯನ ಮಾಡಿದರು. ಇನ್ನಿತರರು ಲಯಬದ್ಧವಾಗಿ ವಾದ್ಯ ನುಡಿಸುವರು. ಪಾರ್ವತಿಯ ಪ್ರೀತಿಗಾಗಿ, ಹಿಮಾಲಯದಲ್ಲಿಯೇ ತನ್ನ ಗಣಗಳೊಡನೆ ಪರಮೇಶ್ವರನು ಬಹಳಕಾಲ ವಾಸ ಮಾಡಿದ್ದನು.

ಮುನಿಗಳು ಸಂದೇಹ ವ್ಯಕ್ತಪಡಿಸುವ ಧ್ವನಿಯಲ್ಲಿ ಬ್ರಹ್ಮನಿಗೆ ನುಡಿದರು- ಬ್ರಹ್ಮದೇವಾ ಈ ರೀತಿ ಪಾರ್ವತಿಯೊಡನೆ ಪರಮೇಶ್ವರನು ಹಿಮಾಲಯದಲ್ಲಿ ಇರಲು ಕಾರಣವೇನು? ಪರಮೇಶ್ವರನು ಮುಂದೇನು ಮಾಡಿದ? ಅವರ ಸಹಜ ಕುತೂಹಲ ಕಂಡು

**ಬ್ರಹ್ಮ:-** ಉಮಾದೇವಿಯೊಂದಿಗೆ ಚಂದ್ರಕಲಾಧರನು ಹಿಮಾಲಯ ಶಿಖರದಲ್ಲಿ ಬಹುಕಾಲ ತನ್ನ ಗಣಗಳೊಡನೆ ವಾಸವಾಗಿದ್ದನು. ಅವನ ಗಣಗಳಲ್ಲಿ ಹಲವಾರು ನಾನಾ ಬಗೆಯ ರೂಪ, ಗುಣಗಳನ್ನು ಹೊಂದಿದವರಿದ್ದರು. ಅವರೊಡನೆ ಆ ದೇವಿಯನ್ನು ಸಂತೋಷಪಡಿಸುತ್ತ ತಾನೂ ವಿರಾಮವಾಗಿ ಕಾಲಕ್ಷೇಪ ಮಾಡುತ್ತಿದ್ದನು.

ಒಂದು ದಿನ ಪರಮೇಶ್ವರಿಯು ತನ್ನ ತಾಯಿ ಬಳಿಗೆ ಬಂದಳು. ಅವಳ ತಾಯಿ ಮೇನಾದೇವಿ ರತ್ನ ಖಚಿತ ಸಿಂಹಾಸನದ ಮೇಲೆ ಕುಳಿತಿದ್ದಳು. ಮಗಳನ್ನು ಕಾಣುತ್ತಲೇ ಅವಳಿಗೆ ಆಸನ ಕೊಟ್ಟು ಕುಳಿತುಕೊಳ್ಳಲು ಹೇಳಿ, ಮಾತನಾಡಿದಳು- ನೀನು ಇಲ್ಲಿಗೆ ಬಂದು

ಬಹಳ ಕಾಲವಾಯಿತು. ಕಾರಣವೇನು? ನಿನಗೆ ಯಾವ ಬೇರೆ ಕ್ರೀಡೆಗಳಿಗೂ ಅನುವು ಅವಕಾಶವಿಲ್ಲ. ಪತಿಯೊಡನೆ ವಿಹಾರ ಮಾಡುವೆ ಎಂದು ಕಾಣುತ್ತದೆ. ನಿನ್ನ ಪತಿಯೊಬ್ಬ ದರಿದ್ರ. ಅಂತೆಯೇ ನಿನಗೆ ಬೇರೆ ಕ್ರೀಡೆಗಳು ದೊರೆಯಲಾರವು. ಅಷ್ಟೇ ಏಕೆ, ದರಿದ್ರರಿಗೂ, ನಿರಾಶ್ರಿತರಿಗೂ, ನಿನ್ನ ಪತಿಗಿರುವಂತೆ ಕಾಡೇ ಆಶ್ರಯ ! ಮೇನಾದೇವಿಯ ಒರಟು ಮಾತಿನಿಂದ ಪಾರ್ವತಿಗೆ ಬೇಸರ ಬಂದಿತು. ಮನಸ್ಸಿಗೆ ದುಃಖವೂ ಆಯಿತು. ಆದರೂ ಅದನ್ನು ಸಹನೆಯಿಂದ ತೋರಗೊಡಲಿಲ್ಲ. ಅಲ್ಲಿಂದ ನೇರವಾಗಿ ಪರಮೇಶ್ವರನ ಹತ್ತಿರ ಬಂದು ನುಡಿದಳು : ಪತಿಯೇ, ಇನ್ನು ಮೇಲೆ ನಾನು ಹಿಮಾಲಯದಲ್ಲಿ ಇರಲಾರೆ, ಬೇರೆಲ್ಲಿಯಾದರೂ ವಾಸಕ್ಕೆ ಸ್ಥಾನಕಲ್ಪಿಸು.

ಮಡದಿಯ ಮಾತಿಗೆ ನಸುನಗುತ್ತ ಮಹಾದೇವ ನುಡಿದ : ಈ ಹಿಂದೆ ನಾನೆಷ್ಟು ಸಾರಿ ಹೇಳಿದರೂ, ನೀನು ಬೇರೆಡೆ ವಾಸ ಮಾಡಲು ವಿರೋಧ ಮಾಡಿದೆ. ಇಲ್ಲಿಯೇ ಇರಲು ಇಷ್ಟಪಟ್ಟ ಕಾರಣ ನಾನು ಸುಮ್ಮನಾಗಿದ್ದೆ. ಅದಿರಲಿ, ಈಗ ನೀನು ಬೇರೆ ಕಡೆಯಲ್ಲಿ ವಾಸಮಾಡಲು ಉದ್ದೇಶಿಸಿರುವ ಕಾರಣ ?

**ಪಾರ್ವತಿ:**-ಮಹಾದೇವನ ಪ್ರಶ್ನೆಗೆ ಮನದಲ್ಲಿಯ ನೋವನ್ನು ಮಾತಾಗಿ ಹರಿಸಿದಳು ಈ ದಿನ ನಾನು ತಂದೆಯ ಮನೆಗೆ ಹೋಗಿದ್ದೆ. ಅಲ್ಲಿ ನನ್ನ ತಾಯಿಯ ಭೇಟಿ ಆಯಿತು. ಪರಸ್ಪರ ಕ್ಷೇಮ ಸಮಾಚಾರ, ವಿಚಾರ ವಿನಿಮಯಗಳ ಸಂದರ್ಭದಲ್ಲಿ ನನ್ನ ತಾಯಿಯು 'ನಿನ್ನ ಪತಿಯು ದರಿದ್ರ. ನಿನ್ನನ್ನು ಕ್ರೀಡಿಸುವಂತಹ ವಸ್ತುಗಳು ಅವನಿಗೆಲ್ಲಿಂದ ಬರಬೇಕು ಎಂದಳಷ್ಟೇ ಅಲ್ಲ. ಪ್ರಮಥಗಣಗಳೊಂದಿಗೆ ವಿಹರಿಸುವದು ಅವಳಿಗೆ ಇಷ್ಟವಿಲ್ಲ.

ಪಾರ್ವತಿಯ ಮಾತಿಗೆ ಹಾಸ್ಯಕ್ಕಾಗಿ ಮಹಾದೇವ ನಗುತ್ತಲೇ ಹೇಳಿದ : ನಿನ್ನ ತಾಯಿಯು ಹೇಳಿದ್ದೆಲ್ಲಾ ನಿಜವೇ. ಅದಕ್ಕೆ ನೀನೇಕೆ ಸಿಟ್ಟಾಗಿರುವೆ? ನನಗೆ ಮನೆಮಾರು ಒಂದೂ ಇಲ್ಲ. ನನಗೆ ಉಡುವದಕ್ಕೆ ಚರ್ಮದ ಹೊರತು ಬೇರೆ ಏನೂ ಇಲ್ಲ. ಮನೆಯಿಲ್ಲದ ನಾನು ಕಾಡು ಮೇಡುಗಳಲ್ಲಿ ಪರ್ವತ ಗುಹೆಗಳಲ್ಲಿ ಸಂಚರಿಸುತ್ತೇನೆ. ನಗ್ನ ಶರೀರವುಳ್ಳವರು ನನ್ನ ಗಣಗಳು ನಿನ್ನ ತಾಯಿ ಹೇಳಿರುವದೆಲ್ಲಾ ನಿಜವೇ. ಹೀಗಿದ್ದೂ ನೀನು ವಿನಾಕಾರಣ ತಾಯಿಯ ಮೇಲೆ ಕೋಪಿಸಿಕೊಳ್ಳವದು ಸರಿಯಲ್ಲ.

ಪಾರ್ವತಿಯು ಬಂಧುಗಳಿಂದ ದೂರವಿರಲು ನಿರ್ಧರಿಸಿದಳು. ಬೇರೆ ವಾಸಸ್ಥಾನ ಕಲ್ಪಿಸಲು ಮಹಾದೇವನಿಗೆ ಒತ್ತಾಯಿಸಿದಳು. ಅವಳ ಸುಖ, ಸಂತೋಷಕ್ಕಾಗಿ ಮಹಾದೇವನು ಹಿಮಾಲಯ ತಪ್ಪಲು ಪ್ರದೇಶವನ್ನು ಬಿಟ್ಟು ಪ್ರಮಥಗಣಗಳೊಡನೆ ಪಾರ್ವತಿ ಸಹಿತನಾಗಿ, ಮೇರು ಪರ್ವತಕ್ಕೆ ಹೊರಟು ಹೋದನು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹದಿಮೂರನೇಯ ಅಧ್ಯಾಯ ಮುಗಿದುದು*

—o—

## ದಕ್ಷಯಜ್ಞ ವಿಧ್ವಂಸನ

ಅಧ್ಯಾಯ - ೧೪

ಬ್ರಹ್ಮನನ್ನು ಕುರಿತು ಮತ್ತೆ ಮುನಿಗಣವು ಪ್ರಶ್ನೆ ಮಾಡುತ್ತದೆ. ವೈವಸ್ವತ ಮನ್ವಂತರದಲ್ಲಿ ಪ್ರಾಚೇತಸನ ಮಗನಾದ ದಕ್ಷಬ್ರಹ್ಮನ ಯಾಗದ ನಾಶ ಹೇಗಾಯಿತು? ಕೇವಲದೇವಿಯ ಮೇಲೆ ಕೋಪಗೊಂಡು ದಕ್ಷಯಜ್ಞ ನಾಶಮಾಡಿದುದು ಏಕೆ?

**ಬ್ರಹ್ಮ**:- ಅವರ ಪ್ರಶ್ನೆಗಳನ್ನು ಚಿತ್ತಗೊಟ್ಟು ಆಲಿಸಿದ ಚತುರಾನನ ನುಡಿದನು :- ಮುನಿಗಳೆ, ಉಮಾದೇವಿಯ ಸುಖ, ಸಂತೋಷಕ್ಕಾಗಿ ಪರಶಿವನು ದಕ್ಷಯಜ್ಞ ಹಾಳುಮಾಡಿದ ಸಮಾಚಾರ ಹೇಳುತ್ತೇನೆ ಕೇಳಿರಿ. ಮೇರು ಪರ್ವತದಲ್ಲಿ ಮಹಾಮಹಿಮೆಯುಳ್ಳ ಜಗತ್ಪೂಜ್ಯವಾದ ಶಿಖರ ಒಂದಿದೆ, ಅದು ಅಮೂಲ್ಯ ವಜ್ರ, ರತ್ನಗಳಿಂದ ತುಂಬಿದ್ದು ಜನಸಾಮಾನ್ಯರು ಆ ಶಿಖರಕ್ಕೆ ಎಂದೂ ಹೋಗಲಾರರು. ಆ ಶಿಖರದಲ್ಲಿ ಹಲವಾರು ಬಣ್ಣಗಳನ್ನು ತಳೆದ ಒಂದು ಸುಂದರ ಪ್ರದೇಶವಿದೆ. ಅಲ್ಲಿ ಉಮಾ ಮಹೇಶ್ವರರು ಜೊತೆಯಾಗಿ ಕುಳಿತಿದ್ದರು. ಆನಂದದಿಂದ ಒಂದಾಗಿ ಕುಳಿತ ಆ ಪಾರ್ವತಿ ಪರಮೇಶ್ವರರನ್ನು, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಅಶ್ವಿನೀದೇವತೆಗಳೂ, ಹಲವಾರು ಯಕ್ಷರೂ, ಅವರ ಸೇವೆ ಮಾಡುತ್ತಿದ್ದರಲ್ಲದೆ, ಯಕ್ಷರಾಜನಾದ ಕುಬೇರನೂ, ಭೃಗು ಮಹರ್ಷಿಯೂ ಆ ಮಹಾದೇವನ ಸೇವೆ ಮಾಡುತ್ತಿದ್ದರು. ಅವರ ಕಾಲಡಿಯಲ್ಲಿ ಕುಳಿತು ಸನತ್ಕುಮಾರರು, ಅಂಗಿರಸ್ಸು ಮೊದಲಾದ ದೇವಮುನಿಗಳು, ವಿಶ್ವಾವಸು ಎಂಬ ಗಂಧರ್ವನು, ಅಪ್ಸರೆಯರು ಇವರೆಲ್ಲರೂ ಸೇವೆ ಸಲ್ಲಿಸುತ್ತಿದ್ದರು. ವಿದ್ಯಾಧರರು, ಸಾಧ್ಯರು, ತಪಸ್ವಿಗಳು ಎಡಬಲ ಪಾರ್ಶ್ವಗಳಲ್ಲಿ ಕುಳಿತುಕೊಂಡು ವಿವಿಧ ವಾದ್ಯವೃಂದದೊಡನೆ ಒಂದಾಗಿ ಮಧುರ ಗಾಯನದ ಸೇವೆ ಸಲ್ಲಿಸುತ್ತಿದ್ದರು. ಇವರೊಡನೆ ಸುಗಂಧ ಬೆರೆತ ಮಂದಾನಿಲ ಸುಳಿದು ಆಗಾಗ ಪರಮೇಶ್ವರನನ್ನು ಹರ್ಷಪಡಿಸುತ್ತ ಸೇವೆ ಮಾಡುತ್ತಿತ್ತು. ಪರಶಿವನ ಪರಮಭಕ್ತರೂ, ಸೇವಕರೂ ಎಂದೆನಿಸಿದ ಭೂತಗಳು ನಾನಾ ಬಗೆಯ ವೇಷದಲ್ಲಿ ಮಹಾದೇವನನ್ನು ಸೇವೆ ಮಾಡುತ್ತಿದ್ದವು. ಭಯಂಕರರೂ, ಬಲಿಷ್ಠರೂ ಆದ ರಾಕ್ಷಸರೂ, ಪಿಶಾಚಿಗಳು ಅನೇಕ ಬಗೆಯ ಆಯುಧ ಹಿಡಿದುಕೊಂಡು ಶಿವ ಪಾರ್ವತಿಯರ ಸೇವೆಮಾಡುತ್ತಿದ್ದರು. ಮಹಾದೇವನಿಗೆ ಪ್ರಿಯನಾದ ನಂದಿಕೇಶ್ವರನು ಶಿವನ ಅಪ್ಪಣೆಯಂತೆ ಜ್ವಲಿಸುತ್ತಿರುವ ತ್ರಿಶೂಲಧರಿಸಿ ಮಹಾದೇವನ ಸಮೀಪ ನಿಂತಿದ್ದನು.

ಹೀಗೆ ದೇವ, ದೈತ್ಯ, ದಾನವರಿಂದ ಸೇವೆ ಪಡೆಯುತ್ತ ಪಾರ್ವತಿಯಿಂದೊಡಗೂಡಿ ಪರಶಿವನು ಮೇರು ಪರ್ವತದ ಶಿಖರದಲ್ಲಿ ಸುಖವಾಗಿ ವಾಸವಾಗಿದ್ದನು.

ಕೆಲವು ಕಾಲಾನಂತರ ದಕ್ಷಬ್ರಹ್ಮನು ಮಹಾಯಾಗ ಒಂದನ್ನು ಆಲೋಚಿಸಿದ. ದಕ್ಷನ ಮಹಾಯಾಗಕ್ಕೆ ಆಹ್ವಾನಿತರಾಗಿ ದೇವೇಂದ್ರ ಮೊದಲಾದ ದೇವತೆಗಳು ಸ್ವರ್ಗದಿಂದ ಬಂದರು. ದಕ್ಷಯಜ್ಞವು ಗಂಗಾದ್ವಾರವೆಂಬ ಮಹಾಕ್ಷೇತ್ರದಲ್ಲಿ ಜರುಗಲಿದ್ದು, ಮಹಾದೇವನ ಅಪ್ಪಣೆ ಪಡೆದು ಇನ್ನೂ ಹಲವಾರು ದೇವಾನುದೇವತೆಗಳು ಅಲ್ಲಿಗೆ ಬಂದರಲ್ಲದೆ ಗಂಧರ್ವ ಅಪ್ಸರೆಯರು ತಂಡೋಪತಂಡವಾಗಿ ಗಂಗಾದ್ವಾರಕ್ಕೆ ಬಂದರು.

ಮಹಾಯೋಗಿಯೂ, ಧರ್ಮಿಷ್ಠನೂ ಆದ ದಕ್ಷಬ್ರಹ್ಮನು, ಅನೇಕ ಋಷಿ ಹಾಗೂ ಸಿದ್ಧರಿಂದ ಒಡಗೂಡಿ ಮಹಾಯಾಗ ಆರಂಭಿಸಿದನು.

ಭೂಲೋಕ, ಅಂತರಿಕ್ಷಲೋಕ, ಸ್ವರ್ಗಲೋಕವಾಸಿಗಳಾದ ಜನರು ಬಂದು ಅಂಜಲಿಬದ್ಧರಾಗಿ ದಕ್ಷನಿಗೆ ಮಹಾಯಾಗದಲ್ಲಿ ಸಹಾಯಕರಾಗಿ ಸೇವೆ ಸಲ್ಲಿಸುತ್ತಿದ್ದರು. ಅವನ ಯಜ್ಞಕ್ಕೆ ಸಾಧ್ಯರು, ದ್ವಾದಶಾದಿತ್ಯರು, ಅಷ್ಟವಸುಗಳೂ ವಾಯುಗಣ ಸಹಿತರಾಗಿ ಆಗಮಿಸಿದರು. ಊಷ್ಮಪ, ಧೂಮಪ, ಆಜ್ಯಪ, ಸೋಮಪ-ಎಂಬ ನಾಲ್ಕು ಬಗೆಯ ಪಿತೃಗಳು, ಅಶ್ವಿನಿ ಕುಮಾರರು ಹಾಗೂ ಇನ್ನಿತರ ದೇವತೆಗಳೆಲ್ಲರೂ ಮಹಾಯಜ್ಞಕ್ಕೆ ಬಂದಿದ್ದರು. ಬರಿ ಅಷ್ಟೇ ಏಕೆ? ಗರ್ಭದಿಂದ ಜನಿಸುವ ಪ್ರಾಣಿಗಳು, ಮೊಟ್ಟೆಯಿಂದ ಜನಿಸುವ ಹಕ್ಕಿಗಳು, ಬೆವರು ಹಾಗೂ ದುರ್ಗಂಧದಿಂದ ಜನಿಸುವ ಕ್ರಿಮಿಕೀಟಕಾದಿಗಳು, ಮರ ಗಿಡಬಳ್ಳಿಗಳು ಸಹ ಮಹಾಯಜ್ಞಕ್ಕೆ ಉಪಸ್ಥಿತರಾಗಿದ್ದರು.

ಆ ಮಹಾಯಜ್ಞಕ್ಕೆ ಸರ್ವ ದೇವ, ಮಾನವ, ಯಕ್ಷ, ರಾಕ್ಷಸ, ಪಶು ಪಕ್ಷಿ, ಕ್ರಿಮಿಕೀಟಕಾದಿಗಳು ಬಂದರೂ, ಶಿವನು ಮಾತ್ರ ಬಾರದಿದ್ದನ್ನು ದಧೀಚಿ ಋಷಿಯು ಸೂಕ್ಷ್ಮವಾಗಿ ವಿಚಾರಿಸಿದನು. ಅವನಿಗೆ ಪರಮೇಶ್ವರನಲ್ಲಿ ಸ್ವಲ್ಪ ಕೋಪವೂ ಬಂದಿತು. ತಿರುಗಿ ದಕ್ಷನನ್ನು ಕುರಿತು-ಪರಮೇಶ್ವರನು ಲೋಕ ಪೂಜಿತ, ಮಂಗಳಕಾರಕ, ಹಾಗಿದ್ದೂ ನೀನು ಪಶುಪತಿಯನ್ನು ಪೂಜಿಸದೇ ಇರಲು ಕಾರಣವೇನು?

ಅವನ ಪ್ರಶ್ನೆಗೆ ದಕ್ಷ ಉತ್ತರಿಸಿದ-ತ್ರಿಶೂಲಧಾರಿಗಳೂ ಕಪಾಲಿಗಳೂ ಆದ ಹನ್ನೊಂದು ಜನ ರುದ್ರರು ಮಾತ್ರ. ಇವರ ಹೊರತೂ, ಬೇರೆ ಮಹೇಶ್ವರರೇ ಇಲ್ಲ.

ದಕ್ಷನ ನೇರ ಪ್ರತ್ಯುತ್ತರಕ್ಕೆ ದಧೀಚಿ ಕ್ರೋಧನಾಗಿ ನುಡಿದ- ಆ ಮಹೇಶ್ವರನೇ ಎಲ್ಲರಿಂದ ಪೂಜಿಸಲ್ಪಡುವನು. ಆ ಶಂಕರನಿಗಿಂತ ಮಿಗಿಲಾದ ದೇವರಾರೂ ಇಲ್ಲ. ನನ್ನ ಮಾತು ನಿಜವೇ ಆದಲ್ಲಿ ನಿನ್ನ ಯಜ್ಞ ಹಾಳಾಗಿಹೋಗಲಿ.

ತಪಸ್ವಿಯ ಶಾಪಕ್ಕೆ ದಕ್ಷ ಬೆದರದೆ ನಿರ್ಭಯವಾಗಿ ನುಡಿದ-ನಾನು ಈಗಲೇ ವಿಷ್ಣುವಿಗೆ ಅನೇಕ ಸಲ ಹವಿರ್ಭಾಗಗಳನ್ನು ಕೊಟ್ಟಿದ್ದೇನೆ. ಇಂದ್ರ ಮೊದಲಾದ ದೇವತೆ ಗಳಿಗೂ ಅವರಿಗೆ ಸಲ್ಲತಕ್ಕ ಹವಿಸ್ಸು ನೀಡಿದ್ದೇನೆ. ರುದ್ರರಿಗೂ ಹವಿಸ್ಸು ಅರ್ಪಿಸಿದ್ದೇನೆ. ಇಷ್ಟೇ ಸಾಕು. ಶಂಕರನಿಗೆ ಹವಿರ್ಭಾಗ ಕೊಡುವ ಅಗತ್ಯವೇ ಇಲ್ಲ; ಅಲ್ಲದೆ ಕೊಡುವದೂ ಇಲ್ಲ.

ಇತ್ತ ದೇವತೆಗಳೆಲ್ಲರೂ ದಕ್ಷನ ಯಜ್ಞಕ್ಕೆ ಹೋಗುತ್ತಿರುವದನ್ನು ಕಂಡಾಗ, ಪಾರ್ವತಿ ಪತಿಯೊಂದಿಗೆ ಕೇಳಿದಳು- ನಾಥಾ, ದೇವೇಂದ್ರಾದಿ ದೇವತೆಗಳು ಹೋಗುತ್ತಿರುವದೆಲ್ಲಿಗೆ?

ಅವಳ ಪ್ರಶ್ನೆಗೆ ಪರಮೇಶ್ವರ ನುಡಿದ- ದಕ್ಷನೆಂಬ ಪ್ರಜಾಪತಿ ಒಬ್ಬನಿದ್ದಾನೆ. ಅವನು ಪ್ರಜಾಪತಿಗಳಲ್ಲಿಯೇ ಸರ್ವಶ್ರೇಷ್ಠನು. ಅವನೀಗ ಅಶ್ವಮೇಧಯಾಗ ಹಮ್ಮಿಕೊಂಡಿದ್ದು, ಅದಕ್ಕಾಗಿ ಎಲ್ಲ ದೇವತೆಗಳೂ ಹೋಗುತ್ತಲಿದ್ದಾರೆ.

**ಪಾರ್ವತಿ:-** ಪತಿಯನ್ನು ಕುರಿತು ಪ್ರಶ್ನಿಸುತ್ತಾಳೆ- ನೀನು ದಕ್ಷನ ಯಜ್ಞಕ್ಕೆ ಹೋಗುವದಿಲ್ಲವೆ? ನೀನು ಹೋಗದೆ ಇರಲು ಕಾರಣಗಳೇನು?

**ಪರಮೇಶ್ವರ:-** ಮಡದಿಗೆ ಉತ್ತರಿಸಲು ಮಾರ್ನುಡಿದ :- ಈ ಯಜ್ಞದಲ್ಲಿ ನನಗೆ ಯಾವ ಹವಿರ್ಭಾಗವೂ ದೊರಕುವಂತಿಲ್ಲ. ಇದೆಲ್ಲ ದೇವತೆಗಳೇ ಮಾಡಿದ ಕುತಂತ್ರ. ಹಿಂದಿನಿಂದ ನಡೆದುಕೊಂಡ ಮಾರ್ಗದಲ್ಲಿ ಕರ್ಮಾಚರಣೆ ನಡೆಯುವದು ವಿಹಿತ.

**ಪಾರ್ವತಿ:-** ವೇದಾದಿಗಳೆಲ್ಲ ನಿನ್ನ ಅಪಾರ ಮಹಿಮೆಯನ್ನು ಗುಣಗಾನ ಮಾಡುತ್ತಿವೆ. ನೀನು ಅಪ್ರಮೇಯನು, ಅಜೇಯನು. ಯಶಸ್ಸಿನಲ್ಲಿ ಐಶ್ವರ್ಯದಲ್ಲಿ ನಿನಗೆ ಸರಿಯಾದವರು

ಬೇರೊಬ್ಬರಿಲ್ಲ. ಹೀಗಿದ್ದು ನಿನಗೆ ಯಜ್ಞದಲ್ಲಿ ಹವಿರ್ಭಾಗ ಇಲ್ಲದಿರುವದಕ್ಕಾಗಿ ನನಗೆ ವ್ಯಥೆಯಾಗಿದೆ. ಮನದ ದುಃಖ, ನಿರಾಶೆಗಳನ್ನು ನುಂಗುತ್ತ ಮತ್ತೆ ಅವಳೆಂದಳು- ಇಲ್ಲ ಹೀಗೆಂದಿಗೂ ಆಗಬಾರದು. ನನ್ನ ಪತಿಯಾದ ನಿನಗೆ ಯಜ್ಞದಲ್ಲಿ ದೇವೇಂದ್ರಾದಿಗಳೊಡನೆ ಪಾಲು ದೊರೆಯುವದು ನ್ಯಾಯವಾದದ್ದು; ಹೌದು ಇದಕ್ಕೆ ನಾನೇನು ಮಾಡಬೇಕು? ತಪಸ್ಸು ಮಾಡಲೇ? ವ್ರತ ನಿಯಮಗಳನ್ನು ಮಾಡಬೇಕೆ?

ಮಡದಿಯು ಮಿಡುಕುವದನ್ನು, ಕಳವಳವನ್ನು ದೂರ ಮಾಡಲು ಮಹೇಶ್ವರ ಅವಳಿಗೆ ಸಮಾಧಾನಪಡಿಸುತ್ತ ಹೇಳಿದ, ನೀನು ನನ್ನ ಸ್ವರೂಪವೇನೆಂಬುದನ್ನು ಇನ್ನೂ ಅರ್ಥಮಾಡಿಕೊಂಡಿಲ್ಲ. ಅಂತೆಯೇ ವ್ಯರ್ಥ ಕಳವಳ ಪಡುತ್ತಿರುವೆ. ನನ್ನ ಸ್ವರೂಪ ಜ್ಞಾನ ಧ್ಯಾನದ ಬಲದಿಂದ ತಪಸ್ವಿಗಳಿಗೆ ಮಾತ್ರ ಆಗಬಲ್ಲದು. ಇಲ್ಲಿ ಕೇಳು, ಯಜ್ಞಕ್ಕೆ ನಾನೇ ಅಧಿಪತಿ, ಯಜ್ಞಕಾಲದಲ್ಲಿ ನನ್ನನ್ನೇ ಸ್ತುತಿಸುವರು. ರ್ಥತರವೆಂಬ ಸಾಮಗಾನದಿಂದ ನನ್ನನ್ನು ಪ್ರಸನ್ನಗೊಳಿಸಲು ಪ್ರಯತ್ನಿಸುವರು. ಹೋಮವನ್ನಾದರೂ ನನ್ನ ಪ್ರೀತಿಗಾಗಿ ಮಾಡುವರು. ಅಧ್ವರ್ಯಗಳು ಕೊಡುವ ಹವಿರ್ಭಾಗಗಳೆಲ್ಲವೂ, ಎಲ್ಲ ನದಿಗಳೂ ಕೊನೆಗೆ ಸಮುದ್ರಸೇರುವಂತೆ ನನ್ನನ್ನೇ ಸೇರುವವು.

**ಪಾರ್ವತಿ:-** ಸಾಕು, ಸಾಕು, ನಿಮ್ಮ ಆತ್ಮಪ್ರಶಂಸೆ, ನಿಮ್ಮ ಬಲಪರಾಕ್ರಮಗಳೆಲ್ಲ ಕೆಲಸಕ್ಕೆ ಬಾರದ ಬರೀ ನಿಮ್ಮನ್ನೇ ನೀವು ಹೊಗಳಿಕೊಳ್ಳುವ ಶಬ್ದ ಮಾತ್ರವಾಗಿ ಉಳಿದಿವೆ.

ಪಾರ್ವತಿಯ ಅಣಕದ ಮಾತು ಪರಮೇಶ್ವರನನ್ನು ಕೆಣಕಿತು. ಮಹಾದೇವ ಮಡದಿಗೆ ಗಂಭೀರವಾಗಿ ನುಡಿದ-ನೀನು ತಿಳಿದಿರುವಂತೆ ನಾನು ನನ್ನನ್ನು ಹೊಗಳಿಕೊಳ್ಳುತ್ತಿಲ್ಲ. ನಿನ್ನ ಮನದ ಅಭಿಲಾಷೆಯಂತೆ ನನಗೆ ಯಜ್ಞದಲ್ಲಿ ಹವಿರ್ಭಾಗ ದೊರಕುವಂತೆ ಹೇಗೆ ಮಾಡುವೆನು ನೋಡು. ತಕ್ಷಣವೇ ಪರಮೇಶ್ವರನು, ಕ್ರೋಧಾಗ್ನಿಯಿಂದ ಭೂತ ಒಂದನ್ನು ಸೃಷ್ಟಿಸಿದ ಆ ಭೂತಕ್ಕೆ ನೀನು ಕೂಡಲೇ ದಕ್ಷನ ಯಜ್ಞಶಾಲೆಗೆ ಹೋಗಿ, ಅಲ್ಲಿ ಅವನ ಯಜ್ಞವನ್ನೆಲ್ಲಾ ನಾಶಪಡಿಸು. ಎಂದು ಅಪ್ಪಣೆಮಾಡಿದ. ಒಡೆಯನ ಅಪ್ಪಣೆಯನ್ನು ಕಾರ್ಯರೂಪಕ್ಕಿಳಿಸಲು ಶರವೇಗದಲ್ಲಿ ಧಾವಿಸಿ ಹೊರಟ ಆ ಭೂತ, ಭಯಾನಕ ಗರ್ಜನೆಮಾಡುತ್ತ, ದಕ್ಷನ ಯಜ್ಞವನ್ನೆಲ್ಲಾ ಹಾಳು ಮಾಡಿತು. ರುದ್ರಭೂತನೊಂದಿಗೆ ಭಯಂಕರಳೂ, ಮಾಹೇಶ್ವರಿಯೂ ಆದ ಭದ್ರಕಾಳಿಯೂ ಕೆರಳಿ, ಯಜ್ಞ ಮಂಟಪವನ್ನೆಲ್ಲಾ ಹಾಳುಮಾಡಿದರು. ಮಹಾರುದ್ರನ ಕ್ರೋಧದಿಂದ ಜನಿಸಿದ ಆ ಭೂತನು ವೀರಭದ್ರನೆಂಬ ಹೆಸರು ಪಡೆದನು.

ಅವನು ದಕ್ಷಯಜ್ಞ ಹಾಳುಗೆಡವಿದನಲ್ಲದೆ ಉಮಾದೇವಿಯ ಕೋಪ, ತಾಪವನ್ನು ಶಾಂತಗೊಳಿದನು. ಅವನು ತನ್ನ ಮೈಯೊಳಗಿನ ರೋಮ ಕೂಪಗಳಿಂದ ರುದ್ರಗಣಗಳನ್ನು ಸೃಷ್ಟಿಮಾಡಿದನು. ಅವರೆಲ್ಲರೂ ಬಲಿಷ್ಠರೂ, ಭಂಯಕರರೂ ಆಗಿದ್ದರು. ಈ ರುದ್ರಗಣಗಳು ರುದ್ರನ ಪರಿವಾರದವರು. ಇಂತಹ ಸಾವಿರಾರು ಗಣಗಳು ಕೂಡಲೇ ದಕ್ಷಯಜ್ಞವನ್ನು ನಾಶಮಾಡಿದರು. ಆ ಸಾವಿರಾರು ರುದ್ರಗಣಗಳು ಆಕಾಶವನ್ನೆಲ್ಲ ತುಂಬಿ ಗೊಂದಲವನ್ನುಂಟು ಮಾಡಿದರು. ಅವರ ಗರ್ಜನೆ, ಕೋಪತಾಪಕ್ಕೆ ಭೂಮಿ ನಡುಗಿತು. ಪರ್ವತಗಳು ಸಿಡಿದು ಚೂರಾದವು. ಭಯಂಕರ ಬಿರುಗಾಳಿ ಎದ್ದಿತು. ಸಮುದ್ರ ಅಲ್ಲೋಲಕಲ್ಲೋಲವಾಯಿತು. ಸೂರ್ಯನು ಸಹ ಗ್ರಹಣ ಹಿಡಿದಂತೆ ಮಂದ ಪ್ರಕಾಶನಾದನು. ಗ್ರಹಗಳು, ನಕ್ಷತ್ರ ಹಾಗೂ ಕಿರುತಾರೆಗಳು, ಇದ್ದಕ್ಕಿದ್ದಂತೆಯೇ

ಕಾಂತಿಹೀನವಾದವು. ಜಗತ್ತೆಲ್ಲವೂ ಅಂಧಕಾರದಿಂದ ತುಂಬಿತು. ರುದ್ರಗಣಗಳು ದಕ್ಷನ ಯಜ್ಞಮಂಟಪಕ್ಕೆ ಗರ್ಜನೆಮಾಡುತ್ತ, ಕೆಲವರು ವಿಕಾರವಾಗಿ ಕೂಗುತ್ತ, ವಾಯುವೇಗ ಮನೋವೇಗದಿಂದ ದಾಳಿಯಿಟ್ಟು ಯೂಪಸ್ತಂಭವನ್ನು, ತಳಿರುತೋರಣಗಳನ್ನು ಹರಿದು ಬಿಸಾಕಿದರು. ಮಂಗಲದ್ರವ್ಯ ಹವಿಸ್ಸು ಮೊದಲಾದವುಗಳನ್ನು ಮನಬಂದತ್ತ ಚೆಲ್ಲಾಡಿದರು. ಯಜ್ಞಪಾತ್ರೆಗಳನ್ನು ಒಡೆದು ಪುಡಿಮಾಡಿದರು. ರುದ್ರಗಣಗಳು ಯಜ್ಞಶಾಲೆ ಪ್ರವೇಶಿಸಿದಾಗ ಅಲ್ಲಲ್ಲಿ ದಿವ್ಯವಾದ ಅನ್ನದ ರಾಶಿಗಳನ್ನು ಪರ್ವತ ಪ್ರಾಯವಾಗಿ ಒಟ್ಟಲಾಗಿತ್ತು. ಹಾಲಿನ ನದಿ ಹಾಗೂ ತುಪ್ಪ ಪಾಯಸದ ಭಾವಿಗಳನ್ನೇ ತೊಡಲಾಗಿತ್ತು. ಜೇನು, ತುಪ್ಪ, ಮೊಸರು ನದಿಯಾಗಿ ಹರಿಯುತ್ತಿದ್ದವು. ಭಕ್ಷ, ಪಾನೀಯಗಳು, ನಾನಾ ತರಹದ ಮಾಂಸಗಳು, ಲೇಹ್ಯ, ಲಾಡು ಮುಂತಾದವುಗಳನ್ನು ಲೆಕ್ಕವಿಲ್ಲದಷ್ಟು ಒಟ್ಟಿದ್ದರು. ರುದ್ರಗಣಗಳು ಯಥೇಚ್ಛವಾಗಿ ತಿಂದರು, ಕುಡಿದರು. ಕೆಲವನ್ನು ಹಾಳು ಮಾಡಿದರು. ಇನ್ನುಳಿದವರು ಮನಬಂದ ರೀತಿಯಲ್ಲಿ ದಿಕ್ಕುದಿಕ್ಕುಗಳಿಗೆ ಎಸೆದರು ; ತೂರಾಡಿದರು. ಪ್ರಚಂಡ ಪ್ರಳಯಾಗ್ನಿ ಸ್ವರೂಪರಾದ ರುದ್ರಗಣಗಳು ಮನಬಂದಂತೆ ತಿನ್ನುತ್ತ ಎಲ್ಲರನ್ನು ತಮ್ಮ ವಿಕಾರರೂಪದಿಂದ ಹೆದರಿಸುತ್ತ ದೇವಸುಂದರಿಯರನ್ನು ಹಿಂಸೆಪಡಿಸುತ್ತ, ಸ್ವೇಚ್ಛಾ ವಿಹಾರ ಮಾಡುತ್ತಿದ್ದರು. ಈ ರೀತಿಯಾಗಿ, ಭದ್ರಕಾಳಿಯೊಡನೆ ಸೇರಿಕೊಂಡು, ರುದ್ರಗಣಗಳು ಯಜ್ಞವನ್ನೆಲ್ಲ ಹಾಳು ಮಾಡಿದರು. ರುದ್ರಗಣಗಳ ಭಯಂಕರ ಗರ್ಜನೆ ಜನರ ಎದೆಗುಂಡಿಗೆ ಬಿರಿಯುವಂತಿತ್ತು. ಇನ್ನೂ ಕೆಲವರು ಯಜ್ಞಪುರುಷನ ತಲೆಯನ್ನೇ ಕಡಿದು ಚಂಡಾಡಿದರು.

ಅವರ ಸಿಂಹನಾದ, ಕೋಪ, ಪ್ರತಾಪ ಕಂಡು, ದೇವೇಂದ್ರಾದಿಗಳೂ ದಕ್ಷ ಬ್ರಹ್ಮ ಸಹಿತರಾಗಿ ಕೈ ಮುಗಿದು ನೀನು ಯಾರೆಂದು ಪ್ರಶ್ನಿಸಿದರು.

**ವೀರಭದ್ರ:-** ದೇವ ನಾಯಕರೇ ಕೇಳಿರಿ. ನನ್ನ ಹೆಸರು ವೀರಭದ್ರನು ರುದ್ರನ ಕೋಪದ ಬಲದಿಂದ ನಾನು ಜನಿಸಿದವ. ಈ ಭದ್ರಕಾಳಿ ಮಹಾದೇವಿಯ ಕೋಪದ ಫಲದಿಂದ ಆವಿರ್ಭವಿಸಿದಳು. ನಾವೀರ್ವರೂ ನಿಮ್ಮ ಮೃಷ್ಟಾನ್ನ ಉಣ್ಣಲು ಬಂದವರಲ್ಲ. ಅಥವಾ ಕುತುಹೂಲದಿಂದ ಯಜ್ಞ ಕಾರ್ಯ ನೋಡಲೂ ಬಂದಿಲ್ಲ. ದೈತ್ಯರೂ ನಾವಲ್ಲ. ದೇವತೆಗಳೂ ಅಲ್ಲ ನಾವು ದೇವ ದೇವನಾದ ಮಹಾದೇವನಿಂದ ಪ್ರೇರಿತರಾಗಿ ನಮ್ಮ ಪರಿವಾರದೊಡನೆ ಬಂದಿರುವದು-ದಕ್ಷಯಜ್ಞ ಸರ್ವನಾಶಕ್ಕೆ.

''ದೇವೇಂದ್ರ, ಮೊದಲು ಉಮಾಪತಿಗೆ ನಮೋ ನಮೋ'' ಎನ್ನು. ಭಯಭಕ್ತಿಯಿಂದ ಶಿರಬಾಗು ಅದನ್ನು ಬಿಟ್ಟು ನಮಗೆ ಶರಣು ಬಂದರೇನು ಪ್ರಯೋಜನ?

ದಕ್ಷನ ಯಜ್ಞವನ್ನೆಲ್ಲಾ ರುದ್ರಗಣಗಳು ನಾಶಮಾಡಲು, ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಹಸಿಮಾಂಸದ ತುಂಡುಗಳಿಗೆ ಆಶೆಪಟ್ಟು ಅಸಂಖ್ಯ ಹದ್ದುಗಳು, ಕಾಡು ಪಕ್ಷಿಗಳು ಎರಗಿ ಬರುತ್ತಿದ್ದವು. ಕಾಡಿನಿಂದ ಮಾಂಸದ ವಾಸನೆ ಹಿಡಿದು, ಅಪಸ್ವರ ಕೂಗು ಹಾಕುತ್ತ ಯಜ್ಞ ಶಾಲೆಯತ್ತ ನರಿ ನಾಯಿಗಳು ಬರತೊಡಗಿದವು. ದಕ್ಷಯಜ್ಞ ಹಾಳಾಗುತ್ತಿರಲು, ಯಜ್ಞ ಪುರುಷನು ಮೃಗರೂಪವನ್ನು ಧರಿಸಿ ಪ್ರಾಣ ಭೀತಿಯಿಂದ ಓಡತೊಡಗಿದನು. ವೀರಭದ್ರನು ಅವನನ್ನು ಕಂಡು ಕೈಯಲ್ಲಿ ಬಿಲ್ಲು ಬಾಣ ತೆಗೆದುಕೊಂಡು ಅವನನ್ನು ಬೆನ್ನಟ್ಟಿದನು. ಹೀಗೆ ಬೆನ್ನಟ್ಟಿರುವಾಗ, ವೀರಭದ್ರನ ಹಣೆಯಿಂದ ಬೆವರಿನ ಹನಿ

ಉದುರಿತು. ಭೂಮಿಯ ಮೇಲೆ ಬೀಳುತ್ತಿರುವಂತೆಯೇ ಆ ಬೆವರಹನಿಯು ಪ್ರಜ್ವಲಿಸುವ ಕ್ರೋಧಾಗ್ನಿಯಾಗಿ ಉರಿಯಿತು. ಆ ಅಗ್ನಿಯಿಂದ ಪುರುಷಾಕೃತಿಯೊಂದು ಉದ್ಭವಿಸಿತು. ಆಕಾರದಲ್ಲಿ ಗಿಡ್ಡನಾಗಿಯೂ ಕೆಂಬಣ್ಣ ಮೈಯುಳ್ಳವನಾಗಿ ಕಂಡನು. ಅವನ ಕೂದಲು ಹಳದಿಬಣ್ಣದಿಂದ ಮಿರುಗುತ್ತಿದ್ದವು. ಮೈ ಬಣ್ಣ ಕಪ್ಪಾಗಿತ್ತು. ಅವನುಟ್ಟಬಟ್ಟೆ ಕೆಂಪು ವರ್ಣದ್ದು. ಅವನು ನಡೆದು ಬರುತ್ತಿರಲು, ಭೂಮಿ ಕಂಪಿಸಿತು.

ಆ ಸಮಯಕ್ಕೆ ನಾನು (ಬ್ರಹ್ಮ) ಮಹಾದೇವನ ಹತ್ತಿರ ಬಂದು, ವಿನಯದಿಂದ ನುಡಿದೆ-ಇನ್ನು ಮೇಲೆ ನಿನಗೂ ಯಜ್ಞದಲ್ಲಿ ಭಾಗಗಳನ್ನು ದೇವತೆಗಳು ಕೊಡುವರು. ನಿನ್ನ ಕೋಪವನ್ನು ಶಮನಮಾಡು. ಪ್ರತಾಪವನ್ನು ಉಪಸಂಹರಿಸು. ನಿನ್ನ ಪ್ರಚಂಡಕೋಪದ ಉರಿಯಲ್ಲಿ ಋಷಿಗಳು, ಪರಿತಪಿಸುತ್ತಿದ್ದಾರೆ- ಲೋಕದಲ್ಲಿ ಶಾಂತಿ ಸುವ್ಯವಸ್ಥೆ ಶೂನ್ಯವಾಗಿದೆ. ನಿನ್ನ ಬೆವರಿನಲ್ಲಿ ಜನಿಸಿದ ದೈತ್ಯಾಕಾರದ ಪುರುಷನು ಮುಂದೆ ಜ್ವರವೆಂಬ ಹೆಸರಿನಲ್ಲಿ ಲೋಕ ಪ್ರಸಿದ್ಧಿ ಪಡೆಯುವನು. ಈ ರೀತಿಯಾಗಿ, ಈ ಪುರುಷನು ಒಂದೇ ರೀತಿಯಾಗಿ ಇದ್ದರೆ, ಅವನ ಪ್ರಚಂಡ ಅಗ್ನಿಯನ್ನು ಭೂಮಿತಾಯಿಯೂ ಸಹಿಸಲಾರಳು. ಅವನನ್ನು ತುಂಡರಿಸಿ, ಭೂಮಿಯಲ್ಲಿ ಇರಿಸು.

ಪರಶಿವನು ಸಮ್ಮತಿಸಿದನು. ದೇವತೆಗಳು ಪಿನಾಕಪಾಣಿಗೆ ಹವಿರ್ಭಾಗವನ್ನು ಕಲ್ಪಿಸಿದರು. ಯೋಗಾನುಷ್ಠಾನಗೈದು ದಕ್ಷನು ಸಹ ಜ್ಞಾನನೇತ್ರ ತೆರೆದು, ತದೇಕ ದೃಷ್ಟಿಯಿಂದ ಶಿವನನ್ನು ಅವಲೋಕಿಸಿ, ಮಣಿದು ಮೊರೆ ಹೊಕ್ಕನು. ಆಗ ಶಿವನ ಉಗ್ರಕೋಪ ತಗ್ಗುತ್ತ ತಣ್ಣಗಾಯಿತು. ಮಂದಹಾಸ ಬೀರುತ್ತ ದಕ್ಷನಿಗೆ 'ನಿನಗೇನಾಗಬೇಕು' ಎಂದು ಅನುಗ್ರಹ ತೋರಿದ.

**ದಕ್ಷ:-** ಶಿವನ ಅನುಗ್ರಹದಿಂದ ಧನ್ಯತೆಯ ಭಾವದಲ್ಲಿ ನುಡಿದ- ಪರಶಿವನೆ, ಪರಾಕ್ರಮಿಯೇ, ನೀನು ನನ್ನಲ್ಲಿ ನಿಜವಾಗಿ ಅನುಗ್ರಹ ಮಾಡುವದಾದರೆ-ನಾನು ಬಹುಶ್ರಮವಹಿಸಿ ತಯಾರಿಸಿದ ಯಜ್ಞ ಸಾಮಾಗ್ರಿಗಳನ್ನೆಲ್ಲಾ ನಿನ್ನ ಗಣಗಳು, ಅಪವಿತ್ರ ಮಾಡಿ ಹಾಳು ಮಾಡಿದರು. ಅವಲ್ಲೆವೂ ವ್ಯರ್ಥವಾಗದಂತೆ ನೀನು ಅನುಗ್ರಹ ಮಾಡಬೇಕು.

ಅವನ ಬಿನ್ನಹಕ್ಕೆ ಉಮಾಪತಿ 'ತಥಾಸ್ತು' ಎಂದ. ಬಳಿಕ ದಕ್ಷಬ್ರಹ್ಮನು, ಧರ್ಮದ ಕಾರ್ಯಗಳಿಗೆ ಫಲದಾಯಕನಾದ ಆ ಜಗದೀಶನನ್ನು, ಸಾವಿರದೆಂಟು ನಾಮಾವಳಿಗಳಿಂದ ಸ್ತೋತ್ರ ಮಾಡಿದ.

## ದಕ್ಷಬ್ರಹ್ಮನು ಮಾಡಿದ ಶಿವ ಮಹಾಸ್ತೋತ್ರ

**ಬ್ರಹ್ಮನು:-** ಶಂಕರನ ಅಪ್ರತಿಮ ತೇಜೋಮೂರ್ತಿ ಯನ್ನು ಕಾಣುತ್ತಲೇ ಕೈ ಮುಗಿದು ಸ್ತುತಿಸಲು ಪ್ರಾರಂಭಿಸಿದ. ದೇವದೇವೋತ್ತಮನಾದ ಈಶ್ವರನೇ, ನನ್ನ ಸಾವಿರ ವಂದನೆಗಳು. ಲೋಕ ಕಂಟಕನಾದ ಅಂಧಕಾಸುರನನ್ನು ಸಂಹರಿಸಿ ಲೋಕದ ಕಂಟಕ ಕಳೆದ ವಿಷಕಂಠನೆ, ನಿನಗೆ ನಮಸ್ಕಾರ. ನೀನು ಅಗಾಧ ಮಹಿಮಾವಂತ, ಅಂತಯೇ ನಿನ್ನನ್ನು ಸಕಲ ದೇವಾನು ದೇವತೆಗಳು ಸದಾಕಾಲ ಪೂಜಿಸುತ್ತಿರುತ್ತಾರೆ. ನೀನು ಕುಬೇರನ ಆತ್ಮೀಯ ಮಿತ್ರ. ನೀನು ವಿರೂಪಾಕ್ಷ, ಅಷ್ಟೇ ಅಲ್ಲ ಭೂಮಂಡಲವನ್ನೇ ವ್ಯಾಪಿಸಿರುವ ವಿರಾಟ್ ಸ್ವರೂಪಿ. ನಿನ್ನ ಕಿವಿಗಳ ಬಲಮುರಿ ಶಂಖಸದೃಶವಾಗಿದ್ದು ಸುಂದರವಾಗಿವೆ. ಕಿವಿಗಳು ಅಗಲವಾಗಿ ಶ್ರವಣಶಕ್ತಿಯಲ್ಲಿ ತೀಕ್ಷಣವಾಗಿವೆ. ಇಂತಹ ಕಿವಿಗಳೂ ಕೈಕಾಲು ಮುಖಗಳೂ

ಸಾವಿರಾರು ನೂರಾರು ಹೊಟ್ಟೆಗಳೂ ನೂರಾರು ನಾಲಗೆ ಹಾಗೂ ಬಾಯಿಗಳಿರುವ ವಿರಾಟ್‌ರೂಪಿ. ನಿನ್ನ ಭಕ್ತರು ನಿತ್ಯ ಗಾಯತ್ರಿ ಮಂತ್ರದೊಡನೆ ಗಾಯನಮಾಡುತ್ತ ಭಜಿಸುವರು. ಸೂರ್ಯೋಪಾಸಕರು ನಿನ್ನನ್ನು ಸೂರ್ಯರೂಪದಿಂದ ಆರಾಧಿಸುವರು.

ಹತ್ತು ಕೈಗಳನ್ನು ಹೊಂದಿರುವ, ಶ್ರೇಷ್ಠನೂ, ಜ್ಯೇಷ್ಠನೂ, ಸೃಷ್ಟಾರನೂ, ಮಹಾಬಲಿಷ್ಠನೂ, ಮಹಾಕೋಪಿಷ್ಠನೂ ಆದ ಶಿವನಿಗೆ ಸಾಷ್ಟಾಂಗ ನಮಸ್ಕಾರಗಳು, ಕಪಾಲಧಾರಿಯೂ, ಭಸ್ಮಲೇಪಿತನೂ, ಜ್ಞಾನಮಾರ್ಗದಿಂದ ಒಲಿಯಬಲ್ಲ ಗಿರಿಜೆಯ ನಲ್ಲನಾದ ಪರಶಿವನಿಗೆ ನಮಸ್ಕಾರಗಳು. ವಿಕಾರ ರೂಪಧರಿಸಿದವನೂ, ಭಯಂಕರ ಕೋರೆದಾಡೆ ಉಳ್ಳವನೂ, ಹರಿತವಾದ ನಾಲಿಗೆಯುಳ್ಳವನೂ, ಕಾಲನೇಮಿಯೂ ಆದ ಕಾಲರೂಪನಿಗೆ ನಮಸ್ಕಾರ. ದೇವದೇವೋತ್ತಮನೆ, ನೀನು ಸರ್ವ ಪ್ರಾಣಿಗಳ ಅಂತರಾತ್ಮನು. ಸರ್ವೇಶ್ವರನು ನೀನಾಗಿದ್ದರಿಂದ ನಿನ್ನನ್ನು ಪ್ರತ್ಯೇಕ ಯಾಗಕ್ಕೆ ಕರೆಯದೆ ಅಪರಾಧಮಾಡಿದೆ. ಮನ್ನಿಸು. ಲೋಕದಲ್ಲಿ ಜರಗುವ ನಾನಾ ಪ್ರಕಾರಗಳ ಯಾಗ, ಯಜ್ಞಗಳಿಗೆ ನೀನು ಸಾಕ್ಷೀಭೂತ. ಅಲ್ಲಿ ನೀನು ಬಹುವಿಧವಾಗಿ ಆರಾಧಿಸಲ್ಪಡುವದು ಸಹಜವಾಗಿದೆ. ಅದಕ್ಕಾಗಿ ನಿನ್ನನ್ನು ಯಾಗಕ್ಕೆ ಪ್ರತ್ಯೇಕವಾಗಿ ಆಹ್ವಾನಿಸಲಿಲ್ಲ. ನಿನ್ನ ಮಾಯಾ ಪ್ರಭಾವದಿಂದ ನಿನ್ನನ್ನು ಯಜ್ಞಕ್ಕೆ ಕರೆಯದೇ ವಿಸ್ಮೃತಿ ಹೊಂದಿರಬಹುದು. ನನ್ನಿಂದಾದ ಈ ಮಹಾಪರಾಧಕ್ಕೆ ಕ್ಷಮೆ ಇರಲಿ. ನೀನು, ಕಠೋರನಾಗಿ ನನಗೆ ಇಂತಹ ಕಠಿಣ ಶಿಕ್ಷೆ ವಿಧಿಸಿರುವೆ. ನಾನಾಪರಿ ದುಃಖ ಅಪಮಾನಗಳಿಗೆ ಗುರಿಮಾಡಿರುವೆ. ಈಗ ನೀನೇ ನನಗೆ ಗತಿ. ನೀನೇ ನನ್ನನ್ನು ಉದ್ಧರಿಸುವವನು. ದಯಾಸಮುದ್ರನೇ ನನ್ನ ಮೇಲೆ ಕೃಪೆಮಾಡು.

ದಕ್ಷನು ಹೀಗೆ ಮಹಾದೇವನನ್ನು ಸದ್ಭಕ್ತಿಭಾವದಿಂದ ಸ್ತುತಿಸಲು ಆ ದಯಾನಿಧಿಯಾದ, ರುದ್ರನು, ಶಾಂತನಾದನು. ಅವನ ಸ್ತೋತ್ರ, ಭಜನೆ, ಸಂಕೀರ್ತನೆಗಳಿಂದ, ಕರುಣಾಸಿಂಧು, ಚಂದ್ರಮೌಳೀಶ್ವರ ಕಣ್ತೆರೆದು ದಕ್ಷನನ್ನು ಕುರಿತು ನುಡಿದನು-ದಕ್ಷಬ್ರಹ್ಮನೆ ನಿನ್ನ ಭಕ್ತಿಪೂರಿತ ಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ. ನೀನಿನ್ನು ನನ್ನ ಸಾಮೀಪ್ಯ ಹೊಂದುವ ಚಿಂತಿಸಬೇಡ. ನನ್ನ ಹಿಂದಿನ ಪ್ರತಿಜ್ಞೆ-ಪ್ರತೀಕಾರ ನೆರವೇರಿಸಲು ನಾನು ಈ ಮೊದಲೇ ಹಿಂದಿನ ಯಜ್ಞವನ್ನು ನಾಶಮಾಡಿದ್ದೇನೆ ಅಷ್ಟೆ. ಈ ರೀತಿ ಯಜ್ಞನಾಶವಾದುದಕ್ಕೆ ವ್ಯಸನಪಡಬೇಡ. ಅದಕ್ಕಿಂತಲೂ ಮಿಗಿಲಾದ ವರವನ್ನು ನೀಡುತ್ತೇನೆ. ಸಾವಿರ ಅಶ್ವಮೇಧಯಾಗದ ಫಲ ನಿನಗೆ ದೊರಕಿದೆ. ಮೂರು ವಾಜಪೇಯಿಯಾಗದ ಪುಣ್ಯಫಲ ನಿನ್ನದಾಗಲಿ. ನನ್ನ ಮಾತನ್ನು ಲಕ್ಷವಿಟ್ಟು ಅನುಸರಿಸು. ನೀನೀಗ ಕಾಲವಿಲಂಬ ಮಾಡದೆ, ಚತುರ್ವೇದಗಳನ್ನು, ವೇದಾಂಗಗಳನ್ನು, ಸಾಂಖ್ಯಯೋಗಗಳನ್ನು ಸರಿಯಾಗಿ ಅಭ್ಯಾಸಮಾಡು. ಹನ್ನೆರಡು ವರ್ಷಪರಿಯಂತ ಪಾಶುಪತವ್ರತ ಆಚರಿಸು. ಏಕನಿಷ್ಠೆಯಿಂದ ತಪಸ್ಸನ್ನಾಚರಿಸು. ನನ್ನಿಂದ ಕಲ್ಪಿತವಾದ ಈ ಪಾಶುಪತ ವ್ರತದಿಂದ-ಸಂಸಾರ ಬಂಧನದಿಂದ ಮುಕ್ತಿ ಪಡೆಯಬಹುದು. ಈ ವ್ರತ ಅನುಷ್ಠಾನ ಮಾಡಿದಲ್ಲಿ ಮನುಷ್ಯನ ಸಕಲ ಮನೋವ್ಯಥೆ, ಕಷ್ಟ, ಅನಿಷ್ಟಾದಿಗಳೆಲ್ಲ ನಿರ್ನಾಮವಾಗುವವು. ದಿವ್ಯ ಭವ್ಯವಾದ ಶಾಂತಿ, ಸುಖಗಳು ದೊರಕುವವು.

ದಕ್ಷಬ್ರಹ್ಮನಿಗೆ ಸಾಂತ್ವನ ನೀಡಿ, ಅನುಗ್ರಹ ತೋರಿ, ಪರಶಿವನು ಪತ್ನಿ ಹಾಗೂ ಪರಿವಾರದೊಡನೆ ಅಂತರ್ಧಾನ ಹೊಂದಿದನು.

ಈ ರೀತಿಯಾಗಿ ಶಿವನು, ಯಜ್ಞದಲ್ಲಿಯ ಹವಿರ್ಭಾಗಗಳನ್ನು ಉಮಾದೇವಿಯೊಡನೆ ಪಡೆದನು. ಆ ನಂತರ ಅವನು ಜ್ವರವನ್ನು ವಿಂಗಡಿಸಿದನು. ತನ್ನ ಜ್ವರವನ್ನು ಕ್ರಮಾನುಸಾರ ಪರ್ವತಗಳಿಗೆ ಶಿಲಾಜಿತು ಎಂಬ ಜ್ವರವನ್ನು, ನೀರಿಗೆ ನೀಲಿಕೆ ಎಂಬ ಜ್ವರವನ್ನು, ಸರ್ಪಗಳಿಗೆ ಪೊರೆ ಎಂಬ ಜ್ವರವನ್ನೂ, ಕುದುರೆಗಳಿಗೆ ರಂಧ್ರಾಗತವನ್ನು, ನವಿಲುಗಳಿಗೆ ತಲೆಯೊಡೆಯುವದನ್ನು ಹಸುಗಳಿಗೆ ಬೋರಕವೆಂಬ ಜ್ವರವನ್ನು, ಭೂಮಿಗೆ ಬಂಜರುಯೆಂಬ ಜ್ವರವನ್ನು ಕಲ್ಪಿಸಿದನು. ಸಜ್ಜನರು ದುರ್ಜನರ ನಡುವೆ ದ್ವೇಷವೆಂಬ ಜ್ವರವಲ್ಲದೆ, ಶೀತಜ್ವರ, ಹಾಗೂ ಉಷ್ಣ ಜ್ವರಗಳೆಂದು ಕಲ್ಪಿಸಿದನು. ಈ ಜ್ವರವು ಜನಿಸಿದ ಕಥೆಯನ್ನು ಭಕ್ತಿಯಿಂದ ಕೇಳುವವನು ರೋಗವಿಲ್ಲದವನಾಗಿ ಸುಖದಿಂದ ಜೀವಿಸುವನಲ್ಲದೇ ತನ್ನ ಮನೋರಥಗಳನ್ನು ಈಡೇರಿಸಿಕೊಳ್ಳುವನು.

ದೇವತೆಗಳಲ್ಲಿ ಶಿವನು ಶ್ರೇಷ್ಠನಾಗಿರುವಂತೆ ದಕ್ಷನು ಮಾಡಿದ ಸ್ತೋತ್ರವೇ ಅತ್ಯಂತ ಮಹತ್ವದ್ದಾಗಿದೆ. ಈ ಸ್ತೋತ್ರವನ್ನು ಪಠಿಸಿದರೆ ರೋಗವಾಸಿಯಾಗುವದಲ್ಲದೇ ದಾರಿದ್ರ್ಯ ನಿವಾರಣೆಯಾಗುವದು. ರಾಜಕಾರ್ಯಗಳು ಜಯಪ್ರದವಾಗುವವು. ಈ ಲೋಕದಲ್ಲಿ ಸುಖವನ್ನನುಭವಿಸಿ ಕೊನೆಗೆ ಮಹೇಶ್ವರನ ಅನುಗ್ರಹ ಪಡೆಯಲು ತಾರಕವಾಗಿದೆ.

ಶಿವನನ್ನು ತ್ರಿಕಾಲ ಪೂಜಿಸುವ ಮನೆಯಲ್ಲಿ ಯಕ್ಷ, ರಾಕ್ಷಸ, ಹಾವು ಭೂತಗಳು ಉಪಟಳ ಮಾಡುವದಿಲ್ಲ. ಸ್ತ್ರೀಯು ಈ ಸ್ತೋತ್ರವನ್ನು ಶ್ರವಣಮಾಡಿದರೆ ಗಂಡನ ಮನೆಯಲ್ಲಿ ಗೌರವಾದರಕ್ಕೆ ಪಾತ್ರಳಾಗುವಳು. ಈ ಸ್ತುತಿಪಠಿಸಿದಲ್ಲಿ ಮನಸ್ಸಿನ ಕಾರ್ಯಗಳು ನೆರವೇರುತ್ತವೆ. ಮಹಾದೇವನನ್ನು ಷಣ್ಮುಖನನ್ನೂ, ಉಮಾದೇವಿಯನ್ನೂ, ನಂದೀಶ್ವರನನ್ನೂ ಪೂಜಿಸಿ, ಬಲಿಯನ್ನು ನಿಯಮದನ್ವಯ ಕೊಟ್ಟು ಜಿತೇಂದ್ರಿಯತ್ವದಿಂದ ಶಿವಸಹಸ್ರನಾಮಾವಳಿ ಪಠಿಸಿದರೆ ಧನವನ್ನೂ ಸಂಸಾರಸುಖವನ್ನೂ ಪಡೆಯಬಹುದು.

ದಕ್ಷನು ನಿರೂಪಿಸಿದ ಈ ಸ್ತುತಿಯನ್ನು ಹೇಳಿದರೆ, ಪರಮೇಶ್ವರನ ಕೃಪೆಗೆ ಪಾತ್ರನಾಗುತ್ತಾನೆ. ಮರಣಾನಂತರ ನಂದಿಕೇಶ್ವರನಿಂದ ಕೂಡಿಕೊಂಡು ವಿಮಾನಾರೂಢನಾಗಿ ಶಿವಲೋಕ ಸೇರುವನು. ಅಲ್ಲಿ ಒಂದು ಕಲ್ಪಾಂತರಕಾಲ ರುದ್ರನ ಗಣನಾಯಕನಾಗಿ ಬಹು ಗೌರವ ಹೊಂದುವನೆಂದು ಪರಾಶರ ಮುನಿಯ ಪುತ್ರ ಭಗವಾನ್ ವ್ಯಾಸಮುನಿಯೇ ಅಭಿಪ್ರಾಯಪಟ್ಟಿದ್ದಾನೆ. ಆದ್ದರಿಂದ ಈ ಸ್ತೋತ್ರವನ್ನು ಜನಸಾಮಾನ್ಯರಿಗೆ ಇದನ್ನು ಜಾಗ್ರತೆವಹಿಸಿ ಹೇಳಬೇಕು. ಈ ಶಿವಸ್ತುತಿಯನ್ನು ಪರ್ವಕಾಲದಲ್ಲಿ ಬ್ರಾಹ್ಮಣರ ಸಮ್ಮುಖದಲ್ಲಿ ಭಕ್ತಿಯುತವಾಗಿ ಪಠಿಸಿದರೆ ಮರಣಾನಂತರ ರುದ್ರಲೋಕ ಪ್ರಾಪ್ತಿಯಾಗುವುದು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹದಿನಾಲ್ಕನೆಯ ಅಧ್ಯಾಯ ಮುಗಿದುದು*

—○—

**ವ್ಯಾಸರು:-**'ಮಹರ್ಷಿಗಳೇ, ಈ ಪುಣ್ಯ ಕಥೆಯನ್ನು ಬ್ರಹ್ಮದೇವನು ಸನತ್ಕುಮಾರನಿಗೆ ನಿರೂಪಿಸಿದಾಗ ಅವರು ಸಂತುಷ್ಟರಾಗಿ ಬ್ರಹ್ಮನನ್ನು ಪ್ರಶ್ನಿಸಿದರು'- ಓ ಬ್ರಹ್ಮದೇವ, ನೀನು ಹೇಳಿದ ಶಿವನ ಮಹಾತ್ಮ್ಯವು ಆಶ್ಚರ್ಯಕರವಾದುದು. ದಕ್ಷಬ್ರಹ್ಮ ಮಾಡಿದ ಯಜ್ಞದ ಧ್ವಂಸ ಕಥೆಯಂತೂ ಅತ್ಯಂತ ಗೋಚರವಾದುದು. ಈಗ ನಮಗೆ ಪ್ರಸಿದ್ಧ ಕ್ಷೇತ್ರವಾದ ಏಕಾಮ್ರಕನನ್ನು ತಿಳಿಯಬೇಕೆಂಬ ಹಂಬಲ ಉಂಟಾಗಿದೆ. ದಯವಿಟ್ಟು ಬಿತ್ತರಿಸು. ಈ ಮಾತನ್ನು ಕೇಳಿದ ಬ್ರಹ್ಮದೇವನು, ಏಕಾಮ್ರಕಕ್ಷೇತ್ರದ ಮಹತಿಯನ್ನು ಹೀಗೆ ನಿರೂಪಿಸಿದನು.

**ಬ್ರಹ್ಮ:-** ಮುನಿಗಳೇ, ಪಾಪನಾಶಕವೂ, ಪುಣ್ಯಪ್ರದವೂ ಆದ ಏಕಾಮ್ರಕಕ್ಷೇತ್ರದ ಮಹಿಮೆಯನ್ನು ನಿರೂಪಿಸುವೆ, ಕೇಳಿರಿ.

ಏಕಾಮ್ರಕಕ್ಷೇತ್ರದಲ್ಲಿ ಒಂದು ಕೋಟಿ ಶಿವಲಿಂಗಗಳು ಇರುವುವು. ಎಂಟು ತೀರ್ಥಗಳಿರುವವು. ಪುಣ್ಯದಲ್ಲಿ ಅದು ಕಾಶಿಗೆ ಸಮ. ಹಿಂದೆ ಆ ಪವಿತ್ರ ಕ್ಷೇತ್ರದಲ್ಲಿ ದೊಡ್ಡದೊಂದು ಮಾವಿನ ಮರ ಇದ್ದಿತು. ಆ ಹೆಸರಿನಿಂದಲೇ ಆ ಕ್ಷೇತ್ರಕ್ಕೆ ಏಕಾಮ್ರ ಕ್ಷೇತ್ರ (ಒಂದು ಮಾವಿನಮರ ಇರುವ ಕ್ಷೇತ್ರ) ಎಂಬ ಹೆಸರಾಯಿತು. ಆ ಕ್ಷೇತ್ರದಲ್ಲಿ ವಾಸಿಸುವ ಜನಗಳು ದೃಢಕಾಯರೂ ಆನಂದಚಿತ್ತರೂ ಆಗಿರುವವರು. ಅಲ್ಲಿ ಬಲಾಢ್ಯರಾದ ಯುವಕರು, ಸೌಂದರ್ಯದಿಂದ ಕಂಗೊಳಿಸುವ ಯುವತಿಯರು, ಬಹು ಸಂಖ್ಯೆಯಲ್ಲಿ ಇರುವರು. ಎಲ್ಲೆಡೆಯಲ್ಲಿಯೂ ಧನಧಾನ್ಯ ಸಮೃದ್ಧಿ, ಸಂತಸ, ಸಮಾಧಾನ, ಸುತ್ತುಮುತ್ತಲಿನ ಪರಿಸರದಲ್ಲೆಲ್ಲ ಎತ್ತರವಾದ ಅಟ್ಟಣೆಗಳು ಆ ಪಟ್ಟಣದಲ್ಲೆಲ್ಲ ಕಂಡು ಬರುತ್ತವೆ. ಅಲ್ಲಿನ ವರ್ತಕರು ಮುತ್ತುರತ್ನಗಳನ್ನು ತಕ್ಕಡಿಯಿಂದ ಅಳೆದು ವ್ಯಾಪಾರ ಮಾಡುವರು. ಮಹಾರಥಿಕರೂ ಸೈನ್ಯದಲ್ಲಿ ಕಂಗೊಳಿಸುವರು. ರಾಜಹಂಸದಂತೆ ಕಾಣುವ ಪರಿಶುದ್ಧವಾದ ಪ್ರಾಸಾದಗಳಿಂದ ಆ ಪಟ್ಟಣ ಕಂಗೊಳಿಸುತ್ತಿತ್ತು. ವಿಶಾಲವಾದ ರಸ್ತೆಗಳು, ಬಿಳಿಯ ವರ್ಣದ ಕೋಟೆಗಳು ಅಲ್ಲಿರುವವು. ಶತ್ರುಗಳು ಆ ಕ್ಷೇತ್ರದ ಸುತ್ತಲೂ ಪ್ರವೇಶಿಸದಂತೆ ಬೃಹತ್ ಕಂದಕವಿರುವವು. ಆ ಕಂದಕಗಳ ಮೇಲೆ ಬಿಳಿ, ಕೆಂಪು, ಹಳದಿ, ಕಪ್ಪು, ಹಸಿರು ಮೊದಲಾದ ಬಣ್ಣ ಬಣ್ಣದ ಪತಾಕೆಗಳು ಹಾರಾಡುತ್ತಿರುವವು. ಕ್ಷೇತ್ರದಲ್ಲಿನ ಜನರು ಸುರಕ್ಷಿತರಾಗಿ ಪ್ರತಿನಿತ್ಯ ತಮ್ಮತಮ್ಮೊಳಗೆ ವಾದ್ಯ ವೀಣೆ, ಕೊಳಲು, ಮೃದಂಗ ಮುಂತಾದವುಗಳನ್ನು ನುಡಿಸುತ್ತ ಉತ್ಸವಗಳನ್ನು ಏರ್ಪಡಿಸಿ ಸಂತೋಷಿಸುತ್ತಾರೆ. ಪ್ರತಿಯೊಂದು ಮನೆಯೂ ತಳಿರು ತೋರಣಗಳಿಂದ ಅಲಂಕೃತವಾಗಿ, ನಿತ್ಯೋತ್ಸವದಂತೆ ಭಾಸವಾಗುತ್ತದೆ. ಅಭೂತಪೂರ್ವ ವಿಗ್ರಹವುಳ್ಳ ದೇವಾಲಯಗಳು ಅಲ್ಲಿವೆ. ಆ ದೇವಾಲಯಗಳ ಮುಂದೆ ಉದ್ಯಾನಗಳಿಂದ ಒಡಗೂಡಿದ ವಿಹಾರ ಸ್ಥಳಗಳು, ಅಲ್ಲಲ್ಲಿ ಜನರಿಗೆ ಸಂತೋಷ ನೀಡುತ್ತವೆ. ಅಲ್ಲಿನ ಸ್ತ್ರೀಯರು ಅಪ್ಸರೆಯರಂಥ ಲಾವಣ್ಯ ಯುಕ್ತರಾದವರು. ಉತ್ಕೃಷ್ಟವಸ್ತ್ರಗಳನ್ನು ಧರಿಸಿ ಸುಶೀಲೆಯರಾಗಿ, ತಮಗೆ ವಿಹಿತವಾದ ಭೋಗಭಾಗ್ಯಗಳನ್ನು ಅನುಭವಿಸುವವರಾಗಿರುವರು. ಪುರುಷರೂ ಸಹ ಸದ್ವಿದ್ಯೆಗಳಿಂದ ಉಪಪನ್ನರೂ, ಸ್ವಾಶ್ರಮದಲ್ಲಿ ನಿಷ್ಠೆಯುಳ್ಳ ಸದಾಚಾರ ಸಂಪನ್ನರೂ ಆಗಿದ್ದಾರೆ. ನರ್ತನ, ಗಾನ, ವೀಣಾವಾದನ, ಶಿಲ್ಪಕಲೆ ಮುಂತಾದ ಅನೇಕ ಕಲಾಶಾಲೆಗಳು ಅಲ್ಲಿನ ಜನರ ಕಲಾಪ್ರಿಯತೆಯನ್ನು ಸಾರುತ್ತವೆ.

ಆ ಏಕಾಮ್ರಕಕ್ಷೇತ್ರದಲ್ಲಿ ರೋಗಗ್ರಸ್ತರು, ಸ್ವಾರ್ಥಪರರು, ಲೋಭಿಗಳು, ವಂಚಕರು, ಕುರೂಪಿಗಳು, ದುರಾಚಾರಿಗಳು, ದ್ವೇಷಿಗಳು, ಪತಿತ ಜನರು ಹುಡುಕಿದರೂ ಕೂಡ ಸಿಗುತ್ತಿರಲಿಲ್ಲ. ಮಾನವರು ಮಾತ್ರವಲ್ಲ; ಅಲ್ಲಿನ ಪ್ರಾಣಿಗಳೂ ಸಂತಸದಿಂದ ತಮ್ಮ ಬದುಕನ್ನು ಸಾಗಿಸುತ್ತಿರುವವು. ಪ್ರಾಣಿಗಳಿಗೆ ಬೇಕಾದ ಪೈರುಪಚ್ಚೆಗಳು ಹಸಿರುಸಸ್ಯಗಳಿಂದ ಅನೇಕ ಪ್ರದೇಶಗಳು ತುಂಬಿವೆ. ಆ ಪ್ರದೇಶಗಳಲ್ಲಿ ದನಕರುಗಳೇ ಮೊದಲಾದ ಪಶುಪಕ್ಷಿಗಳು ಪರಸ್ಪರ ಸ್ನೇಹದಿಂದ ಸರಸಸಲ್ಲಾಪಗೈಯುತ್ತ ಸಂತಸದುಂಬಿ ವಿಹಾರ ಗೈಯ್ಯುತ್ತವೆ. ಆ ಕ್ಷೇತ್ರದ ಪ್ರದೇಶಗಳಲ್ಲಿ ಕರ್ಣಿಕಾರ, ಹಲಸು, ಸಂಪಿಗೆ, ನಾಗಸಂಪಿಗೆ, ಪಾಟಲ, ಅಶೋಕ, ಬಕುಲ, ಬೇಲ, ಪ್ರಾಯವೃಕ್ಷ, ಆಮ್ರವೃಕ್ಷ, ಬೇವು, ಈಚಲು ಮುಂತಾದ ಮರಗಳು ಹೇರಳವಾಗಿವೆ. ಹೊನ್ನೆ, ಉತ್ತರಣಿ ಮರಗಳು, ಹೂಬಳ್ಳಿಗಳು, ಆಲದಮರ, ಹೊಂಗೆ, ತೆಂಗು, ತಾಳೆ, ಧೂಪ, ಅರ್ಜುನ, ಏಳೆಲೆಬಾಳೆ, ಕೋವಿದಾರ, ಅಶ್ವತ್ಥ, ನಿಂಬೆ, ಸರ್ಜ, ಲೋಧ, ತರು, ಹಿಂತಾಲ, ಮುತ್ತುಗ, ಗಿರಿಮಲ್ಲಿಗೆ, ಪಾರಿಜಾತ, ಕುಬ್ಜಕ, ನೇರಿಳೆ, ಅಡಿಕೆ ಮುಂತಾದ ಮರಗಳು ಪುಷ್ಕಳವಾಗಿ ಕಂಡುಬರುತ್ತವೆ. ಕರವೀರ, ಮುಳ್ಳುಮುತ್ತುಗ, ಮಂದಾರ ಮುಂತಾದ ಇತರ ಅಪರೂಪವೆನಿಸುವ ಹೂವಿನ ಮರಗಳು ಅಲ್ಲಿ ಸಮೃದ್ಧವಾಗಿರುವವು.

ಈ ಎಲ್ಲ ಮರಗಳಿಂದ ಆ ಕ್ಷೇತ್ರವು ಪ್ರವಾಸಿಗರ ಕಣ್ಣಿಗೆ ನಂದನವನದಂತೆ ಭಾಸವಾಗುವದು. ಅಲ್ಲಿನ ವನಗಳಲ್ಲಿ ವರ್ಷದ ಹನ್ನೆರಡು ತಿಂಗಳು ಹೂ ಹಣ್ಣು ಕೊಡುವ ಅದ್ಭುತ ಮರಗಳು ಸೊಂಪಾಗಿ ಬೆಳೆದಿರುವವು. ಅವುಗಳಲ್ಲಿ ಕೋಗಿಲೆ, ದುಂಬಿ ಮೊದಲಾದ ಧ್ವನಿಗೈಯ್ಯುವ ಪ್ರಾಣಿ ಸಂಕುಲ ತನ್ನ ಸಂಸಾರ ಮಾಡಿಕೊಂಡು ಸುಖದಿಂದಿವೆ. ಇಂಪಾಗಿ ಧ್ವನಿಗೈಯ್ಯುವ ಆ ಮರಗಳಲ್ಲಿ ನೆಲೆಸಿದ ಪಕ್ಷಿಗಳಲ್ಲಿ ಚಾತಕ, ನವಿಲು, ದುಂಬಿ, ಕೋಗಿಲೆ, ಗುಬ್ಬಿ, ಹಂಸ, ಗಿಳಿ, ಚಕ್ರವಾಕ, ಚಕೋರ ಮುಂತಾದವು ಮುಖ್ಯವಾದವು. ಅಲ್ಲಿನ ಪ್ರಜೆಗಳಿಗೆ ನೀರಿನ ಸೌಕರ್ಯ ಒದಗಿಸಲು ಸಿಹಿನೀರಿನಿಂದ ಸದಾ ತುಂಬಿ ತುಳುಕುವ ಜಲಾಶಯಗಳಿದ್ದು ಕಮಲಲತೆಗಳಿಂದ ಶೋಭಿಸುತ್ತವೆ. ಅನೇಕ ಬಗೆಯ ಮರಗಳಿಂದಲೂ, ಹೂವುಗಳಿಂದಲೂ ಪವಿತ್ರವಾದ ಜಲಾಶಯಗಳಿಂದಲೂ ಆ ಕ್ಷೇತ್ರವು ರಾರಾಜಿಸುತ್ತಿರುವದು. ಇಂತಹ ರಮಣೀಯ ಕ್ಷೇತ್ರದಲ್ಲಿ ಪರಶಿವನು ಸ್ವಯಂ ನೆಲೆಸಿ, ಭಕ್ತರಿಗೆ ಇಹದಲ್ಲಿ ಭೋಗ, ಪರದಲ್ಲಿ ಮೋಕ್ಷ ಎರಡನ್ನೂ ಅನುಗ್ರಹಿಸಿ ಕಾಪಾಡುತ್ತಿರುವನು.

ಹಿಂದೆ, ರುದ್ರನು ದೇವತೆಗಳಿಗೆ ಹೀಗೆ ನುಡಿದನು : "ಭೂಮಿಯಲ್ಲಿರುವ ಸಕಲ ತೀರ್ಥಗಳು, ಕಲ್ಯಾಣಿಗಳು, ಕಪಿಲೆಗಳು, ಸಮುದ್ರಗಳು, ಸರೋವರಗಳು ಮತ್ತೆಲ್ಲ ಜಲಾಕರ ಗಳಿಂದ, ಆಯಾ ಜಲಾಕರಗಳ ಒಂದೊಂದು ಅಂಶವನ್ನು ತನ್ನಿರಿ." ದೇವತೆಗಳು ಪರಶಿವನ ಆಜ್ಞೆಯಂತೆ ಭೂಮಂಡಲದಲ್ಲಿನ ಎಲ್ಲ ಜಲಾಶಯಗಳ ಒಂದೊಂದು ಅಂಶವನ್ನು ತಂದು ಶಿವನ ಮುಂದಿರಿಸಿದರು. ಪರಶಿವನು ಆ ಜಲಗಳ ಮೇಲಣವನ್ನೇ ಒಂದೆಡೆ ಮಾಡಿ ಅದಕ್ಕೆ **'ಬಿಂದುಸರ'** ಎಂದು ನಾಮಕರಣ ಮಾಡಿದನು. ಬೇರೆ ಬೇರೆ ಜಲಾಶಯಗಳಿಂದ ಬಿಂದು ಬಿಂದುವಿನಂತೆ ನೀರನ್ನು ಸಂಗ್ರಹಿಸಿ ಈ ಸರಸ್ಸು ನಿರ್ಮಿಸಿ ಆದುದರಿಂದ ಈ ಸರಸ್ಸಿಗೆ **'ಬಿಂದುಸರ'** ವೆಂಬ ಹೆಸರು ಬಂದಿತು.

ಮಾರ್ಗಶಿರಮಾಸದ ಬಹುಳ ಅಷ್ಟಮಿಯಲ್ಲಿ ಬಿಂದು ಸರೋವರಕ್ಕೆ ಧಾವಿಸಬೇಕು. ಆ ಸರೋವರದ ದಡದಲ್ಲಿ ವಾಸಮಾಡಿ, ಜಿತೇಂದ್ರಿಯನಾಗಿದ್ದು, ವಿಪ್ಲವಕಾಲದಲ್ಲಿ ಬಿಂದು

ಸರೋವರದಲ್ಲಿ ಸ್ನಾನಮಾಡಿ, ತನ್ನ ಹೆಸರು, ಗೋತ್ರಗಳನ್ನು ಉಚ್ಚರಿಸಿ ಸಂಕಲ್ಪ ಪೂರೈಸಿ, ಶ್ರದ್ಧೆಯಿಂದ ದೇವ, ಋಷಿ, ಪಿತೃಗಳಿಗೆ ತರ್ಪಣಕೊಡಬೇಕು. ತನ್ನ ಕುಲದವರಿಗೆ ತಿಲತರ್ಪಣ ಕೊಡಬೇಕು. ಹೀಗೆ ವಿಧಿವತ್ತಾಗಿ ತರ್ಪಣ ನೀಡಿದವರಿಗೆ ಅಶ್ವಮೇಧಯಾಗ ಫಲವಿದೆ. ಪರ್ವಕಾಲಗಳೆನಿಸಿದ-ಗ್ರಹಣಮುಹೂರ್ತ, ವಿಹಮ ಮುಹೂರ್ತ, ಸಂಕ್ರಾಂತಿ, ಅಯನಕಾಲ, ಯುಗಾದಿ, ಎಂಭತ್ತಾರು ಪುಣ್ಯಕಾಲ ಮೊದಲಾದ ಸಂದರ್ಭಗಳಲ್ಲಿ ಈ ಏಕಾಮ್ರಕಕ್ಷೇತ್ರಕ್ಕೆ ಬಂದು ಅಲ್ಲಿನ ಸದ್ಬ್ರಾಹ್ಮಣರಿಗೆ ದಾನ ಮಾಡಿದರೆ ಅನಂತ ಪುಣ್ಯ ಪ್ರಾಪ್ತವಾಗುವದು.

ಬಿಂದು ಸರೋವರದ ತೀರದಲ್ಲಿ ಶ್ರಾದ್ಧಮಾಡಿ, ಪಿಂಡಪ್ರದಾನ ಮಾಡಿದರೆ, ಇದರಿಂದ ಪಿತೃಗಳಿಗೆ ಬಹಳಷ್ಟು ತೃಪ್ತಿಯಾಗುವದು. ಇದಾದನಂತರ ಸ್ಥಿರಮನಸ್ಕನಾಗಿ ಮೌನವ್ರತ ಸ್ವೀಕರಿಸಿ, ಶಿವಾಲಯಕ್ಕೆ ಹೋಗಿ ಪ್ರದಕ್ಷಿಣಾತ್ರಯ ಪೂರೈಸಬೇಕು ದೇವದೇವನಿಗೆ ತುಪ್ಪ, ಹಾಲು, ಸಕ್ಕರೆ ಮೊದಲಾದ ಪಂಚಾಮೃತ ಸಾಮಾನುಗಳಿಂದ ಅಭಿಷೇಕಮಾಡಿ ನಂತರ ಸುಗಂಧ ಕುಂಕುಮ ಲೇಪಿಸಬೇಕು.

ಬಿಲ್ವ, ಕಮಲ, ಪಾರಿಜಾತ, ಮೊದಲಾದ ಪುಷ್ಪಪತ್ರಗಳಿಂದ ಶಿವನನ್ನು ಅರ್ಚಿಸಬೇಕು. ಆಗಮೋಕ್ತಮಂತ್ರಗಳಿಂದ ಶಿವನನ್ನು ಅರ್ಚಿಸುವದು ಶಿವಾರ್ಚನೆಯ ಶ್ರೇಷ್ಠ ವಿಧಾನ. ವೇದಾಧಿಕಾರವಿಲ್ಲದವರು 'ಶಿವಾಯನಮಃ' ಎಂಬ ಶಿವಮಂತ್ರದಿಂದ ಅರ್ಚಿಸಬಹುದು. ಹೀಗೆ ಮಹಾದೇವನನ್ನು ವಿಧ್ಯುಕ್ತವಾಗಿ ಅರ್ಚಿಸಿದವನು, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಉಪಹಾರ, ಪ್ರದಕ್ಷಿಣೆ ನಮಸ್ಕಾರ, ಸ್ತೋತ್ರ, ಗೀತಾ, ವಾದ್ಯ, ನರ್ತನ, ಜಪ, ಮೊದಲಾದ ವಿಧಿವಿಧಾನಗಳಿಂದ ಸಂತೋಷಪಡಿಸಿ, ಶಿವಪೂಜೆಗೈದವ ಪಾಪಲೇಪ ರಹಿತನಾಗುತ್ತಾನೆ. ತನ್ನ ಕುಲದ ಇಪ್ಪತ್ತೊಂದು ಪಿತೃಗಳನ್ನೂ ಉದ್ಧರಿಸುತ್ತಾನೆ. ಅಂತ್ಯದಲ್ಲಿ ದಿವ್ಯರೂಪ ಧಾರಣಮಾಡಿ, ಪುಷ್ಪಕ ವಿಮಾನವನ್ನು ಆರೋಹಿಸಿ, ಕಿನ್ನರ ಕಿಂಪುರುಷರಿಂದ ಸೇವ್ಯಮಾನನಾಗಿ ಶಿವಲೋಕವನ್ನು ಹೊಂದುವನು.

ಶಿವಲೋಕದಲ್ಲಿ ಅಲ್ಲಿನ ಜನರೊಡನೆ ಒಂದು ಕಲ್ಪದವರಿಗೆ ಸುಖ ಅನುಭವಿಸಿ, ಪುಣ್ಯ ಮುಗಿದ ನಂತರ ಮತ್ತೆ ಭೂಲೋಕಕ್ಕೆ ಬರುವನು. ಭೂಲೋಕದಲ್ಲಿ ನಾಲ್ಕು ವೇದಗಳನ್ನು ಬಲ್ಲ ಯೋಗಿಶ್ರೇಷ್ಠರ ವಂಶದಲ್ಲಿ ಬ್ರಾಹ್ಮಣೋತ್ತಮನಾಗಿ ಜನ್ಮತಾಳುವನು. ಈ ಜನ್ಮದಲ್ಲಿ ಪಾಶುಪತಯೋಗವನ್ನು ಸಾಧಿಸಿ ಮುಕ್ತಿ ಹೊಂದುವನು. ದಕ್ಷಿಣಾಯನ, ಉತ್ತರಾಯಣ, ಸಂಕ್ರಾಂತಿ, ಅಶೋಕಾಷ್ಟಮಿ, ಪರ್ವದಿನಗಳಲ್ಲಿ ಶಿವನ ದರ್ಶನಮಾಡುವವರು ಅವನ ಅನುಗ್ರಹದಿಂದ ಶಿವಲೋಕವನ್ನು ಹೊಂದುವರು. ಏಕಾಮ್ರಕಕ್ಷೇತ್ರದಲ್ಲಿರುವ ಏಕಾಮ್ರೇಶ್ವರ ಎಂದು ಹೆಸರಾಗಿರುವ ಶಿವನನ್ನು ಯಾವದೇ ಕಾಲದಲ್ಲಿ ಸಂದರ್ಶಿಸಿದರೂ ಪರಮಪದ ಭಾಜನರಾಗುವರು. ಏಕಾಮ್ರಕ ಕ್ಷೇತ್ರದಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಶಿವನ ಸುತ್ತಲಿನ ಎರಡೂವರೆ ಯೋಜನ ವಿಸ್ತಾರದ ಪ್ರದೇಶಕ್ಕೆ ಏಕಾಮ್ರೇಶ್ವರಕ್ಷೇತ್ರ ಎನ್ನುವರು. ಈ ಪ್ರದೇಶದಲ್ಲಿ ವಾಸಿಸುವ ಶಿವಭಕ್ತರು, ಭುಕ್ತಿ, ಮುಕ್ತಿ ಎರಡನ್ನೂ ಹೊಂದುವರು.

ಏಕಾಮ್ರಕಕ್ಷೇತ್ರದಲ್ಲಿ ಭಾಸ್ಕರೇಶ್ವರ ಎಂಬ ಲಿಂಗವಿದೆ. ಹಿಂದೆ ಆ ಲಿಂಗವನ್ನು ಭಾಸ್ಕರನು ಪೂಜಿಸಿದ್ದ. ಅಲ್ಲಿರುವ ತೀರ್ಥ ಕುಂಡದಲ್ಲಿ ಸ್ನಾನಮಾಡಿದ ಭಾಸ್ಕರನು ಈಶ್ವರನನ್ನು ಪೂಜಿಸಿ ತನ್ನ ಪಾಪ ಕಳೆದುಕೊಂಡು, ಪುಷ್ಪಕವಿಮಾನವೇರಿ ಶಿವಲೋಕ ಹೊಂದಿದ. ಅಂದಿನಿಂದ ಆ ಶಿವಲಿಂಗಕ್ಕೆ ಭಾಸ್ಕರೇಶ್ವರಲಿಂಗವೆಂದು ಹೆಸರು ಬಂದಿತು.

ಆ ಶಿವಲೋಕದಲ್ಲಿ ಮುಕ್ತರಾದ ಈ ಜನರು ಒಂದು ಕಲ್ಪದವರೆಗೆ ಭೋಗಭಾಗ್ಯಗಳನ್ನು ಅನುಭವಿಸಿ, ಪುಣ್ಯಕ್ಷೀರದ ನಂತರ ಭೂಲೋಕಕ್ಕೆ ಮರಳಿ, ವೇದ, ವೇದಾಂಗವಿದರಾದ ಬ್ರಾಹ್ಮಣಶ್ರೇಷ್ಠರ ವಂಶದಲ್ಲಿ ಜನ್ಮ ತಾಳುವರು. ಮುಕ್ತಿ ಶಾಸ್ತ್ರವನ್ನು ಅಧ್ಯಯನ ಮಾಡಿ ಲೋಕ ಕಲ್ಯಾಣ ಸಾಧಿಸಿ, ಸಾಧನೆ ಸಂಪೂರ್ಣವಾದ ನಂತರ ಮುಕ್ತಿ ಹೊಂದುವರು.

ಏಕಾಮ್ರಕಕ್ಷೇತ್ರದಲ್ಲಿ ಅಲ್ಲಲ್ಲಿ ಕಂಡುಬರುವ ಭಾಸ್ಕರೇಶ್ವರಲಿಂಗವನ್ನು ಅರ್ಚಿಸಿ ಧೂಪ, ದೀಪ, ನೈವೇದ್ಯ, ನಮಸ್ಕಾರ, ಸ್ತೋತ್ರ ಮೊದಲಾದವುಗಳಿಂದ ಪೂಜಿಸಿದರೆ ಶಿವಲೋಕ ಪ್ರಾಪ್ತವಾಗುವದು. ಶಿವನನ್ನು ಶಾಸ್ತ್ರೋಕ್ತವಾಗಿ ಪೂಜಿಸಿದ ಸ್ತ್ರೀ ಸಹ ಹಿಂದೆ ಹೇಳಿದ ಫಲವನ್ನು ಪಡೆಯುವಳು.

ಏಕಾಮ್ರೇಶ್ವರಕ್ಷೇತ್ರದಲ್ಲಿ ಶಿವನನ್ನು ಸಂದರ್ಶಿಸಿದ ಬಳಿಕ ಯಾತ್ರಿಕನು ರುದ್ರಗಣ ಪ್ರಧಾನವಾದ ಚಂಡೀಶ್ವರನ ದರ್ಶನಮಾಡಿ, ನಂತರ ಷಣ್ಮುಖಸ್ವಾಮಿಯನ್ನು ಕಾಣಬೇಕು. ಬಳಿಕ ಗಣಪತಿಯ ಬಳಿಗೆ ಬಂದು ಅವನನ್ನು ನಮಸ್ಕರಿಸಿ, ಅಲ್ಲಿಯೇ ಇರುವ ನಂದಿಕೇಶ, ಸಾವಿತ್ರಿದೇವರ ದರ್ಶನಮಾಡಿ ನಮಸ್ಕರಿಸಬೇಕು. ಇದರಿಂದ ಶಿವಲೋಕ ಸಂಪಾದಿತ ವಾಗುವದು. ಸರ್ವವಿಧದಲ್ಲೂ ಈ ಏಕಾಮ್ರೇಶ್ವರ ಕ್ಷೇತ್ರ ಕಾಶಿಗೆ ಸದೃಶ. ಶ್ರದ್ಧೆಯಿಂದ ಸಾಧನೆಗೈದವಗೆ ಇಲ್ಲಿ ಮುಕ್ತಿ ಖಂಡಿತ.

## ವಿರಜಾಕ್ಷೇತ್ರ ವರ್ಣನ

**ಬ್ರಹ್ಮ:-** ಮುನಿಗಳೇ, ವಿರಜಾದೇವಿ ಎಂಬ ಹೆಸರಿನಿಂದ ಬ್ರಹ್ಮರ್ಷಿಯು ವಿರಜ ಕ್ಷೇತ್ರದಲ್ಲಿ ನೆಲೆಸಿರುವಳು. ಈ ವಿರಜಾದೇವಿಯನ್ನು ಜೀವನದಲ್ಲಿ ಒಂದು ಬಾರಿಯಾದರೂ ಭಜಿಸಿ, ನಮಸ್ಕರಿಸಿದವ ಸ್ವಯಂ ಉದ್ಧೃತನಾಗುವನಲ್ಲದೆ ತನ್ನ ಪೂರ್ವಜರನ್ನೂ ಉದ್ಧರಿಸುವನು. ಈ ವಿರಜಾದೇವಿಯ ದರ್ಶನವನ್ನು ಶ್ರದ್ಧೆಯಿಂದ ಯಾರು ಮಾಡುತ್ತಾರೋ ಅವರ ಹಿಂದಿನ ಏಳು ಪಿತೃಗಳು ಉದ್ಧೃತರಾಗುವರು. ಈ ಪವಿತ್ರಕ್ಷೇತ್ರದಲ್ಲಿ ಇನ್ನೂ ಅನೇಕ ದೇವಿಯರ ಸನ್ನಿಧಾನ ಇರುವದು. ಆ ದೇವಿಯರನ್ನು ದರ್ಶನ ಮಾಡಿ ಅರ್ಚನಗೈದರೆ ಶಿವಪ್ರೀತಿ ಉಂಟಾಗುವದು.

ಈ ವಿರಜಾ ಕ್ಷೇತ್ರದಲ್ಲಿ ವೈತರಣಿ ಎಂಬ ನದಿ ಇದೆ. ಈ ನದಿಯಲ್ಲಿ ಸ್ನಾನ ಮಾಡಿದವನ ಪಾಪಗಳು ಹೇಳ ಹೆಸರಿಲ್ಲವಾಗುವವು. ಈ ವಿರಜಾಕ್ಷೇತ್ರದಲ್ಲಿಯೇ ಶ್ರೀಹರಿಯು ವರಾಹರೂಪದಿಂದ ನೆಲೆಸಿರುವನು. ಇಲ್ಲಿಯ ವರಾಹ ಸ್ವಾಮಿಯನ್ನು ಭಕ್ತಿಯಿಂದ ನಮಸ್ಕರಿಸಿದವನು ವಿಷ್ಣುಲೋಕ ಪಡೆಯುವನು. ಇಲ್ಲಿರುವ ಕಪಿಲತೀರ್ಥ, ಗೋಗ್ರಹತೀರ್ಥ, ಸೋಮತೀರ್ಥ, ಮೃತ್ಯುಂಜಯ ಅಲಾಬುತೀರ್ಥ, ಕ್ರೋಧತೀರ್ಥ, ವಾಸುಕತೀರ್ಥ, ಸಿದ್ಧೇಶ್ವರತೀರ್ಥ ಈ ಎಂಟು ತೀರ್ಥಗಳಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಭಕ್ತಿಯಿಂದ ದೇವತೆಯನ್ನು ನಮಸ್ಕರಿಸಿದವ ಪಾಪ ಮುಕ್ತನಾಗುವನು. ಪುಷ್ಪಕವನ್ನೇರಿ ಬ್ರಹ್ಮಲೋಕ ಪಡೆಯುವನು. ವಿರಜಾಕ್ಷೇತ್ರದಲ್ಲಿ ಶ್ರಾದ್ಧಮಾಡಿ, ಪಿಂಡಪ್ರದಾನ ಮಾಡಿದವನ ಪಿತೃಗಳಿಗೆ ಅತುಲ ತೃಪ್ತಿ ಉಂಟಾಗುವದು. ವಿರಜಾಕ್ಷೇತ್ರದಲ್ಲಿ ಶರೀರತ್ಯಾಗ ಮಾಡಿದವನು ನಿಸ್ಸಂಶಯವಾಗಿ ಮುಕ್ತಿಯನ್ನು ಹೊಂದುವನು. ಸಮುದ್ರಸ್ನಾನಮಾಡಿ ಕಪಿಲರೂಪಿ ಶ್ರೀಹರಿಯನ್ನೂ, ವಾರಾಹಿದೇವಿಯನ್ನೂ ನೋಡಿದವನು ಸ್ವರ್ಗ ಪಡೆಯುತ್ತಾನೆ. ಈ ಕ್ಷೇತ್ರದಲ್ಲಿ ಇನ್ನೂ ಅನೇಕ ತೀರ್ಥ ಹಾಗೂ ದೇವಾಲಯಗಳೂ ಇವೆ.

ಸಮುದ್ರದ ಉತ್ತರ ತೀರದಲ್ಲಿ ಉತ್ಕಲ ಎಂಬ ಪವಿತ್ರಕ್ಷೇತ್ರವಿದೆ. ಅದು ಪಾಪ ನಾಶಕವೂ ಮುಕ್ತಿದಾಯಕವೂ ಆಗಿದೆ. ಈ ಉತ್ಕಲ ಕ್ಷೇತ್ರವು ಹತ್ತುಯೋಜನ ವಿಸ್ತೃತವಾಗಿದೆ. ಇಲ್ಲಿ (ತಾರೆಗಿಡ) ವಿಭೀತಕ, ತಿಂದು, ಬೇವು, ಹೊಸನೆಲ್ಲಿ, ಆಗರಂಗಿಡ, ಅಂಜನ, ಆಮ್ರಾತಕ, ಸಿದ್ಧ, ಮುಚಕುಂದ, ಅಶ್ವತ್ಥ, ಮುತ್ತುಗ, ಏಳೆಲೆ ಬಾಳೆ, ಖರ್ಜೂರ, ಅತಿಮಧುರ, ಶ್ರೀಗಂಧ, ಅಗರು, ನ್ಯಗ್ರೋಧ, ಪಾರಿಜಾತ, ಮಂದಾರ, ದೇವದಾರ, ಹೊಂಗೆ, ಅಶ್ವಕರಣ, ಬೂರುಗ, ಸರ್ಜ, ಉತ್ತರಣೆ, ಕಿತ್ತಲೆ, ಧೂಪ, ಮಾವು, ನೆಲ್ಲಿ, ಕರ್ಣಿಕಾರ, ನಾಗಸಂಪಿಗೆ, ಸಂಪಿಗೆ, ನಿಂಬೆ, ಕೋವಿದಾರ, ತಾಳೆ, ಬೇಲ, ಆಲ, ಈಚಲು, ತೆಂಗು, ಪಾಟಲ, ಹಲಸು, ಸಾಲ, ಬಕುಲ, ಪುನ್ನಾಗ, ಅರ್ಜುನ ಅಶೋಕ ಮುಂತಾದ ಮರಗಳು ಸೊಂಪಾಗಿ ಬೆಳೆದಿರುವವು. ಈ ಮರಗಳು ಎಲ್ಲಾ ಋತುಗಳಲ್ಲೂ ಫಲಪುಷ್ಪ ನೀಡುತ್ತವೆ. ಇದಲ್ಲದೆ ಹಿಂತಾಲ, ಅಡಕೆ, ಬಾಳೆವನ, ಮಾದಳ, ಸೀಬೆ, ದಾಳಿಂಬೆ, ಅಂಕೋಲ, ಗಿರಿ, ಕರುಣಾ, ಮಾಲತಿ ಲತೆ, ನೇರಿಳೆ, ಕುಬ್ಜಕ, ಅತಿಮುಕ್ತ, ಕೇದಿಗೆ ವನ, ಕಪ್ಪುಕರವೀರ, ಬಾಣ, ಮಲ್ಲಿಗೆ ಮುಂತಾದ ಬಳ್ಳಿಗಳು, ಹೂವಿನ ವೃಕ್ಷಗಳು ಸಮೃದ್ಧವಾಗಿವೆ. ಅಲ್ಲಿನ ಉದ್ಯಾನಗಳಲ್ಲಿ ಸುಂದರವಾದ ಲತಾಗೃಹಗಳಿವೆ. ಅಲ್ಲಿನ ಸರೋವರಗಳಲ್ಲಿ ಮನೋಹರವಾದ ಬಿಳಿಯ ಹಾಗೂ ಕೆಂಪು ಕಮಲಗಳು, ಕಲ್ಹಾರ ಮುಂತಾದ ಹೂವುಗಳು ಅರಳಿ, ಸುತ್ತಲಿನ ವಾತಾವರಣವನ್ನು ಸುವಾಸಿತವಾಗಿಸಿವೆ. ಅಲ್ಲಿನ ಜನರು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಆಶ್ರಮಗಳನ್ನು ತಪ್ಪದೇ ಪಾಲಿಸುತ್ತಿರುವರು. ಆ ಉತ್ಕಲಕ್ಷೇತ್ರದಲ್ಲಿ ಪುರಷೋತ್ತಮನಾದ ನಾರಾಯಣನು ನೆಲೆಸಿದ್ದಾನೆ. ಅವರ ಸಾನ್ನಿಧ್ಯದಿಂದ ಆ ಪ್ರದೇಶವೆಲ್ಲ ಪುಣ್ಯಭೂಮಿ ಎನಿಸಿದೆ. ಜಗನ್ನಿಯಾಮಕನಾದ ಭಗವಂತನೇ ಅಲ್ಲಿ ನೆಲೆಸಿದ್ದಾನೆಂದ ಮೇಲೆ ಅಲ್ಲಿನ ಸಮೃದ್ಧಿಯನ್ನು ಕುರಿತು ಹೇಳುವುದೇನು! ಎಲ್ಲಿ ಭಗವಂತನ ಸನ್ನಿಧಾನವಿದೆಯೋ ಅಲ್ಲಿ ಎಲ್ಲವೂ ಇರುತ್ತದೆ. ಬ್ರಹ್ಮ, ರುದ್ರ, ಅಗ್ನಿ ಮೊದಲಾದ ದೇವಾನುದೇವತೆಗಳೆಲ್ಲ ಆ ವಿಷ್ಣು ಇರುವಲ್ಲಿ ವಾಸಿಸುತ್ತಾರೆ. ಗಂಧರ್ವರು, ಅಪ್ಸರೆಯರು, ಯಕ್ಷರು, ವಿದ್ಯಾಧರರು, ಸಿದ್ಧರು, ತಾಪಸರು, ವಾಲಖಿಲ್ಯ ಎಂಬ ಮುನಿಗಳು, ಕಶ್ಯಪ ಮೊದಲಾದ ಬ್ರಹ್ಮರು, ನಾಗಪುರುಷರು, ಕಿನ್ನರರು, ಕಿಂಪುರುಷರು ಇವರೇ ಮೊದಲಾದ ಸಕಲ ಸ್ವರ್ಗವಾಸಿಗಳು ಅಲ್ಲಿಯೇ ವಾಸ ಮಾಡುತ್ತಿರುವರು. ಇಷ್ಟು ಮಾತ್ರವಲ್ಲ; ವೇದ-ವೇದಾಂತಗಳು, ಶಾಸ್ತ್ರಗಳು, ಇತಿಹಾಸ, ಪುರಾಣಗಳು, ಯಜ್ಞಯಾಗಾದಿಗಳು, ಪವಿತ್ರನದಿಗಳು, ಪಾವನತೀರ್ಥಗಳು, ದೇವಾಲಯಗಳು, ಮಹಾಸಾಗರಗಳು, ಅದ್ಭುತ ಬೆಟ್ಟಗಳು, ಇವೆಲ್ಲ ಆ ಕ್ಷೇತ್ರದಲ್ಲಿ ವಾಸಮಾಡಿವೆ. ಇಂತಹ ಅತ್ಯದ್ಭುತವಾದ ದೇವರ್ಷಿ, ಪಿತೃಗಳಿಂದ ಸೇವಿತವಾದ ಆ ಪ್ರದೇಶದಲ್ಲಿ ವಾಸಮಾಡಲು ಯಾರು ಅಪೇಕ್ಷಿಸುವದಿಲ್ಲ! ಪುರುಷೋತ್ತಮನು, ಇವರು ವಿರಜಾನದಿಯಲ್ಲಿ ಸ್ನಾನಮಾಡಿ ಪುರುಷೋತ್ತಮನ ದರ್ಶನದಿಂದ ಉನ್ನತ ಲೋಕಗಳನ್ನು ಪಡೆಯುವರು. ಇವರಿಗೆ ಎಂದೂ ನರಕದರ್ಶನವಿಲ್ಲ. ಪುರಷೋತ್ತಮನು ನೆಲೆಸಿರುವ ಪವಿತ್ರವಾದ ಉತ್ಕಲಕ್ಷೇತ್ರದ ಸುತ್ತಮುತ್ತವಾಸ ಕೈ ಗೊಂಡಿರುವ ಪುಣ್ಯಾತ್ಮರ ಜೀವನ ಸಾರ್ಥಕ ಜೀವನ. ಅವರು ಧನ್ಯರು. ವಾಸಿಸುತ್ತಿರುವ ಆ ಕ್ಷೇತ್ರದಲ್ಲಿ ವಾಸಮಾಡುವ ಭಾಗ್ಯವನ್ನು ಹೊಂದಿದ ಮಾನವರು ಧನ್ಯರು. ಸಮಲಂಕೃತನಾದ ಆ ಭಗವಂತನನ್ನು ಅವರು ನಿತ್ಯವೂ ನೋಡುತ್ತಿರುವರು. ದೇವಶ್ರೇಷ್ಠನ ಪ್ರಸನ್ನ ಮುಖಮಂಡಲದಲ್ಲಿ ಅರಳಿದ

ಕಣ್ಣುಗಳಿವೆ. ಸುಂದರವಾದ ಕಾಮನ ಬಿಲ್ಲನಂತೆ ಕಾಣುವ ಹುಬ್ಬುಗಳಿವೆ. ಎರಡೂ ನೀಲಕೇಶಪಾಶಗಳು, ಹೊಳೆಯುವ ಕುಂಡಲಗಳು, ಮೃದು ಮಂದಹಾಸ, ಹಾಗೆಲ್ಲ ಚಿಮ್ಮುವ ಭಾಸುರ ದೀಪ್ತಿಯಿಂದ ಶೋಭಿತವಾದ ದಂತಪಂಕ್ತಿ, ಸುಕೋಮಲ ನೀಳನಾಶಿಕ, ಕನ್ನಡಿಯಂತಿರುವ ಕೆನ್ನೆ, ಸುಂದರ ಹಾಗೂ ವಿಶಾಲ ಲಲಾಟ, ಇವುಗಳಿಂದ ಕಂಗೊಳಿಸುತ್ತ ಭಕ್ತರ ಕಣ್ಣಿಗೆ ಹಬ್ಬ ಒದಗಿಸುವತ್ತಿರುವ ಆ ಭಗವಂತನ ಇಂತಹ ದರ್ಶನವನ್ನು ಅಹರ್ನಿಶಿ ಶ್ರದ್ಧೆಯಿಂದ ಮಾಡುವ ಆ ಉತ್ಕಲ ಕ್ಷೇತ್ರಸ್ಥ ಜೀವಿಗಳ ಪುಣ್ಯಕ್ಕೆ ಎಣೆಯಾವುದು!.

## ಇಂದ್ರದ್ಯುಮ್ನ ವೃತ್ತಾಂತ ವರ್ಣನ ಹಾಗೂ ಪುರುಷೋತ್ತಮನ ಮಹಿಮಾ ವರ್ಣನ

**ಬ್ರಹ್ಮ**:- ಮುನಿಶ್ರೇಷ್ಠರೇ, ಕೇಳಿ, ಹಿಂದೆ ಕೃತಯುಗದಲ್ಲಿ ಇಂದ್ರದ್ಯುಮ್ನನೆಂಬ ಒಬ್ಬ ಮಹಾರಾಜ, ಇಂದ್ರನಂತೆ ಪರಾಕ್ರಮಿ, ಕುಬೇರನಂತೆ ಶ್ರೀಮಂತ, ಸತ್ಯಹರಿಶ್ಚಂದ್ರನಂತೆ ಸತ್ಯವಾದಿ, ಪರಿಶುದ್ಧ, ಸಮರ್ಥ, ಶಾಸ್ತ್ರವಿದ, ಸಾತ್ವಿಕ, ಸುಂದರ, ಶೂರ, ಉದಾರಿ, ಆದುದರಿಂದಲೇ ಸುಖಿ. ಅನೇಕ ಯಜ್ಞಯಾಗಗಳನ್ನು ಮಾಡಿ, ವಿದ್ವಾಂಸರನ್ನು ದಾನ, ದಕ್ಷಿಣೆಗಳಿಂದ ಸಂತೃಪ್ತಗೊಳಿಸಿದ್ದ. ತಾನು ಪಟ್ಟಕ್ಕೆ ಬಂದ ಮೇಲೆ 'ದಸ್ಯು'ಗಳ ಹುಟ್ಟನ್ನು ಅಡಗಿಸಿ ರಾಜ್ಯವಿಸ್ತಾರವನ್ನು ಸಮರ್ಥವಾಗಿ ಪೂರೈಸಿದ. ಶಸ್ತ್ರ, ಶಾಸ್ತ್ರ ಎರಡರಲ್ಲೂ ನಿಷ್ಣಾತ. ಯಾರಿಗೂ ಬಿರುಸುಮಾತು ಆಡಿದವನಲ್ಲ. ಅವನೆಂದೂ ಕೋಪಗೊಂಡಿದ್ದಿಲ್ಲ. ಸಂಯಮಿ. ಧರ್ಮನಿಷ್ಠ ಶತ್ರುಗಳಪಾಲಿಗೆ ಸೂರ್ಯನಂತೆ ಸಹಿಸಲಾರದ ತೇಜಸ್ಸುಳ್ಳವನು.

ಹೀಗೆ ಗುಣವಂತನಾದ ಆ ಇಂದ್ರದ್ಯುಮ್ನ ಮಹಾರಾಜನಿಗೆ ಒಮ್ಮೆ ವಿಷ್ಣುವಿನ ಆರಾಧನೆ ಮಾಡಬೇಕೆಂಬ ಬಯಕೆ ಉದಿಸಿತು. ತನ್ನೊಳಗೆ ಅವನು ಆಲೋಚಿಸಿದ. 'ದೇವದೇವೋತ್ತಮನಾದ ವಿಷ್ಣುವನ್ನು ಆರಾಧಿಸಲು ಯಾವ ಸ್ಥಳ ಪ್ರಶಸ್ತ? ಯಾವ ತೀರ್ಥ ಯೋಗ್ಯ? ಎಂತಹ ಕ್ಷೇತ್ರ ಉತ್ತಮವಾದುದು?' ಯೋಚಿಸಿ, ಯೋಚಿಸಿ, ಕೊನೆಗೆ ಉತ್ಕೃಷ್ಟ ಸ್ಥಳದ ಅನ್ವೇಷಣೆಗೆ ಹೊರಟ-ಆ ರಾಜ. ಭೂಮಂಡಲವನ್ನೆಲ್ಲ ತಿರುಗಿದ. ಪಾವನ ಪುಣ್ಯಕ್ಷೇತ್ರಗಳನ್ನೆಲ್ಲ ಪರಿಶೀಲಿಸಿದ. ಕೊನೆಗೆ ನಿರ್ಣಯಕ್ಕೆ ಬಂದ 'ಪುರುಷೋತ್ತಮ ಕ್ಷೇತ್ರವೇ ಶ್ರೇಷ್ಠ' ಎಂಬುದಾಗಿ ತನ್ನ ಸೈನ್ಯ ಪರಿವಾರವನ್ನೆಲ್ಲ ಹೊರಡಿಸಿದ ಪುರುಷೋತ್ತಮಕ್ಷೇತ್ರಕ್ಕೆ. ಶಾಸ್ತ್ರೋಕ್ತ ಪದ್ಧತಿಯಿಂದ ಋಷಿ, ಮುನಿಗಳ ಸಮ್ಮುಖದಲ್ಲಿ ಅಶ್ವಮೇಧಯಾಗವನ್ನೂ, ಆ ಮಹಾತ್ಮರ ಆಣತಿಯಂತೆ ಮಾಡಿದ. ಭೂರಿದಾನ ದಕ್ಷಿಣೆ ನೀಡಿದ. ಈ ಸುಸಂದರ್ಭದ ಸವಿ ನೆನಪಿಗಾಗಿ ದೊಡ್ಡ ದೇವಾಲಯವನ್ನು ಅಲ್ಲಿ ನಿರ್ಮಿಸಿದ. ಒಳಗೆ ಸಂಕರ್ಷಣ, ಶ್ರೀಕೃಷ್ಣ, ಸುಭದ್ರಾ ದೇವಿಯರನ್ನು ಪ್ರತಿಷ್ಠಾಪಿಸಿದ. ಅಲ್ಲಿಯೇ ಸಮೀಪದಲ್ಲಿ ಐದು ತೀರ್ಥಗಳನ್ನು ಕಟ್ಟಿಸಿದ. ತನ್ನ ಮುಂದಿನ ಜೀವನವನ್ನು ಆ ಪ್ರಶಾಂತ ಪರಿಸರದಲ್ಲಿಯೇ ಕಳೆಯಲುತೀರ್ಮಾನಿಸಿ, ಸ್ನಾನ, ದಾನ, ತಪಸ್ಸು, ಹೋಮ ದೇವತಾಭಿಷೇಕ ಮುಂತಾದ ವಿಧಿವಿಧಾನಗಳಿಂದ ನಿತ್ಯವೂ ಪುರುಷೋತ್ತಮನನ್ನು ಆರಾಧಿಸಿದ, ತಾನು ಬದುಕಿರುವವರೆಗೂ. ಶ್ರೀಹರಿಯ ಅನುಗ್ರಹದಿಂದ ನೇರವಾಗಿ ಮುಕ್ತಿಮಂದಿರವನ್ನೇ ಪ್ರವೇಶಿಸಿದ.

ಇಂದ್ರದ್ಯುಮ್ನ ಮಹಾರಾಜನು ಪ್ರತಿಷ್ಠಾಪಿಸಿದ ಶ್ರೀಕೃಷ್ಣನನ್ನು ಪೂಜಿಸಿದವನು ಅಲ್ಲಿನ ತೀರ್ಥಗಳಲ್ಲಿ ಸ್ನಾನಮಾಡಿ ಶ್ರದ್ಧೆಯಿಂದ ಅರ್ಚನೆಗೈದವನು ಮುಕ್ತಿ ಪಡೆಯುವ ಎಂಬುದರಲ್ಲಿ ಒಂದೂ ಸಂದೇಹವಿಲ್ಲ.

**ಮುನಿಗಳು:-** ಬ್ರಹ್ಮನ್, ಇಂದ್ರದ್ಯುಮ್ನ ರಾಜನು ಪುರುಷೋತ್ತಮಕ್ಷೇತ್ರಕ್ಕೆ ಏಕೆ ಬಂದ? ಅಲ್ಲಿ ದೇವಾಲಯವನ್ನು ಏಕೆ ಕಟ್ಟಿಸಿದ? ರಾಮ, ಸುಭದ್ರೆ ಇವರ ವಿಗ್ರಹವನ್ನು ಆತ ಪ್ರತಿಷ್ಠಾಪಿಸಿದನಂತೆ ಅದು ಹೇಗೆ? ಎಲ್ಲ ವಿಷಯವನ್ನು ನಿರೂಪಿಸಿರಿ.

**ಬ್ರಹ್ಮ:-** ವಿಪ್ರೋತ್ತಮರೇ, ನಿಮ್ಮ ಪ್ರಶ್ನೆ ಸಮೀಚೀನವಾಗಿದೆ. ಇಂದ್ರದ್ಯುಮ್ನ ರಾಜನ ಚಾರು ಚರಿತೆಯನ್ನು ನಿಮ್ಮ ಪ್ರಶ್ನೆಗೆ ಉತ್ತರವಾಗಿ ಬಿತ್ತರಿಸುವೆ ಕೇಳಿರಿ.

ಹಿಂದೆ, ಉಜ್ಜಯಿನಿ ಎಂಬ ಪಟ್ಟಣ, ಗೋರೂಪ ಧರಿಸಿದ ಭೂದೇವಿಗೆ ಅದು ಮಧ್ಯ ಸ್ಥಾನದಲ್ಲಿರುವದು. ಇಂತಹ ಆ ಉಜ್ಜಯಿನಿಯಲ್ಲಿ ಇಂದ್ರದ್ಯುಮ್ನ ಎಂಬ ರಾಜನಿದ್ದ. ಪ್ರಜೆಗಳನ್ನು ಮಕ್ಕಳಂತೆ ಪ್ರೇಮದಿಂದ ಸಲಹುತ್ತಿದ್ದ. ಅಂತೆಯೇ ಆ ರಾಜನ ಪ್ರಜೆಗಳು ಸುಖಿಗಳೂ, ಆರೋಗ್ಯವಂತರೂ, ದೃಢಕಾಯರೂ ಆಗಿದ್ದರು. ಆ ಉಜ್ಜಯಿನಿಯಲ್ಲಿ ತ್ರಿಪುರಾಸುರನನ್ನು ಸಂಹರಿಸಿದ ತ್ರಿಲೋಚನನು ಮಹಾಕಾಲ ಎಂಬ ಹೆಸರಿನಿಂದ ನೆಲೆಸಿದ್ದಾನೆ. ಅಲ್ಲಿ ಪಾಪನಾಶಕವಾದ 'ಶಿವಕುಂಡ'ವೆಂಬ ತೀರ್ಥವಿದೆ. ಆ ಶಿವಕುಂಡತೀರ್ಥದಲ್ಲಿ ಸ್ನಾನಮಾಡಿ, ತರ್ಪಣ ನೀಡಿದವರು ಶಿವನ ಅನುಗ್ರಹದಿಂದ ಸದ್ಗತಿ ಪಡೆಯುತ್ತಾರೆ. ಸಾಕ್ಷಾತ್ ಶ್ರೀಹರಿಯೇ ಆ ನಗರದಲ್ಲಿ ಗೋವಿಂದಸ್ವಾಮಿ ಎಂಬ ಹೆಸರಿನಿಂದ ನೆಲೆಸಿದ್ದಾನೆ. ಈ ಗೋವಿಂದಸ್ವಾಮಿಯ ದರ್ಶನ ಮಾಡಿದವರ ಇಪ್ಪತ್ತೊಂದು ಪಿತೃಗಳು ಉದ್ಧರಿಸಲ್ಪಡುತ್ತಾರೆ. ಗೋವಿಂದಸ್ವಾಮಿಯ ಅನುಗ್ರಹದಿಂದ ಅವನಲ್ಲಿ ಅತಿಶಯ ಭಕ್ತಿ ಇರಿಸಿದವರು, ವಿಷ್ಣುಲೋಕವನ್ನೇ ಹೊಂದುತ್ತಾರೆ. ಈ ವಿಷ್ಣುಲೋಕದಲ್ಲಿ ಒಂದು ಕಲ್ಪದವರೆಗೆ ವಾಸಮಾಡಿ, ಬೇಕುಬೇಕಾದ ಭೋಗಭಾಗ್ಯಗಳನ್ನು ಅನುಭವಿಸುತ್ತಾರೆ. ಪುಣ್ಯ ಕಳೆದನಂತರ, ಭೂಲೋಕಕ್ಕೆ ಮರಳಿ, ಯೋಗಿಗಳ ಕುಲದಲ್ಲಿ ಜನಿಸಿ ತತ್ವಾರ್ಥಬಲ್ಲ ಪಂಡಿತನಿಂದ ಉಪದಿಷ್ಟರಾಗಿ ಕೊನೆಗೆ ಮುಕ್ತಿಯನ್ನು ಹೊಂದುವರು.

ಈ ಉಜ್ಜಯಿನಿ ಪಟ್ಟಣಕ್ಕೆ ಇನ್ನೂ ಒಂದು ವೈಶಿಷ್ಟ್ಯವಿದೆ. ಈ ಪಟ್ಟಣದಲ್ಲಿ ತ್ರಿವಿಕ್ರಮ ಸ್ವಾಮಿ ಎಂಬ ಹೆಸರಿನಿಂದ ವಿಷ್ಣುವು ನೆಲೆಸಿರುವನು. ಈ ತ್ರಿವಿಕ್ರಮಸ್ವಾಮಿಯ ದರ್ಶನ ಮಾಡಿದ ಯಾರೇಆಗಲಿ ಹಿಂದೆ ಹೇಳಿದ ಫಲವನ್ನು ಪಡೆಯುವರು. ಇಂದ್ರಾದಿ ದೇವತೆಗಳು ಸಹ ಭಕ್ತರಿಗೆ ಇಷ್ಟಾರ್ಥ ಅನುಗ್ರಹಿಸುತ್ತ ಆ ನಗರದಲ್ಲಿ ನೆಲೆಸಿದ್ದಾರೆ. ಇಂತಹ ದೇವಾಧಿದೇವತೆಗಳು ವಾಸಮಾಡಿದ ಪುಣ್ಯಕರವಾದ ನಗರವನ್ನು ಆಳುತ್ತಲಿದ್ದ-ರಾಜಶ್ರೇಷ್ಠನಾದ ಆ ಇಂದ್ರದ್ಯುಮ್ನ. ಇಂದ್ರನ ಅಮರಾವತಿಯಂತೆ ಕಂಗೊಳಿಸುತ್ತಿತ್ತು ಆ ಮಹಾತ್ಮನಾದ ಇಂದ್ರದ್ಯುಮ್ನ ಮಹಾರಾಜ ಆಳುತ್ತಿದ್ದ ಉಜ್ಜಯಿನಿನಗರ. ರಾಜನು, ಸಕಲ ರಾಜ ಲಕ್ಷಣಗಳಿಂದ ಶೋಭಿತನಾಗಿದ್ದ. ಆನೆ, ಕುದುರೆ, ರಥ, ರತ್ನಗಂಬಳಿ, ಪಿತಾಂಬರ ಮೊದಲಾದ ಅನರ್ಘ್ಯವಸ್ತುಗಳು ಆ ರಾಜನಲ್ಲಿ ಅಮಿತ ಪ್ರಮಾಣದಲ್ಲಿ ಇದ್ದವು. ಅತುಲ ಸಂಪತ್ತುಳ್ಳವನಾಗಿದ್ದರೂ ಲೋಭಿಯಾಗಿರಲಿಲ್ಲ, ಆ ಮಹಾರಾಜ. ಬ್ರಾಹ್ಮಣರಿಗೆ, ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಭೂರಿದಾನ ದಕ್ಷಿಣೆನೀಡಿ ಕಲೆ, ವಿದ್ಯೆಗಳನ್ನು ಪ್ರೋತ್ಸಾಹಿಸಿದ್ದ. ಸ್ವಯಂ ದೊಡ್ಡ ದೊಡ್ಡ ವೇದವಿಶಾರದರನ್ನು ಬರಮಾಡಿಕೊಂಡು, ತಂತ್ರ, ಆಗಮ, ಇತಿಹಾಸ, ಪುರಾಣ, ಆರು ವೇದಾಂಗಗಳು, ಧರ್ಮ ಶಾಸ್ತ್ರಗಳು ಮುಂತಾದವುಗಳ ಬಗ್ಗೆ ಕುಲಂಕುಷವಾಗಿ ವಿಮರ್ಶಾತ್ಮಕ ಅಧ್ಯಯನ ಮಾಡಿದ. ಹೀಗೆ ಉತ್ತಮ ತಿಳುವಳಿಕೆಗಳನ್ನು ಸಂಪಾದಿಸಿ ನಂತರ ಜಿತೇಂದ್ರಿಯನಾಗಿ ಇರಲು ಇಚ್ಛಿಸಿದ. ಮುಕ್ತಿಗೆ ಸಾಧನೆಗಳನ್ನು ಅನ್ವೇಷಿಸಹತ್ತಿದ. ಸದಾಸರ್ವದಾ ನಾರಾಯಣನನ್ನು ನಾನು ನೋಡುವದು ಹೇಗೆ? ಎಂದು?

ಪರ್ಯಾಲೋಚಿಸಿದ. ಶಾಸ್ತ್ರಜ್ಞರನ್ನು, ಪುರೋಹಿತರನ್ನು ಭಗವಂತನನ್ನು ಬಲ್ಲ ಮಹಾತ್ಮರನ್ನು ತನ್ನ ಮನೆಗೆ ಬರಮಾಡಿಕೊಂಡ. ಅವರನ್ನು ಸತ್ಕರಿಸಿ, ಪೂಜಿಸಿ, ಸಂತೋಷಪಡಿಸಿ ಅವರಿಂದ ಸಲಹೆಗಳನ್ನು ಪಡೆದ. ಪುರುಷೋತ್ತಮ ಕ್ಷೇತ್ರಕ್ಕೆ ಹೋಗಿ ಅಲ್ಲಿಯೇ ನೆಲೆಸಿ ಭಗವಂತನ ಮಂದಿರಗಳನ್ನು ನಿರ್ಮಿಸಿ ಭಗವದಾರಾಧನೆಮಾಡಿ, ಮೋಕ್ಷಪಡೆಯುವದೆಂದು ನಿಶ್ಚಯಿಸಿದ. ಇಂದ್ರದ್ಯುಮ್ನ ಹೊರಟಾಗ ಅವನ ಪ್ರೀತ್ಯಾಸ್ಪದ ಪರಿವಾರವೆಲ್ಲ ಇಂದ್ರದ್ಯುಮ್ನನನ್ನು ಬಿಟ್ಟಿರಲಾರದೆ ಹಿಂಬಾಲಿಸಿತು. ಸೈನಿಕರೂ ಹೊರಟರು. ರಾಜ ಎಲ್ಲಿದ್ದರೂ ಅವನ ರಕ್ಷಣೆ ತಮ್ಮ ಕರ್ತವ್ಯ ಎಂಬಂತೆ ಅಸ್ತ್ರವಿದ್ಯೆಗಳಲ್ಲಿ ಪಂಡಿತರಾದ ಮಹಾರಥರು ವಿನಮ್ರರಾಗಿ ಇಂದ್ರದ್ಯುಮ್ನನನ್ನು ಹಿಂಬಾಲಿಸಿದರು. ಮಹಾರಾಜ ಬೇಡಬೇಡವೆಂದರೂ ಅಂತಃಪುರದಲ್ಲಿನ ಸಕಲ ಜನಸಮೂಹ ಮಹಾರಾಜನನ್ನು ಅನುಸರಿಸಿ ನಡೆಯಿತು. ರಾಜನ ಹಿಂದೆ ನಡೆದ ಆ ಜನಸ್ತೋಮದಲ್ಲಿ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ವರ್ತಕರೂ, ಆಯುಧಗಳನ್ನು ಮಾರುವವರು, ತಾಂಬೂಲ ವಿಕ್ರಯದಿಂದ ಜೀವಿಸುವವರು, ಹುಲ್ಲನ್ನು ಮಾರುವವರು, ಸೌದೆ ಮಾರಿ ಬದುಕುವವರು, ನರ್ತಕರು, ನರ್ತಕಿಯರು, ಕಾಯಿಪಲ್ಲೆ ಮಾರುವವರು, ಹೂಹಣ್ಣು ಮಾರುವವರು, ಅಗಸರು ಎಲ್ಲರೂ ರಾಜನ ಹಿಂದೆ ಹೊರಟರು. ಕೆಳವರ್ಗದ ಜನರೂ ರಾಜನಲ್ಲಿ ತಮ್ಮ ನಿಷ್ಠೆ ತೋರಿಸಿ, ಅವನನ್ನು ಹಿಂಬಾಲಿಸಿಯೇ ಹಿಂಬಾಲಿಸಿದರು. ಗೋವಳರೂ, ಕ್ಷೌರಿಕರೂ ದರ್ಜಿಗಳೂ, ಕುರಿಕಾಯುವವರೂ, ಆಡುಕಾಯುವವರೂ, ಹಂಸಗಳನ್ನು ಆಡಿಸುವವರೂ, ಹಿಟ್ಟುಮಾರುವವರೂ, ಉಪ್ಪು ಬೆಲ್ಲ ಮಾರುವವರೆಲ್ಲರೂ ರಾಜನ ಹಿಂದೆ ಹೊರಟರು. ಇನ್ನು ಕೆಳವರ್ಗದವರಾದ ಬೆತ್ತ, ದೊಣ್ಣೆ ಮಾರುವವರು, ಹೆಂಡ, ಸಾರಾಯಿ ಮಾರಿ ಜೀವಿಸುವವರು, ಕರ್ಣಕರು, ಪ್ರದೇಶದಿಂದ ಪ್ರದೇಶಕ್ಕೆ ವರ್ತಮಾನ ಮುಟ್ಟಿಸುವವರು, ತಿತ್ತಿರಿಪಕ್ಷಿ, ಲಾವಿಗೆ ಹಕ್ಕಿ ಮುಂತಾದವುಗಳನ್ನು ಆಡಿಸಿ ಜೀವಿಸುವವರು, ಮರಗಳ ವೈದ್ಯರು, ಪಶುವೈದ್ಯರು, ಮನುಷ್ಯವೈದ್ಯರು ಮೊದಲಾದವರೆಲ್ಲ ರಾಜನನ್ನು ಹಿಂಬಾಲಿಸಿದರು. ಪಟ್ಟಣದಲ್ಲಿನ ಎಲ್ಲ ಜನ ತಂದೆಯನ್ನು ಮಗ ಅನುಸರಿಸುವಂತೆ ಪಟ್ಟಣಿಗರಿಗೆಲ್ಲ ಪಿತೃಸ್ಥಾನಾಪನ್ನನಾದ ಆ ಇಂದ್ರದ್ಯುಮ್ನನನ್ನು ಅನುಸರಿಸಿದರು. ಮಹಾರಾಜನು ಲಕ್ಷೋಪಲಕ್ಷ ಜನಸಮುದ್ರದಿಂದ ಕೂಡಿಕೊಂಡು, ದಕ್ಷಿಣ ಸಮುದ್ರದ ದಡಕ್ಕೆ ಬಂದ. ಸಮುದ್ರವನ್ನು ವೀಕ್ಷಿಸಿದ. ಸಮುದ್ರವು ಅನರ್ಘ್ಯರತ್ನಗಳ ತವರು ಮನೆಯಾಗಿದ್ದಿತು. ಅನೇಕ ಜಲಚರ ಪ್ರಾಣಿಗಳಿಗೆ ಆವಾಸಸ್ಥಾನವೆನಿಸಿದ್ದಿತು. ಅತ್ಯಂತ ಆಳವಾದುದು ಗಂಭೀರವಾಗಿ ಧ್ವನಿಗೈಯ್ಯುವಂಥಹದು. ಮೇಷರಾಶಿಯಂತೆ ಕೃಷ್ಣವಂಶ ತಳೆದುದು ಆಗಿದ್ದಿತು. ಸಮುದ್ರದಲ್ಲಿ ಮೀನು, ಆಮೆ, ಶಂಖ, ಚಿಪ್ಪು, ಮುತ್ತುಗಳಂಥ ಸಣ್ಣ ಪ್ರಾಣಿಗಳಲ್ಲದೆ, ಮೊಸಳೆ, ತಿಮಿಂಗಲ, ಚೇಳು, ಕೆಂಪು ಮೀನು, ಭಾರಿ ವಿಷದ ಸರ್ಪಗಳು ಇವೆಲ್ಲವು ಇದ್ದವು.

ಈ ಅದ್ಭುತವಾದ ಸಮುದ್ರವು ಶ್ರೀಮನ್ನಾರಾಯಣನ ಶಯನಸ್ಥಾನವು, ಸಕಲ ನದಿಗಳ ಸಂಗಮಸ್ಥಾನ, ಸಕಲ ತೀರ್ಥಗಳ ಸಮಾಗಮ ಸ್ಥಾನ. ಈ ಸಮುದ್ರವನ್ನು ನೋಡಿ ರಾಜನಿಗೆ ಪರಮ ಸಂತೋಷವೆನಿಸಿತು. ಸಮುದ್ರದ ದರ್ಶನದಿಂದ ಸಾತ್ವಿಕರು ಸಂತೋಷ ಹೊಂದುತ್ತಾರೆ. ದೇವತೆಗಳು ಅಮರತ್ವವನ್ನು ಪಡೆದ ಅಮೃತವನ್ನು ಕರುಣಿಸಿದ್ದು ಈ ಸಮುದ್ರವೇ. ಇಂತಹ ಸಾಗರದ ತೀರದಲ್ಲಿ ಮಹಾರಾಜನು ತನ್ನ ವಾಸಸ್ಥಾನಕ್ಕೆ ಯೋಗ್ಯವಾದ ಪರಿಸರವನ್ನು ಹುಡುಕಲಾರಂಭಿಸಿದ. ಅಲ್ಲಲ್ಲಿ ಸಾಲುಮರಗಳು,

ಗಿಡಬಳ್ಳಿಗಳು ಬೆಳೆದು ನಿಂತಿದ್ದವು ಸರ್ಜ, ಕಾಶ್ಮರಿ, ಬೂರುಗ, ಸುರಹೊನ್ನೆ, ತಾರೆಮರ, ಕುಂಭಿಕಣ, ಆಳಲೆ, ಧೂಪ, ಚಂದನ, ಗಂಧ, ಅರಗು, ನಿಂಬೆ, ಹುಣಸೆ, ಕೆಂಪುಚಂದನ ಮೊದಲಾದ ಗಿಡಮರ ಬಳ್ಳಿಗಳು ಅಲ್ಲಿ ಸಾಕಷ್ಟು ಇದ್ದವು. ಈ ಮರಗಳಲ್ಲಿ ಬೀಡು ಬಿಟ್ಟಿರುವ ಪಾರಿವಾಳ, ಗಿಳಿ, ಗುಬ್ಬಿ, ಕಾಕೋಲ, ಬಹುಪುತ್ರ, ದುಂಬಿ, ಚಾತಕ, ಹಾರೀತ, ಖಂಡರೀಟ, ಮೈನಾ, ನವಿಲು ಮೊದಲಾದ ಹಕ್ಕಿಗಳು ಇಂಪಾಗಿ ಧ್ವನಿಗೈಯುತ್ತ ಸಂತಸದಿಂದ ವಾಸಮಾಡಿದ್ದವು. ವಿದ್ಯಾಧರರು ವಿಹರಿಸುತ್ತಿದ್ದರು. ಸಿಂಹ, ಕಾಡುಹಂದಿ, ಕಾಡುಕೋಣ, ಕೃಷ್ಣಸಾಗರ, ಮೊದಲಾದ ಪ್ರಾಣಿಗಳು, ಹುಲಿ, ಕೊಬ್ಬಿದ ಸಲಗ ಮುಂತಾದ ಕಾಡುಪ್ರಾಣಿಗಳು ಅಲ್ಲಲ್ಲಿ ಸಂಚರಿಸುತ್ತಿದ್ದವು. ಈ ಪ್ರದೇಶದಲ್ಲಿ ಮುನಿಗಳು ತಪಸ್ಸನ್ನಾಚರಿಸುತ್ತಿದ್ದರು. ಇಲ್ಲಿರುವ ಪುರುಷೋತ್ತಮನನ್ನು ಬಗೆಬಗೆಯ ರೀತಿಯಿಂದ ಆರಾಧಿಸುತ್ತಿದ್ದರು. ಇಂತಹ ತ್ರಿಲೋಕ ವಂದ್ಯವಾದ ಪುರುಷೋತ್ತಮ ಕ್ಷೇತ್ರವನ್ನು ಇಂದ್ರದ್ಯುಮ್ನ ರಾಜನು ನೋಡಿದ.

**ಮುನಿಗಳು:-** ಬ್ರಹ್ಮನ್, ಇಂದ್ರದ್ಯುಮ್ನ ಇಲ್ಲಿಗೆ ಬಂದು ಶ್ರೀಕೃಷ್ಣನನ್ನು, ಬಲರಾಮನನ್ನು, ಸುಭದ್ರಾದೇವಿಯನ್ನು ಪ್ರತಿಷ್ಠಾಪಿಸುವದಕ್ಕಿಂತ ಮೊದಲು, ಆ ಕ್ಷೇತ್ರದಲ್ಲಿ ಪರಮಾತ್ಮನ ವಿಗ್ರಹ ಇರಲಿಲ್ಲವೇ?

**ಬ್ರಹ್ಮ:-** ಈ ಪ್ರಶ್ನೆಯನ್ನುಹಿಂದೆ, ಲಕ್ಷ್ಮೀದೇವಿಯು ಪರಮಾತ್ಮನನ್ನು ಕುರಿತು ಮಾಡಿದ್ದಳು. ಅವಳ ಪ್ರಶ್ನೆಗೆ ಉತ್ತರಿಸುತ್ತ ಭಗವಂತ ಹೀಗೆ ನುಡಿದ:- 'ಭೂಲೋಕವು ಬಹು ಆಶ್ಚರ್ಯಗಳಿಂದ ಕೂಡಿರುವಂತಹದು. ಜನರು ಅಜ್ಞಾನಜನ್ಯವಾದ ಕಾಮ ಕ್ರೋಧಗಳಿಂದ, ಬಳಲುತ್ತಿರುವದು. ಅವರು ಈ ಸಂಸಾರಪಾಶದಿಂದ ಮುಕ್ತರಾಗಲು ನಾನೊಂದು ಉಪಾಯವನ್ನು ನಿರ್ಮಿಸಿದ್ದೇನೆ ಆ ಉಪಾಯವೆಂದರೆ ಭೂಲೋಕದಲ್ಲಿನ ಪುರುಷೋತ್ತಮಕ್ಷೇತ್ರದಲ್ಲಿ ಇರುವ ನನ್ನನ್ನು ಉಪಾಸಿಸುವದು. ಜನರ ಉದ್ಧಾರಕ್ಕಾಗಿ ನಾನೇ ಅಲ್ಲಿ ಪ್ರತಿಮಾ ರೂಪದಲ್ಲಿ ಸನ್ನಿಹಿತನಾಗಿದ್ದೇನೆ. ಅಂತೆಯೇ ಅಲ್ಲಿನ ಸುತ್ತುಮುತ್ತಲ ಪರಿಸರವೆಲ್ಲ "ಪುರುಷೋತ್ತಮಕ್ಷೇತ್ರ"ವೆಂದು ಖ್ಯಾತವಾಗಿದೆ. ಹಿಂದೆ ಪ್ರಳಯಕಾಲ ಪ್ರಾಪ್ತವಾದಾಗ, ಸಮಸ್ತಪ್ರಪಂಚ ನಾಶಕ್ಕೊಳಗಾಯಿತು. ಜಗತ್ತೆಲ್ಲ ಅಂಧಃಕಾರದಲ್ಲಿ ಮುಳುಗಿತು. ಪರಮಾತ್ಮನು ಮಾತ್ರ ವಾಸದೇವ ಅವತಾರದಿಂದ ತನ್ನ ತೇಜಸ್ಸಿನಿಂದ ಬೆಳಗುತ್ತ ಸಮುದ್ರಮಧ್ಯದಲ್ಲಿ ಯೋಗನಿದ್ರೆಗೈಯುತ್ತಿದ್ದ. ಆಗ ಅವನ ನಾಭಿಕಮಲದಿಂದ ಸುಂದರವಾದ ಹೊಂದಾವರೆಯೊಂದು ಹೊರಕಾಣಿಸಿಕೊಂಡಿತು. ಉದ್ಭವಿಸಿದ ಅದರಿಂದ ಜಗತ್ತಿಗೆ ಪಿತಾಮಹನಾದ ಬ್ರಹ್ಮ ಸೃಷ್ಟಿಸಿದ, ಪಂಚಭೂತಗಳನ್ನು ಭಗವಂತನ ಆದೇಶದಂತೆ. ಸೃಷ್ಟಿಕ್ರಮವನ್ನು ಪರ್ಯಾಲೋಚಿಸಿ, ಸ್ಥೂಲ, ಸೂಕ್ಷ್ಮ, ಸ್ಥಾವರ, ಪರ ಚತುರ್ವಿಧ ಪ್ರಪಂಚ ಸೃಷ್ಟಿಗೈದು ನಾನಾ ಪ್ರಕಾರದ ಪ್ರಜಾಸೃಷ್ಟಿಯನ್ನು ಆರಂಭಿಸಿದ. ಮರೀಚಿ ಮೊದಲಾದ ಮುನಿಗಳು, ದೇವತೆಗಳು, ದಾನವರು,ಯಕ್ಷರು, ವಿದ್ಯಾಧರರು, ಕಿನ್ನರ ಕಿಂಪುರುಷರೇ ಮೊದಲಾದವರು, ಗಂಗೆ ಮೊದಲಾದ ನದಿಗಳು, ಯೋನಿಜರಾದ ಮಾನವ ಸಂತತಿ, ಅಂಡಜವೆನಿಸುವ ಪಶುಪಕ್ಷಿಗಳು, ಸ್ವೇದಜ ಎನಿಸದ (ಬೆವರಿನಿಂದ ಜನಿಸುವ) ಕ್ರಿಮಿಗಳು, ಉದ್ಭಿಜ (ಭೂಮಿಯನ್ನು ಭೇದಿಸಿ ಮೇಲೆ ಬರುವ) ಮರಗಿಡ ಮೊದಲಾದವುಗಳು ಬ್ರಹ್ಮನ ಸೃಷ್ಟಿಕಾರ್ಯಕ್ಕೆ ಒಳಗಾದವುಗಳು. ಇರುವೆಯಿಂದ ಆರಂಭಿಸಿಕೊಂಡು ಆನೆ, ತಿಮಿಂಗಲುವರೆಗಿನ ಸಮಸ್ತ ಚಿಕ್ಕ, ದೊಡ್ಡ ಪ್ರಾಣಿಗಳನ್ನು ತೃಣದಿಂದ ಆರಂಭಿಸಿ, ಗಗನ ಚುಂಬಿಯಾದ ಬಗೆಬಗೆಯ ವೃಕ್ಷಗಳನ್ನು ಸೃಷ್ಟಿಸಿದ.

ಅನಂತರ ಬ್ರಹ್ಮದೇವನು, ತನ್ನ ಶರೀರವನ್ನೇ ಇಬ್ಭಾಗಿಸಿಕೊಂಡ. ಒಂದು ಭಾಗ ಸ್ತ್ರೀಶರೀರವೆನಿಸಿದರೆ ಇನ್ನೊಂದು ಭಾಗ ಪುರುಷ ಶರೀರವೆನಿಸಿತು. ಅಂದಿನಿಂದಲೇ ಸ್ತ್ರೀಪುರುಷರ ಮಧುರಮಿಲನ ಆರಂಭವಾಯಿತು. ಸೃಷ್ಟಿಕಾರ್ಯವು ವೇಗವಾಗಿ ಮುಂದುವರಿಯಿತು. ಇಷ್ಟಾದ ನಂತರ ಬ್ರಹ್ಮದೇವನು ಮಾರ್ಗದರ್ಶನಕ್ಕಾಗಿ ವಾಸುದೇವ ಮೂರ್ತಿಯನ್ನು ಧ್ಯಾನಿಸಿದ. ಭಗವಂತನು ಪ್ರತ್ಯಕ್ಷನಾದ. ಅವನೆದುರು ಬ್ರಹ್ಮ ಹೀಗೆ ಕೇಳಿದನು- 'ದೇವೇಶ ಸ್ವರ್ಗಾದಿ ಉನ್ನತಲೋಕ ಹೊಂದಲು ಶಾಸ್ತ್ರದಲ್ಲಿ ತಪಸ್ಸು, ಯಜ್ಞ, ಯೋಗ ಮೊದಲಾದ ಕಠಿಣ ಸಾಧನಗಳು ವಿವೃತ್ತವಾಗಿವೆ ಜನಗಳ ಸೌಲಭ್ಯಕ್ಕಾಗಿ. ಮೇಲಿನ ಲೋಕಗಳನ್ನು ಪಡೆಯುವ ಸುಲಭಸಾಧನಗಳಿದ್ದರೆ ದಯವಿಟ್ಟು ಅವುಗಳನ್ನು ಲೋಕಹಿತಕ್ಕಾಗಿ ಉಪದೇಶಿಸು. ಈ ಭೂಲೋಕದಲ್ಲಿ ಪವಿತ್ರತಮವೂ, ಅತ್ಯುತ್ತಮವೂ, ಅಸದೃಶ್ಯವೂ ಆದ ಸಾಧನಾಕ್ಷೇತ್ರ ಒಂದನ್ನು ನಿರ್ದೇಶಿಸು.

ಬ್ರಹ್ಮನ ಈ ಮಾತುಗಳನ್ನು ಕೇಳಿ, ಕರುಣಾಶಾಲಿಯಾದ ಭಗವಂತನು ಮಗುಳು ನಗುತ್ತ ನುಡಿದ, 'ಎಲೈ ಬ್ರಹ್ಮನೆ, ಭೂಲೋಕದಲ್ಲಿ ನೀನು ಕೇಳಿದಂತಹ ಕ್ಷೇತ್ರ ಒಂದಿದೆ. ಗೋ ಬ್ರಾಹ್ಮಣರಿಗೆ ಕ್ಷೇಮವನ್ನುಂಟುಮಾಡುವ, ಸುಲಭವಾಗಿ ಉನ್ನತ ಸ್ಥಾನಗಳಿಸಲು ಸಾಧನ ವೆನಿಸುವ ಮಹಾಪುಣ್ಯಪ್ರದವಾದ ಈ ಕ್ಷೇತ್ರದ ಹೆಸರು ಪುರುಷೋತ್ತಮಕ್ಷೇತ್ರವೆಂದು ದೇವತೆಗಳು, ಋಷಿಗಳು, ಸನಕ, ಸನಾತನ, ಸನಂದ, ಸನತ್ಕುಮಾರ ಎಂಬ ಬ್ರಹ್ಮಚಾರಿಗಳು, ಸಿದ್ಧರು, ಗಂಧರ್ವರು, ಯಕ್ಷರು, ಸರ್ಪಗಳು, ದಾನವರು, ನಾಥಕುಮಾರರು ಇವೇ ಮೊದಲಾದ ಎಲ್ಲ ಜೀವ ಗಣಗಳಿಗಿಂತಲೂ ವಾಸುದೇವನು ಉತ್ತಮ ಪುರುಷ ಎನಿಸಿದ್ದಾನೆ. ಆದುದರಿಂದಲೇ, ಅವನಿಗೆ ಪುರುಷೋತ್ತಮ ಎಂಬ ಸಾರ್ಥಕ ಹೆಸರಿದೆ.'

ಈ ಪುರುಷೋತ್ತಮನು ನೆಲೆಸಿರುವದರಿಂದ ಆ ಕ್ಷೇತ್ರಕ್ಕೆ ಪುರುಷೋತ್ತಮ ಕ್ಷೇತ್ರ ಎಂದು ಹೆಸರು ಬಂದಿದೆ. ಈ ಕ್ಷೇತ್ರವು ದಕ್ಷಿಣ ಸಾಗರದ ತೀರದಲ್ಲಿ ಇದೆ. ಇದರ ವಿಸ್ತಾರ ಹತ್ತು ಯೋಜನ. ಈ ಕ್ಷೇತ್ರದಲ್ಲಿ ಆಲದಮರ ಒಂದಿದೆ. ಈ ಮರಕ್ಕೆ ಪ್ರದಕ್ಷಿಣೆ ನಮಸ್ಕಾರ ಮಾಡಿದವರ ಪಾಪಗಳೆಲ್ಲವೂ ದೂರದೂರ. ಅವರು ವಿಷ್ಣುಲೋಕ ಪಡೆಯುವಲ್ಲಿ ಸಂದೇಹವಿಲ್ಲ. ಈ ಆಲದಮರದ ನೆರಳಿನಲ್ಲಿ ಭಗವಂತನನ್ನು ನೆನೆಯುತ್ತ ಕೂಡುವವನು ಮಹಾಪಾಪಗಳಿಂದ ಮುಕ್ತನಾಗುತ್ತಾನೆ. ಈ ಆಲದ ಮುಂದೆ ದಕ್ಷಿಣ ದಿಕ್ಕಿಗೆ ಕೇಶವನ ದೇವಾಲಯವಿದೆ. ಧರ್ಮವೇ ವಿಗ್ರಹ ತಳೆದು ಇಲ್ಲಿ ನಿಂತತೆ ಈ ದೇವಾಲಯವು ಕಂಗೊಳಿಸುತ್ತಿದೆ. ಈ ದೇವಾಲಯದ ವೈಶಿಷ್ಟ್ಯವೆಂದರೆ-ಇಲ್ಲಿ ಸ್ವಯಂ ಶ್ರೀಹರಿಯೇ ತನ್ನ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾನೆ. ಈ ವಿಗ್ರಹದ ದರ್ಶನಮಾಡಿದವರು ಅನಾಯಾಸವಾಗಿ ಪಾಪಿಗಳಾಗಿದ್ದರೂ ವಿಷ್ಣುಲೋಕ ಪಡೆಯುತ್ತಾರೆ. ಮಹಾಪಾಪಿಷ್ಠರೂ ಸಹ ಮೋಕ್ಷಕ್ಕೆ ಬೇಕಾದ ಸಾಧನೆ ಇಲ್ಲದೆ ಮೋಕ್ಷಪಡೆಯುತ್ತಿರುವದನ್ನು ಕಂಡ ಯಮಧರ್ಮ ಕಸಿವಿಸಿ ಗೊಂಡ. ಒಂದು ದಿನ ನಾನಿರುವಲ್ಲಿಗೆ ಆಗಮಿಸಿದ. ವಿನಯದಿಂದ ಶಿರಬಾಗಿ ನುಡಿದ:- ''ಸ್ವಾಮಿ, ಕ್ಷೀರಶಾಯಿಯಾದ ನಿನಗೆ ಅನಂತ ವಂದನೆಗಳು. ನೀನು ಜಗತ್‌ಸೃಷ್ಟಿಕರ್ತನು, ವಾಸುದೇವಮೂರ್ತಿಯು; ಸರ್ವಜ್ಞನು, ನಿತ್ಯನು, ಜಗತ್ತಿನ ಸ್ಥಿತಿಲಯಗಳನ್ನು ನಿಯಮಿಸುವವನು, ಸಕಲ ಚೇತನಾ ಅಚೇತನವಾದ ಪ್ರಪಂಚ ಆಗುಹೋಗುಗಳ ನಿಯಂತ್ರಕ. ಅಣುವಿನಿಂದ ಹಿಡಿದು ಬೃಹದ್ಬ್ರಹ್ಮಾಂಡದವರೆಗಿನ ಸ್ಥೂಲ-ಸೂಕ್ಷ್ಮ ಗಳನ್ನೆಲ್ಲ ವ್ಯಾಪಿಸಿ ಇರುವ ವಿರಾಟ್‌ಸ್ವರೂಪ. ಹೇ ದೇವ ದೇವ, ನಿನಗೆ ನನ್ನ

ನಮಸ್ಕಾರಗಳು. ಶ್ರೀವತ್ಸಾಂಕಿತಧಾರಿಯಾದ ಹೇ ವಾಸುದೇವನೆ, ನಿನ್ನ ಪಾದಪದ್ಮಗಳಲ್ಲಿ ಇದೋ ನನ್ನ ವಂದನೆಗಳು. ನೀನು ಉತ್ಪತ್ತಿ ವಿನಾಶರಹಿತ. ನಿನ್ನ ಶರೀರಕ್ಕೂ ನಿನಗೂ ಅಂತರವಿಲ್ಲದವ. ಪ್ರಕೃತಿಗಿಂತ (ಪ್ರಕೃತ್ಯಭಿಮಾನಿ ಲಕ್ಷ್ಮೀದೇವಿಗಿಂತ) ಶ್ರೇಷ್ಠ. ಜೀವರ ಅಸ್ವಸ್ಥ, ಸುಖಸಾಧನೆ ಎಲ್ಲ ನಿನಗೆ ಸೇರಿದ್ದು. ನಿನ್ನ ಸಂಕಲ್ಪದಂತೆ ನಡೆವುದು ಎಲ್ಲವೂ.

ಹೀಗೆ ಭಗವಂತನನ್ನು ಸ್ತುತಿಸಿದ ಯಮಧರ್ಮ ವಿನೀತ ವೇಷದಿಂದ ಕೈಮುಗಿದು ದೂರದಲ್ಲಿ ನಿಂತ. ಯಮನನ್ನು ನಾನು ಪ್ರಶ್ನಿಸಿದೆ. "ಯಮಧರ್ಮ, ನನ್ನ ಬಳಿಗೆ ಬಂದ ನಿಮಿತ್ತವೇನು?"

**ಯಮಧರ್ಮ:-** ಹೇ ದೇವೇಶ, ಏನೆಂದು ಬಣ್ಣಿಸಲಿ ನನ್ನ ದುಃಖವನ್ನು? ಭೂಲೋಕದಲ್ಲಿ ಪುರುಷೋತ್ತಮಕ್ಷೇತ್ರವೆಂಬ ಪರಮಪವಿತ್ರವಾದ ಕ್ಷೇತ್ರ ಒಂದಿದೆಯಷ್ಟೆ! ಆ ಕ್ಷೇತ್ರದಲ್ಲಿ ಇರುವ ನಿನ್ನ ವಿಗ್ರಹವು ಅತ್ಯದ್ಭುತ ಮಹಿಮೆಯನ್ನು ಎಸಗುತ್ತಿದೆ: ಇಂದ್ರನೀಲ ಮಣಿಯ, ಆ ನಿನ್ನ (ವಿಷ್ಣುವಿಗ್ರಹ)ವನ್ನು ಪೂಜಿಸಿ, ದರ್ಶನಮಾಡಿ, ಅರ್ಚನೆಗೈದು; ಪಾಪಿಗಳೂ ಸಹ ವೈಕುಂಠವನ್ನು ಹೊಂದುತ್ತಿದ್ದಾರೆ. ನರಕಲೋಕ ಖಾಲಿಯಾಗಿದೆ. ಅಲ್ಲಿನ ಕೆಲಸಗಾರರೆಲ್ಲ ಕೆಲಸವಿಲ್ಲದವರಾಗಿದ್ದಾರೆ, ವೈಕುಂಠಲೋಕ ಭೂಲೋಕದ ಜನರಿಂದ ತುಂಬಿ ತುಳುಕುತ್ತಿದೆ. ಜನರಿಗೆ ವೈಕುಂಠಲೋಕ ಪ್ರಾಪ್ತಿ ಎಂಬುದು ಅಸಾಧಾರಣ ವಿಷಯ ಎನಿಸಿಲ್ಲ. ಎಲ್ಲರೂ ನೇರವಾಗಿ ಪುರುಷೋತ್ತಮ ತೀರ್ಥಕ್ಕೆ ಬರುತ್ತಾರೆ. ನಿನ್ನ ವಿಗ್ರಹದ ದರ್ಶನ, ಸ್ಪರ್ಶನ ಪೂಜಾದಿಗಳನ್ನು ಮಾಡಿ ನರಕದ ಕಡೆಗೆ ಹೊರಳಿಯೂ ಸಹ ನೋಡದೆ, ನೇರವಾಗಿ ವೈಕುಂಠ ಲೋಕವನ್ನು ಪ್ರವೇಶಿಸುತ್ತಾರೆ. ಇದರಿಂದ ಭೂ, ಸ್ವರ್ಗ ಮೋಕ್ಷಗಳಲ್ಲಿನ ವ್ಯವಸ್ಥೆ ಹದಗೆಟ್ಟಿದೆ. ನನ್ನ ಕಾರ್ಯರೂಪಗಳೆಲ್ಲ ಸ್ಥಗಿತಗೊಂಡಿದೆ. ಭಗವಾನ್, ನಿನ್ನ ಆ ಪುರುಷೋತ್ತಮ ವಿಗ್ರಹದ ದರ್ಶನ ಸಕಲ ಸಾಮಾನ್ಯರಿಗೂ ಆಗುವದು ಬೇಡ. ನೀನೇ ಒಂದು ವ್ಯವಸ್ಥೆ ಕಲ್ಪಿಸು, ಇದು ನನ್ನ ಪ್ರಾರ್ಥನೆ. ನನ್ನನ್ನು ಅನುಗ್ರಹಿಸು.

ಯಮಧರ್ಮನ ಈ ಪ್ರಾರ್ಥನೆಯನ್ನು ಆಲಿಸಿದ ಭಗವಂತ ಯಮಧರ್ಮನಿಗೆ 'ತಥಾಸ್ತು' ಎಂದ. ಯಮನ ಇಚ್ಛಾನುಸಾರ ಪುರುಷೋತ್ತಮನ ವಿಗ್ರಹಕ್ಕೆ ಚಿನ್ನದ ಹೊದಿಕೆ ಹೊದಿಸಿ ಮರಳಿನ ಪೊದೆಯಲ್ಲಿ ಮರೆಮಾಡಿದ. ಇದನ್ನು ನೋಡಿದ ಯಮ ತನ್ನ ಇಷ್ಟಾರ್ಥ ಈಡೇರಿದ ಸಂತೋಷದಿಂದ ತನ್ನ ನಾಡಿಗೆ ನಡೆದ.

**ಬ್ರಹ್ಮ:-** ಬ್ರಾಹ್ಮಣೋತ್ತಮರೆ, ಹೀಗೆ ಇಂದ್ರನೀಲಮಣಿಯ ವಿಗ್ರಹವು ಮರೆಯಾದ ನಂತರ ಪುರುಷೋತ್ತಮ ಕ್ಷೇತ್ರದಲ್ಲಿ ನಡೆದ ಈ ವೃತ್ತಾಂತವನ್ನೆಲ್ಲ ಪರಮಾತ್ಮನು ಲಕ್ಷ್ಮೀದೇವಿಗೆ ವಿವರಿಸಿ ಹೇಳಿದ. ಪರಮಾತ್ಮನು ಲಕ್ಷ್ಮೀದೇವಿಗೆ ವಿವರಿಸಿದ ವೃತ್ತಾಂತದಲ್ಲಿ ಈ ಕೆಳಗಿನ ಎಲ್ಲ ವಿವರಗಳು ಬಂದಿವೆ. ಇಂದ್ರದ್ಯುಮ್ನ ಹೊರಟದ್ದು, ಪುರಷೋತ್ತಮ ಕ್ಷೇತ್ರ ಸಂದರ್ಶಿಸಿದ್ದು, ಆ ಕ್ಷೇತ್ರದ ವರ್ಣನೆ, ದೇವಾಲಯದ ನಿರ್ಮಾಣ, ಅಶ್ವಮೇಧಯಾಗ ಮಾಡಿದ್ದು, ಸ್ವಪ್ನ, ಉಪ್ಪಿನಸಮುದ್ರದ ತೀರದಲ್ಲಿ ಮರದ ತುಂಡನ್ನು ನೋಡಿದ್ದು, ವಾಸುದೇವನು ಶಿಲ್ಪಿಯರೂಪದಿಂದ ಇಂದ್ರದ್ಯುಮ್ನನಿಗೆ ದರ್ಶನವಿತ್ತಿದ್ದು, ಶಿಲ್ಪಿಯ ಮೂಲಕ ಆಯಾ ವರ್ಣನೆಗಳಿಗೆ ಅನುಸಾರವಾಗಿ ಮೂರ್ತಿ ನಿರ್ಮಾಣ. ಮೂರ್ತಿ ಪ್ರತಿಷ್ಠಾಪನೆ, ಮಾರ್ಕಂಡೇಯ ಚರಿತ್ರೆ, ಶಂಕರ ಪ್ರತಿಷ್ಠೆ, ಪಂಚತೀರ್ಥದ ಮಹಾತ್ಮೆ, ಶಂಕರನ ದರ್ಶನ, ಆಲದಮರದ ದರ್ಶನ ಅದರ ಮಹತಿ, ಬಲರಾಮನ ದರ್ಶನ, ಶ್ರೀಕೃಷ್ಣನ ದರ್ಶನ, ಸುಭದ್ರೆಯ ದರ್ಶನ, ಈ ಪ್ರತಿಮೆಗಳ ಮಹಾತ್ಮೆ, ನರಸಿಂಹ

ಮೂರ್ತಿಯ ದರ್ಶನ ಮತ್ತು ಅವನ ಮಹಾತ್ಮ್ಯೆ, ಪರಮಾತ್ಮನಾದ ವಾಸುದೇವನ ದರ್ಶನ, ಅವನ ಗುಣಗಳ ಸಂಕೀರ್ತನ, ಶ್ವೇತಮಾಧವ ಮೂರ್ತಿಯ ಮಹಾತ್ಮ್ಯೆ, ಸ್ವರ್ಗದ್ವಾರ ದರ್ಶನ, ಸಮುದ್ರ ಸಂದರ್ಶನ, ಸಾಗರ ಸ್ನಾನ, ತರ್ಪಣ, ಸಮುದ್ರಸ್ನಾನದಿಂದ ಇಂದ್ರದ್ಯುಮ್ನ ರಾಜನಿಗೆ ದೊರೆತ ಫಲಗಳು, ಪಂಚತೀರ್ಥಗಳ ಫಲ, ಮಹಾಜ್ಯೇಷ್ಠ ಮಹಾತ್ಮ್ಯೆ, ಶ್ರೀಕೃಷ್ಣ ಬಲರಾಮರು ಪಂಚತೀರ್ಥ ಗಳಲ್ಲಿ ಮಿಂದಸಂದರ್ಭ, ಪರ್ವಕಾಲ ದಲ್ಲಿ ಯಾತ್ರೆಮಾಡಿದ ಫಲ, ವಿಷ್ಣುಲೋಕ ವರ್ಣನೆ, ಮತ್ತೆ ಮತ್ತೆ ಬರುವ ಆ ಪುರುಷೋತ್ತಮ ಕ್ಷೇತ್ರದ ವರ್ಣನೆ ಹಾಗೂ ಇನ್ನುಳಿದ ಕ್ಷೇತ್ರಗಳ ಬಣ್ಣನೆ, ಎಲ್ಲ ವಿಷಯಗಳನ್ನು ಪರಮಾತ್ಮನು ಲಕ್ಷ್ಮೀದೇವಿಗೆ ಹೇಳಿದ.

**ಮುನಿಗಳು:-** ಬ್ರಹ್ಮನ್, ಇಂದ್ರದ್ಯುಮ್ನ ರಾಜನ ಮುಂದಿನ ಕಥೆಯನ್ನು ಕೇಳಲು ಕಾತರರಾಗಿದ್ದೇವೆ, ನಿರೂಪಿಸು.

**ಬ್ರಹ್ಮ:-** ಮುನಿಗಳೇ, ಇಂದ್ರದ್ಯುಮ್ನ ರಾಜನು ಅಲ್ಲಿ ಮಾಡಿದ ಕಾರ್ಯಗಳನ್ನು ಮತ್ತು ಪುರುಷೋತ್ತಮನ ದರ್ಶನ ಮಾಡಿದ ಬಗೆಯನ್ನು ಸಂಕ್ಷೇಪ್ತವಾಗಿ ಹೇಳುತ್ತೇನೆ. ಇಂದ್ರದ್ಯುಮ್ನ ರಾಜನು, ತ್ರಿಲೋಕ ಪ್ರಸಿದ್ಧವಾದ ಪುರುಷೋತ್ತಮ ಕ್ಷೇತ್ರದಲ್ಲಿನ ಎಲ್ಲ ತೀರ್ಥಗಳಿಗೂ ಭೇಟಿ ಇತ್ತ. ಎಲ್ಲ ಕ್ಷೇತ್ರಗಳಲ್ಲಿ ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ನೀಡಿದ.

ಆ ಪುರುಷೋತ್ತಮ ಕ್ಷೇತ್ರದಲ್ಲಿ 'ಸ್ವಿತ್ರೋಪಲ' ಎಂಬ ನದಿಯು ಹರಿಯುತ್ತಿದೆ. ಆ ನದಿಯು ಹೊರಟಿರುವದು ವಿಂಧ್ಯಗಿರಿಯಿಂದ. ಗಂಗಾನದಿಯಂತೆ ಇದೂ ಸಹ ಮಹಾನದಿ, ಮಹಾಪ್ರವಾಹಗಳುಳ್ಳ ಈ ಪವಿತ್ರನದಿ ಮುಂದೆ ದಕ್ಷಿಣಸಮುದ್ರವನ್ನು ಸೇರಿದೆ. ಈ ನದಿಯಲ್ಲಿ ದೊಡ್ಡ ದೊಡ್ಡ ಮಡುವುಗಳಿವೆ. ನದಿಯ ಎರಡೂ ತೀರಗಳಲ್ಲಿ ಅನೇಕ ಗ್ರಾಮಗಳು, ನಗರಗಳು ಇವೆ. ಆ ನದಿಯಿಂದಾಗಿ ಅಲ್ಲಿನ ಪ್ರದೇಶಗಳೆಲ್ಲ ಸಸ್ಯ ಸಂಪೂರ್ಣವಾಗಿದೆ. ಸಸ್ಯಸೌಭಾಗ್ಯಗಳಿಂದ ಅಲ್ಲಿರುವ ಜನರೆಲ್ಲ ಆರೋಗ್ಯಭಾಗ್ಯ ಉಳ್ಳವರಾಗಿದ್ದಾರೆ. ಅಲ್ಲಿನ ಬ್ರಾಹ್ಮಣರು ಪದ, ಕ್ರಮ, ಘನ, ಜಟೆ ಮುಂತಾದ ಕ್ರಮದಿಂದ ವೇದವನ್ನು ಅಧ್ಯಯನಿಸಿ, ಶಿಕ್ಷಾ, ವ್ಯಾಕರಣ, ಜೋತಿಷ್ಯ, ಛಂದಸ್ಸು, ನಿರುಕ್ತ, ಕಲ್ಪ ಎಂಬ ಷಡಂಗ ಸಹಿತವಾದ ವೇದಗಳನ್ನು ಅಧ್ಯಯನಿಸಿದ್ದಾರೆ. ಹೀಗೆ ಕೆಲವರು ಶ್ರೋತ್ರಿಯರೆನಿಸಿದರೆ, ಹಲವರು ಅಗ್ನಿಹೋತ್ರಿ ಎಂದು ಪ್ರಸಿದ್ಧರಾಗಿದ್ದಾರೆ. ಇವರು ನಿತ್ಯವೂ ಅಗ್ನಿಹೋತ್ರವನ್ನು ಆಚರಿಸುತ್ತಾರೆ. ಸಕಲ ಶಾಸ್ತ್ರಗಳ ಮರ್ಮವನ್ನು ಅರಿತ ಮಹಾಮಹೋಪಾಧ್ಯಾಯರು ಅನೇಕ ಜನ ಆ ಪಟ್ಟಣಗಳಲ್ಲಿ ವಾಸವಾಗಿದ್ದಾರೆ. ಓಣಿ ಓಣಿಗಳಲ್ಲಿ ಸುಸ್ವರವಾದ ವೇದಘೋಷ, ಸುಂದರವಾದ ಕಾವ್ಯವಾಚನ, ಭಾವ ಬಂಧುರವಾದ ಗದ್ಯ, ಪ್ರವಚನ, ಶಾಸ್ತ್ರ ವಾಕ್ಯಾರ್ಥ ಗೋಷ್ಠಿಗಳು ಸಾರ್ವಕಾಲಿಕವಾಗಿ ಕೇಳಿ ಬರುತ್ತವೆ. ಆ ಕ್ಷೇತ್ರದಲ್ಲಿ ಪರಮಹಂಸಾಶ್ರಮ ಸ್ವೀಕರಿಸಿದ ವಿರಕ್ತ ಶಿಖಾಮಣಿಗಳು, ವೈಖಾಸನ ಎಂಬ ಮುನಿಗಳು. ಶ್ರೇಷ್ಠ ಬ್ರಹ್ಮಚಾರಿಗಳು, ಆದರ್ಶ ಗ್ರಹಸ್ಥರೂ, ಪರಿಪಕ್ವ ಮನೋಮಟ್ಟ ಮುಟ್ಟಿದ ವಾನಪ್ರಸ್ಥಾಶ್ರಮಿಗಳು, ದಿಕ್ಷಾಬದ್ಧರೂ, ತಾಪಸರು, ಮಂತ್ರ, ತಂತ್ರ ನಿಪುಣರು, ಅಲ್ಲಲ್ಲಿ ಸ್ವಕರ್ತವ್ಯಾಚರಣೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಇಂತಹ ಅತ್ಯುತ್ಕೃಷ್ಟವಾದ 'ಕ್ಷೇತ್ರರಾಜ' ಎನಿಸಬಹುದಾದ ಆ ಪುರುಷೋತ್ತಮ ಕ್ಷೇತ್ರವನ್ನು ನೋಡಿದ ಕೂಡಲೇ, ಮಹಾರಾಜನಿಗೆ, ಅಲ್ಲಿ ಸನ್ನಿಹಿತನಾದ ಭಗವಂತನ ವಿಷಯದಲ್ಲಿ ಭಕ್ತಿ ಬೆಳೆಯಿತು, ಸರ್ವಶಕ್ತಿ ಸಮನ್ವಿತನಾದ ಇಲ್ಲಿರುವ ಆ ಜಗದೀಶನನ್ನು ನಾನು ಆರಾಧಿಸುವೆ

ಎಂದು ನಿಶ್ಚಯಿಸಿದ- ಮನದಲ್ಲಿಯೇ ಅನತಿ ದೂರದಲ್ಲಿ ಆ ಮಹಾರಾಜನ ಕಣ್ಣಿಗೆ ತೀರ್ಥ ಒಂದು ಗೋಚರಿಸಿತು. ಆ ತೀರ್ಥದ ದಂಡೆಯ ಮೇಲೆ, ಆಲದಮರವೂ ಕಾಣಿಸಿತು. ಮಹಾರಾಜ ಆಲೋಚಿಸಿದ. 'ಭಗವಂತನೇ ನಿರ್ಮಿಸಿದ ಇಂದ್ರನೀಲಮಣಿಯ ಆ ವಿಷ್ಣುವಿಗ್ರಹವನ್ನು ಭಗವಂತನು ಇಲ್ಲಿಯೇ ಮರೆಮಾಡಿರಬಹುದು. ಏಕೆಂದರೆ, ಇಲ್ಲಿ ಬೇರೆ ವಿಗ್ರಹವು ಯಾವುದೂ ಕಾಣುತ್ತಿಲ್ಲ. ಇಲ್ಲಿನ ದೇವಾಲಯದ ಪರಿಸರ ನೋಡಿದರೆ, ಆ ಪುರುಷೋತ್ತಮ ವಿಗ್ರಹವು ಇಲ್ಲಿಯೇ ಇದ್ದಿರಬಹುದೆಂದು ಭಾಸವಾಗುತ್ತಿದೆ. ಸತ್ಯ ಸಂಕಲ್ಪನಾದ ಆ ಜಗದೀಶ್ವರನು ನನಗೆ ಪ್ರತ್ಯಕ್ಷವಾಗುವಂತೆ ಅವನನ್ನು ಒಲಿಸಿಕೊಳ್ಳಲು ತಪಾಚರಣೆಗೆ ಇದೇ ಯೋಗ್ಯಸ್ಥಾನ. ಇಲ್ಲಿಯೇ ಇದ್ದುಕೊಂಡು, ಉಪವಾಸ, ವ್ರತ, ಯಜ್ಞ, ದಾನ, ತಪಸ್ಸು, ಹೋಮ, ಹವನ, ಪೂಜೆ ಮುಂತಾದ ಶಾಸ್ತ್ರೋಕ್ತ ವಿಧಿಗಳಿಂದ ಭಗವಂತನನ್ನು ಆರಾಧಿಸುವೆ. ಇತರ ವಿಷಯಗಳಿಗೆ ನನ್ನ ಮನಸ್ಸು ಹರಿಯದಂತೆ ಮನಸ್ಸನ್ನು ಭಗವಂತನಲ್ಲಿಯೇ ಕೇಂದ್ರೀಕರಿಸುವೆ. ವಿಷ್ಣುವಿಗೆ ಇಲ್ಲಿಯೇ ಆಲಯ ಒಂದನ್ನು ನಿರ್ಮಿಸುವೆ-ಎಂದು ಆಲೋಚಿಸಿದ ಆ ಇಂದ್ರದ್ಯುಮ್ನ ಮಹಾರಾಜ.

**ಬ್ರಹ್ಮ:-** ಮುನಿಗಳೇ, ಮನದಲ್ಲಿ ಈ ಸದ್ವಿಚಾರ ಮಿಂಚಿದುದೇ ತಡ, ಜ್ಯೋತಿಷ್ಯರನ್ನು ಕರೆಯಿಸಿಯೇ ಬಿಟ್ಟ ಆ ಮಹಾರಾಜ. ಭಗವನ್ಮಂದಿರ ನಿರ್ಮಾಣಕ್ಕೆ ಶುಭಮುಹೂರ್ತವನ್ನು ಆಯ್ದು ತಿಳಿಸಬೇಕೆಂದು ಅವರನ್ನು ವಿನಂತಿಸಿಕೊಂಡ. ಜ್ಯೋತಿರ್ವಿದರು ನಿಗದಿಪಡಿಸಿದ ಸುಮುಹೂರ್ತದಲ್ಲಿ, ವೇದವಿದ್ಯಾಪಾರಂಗತರು, ವಾಸ್ತುವಿದ್ಯಾವಿದರು, ಕಟ್ಟಡ ಕಾರ್ಯಗಳಲ್ಲಿ ಕುಶಲರು, ಮಂತ್ರಿಗಳು ಮುಂತಾದವರನ್ನೆಲ್ಲ ಬರಮಾಡಿಕೊಂಡ ಅವರ ಸಮ್ಮುಖದಲ್ಲಿ ದೇವಾಲಯ ನಿರ್ಮಾಣಕ್ಕೆ ಸಂಕಲ್ಪಮಾಡಿ, ಅರ್ಘ್ಯ ಕೊಟ್ಟ. ಆಗ ವಂದಿಮಾಗಧರು ಜಯಕಾರಮಾಡಿದರು. ವಾದ್ಯಗಾರರು ನಾನಾ ವಾದ್ಯಗಳನ್ನು ನುಡಿಸಿದರು. ಬ್ರಾಹ್ಮಣರು ವೇದಘೋಷ ಮಾಡಿದರು. ಗಾಯಕರು ಇಂಪಾಗಿ ಹಾಡಿದರು. ಸುಮಂಗಲೆಯರು ಮಂಗಲದೀಪ ಬೆಳಗಿದರು. ಇಂತಹ ವಿಜೃಂಭಣೆಯೊಡನೆ ಮಹಾರಾಜನು ಶ್ರದ್ಧೆಯಿಂದ ಹೂವು, ಅರಳು, ಅಕ್ಷತೆ, ಗಂಧ, ಪೂರ್ಣಕುಂಭ ಇವುಗಳಿಂದ ಪರಮಾತ್ಮನಿಗೆ ಅರ್ಘ್ಯ ಸಮರ್ಪಿಸಿ ದೇವಾಲಯದ ಪ್ರತಿಷ್ಠೆಗಾಗಿ ಅಡಿಗಲ್ಲು ಸಮಾರಂಭ ನೆರವೇರಿಸಿದ. ಇದಾದ ನಂತರ ಇಂದ್ರದ್ಯುಮ್ನನು ಶೂರರಾದ ಕಲಿಂಗ, ಕೋಸಲ, ಉತ್ಕಲ ದೇಶದ ರಾಜರುಗಳನ್ನು ಬಳಿಗೆ ಕರೆಯಿಸಿದ. ಅವರನ್ನು ಕುರಿತು ಇಂತು ನುಡಿದ- ''ರಾಜಕುಮಾರರೆ, ನೀವು ಮೂವರೂ ದೇವಾಲಯಕ್ಕೆ ಬೇಕಾದ ಕಲ್ಲುಗಳನ್ನು ಮತ್ತು ಓರ್ವ ಶಿಲ್ಪಜ್ಞನನ್ನು ಕರೆದುಕೊಂಡು ಬನ್ನಿರಿ. ಉತ್ತಮ ಕಲ್ಲುಗಳಿಗೋಸ್ಕರ ವಿಶಾಲವಾದ ವಿಂಧ್ಯಗಿರಿ ಎಡಗೆ ನಡೆಯಿರಿ. ಅಲ್ಲಿ ದೊಡ್ಡದೊಡ್ಡ ಕಲ್ಲಿನ ಗುಹೆಗಳಿವೆ. ಆ ಗುಹೆಗಳಿಂದ ಕಲ್ಲುಗಳನ್ನು ಒಡೆದು ಹಡಗುಗಳಲ್ಲಿ, ಗಾಡಿಗಳಲ್ಲಿ, ಇಲ್ಲಿಗೆ ತರಿಸಿ, ವಿಲಂಬವಾಗ ಕೂಡದು'' ಎಂದು ನುಡಿದ.

ಹೀಗೆ ಆ ರಾಜರಿಗೆ ಶಿಲೆಯನ್ನು ತರಲು ಹೇಳಿಕಳುಹಿಸಿದ ಇಂದ್ರದ್ಯುಮ್ನನು ತನ್ನ ಮಂತ್ರಿಗಳನ್ನು ಪುರೋಹಿತರನ್ನು ಬರಲು ಆಜ್ಞಾಪಿಸಿದ. ಅವರಿಗೆ ಹೀಗೆ ಹೇಳಿದ. ''ಭೂಮಿಯಲ್ಲಿರುವ ರಾಜರೆಲ್ಲರ ಬಳಿಗೂ ದೂತರನ್ನು ಕಳುಹಿಸಿದ. ಆ ರಾಜರುಗಳಿಗೆ ನನ್ನ ಆಜ್ಞೆಯನ್ನು ಈ ಕ್ರಮದಲ್ಲಿ ತಿಳಿಸಿ. 'ಎಲ್ಲೈ ರಾಜರೆ ಇಂದ್ರದ್ಯುಮ್ನ ಚಕ್ರವರ್ತಿಯ ಅಪ್ಪಣೆಯಾಗಿದೆ. ನಿಮ್ಮ ಆನೆ, ಕುದುರೆ, ರಥ, ಕಾಲಾಳು, ಸೈನ್ಯ, ಮಂತ್ರಿ, ಪುರೋಹಿತ ಎಲ್ಲರಿಂದ ಕೂಡಿಕೊಂಡು, ಪುರುಷೋತ್ತಮ ಕ್ಷೇತ್ರದಲ್ಲಿನ ಚಕ್ರವರ್ತಿಯ ಬಳಿಗೆ ಬರತಕ್ಕದ್ದು.'

ರಾಜನ ಅಪ್ಪಣೆಯನ್ನು ಪಡೆದ ದೂತರೆಲ್ಲರೂ, ಬೇರೆಬೇರೆ ರಾಜರ ಬಳಿಗೆ ಹೋಗಿ, ಇಂದ್ರದ್ಯುಮ್ನನ ಆದೇಶವನ್ನು ತಲುಪಿಸಿದರು. ಆ ರಾಜರೆಲ್ಲ ಇಂದ್ರದ್ಯುಮ್ನನ ಆದೇಶವನ್ನು ಶಿರಸಾವಹಿಸಿ ತಮ್ಮ ತಮ್ಮ ವಾಹನಗಳ ಮೇಲೆ ಹೇರಳ ಕಪ್ಪ ಕಾಣಿಕೆಗಳನ್ನು ಹೇರಿಕೊಂಡು, ಇಂದ್ರದ್ಯುಮ್ನನಲ್ಲಿಗೆ ಆಗಮಿಸಿದರು. ಈ ರಾಜರುಗಳಲ್ಲಿ ಪೂರ್ವ ದಿಕ್ಕಿನಲ್ಲಿರುವ ರಾಜರು, ದಕ್ಷಿಣ, ಪಶ್ಚಿಮ ದಿಕ್ಕಿನಲ್ಲಿರುವ ರಾಜರು, ಉತ್ತರ ದೇಶದಲ್ಲಿನ ರಾಜರು, ದೂರದಲ್ಲಿ ಭೂಮಿಯ ಅಂಚಿಗಿರುವವರು, ಬೆಟ್ಟಗಳನ್ನು ಆಳುವವರು, ದ್ವೀಪಗಳನ್ನು ಆಳುವರು ಮುಖ್ಯರಾಗಿದ್ದಾರೆ. ತಮ್ಮ ಮಂತ್ರಿ, ಪುರೋಹಿತ, ಪರಿವಾರ ವರ್ಗದೊಡನೆ, ಸಮಯಕ್ಕೆ ಸರಿಯಾಗಿ ಆಗಮಿಸಿದ ಆ ರಾಜರುಗಳ ತಂಡವನ್ನು ನೋಡಿ, ಇಂದ್ರದ್ಯುಮ್ನನಿಗೆ ಸಂತಸವೆನಿಸಿತು. ಆ ರಾಜರನ್ನು ಕುರಿತು ನುಡಿದನು- ''ರಾಜ ಶ್ರೇಷ್ಠರೆ, ನಾನು ಕೆಲ ಮಾತುಗಳನ್ನು ಹೇಳುತ್ತೇನೆ ಕೇಳಿರಿ. ನಾನು ಈ ಕ್ಷೇತ್ರದಲ್ಲಿ ಒಂದು ಅಶ್ವಮೇಧಯಾಗ ಮತ್ತು ಒಂದು ದೇವಾಲಯ ನಿರ್ಮಾಣ ಎರಡನ್ನೂ ಮಾಡಬೇಕೆಂದಿದ್ದೇನೆ. ಇವುಗಳನ್ನು ಇಲ್ಲಿ ಮಾಡುವದು ಸಾಧ್ಯವೆ? ಸಾಧ್ಯವಾಗಿದ್ದರೆ ಹೇಗೆ ಸಾಧ್ಯ ಎಂಬುವದನ್ನು ಸರಿಯಾಗಿ ಪರ್ಯಾಲೋಚಿಸಲು ನಿಮ್ಮನ್ನು ಕರೆಯಿಸಿದ್ದೇನೆ. ನೀವು ಸಹಾಯಕರಾಗಿದ್ದರೆ ಮಾತ್ರ ಈ ಕಾರ್ಯವನ್ನು ಮಾಡಲು ಶಕ್ಯ''- ಎಂದು ಅಂದನು.

ಚಕ್ರವರ್ತಿಯ ಈ ಮಾತುಗಳಿಂದ ಬಂದಿದ್ದ ರಾಜರುಗಳು ಸಂತೋಷಗೊಂಡರು. ತಾವು ತಂದಿದ್ದ ಕಪ್ಪುಕಾಣಿಕೆಗಳನ್ನು ಚಿನ್ನ, ಮಣಿ, ಮುತ್ತು, ರತ್ನಗಂಬಳಿ, ಪೀತಾಂಬರ, ಮೊದಲಾದ ರೂಪದಲ್ಲಿ ಮಹಾರಾಜನಿಗೆ ಸಮರ್ಪಿಸಿದರು. ಕೆಲವರು ವಜ್ರ, ವೈಡೂರ್ಯ, ಮಾಣಿಕ್ಯ, ಪದ್ಮರಾಗ, ನೀಲಮಣಿ, ರಥ, ಹೆಣ್ಣಾನೆ, ಧನ, ಇವೆಲ್ಲವುಗಳನ್ನು ರಾಜರ ಎದುರು ಸಂತೃಪ್ತಭಾವದಿಂದ ಸಮರ್ಪಿಸಿದರು. ಕೆಲರಾಜರು, ಅಗಣಿತ ದ್ರವ್ಯಗಳನ್ನು, ಮತ್ತೆ ಕೆಲವರು ಭತ್ತ, ಜವೆಗೋಧಿ, ಅಕ್ಕಿ, ಉದ್ದು, ಹೆಸರು, ಎಳ್ಳು, ಬಿಳಿಸಾಸಿವೆ, ಕಡಲೆ, ಗೋದಿ, ಕಾಡುಕಡಲೆ, ಮಧುರವಾದ ಧಾನ್ಯ, ನವಣೆ, ಹುರಳಿ, ಮುಂತಾದ ಧಾನ್ಯಗಳನ್ನು ಪರ್ವತಾಕಾರದಲ್ಲಿ ಸುರಿಸಿದರು. ಮತ್ತೆ ಕೆಲವರು ಗ್ರಾಮಗಳಲ್ಲಿ ಬೆಳೆಯುತ್ತಿದ್ದ ನಾನಾ ಬಗೆಯ ಭಕ್ಷ್ಯ, ಭೋಜ್ಯಗಳನ್ನು ಸಹಸ್ರ ಸಹಸ್ರ ಕೊಡಗಳಲ್ಲಿ ತುಂಬಿದ ಹಾಲನ್ನು, ಮೊಸರು, ತುಪ್ಪ ಮುಂತಾದವುಗಳನ್ನು ಸಮರ್ಪಿಸಿದರು. ಹೀಗೆ ಯಜ್ಞಕ್ಕೆ ಬೇಕಾದ ಸಾಮಗ್ರಿಗಳೆಲ್ಲ ಸಿದ್ಧವಾದವು. ಯಜ್ಞಕರ್ಮದಲ್ಲಿ ಕೋವಿದರೂ, ಶಾಸ್ತ್ರಬಲ್ಲವರೂ, ಕರ್ಮಠರೂ ಆದ ಮಹರ್ಷಿಗಳು, ದೇವರ್ಷಿಗಳು, ಬ್ರಹ್ಮಚಾರಿಗಳು, ಯತಿಗಳು, ಉಪಾಧ್ಯಾಯರು ಆಚಾರ್ಯರು, ಭಟ್ಟರು ಮೊದಲಾದ ಪ್ರಮುಖರು ನೆರೆದರು. ಇವರನ್ನೆಲ್ಲ ನೋಡಿ ಹರ್ಷ ಪುಲಕಿತನಾದ ಇಂದ್ರದ್ಯುಮ್ನನು- ''ಪುರೋಹಿತರೇ ಶಾಸ್ತ್ರಜ್ಞರಾದ ಈ ವಿದ್ವಾಂಸರನ್ನೆಲ್ಲ ಜೊತೆಗೆ ಕರೆದುಕೊಂಡು ಹೋಗಿ ಅಶ್ವಮೇಧಕ್ಕೆ ಯೋಗ್ಯವಾದ ಪ್ರದೇಶವನ್ನು ಆಯ್ಕೆ ಮಾಡಿರಿ.''- ಎಂದು ನುಡಿದ. ಪುರೋಹಿತರು ಸಂತೋಷದಿಂದ ರಾಜ ಹೇಳಿದ ಕಾರ್ಯವನ್ನು ವಿಧಿವತ್ತಾಗಿ ನೆರವೇರಿಸಿದರು. ಅನಂತರದಲ್ಲಿ ಆ ಪುರೋಹಿತರು, 'ಸ್ಥಪತಿ'ಗಳೊಡನೆ ಬ್ರಾಹ್ಮಣರನ್ನು ಮುಂದುಮಾಡಿ ಕೊಂಡು, ಯಜ್ಞಶಾಲೆಗೆ ಯೋಗ್ಯವಾದಂತಹ ಧೀವರ ಗ್ರಾಮಕ್ಕೆ ಆಗಮಿಸಿ ಅಲ್ಲಿ ವಿಶಾಲವಾದ ಯಜ್ಞಶಾಲೆಯನ್ನು ವಿಧಿವತ್ತಾಗಿ ಕಟ್ಟಿಸಿದರು. ಆ ಯಜ್ಞಶಾಲೆಯಲ್ಲಿ ನೂರಾರು ಮಹಡಿಮನೆಗಳು, ಮಣಿಮಯವಾದ ಹೊಸ್ತಿಲುಗಳು, ಚಿನ್ನ ಮತ್ತು

ರತ್ನಗಳಿಂದ ಕೆತ್ತಲ್ಪಟ್ಟ ಅಂಗಣಗಳು ಬಗೆಬಗೆಯಾಗಿ ವಿರಚಿತಗೊಂಡು ನೋಡುವವರ ಕಣ್ಣಿಗೆ ದೇವೇಂದ್ರನ ಅರಮನೆಯಂತೆ ಗೋಚರವಾದವು. ಚಿನ್ನದ ಕಂಬಗಳು, ರತ್ನಖಚಿತವಾಗಿ ಅಲಲ್ಲಿ ಸ್ಥಾಪಿತಗೊಂಡಿದ್ದವು. ಒಟ್ಟಾರೆ ಯಜ್ಞಶಾಲೆಯ ನೆಲವೆಲ್ಲ ಚಿನ್ನದಿಂದ ನಿರ್ಮಿತವಾಗಿದ್ದಿತು. ರಾಜಸ್ತ್ರೀಯರಿಗೂ, ರಾಜರಿಗೂ ವಾಸಮಾಡಲು ಅನೇಕ ಅಂತಃಪುರಗಳನ್ನು ವಿಧಿವತ್ತಾಗಿ ಅಲ್ಲಿ ನಿರ್ಮಿಸಿದ್ದರು. ನಾನಾ ದೇಶದ ರಾಜರೆಲ್ಲರೂ ಇಂದ್ರದ್ಯುಮ್ನನನ್ನು ಸಂತೋಷಗೊಳಿಸಲು ಹೇರಳವಾದ ರತ್ನಗಳನ್ನು ತೆಗೆದುಕೊಂಡು ಬಂದು ಆ ಯಜ್ಞಶಾಲೆಯನ್ನು ಅಲಂಕೃತವನ್ನಾಗಿ ಮಾಡಿದರು. ಬೇರೆಬೇರೆ ಪ್ರದೇಶಗಳಿಂದ ಸುಂದರಾಂಗಿಯರು ಅಲ್ಲಿನ ಅಲಂಕಾರದಿಂದ ಆಕರ್ಷಿತರಾಗಿ ಯಜ್ಞ ನೋಡಲು ಬಂದು ನೆರೆದರು. ಇವರೆಲ್ಲರಿಗೂ ಯಜ್ಞ ಮುಗಿಯುವವರೆಗೂ ವಾಸಮಾಡಲು, ಮಹಾರಾಜನು ಪ್ರತ್ಯೇಕ ಪ್ರತ್ಯೇಕವಾಗಿ ಅನೇಕ ವಾಸಗೃಹಗಳನ್ನು ವ್ಯವಸ್ಥೆ ಗೊಳಿಸಿದ. ಯಾಗಕ್ಕಾಗಿ ಬಂದ ಅತಿಥಿಗಳು ತಮ್ಮ ತಮ್ಮ ಶಿಬಿರಗಳಿಗೆ ಸಂಭ್ರಮದಿಂದ ಪ್ರವೇಶಿಸುತ್ತಿರುವಾಗ ಅಲ್ಲಿ ಉಂಟಾದ ಕೋಲಾಹಲ ಧ್ವನಿಯು ಸಮುದ್ರದ ಗರ್ಜನೆಯಂತೆ ಕೇಳಿಸಿತು. ನಭೋ ಮಂಡಲವನ್ನೆಲ್ಲ ವ್ಯಾಪಿಸಿತು. ಇಂದ್ರದ್ಯುಮ್ನ ರಾಜನು ಸ್ವತಃ ಬಂದು ಅತಿಥಿಗಳನ್ನು ವಿಚಾರಿಸಿ, ಅವರಿಗೆ ಊಟೋಪಚಾರದ ವ್ಯವಸ್ಥೆ, ಶಯನಾಗಾರ ಮುಂತಾದವುಗಳ ಬಗ್ಗೆ ತಿಳುವಳಿಕೆ ನೀಡಿ ತೃಪ್ತಿ ಪಡಿಸಿದ. ಊಟಕ್ಕೆ ಕುಳಿತ ಅತಿಥಿಗಳಿಗೆ ಮಹಾರಾಜ ಸ್ವಯಂ ಉಣಬಡಿಸಿದ. ಯಜ್ಞಕ್ಕೆ ಬಂದ ಬ್ರಹ್ಮಜ್ಞರಾದ ಅನೇಕ ಬ್ರಾಹ್ಮಣರನ್ನು ಮಹಾರಾಜನು ವಿನೀತನಾಗಿ ಎದುರುಗೊಂಡ. ಯೋಗಕ್ಷೇಮ ವಿಚಾರಿಸಿ, ಅವರವರಿಗೆ ವಾಸಯೋಗ್ಯ ವಾದ ಮನೆಗಳನ್ನು ತೋರಿಸಿ ಸಕಲ ವ್ಯವಸ್ಥೆಗಳನ್ನು ಸ್ವಯಂ ನಿರ್ವಹಿಸಿದ. ಶಿಲ್ಪಿಗಳು ಯಜ್ಞಶಾಲೆಯನ್ನು ವಿಧಿವತ್ತಾಗಿ ಕಟ್ಟಿ ರಾಜನಿಗೆ, ತಮ್ಮ ಕರ್ತವ್ಯವನ್ನು ಸಾಂಗವಾಗಿ ನೆರವೇರಿಸಿದ್ದರು. ಉಳಿದ ಕಾರ್ಮಿಕರು ಸಹ ತಮ್ಮತಮ್ಮ ಕೆಲಸಗಳನ್ನು ಸರಿಯಾಗಿ ಮಾಡಿ ಮಹಾರಾಜನೆದುರು ಬಂದು ಮಾಡಿದ ಕಾರ್ಯಗಳನ್ನು ನಿವೇದಿಸಿದರು. ಎಲ್ಲರೂ ಅವರವರಿಗೆ ವಹಿಸಿದ ಕಾರ್ಯಗಳನ್ನು ಚಾಚೂ ತಪ್ಪದೆ ಸಮಯಕ್ಕೆ ಸರಿಯಾಗಿ ಪೂರೈಸಿದ್ದುದನ್ನುಕಂಡು, ಮುದಗೊಂಡ ಆ ಮಹಾರಾಜ. ಆ ಯಜ್ಞಕ್ಕೆ ಆಗಮಿಸಿದ ನ್ಯಾಯ, ವ್ಯಾಕರಣ, ವೇದಾಂತ, ಮೀಮಾಂಸೆ ಮೊದಲಾದ ವಿಷಯಗಳ ವಿದ್ವಾಂಸರು ತಮ್ಮ ತಮ್ಮಲ್ಲಿ ಚರ್ಚಾಗೋಷ್ಠಿಗಳನ್ನು ಏರ್ಪಡಿಸಿ ವಾಕ್ಯಾರ್ಥ ವಿನೋದ ಪ್ರಸಂಗಗಳಿಂದ ಕಾಲಕಳೆಯುತ್ತಿದ್ದುದು, ಅಲ್ಲಿನ ಜ್ಞಾನವಾಹಿಗಳ ಪಾಲಿಗೆ ಅಪೂರ್ವ ಅವಕಾಶವಾಗಿತ್ತು. ನರ್ತನ, ಸಂಗೀತ, ಆಟ ಮೊದಲಾದವುಗಳಲ್ಲಿ ಕುಶಲರಾದವರು ಗುಂಪುಗೂಡಿ, ತಮ್ಮ ತಮ್ಮ ಕಲಾಪ್ರೌಢಿಮೆಯನ್ನು ಮೆರೆಯುತ್ತಿದ್ದುದು, ಅಲ್ಲಿನ ಇನ್ನೊಂದು ಆಕರ್ಷಕ ಸಂಗತಿ ಎನಿಸಿತ್ತು. ಅಲ್ಲಿನ ಚಿಕ್ಕಪುಟ್ಟ ಪದಾರ್ಥಗಳೂ ಸಹ ಚಿನ್ನದ ಸಂಸರ್ಗದ ಮೆರಗುಪಡೆದು ಮಿರಮಿರನೆ ಮಿಂಚುತ್ತಿದ್ದವು. ಯೂಪಸ್ತಂಭಗಳನ್ನು ಸಹ ಶಾಸ್ತ್ರೋಕ್ತವಾದ ಮರಗಳಲ್ಲಿ ನಿರ್ಮಿಸಿದ ಮೇಲೆ ಚಿನ್ನದ ತಗಡಿನ ಹೊದಿಕೆಯನ್ನು ಹೊದಿಸಿದರು. ಭೂಮಿಯಲ್ಲಿನ ಚರಾಚರ ಪದಾರ್ಥಗಳ ಸಾರವೆಲ್ಲವೂ ಆ ಯಜ್ಞಕಾರ್ಯಕ್ಕಾಗಿ ತರಲ್ಪಟ್ಟಿತ್ತು. ಪ್ರತಿನಿತ್ಯ ನಗಾರಿಯು ಧ್ವನಿಗೈದು, ಇಂದ್ರದ್ಯುಮ್ನ ರಾಜನ ವೈಭವವನ್ನು ಸಾರುತ್ತಿತ್ತು. ಅನ್ನದ ರಾಶಿ ಬೆಟ್ಟದಾಕಾರ. ಮೊಸರು ಹಾಲುಗಳು ಕಾಲುವೆಯೋಪಾದಿಯಲ್ಲಿ, ತುಪ್ಪ, ಜೇನು, ಪಾನಕ ಮೊದಲಾದವುಗಳು ಜಲಾಶಯದಾಕಾರದ ಪಾತ್ರಗಳಲ್ಲಿ ಸಂಗ್ರಹಿತವಾಗಿದ್ದವು.

ಈ ಅತ್ಯದ್ಭುತವಾದ ಯಾಗವನ್ನು ನೋಡಲು ಜಂಬೂದ್ವೀಪದ ಜನರೆಲ್ಲರೂ ಆಗಮಿಸಿದ್ದರು. ರಾಜಮಹಾರಾಜರು ಮಾತ್ರ ಸೇವಿಸುವಂತಹ ನಾನಾಬಗೆಯ ಅಪರೂಪದ ಪೇಯಗಳನ್ನು ಮಹಾರಾಜ ಎಲ್ಲರಿಗೂ ಸಮೃದ್ಧವಾಗಿ ಕುಡಿಸಿ ತಣಿಸಿದ. ಊಟಕ್ಕೆ ಬಡಿಸಲು ರತ್ನಕುಂಡಲಗಳನ್ನು ಧರಿಸಿದ ಸಾವಿರಾರು ಪುರುಷಶ್ರೇಷ್ಠರನ್ನು ಗೊತ್ತುಮಾಡಿದ್ದ. ಅವರು ಭಕ್ಷ್ಯ, ಭೋಜ್ಯಗಳ, ಬಂಗಾರದಪಾತ್ರೆಗಳನ್ನು ಕೈಯಲ್ಲಿ ಹಿಡಿದು ಅವುಗಳ ಹೆಸರುಗಳನ್ನು ಹೇಳುತ್ತ ಬ್ರಾಹ್ಮಣರಿಗೆ ಯಥೇಚ್ಛವಾಗಿ ಉಣಬಡಿಸಿದರು. ನಾನಾ ದೇಶಗಳಿಂದ ಆಗಮಿಸಿದ ಕಲಾ ಕುಶಲರನ್ನೂ, ಗಾನ ಕೋವಿದರನ್ನೂ ವೇದವಿದ್ಯಾವಿದರನ್ನೂ ಮಹಾರಾಜನು ಸತ್ಕರಿಸಿ, ಸಂತೋಷಪಡಿಸಿದ.

ಇಂದ್ರದ್ಯುಮ್ನ ಮಹಾರಾಜನಿಗೆ ಸಾವಿರದಮೂರುಪತ್ನಿಯರು. ಇವರೆಲ್ಲರೂ ಸಹ ಸ್ವರ್ಗಲೋಕದ ಅಪ್ಸರೆಯರಂತಹ ಸೌಂದರ್ಯ ಉಳ್ಳವರು. ಸೌಂದರ್ಯಕ್ಕಿಂತ ಮಿಗಿಲಾಗಿ ಶೀಲ ಕಾಪಾಡಿಕೊಂಡವರು. ಶೀಲದೊಡನೆ ಸ್ನೇಹ ಬೆಳೆಸಿದ ಸಾತ್ವಿಕ ಗುಣ ಸಂಪನ್ನರು. ಹುಣ್ಣಿಮೆಯ ಚಂದ್ರನಂತೆ ಮುಗ್ಧ ಮುಖಮಂಡಲದಿಂದ ಮಹಾರಾಜನನ್ನು ಸಂತೋಷಗೊಳಿಸುವದರಲ್ಲಿ ಸಂತಸ ಕಾಣುವವರು. ಇಂತಹ ಈ ಮಹಾರಾಜನ ಮಡದಿಯರೆಲ್ಲ ಬಗೆ ಬಗೆಯ ರತ್ನಹಾರಗಳನ್ನು ಧರಿಸಿ, ಚಿತ್ರ ವಿಚಿತ್ರವಾದ ವಸ್ತ್ರಗಳಿಂದ ಅಲಂಕೃತರಾಗಿ, ಯಜ್ಞಕ್ಕೆ ಬಂದಿದ್ದ ಮಹಾರಾಣಿಯರನ್ನು ಉಪಚರಿಸುತ್ತ, ಯಜ್ಞ ಶಾಲೆಯ ಒಂದು ಭಾಗದಲ್ಲಿ ಸಂಚರಿಸುತ್ತಿದ್ದರು. ಯಜ್ಞಶಾಲೆಯ ಒಂದು ಭಾಗದಲ್ಲಿ ಸಾಮಂತ ರಾಜರು ತಂದು ನಿಲ್ಲಿಸಿದ ಉದ್ದುದ್ದ ದಂತಗಳುಳ್ಳ ಬಲಿಷ್ಠ ಮದ್ದಾನೆಗಳು ಅನೇಕ ಸಂಖ್ಯೆಯಲ್ಲಿ ಸಾಲುಸಾಲಾಗಿ ನಿಂತಿದ್ದವು ಮಾರುತನ ಜೊತೆಗೆ ವೇಗದಲ್ಲಿ ಸ್ಪರ್ಧಿಗಿಳಿಯಬಲ್ಲ ಜಾತ್ಯಾಶ್ವಗಳು ಒಂದೆಡೆ ಸಾಲಾಗಿ ನಿಂತಿದ್ದವು. ಅವುಗಳ ಶರೀರವೆಲ್ಲ ಶುಭ್ರಶ್ವೇತ, ಕಿವಿ ಮಾತ್ರ ಕಪ್ಪು. ಈ ಅಶ್ವಗಳನ್ನು ಅಲಂಕರಿಸಿದ್ದರು. ದೇವಕುಮಾರರಂತೆ ತೇಜಸ್ವಿಗಳಾದ ಅಸಂಖ್ಯ ಕಾಲಾಳುಗಳು ಬಗೆಬಗೆಯ ಆಯುಧಗಳನ್ನು ಧರಿಸಿ, ವರ್ಣರಂಜಿತ ಸೊಂಟಪಟ್ಟಿಗಳನ್ನು ಕಟ್ಟಿಕೊಂಡು, ಶಿಸ್ತಿನಿಂದ ನಿಂತಿದ್ದರು.

ಹೀಗೆ ಸಜ್ಜುಗೊಂಡ ಯಜ್ಞದ ಸಾಮಗ್ರಿ ಸಮೂಹವನ್ನು ಸಮೀಪಿಸಿದ ಇಂದ್ರದ್ಯುಮ್ನನು ಹರ್ಷದುಂಬಿದ ಧ್ವನಿಯಲ್ಲಿ ಹೀಗೆ ನುಡಿದ.

**ಇಂದ್ರದ್ಯುಮ್ನ:-** ಅಶ್ವಮೇಧ ಯಾಗಕ್ಕೆ ಯೋಗ್ಯವಾದ ಸಕಲ ಲಕ್ಷಣೋಪೇತವಾದ ಅಶ್ವ ಒಂದನ್ನು ಆರಿಸಿ ತನ್ನಿರಿ. ದೇಶ ವಿದೇಶಗಳಲ್ಲಿ ಸ್ವಚ್ಛಂದವಾಗಿ ಅದು ಸಂಚರಿಸುವಂತೆ ಬಿಟ್ಟುಬಿಡಿ. ಅದರ ಹಿಂದೆ ರಾಜಪುತ್ರರೆಲ್ಲರೂ ಅದನ್ನು ರಕ್ಷಿಸುತ್ತ ನಡೆಯಲಿ.

ಇತ್ತ ವಿದ್ವಾಂಸರೂ, ಧರ್ಮವೇತ್ತರೂ ಆದವರು ಹೋಮಹವನಾದಿ ಧಾರ್ಮಿಕ ವಿಧಿಗಳನ್ನು ಆರಂಭಿಸಿರಿ. ಕರಿಯ ಆಡು, ಕೃಷ್ಣಸಾರ, ಕೋಣ, ಹಸು, ಎತ್ತು ಇವುಗಳನ್ನು ಕಾಯುವ ಪಶುಪಾಲಕರನ್ನು ಸಜ್ಜುಗೊಳಿಸಿರಿ. ಇಷ್ಟಿಗಳು ಪ್ರಾರಂಭವಾಗಲಿ. ಬ್ರಾಹ್ಮಣರಿಗೆ ಅಪೇಕ್ಷಿತವಾದ ಪದಾರ್ಥಗಳನ್ನು ಆಯಾ ಕಾಲಗಳಲ್ಲಿ ದಾನಮಾಡಿರಿ. ರತ್ನ, ಗ್ರಾಮ, ನಗರ, ಸಂಪತ್‌ಸಮೃದ್ಧ ದೇಶ, ಮತ್ತೇನನ್ನು ಬೇಡುತ್ತಾರೋ ಆಯಾ ಪದಾರ್ಥಗಳನ್ನೆಲ್ಲ ಅವುಗಳನ್ನು ಸ್ವೀಕರಿಸಲು ಅರ್ಹರಾದ ಅರ್ಥಿಗಳಿಗೆ ಸ್ಥಳದಲ್ಲಿಯೇ ದಾನನೀಡಿ, ಆ ಪದಾರ್ಥಗಳನ್ನು ಸಾರ್ಥಕ ಪಡಿಸಿರಿ. ಒಂದು ಮಾತನ್ನು ನೆನಪಿಡಿ. ಯಾರಿಗೂ ಯಾವದಕ್ಕೂ ಇಲ್ಲವೆನ್ನತಕ್ಕದ್ದಲ್ಲ. ನನ್ನ ಈ ಯಜ್ಞದಿಂದ ಆದಿಪುರುಷನಾದ ಶ್ರೀಮನ್

ನಾರಾಯಣನು ಸಂತೃಪ್ತನಾಗಿ, ನನಗೆ ಇಲ್ಲಿ ದರ್ಶನ ನೀಡಬೇಕು. ಹಾಗೆ ನೀವು ಯಜ್ಞವನ್ನು ನೆರವೇರಿಸಲು ಅನುವು ಮಾಡಬೇಕು ಎಂದು ಎಲ್ಲರಲ್ಲೂ ಕೇಳಿಕೊಂಡ.

ಕಾರ್ಯಕರ್ತರು ರಾಜನ ಈ ಕರೆಗೆ ಓಗೊಟ್ಟು ಮನಃಪೂರ್ಣವಾಗಿ ತಮ್ಮ ತಮ್ಮ ಕರ್ತವ್ಯ ನಿರ್ವಹಿಸಿದರು. ಈ ಯಜ್ಞದಲ್ಲಿ ಮಹಾರಾಜನು ಎಲ್ಲ ಪ್ರಕಾರದ ವಿದ್ಯೆಗಳಿಗೆ ವಿಶೇಷ ಪ್ರೋತ್ಸಾಹವನ್ನು ನೀಡಿದ. ಆಯಾ ವಿದ್ಯೆಗಳಲ್ಲಿ ತಜ್ಞರಾದವರಿಗೆ ಮತ್ತು ಆಯಾ ವಿದ್ಯೆಗಳನ್ನು ಉಪದೇಶಿಸುತ್ತಿರುವವರಿಗೆ, ಶ್ರಮಪಟ್ಟು ಕಲಿಯುತ್ತಿರುವವರಿಗೆ ಚಿನ್ನದ ರಾಶಿ ರಾಶಿಯನ್ನೇ ದಾನ ಮಾಡಿದ. ಕೋಟಿ ಕೋಟಿ ಸಂಖ್ಯೆಯಲ್ಲಿ ಆಭರಣಗಳನ್ನು ನೀಡಿದ. ಅವಶ್ಯವಿರುವವರಿಗೆ ಆನೆ, ಕುದುರೆ, ಒಂಟೆ, ಎತ್ತು, ಹಸು ಮುಂತಾದವುಗಳನ್ನು ದಾನ ಮಾಡಿದ. ಅವನು ದಾನಮಾಡಿದ ಆನೆಗಳ ಸಂಖ್ಯೆ ಒಂದು ಲಕ್ಷ. ಅವನು ದಾನ ಮಾಡಿದ ಕುದುರೆಗಳು ಹತ್ತುಸಾವಿರ. ಎತ್ತುಗಳನ್ನಂತೂ ಅರ್ಬುದ ಸಂಖ್ಯೆಯಲ್ಲಿ ವಿತರಿಸಿದ. ಶ್ರೇಷ್ಠ ಜಾತಿಯ ಹಸುಗಳನ್ನು ವೇದಜ್ಞರಾದ ಸಹಸ್ರ ಸಹಸ್ರ ಬ್ರಾಹ್ಮಣರಿಗೆ ಎಷ್ಟು ಸಂಖ್ಯೆಯಲ್ಲಿ ದಾನ ಮಾಡಿದನೋ ಅದಕ್ಕೆ ಲೆಕ್ಕವೇ ಇಲ್ಲ. ಬಗೆಬಗೆಯ ವಸ್ತ್ರಗಳನ್ನು ಬೇಕಾದಷ್ಟು ದಾನಮಾಡಿದ. ಯುವಕರಾದ ಬ್ರಾಹ್ಮಣರಿಗೆ, ವಿವಾಹೇಚ್ಛುಗಳಾದ ಸುಂದರಿಯರಾದ ಐನೂರು ಕನ್ಯೆಯರನ್ನು ಸಾಲಂಕೃತರನ್ನಾಗಿಸಿ ದಾನಮಾಡಿದ. ವಿವಾಹ ಭೋಜನ ಸಮಾರಂಭದಲ್ಲಿ ಹೋಳಿಗೆ, ಚರೋಟಿ, ಫೇಣಿ, ಲಾಡು ಮುಂತಾದ ದೊಡ್ಡ ದೊಡ್ಡ ತಿಂಡಿಗಳನ್ನು, ರುಚಿರುಚಿಯಾದ ಪಕ್ವಾನ್ನಗಳನ್ನು; ಹಪ್ಪಳ ಸಂಡಿಗೆ ಮುಂತಾದ ವ್ಯಂಜನ ಪದಾರ್ಥಗಳನ್ನು ಸಾಕಾಗುವಷ್ಟು ಉಣಬಡಿಸಿದರು. ತುಪ್ಪದ ಪ್ರವಾಹವೇ ಅಲ್ಲಿ ಹರಿಯಿತು. ಈ ಯಜ್ಞ ಮಹೋತ್ಸವದಲ್ಲಿ ಪಾಲ್ಗೊಂಡವರೆಲ್ಲ ದೃಷ್ಟರು, ಉಂಡವರೆಲ್ಲ ಪುಷ್ಟರು, ಆಗಮಿಸಿದವರೆಲ್ಲ ತುಷ್ಟರು, ಅಷ್ಟು ದೊಡ್ಡ ಯಜ್ಞಮಂಟಪದಲ್ಲಿ ದುಃಖದ ಲವಲೇಶವಾದರೂ ಕಾಣಲಿಲ್ಲ. ಜನಗಳಿಗೆ ರೋಗ ಮೊದಲಾದ ಬಾಧೆಗಳು ಅಲ್ಲಿ ಇರುವಷ್ಟುಕಾಲ ಯಾವ ಕ್ಷಣದಲ್ಲೂ ಪೀಡಿಸಲಿಲ್ಲ. ಸರ್ವರೂ ಹಸನ್ಮುಖಿಗಳಾಗಿ ಪರಸ್ಪರ ಹೃದಯದುಂಬಿ ಸುಭಾಷಿಸುತ್ತ, ಕ್ಷಣಕ್ಷಣಕ್ಕೂ ವೃದ್ಧಿಸುತ್ತಲಿರುವ ಆನಂದವನ್ನು ಅನುಭವಿಸುತ್ತ ಹೀಗೆ ಉದ್ಗಾರ ತೆಗೆದರು- 'ಇಂತಹ ಯಜ್ಞ ಹಿಂದೆಂದೂ ನಡೆದಿರಲಿಲ್ಲ. ಇಷ್ಟು ವ್ಯವಸ್ಥೆ ಯಾವ ಯಜ್ಞದಲ್ಲೂ ಕಂಡುಬರಲು ಶಕ್ಯವಿಲ್ಲ' ಹೀಗೆ ಇಂದ್ರದ್ಯುಮ್ನ ಮಹಾರಾಜನು ಸಂಭ್ರಮದಿಂದ ಅಶ್ವಮೇಧಯಾಗವನ್ನು ಮಾಡಿ ಮುಗಿಸಿದ.

**ಮುನಿಗಳು:-** ಬ್ರಹ್ಮನ್, ಇಂದ್ರದ್ಯುಮ್ನ ಮಹಾರಾಜ ಅಲ್ಲಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿದನಷ್ಟೆ! ಆ ವಿಗ್ರಹಗಳನ್ನು ಹೇಗೆ ನಿರ್ಮಿಸಿದ? ಭಗವಂತ ಅವನಿಗೆ ಸಂತುಷ್ಟನಾದ ಬಗೆ ಎಂತು? ಇದನ್ನೆಲ್ಲವನ್ನೂ ನಮಗೆ ವಿಸ್ತೃತವಾಗಿ ನಿರೂಪಿಸಿರಿ.

**ಬ್ರಹ್ಮ:-** ಮುನಿಶ್ರೇಷ್ಠರೇ, ಇಂದ್ರದ್ಯುಮ್ನ ಮಹಾರಾಜನು ತಾನು ನಿರ್ಮಿಸಿದ ದೇವಾಲಯದಲ್ಲಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ ವೃತ್ತಾಂತವನ್ನು ನಿಮಗೆ ನಿರೂಪಿಸುವೆ, ಕೇಳಿ.

ಪೂರ್ವದಲ್ಲಿ ಪ್ರೋಕ್ತವಾದಂತೆ, ಅಶ್ವಮೇಧಯಾಗವು ಮಹಾವೈಭವದಿಂದ ನಡೆಯುತ್ತಿದ್ದಿತು. ಬಗೆಬಗೆಯ ಶಿಲೆಗಳಿಂದ, ದೊಡ್ಡದೊಡ್ಡ ಶಿಲ್ಪಜ್ಞರಿಂದ ಮಹಾದೇವಾಲಯದ ನಿರ್ಮಾಣವೂ ಆಯಿತು. ಆದರೆ ಅದರಲ್ಲಿ ಪ್ರತಿಷ್ಠಾಪಿಸಬೇಕಾದ ವಿಗ್ರಹದ ಸ್ವರೂಪದ ಬಗ್ಗೆ ಮಹಾರಾಜನಿಗೆ ಚಿಂತೆ ತಲೆದೋರಿತು. ಆತ ಆಲೋಚಿಸಿದ- 'ನನಗೆ ಶ್ರೀಮನ್ ನಾರಾಯಣನ ಸ್ವರೂಪ ಅಜ್ಞಾತ. ಲೋಕಪಾವನನಾದ ಸೃಷ್ಟಿ, ಸ್ಥಿತಿ,

ಲಯ, ಕರ್ತೃವಾದ ನಾರಾಯಣನನ್ನು ಹೇಗೆ ಶಿಲಾಮಯವಾದ ಆಕೃತಿಯಲ್ಲಿ ವ್ಯಕ್ತಗೊಳಿಸಲು ಸಾಧ್ಯ? ಹೇಗೆ ಮಾಡಿದರೆ ಭಗವಂತನ ಸನ್ನಿಧಾನ ಶಿಲೆಯಲ್ಲಿ ಬಂದೀತು?

ಚಿಂತಿಸಿಯೇ ಚಿಂತಿಸಿದ ಮಹಾರಾಜನಿಗೆ ಏನೂ ಹೊಳೆಯಲಿಲ್ಲ. ಅವನ ಮಿದುಳ ಮೈದಾನದಲ್ಲಿ ಈವರೆಗೆ ಅಶ್ವಮೇಧಯಾಗದ ಸಂತಸ ಸಂಭ್ರಮಗಳಲ್ಲಿ ಸಂಸತ್ತುವಾಗಿದ್ದ ಅವನ ಮನಸ್ಸು ಒಮ್ಮೆಲೆ ಗಂಭೀರವಾಯಿತು. ಮಹಾರಾಜನಿಗೆ ಊಟ, ತಿಂಡಿ, ತಿನಿಸು, ಮಾತು, ಕಥೆ, ಅಲಂಕಾರ, ಸ್ನಾನಾದಿಗಳು ಯಾವುದೂ ಬೇಡವಾಯಿತು. ಗಾಯಕರು ಬಂದು ಅವನೆದುರು ಇಂಪಾಗಿ ಗಾಯನ ಮಾಡಿದರು. ಮಹಾರಾಜನ ಮನಸ್ಸು ಮುದಗೊಳ್ಳಲಿಲ್ಲ. ವಿದೂಷಕರು ಚಿಂತಾಗ್ರಸ್ತನಾಗಿದ್ದ ಮಹಾರಾಜನನ್ನು ಬಾಹ್ಯಲೋಕಕ್ಕೆಳೆಯಲು ಶಕ್ತಿಮೀರಿ ಯತ್ನಿಸಿದರು. ವಿಫಲವಾಯಿತು ಅವರ ಪ್ರಯತ್ನವೆಲ್ಲವೂ. ಸಾಮಂತ ರಾಜರೆಲ್ಲ ಅನರ್ಘ್ಯವಾದ ಪದ್ಮರಾಗಮಣಿ, ಸ್ಫಟಿಕ, ವಜ್ರ, ಅತ್ಯಧಿಕ ಮೌಲ್ಯದ ಸುವರ್ಣ ಮುಂತಾದವನ್ನು ಮಹಾರಾಜನೆದುರು ತಂದಿರಿಸಿದರು. ಇದರಿಂದಲಾದರೂ ಮಹಾರಾಜ ಸಂತೋಷಗೊಳ್ಳಲಿ ಎಂಬ ಆಶೆಯಿಂದ. ಆದರೆ ಮಹಾರಾಜನ ಲಕ್ಷ್ಯವನ್ನು ಸೆಳೆಯಲು ಈ ಯಾವ ಬೆಲೆಯುಳ್ಳ ಪದಾರ್ಥಗಳು ಎನಿತೂ ಸಮರ್ಥವಾಗಲಿಲ್ಲ. ಮತ್ತೆ ಮತ್ತೆ ಮಹಾರಾಜನ ಮನಸ್ಸಿನಲ್ಲಿ ಸುಳಿದು ಸುಳಿದು ಸಾಗುತ್ತಿದ್ದ ಪ್ರಶ್ನೆ ಒಂದೇ. ಯಾವ ಪ್ರಕಾರದಿಂದ, ಯಾವ ಉಪಾಧಿಯಿಂದ ವಿಗ್ರಹವನ್ನು ವಿರಚಿಸಿದರೆ ಭಗವಂತನ ಸನ್ನಿಧಾನವು ಅದರಲ್ಲಿ ಉಂಟಾದೀತು? ಕಲ್ಲು, ಮಣ್ಣು, ಮರ ಇವುಗಳಲ್ಲಿ ವಿಷ್ಣು ವಿಗ್ರಹ ನಿರ್ಮಾಣಕ್ಕೆ ಸಮೀಚೀನವಾದ ಉಪಾಧಿ ಯಾವುದು? ಈ ಮೂರು ವಸ್ತುಗಳಿಂದ ಭಗವಂತನ ವಿಗ್ರಹ ನಿರ್ಮಿಸಿ, ಸ್ಥಾಪಿಸಿ, ನೋಡುವೆ. ಆಗಲಾದರೂ ಭಗವಂತ ಕಣ್ತೆರೆದಾನು ಎಂದು ರಾಜನು ಪುನರಾಲೋಚನೆಗೈದ. ಯೋಚನೆ ಮಾಡಿಮಾಡಿ, ಬೇಸತ್ತು ಕೊನೆಗೆ ಬಂದತೀರ್ಮಾನಕ್ಕೆ ಮನಸ್ಸು ಒಪ್ಪಿಗೆ ನೀಡಲಿಲ್ಲ. ಮತ್ತೆ ಚಿಂತಾಗ್ರಸ್ತನಾದ ಮಹಾರಾಜ, ಏನು ಮಾಡಲು ತೋಚದೆ 'ಕೊನೆಗೆ ಭಗವಂತನನ್ನೇ ಶರಣು ಹೋದ ಈ ಸಮಸ್ಯೆಯನ್ನು ನೀನೇ ಬಗೆಹರಿಸಬೇಕು' ಎಂದು ಭಗವಂತನಲ್ಲಿ ದೀನನಾಗಿ ಮೊರೆಯಿಟ್ಟು ಶ್ರದ್ಧಾಭಕ್ತಿ ಸಮನ್ವಿತನಾಗಿ, 'ಪಂಚರಾತ್ರ'ದಲ್ಲಿ ಉಕ್ತವಾದ ವಿಧಿಯಿಂದ ಪುರುಷೋತ್ತಮನನ್ನು ಹೀಗೆ ಸ್ತುತಿಸಿದ.

ಇಂದ್ರದ್ಯುಮ್ನ ಮಹಾರಾಜನು ವಿಷ್ಣುವನ್ನು ಕುರಿತು ಮಾಡಿದ ಈ ಸ್ತೋತ್ರವು **'ವಿಷ್ಣುಕಾರುಣ್ಯಸ್ತೋತ್ರ'** ಎಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಈ ವಿಷ್ಣುಕಾರುಣ್ಯ ಸ್ತೋತ್ರವು ಭಕ್ತಿಯಿಂದ ಪಠಿಸುವವರ ಪಾಪವನ್ನು ಹೋಗಲಾಡಿಸುವದು. ಶ್ರದ್ಧೆಯಿಂದ ಈ ಸ್ತೋತ್ರವನ್ನು ಅರ್ಥಸಹಿತವಾಗಿ ಮನನಮಾಡುವ ಭಕ್ತನ ಮನೋರಥಗಳು ವಿಷ್ಣುವಿನ ಅನುಗ್ರಹದಿಂದ ಪೂರ್ಣವಾಗುವವು. ಆದುದರಿಂದ ವಿಷ್ಣುಭಕ್ತ ಮಾತ್ರ ಪಠಿಸಬಹುದಾದ ರಹಸ್ಯಪೂರ್ಣವಾದ, ಮಹಾಫಲಪ್ರದವಾದ ಮಂಗಳಮಯವಾದ ಈ ಸ್ತೋತ್ರವನ್ನು ನಿಮಗೆ ನಾನು ಉಪದೇಶಿಸುತ್ತೇನೆ. ಶ್ರದ್ಧೆಯಿಂದ ಸ್ವೀಕರಿಸಿರಿ.

## 'ವಿಷ್ಣುಕಾರುಣ್ಯಸ್ತೋತ್ರ'

ವಾಸುದೇವ ನಮಸ್ತೇऽಸ್ತು ನಮಸ್ತೇ ಮೋಕ್ಷಕಾರಣ ।
ತ್ರಾಹಿ ಮಾಂ ಸರ್ವಲೋಕೇಶ ಜನ್ಮಸಂಸಾರಸಾಗರಾತ್ ॥

ನಿರ್ಮಲಾಂಬರಸಂಕಾಶ ನಮಸ್ತೇ ಪುರುಷೋತ್ತಮ ।
ಸಂಕರ್ಷಣ ನಮಸ್ತೇऽಸ್ತು ತ್ರಾಹಿ ಮಾಂ ಧರಣೀಧರ ॥

ನಮಸ್ತೇ ಹೇಮಗರ್ಭಾರ್ಭ ನಮಸ್ತೇ ಮಕರಧ್ವಜ ।
ರತಿಕಾಂತ ನಮಸ್ತೇऽಸ್ತು ತ್ರಾಹಿ ಮಾಂ ವರದೋಽಭವ ॥

ನಮಸ್ತೇ ವಿಬುಧಾವಾಸ ನಮಸ್ತೇ ವಿಬುಧಪ್ರಿಯ ।
ನಾರಾಯಣ ನಮಸ್ತೇऽಸ್ತು ತ್ರಾಹಿ ಮಾಂ ಶರಣಾಗತಮ್ ॥

ನಮಸ್ತೇ ಬಲಿನಾಂಶ್ರೇಷ್ಠ ನಮಸ್ತೇ ಲಾಂಗಲಾಯುಧ ।
ಚತುರ್ಮುಖ ಜಗದ್ಧಾಮ ತ್ರಾಹಿ ಮಾಂ ಪ್ರಪಿತಾಮಹ ॥

ನಮಸ್ತೇ ನೀಲಮೇಘಾಭ ನಮಸ್ತೇ ತ್ರಿದಶಾರ್ಚಿತ ।
ತ್ರಾಹಿ ವಿಷ್ಣೋ ಜಗನ್ನಾಥ ಮಗ್ನಂ ಮಾಂ ಭವಸಾಗರೇ ॥

ಪ್ರಲಯಾನಲಸಂಕಾರ ನಮಸ್ತೇ ದಿತಿಜಾಂತಕ ।
ನರಸಿಂಹ ಮಹಾವೀರ್ಯ ತ್ರಾಹಿ ಮಾಂ ದೀಪ್ತಲೋಚನ ॥

ಯಥಾ ರಸಾತಲಾದುರ್ವೀ ತ್ವಯಾ ದಂಷ್ಟ್ರೋದ್ಧೃತಾ ಪುರಾ ।
ತಥಾ ಮಹಾವರಾಹಸ್ತ್ವಂ ತ್ರಾಹಿ ಮಾಂ ದುಃಖಸಾಗರಾತ್ ॥

ತವೈತಾ ಮೂರ್ತಯಃ ಕೃಷ್ಣ ವರದಾಃ ಸಂಸ್ತುತಾ ಮಯಾ ।
ತವೇಮೇ ಬಲದೇವಾದ್ಯಾಃ ಪೃಥುಗ್ರೂಪೇಣ ಸಂಸ್ಥಿತಾಃ ॥

ಅಂಗಾನಿ ತವದೇವೇಶ ಗುರುತ್ಮಾದ್ಯಾಸ್ತಥಾ ಪ್ರಭೋ ।
ದಿಕ್ಪಾಲಾಃ ಸಾಯುಧಾಶ್ಚೈವ ಕೇಶವಾದ್ಯಾಸ್ತಥಾಚ್ಯುತ ॥

ಯೇ ಚಾಪನ್ಯೇ ತವ ದೇವೇಶ ಭೇದಾಃ ಪ್ರೋಕ್ತಾ ಮನೀಷಿಭಿಃ ।
ತೇऽಪಿ ಸರ್ವೇ ಜಗನ್ನಾಥ ಪ್ರಸನ್ನಾಯತಲೋಚನ ॥

ಮಯಾರ್ಚಿತಾಃ ಸ್ತುತಾಃ ಸರ್ವೇ ತಥಾ ಯೂಯಂ ನಮಸ್ಕೃತಾಃ ।
ಪ್ರಯಚ್ಛತ ವರಂ ಮಹ್ಯಂ ಧರ್ಮಕಾಮಾರ್ಥಮೋಕ್ಷದಮ್ ॥

ಭೇದಾಸ್ತೇ ಕೀರ್ತಿ ತಾ ಯೇ ತು ಹರೇಸಂಕರ್ಷಣಾದಯಃ ।
ತವಪೂಜಾರ್ಥಸಂಭೂತಾಸ್ತುತಸ್ತ್ವಯಿ ಸಮಾಶ್ರಿತಾಃ ॥

ನ ಭೇದಸ್ತವ ದೇವೇಶ ವಿದ್ಯತೇ ಪರಮಾರ್ಥತಃ ।
ವಿವಿಧಂ ತವ ಯದ್ರೂಪಂ ಉಕ್ತಂ ತದುಪಚಾರತಃ ॥

ಅದ್ವೈತಂ ತ್ವಾ ಕಥಂ ದ್ವೈತಂ ವಕ್ತುಂ ಶಕ್ನೋತಿ ಮಾನವಃ ।
ಏಕಸ್ತ್ವಂ ಹಿ ಹರೇ ವ್ಯಾಪಿ ಚಿತ್ಸ್ವಭಾವೋ ನಿರಂಜನಃ ॥

ಪರಮಂ ತವ ಯದ್ರೂಪಂ ಭಾವಾಭಾವವಿವರ್ಜಿತಮ್ ।
ನಿರ್ಲೇಪಂ ನಿರ್ಗುಣಂ ಶ್ರೇಷ್ಠಂ ಕೂಟಸ್ಥಮಚಲಂ ಧ್ರುವಮ್ ॥

ಸರ್ವೋಪಾಧಿವಿನಿರ್ಮುಕ್ತಂ ಸತ್ತಾಮಾತ್ರ ವ್ಯವಸ್ಥಿತಮ್ ।
ತದ್ದೇವಾಶ್ಚ ನ ಜಾನಂತಿ ಕಥಂ ಜಾನಾಮ್ಯಹಂ ಪ್ರಭೋ ॥

ಅಪರಂ ತವ ಯದ್ರೂಪಂ ಪೀತವಸ್ತ್ರಂ ಚತುರ್ಭುಜಮ್ ।
ಶಂಖಚಕ್ರಗದಾಪಾಣಿ ಮುಕುಟಾಂಗದ ಧಾರಿತಾಮ್ ॥

ಶ್ರೀವತ್ಸೋಲ್ಕರಸಂಯುಕ್ತಂ ವನಮಾಲಾ ವಿಭೂಷಿತಮ್ ।
ತದರ್ಚಯಂತಿ ವಿಬುಧಾ ಯೇ ಚಾನ್ಯೇ ತವಸಂಶ್ರಯಾಃ ॥

ದೇವ ದೇವ ಸುರಶ್ರೇಷ್ಠ ಭಕ್ತಾನಾಮಭಯಪ್ರದ ।
ತ್ರಾಹಿ ಮಾಂ ಪದ್ಮಪತ್ರಾಕ್ಷ ಮಗ್ನಂ ವಿಷಯಸಾಗರೇ ।
ನಾನ್ಯಂ ಪಶ್ಯಾಮಿ ಲೋಕೇಶ ಯಸ್ಯಾಹಂ ಶರಣಂ ವ್ರಜೇ ।
ತ್ವಾಮೃತೇ ಕಮಲಾಕಾಂತಿ ಪ್ರಸೀದ ಮಧುಸೂದನ ॥

ಜರಾವ್ಯಾಧಿ ಶತ್ಯೈರ್ಯುಕ್ತೋ ನಾನಾ ದುಃಖೈರ್ನಿಪೀಡಿತಃ ।
ಹರ್ಷಶೋಕಾನ್ವಿತೋ ಮೂಢಃ ಕರ್ಮಪಾಶೈಃ ಸುಯಂತ್ರಿತಃ ॥

ಪತಿತೋಽಹಂ ಮಹಾರೌದ್ರೇ ಘೋರೇ ಸಂಸಾರಸಾಗರೇ ।
ವಿಷಮೋದಕದುಷ್ಪಾರೇ ರಾಗದ್ವೇಷ ಯಕ್ಷಾಕುಲೇ ॥

ಇಂದ್ರಿಯಾವರ್ತಗಂಭೀರೇ ತೃಷ್ಣಾಶೋಕೋರ್ಮಿ ಸಂಕುಲೇ ।
ನಿರಾಶ್ರಯೇ ನಿರಾಲಂಬೇ ನಿಃಸಾರೇಽತ್ಯಂತ ಚಂಚಲೇ ॥

ಮಾಯಯಾ ಮೋಹಿತಸ್ತತ್ರ ಭಮಾಣಿ ಸುಚಿರಂ ಪ್ರಭೋ ।
ನಾನಾಜಾತಿ ಸಹಸ್ರೇಷು ಜಾಯಮಾನಃ ಪುನಃಪುನಃ ॥

ಮಯಜನ್ಮಾನ್ಯನೇಕಾನಿ ಸಹಸ್ರಾಣ್ಯಯುತಾನಿ ಚ ।
ವಿವಿಧಾನ್ಯನುಭೂತಾನಿ ಸಂಸಾರೇಽಸ್ಮಿನ್ ಜನಾರ್ದನ ॥

ವೇದಾಃ ಸಾಂಗಾ ಮಯಾಧೀತಾ ಶಾಸ್ತ್ರಾಣಿ ವಿವಿಧಾನಿ ಚ ।
ಇತಿಹಾಸ ಪುರಾಣಾನಿ ತಥಾ ಶಿಲ್ಪಾನ್ಯನೇಕಶಃ ॥

ಅಸಂತೋಷಾಶ್ಚ ಸಂತೋಷಾಃ ಸಂಚಯಾಪಯಾ ವ್ಯಯಾಃ ।
ಮಯಾ ಪ್ರಾಪ್ತಾಃ ಜಗನ್ನಾಥ ಕ್ಷಯವೃದ್ಧ್ಯಕ್ಷಯೇ ತರಾಃ ॥

ಭಾರ್ಯಾರಿ ಮಿತ್ರ ಬಂಧೂನಾಂ ವಿಯೋಗಾಸ್ಸಂಗಮಾಸ್ತಥಾ ।
ಪಿತರೋ ವಿವಿಧಾ ದೃಷ್ಟಾ ಮಾತರಶ್ಚ ತಥಾ ಮಯಾ ॥

ದುಃಖಾನಿ ಚಾನುಭೂತಾನಿ ಯಾನಿ ಸೌಖ್ಯಾನ್ಯನೇಕಶಃ ।
ಪ್ರಾಪ್ತಾಶ್ಚ ಬಾಂಧವಾಃ ಪುತ್ರಾಃ ಭ್ರಾತರೋ ಜ್ಞಾತಮಸ್ತಥಾ ॥

ವಯೋಕ್ಷಿತಂ ತಥಾ ಸ್ತ್ರೀಣಾಂಕೋಷ್ಠೀ ವಿಣ್ಮೂತ್ರಪಿಚ್ಛಲೇ ।
ಗರ್ಭವಾಸೇ ಮಹಾದುಃಖಮನುಭೂತಂ ತಥಾ ಪ್ರಭೋ ॥

ದುಃಖಾನಿ ಯಾನ್ಯನೇಕಾನಿ ಬಾಲ್ಯಯೌವನಗೋಚರೇ ।
ವಾರ್ಧಕೇ ಚ ಹೃಷೀಕೇಶ ತಾನಿ ಪ್ರಾಪ್ತಾನಿ ವೈಮಯಾ ॥

ಮರಣೇ ಯಾನಿ ದುಃಖಾನಿ ಯಮಮಾರ್ಗೇ ಯಮಾಲಯೇ ।
ಮಯಾ ತಸ್ಯಾನುಭೂತಾನಿ ನರಕೇ ಯಾತನಾಸ್ತಥಾ ॥

ಕ್ರಿಮಿಕೀಟ ದ್ರುಮಾಣಾಂ ಚ ಹಸ್ತ್ಯಶ್ವಮೃಗಪಕ್ಷಿಣಾಮ್ ।
ಮಹಿಷೋಷ್ಟ್ರಗವಾಂ ಚೈವ ತಥಾನ್ಯೇಷಾಂ ವನೌಕಸಾಮ್ ॥

ದ್ವಿಜಾತೀನಾಂ ಚ ಸರ್ವೇಷಾಂ ಶೂದ್ರಾಣಾಂ ಚೈವ ಯೋನಿಷು ।
ಧನಿನಾಂ ಕ್ಷತ್ರಿಯಾಣಾಂ ಚ ದರಿದ್ರಾಣಾಂ ತಪಸ್ವಿನಾಮ್ ॥

ನೃಪಾಣಾಂ ನೃಪಭೃತ್ಯಾನಾಂ ತಥಾನ್ಯೇಷಾಂ ಚ ದೇಹಿನಾಮ್ ।
ಗೃಹೇಷು ತೇಷಾಮುತ್ಪನ್ನೋ ದೇವ ಚಾಹಂ ಪುನಃ ಪುನಃ ॥

ಗತೋಽಸ್ಮಿ ದಾಸತಾಂ ನಾಥ ಭೃತ್ಯಾನಾಂ ಬಹುಶೋನೃಣಾಂ ।
ದರಿದ್ರತ್ವಂ ಚೇಶ್ವರತ್ವಂ ಸಾಮಿತ್ವಂ ಚ ತಥಾ ಗತಃ ॥

ಹತೋ ಮಯಾ ಹತಾಶ್ಚಾನ್ಯೇ ಘಾತಿತೋ ಘಾತಿತಾಸ್ತಥಾ ।
ದತ್ತಂ ಮಯಾನ್ಯೈರನ್ಯೇಭ್ಯೋ ಮಯಾ ದತ್ತಮನೇಕಶಃ ॥

ಪಿತೃಮಾತೃ ಸುಹೃದ್ಭ್ರಾತೃ ಕಲತ್ರಾಣಾಂ ಕೃತೇನ ಚ ।
ಧನಿನಾಂ ಶ್ರೋತ್ರಿಯಾಣಾಂ ಚ ದರಿದ್ರಾಣಾಂ ತಪಸ್ವಿನಾಮ್ ॥

ಉಕ್ತಂ ದೈನ್ಯಂ ಚ ವಿವಿಧಂ ತ್ಯಕ್ತ್ವಾ ಲಜ್ಜಾಂ ಜನಾರ್ದನ ।
ದೇವತಿಯನ್ಮಙ್ಮನುಷ್ಯೇಷು ಸ್ಥಾವರೇಷು ಚರೇಷುಚ ॥

ನ ವಿದ್ಯತೇ ತಥಾ ಸ್ಥಾನಂ ಯತ್ರಾಹಂ ನಗತಃ ಪ್ರಭೋ ।
ಕದಾ ಮೇ ನರಕೇ ವಾಸಃ ಕದಾ ಸ್ವರ್ಗೇ ಜಗತ್ಪತೇ ॥

ಕದಾ ಮನುಷ್ಯಲೋಕೇಷು ಕದಾ ತಿರ್ಯಗ್ಗತೇಷುಚ ।
ಜಲಯಂತ್ರೇ ಯಥಾ ಚಕ್ರೇ ಘಟೀ ರಜ್ಜುನಿಬಂಧನಾ ॥

ಯಾತಿ ಚೋರ್ಧ್ವಮಧಶ್ಚೈವ ಕದಾ ಮಧ್ಯೇ ಚ ತಿಷ್ಠತಿ ।
ತಥಾ ಚಾಹಂ ಸುರಶ್ರೇಷ್ಠ ಕರ್ಮರಜ್ಜುಸಮಾವೃತಃ ॥

ಅಧಶ್ಚೋರ್ಧ್ವಂ ತಥಾ ಮಧ್ಯೇ ಭ್ರಮನ್ಗಚ್ಛಾಮಿ ಯೋಗತಃ ।
ಏವಂ ಸಂಸಾರಚಕ್ರೇಽಸ್ಮಿನ್ಭೈರವೇ ರೋಮಹರ್ಷಣೇ ॥

ಭ್ರಮಾಮಿ ಸುಚಿರಂ ಕಾಲಂ ನಾಂತಂ ಪಶ್ಯಾಮಿ ಕರ್ಹಿಚಿತ್ ।
ನ ಜಾನೇ ಕಿಂ ಕರೋಮ್ಯದ್ಯಹರೇ ವ್ಯಾಕುಲಿತೇಂದ್ರಿಯ ॥

ಶೋಕತೃಷ್ಣಾಭಿಭೂತೋऽಹಂ ಕಾಂದಿಶೀಕೋ ವಿಚೇತನಃ ।
ಇದಾನೀಂ ತ್ವಾಮಹಂ ದೇವ ವಿಹ್ವಲಃ ಶರಣಂಗತ ॥

ತ್ರಾಹಿ ಮಾಂ ದುಃಖಿತಂ ಕೃಷ್ಣ ಮಗ್ನಂ ಸಂಸಾರಸಾಗರೇ ।
ಕೃಪಾಂ ಕುರು ಜಗನ್ನಾಥ ಭಕ್ತಂ ಪೂಂ ಯದಿಮನ್ಯಸೇ ॥

ತ್ವದೃತೇ ನಾಸ್ತಿ ಮೇ ಬಂಧುರ್ಯೋऽಸೌ ಚಿಂತಾಂ ಕರಿಷ್ಯತಿ ।
ದೇವ ತ್ವಾಂ-ನಾಥಮಾಸಾದ್ಯ ನऽಭಯಂ ಮೇऽಸ್ತಿ ಕುತ್ರಚಿತ್ ॥

ಜೀವಿತೇ ಮರಣೇ ಚೈವ ಯೋಗಕ್ಷೇಮೇऽಥ ವಾ ಪ್ರಭೋ ।
ಯೇ ತು ತ್ವಾಂ ವಿಧಿಪದ್ದೇವ ನಾರ್ಚಯಂತಿ ನರಾಧಮಾಃ ॥

ಸುಗತಿಸ್ತು ಕಥಂ ತೇಷಾಂ ಭವೇತ್ಸಂಸಾರ ಬಂಧನಾತ್ ।
ಕಿಂ ತೇಷಾಂ ಕುಲಶೀಲೇನ ವಿದ್ಯಯಾ ಜೀವಿತೇನ ಚ ॥

ಯೇಷಾಂ ನ ಜಾಯತೇ ಭಕ್ತಿರ್ಜಗದ್ಧಾತರಿ ಕೇಶವೇ ।
ಪ್ರಕೃತಿಂ ತ್ವಾಸುರೀಂ ಪ್ರಾಪ್ಯ ಯೇ ತ್ವಾಂ ನಿಂದಂತಿ ಮೋಹಿತುಃ ।
ಪತಂತಿ ನರಕೇ ಘೋರೇ ಜಾಯಮಾನಾಃ ಪುನಃ ಪುನಃ ।
ನ ತೇಷಾಂ ನಿಷ್ಕೃತಿಸ್ತಸ್ಮಾತ್ ವಿದ್ಯತೇ ನರಕಾರ್ಣವಾತ್ ॥

ಯೇ ದೂಷಯಂತಿ ದುರ್ವೃತ್ತಾಸ್ತ್ವಾಂದೇವ ಪುರುಷಾಧಮಾಃ ।
ಯತ್ರ ಯತ್ರ ಭವೇಜ್ಜನ್ಮ ಮಮ ಕರ್ಮನಿಬಂಧನಾತ್ ॥

ತತ್ರ ಹರೇ ಭಕ್ತಿಸ್ತ್ವಯಿ ಚಾಸ್ತು ದೃಢಾ ಸದಾ ।
ಆರಾಧ್ಯ ತ್ವಾಂ ಸುರಾ ದೈತ್ಯಾ ನರಾಶ್ಚಾನ್ಯऽಪಿ ಸಂಯತಾಃ ।
ಅವಾಪುಃ ಪರಮಾಂ ಸಿದ್ಧಿಂ ಕಸ್ತ್ವಾಂ ದೇವ ನ ಪೂಜಯೇತ್ ।
ನ ಶಕ್ನುವಂತಿ ಬ್ರಹ್ಮಾದ್ಯಾಃ ಸ್ತೋತುಂ ತ್ವಾಂ ತ್ರಿದಶಾಹರೇ ॥

ಕಥಂ ಮಾನುಷಬುದ್ಧ್ಯಾऽಹಂ ಸ್ತೌಮಿ ತ್ವಾಂ ಪ್ರಕೃತೇಃ ಪರಂ ।
ತಥಾ ಚಾ ಜ್ಞಾನಭಾವೇನ ಸಂಸ್ತುತೋಸಿ ಮಯಾಪ್ರಭೋ ॥

ತತ್ಕ್ಷಮಸ್ವಾಪರಾಧಂ ಮೇ ಯದಿ ತೇऽಸ್ತಿ ದಯಾಮಯಿ ।
ಕೃತಾಪರಾಧೇऽಪಿ ಹರೇ ಕ್ಷಮಾಂ ಕುರ್ವಂತಿ ಸಾಧವಃ ॥

ತಸ್ಮಾತ್ಪ್ರಸೀದ ದೇವೇಶ ಭಕ್ತಸ್ನೇಹಂ ಸಮಾಶ್ರಿತಃ ।
ಸ್ತುತೋऽಸಿ ಯನ್ಮಯಾ ದೇವ ಭಕ್ತಿಭಾವೇನ ಚೇತಸಾ ॥

ಸಾಂಗಂ ಭವತು ತತ್ಸರ್ವಂ ವಾಸುದೇವ ನಮೋऽಸ್ತು ತೇ ॥

॥ಬ್ರಹ್ಮೋವಾಚ॥

ಇತ್ಥಂ ಸ್ತುತಸ್ತದಾ ತೇನ ಪ್ರಸನ್ನೋ ಗರುಡಧ್ವಜಃ ॥
ದದೌ ತಸ್ಮೈ ಮುನಿಶ್ರೇಷ್ಠಾಃ ಸಕಲಂ ಮನಸೇಪ್ಸಿತಮ್ ॥

ಯಃ ಸಂಪೂಜ್ಯ ಜಗನ್ನಾಥಂ ಪ್ರತ್ಯಹಂ ಸ್ತೌತಿ ಮಾನವಃ ।
ಸ್ತೋತ್ರೇಣಾನೇನ ಮತಿಮಾನ್ಸ ಮೋಕ್ಷಂ ಲಭತೇ ಧ್ರುವಮ್ ॥

ತ್ರಿಸಂಧ್ಯಂ ಯೋ ಜಪೇದ್ವಿದ್ವಾನಿದಂ ಸ್ತೋತ್ರವರಂ ಶುಚಿಃ ।
ಧರ್ಮಂ ಚಾರ್ಥಂ ಚ ಕಾಮಂ ಚ ಮೋಕ್ಷಂ ಚ ಲಭತೇ ನರಃ ॥

ಯಃ ಪರೇಚ್ಛೃಣುಯಾಡ್ವಾಪಿ ಶ್ರಾವಯೇದ್ವಾ ಸಮಾಹಿತಃ ।
ಸ ಲೋಕಂ ಶಾಶ್ವತಂ ವಿಷೋರ್ಯಾತಿ ನಿರ್ಧೂತಕಲ್ಮಷಃ ॥

ಧನ್ಯಂ ಪಾಪಹರಂ ಚೇದಂ ಭುಕ್ತಿಮುಕ್ತಿಪ್ರದಂ ಶಿವಮ್ ।
ಗುಹ್ಯಂ ಸುದುರ್ಲಭಂ ಪುಣ್ಯಂ ನ ದೇಯಿಂ ಯಸ್ಯ ಕಸ್ಯ ಚಿತ್ ॥

ನ ನಾಸ್ತಿಕಾಯ ಮೂರ್ಖಾಯ ನ ಕೃತಘ್ನಾಯನ ಮಾನಿನೇ ।
ನ ದುಷ್ಟಮತಯೇ ದದ್ಯಾನ್ನಾಭಕ್ತಾಯ ಕದಾಚನ ॥

ದಾತವ್ಯಂ ಭಕ್ತಿಯುಕ್ತಾಯ ಗುಣಶೀತಾನ್ವಿತಾಯ ಚ ।
ವಿಷ್ಣುಭಕ್ತಾಯ ಶಾಂತಾಯ ಶ್ರದ್ಧಾನುಷ್ಠಾನಶಾಲಿನೇ ॥

ಇದಂ ಸಮಸ್ತಾಘವಿನಾಶಹೇತುಃ
ಕಾರುಣ್ಯಸಂಜ್ಞಂ ಸುಖಮೋಕ್ಷದಂ ಚ ।
ಅಶೇಷವಾಂಛಾಫಲದಂ ವರಿಷ್ಠಂ
ಸ್ತೋತ್ರಂ ಮಯೋಕ್ತಂ ಪುರುಷೋತ್ತಮಸ್ಯೇ ॥

ಯೇ ತಂ ಸುಸೂಕ್ಷ್ಮಂ ವಿಮಲಾ ಮುರಾರಿಂ
ಧ್ಯಾಯಂತಿ ನಿತ್ಯಂ ಪುರುಷಂ ಪುರಾಣಮ್ ।
ತೇ ಮುಕ್ತಿಭಾಜಃ ಪ್ರವಿಶಂತಿ ವಿಷ್ಣುಂ
ಮಂತ್ರೈರ್ಯಥಾಜ್ಯಂ ಹುತಮಧ್ವರಾಗ್ನೌ ॥

ಏಕಃ ಸ ದೇವೋ ಭವದುಃಖಹಂತಾ
ಪರಃ ಪರೇಷು ನ ತತೋಽಸ್ತಿ ಚಾನ್ಯತ್ ।
ದ್ರಷ್ಟಾ ಸ ಪಾತಾ ಸ ತು ನಾಶಕರ್ತಾ
ವಿಷ್ಣುಃ ಸಮಸ್ತಾಖಿಲ ಸಾರಭೂತಃ ॥

ಕಿಂ ವಿದ್ಯಯಾ ಕಿಂ ಸ್ವಗುಣೈಶ್ಚ ತೇಷಾಂ
ಯಜ್ಞೈಶ್ಚ ದಾನೈಶ್ಚ ತಪೋಭಿರುಗ್ರೈಃ ।
ಯೇಷಾಂ ನ ಭಕ್ತಿರ್ಭವತೀಹ ಕೃಷ್ಣೇ
ಜಗದ್ಗುರೌ ಮೋಕ್ಷಸುಖಪ್ರದೇ ಚ ॥

**ಲೋಕೇ ಸ ಧನ್ಯಃ ಸ ಶುಚಿಃ ಸ ವಿದ್ವಾನ್**
**ಮಖೈಸ್ತಪೋಭಿಃ ಸ ಗುಣೈರ್ವರಿಷ್ಠಃ ।**
**ಜ್ಞಾತಾ ಸ ದಾತಾ ಸ ತು ಸತ್ಯವಕ್ತಾ**
**ಯಸ್ಯಾಸ್ತಿ ಭಕ್ತಿಃ ಪುರುಷೋತ್ತಮಾಖ್ಯೇ ॥**

**(ಶ್ಲೋಕಗಳ ಅರ್ಥ)**

**ಇಂದ್ರದ್ಯುಮ್ನ:-** ವಾಸುದೇವನಿಗೆ ವಂದನೆಗಳು, ಮುಕ್ತಿದಾಯಕನಿಗೆ ವಂದನೆಗಳು. ಸಕಲ ಲೋಕಗಳಿಗೆ ಒಡೆಯನಾದ ಹೇ ಭಗವನ್, ಹುಟ್ಟು, ಸಾವು ಮೊದಲಾದವುಗಳಿಂದ ಕೂಡಿದ ಈ ಸಂಸಾರವೆಂಬ ಸಾಗರದಿಂದ ನನ್ನನ್ನು ಉದ್ಧಾರಮಾಡು.

ನಿಷ್ಕಲಂಕ ಗಗನಮಂಡಲದಂತೆ ನಿರ್ಮಲವಾದ ಕಾಂತಿಯುಳ್ಳ, ಪುರುಷಶ್ರೇಷ್ಠನಾದ, ವರಾಹ ರೂಪದಿಂದ ಜಗತ್ತನ್ನು ಉದ್ಧರಿಸಿದ ಸಂಕರ್ಷಣರೂಪೀ ಪರಮಾತ್ಮನೇ ನಿನಗೆ ನನ್ನ ವಂದನೆಗಳು.

ಸುವರ್ಣವರ್ಣದ ಮೀನಕೇತನನಾದ, ರತಿಗೆ ಒಡೆಯನಾದ ಮನ್ಮಥನ ರೂಪ ತಾಳಿ ಸಮಸ್ತಪ್ರಪಂಚವನ್ನು ಸ್ವಕೀಯ ಮಾಯೆಗೆ ಒಳಪಡಿಸುವ, ಅಂತಕನಿಗೂ ಅಂತಕನಾದ ಎಲೈ ದೇವನೇ, ನನ್ನನ್ನು ಕಾಪಾಡು.

ಅಂಜನದಂತೆ ಕೃಷ್ಣಕಾಂತಿಯಿಂದ ಕಂಗೊಳಿಸುವ, ಭಕ್ತವತ್ಸಲನಾದ ಅನಿರುದ್ಧರೂಪೀ ಭಗವಂತನೇ ನಿನಗೆ ಶರಣು ಬಂದ ನನ್ನನ್ನು ರಕ್ಷಿಸು.

ದೇವತೆಗಳಿಗೆ ಆಶ್ರಯಸ್ಥಾನವಾದ, ದೇವತೆಗಳಿಗೆಲ್ಲ ಪ್ರೀತ್ಯಾಸ್ಪದನಾದ ನಾರಾಯಣ ರೂಪಿಗೆ ವಂದನೆಗಳು. ನೀನು ನನ್ನನ್ನು ರಕ್ಷಿಸು.

ನೀಲಮೇಘಶ್ಯಾಮನಾದ, ದಾನವವೈರಿಯಾದ, ಜಗತ್ತಿಗೆ ಸ್ವಾಮಿಯಾದ ಶ್ರೀವಿಷ್ಣುರೂಪಿ, ಸ್ವಾಮಿಯೇ ಸಂಸಾರಸಾಗರನಿಮಗ್ನನಾದ ನನ್ನನ್ನು ಉದ್ಧಾರಮಾಡು.

ಪ್ರಳಯಕಾಲದ ಅಗ್ನಿಯಂತೆ ದೀಪ್ತಿಯುಳ್ಳ, ಅದಿತಿಯ ಮಕ್ಕಳಾದ ದೇವತೆಗಳಿಂದ ಪೂಜಿತನಾದ ಭಾಸ್ವರಲೋಚನವುಳ್ಳ, ಮಹಾಪರಾಕ್ರಮಿಯಾದ ನೃಸಿಂಹಾವತಾರಿ ಭಗವಂತನೇ ನನ್ನನ್ನು ಕಾಪಾಡುವ ಹೊಣೆ ನಿನ್ನದು.

ಹಿಂದೆ ಸಮುದ್ರದಲ್ಲಿ ಮುಳುಗಿ ರಸಾತಲಕ್ಕೆ ಪ್ರವೇಶಮಾಡಿದ್ದ ಭೂಮಿಯನ್ನು ವರಾಹ ರೂಪವನ್ನು ಸ್ವೀಕರಿಸಿ ,ನೀನು ಮೇಲಕ್ಕೆ ತಂದೆ. ಅದರಂತೆ ವಿಷಯಗಳಿಂದ ದುಃಖಮಯ ವಾದ ಈ ಸಂಸಾರವೆಂಬ ಸಮುದ್ರದ ಆಳದಲ್ಲಿ ಸಿಲುಕಿರುವ ನನ್ನನ್ನು ನೀನು ಉದ್ಧರಿಸು.

ಶ್ರೀಕೃಷ್ಣನೆ, ಬಲರಾಮ ಮೊದಲಾದ ರೂಪಗಳೆಲ್ಲ ನಿನ್ನ ಅವತಾರಗಳೇ. ಭಕ್ತರನ್ನು ಅನುಗ್ರಹಿಸುವ ಆ ನಿನ್ನ ವಿವಿಧ ರೂಪಗಳನ್ನು ನಾನು ಸ್ತೋತ್ರ ಮಾಡುತ್ತೇನೆ.

ದೇವೇಶ, ಗರುಡ ಮೊದಲಾದ ದಿಕ್ಪಾಲಕರು ಕೇಶವಾದಿಗಳು ನಿನ್ನ ಅಂಗಗಳು. ಮತ್ತು ಸಂಕರ್ಷಣರೂಪೀ ಪರಮಾತ್ಮನು ನಿನ್ನ ಅಂಶ ಸಂಭೂತನು. ಈ ದೇವತೆಗಳನ್ನು ನಾನು ಭಕ್ತಿಯಿಂದ ಅರ್ಚಿಸುವೆ, ನಮಿಸುವೆ, ಸ್ತೋತ್ರಗೈಯುವೆ.

(ಅಂಗದೇವತೆಗಳು, ಆವರಣದೇವತೆಗಳು, ಇವರನ್ನು ಮೊದಲು ಪೂಜಿಸಿ, ನಂತರ ಪ್ರಧಾನದೇವತೆಯನ್ನು ಪೂಜೆಮಾಡಬೇಕು ಎಂದು ಶಾಸ್ತ್ರದಲ್ಲಿ ಉಪದಿಷ್ಟವಾದಂತೆ ನಾನು

ಮೊದಲು ಅಂಗದೇವತೆಗಳನ್ನು ಪ್ರಾರ್ಥಿಸಿ ನಂತರ ಪ್ರಧಾನದೇವತೆಗಳ ಅರ್ಚನೆ ಮಾಡುವೆ ಎಂದು ನಿವೇದಿಸುತ್ತಿರುವನು) ಭಗವನ್, ಸಂಕರ್ಷಣ ಮೊದಲಾದ ನಿನ್ನ ವಿವಿಧ ಮೂರ್ತಿಗಳನ್ನು ನಿನ್ನ ಪೂಜೆಗೆ ಅಂಗವಾಗಿ ಮೊದಲು ಪೂಜೆಗೈಯುವೆ. ಅನಂತರ ನಿನ್ನ ಪೂಜೆ ಮಾಡುವೆ. ಇತರ ಮೂರ್ತಿಗಳ ಪ್ರಾಥಮಿಕ ಪೂಜೆ ನಿನ್ನಪೂಜೆಗೆ ಮುಂದೆ ಮಾಡಲಿರುವ ನಿನ್ನ ಪೂಜೆಗಾಗಿಯೇ.

ಹೇ ದೇವದೇವಾ, ನಿನ್ನಲ್ಲಿ ವಸ್ತುತಸ್ತು ಭೇದ ಇಲ್ಲ. ನಿನ್ನ ಅವಯವಗಳಲ್ಲಿ ಪರಸ್ಪರ ಹಾಗೂ ನಿನ್ನ ಶರೀರಕ್ಕೂ ಆತ್ಮನಿಗೂ ಭೇದ ಸುತಾರಂ ಇಲ್ಲ. ನಿನ್ನ ಅವತಾರಗಳಿಗೂ, ನಿನಗೂ ಭೇದ ಇಲ್ಲ. ನಿನ್ನ ಶಕ್ತಿಗೂ ನಿನಗೂ ಭೇದ ಇಲ್ಲ. ನಿನ್ನಲ್ಲಿ ನಿನ್ನಿಂದ ವಿಭಿನ್ನವಾದದು ಯಾವುದೂ ಇಲ್ಲ. ಅರ್ಪಿಸಲು ಅನುಕೂಲವಾಗುವ ದೃಷ್ಟಿಯಿಂದ ಬೇರೆ ಬೇರೆ ರೂಪಗಳನ್ನು ಭಕ್ತರ ಮೇಲಿನ ಅನುಗ್ರಹದಿಂದ ನೀನು ಸ್ವೀಕರಿಸಿರುವೆ.

ಏಕರೂಪನಾದ ನಿನಗೆ ಭೇದಗಳನ್ನು ಕಲ್ಪಿಸುವದು ಎಷ್ಟು ಮಾತ್ರಕ್ಕೂ ಸರಿಯಲ್ಲ. ನಿನ್ನಲ್ಲಿ ನಿನ್ನ ರೂಪಗಳಲ್ಲಿ ಭೇದ ಚಿಂತನೆ ಮಾಡುವವ ಪಾಪ ಸಂಪಾದನೆ ಮಾಡುತ್ತಾನೆ. ನೀನು ಅಖಂಡ. ಸರ್ವತ್ರ ವ್ಯಾಪಕ, ಜ್ಞಾನಮಯನಾದ ಆಕೃತಿ ಉಳ್ಳವ. ಸತ್ವ, ರಜಸ್ಸು, ತಪಸ್ಸು ಮುಂತಾದ ಪಾಕೃತಿಕ ಗುಣಗಳಿಂದ ಬಹುದೂರ.

ನಿನ್ನ ಸ್ವರೂಪಕ್ಕೆ ಜನನ ಮರಣಗಳಿಲ್ಲ. ಅದು ಜನ್ಮ ಮೊದಲಾದ ದೋಷಗಳಿಂದ ಮುಕ್ತವಾದುದು. ಅಂತೆಯೇ ಅದು ಪರಿಶುದ್ಧ; ಶ್ರೇಷ್ಠ, ಸ್ಥಿರ ಹಾಗೂ ಸತ್ಯ.

ಬೇರೆ ಬೇರೆ ದೇಹಗಳನ್ನು ಆಶ್ರಯಿಸುವದರಿಂದ ನಿನ್ನಲ್ಲಿ ಭಿನ್ನತೆ ಬರುವದಿಲ್ಲ. ನಿನ್ನ ಎಲ್ಲ ರೂಪಗಳು ಸನ್ಮಯ (ಸಾತ್ವಿಕ ಎಂಬ ಒಂದೇ ಗುಣವುಳ್ಳವ ರಜಸ್ಸು ಹಾಗೂ ತಮಸ್ಸಿನ ಲೇಪವೂ ಅವಕ್ಕಿಲ್ಲ.) ಇಂತಹ ನಿನ್ನ ಪರಮಾತ್ಮ ಸ್ವರೂಪವನ್ನು ದೇವಾದಿ ದೇವತೆಗಳೂ ಸಹ ಪೂರ್ಣವಾಗಿ ತಿಳಿಯಲಾರರು. ಅಂದಮೇಲೆ ನಾನು ತಿಳಿಯುವದೆಂತು.

ಹೇ ಭಗವನ್, ನಿನ್ನ ಇನ್ನೊಂದು ರೂಪವು ಪೀತಾಂಬರ ಚತುರ್ಭುಜಗಳು, ಶಂಖ, ಚಕ್ರ, ಗದಾ, ಕಿರೀಟ, ತೋಳುಬಳೆ ಶ್ರೀ ವತ್ಸಲಾಂಛನ, ತುಳಸೀಹಾರ ಮುಂತಾದವುಗಳಿಂದ ಒಪ್ಪುತ್ತಿರುವದು. ಈ ನಿನ್ನ ರೂಪವನ್ನು ದೇವತೆಗಳು ಇನ್ನಿತರ ಭಕ್ತರು ನಿನ್ನನ್ನು ಆಶ್ರಯಿಸಿದ ಸಾತ್ವಿಕರೆಲ್ಲರೂ ಪೂಜಿಸುವರು.

ದೇವತೆಗಳಿಗೆ ಒಡೆಯನಾದ ಆದುದರಿಂದಲೇ ದೇವಶ್ರೇಷ್ಠನೆನಿಸಿದ ಭಕ್ತರಿಗೆ ಅಭಯನೀಡುವ, ಹೇ ಪುಂಡರೀಕಾಕ್ಷ, ವಿಷಯವೆಂಬ ಆರ್ಣವದಲ್ಲಿ ಮಗ್ನನಾದ ನನ್ನನ್ನು ಉದ್ಧರಿಸು, ರಕ್ಷಿಸು.

ಹೇ ಕಮಲನಾಭ, ನೀನು ಬಿಟ್ಟರೆ ನನ್ನನ್ನು ರಕ್ಷಿಸುವವರು ಯಾರೂ ಇಲ್ಲ. ನೀನೇ ನನಗೆ ರಕ್ಷಕ. ಮಧುಸೂದನ ನನ್ನ ವಿಷಯದಲ್ಲಿ ಪ್ರಸನ್ನನಾಗು.

ದೇವೋತ್ತಮ ಜರಾ, ವ್ಯಾಧಿ ಮುಂತಾದ ನಾನಾ ದುರವಸ್ಥೆಗಳಿಂದ ದುಃಖಿತನಾಗಿ ಬಳಲುತ್ತಿರುವ, ಸ್ವಾಭಾವಿಕವಲ್ಲದ ಸುಖದುಃಖಗಳಲ್ಲಿ ಸಿಲುಕಿ ಸಂಕಟಪಡುತ್ತಿರುವ, ಕರ್ಮಪಾಶಗಳಿಂದ ಬದ್ಧನಾಗಿ ಭಯಂಕರ ಸಂಸಾರದಲ್ಲಿ ಪತಿತನಾದ ನನ್ನನ್ನು ಉದ್ಧರಿಸು. ಈ ಸಂಸಾರ ಎಂಬ ಸಾಗರಕ್ಕೆ ಇಲ್ಲಿನ ದುರವಸ್ಥೆಗಳು ನೀರಿನೋಪಾದಿಯಲ್ಲಿವೆ. ಈ ಸಾಗರ ದುಸ್ತರ. ಏಕೆಂದರೆ ಸಾಗರದ ಮಧ್ಯದಲ್ಲಿ ರಾಗದ್ವೇಷಗಳೆಂಬ ಮಹಾಮಹಾ

ತಿಮಿಂಗಲುಗಳು, ಮೊಸಳೆಗಳು ಇವೆ. ಇಂದ್ರಿಯಗಳೆಂಬ ಅಗಾಧ ಮಡು ಮತ್ತು ಸುಳಿಗಳು ಈ ಸಾಗರದಲ್ಲಿವೆ ದುರಾಶೆ ಶೋಕವೆಂಬ ಅಲೆಗಳು ಈ ಸಾಗರದ ಮೇಲೆ ನಿರಂತರ ಸಂಚಾರಗೈಯುತ್ತವೆ. ಈ ಸಮುದ್ರದಿಂದ ಪಾರುಗಾಣಿಸುವರೇ ಎಲ್ಲೂ ಕಾಣಿಸುತ್ತಿಲ್ಲ. ಈ ಸಾಗರ ಅಪಾರ; ನಿರಾಧಾರ, ಅತಿ ತರಲ. ಇಂತಹ ಬಹುಘೋರ ಸಂಸಾರ ಸಾಗರದಲ್ಲಿ ಪತಿತನಾಗಿ, ಹಲವೊಮ್ಮೆ ತೇಲುತ್ತ ಕೆಲವೊಮ್ಮೆ ಮುಳುಗುತ್ತ,ಅಂತೂ ನಿರಂತರ ಒದ್ದಾಡುತ್ತ ಪರಿತಪಿಸುತ್ತಿರುವೆ.

ಹೇ ಜನಾರ್ದನ, ನಿನ್ನ ಮಾಯೆಯಿಂದ ಮೋಹಗೊಳಿಸಲ್ಪಟ್ಟು ಈ ಸಂಸಾರದಲ್ಲಿ ನಾನು ತೊಡಗಿದ್ದೇನೆ. ಅಜ್ಞಾನದಿಂದ ಜನ್ಮವಾದ ಕರ್ಮಗಳನ್ನು ನನ್ನ ಯೋಗ್ಯತೆಗೆ ಅನುಗುಣವಾಗಿ ಮಾಡುತ್ತ, ಆ ಕರ್ಮಗಳಿಂದ ಉತ್ಪನ್ನವಾದ ಫಲಕ್ಕೆ ಅನುಗುಣವಾಗಿ ನಾನಾ ಯೋನಿಗಳಲ್ಲಿ ಜನನಾದಿಗಳನ್ನು ಅನುಭವಿಸುತ್ತ, ನನ್ನ ಭ್ರಮಣ ನಡೆದಿದೆ.

ಈ ಸಂಸಾರದಲ್ಲಿ ನಾನಾ ಬಗೆಯ ಸಹಸ್ರಾರು ಜನ್ಮಗಳನ್ನು ಎತ್ತಿ ಸುಖದುಃಖಗಳನ್ನು ಅನುಭವಿಸುತ್ತಿರುವೆ.

ವೇದಾಂಗ ಸಹಿತವಾದ ವೇದಗಳನ್ನು ಅಭ್ಯಸಿಸಿದೆ. ವಿವಿಧ ಶಾಸ್ತ್ರಗಳನ್ನು ತಿಳಿದೆ. ಇತಿಹಾಸ ಪುರಾಣಗಳನ್ನು ಪರಿಶೀಲಿಸಿದೆ. ಶಿಲ್ಪಶಾಸ್ತ್ರವನ್ನು ಜೀರ್ಣಿಸಿಕೊಂಡೆ.

ಸಂತೋಷ, ಅಸಂತೋಷ, ಆಯವ್ಯಯ, ಏರು ಇಳಿತ, ಏಳಿಗೆ ದಿವಾಳಿ, ವೃದ್ಧಿ ನಾಶ ಮೊದಲಾದವುಗಳನ್ನು ಅತಿ ಅನಿಸುವಷ್ಟು ಅನುಭವಿಸಿರುವೆ.

ಹೆಂಡಿರು, ಮಕ್ಕಳು, ಬಂಧುಜನಗಳು ಎಲ್ಲ ಬಂದು ಹೋದರು. ಶತ್ರುಗಳಾದರು, ಮಿತ್ರರಾದರು, ಬೇಕಾದಷ್ಟು ಬಂಧು ಜನಗಳೂ ಆಗಿ ಹೋದರು. ಬೇರೆ ಬೇರೆ ಸ್ವಭಾವದ ತಾಯಿ, ತಂದೆಯರೊಡನೆ ಬೇರೆ ಬೇರೆ ಜನ್ಮಗಳಲ್ಲಿ ವೈವಿಧ್ಯಪೂರ್ಣವಾದ ಅನುಭವ ಗಳಿಗೂ ಒಳಗಾದೆ.

ತರತರಹದ ದುಃಖಗಳಿಗೆ ಪಕ್ಕಾದೆ. ನನಗೆ ಅನೇಕ ಜನ್ಮಗಳಲ್ಲಿ ಬಂಧುಗಳು, ಮಕ್ಕಳು, ಸಹೋದರರು ಬಾಂಧವರು ಎಲ್ಲ ಇದ್ದರು.

ಲೆಕ್ಕವಿಲ್ಲದಷ್ಟು ಬಾರಿ ಮಲಮೂತ್ರಮಯವಾದ ಸ್ತ್ರೀ ಗರ್ಭವಾಸ ನನಗಾಗಿದೆ, ಮಹಾದುಃಖವನ್ನು ಆ ಸಂದರ್ಭದಲ್ಲಿ ಅನುಭವಿಸಿದ್ದೇನೆ.

ಗರ್ಭದಿಂದ ಹೊರಬಂದು ಬೆಳೆದ ಬಳಿಕ ಬಾಲ್ಯ, ಯೌವನ, ವೃದ್ಧಾಪ್ಯ ಎಲ್ಲ ಅವಸ್ಥೆಗಳಲ್ಲೂ ಬಗೆಬಗೆಯ ದುಃಖಗಳನ್ನೇ ಹೆಚ್ಚಾಗಿ ಅನುಭವಿಸಿದ್ದೇನೆ.

ಇಷ್ಟು ಮಾತ್ರವಲ್ಲ, ಆ ಮರಣ ಕಾಲದಲ್ಲಿ ಆಗುವಂತಹ ಯಾತನೆ, ನರಕಮಾರ್ಗದಲ್ಲಿ ವಿಧಿಸಲ್ಪಡುವ ದುಃಖಗಳು ನರಕದಲ್ಲಿ ಯಮದೂತರು ನೀಡುವ ಹಿಂಸೆ ಈ ಎಲ್ಲ ಅನುಭವಗಳಿಗೂ ನಾನು ಒಳಗಾಗಿದ್ದೇನೆ.

ಹುಲಿ ಮೊದಲಾದಕಾಡುಪ್ರಾಣಿ, ಒಂಟೆ, ಎತ್ತು, ಎಮ್ಮೆ, ಕೋಣ, ಹಕ್ಕಿ, ಮೃಗ, ಕುದುರೆ, ಆನೆ, ಕ್ರಿಮಿಕೀಟಗಳು ಮೊದಲಾದ ಎಲ್ಲ ಪಶುಪಕ್ಷಿಗಳ ಜನ್ಮವನ್ನು ನಾನು ಅನುಭವಿಸಿದ್ದೇನೆ.

ಎಲ್ಲ ತರಹದ ಮಾನವರ ಮಧ್ಯೆ ನಾನು ಪುನಃ ಪುನಃ ಜನ್ಮತಳೆದಿರುವೆ. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ರಾಜರು, ರಾಜಸೇವಕರು, ದರಿದ್ರರು, ತಪಸ್ವಿಗಳಾದ ಬ್ರಾಹ್ಮಣರು, ಧನಿಕರು, ಇವರೆಲ್ಲರ ಕುಟುಂಬಗಳಲ್ಲಿಯೂ ಹುಟ್ಟಿ, ಆಯಾಪರಿಸರದ ಸುಖ-ದುಃಖಗಳನ್ನೂ ಅನುಭವಿಸಿರುವೆ.

ಶ್ರೀಮಂತರ ಸೇವಕನಾಗಿ, ಪರಮದರಿದ್ರನಾಗಿ, ಐಶ್ವರ್ಯ ಸಂಪನ್ನನಾಗಿ ಅಧಿಕಾರಿಯಾಗಿ, ಇಷ್ಟೇ ಅಲ್ಲ ರಾಜನಾಗಿಯೂ ನಾನು ವಿಭಿನ್ನ ಅನುಭವ ಪಡೆದಿದ್ದೇನೆ.

ಈ ಅವಧಿಯಲ್ಲಿ ನಾನು, ಕೊಂದವರ ಹಿಂಸಿಸಿದವರ ಲೆಕ್ಕವಿಲ್ಲ. ನನ್ನನ್ನೂ ಶೋಷಿಸಿದವರ, ನನ್ನನ್ನೂ ಹಿಂಸಿಸಿದವರ ಲೆಕ್ಕವೂ ಇಲ್ಲ. ಅನೇಕ ಜನರಿಂದ ಅನೇಕ ಜನ್ಮಗಳಲ್ಲಿ, ಅನೇಕ ಬಾರಿ ಕೊಲ್ಲಲ್ಪಟ್ಟಿದ್ದೇನೆ. ನನಗೆ ಕೆಲ ಜನ ದನಕರುಗಳನ್ನೂ ದಾನವಾಗಿ ಕೊಟ್ಟದ್ದುಂಟು, ನಾನು ಎಷ್ಟೋ ಜನರಿಗೆ ಧನಕನಕದಾನಮಾಡಿದ್ದೇನೆ.

ನಿರ್ಲಜ್ಜನಾಗಿ, ಮುಖದಲ್ಲಿ ದೀನಭಾವ ಹೊತ್ತು, ಶ್ರೋತ್ರಿಯರ ಎದುರಿನಲ್ಲಿ ಧನಿಕರ ಮುಂದೆ ಯಾಚನೆ ಮಾಡಿದ್ದೇನೆ; ತಂದೆ, ತಾಯಿ, ಬಂಧು, ಬಳಗ, ಸ್ನೇಹಿತ, ಸಹೋದರ, ಹೆಂಡತಿ ಮಕ್ಕಳು ಇವರಿಗಾಗಿ, ಕೆಲ ಸಂದರ್ಭಗಳಲ್ಲಿ ದರಿದ್ರರಲ್ಲಿಯೂ ಧನ ಬೇಡಿದ್ದೇನೆ.

ನಾನು ಜನ್ಮವೆತ್ತದ ಸ್ಥಾನವೇ ಇಲ್ಲ. ಮಾನವ ಯೋನಿ, ಪಶುಪಕ್ಷಿಗಳ ಯೋನಿ ಇವುಗಳಲ್ಲಿ, ಮರ, ಬೆಟ್ಟ, ಕಲ್ಲು ಮೊದಲಾದ ವಸ್ತುಗಳ ರೂಪದಲ್ಲಿ ನಾನು ಹುಟ್ಟಿ ಬಂದಿರುವೆ.

ನಾನು ಮರ್ತ್ಯಲೋಕ, ಸ್ವರ್ಗಲೋಕ, ನರಕ ಎಲ್ಲೆಡೆಯಲ್ಲಿ ಆಯಾಕಾಲ ಪ್ರಾಪ್ತವಾದಾಗ ವಾಸಿಸಿದ್ದೇನೆ. ಪಶುಗಳ ಜೊತೆಗೆ ಪಶುಗಳಿಗಿಂತ ಪಶುವಾಗಿ ಬದುಕು ಬದುಕಿದ್ದೇನೆ. ಹೇಗೆ ಬಾವಿಯಿಂದ ಮೇಲಕ್ಕೆ ಎತ್ತಲ್ಪಡುವ ನೀರಿನ ಕೊಡ ಹಗ್ಗದಿಂದ ಕಟ್ಟಲ್ಪಟ್ಟು ಮೇಲೆ ಕೆಳಗೆ, ಮಧ್ಯದಲ್ಲಿ ಸೇದುವವನಿಗೆ ಮನಬಂದಂತೆ ಸೆಳೆಯಲ್ಪಡುವದೋ, ಅದರಂತೆ ನಾನೂ ಸಹ ಭಯಂಕರವಾದ ಈ ಸಂಸಾರ ಚಕ್ರದಲ್ಲಿ ಕರ್ಮಪಾಶದಿಂದ ಬದ್ಧನಾಗಿ ಮೇಲೆ ಕೆಳಗೆ ಎಳೆಯಲ್ಪಟ್ಟು ಭ್ರಮಿಸುತ್ತಿರುವೆ.

ಹೀಗೆ ಸಂಸಾರ ಚಕ್ರದಲ್ಲಿ ಪರಿಭ್ರಮಿಸುತ್ತಲಿರುವ ಈ ಪರಿಭ್ರಮಣಕ್ಕೆ ಅಂತ್ಯ ಎಂದೋ ನಾ ಕಾಣೆ. ಹೇ! ಶ್ರೀಹರಿ, ನಿನ್ನಲ್ಲಿ ಏನನ್ನು ಪ್ರಾರ್ಥಿಸಬೇಕು ಎಂಬುದೂ ನನಗೆ ತಿಳಿಯದಾಗಿದೆ. ಒಟ್ಟಾರೆ ಚಿಂತಾಗ್ರಸ್ತನಾಗಿರುವೆ ನಾನು.

ವ್ಯಸನ, ದುರಾಶೆ ಇವುಗಳಿಗೆ ಈಡಾಗಿ ಭಯಗ್ರಸ್ತನೂ, ಮೂಢನೂ ಆಗಿರುವೆ. ಓ ದೇವ, ನಿನಗೆ ಶರಣು ಬಂದಿದ್ದೇನೆ. ನನ್ನನ್ನು ಸಲಹುವ ಭಾರ ನಿನ್ನದು. ಜಗದೀಶ! ಸಂಸಾರಸಾಗರದಲ್ಲಿ ಮುಳುಗಿ ಬಳಲುತ್ತಿರುವ, ನನ್ನನ್ನು ಉದ್ಧಾರ ಮಾಡು. ನನ್ನನ್ನು ನಿನ್ನ ಭಕ್ತನೆಂದು ತಿಳಿದು, ನನ್ನಲ್ಲಿ ದಯತೋರು. ನಿನ್ನ ಹೊರತು, ನನಗೆ ಹಿತಚಿಂತಕರು ಬೇರಾರೂ ಇಲ್ಲ. ಪ್ರಭುವೇ! ನಿನ್ನನ್ನು ಸ್ವಾಮಿಯಾಗಿ ಪಡೆದ ಮೇಲೆ, ನನಗೆ ಜೀವನದಲ್ಲಿ, ಮರಣದಲ್ಲಿ, ಯೋಗಕ್ಷೇಮದಲ್ಲಿ ಯಾವ ಭಯವಿಲ್ಲ.

ಹೇ! ದೇವ, ದೇವೋತ್ತಮನಾದ ನಿನ್ನನ್ನು ಪೂಜಿಸದ ಮನುಷ್ಯಾಧಮರಿಗೆ ಸಂಸಾರ ಬಂಧನದಿಂದ ಬಿಡುಗಡೆ ಹೇಗಾಗಲು ಶಕ್ಯ? ದೇವಾ, ಜಗತ್ತಿಗೆ ಸ್ವಾಮಿಯಾದ ಕೇಶವನಲ್ಲಿ ಭಕ್ತಿ ಇಲ್ಲದವರಿಗೆ ಕುಲಶೀಲ ಏನಿದ್ದರೂ ಏನೂ ಇಲ್ಲದಂತೆ; ಅವರ ವಿದ್ಯೆ, ಜೀವನ, ಎಲ್ಲ ವ್ಯರ್ಥ, ನಿಷ್ಪ್ರಯೋಜಕ. ತಾಮಸಸ್ವಭಾವದ ಮಾನವರು ನಿನ್ನನ್ನು ನಿಂದಿಸುತ್ತಾರೆ. ಇದರಿಂದಾಗ ಪುನಃ ಪುನಃ ಸಂಸಾರದಲ್ಲಿ ಜನ್ಮವೆತ್ತುತ್ತ ಬಳಲುತ್ತ ಪುನಃಪುನಃ ನರಕವನ್ನು ಪಡೆಯುವರು. ಇಂತಹವರೆಂದೂ ಮುಕ್ತರಾಗಲಾರರು.

ಹೇ! ಶ್ರೀಹರಿ, ನಿನ್ನನ್ನು ದೂಷಿಸುವ ದುರಾಚಾರಿಗಳಾದ ನರಾಧಮರಿಗೆ ನರಕದಿಂದ ಉದ್ಧಾರ ಎಂದಿಗೂ ಇಲ್ಲ. ಸ್ವಾಮಿಯೆ, ನನ್ನ ಕರ್ಮಕ್ಕೆ ಅನುಗುಣವಾದ ಹುಟ್ಟು, ಎಂತಹದೇ ಬರಲಿ. ಎಲ್ಲಿಯೇ ಬರಲಿ, ಆಗೆಲ್ಲ ಅಲ್ಲೆಲ್ಲ ನಿನ್ನಲ್ಲಿ ಭಕ್ತಿ ಮಾತ್ರ ನನಗೆ ದೃಢವಾಗಿರಲಿ.

ದೇವಾ, ದೇವತೆಗಳು, ಪ್ರಹ್ಲಾದ ಮೊದಲಾದ ಸಾತ್ವಿಕ ಅಸುರರು, ಧ್ರುವ ಮೊದಲಾದ ನರರು, ನಿನ್ನ ಆರಾಧನೆಯಿಂದ ಪರಮಪದವನ್ನು ಪಡೆದಿದ್ದಾರೆ. ಅಂದ ಮೇಲೆ ನಿನ್ನನ್ನು ಪೂಜಿಸದಿರಲು ಅದಾರಿಗೆ ಸಾಧ್ಯ. ಬ್ರಹ್ಮಾದಿ ದೇವತೆಗಳೂ ಸಹ ನಿನ್ನ ಸ್ತೋತ್ರಮಾಡಲು ಶಕ್ತರಲ್ಲ. ಕೇವಲ ಮನುಜನಾದ ನನಗೆ ಮಹಾಮಹಿಮೋಪೇತನಾದ ನಿನ್ನನ್ನು ಸ್ತುತಿಸಲು ಹೇಗೆ ಸಾಧ್ಯ?

ಆದರೂ ಸಹ ಅಜ್ಞಾನದಿಂದ ಆವೃತನಾದ ನಾನು ನಿನ್ನನ್ನು ಸ್ತುತಿಸುವಲ್ಲಿ ತಪ್ಪು ಮಾಡಿರಬಹುದು. ನಿನ್ನ ಸ್ತೋತ್ರದಲ್ಲಿ ಇರಬಹುದಾದ ನನ್ನ ದೋಷಗಳನ್ನು ನಿವಾರಿಸಿ ನನ್ನ ಮೇಲೆ ದಯತೋರಿ ನನ್ನನ್ನು ಕ್ಷಮಿಸು.

ಹೇ ನಾರಾಯಣಾ, ಸಜ್ಜನರು ಅಪರಾಧ ಮಾಡಿದವನನ್ನು ಕ್ಷಮಿಸುವರು. ನಿನ್ನ ಭಕ್ತನಾದ ನನ್ನಲ್ಲಿ ಕರುಣೆದೋರು ಓ ದೇವ, ದೇವದೇವ, ನಿನ್ನನ್ನು ಭಕ್ತಿಯಿಂದ ಸ್ತುತಿಸುವೆ. ನನ್ನ ಭಕ್ತಿಯು ಸಫಲವಾಗಲಿ, ಓ ವಾಸುದೇವ, ನಿನಗೆ ನನ್ನ ನಮನ ಎಂದು ಇಂದ್ರದ್ಯುಮ್ನ ಮಹಾರಾಜನು ಬಗೆಬಗೆಯಾಗಿ ಭಗವಂತನನ್ನು ಸ್ತುತಿಸಿದ.

**ಬ್ರಹ್ಮ**:- ಈ ರೀತಿಯಾಗಿ ಇಂದ್ರದ್ಯುಮ್ನ ಮಹಾರಾಜ ಸ್ತುತಿಸಿದ ನಂತರ ಗರುಡಾರೂಢ ಗೋವಿಂದನು ಪ್ರಸನ್ನನಾದ. ಮಹಾರಾಜನಿಗೆ ಅಭೀಷ್ಟಿತವಾದ ವರಗಳನ್ನು ಕರುಣಿಸಿದ.

ಪ್ರತಿನಿತ್ಯ ಜಗದೊಡೆಯನಾದ ಶ್ರೀಹರಿಯನ್ನು ಪೂಜಿಸಿ, ಈ ಸ್ತೋತ್ರವನ್ನು ಉಚ್ಚರಿಸಿ, ಭಗವಂತನನ್ನು ಆರಾಧಿಸುವ ಬುದ್ಧಿವಂತನು ನಿಶ್ಚಿತವಾಗಿ ಮೋಕ್ಷವನ್ನು ಹೊಂದುತ್ತಾನೆ. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲ ತ್ರಿಕಾಲದಲ್ಲೂ ಪರಿಶುದ್ಧನಾಗಿ ಈ ಸ್ತೋತ್ರ ಪಠಣಮಾಡುವವ, ಪಾಪಮುಕ್ತನಾಗಿ ವಿಷ್ಣುವಿನ ವೈಕುಂಠಲೋಕವನ್ನು ಪಡೆಯುತ್ತಾನೆ.

ಈ ಸ್ತೋತ್ರವು ಐಶ್ವರ್ಯವನ್ನು ಕೊಡುವದು. ಭಕ್ತಿಮುಕ್ತಿಗಳೆರಡನ್ನೂ ದಯಪಾಲಿಸುವದು. ಪಾಪಹಾರಿ, ಪುಣ್ಯಕಾರಿ, ಮಂಗಳದಾಯಿ, ರಹಸ್ಯಪೂರ್ಣ. ಸ್ವೇಚ್ಛೆಯಿಂದ ಶ್ರೀಸಾಮಾನ್ಯನಿಗೆಲ್ಲ ಈ ಸ್ತೋತ್ರವನ್ನು ಉಪದೇಶಿಸಬಾರದು. ಈ ಸ್ತೋತ್ರವು ಅಮೂಲ್ಯವಾದದು. ನಾಸ್ತಿಕ, ಮೂರ್ಖ, ಕೃತಘ್ನ, ದುರಹಂಕಾರಿ, ದುಷ್ಟ, ಅಭಕ್ತ ಈ ಆರು ಜನರಿಗೆ ಸ್ತೋತ್ರವನ್ನು ಎಂದೂ ಉಪದೇಶಿಸಬಾರದು.

ಈ ಸ್ತೋತ್ರವನ್ನು ಹೊಂದಲು ಇಚ್ಛಿಸುವವ, ಭಗವಂತನಲ್ಲಿ ಭಕ್ತಿವುಳ್ಳವ ನಾಗಿರಬೇಕು; ಶೀಲವಂತನಾಗಿರಬೇಕು; ಗುಣವಂತನಾಗಿರಬೇಕು; ಶಾಂತನಾಗಿರಬೇಕು. ಶ್ರದ್ಧೆ, ಅನುಷ್ಠಾನ, ವಿಷ್ಣುಭಕ್ತಿ ಮುಂತಾದ ಗುಣಗಳಿಂದ ಯುಕ್ತನಾಗಿರಬೇಕು. ಸಕಲ ಪಾಪನಿವಾರಕವಾದ, ಇಹದಲ್ಲಿ ಭೋಗ, ಪರದಲ್ಲಿ ಮೋಕ್ಷ ಎರಡನ್ನೂ ದಯಪಾಲಿಸುವ ಸಕಲರ ಮನೋರಥಗಳನ್ನು ಈಡೇರಿಸುವ ಪುರುಷೋತ್ತಮ ಸ್ತೋತ್ರಗಳಲ್ಲಿ ರತ್ನಪ್ರಾಯವಾದ ಈ ಸ್ತೋತ್ರವನ್ನು ನಿಮಗೋಸ್ಕರ ನಾನು ಉಪದೇಶಿಸಿರುವೆ ಈ ಸ್ತೋತ್ರಕ್ಕೆ **'ವಿಷ್ಣುಕಾರುಣ್ಯ ಸ್ತೋತ್ರ'** ಎಂದು ಹೆಸರು.

ಇಂದ್ರಿಯಗಳಿಗೆ ಗೋಚರನಲ್ಲದ, ನಿತ್ಯನಾದ ಹೃದ್ದೇಶಿವಾಸಿಯಾದ, ಅನಾದಿ ಪುರುಷನಾದ ಶ್ರೀಹರಿಯನ್ನು ಭಕ್ತಿಯಿಂದ ಧ್ಯಾನಿಸುವವರು ಮಂತ್ರದಿಂದ ಅಗ್ನಿಯಲ್ಲಿ ಹೋಮಿಸಿದ ಘೃತದಂತೆ ವಿಷ್ಣುವನ್ನು ಹೊಂದುವರು. ಭಗವಂತನೋರ್ವನೇ ಸಂಸಾರದುಃಖ ನಿವಾರಿಸಿ ಮೋಕ್ಷವನ್ನು ದಯಪಾಲಿಸಲು ಸಮರ್ಥ, ಅವನಿಗಿಂತ

ಅಧಿಕರಿಲ್ಲ. ಸೃಷ್ಟಿಕರ್ತಾ, ಸ್ಥಿತಿಕರ್ತಾ, **ಸಂಹರ್ತಾ** ಎಲ್ಲ ಅವನೇ. ಈ ಜಗತ್ತಿನಲ್ಲಿ ಸಾರಭೂತನಾದ ವಸ್ತು ಎಂದರೆ ಶ್ರೀಹರಿ ಮಾತ್ರ. ಉಳಿದುದೆಲ್ಲ ನಿಸ್ಸಾರ.

ವಿದ್ಯಾವಂತರಾಗಿದ್ದರೂ, ಗುಣಶೀಲಶಾಲಿಗಳಾಗಿದ್ದರೂ, ಜಗದ್ಗುರುವಾದ ಮೋಕ್ಷದಾಯಕನಾದ ಭಗವಂತನಲ್ಲಿ ಭಕ್ತಿ ಇಲ್ಲದಿದ್ದರೆ ಅವನ ಜೀವನ ವ್ಯರ್ಥ. ಅಂಥವರ ಯಜ್ಞ, ದಾನ, ಕಠೋರತಪ ಎಲ್ಲ ನಿಷ್ಫಲ. ಯಾರಿಗೆ ಪುರುಷೋತ್ತಮನಲ್ಲಿ ನಿಷ್ಫಲವಾದ ನಿಷ್ಠೆ ಇದೆಯೋ ಅವರೇ ಧನ್ಯರು, ಅವರೇ ಪರಮಶುದ್ಧರು, ಅವರೇ ವಿದ್ವಾಂಸರು. ಅವರೇ ಜ್ಞಾನಿ, ಅವರೇ ಸತ್ಯಸಂಧರು, ಅವರೇ ನಿಜವಾದ ದಾತೃಗಳು, ಅವರೇ ಗುಣಗಳಿಂದ ಬಲಿಷ್ಠರು.

**ಬ್ರಹ್ಮ:-** ಮುನಿಗಳೇ, ಹಿಂದೆ ಹೇಳಿದ ರೀತಿಯಲ್ಲಿ ಇಂದ್ರದ್ಯುಮ್ನ ಮಹಾರಾಜನು ನಾರಾಯಣನನ್ನು ಸ್ತುತಿಸಿ, ನೆಲದ ಮೇಲೆ ದರ್ಭೆಗಳನ್ನು ಹಾಸಿ. ಅದರ ಮೇಲೆ ತೆಳುವಾದ ಶುಭ್ರವಸ್ತ್ರವನ್ನು ಹಾಸಿ, ಭಗವಂತನ ಗುಣಗಾನಮಾಡುತ್ತ ಮಾಡುತ್ತ ಭಕ್ತಿಯಿಂದ ಅವನ ಮಂಗಳಸ್ವರೂಪ ಚಿಂತಿಸುತ್ತ ಆ ಸರಳಶೈಯೆಯ ಮೇಲೆ ನಿದ್ರಾವಶನಾದ. ನಿದ್ರೆಯಲ್ಲಿಯೂ ಮಹಾರಾಜನ ಅಂತರಂಗದಲ್ಲಿ ಅದೇ ಕೊರಗು-ಭಗವಂತನು ನನಗೆ ಯಾವಾಗ ಪ್ರತ್ಯಕ್ಷನಾದಾನು? ಅವನ ವಿಗ್ರಹವನ್ನು ಇಲ್ಲಿ ಪ್ರತಿಷ್ಠಾಪಿಸಬೇಕೆನ್ನುವ ನನಗೆ ಮಾರ್ಗದರ್ಶನವನ್ನು ಯಾವ ಫಲಮುಹೂರ್ತದಲ್ಲಿ ಮಾಡಿಯಾನು? ನಿದ್ರೆಯಲ್ಲೂ ಬೆಂಬಿಡದ ಚಿಂತೆಯಿಂದ ಬಸವಳಿದ ಮಹಾರಾಜ. ಸುಷುಪ್ತಾವಸ್ಥೆಯಲ್ಲೂ ತನಗೆ ಅರಿವಿಲ್ಲದೆ ಭಗವಂತನನ್ನು ಕಾಣುವ ಕಾತರದಿಂದ ಭಗವನ್ನಾಮ ಸ್ಮರಣೆಗೈದ. ಕೊನೆಗೊಮ್ಮೆ ರಾಜನ ಕಳಕಳಿಯ ಕರೆ ಭಗವಂತನ ಕಿವಿ ತಲುಪಿತು. ಸ್ವಪ್ನದಲ್ಲಿಯೇ ಶಂಖ, ಚಕ್ರ, ಗದಾಧಾರಿಯಾದ ವಾಸುದೇವನ ದರ್ಶನವಾಯಿತು. ಆ ಮಹಾರಾಜನಿಗೆ. ಸ್ವಪ್ನದಲ್ಲಿ ಇಂದ್ರದ್ಯುಮ್ನ ಮಹಾರಾಜನು ಕಂಡ ಭಗವಂತನ ಸ್ವರೂಪ ಹೀಗಿದ್ದಿತು.

ಶಾರ್ಙ್ಗಧಾರಿಯಾಗಿ, ಪ್ರಳಯಕಾಲದ ಸೂರ್ಯನಂತೆ ತೇಜಸ್ಸಿನಿಂದ ಕಂಗೊಳಿಸುತ್ತಿದ್ದ, ಇಂದ್ರನೀಲಮಣಿಯ ಕೃಷ್ಣಕಾಂತಿ ಭಗವಂತನ ಶರೀರವನ್ನು ಒಪ್ಪುತ್ತಿತ್ತು. ಶಂಖ ಚಕ್ರ ಗದಾಧಾರಿಯಾದ ಆ ಭಗವಂತನು ಅಷ್ಟಭುಜಗಳಿಂದ ಶೋಭಿಸುತ್ತಿದ್ದ. ಗರುಡಾರೂಢನಾಗಿದ್ದ, ಇಂತಹ ಶ್ರೀಮನ್ ನಾರಾಯಣನನ್ನು ಇಂದ್ರದ್ಯುಮ್ನನ ಸ್ವಪ್ನದಲ್ಲಿ ಕಂಡ. ಶ್ರೀಹರಿಯ ಮಹಾರಾಜನನ್ನು ಉದ್ದೇಶಿಸಿ, ಮಾತನಾಡಿದ ''ರಾಜನ್, ನಿನ್ನ ಯಾಗ, ತ್ಯಾಗ, ದಾನ, ದಕ್ಷಿಣೆ, ಭಕ್ತಿ, ಶ್ರದ್ಧಾಪೂರ್ಣ ಸ್ತೋತ್ರಗಳಿಂದ ನಾನು ಪರಿತುಷ್ಟ. ಇನ್ನು ಚಿಂತಸಬೇಡ. ನೀನು ನಿರ್ಮಿಸಿದ ದೇವಾಲಯದಲ್ಲಿ ನೀನು ಪ್ರತಿಷ್ಠಾಪಿಸಬೇಕೆಂದಿರುವ ವಿಗ್ರಹದ ಬಗೆಗೆ ಹೇಳುವೆ, ಕೇಳು.

ಇಂದು ರಾತ್ರಿ ಕಳೆದು, ಸೂರ್ಯ ಉದಯಿಸಿದ ನಂತರ, ಪ್ರಾತಃಕಾಲದ ಪರಿಶುಭ್ರ ವಾತಾವರಣದಲ್ಲಿ ನೀನು ಸಮುದ್ರದ ದಂಡೆಗೆ ಹೋಗು. ಸಮುದ್ರದ ಅಂಚಿಗೆ ನಿನ್ನ ದೃಷ್ಟಿಯನ್ನು ಹರಿಸು. ದೂರದಿಂದ ನೋಡಲು ಬರೀ ನೀರು ಮಾತ್ರ ಕಾಣುವ ಆ ಪ್ರದೇಶ ದಲ್ಲಿ ಸಮೀಪಕ್ಕೆ ಹೋದರೆ ಆಲದ ದೊಡ್ಡ ಮರ ಒಂದು ಕಾಣಿಸುವದು. ನೀರಿನ ಮಧ್ಯೆ ಇರುವ ಆ ಮರವು ಎಂತಹ ಜೋರಾದ ಅಲೆಗೂ ಅಲುಗಾಡದೆ ಅಚಲವಾಗಿ ನಿಂತಿರುವದು. ಈ ಆಲದ ಮರವು ನೆಲ ಮತ್ತು ನೀರನ್ನು ವ್ಯಾಪಿಸಿ ಇರುವದು. ಮಹಾರಾಜ, ಕೊಡಲಿಯನ್ನು

ಕೈಯಲ್ಲಿ ಹಿಡಿದು ಸಮುದ್ರದಲ್ಲಿ ಈಸುತ್ತ ಈಸುತ್ತ ಮುಂದೆ ಸಾಗು. ನಿನಗೆ ನಾನು ಹೇಳಿದ ಮರ ಕಾಣಿಸುವದು. ಅಲ್ಲಿಲ್ಲೂ ಇಂತಹ ಮರಗಳೇ ಇಲ್ಲದ್ದರಿಂದ ಈ ಮರವನ್ನು ಗುರುತಿಸುವದು ನಿನಗೆ ಕಷ್ಟವಾಗಲಾರದು. ಮರದ ಸಮೀಪಕ್ಕೆ ಹೋಗಿ, ಕೈಯಲ್ಲಿ ಕೊಡಲಿಯಿಂದ ಅದನ್ನು ಕಡಿ. ಹಾಗೆ ಮಾಡಲು ಭಯಗೊಳ್ಳಬೇಡ. ಕಡಿಯುತ್ತಿರುವಂತೆಯೇ ಆ ಮರವು ಉಜ್ವಲ ಬೆಳಕಿನಿಂದ ಬೆಳಗುವದು. ಕಡಿದ ಆ ಮರದ ಕಟ್ಟಿಗೆಯಿಂದ ನಿರ್ಮಿತವಾದ ನನ್ನ ಆಕಾರದ ವಿಗ್ರಹವನ್ನು ನಿರ್ಮಿಸಿ ಪ್ರತಿಷ್ಠಾಪಿಸು. ಇನ್ನು ಯಾವುದಕ್ಕೂ ಚಿಂತಿಸಬೇಡ'' ಹೀಗೆ ಹೇಳಿ ಭಗವಂತನು ಅಂತರ್ಧಾನನಾದ.

ಇಂದ್ರದ್ಯುಮ್ನ ಕನಸಿನಿಂದ ಎಚ್ಚತ್ತ. ಸ್ವಪ್ನದಲ್ಲಿ ನಡೆದುದನ್ನು ಆಲೋಚಿಸಿ ವಿಸ್ಮಯಗೊಂಡ. ಸೂರ್ಯೋದಯವಾಗುವವರೆಗೆ ವಿಷ್ಣುಸೂಕ್ತವೇ ಮೊದಲಾದ ಮಂತ್ರಗಳಿಂದ ವಿಷ್ಣುವನ್ನು ಸ್ತುತಿಸುತ್ತ ಕಾಲಕಳೆದ. ಬೆಳಗಾದ ಮೇಲೆ ಓರ್ವನೆ, ಸಮುದ್ರದೆಡೆ ಸಾಗಿದ, ಕುದುರೆ, ಆನೆ, ಪರಿವಾರ ಎಲ್ಲ ಇದ್ದರೂ ಯಾರ ಸಹಾಯವನ್ನೂ ಪಡೆಯದೆ, ಕಾಲ್ನಡಿಗೆಯಿಂದಲೇ ಸಮುದ್ರವನ್ನು ಸಮೀಪಿಸಿದ. ಮನಸಾ ಭಗವಂತನ್ನು ಸ್ಮರಿಸಿ ಕೈಯಲ್ಲಿ ಪರಶುವನ್ನು ಹಿಡಿದು, ಸಮುದ್ರದಲ್ಲಿ ಈಸುತ್ತ ಮುಂದೆ ಸಾಗಿದ. ಸ್ವಲ್ಪ ದೂರ ಸಾಗಿದ ಮೇಲೆ ಮಹಾರಾಜನ ಕಣ್ಣಿಗೆ ಕಾಣಿಸಿತು, ಭಗವಂತ ಹೇಳಿದ ಆಲದಮರ ಅತ್ಯುನ್ನತವೂ, ಅಗಲವಿಸ್ತಾರ ಉಳ್ಳದ್ದೂ ಆದ ಆ ಮರಕ್ಕೆ ದೊಡ್ಡದೊಡ್ಡ ರಂಬೆ ಕೊಂಬೆಗಳು ಚಾಚಿಕೊಂಡಿದ್ದವು. ಇಂತಹ ಮರವನ್ನು ಮಹಾರಾಜ ಎಂದೂ ನೋಡಿರಲಿಲ್ಲ. ಮರವನ್ನು ನೋಡುತ್ತ ಅದನ್ನು ಸಮೀಪಿಸಿದ ಮಹಾರಾಜನು, ಮರದ ಆಳತೆಗೆ ಬಂದಾಕ್ಷಣ ಕೊಡಲಿಯನ್ನು ಮೇಲೆತ್ತಿದ. ಕತ್ತರಿಸಲು ಉದ್ಯುಕ್ತನಾದ. ಅಷ್ಟರಲ್ಲಿ ಆಶ್ಚರ್ಯಕರ ದೃಶ್ಯ ಒಂದು ಮಹಾರಾಜನ ಕಣ್ಣಿಗೆ ಗೋಚರಿಸಿತು. ಮಹಾತ್ಮರಾದ ವಿಶ್ವಕರ್ಮ ಹಾಗೂ ಬ್ರಾಹ್ಮಣ ರೂಪಧರಿಸಿ ಶ್ರೀವಿಷ್ಣುವು ಇವರಿಬ್ಬರೂ ಸ್ವಕೀಯ ತೇಜಸ್ಸುಗಳಿಂದ ಬೆಳಗುತ್ತ ರಾಜನ ಬಳಿಗೆ ಬಂದರು. ರಾಜನನ್ನು ಪ್ರಶ್ನಿಸಿದರು- ''ರಾಜನೇ ಈ ಮರವನ್ನು ಏಕೆ ಕಡಿಯುತ್ತಿರುವೆ?

**ರಾಜ:-** ಮಹಾತ್ಮರೇ, ಜಗದೊಡೆಯನಾದ. ಶ್ರೀಮನ್‌ನಾರಾಯಣನ ಆರಾಧನೆಗಾಗಿ ಅವನ ವಿಗ್ರಹ ಒಂದನ್ನು ನಿರ್ಮಿಸುವ ಬಯಕೆಯಿಂದ ಆ ವಿಗ್ರಹಕ್ಕೆ ಬೇಕಾದ ಕಟ್ಟಿಗೆಗೋಸ್ಕರ ಈ ಮರವನ್ನು ಕಡಿಯುತ್ತಲಿರುವೆ. ವಿಗ್ರಹಕ್ಕೆ ಯಾವ ಲೋಹವನ್ನು ಬಳಸಬೇಕು ಎಂಬ ಚಿಂತೆಯಲ್ಲಿ ನಾನಿದ್ದಾಗ, ನಾರಾಯಣನು ಸ್ವಪ್ನದಲ್ಲಿ ಕಾಣಿಸಿಕೊಂಡು, 'ಇದೇ ಮರವನ್ನು ಉಪಯೋಗಿಸಿ, ವಿಗ್ರಹವನ್ನು ರಚಿಸು' ಎಂದು ಅಪ್ಪಣೆ ಮಾಡಿದನು. ದೇವೇಶನ ಆಣತಿಯಂತೆ 'ನಾನು ಈ ಮರವನ್ನು ಕಡಿಯಲು ಬಂದಿದ್ದೇನೆ' ಎಂದು ನುಡಿದು. ಆ ಮಹಾತ್ಮರನ್ನು ನಮಸ್ಕರಿಸಿದನು.

ಮಹಾರಾಜನ ಈ ಮಾತು ಕೇಳಿ, ಶ್ರೀಹರಿಗೆ ಸಂತಸವೆನಿಸಿತು. ಹೀಗೆ ನುಡಿದನು- 'ಮಹಾರಾಜ, ನಿನ್ನ ಸಾತ್ವಿಕ ಬುದ್ಧಿಯನ್ನು ಕಂಡು, ನನಗೆ ಅಮಿತ ಆನಂದವಾಗಿದೆ. ಈ ಸಂಸಾರವು ಒಂದು ಅಸಾರಸಾಗರ; ಬಾಳೆಯ ಎಲೆಯಂತೆ ತರಳ, ನೀರ್ಗುಳೆಯಂತೆ ಕ್ಷಣಿಕ. ಇದರಲ್ಲಿನ ಎಲ್ಲವೂ ಅಸ್ಥಿರ. ಸುಖದಾಯಕವಾದ ಪ್ರಪಂಚಿಕ ವಿಷಯಗಳೆಲ್ಲವೂ ಕಾಲಾಂತರದಲ್ಲಿ ದುಃಖದಾಯಕ ಈ ಸಂಸಾರ ಸಾಗರದಲ್ಲಿ ಕಾಮ, ಕ್ರೋಧಗಳೆಂಬ ದುಷ್ಟ

ಜಲಜಂತುಗಳಿವೆ. ಇಂದ್ರಿಯಗಳೆಂಬ ಒಳಸುಳಿಗಳಿವೆ. ಅನೇಕ ಬಗೆಯ ರೋಗಗಳೆಂಬ ಮಡುಗಳಿವೆ. ಇದನ್ನು ದಾಟಲು ಶಕ್ಯವಿಲ್ಲ. ಅಂತೆಯೇ ಇದನ್ನು 'ದುಸ್ತರಸಾಗರ' ವೆನ್ನುತ್ತಾರೆ. ಇಂತಹ ಸಂಸಾರದಲ್ಲಿದ್ದೂ ನಿನಗೆ ಶ್ರೀಹರಿಯನ್ನು ಆರಾಧಿಸಬೇಕೆಂಬ ಬುದ್ಧಿ ಉಂಟಾದುದು ನಿನ್ನ ಸಾತ್ವಿಕತೆಯ ಕುರುಹು. ನಿನ್ನಂತಹ ಗುಣಾಢ್ಯನಾದ ರಾಜನನ್ನು ಪಡೆದ ಪ್ರಜೆಗಳು ಧನ್ಯರು. ಬೆಟ್ಟ, ಕಾಡು, ಪುರ, ಗ್ರಾಮ, ನಗರ ಮುಂತಾದ ಪ್ರದೇಶಗಳನ್ನೊಳಗೊಂಡ ನಿನ್ನ ಆಳ್ವಿಕೆಯಲ್ಲಿನ ರಾಜ್ಯವು ಧನ್ಯ ಧನ್ಯ! ಮಹಾತ್ಮಾ, ಇದೋ ನನ್ನ ಜೊತೆಗೆ ಬಾ, ಈ ತಂಪಾದ ನೆರಳಿನಲ್ಲಿ ನಾವು ಕುಳಿತುಕೊಂಡು ಮಾತನಾಡೋಣ. ನನ್ನ ಹತ್ತಿರ ಇರುವ ಈ ಬ್ರಾಹ್ಮಣನು ನನ್ನ ಸಹಾಯಕ; ಇವನಿಗೆ ಸರಿಸಾಟಿ ಎನಿಸುವ ಶಿಲ್ಪಿ ಭೂಲೋಕದಲ್ಲಿ ಮಾತ್ರವಲ್ಲ, ದೇವಲೋಕದಲ್ಲೂ ಇಲ್ಲ. ವಿಶ್ವಕರ್ಮನಂತೆ ಎಲ್ಲ ಶಿಲ್ಪಗಳನ್ನು ನಿಪುಣತೆಯಿಂದ ಕಟೆದು ನಿಲ್ಲಿಸಬಲ್ಲ. ಈ ಎದುರು ಕಾಣುವ ಮರದಿಂದ ನಿನ್ನ ಅಪೇಕ್ಷೆ ಇರುವಂತಹ ವಿಗ್ರಹವನ್ನು ನನ್ನ ಸಖನು ನಿರ್ಮಿಸಿ ನಿನಗೆ ಕೊಡುವನು. ಸಮುದ್ರದಿಂದ ಮೇಲೆ ಬಾ' ಎಂದ.

ಬ್ರಾಹ್ಮಣ ವೇಷಧರಿಸಿದ ಶ್ರೀಹರಿಯ ಈ ಮಾತುಗಳನ್ನು ಕೇಳಿ, ಇಂದ್ರದ್ಯುಮ್ನ ಮಹಾರಾಜನು ಸಾಗರದ ದಡವನ್ನು ಬಿಟ್ಟು ಈಚೆಬಂದು, ನೆರಳಿನಲ್ಲಿ ಆ ಬ್ರಾಹ್ಮಣ ನೊಡನೆ ಕುಳಿತುಕೊಂಡ. ಅನಂತರ ಇನ್ನೊಬ್ಬ ಬ್ರಾಹ್ಮಣ ವೇಷಧರಿಸಿದ ವಿಶ್ವಕರ್ಮನಿಗೆ ವಿಗ್ರಹಗಳನ್ನು ನಿರ್ಮಿಸಲು ಶ್ರೀಹರಿಯು ಆಜ್ಞಾಪಿಸಿದ. ವಿಗ್ರಹಗಳನ್ನು ನಿರ್ಮಿಸಲು ಕ್ರಮ ಹಾಗೂ ಲಕ್ಷಣಗಳನ್ನು ಭಗವಂತನು ಹೀಗೆ ತಿಳಿಯಪಡಿಸಿದ- 'ಮೊದಲು ನೀಲದೇಹದ ಕೃಷ್ಣವಿಗ್ರಹ ನಿರ್ಮಿಸು. ಅವನಿಗೆ ತಾವರೆಯಂತಹ ವಿಶಾಲವಾದ ಕಣ್ಣುಗಳಿರಲಿ. ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ ಇರಲಿ. ಕೈಗಳಲ್ಲಿ ಶಂಖ, ಚಕ್ರ, ಗದೆ, ಅಲಂಕೃತವಾಗಿರಲಿ. ಹೀಗೆ ಕೃಷ್ಣ ವಿಗ್ರಹ ನಿರ್ಮಿಸಿದ ನಂತರ ಬಿಳಿ ಶರೀರದ ಬಲರಾಮ ವಿಗ್ರಹ ನಿರ್ಮಿಸು. ಬಲರಾಮನಿಗೆ ಸ್ವಸ್ತಿಕ ಚಿಹ್ನೆ ಇರಬೇಕು. ಕೈಯಲ್ಲಿ ನೇಗಿಲು ಇರಬೇಕು. ಈ ಬಲರಾಮ ವಿಗ್ರಹ ನಿರ್ಮಾಣದ ನಂತರ ವಾಸುದೇವನ ತಂಗಿಯಾದ ಸುಭದ್ರೆಯ ವಿಗ್ರಹವನ್ನು ವಿರಚಿಸು. ಅವಳ ಮೈಬಣ್ಣ ಸುವರ್ಣವರ್ಣ, ಹಾರ ಮೊದಲಾದ ಸಕಲ ಅಲಂಕಾರಗಳಿಂದ ಅವಳು ಸುಂದರವಾಗಿ ಒಪ್ಪುವಂತಾಗಬೇಕು.

ಶ್ರೀಹರಿಯ ಈ ಮಾತುಗಳನ್ನು ಕೇಳಿ, ಸಕಲ ಶಿಲ್ಪ ಪಾದದೃಶ್ವ್ಯನಾದ ವಿಶ್ವಕರ್ಮನು, ಸಕಲ ಲಕ್ಷಣಲಕ್ಷಿತವಾದ ವಿಗ್ರಹತ್ರಯಗಳನ್ನು ಅಲ್ಪಕಾಲದಲ್ಲಿಯೇ ನಿರ್ಮಿಸಿದ. ಈ ವಿಗ್ರಹಗಳನ್ನು ಕಂಡು, ಇಂದ್ರದ್ಯುಮ್ನ ಮಹಾರಾಜನಿಗೆ ಸಾಶ್ಚರ್ಯ ಆನಂದ. ಆ ಬ್ರಾಹ್ಮಣದ್ವಯರನ್ನು ಉದ್ದೇಶಿಸಿ, ಇಂದ್ರದ್ಯುಮ್ನ ಇಂತೆಂದ- ''ಬ್ರಾಹ್ಮೋತ್ತಮರೇ ಹೊರ ನೋಟಕ್ಕೆ ಬ್ರಾಹ್ಮಣರಂತೆ ಕಾಣುವ ನೀವು ವಸ್ತುತಃ ದೇವತೆಗಳೇ ಆಗಿರುವಿರಿ. ದೇವತೆಗಳಲ್ಲದಿರುವವರಿಗೆ ಇಂತಹ ಅಸಾಮಾನ್ಯ ಶಕ್ತಿ, ಈ ಅಸಾಧಾರಣ ಸಾಮರ್ಥ್ಯ ಇರಲು ಸಾಧ್ಯವಿಲ್ಲ. ನಿಮ್ಮ ತೇಜಸ್ಸು ನೋಡಿದಾಗಲೆ, ನನಗೆ ಅನ್ನಿಸಿತು-ನೀವು ಮನುಷ್ಯರಲ್ಲ ಎಂದು. ನನ್ನ ಮೇಲೆ ಕೃಪೆದೋರಿ ನಿಮ್ಮ ನಿಜಸ್ವರೂಪ ತಿಳಿಸಿರಿ'' ಎಂದು ಮಹಾರಾಜನು ಅವರಲ್ಲಿ ಬಿನ್ನಹ ಮಾಡಿದ.

**ಭಗವಂತ:-** ರಾಜನೇ, ನಾನು ಸಾಕ್ಷಾತ್ ಶ್ರೀಹರಿ, ನಿನ್ನ ಆರಾಧ್ಯದೈವ ಪುರುಷೋತ್ತಮ, ವೇದಶಾಸ್ತ್ರ, ವೇದಾಂತಗಳೆಲ್ಲದರ ಪರಮಗಮ್ಯ. ಯೋಗಿಗಳು

ನನ್ನನ್ನೇ 'ಜ್ಞಾನಗಮ್ಯ' 'ವಾಸುದೇವ' ಎಂದು ಕರೆಯುವರು. ಬ್ರಹ್ಮನಿಂದ ಸೃಷ್ಟಿ ಮಾಡಿಸುವವನು. ರುದ್ರನಿಂದ ಸಂಹಾರ ಮಾಡಿಸುವವನು. ಪರಿಪಾಲನೆ ಮಾಡುವವನು. ಶ್ರೀಹರಿಯ ಸ್ವರೂಪಿಯಾದ ನಾನೇ, ಇಂದ್ರ, ಚಂದ್ರ, ಯಮ, ಅಗ್ನಿ ಮುಂತಾದ ದೇವಾಧಿದೇವತೆಗಳಿಗೆಲ್ಲ ಅವರವರ ಕಾರ್ಯ ನಿರ್ವಹಿಸಲು ಅವರವರಲ್ಲಿನ ಶಕ್ತಿಯನ್ನು ಪ್ರಚೋದಿಸುವವ ನಾನೇ. ಈ ಚೇತನಾಚೇತನಾತ್ಮಕವಾದ ಪ್ರಪಂಚವೆಲ್ಲ ನನ್ನ ಇಚ್ಛಾನುವರ್ತಿಯಾಗಿ ನಡೆಯುವದು.

ಮಹಾರಾಜ, ನಿನ್ನ ಸಾಧನೆಯಿಂದ ನಾನು ಸಂತುಷ್ಟ ವರ ಕೇಳಿಕೊ. ಅಪುಣ್ಯರಿಗೆ ನನ್ನ ದರ್ಶನವು ಸ್ವಪ್ನದಲ್ಲಿಯೂ ದುರ್ಲಭ. ನೀನು ಮಾತ್ರ ಸದೃಢಭಕ್ತಿ ಸಂಪನ್ನ-ನಾದುದರಿಂದ ಪ್ರತ್ಯಕ್ಷವಾಗಿ ನೀನು ನನ್ನನ್ನು ನೋಡುತ್ತಿರುವೆ. ಹಿಂದೆ ಸ್ವಪ್ನದಲ್ಲಿಯೂ ಕಂಡಿರುವೆ. ಇದು ನಿನ್ನ ಸಾಧನೆಗೆ ಫಲ, ಬೇಕಾದುದನ್ನು ಬೇಡು.

ಹೀಗೆ ಹೊರಹೊಮ್ಮಿದ ಶ್ರೀಹರಿಯ ನುಡಿಗಳನ್ನು ಕೇಳಿ, ಮಹಾರಾಜನ ಮೈಯಲ್ಲಿ ಮಿಂಚಿನ ಸಂಚಾರವಾದಂತಾಯಿತು. ಭಕ್ತಿಭರಿತನಾಗಿ, ಶ್ರೀಹರಿಯನ್ನು ಹೀಗೆ ಸುತ್ತಿಸಿದ-

"ಹೇ ಲಕ್ಷ್ಮೀಶ ನಿನಗೆ ನನ್ನ ನಮಸ್ಕಾರಗಳು. ಈವರೆಗೆ ನಾನು ಪಡೆದುದೆಲ್ಲವೂ ನೀನು ಅನುಗ್ರಹಿಸಿದ ಸಂಪಧ್ಯಾನವೇ. ಈ ಸಂಪತ್ತಿಗೆ ಒಡೆಯ ನೀನು. ಐಶ್ವರ್ಯಕ್ಕೆ ಆಶ್ರಯ ಸ್ಥಾನ ನೀನು. ಇಂತಹ ನಿನಗೆ ನನ್ನ ನಮಸ್ಕಾರ. ಪುರಾಣಪುರುಷ ಸರ್ವೇಶ್ವರ ಸರ್ವವ್ಯಾಪಕ ಅನಯವಾಯವ, ಏಕ ಭೇದವಿಲ್ಲದ ಅಖಂಡ ಸ್ವರೂಪಿ, ನಿತ್ಯ ಪರಮಾತ್ಮರೂಪ! ಹೇ ಸ್ವಾಮಿನ್, ನಿನ್ನನ್ನು ನಮಸ್ಕರಿಸುತ್ತೇನೆ. ಓ ದೇವ, ನೀನು ಪ್ರಾಕೃತಿಕ ಗುಣಗಳಿಂದ ಬಹುದೂರ. ಪ್ರಾಕೃತಿಕ ಇಂದ್ರಿಯಗಳಿಂದ ನಿನ್ನನ್ನು ನೋಡಲು ಸಾಧ್ಯವಿಲ್ಲ. ನಿನ್ನನ್ನು ವರ್ಣಿಸಲು ಶಬ್ದಗಳು ಸೆರೆ ಹಿಡಿಯಲಾರವು. ಸರ್ವಜ್ಞಸ್ವರೂಪಿ ನೀನು, ಜನ್ಮ- ಮೃತ್ಯುರಹಿತನಾದ ಪರಿಶುದ್ಧಮೂರ್ತಿ ನೀನು. ಮಳೆಗಾಲದ ಕರಿಮೋಡದಂತೆ, ಕಪ್ಪಾದ ಶರೀರ ಉಳ್ಳ ಹೇ ಪರಮಾತ್ಮನೆ, ಗೋವುಗಳಿಗೆ, ಬ್ರಾಹ್ಮಣರಿಗೆ ಸಕಲ ಜನಸಮುದಾಯಕ್ಕೆ ಕಲ್ಯಾಣವನ್ನುಂಟುಮಾಡುವವ ನೀನೇ. ಎಲ್ಲೆಡೆಗೆ ವ್ಯಾಪಿಸಿರುವ ಹೇ ದೇವದೇವ, ಇದೋ ನನ್ನ ಅನಂತ ನಮಸ್ಕಾರಗಳು ಶಂಖ, ಚಕ್ರ, ಗದೆ, ಮುಸಲ ಇವುಗಳನ್ನು ನೀನು ಧರಿಸಿರುವೆ. ಕನ್ನೈದಿಲೆಯಂತೆ ನೀಲಕಾಂತಿಯುಳ್ಳವ ನೀನು, ಭಕ್ತರಿಗೆ ವರಪ್ರದಾಯಕ, ಅಭಯದಾಯಕ ನೀನೇ, ನಿನಗೆ ನನ್ನ ಮಸ್ಕಾರ. ಕ್ಷೀರಸಾಗರದಲ್ಲಿ ಮಲಗಿರುವವ, ಇಂದ್ರಿಯಾಭಿಮಾನಿ ದೇವತೆಗಳನ್ನು ನಿಯಂತ್ರಿಸುವವ, ಪಾಪನಾಶಕ, ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಗೂ ಒಡೆಯ, ಮುಕ್ತಿದಾಯಕ, ಹೇ ದೇವೇಶ, ಪುನಃ ಪುನಃ ನಿನ್ನನ್ನು ನಮಸ್ಕರಿಸುವೆ.

ಹೀಗೆ ನಾರಾಯಣನನ್ನು ನಮಿಸಿ, ಹರ್ಷೋದ್ರೇಕದಿಂದ ಆನಂದಬಾಷ್ಪ ಸುರಿಸುತ್ತ, ಗದ್ಗದಕಂಠದಿಂದ ಉಚ್ಚಸ್ವರದಲ್ಲಿ ಭಗವಂತನ ಗುಣಗಾನಮಾಡುತ್ತ ಭಗವಂತನ ಪಾದಾರವಿಂದಗಳಲ್ಲಿ ಅಡ್ಡಬಿದ್ದ ಆ ಮಹಾರಾಜ ಮತ್ತೆ ನುಡಿದ "ಸ್ವಾಮಿ ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ಒಂದೇ ಒಂದು ವರವನ್ನನುಗ್ರಹಿಸು. ಯಾವ ಉತ್ತಮಪದವನ್ನು ಪಡೆಯಲು ದೇವತೆಗಳು, ರಾಕ್ಷಸರು, ಗಂಧರ್ವರು, ಯಕ್ಷರು, ಮಹಾ ಸರ್ಪಗಳು, ಸಿದ್ಧರು, ಸಾಧ್ಯರು, ವಿದ್ಯಾಧರರು, ಕಿನ್ನರರು, ಗುಹ್ಯರು, ಮಹರ್ಷಿಗಳು, ಶಾಸ್ತ್ರಜ್ಞರು,

ಸಂನ್ಯಾಸಿಗಳು, ಯೋಗಿಗಳು, ವೇದಾಂತ ಚಿಂತಕರು, ಮುಕ್ತಿ ಮಾರ್ಗಾನ್ವೇಷಕರು, ನಿನ್ನನ್ನು ಸಂತತವಾಗಿ ಚಿಂತಿಸುವರೋ ಅಂತಹ ಪರಮಪದವನ್ನು ನನಗೆ ಅನುಗ್ರಹಿಸು. ಎಲ್ಲಿ ಇದ್ದರೆ, ನಿನ್ನ ದರ್ಶನ ಸದಾ ಸುಲಭವೋ ಅಂತಹ ಸ್ಥಾನವನ್ನು ನಾನು ಸೇರ ಬಯಸುವೆ.

**ಭಗವಂತ:-** ರಾಜನ್, ನಿನ್ನ ಮನೋರಥಗಳೆಲ್ಲ ಸಿದ್ಧಿಸಲಿ, ನೀನು ಹನ್ನೊಂದು ಸಾವಿರ ವರ್ಷಗಳವರೆಗೆ, ಸಮಗ್ರ ಭೂಮಂಡಲಕ್ಕೆ ಚಕ್ರವರ್ತಿ ಸಾರ್ವಭೌಮನಾಗಿದ್ದು, ಆಳಿ, ಇಲ್ಲಿನ ಸಕಲ ಭೋಗಭಾಗ್ಯಗಳನ್ನು ಅನುಭವಿಸಿ ಅನಂತರ ನಾನಿರುವಲ್ಲಿಗೆ ಬರುವಿ. ಯಾವ ಸ್ಥಾನವನ್ನು ಮಹಾನುಭಾವರೆಲ್ಲ ಸದಾ ಮನಃಪೂರ್ವಕವಾಗಿ ಬಯಸಿ, ಧ್ಯಾನಾದಿಗಳನ್ನು ಕೈಗೊಂಡಿದ್ದಾರೋ, ಆ ಸ್ಥಾನವು ನನ್ನ ಅನುಗ್ರಹದಿಂದ ನಿನಗೆ ಅನಾಯಾಸವಾಗಿ ಲಭಿಸುವದು. ಆ ಮೋಕ್ಷದಲ್ಲಿ ಕಾರಣ, ಕಾರ್ಯ ಕ್ರಿಯೆ, ಎಂಬ ಭೇದಗಳೇ ಇಲ್ಲ. ದುಃಖಮಿಶ್ರಿತವಲ್ಲದ ಆ ಸುಖವನ್ನು ಒಮ್ಮೆ ಅನುಭವಿಸಿದವ ಪುನಃ ಭೂಲೋಕದ ಅಲ್ಪಕಾಲದ ಸುಖದತ್ತ ಕಣ್ಣೆತ್ತಿಯೂ ನೋಡಲಾರ. ಇಂತಹ ಮಹದಾನಂದಕ್ಕೆ ನೀನು ಭಾಜನನಾಗುವಿ. ರಾಜೇಂದ್ರ, ಸೂರ್ಯಚಂದ್ರ, ನಕ್ಷತ್ರಗಳು, ಮೋಡಗಳು, ಸಾಗರಗಳು, ಮೇರು ಮೊದಲಾದ ಪರ್ವತಗಳು ಇರುವವರೆಗೂ ನಿನ್ನ ಕೀರ್ತಿಯೂ ಭೂಲೋಕದಲ್ಲಿ ಸ್ಥಿರವಾಗಿ ವಿರಾಜಿಸುವದು. ಸ್ವರ್ಗದಲ್ಲಿ ಎಲ್ಲಿಯವರೆಗೆ ದೇವತೆಗಳಿರುತ್ತಾರೋ, ಅಲ್ಲಿಯವರೆಗೆ ಯಶಸ್ಸು ಸ್ಥಿರವಾಗಿರವದು. ನೀನು ಮಹಾನ್ ಯಜ್ಞವನ್ನು ನೆರವೇರಿಸಿ ಕೊನೆಗೆ ಅವಭೃತಸ್ನಾನವನ್ನು ನೀನು ಯಾವತೀರ್ಥದಲ್ಲಿ ಪೂರೈಸಿರುವೆಯೋ ಆ ತೀರ್ಥವು ಮುಂದೆ ಇಂದ್ರದ್ಯುಮ್ನ ತೀರ್ಥವೆಂದು ಲೋಕದಲ್ಲಿ ಪ್ರಸಿದ್ಧವಾಗುವದು. ಈ ತೀರ್ಥದಲ್ಲಿ ಒಂದು ಸಲ ಸ್ನಾನಮಾಡಿದವನು ಶ್ರದ್ಧೆಯಿಂದ ಅರ್ಚಿಸಿದ್ದಾದರೆ ಸ್ವರ್ಗವನ್ನು ಪಡೆಯುವನು. ಈ ತೀರ್ಥದ ದಡದಲ್ಲಿ ಪಿತೃಶ್ರಾದ್ಧ ಪೂರೈಸಿದವ ತನ್ನ ಕುಲದ ಇಪ್ಪತ್ತೊಂದು ಪಿತೃಗಳನ್ನು ಉದ್ಧರಿಸಿ ಕೊನೆಗೆ ಸ್ವರ್ಗವನ್ನು ಪಡೆಯುತ್ತಾನೆ. ಸ್ವರ್ಗದಲ್ಲಿ ಅವನನ್ನು ಅಪ್ಸರೆಯರು ವಿಧವಿಧವಾದ ವಿಲಾಸ ವಿಭ್ರಮಗಳಿಂದ, ಗಂಧರ್ವರು ಇಂಪಾದ ಗಾನಗಳಿಂದ ಸೇವಿಸುತ್ತಾರೆ. ಸ್ವರ್ಗದಲ್ಲಿ ಈ ಪುಣ್ಯಜೀವಿಯು ಅಪ್ಸರೆಯರೊಡನೆ ವಿಮಾನದಲ್ಲಿ ವಿಹರಿಸುತ್ತ ಹದಿನಾಲ್ಕು ಇಂದ್ರರು ಕಳೆಯುವವರೆಗೂ ಭೋಗಭಾಗ್ಯಗಳನ್ನು ಅನುಭವಿಸುವನು.

ಇಂದ್ರದ್ಯುಮ್ನ ಸರೋವರದ ದರ್ಕ್ಷಭಾಗದಲ್ಲಿ ಆಲದಮರ ಒಂದಿರುವದು. ಆ ಮರದ ಸಮೀಪದಲ್ಲಿ ಒಂದು ಮಂಟಪ, ಆ ಮಂಟಪದ ಸುತ್ತಮುತ್ತಲೂ ಬಗೆ ಬಗೆಯ ವನಗಳು, ತೆಂಗು, ಸಂಪಿಗೆ, ಗೋರಂಟಿಗೆ, ಅಶೋಕ, ಕರ್ಣಿಕಾರ, ಪುನ್ನಾಗ, ನಾಗಕೇಶವ, ಪಾಟಲ, ಆಮ್ರತ, ಸರ್ಗ್ಯ ಚಂದನ, ಸುರಹೊನ್ನೆ ಮುಂತಾದ ಅಮೂಲ್ಯ ಮರಗಳು ಸಮೃದ್ಧವಾಗಿ ಆ ಮಂಟಪದ ಸುತ್ತುಮುತ್ತಲು ಪರಿಸರದಲ್ಲಿ ಪಸರಿಸಿವೆ. ಮಂಟಪದಿಂದ ಸ್ವಲ್ಪ ದೂರದಲ್ಲಿಯೇ ಆಲ, ಅಶ್ವತ್ಥ, ಉತ್ತರಣೆ, ಪಾರಿಜಾತ, ಆದುರ್ಶನ, ಹಿಂತಾಲ, ತಾಳೆ, ಶಿಂಶುಪ, ಬದರಿ, ಕಲ್ಲಂಗಡಿ, ಚಕ್ಕೋಲಿತ, ಪ್ಲಕ್ಷ, ಹಲಸು, ಬಿಲ್ವ, ಬಣ್ಣದ ಮರ, ಇವೇ ಮೊದಲಾದ ಬಗೆಬಗೆಯ ವೃಕ್ಷಗಳು ಆ ಪರಿಸರದ ಶೋಭೆಯನ್ನು ಹೆಚ್ಚಿಸಿವೆ.

ಆಷಾಢಮಾಸದ ಶುಕ್ಲಪಕ್ಷದ ಪಂಚಮಿ ತಿಥಿಯಂದು ಪಿತೃದೇವತೆಯ ನಕ್ಷತ್ರವಾದ ವಿಶಾಖಾನಕ್ಷತ್ರ ಇರುವ ಕಾಲದಲ್ಲಿ ಈ ಕ್ಷೇತ್ರಕ್ಕೆ ಪುಣ್ಯಾತ್ಮರಾದ ಜನಗಳು ಬಂದು ಏಳುದಿನ

ಕಾಲ ಇಲ್ಲಿ ಇದ್ದು, ಮಂಟಪದಲ್ಲಿ ನನ್ನನ್ನು (ಪರಮಾತ್ಮನನ್ನು) ಸ್ಥಾಪಿಸಿ, ಅಲಂಕಾರಮಾಡಿ, ಬೀಸಣಿಕೆಯಿಂದ ಬೀಸಿ ಸೇವೆ ಗೈಯುವರು. ಸ್ತ್ರೀಯರು ನರ್ತನ ಗೀತ ಮುಂತಾದವುಗಳಿಂದ ಭಗವಂತನನ್ನು ಸಂತೋಷಗೊಳಿಸುವರು. ರಾಜರುಗಳು ಚಿನ್ನದ ಹಿಡಿಯುಳ್ಳ ಚಾಮರಗಳನ್ನು ಕೈಯಲ್ಲಿ ಹಿಡಿದುಕೊಂಡು ನನ್ನ ಸೇವೆಗೈಯುತ್ತಾರೆ. ಋಗ್ವೇದ, ಯಜುರ್ವೇದ, ಸಾಮವೇದಗಳಿಂದ ಬ್ರಹ್ಮಚಾರಿಯಾದವ ವಿದ್ಯಾಭ್ಯಾಸ ಮುಗಿಸಿ ಮದುವೆಯಾಗದಿರುವ ಸ್ನಾತಕ, ಯತ್ಯಾಶ್ರಮ ಸ್ವೀಕರಿಸಿದ ಮಹಾತ್ಮಾ, ಗೃಹಸ್ಥ, ವಾನಪ್ರಸ್ಥಾಸ್ರಮ ಸ್ವೀಕರಿಸಿದ ಸಾಧಕ, ಸಿದ್ಧಯೋಗಿ, ಇವರೆಲ್ಲರೂ ಇಲ್ಲಿ ಪ್ರತಿಷ್ಠಾಪಿತವಾದ ಬಲರಾಮ ಶ್ರೀಕೃಷ್ಣರನ್ನು ಸ್ತುತಿಸುತ್ತಾರೆ. ಹೀಗೆ ಭಗವದಾರಾಧನೆ ಮಾಡಿ ರಾಮಕೃಷ್ಣರ ಅನುಗ್ರಹಕ್ಕೆ ಪಾತ್ರರಾದವರು ದಿವ್ಯವಾದ ವಿಷ್ಣುಲೋಕದಲ್ಲಿ ಹತ್ತು ಸಹಸ್ರ ವರ್ಷಗಳವರೆಗೆ ವಾಸಮಾಡುವರು.

ಈ ವಿಷ್ಣುಲೋಕದಲ್ಲಿ ಅಪ್ಸರೆಯರು ಅವರನ್ನು ಪೂಜಿಸುವರು. ಗಂಧರ್ವರು ತಮ್ಮ ಸಂಗೀತದಿಂದ ಅವರನ್ನು ಒಲಿಸುವರು. ಈ ಪುಣ್ಯಾತ್ಮನು ಶ್ರೀಹರಿಗೆ ಜೊತೆಜೊತೆಯಾಗಿ, ಅಲ್ಲಲ್ಲಿ ಸಂಚರಿಸುತ್ತ ಬೇಕುಬೇಕಾದ ಸುಖ ಸಂಪತ್ತುಗಳಿಗೆ ನೆಲೆವೀಡೆನಿಸಿದ ಸುಂದರ ಮಂದಿರ ಒಂದರಲ್ಲಿ ಸುಖಿಸುವನು. ಪುಣ್ಯ ನಶಿಸಿದನಂತರ, ಆ ಮನುಷ್ಯನು ಭೂಲೋಕದಲ್ಲಿ ಬ್ರಾಹ್ಮಣನಾಗಿ ಜನಿಸುವ. ಋಗ್ವೇದ, ಯಜುರ್ವೇದ, ಅಥರ್ವಣ ಹಾಗೂ ಸಾಮವೇದ ಈ ನಾಲ್ಕು ವೇದಗಳನ್ನು ಶ್ರದ್ಧೆಯಿಂದ ಅಭ್ಯಾಸ ಮಾಡುತ್ತಾನೆ. ಬರಿ ವೇದವಿದ್ಯೆಯನ್ನು ಮಾತ್ರವಲ್ಲ, ಅತುಲೈಶ್ವರ್ಯವನ್ನು ಅವನು ಹೊಂದುತ್ತಾನೆ. ಬ್ರಾಹ್ಮಣರೇ, ಶ್ರೀಹರಿಯು ಇಂದ್ರದ್ಯುಮ್ನನಿಗೆ ಹೀಗೆ ವರವನ್ನುಕೊಟ್ಟು ವಿಶ್ವಕರ್ಮನೊಡನೆ ಅಲ್ಲಿಯೇ ಅಂತರ್ಧಾನನಾದ. ಇಂದ್ರದ್ಯುಮ್ನನು ಆನಂದ ತುಂದಿಲನಾದ ಶ್ರೀಹರಿಯ ಸಂದರ್ಶನದಿಂದ. ಸಂಭಾಷಣದಿಂದ, ತನ್ನ ಜೀವನ ಸಾರ್ಥಕ ವಾಯಿತು. ತಾನು ಕೃತಾರ್ಥ ಎಂದು ಬಗೆದ.

ಅನಂತರ ಇಂದ್ರದ್ಯುಮ್ನ ರಾಜನು ಕೃಷ್ಣ, ಬಲರಾಮ ಮತ್ತು ಸುಭದ್ರಾದೇವಿಯರ ವಿಗ್ರಹಗಳನ್ನು ರತ್ನದಿಂದ ಕೆತ್ತಿದ ಚಿನ್ನದ ಮೀನುಗಳಂತಿರುವ ರಥಗಳಲ್ಲಿ ಕುಳ್ಳಿರಿಸಿ, ಮಂಗಳವಾದ್ಯಗಳು ಭೋರ್ಗರೆಯುತ್ತಿರುವಂತೆಯೇ, ಮಂತ್ರಿ ಮೊದಲಾದ ಪರಿವಾರ ದಿಂದೊಡಗೂಡಿ, ಉತ್ಸವದಿಂದ ದೇವಾಲಯಕ್ಕೆ ತರಿಸಿದ, ಪವಿತ್ರವಾದ ಶುಭಸ್ಥಳದಲ್ಲಿ ಆ ವಿಗ್ರಹಗಳನ್ನು ಇರಿಸಿದ. ಸುಮುಹೂರ್ತದಲ್ಲಿ ಬ್ರಾಹ್ಮಣರಿಂದ ಆ ವಿಗ್ರಹಪ್ರತಿಷ್ಠೆ ಮಾಡಿಸಿದ. ವಾದ್ಯಗಾರರು ವಾದ್ಯಗಳನ್ನು ನುಡಿಸಿದರು ಬ್ರಾಹ್ಮಣರು ಉಚ್ಚ ಕಂಠದಿಂದ ಸುಸ್ವರವಾಗಿ ವೇದಗಳನ್ನು ಸ್ವಸ್ತಿಹೇಳಿದರು. ಪ್ರತಿಷ್ಠೆಯ ಕರ್ಮಗಳೆಲ್ಲ ಮುಗಿದಬಳಿಕ ಆಚಾರ್ಯನಿಗೆ, ಋತ್ವಿಜನಿಗೆ, ಮತ್ತಿತರ ಬ್ರಾಹ್ಮಣ ಶ್ರೇಷ್ಠರಿಗೆ ಯೋಗ್ಯವಾದ ರೀತಿಯಲ್ಲಿ ಸಂಭಾವನೆಯನ್ನು ಕೊಟ್ಟು ಮಹಾರಾಜ ಕೈ ಮುಗಿದ. ಹೀಗೆ ವಿಗ್ರಹದ ಪ್ರತಿಷ್ಠೆಯಾದ ನಂತರ ಹೂವು, ಗಂಧ, ಮನೋಹರವಾದ ವಸ್ತ್ರಗಳು ಇವುಗಳಿಂದ ವಿಗ್ರಹವನ್ನು ಅಲಂಕರಿಸಿದನು. ಈ ಸಂದರ್ಭದಲ್ಲಿ ಯೋಗ್ಯರನ್ನು ಕರೆಯಿಸಿ, ಗ್ರಾಮಗಳು, ನಗರಗಳು ಮುಂತಾದವನ್ನು ದಾನಮಾಡಿದ. ಅನೇಕ ಯಾಗಗಳನ್ನು ಶ್ರದ್ಧೆಯಿಂದ ಬದುಕಿನುದ್ದಕ್ಕೂ ವಿಧ್ಯುಕ್ತವಾಗಿ ಆಚರಿಸಿದ ಆ ಮಹಾರಾಜ. ಧರ್ಮಾಚರಣೆಯಲ್ಲಿ ಎಷ್ಟು ಶ್ರದ್ಧೆಯೋ ಅದಕ್ಕಿಂತ ಹೆಚ್ಚಾಗಿ ಪ್ರಜೆಗಳ ಸುಖದುಃಖ ವಿಚಾರಿಸುವದರಲ್ಲಿ ಪ್ರಜೆಗಳ

ಯೋಗಕ್ಷೇಮವನ್ನು ಅಹರ್ನಿಶಿ ಗಮನದಲ್ಲಿಟ್ಟುಕೊಂಡು ಬಹು ದೀರ್ಘಕಾಲದವರೆಗೆ ಧರ್ಮದಿಂದ ರಾಜ್ಯ ಪರಿಪಾಲನೆಗೈದ. ಅನಂತರ ವಿರಕ್ತನಾಗಿ ಸಂತತ ಹರಿ ಚಿಂತೆಮಾಡುತ್ತ ಈ ದೇಹವನ್ನು ತ್ಯಜಿಸಿ ಪರದಲ್ಲಿ ವಿಷ್ಣುಸ್ಥಾನ ಪಡೆದ.

ಮುನಿಗಳೆ, ಇಂದ್ರದ್ಯುಮ್ನ ರಾಜನ ಚರಿತ್ರೆಯನ್ನು ಪುರುಷೋತ್ತಮ ಕ್ಷೇತ್ರದ ಮಹತಿಯನ್ನು ಈವರೆಗೆ ನಿರೂಪಿಸಿರುವೆ. ನಿಮಗೆ ಮತ್ತೇನು ಜಿಜ್ಞಾಸಿತವಾಗಿದೆ? ಕೇಳಿ ಎಂದನು.

**ಸೂತಮುನಿ:-** ಋಷಿಗಳೆ, ಸ್ವಯಂಭುವಾದ ಬ್ರಹ್ಮನ ಈ ಮಾತುಗಳನ್ನು ಆಲಿಸಿದ ಆ ಮುನಿಗಳು, ಹೀಗೆ ಪ್ರಶ್ನಿಸಿದರು. ಬ್ರಹ್ಮದೇವ, ನೀನು ವಿವರಿಸಿರುವ ಈ ಪುರುಷೋತ್ತಮ ಕ್ಷೇತ್ರಕ್ಕೆ ಯಾವ ಸುಮುಹೂರ್ತದಲ್ಲಿ ಹೋಗಬಹುದು ಮತ್ತು ಪಂಚ ತೀರ್ಥಗಳಲ್ಲಿ ಯಾವ ವಿಧಿಯನ್ನು ಆಚರಿಸಬೇಕು? ಯಾವಯಾವ ತೀರ್ಥಗಳಲ್ಲಿ ಮಾಡಿದ ಸ್ನಾನ, ದಾನಗಳಿಗೆ ಯಾವಯಾವ ಫಲ? ದೇವತಾಭಿಷೇಕ ಮಾಡಿಸಿದ ಫಲ ಎಂತಹದು? ಇದೆಲ್ಲವನ್ನೂ ವಿಶದವಾಗಿ ನಿರೂಪಿಸು.

**ಬ್ರಹ್ಮ:-** ಮುನಿಗಳೇ, ಕುರುಕ್ಷೇತ್ರದಲ್ಲಿ ಜಿತೇಂದ್ರಿಯನಾಗಿ ಉಳಿದು, ಉಪವಾಸ ವ್ರತವನ್ನು ಆಚರಿಸಿ, ಒಂಟಿಕಾಲಿನ ಮೇಲೆ, ಸಪ್ತಸಂವತ್ಸರಗಳವರೆಗೆ ತಪಾಚರಣೆಗೈದರೆ, ಯಾವ ಫಲ ಪ್ರಾಪ್ತವಾಗುವದೋ ಅದಕ್ಕಿಂತ ಹೆಚ್ಚಿನ ಫಲವು ಪುರುಷೋತ್ತಮ ಕ್ಷೇತ್ರದಲ್ಲಿ ಜ್ಯೇಷ್ಠ ಶುದ್ಧ ದ್ವಾದಶಿ ದಿನ ಉಪವಾಸವಿದ್ದು, ಶ್ರೀಹರಿಯ ದರ್ಶನಮಾಡಿ ಅರ್ಚಿಸಿದರೆ, ಲಭಿಸುವದು ಖಂಡಿತ. ಆದುದರಿಂದ ಮುನಿಗಳೇ ಸ್ವರ್ಗ ಪಡೆಯಬೇಕೆಂಬ ಅಪೇಕ್ಷೆಯುಳ್ಳವರು ಜ್ಯೇಷ್ಠಮಾಸದಲ್ಲಿ ಪ್ರಯತ್ನಪೂರ್ವಕವಾಗಿಯಾದರೂ, ಪುರುಷೋತ್ತಮ ಕ್ಷೇತ್ರದರ್ಶನ ಮಾಡಬೇಕು. ಜ್ಯೇಷ್ಠ ಶುಕ್ಲ ದ್ವಾದಶಿ ದಿನದಂದು, ಪಂಚತೀರ್ಥದಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಪುರುಷೋತ್ತಮ ದರ್ಶನ ಪಡೆಯಬೇಕು. ಜ್ಯೇಷ್ಠ ಶುದ್ಧ ದ್ವಾದಶಿಯಂದು ಪುರುಷೋತ್ತಮನ ದರ್ಶನ ಪಡೆದವರು ವಿಷ್ಣುಲೋಕ ಹೊಂದುವರು. ಅವರಿಗೆ ಪುನರ್ಜನವಿಲ್ಲ. ಪುರುಷೋತ್ತಮನ ಪ್ರದೇಶದಿಂದ ದೂರದಲ್ಲಿ ಇರುವವರು ಭಗವಂತನ ಸನ್ನಿಧಾನವನ್ನು ಇದ್ದಲ್ಲಿಯೇ ನೆನೆಸಿ, ಅವನ ಪರಿಶುದ್ಧ ರೂಪ ನೆನೆದರೆ, ಅದರಿಂದಲೂ ಮುಕ್ತಿ ಹೊಂದುವರು. ಪುರುಷೋತ್ತಮ ಕ್ಷೇತ್ರದ ಯಾತ್ರೆಯನ್ನು ಶ್ರದ್ಧೆಯಿಂದ ಮಾಡುವವ ಪಾಪ ಲೇಪರಹಿತನಾಗುತ್ತಾನೆ. ಮರಣಾನಂತರ ಮೋಕ್ಷವನ್ನು ಪಡೆಯುತ್ತಾನೆ. ಶ್ರೀಹರಿಯ ದೇವಾಲಯದ ಶಿಖರದಲ್ಲಿ ಕಂಗೊಳಿಸುವ ವಿಷ್ಣುಚಕ್ರವನ್ನು ಭಕ್ತಿಯಿಂದ ನಮಿಸಿ ಮಾನಸಿಕವಾಗಿ ಶ್ರೀಹರಿಯನ್ನು ಆರಾಧಿಸುವವ ತಕ್ಷಣದಲ್ಲಿಯೇ ತಾನು ಮಾಡಿದ ಆ ವರೆಗಿನ ಪಾಪಗಳನ್ನೆಲ್ಲ ಕಳೆದುಕೊಳ್ಳುವನು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹದಿನೈದನೆಯ ಅಧ್ಯಾಯ ಮುಗಿದುದು*

—o—

## ಮಾರ್ಕಂಡೇಯನ ವಟ ದರ್ಶನ



**ಬ್ರಹ್ಮ**:- ಮುನಿಗಳೇ, ಹೀಗೆ ಒಂದು ಕಲ್ಪ ಮುಗಿದನಂತರ ಮಹಾಪ್ರಳಯ ಆಯಿತು. ಆಗ ಸೂರ್ಯ-ಚಂದ್ರರು, ವಾಯು ಎಲ್ಲ ಅದೃಶ್ಯರಾದರು. ಪ್ರಾಣಿಗಳೆಲ್ಲವೂ ಹೇಳ ಹೆಸರಿಲ್ಲದಂತಾದವು. ಪ್ರಳಯಕಾಲದ ಪ್ರಚಂಡ ಮಾರ್ತಾಂಡ ಉದಯಿಸಿದ. ಪ್ರಳಯ ಮೇಘಗಳು ಆವಿರ್ಭೂತವಾದವು. ಭಯಂಕರ ಸಿಡಿಲು ಗೋಚರಿಸಿತು. ಅದರ ಪರಿಣಾಮದಿಂದ ಅಳಿದುಳಿದ ಬೃಹಜ್ಜಡಗಳೆಲ್ಲ ನಾಮಾವಶೇಷವಾದವು. ಅನಂತರ ಕೆಂಡದ ಮಳೆ ಸುರಿಯಿತು. ಭೋರ್ಗರೆವ ನೀರೆಲ್ಲ ಬತ್ತುತ್ತ ಹೋಯಿತು. ವಾಯು ಈ ರುದ್ರ-ನಾಟ್ಯದಲ್ಲಿ ತಾನೂ ಪ್ರವೇಶ ಪಡೆದ. ವಾಯು, ಅಗ್ನಿ, ಇಬ್ಬರೂ ಸೇರಿ ಆಟವಾಡಿದರು. ಪರಿಣಾಮ ಲೋಕವೆಲ್ಲ ಭಸ್ಮ. ಇಷ್ಟಕ್ಕೇ ನಿಲ್ಲಲಿಲ್ಲ ಆ ಅಗ್ನಿಯ ರೌದ್ರಾವೇಶ. ಭೂಮಿಯನ್ನು ಭೇದಿಸಿ, ರಸಾತಲವನ್ನು ಹೊಕ್ಕಿತು. ರಸಾತಲದಲ್ಲಿನ ದೇವತೆಗಳು, ದಾನವರು, ಯಕ್ಷರು ಈ ಪ್ರಳಯಾಗ್ನಿಯನ್ನು ಕಂಡು ಭಯದಿಂದ ಕಂಪಿಸಿದರು. ನಾಗಲೋಕವೂ ಸಹ ಕ್ಷಣಾರ್ಧದಲ್ಲಿ ಅಗ್ನಿಗೆ ಆಹುತಿಯಾಯಿತು.

ಹೀಗೆ ಇಪ್ಪತ್ತುಲಕ್ಷ ಗಾವುದ ವಿಸ್ತೃತವಾದ ಪ್ರದೇಶವನ್ನೆಲ್ಲ ಪ್ರಳಯಾಗ್ನಿ, ಪ್ರಳಯವಾಯು ಸೇರಿಕೊಂಡು ನಾಶಮಾಡಿದವು. ಅನಂತರ ಆ ಪ್ರಳಯಾಗ್ನಿಯು ಘಟಘಟ ಎಂಬ ಮಹಾ ಶಬ್ದದೊಡನೆ ಉರಿಯಿತು. ಕೋಟಿ ಸೂರ್ಯರಂತೆ ದೇದೀಪ್ಯಮಾನವಾಗಿ ಪ್ರಜ್ವಲಿಸಿತು. ಸಕಲ ಲೋಕಗಳನ್ನೂ ನುಂಗಿ ಹಾಕಿತು. ಇಂತಹ ಭಯಂಕರವಾದ ಸನ್ನಿವೇಶದಲ್ಲೂ ಧರ್ಮಾತ್ಮನಾದ ಓರ್ವ ಋಷಿ ಬಾಹ್ಯಪರಿಸರದ ಪರಿವೇ ಇಲ್ಲದೆ, ಅಖಂಡ ಧ್ಯಾನದಲ್ಲಿ ಮಗ್ನನಾಗಿದ್ದ-ಆತ ಚಿರಂಜೀವಿ. ಅವನ ಹೆಸರು ಮಾರ್ಕಂಡೇಯ. ಪ್ರಳಯಾಗ್ನಿ ಅವನನ್ನು ಸ್ವೀಕರಿಸಲಿಲ್ಲ, ಇವ ನನಗೆ ಎಟಕುವವನಲ್ಲ ಎಂಬ ಭಾವದಿಂದ. ಸಮಾಧಾನಮನಸ್ಕನಾಗಿ ಸಮಾಧಿಗೆ ಇಳಿಯುತ್ತಿದ್ದ ಆ ಮುನಿಯ ತಪಸ್ಸಿಗೆ ಪ್ರಳಯಾಗ್ನಿಯ ಶಾಖದಿಂದ ತೊಂದರೆ ಎನಿಸಿತು. ಜಗತ್ತೆಲ್ಲವೂ ಸುಟ್ಟುಹೋಗಿ, ಭಯಂಕರ ಶಾಖ ಉತ್ಪನ್ನವಾಗಿದ್ದಿತು. ಆ ಶಾಖದ ಪರಿಣಾಮದಿಂದಾಗಿ ಮುನಿಯು ಒಣಗಿ ಬಳಲಿದ. ಅವನಿಗೆ ನೀರಡಿಕೆ ಅನಿಸಿತು. ಹಸಿವೆಯೂ ಅನಿಸಿತು. ಸುತ್ತಮುತ್ತ ನೋಡಿದಲ್ಲೆಲ್ಲ ವ್ಯಾಪಿಸಿದ ಪ್ರಳಯಾಗ್ನಿ ಮುನಿಯನ್ನು ಕಂಗೆಡಿಸಿತು. ಮುನಿಗೆ ಏನೂ ತೋಚದಂತಾಯಿತು. ಭಯದಿಂದ ಸಿಕ್ಕಲ್ಲಿ ಸಂಚರಿಸಿದ. ಎಲ್ಲಿ ನೋಡಿದರೂ ಸುಟ್ಟು ಕರಕಾದ ಅವಶೇಷಗಳೇ ಗೋಚರಿಸಿದವು. ಗೊತ್ತುಗುರಿಯಿಲ್ಲದೆ ನಡೆಯುತ್ತ ನಡೆಯುತ್ತ ಮುನಿಯು ತನಗೆ ಅರಿವಿಲ್ಲದೆ ಮಹಾಪ್ರಳಯಕ್ಕೆ ಕಾರಣವಾಗಿರುವ ಪುರುಷೋತ್ತಮ ಸ್ವರೂಪವಾದ ವಟವೃಕ್ಷದ ಬಳಿಗೆ ಬಂದು ಅದರ ಅಡಿ ಆಶ್ರಯಪಡೆದ. ಆ ಪ್ರದೇಶದಲ್ಲಿ ಪ್ರಳಯಾಗ್ನಿಯ ಸುಳಿವು ಇರಲಿಲ್ಲ. ಕೆಂಡಗಳ ಝಳ ಸುಳಿದಿರಲಿಲ್ಲ. ವಾಯುವಿನ ಪ್ರತಾಪಕ್ಕೆ ಅಲ್ಲಿ ಅವಕಾಶವಿರಲಿಲ್ಲ. ಆಗಾಗ ಸುರಿಯುತ್ತಲಿದ್ದ ಸಿಡಿಲುಗಳಿಂದಲೂ ಗಾಸಿಗೊಳ್ಳದೇ, ಸುರಕ್ಷಿತವಾಗಿದ್ದಿತು- ಆ ಆಲದ ಮರದ ತಂಪಾದ ತಾಣ.

### ಮಾರ್ಕಂಡೇಯ ಮುನಿಯು, ಪ್ರಳಯ ದರ್ಶನ ಮಾಡಿದುದು

**ಬ್ರಹ್ಮ**:- ಮುನಿಗಳೇ, ಅನಂತರ ಆಕಾಶದಲ್ಲಿ ಮೇಘಮಾಲೆಯು ಕಾಣಿಸಿಕೊಂಡಿತು. ಅಲ್ಲಲ್ಲಿ ಮಿಂಚುಗೊಂಚಲುಗೊಂಚಲಾಗಿ ಮಿಂಚಿ, ರಮ್ಯವಾಗಿ ಆಕಾಶವನ್ನು ಅಲಂಕರಿಸಿತು.

ಆ ಮೋಡಗಳ ಪಂಕ್ತಿಯಲ್ಲಿ ಬೇರೆ ಬೇರೆ ಬಣ್ಣದ ಮೋಡಗಳೂ ಇದ್ದವು. ಕೆಲವು ಬಿಳಿದಾವರೆಯಂತೆ ಬಿಳಿವರ್ಣದವು. ಹಲವು ಕಮಲದ ಕೇಶರದಂತೆ ಹೊಂಬಣ್ಣದವು ಮತ್ತೆ ಕೆಲವು ಕನ್ನೈದಿಲೆಯಂತೆ ಕೃಷ್ಣವರ್ಣ ತಳೆದಿರುವಂತವು. ಹಳದೀ ಬಣ್ಣದ ಮೋಡಗಳೂ ಇದ್ದವು. ಇದ್ದಲಿನಂತೆ ಅತಿ ಕಪ್ಪಾದ ಮೋಡಗಳು, ಕಾಗೆಯ ಮೊಟ್ಟೆಯ ಬಣ್ಣಉಳ್ಳ ಮೋಡಗಳು ಕೆಲವು, ಹಸಿರು ಬಣ್ಣದ ಮೋಡಗಳು ಕೆಲವು. ಹೀಗೆ ವರ್ಣ ವೈವಿಧ್ಯಸಾರುವ ಮೋಡಗಳು ಸುಂದರವಾಗಿ, ಬಾನಿನ ಅಂಗಣದಲ್ಲಿ ಹರಡಿಕೊಂಡಿದ್ದವು. ಅವು ಬೇರೆಬೇರೆ ಆಕಾರವನ್ನು ತಳೆದಿದ್ದವು. ದಿಟ್ಟಿಸಿ ನೋಡಿದಾಗ ಒಂದೊಂದೇ ಮೋಡ ಮಹಾನಗರ ಒಂದರಂತೆ ಭಾಸವಾಗುತ್ತಿದ್ದಿತು. ಕೆಲವು ಬೆಟ್ಟದಾಕಾರದಲ್ಲಿ ಗೋಚರಿಸುತ್ತಿದ್ದವು. ಮರಕತಮಣಿಯ ಕಾಂತಿಯುಳ್ಳ ಮೋಡಗಳು ಕೆಲವಾಗಿದ್ದವು. ಈ ಮೋಡಗಳಲ್ಲಿ ಆಗಾಗ ಮಿಂಚು, ಘೋರ ಗರ್ಜನೆ ಕಾಣಿಸಿಕೊಂಡು, ಅದ್ಭುತವಾದ ಸನ್ನಿವೇಶ ನಿರ್ಮಿತವಾಗುತ್ತಿತ್ತು. ಕೆಲಕಾಲ ಕಳೆದನಂತರ ಈ ಮೇಘಗಳು ದ್ವಿಗುಣಿತವಾದವು. ಆಕಾಶವನ್ನೇರಿ ವಿಸ್ತಾರವಾಗಿ ವ್ಯಾಪಿಸಿದವು. ಎಲ್ಲವೂ ಸೇರಿ ಒಂದೇ ಬಾರಿಗೆ, ತಮ್ಮ ಗರ್ಭದಿಂದ ನೀರನ್ನು ಸುರಿಯಲು ಆರಂಭಿಸಿದವು. ಬ್ರಹ್ಮದೇವರಿಂದ ಪ್ರಚೋದಿತವಾದ ಆ ಮೇಘಗಳ ನೀರು ಸುರಿಯುವಿಕೆ ಎಷ್ಟು ವೇಗವಾಗಿತ್ತೆಂದರೆ ಅಲ್ಪಕಾಲದಲ್ಲಿಯೇ ಜಗತ್ತೆಲ್ಲ ನೀರಿನಿಂದ ಆವರಿಸಲ್ಪಟ್ಟಿತು. ಪ್ರಳಯಾಗ್ನಿಯಲ್ಲಿ ಬೆಂದ ಪ್ರದೇಶಗಳೆಲ್ಲ ಈ ಜಡಿಮಳೆಯಲ್ಲಿ ನೆಂದವು. ಹನ್ನೆರಡುವರ್ಷ ಬಿಟ್ಟು ಬಿಡದೇ ಮಳೆ ಸುರಿಯಿತು. ಸಮುದ್ರಗಳು ಉಕ್ಕಿ ಹರಿದವು. ಉನ್ನತ ಪರ್ವತಗಳು ನೀರಿನಲ್ಲಿ ಮುಳುಗಿ ಕಾಣದಂತಾದವು. ಅಷ್ಟರಲ್ಲಿ ಮಹಾವಾಯು ಉದಯಿಸಿದ. ಮೋಡಗಳನ್ನೆಲ್ಲವನ್ನು ಚದುರಿಸಿದ. ಭಯಂಕರವಾಗಿ ಬೀಸಲಾರಂಭಿಸಿದ, ವಾಯುವಿನ ಈ ಅನಿರ್ದಿಷ್ಟ ಸಂಚಾರದಿಂದ ಜಗವೆಲ್ಲ ಅಸ್ತವ್ಯಸ್ತಗೊಂಡಿತು. ಆಗ ಶ್ರೀಮನ್ ನಾರಾಯಣನು ಆ ಪ್ರಳಯ ಮಾರುತವನ್ನು ಸಂಪೂರ್ಣವಾಗಿ ಪಾನಮಾಡಿದ. ಜಲರಾಶಿಯ ಮಧ್ಯಕ್ಕೆ ಹೋಗಿ ಮೌನವಾಗಿ ಮಲಗಿದ. ಮಾರ್ಕಂಡೇಯ ಮುನಿಯು ತಾನು ಕುಳಿತಿದ್ದ ಆಲದಮರದ ಕೆಳಗೆ ಕಣ್ಣು ಮುಚ್ಚಿ ಪುರಷೋತ್ತಮನನ್ನು ಧ್ಯಾನಿಸಿದ. ಒಮ್ಮೆ ಕಣ್ತೆರೆದು ನೋಡಿದಾಗ ಜಗತ್ತೆಲ್ಲ ಜಲಮಯವಾದದು ಕಾಣಿಸಿತು. ಎಲ್ಲಿ ನೋಡಿದರೂ ನೀರೇ ನೀರು. ಕಣ್ಣಿನ ದೃಷ್ಟಿ ಹರಿಯುವವರೆಗೂ ನೀರು ಮಾತ್ರ ಕಾಣಿಸಿತು. ಆ ನೀರನ್ನು ಕಂಡು ಮಾರ್ಕಂಡೇಯ ಮುನಿ ಭಯಗೊಂಡ. ಇಷ್ಟರಲ್ಲಿ ಆ ನೀರಿನಪ್ರವಾಹ ಮುನಿಯ ಸಮೀಪಕ್ಕೆ ಬಂದಿತು. ಈವರೆಗೆ ಮರದ ಆಶ್ರಯ ಪಡೆದಿದ್ದ ಮುನಿಯು ಈಗ ಆ ಮರವನ್ನೂ ಕಾಣದಾದ. ಕಣ್ಣು ಹರಿಸಿದಲ್ಲೆಲ ಅಪಾರ ಜಲರಾಶಿ ಕಂಡು ಕಂಗಾಲಾದ, ನೀರಿನ ಪಾಲಾದ ಆ ಮಾರ್ಕಂಡೇಯ ಮುನಿ ಬೇರೆನೂ ಮಾಡಲು ತೋಚದೆ ಈಜುತ್ತ, ಈಜುತ್ತ ಸಾಗಿದ. ಎಲ್ಲಿಗೆ? ಅವನಿಗೆ ಗೊತ್ತಿರಲಿಲ್ಲ, ನೀರಿನಲ್ಲಿ ನಿಲ್ಲಲಾರ, ಆದುದರಿಂದ ಈಜುತ್ತಿದ್ದ ಅಷ್ಟೆ. ಈಜಿ ದಡ ಸೇರುವ ಆಲೋಚನೆ ಇರಲಿಲ್ಲ. ಏಕೆಂದರ ದಡ ಅಲ್ಲೆಲ್ಲೂ ಕಾಣಿಸುತ್ತಿರಲಿಲ್ಲ. 'ಈ ಭಯಂಕರ ಸನ್ನಿವೇಶದಿಂದ ನನ್ನನ್ನು ಪಾರು ಮಾಡುವವರಾರು?'- ಎಂದು ಆ ಮುನಿ ಚಿಂತಿಸತೊಡಗಿದ. ಈಜಿ ಕೈ ಸೋತು ಅಲ್ಲಲ್ಲಿ ಮುಣುಗಿದ, ಮತ್ತೆ ಮಹತ್ಪ್ರಯತ್ನದಿಂದ ನೀರಲ್ಲಿ ತೇಲಿದ. ಆರ್ತನಾಗಿ ಪುರುಷೋತ್ತಮನನ್ನು ಕೂಗಿದ; ತನ್ನನ್ನು ರಕ್ಷಿಸಲು ಮೊರೆಯಿಟ್ಟ.

ಆಗ ಅಶರೀರವಾಣಿ ಕೇಳಿಸಿತು : 'ಮಾರ್ಕಂಡೇಯ, ನೀನು ಸಹಸ್ರಾರು ವರ್ಷ ತಪಸ್ಸು ಮಾಡಿದ್ದರೂ, ನಿನಗಿನ್ನೂ ತಿಳುವಳಿಕೆ ಉದಯಿಸಿಲ್ಲ. ಬುದ್ಧಿಯಿಂದ ನೀನೀಗಲೂ ಬಾಲ ಮಾರ್ಕಂಡೇಯ. ಪ್ರಳಯದಿಂದ ಬಾಲಕರು ಗಾಬರಿಗೊಳ್ಳುತ್ತಾರೆ-ಜ್ಞಾನಿಗಳಲ್ಲ. ನೀನು ಹೆದರಬೇಡ, ನಾನು ಇಲ್ಲಿಯೇ ಇದ್ದೇನೆ. ನೀನು ನನ್ನೆಡೆಗೆ ಬರುತ್ತಿರುವಿ. ಹೆದರದೆ, ಮುಂದೆ ಬಾ' ಈ ಅಶರೀರವಾಣಿಯನ್ನು ಕೇಳಿ ಮಾರ್ಕಂಡೇಯಮುನಿಗೆ ಆಶ್ಚರ್ಯ,ಕೋಪ, ಅವಮಾನ ಎಲ್ಲ ಏಕಕಾಲಕ್ಕೆ ಉಂಟಾದವು. ಏಕೆಂದರೆ, ಅಶರೀರವಾಣಿಯಲ್ಲಿ ಕೇಳಿ ಬಂದದ್ದು ಓರ್ವ ಬಾಲಕನ ಧ್ವನಿ. ಮಾರ್ಕಂಡೇಯ ಮುನಿಗೆ ಹೀಗೆ ಅನಿಸಿತು:- 'ಸಹಸ್ರ ವರ್ಷಗಳವರೆಗೆ ತಪಸ್ಸನ್ನಾಚರಿಸಿ ಚಿರಂಜೀವಿ ಪಟ್ಟಪಡೆದ ತನ್ನನ್ನು, ಬ್ರಹ್ಮದೇವ ನಿಂದಲೂ 'ದೀರ್ಘಾಯು ಪುರುಷ' ಎಂದು ಗೌರವಿಸಲ್ಪಟ್ಟ ತನ್ನನ್ನು ಯಃಕಶ್ಚಿತ್ ಬಾಲಕ ಹೀಯಾಳಿಸಿ ಮಾತನಾಡುವದೆ? ತನ್ನ ಹೆಸರಿನಿಂದ ಏಕವಚನದಲ್ಲಿ ಸಂಬೋಧಿಸಿ, 'ನೀನಿನ್ನೂ ಬಾಲಕ' ಎಂದು ಹೇಳಬೇಕಾದರೆ ಇದು ಯಾರಿದ್ದೀತು? ನಡೆದದ್ದು ಸ್ವಪ್ನವೇ? ನಿಜವೇ? ನಾನೀಗ ಏನು ಮಾಡಬೇಕು?' ಎಂದು ಆಲೋಚಿಸಿದ. ಭಕ್ತಿಯಿಂದ ಭಗವಂತನನ್ನು ಮತ್ತೆ ಪ್ರಾರ್ಥಿಸಿದ. ಹಿಂದೆ ಕಂಡಿದ್ದ ಆಲದಮರ ಮಾರ್ಕಂಡೇಯ ಮುನಿಯ ಎದುರು ಆ ಜಲರಾಶಿಯಲ್ಲಿಯೇ ಮತ್ತೆ ಕಾಣಿಸಿಕೊಂಡಿತು. ಆ ವಟವೃಕ್ಷದ ವಿಶಾಲವಾದ ಕೊಂಡಿಯೊಂದರಲ್ಲಿ ಅತ್ಯದ್ಭುತವಾದ ಒಂದು ಸಿಂಹಾಸನ. ಆ ಸಿಂಹಾಸನವು ಚಿನ್ನದಿಂದ ನಿರ್ಮಿಸಲ್ಪಟ್ಟಿತ್ತು. ರತ್ನಖಚಿತವಾಗಿದ್ದಿತು. ವಜ್ರ, ವೈಢೂರ್ಯ, ಹವಳ, ಪದ್ಮರಾಗ ಮುಂತಾದವುಗಳು ಪುಷ್ಕಳವಾಗಿ ಸಿಂಹಾಸನದ ಎಲ್ಲ ಭಾಗಗಳಲ್ಲೂ ಕಂಗೊಳಿಸುತ್ತಿತ್ತು. ಸ್ವಯಂ ಪ್ರಕಾಶವುಳ್ಳ ಬೆಳಕಿನ ಆಕರದಂತೆ ಆ ಸಿಂಹಾಸನ ಬೆಳಗುತ್ತಿದ್ದಿತು. ಆ ಸಿಂಹಾಸನದ ಮೇಲೆ ಪುರುಷೋತ್ತಮದೇವನು ಬಾಲರೂಪ ಧರಿಸಿ ಕೋಟಿ ಸೂರ್ಯ ಸಮಪ್ರಭೆಯಿಂದ ವಿರಾಜಿಸುತ್ತಿದ್ದ. ಆ ಬಾಲಕನಿಗೆ ನಾಲ್ಕು ಕೈಗಳಿದ್ದವು. ತಾವರೆಯಂತೆ ಸುಂದರವಾದ ನಯನಗಳಿದ್ದವು. ಎದೆಯಲ್ಲಿ ಶ್ರೀವತ್ಸಲಾಂಛನ, ಶಂಖ, ಚಕ್ರ, ಗದೆಗಳು ಆಯಾ ಸ್ಥಾನಗಳಲ್ಲಿ. ಕೊರಳಲ್ಲಿ ಒಪ್ಪುತ್ತಿದ್ದ ತುಳಸೀಹಾರ, ಕಿವಿಗಳಲ್ಲಿ ದಿವ್ಯ ಕುಂಡಲಗಳು, ಅಪೂರ್ವರತ್ನಗಳಿಂದ ನಿರ್ಮಿತವಾದ ಅನೇಕ ಕಾಂತಿ ಸೂಸುವ ಹಾರಗಳು ಕೊರಳಲ್ಲಿ. ಇಂತಹ ಆ ಬಾಲಕನನ್ನು ನೋಡಿದ ನಂತರವೂ ಮುನಿಗೆ ಈ ಬಾಲಕ ಸಾಕ್ಷಾತ್ ಶ್ರೀಹರಿ ಎಂಬುದು ತಿಳಿಯಲಿಲ್ಲ. ತ್ರಿಕಾಲಜ್ಞಾನಿಯಾದ ಮಾರ್ಕಂಡೇಯ ಋಷಿಗೂ ಭಗವತ್ ಸಂಕಲ್ಪದಂತೆ ಪ್ರಳಯಕಾಲದಲ್ಲಿ ಅಜ್ಞಾನ ಆವರಿಸಿತ್ತು. ಮಾರ್ಕಂಡೇಯ ಇಂತು ಆಲೋಚಿಸಿದ:- 'ಇದೇನಾಶ್ಚರ್ಯ? ಪ್ರಪಂಚವೆಲ್ಲ ನಷ್ಟವಾಗಿ ಯಾರೂಇಲ್ಲದ ಸನ್ನಿವೇಶದಲ್ಲಿ ಈ ಬಾಲಕ ಹೆದರಿಕೆ ಇಲ್ಲದೆ, ಈ ಸಿಂಹಾಸನದ ಮೇಲೆ ಕುಳಿತಿರುವನಲ್ಲ! ಇವನು ಒಬ್ಬನೇ ಹೇಗಿದ್ದಾನೆ? ಇವನು ಯಾರಿರಬಹುದು?'

ಯಾವ ಪ್ರಶ್ನೆಗಳೂ ಬಗೆಹರಿಯಲಿಲ್ಲ. ತನ್ನ ಅಜ್ಞಾನಕ್ಕಾಗಿ ಮರುಗಿದ ಆ ಮುನಿ. ಅಜ್ಞಾನ ಕೂಪದಂತಿರುವ ಮಾನುಷ ಯೋನಿಯನ್ನು ನಿಂದಿಸಿದ. ಇಷ್ಟು ವರ್ಷ ತಪಸ್ಸು ಮಾಡಿದ್ದು, ದಿವ್ಯಜ್ಞಾನಿ ಎಂದು ಭೂತ, ಭವಿಷ್ಯ, ವರ್ತಮಾನ ಬಲ್ಲಪ್ರಾಜ್ಞನೆಂದು ಜನರಿಂದ ಹೊಗಳಿಸಿಕೊಂಡಿದ್ದೂ, ಈ ಬಾಲಕ ಯಾರೆಂಬುದು ನನ್ನ ಬುದ್ಧಿಗೆ ತಿಳಿಯದಾಯಿತಲ್ಲ! ನನ್ನ ತಪಸ್ಸು ವ್ಯರ್ಥ. ನನ್ನ ಜೀವನ ವ್ಯರ್ಥ. ನನ್ನ ದೀರ್ಘಾಯುಷ್ಯ ನಿಷ್ಪ್ರಯೋಜಕ ನನ್ನ ಸಾಧನೆಯೆಲ್ಲ ಏನೂ ಫಲ ಕೊಡಲಿಲ್ಲ' ಎದುರಿಗೆ ಕುಳಿತಿರುವ ಒಬ್ಬ

ಬಾಲಕನನ್ನೂ ತಿಳಿಯಲಾರದ ನನ್ನ ಅಂತರ್‌ದೃಷ್ಟಿ ಎಷ್ಟು ಕ್ಷುಲ್ಲಕ! ಅದರ ಸಾಮರ್ಥ್ಯ ಎಷ್ಟು ಸೀಮಿತ! ಯೋಚಿಸಿ, ಯೋಚಿಸಿ, ದೀನಾತಿದೀನನಾದ ಆ ಮಹಾಮುನಿ. ಕಣ್ಣೆದುರು ಕಂಗೊಳಿಸುತ್ತಿದ್ದ ವಟಪತ್ರಶಾಯಿಯಾದ ಬಾಲಸೂರ್ಯನಂತೆ ಮಹಾ ತೇಜಸ್ವಿಯಾದ ಆ ಬಾಲಕನ್ನು ನೋಡತೊಡಗಿದ. ಕ್ಷಣಕ್ಷಣಕ್ಕೂ ಆ ಬಾಲಕನ ತೇಜಸ್ಸು ಹೆಚ್ಚಾಗುತ್ತ ಹೋಯಿತು. ಬಾಲಕನ ತೇಜಃಪ್ರಭೆಯನ್ನು ಮುನಿಯ ಕಣ್ಣು ಸಹಿಸದಾಯಿತು. ಬಾಲಕನನ್ನು ನೋಡನೋಡುತ್ತಿರುವಂತೆಯೇ ಕಣ್ಣು ಕಟ್ಟಿದಂತಾಯಿತು. ಏನೂ ಕಾಣಿಸದಂತಾಯಿತು. ಆಗ ಆ ಬಾಲಕನ ಮುಖದಿಂದ ಗಂಭೀರ ಧ್ವನಿ ಹೊರಟಿತು. 'ಮಗು, ನೀನು ಬಳಲಿರುವೆ, ರಕ್ಷಣೆಯನ್ನು ಅಪೇಕ್ಷಿಸಿರುವೆ. ಇದೋ, ಮುಂದೆ ಬಂದು, ನನ್ನ ಶರೀರವನ್ನು ಪ್ರವೇಶಿಸಿಬಿಡು. ಅಲ್ಲಿ ನಿನಗೆ ವಿಶ್ರಾಂತಿ ಲಭಿಸುವದು.' ಬಾಲಕನಿಂದ ಪ್ರೋಕ್ತವಾದ ಈ ಮಾತುಗಳನ್ನು ಮಾರ್ಕಂಡೇಯ ಮುನಿಯ ಕಿವಿ ತಲುಪಿದಾಕ್ಷಣ ಮಾರ್ಕಂಡೇಯನು ಉದ್ದಕ್ಕೆ ಕೈಗಳನ್ನು ಮುಂದೆ ಚಾಚಿ ಯಾವುದೋ ಶಕ್ತಿಯಿಂದ ಸೆಳೆಯಲ್ಪಟ್ಟವನಾಗಿ ಬಾಲಕನ ತೆರೆದ ಬಾಯಲ್ಲಿ ಪ್ರವೇಶಿಸಿದ.

## ಮಾರ್ಕಂಡೇಯ ಮುನಿಯು ಭಗವಂತನ ಉದರದಲ್ಲಿ ಸಂಚರಿಸಿದುದು

**ಬ್ರಹ್ಮ:-** ಮುನಿಗಳೆ, ಮಾರ್ಕಂಡೇಯ ಮುನಿಯು ಬಾಲಕನ ಹೊಟ್ಟೆಯಲ್ಲಿ ಪ್ರವೇಶಿಸಿದ ನಂತರ, ಭಗವಂತನ ಉದರದಲ್ಲಿ ಅವನಿಗೆ ಸಮಗ್ರ ಭೂಮಂಡಲವೆಲ್ಲ ಗೋಚರಿಸಿತು. ಏಳು ದ್ವೀಪಗಳು ಕಾಣಿಸಿದವು. ಲವಣಸಮುದ್ರ, ಇಕ್ಷುಸಮುದ್ರ, ಸುರಾಸಮುದ್ರ, ಘೃತಸಮುದ್ರ, ದಧಿಸಮುದ್ರ, ಕ್ಷೀರಸಾಗರ, ಸಿಹಿನೀರಿನಸಾಗರ, ಈ ಏಳು ಸಾಗರಗಳು ಕಾಣಿಸಿದವು. ಅವನು ಕಂಡ ಏಳು ದ್ವೀಪಗಳ ಹೆಸರು ಇಂತಿವೆ ಜಂಬೂದ್ವೀಪ, ಲಕ್ಷದ್ವೀಪ, ಶಾಲ್ಮಲಾದ್ವೀಪ, ಕುಶದ್ವೀಪ, ಕ್ರೌಂಚದ್ವೀಪ, ಶಾಕದ್ವೀಪ ಮತ್ತು ಪುಷ್ಕರದ್ವೀಪ. ಸುವರ್ಣಮಯವಾದ ಮೇರು ಪರ್ವತವೂ ಅಲ್ಲಿ ಗೋಚರಿಸಿತು. ಅನೇಕ ರತ್ನಮಯ ಶಿಖರಗಳು ಕಾಣಿಸಿದವು. ಆ ಮೇರುಗಿರಿಯಲ್ಲಿ ಅನೇಕ ಮುನಿಗಳು ವಾಸವಾಗಿದ್ದರು. ನಾನಾ ಬಗೆಯ ಮರಗಳುಳ್ಳ ವನಗಳು ಇದ್ದವು. ಆ ವನಗಳಲ್ಲಿ ಬಗೆ ಬಗೆಯ ಪ್ರಾಣಿಗಳು ಇದ್ದವು. ಹುಲಿ, ಸಿಂಹ, ಕಾಡುಹಂದಿ, ಚಮರಿಮೃಗ, ಕಾಡುಕೋಣ, ಆನೆ, ಜಿಂಕೆ ಮತ್ತು ಕಪಿಗಳು ಮುಂತಾದ ಅನೇಕ ಪ್ರಾಣಿಗಳು ಮನೋಹರವಾದ ಆ ಮೇರುಗಿರಿಯಲ್ಲಿ ಇದ್ದವು. ಮೇರುಪರ್ವತದ ಶಿಖರದಲ್ಲಿ ಸ್ವರ್ಗವಿದ್ದಿತು. ಅಲ್ಲಿ ದೇವೇಂದ್ರ ಮೊದಲಾದ ದೇವತೆಗಳು, ಸಿದ್ಧರು, ಚಾರಣರು, ನಾಗರು, ಯಕ್ಷರು, ಅಪ್ಸರೆಯರು, ಮುನಿಗಳು ಎಲ್ಲರೂ ವಾಸಮಾಡಿದ್ದರು. ವಿಷ್ಣುರೂಪಿಯಾದ ಆ ಬಾಲಕನ ಉದರದಲ್ಲಿ ಸಂಚರಿಸುತ್ತಲಿದ್ದ ಬಾಲಕ ಮಾರ್ಕಂಡೇಯನು ಸಂಪದ್ಯುಕ್ತವಾದ ಇಂತಹ ಮೇರುಪರ್ವತವನ್ನು ಆಶ್ಚರ್ಯದಿಂದ ದಿಟ್ಟಿಸಿ ನೋಡಿದ. ಭಗಂತವನ ಉದರದಲ್ಲಿ ಹಿಮಾಲಯ, ಹೇಮಕೂಟ, ನಿಷಧಗಿರಿ, ಗಂಧಮಾದನ, ವಕ್ರಗಿರಿ, ಮೈನಾಕಗಿರಿ, ಶುಕ್ತಿಮಂತಪರ್ವತ, ಸಹ್ಯಪರ್ವತ, ಶ್ವೇತಗಿರಿ, ದುರ್ಧರಪರ್ವತ, ನೀಲಶೈಲ, ಕೈಲಾಸ, ಮಂದರಗಿರಿ, ಮಹೇಂದ್ರಪರ್ವತ, ಅರ್ಬುದಪರ್ವತ, ಮಲಯಪರ್ವತ ಮತ್ತು ವಿಂಧ್ಯಗಿರಿ ಮುಂತಾದ ಅನೇಕ ಪರ್ವತಗಳು ಇದ್ದವು. ಈ ಎಲ್ಲ ಪರ್ವತಗಳನ್ನು ಮಾರ್ಕಂಡೇಯ ಮುನಿ ನೋಡಿದ. ಅನಂತರ ಬೇರೆಬೇರೆ ದೇಶಗಳನ್ನು ಕಂಡ.

ಕುರುಕ್ಷೇತ್ರ, ಪಾಂಚಾಲ, ಮತ್ಸ್ಯ, ರುದ್ರ, ಕೇಕಯ, ಬಾಹಲೀಕ, ಶೂರಶೇನ, ಕಾಶ್ಮೀರ, ತಂಗಣ, ಖಸ ಮೊದಲಾದ ದೇಶಗಳು ಅಲ್ಲಿ ಗೋಚರಿಸಿದವು. ಋಷಿ ಮುನಿಗಳಿಂದ ಆರಂಭಿಸಿ, ಕರ್ಣಪ್ರಾವಣರೆಂಬ ಮರುಭೂಮಿಯ ಜನಗಳವರೆಗೆ ಎಲ್ಲ ಬಗೆಯ ಜೀವಿಗಳು ಅಲ್ಲಿ ಕಾಣಿಸಿದರು. ಭೂಮಿಯಲ್ಲಿದ್ದ ತೀರ್ಥಗಳು, ಗ್ರಾಮಗಳು, ನಗರಗಳು ಇವೆಲ್ಲವೂ ಅಲ್ಲಿ ಕಂಡವು. ಹೆಚ್ಚೇನು ಹೇಳುವದು! ಮಾರ್ಕಂಡೇಯ ಈ ಜಗತ್ತಿನಲ್ಲಿ ಕಂಡದ್ದೆಲ್ಲವನ್ನೂ ಅಥವಾ ಅದಕ್ಕಿಂತ ಹೆಚ್ಚಿನದನ್ನೇ ಆ ಬಾಲರೂಪಿ ಭಗವಂತನ ಜಠರದಲ್ಲಿ ನೋಡಿದ. ಆ ಬಾಲಕನ ಉದರದಲ್ಲಿ ಭೂಲೋಕ, ಮಾತ್ರವಲ್ಲ ಭುವರ್ಲೋಕ, ಸ್ವರ್ಗಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಮೊದಲಾದ ಊರ್ಧ್ವಲೋಕಗಳೂ, ಅತಲ, ವಿತಲ, ಸುತಲ, ರಸಾತಲ, ತಲಾತಲ ಮಹಾತಲ ಮತ್ತು ಪಾತಾಲ ಎಂಬ ಅಧೋಲೋಕಗಳೂ ಮಾರ್ಕಂಡೇಯ ಮುನಿಗೆ ಕಾಣಿಸಿದವು. ಭಗವಂತನ ಅನುಗ್ರಹದಿಂದ ಮಾರ್ಕಂಡೇಯ ಮುನಿಯು ಭಗವಂತನ ಉದರದಲ್ಲಿ ಅಡೆತಡೆ ಇಲ್ಲದೆ ಎಲ್ಲೆಡೆ ಸಂಚರಿಸಿದ. ಈ ಕಾಲದಲ್ಲಿ ಭಗವದ್ದನುಗ್ರಹದಿಂದ ಆ ಮುನಿಗೆ, ಪೂರ್ವಜನ್ಮದ ಸ್ಮರಣೆಯೂ ಇತ್ತು. ಮುನಿಗೆ ಶ್ರೀಹರಿಯ ಉದರದ ಬಹುಭಾಗಗಳನ್ನು ಸಂಚರಿಸಿದ್ದೇನೆ ಎನಿಸಿದ್ದರೂ ವಸ್ತುತಸ್ತು ಭಗವಂತನ ಅಂತರಿಕ ದೇಹದ ಯಾವ ಭಾಗದಲ್ಲೂ ಪೂರ್ಣವಾಗಿ ಮುನಿ ಸಂಚರಿಸಿರಲಿಲ್ಲ. ಎಷ್ಟು ವರ್ಷ ಪ್ರಯತ್ನಪಟ್ಟರೂ ಒಂದು ಭಾಗವನ್ನು ಸಹ ಪೂರ್ಣವಾಗಿ ಸಂಚರಿಸಲು ಶಕ್ಯವಿಲ್ಲ. ಇಂತಹ ವಿರಾಡ್ರೂಪವುಳ್ಳವನು- ಆ ಶ್ರೀಹರಿ.

ಸಂಚರಿಸಿ, ಸಂಚರಿಸಿ ಸುಸ್ತಾದ, ಆ ಮುನಿಯು ಆ ಶರೀರದಿಂದ ಹೊರಬರುವ ಮಾರ್ಗವನ್ನು ಕಾಣದೆ, ಬಾಲರೂಪಿಯಾದ ಆ ಭಗವಂತನನ್ನೇ ಮತ್ತೆ ಶರಣುಹೋದ. ಭಗವಂತನ ಇಚ್ಛೆಯಂತೆ ಅವನ ಉದರದೊಳಗಿಂದ ಮಹಾಮಾರುತ ಬಂದು ಹೊರಹೊಮ್ಮಿತು. ಆ ಗಾಳಿಯ ವೇಗಕ್ಕೆ ಮುನಿಯು ಬಾಲಭಗವಂತನ ತೆರೆದ ಬಾಯಿಂದ ಹೊರಬಂದ.

## ಮಾರ್ಕಂಡೇಯ ಮಾಡಿದ ಭಗವಂತನ ಸ್ತೋತ್ರ

ಬ್ರಹ್ಮ:- ಮುನಿಗಳೇ, ಬಾಲಭಗವಂತನ ಮುಖಾರವಿಂದದಿಂದ ಈಚೆಗೆ ಬಂದ ಮಾರ್ಕಂಡೇಯ ಮುನಿಯು ಕಣ್ತೆರೆದು ನೋಡಿದಾಗ, ಅವನಿಗೆ ಈ ಮೊದಲು ಕಾಣಿಸಿದಂತೆ, ಅಪಾರ ಜಲಮಯವಾದ ಪ್ರಪಂಚವೇ ಕಾಣಿಸಿತು. ತನ್ನ ಸಮೀಪದಲ್ಲಿ ಒಂದು ವಟವೃಕ್ಷ, ಆ ವೃಕ್ಷದ ಕೊಂಬೆಯಲ್ಲಿ ಸಿಂಹಾಸನ, ಸಿಂಹಾಸನದ ಮೇಲೆ ಮಂಡಿತನಾದ ಬಾಲಕ. ಬಾಲಕನ ಎದೆಯಲ್ಲಿ ಶ್ರೀವತ್ಸಲಾಂಛನ, ಬಾಲಕನಿಗೆ ಚತುರ್ಭುಜಗಳು; ಚತುರ್ಭುಜಗಳಲ್ಲಿ ಶಂಖ, ಚಕ್ರ, ಗದಾದಿ ಲಾಂಛನಗಳು. ಇದನ್ನೆಲ್ಲ ಆ ಮುನಿ ಮತ್ತೊಮ್ಮೆ ಪರೀಕ್ಷಿಸಿದ ದಿಙ್ಮೂಢನಾಗಿ, ಆ ಬಾಲಕನ ಮುಖವನ್ನು ನಿರುಕಿಸಿದ. ಆ ಬಾಲರೂಪಿ ಭಗವಂತನು ಮೋಹಾವೃತನಾದ ಮಾರ್ಕಂಡೇಯನನ್ನು ನೋಡಿ ನಗುತ್ತ ಹೀಗೆ ನುಡಿದ- ''ಮುನಿಯೇ, ಇದೀಗ ನೀನು ನನ್ನ ಉದರದಲ್ಲಿ ಸಂಚಾರ ಮಾಡಿದೆಯಷ್ಟೆ. ಅಲ್ಲಿ ಏನೇನು ಕಂಡೆ? ನಿನ್ನ ಆಯಾಸ ಪರಿಹಾರವಾಯಿತೆ? ನೀನು ನನ್ನ ಭಕ್ತ. ಬಹುಬಾರಿಗೆ ನನ್ನ ಶರಣು ಬಂದಿರುವೆ. ಆದುದರಿಂದ ನಿನಗೆ ಉಪಕಾರ ಮಾಡಲು ಒಂದು ಮಾತನ್ನು ಹೇಳುತ್ತೇನೆ ಕೇಳು. ನನ್ನನ್ನು ಅಡಿಯಿಂದ ಮುಡಿಯವರೆಗೆ ಪೂರ್ಣವಾಗಿ ಒಮ್ಮೆ ನೋಡು. ಆಗ ನಿನಗೆ ನಾನು ಯಾರೆಂಬುದು ತಿಳಿಯುವದು.

**ಬ್ರಹ್ಮ:-** ಇಷ್ಟು ಹೇಳಿ, ಭಗವಂತನು ಮಾರ್ಕಂಡೇಯನಿಗೆ ದಿವ್ಯ ಚಕ್ಷುಸ್ಸನ್ನು ಅನುಗ್ರಹಿಸಿದ. ಭಗವಂತನು ಅನುಗ್ರಹಿಸಿದ ದಿವ್ಯ ದೃಷ್ಟಿಯಿಂದ ಮಾರ್ಕಂಡೇಯ ಮುನಿಯು ಭಗವಂತನನ್ನು ನೋಡಿದ. ಆ ಮುನಿಗೆ ಜ್ಞಾನದೃಷ್ಟಿಯಿಂದ ತಿಳಿದು ಹೋಯಿತು- ಯಾವ ಭಗವಂತನನ್ನು ಕಾಣಲು ಬಹು ಸಂವತ್ಸರಗಳಿಂದ ಅನವರತವಾದ ಪ್ರಯತ್ನವನ್ನೂ, ತಪೋನುಷ್ಠಾನಗಳನ್ನು ತಾನು ಮಾಡುತ್ತಿದ್ದೆನೋ ಆ ಸಾಕ್ಷಾತ್ ಶ್ರೀಹರಿಯೇ ತನ್ನೆದುರು ಇರುವ ಈ ಬಾಲಕ' ಎಂಬುವದಾಗಿ ಕ್ಷಣಾರ್ಧದಲ್ಲಿ, ಮುನಿಯು ಬಾಲಕನ ಪಾದದ ಬಳಿ ಧಾವಿಸಿದ. ಪಾದಸ್ಪರ್ಶಮಾಡಿ, ಬಾಗಿ, ಭಕ್ತಿಯಿಂದ, ಇಂತು ಸ್ತುತಿಸಿದ.

**ಮಾರ್ಕಂಡೇಯ:-**

**ದೇವದೇವ ಜಗನ್ನಾಥ ಮಾಯಾ ಬಾಲವಪುರ್ಧರ ।**
**ತ್ರಾಹಿ ಮಾಂ ಚಾರುಪದ್ಮಾಕ್ಷ ದುಃಖಿತಂ ಶರಣಾಗತಂ ॥**

ಮಾಯೆಯಿಂದ ಬಾಲಕನ ರೂಪವನ್ನು ಧರಿಸಿದ ಓ ದೇವಶ್ರೇಷ್ಠನೆ, ನೀನು ಜಗದೊಡೆಯನು, ಕಮಲದಂತೆ ಸುಂದರವಾದ ಕಣ್ಣುಳ್ಳವ, ಹೇ ಪುಂಡರೀಕಾಕ್ಷ, ದುಃಖದಿಂದ ನಿನ್ನ ಮೊರೆ ಹೊಕ್ಕ ನನ್ನನ್ನು ರಕ್ಷಿಸು.

ಪ್ರಳಯ ಕಾರ್ಯಕ್ಕೆ ಸಹಾಯಕವಾಗಿದ್ದ ಅಗ್ನಿ, ವಾಯು, ಜಲ, ಮುಂತಾದವುಗಳಿಂದ ನಾನು ತುಂಬ ಬಳಲಿರುವೆ. ಹಸಿವು ನೀರಡಿಕೆ ನನ್ನನ್ನು ಬಾಧಿಸುತ್ತಿವೆ. ನಾನು ನಿರಾಶ್ರಿತನಾಗಿರುವೆ. ಹೇ ಭಗವಂತ, ನಿನ್ನ ಉದರದಲ್ಲಿನ ಸಮಸ್ತ ಪ್ರಪಂಚವನ್ನೂ ನಾನು ಸುತ್ತಿದೆ, ಆಯಾಸಗೊಂಡಿರುವೆ. ನನ್ನನ್ನು ಸಲಹುವ ಸ್ವಾಮಿ ನೀನೆ. ನೀನು ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣಪುರುಷ. ನನ್ನನ್ನು ಸಲಹುವ ಜವಾಬ್ದಾರಿ ನಿನ್ನದು. ಹೇ ಲಕ್ಷ್ಮೀಪತೆ, ಜಗತ್ ಸೃಷ್ಟಿಕರ್ತನಾದ ಬ್ರಹ್ಮದೇವನಿಗೂ ಸೃಷ್ಟಿ, ಸಾಮರ್ಥ್ಯ ಕೊಡುವವ ನೀನೇ. ನೀನು ಮಧು, ಕಂಸ, ಕೇಶಿ, ಅರಿಷ್ಟಾಸುರ ಮೊದಲಾದ ದೈತ್ಯ ದಾನವರನ್ನು ಸಂಹರಿಸಿರುವೆ. ಸಜ್ಜನರನ್ನು ಉದ್ಧರಿಸಿರುವಿ. ಹೇ ಕೃಷ್ಣಸ್ವಾಮಿಯೇ, ನನ್ನ ಮೇಲೆ ಪ್ರಸನ್ನನಾಗು. ಹೇ ಉಪೇಂದ್ರನೆ, ಪಂಚಭೂತಗಳೂ ನೀನೇ. ಮನಸ್ಸು ಅಹಂಕಾರ, ಬುದ್ಧಿ, ಪ್ರಕೃತಿ, ಸತ್ವ, ರಜಸ್ಸು, ತಮಸ್ಸು ಮುಂತಾದ ಗುಣಗಳು ನೀನೇ. ಜಗದ್ವ್ಯಾಪಿಯಾದ ವಿರಾಟ್‌ಪುರುಷ ನೀನು ಪುರುಷೋತ್ತಮ ಶೋತ್ರ ಮೊದಲಾದ ಇಂದ್ರಿಯಗಳು, ಶಬ್ದ ಮೊದಲಾದ ವಿಷಯಗಳೂ ನೀನೇ. ಯಜ್ಞಾಧಿಪತಿ ನೀನು. ಪಿತೃದೇವತೆಗಳು, ವಾಲಖಿಲ್ಯರು, ನವಬ್ರಹ್ಮರು, ಋಷಿಗಳು, ಅಶ್ವಿನಿಕುಮಾರರು, ನಿಶಾಚರರಾದ ಭೂತಪ್ರೇತಗಳು, ಎಲ್ಲ ನಿನ್ನಿಂದಲೇ, ಹೇ ದೇವದೇವ ಹೆಚ್ಚೇನು ಹೇಳುವದು? ಬ್ರಹ್ಮನಿಂದ ಆರಂಭಿಸಿ ಅತಿ ಚಿಕ್ಕ ಜೀವಿಯವರೆಗಿನ, ಈಗ ಇರುವ, ಮುಂದೆ ಜನಿಸುವ ಹಿಂದೆ ಜನಿಸಿದ್ದ, ಸಮಸ್ತ ಜೀವರೂಪವಾದ ಜಾತಿ ಎಲ್ಲ ನೀನೇ ಆಗಿರುವಿ. ಬ್ರಹ್ಮಾಂಡ ವೆಲ್ಲವೂ ನಿನ್ನ ಬಾಹ್ಯಸ್ವರೂಪ. ನಿನ್ನ ಅಂತಃಸ್ವರೂಪ ನಮಗೆ ಗೋಚರವಾಗು ವಂಥಹದಲ್ಲ, ಎಂತಹ ಮೇಧಾವಿಗಳೂ, ನಿನ್ನ ಅಂತರಂಗವನ್ನು ತಿಳಿಯಲಾರರು. ನೀನು ಮನೋವಾಚಾಮಗೋಚರ. ನೀನು ಸರ್ವಸದ್ಗುಣ ಸಂಪೂರ್ಣ, ಅಗಣಿತಗುಣಗಳ ಗಣಿ. ನಿನ್ನ ಮೊರೆಯನ್ನು ಯಾರು ಅರಿತಾರು. ನಿನ್ನನ್ನು ತಿಳಿದು ಸ್ತುತಿಸಲು ಯಾರು ತಾನೇ ಸಮರ್ಥರು? ಹೀಗಿದ್ದೂ ನಿನ್ನ ಭವ್ಯರೂಪವನ್ನು ಕಂಡು ತಡೆದುಕೊಳ್ಳಲಾಗದೆ ತಿಳಿದಂತೆ ಸ್ತುತಿಸಿದ್ದೇನೆ-ಈ ನನ್ನ ಅಲ್ಪಬುದ್ಧಿಯನ್ನು ನೀನು ಕ್ಷಮಿಸುವೆಯಷ್ಟೆ.

## ಮಾರ್ಕಂಡೇಯ ಮುನಿಗೆ ಭಗವಂತನ ಅನುಗ್ರಹ

**ಬ್ರಹ್ಮ:-** ವಿಪ್ರೋತ್ತಮರೇ, ಮಾರ್ಕಂಡೇಯನು ಹೀಗೆ ಸ್ತುತಿಸಿದಾಗ, ಭಗವಂತ ಪ್ರೀತನಾದ. ಮೇಘ ಗಂಭೀರವಾದ ಧ್ವನಿಯಿಂದ ಹೀಗೆ ಹೇಳಿದ- 'ಮುನಿಶ್ರೇಷ್ಠನೆ, ನಿನ್ನ ವಿಷಯದಲ್ಲಿ ನಾನು ಪರಿತುಷ್ಟ. ಬೇಕಾದುದನ್ನು ಬೇಡು. ಅನುಗ್ರಹಿಸುವೆ.

ಬಾಲರೂಪಿಯಾದ ಭಗವಂತನ ಈ ಮಾತುಗಳನ್ನು ಕೇಳಿ ಮಾರ್ಕಂಡೇಯನಿಗೆ ಪರಮ ಸಂತೋಷವೆನಿಸಿತು. ಮಾರ್ಕಂಡೇಯ ನುಡಿದ:-

**ಮಾರ್ಕಂಡೇಯ:-** ಭಗವನ್, ನಿನ್ನ ಅನುಗ್ರಹದಿಂದ, ನಿನ್ನ ಮಹಿಮೆಯನ್ನು ತಿಳಿಯಬೇಕೆಂಬ ಒಂದೇ ಒಂದು ಅಪೇಕ್ಷೆ ನನಗಿದೆ. ನಿನ್ನ ಶರೀರವನ್ನು ಪ್ರವೇಶಿಸಿ, ಸಾಕಷ್ಟು ತಿರುಗಾಡಿದೆ. ಆದರೂ ನಿನ್ನ ನೈಜ ಸ್ವರೂಪದ ನೆಲೆಯನ್ನು ತಿಳಿಯಲಾಗಲಿಲ್ಲ. ನೀನು ಬಾಲಕ ರೂಪವನ್ನು ಏಕೆ ತಳೆದಿರುವೆ? ನಿನ್ನ ಉದರದಲ್ಲಿ ಈ ಜಗತ್ತನ್ನು ಏಕೆ ಇಟ್ಟಿರುವೆ? ಇದೆಲ್ಲ ವನ್ನು ನನಗೆ ನಿರೂಪಿಸು. ಈ ಜಗತ್ತೆಲ್ಲವೂ ನಿನ್ನ ಬಾಲ ಶರೀರದ ಉದರದಲ್ಲಿ ಹೇಗೆ ಇದೆ? ಈ ತತ್ತ್ವವನ್ನು ನನಗೆ ತಿಳಿಸು. ನೀನು ಈ ಸ್ಥಳದಲ್ಲಿ ಬಾಲರೂಪದಿಂದ ಎಷ್ಟು ಕಾಲದವರೆಗೆ ಇರುತ್ತಿ? ಮುಂದೇನು? ದಯವಿಟ್ಟು, ನನ್ನ ಪ್ರಶ್ನೆಗೆ ಉತ್ತರಿಸಿ, ನನ್ನನ್ನು ಉದ್ಧರಿಸು.

**ಭಗವಂತನು:-** ಮಾರ್ಕಂಡೇಯ, ನನ್ನ ಸ್ವರೂಪಜ್ಞಾನ ಅತ್ಯಂತ ದುರ್ಲಭ. ದೇವತೆಗಳೂ ಸಹ ನನ್ನ ಸ್ವರೂಪ ತಿಳಿಯಲು ಸಮರ್ಥರಾಗಿಲ್ಲ. ನೀನು ನನ್ನ ಭಕ್ತನಾಗಿರುವೆ. ತಂದೆಯನ್ನು ಮಗ ಆಶ್ರಯಿಸುವಂತೆ ನೀನು ನನ್ನನ್ನು ಮೊರೆ ಹೊಕ್ಕಿರುವಿ. ನನ್ನ ಸ್ವರೂಪವನ್ನು ತಿಳಿಸುವೆ ಕೇಳು.

ನನಗೆ ನಾರಾಯಣ ಎಂದು ಹೆಸರು. ಹಿಂದೆ ನೀರಿಗೆ ನಾರ ಎಂಬ ಸಂಜ್ಞೆಯನ್ನು ನಾನು ನಿಗದಿಪಡಿಸಿದೆ. ಆ ನಾರವೇ ಅಂದರೆ ನೀರೇ ನನಗೆ ಅಯನ ಅಂದರೆ ವಾಸಸ್ಥಾನ. ಆದುದರಿಂದ ನನಗೆ ನಾರಾಯಣ ಎಂದು ಹೆಸರಾಯಿತು. ನಾನು ಉತ್ಪತ್ತಿ ವಿನಾಶ ರಹಿತ. ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ ಕರ್ತ, ಅನಾದ್ಯನಂತ ಸ್ಥಿತಿ ಉಳ್ಳವ, ವಿಷ್ಣು ನಾನೇ, ಬ್ರಹ್ಮ ನಾನೇ, ದೇವಾಧಿಪ ಇಂದ್ರ, ಕುಬೇರ, ಪ್ರೇತಪತಿಯಮ, ಶಿವ, ಚಂದ್ರ, ಕಶ್ಯಪಬ್ರಹ್ಮ ಇವರೆಲ್ಲ ನಾನೇ. ನನ್ನ ವಿರಾಡ್ರೂಪ ಹೀಗಿದೆ- ಅಗ್ನಿ ನನ್ನ ಮುಖ, ಭೂಮಿ ನನ್ನ ಕಾಲು, ಚಂದ್ರ ಸೂರ್ಯರು ನನ್ನ ಕಣ್ಣುಗಳು. ನನ್ನ ಶಿರಸ್ಸು ಸ್ವರ್ಗ, ದಿಕ್ಕು ಮತ್ತು ಆಕಾಶಗಳು ನನ್ನ ಕಿವಿ. ನೀರು ನನ್ನ ಬೆವರು. ವಿದಿಕ್ಕುಗಳಿಂದ ಕೂಡಿದ ಆಕಾಶವೆಲ್ಲ ನನ್ನ ಶರೀರ. ವಾಯು ನನ್ನ ಮನಸ್ಸು. ಇದು ನನ್ನ ವಿರಾಡ್ರೂಪದ ವಿವರಣೆ. ಭೂಮಿಗೆ ಮೇರೆಯಾಗಿ ನಾಲ್ಕು ಸಮುದ್ರಗಳಿವೆ. ಮೇರು, ಮಂದರ ಎಂಬ ದೊಡ್ಡ ಗಿರಿಗಳಿವೆ. ಈ ಭೂಮಿಯಲ್ಲಿ. ಇಂತಹ ಭೂಮಿಯನ್ನು ಆದಿಶೇಷನ ರೂಪದಿಂದ ಧರಿಸಿದವ ನಾನೇ. ಹಿಂದೊಮ್ಮೆ ಈ ಭೂಮಿ ನೀರಿನಲ್ಲಿ ಮುಳುಗುತ್ತಿತ್ತು. ಆಗ ನಾನು ಆದಿವರಾಹ ರೂಪಧರಿಸಿ ಭೂಮಿಯನ್ನು ಮೇಲಕ್ಕೆತ್ತಿದೆ. ವಡವಾಗ್ನಿಯ ರೂಪ ತಳೆದು, ಸಮುದ್ರದ ನೀರನ್ನೆಲ್ಲ ಪಾನಮಾಡುವ ಹಾಗೂ ಅದನ್ನು ಹೊರ ಹಾಕುವ ಸಾಮರ್ಥ್ಯ ನನಗಿದೆ. ಋಗ್, ಯಜು, ಸಾಮ, ಅಥರ್ವವೆಂಬ ಚತುರ್ವೇದಗಳು ಆವಿಷ್ಕಾರಗೊಂಡದ್ದು ನನ್ನಿಂದಲೇ. ಆ ನಿಗಮಾಗಮಗಳ ರಮ್ಯ ಗುರಿಯೂ ನಾನೇ. ನನ್ನ ಕಾಲುಗಳಿಂದ ಶೂದ್ರರು, ತೊಡಗೆಗಳಿಂದ ವೈಶ್ಯರು, ಬಾಹುಗಳಿಂದ ಕ್ಷತ್ರಿಯರು, ಮುಖದಿಂದ ಬ್ರಾಹ್ಮಣರು ಜನಿಸಿದ್ದಾರೆ. ಪರಮ ಹಂಸಾಶ್ರಮ

ಸ್ವೀಕರಿಸಿದ ಪರಿಶುದ್ಧಾತ್ಮರು, ಆತ್ಮಜ್ಞಾನೇಚ್ಛುಗಳು, ಚಿಂತಿಸುವುದು ನನ್ನನ್ನೇ. ಸಾತ್ವಿಕ ಬ್ರಾಹ್ಮಣರ, ಸಾತ್ವಿಕ ಜೀವಿಗಳೆಲ್ಲರ ಉಪಾಸ್ಯ ಮೂರ್ತಿ ನಾನು. ಪ್ರಳಯತೇಜ, ಪ್ರಳಯಾಗ್ನಿ, ಪ್ರಳಯಾದಿತ್ಯ, ಪ್ರಳಯಮಾರುತ ಇವೆಲ್ಲವೂ ನನ್ನ ಆವಿರ್ಭಾವಗಳೇ. ಆಕಾಶದಲ್ಲಿ ಕಂಗೊಳಿಸುವ ನಕ್ಷತ್ರಗಳೆಲ್ಲ ವಿರಾಟಪುರುಷನಾದ ನನ್ನ ರೋಮಕೂಪಗಳು. ರತ್ನಾಕರ ನನ್ನ ಶಯನಸ್ಥಾನ. ಚತುರ್ದಿಕ್ಕುಗಳು ನನಗೆ ವಸ್ತ್ರಗಳು. ಮಾನವರ ಮನದಲ್ಲಿ ಉದಯಿಸುವ ಸಂತೋಷ, ದುಃಖ, ಮೋಹ ಮೊದಲಾದ ಭಾವಗಳೆಲ್ಲ ನನ್ನ ಬೇರೆಬೇರೆ ರೂಪಗಳೇ. ನನ್ನಿಂದ ಪ್ರೇರಿತರಾಗಿಯೇ ಜನರು ತಪಸ್ಸು, ಯಜ್ಞ ಮೊದಲಾದವುಗಳನ್ನು ಆಚರಿಸಿ, ಆಯಾ ಕರ್ಮಗಳಿಗೆ ತಕ್ಕಫಲ ಪಡೆಯುತ್ತಾರೆ. ನನ್ನ ವಿರಾಟಶರೀರದಲ್ಲಿಯೇ ಸಂಚರಿಸುತ್ತಿದ್ದರೂ ನನ್ನ ಅರಿವು ಇಲ್ಲದೆ ಜೀವಿಗಳು, ಸಾರಾಸಾರ ವಿವೇಕಶೂನ್ಯರಾಗಿ ಸುಖವನ್ನು ಬೆನ್ನಟ್ಟಿರುವರು. ಇವರೆಲ್ಲ ಅಸ್ವತಂತ್ರರು. ಯೋಗ್ಯತಾಶಾಲಿಗಳಾದ ಸಜ್ಜೀವರು ವೇದಾಧ್ಯಯನ, ಋಜು ಜೀವನ, ಜ್ಞಾನ ಸಂಪಾದನ ಮೊದಲಾದ ಮಾರ್ಗಗಳಿಂದ ನನ್ನನ್ನು ಆರಾಧಿಸಿ ನನ್ನನ್ನು ಪಡೆಯುತ್ತಾರೆ.

ದುರಾಚಾರಿಗಳು, ಕೃಪಣರು, ಪಾಪಿಗಳು, ವಿಪರೀತ ಚಂಚಲರು, ನನ್ನನ್ನು ಪಡೆಯಲಾರರು. ಅಜ್ಞಾನಿಗಳಿಗೆ ನಾನು ಬಹುದೂರ. ಲೋಕದಲ್ಲಿ ಯಾವಾಗ ಧರ್ಮನಷ್ಟವಾಗಿ ಅಧರ್ಮ ತಲೋದೋರುವದೋ ಆಗ ನಾನು ಧರ್ಮದ ಉದ್ಧಾರಕ್ಕಾಗಿ ಅವತರಿಸುವೆ. ಪುಣ್ಯವಂತರ ಮನೆಗಳಲ್ಲಿ ಮನುಷ್ಯರೂಪದಿಂದ ನಾನು ಜನಿಸಿ ಬರುತ್ತೇನೆ. ಭೂಮಿಗೆ ಭಾರರಾದ ಸುಜನ ಪೀಡಕರಾದ ರಾಕ್ಷಸರನ್ನು ನಾನು ಆಗ ಸಂಹರಿಸುತ್ತೇನೆ. ಸಜ್ಜನರನ್ನು ರಕ್ಷಿಸುತ್ತೇನೆ. ಇದು ನನ್ನ ವ್ರತ, ಆಯಾಯ ಪ್ರಾಣಿಗಳ ಕರ್ಮಕ್ಕೆ ಅನುಗುಣವಾದ ಆಯಾಯ ಶರೀರಗಳನ್ನು ಸೃಜಿಸಿ ಅವರವರಿಗೆ ಒಪ್ಪಿಸುವೆ. ಆ ಶರೀರಗಳಲ್ಲಿ ನಾನೇ ನಿಂತು, ಅವರಿಂದ ಕರ್ಮ ಮಾಡಿಸುವೆ. ಮತ್ತು ಆ ಕರ್ಮಗಳಿಗೆ ಫಲವನ್ನೂ ನಾನೇ ಕೊಡುವೆ.

ಕಲಿಯುಗದಲ್ಲಿ ಅಧರ್ಮ ಮೂರುಪಾಲು, ಧರ್ಮ ಒಂದುಪಾಲು ಮಾತ್ರ. ಯುಗಾಂತ್ಯದಲ್ಲಿ ಕಾಲರೂಪದಿಂದ ನಾನೇ ಜಗತ್ತನ್ನೆಲ್ಲ ನಾಶಮಾಡುತ್ತೇನೆ. ಎಲ್ಲ ಪ್ರಾಣಿಗಳಲ್ಲೂ ನಾನು ನೆಲೆಸಿರುವೆ. ಆದರೆ ಯಾವ ಪ್ರಾಣಿಗಳೂ ನನ್ನ ಸ್ವರೂಪ ತಿಳಿದಿಲ್ಲ. ಹೇ, ಮಾರ್ಕಂಡೇಯ ಮುನಿಯೇ, ನೀನು ನನ್ನನ್ನು ಹೊಂದಲು, ಬಹಳಷ್ಟು ದುಃಖಪಟ್ಟಿರುವೆ. ಈ ಶ್ರಮ ವ್ಯರ್ಥವಲ್ಲ. ನೀನು ಮುಂದೆ ಮಹಾನ್ ಶ್ರೇಯಸ್ಸಿಗೆ ಭಾಗಿಯಾಗಲಿರುವೆ. ಶಂಖ, ಚಕ್ರ, ಗದಾಧಾರಿಯಾದ ನಾನು ಈಗ ಇರುವಂತೆಯೇ ಶಿಶುರೂಪದಿಂದ ಸಾವಿರ ಯುಗಗಳವರೆಗೆ ಈ ಕ್ಷೀರಾಬ್ಧಿಯಲ್ಲಿ ಪವಡಿಸುವೆ. ಜಗವೆಲ್ಲ ಪ್ರಳಯದಿಂದ ನಷ್ಟವಾದರೂ ನೀನು ಮಾಡಿದ ಪುಣ್ಯಪ್ರಭಾವದಿಂದ ನಷ್ಟವಾಗದೇ ಉಳಿದು ನನ್ನಲ್ಲಿಗೆ ಬಂದೆ. ನನ್ನಿಂದ ಉಪದೇಶ ಪಡೆದೆ. ನೀನು ನನ್ನ ಶರೀರವನ್ನು ಪ್ರವೇಶಿಸಿದಾಗ ಅಲ್ಲಿ ಬ್ರಹ್ಮಾಂಡವನ್ನೆಲ್ಲ ಕಂಡೆ, ಆದರೆ ಅದರ ತತ್ವವನ್ನು ತಿಳಿಯಲಿಲ್ಲ. ನಿನ್ನನ್ನು ಶರೀರದಿಂದ ಹೊರಗೆ ತಂದವ ನಾನೇ. ದೇವಾಸುರರಿಗೂ, ತಿಳಿಯಲು ದುಸ್ತರವಾದ ಆತ್ಮ ತತ್ವವನ್ನು ನಿನಗೆ ಅನುಗ್ರಹಿಸಿದ್ದೇನೆ. ಮುನಿಯೇ, ಬ್ರಹ್ಮನು ಈಗ, ತಪಸ್ಸು ಮಾಡುತ್ತಲಿದ್ದಾನೆ. ಅವನ ತಪಸ್ಸಮಾಧಿಯಿಂದ ಎಚ್ಚರಗೊಂಡ ನಂತರ ಪುನಃ ಸೃಷ್ಟಿ ಆರಂಭವಾಗುವದು.

ನಾನು ನಿನ್ನನ್ನು ಅನುಗ್ರಹಿಸಿದ್ದೇನೆ. ದೇವತೆಗಳಂತೆ ನೀನು ದೀರ್ಘಾಯುವಾಗುವಿ. ಈಗಲೇ ಚಿರಂಜೀವಿ ಎನಿಸಿದ ನೀನು ಇನ್ನೂ ಹೆಚ್ಚಿನ ಆಯುಷ್ಯ ಪಡೆ. ನಿನಗೆ ಇನ್ನೂ ಏನಾದರೂ ಬೇಕಿದ್ದರೂ, ಯಾಚಿಸು ಅನುಗ್ರಹಿಸುವೆ.

ಶ್ರೀಹರಿಯ ಈ ಮಾತುಗಳನ್ನು ಕೇಳಿ, ಮಾರ್ಕಂಡೇಯ ಮುನಿಯು ಸಂತೋಷದಿಂದ ಶ್ರೀಹರಿಗೆ ನಮಸ್ಕರಿಸಿದ; ಹೀಗೆ ನುಡಿದ ; 'ದೇವೇಶ ನಿನ್ನ ದಿವ್ಯರೂಪ ಕಂಡೆ ನನ್ನ ಅಜ್ಞಾನ ತೊಲಗಿತು. ಸ್ವಾಮಿ, ನನಗೆ ಅಭಿಲಾಷೆ ಒಂದಿದೆ ಪುರುಷೋತ್ತಮಕ್ಷೇತ್ರದಲ್ಲಿ ಶಿವಾಲಯ ಒಂದನ್ನು ನಿರ್ಮಿಸಬೇಕೆಂಬ ಇಚ್ಛೆ ನನಗಿದೆ. ಈ ನನ್ನ ಉದ್ದೇಶ ಈಡೇರುವಂತೆ ಅನುಗ್ರಹಿಸು.

ಮಾರ್ಕಂಡೇಯನ ಈ ಬಯಕೆಯನ್ನು ಕೇಳಿದ ಭಗವಂತನು, ಮಾರ್ಕಂಡೇಯನನ್ನು ಇಂತು ಹರಿಸಿದ:- 'ಮಾರ್ಕಂಡೇಯ, ನಿನ್ನ ಇಚ್ಛೆ ನೆರವೇರಲಿ. ನೀನು ಪ್ರತಿಷ್ಠಾಪಿಸಿದ ಶಿವಲಿಂಗವನ್ನು ಆರಾಧಿಸುವ ಮಾನವರ ದುಃಖಗಳು ದೂರವಾಗಲಿ. ಮನೋರಥಗಳು ಸಿದ್ಧಿಸಲಿ. ನೀನು ಶಿವಲಿಂಗ ಪ್ರತಿಷ್ಠೆಮಾಡಿದರೆ ನನ್ನ ಪ್ರತಿಷ್ಠೆ ಮಾಡಿದಂತೆಯೇ. ನನಗೂ ಶಿವನಿಗೂ ವ್ಯತ್ಯಾಸವಿಲ್ಲ. ಜಗತ್ತಿನ ಸ್ಥಿತಿ ಸಂಹಾರಾದಿಗೋಸ್ಕರ ನಾನೇ ಶಿವರೂಪಧಾರಣ ಮಾಡಿ ಶಿವನಲ್ಲಿ ನಿಂತು ಆ ಕಾರ್ಯವನ್ನು ಮಾಡಿಸುತ್ತೇನೆ. ಅಜ್ಞಾನಿ ಮಾತ್ರ ಶಿವರುದ್ರದಲ್ಲಿ ಒಬ್ಬರು ತನ್ನವರು ಇನ್ನೊಬ್ಬರು ತನ್ನವರಲ್ಲ ಎಂದು ಮೋಹಕ್ಕೊಳಗಾಗುತ್ತಾನೆ, ವಾದಕ್ಕೆ ಇಳಿಯುತ್ತಾನೆ. ಕೊನೆಗೂ ತತ್ವವನ್ನು ತಿಳಿಯುವದಿಲ್ಲ. ನೀನು ಪುರುಷೋತ್ತಮ ಕ್ಷೇತ್ರದಲ್ಲಿ ನಿನ್ನ ಹೆಸರಿನಿಂದ ಶಿವಾಲಯವನ್ನು ನಿರ್ಮಿಸು. ಆ ದೇವಾಲಯದ ಉತ್ತರ ಭಾಗದಲ್ಲಿ ಪವಿತ್ರವಾದ ಒಂದು ತೀರ್ಥವನ್ನು ಸಹ ನಿರ್ಮಾಣ ಮಾಡು. ಆ ತೀರ್ಥಕ್ಕೆ "ಮಾರ್ಕಂಡೇಯತೀರ್ಥ" ಎಂದು ಹೆಸರಾಗುವದು. ನನ್ನ ಅನುಗ್ರಹದಿಂದ ಆ ತೀರ್ಥವು ಭೂಲೋಕದಲ್ಲಿನ ಸಜ್ಜನರ ಪಾಪಗಳನ್ನು ನಾಶ ಮಾಡುವದು. ಎಂದು ನುಡಿದು ಭಗವಂತನು ಅದೃಶ್ಯನಾದನು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹದಿನಾರನೇಯ ಅಧ್ಯಾಯ ಮುಗಿದುದು*

—o—

## ಕೃಷ್ಣದರ್ಶನ ಮಹಾತ್ಮ್ಯೆ

**ಅಧ್ಯಾಯ - ೧೭**

**ಬ್ರಹ್ಮ:-** ಮುನಿಗಳೇ, ಪಂಚತೀರ್ಥದ ವಿಧಿಯನ್ನು ಈಗ ನಿರೂಪಿಸುವೆ. ಪಂಚತೀರ್ಥದಲ್ಲಿ ಮಾಡಿದ ಸ್ನಾನ, ದಾನ, ಅಭಿಷೇಕಗಳಿಗೆ ಫಲ ಏನೇನು ಎಂಬುದನ್ನು ಹೇಳುವೆ, ಕೇಳಿರಿ ಮಾರ್ಕಂಡೇಯ ತೀರ್ಥಕ್ಕೆ ಹೋಗಿ ಉತ್ತರಾಭಿಮುಖವಾಗಿ, ಮೂರು ಸಲ ಆ ತೀರ್ಥದಲ್ಲಿ ಮುಳುಗಬೇಕು. ನೀರಿನಲ್ಲಿ ಸ್ನಾನ ಮಾಡುತ್ತ ಈ ಕೆಳಗಿನಂತೆ ಮಂತ್ರಗಳನ್ನು ಉಚ್ಚರಿಸಬೇಕು.

**ಸಂಸಾರಸಾಗರೇ ಮಗ್ನಂ ಪಾಪಗ್ರಸ್ತಮಚೇತನಂ ।**
**ತ್ರಾಹಿ ಮಾಂ ಭಗನೇತ್ರಘ್ನ ತ್ರಿಪುರಾರೇ ನಮೋಽಸ್ತು ತೇ ॥**

ಭಗ ಎಂಬ ಹೆಸರಿನ ಸೂರ್ಯನ ನೇತ್ರವನ್ನು ಕಿತ್ತ ಮಹಾಮಹಿಮನಾದ ಹೇ ದೇವ, ನಾನು ಪಾಪಿ, ಮೂಢ, ಸಂಸಾರಮಗ್ನ ಇಂತಹ ನನ್ನನ್ನು ನೀ ಕಾಪಾಡು ತ್ರಿಪುರನೆಂಬ ಅಸುರನನ್ನು ಸಂಹರಿಸಿದ ಹೇ ಮಹಾದೇವ, ನಿನಗೆ ಭಕ್ತಿಪೂರ್ವಕ ನಮಸ್ಕಾರಗಳು.

**ನಮಃಶಿವಾಯ ಶಾಂತಾಯ ಸರ್ವಪಾಪಹರಾಯಚ ।**
**ಸ್ನಾನಂ ಕರೋಮಿ ದೇವೇಶ ನಮನಶ್ಯಾತುಪಾತಕಂ ॥**

ಹೇ ಪ್ರಭುವೇ, ನೀನು ಶಾಂತನು ಮಂಗಳ ಸ್ವರೂಪಿಯು; ಪಾಪನಾಶಕನು, ನಿನ್ನನ್ನು ನಮಸ್ಕರಿಸುತ್ತೇನೆ. ಈ ತೀರ್ಥದಲ್ಲಿ ಸ್ನಾನಮಾಡಲು ನನಗೆ ಅನುಮತಿಯನ್ನು ಕೊಡು. ನಿನ್ನಿಂದ ಅನುಮತನಾಗಿ ಈ ತೀರ್ಥದಲ್ಲಿ ನಾನು ಮಾಡುವ ಸ್ನಾನದಿಂದ ನನ್ನ ಪಾಪಗಳು ನಷ್ಟವಾಗಲಿ.

ಹೀಗೆ ಪ್ರಾರ್ಥಿಸಿ, ಸ್ನಾನಕ್ಕೆ ಅನುಮತಿಯನ್ನು ಪಡೆದು ಸ್ನಾನವನ್ನು ಪೂರೈಸಿ ನಾಭಿಯವರೆಗೆ ಆಳವಾಗಿರುವ ನೀರಿನಲ್ಲಿ ನಿಂತುಕೊಂಡು, ದೇವತೆಗಳೂ, ಋಷಿಗಳೂ, ಪಿತೃದೇವತೆಗಳು ಇವರೆಲ್ಲರಿಗೂ ಎಳ್ಳುನೀರಿನಿಂದ ತರ್ಪಣಕೊಡಬೇಕು. ಸ್ನಾನಾನಂತರದಲ್ಲಿ ಆಚಮನಮಾಡಿ ಶಿವಾಲಯಕ್ಕೆ ಹೋಗಬೇಕು. ಅಲ್ಲಿ ಶಿವಮೂಲ ಮಂತ್ರ ಪಠಿಸುತ್ತ ಅಥವಾ ಅಘೋರ ಮಂತ್ರ ಉಚ್ಚರಿಸುತ್ತ ಮಹಾದೇವನಿಗೆ ಮೂರು ಪ್ರದಕ್ಷಿಣೆಗಳನ್ನೂ ನಮಸ್ಕಾರಗಳನ್ನೂ ಸಲ್ಲಿಸುವದರ ಮೂಲಕ ಅರ್ಚನೆ ಗೈಯಬೇಕು. ಮಹಾದೇವನನ್ನು ಹೀಗೆ ಸ್ತೋತ್ರ ಮಾಡಬೇಕು.

**ತ್ರಿಲೋಚನ ನಮಸ್ತೇಽಸ್ತು ನಮಸ್ತೇ ಶಶಿಭೂಷಣ ।**
**ತ್ರಾಹಿ ಮಾಂ ತ್ವಂ ವಿರೂಪಾಕ್ಷ ಮಹಾದೇವ ನಮೋಽಸ್ತುತೇ ॥**

ಮೂರು ಕಣ್ಣುಳ್ಳ ಚಂದ್ರಶೇಖರನಾದ, ಹೇ ದೇವನೇ ನಿನಗೆ ನನ್ನ ನಮಸ್ಕಾರಗಳು. ಹೇ ವಿರೂಪಾಕ್ಷ, ನನ್ನನ್ನು ರಕ್ಷಿಸು. ಮಹಾದೇವನಾದ ನಿನಗೆ ನನ್ನ ನಮಸ್ಕಾರಗಳು.

ಹೀಗೆ ಶಂಕರನನ್ನು ಸ್ತುತಿಸಿದರೆ, ಶಂಕರನು ಪ್ರಸನ್ನನಾಗುವನು. ಈಮೇಲೆ ಹೇಳಿದ ಪದ್ಧತಿಯಲ್ಲಿ ಮಾರ್ಕಂಡೇಯ ತೀರ್ಥದಲ್ಲಿ ಸ್ನಾನಮಾಡಿ ಶಂಕರನ ದರ್ಶನ ಪಡೆದ, ಅವನನ್ನು ಆರಾಧಿಸಿದ ನರನು ಹತ್ತು ಅಶ್ವಮೇಧಯಾಗ ಫಲವನ್ನು ಪಡೆಯುತ್ತಾನೆ. ಸತತವಾಗಿ ಶಾಸ್ತ್ರೋಕ್ತ ರೀತಿಯಿಂದ ಶಂಕರನ ಸಮಾರಾಧನೆ ಮಾಡಿದವ ಸಕಲ ಪಾಪಗಳಿಂದ ಮುಕ್ತನಾಗಿ ಕೊನೆಗೆ ಶಿವಲೋಕವನ್ನು ಹೊಂದುವನು. ಅಲ್ಲಿ ಒಂದು ಕಲ್ಪದವರೆಗೆ ಭೋಗಭಾಗ್ಯ ಅನುಭವಿಸುವನು. ಪುಣ್ಯ ನಷ್ಟವಾದ ಬಳಿಕ ಭೂಲೋಕಕ್ಕೆ ಮರುಳುವನು. ಇಲ್ಲಿ ಸದ್ಬ್ರಾಹ್ಮಣನ ವಂಶದಲ್ಲಿ ಜನಿಸುವನು. ಅಧ್ಯಯನ ಶೀಲನಾಗಿ ಸಾಧನಾ ಜೀವನವನ್ನು ನಡೆಸಿ, ಶಂಕರನ ಅನುಗ್ರಹಕ್ಕೆ ಪಾತ್ರನಾಗಿ, ಪರಮಪದವನ್ನು ಪಡೆಯುವನು. ವಟವೃಕ್ಷದಲ್ಲಿ ಪರಮೇಶ್ವರನ ಸನ್ನಿಧಾನವಿದೆ. ಭಕ್ತಿಯಿಂದ ವಟವೃಕ್ಷ ಸೇವಿಸಿದವ, ಪಾಪಗಳಿಂದ ಮುಕ್ತನಾಗುತ್ತಾನೆ. ವಟವೃಕ್ಷವು ದೇವಾಧಿದೇವತೆಗಳ ಆಶ್ರಯಸ್ಥಾನ, ನ್ಯಗ್ರೋಧ ತರುವಿನಲ್ಲಿ ನೆಲೆಸಿರುವ ಶ್ರೀಹರಿಯನ್ನು ನಮಸ್ಕರಿಸಿದವ ರಾಜಸೂಯ ಮತ್ತು ಅಶ್ವಮೇಧಯಾಗಗಳಿಂದ ಬರುವ ಫಲಕ್ಕಿಂತ ಮಿಗಿಲಾದ ಫಲವನ್ನು ಅನಾಯಸವಾಗಿ ಪಡೆದು ಸ್ವಕುಲವನ್ನು ಉದ್ಧಾರಗೈದು ಅಂತ್ಯದಲ್ಲಿ ವಿಷ್ಣುಪದವಿ ಪಡೆಯುವನು. ಪುರುಷೋತ್ತಮಕ್ಷೇತ್ರದಲ್ಲಿ ಶ್ರೀಕೃಷ್ಣನ ಎದುರಿಗೆ ಪ್ರತಿಷ್ಠಾಪಿತನಾದ ಗರುಡನನ್ನು ನಮಸ್ಕರಿಸಿದ ಮಾನವನು ಶ್ರೀಕೃಷ್ಣನ ಅನುಗ್ರಹದಿಂದ ಸಕಲ ಪಾಪಮುಕ್ತನಾಗಿ ಅಂತ್ಯದಲ್ಲಿ ಉತ್ತಮ ಗತಿಯನ್ನು ಪಡೆಯುವನು. ಪುರುಷೋತ್ತಮ ಕ್ಷೇತ್ರದಲ್ಲಿ ಇರುವ ಬಲದೇವ, ಪುರುಷೋತ್ತಮ, ಸುಭದ್ರೆ, ಗರುಡ, ವಟವೃಕ್ಷ ಇವರೆಲ್ಲರ ದರ್ಶನ ಮಾಡಿದವ ನಿಸ್ಸಂಶಯವಾಗಿ ಉತ್ತಮಗತಿ ಹೊಂದುವನು. ಇವರನ್ನು ಸಂದರ್ಶಿಸುವ ಕ್ರಮ ಹೀಗಿದೆ:-

ಮೊದಲು ಶ್ರೀಹರಿಯ ದೇವಾಲಯ ಪ್ರವೇಶಿಸಿ, ಶ್ರೀಹರಿಗೆ ಮೂರು ಪ್ರದಕ್ಷಿಣೆ ಹಾಕಿ ನಮಸ್ಕರಿಸಬೇಕು. ನಂತರ ಸಂಕರ್ಷಣ ಮಂತ್ರದಿಂದ ಬಲರಾಮನನ್ನು ಸ್ತುತಿಸುತ್ತ ಬಲದೇವನಿಗೆ ಪ್ರದಕ್ಷಿಣೆ, ನಮಸ್ಕಾರ ಅರ್ಪಿಸಬೇಕು. ಬಲರಾಮನನ್ನು ಈ ಕೆಳಗಿನ ಮಂತ್ರದಿಂದ ಸ್ತೋತ್ರ ಮಾಡಬೇಕು.

ನಮಸ್ತೇ ಹಲಧೃಗ್ರಾಮ, ನಮಸ್ತೇ ಮುಸಲಾಯುಧ ।
ನಮಸ್ತೇ ರೇವತೀಕಾಂತ ನಮಸ್ತೇ ಭಕ್ತವತ್ಸಲ ॥

ನಮಸ್ತೆ ಬಲಿನಾಂಶ್ರೇಷ್ಠ ನಮಸ್ತೇ ಧರಣೀಧರ ।
ಪ್ರಲಂಬಾರೆ ನಮಸ್ತೇಽಸ್ತು ತ್ರಾಹಿಮಾಂ ಕೃಷ್ಣಪೂರ್ವಜ ॥

ಮುಸಲ (ಒನಕೆ) ಎಂಬ ಆಯುಧವನ್ನು ಧರಿಸಿರುವ ಬಲರಾಮನೇ, ನಿನಗೆ ನನ್ನ ನಮಸ್ಕಾರಗಳು, ರೇವತೀಪತಿಯೂ, ಭಕ್ತವತ್ಸಲನೂ ಆದ, ಬಲಭದ್ರನಿಗೆ ನಮಸ್ಕಾರ. ಆದಿಶೇಷನ ಅವತಾರಭೂತನಾದ, ಮಹಾಬಲಿಷ್ಠನಾದ, ಪ್ರಲಂಬಾಸುರನನ್ನು ಸಂಹರಿಸಿದ ಕೃಷ್ಣನಿಗೆ ಅಣ್ಣನಾದ, ಹೇ ಬಲದೇವನೇ ನಿನಗೆ ವಂದನೆಗಳು.

ಹೀಗೆ ಬಲದೇವನನ್ನು ಭಕ್ತಿಯಿಂದ ಸ್ತೋತ್ರ ಮಾಡುವವನು ಅಪೇಕ್ಷಿತ ಫಲಗಳನ್ನು ಪಡೆಯುತ್ತಾನೆ. ಹೀಗೆ ಬಲರಾಮನನ್ನು ಭಜಿಸಿದ ನಂತರ ಮತ್ತೆ ಶ್ರೀಕೃಷ್ಣನನ್ನು ದ್ವಾದಶಾಕ್ಷರ ಮಂತ್ರದಿಂದ ಭಕ್ತಿಪುರಸ್ಸರವಾಗಿ ಪೂಜಿಸಬೇಕು. ದ್ವಾದಶಾಕ್ಷರ ಮಂತ್ರ ಜಪಿಸುವವರು ಹೊಂದಬಹುದಾದ ಉನ್ನತ ಸ್ಥಾನಗಳನ್ನು ದೇವತೆಗಳೂ ಹೊಂದಲಾರರು. ದ್ವಾದಶಾಕ್ಷರಮಂತ್ರವು ಅಷ್ಟು ಶ್ರೇಷ್ಠವಾದುದು. ಆದುದರಿಂದ ಭಕ್ತಿಯಿಂದ ಗಂಧ, ಪುಷ್ಪ, ಮುಂತಾದವುಗಳನ್ನು ಸಮರ್ಪಿಸಿ, ಭಗವಂತನನ್ನು ಅಲಂಕರಿಸಿ, ದ್ವಾದಶಾಕ್ಷರ ಮಂತ್ರ ಜಪಿಸಿ, ಹೀಗೆ ಸ್ತುತಿಸಬೇಕು.

ಜಯಕೃಷ್ಣ, ಜಗನ್ನಾಥ, ಜಯ ಸರ್ವಾಘನಾಶನ ।
ಜಯ ಚಾಣೂರಕೇಶಿಘ್ನ ಜಯ ಕಂಸನಿಷೂಧನ ॥

ಜಯ ಪದ್ಮಪಾಲಾಶಾಕ್ಷ ಜಯ ಚಕ್ರಗದಾಧರ ।
ಜಯ ನೀಲಾಂಬುದಶ್ಯಾಮ ಜಯ ಸರ್ವಸುಖಪ್ರದ ॥

ಜಯ ದೇವ ಜಗತ್ಪೂಜ್ಯ ಜಯ ಸಂಸಾರನಾಶನ ।
ಜಯ ಲೋಕಪತೇ ನಾಥ ಜಯ ವಾಂಛಾಫಲಪ್ರದ ॥

ಸಂಸಾರಸಾಗರೇ ಘೋರೆ ನಿಸ್ಸಾರೇ ದುಃಖಫೇನಿಲೇ ।
ಕ್ರೋಧಗ್ರಾಕುಲೇ ಕಾದ್ರೆ ವಿಷಯೋದಕಸಂಪ್ಲವೆ ॥

ನಾನಾರೋಗೋರ್ಮಿಕಲಿಲೇ ಮೋಹವರ್ತಸುದುಸ್ತರೆ ।
ನಿಮಗ್ನೋಽಹಂ ಸುರಶ್ರೇಷ್ಠ ತ್ರಾಹಿ ಮಾಂ ಪುರುಷೋತ್ತಮ ॥

ಶ್ರೀಕೃಷ್ಣನೇ ನಿನಗೆ ಜಯವಾಗಲಿ, ಜಗದೊಡೆಯ ನಿನಗೆ ಜಯವಾಗಲಿ. ಸಕಲರ ಪಾಪಗಳನ್ನು ನಾಶಮಾಡುವ ಹೇ ಕಂಸಾರಿ, ನಿನಗೆ ಜಯವಾಗಲಿ. ತಾವರೆಯಂತೆ ಕಣ್ಣುಳ್ಳ, ಚಕ್ರ, ಗದಾಧಾರಿಯಾದ, ಚಾಣೂರ ಕೇಶಿಯರೆಂಬ ದೈತ್ಯರನ್ನು ಸಂಹರಿಸಿದ, ಸಕಲರಿಗೆ

ಸುಖವನ್ನು ಕೊಡುವ ದೇವನೆ, ನೀನು ಜಯಶೀಲನಾಗು. ಜಗದ್ವಂದ್ಯನಾದ, ಸಂಸಾರದ ದುಃಖಗಳನ್ನು ಕಳೆಯುವ, ಭಕ್ತರಿಗೆ ಇಷ್ಟಾರ್ಥ ಕರುಣಿಸುವ ಜಗತ್ತಿನ ಒಡೆಯನೇ, ನಿನಗೆ ಜಯವಾಗಲಿ, ಜಯವಾಗಲಿ. ಈ ಸಂಸಾರ ಒಂದು ಭಯಾನಕ ಸಾಗರ. ನೊರೆಯುಕ್ಕುವಂತೆ ಈ ಸಾಗರದಲ್ಲಿ ದುಃಖಗಳ ಮೊರೆತ. ತಿಮಿಂಗಿಲು, ಮೊಸಳೆ ಇವುಗಳಂತೆ ಸಂಸಾರದಲ್ಲಿನ ಕಾಮ, ಕ್ರೋಧಗಳು, ವಿಷಯವಾಸನೆಯೇ ಈ ಸಾಗರದಲ್ಲಿನ ನೀರು. ಬಗೆಬಗೆಯ ರೋಗ ಗಳೆಂಬ ಅಲೆಗಳು ಮೇಲಿಂದ ಮೇಲೆ ತಲೆದೋರುತ್ತಿರುವವು. ಈ ಸಾಗರದಲ್ಲಿ ಮೋಹವೆಂಬ ಸುಳಿಗೆ ಸಿಲುಕಿದವರು ಪಾರಾಗಿ ಬರುವಂತೆಯೇ ಇಲ್ಲ. ಇಂತಹ ಘೋರ ಸಂಸಾರ ಸಾಗರದಲ್ಲಿ ಮುಳುಮುಳುಗಿ ಏಳುತ್ತಿರುವ ನನ್ನನ್ನು ಹೇ ಪುರುಷೋತ್ತಮ, ನೀನು ಉದ್ಧರಿಸು.

ಹೀಗೆ ದೇವತೆಗಳಿಗೂ ಪ್ರಭುವಾದ ಆ ಪುರುಷೋತ್ತಮನನ್ನು ಪ್ರಾರ್ಥಿಸತಕ್ಕದ್ದು. ಭಗವಂತನು ಭಕ್ತವತ್ಸಲನು, ಪಾಪನಾಶಕನು, ಜ್ಞಾನಜ್ಯೋತಿ ಸ್ವರೂಪಿ. ಸಕಲ ಮನೋರಥ ಪೂರೈಸುವ ಕಾಮಧೇನು. ಇಂತಹ ಆ ಮಹಾಮಹಿಮನಿಗೆ ಸರಿಸಾಟಿ ಎನಿಸುವ ಪುರುಷ ಇನ್ನೊಬ್ಬನಿಲ್ಲ. ಆದುದರಿಂದಲೇ ಅವನು ಪುರುಷೋತ್ತಮ. ಈ ಪುರುಷೋತ್ತಮನ ಆಕೃತಿ ಹೀಗಿದೆ. ಎರಡು ಭುಜಗಳು, ಎರಡು ಕೈಗಳು. ಕಮಲದ ದಳದಂತೆ ವಿಶಾಲವಾದ ಕಣ್ಣುಗಳು, ಹರವಾದ ಎದೆ, ಸುಪುಷ್ಟ ಹಾಗೂ ನೀಳವಾದ ತೋಳುಗಳು, ದಿವ್ಯ ಪೀತಾಂಬರದಿಂದ ಒಪ್ಪುವ ಸೊಂಟ, ಮೊಳಕಾಲು, ಪಾದ ಮುಂತಾದ ಭಾಗಗಳು, ಶಂಖ, ಚಕ್ರ ಲಾಂಛನಗಳಿಂದ ಸುಶೋಭಿತವಾದ ಹಸ್ತಗಳು, ಕಿರೀಟದಿಂದ ಪರಿಶೋಭಿಸುವ ಶಿರಸ್ಸು, ತುಳಸೀ ಮಾಲೆಯಿಂದ ವಿಭೂಷಿತವಾಗಿರುವ ಕೊರಳು- ಹೀಗೆ ಸರ್ವಲಕ್ಷಣ ಸಂಪನ್ನವಾಗಿರುವ ಲಕ್ಷಣಶಾಸ್ತ್ರದಲ್ಲಿ ಉಕ್ತವಾಗಿರುವ ಲಕ್ಷಣಗಳಿಗೆ ಲಕ್ಷ್ಯವೆನಿಸಬಲ್ಲ ಪರಮಸುಂದರ ಆಕೃತಿ ಆ ಪರಮಾತ್ಮನದು. ಇಂತಹ ಭಗವಂತನನ್ನು ಕಣ್ತುಂಬ ತುಂಬಿಕೊಂಡು ಭಕ್ತಿಭರದಿಂದ ಬಾಗಿ ಹೃದಯದುಂಬಿ ಹಾಡಿ, ಅವನ ಅನುಗ್ರಹಕ್ಕೆ ಪಾತ್ರನಾಗುವ ಮಾನವ ಸಾವಿರ ಅಶ್ವಮೇಧಯಾಗಗಳ ಫಲವನ್ನು ಪಡೆಯುವನು. ಶ್ರೀಕೃಷ್ಣನ ಸಂದರ್ಶನದಿಂದ ಸಮಸ್ತ ತೀರ್ಥಗಳಲ್ಲಿ ಸ್ನಾನ ಮಾಡಿದರೆ ಬರುವ ಫಲಕ್ಕಿಂತ ಮಿಗಿಲಾದ ಫಲವು ಬರುವದು. ಷಡಂಗ ಸಹಿತವಾದ ವೇದಾಧ್ಯಯನದಿಂದ ಪ್ರಾಪ್ತವಾಗುವ ಫಲಕ್ಕಿಂತ ಅಧಿಕಫಲವು, ಭಕ್ತಿಯುಕ್ತವಾದ ಶ್ರೀಕೃಷ್ಣನ ದರ್ಶನ ಮಾತ್ರದಿಂದ ಪ್ರಾಪ್ತವಾಗುವದು. ಪರಿಶುದ್ಧ ಮನಸ್ಸಿನಿಂದ ಶ್ರೀಹರಿಯನ್ನು ನೋಡಿದರೆ ರತ್ನ, ಸುವರ್ಣ, ಮುಂತಾದವುಗಳನ್ನು ದಾನಮಾಡಿ ವಿಜೃಂಭಣೆಯಿಂದ ಮಾಡಿದ ಯಾಗದಿಂದ ಬರುವಷ್ಟು ಫಲ ಬರುವದು. ಶ್ರೀಕೃಷ್ಣ ದರ್ಶನ ದಿಂದ ಮಹಾಯಾಗಗಳು, ವ್ರತಗಳು, ನಿಯಮಗಳು ಇವುಗಳನ್ನು ಆಚರಿಸುವದರಿಂದ ಬರುವಷ್ಟೇ ಫಲ ಬರುವದು. ಗೃಹಸ್ಥನು ಜನ್ಮವಿಡೀ ಸ್ವಾಶ್ರಮೋಚಿತವಾದ ಆಚಾರ, ಅನುಷ್ಠಾನಗಳನ್ನು ತಪ್ಪದೇ ಮಾಡಿದರೆ ಬರುವ ಫಲದಷ್ಟು ಫಲವು ಕೇವಲ ಶ್ರೀಕೃಷ್ಣ ದರ್ಶನದಿಂದ ಬರುವದು. ಶ್ರೀಕೃಷ್ಣನ ದರ್ಶನದಿಂದ ಅರಣ್ಯವಾಸಿಯಾಗಿದ್ದ ವಾನಪ್ರಸ್ಥಾಶ್ರಮಿಯು ವಿಧಿವತ್ತಾಗಿ ಕರ್ಮಾನುಷ್ಠಾನಮಾಡಿ ಪಡೆಯುವಂತಹ ಪುಣ್ಯ ಅನಾಯಾಸವಾಗಿ ಲಭಿಸುವದು. ಹೆಚ್ಚೇನು ಹೇಳಲಿ, ಹೇ ಮುನಿಗಳೆ, ಕೃಷ್ಣನ ದರ್ಶನದಿಂದ ಲಭಿಸದ ಪುರುಷಾರ್ಥಗಳೇ ಇಲ್ಲ. ಕೃಷ್ಣನ ದರ್ಶನ ಮುಗಿದಾದ ನಂತರ ಅಲ್ಲಿಯೇ ಇರುವ ಭಕ್ತವತ್ಸಲೆಯಾದ ಸುಭದ್ರಾದೇವಿಯನ್ನು ಅರ್ಚಿಸಿ, ನಮಸ್ಕರಿಸಿ, ಕೈಗಳನ್ನು ಅಂಜಲಿ ಆಕಾರದಲ್ಲಿ ಹಿಡಿದು, ಹೀಗೆ ಸ್ತುತಿಸಬೇಕು.

ನಮಸ್ತೇ ಸರ್ವಗೇ ದೇವಿ ನಮಸ್ತೇ ಶುಭಸೌಖ್ಯದೇ ।
ತ್ರಾಹಿ ಮಾಂ ಪದ್ಮಪತ್ರಾಕ್ಷಿ ಕಾತ್ಯಾಯನೀ ನಮೋಸ್ತುತೇ ॥

ಮಂಗಳಸ್ವರೂಪಿಯಾದ ಹೇ ದೇವಿಯೇ, ನಿನಗೆ ನನ್ನ ನಮಸ್ಕಾರ, ನೀನು ಸೌಖ್ಯವನ್ನುಂಟುಮಾಡುವವಳು. ಅಣುರೇಣು ತೃಣಕಾಷ್ಠಗಳಲ್ಲಿಯೂ ವ್ಯಾಪಿಸಿರುವವಳು ಕಮಲದಂತೆ ಸುಂದರವಾದ ಕಣ್ಣುಗಳುಳ್ಳ ಕಾತ್ಯಾಯನೀ ದೇವಿಯೇ, ನಿನಗೆ ವಂದನೆಗಳು.

ಹೀಗೆ ಜಗನ್ಮಾತೆಯು, ಬಲರಾಮ ಸಹೋದರಿಯೂ ಆದ ಸುಭದ್ರೆಯನ್ನು ಸ್ತುತಿಸಬೇಕು. ಸುಭದ್ರೆಯನ್ನು ಹೀಗೆ ಅರ್ಚಿಸಿದವನು ಭಗವಂತನ ಅನುಗ್ರಹದಿಂದ ಉತ್ತಮಲೋಕ ಪಡೆದು ಒಂದುವರ್ಷ ಸುಖವನ್ನು ಅನುಭವಿಸಿ ಪುಣ್ಯ ನಷ್ಟವಾದ ಬಳಿಕ ಭೂಲೋಕಕ್ಕೆ ಬರುವನು. ಇಲ್ಲಿ ವೇದವಿದ್ವಾಂಸನಾಗಿ ಉತ್ತಮ ಜೀವನ ನಡೆಸಿ, ಮೋಕ್ಷಕ್ಕೆ ಬೇಕಾದ ಯೋಗ್ಯತೆ ಸಂಪಾದಿಸಿಕೊಂಡು ಕೊನೆಯಲ್ಲಿ ಮೋಕ್ಷ ಪಡೆಯುವನು.

## ನರಸಿಂಹ ಮಹಾತ್ಮ್ಯ ವರ್ಣನ

**ಬ್ರಹ್ಮ:-** ಪೂರ್ವೋಕ್ತ ಪ್ರಕಾರದಿಂದ ಶ್ರೀಕೃಷ್ಣ, ಬಲರಾಮ ಹಾಗೂ ಸುಭದ್ರೆಯರ ದರ್ಶನ ಮಾಡಿ ಶ್ರದ್ಧಾ ಭಕ್ತಿಪುರಸ್ಸರವಾಗಿ, ಅರ್ಚನೆಗೈದರೆ ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ಪುರುಷಾರ್ಥಗಳನ್ನು ಸಾಧಕನು ಸಂಪಾದಿಸುತ್ತಾನೆ ಎಂಬಲ್ಲಿ ಸಂದೇಹವಿಲ್ಲ. ದೇವಾಲಯದಿಂದ ಈಚೆಗೆ ಬಂದು, ಅಲ್ಲಿರುವ ಮರಳಿನರಾಶಿಯನ್ನು ಹತ್ತಿ ಅಂತರ್ಧಾನನಾದ ವಿಷ್ಣುವನ್ನು ಭಕ್ತಿಯಿಂದ ನಮಸ್ಕರಿಸಬೇಕು. ಇದರಿಂದ ವಿಷ್ಣುಲೋಕ ಪ್ರಾಪ್ತವಾಗುವದು.

ಶ್ರೀ ನರಸಿಂಹಸ್ವಾಮಿಯು ಅಲ್ಲಿ ನೆಲೆಸಿರುವನು. ಈ ನರಸಿಂಹಸ್ವಾಮಿಯು ಹಿರಣ್ಯಾಕ್ಷನನ್ನು ಸಂಹರಿಸಿದ್ದಾನೆ. ಸರ್ವದೇವಸ್ವರೂಪಿ ಎನಿಸಿದ್ದಾನೆ. ಇಂತಹ ನರಸಿಂಹ ಸ್ವಾಮಿಯ ದರ್ಶನಮಾಡಬೇಕು. ಅದರಿಂದ ಭಜಕರ ಪಾಪಗಳು ಶ್ರೀ ನರಸಿಂಹನ ಅನುಗ್ರಹದಿಂದ ಇಲ್ಲವಾಗುವವು. ಭಕ್ತಿ, ಶ್ರದ್ಧೆಗಳಿಂದ ನರಸಿಂಹಸ್ವಾಮಿಯನ್ನು ಯಾವನು ಸೇವಿಸುತ್ತಾನೋ ಅವನಿಗೂ ಪುರುಷಾರ್ಥಗಳ ಸಿದ್ಧಿ ಉಂಟಾಗುವದು.

**ಮುನಿ:-** ದೇವಾ, ನರಸಿಂಹಸ್ವಾಮಿಯ ದುರ್ಲಭವಾದ ಮಹಾತ್ಮ್ಯವನ್ನು ನೀನು ನಮಗೆ ತಿಳಿಯಪಡಿಸಿದೆ. ಪರಮಫಲಪ್ರದವಾದ ನರಸಿಂಹ ಮಹಾತ್ಮ್ಯವನ್ನು ಇನ್ನೂ ವಿಸ್ತಾರವಾಗಿ ತಿಳಿಯಬೇಕೆಂಬ ಅಭಿಲಾಷೆ ನನಗಿದೆ. ದಯವಿಟ್ಟು ಇನ್ನೂ ವಿಸ್ತೃತವಾಗಿ ನರಸಿಂಹನ ಮಹಿಮೆಯನ್ನು ನಿರೂಪಿಸು. ನರಸಿಂಹಸ್ವಾಮಿಯ ಅನುಗ್ರಹದಿಂದ ಯಾವ ಯಾವ ಸಿದ್ಧಿಗಳು ಸಿದ್ಧಿಸುವವು?

**ಬ್ರಹ್ಮ:-** ನರಸಿಂಹಸ್ವಾಮಿಯು ಅಜೇಯನು. ಪ್ರಾಕೃತಿಕ ಚಕ್ಷುರಿಂದ್ರಿಯಕ್ಕೆ ಅಗೋಚರನು. ಅವನ ಗುಣಗಳನ್ನೆಲ್ಲ ವರ್ಣಿಸಲು ನನಗೂ ಸಾಧ್ಯವಾಗದು. ಸಂಕ್ಷಿಪ್ತವಾಗಿ ನಾನು ತಿಳಿದಷ್ಟು ಹೇಳುವೆ. ನರಸಿಂಹಸ್ವಾಮಿಯ ಮಹಿಮೆಯನ್ನು ಅರಿತುಕೊಳ್ಳುವದರಿಂದ ಭೂಲೋಕದ ಹಾಗೂ ದೇವಲೋಕದ ಯಾವುದೇ ಪದಾರ್ಥಗಳು ಅನಾಯಾಸವಾಗಿ ಸಿದ್ಧಿಸುತ್ತವೆ. ನರಸಿಂಹನ ಅನುಗ್ರಹದಿಂದ ಸ್ವರ್ಗ, ಮರ್ತ್ಯಲೋಕ, ಪಾತಾಳ, ಸಮುದ್ರ, ದುರ್ಗಮವಾದ ಪಟ್ಟಣಗಳು, ದುರ್ಭೇದ್ಯವಾದ ಗಿರಿಗರ್ಭಗಳು, ದುರೂಹ್ಯವಾದ ದಿಕ್ಕು, ವಿದಿಕ್ಕುಗಳು ಇಲ್ಲೆಲ್ಲ ಸುಲಭ ಸಂಚಾರ ಸಾಧ್ಯ.

ನರಸಿಂಹನನ್ನು ನಂಬಿದವನಿಗೆ ಯಾವುದೇ ಬಗೆಯ ಭೀತಿ, ಯಾವಕಾಲದಲ್ಲೂ ಇಲ್ಲ. ನರಸಿಂಹ ಉಗ್ರಸ್ವರೂಪಿಯಾದರೂ ಭಕ್ತವತ್ಸಲ. ಭಜಕರ ಮೇಲೆ ಕರುಣೆದೋರಿ ಪ್ರಸನ್ನ ಮುಖಮುದ್ರೆಯಿಂದ ಅನುಗ್ರಹಿಸುವ.

ಮುನಿಗಳೇ, ರಹಸ್ಯಪೂರ್ಣವಾದ ನರಸಿಂಹತತ್ವವನ್ನು ನಿಮಗಾಗಿ ನಿರೂಪಿಸುವೆ. ಕೇಳಿರಿ. ನರಸಿಂಹೋಪಾಸಕನು ತರಕಾರಿ, ಗಡ್ಡೆ, ಗೆಣಸು, ಹಣ್ಣು, ಹಿಟ್ಟು, ನೀರು ಇವುಗಳನ್ನು ಮಾತ್ರ ಆಹಾರವಾಗಿ ಸ್ವೀಕರಿಸಬಹುದು. ಕೌಪೀನ ಧರಿಸಿ, ಜಿತೇಂದ್ರಿಯನಾಗಿ, ನರಸಿಂಹನನ್ನು ಧ್ಯಾನಿಸಬೇಕು. ಕಾಡು, ಬೆಟ್ಟ, ನದೀಸಂಗಮ, ನಿರ್ಜನ ನದೀತೀರ, ಸಿದ್ಧರು ವಾಸಿಸುವ ಕ್ಷೇತ್ರ, ಆಶ್ರಮ ಮುಂತಾದ ಕಡೆಗಳಲ್ಲಿ ನರಸಿಂಹಮೂರ್ತಿಯನ್ನು ಅರ್ಚಿಸಬೇಕು. ನರಸಿಂಹಮೂರ್ತಿ ಇಲ್ಲದಿದ್ದರೆ ತಾನೇ ಮೂರ್ತಿಯೊಂದನ್ನು ಪ್ರತಿಷ್ಠಾಪಿಸಿ, ಅರ್ಚನೆ ಮಾಡಬಹುದು. ಶುಕ್ಲಪಕ್ಷದ ದ್ವಾದಶಿ ದಿನದಂದು ಉಪವಾಸವಿದ್ದು ಜಿತೇಂದ್ರಿಯನಾಗಿ ಏಕಚಿತ್ತದಿಂದ ನರಸಿಂಹಜಪವನ್ನು ಒಂದು ಲಕ್ಷ ಸಂಖ್ಯೆಯವರೆಗೆ ಜಪಿಸಬೇಕು. ಇಂತಹ ಜಪ ಮಾಡಿದವನು, ಜೀವನದಲ್ಲಿ ಘೋರ ಪಾಪಗಳನ್ನು ಮಾಡಿದ್ದರೂ ಅಂತಹ ಪಾಪಗಳಿಂದ ಮುಕ್ತನಾಗುವನು. ನರಸಿಂಹಸ್ವಾಮಿ ಯನ್ನು ಗಂಧ, ಧೂಪ, ಜಾಜಿ ಹೂವು ಮುಂತಾದವು ಗಳಿಂದ ಅರ್ಚಿಸಬಹುದು. ನರಸಿಂಹಸ್ವಾಮಿಯು ಅಪರಿಮಿತ ತೇಜಸ್ಸುಳ್ಳವನು. ಅವನ ತೇಜಸ್ಸನ್ನು ಬ್ರಹ್ಮ, ರುದ್ರ ಮೊದಲಾದ ದೇವತೆಗಳೇ ಸಹಿಸಲಾರರು. ದಾನವ ಮಾನವ, ಮೊದಲಾದವರು ಸಹಿಸಲಾರರು ಅಸುರರ ಉಪಟಳದಿಂದ ಬಾಧಿತರಾದವರು ನರಸಿಂಹಮಂತ್ರವನ್ನು ಜಪಿಸಿದರೆ ಮಂತ್ರದ ಪ್ರಭಾವದಿಂದ ದಾನವರು ನಾಮಾವಶೇಷರಾಗುತ್ತಾರೆ. ನರಸಿಂಹ ಕವಚವನ್ನು ಒಂದುಬಾರಿ ಧರಿಸುವದರಿಂದ ಸಮಸ್ತ ಉಪದ್ರವ ನಾಶ, ದ್ವಿವಾರ ಜಪಿಸಿದರೆ ದಾನವರಿಗೂ ವಿಘ್ನಗಳನ್ನು ಒಡ್ಡಲಾಗದು. ತ್ರಿವಾರ ಜಪಿಸುವವನನ್ನು ದೇವತೆಯೂ ಅಲುಗಿಸಲಾರ. ನರಸಿಂಹನಾಮೋಚ್ಚಾರ ಮಾಡಿದ ಸಾಧಕನನ್ನು ನರಸಿಂಹದೇವನು ಹನ್ನೆರಡು ಯೋಜನಗಳವರೆಗೆ ರಕ್ಷಿಸುವನು. ಶ್ರದ್ಧಾಭಕ್ತಿ ಸಮನ್ವಿತನಾಗಿ ಬಹುಕಾಲ ನರಸಿಂಹ ದೇವರ ಆರಾಧನೆ ಮಾಡಿದ ಸಾಧಕನಿಗೆ ಬಿಲವೊಂದು ಗೋಚರವಾಗುವದು. ಬಿಲದ ಬಾಗಿಲಿಗೆ ಹೋಗಿ ಮೂರು ರಾತ್ರಿ ಉಪವಾಸದಿಂದ ಅಲ್ಲಿ ಕುಳಿತು ನರಸಿಂಹನನ್ನು ಧ್ಯಾನಿಸುತ್ತ ಅಲ್ಲಿಯೇ ವಾಸಿಸಬೇಕು. ಮುತ್ತುಗಮರದ ಚಕ್ಕೆಗಳಿಂದ ಅಗ್ನಿಯನ್ನು ಪ್ರತಿಷ್ಠಾಪಿಸಿ, ತುಪ್ಪ, ಜೇನುತುಪ್ಪ, ಹಾಲುಗಳೊಡನೆ ಮುತ್ತುಗದ ಸಮಿತ್ತನ್ನು ಅಗ್ನಿಯಲ್ಲಿ ವಷಟ್ಕಾರಪೂರ್ವಕವಾಗಿ ಇನ್ನೂರು ಸಂಖ್ಯಾಕವಾಗಿ ಹೋಮಿಸಬೇಕು. ಅನಂತರ ಗುಹದ್ವಾರ ಕಾಣಿಸುವದು. **'ನರಸಿಂಹಕವಚ'** ಜಪಿಸುತ್ತ ಧೈರ್ಯದಿಂದ ಗುಹೆಯನ್ನು ಪ್ರವೇಶಿಸಬೇಕು. ಕವಚದ ಪ್ರಭಾವದಿಂದ ಯಾವ ಬಾಧೆಯೂ ಉಂಟಾಗುವದಿಲ್ಲ. ಅಲ್ಲಿರುವ ಕತ್ತಲೆ ತೊಲಗಿ ಬೆಳಕು ಕಾಣುವದು. ಮುಂದೆ ವಿಸ್ತೀರ್ಣವಾದ ರಾಜಮಾರ್ಗ ಗೋಚರಿಸುವದು. ದಾರಿಯಲ್ಲೆಲ್ಲ ದುಂಬಿಗಳು, ಮಧುರವಾಗಿ ಧ್ವನಿಗೈಯುತ್ತಿರುತ್ತವೆ. ಆ ಮಾರ್ಗದಲ್ಲಿ ನರಸಿಂಹನನ್ನು ಸ್ಮರಿಸುತ್ತ ಮುಂದೆಸಾಗಿದರೆ ಪಾತಾಳಲೋಕ ಗೋಚರವಾಗುವದು. ಪಾತಾಳಲೋಕದಲ್ಲಿ ಪ್ರವೇಶಿಸಿದೊಡನೆ ವೀಣೆಯನ್ನು ನುಡಿಸುತ್ತ ಸಹಸ್ರಾರು ಸುಂದರಸ್ತ್ರೀಯರು ಎದುರುಗೊಳ್ಳುವರು. ನರಸಿಂಹನನ್ನು ಸಂತತ ಸ್ಮರಿಸುತ್ತಿರುವ ಈ ಸಾಧಕನ ಕೈ ಹಿಡಿದು ಸುಂದರಿಯರು ಸ್ವಾಗತ ಕೋರುವರು. ಸಾಧಕನಿಗೆ ದಿವ್ಯ ರಸಾಯನಪಾನ ಮಾಡಿಸುವರು. ಇದರಿಂದ ನರಸಿಂಹೋಪಾಸಕನಿಗೆ ಬಲಿಷ್ಠವಾದ

ಭೋಗಯೋಗ್ಯ ಭೋಗಾಯತನವು ಪ್ರಾಪ್ತವಾಗುವದು. ಅಂತಹ ದಿವ್ಯ ಶರೀರಧಾರಿಯಾಗಿ ಸುಂದರಿಯರಾದ ಕನ್ಯೆಯರೊಡನೆ ಪಾತಾಳಲೋಕದಲ್ಲಿ ಒಂದು ಕಲ್ಪದ ವರೆಗೆ ವಿಹರಿಸುವನು. ಅಂತ್ಯದಲ್ಲಿ ಭೋಗಶರೀರವನ್ನು ತ್ಯಾಗಮಾಡಿ ಮುಕ್ತಿಯನ್ನು ಹೊಂದುವನು. ಪಾತಾಳಲೋಕದಲ್ಲಿ ವಾಸಿಸುವ ಸಂದರ್ಭಲ್ಲಿ ನೃಸಿಂಹೋಪಾಸಕನಿಗೆ ಸಂಜೀವಿನಿ ವಿದ್ಯೆ, ಸಿದ್ಧವಿದ್ಯೆ, ಶಾಸ್ತ್ರಗಳು, ಅಲ್ಲಿ ಸ್ತ್ರೀಯರು ಕೊಡುವ ರಸಾಯನಗಳು, ಯೋಗಪಟ್ಟ, ಖಡ್ಗ, ತ್ರಿಶೂಲ, ಗೋರೋಚನ, ಬಗೆಬಗೆಯ ಮಣಿಗಳು, ಸಿದ್ಧಾಂಜನ ಇವೆಲ್ಲ ವಶವಾಗುವವು. ಆ ತ್ರಿಶೂಲವನ್ನು ಹೃದಯದ ಮೇಲೆ ಒಂದು ಬಾರಿ ಏರಿಸಿಕೊಂಡರೆ ಕೋಟಿ ಜನ್ಮಗಳ ಪಾಪ ನಷ್ಟವಾಗುವದು. ವಿಷದ ಮೇಲೆ ತ್ರಿಶೂಲವನೇರಿಸಿದರೆ ವಿಷವು ಭಸ್ಮವಾಗುವದು. ಮಹಾಭೂತಗಳಿಂದ ಆವಾಹಿತರಾದವರು ಭೂತಬಾಧೆಯಿಂದ ಮುಕ್ತರಾಗಲು ಈ ತ್ರಿಶೂಲವನ್ನು ಮನದಲ್ಲಿ ಧ್ಯಾನಿಸಬೇಕು. ಮಂತ್ರಪೂತವಾದ ತ್ರಿಶೂಲವನ್ನು ಕತ್ತಿನಲ್ಲಿ ಧರಿಸಿದ ಬಾಲಕರಿಗೆ ಗದ್ದಬಾವು ಮುಂತಾದ ರೋಗಬಾಧೆ ಇರುವದಿಲ್ಲ. ಶ್ರೀನರಸಿಂಹಮಂತ್ರದಿಂದ ದುರ್ಲಭವಾದುದು ಈ ಲೋಕದಲ್ಲಿ ಯಾವುದೂ ಇಲ್ಲ.

ಆರು ಅಂಗುಲದ ಪ್ರಮಾಣವುಳ್ಳ ನೃಸಿಂಹಮೂರ್ತಿಯನ್ನು ವಿರಚಿಸಬೇಕು. ಭೂರ್ಜ ಪತ್ರದಲ್ಲಿ ಗೋರೋಚನದಿಂದ ಆ ನೃಸಿಂಹಮೂರ್ತಿಯನ್ನು ಬರೆಯಬೇಕು. ಆ ಭೂರ್ಜ ಪತ್ರವನ್ನು ನೃಸಿಂಹಮೂರ್ತಿಯ ಕಂಠದಲ್ಲಿ ಕಟ್ಟಬೇಕು. ಎಣಿಸದಂತೆ ಶಕ್ತಿಮೀರಿ ನೃಸಿಂಹ ಮಂತ್ರ ಜಪಿಸಬೇಕು. ನೀರಿನಲ್ಲಿ ಏಳುದಿನಗಳ ವರೆಗೆ ಏಕಾಗ್ರತೆಯಿಂದ ನರಸಿಂಹನನ್ನು ಜಪಿಸಬೇಕು. ಹಾಗೆ ಜಪಿಸಿದ ನಂತರ ಒಂದು ಮುಹೂರ್ತದಲ್ಲಿಯೇ ಜಲವೃಷ್ಟಿ ಆಗುವದು. ಈ ಜಲವೃಷ್ಟಿ ನಿಲ್ಲಿಸಲು ಒಣಗಿದ ಮರದ ಮೇಲ್ಭಾಗದಲ್ಲಿ ನರಸಿಂಹಸ್ವಾಮಿಯನ್ನು ಪೂಜಿಸಿ ಎಂಟುನೂರು ಜಪಮಾಡಿದಾಗ ಜಡಿಮಳೆ ನಿಲ್ಲುವದು. ನರಸಿಂಹಸ್ವಾಮಿಯ ಚಿತ್ರವನ್ನು ಬರೆದು ಮಂತ್ರ ಜಪಿಸಿ, ಮಂತ್ರಪೂತ ಭೂರ್ಜಪತ್ರವನ್ನು ದಂಡದ ತುದಿಗೆ ಕಟ್ಟಿ ತಿರುಗಿಸಿದರೆ ಬಿರುಗಾಳಿ ಏಳುವದು. ಏಳುಬಾರಿ ನೀರಿನಲ್ಲಿ ಮಂತ್ರ ಜಪ ಮಾಡಿ ಅನಂತರ ಆ ಭೂರ್ಜಪತ್ರ ಧರಿಸಬೇಕು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸ್ತ್ರೀಯರು, ಅಂತ್ಯಜರು ಎಲ್ಲ ಬಗೆಯ ಜನರು ದೇವೋತ್ತಮನಾದ ನೃಸಿಂಹಸ್ವಾಮಿಯನ್ನು ಪೂಜಿಸಬಹುದು. ದೇವ ದೇವನನ್ನು ಪೂಜಿಸಿದವರು ಅವರವರ ಯೋಗ್ಯತೆಗೆ ಅನುಗುಣವಾಗಿ ಗಂಧರ್ವಭಾವ, ದೇವೇಂದ್ರ ಪದವಿ, ದೇವತಾಪಟ್ಟ ಮುಂತಾದವುಗಳನ್ನು ಪಡೆಯುವರು. ಅಲ್ಲದೆ ಅಪೇಕ್ಷೆ ಇರುವವರು, ನರಸಿಂಹಸ್ವಾಮಿಯ ಅನುಗ್ರಹದಿಂದ ಯಕ್ಷ, ವಿದ್ಯಾಧರ, ಮುಂತಾದ ಸ್ಥಾನಗಳನ್ನು ಪಡೆಯುವದು ಖಂಡಿತ.

ಕಾಂತಾರೇ ಪ್ರಾಣಸಂದೇಹ ವಿಷವಹ್ನಿ ಜಲೇಷು ಚ ।<br>
ರಾಜಾದಿಭ್ಯಃ ಸಮುದ್ರೇಭ್ಯೋ ಗೃಹರೋಗಾದಿಪೀಡಿತೇ<br>
ಸ್ಮೃತ್ವಾ ತಂ ಪುರುಷಸರ್ವೆ ರಾಜಗ್ರಮರ್ತ್ಯೆಮುಚ್ಯತೇ<br>
ಸೂರ್ಯೋದಯೇ ಯಥಾನಾಶಂ ತಮೋಭ್ಯೇಽತಿ ಮಹತ್ತರಂ ॥

ಘೋರಅರಣ್ಯ, ಬದುಕಲು ಸಾಧ್ಯವಾಗದಂತಹ ಸಂದರ್ಭ, ವಿಷ, ಅಗ್ನಿ, ಜಲ, ರಾಜ ಭಯ, ಸಮುದ್ರ ಭಯ (ಸಮುದ್ರದಿಂದ ಪ್ರಾಣಭಯ) ಭೂತಬಾಧೆ, ರೋಗಬಾಧೆ ಎಲ್ಲ ಸಂಕಟ ಸಂದರ್ಭಗಳಲ್ಲಿ ನರಸಿಂಹನನ್ನು ಧ್ಯಾನಮಾಡಿದರೆ ಮಾನವನು ಸಂಕಟದಿಂದ ಮುಕ್ತ

ನಾಗುತ್ತಾನೆ. ಸೂರ್ಯನು ಉದಯಿಸಿದ ಕೂಡಲೇ ಕಗ್ಗತ್ತಲು ಹೇಗೆ ನಷ್ಟವಾಗುವದೋ ಅದರಂತೆ ನರಸಿಂಹ ಸ್ವಾಮಿಯ ದರ್ಶನದಿಂದ ತಕ್ಷಣದಲ್ಲಿ ಕಷ್ಟಗಳು ನಷ್ಟವಾಗುವವು.

ದೇವೋತ್ತಮನಾದ ನರಸಿಂಹನನ್ನು ಸಂದರ್ಶಿಸಿ, ಭಕ್ತಿಯಿಂದ ಪೂಜಿಸಿ ನಮಸ್ಕರಿಸಿದರೆ ಹತ್ತು ಅಶ್ವಮೇಧಯಾಗದ ಫಲವು ಲಭಿಸುವದು. ಅಂತಹ ಭಕ್ತನ ಪಾಪವೆಲ್ಲವೂ ನಷ್ಟವಾಗಿ, ಇಹದಲ್ಲಿ ಸಕಲ ಸೌಭಾಗ್ಯಗಳಿಗೆ ಅವನು ಭಾಗಿ ಆಗುವನು. ಅಂತ್ಯದಲ್ಲಿ ಅವನಿಗಾಗಿ ದೇವಲೋಕದ ಸುಂದರ ವಿಮಾನ ಒಂದು ಕಾದು ನಿಂತಿರುವದು. ಆ ವಿಮಾನ ಬಂಗಾರದಿಂದ ನಿರ್ಮಿತವಾದುದು. ಆ ವಿಮಾನದ ಸುತ್ತಲೂ ಸುಮಧುರ ಧ್ವನಿಗೈಯುವ ಕಿಂಕಿಣಿ ಕಿರುಗಂಟೆಗಳನ್ನು ಕಟ್ಟಿರುತ್ತಾರೆ. ಆ ವಿಮಾನವು ಸುಸಜ್ಜಿತ ವಾದುದು. ಅದರಲ್ಲಿ ಎಲ್ಲ ಭೋಗಯೋಗ್ಯ ಪದಾರ್ಥಗಳು ಇದ್ದೇ ತೀರುತ್ತವೆ. ಆ ವಿಮಾನ ಎಲ್ಲಿ ಬೇಕೋ ಅಲ್ಲಿ ಸಂಚರಿಸಬಲ್ಲದು. ಮಧ್ಯಾಹ್ನದ ಸೂರ್ಯನಂತೆ ಪ್ರಖರ ತೇಜಸ್ಸುಳ್ಳದ್ದು; ಮೇಲ್ಭಾಗ ಕೆಳಭಾಗದಲ್ಲಿ ಮುತ್ತಿನ ಸರಗಳಿಂದ ಸುತ್ತಲ್ಪಟ್ಟು ನೋಡುವವರಿಗೆ ಆನಂದ ನೀಡುವಂತಹುದು. ಈ ವಿಮಾನದಲ್ಲಿ ಗಂಧರ್ವರು ಕುಳಿತುಕೊಂಡು ಆಗಂತುಕನ ಸಂತೋಷಕ್ಕಾಗಿ ಇಂಪಾಗಿ ಗಾನಮಾಡುತ್ತಿರುತ್ತಾರೆ. ದೇವಲೋಕದ ಸುಂದರಿಯರು ಅದರಲ್ಲಿ ಕುಳಿತು ಮುಕ್ತಿಯತ್ತ ಹೊರಟ ಸಾಧಕನ ಸೇವೆಯನ್ನು ಶ್ರದ್ಧೆಯಿಂದ ಮಾಡುತ್ತಾರೆ. ನೃಸಿಂಹಸ್ವಾಮಿಯ ಭಕ್ತನು ನರಸಿಂಹ ದೇವರ ಆರಾಧನೆಯಿಂದ ಇಂತಹ ಅಪೂರ್ವವಾದ ಸುಖವನ್ನು ಕೊಡಬಲ್ಲ. ದೇವಲೋಕದ ವಿಮಾನದಲ್ಲಿ ಕುಳಿತುಕೊಂಡು ದೇವತೆಗಳಂತೆ ಸುಖವನ್ನನುಭವಿಸುತ್ತ ದೇವಲೋಕದೆಡೆ ಪಯಣಿಸುವನು. ವಿಷ್ಣುಲೋಕದೊಳಗೆ ಪ್ರವೇಶಿಸಿದ ಕೂಡಲೆ, ಆ ಸಾಧಕನಿಗೆ ನಾಲ್ಕು ಕೈಗಳು ಪ್ರಾಪ್ತವಾಗುವವು. ದಿವ್ಯಶರೀರ ಅವನದಾಗುವದು. ದಿವ್ಯಶರೀರವನ್ನು ಧರಿಸಿದ ಗಂಧರ್ವರು ಹಾಗೂ ಅಪ್ಸರೆಯರು ಇವರೊಡನೆ ಒಂದುಗೂಡಿ ಇವನೂ ಸಹ ಒಂದು ಕಲ್ಪದವರೆಗೆ ಭೋಗಗಳನ್ನು ಅನುಭವಿಸುವನು. ಪುಣ್ಯನಷ್ಟವಾದ ನಂತರ ಭೂಲೋಕಕ್ಕೆ ಮರಳಿ, ವೇದಜ್ಞನಾದ ಬ್ರಾಹ್ಮಣವಂಶದಲ್ಲಿ ಜನಿಸಿ, ಷಡಂಗ ಸಹಿತವಾದ ಚತುರ್ವೇದಗಳನ್ನು ಅಭ್ಯಸಿಸಿ, ಅಧ್ಯಯನದ ಕೊನೆಯ ಹಂತದಲ್ಲಿ, ಜ್ಞಾನಯೋಗವನ್ನು ಜೀರ್ಣಸಿಕೊಂಡು, ಅಖಂಡ ಧ್ಯಾನಮಗ್ನನಾಗಿ ಶರೀರ ತ್ಯಾಗಮಾಡಿ, ಮುಕ್ತಿ ಹೊಂದುವನು.

## ಶ್ವೇತಮಾಧವ ಮಹಾತ್ಮ್ಯ

**ಬ್ರಹ್ಮ:-** ಮುನಿಗಳೇ, ಅನಂತ ಎಂಬ ಹೆಸರುಳ್ಳ ವಾಸುದೇವನನ್ನು ಸೇವಿಸುವದರಿಂದ ಪಾಪವು ನಷ್ಟವಾಗಿ ಉತ್ತಮಲೋಕ ಪ್ರಾಪ್ತವಾಗುವದು. ಈ ಅನಂತನನ್ನು ನಾನು, ಇಂದ್ರನು, ವಿಭೀಷಣನು ಎಲ್ಲರೂ ಆರಾಧಿಸಿದ್ದೇವೆ. ಈ ಅನಂತನನ್ನು ಆರಾಧಿಸದವರು ಯಾರಿದ್ದಾರೆ?

ಶ್ವೇತ ಗಂಗಾನದಿಯಲ್ಲಿ ಸ್ನಾನಮಾಡಿ, ಶ್ವೇತ ಮಾಧವನ ದರ್ಶನವನ್ನು, ಮತ್ಸ್ಯರೂಪಿ ಯಾದ ಮಾಧವನ ದರ್ಶನ ಮಾಡಿದವ, ಕ್ಷೀರ ಸಮುದ್ರದಲ್ಲಿಯ ಶ್ವೇತದ್ವೀಪವನ್ನು ಹೊಂದುವನು.

**ಮುನಿ:-** ಬ್ರಹ್ಮದೇವ, ಶ್ವೇತಮಾಧವನ ಮಹಾತ್ಮ್ಯವನ್ನು ನಮಗೆ ವಿಸ್ತಾರವಾಗಿ ತಿಳಿಯಪಡಿಸು. ಜಗತ್ಪ್ರಸಿದ್ಧವಾದ ಶ್ವೇತಮಾಧವ ಕ್ಷೇತ್ರದಲ್ಲಿ ಇರುವ, ಶ್ವೇತಮಾಧವ ಮೂರ್ತಿಯನ್ನು ಪ್ರತಿಷ್ಠಾಪಿಸಿದವರ್ಯಾರು?

**ಬ್ರಹ್ಮ:-** ವಿಪ್ರೋತ್ತಮರೇ, ಪೂರ್ವಕಾಲದಲ್ಲಿ ಕೃತಯುಗದಲ್ಲಿ ಶ್ವೇತ ಎಂಬ ಹೆಸರಿನ ಓರ್ವರಾಜ. ಆತ ಬಲು ಬಲಿಷ್ಠ; ಮಹಾ ಬುದ್ಧಿಶಾಲಿ; ಅಷ್ಟೇ ಧರ್ಮಿಷ್ಠ, ಸತ್ಯಸಂಧ, ಜಿತೇಂದ್ರಿಯ. ಶ್ವೇತನ ರಾಜ್ಯದಲ್ಲಿ ಎಲ್ಲರೂ ದೀರ್ಘಾಯುಷ್ಯರು. ಸಾಮಾನ್ಯ ಪ್ರಜೆಯೂ ಹತ್ತುಸಹಸ್ರ ವರ್ಷ ಪರಿಯಂತ ಬದುಕುತ್ತಿದ್ದ. ಎಲ್ಲರೂ ಸುಖಿಗಳಾಗಿದ್ದರು.

ಹಿಂದೊಮ್ಮೆ ಆ ರಾಜ್ಯದಲ್ಲಿ ವಾಸಿಸುತ್ತಿದ್ದ ಕಪಾಲಗೌತಮನೆಂಬ ಮುನಿಯ ಅಲ್ಪ ವಯಸ್ಸಿನ ಮಗ ಮೃತನಾದ. ಅವನ ತಂದೆಯಾದ ಕಪಾಲ ಗೌತಮನು ತನ್ನ ಮೃತ ಮಗನ ಶರೀರ ಹೊತ್ತುಕೊಂಡು ಮಹಾರಾಜನ ಬಳಿಗೆ ಬಂದ. ಪುತ್ರನ ಶವ ಸಹಿತನಾಗಿ ಬಂದ ಮುನಿಯನ್ನು ನೋಡಿದ ಕೂಡಲೇ, ಮಹಾರಾಜನಿಗೆ ಅವನು ಏಕೆ ಬಂದಿದ್ದಾನೆಂದು ತಿಳಿದು ಹೋಯಿತು. ಮುನಿಯ ಎದುರು ಮಹಾತ್ಮನಾದ ಆ ಮಹಾರಾಜ ಹೀಗೆ ಪ್ರತಿಜ್ಞೆ ಮಾಡಿದ-

**ಶ್ವೇತಮಹಾರಾಜ:-**ಕಳೆದುಹೋದ ಆ ಬಾಲಕನ ಜೀವವನ್ನು ಯಮಲೋಕದಿಂದ ಏಳು ದಿನಗಳ ಒಳಗಾಗಿ ಪುನಃ ಇಲ್ಲಿಗೆ ತರಿಸುವೆ. ಈ ಕಾರ್ಯ ನನ್ನಿಂದ ಅಸಾಧ್ಯವಾದರೆ ನಾನು ಅಗ್ನಿಪ್ರವೇಶ ಮಾಡುವೆ.

ಹೀಗೆ ಪ್ರತಿಜ್ಞೆಮಾಡಿ, ಆ ಶ್ವೇತಮಹಾರಾಜನು ಒಂದುಸಾವಿರದನೂರು ಪದ್ಮಗಳಿಂದ ಮಹಾದೇವನನ್ನು ಅರ್ಚಿಸಿದ. 'ಓಂ ನಮಃ ಶಿವಾಯ' ಎಂಬ ಮಂತ್ರದಿಂದ ಎಡಬಿಡದೆ ಧ್ಯಾನಿಸಿದ. ಮಹಾರಾಜನ ಭಕ್ತಿ ಶ್ರದ್ಧೆಗಳಿಂದ ಸುಪ್ರೀತನಾದ ಮಹಾದೇವ ಉಮೆಯೊಡನೆ ಮಹಾರಾಜನಿಗೆ ಪ್ರತ್ಯಕ್ಷದರ್ಶನ ನೀಡಿದ. ಮಹಾರಾಜ ಕಣ್ತೆರೆದು ನೋಡಿದ. ಕಣ್ಣೆದುರಿಗೆ ಪವಿತ್ರಭಸ್ಮ ಧರಿಸಿ, ಪೂರ್ಣಚಂದ್ರನ ಕಾಂತಿಯನ್ನು ಧರಿಸಿ, ತ್ರಿಲೋಚನನಾದ ಹರನು ನಿಂತಿದ್ದ. ಹುಲಿಯಚರ್ಮವನ್ನು ಉಟ್ಟಿದ್ದ. ಅವನ ಶಿರದಲ್ಲಿ ಚಂದ್ರ ಮುಗುಳುನಗುತ್ತಿದ್ದ. ಶಿವನ ದರ್ಶನವಾದಾಕ್ಷಣ ಪರಶಿವನ ಅಡಿದಾವರೆಗಳಿಗೆ ಎರಗಿದ- ಆಗ ಮಹಾರಾಜ, 'ಏನು ಬೇಕು ಕೇಳು. ಕರುಣಿಸುವೆ' ಎಂದ ಪರಶಿವ, ರಾಜ ನುಡಿದ- 'ಸ್ವಾಮಿನ್, ನನ್ನ ರಾಜ್ಯದಲ್ಲಿನ ಓರ್ವ ಬ್ರಾಹ್ಮಣನ ಮಗ ಇನ್ನೂ ಚಿಕ್ಕ ವಯಸ್ಸಿನಲ್ಲಿಯೇ ಮೃತನಾದ. ಆ ಬಾಲಕ ಮತ್ತೆ ಬದುಕಬೇಕು. ಇದೇ ನನ್ನ ಅಪೇಕ್ಷೆ ಭಗವನ್. ಅದಕ್ಕಾಗಿ ಈ ನಿನ್ನ ಅರ್ಚನೆ, ಪೂಜೆ, ತಪಸ್ಸು ಎಲ್ಲವನ್ನೂ ಕೈಗೊಂಡೆ. ನನ್ನ ಪೂಜೆಯಿಂದ ನೀನು ಸಂತುಷ್ಟನಾಗಿದ್ದರೆ ನನ್ನ ಮೇಲೆ ದಯೆತೋರು. ಆ ಬ್ರಾಹ್ಮಣ ಬಾಲಕನಿಗೆ ಪುನಃ ಜೀವದಾನಮಾಡು. ನನ್ನ ರಾಜ್ಯದ ಪ್ರಜೆಯಾದ ಅವನಿಗೆ ಪುನಃ ಇಂತಹ ಅಕಾಲ ಮೃತ್ಯುಬಾರದಂತೆ ಅವನನ್ನು ಕಾಪಾಡು.'

ಶ್ವೇತರಾಜನ ಮಾತುಗಳನ್ನು ಪರಶಿವ ಆಲಿಸಿದ. ಮಹಾರಾಜನಿಗೆ ಇದ್ದ ಪ್ರಜಾಪ್ರೇಮ, ಭೂತದಯೆ ಪರಶಿವನ ಮನಸ್ಸಿಗೆ ಮುದ ತಂದಿತು. ಮಹಾರಾಜನನ್ನು ಉದ್ದೇಶಿಸಿ ''ತಥಾಸ್ತು'' ಎಂದು ನುಡಿದ. ತನ್ನ ಶಕ್ತಿಯಿಂದ ಮೃತನಾದ ಬ್ರಾಹ್ಮಣ ಬಾಲಕನಿಗೆ ಜೀವದಾನ ಮಾಡಿದ. ಆ ಮುನಿಸುತನಿಗೆ ಕಲ್ಯಾಣವಾಗಲೆಂದು ಅನುಗ್ರಹಿಸಿದ. ಉಮಾ ದೇವಿಯೊಡನೆ ಅಂತರ್ಧಾನನಾದ. ಹೀಗೆ ಮಹಾರಾಜನು ಶಿವಾರಾಧನೆಯಿಂದ ಸತ್ತ ಮುನಿಸುತನನ್ನು ಬದುಕಿಸಿದ.

**ಮುನಿಗಳು:-** ಜಗದೊಡೆಯನಾದ ಬ್ರಹ್ಮದೇವಾ, ನಮಗೆ ಶ್ವೇತಮಾಧವನ ದಿವ್ಯಮಹಾತ್ಮ್ಯವನ್ನು ದಯವಿಟ್ಟು ನಿರೂಪಿಸು.

**ಬ್ರಹ್ಮ**:- ಮುನಿಪೋತ್ತಮರೇ, ಪರಮತತ್ವವನ್ನು ನೀವು ಕೇಳುತ್ತಿರುವಿರಿ. ಪರಮ ಮಂಗಲಕರವಾದ ಶ್ವೇತಮಾಧವನ ಮಹಾತ್ಮ್ಯವನ್ನು ಹೇಳುವೆ, ಕೇಳಿರಿ. ಈ ಶ್ವೇತ ಮಾಧವನ ಮಹಾತ್ಮ್ಯ ಶ್ರವಣದಿಂದ ಸಕಲ ಇಷ್ಟಾರ್ಥಗಳು ಲಭಿಸುವವು.

ಹಿಂದೆ ನಾನು ಋಷಿಗಳಿಂದ ಶ್ವೇತ ಮಾಧವನ ಮಹಾತ್ಮ್ಯವನ್ನು ಕೇಳಿದ್ದೇನೆ. ಭಯ, ಶೋಕಪರಿಹಾರಿಯಾದ ಆ ಪುಣ್ಯಕಥಾನಕವನ್ನು ಹೀಗೆ ಆರಂಭಿಸುವೆ.

ಶ್ವೇತರಾಜನು ಸಹಸ್ರವರ್ಷ ಪರಿಯಂತ ಧರ್ಮದಿಂದ ರಾಜ್ಯಪಾಲನೆಮಾಡಿದ. ಕೊನೆಯಲ್ಲಿ ಅವನಿಗೆ ಶ್ರೀಹರಿಯ ಆರಾಧನೆ ಮಾಡಬೇಕೆಂಬ ಹಂಬಲ ಉಂಟಾಯಿತು. ಆ ಮಹಾರಾಜನು ದಕ್ಷಿಣ ಸಮುದ್ರದ ತೀರದಲ್ಲಿರುವ ಪುರುಷೋತ್ತಮಕ್ಷೇತ್ರಕ್ಕೆ ಬಂದ. ಅಲ್ಲಿದ್ದ ಶ್ರೀಕೃಷ್ಣ ದೇವಾಲಯ ಪ್ರವೇಶಿಸಿ ಅವನನ್ನು ನಮಸ್ಕರಿಸಿದ. ಆ ದೇವಾಲಯದ ಪಕ್ಕದಲ್ಲಿ ಸುಲಕ್ಷಣವಾದ ಇನ್ನೊಂದು ದೇವಾಲಯ ನಿರ್ಮಿಸಿದ. ಶ್ರೀಕೃಷ್ಣ ದೇವಾಲಯದಿಂದ ನೂರು ಮಾರು ದೂರದಲ್ಲಿ ಈ ಇನ್ನೊಂದು ಹೊಸ ದೇವಾಲಯವು ಮಹಾರಾಜನ ಅಪೇಕ್ಷೆಯಂತೆ ನಿರ್ಮಿತವಾಯಿತು. ಆ ದೇವಾಲಯದಲ್ಲಿ ಪ್ರತಿಷ್ಠಾಪಿಸಲು ಬಿಳಿಕಲ್ಲಿನಿಂದ ಶ್ವೇತಮಾಧವ ವಿಗ್ರಹ ಕೆತ್ತಿಸಿದ. ಅದು ಚಂದ್ರನಂತೆ ಶುಭ್ರ ವರ್ಣದಿಂದ ಶೋಭಿತವಾಗಿದ್ದಿತು. ಆ ವಿಗ್ರಹವನ್ನು ವಿಧಿಪೂರ್ವಕವಾಗಿ ದೇವಾಲಯದೊಳಗೆ ಪ್ರತಿಷ್ಠಾಪಿಸಿದ. ದರಿದ್ರರಿಗೆ. ಅನಾಥರಿಗೆ ಅಲ್ಲದೆ ತಪಸ್ವಿಗಳಿಗೆ ಬ್ರಾಹ್ಮಣರಿಗೆ ಧನಧಾನ್ಯ ಗಳನ್ನು ದಾನಮಾಡಿದ. ಅನಂತರ ಆ ಮಹಾರಾಜನು ಮಾಧವಮೂರ್ತಿಯ ಎದುರಿಗೆ ಉದ್ದಕ್ಕೆ ನಮಸ್ಕಾರಹಾಕಿ ಓಂಕಾರ ಪೂರ್ವಕವಾಗಿ, ಶ್ರೀಹರಿಯ ದ್ವಾದಶಾಕ್ಷರ ಮಂತ್ರವನ್ನು ಜಪಿಸಿದ. ಒಂದು ತಿಂಗಳವರೆಗೆ ಆಹಾರವನ್ನು ಸೇವಿಸದೆ, ವಿಷ್ಣು ಸನ್ನಿಧಿಯಲ್ಲಿ ಕುಳಿತುಕೊಂಡು ಏಕಾಗ್ರತೆಯಿಂದ ಜಪಗಳನ್ನು ಜಪಿಸಿದ. ಜಪ ಸಮಾಪ್ತಿ ನಂತರದಲ್ಲಿ ಶ್ವೇತಮಾಧವ ದೇವನನ್ನು ಹೀಗೆ ಸ್ತೋತ್ರ ಮಾಡಿದ-

ಹೇ ನಾರಾಯಣನೆ, ನಿನಗೆ ನನ್ನ ನಮಸ್ಕಾರಗಳು. ಪ್ರಾಣಿಗಳ ಹೃದಯದಲ್ಲಿ ವಾಸಮಾಡುವ ಜ್ಞಾನಸ್ವರೂಪಿಯೇ ನಿನಗೆ ನಮಿಸುವೆ. ಪ್ರಳಯಕಾಲದಲ್ಲಿ ಸಕಲ ಜೀವರಾಶಿಗಳನ್ನು ತನ್ನ ಉದರಾಂಗಣದಲ್ಲಿ ಇಟ್ಟುಕೊಂಡು ಪಾಲಿಸುವ ಮಹಾತ್ಮನೇ ನಿನಗೆ ವಂದನೆಗಳು. ಓ ದೇವ, ನೀನು ಜಗತ್ಕರ್ತಾ ಸರ್ವಸದ್ಗುಣ ಸಮುಪೇತ. ಅಚಿಂತ್ಯ ಮಹಿಮೋಪೇತ, ಬಹುರೂಪಿ, ಅನಂತರೂಪಿಯಾದ ನಿನಗೆ ನನ್ನ ನಮಸ್ಕಾರಗಳು. ನಿನ್ನ ನಾಭಿಯಲ್ಲಿ ಸುಂದರವಾದ ಒಂದು ಹೊಂದಾವರೆ ಇದೆ, ಅದರಲ್ಲಿ ಜನಿಸಿದ ಚತುರ್ಮುಖ ಬ್ರಹ್ಮ. ನಿನ್ನ ನೀಲಕಾಂತಿಯಿಂದ ನೀನು ಬೆಳಗುತ್ತಿರುವೆ. ಕಮಲವನ್ನು ಕೈಯಲ್ಲಿ ಧರಿಸಿರುವೆ, ಇಂತಹ ನಿನಗೆ ನನ್ನ ವಂದನೆಗಳು. ತಾವರೆಯಂತೆ ವಿಶಾಲವಾದ ಕಣ್ಣುಗಳುಳ್ಳ ಓಂಕಾರ ಸ್ವರೂಪಿಯಾದ ಸಹಸ್ರಾಕ್ಷನಾದ ಸಹಸ್ರ ಬಾಹುಬಲಿಯಾದ, ವಿರಾಡ್ರೂಪಿಯಾದ, ಜಗದ್ರಕ್ಷಕನಾದ ಸ್ವಾಮಿಯೇ ನಿನಗೆ ನಮೋ ನಮಃ. ನೀನು ವರಾಹ ಅವತಾರ ಸ್ವೀಕರಿಸಿದವ. ಭಕ್ತರಿಗೆ ಬೇಕುಬೇಕಾದ ವರನೀಡಿದವ. ಜ್ಞಾನಿಗಳಿಗೆ ಜ್ಞಾನಗಮ್ಯವಾದ ಜ್ಞಾನಸ್ವರೂಪ ಉಳ್ಳವ, ನಿನಗೆ ಸಮರಾದವರಾರೂ ಇಲ್ಲ, ಭಕ್ತರಕ್ಷಕ, ಶಿಷ್ಟರ ಪರಿಪಾಲಕ, ಆದ್ಯಂತ ರಹಿತ ನಿನಗೆ ನನ್ನ ವಂದನೆಗಳು.

ಸೃಷ್ಟಿಯ ಆದಿಯಲ್ಲಿ ಎಲ್ಲೆಡೆ ಹರಡಿದ ವಾರಿ ವಿಸ್ತಾರದ ಮಧ್ಯದಲ್ಲಿ ಎಳೆಯ ಬಾಲಕನ ರೂಪದಿಂದ ನೀನು ಪವಡಿಸುವೆ. ನಿನ್ನ ಕಣ್ಣುಗಳೆಂದರೆ ಬಾಲಚಂದ್ರ, ಸೂರ್ಯರೇ

ಸರಿ. ನೀನು ಸರ್ವಜ್ಞ, ನಿನಗೆ ವಂದನೆಗಳು. ನೀನು ಬ್ರಹ್ಮ, ರುದ್ರ, ಇಂದ್ರ, ಚಂದ್ರ ಮೊದಲಾದ ದೇವಾಧಿದೇವತೆಗಳಿಗೂ, ಒಡೆಯ. ಕೃಷ್ಣಾವತಾರದಲ್ಲಿ ಗೋವುಗಳನ್ನು ಪಾಲಿಸಿದವ, ಹೇ ದೇವದೇವ, ನಿನಗೆ ಶಿರಬಾಗುವೆ. ಮಧು ಎಂಬ ದೈತ್ಯನನ್ನು ಸಂಹರಿಸಿದ ಪರಿಶುದ್ಧ ಸ್ವರೂಪವುಳ್ಳ, ಜಗತ್ತನ್ನು ವ್ಯಾಪಿಸಿರುವ ದೇವನೆ ನಿನಗೆ ನನ್ನ ವಂದನೆಗಳು. ಚರ್ಮಮಯವಾದ ಭೌತಿಕ ಇಂದ್ರಿಯಗಳಿಗೆ ಅಗೋಚರನಾದ, ಅನಂತನೆಂದು ಖ್ಯಾತನಾದ, ಶ್ರೀವತ್ಸಲಾಂಛನ ಭೂಷಿತನಾದ, ಮೂರು ಹೆಜ್ಜೆಗಳಿಂದ ಭೂಮಿ, ಪಾತಾಳ, ನಭೋಮಂಡಲವನ್ನೆಲ್ಲ ವ್ಯಾಪಿಸಿದ ಪೀತಾಂಬರಧಾರಿ ದೇವನೇ, ನಿನಗೆ ನಮಸ್ಕಾರಗಳು. ನೀನು ಸೃಷ್ಟಿಕರ್ತಾ; ಸೃಷ್ಟಿ, ಸ್ಥಿತಿ ನಿಯಂತಾ; ಸಂಹರ್ತಾ. ಇಂತಹ ಅತ್ಯದ್ಭುತ ಚರಿತ್ರೆಯಿಂದ ಒಡಗೂಡಿದ ನಿನಗೆ ವಂದನೆಗಳು. ನೀನು ವಾಮನಾವತಾರವನ್ನು ಕೈಗೊಂಡಿದ್ದಿ. ನಿನ್ನ ವಾಮನಾವತಾರದಂತೆ ಚಿಕ್ಕಕಾರ್ಯಗಳೂ ಮಹಾಫಲ ಸಾಧಿಸುವಂತಹವು. ವಾಮನ ಮೂರ್ತಿಯಂತೆ ಜಗತ್ತೆಲ್ಲ ವ್ಯಾಪಿಸುವ ದೃಷ್ಟಿಯುಳ್ಳವ ನೀನು. ವಾಮನೆರೆಂದರೆ (ಅಶಕ್ತರಾದ) ಭಕ್ತರನ್ನು ಉದ್ಧರಿಸುವೆ. ಇಂತಹ ನಿನಗೆ ನಮಸ್ಕಾರಗಳು.

ಸಂಸಾರಸಾಗರವನ್ನು ದಾಟ ಬಯಸುವ ಜಿಜ್ಞಾಸುಗಳಿಗೆ ನೀನು ದೋಣಿ. ಮಂಗಳಸ್ವರೂಪಿಯಾದ ನೀನು ಸರ್ವರಕ್ಷಕ. ಸಂಸಾರ ದುಃಖವನ್ನು ನಾಶಪಡಿಸುವವ ನೀನೇ. ಸುಖವನ್ನು ನೀಡುವವ ನೀನೇ. ಸಂಸಾರ ನಿರ್ಮಾತೃವೂ, ಸಂಸಾರ ಸಂಹರ್ತೃವೂ ಆದ ನಿನಗೆ ವಂದನೆ. ಗೋ ಬ್ರಾಹ್ಮಣರಿಗೆ ಹಿತ ಸಾಧಿಸುವ ಹೇ ದೇವದೇವ, ನಿನಗೆ ನಮಸ್ಕಾರ. ಹೇ ಸ್ವಾಮಿ, ಋಗ್ವೇದ ನಿನ್ನಿಂದ ಹೊರಟಿದೆ; ನಿನ್ನನ್ನೇ ಪ್ರತಿಪಾದಿಸುತ್ತಲಿದೆ. ಇಂತಹ ವೇದ ಪ್ರತಿಪಾದ್ಯನಾದ ನಿನಗೆ ನನ್ನ ನಮಸ್ಕಾರಗಳು. ಪ್ರಭುವೇ, ಯಾಗಮಾಡುವವರು ಯಜುರ್ವೇದ ಮಂತ್ರಗಳಿಂದ ಸ್ತುತಿಸುವರು. ನೀನು ಐಶ್ವರ್ಯಗಳಿಗೆ ಒಡೆಯ, ಲಕ್ಷ್ಮೀದೇವಿಗೂ ಸ್ವಾಮಿಯಾದವ. ಯೋಗಿಗಳು ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿ ನಿನ್ನನ್ನು ನೆನೆಯುವರು. ಇಂತಹ ನಿನಗೆ ನಮಸ್ಕಾರ. ಸ್ವಾಮಿ, ನೀನು ಸಾಮಗಾನ ಪ್ರಿಯ, ಸಾಮಗಾನದಂತೆ ಆನಂದಯೋಗಿ, ಶಾಂತಸ್ವರೂಪ, ನಿನಗೆ ನನ್ನ ವಂದನೆಗಳು. ಹೇ ಭಗವನ್, ಅಥರ್ವವೇದವು ನಿನ್ನ ಶಿರಸ್ಸು ಮತ್ತು ಪಾದವು. ಅಥರ್ವವೇದ ಹೊರಟಿದ್ದೇ ನಿನ್ನಿಂದ. ಅಥರ್ವವೇದ ಪ್ರತಿಪಾದ್ಯ ಮಂಗಳಸ್ವರೂಪ ನಿನ್ನದೇ. ದೇವೇಶ, ನಿನ್ನ ಶಿರಸ್ಸು ವಜ್ರದಂತೆ ಇರುವದು. ಮಧುಕೈಟಭರೆಂಬ ದೈತ್ಯರನ್ನು ಸಂಹರಿಸಿದವ ನೀನು. ಅಪರಂಪಾರವಾದ ವಿಸ್ತಾರದಿಂದ ಭೋರಿಡುವ ಭಯಂಕರವಾದ ಆ ಪ್ರಳಯಕಾಲದಲ್ಲಿ ನಿರ್ಭೀತಿಯಿಂದ ಸಂಚರಿಸುವವ ನೀನೋರ್ವನೇ. ಮತ್ಸ್ಯಾವತಾರಮಾಡಿ ವೇದಗಳನ್ನು ಉದ್ಧರಿಸಿದವ ನೀನು. ಜ್ಞಾನೇಂದ್ರಿಯ, ಕರ್ಮೇಂದ್ರಿಯ ಪ್ರೇರಿಸುವ ನೀನು ಲೋಕರಕ್ಷಕ ನಾದ, ಹೇ ನಾರಾಯಣಸ್ವಾಮಿಯೇ ನಿನಗೆ ನನ್ನ ನಮಸ್ಕಾರ. ಸಂಸಾರ ಬಂಧನ ತೊಲಗಿಸಿ, ಉತ್ತಮಗತಿ ಕರುಣಿಸುವ, ಮೂರುಲೋಕಗಳನ್ನು ಬೆಳಗುವ ತೇಜೋಮೂರ್ತಿಯಾದ ದೇವದೇವ, ನಿನಗೆ ನನ್ನ ವಂದನೆಗಳು. ಯೋಗಿಶ್ರೇಷ್ಠನೂ, ಶುದ್ಧನೂ, ಸುಖರೂಪನೂ, ಪುಣ್ಯಮಯನೂ, ಆದ ದೇವದೇವನಿಗೆ ಅನಂತಾನಂತ ವಂದನೆಗಳು. ಹೇ ಒಡೆಯನೆ, ನೀನು ಜಗದ್ವಂದ್ಯ, ಪ್ರಾಣಿಗಳಿಗೆ ಶರೀರಗಳನ್ನು ನೀಡುವವ, ಸಕಲ ದೇವತೆಗಳಿಂದಲೂ ವಂದಿತ, ದಿವ್ಯ ಕಿರೀಟ ಧರಿಸಿರುವಿ. ಸಕಲ ಪ್ರಾಣಿಗಳಿಗೆ ಆಶ್ರಯಸ್ಥಾನ, ಪ್ರಾಣಿಗಳ ಜೀವನವನ್ನು ಕಲ್ಪಿಸುವ ಮಹನೀಯ ನೀನೇ. ಇಂಥ ಮಹನೀಯನಿಗೆ ನನ್ನ ನಮಸ್ಕಾರಗಳು. ಧನವನ್ನು

ಸೃಷ್ಟಿಸುವ. ವಸ್ತ್ರಗಳನ್ನು ಕೊಡುವವ, ಯಜ್ಞಕ್ಕೆ ಉದ್ದಿಷ್ಟ, ಯಜ್ಞದ ಪ್ರೇರಕ, ಎಲ್ಲವೂ ನೀನೇ. ಮಹಾಯೋಗಿ ನೀನು. ನಿನಗೆ ನನ್ನ ನಮಸ್ಕಾರವು. ಯೋಗಿಗಳು ಮಾಡುವ ಯೋಗಾಭ್ಯಾಸಕ್ಕೆ ಫಲದಾತೃ ನೀನೇ. ನಿನ್ನ ಅಂಗಗಳೆಲ್ಲ ಯಜ್ಞಮಯವಾದವು. ಪ್ರಲಂಬಾಸುರನನ್ನು ಸಂಹರಿಸಿದ ಸಂಕರ್ಷಣಸ್ವರೂಪಿ ಭಗವನ್‌ಮೂರ್ತಿ, ಶರಣು, ಶರಣು.

ಮೇಘಧ್ವನಿಯಂತೆ ಗಂಭೀರಧ್ವನಿಯುಳ್ಳ, ನೇಗಿಲವನ್ನು ಆಯುಧವನ್ನಾಗಿ ಧರಿಸಿರುವ ಮಹಾಜ್ಞಾನಿಯಾದ ನಾರಾಯಣನನ್ನು ನಿರಂತರವಾಗಿ ಸೇವಿಸುವ ಬಲರಾಮ ಸ್ವಾಮಿಗೆ ನನ್ನ ನಮನ. ಭಕ್ತವತ್ಸಲನಾದ ಬಲರಾಮನೇ, ನನ್ನ ಮನಸ್ಸು ಮಾತು, ದೇಹ, ಇವುಗಳಿಂದ ಸಂಭವಿಸಿದ ಪಾಪಗಳನ್ನು ನಿನ್ನ ಹೊರತು ಬೇರಾರು ನಿವಾರಿಸುವರು? ಹೇ ಸ್ವಾಮಿಯೇ, ನಿನ್ನ ಅನುಗ್ರಹದಿಂದ ನನಗೆ ಆತ್ಮಜ್ಞಾನ ಉಂಟಾಗಲಿ. ಈ ಸಂಸಾರವು ಕಷ್ಟಮಯವಾದುದು, ಆಪತ್ತುಗಳು ಮೇಲಿಂದ ಮೇಲೆ ಸಂಸಾರದಲ್ಲಿ ತಲೆದೋರುವವು. ಸಂಸಾರವನ್ನು ಸುಖವಾಗಿ ದಾಟುವದು ಶಕ್ಯವಿಲ್ಲ. ಸಂಸಾರದಲ್ಲಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ-ತಾಪತ್ರಯಗಳಿಗೆ ಸಿಲುಕಿ ನೊಂದಿರುವೆ. ದೇವಾ, ನಿನ್ನ ಮಾಯೆಯಿಂದ ಜೀವಿಗಳು ಮೋಹಿತರಾಗಿ ಧನ, ಧಾನ್ಯ, ಕಾಮಿನಿ, ಮೊದಲಾದ ವಿಷಯಾಭಿಲಾಷೆಗಳ ಲಾಲಸೆಯಿಂದ ಅಧೋಗತಿಗೆ ಇಳಿಯುತ್ತಿರುವರು. ಈ ಘೋರವಾದ ಜನ್ಮಬಂಧ ಜಾಲದಿಂದ ಮುಕ್ತನಾಗಲು ನಾನು ನಿನ್ನ ಶರಣು ಹೊಕ್ಕಿದ್ದೇನೆ. ಹೇ ಸ್ವಾಮಿಯೇ, ನಿಷ್ಕಾಮ ಬುದ್ಧಿಯಿಂದ ನಿನ್ನನ್ನು ಸೇವಿಸುವದರಿಂದ ಮಾತ್ರ ಪರಮಸುಖ ಪ್ರಾಪ್ತವಾಗುವದು. ದುಃಖದಿಂದ ಬಳಲುತ್ತಿರುವ ಸಂಸಾರಿಗಳನ್ನು ನಾನು ಸದಾ ನೋಡುತ್ತಿರುವೆ. ಉದ್ಧಾರ ಹೇಗೆ ಎಂಬುದು ನನಗೆ ತಿಳಿಯದಾಗಿದೆ. ಹೇ ಪ್ರಭು, ಈ ಸಂಸಾರ ಕೂಪದಿಂದ ಇವರನ್ನು ಉದ್ಧರಿಸಲು ನೀನೇ ಸಮರ್ಥ. ಸಂಸಾರಸಾಗರದ ದಡವೇ ಗೋಚರಿಸುವದಿಲ್ಲ. ಮೋಹವೆಂಬ ಜಲರಾಶಿಯೇ, ನಮ್ಮ ದೃಷ್ಟಿ ಹರಿಯುವವರೆಗೂ ಕಾಣಸಿಗುತ್ತದೆ. ಇಂತಹ ಸಂಸಾರ ಸಾಗರದಿಂದ ನಮ್ಮನ್ನು ಪಾರುಗಾಣಿಸುವವರು ನಿನ್ನ ಹೊರತು ಬೇರೆ ಯಾರಿದ್ದಾರೆ. ಮುನಿಗಳೆ, ಹೀಗೆ ಶ್ವೇತರಾಜನು ಆ ಪುರುಷೋತ್ತಮ ಕ್ಷೇತ್ರದಲ್ಲಿ ಭಕ್ತಿಭರಿತನಾಗಿ, ಬಹುಕಾಲದವರೆಗೆ ಪರವಶನಾಗಿ ಸ್ತೋತ್ರಮಾಡಿದ ನಂತರ ಸಾಕ್ಷಾತ್ ಶ್ರೀಹರಿಯು ಸಕಲ ದೇವತೆಗಳೊಡನೆ ರಾಜನ ಸಮ್ಮುಖದಲ್ಲಿ ಪ್ರತ್ಯಕ್ಷನಾದ. ಗರುಡಾರೂಢನಾದ ಆ ಭಗವಂತನು ನೀಲಮೇಘಶ್ಯಾಮ ಶರೀರದಿಂದ ಒಪ್ಪುತ್ತಿದ್ದ. ಇಂತಹ ಆ ಭಗವಂತನು ಮಹಾರಾಜನನ್ನು ಕುರಿತು ನುಡಿದ. 'ರಾಜನ್, ನಿನ್ನ ಭಕ್ತಿಗೆ ಮೆಚ್ಚಿದ್ದೇನೆ, ಪ್ರಸನ್ನನಾಗಿರುವೆ. ಬೇಕಾದುದನ್ನು ಬೇಡು. ಈ ಕ್ಷಣದಲ್ಲಿ ಅನುಗ್ರಹಿಸುವೆ'. ಅಮೃತದಂತೆ ಆಪ್ಯಾಯಮಾನವಾದ ಭಗವಂತನ ಈ ಸವಿನುಡಿಗಳನ್ನು ಆಲಿಸಿ ಹರ್ಷ ಪುಲಕಿತನಾದ-ಆ ಶ್ವೇತದೊರೆ. ವಿನಯದಿಂದ ಬಾಗಿ ಹೀಗೆ ನುಡಿದ ಆ ಮಹಾರಾಜ.

**ಶ್ವೇತರಾಜ:-** ಷಡ್ಗುಣೈಶ್ವರ್ಯ ಸಂಪನ್ನನಾದ ಸ್ವಾಮಿಯೇ, ನೀನು ಪ್ರಸನ್ನನಾಗಿದ್ದರೆ, ಬ್ರಹ್ಮಲೋಕಕ್ಕಿಂತಲೂ ಉನ್ನತ ಲೋಕವೆನಿಸಿರುವ ವಿಷ್ಣುಲೋಕವನ್ನು ನನಗೆ ಕರುಣಿಸು. ಒಡೆಯ, ಪುಣ್ಯಮಯವಾದ, ದುಃಖಮಿಶ್ರಿತವಲ್ಲದ ಸುಖವನ್ನು ನೀಡುವ ಆ ವಿಷ್ಣುಲೋಕವನ್ನು ಪಡೆಯುವ ಹಂಬಲ ನನಗೆ ಉಂಟಾಗಿದೆ.

**ಭಗವಂತ:-** ರಾಜೇಂದ್ರ, ನಿನ್ನ ಇಚ್ಛೆಯಂತೆಯೇ ಆಗಲಿ. ಇಹದಲ್ಲಿ ನೀನು ಬಹುಕಾಲ ಸುಖವನ್ನನುಭವಿಸಿ, ಅಂತ್ಯದಲ್ಲಿ ದೇವತೆಗಳು, ಮುನಿಗಳು, ಸಿದ್ಧರು,

ಯೋಗಿಗಳು ಇವರಿಗೂ ದುರ್ಲಭವೆನಿಸುವ ಸ್ಥಾನವಾದ ವಿಷ್ಣುಲೋಕವನ್ನು ಹೊಂದುವೆ. ನಿನ್ನ ಕೀರ್ತಿಯು ಮೂರು ಲೋಕಗಳನ್ನು ವ್ಯಾಪಿಸುವದು. ಇನ್ನು ಮೇಲೆ ಈ ತೀರ್ಥ ನಿನ್ನ ಹೆಸರಿನಿಂದ ಕೂಡಿಯೇ ಲೋಕದಲ್ಲಿ ಖ್ಯಾತವಾಗುವದು. ಇನ್ನು ಮೇಲೆ ಇದಕ್ಕೆ 'ಶ್ವೇತ ಗಂಗೆ' ಎಂದು ಹೆಸರಾಗುವದು. ನನ್ನ ಭಕ್ತರು ಶ್ವೇತಗಂಗಾತೀರ್ಥದ ಪವಿತ್ರಜಲವನ್ನು ದರ್ಭಾಗ್ರದಿಂದ ಪ್ರೋಕ್ಷಿಸಿಕೊಂಡರೂ ಸ್ವರ್ಗಲೋಕವನ್ನು ಪಡೆಯುವರು. ಇಲ್ಲಿನ ಮಾಧವಮೂರ್ತಿ ನಿನ್ನ ಹೆಸರಿನಿಂದ ಸೇರ್ಪಡೆ ಹೊಂದಿ 'ಶ್ವೇತಮಾಧವ' ಎಂದು ಲೋಕದಲ್ಲಿ ಖ್ಯಾತವಾಗುವದು. ಶ್ವೇತಮಾಧವ ಮೂರ್ತಿಯ ದರ್ಶನವನ್ನು ಭಕ್ತಿಯಿಂದ ಮಾಡಿದ ಮನುಜನು ಸಕಲ ಲೋಕಗಳನ್ನೂ ಮೀರಿ, ನನ್ನ ಲೋಕಕ್ಕೆ ಬರುವನು. ನನ್ನ ಲೋಕದಲ್ಲಿ ಒಂದು ಕಲ್ಪ ಪರಿಯಂತರವಿದ್ದು, ದೇವ ಕನ್ಯೆಯರಿಂದ ಒಡಗೂಡಿ, ಅಲ್ಲಿ ಸುಂದರವಾದ ಹಾಣದಲ್ಲಿ ವಿಹಾರಗೈಯುವನು. ಸಿದ್ಧ, ಗಂಧರ್ವರಿಂದ ಹೊಗಳಿಸಿಕೊಳ್ಳುತ್ತ ಯಥೇಚ್ಛ ಭೋಗಭಾಗ್ಯಗಳನ್ನು ಅನುಭವಿಸುವನು. ಪುಣ್ಯ ನಷ್ಟವಾದ ನಂತರ ಮನುಷ್ಯ ಲೋಕದಲ್ಲಿ ಬ್ರಾಹ್ಮಣನಾಗಿ ಜನಿಸಿ ವೇದ, ವೇದಾಂಗಗಳನ್ನು ಅಧ್ಯಯನ ಮಾಡಿ ಬಹುಕಾಲದ ವರೆಗೆ ಸೌಖ್ಯವನ್ನು ಅನುಭವಿಸುವನು. ಸಂತಾನ, ಸಂಪತ್ತು, ಮುಂತಾದ ಐಹಿಕ ಸೌಭಾಗ್ಯಗಳನ್ನು ಸಮೃದ್ಧವಾಗಿ ಅನುಭವಿಸಿ ಕೊನೆಗೆ ಪುನಃ ಪುರುಷೋತ್ತಮ ಕ್ಷೇತ್ರಕ್ಕೆ ಆಗಮಿಸಿ, ಇಲ್ಲಿನ ವಟವೃಕ್ಷದರ್ಶನಮಾಡಿ, ಸಮುದ್ರ ಸ್ನಾನಮಾಡಿ, ಅಂತರಂಗದಲ್ಲಿ ಶ್ರೀಹರಿಯನ್ನು ಸಂತತವಾಗಿ ಚಿಂತಿಸುತ್ತ ದೇಹತ್ಯಾಗ ಮಾಡಿ ಮೋಕ್ಷವನ್ನು ಹೊಂದುವನು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹದಿನೇಳನೆಯ ಅಧ್ಯಾಯ ಮುಗಿದುದು*

—o—

## ಸಮುದ್ರಸ್ನಾನ ವಿಧಿ ನಿರೂಪಣ

## ಅಧ್ಯಾಯ - ೧೮

**ಬ್ರಹ್ಮ**:- ಮುನಿಗಳೇ, ಶ್ವೇತಮಾಧವನ ದರ್ಶನಮಾಡಿ ಅವನ ಸಮೀಪದಲ್ಲಿರುವ ಮತ್ಸ್ಯಮಾಧವನ ದರ್ಶನವನ್ನೂ ಮಾಡಬೇಕು. ಮಾಧವನು ಪೂರ್ವಕಾಲದಲ್ಲಿ ಪ್ರಳಯದ ಜಲರಾಶಿಯಲ್ಲಿ ಮುಳುಗಿದ; ವೇದಗಳನ್ನು ಉದ್ಧರಿಸಲು ಮತ್ಸ್ಯರೂಪವನ್ನು ತಾಳಿದನು. ಈ ಭಗವಂತನ ಆಕೃತಿಯನ್ನೇ ಮತ್ಸ್ಯಮಾಧವ ಮೂರ್ತಿ ಎನ್ನುತ್ತಾರೆ. ಭಗವಂತನ ಅವತಾರಗಳಲ್ಲಿ ಈ ಮತ್ಸ್ಯಾವತಾರವು ಪ್ರಾಥಮಿಕ ಅವತಾರ. ಮತ್ಸ್ಯಮಾಧವ ನನ್ನು ಭಕ್ತಿಯಿಂದ ನೆನೆದವನ ದುಃಖಗಳೆಲ್ಲ ನಿಸ್ಸಂಶಯವಾಗಿಯೂ ದೂರವಾಗುವವು. ಮತ್ಸ್ಯಮಾಧವನನ್ನು ಭಕ್ತಿಯಿಂದ ಸೇವಿಸಿದವನು ಇಹದಲ್ಲಿ ಸಕಲಸೌಭಾಗ್ಯ ಅನುಭವಿಸುವನು. ಕೊನೆಗೆ ಉತ್ತಮ ಲೋಕವನ್ನು ಪಡೆಯುವನು. ಪುಣ್ಯವು ಕಳೆದ ಮೇಲೆ ಭೂಲೋಕದಲ್ಲಿ ಜನಿಸಿ ಭೂಮಂಡಲದ ಅಧಿಪತ್ಯವನ್ನು ವಹಿಸಿಕೊಂಡು ಬಹು ದೀರ್ಘಕಾಲ ಇಲ್ಲಿ ಸುಖಿಸುವನು. ಅನೇಕ ಯಜ್ಞಯಾಗ ಮಾಡಿ ಸಜ್ಜನ ಶ್ರೇಷ್ಠರ ಸಂಪರ್ಕದಿಂದ ಜ್ಞಾನ, ವಿಜ್ಞಾನಗಳಲ್ಲಿ ಪರಿಣತಿ ಪಡೆದು, ಸಿದ್ಧಪುರುಷನಾಗಿ ಅಂತ್ಯದಲ್ಲಿ ಜ್ಞಾನಯೋಗ ದ್ವಾರದಿಂದ ಮೋಕ್ಷವನ್ನು ಹೊಂದುವನು. ಮುನಿಶ್ರೇಷ್ಠರೆ, ಯಾವ ಮತ್ಸ್ಯಮಾಧವನ ದರ್ಶನದಿಂದ ಸಕಲ ಇಷ್ಟಾರ್ಥಗಳ ಸಿದ್ಧಿ ಉಂಟಾಗುವದೋ ಅಂತಹ ಮತ್ಸ್ಯಮಾಧವನ ಮಹಾತ್ಮ್ಯವನ್ನು ನಿಮಗೆ ನಿರೂಪಿಸಿರುವೆ.

**ಮುನಿಗಳು:-** ಭಗವನ್, ಸಮುದ್ರದಲ್ಲಿ ಸ್ನಾನಮಾಡಿ, ಸತ್ಪಾತ್ರರಲ್ಲಿ ದಾನ ಮಾಡಿದರೆ ಯಾವ ಫಲ ಪ್ರಾಪ್ತವಾಗುವದು?

**ಬ್ರಹ್ಮ:-** ಸಮುದ್ರಸ್ನಾನ, ದಾನ ಫಲಗಳನ್ನು ಹೇಳುವೆ. ಶ್ರವಣ ಮಾತ್ರದಿಂದ ಪುಣ್ಯ ಸಂಪಾದಿತವಾಗುವದು. ಆಚರಿಸಿದಾಗ ಮಹತ್ಪುಣ್ಯ ಸಂಪಾದಿತವಾಗುವದೆಂಬುದನ್ನು ಹೇಳಬೇಕೇ? ಮಾರ್ಕಂಡೇಯ ತೀರ್ಥದಲ್ಲಿ ಪೂರ್ವಾಹ್ನದೊಳಗೆ ಸಂಕಲ್ಪ ಪೂರ್ವಕ ಸ್ನಾನ ಮಾಡಬೇಕು. ಚತುರ್ದಶೀ ತಿಥಿಯಂದು ಸ್ನಾನ ಪ್ರಶಸ್ತ. ಹುಣ್ಣಿಮೆಯಂದು ಸಮುದ್ರ ಸ್ನಾನಮಾಡಿದರೆ ಅಶ್ವಮೇಧಯಾಗ ಮಾಡಿದ ಫಲವು ದೊರಕುವದು. ಮಾರ್ಕಂಡೇಯ ತೀರ್ಥ, ವಟತೀರ್ಥ, ಕೃಷ್ಣತೀರ್ಥ, ಬಲರಾಮತೀರ್ಥ, ಇಂದ್ರದ್ಯುಮ್ನ ಸರಸ್ಸು, ಇವಿಷ್ಟನ್ನು ಸೇರಿ 'ಪಂಚತೀರ್ಥಗಳು' ಎಂದು ಕರೆಯುತ್ತಾರೆ. ಈ ಐದು ತೀರ್ಥಗಳೂ ಆ ಸಮುದ್ರದಲ್ಲಿವೆ. ಜ್ಯೇಷ್ಠಮಾಸದ ಹುಣ್ಣಿಮೆಯಂದು ಜ್ಯೇಷ್ಠಾನಕ್ಷತ್ರದ ಮುಹೂರ್ತ ಇರುವಾಗ ಪಂಚತೀರ್ಥಯಾತ್ರೆ ಕೈಕೊಳ್ಳಬೇಕು. ಮನೋವಾಕ್‌ಕಾಯಗಳಿಂದ ಪರಿಶುದ್ಧರಾಗಿ, ಭಗವಂತನನ್ನು ಧ್ಯಾನಿಸುತ್ತ, ರಾಗ, ದ್ವೇಷ, ಅಸೂಯೆಗಳಿಲ್ಲದೆ, ಜಿತೇಂದ್ರಿಯರಾಗಿ, ಭಕ್ತಿಯಿಂದ ವಟತೀರ್ಥದಲ್ಲಿ ಸ್ನಾನಮಾಡಿ, ಆ ವಟವೃಕ್ಷದಲ್ಲಿ ಸನ್ನಿಹಿತನಾದ ಜನಾರ್ದನನನ್ನು ಪ್ರದಕ್ಷಿಣೆ, ನಮಸ್ಕಾರಗಳಿಂದ ಸೇವಿಸಬೇಕು. ಮುನಿಗಳೆ, ವಟತರುವಿನ ದರ್ಶನದಿಂದ ಏಳು ಜನ್ಮದ ಪಾಪಗಳು ನಷ್ಟವಾಗುವವು. ಪರಮ ಪುಣ್ಯ ಪ್ರಾಪ್ತಿ ಉಂಟಾಗುವದು. ಉತ್ತಮ ಗತಿ ಲಭಿಸುವದು. ಇಂತಹ ಪುಣ್ಯಕರವಾದ ವಟವೃಕ್ಷಗಳ ಹೆಸರನ್ನು ಪ್ರಮಾಣಗಳನ್ನು, ಯಾವ ಯಾವ ಯುಗದಲ್ಲಿ ಎಷ್ಟೆಷ್ಟು ಎತ್ತರ ಉಳ್ಳದ್ದು ಎಂಬುದನ್ನು ಹೇಳುವೆ, ಕೇಳಿರಿ.

ಕೃತಯುಗದಲ್ಲಿ ಆ ವೃಕ್ಷಕ್ಕೆ 'ವಟವೃಕ್ಷ'ವೆಂದು ಹೆಸರು. ತ್ರೇತಾಯುಗದಲ್ಲಿ ವಟೇಶ್ವರ ಎಂದು ಹೆಸರು. ದ್ವಾಪರ ಯುಗದಲ್ಲಿ 'ಕೃಷ್ಣ' ಎಂದು ಕರೆಯುತ್ತಾರೆ. ಕಲಿಯುಗದಲ್ಲಿ 'ಪುರಾಣ ಪುರುಷ' ಎಂದು ಹೆಸರು. ಕೃತಯುಗದಲ್ಲಿ ಈ ವೃಕ್ಷವು ಒಂದು ಗಾವುದ ಎತ್ತರವುಳ್ಳದ್ದಾಗಿರುತ್ತದೆ. ತ್ರೇತಾಯುಗದಲ್ಲಿ ಮುಕ್ಕಾಲುಗಾವುದ ಎತ್ತರ ಉಳ್ಳದ್ದು. ದ್ವಾಪರಯುಗದಲ್ಲಿ ಅರ್ಧಗಾವುದ ಎತ್ತರ ಉಳ್ಳದ್ದು ಕಲಿಯುಗದಲ್ಲಿ ಇದರ ಎತ್ತರ ಕಾಲುಗಾವುದ ಮಾತ್ರ. ಈ ಹಿಂದೆ ಉಕ್ತವಾದ ವಟವೃಕ್ಷದ ಮಂತ್ರ ಉಚ್ಚರಿಸಿ ವಟವೃಕ್ಷವನ್ನು ನಮಸ್ಕರಿಸಿ, ತದನಂತರ ದಕ್ಷಿಣದಿಕ್ಕಿಗೆ ಮೂರುನೂರು ಬಿಲ್ಲುಗಳ ಅಂತರದಷ್ಟು ಮುಂದೆ ಸಾಗಬೇಕು. ಆ ಮಾರ್ಗದಲ್ಲಿ ಸ್ವರ್ಗದಾಯಕವಾದ ವಿಷ್ಣು ಸನ್ನಿಧಾನ ಉಳ್ಳ ಕಟ್ಟೆಗೆ ಇದೆ ಅದು ಸಮುದ್ರದ ನೀರಿನಿಂದ ಸುತ್ತುವರಿಯಲ್ಪಟ್ಟಿದೆ. ಆ ಕಾಷ್ಠವನ್ನು ಭಕ್ತಿಯಿಂದ ನಮಸ್ಕರಿಸಿ, ಕಾಷ್ಠಾಂತರ್ಗತನಾದ ಶ್ರೀಮನ್ ನಾರಾಯಣನನ್ನು ಭಜಿಸಿದವರ ಸಕಲ ದೋಷಗಳು ನಿವಾರಿತವಾಗುವವು. ಮುಂದೆಸಾಗಿದ ನಂತರ ಉಗ್ರಸೇನನ ದರ್ಶನವಾಗುವದು. ಉಗ್ರಸೇನನ ದರ್ಶನದ ನಂತರ ಸಮುದ್ರದಲ್ಲಿ ಆಚಮನ ಮಾಡಬೇಕು. ಪವನಃ ಪುಣ್ಯೇನ್ ಶ್ರೀಮನ್ ನಾರಾಯಣನನ್ನು ಮನದಲ್ಲಿ ಧ್ಯಾನಿಸಬೇಕು. 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರಿ ಮಂತ್ರದಿಂದ ಅಂಗನ್ಯಾಸ, ಕರನ್ಯಾಸಗಳನ್ನು ಪೂರೈಸಬೇಕು. 'ಓಂ ನಮೋ ನಾರಾಯಣಾಯ' ಎಂಬ ಮಂತ್ರವು ಮಂತ್ರಗಳಲ್ಲೇ ಶ್ರೇಷ್ಠವಾದ ಮಂತ್ರ.

ನಾರಾಯಣಪರಾ ವೇದಾ ನಾರಾಯಣಪರಾ ದ್ವಿಜಾಃ ।
ನಾರಾಯಣಪರಾ ಯಜ್ಞಾಃ ನಾರಾಯಣಪರಾ ಕ್ರಿಯಾಃ ॥
ನಾರಾಯಣಪರಾ ಪೃಥ್ವೀ ನಾರಾಯಣಪರಂ ಜಲಂ ।
ನಾರಾಯಣಪರೋ ವಹ್ನಿಃ ನಾರಾಯಣಪರಂ ನಭಃ ॥
ನಾರಾಯಣಪರೋ ವಾಯುಃ ನಾರಾಯಣಪರಂ ಮನಃ ।
ಅಹಂಕಾರಶ್ಚ ಬುದ್ಧಿಶ್ಚ ಉಭೇ ನಾರಾಯಣಾತ್ಮಕೇ ॥
ಭೂತಂ ಭವ್ಯಂ ಭವಿಷ್ಯಂ ಚ ಯತ್ಕಿಂಚಿಜ್ಜೀವಸಂಜ್ಞಿತಂ ।
ಸ್ಥೂಲಂ ಸೂಕ್ಷ್ಮಂ ಪರಂ ಚೈವ ಸರ್ವಂ ನಾರಾಯಣಾತ್ಮಕಂ ॥
ಶಬ್ದಾದ್ಯಾ ವಿಷಯಾಸರ್ವೇ ಶ್ರೋತ್ರಾದೀನೀಂದ್ರಿಯಾಣಿ ಚ ।
ಪ್ರಕೃತಿಃ ಪುರುಷಶ್ಚೈವ ಸರ್ವೇ ನಾರಾಯಣಾತ್ಮಕಾಃ ॥
ಜಲೇ ಸ್ಥಲೇ ಚ ಪಾತಾಲೇ ಸ್ವರ್ಗಲೋಕೇಽಂಬರೇ ನಗೇ ।
ಅವಷ್ಟಭ್ಯ ಇದಂ ಸರ್ವಂ ಆಸ್ತೇ ನಾರಾಯಣಃ ಪ್ರಭುಃ ॥
ಕಿಂಚಾತ್ರ ಬಹುನೋಕ್ತೇನ ಜಗದೇತದ್ ಚರಾಚರಂ ।
ಬ್ರಹ್ಮಾದಿಸ್ತಂಬ ಪರ್ಯಂತಂ ಸರ್ವಂ ನಾರಾಯಣಾತ್ಮಕಂ ॥

ವೇದಗಳೆಲ್ಲವೂ ನಾರಾಯಣನನ್ನೇ ಸ್ತೋತ್ರ ಮಾಡುತ್ತವೆ. ದ್ವಿಜರ ಆರಾಧ್ಯ ದೈವ ಶ್ರೀಮನ್ ನಾರಾಯಣ. ಯಜ್ಞಗಳಿಂದ ಗಮ್ಯನಾದವ ಶ್ರೀಮನ್‌ನಾರಾಯಣ. ಎಲ್ಲ ಕರ್ಮಗಳು ನಾರಾಯಣನನ್ನು ಉದ್ದೇಶಿಸಿಯೇ ನಡೆಯುವವು. ಈ ಪೃಥ್ವಿಯು ನಾರಾಯಣನನ್ನು ಆಶ್ರಯಿಸಿ ಇದೆ. ಜಲಕ್ಕೆ ಆಶ್ರಯ ಶ್ರೀಮನ್‌ನಾರಾಯಣನೇ. ಅಗ್ನಿ ಮತ್ತು ಆಕಾಶ ಇವೆರಡರ ಅಸ್ತಿತ್ವವೂ ನಾರಾಯಣನಿಂದಲೇ. ವಾಯು, ಮನಸ್ಸು ನಾರಾಯಣನಿಂದಲೇ ನಿರ್ದೇಶಿಸಲ್ಪಟ್ಟ ಗತಿಯಲ್ಲಿ ಮುನ್ನಡೆಯುತ್ತವೆ. ಅಹಂಕಾರ, ಬುದ್ಧಿ, ಎರಡಕ್ಕೂ ಪ್ರಚೋದಕ ಶ್ರೀಮನ್‌ನಾರಾಯಣನೇ. ಭೂತಕಾಲ, ಭವಿಷತ್‌ಕಾಲ, ವರ್ತಮಾನಕಾಲ, ಈ ಮೂರುಕಾಲಗಳೂ ಕಾಲನಾಮಕನಾದ ನಾರಾಯಣನಿಂದಲೇ ಪುನಃ ಪುನಃ ಆವೃತ್ತವಾಗುತ್ತವೆ. ಸ್ಥೂಲ, ಸೂಕ್ಷ್ಮರೂಪವಾದ ಜೀವ ಗಣಗಳೆಲ್ಲ ನಾರಾಯಣ ನಿಂದ ಪ್ರೇರಿತವಾಗಿಯೇ ತಮ್ಮ ವ್ಯಾಪಾರ ನಿರ್ವಹಿಸುತ್ತವೆ. ಶಬ್ದ ಮೊದಲಾದ ವಿಷಯಗಳು, ಶ್ರೋತ್ರ, ಚಕ್ಷುಸ್ಸು ಮೊದಲಾದ ಇಂದ್ರಿಯಗಳು, ಪ್ರಕೃತಿ, ಪುರುಷ ಇವೆಲ್ಲವೂ ನಾರಾಯಣನಿಂದ ಪ್ರೇರೇಪಿಸಲ್ಪಟ್ಟ ನಿರ್ದಿಷ್ಟ ಗತಿಯಲ್ಲಿ ಸಾಗುತ್ತವೆ. ಶ್ರೀಮನ್ ನಾರಾಯಣನು ನೀರು, ನೆಲ, ಪಾತಾಳ, ಸ್ವರ್ಗ, ಆಕಾಶ, ಬೆಟ್ಟ ಇವೆಲ್ಲವುಗಳನ್ನು ವ್ಯಾಪಿಸಿ ಇರುವನು. ಎಲ್ಲ ಪದಾರ್ಥಗಳು ಅವನ ನಿಯಂತ್ರಣದಲ್ಲಿವೆ. ಹೆಚ್ಚು ಹೇಳುವದರಿಂದ ಏನು? ಬ್ರಹ್ಮನಿಂದ ಆರಂಭಿಸಿ ಜಲಗತವಾದ ಅತಿಚಿಕ್ಕ ಕ್ರಿಮಿಯವರೆಗಿನ ಸಮಗ್ರ ಜಗತ್ತೆಲ್ಲವೂ ನಾರಾಯಣನ ವಶವರ್ತಿಯಾಗಿರುವದು. ವಿಪ್ರೋತ್ತಮರೇ, ಈ ಜಗತ್ತಿನಲ್ಲಿ ನಾರಾಯಣ ಇಲ್ಲದ ಸ್ಥಳ ಇಲ್ಲ. ಕಣ್ಣಿಗೆ ಕಾಣುವ ಹಾಗೂ ಕಾಣದಿರುವ ಸೂಕ್ಷ್ಮ ಹಾಗೂ ಸ್ಥೂಲ ಪ್ರಪಂಚವನ್ನೆಲ್ಲ ಆ ಪರಮಾತ್ಮನು ವ್ಯಾಪಿಸಿ ಇರುವನು.

ಜಲವು ವಿಷ್ಣುವಿಗೆ ವಾಸಸ್ಥಾನ. ಜಗದೊಡೆಯನಾದ ಆ ಭಗವಂತನು ಜಲಕ್ಕೂ ಒಡೆಯ. ಪಾಪನಿವಾರಕನಾದ ದೇವೇಶನ ಸನ್ನಿಧಾನವನ್ನು ಜಲದಲ್ಲಿ ಪ್ರತಿನಿತ್ಯ

ಚಿಂತಿಸಬೇಕು. ವಿಶೇಷವಾಗಿ ಸ್ನಾನಕಾಲದಲ್ಲಿ ಜಲಾಂತರ್ಗತನಾದ ನಾರಾಯಣನನ್ನು ಧ್ಯಾನಮಾಡಿ ಸ್ನಾನಮಾಡಬೇಕು. ಅಂಗನ್ಯಾಸ, ಕರನ್ಯಾಸಗಳನ್ನು ಮಂತ್ರಜಪಕ್ಕಿಂತ ಮೊದಲು ಮಾಡಲೇಬೇಕು. ''ಓಂ ನಮೋ ನಾರಾಯಣಾಯ'' ಎಂಬ ಮಂತ್ರದಲ್ಲಿನ 'ಓಂ' ಕಾರ, 'ನ' ಕಾರಗಳಿಂದ ಕೈ ಮತ್ತು ಅಂಗುಷ್ಠ ಇವೆರಡರಲ್ಲಿ ನ್ಯಾಸಮಾಡಬೇಕು. ಉಳಿದ ಅಕ್ಷರಗಳಿಂದ ತರ್ಜನಿಯಿಂದ ಆರಂಭಿಸಿ, ಕರತಲದ ವರೆಗಿನ ನ್ಯಾಸವನ್ನು ಮಾಡಬೇಕು. ಅನಂತರ ಓಂಕಾರವನ್ನು ಎಡಗಾಲಿನಲ್ಲಿ 'ನ' ಕಾರವನ್ನು ಬಲಗಾಲಿನಲ್ಲಿಯೂ ನ್ಯಾಸ ಮಾಡಬೇಕು. 'ಮೋ' ಕಾರವನ್ನು ಸೊಂಟದ ಎಡಭಾಗದಲ್ಲಿ 'ನಾ' ಕಾರವನ್ನು ಸೊಂಟದ ಬಲಭಾಗದಲ್ಲಿ 'ರಾ'ಕಾರವನ್ನು ನಾಭಿಯಲ್ಲಿ 'ಯ' ಕಾರವನ್ನು ಎಡತೋಳಿನಲ್ಲಿ 'ಣಾ' ಕಾರವನ್ನು ಬಲತೋಳಿನಲ್ಲಿ 'ಯ'ಕಾರವನ್ನು ಶಿರಸ್ಸಿನಲ್ಲಿ ಹೀಗೆ ಅಷ್ಟಾಕ್ಷರಗಳಿಂದ ಆಯಾ ಅಂಗಾಂಗಗಳಲ್ಲಿ ನ್ಯಾಸ ಮಾಡಬೇಕು. ಅಧೋಭಾಗ, ಊರ್ಧ್ವಭಾಗ, ಹೃದಯ, ಪಾರ್ಶ್ವಗಳು, ಹಿಂಭಾಗ, ಮುಂಭಾಗಗಳಲ್ಲಿ ಶ್ರೀಮನ್ ನಾರಾಯಣನನ್ನು ಏಕಚಿತ್ತದಿಂದ ಧ್ಯಾನಿಸಿ ಅನಂತರ ಕವಚ ಮಂತ್ರವನ್ನು ಜಪಿಸಬೇಕು. ತನ್ನನ್ನು ರಕ್ಷಿಸಲು ಭಗವಂತನನ್ನು ಹೀಗೆ ಪ್ರಾರ್ಥಿಸಬೇಕು.

**ಪೂರ್ವೇ ಮಾಂ ಪಾತು ಗೋವಿಂದೋ ದಕ್ಷಿಣೇ ಮಧುಸೂದನಃ।**
**ಪಶ್ಚಿಮೇ ಶ್ರೀಧರೋ ದೇವಃ ಕೇಶವಸ್ತು ತಥೋತ್ತರೇ ॥**

ಪೂರ್ವದಿಕ್ಕಿನಲ್ಲಿರುವ ಗೋವಿಂದನು ನನ್ನನ್ನು ರಕ್ಷಿಸಲಿ. ದಕ್ಷಿಣ ದಿಕ್ಕಿನಲ್ಲಿ ಸನ್ನಿಹಿತ ನಾದ ಮಧುಸೂಧನನು ನನ್ನನ್ನು ಕಾಪಾಪಾಡಲಿ. ಪಶ್ಚಿಮ ದಿಕ್ಕಿನಲ್ಲಿರುವ ಶ್ರೀಧರನು, ಉತ್ತರದಿಕ್ಕಿನಲ್ಲಿರುವ ಕೇಶವನು ನನ್ನ ರಕ್ಷಣೆಮಾಡಲಿ.

**ಪಾತು ವಿಷ್ಣುಸ್ತಥಾಗ್ನೇ ಯೇ ನೈಋತ್ಯೇ ಮಾಧವೋವ್ಯಯಃ।**
**ವಾಯವ್ಯೇಽತು ಹೃಷೀಕೇಶಸ್ತಥೇ ಪಾದೇ ಚ ವಾಮನಃ ॥**

ಆಗ್ನೇಯ ದಿಕ್ಕಿನಲ್ಲಿರುವ ಶ್ರೀವಿಷ್ಣುವು, ನೈರುತ್ಯದಲ್ಲಿರುವ ಮಾಧವನು, ವಾಯವ್ಯ ದಿಕ್ಕಿನಲ್ಲಿರುವ ಹೃಷಿಕೇಶನು, ಈಶಾನ್ಯ ದಿಕ್ಕಿನಲ್ಲಿರುವ ವಾಮನನು ನನ್ನನ್ನು ರಕ್ಷಿಸಲಿ.

**ಭೂತಲೇ ಪಾತು ವಾರಾಹ ಸ್ತಥೋರ್ಧ್ವಂಚ ತ್ರಿವಿಕ್ರಮಃ ॥**

ಭೂಮಿಯಲ್ಲಿ ವರಾಹಮೂರ್ತಿಯು, ಆಕಾಶದಲ್ಲಿನ ತ್ರಿವಿಕ್ರಮದೇವನು ನನ್ನನ್ನು ರಕ್ಷಿಸಲಿ.

ಹೀಗೆ ಕವಚ ಮಂತ್ರವನ್ನು ಜಪಿಸಿ, ಅನಂತರ ಹೃದಯ ಕಮಲದಲ್ಲಿನ ಶಂಖ, ಚಕ್ರ ಗದಾಧಾರಿಯಾದ ಶ್ರೀಮನ್ ನಾರಾಯಣನನ್ನು ಧ್ಯಾನಮಾಡಬೇಕು. ಹೀಗೆ ಭಗವಂತನನ್ನು ಸುತ್ತಿಸಬೇಕು. ''ಸ್ವಾಮಿಯೇ, ಅಮೃತದ ಉತ್ಪತ್ತಿಸ್ಥಾನ ನೀನು. ದೇವತೆಗಳಿಗೆ ಕಾರಣ ಪುರಷ ನೀನು. ಜಲರಾಶಿಗೆ ಸ್ವಾಮಿ ನೀನೇ. ಇಂತಹ ಅದ್ಭುತ ಮಹಿಮೆಯುಳ್ಳ ತೀರ್ಥರಾಜನೇ ನಿನಗೆ ನನ್ನ ನಮಸ್ಕಾರಗಳು.''

ಹೀಗೆ ಮಂತ್ರಗಳನ್ನು ಉಚ್ಚರಿ ಶಾಸ್ತ್ರೋಕ್ತ ಪದ್ಧತಿಯಿಂದ ಸ್ನಾನಮಾಡಬೇಕು. ತೀರ್ಥಗಳಲ್ಲಿ ಸ್ನಾನಮಾಡುವಾಗ ಮಂತ್ರೋಚ್ಚರಣ ಮಾಡವುದನ್ನು ಮರೆಯಬಾರದು. ವೇದಮಂತ್ರಗಳಿಂದ ಮಾರ್ಜನಮಾಡಿಕೊಂಡು, ಸ್ವಲ್ಪ ಆಳವುಳ್ಳ ನೀರಿನೆಡೆ ಸಾಗಿ ಮೂರುಸಲ ಅಘಮರ್ಷಣಮಂತ್ರ ಜಪಿಸಬೇಕು. ಹೇಗೆ ಅಶ್ವಮೇಧಯಾಗವು ಪಾಪಗಳನ್ನು ಹೋಗಲಾಡಿಸುವದೋ ಅದರಂತೆ 'ಅಘಮರ್ಷಣ' ಸೂಕ್ತವು ಪಾಪನಾಶ ಮಾಡುವದು. ಹೀಗೆ ಮಂತ್ರ ಪುರಸ್ಸರವಾಗಿ ಸ್ನಾನಮಾಡಿ ಬಾಹ್ಯಶುದ್ಧಿ, ಅಂತಃಶುದ್ಧಿ

ಎರಡನ್ನೂ ಸಂಪಾದಿಸಿಕೊಂಡು, ನಂತರ ನೀರಿನಿಂದ ಹೊರಕ್ಕೆ ಬರಬೇಕು. ಶುಭ್ರವಾದ ವಸ್ತ್ರ ಧರಿಸಬೇಕು. ಆಚಮನ, ಪ್ರಾಣಾಯಾಮ ಮಾಡಿ ಸೂರ್ಯನಿಗೆ ಅರ್ಘ್ಯ ಸಮರ್ಪಿಸಿ, ಸಂಧ್ಯಾವಂದನ ಮಾಡಬೇಕು. ಗಾಯತ್ರೀಮಂತ್ರವನ್ನು ನೂರೆಂಟು ಬಾರಿ ಜಪಿಸಿ, 'ಸೌರಸೂಕ್ತ' ಹೇಳಬೇಕು. ಸೂರ್ಯನನ್ನು ಪ್ರದಕ್ಷಿಣೆ ಮಾಡಿ, ನಮಸ್ಕರಿಸಿ, ಪೂರ್ವದಿಕ್ಕಿಗೆ ಅಭಿಮುಖವಾಗಿ ಕುಳಿತು, ಬ್ರಹ್ಮಯಜ್ಞ ಮಾಡಿ ದೇವರ್ಷಿಪಿತೃಗಳಿಗೆ ತರ್ಪಣ ಕೊಡಬೇಕು. ಪಿತೃದೇವತೆಗಳಿಗೂ ತನ್ನ ಕುಲಕ್ಕೆ ಸಂಬಂಧಪಟ್ಟ ಪಿತೃಗಳಿಗೂ ಅವರವರ ಹೆಸರುಗೋತ್ರ ಉಚ್ಚರಿಸಿ, ಎಳ್ಳಿನ ಜೊತೆಗೆ ತರ್ಪಣ ನೀಡಬೇಕು. ದೇವತೆಗಳಿಗೆ ತರ್ಪಣ ನೀಡಿದ ನಂತರ, ಪಿತೃತರ್ಪಣಕ್ಕೆ ಅಧಿಕಾರ ಪ್ರಾಪ್ತವಾಗುವದು. ತರ್ಪಣದಲ್ಲಿ ಎರಡೂ ಕೈಗಳನ್ನೂ ಬಳಸಬಹುದು. ಶ್ರಾದ್ಧ ಮತ್ತು ಹೋಮ ಈ ಎರಡೂ ಕಾರ್ಯಗಲ್ಲಿ ಬಲಗೈಯಿಂದ ಮಾತ್ರ ಕಾರ್ಯಗಳನ್ನು ಮಾಡಬೇಕು. ತರ್ಪಣ ಕೊಡುವಾಗ ಎಡಗೈಯಿಂದ ಬಲಗೈ ಸ್ಪರ್ಶಿಸಿ ಬಲಗೈಯಿಂದ ತರ್ಪಣಕೊಡುತ್ತ ನಾಮಗೋತ್ರ ಉಚ್ಚಾರದೊಡನೆ 'ತೃಪ್ಯತಾಂ' ಎಂದು ತರ್ಪಣನೀಡಬೇಕು. ಶರೀರದಲ್ಲಿ ಎಳ್ಳನ್ನೂ ಇರಿಸಿ ತರ್ಪಣ ಮಾಡಬಾರದು. ಆಯವಗಳಲ್ಲಿ ಎಳ್ಳನ್ನಿರಿಸಿ ತರ್ಪಣ ಮಾಡಬಾರದು. ನೀರಿನಲ್ಲಿ ನಿಂತು ಭೂಮಿಯ ಮೇಲೆ ಜಲತರ್ಪಣ ಬಿಡಬಾರದು. ನೆಲದಮೇಲೆ ನಿಂತು ನೀರಿನಲ್ಲಿ ಪಿತೃತರ್ಪಣ ಬಿಡಬಾರದು. ಪಿತೃಗಳಿಗೆ ತರ್ಪಣ ನೀಡುವಾಗ ನೀರಿನಿಂದ ಹೊರಬಂದು ಪರಿಶುದ್ಧವಾದ ಸ್ಥಳದ ಮೇಲೆ ಕುಳಿತುಕೊಂಡು, ವಿಧಿಪೂರ್ವಕ ತರ್ಪಣ ನೀಡಬೇಕು. ತರ್ಪಣವನ್ನು ಭೂಮಿಯ ಮೇಲೆಯೇ ಬಿಡಬೇಕು. ನೀರಿನಲ್ಲಿ ಪಾತ್ರೆಗಳಲ್ಲಿ ಮತ್ತೊಂದು ಕೈಯಲ್ಲಿ, ತರ್ಪಣದ ಜಲವನ್ನು ವಿಸರ್ಜಿಸತಕ್ಕದ್ದಲ್ಲ.

ಪಿತೃಗಳು ಭೂಮಿಯಲ್ಲಿ ಜನಿಸಿ, ಭೂಮಿಯಲ್ಲಿ ಬೆಳೆದು ಕೊನೆಯವರೆಗೂ ಭೂಮಿಯಲ್ಲಿ ಜೀವಿಸಿ, ಕೊನೆಗೆ ಅಲ್ಲಿಯೇ ಮರಣಹೊಂದಿ ಪಿತೃಗಳೆನಿಸಿರುವರು. ಆದುದರಿಂದ ಪಿತೃಗಳ ಪ್ರೀತಿ ಸಂಪಾದಿಸಬಯಸುವವರು ಭೂಮಿಯ ಮೇಲೆಯೇ ಪಿತೃತರ್ಪಣ ಮಾಡಬೇಕು. ಅಗ್ರಸಹಿತವಾದ ದರ್ಭೆಗಳನ್ನು ನೆಲದಲ್ಲಿ ಹರಡಿ ಆಯಾಯ ಮಂತ್ರಗಳಿಂದ ಆಯಾಯ ದೇವತೆಗಳನ್ನು ಆವಾಹಿಸಬೇಕು. ಪೂರ್ವಾಗ್ರದಲ್ಲಿ ಹಾಸಿರುವ ದರ್ಭೆಗಳಲ್ಲಿ ದೇವತೆಗಳನ್ನು ಆವಾಹಿಸಬೇಕು. ಪಿತೃಗಳನ್ನು ಆವಾಹಿಸುವದು ದಕ್ಷಿಣಮುಖವಾದ ದರ್ಭೆಗಳಲ್ಲಿ.

## ವಿಷ್ಣುವಿನ ಪೂಜೆಯ ಕ್ರಮದ ವರ್ಣನೆ

**ಬ್ರಹ್ಮ**:- ಮುನಿಗಳೆ, ಪೂರ್ವೋಕ್ತ ಕ್ರಮದಲ್ಲಿ ದೇವ, ಪಿತೃ, ತರ್ಪಣಗಳನ್ನು ಮಾಡಿ ಆಚಮನ ಮಾಡಬೇಕು. ಅನಂತರ ಸಮುದ್ರದ ದಂಡೆಯ ಮೇಲೆ ಒಂದುಮೊಳ ಚದುರಳತೆಯಷ್ಟು ವಿಸ್ತಾರವುಳ್ಳ ಮಂಡಲವನ್ನು ರಚಿಸಬೇಕು. ಹೀಗೆ ವಿರಚಿತವಾದ ಮಂಡಲಕ್ಕೆ ನಾಲ್ಕು ಮೂಲೆಗಳು ಇರಬೇಕು, ನಾಲ್ಕು ದ್ವಾರಗಳು ಇರಬೇಕು. ಈ ಮಂಡಲದ ಮಧ್ಯದಲ್ಲಿ ಸುಂದರವಾದ ಎಂಟು ದಳದ ಕಮಲವನ್ನೂ, ಆ ಕಮಲದಲ್ಲಿ ಕರ್ಣಿಕೆಯನ್ನೂ ಬರೆಯಬೇಕು. ಹೀಗೆ ಮಂಡಲವನ್ನು ಬರೆದು ಆ ಮಂಡಲದೊಳಗೆ ಜನ್ಮ ನಾಶರಹಿತನಾದ ಶ್ರೀಮನ್ನಾರಾಯಣನ ಸನ್ನಿಧಾನವನ್ನು ಅಷ್ಟಾಕ್ಷರ ಮಂತ್ರ ಜಪಿಸುತ್ತ ಚಿಂತಿಸಬೇಕು.

ಶರೀರ ಶುದ್ಧಿಯ ಕ್ರಮ ಹೀಗಿದೆ. ಅರ್ಧಚಂದ್ರ ರೇಖೆಯಿಂದ ಕೂಡಿದ ಆಕಾರವನ್ನು ಹೃದಯದಲ್ಲಿ ಧ್ಯಾನಿಸಬೇಕು. ಪ್ರಜ್ವಲಿಸುತ್ತಿರುವ ಹಾಗೂ ಪಾಪನಾಶಕವಾದ ತ್ರಿಶೂಲವನ್ನು

ಹೃದಯದಲ್ಲಿ ಧ್ಯಾನಿಸಿದ ನಂತರ ಚಂದ್ರಮಂಡಲ ಮಧ್ಯವರ್ತಿಯಾದ ಶ್ವೇತವರ್ಣದ ಅಮೃತವನ್ನು ಸ್ರವಿಸುವ ರಾಕಾರವನ್ನು ಶಿರೋಭಾಗದಲ್ಲಿ ಧ್ಯಾನಗೈಯಬೇಕು. ಈ ಕ್ರಮದಿಂದ ಧ್ಯಾನ ಮಾಡಿದವ ಪಾಪಲೇಪರಹಿತನಾಗಿ ಪರಿಶುದ್ಧನಾಗುವನು.

ಹೀಗೆ ಶುದ್ಧಿಯನ್ನು ಸಂಪಾದಿಸಿದ ನಂತರ ಅಷ್ಟಾಕ್ಷರ ಮಂತ್ರದಿಂದ ಅಂಗನ್ಯಾಸ ಕರನ್ಯಾಸಗಳನ್ನು ಮಾಡಿಕೊಳ್ಳಬೇಕು. ಎಡಗಾಲಿನಿಂದ ಕ್ರಮಕ್ರಮವಾಗಿ ನ್ಯಾಸವು ಮುಂದು ವರೆಯಬೇಕು. ಶ್ರೀವಿಷ್ಣುವಿನ ಸಮ್ಮುಖದಲ್ಲಿ ಪಠಿಸುವ ಪಂಚಾಂಗ ಮಂತ್ರದಿಂದ, ಚತುರ್ವ್ಯೂಹ ಮಂತ್ರದಿಂದ ನ್ಯಾಸ ಮಾಡಬೇಕು. ಮೂಲಮಂತ್ರದಿಂದ ಕರಶುದ್ಧಿಯನ್ನು ಸಂಪಾದಿಸಬೇಕು. ಮೂಲಮಂತ್ರದ ಒಂದೊಂದು ಅಕ್ಷರಗಳಿಂದ ಆಯಾಯ ಬೆರಳುಗಳಲ್ಲಿ ನ್ಯಾಸ ಮಾಡಬೇಕು.

ಎಡಹೆಜ್ಜೆಯಲ್ಲಿ ಓಂಕಾರವನ್ನು ನ್ಯಾಸ ಮಾಡಬೇಕು. ಓಂಕಾರವು ಪೃಥ್ವೀಬೀಜ ಇದರ ವರ್ಣ ಬಿಳಿ. ಬಲಹೆಜ್ಜೆಯಲ್ಲಿ ನಕಾರವನ್ನು ನ್ಯಾಸಮಾಡಬೇಕು. ಈ ನಕಾರವು ಕೃಷ್ಣವರ್ಣದ್ದೂ ಹಾಗೂ ಶಂಭುವಿನ ಬೀಜವೂ ಆಗಿರುವದು. ಎಡಸೊಂಟದಲ್ಲಿ ಮೋಕಾರವನ್ನೂ ನ್ಯಾಸಮಾಡಬೇಕು. ಇದು ಕಾಲಬೀಜವು. ಶರೀರದ ದಕ್ಷಿಣಭಾಗದಲ್ಲಿ ನಾಕಾರವನ್ನು ನ್ಯಾಸಮಾಡಬೇಕು. ರಾಕಾರವು ತೇಜೋಬೀಜ ಎಡಭುಜದಲ್ಲಿ ಯಕಾರವನ್ನು ನ್ಯಾಸಗೊಳಿಸಬೇಕು. ಯಕಾರವು ವಾಯುಬೀಜವು. ಬಲಭುಜದಲ್ಲಿ ಣಾಕಾರವನ್ನು ನ್ಯಾಸ ಮಾಡಬೇಕು. ಣಾಕಾರವು ಸರ್ವಬೀಜವು. ಶಿರಸ್ಸಿನಲ್ಲಿ ಯಕಾರವನ್ನು ನ್ಯಾಸ ಮಾಡಬೇಕು. ಯಕಾರವು ಲೋಕಬೀಜವು.

**ಓಂ ವಿಷ್ಣವೇ ನಮಃ ಶಿರಃ ।**
**ಓಂ ಜ್ವಲನಾಯ ನಮಃ ಶಿಖಾ ।**
**ಓಂ ವಿಷ್ಣವೇ ನಮಃ ಕವಚಂ ।**
**ಓಂ ವಿಷ್ಣವೇ ನಮಃ ಸ್ಫುರಣಂ ದಿಶೋಬಂಧಾಯ ।**
**ಓಂ ಹುಂ ಷಡಸ್ತ್ರಂ ।**

ಈ ಐದು ಮಂತ್ರಗಳಿಗೆ ವಿಷ್ಣುವಿನ ಪಂಚಾಂಗಮಂತ್ರಗಳು ಎನ್ನುವರು.

**ಓಂ ಶಿರಸಿ ಶುಕ್ಲೋ ವಾಸುದೇವ ಇತಿ ।**
**ಓಂ ಆಂ ಲಲಾಟೇ ರಕ್ತಃ ಸಂಕರ್ಷಣೋ ಗರುತ್ಮಾವಹ್ನಿಸ್ತೇಜ ಆದಿತ್ಯ ಇತಿ**
**ಓಂ ಆಂ ಗ್ರೀವಾಯಾಂ ಪೀತಃ ಪ್ರದ್ಯುಮ್ನೋ ವಾಯು ಮೇಘ ಇತಿ**
**ಓಂ ಆಂ ಕೃಷ್ಣೋಽನಿರುದ್ಧಃ ಸರ್ವಶಕ್ತಿ ಸಮನ್ವಿತಃ ಇತಿ**

ಈ ನಾಲ್ಕು ಮಂತ್ರಗಳನ್ನು ಚತುರ್ವ್ಯೂಹ ಮಂತ್ರಗಳು ಎನ್ನುವರು. ಈ ಚತುರ್ವ್ಯೂಹ ಮಂತ್ರಗಳಿಂದ ತನ್ನಲ್ಲಿ ವಿನ್ಯಾಸ ಮಾಡಿಕೊಳ್ಳಬೇಕು.

ತನ್ನ ಸುತ್ತಮುತ್ತ ಎಲ್ಲೆಡೆ ವಿಷ್ಣು ಇರುವನು ಎಂಬುದಾಗಿ ಚಿಂತಿಸಬೇಕು. ನನ್ನ ಎದುರು ಭಾಗದಲ್ಲಿ ಗೋವಿಂದ, ಎಡಭಾಗದಲ್ಲಿ ಮಧುಸೂದನ, ಮೇಲುಭಾಗದಲ್ಲಿ ವೈಕುಂಠ, ಭೂಮಿಯಲ್ಲಿ ವಾರಾಹ, ವಿದಿಕ್ಕುಗಳಲ್ಲಿ ಮಾಧವ- ಹೀಗೆ ಸರ್ವದೇಶಗಳಲ್ಲೂ ಭಗವಂತ ನನ್ನನ್ನು ರಕ್ಷಿಸುತ್ತಿರುವನು ಎಂದು ಭಾವಿಸಬೇಕು. ಜಾಗ್ರದವಸ್ಥೆಯಲ್ಲಿ, ಚಲಿಸುತ್ತಿರುವಾಗ, ತಟಸ್ಥನಾಗಿರುವಾಗ, ಸುಪ್ತಾವಸ್ಥೆಯಲ್ಲಿರುವಾಗ, ಸಕಲ ಅವಸ್ಥೆ

ಗಳಲ್ಲಿಯೂ ನೃಸಿಂಹಸ್ವಾಮಿಯು ನನ್ನನ್ನು ಕಾಪಾಡುತ್ತಿರುವನು ಎಂದು ಭಗವಂತನನ್ನು ರಕ್ಷಕನಾಗಿ, ಸ್ವಾಮಿಯಾಗಿ ಧ್ಯಾನಿಸಬೇಕು. ಬೀಜಮಂತ್ರಗಳಿಂದ ತನ್ನಲ್ಲಿ ವಿನ್ಯಾಸ ಮಾಡಿದಂತೆ ಭಗವಂತನಲ್ಲಿಯೂ ಅಂಗನ್ಯಾಸ, ಕರನ್ಯಾಸಗಳನ್ನು ಆಯಾಯ ಬೀಜಮಂತ್ರ ಸಹಿತವಾದ ಮಂತ್ರಗಳಿಂದ ಮಾಡಬೇಕು. ಅನಂತರ ಓಂ ಷಟ್ ಎಂಬ ಮಂತ್ರದಿಂದ ಪ್ರೋಕ್ಷಣ ಮಾಡಬೇಕು. ಇದರಿಂದ ಸಮಸ್ತ ವಿಘ್ನಗಳು ನಾಶವಾಗಿ ಸನ್ಮಂಗಳ ಉಂಟಾಗುವದು. ಚಂದ್ರ, ಸೂರ್ಯ ಹಾಗೂ ಅಗ್ನಿಗಳ ಮಂಡಲಗಳನ್ನು ಧ್ಯಾನ ಮಾಡಬೇಕು. ಪದ್ಮದ ಮಧ್ಯ ಭಾಗದಲ್ಲಿ ವಿಷ್ಣುಬೀಜ, ವಾಯುಬೀಜ, ಆಕಾಶಬೀಜ ಮುಂತಾದವನ್ನು ಬರೆಯಬೇಕು. ಅನಂತರ ಪುರಾಣಪುರುಷನಾದ ದೇವನನ್ನು ಕರ್ಣಿಕೆಯಲ್ಲಿ ಚಿಂತಿಸಬೇಕು. ಹೃದಯದಲ್ಲಿ ತೇಜೋಮಯವಾದ ಓಂಕಾರವನ್ನು ಧ್ಯಾನಿಸಬೇಕು. ನಂತರ ಎಂಟುದಳಗಳಲ್ಲಿ ಅಷ್ಟಾಕ್ಷರ ಮಂತ್ರವನ್ನು ಒಂದೊಂದು ಅಕ್ಷರದಂತೆ ಕ್ರಮವಾಗಿ ಚಿಂತಿಸಬೇಕು. ಎಂಟು ಅಕ್ಷರಗಳುಳ್ಳ ವಿಷ್ಣು ಮಂತ್ರವನ್ನು ಒಂದೊಂದು ಅಕ್ಷರವಾಗಿ, ಒಟ್ಟಾಗಿ ಉಚ್ಚರಿಸಿ ಪೂಜಿಸುವದು ಶ್ರೇಷ್ಠವಾದುದು. ಹನ್ನೆರಡು ಅಕ್ಷರಗಳುಳ್ಳ ಮಂತ್ರದಿಂದ ಭಗವಂತನನ್ನು ಅರ್ಚಿಸಬಹುದು.

ಹೃದಯಸ್ಥನಾದ ಭಗವಂತನನ್ನು ಹೀಗೆ ಧ್ಯಾನಿಸಿದ ನಂತರ ಹೊರಗೆ ಪದ್ಮ ಕರ್ಣಿಕೆಯಲ್ಲಿ ನ್ಯಾಸವನ್ನು ಮಾಡಬೇಕು. ನಾಲ್ಕು ಭುಜವುಳ್ಳ, ಕೋಟಿಸೂರ್ಯರ ಕಾಂತಿ ಯುಳ್ಳ, ಮಹಾಮಹಿಮೋಪೇತನಾದ ಅನಾದಿ ಪುರುಷನಾದ ಪುರುಷೋತ್ತಮ ದೇವನನ್ನು ಈ ರೀತಿ ಧ್ಯಾನ ಮಾಡಿ ಕೆಳಗಿನ ಮಂತ್ರದಿಂದ ಆವಾಹನೆ ಮಾಡಬೇಕು.

**ಮೀನರೂಪೋ ವರಾಹಶ್ಚ ನರಸಿಂಹೋಽಥ ವಾಮನಃ ।**
**ಆಯಾತು ದೇವೋ ವರದೋ ಮಮ ನಾರಾಯಣೋಽಗ್ರತಃ ॥**
**ಓಂ ನಮೋ ನಾರಾಯಣಾಯ ನಮಃ**

ಮೀನರೂಪಿಯಾದ, ವರಾಹ ಅವತಾರವನ್ನು ಎತ್ತಿದ, ನೃಸಿಂಹ ಮತ್ತು ವಾಮನ ಎಂಬ ರೂಪಗಳನ್ನು ಧರಿಸಿದ ಶ್ರೀಮನ್ ನಾರಾಯಣನು ನನ್ನ ವಿಷಯದಲ್ಲಿ ಪ್ರಸನ್ನನಾಗಿ ನನಗೆ ಪ್ರತ್ಯಕ್ಷ ದರ್ಶನ ನೀಡಲಿ-

ಎಂದು ಪ್ರಾರ್ಥಿಸಿ, ಪ್ರಾರ್ಥನೆಯ ಕೊನೆಗೆ ನಾರಾಯಣಾಷ್ಟಾಕ್ಷರ ಮಂತ್ರವನ್ನು ಮೇಲೆ ಹೇಳಿದಂತೆ ಪ್ರತಿ ಉಪಚಾರಗಳ ಅಂತ್ಯದಲ್ಲಿ ಪಠಿಸಬೇಕು.

ಇದಾದ ಬಳಿಕ ಸ್ಥಾಪನ ಮಂತ್ರಪೂರ್ವಕವಾಗಿ ಭಗವಂತನನ್ನು ಯೋಗ್ಯವಾದ ಆಸನದಲ್ಲಿ ಸ್ಥಾಪನ ಮಾಡಬೇಕು. ಸ್ಥಾಪನ ಮಂತ್ರ ಹೀಗಿದೆ :-

**ಕರ್ಣಿಕಾಯಾಂ ಸುಪೀಠೇಽತ್ರ ಪದ್ಮಕಲ್ಪಿತಮಾನಸಂ ।**
**ಸರ್ವತ್ವ ಹಿತಾರ್ಥಾಯ ತಿಷ್ಠ ತ್ವಂ ಮಧುಸೂದನ ॥**
**ಓಂ ನಮೋ ನಾರಾಯಣಾಯ ನಮಃ ॥**

ಮಧುನಾಮಕ ದೈತ್ಯನನ್ನು ಸಂಹರಿಸಿದ ಶ್ರೀಹರಿಯೇ, ಕೋಮಲವಾದ ಕಮಲ ಪತ್ರದಲ್ಲಿ ನಿನಗೆ ಆಸನ ಕಲ್ಪಿಸಿರುವೆ. ಜನಗಳೆಲ್ಲರ ಹಿತಕ್ಕಾಗಿ ನೀನು ಈ ಆಸನವನ್ನು ಸಮಲಂಕರಿಸು.

ಬಳಿಕ ಅರ್ಘ್ಯ, ಪಾದ್ಯ, ಮಧುಪರ್ಕ, ಆಚಮನೀಯ, ಸ್ನಾನ, ವಸ್ತ್ರ, ಗಂಧ, ಯಜ್ಞೋಪವೀತ ಮುಂತಾದವನ್ನು ಆಯಾ ಮಂತ್ರಗಳನ್ನು ಉಚ್ಚರಿಸುತ್ತ ಒಂದೊಂದಾಗಿ

ಸಮರ್ಪಿಸಿ ಅಲಂಕಾರ ಮಾಡಬೇಕು. (ಈ ಮಂತ್ರಗಳನ್ನು ಒಂದೊಂದಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಕೆಳಗೆ ಕೊಟ್ಟಿದೆ). ನಂತರ ಧೂಪ, ದೀಪಗಳನ್ನು ಮಂತ್ರ ಪುರಸ್ಸರವಾಗಿ ಸಮರ್ಪಿಸಬೇಕು. ಕೊನೆಗೆ ನೈವೇದ್ಯ ಸಮರ್ಪಿಸಬೇಕು. ಅರ್ಘ್ಯ ಮೊದಲಾದವುಗಳನ್ನು ನಿವೇದಿಸುವಾಗ ಉಚ್ಚರಿಸಬೇಕಾದ ಮಂತ್ರಗಳು ಹೀಗಿವೆ.

ಅರ್ಘ್ಯಮಂತ್ರ :

ಓಂ ತ್ರೈಲೋಕ್ಯಪತೀನಾಂ ಪತಯೇ ದೇವದೇವಾಯ
ಹೃಷೀಕೇಶಾಯ ವಿಷ್ಣವೇ ನಮಃ

ಪಾದ್ಯಮಂತ್ರ :

ಓಂ ಪಾದ್ಯಂ ಪಾದಯೋರ್ದೇವ ಪದ್ಮನಾಭ ಸನಾತನ ।
ವಿಷ್ಣೋ ಕಮಲಪತ್ರಾಕ್ಷ ಗೃಹಾಣ ಮಧುಸೂದನ ॥

ಮಧುಪರ್ಕಮಂತ್ರ :

ಮಧುಪರ್ಕಂ ಮಹಾದೇವ ಬ್ರಹ್ಮಾದ್ಯೈಃ ಕಲ್ಪಿತಂ ತವ ।
ಮಯಾ ನಿವೇದಿತಂ ಭಕ್ತ್ಯಾ ಗೃಹಾಣ ಪುರುಷೋತ್ತಮ ॥

ಆಚಮನಮಂತ್ರ :

ಮಂದಾಕಿನ್ಯಾಃ ಸಿತಂ ವಾರಿ ಸರ್ವಪಾಪಹರಂ ಶಿವಂ ।
ಗೃಹಾಣಾಚಮನೀಯಂ ತ್ವಂ ಮಯಾ ಭಕ್ತ್ಯಾ ನಿವೇದಿತಮ್ ॥

ಸ್ನಾನಮಂತ್ರ :

ತ್ವಮಾಪಃ ಪೃಥಿವೀಚೈವ ಜ್ಯೋತಿಸ್ತ್ವಂ ವಾಯುರೇವ ಚ ।
ಲೋಕೇಶ ವೃತ್ತಿಮಾತ್ರೇಣ ವಾರಿಣಾ ಸ್ನಾಪಯಾಮ್ಯಹಮ್ ॥

ವಸ್ತ್ರಮಂತ್ರ :

ದೇವತತ್ವಸಮಾಯುಕ್ತ ಯಜ್ಞವರ್ಣಸಮನ್ವಿತ ।
ಸ್ವರ್ಣವರ್ಣಪ್ರಭೇದೇವ ವಾಸಸೀ ತವಕೇಶವ ॥

ವಿಲೇಪನಮಂತ್ರ :

ಶರೀರಂ ತೇನ ಜಾನಾಮಿ ಚೇಷ್ಟಾಂ ಚೈವ ಕೇಶವ ।
ಮಯಾ ನಿವೇದಿತೋ ಗಂಧಃ ಪ್ರತಿಗೃಹ್ಯ ವಿಲಿಪ್ಯತಾಮ್ ॥

ಯಜ್ಞೋಪವೀತ ಮಂತ್ರ :

ಋಗ್ಯಜುಃಸಾಮಮಂತ್ರೇಣ ತ್ರಿವೃತಂ ಪದ್ಮಯೋನಿನಾ ।
ಸಾವಿತ್ರೀಗ್ರಂಥ ಸಂಯುಕ್ತಮುಪವೀತಂ ತವಾರ್ಪಯೇ ॥

ಅಲಂಕಾರಮಂತ್ರ :

ದಿವ್ಯರತ್ನಸಮಾಯುಕ್ತ ವಹ್ನಿಭಾನುಸಮಪ್ರಭ ।
ಗಾತ್ರಾಣಿ ತವ ಶೋಭಂತು ಸಾಲಂಕಾರಾಣಿ ಮಾಧವ ॥

**ಧೂಪಮಂತ್ರ :**

**ವನಸ್ಪತಿರಸೋ ದಿವ್ಯೋ ಗಂಧಾಢ್ಯಃ ಸುರಭಿಶ್ಚ ತೇ ।**
**ಮಯಾ ನಿವೇದಿತೋ ಭಕ್ತ್ಯಾ ಧೂಪೋಽಯಂ ಪ್ರತಿಗೃಹ್ಯತಾಮ್ ॥**

**ದೀಪಮಂತ್ರ :**

**ಸೂರ್ಯಚಂದ್ರಸಮೋ ಜ್ಯೋತಿರ್ವಿದ್ಯುದಗ್ನ್ಯೋಸ್ತಥೈವ ಚ ।**
**ತ್ವಮೇವ ಜ್ಯೋತಿಷಾಂ ದೇವ ದೀಪೋಽಯಂ ಪ್ರತಿಗೃಹ್ಯತಾಮ್ ॥**

ಹೀಗೆ ಎಲ್ಲ ಮಂತ್ರಗಳನ್ನು ಪಠಿಸುತ್ತ ದೀಪದವರೆಗೆ ಸಕಲ ಉಪಚಾರಗಳನ್ನು ಸಮರ್ಪಿಸಿ ನಂತರ ನೈವೇದ್ಯವನ್ನು ಅರ್ಪಿಸಬೇಕು. ನೈವೇದ್ಯವನ್ನು ಭಗವಂತನಿಗೆ ನಿವೇದಿಸುವಾಗ ಈ ಕೆಳಗಿನಂತೆ ಮಂತ್ರ ಹೇಳಬೇಕು.

**ಅನ್ನಂ ಚತುರ್ವಿಧಂ ಚೈವ ರಸೈಃ ಷಡ್ಭಿಃ ಸಮನ್ವಿತಮ್ ।**
**ಮಯಾ ನಿವೇದಿತಂ ಭಕ್ತ್ಯಾ ನೈವೇದ್ಯಂ ತವ ಕೇಶವ ॥**

ಕೇಶವನೆ, ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಎಂಬ ನಾಕು ಬಗೆಯ ಅನ್ನಗಳನ್ನು ಸಿದ್ಧಗೊಳಿಸಿ ಇಟ್ಟಿರುವೆ. ಮಧುರ, ಆಮ್ಲ, ಲವಣ, ಕಟು, ಕಷಾಯ, ತಿಕ್ತ ಎಂಬ ಷಡ್ರಸಗಳಿಂದ ಇದು ಯುಕ್ತವಾಗಿದೆ. ಇಂತಹ ನೈವೇದ್ಯವನ್ನು ಭಕ್ತಿಯಿಂದ ನಿನಗೆ ನಿವೇದಿಸಿರುವೆ. ನೀನು ಸ್ವೀಕರಿಸು.

ಎಂದು ಕೈ ಮುಗಿದು ಪ್ರಾರ್ಥಿಸಿ 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರಿ ಯಿಂದ ಭಗವಂತನನ್ನು ಧ್ಯಾನಿಸಬೇಕು. ಮೇಲೆ ಹೇಳಿದ ಅರ್ಘ್ಯದಿಂದ ಆರಂಭಿಸಿ ನೈವೇದ್ಯದವರೆಗಿನ ಎಲ್ಲ ಮಂತ್ರಗಳ ಕೊನೆಯಲ್ಲೂ ''ಓಂ ನಮೋ ನಾರಾಯಣಾಯ'' ಎಂಬ ಮಂತ್ರವನ್ನು ಬಿಡದೇ ಉಚ್ಚರಿಸಬೇಕು.

ಮಂಡಲದ ಪೂರ್ವದಳದಲ್ಲಿ ವಾಸುದೇವನನ್ನು, ದಕ್ಷಿಣದಳದಲ್ಲಿ ಸಂಕರ್ಷಣ ನನ್ನು, ಪಶ್ಚಿಮದಲ್ಲಿ ಪ್ರದ್ಯುಮ್ನನನ್ನು ಉತ್ತರದಲ್ಲಿ ಅನಿರುದ್ಧನನ್ನು, ಆಗ್ನೇಯ ಭಾಗದಲ್ಲಿ ವರಾಹಸ್ವಾಮಿಯನ್ನು, ನೈಋತ್ಯ ಭಾಗದಲ್ಲಿ ನರಸಿಂಹನನ್ನು, ವಾಯವ್ಯದಲ್ಲಿ ಮಾಧವನನ್ನು, ಈಶಾನ್ಯದಲ್ಲಿ ತ್ರಿವಿಕ್ರಮನನ್ನು ಸ್ಥಾಪನೆಗೈದು ಪೂಜಿಸಬೇಕು. ಅಷ್ಟಾಕ್ಷರಮಂತ್ರದ ಸ್ವರೂಪನಾದ ಶ್ರೀಮನ್ನಾರಾಯಣನ ಪುರೋಭಾಗದಲ್ಲಿ ಗರುಡನನ್ನೂ, ವಾಮಭಾಗದಲ್ಲಿ ಚಕ್ರವನ್ನೂ, ಬಲಭಾಗದಲ್ಲಿ ಶಂಖವನ್ನೂ ಸ್ಥಾಪಿಸಬೇಕು. ದಕ್ಷಿಣ ಭಾಗದಲ್ಲಿ ಗದೆಯನ್ನು, ಎಡಭಾಗದಲ್ಲಿ ಶಾರ್ಙ್ಗ ಧನುಸ್ಸನ್ನು ಸ್ಥಾಪಿಸಬೇಕು. ದೇವರ ಮುಂದೆ ತುಳಸೀಸರ ಕೌಸ್ತುಭಮಣಿಗಳನ್ನು ಸ್ಥಾಪಿಸಬೇಕು. ಪೂರ್ವ ಮೊದಲಾದ ನಾಕು ದಿಕ್ಕುಗಳಲ್ಲಿ ಹೃದಯ ಮೊದಲಾದ ಅಂಗಗಳ ನ್ಯಾಸಮಾಡಬೇಕು. ಭಗವಂತನ ಅಸ್ತ್ರವನ್ನು ವಿದಿಕ್ಕುಗಳಲ್ಲಿ ನ್ಯಾಸಮಾಡಬೇಕು. ಅಷ್ಟದಿಕ್ಪಾಲಕರು ಎನಿಸಿದ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ್ಯ- ಇವರನ್ನು ಅವರವರಿಗೆ ಉಚಿತವಾದ ಸ್ಥಳಗಳಿಗೆ ತಂತ್ರಮಂತ್ರಗಳಿಂದ ಪೂಜೆಗೈಯಬೇಕು. ಬ್ರಹ್ಮಸ್ಥಾನದಲ್ಲಿ ಬ್ರಹ್ಮದೇವನನ್ನು ಅರ್ಚಿಸಬೇಕು. ಓಂ ನಮೋ ನಾರಾಯಣಾಯ ಎಂಬ ಮಂತ್ರದಿಂದ ಗಂಧ, ಪುಷ್ಪ, ತುಳಸೀ ಪತ್ರ ಮುಂತಾದವುಗಳನ್ನು ಭಕ್ತಿಪೂರ್ವಕವಾಗಿ ಅರ್ಪಿಸಬೇಕು. ಮುದ್ರೆಗಳನ್ನು ತೋರಿಸಬೇಕು. ಇಪ್ಪತ್ತೆಂಟು ಅಥವಾ

ನೂರೆಂಟು ಜಪಗಳನ್ನು ಮಾಡಬೇಕು. ಕೊನೇಪಕ್ಷ ಹತ್ತನ್ನಾದರೂ ಮಾಡಲೇಬೇಕು. ಅವಕಾಶವಿದ್ದರೆ ಹೆಚ್ಚು ಜಪಗಳನ್ನು ಮಾಡಬೇಕು. ವಿಷ್ಣುಪೂಜೆಯ ಸಂದರ್ಭದಲ್ಲಿ ಭಗವಂತನ ಸಮ್ಮುಖದಲ್ಲಿ ಪದ್ಮ, ಶಂಖ, ಶ್ರೀವತ್ಸ, ಗದಾ, ಗರುಡ, ಚಕ್ರ, ಖಡ್ಗ, ಶಾರ್ಙ್ಗ ಧನಸ್ಸು ಈ ಎಂಟು ಮುದ್ರೆಗಳನ್ನು ತೋರಿಸತಕ್ಕದ್ದು.

ಹೀಗೆ ಶಾಸ್ತ್ರೋಕ್ತವಾಗಿ ಪೂಜೆಯನ್ನು ಪೂರೈಸಿದ ನಂತರ ವಿಸರ್ಜನಮಾಡಬೇಕು. ವಿಸರ್ಜಿಸುವಾಗ ಈ ಕೆಳಗಿನ ಮಂತ್ರವನ್ನು ಹೇಳಬೇಕು.

**ಗಚ್ಛಗಚ್ಛಪರಂಸ್ಥಾನಂ ಪುರಾಣ ಪುರುಷೋತ್ತಮ ।**
**ಯತ್ರ ಬ್ರಹ್ಮಾದಯೋ ದೇವಾ ವಿಂದಂತಿ ಪರಮಂ ಪದಮ್ ॥**

ಪುರಾಣಪುರುಷ ಹೇ ಶ್ರೀಹರಿ, ನಿನ್ನ ದಿವ್ಯಸ್ಥಾನಕ್ಕೆ ಮರಳು. ನೀನಿರುವ ಯಾವ ಪರಮಪದವನ್ನು ಬ್ರಹ್ಮಾದಿದೇವತೆಗಳೂ ಸೇವಿಸುವರೋ ಅಂಥ ನಿನ್ನ ಶ್ರೇಷ್ಠ ಲೋಕಕ್ಕೆ ನಿರ್ಗಮಿಸು. ಶ್ರೀಹರಿಯನ್ನು ಯಾವ ಸಂದರ್ಭದಲ್ಲೂ ಅರ್ಚಿಸಬಹುದು.

## ಸಮುದ್ರಸ್ನಾನ ಮಾಹಾತ್ಮ್ಯ ವರ್ಣನೆ

**ಬ್ರಹ್ಮ:-** ನಾರದ, ಪುರುಷೋತ್ತಮನಾದ ಭಗವಂತನನ್ನು ಶಾಸ್ತ್ರೋಕ್ತರೀತಿಯಿಂದ ಅರ್ಚಿಸಿ, ಪೂಜಿಸಿ, ಅನಂತರ ಸಮುದ್ರವನ್ನು ಪ್ರಾರ್ಥಿಸಬೇಕು. ನಾರಾಯಣನ ಪ್ರೀತಿಗೆ ಪಾತ್ರನಾದ ಸಮುದ್ರರಾಜನೆ, ಪ್ರಾಣಿಗಳೆಲ್ಲರ ಪ್ರಾಣ ಸ್ವರೂಪ ನೀನು. ಪ್ರಾಣಿಗಳೆಲ್ಲರ ಪ್ರಾಣಧಾರಣ ನಿನ್ನಿಂದ. ಪ್ರಾಣಿಗಳ ಜನನ ನಿನ್ನಿಂದ. ತೀರ್ಥಗಳಲ್ಲಿ ಗರಿಷ್ಠ ನೀನು. ಅಂತೆಯೇ ನಿನಗೆ ತೀರ್ಥರಾಜ ಎಂದು ಹೆಸರು. ನಿನಗೆ ವಂದನೆಗಳು. ನನ್ನನ್ನು ರಕ್ಷಿಸು. ಹೀಗೆ ಸಮುದ್ರವನ್ನು ಪ್ರಾರ್ಥಿಸಿ, ಸಮುದ್ರ ಸ್ನಾನ ಮಾಡಿ, ಸಮುದ್ರದಡದಲ್ಲಿ ಪ್ರತಿಷ್ಠಾಪಿತರಾದ ಶ್ರೀಮನ್ ನಾರಾಯಣ, ಬಲರಾಮ, ಕೃಷ್ಣ, ಸುಭದ್ರೆ ಇವರನ್ನು ಅರ್ಚಿಸಿ, ಕೊನೆಗೆ ಸಮುದ್ರವನ್ನೂ ಅರ್ಚಿಸಬೇಕು. ಹೀಗೆ ಕ್ರಮವಾಗಿ ಇವರೆಲ್ಲರ ಪೂಜೆಗೈದವ ಮೂರು ಅಶ್ವಮೇಧಯಾಗದಿಂದ ಪ್ರಾಪ್ತವಾಗುವ ಫಲದಷ್ಟು ಫಲವನ್ನು ಪಡೆಯುವನು. ಈ ಪುಣ್ಯಭಾಜನನು ಪಾಪಗಳೆಲ್ಲವನ್ನು ಕಳೆದುಕೊಂಡು ಇಹದಲ್ಲಿ ಸುಖ, ಪರದಲ್ಲಿ ದಿವ್ಯಸುಖ ಪಡೆದು ಅಂತ್ಯದಲ್ಲಿ ವಿಷ್ಣುಲೋಕ ಪಡೆಯುತ್ತಾನೆ. ಅವನ ಈ ಪುಣ್ಯಕಾರ್ಯದಿಂದ ಅವನ ಕುಲದ ಇಪ್ಪತ್ತೊಂದು ಪಿತೃಗಳು ಉದ್ಧರಿಸಲ್ಪಡುವರು. ವಿಷ್ಣುಲೋಕದಲ್ಲಿ ಮುಪ್ಪು, ಮರಣಗಳಿಲ್ಲದೆ ಒಂದು ಕಲ್ಪದ ವರೆಗೆ ಅಪ್ಸರೆಯರೊಡನೆ ವಿಹರಿಸಿ, ಭೋಗಗಳನ್ನು ಅನುಭವಿಸುವನು. ಪುಣ್ಯಗತಿಸಿದ ನಂತರ ಭೂಲೋಕದಲ್ಲಿ ಜನಿಸಿ, ಉತ್ತಮ ಪರಿಸರದಲ್ಲಿ ಮೋಕ್ಷಕ್ಕೆ ಬೇಕಾದ ಸಾಧನೆ ಮಾಡಿಕೊಂಡು ಅಂತ್ಯದಲ್ಲಿ ಮೋಕ್ಷ ಹೊಂದುವನು.

ಗ್ರಹಣ, ಸಂಕ್ರಮಣ, ದಕ್ಷಿಣಾಯನ, ಉತ್ತರಾಯಣ, ವಿಷ್ಣುವಿನ ಪುಣ್ಯಕಾಲ ಯುಗಾದಿ, ಎಂಭತ್ತಾರು ಪರ್ವಕಾಲಗಳು, ವ್ಯತೀಪಾತ, ಸಾಯಂಕಾಲ, ಆಷಾಢ, ಕಾರ್ತೀಕ, ಮಾಘ, ಈ ಮಾಸಗಳ ಅಮಾವಾಸ್ಯೆ ದಿನ ಇಷ್ಟು ಪರ್ವ ಸಂದರ್ಭಗಳಲ್ಲಿ ಸಮುದ್ರಸ್ನಾನ ಮಾಡಿ, ಬ್ರಾಹ್ಮಣರಿಗೆ ದಾನಮಾಡಿದರೆ, ಉಳಿದ ತೀರ್ಥ ಕ್ಷೇತ್ರಗಳಲ್ಲಿ ಈ ಕಾರ್ಯದಿಂದ ಬರುವ ಪುಣ್ಯಕ್ಕಿಂತ ಸಹಸ್ರಪಟ್ಟು ಅಧಿಕಫಲ ಪ್ರಾಪ್ತವಾಗುವದು. ಸಮುದ್ರ ತೀರ್ಥಗಳಲ್ಲಿ ಪಿತೃಗಳಿಗೆ ಶ್ರಾದ್ಧಮಾಡಿ, ಶಾಸ್ತ್ರೋಕ್ತ ಪಿಂಡಪ್ರದಾನ ಮಾಡಿದರೆ, ಪಿತೃಗಳಿಗೆ ಅಕ್ಷಯ ತೃಪ್ತಿ ಲಭಿಸುವದು.

ಮುನಿಗಳೆ, ಈ ರೀತಿ ಇರುವ ಸಮುದ್ರ ಧ್ಯಾನ, ದಾನ, ಪಿಂಡಪ್ರದಾನಾದಿಗಳ ಫಲವನ್ನು ನಿಮಗಾಗಿ ನಿರೂಪಿಸಿರುವೆ. ಈ ಮಹಿಮೆಯನ್ನು ಶ್ರವಣಮಾಡಿದವರಿಗೆ ಚತುರ್ವಿಧ ಪುರುಷಾರ್ಥಗಳು, ಮೋಕ್ಷಾದಿ ಪಾರಮಾರ್ಥಿಕ ಫಲಗಳು ಲಭಿಸುವದಲ್ಲದೆ ಅಂಥವರ ಸಕಲೇಷ್ಟಾರ್ಥಸಿದ್ಧಿ ಆಗುವದು. ಈ ತೀರ್ಥರಾಜನ ಮಹಿಮೆಯ ಮುಂದೆ ಇತರ ತೀರ್ಥಗಳ ಮಹಿಮೆ ಗೌಣ. ತೀರ್ಥರಾಜ ಎನಿಸಿದ ಸಮುದ್ರದ ದಡದಲ್ಲಿ ಮಾಡಿದ ಧರ್ಮಕಾರ್ಯಗಳಿಗೆ, ಸಕಲ ತೀರ್ಥಗಳ ದಡದಮೇಲೆ ಮಾಡಿದ ಧರ್ಮಕಾರ್ಯದ ಫಲಕ್ಕೆ ಸಮನಾದ ಫಲ ಪ್ರಾಪ್ತವಾಗುವದು. ಭೂಮಿಯಲ್ಲಿನ ತೀರ್ಥಗಳು, ನದಿಗಳು, ಸರೋವರಗಳು ಸಮುದ್ರ ವನ್ನು ಸೇರುವವು. ಆದುದರಿಂದಲೇ, ಸಮುದ್ರವು ಇವುಗಳಲ್ಲೆಲ್ಲ ಶ್ರೇಷ್ಠ. ಸೂರ್ಯನಿಂದ ಕತ್ತಲೆ ನಷ್ಟವಾಗುವಂತೆ, ಸಮುದ್ರಸ್ನಾನದಿಂದ ಪಾಪಗಳು ನಷ್ಟವಾಗುತ್ತವೆ. ಸಮುದ್ರವು ಜಗದೀಶನ ಆವಾಸಸ್ಥಾನವೆನಿಸಿದೆ. ಆದುದರಿಂದ ಸಮುದ್ರದ ಮಹಿಮೆ ಇನ್ನಾವ ಜಲಾಶಯಗಳಿಗೂ ಸಾಟಿಯಿಲ್ಲ. ಸಮುದ್ರದಲ್ಲಿ ಕೊಂಭತ್ತೊಂಭತ್ತು ಕೋಟಿ ತೀರ್ಥಗಳು ಇರುವವು. ಆದುದರಿಂದ ಸಮುದ್ರದ ದಡದಲ್ಲಿ ದಾನಾದಿ ಕಾರ್ಯಗಳನ್ನು ಮಾಡಿದರೆ ಬಹು ಪುಣ್ಯ ಪ್ರಾಪ್ತಿ ಆಗುವದು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಎಂಬ ಹದಿನೆಂಟನೆಯ ಅಧ್ಯಾಯ ಮುಗಿದುದು*

## ಪಂಚತೀರ್ಥಗಳ ಮಹತಿ

ಅಧ್ಯಾಯ - ೧೯

**ಬ್ರಹ್ಮ:-** ಸಮುದ್ರಸ್ನಾನಾನಂತರದಲ್ಲಿ ಇಂದ್ರದ್ಯುಮ್ನ ತೀರ್ಥಕ್ಕೆ ಹೋಗಬೇಕು. ಅಲ್ಲಿ ಆಚಮನ ಮಾಡಿ, ಶ್ರೀಹರಿಯನ್ನು ಸ್ಮರಿಸಿ ಸ್ನಾನಕ್ಕಾಗಿ ಅನುಮತಿಯನ್ನು ಈ ಮಂತ್ರ ಗಳಿಂದ ಕೇಳಿಕೊಳ್ಳಬೇಕು.

**ಅಶ್ವಮೇಧಾಂಗ ಸಂಭೂತತೀರ್ಥ ಸರ್ವಾಘನಾಶನ ।**
**ಸ್ನಾನಂ ತ್ವಯಿ ಕರೋಮ್ಯದ್ಯ ಪಾಪಂ ಹರಿ ನಮೋಸ್ತುತೇ ॥**

"ಅಶ್ವಮೇಧಕ್ಕೆ ಸಹಾಯಕವಾಗುವ ಸಕಲಪಾಪಗಳನ್ನು ನಾಶ ಮಾಡುವ, ಹೇ ತೀರ್ಥರಾಜ, ನಿನ್ನಲ್ಲಿ ಸ್ನಾನ ಮಾಡಲು ಅನುಮತಿಸು ನಿನಗೆ ವಂದನೆಗಳು."

ಹೀಗೆ ಪ್ರಾರ್ಥಿಸಿ, ಆ ತೀರ್ಥದಲ್ಲಿ ಸ್ನಾನಮಾಡಿ, ಮೌನದಿಂದ ತರ್ಪಣ, ಪುನರಾಚಮನ, ಪಿಂಡಪ್ರದಾನಾದಿ ಕಾರ್ಯಗಳನ್ನು ಮುಗಿಸಿ, ಭಗವಂತನನ್ನು ಪೂಜಿಸಬೇಕು. ಹೀಗೆ ಮಾಡಿದರೆ ಹತ್ತು ಅಶ್ವಮೇಧಯಾಗದ ಫಲ ಲಭಿಸುವದು. ಈ ಕಾರ್ಯವನ್ನು ವಿಧ್ಯುಕ್ತವಾಗಿ ಮಾಡಿದವನ, ಪೂರ್ವದ ಏಳು ಜನ ಪಿತೃಗಳು, ಭಾವಿ ಸಪ್ತಪಿತೃಗಳು ಉದ್ಧೃತರಾಗುವರು. ಕೊನೆಗೆ ಈ ಸಾಧಕನು ವಿಷ್ಣುಲೋಕ ಹೊಂದುತ್ತಾನೆ.

ಏಕಾದಶಿ ದಿನ, ನಿರಾಹಾರಿಯಾಗಿದ್ದು, ಈ ಹಿಂದೆ ಹೇಳಿದ ತೀರ್ಥಗಳಲ್ಲಿ ಸ್ನಾನಾದಿ ಗಳನ್ನು ಆಚರಿಸಬೇಕು. ಭಗವಂತನನ್ನು ಸಂದರ್ಶಿಸಬೇಕು. ಇಂತವ ನಿಶ್ಚಿತವಾಗಿ ವಿಷ್ಣುವಿನ ಸಾನಿಧ್ಯ ಸೇರುವನು.

**ಮುನಿಗಳು:-** ಪಿತಾಮಹ, ಮಾಘಮಾಸಾದಿಗಳನ್ನು ಬಿಟ್ಟು, ಭಗವಂತನಿಗೆ ಜ್ಯೇಷ್ಠ ಮಾಸ ಶ್ರೇಷ್ಠ ಎಂದು ಹೇಳಲು ಕಾರಣ ಏನು?

**ಬ್ರಹ್ಮ:-** ಮುನಿಪುಂಗವರೇ, ಮೇಲಿಂದ ಮೇಲೆ ಜ್ಯೇಷ್ಠ ಮಾಸವನ್ನು ನಾನು ಪ್ರಶಸ್ತ ವೆಂದು ಹೇಳುವದಕ್ಕೆ ಕಾರಣವಿದೆ, ಕೇಳಿರಿ.

ಭೂಮಿಯಲ್ಲಿರುವ ಮಹಾನದಿಗಳು, ಸರೋವರಗಳು, ಕೊಳ, ಕಲ್ಯಾಣಿಗಳು, ಬಾವಿ, ಸಮುದ್ರ ಈ ಎಲ್ಲ ಜಲಾಕರಗಳಲ್ಲಿ ಜ್ಯೇಷ್ಠ ಶುದ್ಧ ದಶಮಿ ದಿನದಿಂದ ಏಳುದಿನಗಳವರೆಗೆ ಆಯಾ ತೀರ್ಥಗಳ ಅಭಿಮಾನಿ ದೇವತೆಗಳು ಅಭಿವ್ಯಕ್ತರಾಗುತ್ತಾರೆ. ಆದುದರಿಂದ ಆ ಕಾಲದಲ್ಲಿ ನದಿ ಮೊದಲಾದ ಪವಿತ್ರ ಸ್ಥಾನಗಳಲ್ಲಿ ಪುಣ್ಯಕಾರ್ಯ ಆಚರಿಸಿದರೆ ಮಹತ್ಫಲಪ್ರಾಪ್ತಆಗುವದು. ಜ್ಯೇಷ್ಠಶುದ್ಧ ದಶಮಿ ದಿನಕ್ಕೆ **'ದಶಹರ'** ಎಂದು ಹೆಸರು. ಏಕೆಂದರೆ ಈ ಶುಭದಿನವು ಹತ್ತು ಪಾಪಗಳನ್ನು ಹೋಗಲಾಡಿಸುವದು. ಈ ದಿನದಂದು ಶ್ರೀಕೃಷ್ಣ, ಬಲರಾಮ, ಸುಭದ್ರಾದೇವಿಯರ ದರ್ಶನಮಾಡಿದವ ಪಾಪಲೇಪರಹಿತನಾಗಿ ಸದ್ಗತಿ ಹೊಂದುವನು.

ಉತ್ತರಾಯಣ, ದಕ್ಷಿಣಾಯನ ಮುಂತಾದ ಪರ್ವಕಾಲಗಳಲ್ಲಿ ಈ ಮೂವರ ದರ್ಶನ ಮಾಡಿದವ ಉಚ್ಚಸ್ಥಾನ ಹೊಂದುವನು. ಫಾಲ್ಗುಣ ಮಾಸದಲ್ಲಿ ದೋಲೋತ್ಸವ ಕಾಲದಲ್ಲಿ ದೋಲಗತನಾದ ಭಗವಂತನನ್ನು ಸಂದರ್ಶಿಸಿದವ, ಭಕ್ತಿಯಿಂದ ಆರಾಧಿಸಿದವ, ವಿಷ್ಣುಲೋಕ ಪಡೆಯುತ್ತಾನೆ. ವೈಶಾಖಮಾಸದ ಬಹುಳ ತದಿಗೆ ದಿನ ಶ್ರೀಗಂಧದಿಂದ ಶೋಭಿತನಾದ ಶ್ರೀಕೃಷ್ಣನನ್ನು ಸಂದರ್ಶಿಸುವವ ವಿಷ್ಣುಲೋಕ ಪಡೆಯುತ್ತಾನೆ. ಜ್ಯೇಷ್ಠಾ ನಕ್ಷತ್ರ ಸಹಿತವಾದ ಜ್ಯೇಷ್ಠಮಾಸದ ಹುಣ್ಣಿಮೆ ದಿನದಂದು ಭಗವಂತನ ದರ್ಶನ ಮಾಡಿದವನ ಇಪ್ಪತ್ತೆರಡು ಜನ ಪಿತೃಗಳು ವಿಸ್ಮೃತರಾಗುವದಲ್ಲದೆ ಅವನಿಗೂ ಪರಮ ಲೋಕ ಪ್ರಾಪ್ತಿ ಆಗುವದು.

## ಮಹಾಜ್ಯೇಷ್ಠಿ ಪ್ರಶಂಸನ

**ಬ್ರಹ್ಮ:-** ಮುನಿಗಳೇ, ಜ್ಯೇಷ್ಠಮಾಸದಲ್ಲಿ ಹುಣ್ಣಿಮೆ ಇರುವಾಗ, ಪ್ರಯತ್ನಪಟ್ಟು ಪುರುಷೋತ್ತಮ ತೀರ್ಥಯಾತ್ರೆಯನ್ನು ಕೈಗೊಳ್ಳಬೇಕು. ಜ್ಯೇಷ್ಠ ನಕ್ಷತ್ರವಿರುವ ಜ್ಯೇಷ್ಠ ಮಾಸದ ಹುಣ್ಣಿಮೆಗೆ ''ಮಹಾಜ್ಯೇಷ್ಠಿ'' ಎಂದು ಹೆಸರು. ಈ ಮಹಾಜ್ಯೇಷ್ಠಿ ಮುಹೂರ್ತ ದಂದು ಶ್ರೀ ಕೃಷ್ಣ, ಬಲರಾಮ, ಸುಭದ್ರೆ ದರ್ಶನಮಾಡಿದವ ಹನ್ನೆರಡು ತೀರ್ಥಗಳನ್ನು ಸಂದರ್ಶಿಸಿದ ಭಾರಿ ಫಲವನ್ನು ಪಡೆಯುವನು. ಮಹಾಜ್ಯೇಷ್ಠಿ ಮುಹೂರ್ತದಲ್ಲಿ ಭಕ್ತಿಯಿಂದ, ಕೃಷ್ಣನ ಸೇವೆ ಮಾಡಿದವ, ಕುರುಕ್ಷೇತ್ರ, ಪ್ರಯಾಗ, ನೈಮಿಷಾರಣ್ಯ, ಪುಷ್ಕರ, ಗಯೆ, ಗಂಗಾದ್ವಾರ, ಕುಶಾವರ್ತ, ಗಂಗೆ, ಸಮುದ್ರಸಂಗಮ ಸ್ಥಳ ಮೊದಲಾದ ತೀರ್ಥ ಹಾಗೂ ಕ್ಷೇತ್ರಗಳಲ್ಲಿ ಸ್ನಾನ ಹಾಗೂ ದಾನಗಳನ್ನು ಮಾಡಿದ ಫಲವನ್ನು ಪಡೆಯುತ್ತಾನೆ.

ಮಹಾಜ್ಯೇಷ್ಠಿಯ ದಿನ ಶ್ರೀ ಕೃಷ್ಣ ಸೇವೆಮಾಡಿದವ ಗಂಗಾದಿ ಸಕಲ ತೀರ್ಥಗಳಲ್ಲಿ ಮಿಂದ ಫಲ ಪಡೆಯುತ್ತಾನೆ. ಹೆಚ್ಚೇನು ಹೇಳುವದು? ಮಹಾಜ್ಯೇಷ್ಠೀ ಮುಹೂರ್ತದಲ್ಲಿ ಶ್ರೀಕೃಷ್ಣನನ್ನು ಶ್ರದ್ಧಾ ಭಕ್ತಿ ಸಮನ್ವಿತನಾಗಿ ಅರ್ಚಿಸಿದರೆ, ಭೂಮಿಯಲ್ಲಿನ ಸಕಲ ಪವಿತ್ರ ಸ್ಥಾನಗಳಲ್ಲಿ ಪುಣ್ಯಕಾರ್ಯಗಳನ್ನಾಚರಿಸಿದ ಫಲವನ್ನು ಖಂಡಿತ ಪಡೆಯುತ್ತಾನೆ. ಆದುದರಿಂದ ಪ್ರಯತ್ನ ಪೂರ್ವಕವಾಗಿ ಆದರೂ ಮಹಾಜ್ಯೇಷ್ಠಿ ಮುಹೂರ್ತದಲ್ಲಿ ಪುರಷೋತ್ತಮ ಕ್ಷೇತ್ರಕ್ಕೆ ಆಗಮಿಸಿ, ಭಕ್ತಿಯಿಂದ ಭಗವದಾರಾಧನೆ ಮಾಡಬೇಕು. ಇದರಿಂದ ಸರ್ವಾರ್ಥ ಸಿದ್ಧಿಯಾಗುವದು.

## ಕೃಷ್ಣಸ್ನಾನಮಾಹಾತ್ಮ್ಯ ವರ್ಣನೆ

**ಬ್ರಹ್ಮ**:- ಶ್ರೀಕೃಷ್ಣ, ಬಲರಾಮ, ಸುಭದ್ರಾದೇವಿ ಇವರಿಗೆ ಅಭಿಷೇಕ ಮಾಡಿಸುವ ವಿಧಿ ವಿಧಾನಗಳನ್ನು ನಿರೂಪಿಸುವೆ ಕೇಳಿರಿ. ಜ್ಯೇಷ್ಠಮಾಸದಲ್ಲಿ ಚಂದ್ರ ದೇವತಾಕವಾದ ಜ್ಯೇಷ್ಠಾ ನಕ್ಷತ್ರ ಸಹಿತವಾದ ಹುಣ್ಣಿಮೆಯಂದು ಶ್ರೀಹರಿಗೆ ಅಭಿಷೇಕಿಸಬೇಕು. ಪುರುಷೋತ್ತಮ ಕ್ಷೇತ್ರದಲ್ಲಿನ ಕೃಷ್ಣ, ಬಲರಾಮ, ಸುಭದ್ರೆಯರಿಗೆ ಅಭಿಷೇಕಮಾಡಲು ಅಲ್ಲಿ ಪುಣ್ಯಕರವಾದ ಭೋಗವತಿ ಎಂಬ ನದಿ ಹರಿಯುತ್ತಿದೆ. ಆ ತೀರ್ಥದಿಂದ ಜ್ಯೇಷ್ಠ ಶುದ್ಧ ಹುಣ್ಣಿಮೆಯಂದು ಪರಿಶುದ್ಧವಾದ ಚಿನ್ನದ ಪಾತ್ರೆಗಳಲ್ಲಿ ನೀರಿನ್ನು ತರಬೇಕು. ಜೇಷ್ಠ ಮಾಸದಲ್ಲಿ ಈ ಜಲಾಯದಿಂದ ನೀರನ್ನು ಒಯ್ದರೆ ಆ ತೀರ್ಥದ ಅಭಿಮಾನಿ ದೇವತೆಯಾದ ಭೋಗವತಿಯು ಸಂತುಷ್ಟಳಾಗಿ ವಿಶೇಷ ಫಲವನ್ನು ಅನುಗ್ರಹಿಸುವಳು.

ಅಭಿಷೇಕ ಕಾರ್ಯಕ್ಕಾಗಿ ಸುಂದರವಾದ ಮಂಟಪ ಒಂದನ್ನು ರಚಿಸಬೇಕು. ಮಂಟಪವನ್ನು ತಳಿರುತೋರಣ ಪತಾಕಾದಿಗಳಿಂದ ಅಲಂಕರಿಸಬೇಕು. ಈ ಮಂಟಪವು ಸಾಕಷ್ಟು ವಿಶಾಲವಾಗಿರಬೇಕು. ಮಂಟಪದ ಸುತ್ತಲೂ ಶುಭ್ರವಾಗಿರುವ ಶ್ವೇತವರ್ಣದ ವಸ್ತ್ರಗಳನ್ನು ಇಳಿಬಿಡಬೇಕು. ಅಲ್ಲಲ್ಲಿ ಮುತ್ತಿನ ಹಾರಗಳನ್ನು ಅಲಂಕಾರಾರ್ಥವಾಗಿ ಜೋತು ಹಾಕಬೇಕು. ಮಂಟಪದೊಳಗೆ ಸುತ್ತಮುತ್ತ ಧೂಪ ವಾಸನೆ ಅಡಗಿರಬೇಕು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಗುಂಪು ಗುಂಪಾಗಿ ಕೃಷ್ಣಪ್ರತಿಮೆಗಳನ್ನು ಮಂಗಳ ವಾದ್ಯದೊಡನೆ ಕರೆತಂದು ಸಂಭ್ರಮದಿಂದ ಮಂಟಪ ಮಧ್ಯದಲ್ಲಿ ಪ್ರತಿಷ್ಠಾಪಿಸಬೇಕು. ಸಜ್ಜನ ಶ್ರೇಷ್ಠರು ತಮ್ಮ ಹಸ್ತದಿಂದ ಅಭಿಷೇಕ ಕಾರ್ಯ ಕೈಗೊಳ್ಳಬೇಕು. ಭಕ್ತರು ಘಂಟೆ, ಮದ್ದಳೆ, ನಗಾರಿ, ಶಂಖ, ಕೊಂಬು; ಹಲಗೆ, ಝುಲ್ಲರಿ, ತಾಳ, ಮೃದಂಗ, ಕಹಳೆ ಮುಂತಾದ ವಾದ್ಯಗಳನ್ನು ನುಡಿಸುತ್ತ, ಸಂಭ್ರಮ ಪೂರ್ಣ ವಾತಾವರಣದಲ್ಲಿ ಭಕ್ತಿಪೂರ್ವಕವಾಗಿ ಬೆರೆಯಬೇಕು. ಜಯಘೋಷ, ವೇದಘೋಷ, ಭಗವಂತನನ್ನು ಹಾಡಿ ಪಾಡುವ ಸ್ತ್ರೀಯರ ಇಂಪಾದ ಧ್ವನಿ, ಪುರೋಹಿತರ ಮಂತ್ರಸ್ತೋತ್ರಗಳ ಧ್ವನಿ, ವೀಣೆಯ ಮಂಜುಳ ನಿನಾದ, ಕೊಳಲುಗಳ ಉಲಿತ, ಇದರಿಂದ ಒಟ್ಟು ವಾತಾವರಣವು ಸಮುದ್ರದ ಘೋಷದಂತೆ ಗಂಭೀರವಾದ ಧ್ವನಿಯಿಂದ ಆ ಸಂದರ್ಭದಲ್ಲಿ ತುಂಬಿ ಬರುತ್ತದೆ. ಮುನಿಗಳು ವೇದೋಕ್ತ ಸುಸ್ವರ ಮಂತ್ರಗಳಿಂದಲೂ, ಸಾಮಗಾನಗಳಿಂದಲೂ, ಅಭಿಷೇಕ ಕಾಲದಲ್ಲಿ ಭಗವಂತನನ್ನು ಸ್ತೋತ್ರ ಮಾಡುತ್ತಾರೆ. ಗೃಹಸ್ಥರು, ಮತ್ತಿತರ ಸಾಮಾನ್ಯಪುರುಷರು ವಿವಿಧ ಸ್ತೋತ್ರಗಳಿಂದ ಭಗವಂತನನ್ನು ಸ್ತುತಿಸುತ್ತಾರೆ. ಕುಸುಮ ಕೋಮಲೆಯರಾದ ಅಂಗನೆಯರು ಒಪ್ಪುವ ವಸ್ತ್ರಗಳನ್ನು ಧರಿಸಿ, ಸುವಾಸನೆ ಬೀರುವ ಶ್ರೀಗಂಧಾದಿಗಳನ್ನು ಮೈಗೆ ಲೇಪಿಸಿಕೊಂಡು, ಪುಷ್ಪಗಳನ್ನು ಶಿರದಲ್ಲಿ ಮುಡಿದು, ರತ್ನದ ಹಿರೆಯುಳ್ಳ ಚಿನ್ನದ ಚಾಮರಗಳನ್ನು ಕೈಗಳಲ್ಲಿ ಹಿಡಿದು, ಶ್ರೀಕೃಷ್ಣ, ಬಲರಾಮರಿಗೆ ಮಂದ ಮಂದವಾಗಿ ಬೀಸುತ್ತ ಭಗವಂತನ ಸೇವೆ ಮಾಡುವರು. ಯಕ್ಷರು, ಸಿದ್ಧರು, ಕಿನ್ನರಕಿಂಪುರುಷರು, ಚಾರಣರು, ಗಂಧರ್ವರು ಇವರೆಲ್ಲ ಗಗನದಲ್ಲಿ ಅಲ್ಲಲ್ಲಿ ಬಂದು ನಿಂತುಕೊಂಡು ಭಗವಂತನನ್ನು ಸೇವಿಸುವರು. ಆದಿತ್ಯರು, ರುದ್ರರು, ವಸುಗಳು, ಸಾಧ್ಯರು, ವಿಶ್ವದೇವತೆಗಳು, ಮರುತ್ತಗಳು, ಲೋಕಪಾಲರು, ಇವರೆಲ್ಲರೂ ಭಗವಂತನನ್ನು ಸ್ತೋತ್ರ ಮಾಡುವರು. 'ದೇವ' ನಾಯಕನಾದ, ಹೇ ಸ್ವಾಮಿಯೇ, ನಿನಗಿದೋ ನನ್ನ ವಂದನೆಗಳು. ನೀನೇ ಸೃಷ್ಟಿ,

ಸ್ಥಿತಿ, ಲಯ ಮಾಡುವ ಪರಮೇಶ್ವರ. ತ್ರಿಲೋಕಗಳಿಗೆ ಆಶ್ರಯ; ಬ್ರಾಹ್ಮಣಪ್ರಿಯ; ಸಕಲ ಸುಖಗಳಿಗೆ ಆಧಾರ, ಜ್ಞಾನ ಜ್ಯೋತಿ ಸ್ವರೂಪ ನಿನ್ನನ್ನು ವಂದಿಸುವೆ.'

ಹೀಗೆ ಸ್ತುತಿ, ದೇವತೆಗಳು ಕೃಷ್ಣ, ಬಲರಾಮ, ಸುಭದ್ರೆಯರನ್ನು ಸಂತೋಷ ಗೊಳಿಸುವರು. ಗಂಧರ್ವರು ತಮ್ಮ ಗಾನದಿಂದ, ಅಪ್ಸರೆಯರು ನರ್ತನದಿಂದ, ವಂದಿ ಮಾಗಧರು ಹೊಗಳಿಕೆಗಳಿಂದ, ವಾದ್ಯನುಡಿಸುವವರು ವಾದ್ಯ ನುಡಿಸುವಿಕೆಯಿಂದ, ದೇವ, ಮುನಿಗಳು, ಸಿದ್ಧರು, ಚಾರಣರು, ಪಿತೃಗಳು, ಪ್ರಜಾಪತಿಗಳು ಇವರೆಲ್ಲ 'ಜಯಜಯ' ವೆಂಬ ಶಬ್ದ ಘೋಷದಿಂದ, ಮೇಘಗಳು ವೃಷ್ಟಿಗರೆಯುವದರಿಂದ ಮಾರುತವು ಮಂದ ಮಂದವಾಗಿ ಕಾಲೋಚಿತವಾಗಿ ಗಾಳಿಬೀಸುವದರಿಂದ ದೇವೇಶನಾದ ಭಗವಂತನನ್ನು ಸುಪ್ರೀತಗೊಳಿಸುವರು.

ಇದಾದ ನಂತರ, ಇಂದ್ರ, ವಿಷ್ಣು, ಸೂರ್ಯ, ಚಂದ್ರರು, ನವಬ್ರಾಹ್ಮಣರು, ಬ್ರಹ್ಮದೇವ, ಅಗ್ನಿ, ವಾಯು, ಇವರೆಲ್ಲರೂ ಸಹ ಅಭಿಷೇಕ ಸಾಮಗ್ರಿಗಳನ್ನು ಕೈಯಲ್ಲಿ ಹಿಡಿದುಕೊಂಡು, ಮಂತ್ರಪೂತವಾದ ಮಂಗಳದ್ರವ್ಯಗಳಿಂದ ಸಹಿತರಾಗಿ ಅಲ್ಲಿಗೆ ಆಗಮಿಸುವರು. ಪೂಷನ್, ಭಗ, ಅರ್ಯಮ, ವಿಶ್ವಕರ್ಮ, ಅಂಶುಮಂತ-ಇವರೆಲ್ಲರೂ ಅಭಿಷೇಕಕ್ಕೆ ಆಗಮಿಸುವರು. ಸೂರ್ಯದೇವನು ತನ್ನ ಇಬ್ಬರು ಹೆಂಡತಿಯರೊಡನೆ ಮಿತ್ರಾ ವರುಣರೊಡನೆ ಆಗಮಿಸುವನು. ಮಹಾಜ್ಞಾನಿಗಳು ಅಲ್ಲಿಗೆ ಆಗಮಿಸುವರು. ಅವರು ಯಾರೆಂದರೆ- ಅಶ್ವಿನಿದೇವತೆಗಳು, ಆದಿತ್ಯರು, ವಸುದೇವರು, ರುದ್ರ ವಿಶ್ವೇದೇವ, ಮಾರುತ, ಸಾಧ್ಯರು, ಸಿದ್ಧರು, ಪಿತೃಗಳು, ಗಂಧರ್ವರು, ಅಪ್ಸರೆಯರು, ಯಕ್ಷರು, ರಾಕ್ಷಸರು, ನಾಗರು, ದೇವರ್ಷಿಗಳು, ಬ್ರಹ್ಮರ್ಷಿಗಳು, ವೈಖಾನಸರು, ವಾಲಖಿಲ್ಯರು- ಇವರೆಲ್ಲರೂ ಹಾಗೂ ಅಗ್ನಿ ಉಪಾಸಕರು, ವಾಯು ಉಪಾಸಕರು, ಭೃಗು ಋಷಿಗಳು, ಅಂಗಿರಸ ಮೊದಲಾದವರು.

ಈ ಹಿಂದೆ ಹೇಳಿದ ಜ್ಞಾನಿಗಳ ಜೊತೆಗೆ ಬ್ರಹ್ಮದೇವನು ಸಹ ಆಗಮಿಸುವನು ಪುಲಸ್ತ್ಯ, ಪುಲಹ, ಅಂಗಿರಸ, ಕಶ್ಯಪ, ಅತ್ರಿ, ಮರೀಚ, ಕ್ರತು, ವರುಣ, ಭೃಗು, ಮನು, ದಕ್ಷ ಬ್ರಹ್ಮ- ಈ ಎಲ್ಲ ಮನೀಷಿಗಳು, ಹಾಗೂ ಋತುಗಳು, ನವಗ್ರಹಗಳು, ತೀರ್ಥಗಳು ಭೂದೇವಿ, ಆಕಾಶ, ದಿಕ್ಕುಗಳು, ವೃಕ್ಷಗಳು, ನದಿಗಳು, ಸಮುದ್ರಗಳು, ಸರೋವರಗಳು, ವಿವಿದ ತೇಜಸ್ಸಿನ ಅಂಶಗಳು-ಇವೆಲ್ಲವೂ ಸಹ ದಿವ್ಯ ಶರೀರಧಾರಣಮಾಡಿ ಸಂಭ್ರಮದಿಂದ ಈ ಅಭಿಷೇಕೋತ್ಸವಕ್ಕೆ ಆಗಮಿಸುವವು.

ಹಿಮಾಲಯ, ವಿಂಧ್ಯಗಿರಿ, ಮೇರು, ಐರಾವತ, ಇವಲ್ಲದೆ, ಕಲೆಗಳು, ವಿದಿಕ್ಕುಗಳು, ಮಾಸ, ಪಕ್ಷ, ದಿವಸ, ಹಗಲು, ರಾತ್ರಿ, ಸಂವತ್ಸರಗಳು ಇವೆಲ್ಲವೂ ಆಗಮಿಸುವವು. ಅನೇಕ ದೇವತಾ ಸ್ತ್ರೀಯರು ಆಗಮಿಸುವರು. ಅವರ ಹೆಸರು ಇಂತಿವೆ-ಅರಿತಿ, ಹ್ರೀ, ಲಕ್ಷ್ಮೀ, ಸ್ವಾಹಾ, ಸರಸ್ವತಿ, ಉಮಾ, ಶುಚಿ, ಶನಿ, ಅನುಮತಿ, ಹೂಹೂ, ರಾಕಾ, ಧಿಷಣಾ ಮೊದಲಾದ ಎಲ್ಲ ದೇವತಾ ಸ್ತ್ರೀಯರು ಆಗಮಿಸುವರು.

ಅಶ್ವಗಳಲ್ಲಿ ಶ್ರೇಷ್ಠವಾದ ಉಚ್ಚೈಃಶ್ರವ, ದಿಗ್ಗಜಗಳಲ್ಲಿ ಉತ್ಕೃಷ್ಟವಾದ ಐರಾವತ, ವಾಮನ, ಅರುಣ, ಗರುಡ ಎಂಬ ದಿಗ್ಗಜಗಳು, ವೃಕ್ಷಗಳು, ಔಷಧಿ ಲತೆಗಳು ಈ ಉತ್ಸವ ನೋಡಲು ಆಗಮಿಸುವವು. ಭಗವಂತನಾದ ಧರ್ಮಪುರುಷ, ಯಮದೇವ, ಕಾಲಮೃತ್ಯು

ಮೊದಲಾದ ಯಮನ ಸೇವಕ ಬಳಗವು ಬರುವದು. ಇದಲ್ಲದೆ ಇನ್ನೂ ಅನೇಕ ಮಹಾತ್ಮರು, ಸಾತ್ವಿಕರು, ಸಜ್ಜನರು, ಹರಿಹರ ಭಕ್ತರು, ಪುಣ್ಯಜೀವಿಗಳು ಶ್ರೀಹರಿಯ ಉತ್ಸವ ನೋಡಲು ಆಗಮಿಸುವರು. ಇವರೆಲ್ಲರ ಹೆಸರು ಹೇಳಿ ಇಷ್ಟು ಜನ ಎಂದು ಲೆಕ್ಕ ಹಾಕಲು ಶಕ್ಯವಿಲ್ಲ. ಭಗವಂತನ ದಿವ್ಯವಾದ ಈ ಅಭಿಷೇಕೋತ್ಸವ ಕಂಡು ಆನಂದಿಸಲು ಬರುವ ಜನ ಅಸಂಖ್ಯಾತ.

ಹೀಗೆ ಎಲ್ಲರೂ ಬಂದ ನಂತರ, ದೇವತಾ ಪ್ರಮುಖರು ಸ್ವಯಂ ಭೂಮಿಯ ಮೇಲೆ ನಿಂತುಕೊಂಡು, ಚಿನ್ನದ ಕಲಶಗಳಲ್ಲಿ ತುಂಬಿದ ಆಕಾಶ ಗಂಗೆಯನ್ನು ಶ್ರೀಕೃಷ್ಣನೇ ಮೊದಲಾದ ಉತ್ಸವ ಪ್ರತಿಮೆಗಳಿಗೆ ಧಾರೆ ಎರೆಯುತ್ತಾರೆ. ಈ ಸಂದರ್ಭದಲ್ಲಿ ದೇವಾಧಿದೇವತೆಗಳೆಲ್ಲ ಈ ಅಭಿಷೇಕ ನೋಡುತ್ತ ಹರ್ಷನಿರ್ಭರರಾಗಿ, ಭಕ್ತಿ ಭರಿತ ಭಾವದಿಂದ ಭಗವಂತನನ್ನು ಹೀಗೆ ಸ್ತೋತ್ರ ಮಾಡುವರು.

ಜಯ ಜಯ ಲೋಕಪಾಲ ಭಕ್ತರಕ್ಷಕ ಜಯಜಯ ಪ್ರಣತವತ್ಸಲ ।
ಜಯ ಜಯ ಭೂತಚರಣ ಜಯಜಯಾಧಿದೇವ ಬಹುಕಾರಣ ॥

ಜಯ ಜಯ ವಾಸುದೇವ ಜಯ ಜಯಾಸುರಸಂಹರಣ ।
ಜಯ ಜಯ ದಿವ್ಯಮಾನ ಜಯ ಜಯ ತ್ರಿದಶವರ ॥

ಜಯ ಜಯ ಜಲಧಿಶಯನ ಜಯ ಜಯ ಯೋಗಿವರ ।
ಜಯ ಜಯ ಸೂರ್ಯನೇತ್ರ ಜಯ ಜಯ ದೇವರಾಜ ।
ಜಯ ಜಯ ಕೈಟಭಾರೇ ॥

ಜಯ ಜಯ ವೇದವರ ಜಯ ಜಯ ಕೂರ್ಮರೂಪ ।
ಜಯ ಜಯ ಯಜ್ಞವರ ಜಯ ಜಯ ಕಮಲನಾಭ ॥

ಜಯ ಜಯ ಶೈಲಚರ ಜಯ ಜಯ ಯೋಗ ಶಾಯಿನ್ ।
ಜಯ ಜಯ ವೇಗಧರ ಜಯ ಜಯ ವಿಶ್ವಮೂರ್ತೆ ॥

ಜಯ ಜಯ ಚಕ್ರಧರ ಜಯ ಜಯ ಭೂತನಾಥ ।
ಜಯ ಜಯ ಧರಣೀಧರ ಜಯ ಜಯ ಶೇಷಶಾಯಿನ್ ॥

ಜಯ ಜಯ ಪೀತವಾಸೋ ಜಯ ಜಯ ಸೋಮಕಾಂತ ।
ಜಯ ಜಯ ಯೋಗವಾಸ ಜಯ ಜಯ ದಹನವಕ್ತ್ರ ॥

ಜಯ ಜಯ ಧರ್ಮವಾಸ ಜಯ ಜಯ ಗುಣನಿಧಾನ ।
ಜಯ ಜಯ ಶ್ರೀನಿವಾಸ ಜಯ ಜಯ ಗರುಡಗಮನ ॥

ಜಯ ಜಯ ಸುಖನಿವಾಸ ಜಯ ಜಯ ಧರ್ಮಕೇತೋ ।
ಜಯ ಜಯ ಮಹೀನಿವಾಸ ಜಯ ಜಯ ಜಯ ಗಹನಚರಿತ್ರ ॥

ಜಯ ಜಯ ಯೋಗಿಗಮ್ಯ ಜಯ ಜಯ ಮುಖನಿವಾಸ ।
ಜಯ ಜಯ ವೇದವೇದ್ಯ ಜಯ ಜಯ ಶಾಂತಕರ ॥

ಜಯ ಜಯ ಯೋಗಿಚಿಂತ್ಯ ಜಯ ಜಯ ಪುಷ್ಪಕರ ।
ಜಯ ಜಯ ಜ್ಞಾನಮೂರ್ತೇ ಜಯ ಜಯ ಕಮಲಾಕರ ॥

ಜಯ ಜಯ ಭಾವವೇದ್ಯ ಜಯ ಜಯ ಮುಕ್ತಿಕರ ।
ಜಯ ಜಯ ವಿಮಲದೇಹ ಜಯ ಜಯ ಸತ್ವನಿಲಯ ॥

ಜಯ ಜಯ ಗುಣ ಸಮೃದ್ಧ ಜಯ ಜಯ ಯಜ್ಞಕರ ।
ಜಯ ಜಯ ಗುಣವಿಹೀನ ಜಯ ಜಯ ಮೋಕ್ಷಕರ ॥

ಜಯ ಜಯ ಭೂಶರಣ್ಯ ಜಯ ಜಯ ಕಾಂತಿಯುತ ।
ಜಯ ಜಯ ಲೋಕಶರಣ ಜಯ ಜಯ ಲಕ್ಷ್ಮೀಯುತ ।
ಜಯ ಜಯ ಪಂಕಜಾಕ್ಷ ಜಯ ಜಯ ಸೃಷ್ಟಿಕರ ।
ಜಯ ಜಯ ಯೋಗಯುತ ಜಯಾತಸೀ ಕುಸುಮ ಶ್ಯಾಮದೇಹ ॥

ಜಯ ಜಯ ಸಮುದ್ರವಿಷ್ಟದೇಹ ಜಯ ಜಯ ಲಕ್ಷ್ಮಿಪಂಕಜಷಟ್ಪರಣ ।
ಜಯ ಜಯ ಭಕ್ತವರ ಜಯ ಜಯ ಲೋಕಕಾಂತ ॥

ಜಯ ಜಯ ಪರಮಶಾಂತ ಜಯ ಜಯ ಪರಮಸಾರ ।
ಜಯ ಜಯ ಚಕ್ರಧರ ಜಯ ಜಯ ಭೋಗಿಯುತ ॥

ಜಯ ಜಯ ನೀಲಾಂಬರ ಜಯ ಜಯ ಶಾಂತಿಕರ ।
ಜಯ ಜಯ ಮೋಕ್ಷಕರ ಜಯ ಜಯ ಕಲುಷಹರ ॥

ಜಯ ಕೃಷ್ಣ ಜಗನ್ನಾಥ ಜಯ ಸಂಕರ್ಷಣಾನುಜ ।
ಜಯ ಪದ್ಮ ಪಲಾಶಾಕ್ಷ ಜಯ ವಾಂಛಾಫಲಪ್ರದ ।
ಜಯ ಮಾಲಾವೃತೋರಸ್ಕ ಜಯಚಕ್ರಗದಾಧರ ।
ಜಯ ಪದ್ಮಾಲಯಾಕಾಂತ ಜಯ ವಿಷ್ಣೋ ನಮೋಽಸ್ತುತೇ ॥

**ಬ್ರಹ್ಮ**:- ಹೀಗೆ ಭಗವಂತನನ್ನು ಸ್ತೋತ್ರಮಾಡಿ, ಜಯಕಾರವನ್ನು ಹೇಳಿ, ಪುನಃ ಪುನಃ ನಮಸ್ಕರಿಸಿ ಲೆಕ್ಕವಿಲ್ಲದಷ್ಟು ಭಗವಂತನನ್ನು ಕೊಂಡಾಡಿ, ಇಂದ್ರ, ಚಂದ್ರ, ರುದ್ರ ಮೊದಲಾದ ದೇವತೆಗಳು, ಸಿದ್ಧಚಾರಣ ಮೊದಲಾದವರು, ವಾಲಖಿಲ್ಯ ಮೊದಲಾದ ಮುನಿಗಳು ತಮ್ಮ ತಮ್ಮ ಸ್ಥಾನಗಳಿಗೆ ನಿರ್ಗಮಿಸುವರು. ಹೀಗೆ ಬಂದವರು ತಿರುಗಿ ಹೋಗುವಾಗ ದೇವತೆಗಳ ಬಗೆ ಬಗೆಯಾದ ವಿಮಾನಗಳು, ಆಕಾಶದಲ್ಲಿ ಅತ್ತಿಂದಿತ್ತ, ಇತ್ತಿಂದತ್ತ ಸಂಚರಿಸುವದು ಗೋಚರವಾಗುವದು. ಸುಪ್ರಜಿತವಾದ ಶ್ರೀಕೃಷ್ಣನನ್ನು ನೋಡಿದ ಈ ಎಲ್ಲ ಮಹನೀಯರಿಗೆ, ಅನಂತ ಫಲ ಪ್ರಾಪ್ತವಾಗುವದು.

ಶ್ರೀಕೃಷ್ಣನ ಅಭಿಷೇಕಮಾಡಿದ ತೀರ್ಥವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡವರ ಸಕಲ ದುರಿತಗಳು ದೂರವಾಗುವವು. ಈ ಅಭಿಷೇಕದ ನೀರನ್ನು ತೀರ್ಥರೂಪದಲ್ಲಿ ಸೇವಿಸಿದವರ ದೇಹ ಪರಿಶುದ್ಧವಾಗುವದು. ಭಕ್ತಿಪೂರ್ವಕವಾಗಿ ಅಭಿಷೇಕವನ್ನು ನಿರೀಕ್ಷಿಸಿದ ಬಂಜೆಗೂ ಸಹ ಸತ್ಪುತ್ರರು ಹುಟ್ಟುವರು. ಭಕ್ತಿಯಿಂದ ಭಗವಂತನ ಅಭಿಷೇಕೋತ್ಸವವನ್ನು ಈಕ್ಷಿಸಿದ ನಿರ್ಭಾಗ್ಯಳು ಖಂಡಿತ ಅದೃಷ್ಟವತಿ ಆಗುವಳು. ಅಭಿಷೇಕ ದರ್ಶನದ ಆನಂದವನ್ನು ಅನುಭವಿಸಿದವ ಸಕಲ ಪಾಪಗಳನ್ನು ಕಳೆದುಕೊಂಡು ಇಹದಲ್ಲಿ, ಪರದಲ್ಲಿ ಸುಖ ಅನುಭವಿಸುವನು. ದಕ್ಷಿಣಕ್ಕೆ ಅಭಿಮುಖನಾದ ಉತ್ಸವಮೂರ್ತಿಯಾದ ಶ್ರೀಹರಿಯ

ದರ್ಶನ, ತ್ರಿವಾರ ಪ್ರದಕ್ಷಿಣೆಮಾಡಿದವ ತೀರ್ಥಯಾತ್ರೆಮಾಡಿದ ಫಲ ಪಡೆಯುವನು. ಶ್ರೀಹರಿಯ ದರ್ಶನದಿಂದ ಬದರಿ ಮೊದಲಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದ ಫಲ, ಗಂಗಾದಿ ನದಿಗಳಲ್ಲಿ ಮಿಂದ ಫಲ, ಸಮುದ್ರ ತಟದಲ್ಲಿ ದಾನಾದಿ ಮಾಡಿದ ಪುಣ್ಯಫಲ ಪ್ರಾಪ್ತವಾಗುವವು. ಕಿಂಬಹುನಾ, ವೇದಶಾಸ್ತ್ರ ಪುರಾಣ ಧರ್ಮಶಾಸ್ತ್ರಗಳಲ್ಲಿ ಉಕ್ತವಾದ ಸಕಲ ಪುಣ್ಯಕರ್ಮಫಲ, ಸುಲಭವಾಗಿ ಪಡೆಯಬೇಕಾದರೆ, ಪುರುಷೋತ್ತಮ ಕ್ಷೇತ್ರದಲ್ಲಿ ಅಭಿಷೇಕಾರ್ಥವಾಗಿ ಉತ್ಸವದಲ್ಲಿ ದಕ್ಷಿಣಮುಖವಾಗಿ ಹೊರಟಿರುವ ಬಲರಾಮ, ಸುಭದ್ರೆ ಸಹಿತನಾದ ಶ್ರೀಕೃಷ್ಣನನ್ನು ಭಕ್ತಿಯಿಂದ ಸಂದರ್ಶಿಸಬೇಕು.

## ಗುಡಿವಾ ಯಾತ್ರೆ

**ಬ್ರಹ್ಮ:-** ಅಭಿಷೇಕಾನಂತರದಲ್ಲಿ ಶ್ರೀಕೃಷ್ಣ, ಬಲರಾಮ, ಸುಭದ್ರೆಯರು ರಥಾರೂಢ ರಾಗಿ ಗುಡಿವಾ ಮಂಟಪದತ್ತ ಸಾಗುವರು. ಈ ರಥಯಾತ್ರೆಯಲ್ಲಿ ಭಾಗವಹಿಸಿ, ರಥಾ ರೂಢವಾದ ಭಗವನ್ಮೂರ್ತಿಗಳನ್ನು ದರ್ಶನಮಾಡಿದವರು ವಿಷ್ಣುಲೋಕ ಪಡೆಯುತ್ತಾರೆ.

**ಮುನಿಗಳು:-** ಓಂ ಬ್ರಹ್ಮ, ಈ ಗುಡಿವಾ ಮಂಟಪ ರಚನೆ ಮಾಡಿದವರು ಯಾರು? ಈ ಗುಡಿವಾ ಮಂಟಪ ಯಾತ್ರೆಯಿಂದ ಲಭಿಸುವ ಫಲ ಎಂತಹುದು? ಶ್ರೀಕೃಷ್ಣ, ಬಲರಾಮ, ಸುಭದ್ರೆಯರು ನಿರ್ಜನವಾದ ಈ ಗುಡಿವಾ ಮಂಟಪದಲ್ಲಿ ಸಪ್ತದಿನಗಳ ವರೆಗೆ ನೆಲೆಸಲು ಕಾರಣವೇನು?

**ಬ್ರಹ್ಮ:-** ಋಷಿಗಳೇ, ಹಿಂದೆ ಇಂದ್ರದ್ಯುಮ್ನ ಮಹಾರಾಜ ಶ್ರೀಹರಿಯಲ್ಲಿ ವರಕೇಳಿದ. ಆ ವರದ ಸ್ವರೂಪ ಹೀಗಿದೆ 'ನನ್ನ (ಇಂದ್ರದ್ಯುಮ್ನ) ಸರೋವರ ತೀರದಲ್ಲಿರುವ ಗುಡಿವಾ ಮಂಟಪವು ಭಜಕರಿಗೆ ಇಹದಲ್ಲಿ ಭೋಗ, ನಂತರ ಮೋಕ್ಷಗಳನ್ನು ಕರುಣಿಸಬೇಕು. ಆ ಮಂಟಪಕ್ಕೆ ಇಂತಹ ಮಹತ್ವ ಪ್ರಾಪ್ತವಾಗುವದಕ್ಕೋಸುಗ ನೀನು (ಶ್ರೀಹರಿಯು) ಆ ಮಂಟಪದಲ್ಲಿ ಏಳು ದಿನಗಳ ವರೆಗೆ ಸನ್ನಿಹಿತನಾಗಬೇಕು. ಎಂದು ಪ್ರಾರ್ಥಿಸಿದ.

ಇಂದ್ರದ್ಯುಮ್ನನ ಈ ಪ್ರಾರ್ಥನೆಗೆ ಶ್ರೀಹರಿಯು ಇಂತು ನುಡಿದ:- 'ರಾಜೇಂದ್ರ ನಿನ್ನ ಸರೋವರದ ತೀರದಲ್ಲಿ ಸಪ್ತದಿನ ಪರಿಯಂತರವಾಗಿ 'ಗುಡಿವಾ' ಎಂಬ ಯಾತ್ರೆಯೂ ನಡೆಯುವದು. ಆ ಸಂದರ್ಭದಲ್ಲಿ ನಿನ್ನ ಇಚ್ಛೆಯಂತೆ ಗುಡಿವಾ ಮಂಟಪದಲ್ಲಿ ಬಲರಾಮ ಸುಭದ್ರೆಯರೊಡನೆ ನಾನು ಸನ್ನಿಹಿತನಾಗುವೆ. ನನ್ನಲ್ಲಿಗೆ ಆಗ ಬಂದು ಅರ್ಚಿಸಿದವರಿಗೆ ಅಭೀಪ್ಸಿತಾರ್ಥಗಳನ್ನು ಕರುಣಿಸುವದು ನನ್ನ ಹೊಣೆಯಾಗಲಿ' ಎಂದು ನುಡಿದು, ಇಂದ್ರ ದ್ಯುಮ್ನನನ್ನು ಸಂತೈಸಿ ಭಗವಂತ ಅಂತರ್ಧಾನನಾದ. ಇಂದ್ರದ್ಯುಮ್ನನು ಕೃತಾರ್ಥನಾದ.

ಆದುದರಿಂದ ಗುಡಿವಾ ಮಂಟಪದಲ್ಲಿ ಸನ್ನಿಹಿತನಾಗುವ ಪುರುಷೋತ್ತಮನನ್ನು ಪ್ರಯತ್ನಪೂರ್ವಕವಾಗಿ ಆರಾಧಿಸುವವರು ಸಕಲ ಇಷ್ಟಾರ್ಥಗಳನ್ನು ಇಹದಲ್ಲಿ ಪಡೆದು, ಕೊನೆಗೆ ಬ್ರಹ್ಮಜ್ಞಾನ ಹೊಂದಿ ಮೋಕ್ಷವನ್ನು ಪಡೆಯುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಹತ್ತೊಂಬತ್ತನೆಯ ಅಧ್ಯಾಯ ಮುಗಿದುದು*

**ಮುನಿ:-** ಬ್ರಹ್ಮನ್, ತೀರ್ಥ ಕ್ಷೇತ್ರಯಾತ್ರೆಯಿಂದ ಸ್ತ್ರೀಯರಿಗಾಗಲಿ, ಪುರುಷರಿಗಾಗಲಿ ಲಭಿಸುವ ಫಲಗಳಾವವು? ಯಾತ್ರೆಯ ಫಲಗಳನ್ನು ವಿವರವಾಗಿ ವಿವರಿಸು.

**ಬ್ರಹ್ಮ:-** ಬ್ರಾಹ್ಮಣ ಶ್ರೇಷ್ಠರೇ, ಯಾತ್ರೆಯ ಫಲಗಳನ್ನು ವಿವರಿಸುವೆ ಕೇಳಿರಿ. ಹದಿನಾಲ್ಕು ಇಂದ್ರರು ಇರುವಷ್ಟು ಕಾಲ ವಿಷ್ಣು ಲೋಕ ವಾಸ ರೂಪವಾದ ಫಲವು ಗುಡಿವಾ ಕ್ಷೇತ್ರದಲ್ಲಿ, ಉತ್ಥಾನ ದ್ವಾದಶಿ, ಫಾಲ್ಗುಣ ಮಾಸ, ವಿಷುವ ಪುಣ್ಯಕಾಲ, ಈ ಸಂದರ್ಭದಲ್ಲಿ ಯಾತ್ರೆ ಮಾಡುವದರಿಂದ ಲಭಿಸುವದು. ಜ್ಯೇಷ್ಠ ಮಾಸದಲ್ಲಿ ಪುರುಷೋತ್ತಮ ಕ್ಷೇತ್ರಕ್ಕೆ ಎಷ್ಟು ಕಾಲ ಯಾತ್ರೆ ಮಾಡುವನೋ ಅಷ್ಟು ಕಾಲ ವಿಷ್ಣುಲೋಕದಲ್ಲಿ ಸಂತಸ, ಸುಖ, ಸಮಾಧಾನಗಳನ್ನು ಯಥೇಚ್ಛವಾಗಿ ಅನುಭವಿಸುವನು. ಆ ಪರಮ ರಮಣೀಯವಾದ ಪುರುಷೋತ್ತಮ ಕ್ಷೇತ್ರವನ್ನು ಹನ್ನೆರಡುಸಲ ಜ್ಯೇಷ್ಠಮಾಸದಲ್ಲಿ ಸಂದರ್ಶಿಸಬೇಕು. ಅನಂತರ ಅಲ್ಲಿನ ಭಗವಂತನನ್ನು ಬಗೆಬಗೆಯಾಗಿ ಆರಾಧಿಸಬೇಕು. ಹೀಗೆ ಮಾಡಿದವ ಇಹದಲ್ಲಿ ಬಹು ಭೋಗಗಳನ್ನು ಅನುಭವಿಸಿ ಪರದಲ್ಲಿ ಮುಕ್ತಿ ಹೊಂದುವನು.

ಹನ್ನೆರಡುಸಲ ಪುರುಷೋತ್ತಮ ಯಾತ್ರೆ ಸಮಾಪ್ತವಾದ ನಂತರ, ವಿಧಿವತ್ತಾಗಿ ಭಗವಂತನ ಪ್ರತಿಷ್ಠೆಯನ್ನು ಮಾಡಬೇಕು. ಪುರುಷೋತ್ತಮನನ್ನು ಅಭಿಷೇಕ ಜಲದಿಂದ ವೇದೋಕ್ತಮಂತ್ರಗಳಿಂದ ಅಭಿಷೇಕಿಸಿ, ಅಲಂಕರಿಸಿ, ನೈವೇದ್ಯ ನಿವೇದಿಸಿ ದೀಪಾರತಿ ಬೆಳಗಿ ಸಮಸ್ತ ಉಪಚಾರಗಳನ್ನು ಸಮರ್ಪಿಸಿ, 'ನಮಃ ಪುರುಷೋತ್ತಮಾಯ' ಎಂಬ ಮಂತ್ರವನ್ನು ನೂರೆಂಟುಸಲ ಜಪಿಸಬೇಕು. ನಿಷ್ಕಾಮ ಬುದ್ಧಿಯಿಂದ ಭಗವಂತನಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸಬೇಕು. ಭಗವಂತನ ಪ್ರಸಾದ ಸ್ವೀಕರಿಸಿ, ಅಂದಿನ ರಾತ್ರಿ ಎಲ್ಲ ಭಗವಂತನ ಮಹಿಮಾಗಾನ, ಅಮೃತ ಚರಿತೆಯ ವರ್ಣನ, ಸ್ತೋತ್ರ ಪಾರಾಯಣ ಇದರಲ್ಲಿಯೇ ಕಳೆಯಬೇಕು. ಬೆಳಗಾದ ಬಳಿಕ ದ್ವಾದಶ ಬ್ರಾಹ್ಮಣರನ್ನು ಆಹ್ವಾನಿಸಿ, ಪುನಃ ವಿದ್ಯುಕ್ತವಾಗಿ ಪುರುಷೋತ್ತಮನಿಗೆ ಅಭಿಷೇಕ, ಅಲಂಕಾರ, ನೈವೇದ್ಯ, ದೀಪ ಮೊದಲಾದ ಉಪಚಾರಗಳನ್ನು ಸಮರ್ಪಿಸಿ, ಜಪ, ಸ್ತೋತ್ರ, ಗೀತ, ನೃತ್ಯ ಮೊದಲಾದ ವಿಧಾನಗಳಿಂದ ಭಗವಂತನನ್ನು ಸಂತೋಷಗೊಳಿಸಬೇಕು. ಆಹ್ವಾನಿತರಾದ ಹನ್ನೆರಡು ಜನ ಸಾತ್ವಿಕ ಬ್ರಾಹ್ಮಣರಿಗೆ, ಹನ್ನೆರಡು ಗೋವುಗಳನ್ನು, ಸುವರ್ಣ, ಕೊಡೆ, ಪಾದುಕೆ, ವಸ್ತ್ರ ಮುಂತಾದವುಗಳನ್ನು ದಾನಮಾಡಿ, ಪರಿಪೂಜಿಸಬೇಕು. ಹೀಗೆ ಮಾಡುವ ಜ್ಞಾನಿಗಳಾದ ಬ್ರಾಹ್ಮಣರ ಪೂಜೆಯಿಂದ ಅವರ ಅಂತರ್ಗತನಾದ ಪುರುಷೋತ್ತಮ ಪ್ರೀತನಾಗುವನು. ಪುರೋಹಿತನಿಗೆ ಗೋದಾನ, ವಸ್ತ್ರದಾನ, ಸುವರ್ಣ, ಕಂಚುದಾನ, ಕೊಡೆ, ಪಾದುಕೆಗಳ ದಾನಗಳನ್ನು ಮಾಡಬೇಕು. ಅನಂತರ ಎಲ್ಲರನ್ನೂ ಊಟಕ್ಕೆ ಕೂಡಿಸಿ ಯಜಮಾನ ಸ್ವಯಂ ನಿಂತು ತುಪ್ಪ ಮತ್ತು ಭಕ್ಷ್ಯ ಭೋಜ್ಯಗಳನ್ನು ಭೋಜಕರಿಗೆ ತೃಪ್ತಿಯಾಗುವಂತೆ ಬಡಿಸಬೇಕು. ಭೋಜನೋತ್ತರದಲ್ಲಿ ಹನ್ನೆರಡು ಬ್ರಾಹ್ಮಣರಿಗೆ ಹನ್ನೆರಡು ಜಲ ಕಲಶಗಳನ್ನು, ಮೋದಕ ಹಾಗೂ ದಕ್ಷಿಣೆ ಸಹಿತವಾಗಿ ದಾನ ನೀಡಬೇಕು.

ಬ್ರಾಹ್ಮಣಪೂಜೆ ಮುಗಿದನಂತರ ಜ್ಞಾನೋಪದೇಶಕನಾದ ಗುರುವನ್ನು ಪೂಜಿಸಬೇಕು. ಹೀಗೆ ಬ್ರಾಹ್ಮಣ, ಪುರೋಹಿತ, ಗುರು ಇವರೆಲ್ಲರನ್ನು ಸಂತೋಷಗೊಳಿಸಿ ನಿರ್ದಿಷ್ಟ, ಸೀಮೆಯವರೆಗೆ ಬೀಳ್ಕೊಟ್ಟು, ಮನೆಗೆ ಮರಳಿದ ನಂತರ ಯಜಮಾನನು

ಅವಶಿಷ್ಟಾನ್ನವನ್ನು ಬಂಧು ಬಾಂಧವರೊಡನೆ ಭುಂಜಿಸಬೇಕು. ಭೋಜನದ ವೇಳೆಯಲ್ಲಿ ಹಸಿದ ಬಡಭಿಕ್ಷುಕರು ಬಂದರೆ ಅವರನ್ನು ಕೂಡಿಸಿ ಉಣಬಡಿಸಬೇಕು. ಹೀಗೆ ವಿದ್ಯುಕ್ತವಾಗಿ, ಪುರುಷೋತ್ತಮನ ಆರಾಧನೆಮಾಡಿದ ಸಾಧಕನು ತನ್ನ ವಂಶವನ್ನು ಉದ್ಧರಿಸುತ್ತಾನೆ. ತಾನೂ ಉದ್ಧೃತನಾಗುತ್ತಾನೆ.

## ವಿಷ್ಣುಲೋಕ ವರ್ಣನೆ

**ಮುನಿ:-** ಬ್ರಹ್ಮದೇವ, ವಿಷ್ಣುಲೋಕದ ಬಗ್ಗೆ ನಾವು ಕೇಳಿದ್ದೇವೆ. ಆದರೆ ಅದರ ನಿಖರವಾದ ಸ್ವರೂಪವನ್ನು ನಿನ್ನ ಮುಖದಿಂದ ಕೇಳಬೇಕೆಂದು ಇಚ್ಛೆಯಾಗಿದೆ. ಆ ವಿಷ್ಣು ಲೋಕವು ಎಷ್ಟು ವಿಸ್ತೃತವಾಗಿರುವದು? ಯಾವ ತೆರನಾದ ಸುಖ ಅಲ್ಲಿ ಇದೆ? ಧರ್ಮ ನಿಷ್ಠರು ಯಾವ ಕರ್ಮಗಳನ್ನು ಆಚರಿಸಿ ಆ ಸುಖಗಳನ್ನು ಪಡೆಯುತ್ತಾರೆ? ವಿವರಿಸು.

**ಬ್ರಹ್ಮ:-** ವಿಷ್ಣುಲೋಕವು, ವಿಷ್ಣು ಭಕ್ತರಿಗೆ ಅತ್ಯಂತ ಪ್ರಿಯವಾದುದು. ಮೂರು ಲೋಕಗಳಿಂದ ಪೂಜಿತವಾದುದು. ಸಕಲ ಲೋಕಗಳಲ್ಲಿ ಶ್ರೇಷ್ಠವಾದುದು.

ಆ ವಿಷ್ಣುಲೋಕದಲ್ಲಿ ಕರ್ಣಿಕಾರ, ಉತ್ತರಣೆ, ಮಾವು, ಪಾಟಲಿ, ಅರ್ಜುನ, ತಗರ, ಪ್ರಿಯಂಗು, ಅತಿಮುಕ್ತ, ಪುನ್ನಾಗ, ನಾಗಸಂಪಿಗೆ, ಬಕುಲ, ಮಲ್ಲಿಗೆ, ಗಿರಿಮಲ್ಲಿಗೆ ಮಾಲತಿ-ಮಲ್ಲಿಗೆ, ಸಂಪಿಗೆ, ಮಂದಾರ, ಪಾರಿಜಾತ, ಅಶೋಕ ಮೊದಲಾದ ಪುಷ್ಪಭರಿತವಾದ ಗಿಡಬಳ್ಳಿಗಳಿವೆ. ಈ ಸಸ್ಯಗಳು ಸದಾ ಫಲಪುಷ್ಪಗಳಿಂದ ಸಮೃದ್ಧವಾಗಿಯೇ ಇರುತ್ತವೆ. ಇದಲ್ಲದೆ, ಕಿತ್ತಳೆ, ಹಲಸು, ಹಿಪ್ಪೆ, ಈಚಲು, ಅತಿಮಧುರಾ, ಇಂದ್ರಫಲ, ಬೇಲ, ತೆಂಗು, ದ್ರಾಕ್ಷಿ, ಲಿಂಬೆ, ಖರ್ಜೂರ, ತಾಳೆ, ಬಿಲ್ವ ಇವೇ ಮೊದಲಾದ ತರುಗಳು ಹಾಗೂ ಲತೆಗಳು ಹೇರಳವಾಗಿ ಇರುವವು. ಅಲ್ಲಲ್ಲಿ ಕಲ್ಪವೃಕ್ಷಗಳು ಬೇಡಿದ್ದನ್ನು ಪೂರೈಸುತ್ತ ಕಂಗಳಿಗೆ ಆನಂದ ನೀಡಿವೆ. ವಿಳೇದೆಲೆ ಬಳ್ಳಿಗಳು, ಅಡಿಕೆ ಮರಗಳು ಸಾರ್ವಕಾಲಿಕವಾಗಿ ಫಲಕೊಡುತ್ತ ಇರುತ್ತವೆ.

ನಿರ್ಮಲಜಲದಿಂದ ತುಂಬಿದ ನೂರಾರು ಸರೋವರಗಳು ಅಲ್ಲಿವೆ. ಆ ಸರೋವರ ಗಳಲ್ಲಿ ಕನ್ನೈದಿಲೆ, ಬಿಳಿದಾವರೆ, ಕಮಲ ಮೊದಲಾದ ಪುಷ್ಪಗಳು ಅರಳಿ ನಿಂತಿವೆ. ಚಕ್ರವಾಕ, ಚಾತಕ, ಚಕೋರ, ಹಂಸ ಮೊದಲಾದ ಪಕ್ಷಿಗಳು ಆನಂದದಿಂದ ಇಂಪಾಗಿ ಧ್ವನಿಗೈಯುತ್ತ ಅಲ್ಲಲ್ಲಿ ವಿಹಾರಮಾಡುತ್ತವೆ. ಕೆಂಬಣ್ಣದ ಕಮಲ, ನೀಲದಾವರೆ, ಕಲ್ಹಾರ, ಕೋಕನದ ಇನ್ನೂ ಅನೇಕ ಬಗೆಯಾದ ಸುಗಂಧ ಸೂಸುವ ಪುಷ್ಪಗಳು ಅರಳಿನಿಂದು, ಅಲ್ಲಿನ ವಾತಾವರಣವನ್ನು ಪ್ರಫುಲ್ಲಿತವನ್ನಾಗಿ ಮಾಡಿವೆ. ವಿಷ್ಣುಲೋಕದಲ್ಲಿ ಅನೇಕ ಬಗೆಯ ರತ್ನಖಚಿತವಾದ ವಿಮಾನಗಳಿವೆ. ಈ ವಿಮಾನಗಳು ಎಲ್ಲಿ ಬೇಕಾದರೂ ಸಂಚರಿಸಬಲ್ಲವು. ಈ ವಿಮಾನಗಳಲ್ಲಿ ಕೆಲವು ಅಪ್ಪಟ ಚಿನ್ನದಿಂದ ನಿರ್ಮಿತವಾಗಿವೆ.

ಈ ವಿಮಾನಗಳಲ್ಲಿ ಕುಳಿತು, ಇಂಪಾಗಿ ಗಾನಮಾಡುತ್ತ ಗಂಧರ್ವರು, ದೇವ ಗಾಯಕರು ಅತ್ತಿತ್ತ ಸಂಚರಿಸುವರು. ಈ ವಿಮಾನಗಳು ಸೂರ್ಯನಂತೆ ಉಜ್ವಲ ಪ್ರಕಾಶವುಳ್ಳವು. ಈ ವಿಮಾನಗಳಲ್ಲಿ ಚಿನ್ನದ ಉಯ್ಯಾಲೆಗಳು, ಸಿಂಹಾಸನಗಳು, ಮಂಚಗಳು, ಸುಖಾಸನಗಳು ವ್ಯವಸ್ಥೆಗೊಳಿಸಲ್ಪಟ್ಟವೆ. ದಿವ್ಯರೂಪವುಳ್ಳ ಅಪ್ಸರೆಯರು ಸೇವೆಗೈಯುತ್ತ ಮೋಕ್ಷ ಪಡೆದ ಸಾಧಕನ ಸುತ್ತಮುತ್ತ ಸಂಚರಿಸುತ್ತ ಅವನ ಇಚ್ಛಾನುವರ್ತಿಗಳಾಗಿ ಅವನನ್ನು ಸಂತೋಷಗೊಳಿಸುವಲ್ಲಿ ತಾವೂ ಸಂತೋಷ

ಕಾಣುತ್ತಾರೆ. ವಿಮಾನದಲ್ಲಿ ಸಜ್ಜುಗೊಳಿಸಲ್ಪಟ್ಟ ವಿವಿಧ ಬಗೆಯ ಹೂವುಗಳ ಸುಗಂಧ ದ್ರವ್ಯಗಳ ಪರಿಮಳವು ಆ ಪರಿಸರವನ್ನು ಆಹ್ಲಾದಕವಾಗಿ ಇರಿಸಿದೆ. ಪಯಣಿಗರನ್ನು ಸಂತೋಷಗೊಳಿಸಲು ಅನೇಕ ಬಗೆಯ ದಿವ್ಯವಾದ್ಯಗಳು ಅಲ್ಲಲ್ಲಿ ಧ್ವನಿಗೈಯುತ್ತಿವೆ. ವಿಮಾನಗಳು, ವಾಯು ಮತ್ತು ಮನಸ್ಸಿನಂತೆ ಅಪರಿಮಿತ ವೇಗ ಉಳ್ಳವು. ಈ ವಿಮಾನಗಳಿಗೆ ಚಿಕ್ಕ ಹಾಗೂ ಸುಂದರವಾದ ಅನೇಕ ಗಂಟೆಗಳನ್ನು ಕಟ್ಟಿದ್ದಾರೆ. ಇಂತಹ ವಿಮಾನದಲ್ಲಿ ಸ್ವಚ್ಛಂದ ಭೋಗವನ್ನು ಮೋಕ್ಷ ಭಾಜನರು ಅನುಭವಿಸುವರು.

ದಕ್ಷಿಣ ಸಮುದ್ರದ ತೀರದಲ್ಲಿರುವ ಪುರುಷೋತ್ತಮ ಕ್ಷೇತ್ರದಲ್ಲಿನ ವಟವೃಕ್ಷ ಹಾಗೂ ಶ್ರೀಕೃಷ್ಣನನ್ನು ಸಂದರ್ಶಿಸುವವರು ವಿಷ್ಣುಲೋಕವನ್ನು ಪಡೆದು ಅಲ್ಲಿ ಸ್ವರ್ಗ, ಚಂದ್ರ ಮತ್ತು ನಕ್ಷತ್ರಗಳು ಇರುವವರೆಗೆ ಅಪ್ಸರೆಯರೊಡನೆ ವಿಹರಿಸುವರು. ವಿಷ್ಣುಲೋಕದಲ್ಲಿ ವಿಷ್ಣುಭಕ್ತರಿಗೆ ಎಷ್ಟು ಭೋಗಿಸಿದರೂ ಬಳಲದಂತಹ ದಿವ್ಯಶರೀರ ಪ್ರಾಪ್ತವಾಗುವದು. ಈ ವಿಷ್ಣುಭಕ್ತರು ಶ್ರೀಹರಿಯಂತೆ ಚತುರ್ಭುಜಗಳಿಂದ ತುಳಸೀ ಮಾಲೆಗಳಿಂದ, ಶಂಖ, ಚಕ್ರ, ಗದೆಗಳಿಂದ ಶೋಭಿಸುವರು. ವಿಷ್ಣುಲೋಕದ ವೈಭವವು ಬೇರಾವ ಲೋಕಗಳಿಗೂ ಇಲ್ಲ ಶ್ರೀಹರಿಯ ಅನುಗ್ರಹದಿಂದ ವಿಷ್ಣುಲೋಕ ಪಡೆದವರು ಪುನಃ ಭೂಲೋಕಕ್ಕೆ ಬರುವದಿಲ್ಲ. ಇಲ್ಲಿನ ಭಗವನ್ಮಂದಿರವು ಹತ್ತು ಸಾವಿರ ಯೋಜನ ವಿಸ್ತಾರ ಉಳ್ಳದ್ದಾಗಿದೆ. ಈ ಮಂದಿರದ ಮೇಲೆ ಸಹಸ್ರಾರು ಧ್ವಜಪತಾಕೆಗಳು ಹಾರಾಡುತ್ತ ಮಂದಿರದ ವೈಭವ ಸಾರುತ್ತಿವೆ. ಮಂದಿರದ ಗೋಡೆ ಚಿನ್ನದಿಂದ ನಿರ್ಮಿತ. ಈ ಮಂದಿರಕ್ಕೆ ನಾಲ್ಕು ಮಹಾದ್ವಾರಗಳಿವೆ. ಒಳಭಾಗದಲ್ಲಿ ಏಳು ಪ್ರಕಾರಗಳಿವೆ. ಈ ಏಳು ಪ್ರಕಾರಗಳಲ್ಲಿ ಮೊದಲನೆಯದು ಬಂಗಾರದ್ದು. ಎರಡನೆಯದು ಮರಕತಮಣಿ ನಿರ್ಮಿತ, ಮೂರನೆಯದು ಇಂದ್ರನೀಲಮಣಿಯಿಂದ ರಚಿತ. ನಾಲ್ಕನೆಯದು ಮಹಾನೀಲಮಣಿಯಿಂದ ವಿರಚಿತ. ಐದನೆಯದು ಪದ್ಮರಾಗ ಮಣಿಯಿಂದ ಕಟ್ಟಲ್ಪಟ್ಟಿದೆ. ಆರನೆಯದು ವಜ್ರದ್ದು. ಏಳನೇಯದು ಹವಳದಿಂದ ಕಟ್ಟಲ್ಪಟ್ಟಿದೆ.

ವಿಷ್ಣುಲೋಕದ ಕಂಬಗಳು ರತ್ನದಿಂದ ವಿನಿರ್ಮಿತ. ಕಂಬಗಳಲ್ಲಿ ಮುತ್ತು ಹವಳಗಳು ಅಲ್ಲಲ್ಲಿ ಅಲಂಕೃತವಾಗಿವೆ. ಈ ಮಂದಿರದಲ್ಲಿ ಸಿದ್ಧರು, ತಮ್ಮ ತೇಜಸ್ಸಿನಿಂದ ದಶದಿಕ್ಕುಗಳನ್ನು ಬೆಳಗುತ್ತ ಹುಣ್ಣಿಮೆ ಚಂದ್ರನಂತೆ ರಾರಾಜಿಸುತ್ತಿರುವರು.

ಮಂದಿರದ ಮಧ್ಯದಲ್ಲಿ ಉನ್ನತಾಸನದಲ್ಲಿ ಪಿತಾಂಬರಧಾರಿಯಾದ ಶ್ರೀಹರಿಯು ಲಕ್ಷ್ಮೀದೇವಿಯೊಡನೆ ಅತ್ಯಂತ ಮೋಹಕನಾಗಿ ಕಂಗೊಳಿಸುತ್ತಿದ್ದಾನೆ. ಎದೆಯಲ್ಲಿ ಶ್ರೀವತ್ಸ ವೆಂಬ ಲಾಂಛನ, ಬಲಗೈಯಲ್ಲಿ ಸುದರ್ಶನ ಚಕ್ರ, ಎಡಗೈಯಲ್ಲಿ ಶ್ವೇತವರ್ಣದ ಪಾಂಚಜನ್ಯ ಶಂಖ. ಇನ್ನೊಂದು ಕೈಯಲ್ಲಿ 'ಕೌಮೋದಕೀ' ಎಂಬ ಗದೆ, ಮತ್ತೊಂದು ಎಡಗೈಯಲ್ಲಿ ಸೂರ್ಯನಂತೆ ತೇಜಪೂರ್ಣವಾದ ಶಾರ್ಙ್ಗ ಎಂಬ ಧನುಸ್ಸು ಇಂತಹ ಶ್ರೀಹರಿಯು ಅಲ್ಲಿನ ಭಕ್ತರಿಗೆಲ್ಲ ದರ್ಶನ ನೀಡುತ್ತ ಆನಂದವನ್ನು ಕರುಣಿಸುತ್ತಿದ್ದಾನೆ. ಈ ಭಗವಂತನ ವಿರಾಡ್ರೂಪಕ್ಕೆ ಸಹಸ್ರ ಶಿರಸ್ಸುಗಳು, ಸಾವಿರ ಕೈಕಾಲುಗಳು, ಸಾವಿರಾರು ಕಣ್ಣುಗಳು, ಸಾವಿರ ಹೆಸರುಗಳು ಅವಕ್ಕೆ ತಕ್ಕಂತೆ. ಸ್ವಸಾಮರ್ಥ್ಯದಿಂದ ತನ್ನ ಸಾವಿರ ಶರೀರಗಳನ್ನೇ ಕ್ಷಣಾರ್ಧದಲ್ಲಿ ತೋರಿಸುತ್ತಾನೆ- ಆ ಭಗವಂತ. ಮಿಂಚು ಮಿಂಚಿದಾಗ ಅರೆಕ್ಷಣ ಕಂಡು ಬರುವ ಆಕರ್ಷಕ ಕಾಂತಿಯಂತೆ ಕಾಂತಿಯುಳ್ಳ ಅತ್ಯದ್ಭುತ ಸಿಂಹಾಸನದಲ್ಲಿ

ಶ್ರೀಹರಿಯು ಪ್ರಕಾಶಿಸುತ್ತಿರುವನು. ಅವನ ಸುತ್ತಮುತ್ತಲೂ ದೇವ, ದಾನವ, ಯಕ್ಷ, ರಕ್ಷ, ಕಿನ್ನರ, ಕಿಂಪುರುಷ, ಗಂಧರ್ವ, ಅಪ್ಸರೆ ಮೊದಲಾದವರು ಸಂತತವಾಗಿ ಹೊಗಳಿ ಹಾಡಿ ಹಿಗ್ಗುತ್ತಲಿರುವರು. ಆ ವಿಷ್ಣುಲೋಕದಲ್ಲಿ ವಾಸಿಸುವ ಎಲ್ಲ ಮುಕ್ತರಲ್ಲಿ ಕೀರ್ತಿ, ಪ್ರತಿಭೆ, ಮೇಧಾ, ಸರಸ್ವತಿ, ಬುದ್ಧಿ, ಮತಿ, ಕಾಂತಿ, ಶಾಂತಿ, ಸಿದ್ಧಿ, ಸದಾ ನೆಲೆಸಿರುವವು.

ಅನೇಕ ಅಪ್ಸರಸ್ತ್ರೀಯರು ಅಲ್ಲಿ ಸುಖವಾಗಿ ಸುಳಿದಾಡುತ್ತ ನೋಡುವವರ ಕಣ್ಮನಗಳಿಗೆ ಆನಂದವನ್ನು ಒದಗಿಸುವರು. ಅವರಲ್ಲಿ ಪ್ರಮುಖರು ಇಂತಿದ್ದಾರೆ- ಘೃತಾಚಿ, ಮೇನಕೆ, ರಂಭೆ, ತಿಲೋತ್ತಮೆ, ಸಹಜನ್ಯಾ, ಊರ್ವಶಿ, ನಿಮ್ಲೋಚಾ, ವಾಮನಾ, ಮಂದೋದರಿ, ಸುಭಗಾ, ವಿಶ್ವಾಚಿ, ವಿಪುಲಾನನಾ, ಭದ್ರಾಂಗಿ, ಚಿತ್ರಸೇನಾ, ಪ್ರಮ್ಲೋಚಾ ಇವರಲ್ಲದೆ ಮುನಿ, ಸಮ್ಮೋಹಿನಿ, ಚಂದ್ರಮಧ್ಯಾ, ಶುಭಾನನಾ, ಸುಕೇಶಿ, ನೀಲಕೇಶಾ, ಮನ್ಮಥಚೇತಿಣಿ, ಅಲಂಬುಸಾ, ಮಿಶ್ರಕೇಶಿ, ಮುಂಜಿಕ ಸ್ಥಳ, ಪರಾಂಗಿ, ಪೂರ್ವಚಿತ್ತಿ ಮೊದಲಾದ ಅಪ್ಸರೆಯರು ಅಲ್ಲಿನ ದೇವತೆಗಳನ್ನು ಸೇವಿಸುವರು. ಸುಂದರಿಯರಾದ ಅನೇಕ ಅಪ್ಸರೆಯರು ಗೀತವಾದ್ಯಗಳೊಡನೆ ನೃತ್ಯಮಾಡುತ್ತ ಸ್ವಯಂ ಸಂತೋಷಿಸುತ್ತ ಇತರರನ್ನು ಸಂತೋಷಿಸುವರು. ಭಗವಂತನ ಈ ಲೋಕದಲ್ಲಿ ಮುಪ್ಪು, ಮರಣಗಳಿಲ್ಲ, ಭಯ ಬಳಲಿಕೆಗಳಿಲ್ಲ, ರೋಗ ರುಜಿನಗಳಿಲ್ಲ, ಚಳಿ, ಬಿಸಿಲು, ಮಳೆಗಳ ತಾಪಗಳಿಲ್ಲ, ಹಸಿವೆ ನೀರಡಿಕೆ ಎಂದಿಗೂ ಇಲ್ಲ. ಹೀಗೆ ಯಾವುದೇ ದುಃಖವಿಲ್ಲದ ಎಲ್ಲ ಸುಖ ಸೌಕರ್ಯಗಳಿರುವ ಸದಾ ಆನಂದ ಅನುಭವಿಸಬಹುದಾದ, ಶಾಶ್ವತವಾದ ಏಕೈಕ ತಾಣ ಈ ಭಗವಂತನ ಆವಾಸಸ್ಥಾನ. ಸ್ವರ್ಗ ಮೊದಲಾದ ಸುಖಕ್ಕೆ ಹೆಸರಾದ ಲೋಕಗಳು ಈ ವಿಷ್ಣುಲೋಕದ ಒಟ್ಟು ಸುಖದ ಹದಿನಾರನೇಯ ಒಂದಂಶವನ್ನೂ ಒದಗಿಸಲು ಸಮರ್ಥವಾಗಲಾರವು. ಸಂಸಾರದಲ್ಲಿ ಅತ್ಯಾಸೆಯಿಂದ ಮಗ್ನರಾದ ನಾಸ್ತಿಕರು, ಉಪಕಾರಕ್ಕೆ ಪ್ರತ್ಯುಪಕಾರ ಮಾಡದ ಕಟುಮನಸ್ಸಿನ ಕೃತಘ್ನರು, ಚಂಚಲ ಚಾಪಲ್ಯವನ್ನು ಪದೇ ಪದೇ ಚಪ್ಪರಿಸುವ ಚಾಡಿಖೋರರು, ಕ್ರೂರರು, ಕಳ್ಳರು, ಅಸಂಯಮಿಗಳು ಇವರು ಎಂದೂ ಈ ಉತ್ತಮಲೋಕವನ್ನು ಪಡೆಯಲಾರರು.

ಜಗದ್ಗುರುವಾದ ವಾಸುದೇವನನ್ನು ಭಕ್ತಿ ಅತಿಶಯದಿಂದ, ಪರಿಶುದ್ಧ ಮನಸ್ಸಿನಿಂದ ಪೂಜಿಸುವ ಸಾತ್ವಿಕ ಚೇತನರು ಮಾತ್ರ ಸಾಧನಾಂತ್ಯದಲ್ಲಿ ಈ ಸದ್ಗತಿಯನ್ನು ಪಡೆಯಲು ಸಾಧ್ಯ.

ಪುರುಷೋತ್ತಮ ಕ್ಷೇತ್ರದಲ್ಲಿನ ಭಗವಂತನ ದರ್ಶನಮಾಡಿ, ಈ ಕ್ಷೇತ್ರದಲ್ಲಿಯೇ ಅವನ ನಾಮಸ್ಮರಣೆಮಾಡುತ್ತ ಶರೀರ ತ್ಯಾಗಮಾಡುವವರು ಖಂಡಿತವಾಗಿ ವಿಷ್ಣುಲೋಕ ಪಡೆಯುವರು.

## ಪುರುಷೋತ್ತಮಕ್ಷೇತ್ರ ಮಹಾತ್ಮ್ಯ

**ಮುನಿ:-** ದೇವೋತ್ತಮನಾದ ಬ್ರಹ್ಮನೆ, ಅತ್ಯದ್ಭುತವಾದ ಆನಂದಕರವಾದ ವಿಷ್ಣುಲೋಕವನ್ನು ವಿಸ್ತರಿಸಿ ಹೇಳಿದಿ. ವಿಷ್ಣುಲೋಕ ಪ್ರಾಪ್ತಿಗೆ ಕಾರಣೀಭೂತವಾದ, ಸಾಧನಾಕ್ಷೇತ್ರ ಪುರುಷೋತ್ತಮಕ್ಷೇತ್ರವನ್ನು ವರ್ಣಿಸಿದೆ. ಇದನ್ನು ನಮಗೆ ಹೇಳಿ ಬಹುದೊಡ್ಡ ಉಪಕಾರಮಾಡಿದೆ. ನಿನ್ನ ಮುಖದಿಂದ ಪ್ರಯಾಗ, ಪುಷ್ಕರ ಮೊದಲಾದ ಅನೇಕ ಕ್ಷೇತ್ರಗಳ, ಅನೇಕ ತೀರ್ಥಗಳ ಪ್ರಶಂಸನೆಯನ್ನು ಕೇಳಿದ್ದೇವೆ. ಪುರುಷೋತ್ತಮ ತೀರ್ಥವನ್ನು ನೀನು ಪ್ರಶಂಸಿಸಿದಷ್ಟು ಬೇರಾವ ತೀರ್ಥಕ್ಷೇತ್ರಗಳನ್ನೂ ಪ್ರಶಂಸಿಸಲಿಲ್ಲ.

ಇದು ಏಕೆ ಎಂಬುದು ನಮಗೀಗ ಅರ್ಥವಾಯಿತು. ಪುರುಷೋತ್ತಮ ಕ್ಷೇತ್ರಕ್ಕೆ ಸಮವಾದ ಕ್ಷೇತ್ರವು ಇನ್ನೊಂದು ಇಲ್ಲವೇ ಇಲ್ಲ. ಆದುದರಿಂದಲೇ ನೀನು ಆ ಕ್ಷೇತ್ರವನ್ನು ಪುನಃ ಪುನಃ ಪ್ರಶಂಸಿಸಿದೆ. ಇದು ಸತ್ಯವಷ್ಟೆ?

**ಬ್ರಹ್ಮ:-** ಮುನಿಗಳೇ, ನೀವು ಹೇಳುವದು ಸಂಪೂರ್ಣ ಸತ್ಯ. ಈ ಲೋಕದಲ್ಲಿನ ಪವಿತ್ರವಾದ ತೀರ್ಥಕ್ಷೇತ್ರಗಳೆಲ್ಲ ಸೇರಿಯೂ ಸಹ, ಪುರುಷೋತ್ತಮಕ್ಷೇತ್ರದ ಹದಿನಾರನೆಯ ಒಂದು ಭಾಗವನ್ನೂ ಸರಿಗಟ್ಟಲಾರವು. ಹೇಗೆ ಎಲ್ಲ ದೇವತೆಗಳಲ್ಲಿ ಶ್ರೀಹರಿ ಉತ್ತಮನೋ ಅದರಂತೆ ಎಲ್ಲ ಕ್ಷೇತ್ರಗಳಲ್ಲಿ ಪುರುಷೋತ್ತಮಕ್ಷೇತ್ರ ಶ್ರೇಷ್ಠ. ಅನೇಕ ಆದಿತ್ಯರಲ್ಲಿ ವಿಷ್ಣು ಎಂಬ ಸೂರ್ಯನು ಹೇಗೆ ಶ್ರೇಷ್ಠನೋ ಅದರಂತೆ ಸಕಲ ತೀರ್ಥಗಳಲ್ಲಿ ಪುರುಷೋತ್ತಮವು ಶ್ರೇಷ್ಠ.

ನಕ್ಷತ್ರಗಳಲ್ಲಿ ಚಂದ್ರನಂತೆ, ಸರಸ್ಸುಗಳಲ್ಲಿ ಸಾಗರದಂತೆ, ವಸುಗಳಲ್ಲಿ ಅಗ್ನಿಯಂತೆ, ರುದ್ರರಲ್ಲಿ ಶಂಕರನಂತೆ, ಚಾತುರ್ವರ್ಣಗಳಲ್ಲಿ ಬ್ರಾಹ್ಮಣನಂತೆ, ಪಕ್ಷಿಗಳಲ್ಲಿ ಗರುಡನಂತೆ, ಗಿರಿಗಳಲ್ಲಿ ಮೇರುಗಿರಿಯಂತೆ ಪರ್ವತಗಳಲ್ಲಿ ಹಿಮಾಲಯದಂತೆ, ಸ್ತ್ರೀಯರಲ್ಲಿ ಲಕ್ಷ್ಮೀದೇವಿಯಂತೆ, ನದಿಗಳಲ್ಲಿ ಗಂಗೆಯಂತೆ, ಆನೆಗಳಲ್ಲಿ ಐರಾವತದಂತೆ, ಮಹರ್ಷಿಗಳಲ್ಲಿ ಭೃಗು ಮಹರ್ಷಿಯಂತೆ, ಸೇನಾಪತಿಗಳಲ್ಲಿ ಸ್ಕಂದನಂತೆ, ಸಿದ್ಧರಲ್ಲಿ ಕಪಿಲ ಮುನಿಗಳಂತೆ, ಅಶ್ವಗಳಲ್ಲಿ ಉಚ್ಚೈಃಶ್ರವದಂತೆ, ಕವಿಗಳಲ್ಲಿ ಭಾರ್ಗವನಂತೆ, ಮಹರ್ಷಿಗಳಲ್ಲಿ ವ್ಯಾಸಮಹರ್ಷಿಯಂತೆ, ಯಕ್ಷರಲ್ಲಿ ಕುಬೇರನಂತೆ, ಇಂದ್ರಿಯಗಳಲ್ಲಿ ಮನಸ್ಸಿನಂತೆ, ಪಂಚಭೂತಗಳಲ್ಲಿ ಭೂಮಿಯಂತೆ, ವೃಕ್ಷಗಳಲ್ಲಿ ಅಶ್ವತ್ಥವೃಕ್ಷದಂತೆ, ಚಲಿಸುವ ಪದಾರ್ಥಗಳಲ್ಲಿ ಗಾಳಿಯಂತೆ, ಆಭರಣಗಳಲ್ಲಿ ಚೂಡಾಮಣಿಯಂತೆ, ಗಂಧರ್ವರಲ್ಲಿ ಚಿತ್ರರಥನಂತೆ, ಆಯುಧಗಳಲ್ಲಿ ವಜ್ರಾಯುಧದಂತೆ, ಅಕ್ಷರಗಳಲ್ಲಿ ಆಕಾಶದಂತೆ, ಛಂದಸ್ಸಿನಲ್ಲಿ ಗಾಯತ್ರೀಛಂದಸ್ಸಿನಂತೆ, ಅವಯವಗಳಲ್ಲಿ ಶಿರಸ್ಸಿನಂತೆ, ಪತಿವ್ರತೆಯರಲ್ಲಿ ಅರುಂಧತಿಯಂತೆ, ವಿದ್ಯೆಗಳಲ್ಲಿ ಮೋಕ್ಷವಿದ್ಯೆಯಂತೆ, ಮಾನವರಲ್ಲಿ ರಾಜನಂತೆ, ಹಸುಗಳಲ್ಲಿ ಕಾಮಧೇನುವಿನಂತೆ, ಬೆಲೆಯುಳ್ಳ ಪದಾರ್ಥಗಳಲ್ಲಿ ಚಿನ್ನದಂತೆ, ಸರ್ಪಗಳಲ್ಲಿ ವಾಸುಕಿಯಂತೆ, ದೈತ್ಯರಲ್ಲಿ ಪ್ರಹ್ಲಾದನಂತೆ, ಬಿಲ್ಲುಗಾರರಲ್ಲಿ ಶ್ರೀರಾಮನಂತೆ, ಜಲಚರಗಳಲ್ಲಿ ಮೊಸಳೆಯಂತೆ, ಮೃಗಗಳಲ್ಲಿ ಸಿಂಹದಂತೆ, ಸಮುದ್ರದಲ್ಲಿ ಕ್ಷೀರ ಸಮುದ್ರದಂತೆ, ಜಲಚರಗಳಲ್ಲಿ ವರುಣನಂತೆ, ಶಿಕ್ಷಕರಲ್ಲಿ ಯಮನಂತೆ, ದೇವಮುನಿಗಳಲ್ಲಿ ನಾರದನಂತೆ, ಲೋಹಗಳಲ್ಲಿ ಚಿನ್ನದಂತೆ, ಪವಿತ್ರವಸ್ತುಗಳಲ್ಲಿ ದಕ್ಷಿಣೆಯಂತೆ, ಬ್ರಹ್ಮರಲ್ಲಿ ದಕ್ಷಬ್ರಹ್ಮನಂತೆ, ಋಷಿಗಳಲ್ಲಿ ಕಶ್ಯಪಋಷಿಗಳಂತೆ, ಗ್ರಹಗಳಲ್ಲಿ ಸೂರ್ಯನಂತೆ, ಮಂತ್ರಗಳಲ್ಲಿ ಓಂಕಾರದಂತೆ, ಯಜ್ಞಗಳಲ್ಲಿ ಅಶ್ವಮೇಧಯಜ್ಞದಂತೆ, ಹುಲ್ಲುಗಳಲ್ಲಿ ದೂರ್ವೆಯಂತೆ, ಪಾವನಪದಾರ್ಥಗಳಲ್ಲಿ ಧರ್ಮದಂತೆ, ತೀರ್ಥಕ್ಷೇತ್ರಗಳಲ್ಲೆಲ್ಲ ಪುರುಷೋತ್ತಮವು ಅತ್ಯಂತ ಶ್ರೇಷ್ಠವೆನಿಸಿದೆ.

## ಗೌತಮಿ ಮಹಾತ್ಮ್ಯ

**ಬ್ರಹ್ಮ:-** ಭೂಮಂಡಲದಲ್ಲಿರುವ ಎಲ್ಲಾ ತೀರ್ಥಕ್ಷೇತ್ರಗಳೂ, ಜಪಹೋಮ ವ್ರತಗಳ ಫಲವು ಪುರುಷೋತ್ತಮ ಕ್ಷೇತ್ರಕ್ಕೆ ಸರಿದೂಗಲಾರವು. ಸ್ವಲ್ಪದರಲ್ಲಿ ಹೇಳುವದಾದರೆ, ಈ ಪುರುಷೋತ್ತಮ ಕ್ಷೇತ್ರ ದರ್ಶನದಿಂದ ಪುನರ್ಜನ್ಮದಿಂದ ಮುಕ್ತಿ

ಹೊಂದುತ್ತಾನೆ ಮಾನವ. ಈ ಪುರುಷೋತ್ತಮ ಕ್ಷೇತ್ರದಲ್ಲಿ ವಾಸವಾಗಿ ಯಥಾಶಕ್ತಿ ತ್ರಿಕರಣಪೂರ್ವಕವಾಗಿ ಸೇವೆ, ಪೂಜೆ ಸಲ್ಲಿಸಿದರೆ ಇಹದಲ್ಲಿ ಸರ್ವ ಸುಖಭೋಗ ಸಂಪದಗಳನ್ನು, ಪರದಲ್ಲಿ ಇಂದ್ರಭೋಗ ವಿಲಾಸವನ್ನು ಖಂಡಿತ ಪಡೆಯಬಹುದು.

**ಮುನಿಗಳು:-** ದೇವದೇವನೆ, ಇದುವರೆಗೆ ನಿನ್ನಿಂದ ಹಲವಾರು ಪುಣ್ಯಕ್ಷೇತ್ರಗಳ ಮಹಿಮಾವರ್ಣನೆ ಕೇಳಿ ತಣಿದೆವು. ಈಗ ಶ್ರೇಷ್ಠವೆನಿಸಿದ ಇನ್ನೂ ಕೆಲವು ತೀರ್ಥಗಳ ಮಹಾತ್ಮ್ಯವನ್ನು ಕೇಳಲು ಕಾತುರರಾಗಿದ್ದೇವೆ ಸವಿಸ್ತಾರವಾಗಿ ಹೇಳಬೇಕು.

**ಬ್ರಹ್ಮ:-** ಹಿಂದಕ್ಕೆ ನಾನು ನಾರದರಿಗೆ ಹಲವು ತೀರ್ಥಮಹಾತ್ಮ್ಯವನ್ನು ಸಾಂದರ್ಭಿಕವಾಗಿ ಹೇಳಿದ್ದೆನು. ಈಗ ನಿಮಗೂ ಸಹ ಅದನ್ನೇ ನಿರೂಪಿಸುವೆ ಕೇಳಿರಿ. ತೀರ್ಥಗಳಲ್ಲಿ ದೈವತೀರ್ಥ, ಸುರತೀರ್ಥ, ಆರ್ಷತೀರ್ಥ, ಮಾನುಷತೀರ್ಥ ಎಂದು ನಾಲ್ಕು ವಿಧ. ಅವುಗಳಲ್ಲಿ ಮಾನುಷತೀರ್ಥಕ್ಕಿಂತ ಆರ್ಷತೀರ್ಥ ಮಿಗಿಲು. ಆರ್ಷಕ್ಕಿಂತ ಸುರ ಇನ್ನೂ ಮಿಗಿಲು. ಸುರತೀರ್ಥಕ್ಕಿಂತ ದೈವತೀರ್ಥ ಎಲ್ಲಕ್ಕಿಂತ ಮಿಗಿಲು. ಯಾಕೆಂದರೆ, ದೈವತೀರ್ಥವು ಸಕಲ ಕಾಮನೆಗಳನ್ನು ಅಲ್ಪಾಯಾಸದಲ್ಲಿ ಸಲ್ಲಿಸುವ ಕಾಮಧೇನುವೆನಿಸಿದೆ. ಅಷ್ಟೇ ಅಲ್ಲ; ದೈವತೀರ್ಥವು ತ್ರಿಮೂರ್ತಿಗಳಿಂದ ನಿರ್ಮಿತವಾಗಿದ್ದು, ಎಲ್ಲಕ್ಕಿಂತ ಸರ್ವಶ್ರೇಷ್ಠವೆನಿಸಿದೆ.

ಜಗತ್ತಿನಲ್ಲೆಲ್ಲ ಜಂಬೂದ್ವೀಪ ಮಹಾಪವಿತ್ರಕ್ಷೇತ್ರ. ಅದರಲ್ಲಿ ಭರತಖಂಡವು ಮೂರುಲೋಕಗಳಲ್ಲಿ ಶ್ರೇಷ್ಠವಾದ ತೀರ್ಥಸ್ಥಾನ. ಅದು ತೀರ್ಥಗಳ ನೆಲೆವೀಡಾಗಿದೆ. ನಾನು ಹೇಳಿದ ಸರ್ವಶ್ರೇಷ್ಠ ತೀರ್ಥಕ್ಷೇತ್ರಗಳೆಲ್ಲ ಭರತಖಂಡ ಅಥವಾ ಭಾರತದೇಶದಲ್ಲಿ ವ್ಯಾಪಿಸಿವೆ. ಇಲ್ಲಿರುವ ಹಿಮಾಲಯ, ವಿಂಧ್ಯಗಿರಿಗಳ ಮಧ್ಯದಲ್ಲಿ ಹರಿಯುವ ಆರು ನದಿಗಳು, ಹಾಗೂ ಅವುಗಳ ತೀರಪ್ರದೇಶದಲ್ಲಿರುವ ಹಲವಾರು ಪವಿತ್ರಕ್ಷೇತ್ರಗಳು ದೇವ ನಿರ್ಮಿತ. ದಕ್ಷಿಣಸಾಗರ, ವಿಂಧ್ಯಗಳಲ್ಲಿ ಆರು ನದಿಗಳೂ ಸಹ ದೇವರಿಂದ ಸೃಷ್ಟಿಯಾಗಿವೆ. ಹೀಗಾಗಿ ಭಾರತ ದೇಶದಲ್ಲಿ ಹನ್ನೆರಡು ನದಿಗಳು, ಪುಣ್ಯತಮ ಗಿರಿಶಿಖರ, ಪರ್ವತಗಳು, ಸರ್ವೋತ್ತಮವೆನಿಸಿದ್ದು ಕರ್ಮಭೂಮಿಯೆಂದು ಪ್ರಸಿದ್ಧವಾಗಿದೆ.

ಇಲ್ಲ ಕೆಲವೆಡೆ ಆರ್ಷತೀರ್ಥ, ದೈವತೀರ್ಥಗಳೂ ಇರುವವು. ಅಸುರರಿಂದ ತುಂಬಿದ ಕಾರಣ ಅಸುರತೀರ್ಥವೆಂದು ಕರೆಯಲಾಗುತ್ತಿದೆ. ತಮ್ಮ ಹಾಗೂ ಮುಂದಿನ ಜನಾಂಗದ ಸರ್ವಾಂಗೀಣ ಉನ್ನತಿಗಾಗಿ ಮಾನವರು ಮುಕ್ತಿ ಪಡೆಯಲೆಂದು ಸಪ್ರಯತ್ನದಿಂದ ಕೆಲವು ತೀರ್ಥಗಳನ್ನು ನಿರ್ಮಿಸಿದ್ದು, ಮಾನುಷತೀರ್ಥಗಳೆಂದು ಕರೆಯುವರು. ಈ ತೀರ್ಥಗಳಲ್ಲಿ ಪ್ರಯೋಜನಕ್ಕನುಗುಣವಾಗಿ ಪ್ರಭೇದಗಳಿದ್ದು, ಅವುಗಳನ್ನು ಚೆನ್ನಾಗಿ ಅರಿತಿರುವದು ಅವಶ್ಯ. ಗೋದಾವರಿ, ಭೀಮರಥೀ, ತುಂಗಭದ್ರಾ, ವೇಣಿಕಾ, ತಾಪಿ, ಪಯೋಷ್ಣೀ, ಈ ಆರು ನದಿಗಳು ವಿಂಧ್ಯಗಿರಿಗೆ ದಕ್ಷಿಣದಲ್ಲಿರುವ ದೈವತೀರ್ಥಗಳು. ಅದರಂತೆ ಉತ್ತರದಲ್ಲಿ ಹಿಮಾಲಯದಲ್ಲಿ ಭಾಗೀರಥಿ, ನರ್ಮದಾ, ಯಮುನಾ, ಸರಸ್ವತಿ, ವಿಶೋಕಾ, ವಿತಸ್ತಾ ಈ ಆರು ನದಿಗಳು ದೇವತೀರ್ಥಗಳಾಗಿವೆ. ಯಮ, ಪಾತಾಲಕೇತು, ಮಯ, ಪುಷ್ಕರ, ಹಯಮೂರ್ಧಾ, ಲವಣ, ನಮುಚಿ, ಶೃಂಗಕ, ಗಯ, ಕಾಲ್ಲಾಸುರ, ವೃತ, ಸ್ತ್ರೀಪುರ, ಅಂಧಕ- ಈ ತೀರ್ಥಗಳು ಅಸುರರಿಂದ ನಿರ್ಮಾಣಗೊಂಡಿವೆ. ಅಂಬರೀಷ, ಹರಿಶ್ಚಂದ್ರ, ಕುರು, ಕನಬಲ, ವಾಚಿಕೇತ ಮೊದಲಾದ ರಾಜಮಹಾರಾಜರು ಮಾನವರ ಮುಕ್ತಿಗಾಗಿ ನಿರ್ಮಿಸಿದ ತೀರ್ಥಗಳು ಮಾನುಷತೀರ್ಥಗಳೆಂದು ಇಂದಿಗೂ ಮೆರೆಯುತ್ತಿವೆ. ಇನ್ನು ಕೆಲವುಕಡೆಗೆ

ಪ್ರಕೃತಿಯಲ್ಲಿ ತಾವಾಗಿಯೇ ತೀರ್ಥಗಳು ಉದ್ಭವಿಸಿವೆ. ಇವೂಸಹ ಪುಣ್ಯಕರವೆನಿಸಿದ್ದು, ಮನುಷ್ಯನ ಸಕಲಪಾಪ ಪರಿಹಾರಕ್ಕೆ ತಾರಕವೆನಿಸಿವೆ.

ಬ್ರಹ್ಮ ವಿಷ್ಣು, ಮಹೇಶ್ವರರು ನಿರ್ಮಿಸಿದ ತ್ರಿದೈವತ್ಯ ತೀರ್ಥವು ಎಲ್ಲ ತೀರ್ಥಗಳಲ್ಲಿ ಜ್ಯೇಷ್ಠ ಹಾಗೂ ಶ್ರೇಷ್ಠವಾಗಿದೆ. ಈ ತೀರ್ಥದ ಬಗ್ಗೆ ಇನ್ನೂ ಸ್ವಲ್ಪ ವಿಸ್ತರಿಸಿ ಹೇಳುವೆ ಕೇಳಿರಿ. ಈ ತ್ರಿದೈವತ್ಯ ತೀರ್ಥದಲ್ಲಿ ಮಿಂದ ಮಾನವ ಮರಳಿ ಜನ್ಮ ಪಡೆಯಲಾರನಷ್ಟೇ ಅಲ್ಲ, ಮುಂದೆ ಯಾವ ತೀರ್ಥ ಸಂಚಾರ ಕೈಗೊಳ್ಳುವ ಅವಶ್ಯಕತೆ ಇಲ್ಲ. ಏಕೆಂದರೆ ಮಾನವನು ಇಲ್ಲಿ ಮಿಂದನೆಂದರೆ ಸಮಸ್ತ ಫಲ ಹೊಂದಬಲ್ಲ. ಈ ದೈವತೀರ್ಥ ಅಥವಾ ತ್ರಿದೈವತ್ಯತೀರ್ಥವೆಂದರೆ ಉತ್ತರದಲ್ಲಿ ಹರಿಯುವ ಗಂಗಾನದಿಯೇ. ಅದು ದೇವ ನಿರ್ಮಿತವೆಂಬುದು ಸ್ವಯಂವೇದ್ಯ. ಇದರಲ್ಲಿ ಮೀಯುವದರಿಂದ ಪಾಪಾತ್ಮನಾದ ಮನುಷ್ಯ ಪುಣ್ಯಫಲ ಪಡೆಯುತ್ತಾನೆ. ಮತ್ತು ತನ್ನ ಪಿತೃಗಳನ್ನು ಸಹ ಉದ್ಧರಿಸುತ್ತಾನೆ.

ಈ ದೈವತೀರ್ಥ ನಿರ್ಮಾಣದ ಹಿನ್ನೆಲೆಯಲ್ಲಿ ಒಂದು ಮಹತ್ತರವಾದ ಘಟನೆ ನಡೆಯಿತು. ಇದು ಸುಮಾರು ಹತ್ತುಸಾವಿರ ವರ್ಷಗಳ ಹಿಂದಿನಸಂಗತಿ. ತಾರಕಾಸುರನೆಂಬ ದೈತ್ಯನು ನನ್ನಿಂದ (ಬ್ರಹ್ಮನಿಂದ) ವರ ಪಡೆದು, ಅದರ ಬಲದಿಂದ ಗರ್ವಿಷ್ಠನಾದ. ಅವನು ಬಲಿಷ್ಠನೂ ಆಗಿದ್ದ. ತನ್ನ ಭುಜಬಲ ಹಾಗೂ ಸೇನಾಬಲದಿಂದ ಸ್ವರ್ಗಕ್ಕೆ ದಾಳಿ ಮಾಡಿ, ದೇವತೆಗಳ ಐಶ್ವರ್ಯವೆಲ್ಲವನ್ನೂ ಸೂರೆಮಾಡಿದ. ದೇವಾನುದೇವತೆಗಳು ಅವನ ಭೀಕರ ದಾಳಿಯಿಂದ ಭಯಭೀತರಾಗಿ, ದಾರಿಕಾಣದೆ ಶ್ರೀಹರಿಯ ಮೊರೆಹೊಕ್ಕರು. ಅವನನ್ನು ನಾನಾವಿಧವಾಗಿ ಸ್ತುತಿಸಿ ದೇವತೆಗಳನ್ನು ರಕ್ಷಿಸಲು ಕೋರಿದರು. 'ಆದಿಕರ್ತನೂ, ಜಗದ್ರಕ್ಷಕನೂ ಆದ ಹರಿಯೇ! ಈ ಹಿಂದೆ ಮತ್ಸ್ಯ, ಕೂರ್ಮ ಅವತಾರಮಾಡಿ ನಮ್ಮನ್ನು ರಕ್ಷಿಸಿದೆ. ಓ ದೇವ, ಇಂದೂ ಸಹ ಅಂತಹ ಆಪತ್ತು ಒದಗಿದೆ. ಈ ಸಂಕಟದಿಂದ ನಮ್ಮನ್ನು ಪಾರು ಮಾಡುವ ಪರದೈವ ನೀನೇ' ಎಂದು ಆ ಕರುಣಾಕರನನ್ನು ಕೇಳಿಕೊಂಡರು.

ಅವರ ಮೇಲೆ ಜಗದೀಶ ಕರುಣೆಯ ಕಟಾಕ್ಷ ಬೀರುತ್ತ ಅಭಯನೀಡಿದ. ದೇವತೆಗಳಿಗೆ ಬಂದೊದಗಿದ ಅನಿರೀಕ್ಷಿತ ವಿಪತ್ತನ್ನು ಅದರ ನಿವಾರಣವನ್ನೂ ಕುರಿತು ಮುಂದಾಲೋಚನೆಮಾಡಿ ನುಡಿದ 'ತಾರಕಾಸುರನ ಸಂಹಾರ ನನ್ನಿಂದಾಗಲಿ, ನಿಮ್ಮಿಂದಾಗಲಿ ಆಗುವದು ಅಶಕ್ಯ. ಆದರೆ ಈಶ್ವರನಿಂದ ಜನಿಸಲಿರುವ ಕುಮಾರನಿಂದ ತಾರಕಾಸುರನ ನಿರ್ನಾಮವಾಗುವದು ಖಂಡಿತ'.... ಆದರೆ..... ಅದಕ್ಕಿಂತಲೂ ಮೊದಲು ಶಿವನಿಗೆ ವಿವಾಹ ಆಗುವಂತೆ ನಾವೀಗ ಪ್ರಯತ್ನಿಸುವದು ಅವಶ್ಯ. ನಾವೀಗ ಹೋಗೋಣ ನಡೆಯಿರಿ.

ಎಲ್ಲ ದೇವತೆಗಳು ಶ್ರೀಹರಿಯ ಸಹಿತರಾಗಿ ಹಿಮಾಲಯದ ಪ್ರಶಾಂತ ತಾಣಕ್ಕೆ ಧಾವಿಸಿ ಬಂದರು. ಅಲ್ಲಿರುವ ಹಿಮವಂತ ಮತ್ತು ಮೇನಕೆಯವರನ್ನು ಕಂಡು 'ಎಲೈ ಪರ್ವತರಾಜ, ದಾಕ್ಷಾಯಣಿಯೆಂಬ ಲೋಕಮಾತೆಯಾದ ಶಕ್ತಿಯು ಶಿವನಲ್ಲಿದ್ದು, ದೇವತೆಗಳ ಕಾರ್ಯಸಿದ್ಧಿಗಾಗಿ ನಿಮ್ಮ ಗರ್ಭ ಪ್ರವೇಶಿಸುವಳು' ಎಂದು ಹರಿಸಿದರು.

ದೇವತೆಗಳ ಹರಕೆ ಕೈಗೂಡಿತು. ಹಿಮವಂತ ಮೇನಾದೇವಿಯರ ಗರ್ಭದಿಂದ ಉದಿಸಿ ಬಂದಳು ಲೋಕಮಾತೆ ಗೌರಿ. ಬಾಲ್ಯದಾರಭ್ಯ ಅವಳಿಗೆ ಸದಾ ಶಿವನಲ್ಲಿಯೇ ಅಚಲ ಒಲವು. ಅದೇ ಅವಳಿಗೆ ಗೆಲವು. ಅಂತೆಯೇ ಸದಾಶಿವನ ಧ್ಯಾನ ಅವಳ ಪ್ರಾಣ, ಉಸಿರು ಮತ್ತೆಲ್ಲವೂ. ಒಂದು ದಿನ ದೇವತೆಗಳು ಗೌರಿಯನ್ನು ಕಂಡು ಶಿವನನ್ನು ಕುರಿತು

ತಪಸ್ಸು ಮಾಡಲು ಸೂಚಿದರು. ಅವರ ಮಾತಿಗೆ ಸಮ್ಮತಿಸಿ ಅವಳು ತಪೋನಿರತಳಾದಳು. ಇನ್ನೊಂದೆಡೆ ಶಿವನೂ ತಪೋಮಗ್ನ. ಅದನ್ನು ಕಂಡು ದೇವತೆಗಳು ಉದ್ವಿಗ್ನರಾದರು. ಅವನು ಏನನ್ನು ಕುರಿತು ತಪಗೈಯುತ್ತಿದ್ದಾನೆ, ಆತ್ಮವಸ್ತು ಕುರಿತೋ? ಅಥವಾ ಗೌರಿಯನ್ನು ವರಿಸಲು ಧ್ಯಾನಮಗ್ನನಾಗಿರುವನೋ? ಎಂದು ಚಿಂತಿಸಿದರು.

ಏನೇ ಆದರೂ ಮಹೇಶ್ವರನ ಮನಸ್ಸು ಗೌರಿಯ ರೂಪ, ಗಾಂಭೀರ್ಯದತ್ತ ಹರಿದು ಅವನು ಅವಳಲ್ಲಿ ಅನುರಕ್ತನಾದರೆ ಸಾಕು. ಇದು ಸುಲಭವಾಗಿ ಶೀಘ್ರವಾಗಿ ನೆರವೇರಲು ಮನ್ಮಥನ ಪ್ರೇರಣೆ ಅವಶ್ಯಕ' ಎಂದೆನಿಸಿತು ದೇವತೆಗಳಿಗೆ. ಪರಿಹಾರಮಾರ್ಗ ತಿಳಿಯಲು ಬೃಹಸ್ಪತಿಯ ಸಲಹೆ ಪಡೆದರು. 'ಮನ್ಮಥನ ಬಾಣ ತಾಗಿದಾಗ ಶಿವನು ಗೌರಿಯಲ್ಲಿ ಅನುರಾಗ ಭಾವದಿಂದ ಬೆರೆಯಬಲ್ಲ; ಅವಳನ್ನು ವರಿಸಬಲ್ಲ, ಇದರಿಂದ ನಮ್ಮೆಲ್ಲರ ಕಾರ್ಯಸಾಧನೆ ಕೈಗೂಡಿದಂತೆ. ಶಿವನಿಗೆ ಪುತ್ರ ಜನಿಸಿ, ಮುಂದೆ ತಾರಕಾಸುರನ ಸಂಹಾರವಾಗುವದು' ಎಂದು ನುಡಿದ ದೇವಗುರು. ಈ ಸಲಹೆಗೆ ಅನುಗುಣವಾಗಿ ಸರ್ವ ದೇವತೆಗಳು ಹೂ ಬಾಣದೊಡೆಯ ಕಾಮನನ್ನೂ ಅವನೊಂದಿಗೆ ವಸಂತನನ್ನೂ ಕಳುಹಿಸಿದರು ತಮ್ಮ ಕಾರ್ಯ ಸಾಧನೆಯನ್ನು ಜಾಣ್ಮೆಯಿಂದ ಸಾಧಿಸಲು, ಆ ಶಿವನ ಬಳಿಗೆ.

ತಪೋನಿರತ ಶಿವನನ್ನು ಕಂಡು, ಮನ್ಮಥನಿಗೂ ಸಂದೇಹವೇ. 'ಶಿವನು ಲೋಕಗುರುವು. ಅವನ ಮನಸ್ಸು ವಜ್ರಕ್ಕಿಂತಲೂ ಕಠಿಣ. ಇಂಥವನನ್ನು ನನ್ನ ಬಾಣಗಳು ತಾಕಿ ಇಚ್ಛಿತ ಪರಿಣಾಮ ಬೀರುತ್ತವೋ? ಇಲ್ಲವೋ?' ಎಂದು, ಈ ಮೀನಮೇಷ ಎಣಿಸುತ್ತಿರುವಾಗಲೇ ಶಿವ ಫಳಕ್ಕನೇ ಮೂರನೆಯ ಕಣ್ಣು ತೆರೆದು ಮನ್ಮಥನತ್ತ ಅವಲೋಕಿಸಿದ. ಕೆಂಗಣ್ಣಿನ ಉರಿಜ್ವಾಲೆಗೆ ಮನ್ಮಥ ತಕ್ಷಣ ಭಸ್ಮೀಭೂತನಾದ.

ಮನ್ಮಥನ ಕಾರ್ಯಪ್ರಗತಿ ಕಾಣಲೆಂದು ಬಂದ ದೇವತೆಗಳೆಲ್ಲ ಮನ್ಮಥನು ಭಸ್ಮವಾಗಿದ್ದನ್ನು ಕಂಡು ಭಯಭೀತರಾದರು. ಪರಶಿವನ ಪ್ರತಾಪ, ಪರಿಣಾಮ ಅರಿತು ಅವನಿಗೆ ಶರಣಾಗಿ, 'ಓ ದೇವ, ಮಹಾದೇವ, ತಾರಕನಿಂದ ನಮಗೆ ಭಯಉಂಟಾಗಿದೆ. ಅದನ್ನು ಹೋಗಲಾಡಿಸಲು ನೀನು ಗಿರಿಜೆಯನ್ನು ಮದುವೆಯಾಗುವದು ಅವಶ್ಯ' ಎಂದು ಸಲಹೆ ನೀಡಿದಾಗ, ಶಿವ ಅವರಮಾತಿಗೆ ಸಮ್ಮತಿಸಿದ. ದೇವತೆಗಳು, ನಾನು (ಬ್ರಹ್ಮ), ಶ್ರೀಹರಿ ವಶಿಷ್ಠ ಅರುಂಧತಿಯರೆಲ್ಲರೂ ಸೇರಿಕೊಂಡು ಮುಂದೆ ಶಿವ-ಗಿರಿಜೆಯರ ವಿವಾಹ ನೆರವೇರಿಸಿದೆವು. ಹಿಮವಂತ ಹಾಗೂ ಮಹೇಶ್ವರರಲ್ಲಿ ಸಂಬಂಧ ಬೆಳೆಯಿತು. ದೇವತೆಗಳ ಚಿಂತೆಯೂ ದೂರಾಯಿತು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿದುದು*

—○—

## ಬ್ರಹ್ಮನ ಪಾಪವಿಮೋಚನೆಗೆ ಪರಶಿವನ ಪವಿತ್ರ ಕಮಂಡಲು ಪ್ರದಾನ

ಅಧ್ಯಾಯ - ೨೧

**ಬ್ರಹ್ಮ**:- ಹಿಮಾಲಯ ಸಕಲ ವನ್ಯ ಸಂಪತ್ತಿನ ಆಗರ, ಹಲವಾರು ಪುಣ್ಯ ಕ್ಷೇತ್ರಗಳ ಆಗರ. ಅಲ್ಲಿ ಹಲವಾರು ನದಿ, ಸರೋವರಗಳು ಉಗಮಿಸಿ, ಸುತ್ತಲಿನ ಪ್ರದೇಶವೆಲ್ಲವನ್ನೂ ಸುಂದರ ವನಪ್ರದೇಶವನ್ನೂ ಸದಾ ಹಸಿರು, ಹೂವು, ಹಣ್ಣುಗಳಿಂದ ರಮಣೀಯಗೊಳಿಸಿವೆ. ಇದರಲ್ಲಿ ಹಲವು ವಿಧದ ವನ್ಯಮೃಗಗಳು, ಪಕ್ಷಿಗಳು ವಾಸವಾಗಿದ್ದು, ಯಕ್ಷ, ಕಿನ್ನರ, ದೇವ, ಗಂಧರ್ವರು ನಲಿದಾಡುವ ಸುಂದರ ಧಾಮ, ರಸಿಕರ ರಮಿಸುವ ವೃಂದಾವನವಾಗಿದೆ. ಇಂತಹ ಹಿಮಾಲಯದಲ್ಲಿ ಗಿರಿಜಾ-ಶಿವರ ಮದುವೆ ವಿಜೃಂಭಣೆಯಿಂದ ನಡೆಯಿತು. ಸುಂದರವಾಗಿ ಶಿವನು ಕುಳಿತುಕೊಳ್ಳಲು ವೇದಿಕೆಗಳನ್ನು ಋಷಿಗಳೂ, ಲೋಕಪಾಲಕರೂ, ಆದಿತ್ಯರೂ ಕೂಡಿ ಕಲಾತ್ಮಕವಾಗಿ ನಿರ್ಮಿಸಿದರು. ಸ್ವಯಂ ವಿಶ್ವಕರ್ಮನೇ ಈ ಕೆಲಸವನ್ನು ಅತ್ಯಾಸಕ್ತಿ ವಹಿಸಿ ನಿರ್ವಹಿಸಿದನೆಂದಮೇಲೆ ವರ್ಣಿಸುವ ಅವಶ್ಯಕತೆಯೇ ಇಲ್ಲ. ಕಾಮಧೇನು ಕಲ್ಪವೃಕ್ಷಗಳೇ ಮದುವೆಯ ಉಣಿಸು, ತಿನಿಸು ಪೂರೈಸಿದವು. ವರುಣ ಪಾನವಸ್ತುಗಳನ್ನೂ, ಧನಪತಿಯಾದ ಕುಬೇರನು ದಾನದಕ್ಷಿಣೆ ನೀಡುವ ಹೊಣೆ ಹೊತ್ತನು. ವೇದ, ಉಪನಿಷತ್ತುಗಳೇ ಸಾಕಾರವಾಗಿ ಸ್ತುತಿಸಿದವು.

ಹೀಗಿರಲು ಆ ಪರಶಿವನು ದಯಾದೃಷ್ಟಿಯಿಂದ, ಲೋಕಹಿತಕ್ಕಾಗಿ ದೇವಿಯೊಡನೆ ಬಂದು ಭೂಜಲಗಳಪವಿತ್ರಸಾರವನ್ನೇ ಸ್ವಯಂ ತೆಗೆದನು. ಇಡೀ ಭೂಮಿಯನ್ನೇ ಕಮಂಡಲುಮಾಡಿ ಅದರಲ್ಲಿ ಜಲವನ್ನಿರಿಸಿದ. ''ಪವಮಾನ'' ಸೂಕ್ತಪಠಿಸಿ, ಅಭಿಮಂತ್ರಿಸಿ, ಮೂರುಲೋಕಗಳನ್ನು ಪವಿತ್ರಗೊಳಿಸುವ ಶಿವಶಕ್ತಿಯನ್ನು ಅಲ್ಲಿ ಧ್ಯಾನಿಸಿದನು. ಆಮೇಲೆ ಪರಮೇಶ್ವರನು ಈ ಕಮಂಡಲವನ್ನು ತೆಗೆದುಕೊಳ್ಳಲು ನನಗೆ (ಬ್ರಹ್ಮನಿಗೆ) ಹೇಳಿದನು.

ಈ ಕಮಂಡಲಿನಲ್ಲಿದ್ದ ಜಲವು ಪಂಚಮಹಾಭೂತಗಳಲ್ಲೇ ಶ್ರೇಷ್ಠವಾಗಿದ್ದು ಈ ಜಲಸ್ಪರ್ಶಮಾತ್ರದಿಂದ, ಇಲ್ಲವೆ ದರ್ಶನ, ಸ್ಮರಣೆಯಿಂದ ಸರ್ವಪಾಪ ನಾಶ. ನಿಜ ಹೇಳಬೇಕೆಂದರೆ ಈ ಕಮಂಡಲದಲ್ಲಿರುವ ಜಲವು ಧರ್ಮವೇ ಸಾರರೂಪವಾಗಿ ನೀರಾಗಿದೆ. ಇದರಲ್ಲಿ ಅನಾದಿಧರ್ಮ ಹಾಗೂ ಭೋಗ, ಮೋಕ್ಷಗಳು ಸಾನಿಧ್ಯ ಹೊಂದಿವೆ. ಭೂಮಿ ಹಾಗೂ ಜಲವು ಲೋಕಮಾತೆಯರಂತೆ. ಜಗತ್ತಿನ ಸ್ಥಿತಿಲಯಗಳಿಗೆ ಕಾರಣ. ಜಗತ್ತಿನ ಸರ್ವಪ್ರಾಣಿಗಳಿಗೆ ಆಧಾರ, ಅದು ಜೀವದ ಜೀವಾಳ. ಈ ಕಮಂಡಲಿನಲ್ಲಿರುವ ಜಲವು-ಅಮೃತದಂತೆ ಅಪ್ಯಾಯಮಾನ. ಪತಿತಪಾವನ, ಇದಕ್ಕಿಂತ ಪವಿತ್ರತಮ ವಸ್ತು ಬೇರೊಂದಿಲ್ಲ. ಕಮಂಡಲುವಿನ ಜಲವನ್ನು ಸ್ಮರಿಸಿದರೆ ಸಾಕು ಬೆಳಗಿನ ಸೂರ್ಯಕಿರಣ ಕಂಡೊಡನೆ ಮಂಜು ಮರೆಯಾಗುವಂತೆ ಸರ್ವಪಾಪಗಳು ಕರಗಿ ಹೋಗುತ್ತವೆ.

ಮಹಾದೇವನ ಆಣತಿಯಂತೆ ಬ್ರಹ್ಮನು ಕಮಂಡಲು ತೆಗೆದುಕೊಂಡನು. ದೇವತೆಗಳು ಹರ್ಷೋದ್ಗಾರಮಾಡಿದರು. ಹೀಗೆ ಶಿವ-ಗಿರಿಜೆಯರ ಭರ್ಜರಿ ವಿವಾಹದಲ್ಲಿ ಅನಿರೀಕ್ಷಿತವಾಗಿ ಅಚಾತುರ್ಯ ಒಂದು ಸಂಭವಿಸಿತು. ಜಗಜ್ಜನನಿಯ ಬಲಗಾಲಿನ ಸುಂದರ ಹೆಬ್ಬೆರಳನ್ನು ನೋಡಿ ಬ್ರಹ್ಮನ ಮನಸ್ಸು ವಿಚಲಿತವಾಯಿತು. ಚತುರಾನನು ಕ್ಷಣಕಾಲ ಕಾಮವಿಕಾರಕ್ಕೆ ಒಳಗಾದನು. ನಂತರ ತನ್ನಪಾಪದ ಅರಿವಾಯಿತು. ಪರಶಿವನ ಕ್ಷಮೆಯಾಚಿಸಿದ. ಆ ಪಾಪ ಪರಿಮಾರ್ಜನೆಗಾಗಿಯೇ ಶಿವನು ಕಮಂಡಲುವಿನಲ್ಲಿ ಗಂಗೆಯನ್ನು ಅಭಿಮಂತ್ರಿಸಿಕೊಟ್ಟು ಉಪಕರಿಸಿದ.

## ಗಂಗೆ, ಮಹೇಶ್ವರ ಜಟಾಗಮನ ವರ್ಣನ

**ನಾರದ:-** ಓ ದೇವ, ನಿನ್ನ ಕಮಂಡಲುವಿನಲ್ಲಿದ್ದ ಪುಣ್ಯಕರ ಗಂಗಾನದಿಯು ಭೂಮಿಗೆ ಅವತರಿಸಿದ ಇತಿಹಾಸವನ್ನು ವಿಸ್ತರಿಸಿ ಹೇಳಬೇಕು. ಸುರನದಿಯು ಗಂಗೆಯಾಗಿ ಭಾರತ ಭೂಮಿಗೆ ಬಂದಿಳಿಯಲು ಹೊಂದಿದ ಉದ್ದೇಶವನ್ನು ವಿವರಿಸು.

**ಬ್ರಹ್ಮ:-** ಬಹುಕಾಲದ ಹಿಂದೆ ಬಲಿ ಎಂಬ ದೈತ್ಯನೊಬ್ಬ ಬಲಿಷ್ಠನಾಗಿದ್ದ. ತನ್ನ ಅತುಲ ಪರಾಕ್ರಮದಿಂದ ದೇವಾನುದೇವತೆಗಳನ್ನೂ ಸೋಲಿಸಿದ್ದ. ಬಲಿ ಇಷ್ಟು ಬಲಾಢ್ಯನಾಗಲು ಅವನಲ್ಲಿದ್ದ ಪ್ರಜಾವಾತ್ಸಲ್ಯ, ಗುರುಭಕ್ತಿ, ಸತ್ಯಾಚರಣೆ, ಸಂಯಮ ತ್ಯಾಗಮನೋವೃತ್ತಿಗಳೆಲ್ಲ ಮೇಳವಿಸಿದ್ದವು. ಬಲಿಯ ಈ ಮಹತ್ವಗತಿ, ಅತುಲಐಶ್ವರ್ಯ, ಕೀರ್ತಿಗಳನ್ನು ಕಂಡು, ಅವನ ವೈರಿಗಳಷ್ಟೇ ಅಲ್ಲದೆ ದೇವತೆಗಳಲ್ಲೂ ಮತ್ಸರ ಮೊಳೆಯಿತು.

ಬಲಿ ಚಕ್ರವರ್ತಿ ರಾಜ್ಯವು ಸುಖ, ಶಾಂತಿ, ಸದ್ಧರ್ಮಗಳ ಆಗರವಾಗಿತ್ತು. ರೋಗ ರುಜಿನಗಳು, ಬರಗಾಲ, ಅಕಾಲವೃಷ್ಟಿಗಳನ್ನು ಪ್ರಜೆಗಳು ಸ್ವಪ್ನದಲ್ಲೂ ಕಂಡಿರಲಿಲ್ಲ. ಬಲಿಯ ಸರ್ವತೋಮುಖ ಶೌರ್ಯ, ಅಭಿವೃದ್ಧಿ, ಸಾಹಸಗಳಿಂದ ದೇವತೆಗಳು ಅಸೂಯಾಪರರಾಗಿದ್ದರು. ಬಲಿಯ ಈ ಪ್ರಚಂಡ ಪ್ರತಾಪದಿಂದ ಅಸೂಯೆಗೊಂಡ ದೇವತೆಗಳು ಬಲಿಯನ್ನು ನಿರ್ಮೂಲಮಾಡಲು ಹೊಂಚುಹಾಕುವ ಉಪಾಯ ಕಂಡುಕೊಳ್ಳಲು, ಶ್ರೀಹರಿಯ ಬಳಿಗೆಹೋದರು. ಅವನನ್ನು ಪರಿಪರಿಯಾಗಿ ಸ್ತುತಿಸಿದರು. ತಮ್ಮ ಆಂತರಿಕ ವಿಚಾರ, ವೇದನೆಗಳನ್ನು ಆ ವೇದಪುರುಷನ ಮುಂದೆ ವಿವರಿಸಿಕೊಂಡು, "ಓ ದೇವ, ದೇವ, ನಿನ್ನ ಐಶ್ವರ್ಯ ಬಲದಿಂದಲೇ ನಾವು ವೀರ್ಯವಂತರಾಗಿ, ಮೂರು ಲೋಕಗಳನ್ನು ಜಯಿಸಿ, ಪುನಃ ನಮ್ಮ ನಮ್ಮ ಸ್ಥಾನ ಪಡೆಯುವೆವು. ಹೀಗಿದ್ದರೂ ಆ ದೈತ್ಯ ಬಲಿಯನ್ನು ನಮಸ್ಕರಿಸುವದು ಹೇಗೆಂಬುದು ತಿಳಿಯದಾಗಿದೆ" ಎಂದಾಗ ಅವರ ಅಂತರಂಗದ ಅಳಲನ್ನು ಚೆನ್ನಾಗಿ ಅರಿತ ಶ್ರೀಹರಿಯು ನಗುತ್ತ 'ದೇವತೆಗಳೇ, ಬಲಿಚಕ್ರವರ್ತಿಯು ನನ್ನ ಭಕ್ತನು. ದೇವ ದಾನವರಾರೂ ಅವನನ್ನು ಜಯಿಸಲಾರರು. ಆದುದರಿಂದ ಯುದ್ಧಮಾಡದೆಯೇ ಉಪಾಯಾಂತರದಿಂದ, ನನ್ನ ಚಾತುರ್ಯತೆಯಿಂದ ಬಲಿಯನ್ನು ಬಂಧಿಸಿ, ನಿಮಗೆಲ್ಲ ರಾಜ್ಯವನ್ನು ಮರಳಿ ಕೊಡಿಸುವೆನು' ಎಂದು ಅಭಯ ಹೇಳಿದ. ಹರಿಯ ಅಭಯದಿಂದ ನಿರ್ಭೀತರಾಗಿ ದೇವತೆಗಳು ತೆರಳಿದರು.

ತನ್ನ ವಚನಪರಿಪಾಲನೆಗಾಗಿ, ಭಗವನ್ ನಾರಾಯಣನು ಅದಿತಿ ಗರ್ಭದಲ್ಲಿ ಪ್ರವೇಶಿಸಿ, ವಾಮನನಾಗಿ ಅವತರಿಸಿ ಬಂದ. ಇದೇ ಸಮಯಕ್ಕೆ ಮಹಾಬಲಿಷ್ಠನಾದ ಬಲಿಯು ಮಹಾಯಜ್ಞವನ್ನು ಹಮ್ಮಿಕೊಂಡಿದ್ದ. ಆ ಅಶ್ವಮೇಧಯಾಗ ಅದ್ದೂರಿಯಿಂದ ಜರುಗಿತು. ಸಮಾರಂಭಕ್ಕೆ ಶುಕ್ರಾಚಾರ್ಯನೇ ಪುರೋಹಿತ. ಸ್ವಯಂ ಬಲಿಯೇ ಯಜ್ಞ ದೀಕ್ಷೆವಹಿಸಿದ್ದ, ಯಜಮಾನನಾಗಿದ್ದ. ಹವಿರ್ಭಾಗ ತೆಗೆದುಕೊಳ್ಳಲು ದೇವ ಗಂಧರ್ವರೆಲ್ಲ ಒಂದಾಗಿ ಮುಂದಾಗಿ ಸಮಾರಂಭಕ್ಕೆ ಬಂದಿದ್ದರು.

ಅಶ್ವಮೇಧಯಜ್ಞ ಕಾರ್ಯಕಲಾಪಗಳು ವಿದ್ಯುಕ್ತವಾಗಿ ನಡೆದಿದ್ದವು. ಆಗ ವಾಮನ ಮೂರ್ತಿಯು ಸಾಮಗಾನ ಹಾಡುತ್ತ ಯಜ್ಞಮಂಟಪ ಸಮೀಪಿಸಿದ. ವಾಮನರೂಪಿಯನ್ನು ಕಂಡು ಶುಕ್ರಾಚಾರ್ಯನು 'ಈ ಬ್ರಾಹ್ಮಣ ವಟುವು ಸಾಮಾನ್ಯನಲ್ಲ. ರಾಕ್ಷಸರನ್ನು ಉಪಾಯಾಂತರದಿಂದ ನಿರ್ನಾಮಮಾಡಲು ಬಂದ ಹರಿಯೇ' ಎಂದು ಮುಂದಾಗಿಯೇ

ಊಹಿಸಿದ. ಕೂಡಲೇ ಎದ್ದುಬಂದು ಯಜ್ಞಪುರುಷನ ಧ್ಯಾನಮಾಡುವದರಲ್ಲಿ ತಲ್ಲೀನನಾಗಿದ್ದ ಬಲಿಯನ್ನು ಕುರಿತು, 'ದೇವತೆಗಳಿಗಾಗಿ ವಾಮನ ರೂಪ ಧರಿಸಿಬಂದಿರುವವನು- ಸಾಮಾನ್ಯ ಬ್ರಾಹ್ಮಣನಲ್ಲ ಶ್ರೀಹರಿಯೇ ನಿನ್ನನ್ನು ಯಾಚಿಸಲು ಬಂದಿದ್ದಾನೆ. ನೀನು ದಾನ ಕೊಡುವಾಗ ನನ್ನ ಸಲಹೆ ತೆಗೆದುಕೊಂಡು ಮುನ್ನಡಿ ಇಡು. ಇಲ್ಲವಾದರೆ 'ನಿನಗೇ ಕೇಡು' ಎಂದು ಎಚ್ಚರಿಸಿದ.

ಆದರೆ ಶುಕ್ರಾಚಾರ್ಯನ ಮಾತು ಬಲಿಯನ್ನು ಎಚ್ಚರಿಸಲಿಲ್ಲ. ಅದಕ್ಕೆ ಬದಲಾಗಿ ಮಾರ್ನುಡಿದ ಬಲಿ- 'ಯಜ್ಞಪತಿಯೇ ಸ್ವಯಂ ನನ್ನ ಮನೆಗೆ ಬಂದು ದಾನ ಕೇಳಿದರೆ ನಾನು ಧನ್ಯನೇ ಸರಿ. ಅವನೇ ದಾನ ಕೇಳಿದರೆ ಇಲ್ಲವೆನ್ನಲಾದೀತೆ? ಅಲ್ಲದೆ ದಾನ ಕೊಡುವಾಗ ಯಾರೊಡನೆ ಆಲಿಸಬೇಕಾದ ಅಗತ್ಯವೇ ಇಲ್ಲ.' ಯಜ್ಞಮಂಟಪ ಪ್ರವೇಶಿಸಿ ನಿಂತ ವಾಮನ ಮೂರ್ತಿಗೆ, ಬಲಿ ರಾಜದಂಪತಿಗಳು ಸಾಷ್ಟಾಂಗವೆರಗಿದರು. ಯತಿಯನ್ನು ಕುರಿತು 'ಏನು ದಾನ ಬೇಡುವೆ, ಬೇಡು' ಎಂದು ಕೇಳಿದಾಗ ಆ ವಾಮನನು 'ಮೂರುಹೆಜ್ಜೆ ಇಡುವಷ್ಟು ಭೂಮಿಕೊಡು' ಎಂದಾಗ ಬಲಿರಾಜನು ವಾಮನನಿಗೆ ಮೂರು ಪಾದದಷ್ಟು ಭೂಮಿದಾನವನ್ನು ನೀಡಿದನು. ಅವನು ದಾನ ನೀಡಿದಾಕ್ಷಣ ಕುಬ್ಜನಾದ ವಾಮನ ಮೂರ್ತಿ ಇದ್ದಕ್ಕಿದ್ದಂತೆ ಆಕಾಶದೆತ್ತರಕ್ಕೆ ಬೆಳೆದು ನಿಂತ. ವಾಮನಾವತಾರಿ ಈಗ ವಿಕ್ರಮಾವತಾರ ತಾಳಿದ.

ಹೆಂಡತಿಯೊಡನೆ ಬಂದ ಬಲಿಚಕ್ರವರ್ತಿಯು ವಿನಯದಿಂದ ನುಡಿದ- 'ಓ ದೇವನಾದ ವಿಷ್ಣುವೆ, ನಾನು ಜಗತ್ತೆಲ್ಲವನ್ನು ಜಯಿಸಿರುವೆ. ಈ ಜಗತ್ತನ್ನು ಜಗನ್ಮಯನಾದ ನೀನು ನಿನ್ನ ಶಕ್ತಿ ಎಲ್ಲವನ್ನೂ ಪ್ರಯೋಗಿಸಿ ಆಕ್ರಮಿಸು.' ಕೂಡಲೇ ಯಜ್ಞಪುರುಷನಾದ ಶ್ರೀಹರಿಯು ಮೊದಲು ಆದಿಕೂರ್ಮನ ಮೇಲೊಂದು ಹೆಜ್ಜೆಇಟ್ಟು ಬಲಿಯ ಯಜ್ಞಶಾಲೆಯವರೆಗಿನ ಭೂಮಿಯನ್ನು ಆಕ್ರಮಿಸಿದನು. ಅವನ ಇನ್ನೊಂದುಹೆಜ್ಜೆ ಬ್ರಹ್ಮಲೋಕದವರೆಗಿನ ಭೂಮಿಯನ್ನೆಲ್ಲ ಆಕ್ರಮಿಸಿತು. ಬಳಿಕ ಮೂರನೆಯ ಹೆಜ್ಜೆಗೆ ಸ್ಥಳಾವಕಾಶ ಬೇಡಿದ ವಾಮನ. ಬೇರೆ ಉಪಾಯಗಾಣದೆ ಬಲಿಯ ಬೇಡಿಕೆಯಂತೆ ಅವನ ಬೆನ್ನ ಮೇಲೆ ಮೂರನೆಯ ಹೆಜ್ಜೆ ಇಟ್ಟ.

ಅವನ ಸತ್ಯಪರಾಯಣತೆ, ಧರ್ಮ ದೃಷ್ಟಿಯನ್ನು ಕಂಡು ಶ್ರೀಹರಿ ಮನವಾರೆ ಮೆಚ್ಚಿ ಪ್ರಸನ್ನನಾಗಿ 'ನಿನ್ನ ಭಕ್ತಿಗೆ ಮೆಚ್ಚಿರುವೆ ಬೇಕಾದ ವರವನ್ನು ಕೇಳಿಕೊ' ಎಂದ. ಬಲಿ ವರಯಾಚಿಸಲಿಲ್ಲ. ಆದರೂ ವಾಮನಮೂರ್ತಿ ವರಗಳನ್ನು ಕರುಣಿಸಿದ.

'ಬಲಿರಾಜ, ಪಾತಾಳಲೋಕಕ್ಕೆ ಈ ಕಲ್ಪದ ಕೊನೆಯವರೆಗೆ ನೀನು ಒಡೆಯನಾಗು. ಮುಂದಿನ ಕಲ್ಪದಲ್ಲಿ ಇಂದ್ರಪದವಿಯನ್ನು ಹೊಂದು.' ಬಲಿಗೆ ವರ ಅನುಗ್ರಹಿಸಿದ ಶ್ರೀಹರಿಯು ಬಲಿಯನ್ನು ಅವನ ಪತ್ನಿ, ಪುತ್ರರೊಡನೆ ಪಾತಾಳದಲ್ಲಿ ವಾಸಿಸಲು ಅವಕಾಶ ಕಲ್ಪಿಸಿ, ಇಂದ್ರನಿಗೆ ದೇವಸಾಮ್ರಾಜ್ಯವನ್ನು ತಿರುಗಿ ಕೊಡಿಸಿದ.

**ಬ್ರಹ್ಮ**:- ವಿಷ್ಣುವಿನ ಎರಡನೆಯ ಪಾದವು ಬ್ರಹ್ಮಲೋಕವನ್ನು ಪ್ರವೇಶಿಸಿದಾಗ ಭಗವಂತನ ಆ ಪಾದವನ್ನು ಕಂಡು ಹರ್ಷಪುಲಕಿತನಾಗಿ ನಾನು ಎದ್ದು ನಿಂತೆ. ನನ್ನ ಹತ್ತಿರ ಒಂದು ಕಮಂಡಲು ಇತ್ತು. ಅದರಲ್ಲಿ ಪರಮೇಶ್ವರನಿಂದ ಅನುಗೃಹೀತವಾದ ಗಂಗಾಜಲ ತುಂಬಿತ್ತು. ಪರಮ ಪವಿತ್ರವಾದ ಗಂಗಾಜಲವುಳ್ಳ ಕಮಂಡಲವನ್ನು ಹಿಡಿದು ಭಕ್ತಿಯಿಂದ ಶ್ರೀಹರಿಯನ್ನು ಸ್ತುತಿಸುತ್ತ, ಶ್ರೀಹರಿಯ ಪಾದದ ಬಳಿಗೆ ಬಂದೆ. ಅವನ ಪಾದಕ್ಕೆ

ಗಂಗಾಜಲದಿಂದ ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಿದೆ. ನಾನೂ, ಗಂಗೆಯೂ ಇಬ್ಬರೂ ಕೃತಾರ್ಥರಾದೆವು. ಶ್ರೀಹರಿಯ ಪಾದಪ್ರಕ್ಷಾಲನದಿಂದ ಪರಮಪಾವಿತ್ರ್ಯವನ್ನು ಸಂಪಾದಿಸಿದ ಆ ಗಂಗಾಜಲವು ಮೇರುಗಿರಿಯ ಕೆಲ ಭಾಗಗಳಲ್ಲಿ ಬಿದ್ದಿತು. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಂಬ ನಾಲ್ಕು ದಿಕ್ಕುಗಳಲ್ಲೂ ಪ್ರವಹಿಸಿತು. ದಕ್ಷಿಣ ದಿಕ್ಕಿನಲ್ಲಿ ಬಿದ್ದ ನೀರನ್ನು ಪರಶಿವನು ತನ್ನ ಜಟಾಜೂಟಗಳಲ್ಲಿ ಬಂಧಿಸಿದ. ಪೂರ್ವ ದಿಕ್ಕಿನಲ್ಲಿ ಬಿದ್ದ ಗಂಗಾಜಲವನ್ನು ಋಷಿಗಳೂ, ದೇವತೆಗಳೂ, ಪಿತೃದೇವತೆಗಳೂ ಸ್ವೀಕಾರ ಮಾಡಿದರು. ಉತ್ತರದಲ್ಲಿ ಬಿದ್ದ ಗಂಗೆಯನ್ನು ಶ್ರೀಹರಿ ಸ್ವಯಂ ಸ್ವೀಕರಿಸಿದ. ಪಶ್ಚಿಮದಲ್ಲಿ ಬಿದ್ದು, ಆಚೀಚೆ ಹರಿದಾಡಿದ ಆ ನೀರು ಪುನಃ ನನ್ನ ಕಮಂಡಲವನ್ನೇ ಸೇರಿತು. ಗಂಗೆಯು ಬ್ರಹ್ಮನ ಕಮಂಡಲುವಿನಿಂದ, ಹರನ ಶಿರದಿಂದ, ಹರಿಯ ಪಾದಗಳಿಂದ ಹೀಗೆ ಅನೇಕ ಪವಿತ್ರ ಸ್ಥಳಗಳಿಂದ ಹರಿದು ಬಂದ ಕಾರಣದಿಂದಲೇ ಅತ್ಯಂತ ಪವಿತ್ರವಾದ ನದಿ ಎನಿಸಿದೆ.

**ನಾರದ:-** ಬ್ರಹ್ಮದೇವ, ನಿನ್ನ ಕಮಂಡಲುವಿನಲ್ಲಿದ್ದ ಗಂಗಾದೇವಿಯನ್ನು ಶಿವನ ಜಟೆಯಿಂದ ಭೂಲೋಕಕ್ಕೆ ತಂದವರು ಯಾರು?

**ಬ್ರಹ್ಮ:-** ಮಹಾತ್ಮನಾದ ಗೌತಮ ಮುನಿಯು, ಶಿವನನ್ನು ಪೂಜಿಸಿ, ಒಲಿಸಿ ಅವನ ಜಟೆಯಲ್ಲಿದ್ದ ಗಂಗಾದೇವಿಯ ಒಂದು ಅಂಶವನ್ನು ಭೂಮಿಗೆ ತಂದ. ಗಂಗೆಯನ್ನು ಇನ್ನೊಂದು ಅಂಶವನ್ನು ಮಹಾತ್ಮನಾದ ಭಗೀರಥನು ಮಹಾ ಸಾಹಸ ಮಾಡಿ ಭೂಮಿಗೆ ತಂದ. ಹೀಗೆ ಭಗೀರಥ ಮತ್ತು ಗೌತಮಮುನಿ ಇವರೀರ್ವರೂ ಗಂಗೆಯನ್ನು ಪ್ರತ್ಯೇಕ ಪ್ರತ್ಯೇಕವಾಗಿ ಭೂಮಿಗೆ ಬರಮಾಡಿಕೊಂಡರು. ಇದರಿಂದಾಗಿ ಗಂಗೆ ದ್ವಿವಿಧವಾಗಿ ವಿಭಕ್ತಳಾಗಿ ಇರುವಳು.

ಲೋಕ ಪಾವನೆಯಾದ ಗಂಗೆಯ ಮೇಲೆ ಶಿವನಿಗೆ ಇನ್ನಿಲ್ಲದ ಅನುರಾಗ. ಅವಳ ಪಾವಿತ್ರ್ಯ, ಪರಿಶುಭ್ರತೆ, ಪರೋಪಕಾರ ಪ್ರವೃತ್ತಿ, ಭಗವದ್ಭಕ್ತಿ ಈ ಎಲ್ಲ ಗುಣಗಳಿಂದ ಪರಶಿವನಿಗೆ ಅವಳಲ್ಲಿ ಅತಿಶಯ ಅನುರಾಗ. ಶಿವನ ಈ ಸ್ವಭಾವ ಶಿವಸತಿಗೆ ನುಂಗಲಾಗದ ಬಿಸಿ ತುಪ್ಪವಾಯಿತು. ಶಿವನ ಶಿರವನ್ನು ಅಡರಿ, ಸ್ವಚ್ಛಂದವಾಗಿ ಸಂಚರಿಸುವ ಗಂಗೆಯನ್ನು ಕೆಕ್ಕರಗಣ್ಣಿನಿಂದ ದಿಟ್ಟಿಸಿದಳು-ಪಾರ್ವತಿ. ಗಂಗೆ ಸೊಪ್ಪು ಹಾಕದೆ ತನ್ನಷ್ಟಕ್ಕೆ ತಾನು ಇದ್ದಳು. ಪಾರ್ವತಿಗೆ ಸಹಿಸಲಾಗಲಿಲ್ಲ. ಶಿವನ ಹತ್ತಿರ ಬಂದು ಗಂಗೆಯನ್ನು ದೂರಿದಳು- 'ಅವಳು ಮಹಾ ಅಹಂಕಾರಿ, ಅವಳನ್ನು ತ್ಯಜಿಸಿ ಬಿಡು' ಎಂದು ಅನುನಯಿಸಿ ಒಪ್ಪಿಸಲು ಯತ್ನಿಸಿದಳು. ಶಿವ ಅವಳಮಾತಿಗೆ ಒಪ್ಪಲಿಲ್ಲ. ರಸಮಯಿಯಾದ ಗಂಗೆಯನ್ನು ಬಿಟ್ಟುಕೊಡಲು ರಸಿಕಾಗ್ರಣಿಯಾದ ಶಿವನು ಅದೆಂತು ಒಪ್ಪುತ್ತಾನೆ. ಆದರೆ ಪಾರ್ವತಿಯು ತನ್ನ ಪ್ರಯತ್ನ ಮುಂದುವರಿಸಿದಳು. ಶಿವನಿಲ್ಲದ ಸಮಯದಲ್ಲಿ ಮಕ್ಕಳಾದ ವಿನಾಯಕ, ಸ್ಕಂದ ಇವರನ್ನು ಬಳಿಗೆ ಕರೆದಳು. ದುಃಖದಿಂದ ಮಕ್ಕಳೆದುರು ಗೋಳನ್ನು ತೋಡಿಕೊಂಡಳು. 'ನಾನಿರುವಾಗ ಗಂಗೆಯನ್ನು ತಲೆಯ ಮೇಲೆ ಕೂರಿಸಿಕೊಂಡು ನಿಮ್ಮ ತಂದೆ ಅಹೋರಾತ್ರಿ ಉನ್ಮತ್ತನಂತೆ ನೃತ್ಯಮಾಡುತ್ತಿರುವನು, ಇದು ಸರಿಯೆ? ನಾನೇ ಪತಿಯ ಬಳಿಗೆ ಹೋಗಿ, ಗಂಗೆಯನ್ನು ಬಿಡುವಂತೆ ಪ್ರಾರ್ಥಿಸಿದರೂ ಬಿಡಲು ಒಪ್ಪಲಿಲ್ಲ. ನನಗೇನು ಬೆಲೆ ಉಳಿಯಿತು. ನಾನೇಕೆ ಇಲ್ಲಿ ಇರಬೇಕು? ಪತ್ನಿಪುತ್ರರು ಇವರಿಗೆ ಬೇಡವಾದ ನನ್ನ ಜೀವನ ನಡೆಯುವದರಿಂದ ಏನು ಫಲ! ನಿಮ್ಮ ಹಾಗೂ ನಿಮ್ಮ ತಂದೆಯ ಮುಂದೆ ಗಂಗೆಯನ್ನು ದೂರುವದಕ್ಕೆ ಬದಲಾಗಿ, ಕಣ್ಣೀರು ಹರಿಸಿ ನಿಮಗೆ ಕಿರಿಕಿರಿ ಉಂಟುಮಾಡುವ ಬದಲಾಗಿ, ಹಿಮಾಲಯಕ್ಕೆ

ಹೋಗಿಬಿಡುವೆ; ಘೋರ ತಪಸ್ಸಿನಲ್ಲಿ ತೊಡಗುವೆ. ಗಂಗೆಯೊಡನೆ ಸ್ವಚ್ಛಂದವಾಗಿ, ಸುಖವಾಗಿ ಪರಮೇಶ್ವರ ಇರಲಿ. ನೀವೂ ನಿರಾತಂಕವಾಗಿ ಇರಿ. ಇದೋ ನಾನು ಹೊರಟೆ....' ಎಂದು ಗದ್ಗದ ಕಂಠದಿಂದ ಮನದ ಅಳಲನ್ನು ಮಕ್ಕಳೆದುರು ಬಿಡಿಸಿದಳು.

**ವಿನಾಯಕ:-** 'ಅಮ್ಮಾ, ನೀನೇಕೆ ಇಷ್ಟು ನೊಂದಿರುವೆ? ನಿನ್ನನ್ನು ಬಿಟ್ಟು ನಾವು ಇರಲಾರೆವು. ಪರಶಿವನೂ ಇರಲಾರ. ನಿನಗೆ ಇದು ತಿಳಿದೇ ಇದೆ. ಅನ್ಯಥಾ ಆಲೋಚನೆ ಮಾಡದೆ, ಸಮಾಧಾನದಿಂದಿರು. ಶಿವ ಗಂಗೆಯನ್ನು ತ್ಯಜಿಸುವದು ಖಂಡಿತ. ನನ್ನ ಮಾತಿನ ಮೇಲೆ ವಿಶ್ವಾಸವಿಡು. ನಾನು ಮತ್ತು ನಿನ್ನ ಸಖಿಯಾದ ಜಯಾ ಇಬ್ಬರೂ ಸೇರಿ. ಉಪಾಯದಿಂದ ಶಿವನಿಂದ ಗಂಗೆ ಬೇರ್ಪಡುವಂತೆ ಪ್ರಯತ್ನಿಸುತ್ತೇನೆ. ಅಮ್ಮಾ, ನಮ್ಮ ಪ್ರಯತ್ನ ಸಫಲವಾಗುವಂತೆ ಅನುಗ್ರಹಿಸು.

ಇಷ್ಟು ಹೇಳಿ, ವಿನಾಯಕನು ಸ್ಕಂದ ಮತ್ತು ಜಯಾದೇವಿಯೊಡನೆ ವೇಷಾಂತರದಿಂದ ಭೂಲೋಕಕ್ಕೆ ಆಗಮಿಸಿದರು. ಆಗ ಭೂಲೋಕದಲ್ಲಿ ಮಹಾಬರಗಾಲ ತಲೆದೋರಿತ್ತು. ಕಳೆದ ಎಪ್ಪತ್ತನಾಲ್ಕು ವರ್ಷಗಳಿಂದ ಒಂದೇ ಸಮನೆ ಈ ಕ್ಷಾಮವು ಜನರನ್ನು ಸಂಪೂರ್ಣವಾಗಿ ಕಂಗೆಡಿಸಿತ್ತು. ಬಹು ದೀರ್ಘಕಾಲೀನವಾದ ಈ ಕ್ಷಾಮದಲ್ಲಿ ಬಹುಸಂಖ್ಯೆಯಲ್ಲಿ ಜನರು ಮಡಿದರು. ಇಂತಹ ಅನಾವೃಷ್ಟಿಯ ಅತಿರೇಕದಲ್ಲೂ, ಆಶ್ಚರ್ಯವೆನಿಸುವಂತೆ ಗೌತಮ ಋಷಿಯ ಆಶ್ರಮ ಸಸ್ಯಸಂಪದ್ಭರಿತವಾಗಿತ್ತು. ಕುಡಿಯುವ ನೀರಿಗೆ ಅಲ್ಲಿ ಎಂದಿಗೂ ಕೊರತೆ ಬಂದಿರಲಿಲ್ಲ. ಆಹಾರ ಪದಾರ್ಥಗಳನ್ನು ಭೂರಿ ಪ್ರಮಾಣದಲ್ಲಿ ಗೌತಮ ಋಷಿಯ ಆಶ್ರಮದ ಹೊಲಗಳು ನೀಡುತ್ತಿದ್ದವು. ಹೀಗಾಗಿ ಬದುಕಿ ಉಳಿದ ಜನರೆಲ್ಲ ಬರಗಾಲದ ಬವಣೆ ತಾಳಲಾರದೆ ಗೌತಮನ ಆಶ್ರಮದಲ್ಲಿ ಬಂದು ಆಶ್ರಯ ಪಡೆದರು. ಹೀಗೆ ಬಂದ ಜನರಲ್ಲಿ ಅನೇಕ ತಪಸ್ವಿಗಳೂ, ಮುನಿಗಳೂ, ಸಾತ್ವಿಕರೂ ಇದ್ದರು. ಕರೆಯದೇ ಅನಾಯಾಸವಾಗಿ ಬಂದ ಮಹಾಮಹಾಮುನಿ, ಮನೀಷಿಗಳ ಗುಂಪನ್ನು ಕಂಡು, ಗೌತಮ ಮನಕ್ಕೆ ಮಹದಾನಂದವಾಯಿತು. ಕೈಹಿಡಿದು ಸ್ವಾಗತ ಬಯಸಿ ಕರೆತಂದು ಬಾರದ ರಾಜಸಂಪತ್ತನ್ನು ಕೊಟ್ಟರೂ ತಿರುಗಿ ನೋಡದಂಥ ವಿರಕ್ತ ಶಿಖಾಮಣಿಗಳು, ಕರೆಯದೇ ತನ್ನ ಆಶ್ರಮಕ್ಕೆ ಬಂದಿದ್ದು, ತನ್ನ ಪೂರ್ವ ಪುಣ್ಯ ವಿಶೇಷ ಫಲ ಎಂದು ಭಾವಿಸಿದ-ಆ ಗೌತಮ ಮುನಿ. ತನ್ನ ಅಖಂಡ ತಪಸ್ಸನ್ನು ನಿಧಾನಗೊಳಿಸಿ, ಬಂದವರ ಸೇವಾ, ಸುಶ್ರೂಷೆ ಮಾಡುವದರಲ್ಲಿಯೇ ಧನ್ಯತೆಯನ್ನು ಅನುಭವಿಸಿದ. 'ದೊಡ್ಡವರು ಬಂದಾಗಲೇ ಆಗಿ ಹೋಗಲಿ'-ಎಂದು ಯಜ್ಞ, ಯಾಗ, ದಾನ, ಹೋಮ, ಹವನ, ವ್ರತ ಮುಂತಾದ ಸತ್ಕರ್ಮಗಳನ್ನೆಲ್ಲ ಸಾಕಷ್ಟು ಪ್ರಮಾಣದಲ್ಲಿ ನಡೆಸಿದ. ಉದಾರಿಯಾದ ಗೌತಮನ ಆಶ್ರಮದಲ್ಲಿ ಮುನಿಗಳೆಲ್ಲ ತಮ್ಮತಮ್ಮ ಕರ್ತವ್ಯಗಳನ್ನುಮಾಡುತ್ತ ಸಂತಸ ಸಮಾಧಾನಗಳಿಂದ ವಾಸಮಾಡಿದರು. ಗೌತಮನ ಈ ಉದಾರವೃತ್ತಿಯನ್ನು ಕಂಡು ಭೂದೇವಿಗೂ ಹೆಮ್ಮೆ ಅನಿಸಿತು. ಅವನ ಆಶ್ರಮ ಪ್ರಾಂತದಲ್ಲಿನ ಆಹಾರ, ಧಾನ್ಯ, ಫಲ, ಪುಷ್ಪಗಳು ಕೊಯ್ಯಲ್ಪಟ್ಟ ಮರುಕ್ಷಣದಲ್ಲೇ ಪುನಃ ಉತ್ಪನ್ನವಾಗುತ್ತಿದ್ದವು. ಭೂದೇವಿಗೆ ಕೊಟ್ಟಷ್ಟೂ ಇನ್ನೂಕೊಡಬೇಕೆಂಬ ಬಯಕೆ: ನೀಡಿದಷ್ಟು ಸಾರ್ಥಕವೆಂಬ ಧನ್ಯತೆಯ ಭಾವ. ಹೀಗಾಗಿ ಗೌತಮ ಋಷಿಯು ಬಂದವರಿಗೆಲ್ಲ ತಿಂದಷ್ಟು ಉಣಬಡಿಸಿದರೂ ಆಹಾರದ ಕೊರತೆ ಅವನಿಗೆಂದೂ ಒದಗಲೇ ಇಲ್ಲ. ಬಂದವರಿಗೆ ಅಡುಗೆ ಮಾಡುವ ಶ್ರಮವೂ ಆ ಗೌತಮ ಮುನಿಗೆ ಇರಲಿಲ್ಲ. ಸ್ವತಃ

ವನೌಷಧಿ ದೇವತಾಸ್ತ್ರೀಯರು ಆ ಆಶ್ರಮದಲ್ಲಿ ಅಡುಗೆಗೆ ನಿಂತಿದ್ದರು. ಗೌತಮ ಬಾಯ್ಬಿಟ್ಟು ಹೇಳುವ ಮೊದಲೇ ಅತಿಥಿಗಳನ್ನು ಅವರಿಗೆ ಇಷ್ಟವಾದ ಭಕ್ಷ್ಯ ಭೋಜ್ಯಗಳಿಂದ ತೃಪ್ತಿಪಡಿಸಿ ಕೃತಕೃತ್ಯರಾಗುತ್ತಿದ್ದರು.

ಈ ಸಂದರ್ಭದಲ್ಲಿ ಭೂಲೋಕಕ್ಕೆ ಆಗಮಿಸಿದ ಸ್ಕಂದ, ವಿನಾಯಕ ಮತ್ತು ಜಯಾ ಇವರು ಮೂವರೂ, ತಮ್ಮ ಕಾರ್ಯ ಸಾಧನೆಗಾಗಿ ಗೌತಮ ಋಷಿ ಆಶ್ರಮಕ್ಕೆ ಬಂದರು. ಗಣೇಶನು ಬ್ರಾಹ್ಮಣ ವೇಷಧರಿಸಿ ಆಶ್ರಮವಾಸಿಗಳೊಡನೆ ಬೆರೆತ, ಬರಗಾಲ ನಿಂತಿತು. ಮಳೆಯಾಗಿ ಬೆಳೆ ಬಂದು ಲೋಕದಲ್ಲಿ ಮೊದಲಿನಂತೆ ಸಮೃದ್ಧಿ ಗೋಚರಿಸಿತು. ತಮ್ಮ ತಮ್ಮ ಮನೆಗಳಿಗೆ ಕುಟೀರಗಳಿಗೆ ತಾವು ಮರಳುವದು ಉಚಿತವೆಂದು ಗೌತಮನ ಅತಿಥಿಗಳು ಪರಸ್ಪರ ಮಾತನಾಡಕೊಳ್ಳತೊಡಗಿದರು. 'ಬಹುಕಾಲದಿಂದ ಗೌತಮನ ಮೇಲೆ ಭಾರಹಾಕಿದ್ದು ಸಾಕು. ಇನ್ನು ಇಲ್ಲಿಂದ ಎಲ್ಲರೂ ಹೊರಡೋಣ'-ಎಂದು ಒಮ್ಮತದ ತೀರ್ಮಾನಕ್ಕೆ ಬಂದರು ಆ ಅತಿಥಿಗಳೆಲ್ಲ. ಗೌತಮ ಮುನಿಯ ಬಳಿಗೆ ಹೋಗಿ 'ಇಷ್ಟು ದಿನ ನಮ್ಮನ್ನು ಪೋಷಿಸಿದಿರಿ. ಯಾವುದಕ್ಕೂ ಕೊರತೆಯಾಗದಂತೆ ಶುಶ್ರೂಷೆ ಮಾಡಿದಿರಿ. ಈ ಭೀಕರ ಬರಗಾಲದಲ್ಲಿ ನಿಮ್ಮಿಂದಾಗಿ ನಾವು ಬದುಕಿ ಉಳಿದಿದ್ದೇವೆ. ನಿಮ್ಮ ಉಪಕಾರ ನಾವು ಮರೆಯುವಂತಿಲ್ಲ. ನಮಗೆ ಇನ್ನು ಅಪ್ಪಣೆಕೊಡಿರಿ. ನಮ್ಮನಮ್ಮ ಸ್ಥಾನಗಳಿಗೆ ನಾವು ಮರಳುವೆವು'-ಎಂದು ಕೇಳಿಕೊಂಡರು. ಗೌತಮ ಮುನಿ ಮಾತನಾಡಿದ: 'ಈ ಆಶ್ರಮ ನನ್ನದಲ್ಲ, ನಿಮ್ಮದು. ನೀವೆಲ್ಲ ಇಲ್ಲಿ ಇರುವದರಿಂದಲೇ ಈ ಆಶ್ರಮಕ್ಕೆ ಇಂಥಹ ಸಮೃದ್ಧಿ ಶೋಭೆಗಳು, ಅಂಥಹ ಬರಗಾಲದಲ್ಲೂ ಇದ್ದವು. ದಯವಿಟ್ಟು ನೀವಿಲ್ಲಿಂದ ಹೋಗಬೇಡಿ. ಇಷ್ಟುವರ್ಷಗಳಕಾಲ ನಿಮ್ಮ ಸಹವಾಸದಿಂದ ನನ್ನಲ್ಲಿ ನಿಮ್ಮಿಂದ ಬೇರ್ಪಡದಂಥ ಒಂದು ಆತ್ಮೀಯತೆ ಉದಯಿಸಿದೆ. ನಿಮ್ಮಂತಹ ಮಹಾತ್ಮರು ಇಲ್ಲಿಂದ ಹೋದರೂ ಯಾವದೊಂದು ಕುಟೀರದಲ್ಲಿ ವಾಸಿಸಬೇಕಷ್ಟೆ! ಎಲ್ಲಿ ಹೋದರೂ ತಪಸ್ಸು, ಜ್ಞಾನಸಂಪಾದನೆ, ಜ್ಞಾನದಾನ ಇವೇ ಮೊದಲಾದ ಕಾರ್ಯಗಳನ್ನು ಮಾಡುವಿರಷ್ಟೆ. ಈ ಆಶ್ರಮವನ್ನು ನಿಮ್ಮ ಆಶ್ರಮ ವೆಂದು ತಿಳಿಯಿರಿ. ನಿಮ್ಮ ಪವಿತ್ರಕರ್ತವ್ಯ ಗಳನ್ನು ಇಲ್ಲಿಯೇ ಸಂತೋಷದಿಂದ ನಿರ್ವಹಿಸಿರಿ. ಬೇರೆ ಆಶ್ರಮಗಳಿಗೆ ಹೋಗುವ ಆಲೋಚನೆ ಮಾಡಬೇಡಿ. ಎಷ್ಟು ಮಾತ್ರಕ್ಕೂ ನನಗೆ ಅದು ಒಪ್ಪಿಗೆ ಇಲ್ಲ. ನಾನು ನಿಮಗೆ ಇಲ್ಲಿಂದ ಹೋಗಲು ಸುತರಾಂ ಅಪ್ಪಣೆ ಕೊಡುವದಿಲ್ಲ.'

ಗೌತಮನ ಈ ಮಾತುಗಳನ್ನು ಕೇಳಿ, ಮುನಿಗಳ ಸಮೂಹದಲ್ಲಿ ಗಲಿಬಿಲಿ ತಲೆದೋರಿತು. ಅವರವರ ಮನೆಗಳಿಗೆ, ಆಶ್ರಮಕ್ಕೆ ಮರಳುವುದು ಅವರಿಗೆ ಬೇಕಾಗಿದ್ದಿತು. ಗೌತಮ ಋಷಿ ಅದಕ್ಕೆ ಒಪ್ಪಿಗೆ ಕೊಡುವದಿಲ್ಲವೆಂಬುದನ್ನು ತಿಳಿದಾಯ್ತು. ಗೌತಮ ಋಷಿಯಿಂದ ಅಪ್ಪಣೆ ಪಡೆಯಲು ಯಾವ ಉಪಾಯ ಕೈಗೊಳ್ಳಬಹುದು.' ಎಲ್ಲರೂ ಆಲೋಚಿಸ ತೊಡಗಿದರು.

ಆ ಮುನಿಗಳ ಗುಂಪಿನಲ್ಲಿದ್ದ ಬ್ರಾಹ್ಮಣ ವೇಷಧಾರಿಯಾದ ಗಣೇಶನು ಉಳಿದ ಬ್ರಾಹ್ಮಣರ ಕಿವಿಗಳಲ್ಲಿ ಉಪಾಯ ಒಂದನ್ನು ಉಸಿರಿದ. ಆಶ್ರಮದಿಂದ ಹೊರಗೆ ಬಂದು, ಹಸುರೂಪ ಧರಿಸಿ, ಸುಳಿದಾಡುತ್ತಿದ್ದ, ಜಯೆಯನ್ನು ಏಕಾಂತದಲ್ಲಿ ಸಂದಿಸಿ ಹೀಗೆ ಹೇಳಿದ: 'ಎಲೈ ಜಯೆ, ನೀನು ನಾಳೆಯ ದಿನ ಗೌತಮ ಆಶ್ರಮದ ಅಂಗಳದಲ್ಲಿ ಅಡ್ಡಾಡುತ್ತಿರುವಾಗ ಅವನೆದುರು ಹೋಗಿ, ಆಶ್ರಮದಲ್ಲಿ ಬೆಳೆದುನಿಂತ ಫಲಭರಿತ ಸಸ್ಯಗಳನ್ನು ತುಳಿದು, ತಿಕ್ಕಿ ಹಾಳುಮಾಡು. ಇದನ್ನು ನೋಡಿ ಗೌತಮ ನಿನ್ನನ್ನು

ಹೊಡೆಯುತ್ತಾನೆ, ಹೆದರಿಸುತ್ತಾನೆ. ಕೊನೆಯ ಪಕ್ಷ ಅಸಮಾಧಾನಗೊಂಡ ದೃಷ್ಟಿಯಿಂದ ನಿನ್ನನ್ನು ದಿಟ್ಟಿಸುತ್ತಾನೆ. ಅವನು ಏನೇ ಪ್ರತಿಕ್ರಿಯೆ ತೋರಿಸಿದರೂ ಅದರಿಂದ ಗಾಸಿಗೊಂಡವಳಂತೆ ನಟಿಸಿ ನೀನು ಅವನ ಎದುರೇ ಕೂಗುತ್ತ ನೆಲದಮೇಲೆ ಉರುಳಿಬಿಡು. ನಿನ್ನನ್ನು ಗೌತಮ ಎಬ್ಬಿಸಬಂದರೆ ಸತ್ತಂತೆ ನಟನೆಮಾಡು.'

ಈ ಮಾತನ್ನು ಕೇಳಿದ ಜಯೆ 'ಆಗಲಿ' ಎಂದಳು. ಮರುದಿನ ಹಸುವಿನ ರೂಪಧರಿಸಿ, ಗೌತಮನ ಎದುರೇ ಅಲ್ಲಿನ ಸಸ್ಯಗಳನ್ನು ಹಾಳುಮಾಡಹತ್ತಿದಳು. ಅದನ್ನು ಕಂಡ ಗೌತಮನಿಗೆ ಹೀಗೆ ಅನಿಸಿತು- ಇದೆಂಥ ದುಷ್ಟ ಆಕಳು ! ತಾನೂ ಹೊಟ್ಟೆಗೆ ತಿನ್ನದೇ, ಇನ್ನೊಬ್ಬರು ತಿನ್ನುವ ಆಹಾರವನ್ನು ತುಳಿದು ಹಾಳುಮಾಡುತ್ತಿದೆಯಲ್ಲ! ಪದಾರ್ಥಗಳನ್ನು ನಾಶಗೊಳಿಸುವದರಲ್ಲಿ ಇದಕ್ಕೇನು ಆನಂದ! ಇದನ್ನು ಹೀಗೆಯೇ ಬಿಟ್ಟರೆ ಆಶ್ರಮದ ಪೈರನ್ನೆಲ್ಲ ತುಳಿದು ಹಾಕೀತು. ಇದನ್ನು ನಿವಾರಿಸುವೆ' ಎಂದು, ಒಂದು ಕಡ್ಡಿಯನ್ನು ಕೈಯಲ್ಲಿ ಹಿಡಿದು, ಹಸುವನ್ನು ಅಟ್ಟಹೋದ- ಆ ಗೌತಮಮುನಿ. ಇಷ್ಟಕ್ಕೆ ಆ ಹಸುವು ಉಚ್ಚಧ್ವನಿಯಿಂದ ದೀನಸ್ವರದಲ್ಲಿ ಉದ್ಗಾರ ಎಬ್ಬಿಸಿ, ಬಿದ್ದುಬಿಟ್ಟಿತು. ಆ ಹಾಹಾಕಾರಕ್ಕೆ ಜನಗಳೆಲ್ಲ ಓಡಿ ಬಂದರು. ಗೌತಮಮುನಿ ವ್ಯಥೆಗೊಳ್ಳುತ್ತ ಆಕಳಿನ ಸಮೀಪಕ್ಕೆ ಬಂದು, ಅದನ್ನು ಉಪಚರಿಸಲು ಯತ್ನಿಸಿದ. ಅದು ಸತ್ತಂತೆ ತೋರಿತು. ಮುನಿಗೆ ತನ್ನಿಂದ ಗೋಹತ್ಯೆ ನಡೆಯಿತೆಂದು ಬಹಳ ದುಃಖವಾಯಿತು.

ಇದನ್ನೇ ನೆಪಮಾಡಿಕೊಂಡು, ಆಶ್ರಮವಾಸಿಗಳೆಲ್ಲ 'ಗೋಹತ್ಯೆ ಮಾಡಿದವರ ಮನೆಯಲ್ಲಿ ನಾವು ಇರಲಾರೆವು. ಇದೋ ಹೊರಟೆವು'- ಎಂದು ಅಲ್ಲಿಂದ ಹೊರಟು ಹೋದರು.

ಬ್ರಾಹ್ಮಣ ರೂಪದಲ್ಲಿದ್ದ ವಿನಾಯಕನು ಎಲ್ಲರೂ ಹೊರಟು ಹೋದ ಬಳಿಕ ಅಲ್ಲಿಯೇ ನಿಂತುಕೊಂಡಿದ್ದ. ಬ್ರಾಹ್ಮಣರೆಲ್ಲರ ನಿರ್ಗಮನದಿಂದ, ವಜ್ರಾಯುಧದಿಂದ ತಾಡಿತನಾದವನಂತೆ ದುಃಖಿತನಾಗಿದ್ದ ಮುನಿಗೆ ಈ ಬ್ರಾಹ್ಮಣನನ್ನು ಕಂಡು ಸ್ವಲ್ಪ ಸಮಾಧಾನವೆನಿಸಿತು. ಬ್ರಾಹ್ಮಣರೂಪದ ವಿನಾಯಕನ ಸಮೀಪಕ್ಕೆ ಬಂದು-'ಸ್ವಾಮಿ ದಯವಿಟ್ಟು ನೀವಾದರೂ ನನ್ನನ್ನು ಬಿಟ್ಟು ಹೋಗಬೇಡಿರಿ. ಈ ಗೋಹತ್ಯೆಗೆ ನಾನು ಯಾವ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ಎಂಬುದನ್ನು ಅಪ್ಪಣೆ ಮಾಡಿರಿ. ನನ್ನನ್ನು ಪ್ರಾಯಶ್ಚಿತ್ತ ವಿಧಿಯಿಂದ ಪರಿಶುದ್ಧಗೊಳಿಸಿ ಕಾಪಾಡಬೇಕು' ಎಂದು ಪ್ರಾರ್ಥಿಸಿದ.

**ವಿನಾಯಕ:-** 'ಗೌತಮನೇ, ನಾನು ಹೇಳಿದಂತೆ ಕೇಳಿದರೆ, ಈ ಹಸುವು ಪುನಃ ಬದುಕುವದು. ಈಗ ಘಟಿಸಿದ ಪಾಪಕ್ಕೆ ಪ್ರಾಯಶ್ಚಿತ್ತ ದೊರೆತಂತಾಗುವದು. ಹಸುವು ಬದುಕಬೇಕಾದರೆ, ಗಂಗೆಯ ಜಲವನ್ನು ಹಸುವಿನ ಮೇಲೆ ಪ್ರೋಕ್ಷಿಸಬೇಕು. ಗಂಗೆ ಭೂಮಿಗೆ ಬರದೇ ಇದು ಸಾಧ್ಯವಿಲ್ಲ. ಹರನ ಜಡೆಯಲ್ಲಿರುವ ಗಂಗೆ ಭೂಮಿಗೆ ಬರಬೇಕು. ಇದಕ್ಕಾಗಿ ಹರನನ್ನು ಪ್ರಸನ್ನಗೊಳಿಸಬೇಕು.'

ಗೌತಮನು ಶಿವನನ್ನು ಪ್ರಸನ್ನಗೊಳಿಸಲು ಕೈಲಾಸಗಿರಿಗೆ ಹೋಗಿ ತಪಸ್ಸಿಗೆ ಕುಳಿತ. ಜ್ಞಾನದೃಷ್ಟಿಯಿಂದ ಅರಿತ-ಗಂಗೆಯ ಅವತಾರ ಆಗಬೇಕು. ಈ ಹಿಂದೆ ನಡೆದುದೆಲ್ಲ ತನ್ನಿಮಿತ್ತಕವಾದ ಪೂರಕ ಘಟನೆಗಳು. ವಸ್ತುತಃ ಗೋಹತ್ಯೆ ನನ್ನಿಂದ ಘಟಿಸಿಲ್ಲ. ಪ್ರಾಯಶ್ಚಿತ್ತದ ಅಗತ್ಯವೂ ಇಲ್ಲ. ಆದರೂ ಗಂಗೆ ಭೂಮಿಗೆ ಬಂದು ಅದರಿಂದ ಲೋಕಕಲ್ಯಾಣ ಆಗುವದಾದರೆ ನಾನು ಈ ತಪಸ್ಸನ್ನು ಮುಂದುವರೆಸಿ, ಗಂಗೆಯನ್ನು ಶಿವನ

ಜಡೆಯಿಂದ ಭೂಮಿಗೆ ತಂದೇ ತರುವೆ. ಇದರಿಂದ ಶಿವ, ಪಾರ್ವತಿ, ವಿನಾಯಕ, ಬ್ರಾಹ್ಮಣ ಶ್ರೇಷ್ಠರು ಇವರೆಲ್ಲರ ಅನುಗ್ರಹ ಆಗುವದು. ದೇವತೆಗಳ ಕಾರ್ಯ ಸಾಧಿತವಾಗುವದು.

ಹೀಗೆ ತನ್ನೊಳಗೆ ಚಿಂತಿಸಿದ ಅತೀಂದ್ರಿಯ ಜ್ಞಾನವುಳ್ಳ ಆ ಗೌತಮ ಮಹರ್ಷಿಯು ಅನೇಕ ವರ್ಷಗಳ ಕಾಲ ಕೈಲಾಸಗಿರಿಯ ಪ್ರಶಾಂತ ಪರಿಸರದಲ್ಲಿ ತಪಸ್ಸನ್ನು ಆಚರಿಸಿದನು. ಮುನಿಯ ಭಕ್ತಿಗೆ ಮಹದೇವ ಮೆಚ್ಚಿದ; ಪ್ರತ್ಯಕ್ಷನಾಗಿ ಬಂದು ನಿಂದ. ಮುನಿಯು ಬಗೆಬಗೆಯಾಗಿ ಮಹದೇವನನ್ನು ಸ್ತುತಿಸಿ, ಪ್ರಸನ್ನಗೊಳಿಸಿದ. ಸಂತುಷ್ಟನಾದ ಶಿವನು ಬೇಕಾದ ವರ ಬೇಡಲು ಮುನಿಗೆ ಹೇಳಿದ. ಮುನಿಯು ಇಂತು ನುಡಿದ : ''ಮಹದೇವ ನಿನ್ನ ಜಡೆಯಲ್ಲಿ ಇರುವ ಗಂಗಾದೇವಿಯನ್ನು ಭೂಲೋಕದಲ್ಲಿ ನ ಬ್ರಹ್ಮಗಿರಿಯಲ್ಲಿ ಬಿಡು. ಈ ಗಂಗಾದೇವಿಯನ್ನು ಸೇವಿಸಿ, ಭೂಲೋಕದ ಜನರೆಲ್ಲ ಧನ್ಯರಾಗಲಿ. ಲೋಕ ಕಲ್ಯಾಣಕಾರಿಯಾದ ಮಹರ್ಷಿಯ ಮನೋಬಯಕೆಯನ್ನು ಆಲಿಸಿದ ಪರಶಿವ 'ಅಸ್ತು' ಎಂದ. ವಾತ್ಸಲ್ಯದಿಂದ ನುಡಿದ : ಗೌತಮಾ ಕೇಳು-

'ಅಸ್ಯಾಃ ಪರತರಂ ತೀರ್ಥಂ ನ ಭೂತೋಂ ನ ಭವಿಷ್ಯತಿ'

ಈ ಗಂಗೆಗಿಂತ ಶ್ರೇಷ್ಠವಾದ ತೀರ್ಥ ಹಿಂದೆ ಇರಲಿಲ್ಲ. ಮುಂದೆಯೂ ಇರುವದಿಲ್ಲ. ಇಂತಹ ಗರಿಷ್ಠ ಗುಣೋಪೇತ ಗಂಗೆಯನ್ನು ನಿನ್ನ ಇಚ್ಛೆಯಂತೆ ಬಿಟ್ಟುಕೊಡುವೆ. ಇದರಿಂದ ನಿನಗೂ, ಲೋಕಕ್ಕೂ ಮಂಗಳವಾಗಲಿ' ಎಂದು ಅಂತರ್ಧಾನನಾದ.

ಶಿವನು ಅಂತರ್ಧಾನನಾದ ನಂತರ ಗೌತಮನು ಬ್ರಹ್ಮಗಿರಿಗೆ ಬಂದು. ಅಲ್ಲಿ ಅಭಿವ್ಯಕ್ತಳಾದ ಗಂಗೆಯನ್ನುಕಂಡ. ಗಂಗೆ ಮತ್ತು ಅವಳನ್ನು ಭೂಮಿಗೆ ತಂದ ಗೌತಮ ಇವರೀರ್ವರನ್ನು ಬ್ರಹ್ಮಗಿರಿಯಲ್ಲಿ ಕಂಡು ದೇವತಾಗಣ ಹೂವಿನ ಮಳೆ ಸುರಿಸಿತು. ದೇವತೆಗಳೂ, ಋಷಿಗಳೂ, ಜ್ಞಾನಿಗಳಾದ ಬ್ರಾಹಣರೂ ಅಲ್ಲಿಗೆ ಆಗಮಿಸಿ, ಗೌತಮನ ಈ ಮಹಾಕಾರ್ಯವನ್ನು ಮನಸಾರೆ ಶ್ಲಾಘಿಸಿದರು. ಅಂದಿನಿಂದ ಗೌತಮ ತಂದ ಗಂಗೆಯು ಲೋಕದಲ್ಲಿ 'ಗೌತಮೀ' ಹೆಸರಿನಿಂದ ಖ್ಯಾತಳಾದಳು.

## ಗಂಗೆಯ ಮಹಿಮೆ

**ನಾರದಮುನಿ:-** ಗಂಗೆಯ ಬ್ರಹ್ಮಗಿರಿಗೆ ಬಂದನಂತರ ಏನು ನಡೆಯಿತು?

**ಬ್ರಹ್ಮ:-** ಬ್ರಹ್ಮಗಿರಿಗೆ ಗಂಗೆಯು ಆಗಮಿಸಿದ ನಂತರ ಗೌತಮ ಮುನಿಯು ಗಂಗೆಯನ್ನು ಪೂಜಿಸಿದ. ದೇವಲೋಕದಿಂದ ಭೂಲೋಕಕ್ಕೆ ಅವಳನ್ನು ಕರೆತಂದುದಕ್ಕಾಗಿ ಕ್ಷಮೆ ಕೋರಿದ. ತನ್ನಲ್ಲಿ ದಯೆದೋರಬೇಕೆಂದು ಪ್ರಾರ್ಥಿಸಿದ. ಬಗೆ ಬಗೆಯಾಗಿ ಗಂಗೆಯ ಮಹಿಮೆಯನ್ನು ಕೊಂಡಾಡಿದ.

ಗೌತಮನ ಆರಾಧನೆಯಿಂದ ಗಂಗಾದೇವಿಯು ಪರಿತುಷ್ಟಳಾದಳು. ಸ್ತ್ರೀರೂಪ ಧರಿಸಿ ಮುನಿಗೆ ಪ್ರತ್ಯಕ್ಷದರ್ಶನ ನೀಡಿದಳು. ಅನಂತರ ತನ್ನನ್ನು ಮೂರು ವಿಧವಾಗಿ ವಿಂಗಡಿಸಿ ಕೊಂಡು ಸ್ವರ್ಗ, ಭೂಲೋಕ, ಪಾತಾಳ ಈ ಮೂರು ಕಡೆಗಳಲ್ಲಿ ಹರಿದಳು. ಈ ಮೂರು ಲೋಕಗಳಲ್ಲಿ ಹರಿಯುವ ಗಂಗೆಯೂ ಏಕರೂಪಳು. ಸಮುದ್ರ ಪರ್ಯಂತರ ಈ ಗಂಗೆ ದೇವತಾ ಸ್ವರೂಪಿಣಿ. ಇವಳು ಬ್ರಹ್ಮಗಿರಿಯಿಂದ ಹರಿದು ಪೂರ್ವಸಮುದ್ರವನ್ನು ಸೇರುವಳು. ಹೀಗೆ ತನ್ನಗತಿಯನ್ನು ನಿರ್ದೇಶಿಸಿಕೊಂಡು ಹರಿಯತೊಡಗಿದ ಗಂಗೆಯನ್ನು

ಗೌತಮನು ಪ್ರದಕ್ಷಿಣೆ ನಮಸ್ಕಾರಗಳಿಂದ ಗೌರವಿಸಿದನು. ತನ್ನ ಇಚ್ಛೆಯನ್ನು ಪೂರೈಸಿದ್ದಕ್ಕಾಗಿ ಗಂಗೆಗೆ ಕೃತಜ್ಞತೆಗಳನ್ನು ಪ್ರಾರ್ಥನಾಪೂರ್ವಕವಾಗಿ ಸಮರ್ಪಿಸಿದ.

ಒಂದು ದಿನ ಗೌತಮಋಷಿಗೆ ಗಂಗೆಯ ಪವಿತ್ರ ಜಲದಲ್ಲಿ ಮೀಯುವ ಬಯಕೆ ಉಂಟಾಯಿತು. ಮಹಾದೇವನನ್ನು ನೆನೆದ. ಕರುಣಾಶಾಲಿಗಳಾದ ಹಾಗೂ ಭಕ್ತವತ್ಸಲರಾದ ಮಹಾದೇವರು ಗೌತಮ ನೆನೆದೊಡನೆ ಬಂದರು. ಗೌತಮನು ಮಹಾದೇವರಿಗೆ "ಗಂಗಾಸ್ನಾನಕ್ಕೆ ಮೊದಲು ಮಾಡಬೇಕಾದ ಕರ್ತವ್ಯಗಳನ್ನು ಉಪದೇಶಿಸಬೇಕು ಇದರಿಂದ ಲೋಕೋಪಕಾರ ಮಾಡಿದಂತಾಗುವದು" ಎಂದು ಪ್ರಾರ್ಥಿಸಿದ.

**ಪರಶಿವ:-** ಗೌತಮ, ಗಂಗಾಸ್ನಾನ ಹಾಗೂ ಯಾತ್ರೆ ಜೀವನದ ಪರಮ ಪುಣ್ಯಕರವಾದ ಕರ್ತವ್ಯಗಳು, ಜೀವನದಲ್ಲಿ ಒಮ್ಮೆಯಾದರೂ ಇವನ್ನು ಸಾಧಿಸಬೇಕು. ಯಾತ್ರೆಗೆ ಹೊರಡುವವ, ಹೊರಡುವ ಮೊದಲು ನಾಂದೀಮುಖ ಮೊದಲಾದ ಮಂಗಳ ಕರ್ಮಗಳನ್ನು ಮಾಡಬೇಕು. ದೇಹಶುದ್ಧಿ ಸಂಪಾದಿಸಿ, ಬ್ರಾಹ್ಮಣರಿಗೆ ಭೋಜನ ಮಾಡಿಸಿ ಪ್ರಾಜ್ಞರ ಅನುಮತಿ ಪಡೆದು, ಯಾತ್ರೆಗೆ ಹೊರಡಬೇಕು. ಮಾರ್ಗದಲ್ಲಿ ಜಿತೇಂದ್ರಿಯನಾಗಿ ಉಳಿದು ಶ್ರೀಹರಿಯನ್ನು ಧ್ಯಾನಿಸುತ್ತ ಸಾಗಬೇಕು. ದುರ್ಜನರಿಂದ ಸಂಸಾರದಲ್ಲಿ ಅತಿಯಾಗಿ ಆಸಕ್ತರಾಗಿರುವದರಿಂದ, ಭಗವಂತನನ್ನು ನಿಂದಿಸುವದರಿಂದ, ಶ್ರದ್ಧಾಳುಗಳಲ್ಲದವರಿಂದ ದೂರದೂರ ಇರಬೇಕು. ಹೀಗೆ ಯಾತ್ರೆ ಮುಗಿಯುವವರೆಗೆ, ಗಂಗಾಸ್ನಾನವಾಗುವವರೆಗಾದರೂ (ಕೊನೇಪಕ್ಷ) ಮಾನಸಿಕ ಹಾಗೂ ದೈಹಿಕ ಪರಿಶುದ್ಧತೆಯನ್ನು ಕಾಪಾಡಿಕೊಳ್ಳಬೇಕು. ಗಂಗಾತೀರದಲ್ಲಿನ ದೀನ, ದರಿದ್ರ, ಸಾಧುಗಳಿಗೆ ಯಥಾಶಕ್ತಿ, ಯಥಾಯೋಗ್ಯ, ಅನ್ನ, ಬಟ್ಟೆ, ಕಂಬಳಿ, ಮೊದಲಾದವನ್ನು ನೀಡಬೇಕು. ಸಂದರ್ಭ ಒದಗಿದಾಗಲೆಲ್ಲ ಸಾಧ್ಯವಾದಷ್ಟು ಹೆಚ್ಚು ಸಲ ವಿದ್ವಾನ್ ಪುರುಷರಿಂದ ಹರಿಕಥೆಯನ್ನು ಶ್ರವಣಮಾಡಬೇಕು. ತೀರ್ಥಯಾತ್ರೆಮಾಡುತ್ತಿರುವಾಗ ದಾರಿಯುದ್ದಕ್ಕೂ ಹರಿಕಥೆ ಕೇಳುವದು. ಹೇಳುವದು, ಹೀಗೆ ಮಾಡುತ್ತ ಸಾಗಿದರೆ ಅದಕ್ಕೆ ವಿಶೇಷ ಫಲವಿರುತ್ತದೆ. ಹೀಗೆ ಗಂಗಾಯಾತ್ರೆಯ ಕ್ರಮವಿದೆ. ಈ ಕ್ರಮವನ್ನು ಅರಿತು ಯಾತ್ರೆ ಮಾಡಿದವರು ಗಂಗೆಯನ್ನು ಸೇವಿಸಿದವರು ಬಹು ಪುಣ್ಯ ಭಾಗಿಗಳಾಗುವರು.

ಈ ನದಿಗೆ ಮಹೇಶ್ವರಿ, ಗೌತಮೀ, ವೈಷ್ಣವೀ, ಬ್ರಾಹ್ಮೀ, ಗೋದಾವರಿ, ನಂದಾ, ಸುನಂದಾ ಎಂದು ಮುಂತಾಗಿ ಅನೇಕ ಹೆಸರುಗಳಿವೆ.

## ಭಾಗೀರಥಿಯ ಅವತರಣ

**ನಾರದ:-** ಹಿಂದೆ ಭಾಗೀರಥಿಯ ಎರಡು ವಿಭಾಗಗಳನ್ನು ತನ್ನಲ್ಲಿ ವಿಂಗಡಿಸಿಕೊಂಡು ಹರಿಯುವಳೆಂದು ಹೇಳಿದಿರಷ್ಟೇ. ಅವಳು ಹರಿಯುವ ಒಂದು ಭಾಗವನ್ನು ಈವರೆಗೆ ವಿವರಿಸಿದಿರಿ. ಈಗ ಅವಳು ಹರಿಯುವ ಇನ್ನೊಂದು ಭಾಗವನ್ನು ವಿವರಿಸಿ.

**ಬ್ರಹ್ಮ:-** ಭಗೀರಥನು ಗಂಗೆಯ ಇನ್ನೊಂದು ಅಂಶವನ್ನು ಭೂಮಿಗೆ ತಂದ ಮಹಾಪುರುಷ. ಆ ವೃತ್ತಾಂತ ಹೀಗಿದೆ.

ಹಿಂದೆ ಸಗರ ಎಂಬ ಧಾರ್ಮಿಕ ದೊರೆ ಇದ್ದ. ಅವನಿಗೆ ಬಹುಕಾಲ ಸಂತತಿ ಇರಲಿಲ್ಲ. ಕುಲಗುರುಗಳಾದ ವಶಿಷ್ಠರನ್ನು, ಮಕ್ಕಳಾಗಲು ಏನು ಮಾಡಬೇಕು ಎಂದು ಕೇಳಿದ.

ಜ್ಞಾನದೃಷ್ಟಿಯಿಂದ ಆಲೋಚನೆಮಾಡಿ ವಶಿಷ್ಠರು 'ಕೆಲಕಾಲ ದೊಡ್ಡವರ, ಮುನಿಗಳ, ಸೇವೆಮಾಡು, ಇದರಿಂದ ನಿನ್ನ ಇಚ್ಛೆ ಪೂರ್ಣವಾಗುವದು' ಎಂದರು. ಮಹಾರಾಜ ಹಾಗೆಯೇ ಮಾಡಿದ. ವಶಿಷ್ಠರ ಮಾತು ಹುಸಿಹೋಗಲಿಲ್ಲ. ಮಹಾತ್ಮರಾದ ಅವರ ಅನುಗ್ರಹದಿಂದ ಮಹಾರಾಜನಿಗೆ ಅವನ ಇಬ್ಬರು ಹೆಂಡತಿಯರಲ್ಲೂ ಮಕ್ಕಳು ಜನಿಸಿದರು. ಒಬ್ಬಳಲ್ಲಿ ಅರವತ್ತುಸಾವಿರ ಮಕ್ಕಳೂ, ಇನ್ನೊಬ್ಬಳಲ್ಲಿ ಒಬ್ಬನೇ ಒಬ್ಬ ಮುಂದೆ ಕುಲವನ್ನು ಉದ್ಧರಿಸಬಲ್ಲ ಶ್ರೇಷ್ಠ ಪುತ್ರನೂ ಜನಿಸಿದರು.

ಮಹಾರಾಜನ ಮಕ್ಕಳು ಬೆಳೆದು ದೊಡ್ಡವರಾದರು. ಮಹಾರಾಜ ಅಶ್ವಮೇಧಯಜ್ಞ ಪ್ರಾರಂಭಿಸಿದ. ತನ್ನ ಅರವತ್ತು ಸಾವಿರ ಮಕ್ಕಳನ್ನು ಸೇನಾಸಹಿತವಾಗಿ ಯಜ್ಞದ ಕುದುರೆಯ ಹಿಂದೆ ಕಳುಹಿಸಿದ. ಕುದುರೆ ಅಲ್ಲಲ್ಲಿ ಸಂಚರಿಸತೊಡಗಿತು. ಸಗರ ಪುತ್ರರೂ, ಸೇನೆಯೂ ಅದನ್ನು ಹಿಂಬಾಲಿಸ ತೊಡಗಿತು. ಇಂದ್ರ ಈ ಅಶ್ವದಮೇಲೆ ಕಣ್ಣಿಟ್ಟಿದ್ದ. ಕುದುರೆಯ ರಕ್ಷಕರು ಮೈಮರೆತ ಸಮಯ ನೋಡಿಕೊಂಡು ಇಂದ್ರ ಕುದುರೆಯನ್ನು ಅಪಹರಿಸಿದ. ಸಗರನ ಮಕ್ಕಳೂ ಸೇನೆಯೂ ಕುದುರೆಯನ್ನು ಅಲ್ಲಲ್ಲಿ ಹುಡುಕಿದರು. ಕಾಣದೇ ಮಿಡುಕಿದರು.

ಇತ್ತ ಸಗರ ಮಹಾರಾಜ ಮಂಗಳಸ್ನಾನವನ್ನು ಮಾಡಿ ಗುರುಹಿರಿಯರ ಆಶೀರ್ವಾದ ಪಡೆದು ಯಾಗಕ್ಕೆ ಸಿದ್ಧನಾದ. ಯಜ್ಞಾಶ್ವವು ಪೂರ್ವ ನಿರ್ಧರಿತ ಸಮಯಕ್ಕೆ ಪ್ರಾಪ್ತವಾಗದೇ ಇರುವದನ್ನು ಕಂಡು ಮಹಾರಾಜ ಚಿಂತೆಗೊಳಗಾದ. ಸಗರಪುತ್ರರು ಭೂಲೋಕದಲ್ಲೆಲ್ಲ ಕುದುರೆಯನ್ನು ಹುಡುಕಿ ಹುಡುಕಿ ಸುಸ್ತಾದರು. ಆಗ ''ಎಲೈ ಸಗರಪುತ್ರರೇ, ನಿಮ್ಮ ಯಜ್ಞಾಶ್ವ ಪಾತಾಳಲೋಕದಲ್ಲಿ ಇದೆ. ಇಲ್ಲೇಕೆ ಹುಡುಕಿ ವೃಥಾ ಶ್ರಮಗೊಳ್ಳುವಿರಿ!'' ಎಂಬ ಅಶರೀರವಾಣಿ ಕೇಳಿಸಿತು. ಸಗರಪುತ್ರರು ಈ ಅಶರೀರ ವಾಣಿಯನ್ನು ಕೇಳಿ ಉತ್ಸಾಹಿತರಾದರು. ಅರವತ್ತು ಸಾವಿರ ಜನ ಸೇರಿ ಭೂಮಿಯನ್ನು ಪಾತಾಳ ಪರ್ಯಂತರ ಅಗೆದರು. ಲಗುಬಗೆಯಿಂದ ಪಾತಾಳಲೋಕ ತಲುಪಿ ಪಾತಾಳದಲ್ಲಿ ಶೀಘ್ರಗತಿಯಿಂದ ಸಂಚರಿಸಿದರು. ಕುದುರೆಯನ್ನು ಕಣ್ಣಲ್ಲಿ ಕಣ್ಣಿಟ್ಟು ಅನ್ವೇಷಿಸಿದರು.

ಅಲ್ಲಿ ಕಪಿಲ ಎಂಬ ಓರ್ವಮುನಿ ನಿದ್ರೆಗೈಯುತ್ತಿದ್ದ; ಅವನ ಪಕ್ಕದಲ್ಲಿ ಯಜ್ಞಾಶ್ವ ನಿಂತಿದ್ದಿತು. ಸಗರಪುತ್ರರು ಅಲ್ಲಿಗೆ ಧಾವಿಸಿದರು. ಹೀಗೆ ಆಲೋಚಿಸಿದರು. ''ಕುದುರೆಯನ್ನು ಭೂಮಿಯಿಂದ ಈ ಮುನಿಯು ಇಲ್ಲಿಗೆ ತಂದಿರುವನು. ನಾವೀಗ ಪಾತಾಳಕ್ಕೆ ಬಂದುದನ್ನು ತಿಳಿದು ನಮ್ಮನ್ನು ಎದುರಿಸುವ ಸಾಮರ್ಥ್ಯವಿಲ್ಲದೆ ನಿದ್ರೆಯ ನಾಟಕ ಹೂಡಿದ್ದಾನೆ. ನಮ್ಮನ್ನು ಇಷ್ಟೊಂದು ಶ್ರಮಕ್ಕೆ ಒಳಪಡಿಸಿದ ಈ ಕಪಟ ಮುನಿಯನ್ನು ಸರಿಯಾಗಿ ಶಿಕ್ಷಿಸಬೇಕು.'' ಹೀಗೆ ತಮ್ಮತಮ್ಮಲ್ಲಿ ಮಾತಾಡಿಕೊಂಡು ಕಪಿಲ ಋಷಿಯನ್ನು ಕಾಲಿನಿಂದ ಒದ್ದರು. ಆಯುಧಗಳಿಂದ ತಿವಿದರು. ಅವಾಚ್ಯವಚನಗಳಿಂದ ಹೀಯಾಳಿಸಿದರು. ಮುನಿ ನಿದ್ರೆಯಿಂದ ಎಚ್ಚೆತ್ತ. ಕಣ್ತೆರೆದು ಸಗರಪುತ್ರರನ್ನು ಕೋಪದಿಂದ ದಿಟ್ಟಿಸಿದ. ಕ್ಷಣಾರ್ಧದಲ್ಲಿ ಸಗರ ಪುತ್ರರೆಲ್ಲ ಸುಟ್ಟು ಬೂದಿಯಾದರು.

ಇತ್ತ ಮಹಾರಾಜನಿಗೆ ಈ ಸಮಾಚಾರ ತಿಳಿಯದೇ ಯಜ್ಞಾಶ್ವವನ್ನು, ತನ್ನ ಮಕ್ಕಳನ್ನು ಬಹುಕಾಲ ಕಾಯ್ದು ಮಂತ್ರಿಗಳಲ್ಲಿ ಮುಂದೇನು ಮಾಡುವದೆಂದು ವಿಚಾರ ಮಾಡಿದ. ಎಲ್ಲರೂ ಸೇರಿ ಮಹಾರಾಜನ ಮುಂಗೋಪಿ ಮಗನಾದ ಅಸಮಂಜಸ ಎಂಬ ಪುತ್ರನನ್ನು ಹೊರಡಿಸಿದರು- ಯಜ್ಞಾಶ್ವ ಹಾಗೂ ಇತರ ಸಗರ ಪುತ್ರರನ್ನು ಹುಡುಕಲು. ಅಸಮಂಜಸ

ಇಚ್ಛೆಯಿಲ್ಲದೇ ಬಂಧುಗಳ ಸಮಾಜದ ಒತ್ತಾಯಕ್ಕೆ ಅರಮನೆಯಿಂದ ಹೊರಗೇನೋ ಹೋದ. ಆದರೆ ಕಾಡು ಸೇರಿಬಿಟ್ಟ. ಅಸಮಂಜಸ ಕಾರ್ಯೋನ್ಮುಖನಾಗದೇ ಇದ್ದುದನ್ನು ತಿಳಿದ ಸಗರನು ತನ್ನ 'ಅಂಶುಮಾನ್' ಎಂಬ ಇನ್ನೊಬ್ಬ ಮಗನನ್ನು ಕಳುಹಿಸಿದ ಹುಡುಕಲು. ಈ ಅಂಶುಮಾನನು ಪ್ರಾಮಾಣಿಕವಾಗಿ ಅನ್ವೇಷಣೆ ನಡೆಸಿದ. ಪಾತಾಳಕ್ಕೆ ಹೋದ. ಕಪಿಲಮುನಿಯನ್ನು ಪ್ರಾರ್ಥಿಸಿ, ಒಲಿಸಿ ಸಮಾಧಾನಪಡಿಸಿ ಅವನ ಬಳಿಯಲ್ಲಿದ್ದ ಯಜ್ಞಾಶ್ವವನ್ನು ತಂದ.

ಮಹಾರಾಜನಿಗೆ ಯಜ್ಞಾಶ್ವ ಬಂದುದನ್ನು ನೋಡಿ ಸಂತೋಷವಾದರೂ ಇದರ ಹಿಂದೆ ಹೋದ ತನ್ನ ಅರವತ್ತುಸಾವಿರ ಮಕ್ಕಳು ಸುಟ್ಟು ಹೋದುದನ್ನು ತಿಳಿದು ಬಹುವಾಗಿ ದುಃಖಿಸಿದ. ಹೇಗೋ ದುಃಖವನ್ನು ತಾಳಿಕೊಂಡು ಅಶ್ವಮೇಧಯಾಗ ಪೂರೈಸಿದ.

ಮುಂದೆ ಈ ಅಂಶುಮಂತನಿಗೆ ದಿಲೀಪ ಎಂಬ ತೇಜಸ್ವಿಯಾದ ಮಗ ಜನಿಸಿದ. ಈ ದಿಲೀಪನಿಗೆ ಭಗೀರಥ ಎಂಬ ಪುತ್ರ ಹುಟ್ಟಿದ. ಮಹಾಗುಣಶಾಲಿಯಾದ ಭಗೀರಥನು ತನ್ನ ಅರವತ್ತು ಸಾವಿರಜನ ತಾತಂದಿರು ದುರ್ಮರಣವನ್ನು ಅಪ್ಪಿದ ಸಂಗತಿ ತಿಳಿದು ದುಃಖಿಗೊಂಡ. ಅವರಿಗೆ ಸದ್ಗತಿ ಕಾಣಿಸುವ ಹಂಬಲದಿಂದ ಪಾತಾಳಕ್ಕೆ ಹೋಗಿ ಕಪಿಲ ಮುನಿಯನ್ನು ಭೆಟ್ಟಿಯಾದ. ವಿನಯದಿಂದ ತನ್ನ ಇಂಗಿತವನ್ನು ಬಿನ್ನವಿಸಿದ. 'ದಾರಿತೋರು' ಎಂದು ಪ್ರಾರ್ಥನೆ ಮಾಡಿದ. ಕಪಿಲನು ಜ್ಞಾನ ದೃಷ್ಟಿಯಿಂದ ಆಲೋಚಿಸಿ ಇಂತು ನುಡಿದ. ''ಭಗೀರಥ ನೀನು ತಪಸ್ಸಿನಿಂದ ಶಂಕರನನು ಆರಾಧಿಸು. ಅವನ ಜಟೆಯಲ್ಲಿರುವ ಗಂಗೆಯನ್ನು ಪಡೆ. ನಿನ್ನ ಪಿತೃಗಳ ಬೂದಿಯ ಮೇಲೆ ಆ ಪವಿತ್ರಜಲ ಹರಿಯಲಿ. ಹೀಗೆ ಮಾಡಿದರೆ ನಿನ್ನ ತಾತಂದಿರಿಗೆ ಸದ್ಗತಿ ಆಗುವದು. ನೀನೂ ಶ್ರೇಯಸ್ಸನ್ನು ಹೊಂದುವೆ.''

ಭಗೀರಥನು ಮುನಿಗೆ ವಂದಿಸಿ ಕೇಳಿದ ''ತಪಸ್ಸನ್ನು ಆಚರಿಸಲು ನಾನು ಯಾವ ಸ್ಥಳಕ್ಕೆ ಹೋದರೆ ಒಳ್ಳೆಯದು?''

ಮುನಿಯ ಕೈಲಾಸಗಿರಿಯು ತಪಸ್ಸಿಗೆ ಪ್ರಶಸ್ತವೆಂದೂ ಅಲ್ಲಿ ತಪಸ್ಸನ್ನು ಆಚರಿಸಿದರೆ ಬಯಕೆ ಕೈಗೂಡುವದೆಂದೂ ಸಲಹೆ ನೀಡಿದ.

ಮಹಾರಾಜ ಕೈಲಾಸಗಿರಿಗೆ ಹೋಗಿ ಬಹುಕಾಲ ಶಂಕರನನ್ನು ಆರಾಧಿಸಿದ. ಅವನ ಘೋರತರ ತಪಸ್ಸಿಗೆ ಶಿವನ ಮನಕರಗಿತು. ಪ್ರತ್ಯಕ್ಷನಾಗಿ ಪ್ರಸನ್ನ ಮುಖದಿಂದ ಮಹಾರಾಜನನ್ನು ಕುರಿತು ''ವರಬೇಡು. ಅನುಗ್ರಹಿಸುವೆ'' ಎಂದು ನುಡಿದ. ಅವನ ಅಭಯವಚನದಿಂದ ಭಗೀರಥ ಆನಂದಾಶ್ರು ಉದುರಿಸುತ್ತ, ಕೈ ಜೋಡಿಸಿ ನಿಂತು 'ನನ್ನ ಪಿತೃಗಳ' ಉದ್ಧಾರ-ನಿನ್ನ ಜಟಾಜೂಟದಲ್ಲಿರುವ ಗಂಗೆಯಿದಾಗಬೇಕಾಗಿದೆ. ನೀನು, ಅದಕ್ಕಾಗಿ ಕೂಡಲೇ ಕರುಣೆದೋರು, ಕೃಪೆ ಮಾಡು,-ಎಂದು ನುಡಿದ. ಪರಮಶಿವ ಅನುಗ್ರಹಿಸಿದ. ಪಾವನಗಂಗೆ ಶಿವನ ಜಟಾಜೂಟದಿಂದ ಅವನಾಜ್ಞೆಯಂತೆ ಮೆಲ್ಲಗೆ ಕೆಳಗಿಳಿದಳು. ಭಗೀರಥನು ಗಂಗೆಯನ್ನು ಪಾತಾಳಕ್ಕೆ ಕರೆದೊಯ್ದ. ದೇವಗಂಗೆಯು ಭಗೀರಥನ ಪ್ರಾರ್ಥನೆಯಂತೆ ಹಾಗೂ ಲೋಕಕ್ಷೇಮಕ್ಕಾಗಿ ಪಾತಾಳಕ್ಕಿಳಿದು ಭಗೀರಥನ ಭಸ್ಮವಾದ ಪಿತೃಗಳ ಮೇಲೆ ಹರಿದು, ಅವರಿಗೆ ಸದ್ಗತಿಯಾಗು ವಂತೆ ಅನುಗ್ರಹ ಪೂರ್ಣ ಸಹಕಾರ ನೀಡಿದಳು. ಅಲ್ಲಿಂದ ಗಂಗೆಯು ಮೇರುಪರ್ವತದ ಆಶ್ರಯಪಡೆದಳು. ಭಗೀರಥನ ಪ್ರಾರ್ಥನೆಗೆ ಮಣಿದು ಹಿಮಾಲಯ ವನಪ್ರದೇಶ ದಲ್ಲಿಯ ಭೂಮಿಯನ್ನೆಲ್ಲ ತಣಿಸಿದಳು. ಹಿಮಾಲಯದಿಂದ ಹರಿದು ಭರತ ಖಂಡದ ಭೂಮಿಯನ್ನು ಪಾವನಗೊಳಿಸಿ

ಜ್ಞಾನದೃಷ್ಟಿಯಿಂದ ಆಲೋಚನೆಮಾಡಿ ವಶಿಷ್ಠರು 'ಕೆಲಕಾಲ ದೊಡ್ಡವರ, ಮುನಿಗಳ, ಸೇವೆಮಾಡು, ಇದರಿಂದ ನಿನ್ನ ಇಚ್ಛೆ ಪೂರ್ಣವಾಗುವದು' ಎಂದರು. ಮಹಾರಾಜ ಹಾಗೆಯೇ ಮಾಡಿದ. ವಶಿಷ್ಠರ ಮಾತು ಹುಸಿಹೋಗಲಿಲ್ಲ. ಮಹಾತ್ಮರಾದ ಅವರ ಅನುಗ್ರಹದಿಂದ ಮಹಾರಾಜನಿಗೆ ಅವನ ಇಬ್ಬರು ಹೆಂಡತಿಯರಲ್ಲೂ ಮಕ್ಕಳು ಜನಿಸಿದರು. ಒಬ್ಬಳಲ್ಲಿ ಅರವತ್ತುಸಾವಿರ ಮಕ್ಕಳೂ, ಇನ್ನೊಬ್ಬಳಲ್ಲಿ ಒಬ್ಬನೇ ಒಬ್ಬ ಮುಂದೆ ಕುಲವನ್ನು ಉದ್ಧರಿಸಬಲ್ಲ ಶ್ರೇಷ್ಠ ಪುತ್ರನೂ ಜನಿಸಿದರು.

ಮಹಾರಾಜನ ಮಕ್ಕಳು ಬೆಳೆದು ದೊಡ್ಡವರಾದರು. ಮಹಾರಾಜ ಅಶ್ವಮೇಧಯಜ್ಞ ಪ್ರಾರಂಭಿಸಿದ. ತನ್ನ ಅರವತ್ತು ಸಾವಿರ ಮಕ್ಕಳನ್ನು ಸೇನಾಸಹಿತವಾಗಿ ಯಜ್ಞದ ಕುದುರೆಯ ಹಿಂದೆ ಕಳುಹಿಸಿದ. ಕುದುರೆ ಅಲ್ಲಲ್ಲಿ ಸಂಚರಿಸತೊಡಗಿತು. ಸಗರ ಪುತ್ರರೂ, ಸೇನೆಯೂ ಅದನ್ನು ಹಿಂಬಾಲಿಸತೊಡಗಿತು. ಇಂದ್ರ ಈ ಅಶ್ವದಮೇಲೆ ಕಣ್ಣಿಟ್ಟಿದ್ದ. ಕುದುರೆಯ ರಕ್ಷಕರು ಮೈಮರೆತ ಸಮಯ ನೋಡಿಕೊಂಡು ಇಂದ್ರ ಕುದುರೆಯನ್ನು ಅಪಹರಿಸಿದ. ಸಗರನ ಮಕ್ಕಳೂ ಸೇನೆಯೂ ಕುದುರೆಯನ್ನು ಅಲ್ಲಲ್ಲಿ ಹುಡುಕಿದರು. ಕಾಣದೇ ಮಿಡುಕಿದರು.

ಇತ್ತ ಸಗರ ಮಹಾರಾಜ ಮಂಗಳಸ್ನಾನವನ್ನು ಮಾಡಿ ಗುರುಹಿರಿಯರ ಆಶೀರ್ವಾದ ಪಡೆದು ಯಾಗಕ್ಕೆ ಸಿದ್ಧನಾದ. ಯಜ್ಞಾಶ್ವವು ಪೂರ್ವ ನಿರ್ಧರಿತ ಸಮಯಕ್ಕೆ ಪ್ರಾಪ್ತವಾಗದೇ ಇರುವದನ್ನು ಕಂಡು ಮಹಾರಾಜ ಚಿಂತೆಗೊಳಗಾದ. ಸಗರಪುತ್ರರು ಭೂಲೋಕದಲ್ಲೆಲ್ಲ ಕುದುರೆಯನ್ನು ಹುಡುಕಿ ಹುಡುಕಿ ಸುಸ್ತಾದರು. ಆಗ "ಎಲೈ ಸಗರಪುತ್ರರೇ, ನಿಮ್ಮ ಯಜ್ಞಾಶ್ವ ಪಾತಾಳಲೋಕದಲ್ಲಿ ಇದೆ. ಇಲ್ಲೇಕೆ ಹುಡುಕಿ ವ್ಯಥಾ ಶ್ರಮಗೊಳ್ಳುವಿರಿ!" ಎಂಬ ಅಶರೀರವಾಣಿ ಕೇಳಿಸಿತು. ಸಗರಪುತ್ರರು ಈ ಅಶರೀರ ವಾಣಿಯನ್ನು ಕೇಳಿ ಉತ್ಸಾಹಿತರಾದರು. ಅರವತ್ತು ಸಾವಿರ ಜನ ಸೇರಿ ಭೂಮಿಯನ್ನು ಪಾತಾಳ ಪರ್ಯಂತರ ಅಗೆದರು. ಲಗುಬಗೆಯಿಂದ ಪಾತಾಳಲೋಕ ತಲುಪಿ ಪಾತಾಳದಲ್ಲಿ ಶೀಘ್ರಗತಿಯಿಂದ ಸಂಚರಿಸಿದರು. ಕುದುರೆಯನ್ನು ಕಣ್ಣಲ್ಲಿ ಕಣ್ಣಿಟ್ಟು ಅನ್ವೇಷಿಸಿದರು.

ಅಲ್ಲಿ ಕಪಿಲ ಎಂಬ ಓರ್ವಮುನಿ ನಿದ್ರೆಗೈಯುತ್ತಿದ್ದ; ಅವನ ಪಕ್ಕದಲ್ಲಿ ಯಜ್ಞಾಶ್ವ ನಿಂತಿದ್ದಿತು. ಸಗರಪುತ್ರರು ಅಲ್ಲಿಗೆ ಧಾವಿಸಿದರು. ಹೀಗೆ ಆಲೋಚಿಸಿದರು. "ಕುದುರೆಯನ್ನು ಭೂಮಿಯಿಂದ ಈ ಮುನಿಯು ಇಲ್ಲಿಗೆ ತಂದಿರುವನು. ನಾವೀಗ ಪಾತಾಳಕ್ಕೆ ಬಂದುದನ್ನು ತಿಳಿದು ನಮ್ಮನ್ನು ಎದುರಿಸುವ ಸಾಮರ್ಥ್ಯವಿಲ್ಲದೆ ನಿದ್ರೆಯ ನಾಟಕ ಹೂಡಿದ್ದಾನೆ. ನಮ್ಮನ್ನು ಇಷ್ಟೊಂದು ಶ್ರಮಕ್ಕೆ ಒಳಪಡಿಸಿದ ಈ ಕಪಟ ಮುನಿಯನ್ನು ಸರಿಯಾಗಿ ಶಿಕ್ಷಿಸಬೇಕು." ಹೀಗೆ ತಮ್ಮತಮ್ಮಲ್ಲಿ ಮಾತಾಡಿಕೊಂಡು ಕಪಿಲ ಋಷಿಯನ್ನು ಕಾಲಿನಿಂದ ಒದ್ದರು. ಆಯುಧಗಳಿಂದ ತಿವಿದರು. ಅವಾಚ್ಯವಚನಗಳಿಂದ ಹೀಯಾಳಿಸಿದರು. ಮುನಿ ನಿದ್ರೆಯಿಂದ ಎಚ್ಚೆತ್ತ. ಕಣ್ತೆರೆದು ಸಗರಪುತ್ರರನ್ನು ಕೋಪದಿಂದ ದಿಟ್ಟಿಸಿದ. ಕ್ಷಣಾರ್ಧದಲ್ಲಿ ಸಗರ ಪುತ್ರರೆಲ್ಲ ಸುಟ್ಟು ಬೂದಿಯಾದರು.

ಇತ್ತ ಮಹಾರಾಜನಿಗೆ ಈ ಸಮಾಚಾರ ತಿಳಿಯದೇ ಯಜ್ಞಾಶ್ವವನ್ನು, ತನ್ನ ಮಕ್ಕಳನ್ನು ಬಹುಕಾಲ ಕಾಯ್ದು ಮಂತ್ರಿಗಳಲ್ಲಿ ಮುಂದೇನು ಮಾಡುವದೆಂದು ವಿಚಾರ ಮಾಡಿದ. ಎಲ್ಲರೂ ಸೇರಿ ಮಹಾರಾಜನ ಮುಂಗೋಪಿ ಮಗನಾದ ಅಸಮಂಜಸ ಎಂಬ ಪುತ್ರನನ್ನು ಹೊರಡಿಸಿದರು- ಯಜ್ಞಾಶ್ವ ಹಾಗೂ ಇತರ ಸಗರ ಪುತ್ರರನ್ನು ಹುಡುಕಲು. ಅಸಮಂಜಸ

ಇಚ್ಛೆಯಿಲ್ಲದೇ ಬಂಧುಗಳ ಸಮಾಜದ ಒತ್ತಾಯಕ್ಕೆ ಅರಮನೆಯಿಂದ ಹೊರಗೇನೋ ಹೋದ. ಆದರೆ ಕಾಡು ಸೇರಿಬಿಟ್ಟ. ಅಸಮಂಜಸ ಕಾರ್ಯೋನ್ಮುಖನಾಗದೇ ಇದ್ದುದನ್ನು ತಿಳಿದ ಸಗರನು ತನ್ನ 'ಅಂಶುಮಾನ್' ಎಂಬ ಇನ್ನೊಬ್ಬ ಮಗನನ್ನು ಕಳುಹಿಸಿದ ಹುಡುಕಲು. ಈ ಅಂಶುಮಾನನು ಪ್ರಾಮಾಣಿಕವಾಗಿ ಅನ್ವೇಷಣೆ ನಡೆಸಿದ. ಪಾತಾಳಕ್ಕೆ ಹೋದ. ಕಪಿಲಮುನಿಯನ್ನು ಪ್ರಾರ್ಥಿಸಿ, ಒಲಿಸಿ ಸಮಾಧಾನಪಡಿಸಿ ಅವನ ಬಳಿಯಲ್ಲಿದ್ದ ಯಜ್ಞಾಶ್ವವನ್ನು ತಂದ.

ಮಹಾರಾಜನಿಗೆ ಯಜ್ಞಾಶ್ವ ಬಂದುದನ್ನು ನೋಡಿ ಸಂತೋಷವಾದರೂ ಇದರ ಹಿಂದೆ ಹೋದ ತನ್ನ ಅರವತ್ತುಸಾವಿರ ಮಕ್ಕಳು ಸುಟ್ಟು ಹೋದುದನ್ನು ತಿಳಿದು ಬಹುವಾಗಿ ದುಃಖಿಸಿದ. ಹೇಗೋ ದುಃಖವನ್ನು ತಾಳಿಕೊಂಡು ಅಶ್ವಮೇಧಯಾಗ ಪೂರೈಸಿದ.

ಮುಂದೆ ಈ ಅಂಶುಮಂತನಿಗೆ ದಿಲೀಪ ಎಂಬ ತೇಜಸ್ವಿಯಾದ ಮಗ ಜನಿಸಿದ. ಈ ದಿಲೀಪನಿಗೆ ಭಗೀರಥ ಎಂಬ ಪುತ್ರ ಹುಟ್ಟಿದ. ಮಹಾಗುಣಶಾಲಿಯಾದ ಭಗೀರಥನು ತನ್ನ ಅರವತ್ತು ಸಾವಿರಜನ ತಾತಂದಿರು ದುರ್ಮರಣವನ್ನು ಅಪ್ಪಿದ ಸಂಗತಿ ತಿಳಿದು ದುಃಖಿಗೊಂಡ. ಅವರಿಗೆ ಸದ್ಗತಿ ಕಾಣಿಸುವ ಹಂಬಲದಿಂದ ಪಾತಾಳಕ್ಕೆ ಹೋಗಿ ಕಪಿಲ ಮುನಿಯನ್ನು ಭೆಟ್ಟಿಯಾದ. ವಿನಯದಿಂದ ತನ್ನ ಇಂಗಿತವನ್ನು ಬಿನ್ನವಿಸಿದ. 'ದಾರಿತೋರು' ಎಂದು ಪ್ರಾರ್ಥನೆ ಮಾಡಿದ. ಕಪಿಲನು ಜ್ಞಾನ ದೃಷ್ಟಿಯಿಂದ ಆಲೋಚಿಸಿ ಇಂತು ನುಡಿದ. ''ಭಗೀರಥ ನೀನು ತಪಸ್ಸಿನಿಂದ ಶಂಕರನನು ಆರಾಧಿಸು. ಅವನ ಜಟೆಯಲ್ಲಿರುವ ಗಂಗೆಯನ್ನು ಪಡೆ. ನಿನ್ನ ಪಿತೃಗಳ ಬೂದಿಯ ಮೇಲೆ ಆ ಪವಿತ್ರಜಲ ಹರಿಯಲಿ. ಹೀಗೆ ಮಾಡಿದರೆ ನಿನ್ನ ತಾತಂದಿರಿಗೆ ಸದ್ಗತಿ ಆಗುವದು. ನೀನೂ ಶ್ರೇಯಸ್ಸನ್ನು ಹೊಂದುವೆ.''

ಭಗೀರಥನು ಮುನಿಗೆ ವಂದಿಸಿ ಕೇಳಿದ ''ತಪಸ್ಸನ್ನು ಆಚರಿಸಲು ನಾನು ಯಾವ ಸ್ಥಳಕ್ಕೆ ಹೋದರೆ ಒಳ್ಳೆಯದು?''

ಮುನಿಯ ಕೈಲಾಸಗಿರಿಯು ತಪಸ್ಸಿಗೆ ಪ್ರಶಸ್ತವೆಂದೂ ಅಲ್ಲಿ ತಪಸ್ಸನ್ನು ಆಚರಿಸಿದರೆ ಬಯಕೆ ಕೈಗೂಡುವದೆಂದೂ ಸಲಹೆ ನೀಡಿದ.

ಮಹಾರಾಜ ಕೈಲಾಸಗಿರಿಗೆ ಹೋಗಿ ಬಹುಕಾಲ ಶಂಕರನನ್ನು ಆರಾಧಿಸಿದ. ಅವನ ಘೋರತರ ತಪಸ್ಸಿಗೆ ಶಿವನ ಮನಕರಗಿತು. ಪ್ರತ್ಯಕ್ಷನಾಗಿ ಪ್ರಸನ್ನ ಮುಖದಿಂದ ಮಹಾರಾಜನನ್ನು ಕುರಿತು ''ವರಬೇಡು. ಅನುಗ್ರಹಿಸುವೆ'' ಎಂದು ನುಡಿದ. ಅವನ ಅಭಯವಚನದಿಂದ ಭಗೀರಥ ಆನಂದಾಶ್ರು ಉದುರಿಸುತ್ತ, ಕೈ ಜೋಡಿಸಿ ನಿಂತು 'ನನ್ನ ಪಿತೃಗಳ' ಉದ್ಧಾರ-ನಿನ್ನ ಜಟಾಜೂಟದಲ್ಲಿರುವ ಗಂಗೆಯಿದಾಗಬೇಕಾಗಿದೆ. ನೀನು, ಅದಕ್ಕಾಗಿ ಕೂಡಲೇ ಕರುಣೆದೋರು, ಕೃಪೆ ಮಾಡು,-ಎಂದು ನುಡಿದ. ಪರಮಶಿವ ಅನುಗ್ರಹಿಸಿದ. ಪಾವನಗಂಗೆ ಶಿವನ ಜಟಾಜೂಟದಿಂದ ಅವನಾಜ್ಞೆಯಂತೆ ಮೆಲ್ಲಗೆ ಕೆಳಗಿಳಿದಳು. ಭಗೀರಥನು ಗಂಗೆಯನ್ನು ಪಾತಾಳಕ್ಕೆ ಕರೆದೊಯ್ದ. ದೇವಗಂಗೆಯು ಭಗೀರಥನ ಪ್ರಾರ್ಥನೆಯಂತೆ ಹಾಗೂ ಲೋಕಕ್ಷೇಮಕ್ಕಾಗಿ ಪಾತಾಳಕ್ಕಿಳಿದು ಭಗೀರಥನ ಭಸ್ಮವಾದ ಪಿತೃಗಳ ಮೇಲೆ ಹರಿದು, ಅವರಿಗೆ ಸದ್ಗತಿಯಾಗು ವಂತೆ ಅನುಗ್ರಹ ಪೂರ್ಣ ಸಹಕಾರ ನೀಡಿದಳು. ಅಲ್ಲಿಂದ ಗಂಗೆಯು ಮೇರುಪರ್ವತದ ಆಶ್ರಯಪಡೆದಳು. ಭಗೀರಥನ ಪ್ರಾರ್ಥನೆಗೆ ಮಣಿದು ಹಿಮಾಲಯ ವನಪ್ರದೇಶ ದಲ್ಲಿಯ ಭೂಮಿಯನ್ನೆಲ್ಲ ತಣಿಸಿದಳು. ಹಿಮಾಲಯದಿಂದ ಹರಿದು ಭರತ ಖಂಡದ ಭೂಮಿಯನ್ನು ಪಾವನಗೊಳಿಸಿ

ಮುಂದೆ ಹರಿದು, ಪೂರ್ವ ಸಮುದ್ರರಾಜನ ಗರ್ಭಸೇರಿದಳು. ಈ ದೇವಗಂಗೆಯು ಈ ರೀತಿಯಾಗಿ ಶಿವನ ಜಟೆಯಿಂದ ಇಳಿದು ಹರಿಯ ಪಾದ ತೊಳೆದು, ಭಾರತ ಭೂಮಿಯನ್ನು ಪಾವನ ಹಾಗೂ ಫಲವತ್ತ ಪ್ರದೇಶಮಾಡಿದಳು. ಅವಳು ಉದ್ಭವಿಸಿದ್ದು ಬ್ರಹ್ಮನ ಕಮಂಡಲುವಿನಿಂದ. ದೇವಗಂಗೆಗೆ ಭಾಗೀರಥಿಯೆಂದೂ, ದೇವನದಿಯೆಂದೂ, ಹೆಸರುಗಳಿವೆ. ಅಲ್ಲದೆ ದಕ್ಷಿಣಕ್ಕೆ ಹರಿಯುವ ಗಂಗೆಗೆ ಗೌತಮೀ ಎಂದು, ಉತ್ತರಕ್ಕೆ ಹರಿಯುವ ಗಂಗೆಗೆ ಭಾಗೀರಥೀ ಎಂದೂ ಬೇರೆ ಬೇರೆಯಾಗಿ ಕರೆಯುತ್ತಾರೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು*

—○—

## ವರಾಹತೀರ್ಥ, ಕುಶಾವರ್ತ ಹಾಗೂ ಕಾಪೋತತೀರ್ಥಗಳ ವರ್ಣನೆ

**ಅಧ್ಯಾಯ - ೨೨**

**ನಾರದ:-** ನನಗೆ ಬೇರೆ ಬೇರೆ ತೀರ್ಥಗಳ ಫಲಗಳನ್ನು ಕೇಳಬೇಕೆಂಬ ಕುತೂಹಲ. ಅದಕ್ಕಾಗಿ ನೀನು ಗೌತಮ ಮುನಿಯು ಕರೆತಂದ ಗಂಗಾನದಿಯ ತೀರ್ಥಗಳನ್ನೂ, ಅವುಗಳಿಗೆ ಇರುವ ಪೌರಾಣಿಕ ಹಿನ್ನೆಲೆಯನ್ನು ವಿವರಿಸು.

**ಬ್ರಹ್ಮ:-** ಎಲ್ಲ ತೀರ್ಥಗಳನ್ನು ವಿವರಿಸಿ ಹೇಳುವದು ಅವಶ್ಯ. ಆದರೆ ನಿನ್ನ ಕುತೂಹಲ ತಣಿಸಲು ಕೆಲವು ವೇದಗಳಲ್ಲಿ ವರ್ಣಿತವಾದ ತೀರ್ಥಗಳ ಗುಣಕಥನ ಮಾಡುತ್ತೇನೆ. ಚಿತ್ತವಿಟ್ಟು ಕೇಳು.

ಹಿಂದೆ ಪರಮೇಶ್ವರನು, ಭಕ್ತಶಿರೋಮಣಿಯ ತಪಸ್ಸಿಗೆ ಪ್ರತ್ಯಕ್ಷನಾಗಿ ವರನೀಡಿದ್ದ. ಅಂದಿನಿಂದ ಆ ಪರಿಸರವು ತ್ರ್ಯಂಬಕಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಇದು ಅನೇಕ ಮಹಿಮೆಗಳಿಂದ ಕೂಡಿದ ಜಾಗೃತಸ್ಥಳವೆನಿಸಿದೆ. ಇದರಂತೆ ವರಾಹತೀರ್ಥವೆಂದು, ಇನ್ನೊಂದು ವೇದಕಾಲದಿಂದ ಹೆಸರುವಾಸಿಯಾಗಿದೆ. ಇದಕ್ಕೆ ವಿಷ್ಣುವಿನ ವರಾಹವೆಂಬ ಹೆಸರು ಬರಲು ಪೌರಾಣಿಕ ಇತಿಹಾಸ ಒಂದಿದೆ. ಅದನ್ನೀಗ ಹೇಳುವೆ, ಕೇಳು.

ಬಹುಕಾಲದ ಹಿಂದೆ ಸಿಂಧುಸೇನನೆಂಬ ದಾನವನಿದ್ದನು. ಅವನು ಅಸಮಬಲ ಪರಾಕ್ರಮಿ. ದೇವತೆಗಳೆಲ್ಲರನ್ನೂ, ತನ್ನ ಪೌರುಷಪ್ರಾಬಲ್ಯದಿಂದ ಜಯಿಸಿ, ಯಜ್ಞಪುರುಷನನ್ನು ಸೆರೆ ಹಿಡಿದುಕೊಂಡು ಪಾತಾಳಕ್ಕೆ ಒಯ್ದನು. ಯಜ್ಞಪುರುಷನ ಬಿಡುಗಡೆ ಮಾಡಿ, ಮೊದಲಿನಂತೆ ಭೂಮಿಯಲ್ಲಿ ಯಜ್ಞಕಾರ್ಯಗಳು ಅಡೆತಡೆ ಇಲ್ಲದೆ ನಡೆಯುವಂತೆ ಮಾಡುವ ಉದ್ದೇಶದಿಂದ ಎಲ್ಲ ನಾಯಕರೂ ತಮ್ಮ ಶತ್ರುವನ್ನು ಹಿಂಬಾಲಿಸಿ ಪಾತಾಳಕ್ಕೆ ಹೋದರು. ಆ ದೈತ್ಯ ದುರುಳನ ಕೋಪಾಟೋಪಕ್ಕೆ, ಪ್ರತಾಪಕ್ಕೆ ದೇವೇಂದ್ರಾದಿಗಳೂ ಅವನೆದುರು ನಿಲ್ಲಲಾರದೇ ಹೋದರು. ಈ ದುರುಳನ ಸಂಹಾರಕ್ಕಾಗಿ ಶ್ರೀಹರಿಯ ಮೊರೆಹೊಕ್ಕರು. ಅವರ ದೂರನ್ನು ಚೆನ್ನಾಗಿ ಅರಿತು ಆಲೋಚಿಸಿ ಹರಿಯು ಅವರಿಗೆ ಅಭಯನೀಡುತ್ತ ''ನಾನೇ ವರಾಹ (ಹಂದಿಯ) ರೂಪತಾಳಿ, ಪಾತಾಳಕ್ಕೆ ಹೋಗಿ, ರಾಕ್ಷಸನನ್ನು ಸಂಹರಿಸಿ, ಪಾತಾಳದಿಂದ ಯಜ್ಞಪುರುಷನನ್ನು ತರುವೆ. ನೀವಿನ್ನು ನಿಶ್ಚಿಂತರಾಗಿ ಮರಳಿರಿ'' ಎಂದನು.

ಕಮಲನಾಭನು, ಕಾಲವಿಳಂಬಮಾಡದೆ ಗಂಗೆಯು ಪಾತಾಳಕ್ಕೆ ಹೋದ ದಾರಿಯಿಂದಲೇ ಭೂಮಿಯನ್ನು ಭೇದಿಸಿ ಪಾತಾಳದ ಆಳಕ್ಕೆ ಇಳಿದ. ಅಸಂಖ್ಯ ದೈತ್ಯರನ್ನು ಸಂಹರಿಸಿ, ಭಗವಂತನು ಮುಖದಲ್ಲಿ ಯಜ್ಞಪುರುಷನನ್ನು ಧರಿಸಿ, ಪಾತಾಳದಿಂದ ಮರಳಿದ. ಜಯಶಾಲಿಯಾಗಿ ಬಂದ ಭಗವಂತನನ್ನು ಬ್ರಹ್ಮಗಿರಿಯಲ್ಲಿ ನೆರೆದ ದೇವತೆಗಳೆಲ್ಲರು ಆನಂದದಿಂದ ಜಯಗೀತ ಸ್ತುತಿ ಹಾಡಿದರು.ಹರಿಯು ಆ ದಾರಿಯಿಂದ ಹೊರಟು ಗಂಗಾಜಲಪಾತಕ್ಕೆ ಬಂದನು. ಆ ಜಲಾಶಯದಲ್ಲಿ ಹರಿಯು ತನ್ನ ವರಾಹ ಶರೀರಕ್ಕೆ ಅಂಟಿದ ರಕ್ತ ಮಾಲಿನ್ಯವನ್ನೆಲ್ಲ ಮಾರ್ಜನ ಮಾಡಿಕೊಂಡನು. ಅಂದಿನಿಂದ ಆ ಜಲಾಶಯಕ್ಕೆ ಪಾವಿತ್ರ್ಯ, ಹಾಗೂ ಅಪೂರ್ವ ಮಹತ್ವಗಳುಂಟಾದವು. ಇದೇ ಇಂದಿಗೂ 'ವರಾಹ ತೀರ್ಥ'ವೆಂದು ಹೆಸರುವಾಸಿ ಆಗಿದೆ. ಈ ವರಾಹತೀರ್ಥವು ಪುಣ್ಯಪ್ರದವಾಗಿದ್ದು, ಪರ್ವಕಾಲಗಳಲ್ಲಿ ಇದರಲ್ಲಿ ಮಿಂದವರು ಪಾಪದಿಂದ ಮುಕ್ತರಾಗುತ್ತಾರೆ. ಹಾಗೂ ಸಕಲಯಜ್ಞಗಳ ಫಲವನ್ನು ಹೊಂದುತ್ತಾರೆ. ಅಷ್ಟೇಏಕೆ? ಆ ತೀರ್ಥದ ಬಳಿಯಲ್ಲಿ ನಿಂತು ತನ್ನ ಗತಿಸಿದ ಪೂರ್ವಜರನ್ನು (ಪಿತೃ) ನಾಮೋಚ್ಚಾರಗೈದರೂ ಸಾಕು, ಅವರೆಲ್ಲರೂ ಸ್ವರ್ಗವನ್ನು ಪಡೆದು ಸುಖಿಸುತ್ತಾರೆ.

ವರಾಹತೀರ್ಥದಷ್ಟೆ ಮಹತ್ತರ ಮಹಿಮೆಯುಳ್ಳ ಇನ್ನೊಂದು ಪರಮಪಾವನ ತೀರ್ಥವಿದ್ದು ಅದಕ್ಕೆ 'ಕುಶಾವರ್ತತೀರ್ಥ'ವೆಂದು ಕರೆಯುತ್ತಾರೆ. ಮಹಾತ್ಮನಾದ ಗೌತಮ ಮುನಿಯು ಆ ತೀರ್ಥವನ್ನು ಕುಶಾಗ್ರ ಅಥವಾ ದರ್ಭೆಗಳಿಂದ ನಿರ್ಮಿಸಿದ. ಅದರಿಂದ ಇದಕ್ಕೆ ಕುಶಾವರ್ತತೀರ್ಥವೆಂದು ಹೆಸರಿಸಲಾಗಿದೆ. ದೇವಗಂಗೆಯನ್ನು ಗೌತಮನು ದರ್ಭೆಗಳಿಂದ ಆಕರ್ಷಿಸಿ ತಂದ. ಆ ತೀರ್ಥದಲ್ಲಿ ಸ್ನಾನ ದಾನಗಳನ್ನು ಮಾಡಿದರೆ, ಪಿತೃಗಳು ಸಂತೃಪ್ತರಾಗಿ ಸ್ವರ್ಗದಲ್ಲಿ ಸುಖಿಸುವರು. ಅದರಂತೆ ನೀಲಗಿರಿಯಿಂದ ಒಂದು ನದಿಯು ಉಗಮಿಸಿ ಹರಿದಿದ್ದು ಅದಕ್ಕೆ ನೀಲಗಂಗೆ ಎಂದು ಕರೆಯುವರು. ಆ ನದಿಯು ಸಹ, ಮಾನವನ ಸಕಲದುರಿತಗಳನ್ನು ದೂರ ಮಾಡುವದು. ಈ ನದಿಯಲ್ಲಿ ಸ್ನಾನ ಮಾಡಿದರೆ ಅಕ್ಷಯಪುಣ್ಯ ಪ್ರಾಪ್ತಿ.

ಇನ್ನು ಇವೆಲ್ಲವುಗಳಿಗಿಂತ ಮಿಗಿಲಾದ ಹಾಗೂ ಮಹತ್ತರವೆನಿಸಿರುವ, ಮನರಂಜಿಸುವ ಕಥಾನಕ ಹಿನ್ನೆಲೆ ಹೊಂದಿದ ಪ್ರಸಿದ್ಧ ತೀರ್ಥ ಒಂದಿದೆ. ಅದೇ ಕಾಪೋತತೀರ್ಥ, ಅದರ ಪೂರ್ವೇತಿಹಾಸ ಹೇಳುವೆ. ಕೇಳು.

ಬಹುಕಾಲ ಹಿಂದೆ ಬ್ರಹ್ಮಗಿರಿಯಲ್ಲಿ ಬೇಡನೊಬ್ಬನಿದ್ದ. ಅವನು ಬ್ರಾಹ್ಮಣರನ್ನು, ಸಂತ-ಸತ್ಪುರುಷರನ್ನು, ಮೃಗ, ಪಕ್ಷಿಗಳನ್ನು ಹಿಂಸಿಸಿ ಇಲ್ಲವೆ ದೋಚಿಕೊಂಡು ಹೊಟ್ಟೆ ಹೊರೆಯುತ್ತಿದ್ದ. ಅವನ ನಿತ್ಯಕರ್ಮವೂ ಅದೇ ಆಗಿತ್ತು. ಅವನು ಕೋಪಿಷ್ಠ ಹಾಗೂ ಬಲಿಷ್ಠ. ಅವನ ಹೆಂಡತಿ ಮಕ್ಕಳೂ ಸಹ ಅವನಂತೆ ದುರಾಚಾರಿಗಳು.

ಒಂದು ದಿನ ಆಹಾರದ ಅನ್ವೇಷಣೆಗೆ ಹೊರಟ ಆ ಬೇಡ. ಕೆಲವು ಮೃಗ ಹಾಗೂ ಪಕ್ಷಿಗಳನ್ನು ಬೇಟೆಯಾಡಿ ತಂದ. ಕೆಲವು ಪಕ್ಷಿಗಳನ್ನು ಜೀವವಿದ್ದಂತೆಯೇ ಹಿಡಿದು ಪಂಜರದಲ್ಲಿ ಇಟ್ಟಿದ್ದ. ಬೇಟೆಯಾಡಿದ ಆಯಾಸ, ನೀರಡಿಕೆಗಳಿಂದ ಬಳಲುತ್ತ ಮನೆಗೆ ಹಿಂತಿರುಗಲು ಉಪಕ್ರಮಿಸಿದ. ಆಗಿನ್ನೂ ವಸಂತಕಾಲದ ಮಧ್ಯಾಹ್ನದ ಸಮಯ. ಅಕಸ್ಮಾತ್ತಾಗಿ ಮಳೆಯ ಮುನ್ಸೂಚನೆ ತೋರಿತು. ರಭಸದಮಳೆ ಬರುವ ಲಕ್ಷಣ

ತೋರಿತು. ಅವನು ಬರುತ್ತಿರುವಾಗಲೇ ಕಾರ್ಮೋಡ ಕವಿದು ರಭಸದ ಮಳೆ ಸುರಿಯಲಾರಂಭಿಸಿತು. ಮನೆಗೆ ಬರುವ ಮಾರ್ಗವೂ ಸಹ ಕಾಣದೇ, ಪ್ರಾಣರಕ್ಷಣೆಗಾಗಿ ದೂರದಮರವನ್ನು ಕಂಡು ಅದರಡಿಗೆ ಆಶ್ರಯ ಪಡೆಯಲು ಧಾವಿಸಿದ. ಅವನು ನಿಂತ ಆಲದ ಮರ, ಕ್ಷಣಕಾಲ ಅವನಿಗೆ ರಕ್ಷಣೆ ನೀಡಿತು. ಆ ಮರದಲ್ಲಿ ಒಂದು ಪಾರಿವಾಳವು ತನ್ನ ಹೆಂಡಿರು ಮಕ್ಕಳೊಡನೆ ಆಶ್ರಯ ಪಡೆದಿತ್ತು.

ಆ ದಿನ ಆ ಕಪೋತಗಳೆರಡು (ಗಂಡು-ಹೆಣ್ಣು ಪಾರಿವಾಳ) ಆಹಾರವನ್ನು ಹುಡುಕಲು ಹೊರಗೆ ಹೋಗಿದ್ದವು. ಅವುಗಳಲ್ಲಿ ಗಂಡುಪಾರಿವಾಳವು ಮೊದಲು ಬಂದು ತನ್ನ ಗೂಡಿನಲ್ಲಿ ಕುಳಿತಿತ್ತು. ಹೆಣ್ಣುಪಾರಿವಾಳವನ್ನು, ಆ ಬೇಡನು ಜೀವಂತವಾಗಿ ಹಿಡಿದು ಪಂಜರದಲ್ಲಿ ಇರಿಸಿದ್ದು, ಅವನೂ ಅಲ್ಲಿಯೇ ಕುಳಿತಿದ್ದನು.

ಗಂಡು ಕಪೋತವು ಮೊದಲು ಗೂಡಿಸೇರಿತು, ತನ್ನ ಹೆಂಡತಿಯು ಇನ್ನೂ ಮನೆಗೆ ಬಾರದಿದ್ದರಿಂದ ವ್ಯಾಕುಲಪಟ್ಟಿತು. ತನ್ನ ಹೆಂಡತಿಯು ಪಂಜರದಲ್ಲಿ ಬಂಧಿತಳಾಗಿರುವ ಸಮಾಚಾರ ಅದಕ್ಕೆ ಗೊತ್ತಿರಲಿಲ್ಲ. ತನ್ನ ಹೆಂಡತಿಯ ವಿರಹ ವೇದನೆಯಿಂದ ಗಂಡು ಪಾರಿವಾಳಕ್ಕೆ ಅತೀವ ದುಃಖವಾಯಿತು. ತನ್ನ ಹೆಂಡತಿಯ ಗುಣ, ನೀತಿ, ನಡೆ, ನುಡಿ ನೆನೆದು ಮಿಡುಕಿತು. ಅವಳಿಗಾಗಿ ಕಾತರದಿಂದ ಹುಡುಕಾಡಿತು.

ಆ ಸಮಯಕ್ಕೆ ಸೂರ್ಯನು ಮುಳುಗಿದನು. ತನ್ನ ಗಂಡನ ಕರುಣಾಜನಕ ವಿರಹಯಾತನೆಯನ್ನು ಪಂಜರದಲ್ಲಿ ಬಂಧಿತವಾದ ಹೆಣ್ಣು ಪಾರಿವಾಳ ನೋಡುತ್ತ ಮನದಲ್ಲಿ ವ್ಯಥೆಪಟ್ಟಿತು. ತನಗಾಗಿ ಗಂಡನು ಗೋಳಾಡುತ್ತಿರುವನ್ನು ಮೂಕಳಂತೆ ಕಂಡು, ಕಂಬನಿ ಸುರಿಸಿ ಪಂಜರದಲ್ಲಿದ್ದುಕೊಂಡೇ ತನ್ನ ಸ್ಥಿತಿಯನ್ನು ಪತಿಗೆ ವಿವರಿಸಿ, 'ನನಗಾಗಿ ನೀನು ವ್ಯಥೆಪಡಬೇಡ. ನಿನ್ನ ಮುಂದಿನ ಕರ್ತವ್ಯವನ್ನು ಆಚರಿಸು; ಧರ್ಮಬುದ್ಧಿಯವನಾಗಿರು' ಎಂದು ಸಂತೈಸಿತು.

ಹೆಂಡತಿಯ ಮಾತು ಕೇಳಿ ಗಂಡುಪಾರಿವಾಳವು ಹೆಂಡತಿಯ ಬಿಡುಗಡೆಗಾಗಿ ಸನ್ನಾಹ ನಡೆಸಲು ಪ್ರಯತ್ನಿಸಿತು. ಆದರೆ ಹೆಣ್ಣುಪಾರಿವಾಳವು ''ಓ ನಲ್ಲ, ನನ್ನನ್ನು ಬಿಡಿಸಬೇಡ, ಈ ಪತಿ-ಪತ್ನಿ ರೂಪವಾದ ಸಂಬಂಧ ಸ್ಥಿರವಲ್ಲ. ಧರ್ಮವೇ ಸ್ಥಿರ. ಅದಕ್ಕೆ ಯಾವಾಗಲೂ ಜಯ, ಬೇಡರಿಗೆ ಹಕ್ಕಿಗಳೇ ಆಹಾರ. ಜೀವನಿಗೆ ಜೀವವೇ ಆಧಾರವೆಂದು ವಿಧಿನಿಯಮ'' ಎಂದು ಧರ್ಮದ ವಿಚಾರ ನುಡಿಯಿತು.

**ಪತಿರೇವ ಗುರುಃ ಸ್ತ್ರೀಣಾಂ ಸರ್ವಸೌಭಾಗ್ಯಗತೋ ಗುರುಃ ।**
**ಅಭ್ಯಾಗತಮನುಪ್ರಾಪ್ತಂ ವಚನೈಸ್ತೋಷಯಂತಿಯೇ**

ಸ್ತ್ರೀಯರಿಗೆ ಪತಿಯೇ ಗುರುವು. ಅತಿಥಿಯು ಎಲ್ಲರಿಗೂ ಗುರುವು. ಮನೆಗೆ ಬಂದಿರುವ ಅತಿಥಿಯನ್ನು ಮಾತಿನಿಂದಲಾದರೂ ಸಂತೋಷಪಡಿಸಿದರೆ ವಾಕ್ಕಿಗಧಿಪತಿಯಾದ ಸರಸ್ವತಿಯು ಪ್ರಸನ್ನಳಾಗುವಳು.

ತನ್ನ ಹೆಂಡತಿಯು ಅತಿಥಿ ಉಪಚಾರ ಮಾಡಲು ಹೇಳಿದಾಗ ಗಂಡು ಪಾರಿವಾಳವು- ''ನೀನು ಹೇಳುವದು ಸರಿ. ಆದರೆ ಹಕ್ಕಿಗಳಾದ ನಾವು ಕೊಕ್ಕಿನಿಂದ ಆಗಾಗ ಆಹಾರ ಸಂಗ್ರಹಿಸಿ ಹೇಗೋ ಉಪಜೀವಿಸುತ್ತೇವೆ. ಹೀಗಿರುವಾಗ, ನಾನು ಬಳಲಿ ಬೆಂಡಾದ ಬೇಡನ ರೂಪದ ಅತಿಥಿಯನ್ನು ಹೇಗೆ ಉಪಚರಿಸಲಿ?'' ಎಂದು ಪ್ರಶ್ನಿಸಿತು.

ಗಂಡನಿಗೆ ಎದುರಾದ ಸಮಸ್ಯೆಗೆ ಸಲಹೆ ನೀಡುತ್ತ ಹೆಣ್ಣು ಪಾರಿವಾಳವು ನುಡಿಯಿತು:- ಈ ಬೇಡನು ಮಳೆಯ ಶೀತದಿಂದ ಎಚ್ಚರದಪ್ಪಿರುವನು. ಬೆಂಕಿ, ನೀರು, ಮೃದು ಮಾತು ಹಾಗೂ ಹುಲ್ಲು ಸೌದೆಗಳನ್ನು ಅತಿಥಿಗೆ (ಬೇಡನಿಗೆ) ಕೊಟ್ಟು ಉಪಚರಿಸಬಹುದು. ಹೆಂಡತಿ ಸಲಹೆ, ಗಂಡು ಪಾರಿವಾಳಕ್ಕೆ ಸೂಕ್ತವೆನಿಸಿತು. ಕೂಡಲೇ ಎತ್ತಲೋ ಹಾರಿ ಹೋಗಿ ಬೆಂಕಿಯನ್ನು, ಒಣಗಿದ ಸೌದೆಗಳನ್ನು ತಂದು ಬೇಡನ ಎದುರಿನಲ್ಲಿ ಬೆಂಕಿಯನ್ನು ಉರಿಸಿತು. ಆಗ ಬೇಡನಿಗೆ ಎಚ್ಚರವಾಯಿತು. ಅವನಿಗೆ ಬಹಳ ಹಸಿವೆಆಗಿತ್ತು. ಅದನ್ನು ನೋಡಿ ಹೆಣ್ಣು ಪಾರಿವಾಳವು ತನ್ನ ಗಂಡನಿಗೆ ಪಂಜರದಿಂದ ಬಿಡುಗಡೆ ಮಾಡುವಂತೆ ನುಡಿದು, ಮತ್ತೆ ಹೇಳಿತು. ''ಈ ನನ್ನ ಶರೀರವನ್ನು ಉಣಬಡಿಸಿ, ಈ ಬೇಡನ ಹಸಿವನ್ನು ತಣಿಸುವೆನು. ಅತಿಥಿಗಳನ್ನು ಉಪಚರಿಸುವವರಿಗೆ ಲಭಿಸುವ ಪುಣ್ಯಲೋಕವು ನಿನಗೆ ಲಭಿಸಲಿ'' ಹೆಂಡತಿಗಿಂತಲೂ ತಾನೇ ಮುಂದಾಗಿ ಗಂಡು ಕಪೋತವು ದೇವನಲ್ಲಿ ಅಂತಿಮ ಪ್ರಾರ್ಥನೆ ಸಲ್ಲಿಸಿ, ಹೆಂಡತಿ ಅನುಮತಿಯೊಡನೆ ಸುಡು ಬೆಂಕಿಯಲ್ಲಿ ತಾನೇ ಬಿದ್ದಿತು.

ಇದುವರೆಗೆ, ಮೌನವಾಗಿ ಕುಳಿತು ಕಪೋತ ದಂಪತಿಗಳ ಪಕ್ಷಿ ಭಾಷೆಯ ಸಂಭಾಷಣೆ, ಹಾಗೂ ಸೌಜನ್ಯದ ಧರ್ಮಾಚರಣೆಯನ್ನು ಅವಲೋಕಿಸಿದ ಕಠೋರ ಹೃದಯದ ಬೇಡ ಅನುಕಂಪಗೊಂಡ. ಪಕ್ಷಿಯ ಧರ್ಮಬುದ್ಧಿಯನ್ನು ಕಂಡು ದಂಗಾದ, ತನ್ನನ್ನೇ ತಾನು ನಿಂದಿಸಿಕೊಂಡ. ತನ್ನಿದಿರು ಈ ದುರಂತ ನಡೆದಿರುವಾಗಲೇ ಪತಿವ್ರತಾ-ಧರ್ಮಾಚರಣೆ ಯುಳ್ಳ ಹೆಣ್ಣು ಪಾರಿವಾಳವು ತನ್ನ ಮೃತ ಪತಿಯನ್ನು ಅನುಸರಿಸುವದಾಗಿ ಹೇಳುತ್ತ ಬೇಡನಿಗೆ ''ಪುಣ್ಯಾತ್ಮ, ನಿನ್ನ ಅನುಗ್ರಹದಿಂದ ನನಗೆ ಇಂತಹ ಸಂಯೋಗ ಲಭಿಸಿತು. ನನ್ನ ಮರಿಗಳನ್ನು ಕ್ಷಮಿಸು, ಪತಿಯೊಡನೆ ನಾನು ಸ್ವರ್ಗಕ್ಕೆ ತೆರಳುವೆನು'' ಎಂದು ಹೇಳಿ ಪತಿಯನ್ನು ಹಿಂಬಾಲಿಸಿತು.

ಆ ಕಪೋತ ದಂಪತಿಗಳು, ತಮ್ಮ ಸದಾಚಾರ, ಸದ್ಧರ್ಮಾನುಷ್ಠಾನಗಳ ಫಲವಾಗಿ ಸುಂದರ ರೂಪಧರಿಸಿ, ದೇವತೆಗಳಂತೆ ದಿವ್ಯವಿಮಾನವನ್ನೇರಿ ಪ್ರಕಾಶಿಸಿದರು. ಆಕಾಶದಲ್ಲಿ ಇದೆಲ್ಲವನ್ನು ನೋಡುತ್ತಿರುವ ಬೇಡನು, ತನ್ನ ಬಿಲ್ಲು ಮತ್ತು ಪಂಜರಗಳನ್ನು ಬಿಟ್ಟು, ಕೈ ಜೋಡಿಸಿ ಆ ದಂಪತಿಗಳಿಗೆ ಆರ್ತನಾಗಿ ಅಂಗಲಾಚಿ ಬೇಡಿದ:- ''ನೀವು ನನ್ನ ಕೈಬಿಡಬೇಡಿರಿ. ನನ್ನ ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಿ ನನ್ನನ್ನು ಅನುಗ್ರಹಿಸಿರಿ.''

ಆ ಬೇಡನ ಕರುಣಾಜನಕ ಸ್ಥಿತಿ ಕಂಡು ಅನುಕಂಪಿತ ಸ್ವರದಲ್ಲಿ, ಜೊತೆಗೂಡಿದ ಹಕ್ಕಿಗಳು ನುಡಿದವು:- 'ಎಲೈ ಬೇಡ, ಗೌತಮಿ ಎಂಬ ಗಂಗಾನದಿಯಲ್ಲಿ ಸ್ನಾನಮಾಡಿ ನಿನ್ನ ಪಾಪವನ್ನು ತೊಳೆದುಕೋ. ಆ ನದಿಯಲ್ಲಿ ನೀನು ಹದಿನೈದು ದಿನಗಳಕಾಲ ಸ್ನಾನ ಮಾಡಿದರೆ ನಿನ್ನ ಪಾಪವೆಲ್ಲವೂ ನಾಶವಾಗುತ್ತವೆ. ಅಷ್ಟೇ ಅಲ್ಲ. ಪಾಪಮಯವಾದ ಈ ಶರೀರವನ್ನು ಬಿಟ್ಟು ದಿವ್ಯ ಶರೀರವುಳ್ಳವನಾಗಿ, ವಿಮಾನವನ್ನೇರಿ ಸ್ವರ್ಗ ಪಡೆಯುವೆ.'

ಆ ಜೋಡು ಹಕ್ಕಿಗಳ ಮಾತಿನಂತೆ, ಬೇಡನು ಆಚರಿಸಿದ. ಮುಂದೆ ಗಂಗೆಯ ಪ್ರಭಾವ ದಿಂದ ಬೇಡನೂ, ಕಪೋತ ದಂಪತಿಗಳೂ ಅಪ್ಸರೆಯರಿಂದ ಪೂಜಿಸಲ್ಪಡುತ್ತಾ ವಿಮಾನದಲ್ಲಿ ಸ್ವರ್ಗಕ್ಕೆ ತೆರಳಿದರು. ಈ ಘಟನೆ ಜರುಗಿದ ನಂತರ ಆ ತೀರ್ಥಕ್ಕೆ 'ಕಾಪೋತತೀರ್ಥ' ವೆಂದು ನಾಮಕರಣವಾಯಿತು. ಇದರಲ್ಲಿ ಸ್ನಾನ, ದಾನ, ಪಿತೃಶ್ರಾದ್ಧ, ಜಪ, ಯಾಗ ಮೊದಲಾದವು ಗಳನ್ನು ಮಾಡಿದರೆ ಮಹಾಪುಣ್ಯ ಲಭಿಸುವದರಲ್ಲಿ ಸಂದೇಹವಿಲ್ಲ.

## ಕೌಮಾರತೀರ್ಥವರ್ಣನ

**ಬ್ರಹ್ಮ:-** ಎಲೈ ನಾರದನೇ, ಸ್ಮರಣೆ ಮಾತ್ರದಿಂದ ಸಕಲ ಪಾಪಗಳನ್ನು ಪರಿಹರಿಸತಕ್ಕ ಇನ್ನೊಂದು ಪ್ರಚಂಡ ಪ್ರಸಿದ್ಧವಾದ ಪುನೀತ ತೀರ್ಥವಿದೆ. ಅದುವೇ ಕಾರ್ತಿಕ ತೀರ್ಥ. ಇದಕ್ಕೆ ಕೌಮಾರತೀರ್ಥವೆಂದೂ ಕರೆಯುವ ವಾಡಿಕೆ ಉಂಟು.

ತಾರಕಾಸುರನ ಸಂಹಾರವಾದ ನಂತರ, ಸ್ವರ್ಗದಲ್ಲೆಲ್ಲ ಮತ್ತೆ ಸುಖ, ಶಾಂತಿಗಳು ನೆಲಸಿದವು. ದೇವಾಧಿದೇವತೆಗಳು ನೆಮ್ಮದಿಯಿಂದ ಇರುವಂತಾಯಿತು. ಹೀಗಿರಲು ಪಾರ್ವತಿಯ ಹಿರಿಯ ಮಗನಾದ ಷಣ್ಮುಖನು ತಾಯಿಯ ವರದ ಬಲದಿಂದ ಕೆಲಕಾಲ ದೇವಸ್ತ್ರೀಯರೊಡನೆ, ಸ್ವೇಚ್ಛಾಚಾರಗೈದ. ಅವನ ಕಾಮಕೇಳಿ ವಿಹಾರಗಳಿಗೆ ಇತಿಮಿತಿ ಇಲ್ಲವಾಗಿ, ಕೊನೆಗೆ ತಾಯಿ ಪಾರ್ವತಿಯೇ ತಡೆಯುವಲ್ಲಿ ವಿಫಲಳಾದಳು. ಸ್ತ್ರೀಯರ ಅಂಗಸೌಷ್ಠವಗಳಿಗೆ ಮಾರುಹೋದ ಷಣ್ಮುಖ, ದೇವತೆಗಳ ತಾಯಿಯ ಹಿತೋಪದೇಶವನ್ನು ನಿಕೃಷ್ಟವಾಗಿ ಪರಿಗಣಿಸಿದ. ಕೊನೆಗೆ ಪಾರ್ವತಿ ಮಗನ ಸ್ವಚ್ಛಂದ ಭೋಗವಿಲಾಸಕ್ಕೆ, ತಡೆಹಾಕಲು ತನ್ನದೇ ಉಪಾಯ ಹೂಡಿದಳು; ಷಣ್ಮುಖನು ರತಿಕ್ರೀಡೆಗಾಗಿ ಯಾವ ದೇವಸುಂದರಿಯನ್ನು ವರಿಸಿದರೂ ಅವಳಲ್ಲಿ ತನ್ನ ರೂಪವು ತೋರುವಂತೆ ಮಾಡಿದಳು. ತನ್ನ ಕಾಮಪಿಪಾಸೆಗೆ ವರುಣನ ಅಥವಾ ಇಂದ್ರನ ಹೆಂಡತಿಯನ್ನು ಕರೆದರೆ ಅವಳು ಅವನಿಗೆ ತನ್ನ ತಾಯಿಯ ರೂಪ ಕಾಣುವಂತೆ ಚಮತ್ಕೃತಿ ತೋರಿದಳು-ಆ ಪಾರ್ವತಿ, ಕೊನೆಗೆ ಯಾವ ಹೆಣ್ಣನ್ನು ಕಂಡರೂ, ಕಾಮಿಸಿದರೂ ಷಣ್ಮುಖನು ನೋಡುತ್ತಿರುವಂತೆಯೇ ತನ್ನ ತಾಯಿಯ ರೂಪದ ಹೋಲಿಕೆ ಕಂಡು, ತನಗೆ ತಾನೇ ನಾಚುವಂತಾಯಿತು ಅವನ ಪಾಡು. ಬರಬರುತ್ತ ಷಣ್ಮುಖನ ಕಾಮಲಲಾಸೆ ಮಾಯವಾಗಿ, ವೈರಾಗ್ಯದ ಭಾವ ಉಂಟಾಯಿತು.

ತನ್ನ ಎಲ್ಲೆ ಮೀರಿದ ಭೋಗವನ್ನು ಬದಲಿಸಿ, ವೈರಾಗ್ಯದ ಮನೋವೃತ್ತಿ ಜನಿಸಲು ತನ್ನ ತಾಯಿಯೇ ಮೂಲಕಾರಣವೆಂದು ಸ್ಕಂದನಿಗೆ ಅರಿವಾಯಿತು. ಅಂದಿನಿಂದ ಅಂಧನಿಗೆ ಕಣ್ಣು ಬಂದಂತಾಯಿತು. ಅದುವರೆಗೆ ತಾನು ಮಾಡಿದ ಅನುಚಿತ ಕಾರ್ಯಗಳನ್ನು ನೆನೆದು, ವ್ಯಥೆಗೊಂಡ, ಕಳವಳಪಟ್ಟ, ಈ ಪಶ್ಚಾತ್ತಾಪದಲ್ಲಿಯೇ ಪರಿತಪಿಸುವ ಪರಶಿವನ ಪುತ್ರ ಗೌತಮೀನದಿಯ ದಂಡೆಗೆ ಏಕಾಕಿಯಾಗಿ ಬಂದ. ಮನಸ್ಸು ತಿಳಿಗೊಂಡಿತು. ಗಂಭೀರನಾಗಿ, ಗೌತಮೀನದಿಯ ಸಾಕ್ಷಿಯಾಗಿ ದೃಢ ಸಂಕಲ್ಪ ಮಾಡಿದ- 'ಇಂದಿನಿಂದ ಸ್ತ್ರೀ ಎಂಬ ಹೆಸರೇ ನನಗೆ ಮಾತೃಸಮಾನವಾಗಿರಲಿ.' ಷಣ್ಮುಖನ ಪ್ರತಿಜ್ಞೆ ಕೇಳಿದ ಪರಮೇಶ್ವರ- ಪಾರ್ವತಿಯರು ಮಧ್ಯದಲ್ಲೇ ತಡೆಯಲು ಪ್ರಯತ್ನಿಸಿದರು. ಷಣ್ಮುಖ ಗಂಭೀರ ಧ್ವನಿಯಿಂದ ತಂದೆಗೆ ನೇರವಾಗಿ ನುಡಿದ. 'ಪ್ರತಿಜ್ಞೆ ಮಾಡಿಯಾಗಿದೆ. ನಾನು ಅದನ್ನು ಮೀರಲಾರೆ, ಮರೆಯಲಾರೆ.'

ಮಗನ ಈ ದೃಢಪ್ರತಿಜ್ಞೆ ಕೇಳಿ ಪರಮೇಶ್ವರ ಪರಮತುಷ್ಟನಾದ; ಸ್ಕಂದನನ್ನು ಆತ್ಮಾನಂದದಲ್ಲಿ, ಅಭಿಮಾನದಿಂದೊಮ್ಮೆ ನೋಡುತ್ತ, ವಾತ್ಸಲ್ಯಮಯನಾಗಿ ವರ ಕೇಳಲು ಹೇಳಿದ.

ಸ್ಕಂದ, ಕೈಜೋಡಿಸಿ ತಂದೆಗೆ ನಮಿಸಿ ಸೌಜನ್ಯದಲ್ಲಿ ನುಡಿದ- "ತಂದೆಯೇ, ನಾನು ನಿನ್ನ ಪುತ್ರ; ಮೇಲಾಗಿ ದೇವಸೇನಾಪತಿಯಾಗಿರುವ ಭಾಗ್ಯಶಾಲಿ. ಇದಕ್ಕಿಂತಲೂ ಮಹಾಭಾಗ್ಯ ಮತ್ತೇನಿದೆ. ನಿನಗೆ ನನ್ನ ಮೇಲೆ ವರ ಕರುಣಿಸಿ ಅನುಗ್ರಹಿಸುವ ಅಭಿಲಾಷೆ ಇದ್ದರೆ- ಲೋಕ ಕ್ಷೇಮಕ್ಕಾಗಿ ಕೇಳಬೇಕಷ್ಟೆ ನಾನು. ಮಹಾ ಪಾಪ ಮಾಡಿದ ಮನುಜರು, ಗುರುಪತ್ನಿಯ

ಸಂಗಮಾಡಿದ ಪಾಪಿಮನುಷ್ಯರು ಈ ಗೌತಮೀ ನದಿಯ ತೀರ್ಥದಲ್ಲಿ ಸ್ನಾನ ಮಾಡಿದವರು, ಪಾಪರಹಿತರಾಗಿ ಪುಣ್ಯಭಾಗಿಗಳಾಗುವಂತೆ ವರವನ್ನು ಅನುಗ್ರಹಿಸು.''

ಪರಮೇಶ್ವರ, ಮಗನು ಲೋಕಹಿತಾರ್ಥವಾಗಿ ಯಾಚಿಸಿದ ಉದಾತ್ತವರಕ್ಕೆ 'ತಥಾಸ್ತು' ಎಂದು ನುಡಿದ. ಅಂದಿನಿಂದ ಗೌತಮೀತೀರ್ಥವು ಕಾರ್ತಿಕೇಯತೀರ್ಥವೆಂದು ಪ್ರಸಿದ್ಧವಾಯಿತು. ಈ ತೀರ್ಥವು ಸ್ಕಂದನ ಔದಾರ್ಯದ ಫಲವಾಗಿ ಸ್ವರೂಪ, ಮಹಿಮೆ ಹೊಂದಿದ್ದು. ಇದರಲ್ಲಿ ಮಿಂದವನು, ಸ್ನಾನ-ದಾನಾದಿಗಳನ್ನು ಮಾಡಿದವನು ಸಕಲ ಯಾಗ-ಯಜ್ಞಗಳ ಫಲ ಪಡೆಯಬಲ್ಲರು.

## ಕೃತ್ತಿಕಾತೀರ್ಥ

**ಬ್ರಹ್ಮ:-** ಈ ಕಾರ್ತಿಕೇಯ ತೀರ್ಥದಿಂದ ಸ್ವಲ್ಪ ಅಂತರದಲ್ಲಿ ಕೃತ್ತಿಕಾತೀರ್ಥವಿದೆ. ಈ ತೀರ್ಥವು ಅಗಣಿತಗುಣ ಮಹಿಮೆಯಿಂದೊಡಗೂಡಿದೆ. ಈ ತೀರ್ಥದ ಹೆಸರನ್ನು ಪ್ರಾತಃಕಾಲ, ಸಾಯಂಕಾಲಗಳಲ್ಲಿ ನಾಮಮಾತ್ರದಿಂದ ಉಚ್ಚರಿಸಿದರೂ ಸಾಕು. ಸೋಮಪಾನ (ಯಾಗ) ಮಾಡಿದ ಫಲಪ್ರಾಪ್ತಿಯಾಗಿ, ಮನೋರಥ ಶೀಘ್ರ ನೆರವೇರುತ್ತದೆ.

ಈ ತೀರ್ಥದ ಉಗಮ, ಮಹಿಮೆಗಳೂ ಸ್ವಾರಸ್ಯಕರವಾಗಿವೆ. ಈ ಹಿಂದೆ ತಾರಕಾಸುರನ ನಾಶಕ್ಕಾಗಿ ಬಿದ್ದ ಶಿವನ ರೇತಸ್ಸನ್ನು ಅಗ್ನಿಯು ಪಾನಮಾಡಿದ. ಶಿವನ ವೀರ್ಯದಿಂದ ಶೋಭಿಸುವ ಅಗ್ನಿಯನ್ನು-ಅವನ ರೂಪ, ತೇಜ, ಲಾವಣ್ಯಗಳನ್ನು ಕಂಡು ಋಷಿಪತ್ನಿಯರಲ್ಲಿ ಹಲವರು ಅಗ್ನಿಯನ್ನು ಕಾಮಿಸಿದರು. ಅದರ ಫಲವಾಗಿ ಅರುಂಧತಿಯನ್ನು ಹೊರತುಪಡಿಸಿ ಇನ್ನುಳಿದ ಆರುಜನ ಋಷಿಪತ್ನಿಯರಲ್ಲಿ ಅಗ್ನಿಯಿಂದ ಗರ್ಭಾಧಾನವಾಯಿತು. ತಮ್ಮಿಂದಾದ ಅಚಾತುರ್ಯಕ್ಕಾಗಿ ಆರು ಋಷಿಪತ್ನಿಯರು ಪೇಚಾಡಿ, ವ್ಯಥೆಪಟ್ಟರು. ಈ ಪಾಪದಿಂದ ಪುನೀತರಾಗಲು ಅವರೆಲ್ಲರೂ ಕೊನೆಗೆ ಗೌತಮೀ ನದಿಗೆ ತೆರಳಿ ಅದರಲ್ಲಿ ತಮ್ಮ ಶರೀರವನ್ನೆಲ್ಲ ಮಿಂದು ತೊಳೆದುಕೊಂಡರು.

ನದಿಯಲ್ಲಿ ಸ್ನಾನಮಾಡುತ್ತಿರುವಾಗ ಅವರ ಶರೀರದಿಂದ ಗರ್ಭವು ಹೊರಬಂದು, ನದಿಯ ನೀರಿನಲ್ಲಿ ನೊರೆನೊರೆಯಾಗಿ, ಆರು ಗರ್ಭಗಳೂ ಒಂದಾದವು. ಆ ನೊರೆ ರೂಪದ ಗರ್ಭದಿಂದಲೇ ಷಣ್ಮುಖನ ಜನನವಾಯಿತು. ಈ ರೀತಿ ಗರ್ಭಸಾವ ಮಾಡಿಕೊಂಡು ಋಷಿಪತ್ನಿಯರು ತಮ್ಮ ಮನೆಗಳಿಗೆ ತೆರಳಿದರು. ಮನೆಗೆ ಬಂದ ಮಡದಿಯರು, ಬಡಕಲಾಗಿ, ವಿರೂಪರಾದುದನ್ನೂ, ಸೂಕ್ಷ್ಮವಾಗಿ ಗಮನಿಸಿದ ಅವರ ಪತಿಗಳಾದ ಋಷಿಗಳು ಅವರ ಸ್ವೇಚ್ಛಾವಿಹಾರಕ್ಕೆ ಕೋಪಾವಿಷ್ಟರಾಗಿ ಅವರನ್ನು ಮನೆಯಿಂದ ಹೊರಗೆ ಹಾಕಿದರು. ಪರಿತ್ಯಕ್ತರಾದ ಆ ಋಷಿಪತ್ನಿಯರು ದಾರಿಗಾಣದೆ ದುಃಖಪಡುತ್ತ ನಾರದನಲ್ಲಿಗೆ ಬಂದಾಗ ಅವನು, ''ಶಿವಕುಮಾರನಾದ ಕಾರ್ತಿಕೇಯನನ್ನು ಶರಣು ಹೋಗಲು'' ಮಾರ್ಗದರ್ಶನ ಮಾಡಿದ.

ನಾರದನ ಸಲಹೆಯಂತೆ, ಆ ಆರೂ ಜನ ಋಷಿಪತ್ನಿಯರು, ಷಣ್ಮುಖನ ಬಳಿಗೆ ಬಂದು ಅವನಲ್ಲಿ ಎಲ್ಲ ಸಮಾಚಾರ ವಿವರಿಸಿದರು. ಕೃತ್ತಿಕೆಯರ (ಋಷಿಪತ್ನಿಯರ) ಮಾತನ್ನು ಆಲಿಸಿದ ಸ್ಕಂದ ''ನೀವೆಲ್ಲರೂ ಗೌತಮೀ ನದಿಗೆ ಹೋಗಿ ಆ ನದಿಯಲ್ಲಿ ಸ್ನಾನಮಾಡಿ, ಪರಮೇಶ್ವರನನ್ನು ಪೂಜಿಸಿರಿ'' ಎಂದು ಉಪಾಯ ಬೋಧಿಸಿದನಲ್ಲದೆ, ''ಇದನ್ನು ಶ್ರದ್ಧಾಪೂರ್ವಕ ಮಾಡುವದರಿಂದ ನಿಮ್ಮ ಪಾಪ ಕ್ಷಯಿಸುವದಷ್ಟೇ, ಅಲ್ಲ ಮೋಕ್ಷಕ್ಕೆ ಸಾಧನವಾಗುವದು'' ಎಂದು ಮುಕ್ತಿಮಾರ್ಗ ತೋರಿದ.

ಪರಶಿವನ ಪುತ್ರನ ಹಿತೋಪದೇಶದಂತೆ, ಆ ಕೃತ್ತಿಕೆಯರು ಗೌತಮೀ ಕ್ಷೇತ್ರಕ್ಕೆ ಬಂದು ಮಿಂದು ಗಂಗಾಧರನನ್ನು ಪೂಜಿಸಿದರು. ಅವನ ಅನುಗ್ರಹ ಸಂಪಾದಿಸಿ ಸ್ವರ್ಗವನ್ನು ಹೊಂದಿದರು. ಅಂದಿನಿಂದ ಆ ತೀರ್ಥವು ಕೃತ್ತಿಕಾ ತೀರ್ಥವೆಂದು ಹೆಸರುವಾಸಿ ಆಯಿತು. ಕಾರ್ತಿಕ ಮಾಸದಲ್ಲಿ ಕೃತ್ತಿಕಾನಕ್ಷತ್ರವಿರುವ ಶುಭಮುಹೂರ್ತವಿರುವಾಗ ಇಲ್ಲಿ ಮಿಂದವರು ಎಲ್ಲ ಯಾಗಯಜ್ಞ ಫಲವನ್ನು ಬೇಡದೇ ಪಡೆಯುತ್ತಾರೆ: ಅಲ್ಲದೆ ಮುಂದಿನ ಜನ್ಮದಲ್ಲಿ ಅವರು ಸುಪ್ರಸಿದ್ಧ ರಾಜವಂಶದಲ್ಲಿ ಜನಿಸಿ, ಧಾರ್ಮಿಕ ಪ್ರವೃತ್ತಿಯವರಾಗಿ ಸುಖ, ಶಾಂತಿಯಿಂದ ಜೀವಿಸುತ್ತಾರೆ. ಈ ಕೃತ್ತಿಕಾಕ್ಷೇತ್ರ ಅಥವಾ ಕೃತ್ತಿಕಾತೀರ್ಥವನ್ನು ಮನದಲ್ಲಿ ನೆನೆದವರ ಸರ್ವ ದುರಿತಗಳು ದೂರವಾಗಿ ದೀರ್ಘಾಯುವಾಗಿ, ಸುಖ ಭೋಗಗಳನ್ನು ಅನುಭವಿಸುವನು.

## ದಶಾಶ್ವಮೇಧಿಕತೀರ್ಥ

**ಬ್ರಹ್ಮ:-** ನಾರದನೇ ಕೇಳು, ಅಲ್ಲಿಂದ ಮುಂದೆ ಸ್ವಲ್ಪ ದೂರದಲ್ಲಿಯೇ ದಶಾಶ್ವ ಮೇಧಿಕತೀರ್ಥವಿದೆ. ಈ ತೀರ್ಥಕ್ಕೆ ದಶಾಶ್ವಮೇಧವೆಂಬ ಹೆಸರು ಹೇಗೆ ಬಂದಿತೆಂಬುದನ್ನು ಕೇಳು. ಈ ವೃತ್ತಾಂತವನ್ನು ಶ್ರವಣಮಾಡಿದವರಿಗೆ ಅಶ್ವಮೇಧ ಯಾಗದ ಫಲ ಪ್ರಾಪ್ತವಾಗುವದು.

ಹಿಂದೆ 'ಭೌವನ' ಎಂಬ ಓರ್ವ ಮಹಾರಾಜ ಇದ್ದನು. ಅವನಿಗೆ ಕಶ್ಯಪ ಋಷಿಯು ಪುರೋಹಿತನಾಗಿದ್ದನು. ಭೌವನನು ಅಶ್ವಮೇಧಯಾಗಮಾಡುವ ಇಚ್ಛೆಯಿಂದ ಕಶ್ಯಪನ ಹತ್ತಿರ ಹೀಗೆ ಪ್ರಶ್ನಿಸಿದ-

**ಭೌವನ:-** ನಾನು ಒಂದೇ ಸಾರೆ ಹತ್ತು ಅಶ್ವಮೇಧಯಾಗಗಳನ್ನು ಮಾಡಲು ಬಯಸಿರುವೆ. ಯಾಗಮಾಡಲು ಯೋಗ್ಯಸ್ಥಳ ನಿರ್ದೇಶಿಸಿರಿ.

ಭೌವನನ ಮಾತುಗಳನ್ನು ಆಲಿಸಿದ ಕಶ್ಯಪನು ಯಾಗಗಳನ್ನು ಮಾಡಲು ಯೋಗ್ಯವಾದ ದೇವಯಜನ ಎಂಬ ಸ್ಥಳಗಳನ್ನು ಸೂಚಿಸಿದ. ಆ ಸ್ಥಳಗಳಲ್ಲಿ ಭೌವನನ ಇಚ್ಛೆಯಂತೆ ಅನೇಕ ಋತ್ವಿಜರು ಸೇರಿ ಏಕಕಾಲದಲ್ಲೇ ಹತ್ತು ಅಶ್ವಮೇಧಯಾಗಗಳನ್ನು ಪ್ರಾರಂಭಿಸಿದರು. ಯಾಗ ಪ್ರಾರಂಭವಾದ ಕೆಲವುದಿನಗಳಲ್ಲೇ ವಿಘ್ನಗಳು ನಾ ಮುಂದೆ, ತಾ ಮುಂದೆ ಎಂದು ಬರಲಾರಂಭಿಸಿದವು. ವಿಘ್ನಪರಿಹಾರಕ್ಕೆ ಮಹಾರಾಜ ಸಾಕಷ್ಟು ಯತ್ನಿಸಿದ. ವಿಘ್ನಗಳು ಹೆಚ್ಚುತ್ತಲೇ ಹೋದವು. ಮಹಾರಾಜನ ಪ್ರಯತ್ನ ನೀರಿನಲ್ಲಿ ಹೋಮ ಮಾಡಿದಂತಾಯಿತು. ಮಹಾರಾಜ ಆ ಸ್ಥಳವನ್ನು ತ್ಯಜಿಸಿದ. ಬೇರೆ ಸ್ಥಳವನ್ನು ಆಯ್ಕೆ ಮಾಡಿದ. ಮಹಾರಾಜನ ಆಣತಿಯಂತೆ ಯಜ್ಞದ ಸಾಮಗ್ರಿಗಳು ಸ್ಥಳಾಂತರಕ್ಕೆ ವರ್ಗಾಯಿಸಲ್ಪಟ್ಟವು. ಯಜ್ಞಕ್ಕೆ ಬರಬೇಕಾದ ಋತ್ವಿಜರೇ ಮೊದಲಾದ ಪ್ರಮುಖರು ಬಂದರು. ಮತ್ತೆ ಯಜ್ಞ ಪ್ರಾರಂಭವಾಯಿತು. ಮಹಾರಾಜನ ದುರದೃಷ್ಟದಿಂದ ವಿಘ್ನಗಳು ಇಲ್ಲಿಯೂ ತಮ್ಮ ಪ್ರತಾಪ ಪ್ರದರ್ಶನಮಾಡಿ, ಯಜ್ಞವನ್ನು ನಿಲ್ಲಿಸುವಲ್ಲಿ ಯಶಸ್ವಿಯಾದವು. ಮಹಾರಾಜ ಎಷ್ಟು ಪ್ರಯತ್ನಿಸಿದರೂ ಯಜ್ಞ ಮುಂದುವರಿಸಲು ಆಗಲೇ ಇಲ್ಲ. ಚಿಂತಾಕ್ರಾಂತನಾದ ಮಹಾರಾಜ ತನ್ನ ಪುರೋಹಿತರಾದ ಕಶ್ಯಪರಲ್ಲಿಗೆ ಬಂದನು. ಕಶ್ಯಪ ಮುನಿಯು ಮಹಾರಾಜನ ಸಮಸ್ಯೆಯನ್ನು ಅರಿತು ಅವನನ್ನು ಸಂವರ್ತ (ಬೃಹಸ್ಪತಿಯ ಅಣ್ಣ)ನ ಬಳಿಗೆ ಕರೆದುಕೊಂಡು ಹೋದ. ಮಹಾರಾಜನು, ಮಹಾತ್ಮನಾದ ಸಂವರ್ತಮುನಿಗೆ ಸಾಷ್ಟಾಂಗಪ್ರಣಾಮ ಗಳೊಂದಿಗೆ ಪ್ರಾರ್ಥನೆ ಸಮರ್ಪಿಸಿ, ಕೈ ಮುಗಿದು ಬೇಡಿಕೊಂಡ.

**ಮಹಾರಾಜ:-** ಭಗವನ್, ಏಕಕಾಲದಲ್ಲಿ ಹತ್ತು ಅಶ್ವಮೇಧಮಾಡಲು ಎರಡು ಬಾರಿ ಪ್ರಯತ್ನಿಸಿ ನಾನು ವಿಫಲನಾಗಿರುವೆ. ಇದಕ್ಕೆ ಏನು ಕಾರಣ? ದೇಶದೋಷವೆ? ಕಾಲದೋಷವೆ? ಅಥವಾ ಕರ್ತೃವಾದ ನನ್ನಲ್ಲಿನ ದೋಷವೆ? ಎಷ್ಟು ಪ್ರಯತ್ನ ಮಾಡಿದರೂ ಯಜ್ಞಗಳು ಸಾಂಗವಾಗಿ ಮುಂದುವರಿಯದಿರಲಿಕ್ಕೆ ಕಾರಣವೇನು? ಹಿಡಿದ ಕಾರ್ಯವನ್ನು ವಿಘ್ನಗಳು ಬರುತ್ತವೆ ಎಂಬ ಕಾರಣದಿಂದ ಬಿಡಲು ನನಗೆ ಮನಸ್ಸಿಲ್ಲ. ನಾನೇನು ಮಾಡಬೇಕೆಂಬುದನ್ನು ಪ್ರಾಜ್ಞರಾದ ತಾವು ತಿಳಿಸಬೇಕೆಂದು ಬಿನ್ನವಿಸಿಕೊಳ್ಳುವೆ.

ಮಹಾರಾಜನ ಮಾತುಗಳನ್ನು ಕೇಳಿ, ಸಂವರ್ತ ಮುನಿಯು ಅರೆಕ್ಷಣ ಕಣ್ಮುಚ್ಚಿ ಧ್ಯಾನಗೈದ. ಮೌನ ಮುರಿದು ಇಂತು ನುಡಿದ- ''ಮಹಾರಾಜ, ನಿನ್ನ ಸಮಸ್ಯೆಗೆ ಪರಿಹಾರ ದೊರೆಯಬೇಕಾದರೆ, ನೀನು ಬ್ರಹ್ಮದೇವನ ಬಳಿಗೆ ಹೋಗು. ಅವನು ನಿನಗೆ ಪರಿಹಾರ ಸೂಚಿಸುವನು.

**ಬ್ರಹ್ಮ:-** ಸಂವರ್ತನಿಂದ ಉಪದಿಷ್ಟನಾದ ಮಹಾರಾಜನು, ತನ್ನ ಸಮಸ್ಯೆ ಪರಿಹರಿಸಿ ಕೊಳ್ಳಲು ನನ್ನ ಬಳಿಬಂದ. ಸಂವರ್ತನನ್ನು ಉದ್ದೇಶಿಸಿ ನಾನು ನುಡಿದೆ- ''ಮಹಾರಾಜ, ನೀನು ಈಗ ಗೌತಮೀನದೀ ತೀರಕ್ಕೆ ಹೋಗು. ಯಜ್ಞಕ್ಕೆ ಕಶ್ಯಪ ಋಷಿಯನ್ನೇ ಪುರೋಹಿತ ನನ್ನಾಗಿ ನಿಯಮಿಸು. ಅಂದರೆ ನೀನು ಮಾಡುವ ಯಜ್ಞಗಳಿಗೆ ವಿಘ್ನಗಳ ಕಾಟ ಇರುವದಿಲ್ಲ.''

**ಮಹಾರಾಜ:-** ಬ್ರಹ್ಮನ ಮಾತುಗಳನ್ನುಕೇಳಿ ನಾನು ಕಶ್ಯಪ ಮುನಿಯಿಂದ ಕೂಡಿಕೊಂಡು, ಗೌತಮೀ ನದೀತೀರಕ್ಕೆ ನಡೆದೆ. ಯಾಗಗಳು ಪುನರಾರಂಭಗೊಂಡು, ಕಶ್ಯಪಋಷಿಯ ಅನುಗ್ರಹದಿಂದ, ಅದಕ್ಕಿಂತಮಿಗಿಲಾಗಿ ಗಂಗೆಯ ಮಹಿಮೆಯಿಂದ, ಸಕಾಲದಲ್ಲಿ ಸಮಾಪ್ತಿ ಹೊಂದಿದವು. ನಿರ್ವಿಘ್ನವಾಗಿ ನೆರವೇರಿದ ದಶಾಶ್ವಮೇಧಗಳ ಪುಣ್ಯ ನನ್ನಪಾಲಿನದಾಗಿತ್ತು. ನನಗೆ ಹಿಡಿಸಲಾರದಷ್ಟು ಸಂತೋಷ. ಇದಕ್ಕೆಲ್ಲ ಕಾರಣರಾದ ಕಶ್ಯಪಮುನಿಗಳಿಗೆ ನನ್ನ ಸಮಸ್ತ ಸಾಮ್ರಾಜ್ಯವನ್ನು ದಾನಮಾಡಲು ಸಂಕಲ್ಪಿಸಿದೆ. ಈ ನನ್ನ ಯಶಸ್ಸಿಗೆ ಕಾರಣರು ಅವರೇ ಆಗಿದ್ದರು. ಮುನಿಗಳಿಗೆ ಈ ವಿಷಯ ತಿಳಿಸಿದಾಗ ಅವರು ''ಸಾಮ್ರಾಜ್ಯ ತೆಗೆದುಕೊಂಡು ನನಗೇನಾಗಬೇಕಾಗಿದೆ?''-ಎಂದರು. ಆದರೂ ಸ್ವಸಂತೋಷಕ್ಕಾಗಿ ನಾನು ''ನೀಡಿಯೇ ತೀರುತ್ತೇನೆ ಅಂದಾಗ, ನನ್ನನ್ನು ನಿರಾಶಗೊಳಿಸಲು ಇಚ್ಛಿಸದೆ, ಭೂದಾನ ಸ್ವೀಕರಿಸಲು ಒಪ್ಪಿದರು. ಋತ್ವಿಜರೆ ಮೊದಲಾದ ಪ್ರಮುಖರ ಮುಂದೆ ಕಶ್ಯಪರನ್ನು ಪೂಜಿಸಿ, ಅವರಿಗೆ ಭೂದಾನಮಾಡುವ ಸಂಕಲ್ಪವನ್ನು ಶ್ರದ್ಧೆಯಿಂದ ಉಚ್ಚರಿಸಿದೆ. ಆಗ ಅಶರೀರವಾಣಿ ಕೇಳಿಸಿತು- 'ರಾಜನ್, ಭೂದಾನದ ಸಂಕಲ್ಪದಿಂದಲೇ, ನಿನಗೆ ಭೂದಾನ ನೀಡಿದ ಫಲ ಪ್ರಾಪ್ತವಾಗಿದೆ. ಇನ್ನು ಭೂದಾನ ನೀಡಬೇಕಾಗಿಲ್ಲ. ಮುನಿಗೆ ಭೂಮಂಡಲದ ಆಧಿಪತ್ಯ ಬೇಕಾಗಿಲ್ಲ. ಆದುದರಿಂದ ಸಾಮ್ರಾಜ್ಯವನ್ನು ನೀನೇ ಇಟ್ಟುಕೋ. ಭೂದಾನಕ್ಕೆ ಬದಲಾಗಿ ಎಲ್ಲ ಜೀವಿಗಳಿಗೆ ಅನ್ನದಾನಮಾಡು. ಅನ್ನದಾನಕ್ಕಿಂತ ಇನ್ನೂ ದಾನವಿಲ್ಲ. ನಾವು ಹೇಳಿದಂತೆ ನಿನಗೆ ಮಂಗಳವಾಗುವದು.'' ಎಂದು ಆಕಾಶವಾಣಿ ಮಹಾರಾಜನಿಗೆ ಕೇಳಿಸಿತು.

ಅವನಿಗೆ ನಿರಾಶೆ ಆಯಿತು. ಕಶ್ಯಪರಂಥ ಮಹಾತ್ಮರಿಗೆ ಭೂಮಿಯನ್ನು ದಾನನೀಡಿ, ಕೃತಕೃತ್ಯನಾಗಬೇಕೆಂದು ಆಲೋಚಿಸಿ, ಉತ್ಸಾಹದಿಂದ ಅದರಲ್ಲಿ ಉದ್ಯುಕ್ತನಾಗಿದ್ದ. ಕೇಳಿದ ಸಂಕಲ್ಪದಿಂದ ಮಹಾರಾಜನಿಗೆ ಸಮಾಧಾನವಿರಲಿಲ್ಲ. ಅಷ್ಟೇ ಅಲ್ಲ, ಸಂಕಲ್ಪಮಾಡಿ,

ದಾನಕೊಡದಿದ್ದರೆ, ಸರಿಯಾಗದು ಎಂಬ ಭಾವನೆಯೂ ಉದಿಸಿತು. ಅಶರೀರವಾಣಿಯನ್ನು ಅಲಕ್ಷಿಸಿ, ಭೂಮಿಯನ್ನು ದಾನಕೊಡುವ ಕಾರ್ಯವನ್ನು ಮುಂದುವರಿಸಿದ. ಆಗ ಸ್ವತಃ ಭೂದೇವಿಯೇ ಶರೀರಧಾರಣೆ ಮಾಡಿ, ಮಹಾರಾಜನ ಮುಂದೆ ಬಂದು ಹೀಗೆ ಹೇಳಿದಳು.

**ಭೂದೇವಿ:-** 'ಮಹಾರಾಜ ನನ್ನನ್ನು ದಾನಮಾಡಬೇಡ. ನಾನು ಹೇಳುವದನ್ನು ಲಕ್ಷ್ಯವಿಟ್ಟು ಕೇಳು. ನೀನು ನನ್ನನ್ನು ದಾನಮಾಡಿದರೆ ನಾನು ನೀರಿನಲ್ಲಿ ಮುಳುಗಿ ನಷ್ಟವಾಗುವೆ. ನನ್ನನ್ನು ದಾನಮಾಡುವ, ಆಶೆಯನ್ನು ತೊರೆದು ಬಿಡು.'

ಭೂದೇವಿಯ ಈ ಮಾತುಗಳನ್ನು ಕೇಳಿದ ಮಹಾರಾಜ ಅವಳನ್ನು ಇಂತು ಪ್ರಶ್ನಿಸಿದ. 'ಭೂದಾನದ ಸಂಕಲ್ಪವನ್ನಂತೂ ಮಾಡಿದ್ದೇನೆ. ನಿನ್ನನ್ನು ದಾನನೀಡದೆ, ಆ ಸಂಕಲ್ಪ ಪೂರ್ಣವಾಗುವ ಹಾದಿಯನ್ನು ನೀನೇ ಹೇಳು. ಇಲ್ಲದಿದ್ದರೆ ದಾನಕ್ಕೆ ಸಿದ್ಧಳಾಗು. ಒಮ್ಮೆ ಸಂಕಲ್ಪಿಸಿದುದನ್ನು ನಾನು ದಾನನೀಡದೆ ಇರಲು ಸಾಧ್ಯವಿಲ್ಲ.

**ಭೂದೇವಿ:-** ರಾಜನೆ, ಗೌತಮೀ ನದಿ ತೀರದಲ್ಲಿ ಎಳ್ಳು, ಗೋವು, ಧನ, ಧಾನ್ಯ ಮುಂತಾದವುಗಳನ್ನು ಜ್ಞಾನಿಗಳಿಗೆ ದಾನ ನೀಡು. ಇದೇ ನದಿಯ ತೀರದಲ್ಲಿ ಅನ್ನದಾನ ಮಾಡು. ಇದರಿಂದ ನಿನಗೆ ಭೂದಾನ ಮಾಡಿದ ಫಲ ಲಭಿಸುವದು. ನನ್ನ ಮಾತು ಸುಳ್ಳಲ್ಲ. ಬೇಕಾದರೆ ಶಾಸ್ತ್ರಜ್ಞರನ್ನು ವಿಚಾರಿಸು.

ಭೂದೇವಿಯ ಈ ಮಾತುಗಳನ್ನು ಕೇಳಿ ಮಹಾರಾಜನಿಗೆ ಸಮಾಧಾನವೆನಿಸಿತು. ಭೂದೇವಿಯು ಹೇಳಿದಂತೆ ಅನ್ನಾದಿ ಸಕಲ ಪದಾರ್ಥಗಳ ದಾನವನ್ನು ಗೌತಮೀನದಿಯ ತೀರದಲ್ಲಿ ಮಾಡಿ, ಬಹುಪುಣ್ಯ ಸಂಪಾದಿಸಿದ, ಮಹಾರಾಜನು ಗೌತಮೀನದಿಯ ದಡದಲ್ಲಿ ಹತ್ತು ಅಶ್ವಮೇಧಯಾಗಗಳನ್ನು ಅನ್ನದಾನಾದಿ ಪುಣ್ಯಕಾರ್ಯಗಳನ್ನು ಮಾಡಿ, ಸಾಕಷ್ಟು ಪುಣ್ಯ ಸಂಪಾದಿಸಿದುದರಿಂದ ಅಂದಿನಿಂದ ಆ ಪವಿತ್ರತೀರ್ಥವು ದಶಾಶ್ವಮೇಧಿ ತೀರ್ಥವೆಂದು ಖ್ಯಾತವಾಯಿತು.

## ಪೈಶಾಚತೀರ್ಥ

**ಬ್ರಹ್ಮ:-** ಅಲ್ಲಿಂದ ಸ್ವಲ್ಪ ದೂರ ನಡೆದರೆ ಎದುರಿನಲ್ಲಿ ಕಾಣುವದೇ ಪೈಶಾಚ ತೀರ್ಥ. ಅದು ಗೌತಮೀನದಿ ತೀರದ ದಕ್ಷಿಣಕ್ಕಿದ್ದು, ಮಹಾಜ್ಞಾನಿಗಳೂ ಸಹ ಅದನ್ನು ಸೇವಿಸುವರು.

ಇಲ್ಲಿರುವ ಬ್ರಹ್ಮಗಿರಿಯ ಪಕ್ಕದಲ್ಲಿ ಅಂಜನವೆಂಬ ಗಿರಿ ಇದ್ದು ಅದರಲ್ಲಿ ಶಾಪಗ್ರಸ್ತಳಾದ ಅಪ್ಸರೆಯೊಬ್ಬಳು ವಾಸವಾಗಿದ್ದಳು. ಅವಳ ಹೆಸರೇ ಅಂಜನಾದೇವಿ, ಅವಳ ಪತಿ 'ಕೇಸರಿ', ಕಪಿಕುಲ ಸಂಜಾತ. ಅವನಿಗೆ ಅದ್ರಿಕೆ ಎಂಬ ಮತ್ತೊಬ್ಬ ಹೆಂಡತಿಯೂ ಇದ್ದಳು.

ಒಂದು ದಿನ ಅಗಸ್ತ್ಯಮುನಿಯು ಸಂಚರಿಸುತ್ತ ಅಂಜನಗಿರಿಗೆ ಬಂದ. ಆಕಸ್ಮಿಕವಾಗಿ ಆಗಮಿಸಿದ ಆ ತಾಪಸನನ್ನು ಅದ್ರಿ, ಅಂಜನೆಯರಿಬ್ಬರೂ ಭಯಭಕ್ತಿಯಿಂದ ಆದರಿಸಿ ಉಪಚರಿಸಿದರು. ಆ ಸಮಯದಲ್ಲಿ ಅವರ ಪತಿ ಕೇಸರಿ ಮನೆಯಲ್ಲಿರಲಿಲ್ಲ. ಅವರೀರ್ವರ ಭಕ್ತಿ ಪುರಸ್ಸರ ಆದರಾತಿಥ್ಯ ಪಡೆದ ಮುನಿ ಅತ್ಯಾನಂದ ಭರಿತನಾಗಿ ಅವರಿಗೆ ಬೇಕಾದ ವರ ಕೇಳಲು ಹೇಳಿದ. ಆಗ ಅವರೀರ್ವರು ಮಹಾಬಲಿಷ್ಠರೆನಿಸುವ, ಉಪಕಾರ ಮನೋವೃತ್ತಿಯುಳ್ಳ ಪುತ್ರರಿಬ್ಬರನ್ನು ಕರುಣಿಸುವಂತೆ ವರಯಾಚಿಸಿದರು. ವರವಿತ್ತು ಮುನಿ ಅಲ್ಲಿಂದ ಹೊರಟು ಹೋದ.

ಒಂದುದಿನ ಗಿರಿಯಲ್ಲಿ ಅಂಜನಾ, ಅದ್ರಿಕೆಯರಿಬ್ಬರೂ ಆನಂದದಿಂದ ನರ್ತನ ಗೈಯುತ್ತಿರುವಾಗ ವಾಯು ಹಾಗೂ ನಿರ್ಋತಿಯರಿಬ್ಬರೂ ಅವರನ್ನು ಕಂಡು ಮೋಹಿಸಿ ಅವರೊಡನೆ ವಿಹರಿಸಿದರು. ಅನಂತರ ಮುಂದೆ, ಅಂಜನಾದೇವಿಯಲ್ಲಿ ವಾಯುವಿನಿಂದ ಹನುಮಂತನೂ, ಅದ್ರಿಯ ಗರ್ಭದಿಂದ ಪೈಶಾಚನೂ ಜನಿಸಿದರು. ಆ ಕಪಿ ಪತ್ನಿಯರು ತಮಗಿರುವ ಇಂದ್ರಶಾಪದ ಪರಿಣಾಮ ವಿವರಿಸಿ, ತಮ್ಮ ಶಿರಸ್ಸು ವಿಕಾರವಾಗುವದನ್ನು ತಡೆಯುವ ಉಪಾಯ ಕುರಿತು ಕೇಳಿದರು. ಆಗ ವಾಯು, ನಿರ್ಋತಿಯರಿಬ್ಬರೂ ಅವರಿಗೆ ಗೌತಮೀ ನದಿಯಲ್ಲಿ ಸ್ನಾನಾದಿಗಳನ್ನು ಮಾಡಲು ಹೇಳಿದರು. ಆದರಿಂದ ಶಾಪ ವಿಮುಕ್ತಿಗೆ ದಾರಿತೋರಿದರು.

ಅವರ ಸಲಹೆಯಂತೆ ಪೈಶಾಚರೂಪವುಳ್ಳ ಅದ್ರಿಕೆಯು, ಹನುಮಂತನ ಮೇಲಿನ ಪ್ರೀತಿಯಿಂದ ಅಂಜನಾದೇವಿಯನ್ನು ಕರೆದುಕೊಂಡು ಹೋಗಿ ಗೌತಮೀನದಿಯಲ್ಲಿ ಸ್ನಾನಮಾಡಿದಳು. ಅದರಂತೆ ಹನುಮಂತನು ಬೆಕ್ಕಿನ ಮುಖವುಳ್ಳ ಅದ್ರಿಕಾದೇವಿಯನ್ನು ಕರೆದುಕೊಂಡುಹೋಗಿ ಗೌತಮೀನದಿಯಲ್ಲಿ ಸ್ನಾನಮಾಡಿಸಿ ಕರೆದುಕೊಂಡು ಬಂದನು. ಅಪ್ಸರೆಯರ ಶಾಪ ದೂರವಾಗಿ ಅವರಿಬ್ಬರೂ ಅಪೂರ್ವ ರೂಪವತಿಯಾದರು. ಇದರ ಪ್ರಭಾವದಿಂದ, ಅಂದಿನಿಂದ ಆ ತೀರ್ಥವು ಪೈಶಾಚತೀರ್ಥವೆಂದು ಹೆಸರಾಯಿತು. ಅಲ್ಲದೆ ಇದಕ್ಕೆ ಅಂಜನತೀರ್ಥವೆಂದೂ ಅನ್ನುತ್ತಾರೆ. ಬ್ರಹ್ಮಗಿರಿಯಿಂದ ಪೂರ್ವಕ್ಕೆ ಸುಮಾರು ಐವತ್ತು ಗಾವುದ ದೂರದಲ್ಲಿ ಮಾರ್ಜಾರ ಅಥವಾ ಪೈಶಾಚತೀರ್ಥವಿದೆ.

ಮಾರ್ಜಾರತೀರ್ಥ ದಾಟಿದ ನಂತರ ಹನುಮತೀರ್ಥ ಸಿಕ್ಕುತ್ತದೆ. ಅಲ್ಲಿಂದ ಮುಂದೆ ಪಾವನವಾದ ವೃಷಾಕಪಿ ಎಂಬ ತೀರ್ಥಕ್ಕೂ ಹೋಗಬಹುದಾಗಿದೆ. ಅದರ ಬದಿಯಲ್ಲಿಯೇ ಕಾರ್ತಿಕೇಯತೀರ್ಥವಿದ್ದು, ಸರ್ವಪಾಪಾದಿಗಳನ್ನು ತೊಳೆದು ಯಾತ್ರಾರ್ಥಿಗಳ ಮನಸ್ಸಿನ ತಳಮಳ ಪರಿಹಾರ ಮಾಡುತ್ತದೆ.

## ಕ್ಷುಧಾತೀರ್ಥ

**ಬ್ರಹ್ಮ:-** ಸಕಲ ಜನರ, ಯಾತ್ರಾರ್ಥಿಗಳ ಹಸಿವೆ ನೀರಡಿಕೆಯನ್ನು ಹಿಂಗಿಸಬಲ್ಲ ಹಾಗೂ ಸಕಲ ಪಾಪಗಳನ್ನು ಪರಿಹರಿಸಿ ಸರ್ವಇಷ್ಟಾರ್ಥಗಳನ್ನು ನೆರವೇರಿಸಬಲ್ಲ ಪುಣ್ಯಪ್ರದವಾದ ತೀರ್ಥ ಒಂದಿದೆ. ಅದೇ ಜಗತ್ಪಸಿದ್ಧವಾದ ಕ್ಷುಧಾತೀರ್ಥ. ಇದರ ಮಹಿಮೆಯೂ ಅಷ್ಟೇ ಪಾವಿತ್ರ್ಯವುಳ್ಳದ್ದಿದು ಅದನ್ನು ಹೇಳುವೆ, ಕೇಳು.

ಬಹುಕಾಲದ ಪೂರ್ವದಲ್ಲಿ ಕಣ್ವನೆಂಬ ಋಷಿ ಒಬ್ಬನಿದ್ದ. ಅವನು ಮಹಾತಪಸ್ವಿ ಹಾಗೂ ಮೇಧಾವಿ; ವೇದಪಾರಂಗತನೂ ಸಹ. ಅವನಿದ್ದ ದೇಶದಲ್ಲಿ ಬರಗಾಲ ತಲೆದೋರಿ ಎಲ್ಲೆಡೆಯಲ್ಲಿಯೂ ಅನ್ನ, ಜಲಕ್ಷಾಮ ಉಲ್ಬಣಗೊಂಡಿತು. ಆ ಮುನಿಯು ಸಹ ಆಹಾರವಿಲ್ಲದೆ ಹಸಿವೆಯಿಂದ ಕಂಗಾಲಾಗಿ, ಅಲೆಯುತ್ತ, ಗೌತಮನ ಆಶ್ರಮಕ್ಕೆ ಬಂದ. 'ಗೌತಮನದು ಪುಣ್ಯಾಶ್ರಮ, ಅನ್ನ-ಜಲಗಳು ಸಮೃದ್ಧಿಯಾಗಿದ್ದವು. ಅವನೂ, ನಾನು ಸರಿಸಮಾನರು. ಇಂಥವನಲ್ಲಿ ಕೈಚಾಚುವುದು ತರವಲ್ಲ' ಎಂದು ಸಂಕಲ್ಪಿಸಿ, ಹಸಿವೆ ಹೆಚ್ಚಾಗಿದ್ದರೂ ಹೇಗೋ ಹತ್ತಿಕ್ಕಿಕೊಂಡು ಗೌತಮೀ ನದೀ ತೀರಕ್ಕೆ ಬಂದನು. ಆ ನದಿಯಲ್ಲಿ ಸ್ನಾನಮಾಡಿ, ಅಹ್ನಿಕಗಳನ್ನು ಮುಗಿಸಿಕೊಂಡು, ದರ್ಭಾಸನದಲ್ಲಿ ಕುಳಿತುಕೊಂಡು ಏಕ ಚಿತ್ತದಿಂದ ಗೌತಮೀ ನದಿಯನ್ನೂ ಹಾಗೂ ಹಸಿವೆಯನ್ನೂ ಸ್ತುತಿಸಿದನು.

**ನಮೋऽಸ್ತು ಗಂಗೇ ಪರಮಾರ್ತಿಹಾರಿಣೇ ।**
**ನಮಃ ಕ್ಷುಧೇ ಸರ್ವಜನಾರ್ತಿಕಾರಿಣೇ ॥**

**ನಮೋ ಮಹೇಶಾನ ಜಟೋದ್ಭವೇ ಶುಭೇ ।**
**ನಮೋ ಮಹಾಮೃತ್ಯುಮುಖಾದ್ವಿನಿಃ ಸೃತೇ ॥**

ಮನದ ಮಹಾದುಃಖವನ್ನು, ಅಳಲು ವ್ಯಥೆಗಳನ್ನು ಅಳಿಯುವ ಗೌತಮೀ, ನಿನಗೆ ನಮಸ್ಕಾರ. ಸಕಲದುಃಖಕ್ಲೇಶಗಳನ್ನು, ಸಕಲ ಜೀವಿಗಳಿಗೂ ಉಂಟುಮಾಡುವ ಓ ಕ್ಷುಧೆಯೆ, ನಿನಗೂ ನನ್ನ ನಮಸ್ಕಾರ. ಪರಶಿವನ ಜಟಾಜೂಟದಿಂದ ಹುಟ್ಟಿ ಹರಿದ ಓ ಗೌತಮೀ ನಿನಗೆ ನಮಸ್ಕಾರ. ಮಹಾಮೃತ್ಯು ಮುಖದಿಂದ ಉದ್ಭವಿಸಿದ ಹಸಿವೆಯೇ ನಿನಗೆ ನಮಸ್ಕಾರ.

ಈ ರೀತಿಯಾಗಿ ಕಣ್ವನು ಸ್ತುತಿಸಲು, ಅವನೆದುರು ಎರಡು ರೂಪಗಳು ಪ್ರತ್ಯಕ್ಷವಾದವು. ಒಂದು ಗೌತಮೀ ರೂಪ; ಮತ್ತೊಂದು ಹಸಿವಿನ ಭಯಂಕರ ರೂಪ. ಅವರಿಬ್ಬರನ್ನು ಕಂಡ ಕಣ್ವ ಭಕ್ತಿಯಿಂದ ಕೈ ಮುಗಿದು, ಗೌತಮೀದೇವಿಗೆ ದೀರ್ಘಾಯುಸ್ಸು, ಧನ, ಭೋಗ ಮುಕ್ತಿಗಳನ್ನೂ ಕ್ಷುಧೆ (ಹಸಿವು)ಯನ್ನು ಕುರಿತು, 'ನನ್ನಲ್ಲಿ ನನ್ನ ವಂಶದಲ್ಲಿ ನೀನು ಇರದಂತೆ ಹೊರಟುಹೋಗು, ಎಂದು ವಿನಂತಿಸಿಕೊಂಡ ನಲ್ಲದೆ, 'ಹಸಿವಿನಿಂದ ಬಳಲಿದವರು ನಿನ್ನನ್ನು ಈ ಸ್ತೋತ್ರದಿಂದ ಸ್ತುತಿಸಿದರೆ ಅವರಿಗೆ ದಾರಿದ್ರ್ಯ ದುಃಖವು ಬರದಿರಲಿ' ಎಂದು ಬೇಡಿಕೊಂಡ.

ಕಣ್ವನ ಬೇಡಿಕೆಗಳಿಗೆ ಗೌತಮೀ, ಕ್ಷುಧೆಯರು 'ತಥಾಸ್ತು' ಎಂದು ನುಡಿದು ಅಂತರ್ಧಾನರಾದರು. ಅಂದಿನಿಂದ ಈ ತೀರ್ಥ ಕಣ್ವತೀರ್ಥವೆಂದು ನಾಮಕರಣಗೊಂಡಿತು. ಈ ಮಹಾಪುಣ್ಯನದೀ ತೀರ್ಥದಲ್ಲಿ ಸ್ನಾನ, ಜಪ, ತಪ ಗೈದವರು ಐಶ್ವರ್ಯವಂತ ರಾಗುತ್ತಾರೆ; ಅವರ ಸಕಲ ಮನೋಕಾಮನೆಗಳು ಕೂಡಲೇ ಕೈಗೂಡುತ್ತವೆ.

## ಚಕ್ರತೀರ್ಥ

**ಬ್ರಹ್ಮ**:- ಅಲ್ಲಿಂದ ತುಸು ಮುಂದೆ ಹೋದರೆ ಚಕ್ರತೀರ್ಥ ಕಾಣುತ್ತದೆ. ಈ ತೀರ್ಥ ದಲ್ಲಿ ಭಕ್ತಿಯಿಂದ ಮಿಂದರೆ, ವಿಷ್ಣುಲೋಕಪ್ರಾಪ್ತಿ ಫಲ. ಅದರಲ್ಲಿಯೇ ಇರುವ ಮತ್ತೊಂದು ಸಣ್ಣತೀರ್ಥ 'ಗಣಿಕಾಸಂಗಮ'ದಲ್ಲಿ ಸ್ನಾನಮಾಡಿದರೆ ಅಧಿಕ ಪುಣ್ಯ ಫಲ. ಅದರಲ್ಲೂ ಏಕಾದಶಿಯ ಉಪವಾಸ ಕಾಲದಲ್ಲಿ ಸ್ನಾನ ಮಾಡಿದರಂತೂ ಪುಣ್ಯಲೋಕದ ಸಾಕ್ಷಾತ್ಕಾರವಾದಂತೆಯೆ!

ಬಹುವರ್ಷಗಳ ಹಿಂದೆ ಈ ತೀರ್ಥದಲ್ಲಿ ಘಟಿಸಿದ ಒಂದು ಘಟನೆಯನ್ನು ವಿವರಿಸುತ್ತೇನೆ ಕೇಳು. ವಿಶ್ವಧರನೆಂಬ ಧನಿಕ ವೈಶ್ಯನೊಬ್ಬನಿದ್ದ. ಅವನಿಗೆ ಅಪರವಯಸ್ಸಿನಲ್ಲಿ ಪುತ್ರನೊಬ್ಬ ಜನಿಸಿದನು. ಅವನು ರೂಪವಂತನೂ, ಗುಣವಂತನೂ ಆಗಿದ್ದನಂತೆ. ತಂದೆಗೆ ಅತ್ಯಂತ ಪ್ರಿಯನೂ ಆಗಿದ್ದನು. ಆದರೆ ಅವನು ಅಲ್ಪಾಯುಷಿ. ದುರ್ದೈವದಿಂದ ಮರಣ ಹೊಂದಿದನು. ತಾರುಣ್ಯೋದಯದಲ್ಲೇ ಮರಣವನ್ನಪ್ಪಿದ ಮಗನನ್ನು ಕುರಿತು ತಂದೆ ತಾಯಿಗಳು ಪರಿಪರಿಯಿಂದ ಪ್ರಲಾಪಿಸಿದರು.

ಅವರ ದುಃಖವನ್ನು ನೋಡಿ ಸಹಿಸಲಾರದೇ ಕಠೋರ ಹೃದಯದ ಯಮನೂ ಕರಗಿ ಹೋದ. ಅವರ ಕುಮಾರನನ್ನು ಅಲ್ಲಿಯೇ ಬಿಟ್ಟು ತನ್ನ ಲೋಕಕ್ಕೆ ಮರಳಿದ. ಆ ಯಮನು

ಗೋದಾವರಿ ತೀರದಲ್ಲಿ ನಿಂತು ಹರಿಯನ್ನು ಧ್ಯಾನಮಾಡಿ ತಪಸ್ಸಿನಲ್ಲಿ ತಲ್ಲೀನನಾಗಿ ಬಿಟ್ಟ. ಇದರಿಂದ ಯಮನ ದೈನಂದಿನಕಾರ್ಯ ನಿಂತುಹೋಗಿ, ಭೂಮಿಯೆಲ್ಲ ಜನರಿಂದಲೂ, ಪಶು, ಪಕ್ಷಿ, ಪ್ರಾಣಿಗಳಿಂದಲೂ ತುಂಬಿಹೋಯಿತು. ಭೂಮಿಗೂ ಸಹ ಭಾರವೆನಿಸಿತು. ತನ್ನ ಮೇಲಿನ ಭರಿಸಲಾರದ ಭಾರದ ಒತ್ತಡಕ್ಕೆ ಕಸಿವಿಸಿಗೊಂಡ ಭೂದೇವಿಯು ದೇವೇಂದ್ರನ ಬಳಿಗೆ ಹೋಗಿ ತನ್ನ ಅವಸ್ಥೆಯನ್ನು ವಿವರಿಸಿದಳು. ಯಮನ ಕಾರ್ಯ ಚಟುವಟಿಕೆ ಮುನ್ನಿನಂತೆ ಚುರುಕುಗೊಳಿಸಲು ಬಿನ್ನವಿಸಿಕೊಂಡಳು.

ದೇವೇಂದ್ರನು ಕಾರ್ಯ ಪ್ರವರ್ತನಾಗಿ, ಕೂಡಲೇ ಯಮನನ್ನು ಕರೆತರಲು ಸಿದ್ಧ ಕಿನ್ನರರಿಗೆ ಆಜ್ಞಾಪಿಸಿದ. ಅವರು ಅವನಾಜ್ಞೆಯಂತೆ ಯಮಪುರಿಗೆ ಹೋಗಿ ಮರಳಿ ಬಂದು ಒಡೆಯನಾದ ದೇವೇಂದ್ರನಿಗೆ, ಯಮನ ಸುಳಿವೇ ಸಿಗದಿದ್ದ ವಿಷಯ ವಿವರಿಸಿದರು. ಇಂದ್ರ, ಯಮನ ತಂದೆ ಸೂರ್ಯನನ್ನು ವಿಚಾರಿಸಿದಾಗ ಯಮನು ಗೋದಾವರೀ ತೀರದಲ್ಲಿ ತಪೋನಿರತನಾಗಿರುವದನ್ನು ಅರಿತು, ಹೌಹಾರಿದ. ಅವನು ಕ್ಷಣಕಾಲ ಚಿಂತಿಸಿದ. 'ಆ ದುಷ್ಟಯಮನು ಇಂದ್ರಪದವಿ ಪಡೆಯಲು ಈ ರೀತಿ ಉಗ್ರತಪ ಕೈ ಗೊಂಡಿರಬೇಕೆಂದು' ಅವಸರದ ನಿರ್ಣಯ ಕೈಕೊಂಡ. ಕೂಡಲೇ ಅಪ್ಸರೆಯರನ್ನು ಕರೆದು, ಯಮನ ತಪಸ್ಸನ್ನು ಕೆಡಿಸಲು ತಂತ್ರಹೂಡಲು ಹೇಳಿದ. ಆದರೆ ಅವರು ಅವನ ಆಜ್ಞೆಗೆ ಹಿಂದೇಟು ಹಾಕಿದರು. ಕೊನೆಗೆ ಸ್ವಯಂ ದೇವೇಂದ್ರನೇ ಸಕಲ ದೇವಸೇನೆಯೊಂದಿಗೆ ಯಮನನ್ನು ಎದುರಿಸಲು ಮುಂದಾದ.

ಇಂದ್ರನ ಸಿದ್ಧತೆಯನ್ನು ಮುಂದಾಗಿ ಅರಿತ ಹರಿಯು ತನ್ನ ಭಕ್ತನನ್ನು (ಯಮನನ್ನು) ರಕ್ಷಿಸಲು ಅವನ ಬಳಿಗೆ ಸುದರ್ಶನ ಚಕ್ರಕಳಿಸಿದ. ಗೋದಾವರೀ ತೀರದಲ್ಲಿ ಆ ಚಕ್ರವು ನೆಲೆಸಿದ ಕಾರಣದಿಂದ ಅದಕ್ಕೆ ಚಕ್ರತೀರ್ಥವೆಂದು ಸಾರ್ಥಕನಾಮ ಪ್ರಾಪ್ತವಾಯಿತು.

ಇಂದ್ರನು ಭವಿಷ್ಯತ್ತನ್ನು ಕುರಿತು ಚಿಂತಿಸುತ್ತಿರುವಾಗ ಮೇನಕೆಯು ಬಂದು ಕೈಮುಗಿದು ಗೌರವದಿಂದ ಬಿನ್ನವಿಸಿಕೊಂಡಳು- 'ಯಾವ ಅಪ್ಸರೆಯೂ ಯಮನನ್ನು ನೋಡಲು ಸಮರ್ಥರಿಲ್ಲ. ಆದರೆ ಮೇನಕೆ ಎಂಬ ಈ ಸುಂದರಿಯು ನಿನ್ನ ಅಪ್ಪಣೆ ನೆರವೇರಿಸಲು ಮುಂದಾಗಿ ಬಂದಿದ್ದಾಳೆ.' ಎಂದಳು ಕೂಡಲೇ ದೇವೇಂದ್ರನು ಹರ್ಷಿತನಾಗಿ ಆ ಗಣಿಕೆಯನ್ನು ಯಮನೆಡೆಗೆ ಕಳಿಸಿಕೊಟ್ಟನು.

ಗಣಿಕೆಯ ರೂಪ ಲಾವಣ್ಯಕ್ಕೆ ಮನಸೋತ ಯಮ. ಇಂದ್ರನ ತಂತ್ರ ಫಲಿಸಿತು. ಆದರೆ ಯಮನ ಕಾಮದ ದೃಷ್ಟಿಗೆ ಗಣಿಕೆಯು ಕೂಡಲೇ ನದಿಯಾದಳು. ಮುಂದೆ ಗೌತಮೀ ನದಿಯಲ್ಲಿ ಸಂಗಮಿಸಿ, ಪುಣ್ಯನದಿ ಎಂದೆನಿಸಿಕೊಂಡು ತೆರಳಿದಳು. ವಿಮಾನವನ್ನೇರಿ, ಆನಂದದಿಂದ ಗಣಿಕೆಯು ಸ್ವರ್ಗಕ್ಕೆ ತೆರಳುತ್ತಿದನ್ನು ಕಂಡು ಅಚ್ಚರಿಗೊಂಡ ಯಮ. ಯಮನ ಬಳಿಗೆ, ತಂದೆಯಾದ ಸೂರ್ಯ ಬಂದು ಸಂತೈಸುತ್ತ ನುಡಿದ ; ''ಪುತ್ರನೆ, ನಿನ್ನ ಪ್ರಜಾಸಂಹಾರ ಕಾರ್ಯವನ್ನು ಅರ್ಧಕ್ಕೆ ನಿಲ್ಲಿಸಿದೆ ಏಕೆ? ಕರ್ತವ್ಯ ಕರ್ಮಗಳು ಕಾಲಚಕ್ರವನ್ನನು ಸರಿಸಬೇಕೆಂದು ವಿಧಿನಿಯಮ ಹಾಕಿದ ನೀನೇಕೆ ಸಂಹಾರಕಾರ್ಯ ಕೈಬಿಟ್ಟು ತಪಸ್ಸಿಗೆ ಕುಳಿತೆ.''

ತಂದೆಯ ಮಾತಿಗೆ ಯಮ ಮಾರ್ನುಡಿದ : ''ಓ ತಂದೆ, ಈಗ ನಾನು ಮಾಡುತ್ತಿರುವ ತಪಸ್ಸೆಂಬ ಕರ್ಮವೂ ಕರ್ಮವಷ್ಟೆ! ಆದರಿದು ಲೋಕ ನಿಂದಿತವಲ್ಲ. ಮಹಾಕ್ರೂರವಾದ ಪ್ರಜಾಸಂಹಾರಕಾರ್ಯ ನನ್ನಿಂದಾಗದು...''

ಮಗನ ಮಾತಿಗೆ ಮುಗುಳು ನಗುತ್ತ ಮೃದುವಾಗಿ ನುಡಿದ ಬೆಳಕಿನೊಡೆಯ : 'ನನ್ನ ಕುಮಾರನಾದ ನೀನು ಇದುವರೆಗೆ ಮಾಡುತ್ತಲಿರುವ ಈ ಕಾರ್ಯವು ಎಂದಿಗೂ ನಿಂದಿತವಲ್ಲ. ನಮ್ಮ ದೈನಂದಿನ ದುಡಿಮೆಯೇ ದೇವರೆನ್ನುವ ಅನುಭವಿಕ ನುಡಿ ಸುಳ್ಳಲ್ಲ. ನೀನು ನೋಡಿದಂತೆ ಸ್ವರ್ಗದ ಗಣಿಕೆಯೂ ಸಹ ಗೌತಮೀ ನದಿಯಲ್ಲಿ ಸಂಗಮಿಸಿ ಅದರ ಮಹಿಮೆಯಿಂದ ಸ್ವರ್ಗಸೇರಿ, ಗೌರವ ಹೊಂದಿದಳು. ನೀನಾದರೂ ಇದುವರೆಗಿನ ಘೋರ ತಪದಿಂದ ಪುಣ್ಯ ಸಾಕಷ್ಟು ಸಂಪಾದಿಸಿ ಧನ್ಯನಾಗಿರುವೆ. ತಪಸ್ಸು ಸಾಕುಮಾಡು; ನಿನ್ನ ಪಟ್ಟಣಕ್ಕೆ ಪಯಣಿಸು; ನಿತ್ಯಕರ್ತವ್ಯದಲ್ಲಿ ನಿರತನಾಗು.'

ಸೂರ್ಯನೂ, ಯಮನೂ, ಗಣಿಕೆಯು ನದಿಯಾಗಿ ಸೇರಿದ ಸಂಗಮದಲ್ಲಿ ಮಿಂದು ಪಾವನರಾಗಿ ತಮ್ಮತಮ್ಮ ಲೋಕಗಳಿಗೆ ತೆರಳಿದರು. ಯಮನಿಗೆ ಪಾಪದ ಭಯ ದೂರಾಯಿತು. ವಿಷ್ಣುಚಕ್ರವೂ ಸಹ ಮರಳಿ ಅಲ್ಲಿಂದ ಗೋವಿಂದನ ಬಳಿಗೆ ಹೋಯಿತು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು*

—○—

## ಅಹಲ್ಯಾ ಸಂಗಮ

**ಅಧ್ಯಾಯ - ೨೩**

**ಬ್ರಹ್ಮ:-** ನಾರದನೇ, ಹಿಂದೆ ನಾನು ಅನೇಕ ರೂಪವತಿಯರೂ ಗುಣವತಿಯರೂ ಆದ ಕನ್ಯಾಮಣಿಗಳನ್ನು ಸೃಷ್ಟಿಸಿದೆ. ತಮ್ಮ ಶುದ್ಧಬುದ್ಧಿ, ಹಾಗೂ ಪಾತಿವ್ರತ್ಯ ಪ್ರಭಾವ ಬೀರಿ ಇಂದಿಗೂ ಅವಿಸ್ಮರಣೀಯರಾಗಿ ಉಳಿದ, ಸ್ತ್ರೀರತ್ನಗಳಲ್ಲಿ ಅಹಲ್ಯೆಯೂ ಒಬ್ಬಳು. ಅವಳ ಸವಿ ನೆನಪಿನಲ್ಲಿ ತೀರ್ಥ ಒಂದಿದ್ದು 'ಅಹಲ್ಯಾ ಸಂಗಮ'ವೆಂದು ಪ್ರಸಿದ್ಧವಾಗಿದೆ. ಅದರ ಮಹಿಮಾತಿಶಯವನ್ನು ವಿವರಿಸುವೆ ಕೇಳು.

ನಾನಾಗಲೇ ಹೇಳಿದಂತೆ, ಅಪೂರ್ವ ಲಾವಣ್ಯ ಹಾಗೂ ಅನುಪಮ ಗುಣವತಿ ಎಂದೆನಿಸುವ ಸುಂದರಿಯೋರ್ವಳನ್ನು ನಾನು ಸೃಷ್ಟಿಸಿದೆನೇನೋ ಸರಿ. ಆದರೆ 'ಅಷ್ಟು ರೂಪವತಿಯನ್ನು ಕೈ ಹಿಡಿದು ಸಲುಹುವವನು ಯಾರು?' ಎಂದು ನನಗೇ ಚಿಂತೆ ಉಂಟಾಯಿತು. ಸುದೈವದಿಂದಾಗಿ ತಕ್ಷಣವೇ ನನಗೆ ಮಹಾ ತಪಸ್ವಿ ಗೌತಮನ ನೆನಪಾಗಿ, ಆ ಕನ್ಯೆಯನ್ನು ಅವನಿಗೆ ಪೋಷಿಸಲು ಒಪ್ಪಿಸಿದೆ, ಕೆಲವು ಕಾಲ. ಮುಂದೆ ಕಿಂಚಿತ್ ಕಾಲಾನಂತರ ಅವಳನ್ನು ನನಗೆ ಗೌತಮನು ತಂದೊಪ್ಪಿಸಿದ.

ರೂಪವತಿಯಾಗಿ ಲಾವಣ್ಯ ತಾರುಣ್ಯಗಳಿಂದ ತುಂಬಿ ತುಳುಕುವ ಈ ಕನ್ಯಾರತ್ನ ಅಹಲ್ಯೆಯನ್ನು ವರಿಸಲು ದೇವೇಂದ್ರ, ಅಗ್ನಿ, ವರುಣರೆಲ್ಲ ಸ್ಪರ್ಧಿಸಿ ಮುಂದಾದರು. ಆದರೆ ನಾನು ಗೌತಮನ ಗುಣ, ರೂಪ, ಸಚ್ಚಾರಿತ್ರ್ಯ ಮಹತಿಗಳನ್ನು ಕಂಡು ಅಹಲ್ಯೆಗೆ ಅವನೇ ಅನುರೂಪ ವರನೆಂದು ಮನಸಾ ಮೆಚ್ಚಿದೆ. ಆದರೆ ಅಹಲ್ಯೆಯನ್ನು ವರಿಸಲು ಬಂದ ದೇವಾಧಿದೇವತೆಗಳಿಗೆ ಹಾಗೂ ಋಷಿಗಳಿಗೆ 'ಯಾರು ಮೊದಲು ಈ ಪೃಥ್ವಿಯನ್ನು ಪ್ರದಕ್ಷಿಣೆಮಾಡಿ ಬರುವರೋ ಅವರಿಗೆ ಈ ಸುಂದರಿಯನ್ನು ಕೊಡುವೆ' ಎಂದು ಪಣವನ್ನು ಇಟ್ಟೆ. ಆ ಪಂದ್ಯದಲ್ಲಿ ಗೌತಮ ಜಯಶೀಲನಾಗಲು ಪ್ರಯತ್ನಿಸಿದ.

ಆ ಸಮಯದಲ್ಲಿ ಉಳಿದ ದೇವಾಧಿದೇವತೆಗಳಂತೆ, ನಿಜವಾಗಿಯೂ ಭೂಪ್ರದಕ್ಷಿಣೆ ಹಾಕದೇ ಗೌತಮನು ಎದುರಿನಲ್ಲಿದ್ದ ಹಸುವನ್ನು ಸುತ್ತುವರಿದ; ಆ ಕಾಮಧೇನುವೇ

ಭೂಮಿಯೆಂದು ಭಾವಿಸಿದ್ದ. ತನ್ನ ಕಾರ್ಯ ಪೂರೈಸಿ ಬ್ರಹ್ಮದೇವನನ್ನು ನಮಸ್ಕರಿಸಿದ. ಪಂದ್ಯದಲ್ಲಿ ಮೊದಲಿಗನಾದ. ಯಾಕೆಂದರೆ ಕರುವನ್ನು ಈಯುವ ಸ್ಥಿತಿಯಲ್ಲಿರುವ ಹಸು, ಸಪ್ತದ್ವೀಪ ಸಹಿತ ಪೃಥ್ವಿಗೆ ಸಮಾನವೆಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಅದರಂತೆ ಶಿವಲಿಂಗ ಪ್ರದಕ್ಷಿಣೆ ಹಾಕಿದರೂ ಭೂಪ್ರದಕ್ಷಿಣೆ ಹಾಕಿದಂತೆ. ಹೀಗಾಗಿ ಪಂದ್ಯದಲ್ಲಿ ಗೌತಮನೇ ಜಯಶೀಲನೆನಿಸಿ ಅಹಲ್ಯೆಗೆ ಮಾಂಗಲ್ಯಸೂತ್ರ ಬಂಧಿಸಿದ.

ನಾನು (ಬ್ರಹ್ಮ) ಮಹಾತ್ಮನಾದ ಗೌತಮನಿಗೆ ವಾಸಯೋಗ್ಯವೆನಿಸುವ ಬ್ರಹ್ಮಗಿರಿ ಹಾಗೂ ಸಕಲ ಸಂಪತ್ತುಗಳನ್ನು ನೀಡಿದೆನು. ಬ್ರಹ್ಮಗಿರಿಯಲ್ಲಿ ಗೌತಮ ಹಾಗೂ ಅಹಲ್ಯೆಯರು ಪರಸ್ಪರ ಪ್ರೇಮದಿಂದ ದಾಂಪತ್ಯಜೀವನ ಆರಂಭಿಸಿದರು. ಅವರ ಅನ್ಯೋನ್ಯ ದಾಂಪತ್ಯವನ್ನು ಕಂಡು ದೇವಾಧಿದೇವತೆಗಳು ಅಚ್ಚರಿ ಹಾಗೂ ಆನಂದಪಟ್ಟರು.

ದೇವೇಂದ್ರನಂತೂ ಇವರ ಆದರ್ಶ ದಾಂಪತ್ಯ ಜೀವನವನ್ನು ನೋಡುವ ಆಶೆಯಿಂದ, ಬ್ರಾಹ್ಮಣನಾಗಿ ಮಾರುವೇಷದಿಂದ ಸ್ವರ್ಗದಿಂದ ಇಳಿದು ಬಂದ ಇವರಾಶ್ರಮಕ್ಕೆ ಇವರ ಅನ್ಯೋನ್ಯ ದಾಂಪತ್ಯ ವೈಭವ ಕಂಡು, ದೇವೇಂದ್ರನೂ ಹಿರಿಹಿರಿ ಹಿಗ್ಗಿದ. ಅಹಲ್ಯೆಯ ಲಾವಣ್ಯ ತಾರುಣ್ಯಗಳನ್ನು ಕಾಮದೃಷ್ಟಿಯಿಂದ ಕಂಡು ಚಿತ್ತ ಚಂಚಲನಾದ. ಅವಳ ಅಂಗಾಂಗಸೌಷ್ಠವ, ಅವನನ್ನು ಅರೆಹುಚ್ಚನನ್ನಾಗಿಸಿತು. ತನ್ನ ಕಾಮಾತುರ ಮನೋವೃತ್ತಿ ಫಲವಾಗಿ ಸ್ಥಾನ, ಮಾನದ ಕಲ್ಪನೆ ಇರದ ಅವನು ಪರದಾರಾ ವ್ಯಾಮೋಹದಿಂದ ಉಚಿತ ಕಾರ್ಯ ಇದಲ್ಲವೆಂಬುದನ್ನೂ ಸಹ ಗಮನಿಸದೇ ಹೋದ. ಹೀಗಾಗಿ ಸಕಲ ಸುಖ, ಶಾಂತಿ, ಸಂಭ್ರಮ, ಪರಿವಾರದಿಂದ ವೈಭವದಿಂದ ಮೆರೆಯುವ ದೇವೇಂದ್ರ ಯಾವುದೋ ಅವ್ಯಕ್ತ ವಿರಹದುರಿಯ ದಾಹದಿಂದ ವ್ಯಥೆಪಡುತ್ತ ಸದಾ ಅಹಲ್ಯೆಯ ವಿಷಯವಾಗಿ ಚಿಂತಿಸುತ್ತಾ ಕಾಲವ್ಯಯಮಾಡುತ್ತಿದ್ದ. 'ನನಗೆ ಅಹಲ್ಯೆಯ ಜೊತೆಗೆ ಸಮಾಗಮಯೋಗವು ಎಂದು ಬರುವದೋ' ಎಂದು ಯೋಚಿಸುತ್ತ ಹಗಲಿರುಳು ಎಣಿಸುತ್ತ, ಗೌತಮಾಶ್ರಮದಲ್ಲಿ ಬ್ರಾಹ್ಮಣ ವೇಷದಲ್ಲಿ ಕೆಲಕಾಲ ಅಲ್ಲಿದ್ದ. ದೇವೇಂದ್ರನ ಬಹುದಿನ ಆಶೆ ಕೈಗೂಡುವ ಕಾಲ ಒದಗಿ ಬಂದಿತೇನೊ...! ಒಂದು ದಿನ ಗೌತಮನು, ಪ್ರಾತಃಕಾಲದ ವಿಧಿಗಳನ್ನು ಮುಗಿಸಿ ಕೊಂಡು, ಗೌತಮೀನದಿಯ ಕಡೆಗೆ ಹೊರಟನು. ಇದೇ ಸಮಯವೆಂದು ತಿಳಿದು ತನ್ನ ಕಾರ್ಯಸಾಧಿಸಲು ಮುಂದಾದ, ಕೂಡಲೇ ಗೌತಮನ ರೂಪಧರಿಸಿ ಅಹಲ್ಯೆಯ ಬಳಿಗೆ ಹೋಗಿ ಪ್ರೀತಿ, ಪ್ರೇಮಾನು ರಾಗದಿಂದ ಅವಳೊಂದಿಗೆ ಸಮಾಗಮಮಾಡಿದ. ತನ್ನ ಪತಿಯ ವೇಷದಲ್ಲಿದ್ದ ಇಂದ್ರನನ್ನು ಗುರುತಿಸಲಾರದೆ, ಮುಗ್ಧ ಅಹಲ್ಯೆ ಕಾಮದ ಕರೆಗೆ ಸಹಕರಿಸಿದಳು.

ಅಷ್ಟರಲ್ಲಿ ಗೌತಮನು ಆಶ್ರಮಕ್ಕೆ ಹಿಂದಿರುಗಿದ. ನಿತ್ಯದಂತೆ ಗಂಡನ ಆಗಮನಕ್ಕಾಗಿ ಕಾತರಿಸಿ ಚಾತಕ ಪಕ್ಷಿಯಂತೆ ಕಾದಿರುವ ತನ್ನ ಮಡದಿ ಅಲ್ಲಿ ಇಲ್ಲದಿರುವದನ್ನು ಸ್ವಲ್ಪಕಾಲ ಯೋಚಿಸಿದ; ಮನದಲ್ಲಿ ಸಂಶಯದ ಸುಳಿಗಾಳಿಯು ಬೀಸಿತು. ಅಗ್ನಿಹೋತ್ರದ ಶಾಲೆಯ ಪರಿಚಾರಕರು ಆಶ್ರಮದ ಒಳಗೂ, ಹೊರಗೂ ಏಕಕಾಲದಲ್ಲಿ ಕಾಣಬಂದ ಗೌತಮನ ಬಗ್ಗೆ ಶಂಕೆಯಿಂದ ಪ್ರಶ್ನಿಸಿದ, 'ಗುರುದೇವಾ ನಿನ್ನ ತಪಸ್ಸಿನ ಮಹಿಮೆ ಅಗಾಧವಾದುದು. ನೀನು ನಾನಾ ರೂಪಗಳನ್ನು ಧರಿಸಬಲ್ಲೆ ಎಂಬುದು ನಮಗೀಗ ಗೊತ್ತಾಯಿತು' ಎಂದಾಗಲಂತೂ ಗೌತಮನಿಗೆ ಅಂತರಾಳದಲ್ಲಿ ಕಳವಳ ಪೂರಿತ ಆತಂಕ, ಆಚಾತುರ್ಯ, ಅಪಶಕುನದ ಚಿಹ್ನೆ ಕಂಡು ಬಂದವು. ತನ್ನ ಮನದ ಶಂಕೆಯನ್ನು ಮಡದಿಗೆ ತೋರಗೊಡದೆ, ಎಂದಿನಂತೆ ಪ್ರೀತಿಯಿಂದ ಅಹಲ್ಯೆಯನ್ನು 'ಇದೇನು ಈ ದಿನ ನಾನು

ಎದುರು ಬಂದರೂ ಎಂದಿನಂತೆ ಮುಗುಳು ನಗೆಯಲ್ಲಿ ಮಾತನಾಡಿಸದೆ, ಯಾವದೋ ಯೋಚನೆಯಲ್ಲಿ ಮೌನ ತಳೆದು ನಿಂತಿರುವೆಯಲ್ಲಾ' ಎಂದು ಪ್ರಶ್ನಿಸಿದ. ಅವನ ಪ್ರಶ್ನೆಗೆ ಅಹಲ್ಯೆ ತಬ್ಬಿಬ್ಬಾದಳು. ಅಷ್ಟರಲ್ಲಿ ದೇವೇಂದ್ರನು ಮಾರ್ಜಾಲ ರೂಪ ಧರಿಸಿ ಜಾರಿಕೊಳ್ಳಲು ಮರೆಯಾಗಿದ್ದನು. ಅಹಲ್ಯೆ ವ್ಯಾಕುಲಳಾದಳು. ತನ್ನನ್ನು ಪತಿಯ ರೂಪದಲ್ಲಿ ಮಾಯಾವಿಯೋರ್ವನು ಶೀಲಹರಣ ಮಾಡಿದನೆಂಬುದು ಮನದಟ್ಟಾಗಿ ಭಯಕಂಪಿತಳಾದಳು. ಅವಳ ಸ್ಥಿತಿಯನ್ನು ಕಂಡ ಗೌತಮನಿಗೆ ಎಲ್ಲವೂ ಅರೆಚಣದಲ್ಲಿ ಅರ್ಥವಾಗಿ ಹೋಯಿತು. ಕೈಹಿಡಿದ ಮಡದಿ ತನಗೆ ಮಾಡಿದ ದ್ರೋಹ ಕಂಡು ಕಡುಕೋಪಾವಿಷ್ಟನಾಗಿ ನುಡಿದ- 'ಇದೇನು ಅವಿವೇಕ ಮಾಡಿದೆ? ಅಗ್ನಿ ಸಾಕ್ಷಿಯಾಗಿ ಕೈಹಿಡಿದ ನನಗೆ ಈ ರೀತಿ ಅನ್ಯಾಯಮಾಡಿ, ಅಕ್ಷಮ್ಯ ಅಪರಾಧಮಾಡಿದೆ.'

ಮುಗ್ಧ ಮಡದಿಯ ಚಾರಿತ್ರ್ಯವಧೆ ಮಾಡಿದ ಜಾರನಾರೆಂದು ಹುಡುಕುತ್ತಿರುವ ಗೌತಮನ ಎದುರಿನಲ್ಲಿ ಬೆಕ್ಕೊಂದು ಮೆಲ್ಲಗೆ ಹೆಜ್ಜೆಇಡುತ್ತ ಮರೆಯಾಗಲು ಪ್ರಯತ್ನಿಸುವದನ್ನು ಕಂಡು "ನೀನಾರು? ಸುಳ್ಳು ಹೇಳಿದರೆ, ಇಲ್ಲಿಯೇ ಸುಟ್ಟು ಭಸ್ಮವಾಗುವೆ" ಎಂದಾಗ ದೇವೇಂದ್ರನು, ಮುನಿ ಶಾಪ ತಗಲುವ ಭಯದಿಂದ ಕಪಟ ವೇಷ ಮುರಿದು, ನಿಜರೂಪದಲ್ಲಿ ಕೈ ಮುಗಿದು ಪ್ರಾರ್ಥಿಸಿದ; "ಪುಣ್ಯಾತ್ಮ, ನಾನೇ ಈ ಪಾಪವನ್ನು ಆಚರಿಸಿದ ಅಧಮ, ನನ್ನನ್ನು ಕ್ಷಮಿಸಿರಿ."

ಗೌತಮ ಜಾರನನ್ನು ಕ್ಷಮಿಸುವ ಬದಲು, ಜ್ವಲಂತ ಜ್ವಾಲಾಮುಖಿಯಂತೆ ಅಬ್ಬರಿಸಿದ : "ಎಲೈ ಇಂದ್ರ, ನೀನು ಭಗ (ಯೋನಿ) ಮೋಹದಿಂದ, ಕಾಮವಶನಾಗಿ, ಪಾಪಕಾರ್ಯ ಎಸಗಿದೆ. ಒಂದರ್ಥದಲ್ಲಿ ಗುರುದ್ರೋಹಮಾಡಿದೆ. ಆದುದರಿಂದ ನಿನ್ನ ಮೈಯ ಮೇಲೆಲ್ಲ ಸಾವಿರ ಸಾವಿರ ಭಗಗಳಾಗಲಿ." ನಂತರ ಅಷ್ಟೇ ಕೋಪಾವೇಶದಲ್ಲಿ ಅಹಲ್ಯೆಯ ಕಡೆಗೆ ಕಿಡಿಕಾರುತ್ತ "ನೀನು ಪತಿಗೆ ಎಸಗಿದ ದ್ರೋಹಕ್ಕಾಗಿ ಒಣಗಿದ ನದಿಯಾಗು" ಎಂದು ಶಪಿಸಿದ. ಅಹಲ್ಯೆಯು ಗೌತಮನನ್ನು ಕುರಿತು ನಡೆದ ಘಟನೆಯನ್ನೆಲ್ಲ ವಿವರಿಸಿ, "ನಾನು ಮುಗ್ಧಳು. ಜಾರ ಇಂದ್ರ ಎಸಗಿದ ಅಪಚಾರಕ್ಕೆ ನಿರಪರಾಧಿಯಾದ ನನಗೀ ಶಿಕ್ಷೆಯೆ?" ಎಂದು ಪತಿಯ ಮನಸ್ಸು ತಿಳಿಯಾಗಿಸಲು ಪ್ರಯತ್ನಿಸಿದಳು. ತನ್ನ ಮಾತಿಗೆ ಆಶ್ರಮದ ಸೇವಕರು ಸಾಕ್ಷಿಯಾಗಿರುವದಾಗಿ ಅರಿಕೆ ಮಾಡಿಕೊಂಡಳು. ಆಗ ಗೌತಮನೂ ಸ್ವಲ್ಪ ಆಲೋಚಿಸಿ ನುಡಿದ : "ಶಾನಿತ್ತ ಶಾಪ ಶಮನ ವಾಗಬೇಕಾದರೆ- ನೀನು ಪುಣ್ಯನದಿಯಾದ ಗೌತಮೀನದಿಯೊಂದಿಗೆ ಸಂಗಮಿಸಬೇಕು. ಆಗ ನಿನಗೆ ಈಗಿನ ರೂಪ ಬರುವದು."

ಗೌತಮನ ಶಾಪದ ನಿಜರೂಪವೆಂಬಂತೆ ಅಹಲ್ಯೆಯು ಬಳುಕುತ್ತ ತಿಳಿನೀರ ತೆರೆಯೊಂದಿಗೆ ನದಿಯಾಗಿ ಹರಿದಳು. ಕೆಲವಾರು ವರ್ಷಗಳ ನಂತರ ಗೌತಮೀ ನದಿಯೊಡನೆ ಬೆರೆತು ಒಂದಾದಳು. ಗೌತಮನ ಶಾಪ ಶಮನವಾಯಿತು. ನದಿಯಾದ ನಾರೀಮಣಿಯು ಮತ್ತೆ ಲಾವಣ್ಯಯುಕ್ತ ದೇಹ ಧರಿಸಿದಳು. ಹಿಂದೆ ನಾನು (ಬ್ರಹ್ಮ) ನಿರ್ಮಿಸಿದ ಅಂದಚಂದಗಳೆಲ್ಲ ಅವಳ ಸುಕೋಮಲ ಶರೀರವನ್ನು ತುಂಬಿ ತುಳುಕಿದವು.

ಇಂದ್ರನ ಶಾಪದ ದುರಂತಮಯ ದಿನಗಳೂ ದೂರವಾದವು. ಗೌತಮನನ್ನು ಅವನು ದಿನವೂ ಅನನ್ಯ ಭಾವದಿಂದ, ದೀನವಾಣಿಯಲ್ಲಿ ಬೇಡುತ್ತಿದ್ದ. "ನನ್ನ ಮೇಲೆ ಕರುಣೆತೋರು, ನಿನ್ನ ಅನುಗ್ರಹದಿಂದ ನಾನು ಮತ್ತೆ ಮೊದಲಿನ ಚಲುವಿನ ರೂಪತಾಳುವಂತಾಗಲಿ."

ಅವನ ದೀನವಾಣಿ ಗುರುವಾದ ಗೌತಮನ ಮನಸ್ಸನ್ನು ಕರಗಿಸಿತು. ಇಂದ್ರನಿಗೆ ನುಡಿದ. ''ನೀನು ಗೌತಮೀನದಿಯಲ್ಲಿ ಸ್ನಾನಮಾಡು. ಅದರಿಂದ ನನ್ನ ಶಾಪವಿಮುಕ್ತಿ ಪಡೆದು ಮತ್ತೆ ಮೊದಲಿನಂತೆ ಆಗುವೆ. ಆದರೂ ಒಂದು ವಿಶೇಷವೆಂದರೆ- ಸಾವಿರ ಭಗಗಳ ಬದಲು ಸಾವಿರ ಕಣ್ಣುಗಳು ನಿನಗುಂಟಾಗುತ್ತವೆ.''

ಮಹಾತ್ಮಾ ಗೌತಮನ ತಪೋಮಹಿಮೆ ಘನ ಹಾಗೂ ಗಹನವೇ ಸರಿ. ಅಹಲ್ಯೆಯು ಪುನಃ ಮೊದಲಿನ ರೂಪ ಪಡೆದುದು, ಇಂದ್ರನಿಗೆ ಸಾವಿರ ಕಣ್ಣುಗಳಾದುದು, ಆ ತಪೋಧನ ಗೌತಮನ ಪವಾಡ ಸದೃಶವಾದ ತಪೋಬಲದ ಫಲ ! ಅಂದಿನಿಂದ ಅಹಲ್ಯೆಯು ನದಿಯಾಗಿ ಹರಿದ ಗೌತಮೀಸಂಗಮಸ್ಥಳಕ್ಕೆ ಅಹಲ್ಯಾ ಸಂಗಮತೀರ್ಥವೆಂದೂ, ಇಂದ್ರನ ಸ್ನಾನಮಾಡಿದ ಸ್ಥಳಕ್ಕೆ ಇಂದ್ರತೀರ್ಥವೆಂದೂ ಹೆಸರಾದವು. ಈ ತೀರ್ಥಗಳಲ್ಲಿ ಮಿಂದ ಮಾನವರಿಗೆ ಸಕಲ ವಾಂಛಿತಾರ್ಥಗಳೂ ಅನಾಯಾಸವಾಗಿ ನೆರವೇರುತ್ತವೆ.

## ಜನಸ್ಥಾನತೀರ್ಥ

**ಬ್ರಹ್ಮ:-** ಹಿಂದೆ ಸೂರ್ಯವಂಶದಲ್ಲಿ ಜನಕನೆಂಬ ರಾಜನೊಬ್ಬನಿದ್ದ. ಗುಣಾರ್ಣವಾ ದೇವಿ ವರುಣನ ಮಗಳಾಗಿದ್ದು, ಜನಕನ ಅರ್ಧಾಂಗಿಯಾಗಿದ್ದಳು. ಅವಳು ಹೆಸರಿಗಷ್ಟೇ ಜನಕನ ಅರ್ಧಾಂಗಿಯಾಗಿರದೆ, ಅವನ ಧರ್ಮಾರ್ಥಕಾಮ, ಮೋಕ್ಷಾದಿ ಕರ್ತವ್ಯಗಳಲ್ಲಿ ಪಾಲುಗಾರಳಾಗಿದ್ದು ಪರಮಪತಿವ್ರತೆಯೂ ಆಗಿದ್ದಳು. ಮಹಾಜ್ಞಾನಿಯಾದ ಯಾಜ್ಞವಲ್ಕ್ಯ ಅವನ ಪುರೋಹಿತ. ಮೇಲಾಗಿ ಪಾರಮಾರ್ಥ ವಿಷಯದಲ್ಲಿ ಪರಮ ಮಾರ್ಗದರ್ಶಿಯಾಗಿದ್ದ.

ಒಂದುದಿನ ರಾಜನು, ಯಾಜ್ಞವಲ್ಕ್ಯನನ್ನು ಕುರಿತು, ವಿನಯದಿಂದ ಕೇಳಿದನು. ಮುನಿಶ್ರೇಷ್ಠರೆ, ಮನುಷ್ಯ ಸುಖಾನುಭವದಿಂದ ಮುಕ್ತಿ ಪಡೆಯಲು ಸಾಧ್ಯವೆ?

ಅವನ ಪ್ರಶ್ನೆಗೆ ಪ್ರತ್ಯುತ್ತರವಾಗಿ ಮುನಿಶ್ರೇಷ್ಠನು ''ಇದಕ್ಕೆ ಸಮಂಜಸ ಉತ್ತರವನ್ನು ನಿನ್ನ ಮಾವನೊಂದಿಗೆ (ವರುಣ) ವಿಚಾರಿಸಿದರೆ ತಕ್ಕ ಸಮಾಧಾನ ಪಡೆಯಬಹುದು. ಆದುದರಿಂದ ಅವನನ್ನೇ ವಿಚಾರಿಸು'' ಎಂದ. ಅವನ ಸಲಹೆ ಕೇಳಿ, ಜನಕನು ವರುಣನನ್ನು ಕುರಿತು ಅದೇ ಪ್ರಶ್ನೆ ವಿಚಾರಿಸಿದಾಗ, ಅವನು ಹೀಗೆ ನುಡಿದ: ಮಾನವನ ಸಕಲ ಮನದಿಷ್ಟಾರ್ಥ ಸಿದ್ಧಿಯು ಸತ್ಕರ್ಮಾಚರಣೆಯಿಂದ ಸಾಧಿಸಬಹುದು. ಅದಕ್ಕೇ ಸನಾತನ ಧರ್ಮ, ಸತ್ಕರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದೆ. ಸತ್ಕರ್ಮ ಆಚರಣೆಯೇ ಸಕಲ ಸಾಧನೆ, ಸಿದ್ಧಿಗಳ ಮೂಲ ಉಗಮ. ಅದರಲ್ಲೂ ವೈದಿಕ ಧರ್ಮಾಚರಣೆ ಎಲ್ಲ ಆಶ್ರಮಗಳಿಗೆ ವಿಹಿತ. ಮತ್ತು ನಾಲ್ಕು ಆಶ್ರಮಗಳಲ್ಲಿ ಧರ್ಮ ಕಾಮ ಮಾರ್ಗಕ್ಕೆ ಅನುಕೂಲವಾದ, ಗೃಹಸ್ಥಾಶ್ರಮವೇ ಶ್ರೇಷ್ಠ.'

ವರುಣನ ವಿದ್ವತ್ಪೂರ್ಣ ಹಿತನುಡಿ ಕೇಳಿ, ಜನಕ, ಯಾಜ್ಞವಲ್ಕ್ಯರು ಭಯಭಕ್ತಿ ಯುಕ್ತರಾಗಿ ಪೂಜಿಸಿ ಮತ್ತೆ ಅವನನ್ನು ಪ್ರಶ್ನಿಸಿದರು. ''ಓ ದೇವಶ್ರೇಷ್ಠನೆ ಭೋಗ ಮೋಕ್ಷಗಳೆರಡನ್ನೂ ನೀಡಬಲ್ಲ ತೀರ್ಥ ಯಾವದಿದೆ? ಅಲ್ಲದೆ ಅವೆರಡನ್ನೂ ಒಳಗೊಂಡ ದೇಶ ಯಾವುದೆಂಬುದನ್ನು ತಿಳಿಸಿರಿ.''

ಅವರ ಪ್ರಶ್ನೆಗೆ ವರುಣ ನುಡಿದ : ಪವಿತ್ರ ದೇಶಗಳಲ್ಲಿ ಭಾರತ ಶ್ರೇಷ್ಠವೆನಿಸಿದೆ. ಅದರಲ್ಲಿಯೂ ದಂಡಕಾರಣ್ಯವು ಅತಿ ಶ್ರೇಷ್ಠವಾದ ಕ್ಷೇತ್ರವು. ಅಲ್ಲಿ ಕರ್ಮವನ್ನು

ಮಾಡಿದ ಮಾನವನಿಗೆ ಭೋಗ ಮೋಕ್ಷಗಳೆರಡೂ ಸಿದ್ಧಿಸುವವು. ಗೌತಮೀನದಿಯು ಶ್ರೇಷ್ಠವಾದುದು ಅಷ್ಟೇ ಅಲ್ಲ ಮುಕ್ತಿಪ್ರದಾಯಕವೂ ಆಹುದು. ಆ ನದಿಯ ತೀರದಲ್ಲಿ ಯಜ್ಞ, ಯಾಗಮಾಡಿದರೂ ಇಲ್ಲವೆ ದಾನ, ದಕ್ಷಿಣೆ ಸಲ್ಲಿಸಿದರೂ ಸಾಕು. ಅವನ ಸಕಲ ದುರಿತಗಳು ದೂರಾಗಿ, ಅವನ ಸಕಲ ವಾಂಛಿತಾರ್ಥಗಳು ಶೀಘ್ರ ನೆರವೇರುತ್ತವೆ. ಶಾಶ್ವತ ಮುಕ್ತಿಗೆ ಸೋಪಾನವೆನಿಸಿದೆ ಈ ಪುಣ್ಯ ನದೀ ಸ್ನಾನಪಾನ. ಜನಕ, ಯಜ್ಞವಲ್ಕ್ಯರು ವರುಣನ ಉಪದೇಶಾಮೃತ ಪಾನಮಾಡಿ, ತಮ್ಮ ನಗರಕ್ಕೆ ಸಂತೃಪ್ತಿ ಭಾವದಿಂದ ಮರಳಿದರು.

ಮುಂದೆ ಜನಕರಾಜನು, ಅಶ್ವಮೇಧ ಮೊದಲಾದ ಸತ್ಕರ್ಮಗಳನ್ನು ನೆರವೇರಿಸಿದನು. ಈ ಸತ್ಕಾರ್ಯ ಸಮಾರಂಭಗಳಲ್ಲಿ ಸ್ವಯಂ ಯಾಜ್ಞವಲ್ಕ್ಯನು ಪೌರೋಹಿತ್ಯ ವಹಿಸಿ ಯಾಗ ಸಮಾರಂಭವನ್ನು ಸಾಂಗವಾಗಿ ನೆರವೇರಿಸಿದನು. ಗೌತಮೀತೀರಕ್ಕೆ ಬಂದು ಅಲ್ಲಿ ಯಜ್ಞಮಾಡಿ ಜನಕನು ಮುಕ್ತಿಯನ್ನು ಪಡೆದನು. ಆಮೇಲೆ ಅನೇಕ ಜನರು ಬದುಕಿ ಬಾಳಿ ಹೋದರು. ಜನಕರಾಜರು (ಎಂದರೆ ಆ ದೇಶದ ರಾಜರು) ಆ ಸ್ಥಳದಲ್ಲಿ ಯಜ್ಞ ಯಾಗಾದಿ ಗಳನ್ನು ಮಾಡಿ-ಗೌತಮೀನದಿಯ ಪುಣ್ಯ ಪ್ರಭಾವದಿಂದ ಮುಕ್ತಿಯನ್ನು ಪಡೆದರು.

ಅಂದಿನಿಂದ ಆ ತೀರ್ಥವು ಜನಸ್ಥಾನವೆಂದು ಪ್ರಸಿದ್ಧವಾಯಿತು. ಜನಕರಾಜರು ಅಲ್ಲಿ ಯಾಗ ಮಾಡಿದ್ದರಿಂದ ಅದಕ್ಕೆ ಜನಸ್ಥಾನವೆಂದು ನಾಮ ವಿಶೇಷದಿಂದ ಕರೆಯಲಾಗುತ್ತಿದೆ. ಈ ತೀರ್ಥವು ನಾಲ್ಕು ಗಾವುದ ಕ್ಷೇತ್ರ ವ್ಯಾಪಿಸಿದ್ದು, ಇದರಲ್ಲಿ ಮಿಂದು ಪೂಜೆ, ದಾನ, ದಕ್ಷಿಣೆ, ಸತ್ಕಾರ್ಯ ಮಾಡಿದವರು, ಪಾಪರಹಿತರಾಗಿ ಪರಮಪದವಿ ಪಡೆಯುವರು. ಅಷ್ಟೇ ಅಲ್ಲ, ಈ ತೀರ್ಥವನ್ನು ಮನಸಾ ಸ್ಮರಣೆಮಾಡಿದರೆ ಪೂರ್ವ ಜನ್ಮ ಕೃತ ಪಾಪ, ಕ್ಲೇಶಗಳೆಲ್ಲ ಪಲಾಯನಮಾಡುತ್ತವೆ. ಈ ಜನಸ್ಥಾನದಲ್ಲಿ ಪಿತೃತರ್ಪಣ, ಪಿಂಡಪ್ರದಾನ ಮಾಡಿದಲ್ಲಿ ಪಿತೃಗಳು ಪರಮ ಪ್ರೀತರಾಗುತ್ತಾರೆ.

## ಅರುಣಾವರುಣಾದಿಗಳ ಗುಣ ಕಥನ

ಬ್ರಹ್ಮ:- ಎಲೈ ನಾರದ ಮುನಿ, ಅರುಣಾ ಮತ್ತು ವರುಣಾ ಎಂಬ ಉಪನದಿಗಳು ಹರಿಯುತ್ತಿದ್ದು ಅವುಗಳ ಉಗಮ ಕೇಂದ್ರ ಗೌತಮೀ ನದಿಯೇ ಆಗಿದೆ. ಈ ಕಿರು ನದಿಗಳು ಗಾತ್ರದಲ್ಲಿ ಕಿರಿದೆನಿಸಿದರೂ ಗುಣ ಪಾತ್ರಗಳಿಂದ ಹಿರಿದೆನಿಸಿವೆ. ಪರಮ ಮಂಗಳಕರ ಹಾಗೂ ಪುಣ್ಯತಮವೆನಿಸಿದ ಉಪನದಿಗಳು ಆದರಣೀಯವೆನಿಸಿವೆ. ಕಾರಣವೆಂದರೆ ಇವು ಗಂಗಾನದಿಯನ್ನು ಸಂಗಮಿಸಿ ಆ ಪ್ರದೇಶವನ್ನು ಪುಣ್ಯ ಪಾವನಗೊಳಿಸಿವೆ.

ಈ ನದಿಗಳ ಉತ್ಪತ್ತಿಯು ಒಂದು ಸ್ವಾರಸ್ಯಕರವಾದ ಕುತೂಹಲವೆನಿಸುವ ಪೌರಾಣಿಕ ಹಿನ್ನೆಲೆಯ ಕಥೆಯಂತಿದೆ. ಲೋಕವಿಖ್ಯಾತ ಸೂರ್ಯನು ಕಶ್ಯಪನ ಹಿರಿಯ ಮಗ. ಅವನು ತೇಜಃಪುಂಜನೂ, ಪ್ರಭಾವಪೂರ್ಣನೂ ಆಗಿದ್ದು, ಅವನ ಕಿರಣಗಳು ಲೋಕಕ್ಕೆ ಬೆಳಕು ನೀಡುವ ಏಕೈಕ ದಿವ್ಯ ಸಾಧನವೆನಿಸಿವೆ. ಅಲ್ಲದೆ ಅವನ ಕಿರಣಗಳು ತೀಕ್ಷ್ಣವೂ ಆಗಿದ್ದು ಸಕಲ ಜೀವ, ಜಂತು, ವೃಕ್ಷಾದಿಗಳಿಗೆ ಒಮ್ಮೊಮ್ಮೆ ತಾಪದಾಯಕವೆನಿಸುತ್ತವೆ. ಅವನದು ಬಂಗಾರದ ಮಿಂಚಿನಿಂದ ಕೂಡಿದ ಭವ್ಯ ರಥ, ಅದಕ್ಕೆ ಬಲಿಷ್ಠ ಕುದುರೆಗಳನ್ನು ಹೂಡಲಾಗಿದ್ದು, ಅದರಲ್ಲಿ ಕುಳಿತು ಅವನು ಸಂಚರಿಸುತ್ತಾನೆ. ಜನರು ಅವನನ್ನು ಪೂಜಿಸುತ್ತಾರೆ.

ಲೋಕ ಬೆಳಗಿಸುವ ಬೆಳಕಿನೊಡೆಯನಿಗೆ ಚಲುವೆ ಉಷಾದೇವಿ ಒಲವಿನ ಮಡದಿ, ಉಷಾದೇವಿಗೆ ಗಂಡನ ಉಗ್ರ ತೇಜಸ್ಸು ತಡೆಯಲಾರದಂತಹ ತಾಪವೆನಿಸುತ್ತಿತ್ತು.

ಮಹಾಜ್ಞಾನತೇಜನಾದ ವೈವಸ್ವತಮನು ಹಾಗೂ ಯಮ ಇವರು ಉಷಾದೇವಿಯ ಮಕ್ಕಳು ಅಲ್ಲದೆ ಯಮುನೆ ಎಂಬ ಮಗಳು. ಹೀಗಿರುವಾಗ ಉಷಾದೇವಿಗೆ ಗಂಡನ ಉಗ್ರತೇಜಸ್ಸು ತಾಳಿಕೊಳ್ಳಲಾಗದೆ ತಾನೇ ಒಂದು ಉಪಾಯ ಮಾಡಿದಳು. ಅವಳು ತನ್ನ ರೂಪದಂತೆಯೇ ಇರುವ ಸಜೀವ ಹೆಣ್ಣುಮೂರ್ತಿ ನಿರ್ಮಿಸಿದಳು ಅವಳೇ ಛಾಯಾದೇವಿ. ಉಷಾದೇವಿಯ ಛಾಯೆಯನ್ನು ಕರೆದು ಗುಟ್ಟಾಗಿ ಹೇಳಿದಳು : "ನಾನು ತಿರುಗಿ ಬರುವವರೆಗೆ ನನ್ನ ಗಂಡನನ್ನೂ, ಮಕ್ಕಳನ್ನೂ ನನ್ನಂತೆ ಮಾತೃಸ್ಥಾನ ದಲ್ಲಿದ್ದು, ಮಮತೆಯಿಂದ ಕಾಪಾಡು. ಹೆಂಡತಿಯಂತೆ ನನ್ನ ಸ್ವಾಮಿಯನ್ನು ಉಪಚರಿಸು. ಆದರೆ ಈ ರಹಸ್ಯ ಮಾತ್ರ ಯಾರ ಮುಂದೂ ಬಯಲು ಮಾಡಬೇಡ ಜೋಕೆ."

ಉಷೆಯ ಮಾತಿಗೆ ಛಾಯೆ ಸಮ್ಮತಿಸಿದಳು. ಉಷೆ ತಂದೆಯಾದ ತ್ವಷ್ಟೃ ಬ್ರಹ್ಮನ ಮನೆಗೆ ಹೊರಟು ಹೋದಳು. ತಂದೆಯೆದುರು ಸೂರ್ಯನ ಉಗ್ರರೂಪ ತಗ್ಗಿಸಿ ಸೌಮ್ಯ ಸಮ್ಮೋಹಕರೂಪ ನೀಡಲು ಸೂಚಿಸಿದಳು. ಅವಳ ಸೂಚನೆಯೇನೋ ಸಮಂಜಸ ವೆನಿಸಿದರೂ ಉಷೆಯನ್ನು ಕುರಿತು ಅಚ್ಚರಿ ಮಿಶ್ರಿತ ಭಯದಿಂದ ಪ್ರಶ್ನಿಸಿದ: "ಮಗಳೇ, ಇದು ಯೋಗ್ಯಕಾರ್ಯವಲ್ಲ. ಅನುರೂಪ ಪತಿಯೊಡನೆ ಜೊತೆಯಾಗಿ ಬದುಕು ಮಾಡುವದು ಬಿಟ್ಟು ಹೀಗೆ ಸ್ವೇಚ್ಛಾನುವರ್ತಿಯಾಗಬಾರದು. ಗಂಡ, ಮಕ್ಕಳ, ಪಾಲನೆ ಪೋಷಣೆಮಾಡುವ ಹೊಣೆಹೊತ್ತ ನೀನೇ ಅವರನ್ನೆಲ್ಲ ತ್ಯಜಿಸಿ ಬಂದರೆ ಅವರ ಗತಿಯೇನು? ನೀನು ಈ ರೀತಿ ಸ್ವೇಚ್ಛಾನುವರ್ತಿಯಾಗದೇ ತಿರುಗಿ ಪತಿಗೃಹಕ್ಕೆ ಮರಳುವದು ವಿಹಿತ. ಅದು ನಿನ್ನ ಧರ್ಮವೂ ಕೂಡ. ಇದರಿಂದ ನನಗೂ ಲೋಕಾಪವಾದದ ಭೀತಿ ತಪ್ಪುತ್ತದೆ."

ತಂದೆಯ ಹಿತವಚನ ಉಷೆಗೆ ಸರಿಯೆನಿಸದೆ, ಮುನಿಸುಗೊಂಡು, ಅವಸರದಿಂದ, ತಪಸ್ಸುಮಾಡಲು ಕುರುದೇಶಕ್ಕೆ ಹೊರಟುಹೋದಳು. ಅಲ್ಲಿ ಅವಳು ವಡವಾ (ಹೆಣ್ಣು ಕುದುರೆ) ರೂಪಧಾರಣಮಾಡಿ, ಪತಿ ಧ್ಯಾನದಲ್ಲಿ ನಿಮಗ್ನಳಾಗಿ ಬಿಟ್ಟಳು.

ಇತ್ತ ಛಾಯಾದೇವಿಯು ಉಷಾದೇವಿಯ ರೂಪದಿಂದ ಸೂರ್ಯನಸೇವೆ, ಮಕ್ಕಳ ಪೋಷಣೆ ಮಾಡುತ್ತಲೇ ಇದ್ದಳು. ಸೂರ್ಯದೇವನಿಗೆ ಇದಾವುದರ ಅರಿವೇ ಇಲ್ಲ. ಸಂಸಾರ ಸುಖಮಯವಾಗಿ ಸಾಗಿತು. ಅವಳಿಂದ ಸಾವರ್ಣಿ, ಶನಿಗಳೆಂದಿಬ್ಬರು ಮಕ್ಕಳು ಹುಟ್ಟಿದರು. ಬರಬರುತ್ತ ಛಾಯೆ ಮಲತಾಯಿ ಧೋರಣೆಯನ್ನು ಅನುಸರಿಸ ಹತ್ತಿದಳು. ಮಕ್ಕಳಲ್ಲಿ ಭೇದ ಭಾವವನ್ನೆಣಿಸತೊಡಗಿದಳು. ಯಮನಿಗೆ ಇದೆಲ್ಲ ಸರಿಬರಲಿಲ್ಲ. ಒಮ್ಮೆ ಕೋಪಾವೇಶದಲ್ಲಿ ತಾಯಿಗೆ ಕಾಲಿನಿಂದ ಒದ್ದು ಬಿಟ್ಟನು. ಅವನಿಂದಾದ ಅಪಮಾನದಿಂದ ಕನಲಿ, ಛಾಯೆಯು-"ನಿನ್ನ ಕಾಲು ಚೂರು ಚೂರಾಗಲಿ" ಎಂದು ಶಪಿಸಿದಳು. ಅವಳ ಶಾಪದ ಪ್ರಭಾವದಿಂದ, ಯಮನ ಕಾಲುಗಳು ಹೋಗಲು, ಅವನು ಅಳುತ್ತ ತಂದೆಯ ಬಳಿ ಬಂದು ನಡೆದ ಸಮಾಚಾರ ಹೇಳಿದ : ನನ್ನನ್ನು ಹೀಗೆ ಶಪಿಸಿದ ಇವಳು ನಮ್ಮ ತಾಯಿಯೇ? ಮಕ್ಕಳು ಎಷ್ಟೇ ದುಷ್ಟರಾದರೂ ತಾಯಿ ಎಂದಿಗೂ ಹೀಗೆ ಶಪಿಸಲಾರಳು. ಅದಲ್ಲದೆ ಈ ಹಿಂದೆ ನಾನು ಕೋಪಗೊಂಡು ಕೆಟ್ಟ ಚೇಷ್ಟೆ ಮಾಡಿದರೂ ಕಿಂಚಿತ್ತೂ ಕೋಪಾವಿಷ್ಟಳಾಗುತ್ತಿರಲಿಲ್ಲ. ಆದುದರಿಂದ ಇವಳು ನನ್ನ ತಾಯಿ ಅಲ್ಲ.

ಮಗನ ದೂರನ್ನಾಲಿಸುತ್ತ ತಂದೆಯಾದ ಸೂರ್ಯ ಸೂಕ್ಷ್ಮವಾಗಿ ಆಲೋಚನೆ ಮಾಡಿದ. ಜ್ಞಾನನೇತ್ರ ತೆರೆದು ಮತ್ತೊಮ್ಮೆ ಅವಲೋಕಿಸಿ ಅರಿತ. "ಇವಳು ಉಷೆಯ ಪ್ರತಿಕೃತಿ ಛಾಯಾ. ಉಷೆ ಈಗಿಲ್ಲಿರುವದಿಲ್ಲ. ನನಗೆ ಶಾಂತ, ಸೌಮ್ಯ, ಸುಂದರರೂಪ

ಬರಲೆಂದು ಬಯಸಿ ಆ ಉಷೆಯು ಕುರುದೇಶದಲ್ಲಿ ವಡವಾರೂಪ ಧರಿಸಿ ತಪವನ್ನಾಚರಿಸುತ್ತಿದ್ದಾಳೆ. ಸೂರ್ಯನು ತಡಮಾಡದೆ ತಾನು ಗಂಡುಕುದುರೆ ರೂಪ ಧರಿಸಿ ವಡವೆಯ ಬಳಿಗೆ ಧಾವಿಸಿದ. ತನ್ನ ಪ್ರಿಯಪತ್ನಿಯನ್ನು ಕೂಡಿಕೊಳ್ಳಲು ತಪನನು ತವಕದಿಂದ ಅವಳ ಬಳಿಗೆಬಂದ. ಆದರೆ ವಡವೆರೂಪದ ಉಷೆಗೆ ಕೆನೆಯುತ್ತ ನೆಗೆಯುತ್ತ ತನ್ನ ಕಡೆಗೆ ಬರುವ ಕುದುರೆ ತನ್ನ ಗಂಡನೆಂಬುದು ಗುರುತಿಸಲಾಗದೆ ಭಯದಿಂದ, ರಕ್ಷಣೆಗಾಗಿ ದಕ್ಷಿಣದಿಕ್ಕಿನತ್ತ ಓಡಿಹೋದಳು. ಅಶ್ವರೂಪದಿಂದ ಓಡುತ್ತಲಿರುವ ಆ ತನ್ನ ಪ್ರಾಣದರಸಿಯನ್ನು ಅಶ್ವರೂಪಿ ಸೂರ್ಯನಾರಾಯಣನು ಎಡಬಿಡದೇ ಹಿಂಬಾಲಿಸಿದನು.

"ಸ್ಮರಗ್ರಹವಶೇ ಜಾತಃ ಕೋ ದುಶ್ಚೇಷ್ಟಂ ಚೇಷ್ಟತೇ !"

ಕಾಮನ ಬಲೆಗೆ ಬಿದ್ದ ಮನುಜರು ಮಾಡಬಾರದ್ದನ್ನೂ ಕೂಡ ಮಾಡುತ್ತಾರೆ. ಈ ರೀತಿ ಭಯಗೊಂಡ ಆ ವಡವೆ (ಉಷಾ) ಅನೇಕ ಗಿರಿಕಂದರಗಳನ್ನೂ ನದಿಗಳನ್ನೂ ಗೌತಮೀನದಿಯನ್ನೂ ದಾಟಿ ಮುನಿಗಳಾದರೂ ರಕ್ಷಿಸಬಹುದೇನೋ ಎಂದು ಆಶಿಸಿ ಜನಸ್ಥಾನವೆಂಬ ಋಷ್ಯಾಶ್ರಮಕ್ಕೆ ಬಂದಳು. ಆ ಋಷ್ಯಾಶ್ರಮವನ್ನು ಪ್ರವೇಶಿಸಲು ಅಶ್ವರೂಪನಾದ ಸೂರ್ಯನೂ ಕೂಡ ಗೌತಮೀ ನದಿಯನ್ನು ದಾಟಿ ಆ ಆಶ್ರಮಕ್ಕೆ ಬಂದನು. ಕುದುರೆ ರೂಪದ ಸೂರ್ಯನನ್ನು ಜನಸ್ಥಾನದಲ್ಲಿದ್ದ ಮುನಿಗಳು ತಡೆದರು. ಅವನು ಅವರ ಅಡ್ಡಿ ಆತಂಕಕ್ಕೆ ಕಂಪಿತನಾಗಿ ಅವರಿಗೆ "ನನ್ನನ್ನು ವಿನಾಕಾರಣ ತಡೆದುದಕ್ಕೆ-ನೀವು ಆಲದ ಮರವಾಗಿರಿ" ಎಂದು ಶಪಿಸಿದ. ಆಗ ಋಷಿಗಳು ಜ್ಞಾನದೃಷ್ಟಿಯಿಂದ ಅರಿತರು-ಶಾಪವಿತ್ತವ ಸೂರ್ಯನಾರಾಯಣನೆಂದು. ಹೀಗೆಂದಾಗ ಆ ಮುನಿಗಳು ಭಯದಿಂದ ಸೂರ್ಯನನ್ನು ಸ್ತುತಿಸಿದರು.

ವಡವಾರೂಪಳಾದ ಉಷೆಗೆ ಕುದುರೆ ರೂಪದಿಂದ ತನ್ನನ್ನು ಮೋಹಿಸಿ ಬಂದವನು-ತನ್ನ ಪತಿಯೇ ಎಂಬುದು ಖಚಿತವಾಗಿ ನಸುನಾಚಿದಳು. ಪ್ರೀತಿಯ ದ್ಯೋತಕವಾಗಿ ಮುಖದಿಂದ ವೀರ್ಯವನ್ನು ಸುರಿಸಿದಳು. ಮುಂದೆ ಅವರೀರ್ವರ ಆ ವೀರ್ಯದಿಂದ ಗಂಗಾನದಿಯಲ್ಲಿ ಅಶ್ವಿನೀಕುಮಾರರು ಜನಿಸಿದರು.

ಆ ಸಮಯಕ್ಕೆ ಸರಿಯಾಗಿ ಸಾರಥಿಯಾದ ಅರುಣನು ಏಳು ಕುದುರೆಗಳುಳ್ಳ ತನ್ನ ರಥ ವನ್ನು ತೆಗೆದುಕೊಂಡು ಅಲ್ಲಿಗೆ ಬಂದನು. ಯಮ, ವರುಣ, ಮನು, ಶನಿ, ಇವರೆಲ್ಲ ಬಂದರು. ಪವಿತ್ರವಾದ ತಾಪೀನದಿ ಹಾಗೂ ಯಮುನಾನದಿಗಳೂ ಸೂರ್ಯನ ಮಾವನಾದ ತ್ವಷ್ಟನೂ ಸಹ ಅಲ್ಲಿಗೆ ಬಂದರು. ಸೂರ್ಯನು ತನ್ನ ಉಗ್ರ ತೇಜಸ್ಸನ್ನು ಕಡಿಮೆ ಮಾಡಲು ತ್ವಷ್ಟನನ್ನು ಪ್ರಾರ್ಥಿಸಿಕೊಂಡನು. ಅಳಿಯನ ಸಮಸ್ಯೆಯನ್ನು ಪರಿಹರಿಸಲು ಅವನ ಬಿಂಬವನ್ನು ಸಾಣೆಹಿಡಿದು ಹಿತಮಿತವಾಗುವಂತೆ ಕಲಾತ್ಮಕವಾಗಿ ತೇಜಸ್ಸನ್ನು ಕಡಿಮೆ ಮಾಡಿದನು. ಸೂರ್ಯನ ಉಗ್ರಪ್ರಭೆಯನ್ನು ಕಡಿಮೆ ಮಾಡಿದ ಸ್ಥಳವನ್ನು ಇಂದಿಗೂ ಪ್ರಭಾಸ ಕ್ಷೇತ್ರವೆಂದು ಕರೆಯುತ್ತಾರೆ. ಗೌತಮೀನದಿಯ ತೀರ ಅಶ್ವರೂಪ ಧರಿಸಿದ ಉಷೆ- ರವಿಯರ ಪುನರ್ಮಿಲನ ದಿಂದಾಗಿ ಪಾವನ ಭೂಮಿಯೆನಿಸಿತು. ಅವರ ಅಮರ ಮಿಲನ ಅಪೂರ್ವ ಸಂಗಮದಿಂದಾಗಿ, ಅಶ್ವಿನೀ ಕುಮಾರರು ಜನಿಸಿದರು. ಇದರಿಂದಾಗಿ ಆ ಸ್ಥಾನಕ್ಕೆ ಅಶ್ವತೀರ್ಥವೆಂದಾಯಿತು. ಸೂರ್ಯಶಾಪದ ಪರಿಣಾಮವಾಗಿ ಋಷಿಗಳಾದ ಐದು ಜನರು ಐದು ವಟವೃಕ್ಷಗಳಾಗಿ "ಪಂಚವಟಾಶ್ರಮ" ಎಂದು ಪ್ರಖ್ಯಾತವಾಯಿತು.

ತಂದೆ, ತಾಯಿಯರ ಅಪೂರ್ವ ಪುನರ್‌ಮಿಲನವನ್ನು ಕಣ್ಣು ತುಂಬ ನೋಡಲು ಬಂದ ತಾಪೀ, ಯಮುನೆಯರು ಕೊನೆಗೆ ಗಂಗೆಯಲ್ಲಿ ಮಿಲನಗೊಂಡರು. ತಾಪೀ ಮತ್ತು ಯಮುನಾನದಿಗಳಿಗೆ ಕ್ರಮವಾಗಿ ಅರುಣಾ ಮತ್ತು ವರುಣಾ ಎಂಬ ಹೆಸರುಗಳು ಇವೆ. ಇದಲ್ಲದೆ, ಅಲ್ಲಿಗೆ ಬಂದಿದ್ದ ದೇವತೆಗಳಿಂದ ಬೇರೆ ಬೇರೆಯಾಗಿ ಒಂಭತ್ತು ಸಾವಿರ ತೀರ್ಥಗಳೂ ಆಗಿರುತ್ತವೆ. ಇಂತಹ ಪರಮಪವಿತ್ರಸಂಗಮಸ್ಥಾನದಲ್ಲಿ ಸ್ನಾನ, ದಾನ, ಪಿತೃಶ್ರದ್ಧಾದಿಗಳನ್ನು ಮಾಡಿದರೆ ಸಕಲ ಪಾಪಗಳು ದೂರಾಗುವದಲ್ಲದೆ, ಮುಕ್ತಿ ಸುಲಭದಲ್ಲಿ ಸಂಪಾದಿಸ ಬಹುದು. ಅಲ್ಲದೆ ಈ ತೀರ್ಥ ಮಹಾತ್ಮ್ಯವನ್ನು ಸ್ಮರಿಸಿದವರಾಗಲಿ, ಕೇಳಿದವರಾಗಲಿ, ಪಾಪ ಕ್ಷಯವಾಗಿ ಧರ್ಮ, ಸುಖ, ಸಂಪದಗಳು ಲಭಿಸುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

## ಗರುಡತೀರ್ಥ

**ಬ್ರಹ್ಮ:-** ಸಕಲ ವಿಘ್ನಗಳನ್ನು ದೂರಮಾಡಿ, ಸಕಲ ವಾಂಛಿತ ಪ್ರದಾಯಕವಾದ ಪುಣ್ಯಕರ ತೀರ್ಥ ಒಂದಿದ್ದು, ಅದಕ್ಕೆ ಗಾರುಡ ತೀರ್ಥವೆಂದು ಕರೆಯಲಾಗುತ್ತಿದೆ. ಅದರ ಮಹಿಮೆ ಉದ್ಬೋಧಕವೆನಿಸುವಂತಹದಿದೆ. ವಿವರಿಸುತ್ತೇನೆ, ಕೇಳು.

ಆದಿಶೇಷನಿಗೆ ಮಣಿನಾಗನೆಂಬ ಮಗನಿದ್ದ. ಅವನು ಶಕ್ತಿ, ಸಾಹಸದಲ್ಲಿ ಮಹಾಬಲಿಷ್ಠ. ಆದರೆ ಅವನಿಗೆ ಗರುಡನ ವಿಷಯದಲ್ಲಿ ಭಯ. ಈ ಅಂತರಿಕ ಭಯದಿಂದ ಪ್ರಾಣ ರಕ್ಷಣೆಗಾಗಿ ಸದಾಶಿವನನ್ನು ಸದಾ ಆರಾಧಿಸುತ್ತಿದ್ದ. ಅವನ ಅಸದೃಶ ಭಕ್ತಿಗೆ ಒಲಿದ ಗಂಗಾಧರ ಪ್ರತ್ಯಕ್ಷನಾಗಿ ''ಕಂದಾ, ನಿನಗೇನು ವರ ಬೇಕು ಬೇಡು ಕರುಣಿಸುವೆ'' ಎಂದ. ಶಿವನ ಅನುಗ್ರಹಕ್ಕೆ ತಲೆಬಾಗಿಸಿ ನಮಿತನಾಗಿ ಮಣಿನಾಗ ನುಡಿದ:- ''ಗರುಡನಿಂದ ನನಗೆ ಪ್ರಾಣಭೀತಿ. ಇದರಿಂದ ನನ್ನನ್ನು ಕಾಪಾಡು'' ಎಂದು ಬೇಡಿಕೊಂಡ. ಶಿವ 'ತಥಾಸ್ತು' ಎಂದು ಅಂತರ್ಧಾನನಾದ. ಮಹೇಶ್ವರನಿಂದ ವರಪಡೆದ ಮಣಿನಾಗನಿಗೆ ಗರುಡನ ಭೀತಿ ತೊಲಗಿ, ನಿರಾತಂಕವಾಗಿ ಇರಹತ್ತಿದ. ತನಗೆ ಬೇಕಾದ ಪ್ರದೇಶಗಳಲ್ಲಿ ಸಂಚರಿಸುತ್ತಲಿದ್ದ; ಅಷ್ಟೇ ಏಕೆ ಗರುಡನಿರುವ ಪ್ರದೇಶಗಳಲ್ಲೆಲ್ಲ ಹಾಯಾಗಿ ಇರಹತ್ತಿದ. ಹೀಗಿರುವಾಗ ಒಮ್ಮೆ ಗರುಡ ತನ್ನ ಪಾಶಗಳಿಂದ ಮಣಿನಾಗನನ್ನು ಬಂಧಿಸಿದ. ಈ ಸಮಯದಲ್ಲಿ ನಂದಿಕೇಶ್ವರನು ಜಗದೀಶನನ್ನು ಕುರಿತು. ''ಮಣಿನಾಗನು ಗರುಡನ ಹಸಿವೆಗೆ ಬಲಿಯಾಗಿರಬಹುದೆಂದು'' ನುಡಿದ. ಹರನು ಜ್ಞಾನದೃಷ್ಟಿಯಿಂದ ವಿಚಾರಿಸಿದಾಗ, ನಿಜವೆನಿಸಿತು. ಶಿವ ನಂದಿಗೆ ಹೇಳಿದ ''ನೀನು ಹೇಳಿದ್ದು ನಿಜ. ಗರುಡನ ಬಂಧನದಲ್ಲಿರುವ ಮಣಿನಾಗನನ್ನು ಕೂಡಲೇ ಹರಿಯ ಅನುಗ್ರಹ ಬಲದಿಂದ ಬಿಡಿಸಿಕೊಂಡು ಬಾ.''

ನಂದಿಕೇಶ್ವರನು, ಶಿವನ ಆಜ್ಞಾನುಸಾರ ಶ್ರೀಹರಿಯ ಬಳಿಗೆ ಹೋಗಿ ಎಲ್ಲ ವಿಷಯ ತಿಳಿಸಿ ಅವನ ಬಿಡುಗಡೆಮಾಡಲು ಹರಿಯನ್ನು ಪ್ರಾರ್ಥಿಸಿದ. ಬಂಧನದಿಂದ ಮಣಿಗನಾಗನನ್ನು ಬಿಡಲು ನಾರಾಯಣನು ಆಜ್ಞಾಪಿಸಿದರೂ ಗರುಡ ಒಗೊಡಲಿಲ್ಲ. ಹರಿಯ ಆಜ್ಞೆ ಉಲ್ಲಂಘಿಸಿ ''ತಿಳುವಳಿಕೆಯುಳ್ಳ ಪ್ರಭುವು ಸೇವಕರಿಗೆ ಬೇಕಾದುದನ್ನು ಒದಗಿಸಿಕೊಡುವನು. ನೀನಾದರೋ ನಾನು ಕಷ್ಟಪಟ್ಟು, ನನಗಿಷ್ಟವಾದುದನ್ನು ಸಂಪಾದಿಸಿದ್ದನ್ನೇ ಅಪಹರಿಸುತ್ತಲಿರುವೆಯಲ್ಲಾ. ನಿನಗಿದು ನ್ಯಾಯವೇ? ನಿನ್ನ ಬಲ ಅಷ್ಟೇ ಅಲ್ಲ; ನನ್ನ ಬಲ ಅಥವಾ ಸಹಾಯದಿಂದ ನೀನು ಇದುವರೆಗೆ ದೈತ್ಯ ದಾನವರನ್ನು

ಜಯಿಸುತ್ತ ಬಂದಿದ್ದು, ನಿನ್ನ ಬಲದಿಂದ ಎಂದು ಸುಮ್ಮನೆ ಜಂಬ ಕೊಚ್ಚಿಕೊಳ್ಳುವೆ'' ಎಂದು ಗರ್ವದಿಂದ, ಫಣಿಶಾಯಿಯನ್ನೇ ಕೆಣಕಿದ.

ಜಗನ್ನಾಟಕ ಸೂತ್ರಧಾರಿಯು ಗರುಡನ ಗರ್ವಕ್ಕೆ ಅವನ ಅಹಂಭಾವಕ್ಕೆ ನಸುನಕ್ಕು, ''ನೀನೇ ಬಲಶಾಲಿ ಎನ್ನುವ ನೀನು ಒಂದು ಕೆಲಸ ಮಾಡು. ಈಗ ನದಿಯ ಎದುರಿನಲ್ಲಿ ಈ ನನ್ನ ಕಿರುಬೆರಳನ್ನು ಹೊತ್ತುಕೋ ನೋಡೋಣ'' ಎಂದೆಂದು ಸವಾಲೆಸೆದ.

ಶ್ರೀಹರಿಯು ಗರುಡನ ಮೇಲೆ ತನ್ನ ಕಿರುಬೆರಳನ್ನಿರಿಸಿ ''ನೀನು ನಿತ್ಯವೂ ನನ್ನನ್ನು ಹೊರುವದು ನಿಜವಷ್ಟೇ? ಈಗ ಇದರ ಸೂಕ್ಷ್ಮ ವಿಚಾರವನ್ನು ನೀನೇ ವಿಚಾರಿಸು. ನಂತರ ಹೇಳು'' ಎಂದೆಂದು ಹರಿಯು ತನ್ನ ಕಿರುಬೆರಳನ್ನು ಗರುಡನ ತಲೆಯ ಮೇಲಿರಿಸಲು ಅದರ ಭಾರದಿಂದ ಅವನ ತಲೆಯು ಹೊಟ್ಟೆಯಲ್ಲಿ ಸೇರಿಹೋಯಿತು. ಹೊಟ್ಟೆಯು ಸಹ ಕಾಲಿನ ಕೆಳಗೆ ಅದುಮಲ್ಪಟ್ಟು ಚೂರು ಚೂರಾಯಿತು. ಸಂಕಟ ತಾಳಲಾರದೆ ಗರುಡ ಒದ್ದಾಡುತ್ತ ಹರಿಯ ರಕ್ಷಣೆ ಕೋರಿದ. ತನ್ನ ಗರ್ವಕ್ಕೆ ತಾನೇ ನಾಚಿದ.

**ಅಪರಾಧಸಹಸ್ರಾಣಿ ಕ್ಷಮಂತೇ ಪ್ರಭವಿಷ್ಣವಃ ।**
**ಕೃತಾಪರಾಧೇಽಪಿ ಜನೇ ಮಹತೀ ಯಸ್ಯವೈಕೃಪಾ ॥**

ಒಡೆಯರು ಸೇವಕರಾದವರ ಸಾವಿರ ತಪ್ಪುಗಳನ್ನು ಮನ್ನಿಸುತ್ತಾರೆ. ಅಪರಾಧಿಯಲ್ಲೂ ಕೃಪೆ ತೋರಿಸುವ ಕರುಣಾಕರನು ನೀನೇ ಎಂಬುದಾಗಿ ಜ್ಞಾನಿಗಳು ಹೇಳುವರು.

ಗರುಡನ ಶೌರ್ಯ ಸಾಹಸದ ವೀರಾವೇಶವೆಲ್ಲ ಕರಗಿ ನೀರಾಯಿತು- ಶ್ರೀಹರಿಯ ಬಲದ ಮುಂದೆ ಗರ್ವಭಂಗವಾಯಿತು. ಕೊನೆಗೆ ಲೋಕಮಾತೆ, ವಾತ್ಸಲ್ಯಮಯಿ, ಲಕ್ಷ್ಮೀದೇವಿಯ ಮೊರೆ ಹೊಕ್ಕು ಪುತ್ರವಾತ್ಸಲ್ಯ ತೋರಲು ದೀನನಾಗಿ ಪ್ರಾರ್ಥಿಸಿದ. ಅನಂತರ ಕರುಣಾಸಾಗರಿಯಾದ ಲಕ್ಷ್ಮಿಯು ಗರುಡನನ್ನು ರಕ್ಷಿಸಲು ಕೇಳಿಕೊಂಡಳು- ಶ್ರೀಹರಿಯನ್ನು. ಆಗ ಶೇಷಶಯನನು ಈಶ್ವರ ವಾಹನನಾದ ನಂದಿಯನ್ನು ಕುರಿತು, 'ಎಲೈ ನಂದೀಶಾ, ಈ ಗರುಡನನ್ನು ಮಣಿನಾಗನೊಡನೆ ಕರೆದುಕೊಂಡು ಶಿವನ ಬಳಿಗೆ ಹೋಗಿರಿ. ಶಿವನ ಕೃಪಾವಲೋಕನೆಯ ಫಲವಾಗಿ ಗರುಡನು ತನ್ನ ಮೊದಲಿನ ರೂಪ ಪಡೆಯುವನು' ಎಂದು ಹೇಳಿ ಅವರನ್ನು ಕಳಿಸಿದ.

ಆ ಮೂವರು ಮುಕ್ಕಣ್ಣನ ಮುಂದೆ ತಲೆಬಾಗಿ ನಮಿಸಿ, ನಡೆದ ವಿಷಯವನ್ನೆಲ್ಲ ನಿರೂಪಿಸಿದರು. ಆಗ ಚಂದ್ರಶೇಖರನು ಗರುಡನಿಗೆ 'ಸಕಲ ಪಾಪಗಳನ್ನು ಸುಲಭವಾಗಿ ದೂರ ಮಾಡುವ, ಪುಣ್ಯಮಯಿ ಗೌತಮೀನದಿಯಲ್ಲಿ ನೀನು ಮಿಂದು ಬಾ. ಆಗ ಮತ್ತೆ ಮೊದಲಿನಂತಾಗುವೆ' ಎಂದು ಸಲಹೆ ನೀಡಿದ. ಅವನ ಆಜ್ಞೆಯಂತೆ ಗರುಡ ಮಾಡಿದಾಗ, ಮತ್ತೆ ಮೊದಲಿನಂತೆ ಅವನಿಗೆ ಸುಂದರವಾದ ಜೋಡು ಚಿನ್ನದ ರೆಕ್ಕೆಗಳೂ, ವಜ್ರದೇಹವೂ, ಶಕ್ತಿಯುಕ್ತವಾದ ಅವಯವಗಳೂ ಮೂಡಿದವು. ಆನಂದದಿಂದ ಗರುಡನು ಶಿವನಿಗೆ ವಂದನೆಗೈದು ಶ್ರೀಹರಿಯ ಬಳಿಗೆ ಹೊರಟು ಹೋದನು.

ಗರುಡನು ಸ್ನಾನಮಾಡಿದ ಆ ತೀರ್ಥವು ಗರುಡತೀರ್ಥವೆಂದು ಕರೆಯಲ್ಪಡ ಹತ್ತಿತ್ತು. ಅದರ ಇನ್ನೊಂದು ವಿಶೇಷವೆಂದರೆ ಇದರಲ್ಲಿ ಮಿಂದು, ಜಪ, ಪೂಜೆಗೈದರೆ, ಶಿವ ಹಾಗೂ ವಿಷ್ಣು ಏಕಕಾಲದಲ್ಲಿ ಪ್ರಸನ್ನರಾಗಿ ಸಕಲ ಇಷ್ಟಾರ್ಥ ನೆರವೇರುವಂತೆ ಪರಮಾನುಗ್ರಹ ಮಾಡುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು*

**ಬ್ರಹ್ಮ:-** ಅಲ್ಲಿಂದ ಮುಂದೆ ಗೋವರ್ಧನತೀರ್ಥವೆಂಬ ಸಕಲ ಪಾಪ ಕಳೆಯುವ ಪವಿತ್ರ ಜಲಾಶಯ ಒಂದಿದೆ. ಇದರಲ್ಲಿ ಸ್ನಾನಮಾಡಿದವನ ಪಿತೃಗಳಿಗೆ ಪುಣ್ಯಲೋಕ ಪ್ರಾಪ್ತಿ. ಅದನ್ನು ನಾಮ ಮಾತ್ರಕ್ಕೆ ನೆನಸಿದರೂ ಸಾಕು. ಅರಿತೋ, ಅರಿಯದೆಯೋ, ಮಾಡಿದ ದುರಿತಗಳೆಲ್ಲ ದೂರಾಗುತ್ತವೆ.

ಬಹುಕಾಲದ ಹಿಂದೆ ಜಾಬಾಲಿ ಎಂಬ ಒಬ್ಬ ಬ್ರಾಹ್ಮಣನಿದ್ದು, ಅವನದು ವ್ಯವಸಾಯವೇ ವೃತ್ತಿಯಾಗಿತ್ತು. ಜಾಬಾಲಿ ಭೂಮಿ ಉಳುವ ಕಾರ್ಯದಲ್ಲಿ ಮಹಾಕಠಿಣ ಚಿತ್ತ. ರಂಟೆಗೆ ಕಟ್ಟಿದ ಎತ್ತುಗಳು ಅವನ ಬಾರುಕೋಲಿನ ಪೆಟ್ಟು ತಾಳಲಾರದೆ ಕಣ್ಣೀರು ಸುರಿಸುತ್ತಿದ್ದವು. ಅದನ್ನು ಕಂಡು ಕಾಮಧೇನುವು ವ್ಯಥೆಪಟ್ಟು, ನಂದಿಕೇಶ್ವರನಿಗೆ ಆ ಎತ್ತುಗಳು ಎದುರಿಸುತ್ತಿರುವ ದುಃಖದಾರುಣ ಕಥೆಯನ್ನು ವಿವರಿಸಿದಳು. ಅದನ್ನು ಕೇಳಿ ನಂದಿಕೇಶ್ವರನು ಅದರ ಪರಿಹಾರಕ್ಕಾಗಿ ಪರಶಿವನಲ್ಲಿ ಅರಿಕೆ ಮಾಡಿಕೊಂಡ. ಅದರ ಪರಿಹಾರಕ್ಕಾಗಿ ಪ್ರಯತ್ನಿಸುವುದಾಗಿ ಶಿವ ನಂದಿಗೆ ಅಭಯ ಹೇಳಿ, ಅವನ ಮೂಲಕ ಭೂಲೋಕದಲ್ಲಿರುವ ಎಲ್ಲ ಹಸು, ಕರು, ಎತ್ತುಗಳನ್ನು ಅಪಹರಿಸಿ, ಒಂದೂ ಇರದಂತೆ ಮಾಡಿದ. ಆಗ ಭೂಲೋಕದಲ್ಲಿ ವ್ಯವಸಾಯಕಾರ್ಯ ಸ್ಥಗಿತವಾಯಿತು. ಹಾಲು, ಹೈನಕ್ಕೆ ಅಭಾವ ತಲೆದೋರಿ ಹಾಹಾಕಾರ ಉಂಟಾಯಿತು. ಲೋಕದ ಜನತೆಯೆಲ್ಲ ದೇವಾಧಿ ದೇವತೆಗಳನ್ನು ಕಾಪಾಡಲು ಮೊರೆಯಿಟ್ಟರು. ಅವರ ಮೊರೆಯಿಂದ ಹೃದಯ ಕರಗಿದ ದೇವತೆಗಳೆಲ್ಲ ನನ್ನ (ಬ್ರಹ್ಮ) ಬಳಿಗೆ ಬಂದು, ಲೋಕದ ಜೀವನಕ್ಕೆ ಬಂದೊದಗಿದ ಗಂಡಾಂತರ ವಿವರಿಸಿ ಪರಿಹಾರೋಪಾಯ ಕುರಿತು ನನಗೆ ನಿವೇದಿಸಿದರು. ಆಗ ನಾನು ಅವರಿಗೆ ಶಿವನನ್ನು ಪ್ರಾರ್ಥಿಸಲು ಸಲಹೆ ನೀಡಿದೆ. ನನ್ನಾಜ್ಞೆಯಂತೆ ದೇವತೆಗಳು ಗೌರೀಪ್ರಿಯನಲ್ಲಿ ಮೊರೆಯಿಟ್ಟರು. ಅವನು ಅವರ ಲೋಕ ಕ್ಷೇಮ ವಿಚಾರವನ್ನು ಸಮ್ಮತಿಸಿ, ಪರಿಹಾರಕ್ಕಾಗಿ ನಂದಿಯನ್ನು ಶರಣು ಹೋಗಲು ಉಪದೇಶಿಸಿದ. ತನ್ನ ಬಳಿಗೆ ಬಂದ ದೇವಾಧಿದೇವತೆಗಳಿಗೆ ನಂದಿ ನುಡಿದ- ''ದೇವತೆಗಳಿರಾ, ನೀವೀಗ ಸುಮ್ಮನೆ ವ್ಯಥೆಪಟ್ಟರೇನಾವಗುವದು? ಆದದ್ದು ಆಗಿ ಹೋಯಿತು. ಈಗ ನೀವುಗಳೆಲ್ಲ ಗೋಸವಯಾಗಮಾಡಿದರೆ, ಮೊದಲಿನಂತೆ ಲೋಕದಲ್ಲಿ ಗೋವುಗಳು, ಬೇಸಾಯಕ್ಕೆ ಎತ್ತುಗಳು ದೊರಕಬಲ್ಲವು. ಅವುಗಳ ಸಮೃದ್ಧಿಯಿಂದ ಲೋಕ ಮತ್ತೆ ಸುಖ, ಶಾಂತಿ, ಸಂತೃಪ್ತಿಯನ್ನು ಪುನರಪಿ ಹೊಂದಬಲ್ಲದು.'' ಎಂದು ಹೇಳಿದ. ನಂದಿಯ ಮಾತಿನಂತೆ ದೇವತೆಗಳೆಲ್ಲ ಅದೇ ಗೌತಮೀ ನದಿಯ ತೀರದಲ್ಲಿ ಗೋಸವಯಾಗ ಮಾಡಿ ಪೂರೈಸಿದರು.

ಈ ಗೋಸವಯಾಗ ಮುಗಿಯುತ್ತಿದ್ದಂತೆ, ದೇವತೆಗಳ ಹಾರೈಕ ಫಲಿಸಿದಂತೆ, ಲೋಕದಲ್ಲಿ ಮತ್ತೆ ಗೋವುಗಳು, ಎತ್ತುಗಳು ಜನಿಸಿದವು. ಅವುಗಳ ಸಂತಾನವು ದಿನೇ ದಿನೇ ಸಂವರ್ಧಿಸುತ್ತ ನಡೆಯಿತು. ಮತ್ತೆ ಮೊದಲಿನಂತೆ ಬೇಸಾಯ ಕಾರ್ಯಗಳು, ಸುಲಭ ಹಾಗೂ ಸರಾಗವಾಗಿ ನಡೆದವು. ಉತ್ತಮ ತಳಿಗಳುಳ್ಳ ಆಕಳುಗಳಿಂದ ಸಮೃದ್ಧ ಹೈನ ಸಂಪತ್ತು ದ್ವಿಗುಣ ಪ್ರಮಾಣದಲ್ಲಿ ದೊರಕುವಂತಾಯಿತು. ದೇವತೆಗಳು ಲೋಕಹಿತಕ್ಕಾಗಿ ಎಲ್ಲರೂ ಒಂದೆಡೆ ಕಲೆತು ಜರುಗಿದ ಆ ಸ್ಥಳವೇ ಇಂದಿಗೂ 'ಗೋವರ್ಧನತೀರ್ಥ'ವೆಂದು ಕರೆಯಲ್ಪಡುತ್ತದೆ. ಇಲ್ಲಿರುವ ಸುತ್ತ ಮುತ್ತಲಿನ ಪ್ರದೇಶ ಸಸ್ಯಸಂಪತ್ತಿನಿಂದ, ಸಾವಿರ

ಸಾವಿರ ಸಂಖ್ಯೆಯಲ್ಲಿ ಗೋವುಗಳು ಅಭಿವೃದ್ಧಿ ಹೊಂದುವದನ್ನು ಕಾಣಬಹುದಾಗಿದೆ. ಪಶುಸಂಪತ್ತಿನ ಆಗರವೆನಿಸಿದ ಈ ತೀರ್ಥವು ತನ್ನ ಹೆಸರನ್ನು ಸಾರ್ಥಕ ಮಾಡಿಕೊಂಡಿದೆ ಎಂದರೆ ಅತಿಶಯೋಕ್ತಿ ಆಗಲಾರದು.

## ವಿಶ್ವಾಮಿತ್ರತೀರ್ಥ

**ಬ್ರಹ್ಮ:-** ಹಿಂದೊಮ್ಮೆ ಬಹುಕಾಲ ಮಳೆಬಾರದೆ ಜಲಕ್ಷಾಮ ತಲೆದೋರಿತು. ಆಗ ವಿಶ್ವಾಮಿತ್ರ ಮುನಿಯು ಗೌತಮೀನದೀ ತೀರದಲ್ಲಿ, ಆಶ್ರಮದಲ್ಲಿ ವಾಸಿಸುತ್ತಿದ್ದನು. ಅಂದಿನ ಬರಗಾಲದಲ್ಲಿ ಆ ತಪಸಿಯ ಹೆಂಡತಿ, ಮಕ್ಕಳೂ ಸಹ ಆಹಾರ ಕೊರತೆಯಿಂದ ಕೃಶರಾಗಿದ್ದರು. ಒಂದು ದಿನ ಹೆಂಡತಿ, ಮಕ್ಕಳು ಉಪವಾಸವಿರುವದನ್ನು ಸಹಿಸದೆ, ಆ ಮುನಿಯು ತನ್ನ ಶಿಷ್ಯರಿಗೆ ಅವರಿಗಾಗಿ ಎಲ್ಲಿಂದಾದರೂ, ಆಹಾರ ತರಲು ಆಜ್ಞಾಪಿಸಿದ. ಶಿಷ್ಯರೂ ಸಹ ಹಸಿವೆಯಿಂದ ಕಂಗಾಲಾಗಿದ್ದರು. ಕೂಡಲೇ ಅಲ್ಲಿಂದ ಹೊರಟು ಆಹಾರಕ್ಕಾಗಿ ಅಲೆದಲೆದು ದಣಿದರೂ, ಎಲ್ಲಿಯೂ ಆಹಾರ ದೊರಕದೆ, ಕೊನೆಗೆ ಬರಗಾಲದಲ್ಲಿ ತಿನ್ನಲು ಆಹಾರ ಸಿಕ್ಕದೇ ಸತ್ತ ಬಡಕಲು ನಾಯಿಯೊಂದು ದೊರಕಿತು. ಕೂಡಲೇ ಶಿಷ್ಯರು ಅದನ್ನೇ ತಂದು ಗುರುವಿಗೆ ಒಪ್ಪಿಸಿದರು. ಮುನಿಯು ಅದನ್ನೇ ಸ್ವೀಕರಿಸಿದನು.

ನಂತರ ವಿಶ್ವಾಮಿತ್ರನು ಶಿಷ್ಯರಿಗೆ ನಾಯಿಯ ಮಾಂಸವನ್ನು ಕತ್ತರಿಸಿ, ನೀರಿನಿಂದ ತೊಳೆದು, ಬೇಯಿಸಿ ನಂತರ ವಿಧಿವತ್ತಾಗಿ ಮಂತ್ರದಿಂದ ಅಗ್ನಿಯಲ್ಲಿ ಹೋಮಮಾಡಿದ ನಂತರ, ದೇವ, ಪಿತೃಪರಿವಾರಕ್ಕೆ ನಿವೇದಿಸಿ ಮಿಕ್ಕದ್ದನ್ನು ಆಹಾರವಾಗಿ ಉಣ್ಣೋಣ ಎಂಬುದಾಗಿ ಹೇಳಿದ. ಅವನ ಮಾತಿನಂತೆ ಶಿಷ್ಯರು ಮಾಂಸಬೇಯಿಸುತ್ತಿರುವಾಗ, ದೇವದೂತ ಅಗ್ನಿಯು ಸ್ವರ್ಗದಲ್ಲಿರುವ ದೇವತೆಗಳಿಗೆ ನಡೆದ ಸಮಾಚಾರ ತಿಳಿಸಿ, ನಾಯಿಯ ಮಾಂಸ ತಿನ್ನಬೇಕಾದ ದುರ್ಭರ ಪ್ರಸಂಗ ಬಂದಿರುವದನ್ನು ವಿವರಿಸಿ ಈ ಪ್ರಸಂಗ ಮುಂದಾಗಿ ತಪ್ಪಿಸಲು, ದೇವೇಂದ್ರ ಗಿಡುಗನ ರೂಪದಿಂದ ಹಾರಿ ಬಂದು ಮಾಂಸದ ಪಾತ್ರೆಯನ್ನೇ ಅಪಹರಿಸಿದ.

ಶಿಷ್ಯರೆಲ್ಲರೂ ನಡೆದ ಸಮಾಚಾರವನ್ನು ವಿಶ್ವಾಮಿತ್ರನಿಗೆ ಅರಿಕೆ ಮಾಡಿಕೊಂಡರು. ವಿಶ್ವಾಮಿತ್ರ ಕಡುಕೋಪಗೊಂಡ. ತನಗೆ ಶಾಪ ತಗಲುವದೆಂಬ ಆತಂಕ ಭಯದಿಂದ ಗಿಡುಗನಾಗಿ ಬಂದ, ದೇವೇಂದ್ರ ಆ ಮಾಂಸದ ಪಾತ್ರೆಯಲ್ಲಿ ಮಧು (ಅಮೃತ) ತುಂಬಿದ; ಮೊದಲಿನಂತೆ ಪಾತ್ರೆಯನ್ನು ಬೆಂಕಿಯ ಮೇಲಿರಿಸಿದ. ಅಷ್ಟಾದರೂ ವಿಶ್ವಾಮಿತ್ರನ ಕೋಪ ಶಮನವಾಗದೆ, 'ಎಲೈ ಇಂದ್ರನೆ, ನಾಯಿಯ ಮಾಂಸವನ್ನೇ ನಮಗಿಡು, ಈ ಅಮೃತವನ್ನೇ ನೀನು ತೆಗೆದುಕೋ. ಇಲ್ಲದಿದ್ದರೆ ನಿನ್ನನ್ನು ಭಸ್ಮಮಾಡುವೆ' ಎಂದು ಗುಡುಗಿದ. ಅದಕ್ಕೆ ಇಂದ್ರನು ಹೆದರಿ ನಡುಗುತ್ತ ನುಡಿದ: 'ಮುನಿವರಾ, ಈ ಅಮೃತವನ್ನೇ ಹೋಮಮಾಡಿ ಶಿಷ್ಯರು, ಮಕ್ಕಳೊಡನೆ ಉಣ್ಣು. ಅಪವಿತ್ರ ಮಾಂಸದಿಂದ ನಿನಗೇನು ಪ್ರಯೋಜನ?'

ವಿಶ್ವಾಮಿತ್ರ ಯೋಚಿಸಿ ನಂತರ ನುಡಿದ- 'ಪ್ರಜೆಗಳೆಲ್ಲ ಹಸಿವಿನಿಂದ ಬಳಲಿ ಸಾಯುತ್ತಿರುವಾಗ ನಾನು ಉಣ್ಣುವದು ನ್ಯಾಯವೆ? ನೀತಿಯೆ? ಧರ್ಮವೇ? ಎಲ್ಲರಿಗೂ ಅಮೃತವು ಲಭಿಸುವದಾದರೆ ನನ್ನ ಪಾಲಿಗೂ ಅಮೃತವಿರಲಿ, ಇಲ್ಲದಿದ್ದರೆ ದೇವತೆಗಳೂ, ಪಿತೃಗಳೂ, ಈ ನಾಯಿಯ ಮಾಂಸ ತಿನ್ನಬೇಕು. ಆಮೇಲೆ ಮಿಕ್ಕ ಮಾಂಸವನ್ನು ನಾನು ತಿನ್ನುವೆ' ಎಂದು ನುಡಿದ. ಅಷ್ಟೇ ಅಲ್ಲ ನಾಯಿಯ ಮಾಂಸವನ್ನೇ ದೇವತೆಗಳಿಗೆ

ಹವಿರ್ಭಾಗ ಕೊಡಲು ಮುಂದಾದಾಗ, ಇಂದ್ರನು ಕೂಡಲೇ ಮೇಘಗಳನ್ನು ಕರೆದು ಅಮೃತ ಮಳೆ ಕರೆಸಿದ. ತತ್ಪರಿಣಾಮವಾಗಿ ಭೂಮಿಯು ಜಲ, ಸಸ್ಯ ಸಂಪತ್ತಿನಿಂದ ತುಂಬಿ ಸಮೃದ್ಧ ಬೆಳೆಯಿಂದ ಕಂಗೊಳಿಸುವಂತಾಯಿತು.

ವಿಶ್ವಾಮಿತ್ರ ಮುನಿಯು ಇಂದ್ರನು ಕೊಟ್ಟ ಅಮೃತವನ್ನು ದೇವಾಧಿದೇವತೆಗಳಿಗೆ ಅರ್ಪಿಸಿದ. ಮೂರುಲೋಕಕ್ಕೆ ಸುಖ ಉಂಟಾಗುವಂತೆ ಮಾಡಿದ. ನಂತರ ಶಿಷ್ಯ ಸಮೂಹದೊಡನೆ, ತಾನೂ, ಹೆಂಡತಿ ಮಕ್ಕಳೂ ಉಂಡು ತೃಪ್ತಿಹೊಂದಿದರು. ಇಂದ್ರನು ಪ್ರಜೆಗಳಿಗೆ ಅಮೃತಜಲ ಸುರಿಸಿದ ಸ್ಥಳ ಮಹಾಪಾವನ ತೀರ್ಥವಾಯಿತು ಈ ಸ್ಥಳದಲ್ಲಿಯೇ ಮಾಂಸದ ಬದಲು, ಅಮೃತವನ್ನು ಸೇವಿಸುವಂತಾಯಿತು. ಆದಕ್ಕೆ 'ವಿಶ್ವಾಮಿತ್ರ ತೀರ್ಥ'ವೆಂದೂ ಕರೆಯುತ್ತಾರೆ. ಇದೇ ತೀರ್ಥವನ್ನು ಕೆಲವರು, 'ಮಧುತೀರ್ಥವೆಂದು ಕರೆದರೆ, ಕೆಲವರು 'ಇಂದ್ರತೀರ್ಥ'ವೆಂದೆನ್ನುತ್ತಾರೆ. ವೇದಶಾಸ್ತ್ರಗಳಲ್ಲಿ ಇದೇ ತೀರ್ಥವನ್ನು 'ಪರ್ಜನ್ಯತೀರ್ಥ'ವೆಂದು ಕರೆಯಲಾಗಿದೆ.

ವಿಶ್ವಾಮಿತ್ರನ ಉದಾರ ಗುಣದ ಮಹಿಮೆಯ ದ್ಯೋತಕವೆಂಬಂತೆ ಈ ತೀರ್ಥವು ಸಕಲದುರಿತ ಕಳೆಯುವ ಪರಮಪಾವನವೆನಿಸಿದೆ. ಇದಲ್ಲದೆ, ದಶರಥನ ಮಗ ರಾಮ ಚಂದ್ರನು ಸೀತೆಯೊಡನೆ ಗೌತಮೀ ನದಿಯಲ್ಲಿ ಪಿತೃತರ್ಪಣ ನೀಡಿದ್ದರಿಂದ ಪಿತೃತೀರ್ಥ ವೆಂದು ಇನ್ನೊಂದು ತೀರ್ಥವಿದ್ದು, ಸಕಲ ಮನೋರಥ ಪೂರ್ಣಮಾಡುವಲ್ಲಿ ಇದು ಆದರ್ಶತೀರ್ಥವೆನಿಸಿದೆ. ಇದರಲ್ಲಿ ಸ್ನಾನ, ದಾನ, ಪೂಜೆಗಳಿಂದ ಪಿತೃಗಳು ಪ್ರೀತರಾಗುವರು.

## ಧೌತಪಾವತೀರ್ಥ

**ಬ್ರಹ್ಮ:-** ಸ್ಪರ್ಶ, ಸ್ಮರಣ ಮಾತ್ರದಿಂದ ಘೋರ ಪಾಪವನ್ನು ಕಳೆದು ಪರಮಪಾವನಗೊಳಿಸುವ ಪ್ರಸಿದ್ಧತೀರ್ಥ ಒಂದಿದೆ. ಅದುವೇ 'ಪಾಪಪ್ರಣಾಶನತೀರ್ಥ'ವೆಂದು ಪ್ರಪಂಚ ಪ್ರಖ್ಯಾತಿ ಪಡೆದಿದೆ. ಅದರ ಕಥಾನಕವು ಮನೋರಂಜಕವಾಗಿದ್ದು ಅದನ್ನು ಓದುತ್ತ ಹೋದಂತೆ, ಇಲ್ಲವೆ ಚಿತ್ತವಿಟ್ಟು ಆಲಿಸುತ್ತ ಹೋದಹಾಗೆ ಪಾಪದ ಭಯವೇ ಇಲ್ಲದಂತಾಗುತ್ತದೆ.

ಬಹುಕಾಲದ ಹಿಂದೆ ಧೃತವ್ರತನೆಂಬ ಬ್ರಾಹ್ಮಣನೊಬ್ಬನಿದ್ದನು. ಅವನಿಗೆ ಮಹೀದೇವಿ ಎಂಬ ಸುಂದರಿಯಾದ ಮಡದಿ. ಅವರಿಗೆ ಸನಾಜ್ಞಾತನೆಂಬ ಒಬ್ಬನೇ ಮಗ. ಕಾಲವಶದಿಂದ ಧೃತವ್ರತನು ಅಲ್ಪ ವಯಸ್ಸಿನಲ್ಲಿಯೇ ಮರಣ ಹೊಂದಿದ. ಪತಿ ಮರಣಾನಂತರ ಬಾಲವಿಧವೆಯಾದ ಮಹೀದೇವಿಯು ಮಗನೊಡನೆ, ನಿರಾಶ್ರಿತಳಾಗಿ ಅಲೆಯುತ್ತ ಗಾಲವಾಶ್ರಮಕ್ಕೆ ಬಂದು ನೆಲೆಸಿದಳು. ಅಲ್ಲಿರುವ ಗಾಲವ ಮುನಿಗೆ ಮಗನನ್ನು ರಕ್ಷಿಸಲು ಬಿಟ್ಟು, ತಾನು ಮಾತ್ರ ಹೆಚ್ಚು ಕಾಲ ಅಲ್ಲಿರದೇ ಹೊರಟು ಬಿಟ್ಟಳು. ಅವಳಿನ್ನೂ ಬಾಲವಿಧವೆ, ರತಿಸುಖ ಪಡೆಯುವ ಆಶೆ ಅತಿಯಾಗಿದ್ದಿತು. ಪರಪುರುಷರ ಸಹವಾಸದ ಬಯಕೆ, ಪಾಪಬುದ್ಧಿಯಿಂದ ಪ್ರೇರಿತಳಾಗಿದ್ದಳು. ಹೀಗಾಗಿ ಏನೇನೋ ನೆಪಹೇಳಿ ಗಾಲವಾಶ್ರಮ ತೊರೆದು ಹೊರಟು ಹೋದಳು.

ಇತ್ತ ಅವಳ ಮಗನು ಗಾಲವ ಮುನಿಯ ಶುಶ್ರೂಷೆಯಲ್ಲಿ ಬೆಳೆದು ದೊಡ್ಡವನಾದ. ವೇದವೇದಾಂಗಗಳನ್ನು ಕಲಿತ. ಆದರೆ ಸಂಯಮಶೀಲನಾಗದೆ, ಬ್ರಹ್ಮಚರ್ಯ ಪಾಲಿಸದ.

ಕಾಮಾಸಕ್ತನಾಗಿ ಹಗಲಿರುಳೂ ವೇಶ್ಯಾವೃತ್ತಿನಿರತನಾಗಿ ವಿಷಯ ಲಂಪಟನಾದ. ಆಶ್ರಮದ ಕಟ್ಟುಪಾಡಿನ, ಸರಳ, ಸಂಯಮ ಜೀವನ ಅವನಿಗೆ ಸರಿ ಬಾರದೆ, ಅಲ್ಲಿಂದ ಅವನೂ ಹೊರಟುಬಿಟ್ಟ. ಅವನ ತಾಯಿ, ಮಹೀದೇವಿಯು ಅನೇಕ ಜಾತಿಯ ಜನಗಳು ತುಂಬಿರುವ ಜನಸ್ಥಾನದಲ್ಲಿ ವೇಶ್ಯಾವಾಟಿಕೆಯಲ್ಲಿದ್ದುಕೊಂಡು ವೇಶ್ಯಾವೃತ್ತಿಯನ್ನು ಕೈಕೊಂಡು ಉಪಜೀವಿಸುತ್ತಿದ್ದಳು. ತಾರುಣ್ಯದಲ್ಲಿ ಕಡಿವಾಣವಿಲ್ಲದ ಕಾಮಾಭಿಲಾಷೆಯುಳ್ಳ ಸನಾಜ್ಞಾತನೂ ಸಹ ದೇಶಗಳನ್ನು ಅಲೆಯುತ್ತ ಕಾಲವಶಾತ್ ಅದೇ ಜನಸ್ಥಾನಕ್ಕೆ ಬಂದು ವಾಸಿಸತೊಡಗಿದ. ಮಹೀದೇವಿಗೆ ಇವನು ತನ್ನ ಮಗನೆಂಬುದು ತಿಳಿಯಲಿಲ್ಲ. ಸನಾಜ್ಞಾತನಿಗೂ ಅವಳು ತನ್ನ ತಾಯಿ ಎಂದು ಗೊತ್ತಾಗಿರಲಿಲ್ಲ.

ಹೀಗೆ ಮಾತೃವಿನೊಡನೆ ಮಗನೇ ಸುಖಸಮಾಗಮ ಅನುಭವಿಸುತ್ತಿರಲು ಆ ಕಾಮುಕರಿಗೆ ತಾವು ಯಾರೆಂಬುದು ಪರಸ್ಪರರು ಪರಿಚಯ ಹೊಂದದೇ ಹೋದದ್ದು ವಿಧಿ ವಿಪರ್ಯಾಸ! ಹೀಗೆ ತನ್ನ ತಾಯಿಯೊಡನೆ ದಿನದಿನವೂ ಕಾಮಪಿಪಾಸೆ ಹಿಂಗಿಸಿ ಕೊಳ್ಳುತ್ತಿರುವಾಗ, ಸನಾಜ್ಞಾತನಿಗೆ, ಧರ್ಮಿಷ್ಠನಾದ ತಂದೆಯ ಮಹಿಮೆಯಿಂದ ಆಶ್ಚರ್ಯಕರ ರೀತಿಯಲ್ಲಿ ಅರಿವು ಮೂಡಹತ್ತಿತ್ತು. ತನ್ನ ಕಾಮವೃತ್ತಿ ಜೀವನದಲ್ಲಿ, ಅವನು ಬ್ರಾಹ್ಮಣ ಕರ್ಮ ಮಾತ್ರ ಅನುಸರಿಸುತ್ತಿದ್ದ. ತನ್ನ ವಿದ್ಯೆಯ ಬಲದಿಂದ ಹೇರಳ ಹಣವನ್ನು ಸಂಗ್ರಹಿಸಿ, ತಾನು ಮೆಚ್ಚಿದ ವೇಶ್ಯೆಗೆ ಕೊಡುತ್ತಿದ್ದ. ಅವನು ಪ್ರತಿದಿನ ಬೆಳಿಗ್ಗೆ ಮುಂಚಿತವಾಗಿ ಎದ್ದು ಶೌಚ, ಸ್ನಾನ, ಸಂಧ್ಯಾವಂದನೆ ಮುಗಿಸಿ, ಬ್ರಾಹ್ಮಣರಿಗೆ ನಮಸ್ಕರಿಸಿ, ತನ್ನ ಕಾಯಕ ಆರಂಭಿಸುತ್ತಿದ್ದ. ಬೆಳಗಿನಲ್ಲಿ ಗೌತಮೀನದಿಗೆ ಹೋಗುವಾಗ ಅವನ ಶರೀರವು ವಿರೂಪವಾಗಿರುತ್ತಿದ್ದು. ಮೈಯಲ್ಲೆಲ್ಲಾ ಕುಷ್ಠರೋಗ ಸಂಪರ್ಕದಿಂದ ಅಲ್ಲಲ್ಲಿ ಕೀವು, ರಕ್ತಗಳಿಂದ ಮಲಿನತೆ ಕಾಣುತ್ತಿತ್ತು. ನದಿಯಲ್ಲಿ ಶುಭ್ರಸ್ನಾತನಾಗಿ ಬರುವಾಗ ಅವನಲ್ಲಿ ತೀವ್ರ ಬದಲಾವಣೆ ಕಾಣುತ್ತಿತ್ತು. ಮೈಮೇಲೆ ಯಾವ ರೋಗದ ಚಿಹ್ನೆಯೂ ತೋರದೇ ತೇಜಸ್ಸಿನಿಂದೊಪ್ಪುವ ಮುಖದಲ್ಲಿ ಆಕರ್ಷಣೆ ಕಾಣುತ್ತಿತ್ತು. ಈ ರೀತಿ ಎರಡು ಬಗೆಯ ರೂಪಾಂತರದ ಹಿನ್ನೆಲೆ ಮಾತ್ರ ಅವನು ತಿಳಿಯದೇ ಹೋದ.

ಪೂಜ್ಯನೂ, ತಪಸ್ವಿಯೂ ಆದ ಗಾಲವಮುನಿಯು ಅನುಗಾಲವೂ, ಗೌತಮೀ ನದಿಯನ್ನು ಸೇವಿಸುತ್ತ ಶಿಷ್ಯರೊಡನೆ ವಾಸವಾಗಿದ್ದನು. ಈ ಸನಾಜ್ಞಾತನು ಆ ಗಾಲವಾಶ್ರಮಕ್ಕೆ ಹೋಗಿ ನದಿಯಲ್ಲಿ ಸ್ನಾನಾದಿಗಳನ್ನು ಮಾಡಿಕೊಂಡು, ಮುನಿಗೆ ನಮಸ್ಕರಿಸಿ ಮನೆಗೆ ಬರುತ್ತಿದ್ದನು. ಸ್ನಾನದ ಮೊದಲು ಹಾಗೂ ಆ ನಂತರದ ಅವಧಿಯಲ್ಲಿ ಅವನಲ್ಲಾಗುವ ದೈಹಿಕ, ಮಾನಸಿಕ ಬದಲಾವಣೆಯನ್ನು ಸೂಕ್ಷ್ಮವಾಗಿ ಗಮನಿಸಿದ ಗಾಲವ ಮುನಿಗೂ ಅಚ್ಚರಿ, ಆನಂದ. ''ಇದಕ್ಕೆ ಕಾರಣ ಏನಿರಬಹುದು'' ಎನ್ನುವ ಸಹಜ ಕುತೂಹಲ ಬೇರೆ. ತನ್ನನ್ನು ನಮಸ್ಕರಿಸಿ ಹೊರಡಲಿರುವ ಸನಾಜ್ಞಾತನನ್ನು ಕುರಿತು ಮುನಿ ಪ್ರಶ್ನಿಸಿದ : ''ಎಲೈ ಬ್ರಾಹ್ಮಣ ನೀನು ಯಾರು? ಎಲ್ಲಿಗೆ ಹೋಗುವೆ? ನಿನ್ನ ಹೆಸರೇನು? ನಿನ್ನ ಹೆಂಡತಿ ಯಾರು? ನೀನು ಯಾವ ವೃತ್ತಿಯಲ್ಲಿರುವೆ?

ಹೀಗೆ ಹಲವಾರು ಪ್ರಶ್ನೆಗಳಿಗೆ ಉತ್ತರಿಸದೇ ಸನಾಜ್ಞಾತನು ''ಸರಿಯಾಗಿ ಜ್ಞಾಪಿಸಿಕೊಂಡು ನಾಳೆ ಹೇಳುವೆ'' ಎಂದು ಸೌಜನ್ಯದಲ್ಲಿ ನುಡಿದು ಅಲ್ಲಿಂದ ಮರಳಿ ಮನೆಗೆ ಬಂದ. ಆ ರಾತ್ರಿ ಸುಖ ಭೋಜನಾನಂತರ ವೇಶ್ಯೆಯಾದ ಮಹೀದೇವಿಯೊಡನೆ

ಹಾಸಿಗೆಯಲ್ಲಿ ಪವಡಿಸಿದ. ಅವನಿಗೆ ಗಾಲವನ ಪ್ರಶ್ನೆಯು ಜ್ಞಾಪಕಕ್ಕೆ ಬಂದು ಅವಳನ್ನು ಕುರಿತು:- ನಿನ್ನ ಹೆಸರೇನು? ಕುಲ, ಗೋತ್ರ ಯಾವುದು? ನಿನಗೆ ಬಂಧು ಬಳಗ ಎಂಬುವವರು ಇಲ್ಲವೆ ಹೇಗೆ''- ಎಂದು ಪ್ರಶ್ನಿಸಿದ. ಆಗ ವೇಶ್ಯೆಯು ತನ್ನ ಪೂರ್ವೋತ್ತರ ಚರಿತ್ರೆಯನ್ನು ವಿವರಿಸಿದಳು. ಅದನ್ನು ಕೇಳುತ್ತ ಅವನು ಒಮ್ಮೆಲೆ ಮತಿ ಭ್ರಮಗೊಂಡ ವನಂತೆ, ಭೂಮಿಗೆ ಉರುಳಿದ. ವೇಶ್ಯೆಯು ಗಾಬರಿಯಾಗಿ ಅವನನ್ನು ಉಪಚರಿಸಿದಳು. ನಂತರ ಪ್ರಜ್ಞಾವಸ್ಥೆಗೆ ತಲುಪಿದ ಸನಾಜ್ಞಾತ ದುಃಖಾಶ್ರು ತುಂಬಿಕೊಂಡು ನಡುಗುವ ಸ್ವರದಲ್ಲಿ ನುಡಿದ:- ನೀನು ನನ್ನನ್ನು ಹೆತ್ತು, ಸಾಕಿ ಸಲುಹಿದ ತಾಯಿ. ನೀನು ಹೇಳಿದ ಆ ಧೃತವ್ರತನೇ ನನ್ನ ತಂದೆ. ಇಂತಹ ಘೋರ ಪ್ರಸಂಗ ನನಗೆ ದುರದೃಷ್ಟದಿಂದ ಉಂಟಾಗಿದೆ. ನನ್ನ ಕಾಮುಕಜೀವನಕ್ಕೆ ಧಿಕ್ಕಾರವಿರಲಿ..

ಹೀಗೆ ಪರಸ್ಪರರು ದುಃಖಿಸುತ್ತ, ತಮ್ಮತಮ್ಮನ್ನು ಹಳಿದುಕೊಳ್ಳುತ್ತ ಕಾಲ ಕಳೆದರು. ಬೆಳಗಾಯಿತು. ಆ ಬ್ರಾಹ್ಮಣನು ಗಾಲವ ಮುನಿಯ ಆಶ್ರಮಕ್ಕೆ ಹೋಗಿ ಪಶ್ಚಾತ್ತಾಪ ಪಡುತ್ತ ನುಡಿದ:- ''ಮುನಿವರಾ, ನಾನು ಧೃತವ್ರತನ ಮಗ. ಈ ವೇಶ್ಯೆಯೇ ನನ್ನ ತಾಯಿ'' ಎಂದು ಪರಿಚಯ ಹೇಳಿ ತಾನು ಮಾತೃಗಮನದಿಂದ ಘೋರಪಾಪ ಎಸಗಿರುವ ವಿಷಯ ವಿವರಿಸಿದ. ಇದಕ್ಕೇನು ಪರಿಹಾರವೆಂದು ಪ್ರಶ್ನಿಸಿದ.

ಅವನ ಪಶ್ಚಾತಾಪಕ್ಕೆ ಅನುಕಂಪಗೊಂಡ ಮುನಿ ಸಂತೈಸುತ್ತ ನುಡಿದ:- ನೀನು ದುಃಖಿಸಬೇಡ. ನನಗೀಗ ಎಲ್ಲವೂ ಅರ್ಥವಾಯಿತು. ಹೌದು. ನೀನು ಮಾಡಿದ ಪಾಪವೆಲ್ಲವೂ ಗಂಗಾನದಿಯ ಸ್ನಾನದಿಂದ ಪರಿಹಾರವಾಗಿದೆ. ಈ ತೀರ್ಥ ಮತ್ತು ಗಂಗಾದೇವಿಯ ಮಹಿಮೆಯಿಂದ ನೀನು ಪುನೀತನಾಗಿರುವೆ. ಬೆಳಗಿನ ಹೊತ್ತು ನಿನ್ನ ರೂಪವು ಪಾಪಮಯವಾಗಿ ವಿಕಾರ ಕಾಣುತ್ತಿತ್ತು. ಪುನಃ ಸ್ನಾನ ಮಾಡಿದ ನಂತರ ನಿನಗೆ ಸುಂದರರೂಪ ಬಂದೊದಗುತ್ತಿತ್ತು. ಈ ಬದಲಾವಣೆಯನ್ನು ನಾನು ದಿನವೂ ಸೂಕ್ಷ್ಮವಾಗಿ ಮನಗಾಣುತ್ತಿದ್ದೆ.

ನೀನೀಗ ಮಾಡಬೇಕಾಗಿರುವದೇನೂ ಇಲ್ಲ. ವೇಶ್ಯೆಯಾದ ನಿನ್ನ ತಾಯಿ ಪಶ್ಚಾತ್ತಾಪದ, ಪುಟ್ಟಕ್ಕಿಟ್ಟ ಬಂಗಾರದಂತೆ ಪರಿಶುದ್ಧಳಾಗಿರುವಳು. ಅದರಲ್ಲಿ ತಿಲಮಾತ್ರರೂ ಸಂಶಯವಿಲ್ಲ ಯಾಕೆಂದರೆ-

**ಸತ್ಸಂಗತೋ ಮಹಾಪುಣ್ಯಾನ್ನಿವೃತ್ತಿರ್ದೈವತೋ ಭವೇತ್ ।**
**ಅತ್ಯರ್ಥಮನುತಪ್ತೇಯಂ ಪ್ರಾಗಾಚರಿತಪುಣ್ಯತಃ ॥**

ದೈವಾನುಗ್ರಹದಿಂದ ದೊರೆಯುವ ಸಜ್ಜನರ ಸಹವಾಸ ಮಹಾ ಪವಿತ್ರ. ಈ ನಿನ್ನ ತಾಯಿಗೆ ಹಿಂದೆ ಸತ್ಪುರುಷನಾದ ಪತಿಯ ಸಹವಾಸ ದೊರಕಿದ್ದಿತು. ಅವಳೀಗ ತನ್ನ ಹೇಯ ಜೀವನದಿಂದ ಪಶ್ಚಾತ್ತಾಪಪಡುತ್ತಿದ್ದಾಳೆ. ಆದರಿಂದ ಪರಿಶುದ್ಧಳೂ ಆಗಿದ್ದಾಳೆ. ಗಂಗಾನದಿಯಲ್ಲಿ ಮಿಂದಾಗ, ದೈಹಿಕವಾಗಿ, ಮಾನಸಿಕವಾಗಿ, ಪೂರ್ಣ ಪರಿಶುದ್ಧಳಾ ಗುತ್ತಾಳೆ. ನೀವಿನ್ನು ಚಿಂತಿಸಬೇಡಿರಿ; ದುಃಖಿಸಬೇಡಿರಿ.''

ಗಾಲವನ ಉಪದೇಶದಂತೆ, ಅವರಿಬ್ಬರೂ ಆ ಗಂಗಾತೀರ್ಥದಲ್ಲಿ ಸ್ನಾನಮಾಡಿದರು: ಪರಿಶುದ್ಧರಾದರು. ಅಂದಿನಿಂದ ಆ ತೀರ್ಥವು 'ಧೌತತೀರ್ಥ'ವೆಂದು ಹೆಸರಾಯಿತು. ಅಲ್ಲದೆ ಅದಕ್ಕೆ 'ಪಾಪಪ್ರಣಾಶನ ತೀರ್ಥ'ವೆಂದೂ ಕರೆಯುವ ರೂಢಿ ಇದೆ.

## 'ಶ್ವೇತತೀರ್ಥ'

**ಬ್ರಹ್ಮ:**- ಬಹು ವರ್ಷಗಳ ಹಿಂದೆ, ಶ್ವೇತನೆಂಬ ಮುನಿಯಿದ್ದ. ಅವನು ಗೌತಮ ಋಷಿಯ ಸ್ನೇಹಿತ. ಗೌತಮೀನದಿಯ ಪ್ರಶಾಂತ ಪರಿಸರದಲ್ಲಿ ಶ್ವೇತಾಶ್ರಮ. ಸದಾ ವಿನಯಿಯಾಗಿ ಅವನು ಅತಿಥಿಸತ್ಕಾರಮಾಡುವದರಲ್ಲಿ ಹೆಸರುವಾಸಿ. ಅವನು ಶಿವನ ಪರಮ ಭಕ್ತ. ಕಾಲಾನುಕ್ರಮದಲ್ಲಿ ಅವನು ಸಾಯುಜ್ಯ ಹೊಂದಲು, ಅವನನ್ನು ಕರೆದೊಯ್ಯುವದಕ್ಕಾಗಿ ಯಮದೂತರು ಬಂದರು.

ಈ ಪರಮ ಶಿವಭಕ್ತನ ಮನೆ ಪ್ರವೇಶಿಸಲು ಯಮದೂತರು ಭಯಗೊಂಡು ಹಾಗೇ ನಿಂತರು, ಬಹುಕಾಲ. ಚಿತ್ರಗುಪ್ತ ಯಮನಿಗೆ ವರದಿ ಸಲ್ಲಿಸಿದ. ಕೊನೆಗೆ ಯಮನೇ ದಂಡಧಾರಿಯಾಗಿ, ತನ್ನ ವಾಹನವನ್ನೇರಿ, ಶ್ವೇತಾಶ್ರಮಕ್ಕೆ ಹೋದ. ಅಲ್ಲಿ ನಿಂತಿರುವ ತನ್ನ ದೂತರನ್ನು ಕಂಡ. ಅವರು ನಿಂತ ಕಾರಣವನ್ನು ಕೇಳಿದಾಗ ಅವರೆಂದರು : "ಮಹಾ ಶಿವಭಕ್ತ ಈ ಶ್ವೇತನನ್ನು ನೋಡಲು ನಮ್ಮಿಂದಾಗದು". ಆಗ ಮೃತ್ಯುವು ಪಾಶವನ್ನು ಹಿಡಿದು ಶ್ವೇತನ ಬಳಿಗೆ ಹೋದ. ಬಳಿಯಲ್ಲಿ ನಂದಿ ನಿಂತಿದ್ದ. ಪಾಶವಿಡಿದು ಬಂದ ಮೃತ್ಯುವನ್ನೇ ಪ್ರಶ್ನಿಸಿದ "ನಿನಗಿಲ್ಲೇನು ಕೆಲಸ? ನಡೆ ಆಚೆಗೆ."

ತಾನು ಶ್ವೇತನನ್ನು ಕರೆದೊಯ್ಯಲು ಬಂದಿರುವದಾಗಿ ನುಡಿದು, ಮೃತ್ಯು ಹಾರ್‍ನೋನ್ಮುಖನಾದ. ಅದನ್ನು ನೋಡಿ ಕುಪಿತನಾದ ನಂದಿ ಶಿವದಂಡದಿಂದ ಮೃತ್ಯುವನ್ನೇ ಹೊಡೆದುರುಳಿಸಿದ. ಈ ಸಮಾಚಾರವನ್ನು ಯಮದೂತರು ಭಯಭೀತರಾಗಿ ಓಡಿಹೋಗಿ ಯಮಧರ್ಮನ ಎದುರು ಮೃತ್ಯುವನ್ನು ವಧಿಸಿದ ವಿಚಾರ ತಿಳಿಸಿದರು. ಅದನ್ನು ಕೇಳಿದ ಯಮಧರ್ಮ ಮತ್ತಷ್ಟು ಕೋಪಾವಿಷ್ಟನಾಗಿ, ಚಿತ್ರಗುಪ್ತ, ಭೂತ, ಬೇತಾಳಗಳು, ಮನೋರೋಗಗಳು, ದೈಹಿಕ ವ್ಯಾಧಿಗಳು, ತಾಪತ್ರಯಗಳಿಗೆಲ್ಲ ಜಾಗ್ರತರಾಗಿ ಕೂಡಲೇ ಸಿದ್ಧರಾಗಿ ತನ್ನೊಡನೆ ಬರುವಂತೆ ಆಜ್ಞೆ ನೀಡಿದ. ಎಲ್ಲರೂ ವಾಹನಾರೂಢನಾದ ಯಮನೊಡನೆ ಹೊರಟರು.

ಯಮನು ತನ್ನ ಪರಿವಾರದೊಡನೆ ಬರುವದನ್ನು ಕಂಡ ನಂದಿಯು ಆಯುಧವನ್ನು ಹಿಡಿದು ವಿನಾಯಕ, ಷಣ್ಮುಖ, ಭೂತನಾಥ, ದಂತೀ ಮೊದಲಾದವರಿಗೆ ಯುದ್ಧ ಸನ್ನದ್ಧರಾಗಿರಲು ಸೂಚಿಸಿದ. ಕೊನೆಗೆ ವಾಗ್ವಾದ ಕಾವೇರಿ ಹಣಾಹಣಿ ಯುದ್ಧ ಆರಂಭವಾಯಿತು. ಯಮದೂತ, ಶಿವದೂತರಲ್ಲಿ ಘನಘೋರ ಯುದ್ಧ ಸಂಭವಿಸಿ, ಕುಮಾರ ಸ್ವಾಮಿ ಯಮದೂತರನ್ನು, ಯಮನನ್ನು ಚೆನ್ನಾಗಿ ಹಣ್ಣುಗಾಯಿ ಮಾಡಿ ಮಣ್ಣು ಮುಕ್ಕಿಸಿದ. ಯುದ್ಧದಲ್ಲಿ ಅಳಿದುಳಿದ ಯಮದೂತರಲ್ಲಿ ಕೆಲವರು ಯಮನ ತಂದೆಯಾದ ಸೂರ್ಯದೇವನಲ್ಲಿ ಗೋಳಿಟ್ಟರು. ಸೂರ್ಯನು ಆ ದುಃಖದುರಂತವೃತ್ತಾಂತವನ್ನು ನನ್ನ (ಬ್ರಹ್ಮನ) ಎದುರಿನಲ್ಲಿ ವಿವರಿಸಿದಾಗ, ನಾನು ತಲ್ಲಣಿಸಿ ದಾರಿಗಾಣದೆ, ವಿಷ್ಣು, ಚಂದ್ರ, ಅಗ್ನಿ, ವರುಣ, ಅಶ್ವಿನೀ ದೇವತೆಗಳು, ಲೋಕಪಾಲಕರೊಡನೆ ಯಮನಿದ್ದ ಸ್ಥಳಕ್ಕೆ ಧಾವಿಸಿದೆವು.

ಗೌತಮೀನದೀ ತೀರದಲ್ಲಿ ಯಮನು ಸೈನ್ಯದೊಂದಿಗೆ ಮೃತನಾಗಿ ಬಿದ್ದದ್ದನು. ಮೃತ್ಯುದೇವತೆಯಾದ ಯಮನಿಗೂ ಇಂತಹ ದಾರುಣ ದುರಂತ ಸಂಭವಿಸಿದ್ದನ್ನು ಕಣ್ಣಾರೆ ಕಂಡ ನಾವೆಲ್ಲ ಶಿವನನ್ನೇ ಮೊರೆಹೊಕ್ಕೆವು. ನಮ್ಮ ಮೊರೆ ಕೇಳಿ ಮಹಾದೇವ ಮಮತೆ ತೋರಿ ಪ್ರತ್ಯಕ್ಷನಾಗಿ ಸಮಾಚಾರವನ್ನೆಲ್ಲ ಕೇಳಿ ಅರಿತ. ದೇವಾಧಿದೇವತೆಗಳೆಲ್ಲ ಶಿವನಿಗೆ

''ಓ ಲೋಕದೊಡೆಯ, ಯಮನ ಸಾವಿನಿಂದ, ಮುಂದಿನ ಲೋಕ ಕಾರ್ಯಗಳೆಲ್ಲ ಸ್ಥಗಿತಗೊಳ್ಳುತ್ತವೆ. ಯಮನ ಕರ್ತವ್ಯದೊಡನೆ ಸೃಷ್ಟಿಕರ್ತನ ಕಾರ್ಯವೂ ನಡೆಯುವದು. ಒಂದಕ್ಕೊಂದು ಪೂರಕ ಕಾರ್ಯವೆನಿಸಿದ್ದು, ನ್ಯಾಯ ಸಮ್ಮತವಾಗಿದೆ. ಆದ್ದರಿಂದ ಯಮನನ್ನೂ ಅವನ ಸೇನಾ ಪರಿವಾರನ್ನೂ ಬದುಕಿಸಿ ಉಪಕರಿಸು'' ಎಂದು ಬೇಡಿಕೊಂಡೆವು.

ಶಿವನು ನಮ್ಮ ಪ್ರಾರ್ಥನೆಗೆ ಸಮ್ಮತಿ ನೀಡಿ ಮತ್ತೆ ನುಡಿದ. ''ನಾನೀಗ ಯಮನನ್ನು ಬದುಕಿಸುವೆ. ಆದರೆ ನನ್ನದೊಂದು ಮಾತನ್ನು ನಡೆಸಬೇಕು. ನನ್ನ ಭಕ್ತರು ಮರಣ ಹೊಂದಕೂಡದು'' ಎಂದಾಗ ದೇವತೆಗಳು ವಿರೋಧ ಧ್ವನಿಯೆತ್ತಿ ನುಡಿದರು :

''ಇದೆಂತಹ ಮಾತು ! ನಿನ್ನ ಭಕ್ತರಿಗೆ ಮರಣವೇ ಇಲ್ಲವಾದರೆ ಜನಗಳೆಲ್ಲರೂ ದೇವತೆಗಳಾಗಿ ಸ್ವರ್ಗವೆಲ್ಲ ಕಿಕ್ಕಿರಿದು ತುಂಬಿಹೋದೀತು. ಅದಲ್ಲದೆ ದೇವ-ಮಾನವರೆಂಬ ಶಬ್ದ ಮಾತ್ರಕ್ಕೂ ಬದುಕಿ ಉಳಿಯಲಾರದು. ಹಾಗಾಗುವದು ಬೇಡ. ಬೇಡ.''

ಮತ್ತೆ ಪರಮೇಶ್ವರ ನುಡಿದ : ''ಹಾಗಾದರೆ ಸರಿ. ನೀವು ಎಲ್ಲರೂ ನನ್ನ ಮಾತನ್ನೂ ಕೇಳಿರಿ. ನನ್ನ ಗೌತಮೀಯನ್ನು ಸೇವಿಸಿ, ಪೂಜಿಸುವ ನನ್ನ ಭಕ್ತರಿಗೂ, ವಿಷ್ಣು ಭಕ್ತರಿಗೂ ನಾವೇ ಒಡೆಯರು. ಯಮನು ನಮ್ಮ ಭಕ್ತರನ್ನು ಕಣ್ಣೆತ್ತಿಕೂಡ ನೋಡಕೂಡದು. ಅಷ್ಟೆ ಅಲ್ಲ; ಶಿವಭಕ್ತರಿಗೆ ರೋಗಾದಿಗಳು, ತಾಪತ್ರಯಗಳು ಎಂದಿಗೂ ಬಾರದಿರಲಿ. ಯಮನೂ, ಆತನ ದೂತರೂ ಶಿವಭಕ್ತರನ್ನು ಮನ್ನಿಸುವಂತಾಗಬೇಕು.''

ಶಿವನ ಮಾತಿಗೆ ದೇವತೆಗಳೆಲ್ಲ ತಲೆದೂಗಿ, ''ಹಾಗೇ ಆಗಲಿ'' ಎಂದು ಸಮ್ಮತಿಸಿದರು. ನಂತರ ಮಹೇಶ್ವರನು ನಂದಿಗೆ ಗೌತಮೀನದಿ ನೀರಿನಿಂದ ಮೃತನಾದ ಯಮನನ್ನು ಸಂಪ್ರೋಕ್ಷಣೆ ಮಾಡಲು ಹೇಳಿದ. ನಂದಿ ಅವನಾಜ್ಞೆಯನ್ನು ಪಾಲಿಸಿದ. ಆ ನಂತರ ಅವನ ಸೇನಾ ಪರಿವಾರವೆಲ್ಲ ನಂದಿಯ ಸಂಪ್ರೋಕ್ಷಣೆಯಿಂದ ಮರಳಿ ಜೀವಪಡೆದು ತಮ್ಮ ನಗರಕ್ಕೆ ತೆರಳಿದರು. ಅದೇ ಗೌತಮೀನದಿಯ ಉತ್ತರತೀರದಲ್ಲಿ ಹರಿ ಮೊದಲಾದ ದೇವತೆಗಳು ಮಹೇಶ್ವರನನ್ನು ಪೂಜಿಸಿ ಪ್ರಸನ್ನಗೊಳಿಸಿದರು. ಅಂದಿನಿಂದ ಅದು ಪರಮಪಾವನ ತೀರ್ಥ ಎನಿಸಿತು. ಉತ್ತರ ದಿಕ್ಕಿನಲ್ಲಿ ಒಂದೆಡೆ ಸುಮಾರು ಎಂಭತ್ತು ಸಾವಿರ ತೀರ್ಥಗಳೂ, ಒಂದು ಕಡೆ ಹದಿನಾಲ್ಕು ಸಾವಿರ ತೀರ್ಥಗಳೂ, ಮತ್ತೊಂದು ಭಾಗದಲ್ಲಿ ಆರು ಸಾವಿರ ತೀರ್ಥಗಳೂ ಮತ್ತೊಂದೆಡೆ ಒಂದು ಸಾವಿರ ತೀರ್ಥಗಳೂ ವಿಸ್ತಾರವಾಗಿ ಹಬ್ಬಿವೆ. ಅದರಂತೆ ಗೌತಮೀ ನದಿಯ ದಕ್ಷಿಣದಲ್ಲೂ, ಒಂದೆಡೆ ಆರು ಸಾವಿರ, ಮತ್ತೊಂದೆಡೆ ಅರವತ್ತುಸಾವಿರ ಪಾವನ ತೀರ್ಥಗಳು ಕಾಣಸಿಗುತ್ತವೆ.

ಈ ರೀತಿ ಶ್ವೇತತೀರ್ಥವು ವೇದಕಾಲದಿಂದಲೂ ಪಾವನತೀರ್ಥವೆಂದು ಹೆಸರು ವಾಸಿಯಾಗಿದ್ದು, ನಂದಿಯಿಂದ ಹತನಾದ ಮೃತ್ಯುವು ಬಿದ್ದ ಸ್ಥಳಕ್ಕೆ 'ಮೃತ್ಯುತೀರ್ಥ'ವೆಂದು ನಾಮಕರಣಗೊಂಡಿದೆ. ಆ ತೀರ್ಥದ ಹೆಸರು ಕೇಳಿದವನು ಸಹ ಸಾವಿರ ವರ್ಷ ಆಯುಸ್ಸು ಪಡೆದು ಸುಖಿಸುವನು. ಈ ಮೃತ್ಯುತೀರ್ಥದಲ್ಲಿ ಸ್ನಾನ, ದಾನ ಮಾಡಿದರೆ, ಸರ್ವ ಪಾಪಗಳೆಲ್ಲ ಹೇಳ ಹೆಸರಿಲ್ಲವಾಗಿ, ಭೋಗ, ಮೋಕ್ಷಗಳು ಸುಲಭವಾಗಿ ಲಭಿಸುತ್ತವೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು*

—○—

# ಶುಕ್ರತೀರ್ಥ

## ಅಧ್ಯಾಯ - ೨೫

**ಬ್ರಹ್ಮ**:- ಎಲೈ ನಾರದ, ಸರ್ವಪಾಪ ತೊಳೆದು, ಸಕಲ ಸಿದ್ಧಿ ಪ್ರದಾಯಕನೆಂಬ ಪ್ರಸಿದ್ಧ ತೀರ್ಥ ಒಂದಿದೆ. ಅದುವೇ ಶುಕ್ರತೀರ್ಥ. ಈ ತೀರ್ಥವು ಸಕಲ ರೋಗ ನಿವಾರಣೆ ಮಾಡುವಂತಿದ್ದು, ಸಕಲ ಸಿದ್ಧಿ ನೀಡುವ ಕಾಮಧೇನು ಸದೃಶವಾಗಿದೆ.

ಬಹುಕಾಲದ ಹಿಂದೆ, ಭೃಗು ಹಾಗೂ ಅಂಗಿರಸ್ ಎಂಬ ಇಬ್ಬರು ಸೋದರ ಮುನಿ ಶ್ರೇಷ್ಠರಿದ್ದರು. ಅವರಿಗೆ ರೂಪವಂತರೂ, ಮಾತಾಪಿತೃಭಕ್ತಿ ಪರಾಯಣರೂ ಆದ ಪುತ್ರರಿಬ್ಬರು ಜನಿಸಿದರು. ಭೃಗುವಿನ ಪುತ್ರ ಶುಕ್ರಾಚಾರ್ಯ; ಅಂಗೀರಸ್ಸುವಿನ ಮಗ ಬೃಹಸ್ಪತಿ ಬೆಳೆದು ದೊಡ್ಡವರಾದಾಗ, ಉಪನಯನ ಸಂಸ್ಕಾರವಾದ ಅವರನ್ನು ಕುರಿತು ನುಡಿದರು : ''ನಮ್ಮಿಬ್ಬರನ್ನು ನಿಮ್ಮಲ್ಲಿ ಒಬ್ಬನೇ ಮುಪ್ಪಿನಲ್ಲಿ ಪೋಷಿಸಲಿ ಸಾಕು. ಇನ್ನೊಬ್ಬನು ಸುಖವಾಗಿ ಸಂಸಾರ ಮಾಡಿಕೊಂಡಿರಲಿ' ಎಂದಾಗ ಅವರಿಬ್ಬರೂ ಸಮ್ಮತಿಸಿದರು. ಪರಸ್ಪರ ಒಮ್ಮತದನ್ವಯ, ಆ ಇಬ್ಬರೂ ತರುಣರು, ಅಂಗೀರಸ್ಸನಲ್ಲಿ ಅಧ್ಯಯನ ಕೈಕೊಂಡರು. ಆದರೆ ಬರಬರುತ್ತ ತನ್ನ ಚಿಕ್ಕಪ್ಪನು ಏನೋ ವೈಷಮ್ಯ ಬುದ್ಧಿಯಿಂದ, ಶುಕ್ರನ ವಿಷಯದಲ್ಲಿ ತಾರತಮ್ಯ ಮಾಡುತ್ತಿದ್ದನು. ಇದು ಶುಕ್ರನಿಗೆ ಸರಿಕಾಣದೆ, ಆಗಾಗ ವಿರೋಧಿಸುತ್ತಿದ್ದನು. ತಾನು ವೇದಾಧ್ಯಯನಕ್ಕಾಗಿ ಬೇರೊಬ್ಬ ಗುರುವಿನ ಬಳಿಗೆ ಹೋಗುವುದಾಗಿ ಖಂಡಿಸಿ ಮಾತನಾಡಿ ಅಲ್ಲಿಂದ ಹೊರಟುಬಿಟ್ಟ.

ತಂದೆಯನ್ನು, ತಾನು ಬೇರೊಬ್ಬ ಗುರುವಿನ ಬಳಿಯ ವಿದ್ಯಾಭ್ಯಾಸ ಮುಗಿಸಿದ ನಂತರವೇ ಕಾಣಬೇಕೆಂಬ ಛಲಹೊತ್ತು, ತಂದೆಯಿಂದ ಬೀಳ್ಕೊಂಡು ಮನೆಯಿಂದ ಹೊರಗೆ ಹೊರಟ ಶುಕ್ರ. ಈಗ ಅವನಿಗೆ ತನಗೆ ಗುರು ಯಾರು? ಎಂಬ ಸಮಸ್ಯೆ ಎದುರಾಗಿ, ವೃದ್ಧ ಗೌತಮನನ್ನು ಕಂಡು ತನಗೆ ಎದುರಾದ ಸಮಸ್ಯೆ ವಿವರಿಸಿದ. ಅವನ ಮಾತು ಕೇಳಿ ಗೌತಮನು ''ಪರಶಿವನಾದ ಶಂಕರನೇ ಜಗದ್ಗುರು. ಅವನನ್ನು ಆರಾಧಿಸಿ, ಅವನ ಅನುಗ್ರಹ ಸಂಪಾದಿಸು, ಸರ್ವವಿದ್ಯಾ ಪಾರಂಗತ ನೀನಾಗುವೆ'' ಎಂದು ಅಭಿಪ್ರಾಯಪಟ್ಟ. ಅವನ ಸಲಹೆಯು ಉಚಿತವೆನಿಸಿ, ಶುಕ್ರನು ಗೌತಮೀ ತೀರದಲ್ಲಿ ಮಿಂದು ಶುಚಿರ್ಭೂತನಾಗಿ, ಶಿವನ ಆರಾಧನೆಗೆ ತೊಡಗಿದ. ಅವನ ಅಚಲ ಭಕ್ತಿಗೆ ಒಲಿದು ಗಂಗಾಧರ ಸುಪ್ರಸನ್ನನಾಗಿ, ಅವನ ಅಭಿಲಾಷೆ ಈಡೇರುವಂತೆ ಸ್ವಯಂ ತಾನೇ ಅವನಿಗೆ ಸಂಜೀವಿನೀ (ಸತ್ತವರನ್ನು ಬದುಕಿಸುವ) ವಿದ್ಯೆಯಲ್ಲದೆ ಬೇರೆ ಲೌಕಿಕ, ವೈದಿಕ ವಿದ್ಯೆಗಳನ್ನು ಉಪದೇಶಿಸಿದ.

ವಿದ್ಯೆ ಸಂಪನ್ನನಾಗಿ, ಪ್ರತಿಭಾನ್ವಿತ ವ್ಯಕ್ತಿತ್ವ ರೂಪಿಸಿಕೊಂಡ ಶುಕ್ರ ಸಂತೃಪ್ತಿ ಭಾವದಿಂದ ತಂದೆಯನ್ನು ಕಂಡ. ಆಮೇಲೆ ಅವನು ದೈತ್ಯರಿಗೆ ಗುರುವಾದ.

ಮುಂದೆ, ಶುಕ್ರನು, ಬೃಹಸ್ಪತಿಯ ಮಗನಾದ ಕಚನಿಗೂ ಸಹ ಮೃತ ಸಂಜೀವಿನಿ ರಹಸ್ಯ ಉಪದೇಶಿಸಿದ. ಕಚನಿಂದ ಬೃಹಸ್ಪತಿಯೇ ಸಂಜೀವಿನಿ ವಿದ್ಯೆ ಕಲಿಯುವಂತಾಯಿತು. ಮುಂದೆ ದೇವತೆಗಳೂ ಸಹ ಬೃಹಸ್ಪತಿಯಿಂದ ಈ ರಹಸ್ಯ ಅರಿತರು. ಈ ರೀತಿ ಶುಕ್ರನು ಶಂಕರನ ಉಪದೇಶದಿಂದ ಸಂಜೀವಿನಿ ವಿದ್ಯೆ ಹೊಂದಿದ ಸ್ಥಳಕ್ಕೆ 'ಶುಕ್ರತೀರ್ಥ'ವೆಂದು ಹೆಸರಾಯಿತು. ಅದು ಗೌತಮೀನದಿಯ ಉತ್ತರದಲ್ಲಿದೆ. ಅಲ್ಲದೆ ಈ ತೀರ್ಥಕ್ಕೆ ''ಮೃತ ಸಂಜೀವಿನಿ ತೀರ್ಥ''ವೆಂದೂ ಕರೆಯುತ್ತಾರೆ. ಇದು ಪ್ರಪಂಚ ಪ್ರಸಿದ್ಧವಾಗಿದ್ದು, ಇದರಲ್ಲಿ ಸ್ನಾನಮಾಡಿದರೆ ಆಯುರಾರೋಗ್ಯಗಳು ವರ್ಧಿಸುವವಲ್ಲದೆ, ಎಂದೆಂದೂ ಕ್ಷಯಿಸದಂತಹ ಪುಣ್ಯ ಲಭಿಸುವದು.

## ಇಂದ್ರತೀರ್ಥ

**ಬ್ರಹ್ಮ:-** ಬಹುಕಾಲದ ಹಿಂದೆ, ವೃತ್ರಾಸುರನೆಂಬ ದುರುಳ ದೈತ್ಯನೊಬ್ಬನಿದ್ದ. ಅವನು ದೇವಾಸುರರಿಗೆ ಉಪಟಳ ನೀಡಿ, ಅವರಿಗೆ ತಲೆಬೇನೆಯನ್ನೆಬ್ಬಿಸಿದ್ದ. ಬರಬರುತ್ತ ಅವನ ಹಾವಳಿ ವಿಪರೀತವಾಗಿ, ಲೋಕದ ಜನರು ಸುಖಶಾಂತಿಯಿಂದ ಜೀವಿಸುವದೇ ದುಸ್ತರವಾಯಿತು. ಬಳಿಕ ದೇವಾಧಿದೇವನೇ ಅವನ "ಇತಿಶ್ರೀ" ಮಾಡಿ ಲೋಕದ ಜನರನ್ನು ಸಂರಕ್ಷಿಸಿದ.

ದೇವೇಂದ್ರನೇನೋ ವೃತ್ರಾಸುರನನ್ನು ಸಂಹರಿಸಿದ. ಆದರೆ ಆ ದೈತ್ಯನು ಬ್ರಾಹ್ಮಣನಾದುದರಿಂದ ಇಂದ್ರನು ಬ್ರಹ್ಮಹತ್ಯೆಯ ದುರಿತಕ್ಕೆ ಗುರಿಯಾಗಬೇಕಾಯಿತು. ಬ್ರಹ್ಮಹತ್ಯೆ ಎಂಬುದೇ ದೇವೇಂದ್ರನಿಗೆ ಬೆಂಬದಿಯ ಕರಿನೆರಳಾಗಿ ಅವನನ್ನು ಭಯಭೀತನನ್ನಾಗಿಸಿತು. ಈ ಭಯದಿಂದ ಮುಕ್ತನಾಗಲು ದೇವೇಂದ್ರ, ದೊಡ್ಡ ಸರೋವರದಲ್ಲಿ ಮುಳುಗಿ, ಅಲ್ಲಿರುವ ಪದ್ಮದ ನಾಳದಲ್ಲಿ ತಾನೊಂದು ತಂತುವಾಗಿ ಸೇರಿಕೊಂಡು ಕುಳಿತ. ಆದರೆ ಬ್ರಹ್ಮಹತ್ಯೆಯು ದೇವೇಂದ್ರನಿಗಾಗಿ ಆ ಸರೋವರದ ದಂಡೆಯಲ್ಲಿ ಕಾದು ಕುಳಿತಿತು.

ಹೀಗೆ ಸಾವಿರಾರು ವರ್ಷಗಳು ಉರುಳಿ ಹೋದವು. ಸ್ವರ್ಗಾಧಿಪತಿ-ದೇವೇಂದ್ರನ ಗತಿ ಹೀಗಿರುವಾಗ ಅವನ ಸಿರಿವೈಭವಪೂರಿತ ಸ್ವರ್ಗದ ಸೀಮೆ ಬಣಗುಡಹತ್ತಿತು. ದೇವಾಧಿದೇವತೆಗಳು ಚಿಂತಾತುರರಾದರು. ಆಗ ನಾನು (ಬ್ರಹ್ಮ) ದೇವತೆಗಳನ್ನು ಕುರಿತು- "ಬ್ರಹ್ಮಹತ್ಯೆಗೆ ಸ್ಥಾನ ಕಲ್ಪಿಸಿ, ಇಂದ್ರನು ಪರಿಶುದ್ಧನಾಗಲು ಗೌತಮೀನದಿಯಲ್ಲಿ ಸ್ನಾನ ಮಾಡಿಸಿ, ಅಭಿಷೇಕಮಾಡಿದರೆ ಅವನ ಬ್ರಹ್ಮಹತ್ಯಾದೋಷ ಕ್ಷಮಿಸುವದಾಗಿ" ಹೇಳಿದೆ.

ದೇವತೆಗಳು ನನ್ನ ಸಲಹೆಗೆ ಸಮ್ಮತಿಸಿ, ದೇವೇಂದ್ರನನ್ನು ಗೌತಮೀ ತೀರಕ್ಕೆ ಕರೆದೊಯ್ದು, ದೇವತೆಗಳೊಂದಿಗೆ ಋಷಿಗಳೂ ಕಲೆತು ಅಭಿಷೇಕಮಾಡಿಸಲು ಮುಂದಾದರು. ಇದೆಲ್ಲವನ್ನೂ ಗಮನಿಸಿದ ಗೌತಮ ಮುನಿಗೆ ಸರಿಬಾರದೇ ಕೋಪದಿಂದ ಕಿಡಿಕಿಡಿಯಾದ. ಅವರನ್ನೆಲ್ಲಾ ಉದ್ದೇಶಿಸಿ, "ಈ ದೇವೇಂದ್ರ ವಿಷಯ ಲಂಪಟ. ಗುರು ಪತ್ನಿಸಂಗಮದಿಂದ ಶೀಲ ಭ್ರಷ್ಟನಾಗಿದ್ದಾನೆ. ಇಂತಹ ಪಾಪಾತ್ಮನನ್ನು ಮೀಯಿಸಿ, ಪಾವನ ಗೌತಮಿಯನ್ನು ಕಲಂಕಗೊಳಿಸಬೇಡಿ. ತಕ್ಷಣ ಈ ಸ್ಥಳಬಿಟ್ಟು ಹೊರಡಿ. ಇಲ್ಲವಾದರೆ, ಎಲ್ಲರೂ ನಿಂತಲ್ಲಿಯೇ ಭಸ್ಮಭೂತರಾಗುವಿರಿ ಎಚ್ಚರ" ಎಂದ.

ಅವನ ಕೋಪಾವೇಶದ ನುಡಿಗಳಿಗೆ ದೇವತೆ, ಋಷಿಗಣವೆಲ್ಲ ಗಡಗಡ ನಡುಗಿ ತಡಮಾಡಿದೇ ಅವರು ಇಂದ್ರನೊಡನೆ ಗೌತಮೀ ತೀರ ಬಿಟ್ಟು, ನರ್ಮದಾ ನದಿಗೆ ಬಂದರು, ಅಲ್ಲಿ ಅವನಿಗೆ ಮಾಂಡವ್ಯ ಮುನಿಯೂ ಮುನಿಸು ತೋರಿದ. ಅವನೂ ಸಹ ಅವರಿಗೆ 'ಅಭಿಷೇಕ ಮಾಡಿಸಲು ಮುಂದಾದರೆ ನನ್ನ ಶಾಪದಿಂದ ಭಸ್ಮವಾಗುವದಾಗಿ ಹೇಳಿದ'.

ಇಂದ್ರನಿಗೆ ಅಭಿಷೇಕಮಾಡ ಹೊರಟ ದೇವತೆಗಳಿಗೆ ಒಂದಿಲ್ಲಾ ಒಂದು ವಿಘ್ನಗಳು ಎದುರಾಗುತ್ತಿರುವದಕ್ಕೆ ಅವರಿಗೆ ಉಪಾಯ ಕಾಣದೆ, ಮಾಂಡವ್ಯ ಮುನಿಯನ್ನೇ ಕೊನೆಗೆ ಬೇಡಿಕೊಂಡರು. ಅವನಿಗೆ ದೊಡ್ಡ ಮನಸ್ಸುಮಾಡಿ, ಅಭಿಷೇಕ ಕಾರ್ಯ ಪೂರೈಸುವಂತೆ ಸಹಕಾರ ನೀಡಬೇಕೆಂದ ಸರ್ವದೇವ, ಮುನಿಗಣ ಪ್ರಾರ್ಥಿಸಿಕೊಂಡಿತು. ಅಷ್ಟೇ ಅಲ್ಲ; ಮುನಿಯು ತೋರಿದ ಉದಾರ ಮನಸ್ಸಿಗಾಗಿ ಅಥವಾ ಧೋರಣೆಗೆ ಪ್ರತಿಯಾಗಿ ಅವರು ಸಹ- 'ಇದೋ, ಇಂದ್ರನಿಗೆ ಅಭಿಷೇಕವಾಗುವ ಈ ದೇಶದ ಪರಿಸರವೆಲ್ಲ ಕಡೆ ಧನಧಾನ್ಯ

ಸಮೃದ್ಧಿ, ಫಲ ಪುಷ್ಪ ಸಮೃದ್ಧಿ ದ್ವಿಗುಣವಾಗಲಿ. ಅನಾವೃಷ್ಟಿ ಇಲ್ಲಿ ಎಂದೆಂದೂ ನಾಮ ಮಾತ್ರಕ್ಕೂ ಇಣುಕಿ ನೋಡದಿರಲಿ.' ಎಂದು ವರಗಳನ್ನು ಅನುಗ್ರಹಿಸುತ್ತ ಹಾರೈಸಿದರು.

ಮಹಾತ್ಮ ಮಾಂಡವ್ಯಮುನಿ ಮೌನದಾಳಿದ. ಮುಂದೆ ನರ್ಮದಾ ತೀರದಲ್ಲಿ ದೇವತೆಗಳು ಇಂದ್ರನಿಗೆ ಅಭಿಷೇಕ ಮಾಡಿ, ಅವನ ಬ್ರಹ್ಮಹತ್ಯಾದೋಷ ಕಳೆದರು. ಹೀಗೆ ಇಂದ್ರನ ಮಲವು ನಾಶವಾದ ಕಾರಣದಿಂದ, ಆ ದೇಶವು 'ಮಾಲವ' ಎಂದು ಹೆಸರಾಯಿತು. ಅಭಿಷೇಕದಿಂದ ಇಂದ್ರನನ್ನು ಪರಿಶುದ್ಧಗೊಳಿಸಿ ನಂತರ ಪುನಃ ದೇವತೆಗಳು ಗೌತಮೀ ನದಿಯಲ್ಲಿ ಸ್ನಾನಮಾಡಿಸಿದರು. ದೇವತೆಗಳು, ಋಷಿಗಳಾದ ವಶಿಷ್ಠ, ಗೌತಮ, ಅಗಸ್ತ್ಯ, ಅತ್ರಿ, ಕಶ್ಯಪರಾದಿಯಾಗಿ ನಾನು (ಬ್ರಹ್ಮ) ವಿಷ್ಣು, ನಾಕಪುರುಷರು ಅಲ್ಲಿ ಸ್ನಾನ ಮಾಡಿ, ಇಂದ್ರನಿಗೆ ಅಭಿಷೇಕಮಾಡಿದೆವು. ನಂತರ ನಾನು ನನ್ನ ಕಮಂಡಲುವಿನ ಪಾವನ ಜಲವನ್ನು ತೆಗೆದು ಇಂದ್ರನಿಗೆ ಅಭಿಷೇಕ ಮಾಡಿದೆ. ಆ ನೀರಿನಿಂದ ಪುಣ್ಯಾ, ಸಿತ್ತಾ ಎಂಬ ಎರಡು ನದಿಗಳು ಉಗಮಿಸಿ ಹರಿದವು. ಮುಂದೆ ಅವು ಗೌತಮೀ ನದಿಯನ್ನು ಸೇರಿದವು. ಸಿತ್ತಾ ನದಿಯ ತೀರ್ಥಕ್ಕೆ ಇಂದ್ರತೀರ್ಥವೆಂದೂ ಹೆಸರು. ಅಲ್ಲಿಯೇ ಪುಣ್ಯಾ ಸಂಗಮವೆಂಬ ಇನ್ನೊಂದು ತೀರ್ಥವೂ ಉದ್ಭವಗೊಂಡಿತು. ಮುನಿಗಳು ಇದರಲ್ಲಿ ಮಿಂದು ಪರಮಪಾವನ ರಾಗುತ್ತಾರೆ. ಪುಣ್ಯಾಕಾಂಕ್ಷಿಗಳಾದ ಭಾವುಕರನೇಕರು ಪರ್ವಕಾಲಗಳಲ್ಲಿ ಇದರಲ್ಲಿ ಸ್ನಾನ, ದಾನ, ದಕ್ಷಿಣೆ, ಪಿತೃಶ್ರಾದ್ಧಗಳನ್ನು ನೆರವೇರಿಸಿ ಪರಮ ಧನ್ಯತೆ ಪಡೆಯುತ್ತಾರೆ. ಸಂಗಮದಲ್ಲಿರುವ ಆ ತೀರ್ಥಗಳಲ್ಲಿ ಸ್ನಾನ, ದಾನ ಮಾಡಿದರೆ ಅಕ್ಷಯ ಪುಣ್ಯಪ್ರಾಪ್ತಿ.

## ಪೌಲಸ್ತ್ಯತೀರ್ಥ ಮಹಿಮಾ ವರ್ಣನೆ

**ಬ್ರಹ್ಮ:-** ನಾರದನೇ, ಮಾನವರಿಗೆ ಸಕಲ ಸಿದ್ಧಿಯನ್ನುಂಟು ಮಾಡುವ ಹಾಗೂ ಕಳೆದ ರಾಜ್ಯವನ್ನು ಸಹ ಮರಳಿ ದೊರಕುವಂತೆ ಮಾಡಬಲ್ಲ ತೀರ್ಥವೊಂದು ಅಪೂರ್ವವೆನಿಸಿದ್ದು ಅದುವೇ-ಪೌಲಸ್ತ್ಯತೀರ್ಥ. ಅದರ ಗುಣವಿಶೇಷವನ್ನು ವಿವರಿಸುವೆ, ಕೇಳು.

ಉತ್ತರ ದಿಕ್ಕಿನಲ್ಲಿರುವ ಕುಬೇರನು ಸಂಪತ್ತಿನ ಒಡೆಯ. ಅವನಿಗೆ ರಾವಣ. ಕುಂಭಕರ್ಣ, ವಿಭೀಷಣರೆಂದು ಮೂರು ಜನ ಸೋದರರು. ಅವರೆಲ್ಲ ತೇಜಸ್ವಿಗಳೂ, ಬಲಿಷ್ಠರೂ ಆಗಿದ್ದರು. ವಿಶ್ರವಸಬ್ರಹ್ಮನಿಗೆ ರಾಕ್ಷಸ ಮಡದಿಯಲ್ಲಿ ರಾವಣ, ಕುಂಭಕರ್ಣಾದಿಗಳು ಜನಿಸಿದ್ದರು. ಲಂಕೆಯನ್ನಾಳುತ್ತಿದ್ದ ಕುಬೇರ. ನಾನು ಹರಿಸಿಕೊಟ್ಟ ಪುಷ್ಪಕ ವಿಮಾನದಲ್ಲಿ ನಾಲ್ವರೂ ಸೋದರರು ಬಂದು ಭಕ್ತಿಯಿಂದ ನಮಸ್ಕರಿಸಿ, ಹಿಂತಿರುಗುವದು ನಿತ್ಯ ಕಾಯಕವಾಗಿತ್ತು. ದೇವತೆ, ರಾಕ್ಷಸರು ಜನ್ಮತಃ ವೈರಿಗಳು, ಹೀಗಿದ್ದೂ, ಇವರ ಪರಸ್ಪರ ಭ್ರಾತೃತ್ವ ಪ್ರೀತಿ ಕಂಡು, ರಾವಣನ ತಾಯಿ ಮತ್ಸರಪಟ್ಟಳು. ಮಾತಿನ ಸಂದರ್ಭದಲ್ಲಿ ರಾವಣನನ್ನೇ ಕೆಣಕಿದಳು. ಇದರಿಂದ ರಾವಣ, ಕುಂಭಕರ್ಣ, ವಿಭೀಷಣರು ತಾಯಿಯ ಮಾತಿನಂತೆ ಅರಣ್ಯಕ್ಕೆ ಹೋಗಿ ತಪವನ್ನಾಚರಿಸಿದರು. ನನ್ನಿಂದ ಅನೇಕ ವರಗಳನ್ನು ಪಡೆದು ಜಯಶಾಲಿಗಳಾದರು. ಅಲ್ಲದೆ ಸೋದರ ಮಾವ ಮಾರೀಚ, ತಾಯಿತಂದೆ ಮಾಲ್ಯವಂತರ ಮಾತಿನಂತೆ ಲಂಕೆಯ ಆಧಿಪತ್ಯ ಪಡೆದರು.

ರಾಕ್ಷಸ ಸ್ವಭಾವದವಳ ಉದರದಲ್ಲಿ ಜನಿಸಿದವರಾದ ಆ ಮೂವರಿಗೆ ಅಣ್ಣನಾದ ಕುಬೇರನಲ್ಲಿ ದ್ವೇಷಾಸೂಯೆ ಬೆಳೆದವು. ಕೊನೆಗೆ ಸೋದರರಲ್ಲಿಯೇ ಯುದ್ಧವೂ ಆಯಿತು. ನ್ಯಾಯ, ನೀತಿಪರನೂ, ಶಾಂತ ಸ್ವಭಾವದವನೂ ಆದ ಕುಬೇರನಿಂದ ರಾವಣನು

ಪುಷ್ಪಕವಿಮಾನ, ಲಂಕೆಯ ಅಧಿಪತ್ಯ, ಐಶ್ವರ್ಯಗಳೆಲ್ಲವನ್ನು ಗೆದ್ದುಕೊಂಡನು. ಅಷ್ಟೇ ಅಲ್ಲ. ಮತ್ತಾವ ಕ್ಷತ್ರಿಯನೂ ಕುಬೇರನಿಗೆ ಆಶ್ರಯ, ಸಹಕಾರ ನೀಡಕೂಡದು. ಒಂದು ವೇಳೆ ಹಾಗಾದಲ್ಲಿ ಅವರನ್ನು ಸಂಹರಿಸುವದಾಗಿ ಬಹಿರಂಗವಾಗಿ ಡಂಗುರ ಸಾರಿಸಿದನು.

ಕುಬೇರನು, ತಮ್ಮನಿಂದ ಪರಾಜಿತನಾಗಿ, ವಂಚಿತನಾಗಿ, ಎಲ್ಲಿಯೂ ಆಶ್ರಯ ದೊರೆಯದೇ ಅಜ್ಜನಾದ ಪುಲಸ್ತ್ಯನ ಬಳಿಗೆ ಹೋಗಿ, 'ಅಜ್ಜಾ ಈಗ ಹೇಳು, ನಾನು ಯಾವ ದೇವನನ್ನಾಶ್ರಯಿಸಿದರೆ ನನಗೆ ರಕ್ಷಣೆ ದೊರೆಯುವದು? ಯಾವ ತೀರ್ಥದಲ್ಲಿ ಮಿಂದರೆ ನನಗೆ ಮೊದಲಿನ ರಾಜ್ಯ, ಆಧಿಪತ್ಯ ಪುನಃ ದೊರೆಯುವದು?' ಎಂದು ಪ್ರಶ್ನಿಸಿದ ನಿರಾಶನಾಗಿ.

ಅವನ ಮಾತು ಕೇಳಿ ಪುಲಸ್ತ್ಯನು ಮೊಮ್ಮಗನಿಗೆ ಗೌತಮೀನದಿಯಲ್ಲಿ ಮೀಯಲು ಉಪದೇಶಿಸಿ, 'ನಿನಗೆ ಖಂಡಿತ ರಾಜ್ಯದೊರಕುವದು. ಚಿಂತಿಸಬೇಡ. ನಡೆ ನಾವೂ ಬರುವೆವು.' ಎಂದು ಸಂತೈಯಿಸಿ, ಧೈರ್ಯ ತುಂಬಿದ. ಕುಬೇರನು, ತನ್ನ ಹೆಂಡತಿ, ಮಕ್ಕಳು, ತಂದೆ, ತಾಯಿ, ಅಜ್ಜನೊಡನೆ ಗೌತಮೀ ತೀರಕ್ಕೆ ನಡೆದ. ಅಲ್ಲಿ ಅವರೆಲ್ಲರೂ ಮಿಂದು, ಪರಿಶುದ್ಧ ನಿಯಮ, ಸಂಯಮಗಳಿಂದ, ಶಿವನನ್ನು ಶ್ರದ್ಧೆಯಿಂದ ಆರಾಧಿಸಿದರು.

ಅವರ ನಿರಂತರ ಆರಾಧನೆ, ಧ್ಯಾನಗಳಿಂದ ಗಂಗಾಧರ ಸುಪ್ರೀತವಾಗಿ, ಕುಬೇರನ ಎದುರು ಪ್ರತ್ಯಕ್ಷನಾಗಿ ಅಭಯ ಹಸ್ತತೋರಿ, ಕೇಳಿದ 'ನಿಮಗೇನು ವರಬೇಕು? ಕರುಣಿಸುವೆ' ಅವರೆಲ್ಲರೂ ಸಂತೋಷಾತಿರೇಕದಿಂದ ಮೂಕರಂತೆ ನಿಂತುಬಿಟ್ಟರು. ಮತ್ತೆ ಶಿವ ಪ್ರಶ್ನಿಸಿದ. 'ನಿಮಗೇನು ವರಬೇಕೆಂಬುವದನ್ನು ಕೇಳಿ, ಅನುಗ್ರಹಿಸುವೆ'. ಮತ್ತೆ ಅವರು ಮೌನ. ಈ ಸಮಯದಲ್ಲಿ ಕುಬೇರನು ಧನಪತಿ ಆಗಬೇಕೆಂಬುದನ್ನು ಸೂಚಿಸುವಂತಹ ಆಕಾಶವಾಣಿ ಕೇಳಿ ಬಂತು. ಪುಲಸ್ತ್ಯ ಮತ್ತು ವೈಶ್ರವಣರ ಮನೋಭಿಪ್ರಾಯವನ್ನು ತಿಳಿದಂತೆ ಅವರ ಇಷ್ಟದಂತೆ ಆಕಾಶವಾಣಿ ನುಡಿಯಿತು. ಮುಂದೆ ನಡೆಯುವದನ್ನು ಹಿಂದೆ ನಡೆದ ಹಾಗೆ, ಮುಂದೆ ಶಿವನು ಕೊಡಬೇಕಾಗಿರುವದನ್ನು ಕೊಟ್ಟ ಹಾಗೆಯೇ, ಅಲ್ಲದೆ ಕುಬೇರನು ಮುಂದೆ ಪಡೆಯಬೇಕಾಗಿರುವದನ್ನು ಈ ಮೊದಲೇ ಪಡೆದಂತೆ ಆಕಾಶವಾಣಿ ನುಡಿಯಿತು-

'ವೈರಿಯಿಂದ ಕುಬೇರನ ಸಾಮ್ರಾಜ್ಯವೆಲ್ಲ ಅಪಹರಿಸಲ್ಪಟ್ಟು ನಾಮಾವಶೇಷವಾಯಿತು. ಆಗ ಅವನು ಚಂದ್ರಶೇಖರನನ್ನು ಪೂಜಿಸಿ, ಅವನ ಅನುಗ್ರಹದಿಂದ ದಿಕ್ಪಾಲಕನಾದನು; ಧನಪತಿ ಎನಿಸಿ ಸೌಖ್ಯ ಪಡೆದನು.'

ಇಂತಹ ಆಕಾಶವಾಣಿಯನ್ನು ಆಲಿಸಿದ ಕುಬೇರನು 'ಅಶರೀರವಾಣಿಯು ಹೇಳಿದ ರೀತಿಯಲ್ಲಿಯೇ ನನಗೆ ವರನೀಡಿ ಅನುಗ್ರಹಿಸು' ಎಂದು ಪ್ರಾರ್ಥಿಸಿದನು. ಆಗ ಗೌರೀಶನು ಅವನ ಅಭಿಲಾಷೆಯಂತೆ ಅನೇಕ ವರಗಳನ್ನು ದಯಪಾಲಿಸಿದ. ಪುಲಸ್ತ್ಯ ಬ್ರಹ್ಮ ವೈಶ್ರವಣರನ್ನೂ ಸಹ ವರಗಳಿಂದ ಅಭಿನಂದಿಸಿ ಶಿವನು ಅಂತರ್ಧಾನನಾದ. ಅಂದಿನಿಂದ ಗೌತಮೀ ತೀರಪ್ರದೇಶದಲ್ಲಿ 'ಧನದ', 'ವೈಶ್ರವಸ' ಎಂಬ ಎರಡು ತೀರ್ಥಗಳು ಉಂಟಾದವು. ಈ ತೀರ್ಥದಲ್ಲಿ ಸ್ನಾನ, ದಾನ ಮಾಡಿದರೆ, ಲೌಕಿಕರಿಗೆ ಅಮೌಲ್ಯ ಪುಣ್ಯ ಫಲ ಪ್ರಾಪ್ತಿ ಹಾಗೂ ಸಕಲ ಇಷ್ಟಾರ್ಥ ಸಿದ್ಧಿ.

## ಅಗ್ನಿತೀರ್ಥ

**ಬ್ರಹ್ಮ:-** ಅಪೂರ್ವ ತೇಜೋಮಯನಾದ ಅಗ್ನಿಗೆ ಜಾತವೇದನೆಂದು ಸಹೋದರ ಒಬ್ಬನಿದ್ದ. ಆ ಜಾತವೇದನು ಒಂದು ದಿನ ಗೌತಮೀತೀರದಲ್ಲಿ ಜರುಗುತ್ತಿದ್ದ ಋಷಿಗಳ

ಯಜ್ಞದಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸಿ ದೇವತೆಗಳಿಗೆ ಒಯ್ಯುತ್ತಿದ್ದನು. ಅಗ್ನಿಗೆ ಜಾತವೇದನೆಂದರೆ ಎಲ್ಲಿಲ್ಲದ ಅಭಿಮಾನ, ಎಲ್ಲೆ ಇಲ್ಲದ ಪ್ರೀತಿ, ಪ್ರೇಮ. ಆದರೆ ದಿತಿಯ ಮಗನಾದ ಕೈಟಭನೆಂಬ ದೈತ್ಯನು ಕೋಪಾವೇಶದಲ್ಲಿ ಜಾತವೇದನ ಕೊಲೆಗೈದ. ಇದರಿಂದಾಗಿ ದೇವತೆಗಳಿಗೆ ಸಂದಾಯವಾಗತಕ್ಕ ಹವಿರ್ಭಾಗಗಳು ತಲುಪಲೇ ಇಲ್ಲ.

ಪ್ರೀತಿಯ ಸೋದರ ಜಾತವೇದನ ಮರಣದಿಂದ ಕೋಪದಲ್ಲಿ ಉದ್ವಿಗ್ನನಾಗಿ ಅಗ್ನಿಯು ಗಂಗೆಯ ಪ್ರವಾಹವನ್ನು ಪ್ರವೇಶಿಸಿದನು. ಇದರಿಂದಾಗಿ, ದೇವತೆಗಳೂ, ಮನುಷ್ಯರೂ ಜೀವಿಸಲಸಮರ್ಥರಾದರು. ಕಾರಣವೇನೆಂದರೆ ಅಗ್ನಿಯಿಂದಲೇ ಲೋಕದ ಬದುಕು. ಅಗ್ನಿ ಇಲ್ಲದೇ ಬದುಕುವದೇ ಅಸಾಧ್ಯವೆಂದೆನಿಸಿ ದೇವತೆಗಳು, ಪಿತೃ ದೇವತೆಗಳು, ಋಷಿಗಳು ಅಗ್ನಿ ಜಲಪ್ರವೇಶಗೈದ ಪ್ರದೇಶಕ್ಕೆ ಬಂದರು. ಅಗ್ನಿಯನ್ನು ಕುರಿತು, ''ಓ ಅಗ್ನಿ ನಾರಾಯಣಾ, ಹವಿರ್ಭಾಗದಿಂದ ಸಕಲ ದೇವತೆಗಳನ್ನು ಬದುಕಿಸು, ಕರ್ತವ್ಯದಿಂದ ಪಿತೃಗಳನ್ನು ಬದುಕಿಸು. ಅನ್ನಪಾಕ ಬೀಜಪಾಕದಿಂದ ಮನುಷ್ಯ, ಪ್ರಾಣಿ ಪಕ್ಷಿಗಳನ್ನು ರಕ್ಷಿಸು, ಸಲಹು' ಎಂದು ಪ್ರಾರ್ಥಿಸಿದರು.

ಅವರ ಪ್ರಾರ್ಥನೆಗೆ ಅಗ್ನಿಯು ಪ್ರತ್ಯಕ್ಷನಾಗಿ 'ಹವಿರ್ಭಾಗ ಒದಗಿಸಬಲ್ಲ ಜಾತವೇದನೇ ಮೃತನಾಗಿದ್ದು, ಅವನ ಕಾರ್ಯ ನಾನು ಮಾಡಲು ಸಾಧ್ಯವಿಲ್ಲ. ಅವನಿಗಿದ್ದ ಶಕ್ತಿ ಸಾಮರ್ಥ್ಯ ನನಗಿಲ್ಲ' ಎಂದು ನುಡಿದ. ಮನಸ್ಸಿನಲ್ಲಿ ಮಿಡುಕಿದ. ಅಗ್ನಿಯ ಅಂತರಿಕ ವೇದನೆಯನ್ನು ಚೆನ್ನಾಗಿ ಅರಿತ ದೇವತೆಗಳೆಲ್ಲರೂ, 'ಅಗ್ನಿಯೇ ನಿನಗೆ ದೀರ್ಘಾ ಯುಷ್ಯವನ್ನೂ ಕರ್ಮಪ್ರೀತಿಯನ್ನೂ ಇಹಪರಗಳಲ್ಲಿ ವ್ಯಾಪಿಸುವ ಸಾಮರ್ಥ್ಯವನ್ನು ಕರುಣಿಸುವೆವು. ಅಲ್ಲದೆ, ಹೋಮ ಹವನಗಳಲ್ಲಿ ಕೊಡುವ ಹವಿರ್ಭಾಗದ ಮೊದಲನೇಯ ಆಹುತಿ ನಿನಗೆ ಸಲ್ಲಲಿ' ಎಂದು ನುಡಿದನು.

ಅವರ ಮಾತಿಗೆ ಅಗ್ನಿ ಸಂತುಷ್ಟನಾದ. ಅವರೆಲ್ಲರ ಅನುಗ್ರಹದಿಂದ ಅಗ್ನಿಯು ಇಹಪರಗಳಲ್ಲಿ ತನ್ನ ಸಾಮರ್ಥ್ಯ ಹೆಚ್ಚಿಸಿಕೊಂಡನು. ಅಂದಿನಿಂದ ಅಗ್ನಿಗೆ 'ಜಾತವೇದ', 'ಬೃಹದ್ಭಾನು', 'ಸಪ್ತಾರ್ಚಿ', 'ನೀಲಲೋಹಿತ' ಎಂಬ ಹಲವಾರು ಹೆಸರುಗಳು ನಾಮಕರಣ ಗೊಂಡು ಲೋಕಖ್ಯಾತವಾದವು. ದೇವತೆಗಳು ಅಗ್ನಿಯನ್ನು ಜಲದಿಂದ ಮೇಲಕ್ಕೆ ಕರೆದುಕೊಂಡು ಬಂದರು; ಗೌತಮೀನದಿಯಲ್ಲಿ ಅವನನ್ನು ಅಭಿಷೇಕ ಮಾಡಿದರು. ಅದಕ್ಕೆಂದೇ ಅವನಿಗೆ 'ಜಲಗರ್ಭ'ನೆಂಬ ಮತ್ತೊಂದು ಹೆಸರೂ ಬಂದಿದೆ. ನಂತರ ದೇವತೆಗಳು ತಮ್ಮ ಲೋಕಕ್ಕೆ ಹೊರಟುಹೋದರು.

ಈ ರೀತಿಯಲ್ಲಿ ಅಗ್ನಿಗೆ ಅಭಿಷೇಕಮಾಡಿದ ಗೌತಮೀ ತೀರಕ್ಕೆ ''ಅಗ್ನಿತೀರ್ಥ''ವೆಂದು ಹೆಸರು. ಮುಂದೆ ಆ ತೀರ್ಥದಲ್ಲಿ ಏಳುನೂರು ಪುಣ್ಯತೀರ್ಥಗಳು ಉಗಮಗೊಂಡು ವಿಶ್ವವಿಖ್ಯಾತಿ ಪಡೆದಿವೆ. ಈ ತೀರ್ಥಗಳಲ್ಲಿ ಸ್ನಾನ, ದಾನಗಳನ್ನು ಮಾಡಿದರೆ ಅಶ್ವಮೇಧಯಾಗದ ಸಂಪೂರ್ಣ ಫಲ ದೊರಕುವದು. ಸರ್ವಮಂಗಳ ಉಂಟಾಗುವದರಲ್ಲಿ ಸಂದೇಹವಿಲ್ಲ.

## ಋಣಮೋಚನತೀರ್ಥ

**ಬ್ರಹ್ಮ:**- ನಾರದ ಮುನಿಯೇ, ಈಗ ನಾನು ''ಋಣ ಪ್ರಮೋಚನ''ವೆಂಬ ತೀರ್ಥದ ಗುಣ ಗಣಕಥೆ ನಿರೂಪಣೆ ಮಾಡುವೆ. ಚಿತ್ತವಿಟ್ಟು ಕೇಳು.

ಈ ಹಿಂದೆ, ಕಕ್ಷೀವಾಸ ಎಂಬುವನಿಗೆ ಪೃಥುಶ್ರವನೆಂಬ ಮಗನಿದ್ದ. ಅವನು, ವೈರಾಗ್ಯ ಭಾವ ಉದಿಸಿದ ಮೂಲಕ ಮದುವೆಯನ್ನೇ ಮಾಡಿಕೊಳ್ಳದೆ, ಅಗ್ನಿಸೇವೆಯನ್ನು ಕೈಗೊಳ್ಳಲಿಲ್ಲ. ಅವನ ಕಿರಿಯ ಸೋದರನೂ ಸಹ ಅವನನ್ನೇ ಅನುಸರಿಸಿದ. ಕೊನೆಗೆ ಅವರ ಪಿತೃಗಳು ಅವರಿಗೆ "ಮನುಷ್ಯ ಹುಟ್ಟಿನಿಂದ ಸಾಯುವವರೆಗೂ ಮೂರು ಋಣಗಳನ್ನು ಹೊತ್ತಿರಬೇಕಾಗುತ್ತದೆ. ಜೀವಿತ ಕಾಲದಲ್ಲಿ ಆ ಋಣದಿಂದ ಮುಕ್ತನಾದಾಗ ಅವನಿಗೆ ಮುಕ್ತಿ ಲಭಿಸುತ್ತದೆ."

ಆ ಸೋದರರು ಪಿತೃಗಳ ಮಾತು ಕೇಳಿ, ಅಜ್ಞಾನವಶವರ್ತಿಗಳಾಗಿ ಅದಕ್ಕೆ ಸಮ್ಮತಿಸಲಿಲ್ಲ. ಮತ್ತೆ ಪಿತೃಗಳು ನುಡಿದರು ; ಕಳಕಳಿಯಿಂದ : "ಎಲೈ ಕುಮಾರರೇ, ನೀವಿಬ್ಬರೂ ಗೌತಮೀ ನದಿಗೆ ಹೋಗಿ, ಸ್ನಾನ ಮಾಡಿ, ತರ್ಪಣ ನೀಡಿದರೆ, ನಿಮ್ಮ ಆ ಮೂರು ಋಣಗಳು ನೀಗುತ್ತವೆ. ಅವರ ಮಾತಿನ ಮರ್ಮವನ್ನು ಅರಿತು ಅವರಿಬ್ಬರೂ ಅದರಂತೆ ಗೌತಮಿಯಲ್ಲಿ ತರ್ಪಣ ಕೊಟ್ಟು ತಮ್ಮ ಮೂರು ಋಣ (ಪಿತೃಋಣ, ದೇವಋಣ, ಋಷಿಋಣ)ಗಳಿಂದ ಮುಕ್ತ ರಾದರು. ಅಂದಿನಿಂದ ಈ ತೀರ್ಥಕ್ಕೆ "ಋಣ ವಿಮೋಚನ ತೀರ್ಥ"ವೆಂದು ಹೆಸರಾಯಿತು. ಈ ತೀರ್ಥದಲ್ಲಿ ಮಿಂದು, ಪಿತೃತರ್ಪಣ ನೀಡಿದರೆ ಅವನ ಇನ್ನುಳಿದ ಲೌಕಿಕ ಋಣಗಳೂ ತೀರಿ, ಅವನಿಗೆ ಇಹದಲ್ಲಿ ಸುಖ, ಪರದಲ್ಲಿ ಶಾಶ್ವತ ಆನಂದಗಳು ದೊರೆಯುತ್ತವೆ.

ಕೃಷ್ಣಯಜುರ್ವೇದ (ತೈ.ಸಂ.) ಆರನೆಯ ಕಾಂಡದಲ್ಲಿಯ ಮೂರನೆಯ ಅಧ್ಯಾಯದಲ್ಲಿ ನಿರೂಪಿಸಿದಂತೆ-ಬ್ರಾಹ್ಮಣನಾದವನು (ಇದು ಇನ್ನಿತರ ವರ್ಣದವರಿಗೂ ಅನ್ವಯಿಸುವದು) ಹುಟ್ಟಿನೊಡನೆ ಮೂರು ಪ್ರಕಾರದ ಋಣ (ಸಾಲ) ಹೊತ್ತುಕೊಂಡು ಹುಟ್ಟಿರುತ್ತಾನೆ. ಋಣಗಳು ಮುಖ್ಯವಾಗಿ ಮೂರು, ಪಿತೃಋಣ, ದೇವಋಣ, ಋಷಿಋಣ ಗಳೆಂದು; ಬ್ರಹ್ಮಚರ್ಯ ಪಾಲನೆ ಮಾಡುತ್ತ ವೇದಾಧ್ಯಯನದಲ್ಲಿರುವಾಗ ಋಷಿಋಣ ತೀರುತ್ತದೆ. ಅದರಂತೆ ಯಜ್ಞಯಾಗಾದಿಗಳನ್ನು ನೆರವೇರಿಸಿದಾಗ ದೇವಋಣ ಭಾರ ಕಡಿಮೆ ಯಾಗುತ್ತದೆ. ಅಗ್ನಿಸಾಕ್ಷಿಯಾಗಿ ವಿವಾಹಿತನಾಗಿ ಸಂಸಾರ ಮಾಡಿ, ಸಂತಾನ ಹೊಂದಿದರೆ ಅವನು ಪಿತೃಋಣದಿಂದ ಮುಕ್ತ. ಈ ಗೌತಮೀ ನದಿಯಲ್ಲಿ ಸ್ನಾನಗೈದು ತರ್ಪಣನೀಡಿದರೆ ಪಿತೃಋಣದಿಂದ ದೇವಋಣದಿಂದ ಋಷಿಋಣದಿಂದಲೂ ಮುಕ್ತಿ ಲಭಿಸುವದು.

ಆದುದರಿಂದಲೇ ನಮ್ಮ ಸನಾತನ ಹಿಂದೂಧರ್ಮವು ಇದಕ್ಕನುಗುಣವಾಗಿಯೇ, ಬ್ರಾಹ್ಮಣನು ಉಪನಯನದ ನಂತರ ವೇದಾಧ್ಯಯನ, ಗುರುಸೇವೆಗೆ ಪ್ರಾಶಸ್ತ್ಯನೀಡಿದೆ. ಗೃಹಸ್ಥಾಶ್ರಮಿಗೆ ಯಜ್ಞಾದಿಗಳಿಂದ ದೇವತಾರಾಧನೆಗೆ ಅವಕಾಶವಿತ್ತು. ದೇವಋಣದಿಂದ ಅವನನ್ನು ಮುಕ್ತಮಾಡುತ್ತದೆ. ಅಲ್ಲದೆ ತನ್ನ ಪತ್ನಿಯಲ್ಲಿ ಸಂತಾನ ಭಾಗ್ಯ ಹೊಂದಿದಾಗ, ಪಿತೃಋಣವು ತೀರಿದಂತಾಗುತ್ತದೆ. ಹಿಂದೂ ಸನಾತನ ಪರಂಪರೆಯನ್ವಯ- ನಂತರದ ಜೀವಿತದ ಕಾಲಾವಧಿಯಲ್ಲಿ ವಾನಪ್ರಸ್ಥ ಮತ್ತು ತುರೀಯಾಶ್ರಮಗಳ ವ್ಯವಸ್ಥೆಯಿದ್ದು, ಆದರಿಂದ ಮೋಕ್ಷಪ್ರಾಪ್ತಿಗೆ ಸುಲಭವಾದ ಸುಗಮದಾರಿ ಎನಿಸಿದೆ. ಆದುದರಿಂದ, ಲೌಕಿಕರು ಆಯಾ ಆಶ್ರಮಕ್ಕೆ ಅನುಗುಣವಾಗಿ ಋಣದಿಂದ ಮುಕ್ತರಾಗಬೇಕೆಂಬುದು ಶಾಸ್ತ್ರವಿಧಿನಿಯಮವಾಗಿದೆ.

## ಕದ್ರೂ, ಸುಪರ್ಣಾ ಸಂಗಮತೀರ್ಥ

**ಬ್ರಹ್ಮ**:- ಇದೀಗ ನಾನು ಹೇಳಿದ ಗೌತಮೀತೀರದಲ್ಲಿ, ಸುಪರ್ಣಾ ಸಂಗಮ ಹಾಗೂ ಕಾದ್ರಾವಾ ಸಂಗಮಗಳೆಂದು ಎರಡು ತೀರ್ಥಗಳಿವೆ. ಇವುಗಳಲ್ಲಿ ಎಂಟು ಪವಿತ್ರ

ಕುಂಡಗಳಿದ್ದು, ಆ ತೀರ್ಥದ ತೀರದಲ್ಲಿ ಮಹಾದೇವನ ಆವಾಸಸ್ಥಾನವಿದೆ. ಇದರಿಂದಾಗಿ ಹೆಚ್ಚಿನ ಪ್ರಾಶಸ್ತ್ಯ ಬಂದಿದೆ. ಹಿಂದೊಮ್ಮೆ ತಪಸ್ವಿ ವಾಲಖಿಲ್ಯರನ್ನು ಇಂದ್ರನು ಪೀಡಿಸಿ, ಹಿಂಸಿಸಿದನು. ಇದರಿಂದ ಕುಪಿತರಾದ ತಪಸ್ವಿಗಳು ಒಂದು ಉಪಾಯ ಮಾಡಿದರು, ಇಂದ್ರನ ಗರ್ವಹರಣಕ್ಕೆ. ನೇರವಾಗಿ ಕಾಶ್ಯಪಮುನಿಗಳನ್ನು ಭೇಟಿಯಾಗಿ, ತಮ್ಮ ಸ್ಥಿತಿಯನ್ನು ವಿವರಿಸಿ, ಇಂದ್ರನ ಗರ್ವ ಮುರಿದು ಮಣ್ಣು ಮುಕ್ಕಿಸುವಂತಹ ಬಲಶಾಲಿ ಮಗನನ್ನು ಹಡೆಯಲು ಸೂಚಿಸಿ, ತಮ್ಮ ತಪಃಶಕ್ತಿಯ ಅರ್ಧದಾನ ನೀಡಿದರು.

ಅವರ ಮಾತಿಗೆ ಸಮ್ಮತಿಸಿದ ಆ ಕಶ್ಯಪಮುನಿ. ಮುಂದೆ ತಮ್ಮ ಶಕ್ತಿಬಲದಿಂದ ಸುಪರ್ಣಾದೇವಿಯಲ್ಲಿಯೂ, ಸರ್ಪಮಾತೃವೆನಿಸಿದ ಕದ್ರೂವಿನಲ್ಲಿಯೂ ಸಂತಾನೋತ್ಪತ್ತಿ ಮಾಡಿದನು. ಎಲ್ಲಿಯೋ ಪ್ರಯಾಣಕ್ಕೆ ಹೊರಟ ಕಶ್ಯಪನು ಇಬ್ಬರೂ ಹೆಂಡಂದಿರನ್ನೂ ಕರೆದು ''ನೀವು ಯಾವ ಅಪರಾಧ ಮಾಡಬಾರದು. ಬೇರೆಲ್ಲಿಯೂ ಹೋಗದೇ ಮನೆಯಲ್ಲಿಯೇ ಇರಬೇಕು. ಇಲ್ಲದೆ ಹೋದರೆ ನೀವು ಶಾಪಕ್ಕೆ ಗುರಿಯಾಗುವಿರಿ'' ಎಂದು ಎಚ್ಚರಿಕೆ ನೀಡಿ ಹೊರಟು ಹೋದನು.

ಆ ಸಮಯಕ್ಕೆ ಗಂಗಾತೀರದಲ್ಲಿ ಯಜ್ಞ ಒಂದು ನಡೆದಿದೆ ಎಂದು ಸಮಾಚಾರ ಕೇಳಿ, ಗರ್ಭಿಣಿಯರಿಬ್ಬರೂ, ಸಮಾರಂಭ ನೋಡಲು ಹೋದರು. ಆದರೆ ಯೌವನ ಮದದಿಂದ, ಯಜ್ಞದ ಪದಾರ್ಥಗಳನ್ನೆಲ್ಲ ಅಪವಿತ್ರಗೊಳಿಸಿದರು. ಮುನಿಗಳ ಎಚ್ಚರ ನೀಡಿದರೂ, ಆ ಸಮಯದಲ್ಲಿ ಅವರು ಕೇಳಿ ಅದರಂತೆ ವರ್ತಿಸಲಿಲ್ಲ. ಅಲ್ಲಿರುವ ಋಷಿಗಳು ಇವರ ಸ್ವೈರ ವರ್ತನೆಯಿಂದ ಕೋಪಗೊಂಡು ಅವರಿಗೆ ''ನೀಚ ಮಾರ್ಗದಲ್ಲಿ ವರ್ತಿಸಿದ ಕಾರಣ, ನೀವು ಕೆಳಗೆ ಹರಿಯುವ ನದಿಗಳಾಗಿರಿ'' ಎಂದು ಶಾಪವಿತ್ತರು. ಆಗ ಕದ್ರುವಿನತೆಯರು ನದಿಗಳಾಗಿ ಮಾರ್ಪಟ್ಟು ಹರಿಯಹತ್ತಿದರು.

ದೇಶಸಂಚಾರ ಮುಗಿಸಿ ಬಂದ ಕಶ್ಯಪನು ನಡೆದ ಅನಾಹುತ ಪ್ರಸಂಗ ತಿಳಿದನು; ಅವರ ವಾಮಾಚಾರಕ್ಕೆ ಹಳಹಳಿಸಿದ; ವಾಲಖಿಲ್ಯರಿಗೆ ಜರುಗಿದ ವಿಷಯವನ್ನೆಲ್ಲ ತಿಳಿಸಿದನು. ಮುಂದೇನು ಮಾಡಬೇಕೆಂಬುದರ ಬಗ್ಗೆ ಚರ್ಚಿಸಿದನು. ವಾಲಖಿಲ್ಯ ಮುನಿ ಸಲಹೆ ನೀಡಿದ. ''ಹಿಂದೆ ಬ್ರಹ್ಮಶಿರಸ್ಸನ್ನು ಕತ್ತರಿಸಿದ ಕಾರಣ ಮಹೇಶ್ವರನಿಗೆ ಬ್ರಹ್ಮಹತ್ಯಾ ದೋಷ ಬಂದಿತು. ಅದರ ಭಯದಿಂದ ಗೌತಮೀ ನದೀತೀರ ಮಧ್ಯದಲ್ಲಿರುವನು. ಅವನನ್ನು ''ಮಧ್ಯ ಮಹೇಶ್ವರ'' ಎಂದು ಕರೆಯುವರು. ಅಲ್ಲಿಗೆ ಹೋಗಿ ಮಹೇಶ್ವರನನ್ನು ಆರಾಧಿಸಿ, ಒಲಿಸಿಕೋ. ಅವನ ಅನುಗ್ರಹವಾದರೆ ನಿನ್ನ ಪತ್ನಿಯರು ನಿನಗೆ ದೊರೆಯುವರು.''

ಕಶ್ಯಪನ ಭಯಭಕ್ತಿ ಪೂರಿತ ಪೂಜೆ, ಧ್ಯಾನಗಳಿಂದ ಪ್ರಸನ್ನನಾದ ಪರಮೇಶ್ವರ ''ತನ್ನ ಪತ್ನಿಯರ ಮೊದಲಿನ ಶರೀರವನ್ನು ಬಯಸುವ ಕಶ್ಯಪನಿಗೆ, ''ನದೀಸ್ವರೂಪ ಪಡೆದ ಪತ್ನಿಯರು ಗೌತಮೀನದಿ ಸಂಗಮದಿಂದ ಪುನರಪಿ ಮೊದಲಿನಂತೆ ದೇಹಧರಿಸಿ ಬರುವರು'' ಎಂದು ನುಡಿದ. ಅನುಗ್ರಹಮಾಡಿ ಅಂತರ್ಧಾನ ಹೊಂದಿದ.

ಮುನಿಗಳ ಶಾಪ ಪೂರ್ತಿಯಾಗುವ ಕಾಲ ಸಮೀಪಿಸಿದಂತೆ ಆ ಎರಡೂ ನದಿಗಳು ಗೌತಮೀಯಲ್ಲಿ ಸಂಗಮಿಸಿದವು. ಕೂಡಲೇ ಕದ್ರು ವಿನತೆಯರು ನಿಜರೂಪ ಧರಿಸಿ ಪತಿಯನ್ನು ಕೂಡಿಕೊಂಡರು. ಕಶ್ಯಪನು ಸಂತಸಗೊಂಡು, ತನ್ನ ಪತ್ನಿಯರಿಗೆ ಸೀಮಂತ ಮೊದಲಾದ ಕಾರ್ಯ ನೆರವೇರಿಸಿದನು. ಸಮಾರಂಭ ಪೂರ್ತಿಯಾಗಿ, ಕಶ್ಯಪನು

ಬ್ರಾಹ್ಮಣರನ್ನು ವಿಧಿವತ್ತಾಗಿ ಉಪಚರಿಸಿದ. ಭೋಜನಾನಂತರ ಬ್ರಾಹ್ಮಣರೆಲ್ಲರೂ ತಾಂಬೂಲ ಮೆಲ್ಲುತ್ತ ಸುಖಾಸನದಲ್ಲಿ ಕುಳಿತಿದ್ದರು. ಆಗ ಕದ್ರು ದೇವಿಯು ಕಣ್ಣು ಮಿಟುಕಿಸಿ, ಹಾಸ್ಯಮಾಡಿದಳು. ಅದನ್ನು ಕಂಡ ಋಷಿಗಳಿಗೆ ಅಪಮಾನವೆನಿಸಿ, ''ಎಲೌ ದುರಾಚಾರಿ ಹೆಂಗಸೇ, ಯಾವ ಪಾಪಿಷ್ಠ ಕಣ್ಣುಗಳಿಂದ ನಮ್ಮನ್ನು ಹಾಸ್ಯ ಮಾಡಿದೆಯೋ ಆ ಕಣ್ಣುಗಳು ಕುರುಡಾಗಲಿ'' ಎಂದು ಶಪಿಸಿದರು. ಕೂಡಲೇ ಕದ್ರುವಿನ ಕಣ್ಣುಗಳು ಇಂಗಿ ಹೋದವು. ಇದನ್ನೆಲ್ಲ ನೋಡುತ್ತಿದ್ದ ಕಶ್ಯಪನು ಮತ್ತೆ ಋಷಿಗಳನ್ನು ಬೇಡಿಕೊಂಡನು. ಅವನ ಮರುಕದ ನುಡಿಗೆ ಅನುಕಂಪಗೊಂಡ ಋಷಿಗಳು ಗೌತಮೀ ನದಿಯಲ್ಲಿ ಮಿಂದಾಗ, ಕಣ್ಣುಗಳಿಗೆ ಕಾಂತಿ, ದೃಷ್ಟಿ ಬರುವದಾಗಿ ಹೇಳಿದರು. ಅವರ ಅಪ್ಪಣೆಯಂತೆ ಕಶ್ಯಪನು ತನ್ನ ಈರ್ವರೂ ಹೆಂಡಿರೊಡನೆ ಗೌತಮೀ ನದಿಯನ್ನು ಸೇವಿಸಿದನು.

ಅಂದಿನಿಂದ ವಿನತಾ, ಕದ್ರೂ, ನದಿಗಳು ಸಂಗಮಿಸಿ, ''ಸರ್ವಪಾಪ ಪ್ರಶಮನ'' ಎಂಬ ತೀರ್ಥ ಉದ್ಭವವಾಗಿ, ಸಕಲ ಪಾಪಗಳನ್ನು ಕಳೆಯುವ ಕಾಮಧೇನು ಎನಿಸಿದೆ. ಇದರಲ್ಲಿ ಸ್ನಾನ ಮಾಡಿದರೆ ಸಕಲ ಯಾಗ ಮಾಡಿದ ಪುಣ್ಯ ಲಭಿಸುವದು.

## ಸರಸ್ವತೀ ಸಂಗಮ

**ಬ್ರಹ್ಮ:-** ಹಿಂದೆ ಒಂದು ಸಾರಿ ಪುರೂರವನೆಂಬ ರಾಜನು ಬ್ರಹ್ಮಸಭೆಗೆ ಹೋಗಿದ್ದನು. ಬ್ರಹ್ಮನ ಬಳಿಯಲ್ಲಿ ದೇವನದಿಯಾದ ಸರಸ್ವತಿಯು ರೂಪಲಾವಣ್ಯದಿಂದ ಕಂಗೊಳಿಸುತ್ತಿದ್ದಳು. ಆ ದೇವಸುಂದರಿಯನ್ನು ಕಂಡು ಪುರೂರವನು ಊರ್ವಶಿಯೊಡನೆ ಅವಳ ಪೂರ್ವೋತ್ತರ ಪರಿಚಯ ಕೇಳಿ ವಿಚಾರಿಸಿದ ನಂತರ ಅವಳನ್ನು ತನ್ನ ಬಳಿಗೆ ಕರೆದು ತರಲು ಸೂಚಿಸಿದ. ಅವನ ಸೂಚನೆಗೆ ಅನುಮೋದಿಸಿ, ಊರ್ವಶಿಯು ರಾಜನ ಅಭಿಪ್ರಾಯ ಸರಸ್ವತಿಗೆ ತಿಳಿಸಿದಳು. ಅವಳ ಮಾತನ್ನು ಸರಸ್ವತೀ ನಡೆಯಿಸಲು, ಸ್ವಯಂ ತಾನೇ ರಾಜನಲ್ಲಿ ಬಂದಳು. ಆಮೇಲೆ ಸರಸ್ವತೀ ನದಿ ತೀರದಲ್ಲಿ ಬ್ರಹ್ಮನ ಮಗಳಾದ ಈ ಸರಸ್ವತಿಯೊಡನೆ, ಸರಸದಿಂದ ಪುರೂರವನು ಬಹುಕಾಲ ಸರಸದಿಂದ ವಿಹಾರ ಮಾಡಿದನು. ದಿನವೂ ಸರಸ್ವತಿಯು ಪುರೂರವನನ್ನು ಸಂಧಿಸಿ ಸರಸ ಮಾಡುವದನ್ನು ಅವಳಿಂದ ಸರಸ್ವತನು ಜನಿಸಿದ ಸಮಾಚಾರವನ್ನು ಸೂಕ್ಷ್ಮವಾಗಿ ನೋಡಿದ ನಾನು (ಬ್ರಹ್ಮ) ಆ ಸರಸ್ವತಿಗೆ ನದಿಯಾಗಲು ಶಾಪಕೊಟ್ಟೆನು.

ನನ್ನ ಉಗ್ರಶಾಪದಿಂದ ಭಯಗೊಂಡ ಆ ಸರಸ್ವತಿ ನದಿಯು ಶಾಪವಿಮೋಚನೆಗಾಗಿ ಗೌತಮೀಯನ್ನು ಮೊರೆಹೊಕ್ಕಳು. ಗಂಗೆಯು ನನ್ನನ್ನು (ಬ್ರಹ್ಮನನ್ನು) ಕುರಿತು, ಶಾಪ ಕೊಟ್ಟದುದು ನ್ಯಾಯವಲ್ಲವೆಂದು ಹೇಳಿದ್ದು, ಸ್ವಲ್ಪಕಾಲ ವಿಚಾರಿಸಿದ ನನಗೆ ಸರಿ ಅನಿಸಿತು. ನಾನು ಕೂಡಲೇ ಶಾಪನಿವೃತ್ತಿ ಅನುಗ್ರಹಿಸಿದೆ. ಅದರ ಫಲವಾಗಿ ಸರಸ್ವತೀ ನದಿಯು ಕೆಲವು ಕಡೆಗೆ ಕಾಣಿಸಿದರೂ ಕೆಲವು ಕಡೆಯಲ್ಲಿ ಕಾಣದಂತೆ, ಗುಪ್ತಗಾಮಿನಿಯಾಗಿ ಹರಿಯುವಳು. ಶಾಪಕ್ಕೆ ಗುರಿಯಾಗಿ ಸರಸ್ವತೀನದಿಯು ಗೌತಮೀನದಿಯಲ್ಲಿ ಸೇರಿದ ಸ್ಥಳಕ್ಕೆ ರಸಿಕ ರಾಜನಾದ ಪುರೂರವನು ಹೋಗಿ, ಶಿವನನ್ನು ಬಹುಕಾಲ ಆರಾಧನೆಮಾಡಿ ಧನ್ಯನಾದನು. ಶಿವನನ್ನು ಲೌಕಿಕರು ಅಲ್ಲಿ ಸಿದ್ದೇಶ್ವರನೆಂದು ಕರೆಯುತ್ತಾರೆ. ಭಯ ಭಕ್ತಿಗಳಿಂದ ನಡೆದುಕೊಳ್ಳುತ್ತಾರೆ. ಅಂದಿನಿಂದ ಆ ತೀರ್ಥವು ''ಪುರೂರವತೀರ್ಥ''ವೆಂದು ಮನ್ನಣೆ ಪಡೆಯಿತು. ಸಿದ್ದೇಶ್ವರ ನೆಲೆಸಿದ ತಾಣವು ಸರ್ವಕಾಮಪ್ರದತೀರ್ಥವೆಂದು ಶುಭನಾಮ

ಕರಣಗೊಂಡಿದೆಯಲ್ಲದೆ ಸರಸ್ವತೀ ನದಿಯು ಗೌತಮೀ ನದಿಯನ್ನು ಸೇರಿದ ಸ್ಥಳವು "ಬ್ರಹ್ಮತೀರ್ಥ"ವೆಂದು ಅನ್ವರ್ಥಕ ನಾಮ ಪಡೆದು, ಪ್ರಸಿದ್ಧವಾಗಿದೆ.

## ಪಂಚತೀರ್ಥ

**ಬ್ರಹ್ಮ:-** ನನಗೆ ಸಾವಿತ್ರೀ, ಗಾಯತ್ರೀ, ಶ್ರದ್ಧಾ, ಮೇಧಾ, ಸರಸ್ವತೀ ಎಂಬ ಐವರು ಮಕ್ಕಳು. ಇವರಿಂದ ಲೋಕಗಳಲ್ಲಿ ಧರ್ಮದ ವ್ಯವಸ್ಥೆಯು ಸರಿಯಾಗಿ ನಡೆಯುತ್ತಿದೆ. ಈ ಐವರಲ್ಲಿ ಒಬ್ಬಳನ್ನು ನಾನು ಲೋಕೋತ್ತರ ಸುಂದರಿಯಾಗಿ ನಿರ್ಮಿಸಿದೆನು. ಅವಳ ಲೌಕಿಕ ತಾರುಣ್ಯ, ಲಾವಣ್ಯ, ಸೌಂದರ್ಯಕ್ಕೆ ನಾನೇ ಸಮ್ಮೋಹಿತನಾದೆ.

ಬುದ್ಧಿ ವಿಕಾರವಶನಾಗಿ, ಕಾಮೋತ್ತೇಜಿತನಾಗಿ, ನಾನು ಆ ಸುಂದರಿಯನ್ನು ಹಿಡಿಯಲು ಮುಂದುವರಿದೆ. ನನ್ನ ಕಾಮವಿಕಾರಕ್ಕೆ ಅವಳು ಶೀಲ ಕಾಪಾಡಿಕೊಳ್ಳಲು ಹೆಣ್ಣು ಜಿಂಕೆಯಾಗಿ ನೆಗೆದು, ನಾಗಾಲೋಟದಲ್ಲಿ ಓಡಿದಳು. ನಾನೂ ಮೃಗರೂಪ ಧರಿಸಿ, ಅವಳ ಬೆಂಬತ್ತಿದೆನು. ಆಗ ಪರಮೇಶ್ವರನು ಬೇಡನ ರೂಪಧಾರಣ ಮಾಡಿ ನಮ್ಮಿಬ್ಬರನ್ನೂ ಬೆನ್ನಟ್ಟಿದ. ನನ್ನಿಂದ ಭಯಗೊಂಡ ಆ ಐವರೂ ಕುಮಾರಿಯರು ಗೌತಮೀ ತೀರಕ್ಕೆ ಬಂದರು. ಬೇಡನ ರೂಪದಲ್ಲಿರುವ ಶಿವನು ನನ್ನನ್ನೇ ಬೆನ್ನಟ್ಟಿದ. ಕೊನೆಗೆ ನಾನು ಶರಣಾಗತನಾಗಿ ಹೆಣ್ಣಿನ ಹಂಬಲ ತ್ಯಜಿಸಿದೆ; ಅವಳನ್ನು ಸೂರ್ಯನಿಗೆ ಕೊಟ್ಟು ಮದುವೆ ಮಾಡಿದೆ.

ಆ ಐವರೂ, ನದೀರೂಪವಾಗಿ ಮಾರ್ಪಟ್ಟು ಗೌತಮೀ ನದಿ ಸೇರಿ ಪುನಃ ಸ್ವರ್ಗಕ್ಕೆ ಬಂದು ಸೇರಿದರು. ಆ ಐದೂನದಿಗಳು ಸೇರಿದ ಸಂಗಮಸ್ಥಳದಲ್ಲಿ ಐದು ತೀರ್ಥಗಳಾಗಿವೆ. ನದಿಗಳು ಐದೂ ಸೇರಿದರೂ ಒಟ್ಟಿನಲ್ಲಿ ಕರೆಯುವದು ಸರಸ್ವತೀ ನದಿಯೆಂದೇ ಸಾಮಾನ್ಯವಾಗಿ, ಅಲ್ಲದೆ "ಮೃಗವ್ಯಾಧತೀರ್ಥ" ಹಾಗೂ "ಬ್ರಹ್ಮತೀರ್ಥ" ಗಳೂ ಅಲ್ಲಿಯೇ ಇವೆ. ಈ ಇಷ್ಟಾರ್ಥಪ್ರದಾಯಕ ಕ್ಷೇತ್ರವು ಸರ್ವಕಾಲದಲ್ಲಿಯೂ ಜನಾನುರಾಗ ಪಡೆದ ಪುಣ್ಯದ ತಾಣವೆನಿಸಿದೆ.

## ಶಮಾದಿತೀರ್ಥ

**ಬ್ರಹ್ಮ:-** ಹಿಂದೆ ಪ್ರಿಯವ್ರತನೆಂಬ ರಾಜನಿದ್ದು, ಅವನು ಶೌರ್ಯಪರಾಕ್ರಮಕ್ಕೆ ಹೆಸರಾಗಿದ್ದನು. ಒಮ್ಮೆ ಅವನು ತನ್ನ ಪುರೋಹಿತನ ಸಲಹೆಯಂತೆ, ಯಜ್ಞದೀಕ್ಷೆ ಕೈಕೊಂಡನು. ಗೌತಮೀ ನದಿಯ ದಕ್ಷಿಣ ತೀರದಲ್ಲಿ ವಿಜೃಂಭಣೆಯಿಂದ ಯಜ್ಞ ಸಮಾರಂಭ ಆರಂಭಿಸಿದನು.

ಅವನ ಅಪೂರ್ವ ಯಜ್ಞದಲ್ಲಿ ಋಷಿಗಳು ಋತ್ವಿಜರಾಗಿ ಆ ರಾಜನ ಅಶ್ವಮೇಧ ಯಾಗ ಆರಂಭಿಸಿದರು. ಸ್ವಯಂ ವಶಿಷ್ಠ ಮುನಿಯೇ ಪೌರೋಹಿತ್ಯ ವಹಿಸಿ ಯಜ್ಞ ಕಾರ್ಯದ ಯಶಸ್ಸಿಗೆ ಶ್ರಮಿಸಿದನು. ಯಜ್ಞ ಆರಂಭವಾದ ಕೆಲವು ದಿನಗಳಲ್ಲೆ, ಯಜ್ಞ ಶಾಲೆಗೆ ಹಿರಣ್ಯಕಶಿಪು ದೈತ್ಯನು ದಾಳಿಯಿಟ್ಟ, ಅವನ ಆಟಾಟೋಪಕ್ಕೆ ಸ್ವರ್ಗಾಧಿಪತಿ ಇಂದ್ರ ಮೊದಲಾದ ದೇವಾಧಿದೇವತೆಗಳು ಭಯದಿಂದ ತಲ್ಲಣಿಸಿ ಸ್ವರ್ಗಕ್ಕೆ ಓಡಿಹೋದರು.

ಆ ರಕ್ಕಸನ ಕ್ರೂರ ದಷ್ಟಿಗೆ ಕಾಣದ ಹಾಗೆ, ಅಗ್ನಿಯು ಶಮೀವೃಕ್ಷವನ್ನು, ಹರಿಯು ಅಶ್ವತ್ಥವೃಕ್ಷವನ್ನು ಸೇರಿದರು. ಸೂರ್ಯನು ಅರ್ಕವೃಕ್ಷ, ಶಿವನು ಆಲದಮರ, ಚಂದ್ರನು ಮುತ್ತುಗದ ಮರವನ್ನು ಪ್ರವೇಶಿಸಿ ಅಡಗಿ ಕುಳಿತರು. ಅದರಂತೆ ಯಮನು ಕಾಗೆಯಾದ,

ಅಶ್ವಿನೀ ದೇವತೆಗಳು ಕುದುರೆಯಲ್ಲಡಗಿದರು. ಆ ಸಮಯದಲ್ಲಿ ವಶಿಷ್ಠ ಮುನಿ, ಧೈರ್ಯ ಸಾಹಸ ತೋರಿದ. ಅವನು ತನ್ನ ಬ್ರಹ್ಮದಂಡ ಮೇಲೆತ್ತಿ ಬೀಸುತ್ತ ತಪಶ್ಶಕ್ತಿ ಬಲದಿಂದ ಆ ರಾಕ್ಷಸರನ್ನು ಓಡಿಸಿದ. ಆ ರಾಕ್ಷಸರ ಉಪದ್ರವ ಉಪಶಮನವಾದ ನಂತರ ಯಜ್ಞಕಾರ್ಯ ಆರಂಭವಾಗಿ ಅಡೆತಡೆ ಇಲ್ಲದೆ ಪೂರ್ತಿಯಾಯಿತು. ಯಜ್ಞ ಯಶಸ್ವೀಯಾದುದಕ್ಕೆ ದೇವಾಧಿ ದೇವತೆಗಳೂ, ಋಷಿಗಳೂ, ವಶಿಷ್ಠಮುನಿ ಹಾಗೂ ಪ್ರಿಯವ್ರತರಿಬ್ಬರನ್ನೂ ಸಂತಸದಿಂದ ಅಭಿನಂದಿಸಿ, ಶ್ಲಾಘಿಸಿ ನುಡಿದರು. ''ಅಶ್ವಮೇಧಯಾಗವು ಯಶಸ್ವಿಯಾಗಲು ದೇವತೆಗಳಲ್ಲಿ ಕೆಲವರು, ಕೆಲವು ಮರಗಳನ್ನು ಹಾಗೂ ಗಂಗೆಯನ್ನು ಆಶ್ರಯಿಸುತ್ತಾರೆ. ಆದುದರಿಂದ ದೇವತೆಗಳಿಗೆ ಆಶ್ರಯ ಕೊಟ್ಟ ವೃಕ್ಷಗಳೂ ಸಹ ಮಹಾತೀರ್ಥಗಳಾಗಿ ಮಹತ್ಫಲವೀಯಲಿ.''

ಆದುದರಿಂದ 'ಶಮೀತೀರ್ಥ'ದಲ್ಲಿ ಸ್ನಾನ, ದಾನಮಾಡಿದರೆ ಅಶ್ವಮೇಧಯಾಗದ ಫಲಪ್ರಾಪ್ತಿ. ಇದಲ್ಲದೆ, 'ವೈಷ್ಣವತೀರ್ಥ', 'ಅರ್ಕತೀರ್ಥ', 'ಶೈವತೀರ್ಥ', 'ವಾಶಿಷ್ಠ ತೀರ್ಥ' 'ಸೌಮ್ಯತೀರ್ಥ' ಮುಂತಾದ ತೀರ್ಥಗಳೂ ಇವೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತೈದನೆಯ ಅಧ್ಯಾಯ ಮುಗಿದುದು*

## ಇಪ್ಪತ್ತೆರಡು ಸಹಸ್ರತೀರ್ಥ ಮಹಿಮಾ ವರ್ಣನೆ

**ಅಧ್ಯಾಯ - ೨೬**

**ಬ್ರಹ್ಮ:**-ನಾನು ಇದುವರೆಗೆ ಹೇಳಿದ ತೀರ್ಥಗಳಲ್ಲದೆ, 'ವಿಶ್ವಾಮಿತ್ರತೀರ್ಥ', 'ಹರಿಶ್ಚಂದ್ರತೀರ್ಥ', 'ಶುನಶ್ಯೇಪತೀರ್ಥ', 'ರೋಹಿತತೀರ್ಥ', 'ವಾರುಣತೀರ್ಥ' 'ಬ್ರಹ್ಮ ತೀರ್ಥ' ವೆಂದು ಬಗೆಬಗೆಯ ತೀರ್ಥಗಳಿವೆ. ಅಷ್ಟೇ ಅಲ್ಲ. ಇನ್ನೂ ಪುಣ್ಯಕರವಾದ ಹಾಗೂ ಭಾವುಕರ ಪ್ರೀತಿ ಪಾತ್ರವಾದ ಹಲವಾರು ಹೆಸರಿನ ತೀರ್ಥಗಳನ್ನು ಉಲ್ಲೇಖಿಸಬಹುದು. ಅವುಗಳೆಂದರೆ-ಆಗ್ನೇಯತೀರ್ಥ, ಇಂದ್ರತೀರ್ಥ, ಅಶ್ವಿನಿತೀರ್ಥ, ಔಶನಸ್‌ತೀರ್ಥಗಳು. ಇವುಗಳೆಲ್ಲ ಗೌತಮೀ ತೀರದ ಪ್ರದೇಶಗಳಲ್ಲಿ ಇದ್ದು, ಅವುಗಳ ಮಹಿಮೆಯನ್ನು ಹೇಳುವೆ, ಕೇಳು.

ಬಹುಕಾಲದ ಹಿಂದೆ ಇಕ್ಷ್ವಾಕು ವಂಶದಲ್ಲಿ ಹರಿಶ್ಚಂದ್ರನೆಂಬ ಸತ್ಯಸಂಧ ರಾಜನೊಬ್ಬ ಇದ್ದನು. ಒಂದು ದಿನ ಅವನ ಮನೆಗೆ ನಾರದ, ಪರ್ವತರೆಂಬ ಮುನಿಗಳು ಆಗಮಿಸಿದರು. ರಾಜ ಅವರನ್ನು ಚೆನ್ನಾಗಿ ಆದರಿಸಿ ಸತ್ಕರಿಸಿದ. ವಿರಾಮವಾಗಿ ಮಾತಿನ ಪ್ರಸಂಗದಲ್ಲಿ, ರಾಜನು ''ಮಕ್ಕಳಿಂದ ನಮಗೇನು ಪ್ರಯೋಜನ?'' ಮಕ್ಕಳಿಂದ ನಮಗೇನಾಗಬೇಕು? ಎಂದೆಲ್ಲಾ ಸಂಶಯವನ್ನು ಪ್ರಶ್ನಾರ್ಥಕವಾಗಿ ಮುನಿಗಳೆದುರು ನುಡಿದಾಗ ಅವರೆಂದರು : ಲೋಕದಲ್ಲಿ ಪುತ್ರನಂತಹ ಇಷ್ಟವಸ್ತುವಿನ ಹೊರತು ಅತ್ಯಮೌಲ್ಯ ವಸ್ತು ಬೇರೊಂದಿಲ್ಲ.

ಅವನ ಮಾತಿಗೆ ಹರಿಶ್ಚಂದ್ರನು ಪುತ್ರನಾಗಬೇಕೆಂಬ ಅಭಿಲಾಷೆ ಹೊಂದಿ, ಉತ್ಕಟ ಕಂಠದಲ್ಲಿ ಮತ್ತೆ ಪ್ರಶ್ನಿಸಿದ : ''ಮುನಿಗಳೇ ನನಗೆ ಪುತ್ರಸಂತಾನವಾಗುವ ಉಪಾಯ ಹೇಳಿರಿ. ಅದಕ್ಕಾಗಿ ನಾನು ಯಾವ ಯಾಗ ಯಜ್ಞಮಾಡಬೇಕು?''

ಅವನು ಪುತ್ರಾಪೇಕ್ಷೆಯಲ್ಲಿ ಪ್ರಾರ್ಥಿಸಿದ ರೀತಿಯನ್ನು ನೋಡಿ ಅವರಿಗೆ ಮರುಕ ಬಂದು ಹೇಳಿದರು: ''ಗೌತಮೀ ತೀರಕ್ಕೆ ಹೆಂಡತಿಯೊಂದಿಗೆ ಹೋಗು. ವರುಣನನ್ನು ಆರಾಧಿಸಿರಿ. ಅವನು ಪ್ರಸನ್ನನಾದರೆ ನಿನ್ನ ಭಾಗ್ಯದ ಬಾಗಿಲು ತೆರೆದಂತೆಯೇ!''

ಅವರ ಮಾತಿನಂತೆ ಹರಿಶ್ಚಂದ್ರನು ಗೌತಮೀ ತೀರಕ್ಕೆ ಹೋಗಿ, ಸ್ವಲ್ಪಸಮಯ ವರುಣನನ್ನು ತ್ರಿಕರಣಪೂರ್ವಕ ಆರಾಧಿಸಿ ಪ್ರಸನ್ನಗೊಳಿಸಿಕೊಂಡ. ಪ್ರಸನ್ನಭಾವದಿಂದ ವರುಣದೇವ ನುಡಿದ : "ರಾಜನೇ, ನಿನಗೆ ಮೂರುಲೋಕ ಬೆಳಗುವ ಸುಪುತ್ರನನ್ನು ಅನುಗ್ರಹಿಸುವೆ. ಆದರೆ ಒಂದು ಮಾತು- ಆ ಕುಮಾರನನ್ನೇ ಪಶುವಾಗಿ ಮಾಡಿ, ನರಮೇಧ ಯಾಗದಿಂದ ನನಗೆ ಹವಿಸ್ಸನ್ನು ಕೊಡಬೇಕು. ಒಪ್ಪುತ್ತೀಯಷ್ಟೇ?"

ರಾಜ ಅವನ ಮಾತಿಗೆ ಒಪ್ಪಿದ. ಕೆಲವು ಕಾಲಾನಂತರ, ಹರಿಶ್ಚಂದ್ರ ರಾಜನಿಗೆ ಪುತ್ರನೊಬ್ಬ ಜನಿಸಿದ. ಬೆಳೆದು ದೊಡ್ಡವನಾದ. ವರುಣ ತಾನೇಬಂದು ಯಾಗ ಮಾಡುವಂತೆ ಜ್ಞಾಪಿಸಿದ. ಆಗ ರಾಜನು ಬಾಲ್ಯ ಕಳೆದ ಮೇಲೆ ಯಾಗಮಾಡುವದಾಗಿ ನುಡಿದ. ಹೀಗೆಯೇ ಹರಿಶ್ಚಂದ್ರನು ಶಾಸ್ತ್ರಾಧಾರದ ಬಲದಿಂದ ತನ್ನ ಲೌಕಿಕ ಅನಾನುಕೂಲ ಮುಂದೆ ಮಾಡಿಯೋ ಯಾಗ ಕಾರ್ಯವನ್ನು ಮುಂದೂಡುತ್ತ ಹದಿನಾರು ವರುಷ ಕಳೆದ.

ಹರಿಶ್ಚಂದ್ರನ ಮಗ ರೋಹಿತಕುಮಾರ ಹದಿನಾರರ ಯುವರಾಜನಾದ. ಮತ್ತೆ ವರುಣ ಬಂದು ಯಾಗದ ವಿಚಾರವಾಗಿ ಹರಿಶ್ಚಂದ್ರನನ್ನು ಜ್ಞಾಪಿಸಿದ. ಆಗ ಅವನು ಋತ್ವಿಜರ ಹಾಗೂ ರೋಹಿತಕುಮಾರರೆದುರಿನಲ್ಲಿ, ವರುಣನ ಸಾಕ್ಷಿಯಾಗಿ ಯಾಗ ಮಾಡಲು ಒಪ್ಪಿದ. ವರುಣ ಸಂತೋಷದಿಂದ ಅಂತರ್ಧಾನನಾದ.

ಒಂದು ದಿನ, ಹರಿಶ್ಚಂದ್ರನು ಮಗನಿಗೆ ಹಿಂದಿನ ವೃತ್ತಾಂತವನ್ನು ವಿವರಿಸಿ, ನಿನ್ನನ್ನು ವರುಣನಿಗಾಗಿ ಯಾಗಪಶುವನ್ನಾಗಿ ಮಾಡುವೆ ಎಂದಾಗ, ಅವನು (ರೋಹಿತನು) ವರುಣನ ಎದುರಿನಲ್ಲಿಯೇ "ಮೊದಲು ನಾನು ಋತ್ವಿಜ ಪುರೋಹಿತರೊಡನೆ ಹರಿಯನ್ನುದ್ದೇಶಿಸಿ ಯಾಗಮಾಡಲು ಬಯಸಿದ್ದೇನೆ. ಅದಕ್ಕೆ ಈ ವರುಣನೇ ಯಾಗ ಪಶುವಾಗಲಿ" ಎಂದು ತಂದೆಗೆ ಮರುಸವಾಲು ಎಸೆದ. ತಂದೆಗೆ ದಿಗ್ಭ್ರಮೆಯಾಯಿತು. ವರುಣ ಅವನ ಮಾತಿನಿಂದ ಕಿಡಿಕಿಡಿಯಾಗಿ, ಹರಿಶ್ಚಂದ್ರನಿಗೆ ಜಲೋದರ ರೋಗ ಬರುವಂತೆ ಶಾಪವಿತ್ತು, ತನ್ನ ಲೋಕದತ್ತ ಮುನ್ನಡೆದ.

ರೋಹಿತನು ಅಶ್ವಾರೂಢನಾಗಿ ಕಾಡಿಗೆ ನಡೆದ. ಆ ಗೌತಮೀ ತೀರದಲ್ಲಿ ನಾಲ್ಕಾರು ವರ್ಷ ನೆಲೆಸಿದ ಮನಶಾಂತಿಗಾಗಿ. ತನ್ನಲ್ಲಿ ತಾನು "ತಂದೆಗೆ ದುಃಖವನ್ನುಂಟು ಮಾಡುವ ನಾನು ಹುಟ್ಟಿದ್ದೇನು ಸಾರ್ಥಕ?" ಎಂದು ನಿಟ್ಟುಸಿರುಬಿಡುತ್ತ ಚಿಂತಿಸುತ್ತಿದ್ದನು ಹಗಲಿರುಳು.

ಆ ಗೌತಮೀ ತೀರದಲ್ಲಿ ಅನೇಕ ಋಷಿ ಮುನಿಗಳು ಕುಟೀರ ಕಟ್ಟಿಕೊಂಡು ವಾಸವಾಗಿದ್ದರು. ಅವರಲ್ಲಿ ಅಜೀಗರ್ತನೆಂಬ ಋಷಿಯೂ ಒಬ್ಬ. ಅವನಿಗೆ ಹೆಂಡತಿ ಹಾಗೂ ಮೂರು ಜನ ಮಕ್ಕಳು. ಅವನನ್ನು ಕಂಡ ರೋಹಿತನು ಅವರ ಕುಟುಂಬದ ದಾರಿದ್ರ್ಯಾವಸ್ಥೆಯನ್ನೆಲ್ಲ ಕಂಡು ಮರುಕಪಟ್ಟನು. ಕೊನೆಗೆ ಅವನು ಕೇಳಿದ "ಓ ಅಜೀಗರ್ತ, ನೀನು ನಿಜವಾಗಿಯೂ ನಿಮ್ಮಲ್ಲೊಬ್ಬರನ್ನು ಮಾರುವೆಯಾ? ಹಾಗಿದ್ದರೆ ಹೇಳು." ಅವನ ಮಾತಿಗೆ "ಕೊಳ್ಳುವದಾದರೆ-ನಡುವಿನ ಮಗನಾದ ಶುನಶ್ಶೇಫನನ್ನು ಮಾರಲು ನಾನು ಸಿದ್ಧ.." ಎಂದು ಉತ್ತರಿಸಿದ ಅಜೀಗರ್ತ. ಯುವರಾಜ ರೋಹಿತ ಯೋಚಿಸಿ, ಸಾವಿರಹಸು, ಸಾವಿರ ಧಾನ್ಯರಾಶಿ, ಸಾವಿರ ನಾಣ್ಯ, ಸಾವಿರಸಂಖ್ಯೆಯ ಬಟ್ಟೆಬರೆಕೊಟ್ಟು ಋಷಿ ಪುತ್ರನನ್ನು ಕೊಂಡುಕೊಂಡ. ಯಾಗದ ಪಶುವಿನೊಡನೆ ರೋಹಿತ ತಂದೆಯ ಬಳಿಗೆ ಬಂದು, "ಅಪ್ಪಾ, ಈ ಪುರುಷ ಪಶುವಿನಿಂದ ವರುಣನಿಗಾಗಿ ಯಾಗ ನೆರವೇರಿಸು; ಅವನ ಅನುಗ್ರಹದಿಂದಾದರೂ ನಿನ್ನ ಜಲರೋಗ ವಾಸಿಯಾಗಲಿ" ಎಂದು ನುಡಿದ.

ಅವನ ಮಾತು ಕೇಳಿ ಹರಿಶ್ಚಂದ್ರ ವಿಷಾದದಿಂದ ಮಗನಿಗೆ ನುಡಿದ : ''ನಾವು ಬದುಕಿರ ಬೇಕೆಂಬ ದುರಾಶೆಯಿಂದ ಬ್ರಾಹ್ಮಣನನ್ನು ಬಲಿಪಶು ಮಾಡುವದು ಶಾಸ್ತ್ರ ಸಮ್ಮತವಲ್ಲ ಆದರಿಂದ ಪುಣ್ಯಕ್ಕಿಂತ ಪಾಪವೇ ಹೆಚ್ಚಾಗುವದು. ಹಾಗಿದ್ದರೆ ನಾನೇ ಬ್ರಾಹ್ಮಣನನ್ನು ಯಾಗದ ಪಶುವನ್ನಾಗಿ ಮಾಡುತ್ತಿದ್ದೆ.'' ಮರಳಿ ಆ ಬ್ರಾಹ್ಮಣನೊಡನೆ ಮಗನನ್ನು ಕಳಿಸಿದ.

ಆ ಸಮಯದಲ್ಲಿ ಆಕಾಶವಾಣಿ ಮೊಳಗಿತು. ''ಎಲೈ ರಾಜೇಂದ್ರ, ಋತ್ವಿಜರು ಹಾಗೂ ಪುರೋಹಿತರೊಡನೆ ಈ ಬ್ರಾಹ್ಮಣ ಪಶು ಮತ್ತು ನಿನ್ನ ಮಗನೊಡನೆ ಗೌತಮೀ ತೀರಕ್ಕೆ ಹೋಗಿ ಅಲ್ಲಿ ಯಾಗ ಆರಂಭಿಸು. ನೀನೇನೂ ಚಿಂತಿಸಬೇಡ.''

ಆದರಂತೆ, ರಾಜನು ವಿಶ್ವಾಮಿತ್ರ, ವಶಿಷ್ಠ, ವಾಮದೇವ ಮೊದಲಾದ ಋಷಿಗಳನ್ನು ಮುಂದು ಮಾಡಿಕೊಂಡು, ಅಲ್ಲಿಗೆ ಹೋಗಿ ನರಮೇಧಯಾಗ ಆರಂಭಿಸಿದನು. ಸಕಲ ಸಿದ್ಧತೆ ನಡೆದವು. ಶಾಸ್ತ್ರೋಕ್ತವಾಗಿ ಜರುಗಿದವು. ಯಜ್ಞ ಆರಂಭಿಸಲು ವಿಶ್ವಾಮಿತ್ರನು ಮಂತ್ರಗಳಿಂದ ದೇವಾಧಿದೇವತೆಗಳನ್ನು ಆಹ್ವಾನಿಸಿ, ''ಯಾರಿಗೆ ಈ ಶುನಶ್ಯೇಪವನನ್ನು ಹವಿಸ್ಸಾಗಿ ಸಮರ್ಪಿಸುವೆವೋ ಆ ದೇವತೆಗಳೆಲ್ಲರೂ ಇವನು ಪಶುವಾಗಲು ಅನುಮತಿಯನ್ನು ಕೊಡಲಿ'' ಎಂದ.

ಶುನಶ್ಯೇಪ, ಹರಿಶ್ಚಂದ್ರ, ರೋಹಿತರೂ ಗೌತಮೀ ನದಿಯಲ್ಲಿ ಮಿಂದು ಶುಚಿರ್ಭೂತ ರಾಗಿ ಬಂದು ಸಂಕಲ್ಪಗೈದು ಯಾಗ ಮಂಟಪದಲ್ಲಿ ಉಪಸ್ಥಿತರಾದರು. ವಿಶ್ವಾಮಿತ್ರನ ಆಹ್ವಾನದಂತೆ ಯಾಗಾಭಿಮನಿ ದೇವತೆಗಳೆಲ್ಲ ಪ್ರಸನ್ನರಾಗಿ ಬಂದು ನುಡಿದರು:- ''ಶುನಶ್ಯೇಪನ ವಧೆಯಿಲ್ಲದೆ ಯಾಗವು ಯಶಸ್ವಿಯಾಗಿ ಕೊನೆಗೊಳ್ಳಲಿ''. ಅಲ್ಲಿರುವ ಹರಿಶ್ಚಂದ್ರನಿಗೆ ವಿಶೇಷವಾಗಿ ಸ್ವಯಂ ವರುಣನೇ, ಶುನಶ್ಯೇಪ ಇಲ್ಲದೆ ಯಾಗ ಪೂರೈಸಲು ಅನುಮತಿ ನೀಡಿ ಅನುಗ್ರಹಿಸಿದ. ಕೈಕೊಂಡ ಯಾಗಪೂರ್ತಿಯಾಗಿ ಎಲ್ಲರೂ ಕೃತಕತ್ಯರಾದರು.

ಅನಂತರ ವಿಶ್ವಾಮಿತ್ರನು ಸಭೆಯಲ್ಲಿ ಶುಭಶ್ಯೇಪನನ್ನು ಗೌರವಿಸಿ, ಸ್ವಯಂ, ತಾನೇ ದೇವತೆಗಳ ಸಾಕ್ಷಿಯಾಗಿ, ತನ್ನ ಹಿರಿಯಮಗನನ್ನಾಗಿ ಸ್ವೀಕರಿಸಿದನು. ಆದರೆ ಅವನ ಮಕ್ಕಳು ಅವನ ಹಿರಿತನವನ್ನು ಒಪ್ಪಲಿಲ್ಲ. ವಿರೋಧಿಸಿದ ಮಕ್ಕಳಿಗೆ ಮುನಿಯೇ ಶಾಪ ಕೊಟ್ಟನು. ಒಪ್ಪಿದವರನ್ನು ಒಲಿದು ಅನುಗ್ರಹಮಾಡಿದನು. ಈ ರೀತಿಯಾಗಿ ಹರಿಶ್ಚಂದ್ರನ ನರಮೇಧಯಾಗವು ಸಮಾಪ್ತಿ ಹೊಂದಿತು. ಇದು ಜರುಗಿದ್ದು ಗೌತಮೀನದಿಯ ದಕ್ಷಿಣತೀರದ ರಮ್ಯವನಾಂತ ಪ್ರದೇಶದಲ್ಲಿ ಈ ಯಾಗ ನಡೆದ ಸ್ಥಳದಲ್ಲಿ ಅನೇಕ ತೀರ್ಥಗಳಿವೆಯಲ್ಲದೆ ಎಂಟುಸಾವಿರ ಹದಿನಾಲ್ಕು ತೀರ್ಥಗಳು ಅದೇ ತೀರದಲ್ಲಿ ಇಂದಿಗೂ ನೆಲೆಸಿವೆ. ಈ ತೀರ್ಥದಲ್ಲಿ ಮಿಂದ ಮಾನವನಿಗೆ ನರಮೇಧ ಯಾಗದ ಫಲವು ಲಭಿಸುತ್ತದೆ. ವೇದಾದಿಗಳಲ್ಲಿಯೂ ಸಹ ಈ ಸಕಲ ತೀರ್ಥಗಳ ಮಹಿಮೆಯನ್ನು ಸಂದರ್ಭಾನುಸಾರ ವರ್ಣಿಸಲಾಗಿದೆ.

## ಪೂರ್ಣಾ ಹಾಗೂ ದೇವನದಿಗಳ ಸಂಗಮ

**ಬ್ರಹ್ಮ**:- ನಾರದನೇ, ಸರ್ವಪಿತೃಗಳಿಗೆ ಪ್ರಿಯವಾದದ್ದೊಂದು ತೀರ್ಥವು ಪ್ರಪಂಚ ಪ್ರಸಿದ್ಧವಾಗಿದ್ದು ಅದುವೇ ಸೋಮತೀರ್ಥ. ಅದನ್ನು ಕಾಣುವವರು ಅಥವಾ ಅದರ ಮಹಿಮೆಯನ್ನು ಶ್ರವಣ ಮಾಡುವವರು ಪುಣ್ಯಭಾಗಿಗಳಾಗುವರು. ಅದರಲ್ಲಿ ಸ್ನಾನ, ದಾನ

ಮಾಡಿದರೆ ಬರುವ ಪುಣ್ಯಕ್ಕೆ ಎಣೆಯೇ ಇಲ್ಲ. ಅದರ ಅವರ್ಣನೀಯ ಗುಣಕಥನ ಮಾಡುತ್ತೇನೆ ಕೇಳು.

ಚಲುವ ಚಂದ್ರ ಕಾರಣಾಂತರದಿಂದ ಗಂಧರ್ವರ ಪಕ್ಷ ಸೇರಿದ್ದ. ಆಗ ದೇವತೆಗಳು ನಿರುಪಾಯರಾಗಿ ಚಂದ್ರನನ್ನು ತಮ್ಮ ಪಕ್ಷಕ್ಕೆ ಬರುವಂತೆ ಉಪಾಯ ಕಂಡುಕೊಳ್ಳಲು ನನ್ನ (ಬ್ರಹ್ಮ) ಬಳಿಗೆ ಬಂದರು. ತಕ್ಷಣ ಉಪಾಯ ನನಗೂ ಹೊಳೆಯಲಿಲ್ಲ. ಚಿಂತಾತುರನಾಗಿದ್ದೆ. ಆ ಸಮಯದಲ್ಲಿ ಸರಸ್ವತಿಯು ಒಂದು ಸಲಹೆ ನೀಡಿದಳು. ಅವಳ ಸಲಹೆಯಂತೆ "ಸ್ತ್ರೀ ಕಾಮುಕರಾದ ಗಂಧರ್ವರಿಗೆ ಸರಸ್ವತಿಯನ್ನು ಕೊಟ್ಟು, ಅವಳ ಬದಲಾಗಿ ಚಂದ್ರನನ್ನು ಮರಳಿ ತರಬೇಕಾಗಿತ್ತು" ಆದರೆ ಸರ್ವಲೋಕದೊಡತಿ, ವಿದ್ಯಾಭಿಮಾನಿ ದೇವತೆಯನ್ನು ಕೊಡಲು ದೇವತೆಗಳಾರು ಒಪ್ಪದೆ, "ಒಂದು ವೇಳೆ ಚಂದ್ರ ಇಲ್ಲದಿದ್ದರೂ ಚಿಂತೆ ಇಲ್ಲ. ಆದರೆ ನೀನಿಲ್ಲದೇ ನಾವು ಬದುಕಲಾರೆವು" ಎಂದು ಖಡಾಖಂಡಿತವಾಗಿ ನುಡಿದರು. ಆಗ ಸರಸ್ವತಿಯೇ ಮತ್ತೆ ನುಡಿದಳು: "ನೀವು ಭಯಪಡಬೇಡಿರಿ. ಉಪಾಯಾಂತರ ದಿಂದ ಮತ್ತೆ ನಿಮ್ಮನ್ನೇ ಬಂದು ಸೇರುವೆ. ಅದಕ್ಕಾಗಿ ಗೌತಮೀನದಿಯ ದಂಡೆಯಲ್ಲಿ ದೇವತೆಗಳೆಲ್ಲ ಯಾಗ ನೆರವೇರಿಸಿರಿ. ಆಗ ಅಲ್ಲಿಗೆ ಎಲ್ಲರೂ ಬಂದು ಕಲೆತಾಗ, ಈ ಯಾಗಕ್ಕೆ ಚಂದ್ರನ ಅವಶ್ಯಕತೆ ಇದೆ. ಈ ಸ್ತ್ರೀಯನ್ನು ತೆಗೆದುಕೊಂಡು ಚಂದ್ರನನ್ನು ಕೊಡಲು ಹೇಳಿರಿ" ಎಂದಳು.

ದೇವತೆಗಳೆಲ್ಲ ಅವಳ ಮಾತಿಗೆ ಸಮ್ಮತಿಸಿದರು ; ದೇವಗಿರಿಯಲ್ಲಿ ಯಾಗ ಹಮ್ಮಿಕೊಂಡರು. ಆ ಯಾಗಕ್ಕೆ ಸಕಲ ಲೋಕಗಳ ಒಡೆಯ, ಒಡತಿಯರು ಉಪಸ್ಥಿತರಾದರು. ದೇವೇಂದ್ರನು ಉಪಾಯದಿಂದ, ಚಾಣಾಕ್ಷತನದಲ್ಲಿ ಸರಸ್ವತಿಯನ್ನು ಗಂಧರ್ವರಿಗೆ ಕೊಟ್ಟು ಚಂದ್ರನನ್ನು ಪಡೆಯುವಲ್ಲಿ ಜಯಶಾಲಿಯಾದ. ಅಂದಿನಿಂದ ಚಂದ್ರನು ದೇವಪಕ್ಷ ಸೇರಿದನು. ಗಂಧರ್ವರಲ್ಲಿ ವಾಗ್ದೇವಿ ನೆಲೆಸಿದಳು. ಆದರೂ ಆ ದೇವಿಯು ದೇವತೆಗಳೊಡನೆ ರಹಸ್ಯವಾಗಿ ಬಂದು ಹೋಗುವಳು. ಇದರಿಂದಾಗಿ ಸರಸ್ವತಿಯಿಂದ ಗಂಧರ್ವರಿಗೆ ಯಾವ ಪ್ರಯೋಜನವೂ ಆಗಲಿಲ್ಲ. ಸೋಮನೂ, ಸರಸ್ವತಿಯೂ ದೇವತೆಗಳ ಪಾಲಿಗೆ ಉಳಿದರು.

ಆ ದೇವಯಾಗಕ್ಕೆಂದು, ಗೋವುಗಳು, ದೇವತೆಗಳು, ಪರ್ವತ, ಪಶು, ಪಕ್ಷಿ ವೃಕ್ಷಗಳಲ್ಲದೆ, ಯಕ್ಷ, ರಾಕ್ಷಸರು, ಸಿದ್ಧಸಾಧ್ಯರು, ಸರ್ಪಗಳು, ರುದ್ರರು, ಆದಿತ್ಯರು, ವಸುಗಳು ಹಾಗೂ ಅಶ್ವಿನೀ ದೇವತೆಗಳೂ ಸಹ ತಮ್ಮ ಪರಿವಾರ ಸಮೇತ ಆಗಮಿಸಿದ್ದರು. ಅವರೆಲ್ಲರೂ ಆ ಯಾಗದಲ್ಲಿ ತಮ್ಮ ಪಾಲಿನ ಹವಿರ್ಭಾಗಗಳನ್ನು ಪಡೆಯಲು ಬಂದವ ರಾಗಿದ್ದರು. ಆ ಸ್ಥಳದಲ್ಲಿ ಆಗ ಇಪ್ಪತ್ತೈದುನದಿಗಳಾಗಿ ಗೌತಮೀನದಿಯನ್ನು ಸೇರಿದವು. ಯಾಗದಲ್ಲಿ ಪೂರ್ಣಾಹುತಿಯನ್ನು ಕೊಟ್ಟ ಸ್ಥಳದಲ್ಲಿ ಹುಟ್ಟಿದ ಕಾರಣ "ಪೂರ್ಣಾನದಿ" ಯೆಂದು ಕರೆಯಲ್ಪಡುವ ನದಿ ಹರಿದಿದೆ.

ಗೌತಮೀನದಿಗೆ ಅನೇಕ ನದಿಗಳು ಸಂಗಮಿಸಿದ್ದು, ಅಲ್ಲಿ ಅನೇಕ ಪುಣ್ಯ ತೀರ್ಥಗಳು ಕಂಗೊಳಿಸುತ್ತವೆ. ಅವುಗಳಲ್ಲಿ ಕೆಲವು ನದಿಗಳು ಸೋಮನ ಸೇವೆ ಮಾಡಲು, ಇನ್ನೂ ಕೆಲವು ಯಾಗ ಶಾಲೆಯಲ್ಲಿ ಹರಿದು ಪಾವನ ಗೊಳಿಸಲು ಉಗಮಿಸಿ ಹರಿದಿವೆ.

ಈ ತೀರ್ಥಗಳು ಕೆಲವು ನದೀರೂಪದಿಂದ, ಕೆಲವು ಸರೋವರರೂಪದಿಂದ ಹಲವಾರು ಸ್ತೋತ್ರರೂಪದಲ್ಲಿ ಹರಿಯುತ್ತವೆ. ಇಲ್ಲಿರುವ ಪ್ರಸಿದ್ಧ ತೀರ್ಥಗಳೆಂದರೆ-

ಗಾಂಧರ್ವತೀರ್ಥ, ಸೋಮತೀರ್ಥ, ಪೂರ್ಣಾತೀರ್ಥ, ಕರ್ಣಿಕಾಸಂಗಮ, ವಾಸವಿ ಸಂಗಮ, ಸುರತೀರ್ಥ, ವೃದ್ಧತೀರ್ಥ, ಶಿಖಿತೀರ್ಥ, ಕುಸುಂಬಿಕಾತೀರ್ಥ, ಅಜತೀರ್ಥ, ಭದ್ರತೀರ್ಥ, ದೇವತೀರ್ಥ ಮುಂತಾದವುಗಳನ್ನು ಹೆಸರಿಸಬಹುದು.

## ಶಿವಪ್ರೇರಿತಾಮೃತ ಸಂಗಮಾದಿ ತೀರ್ಥ

**ಬ್ರಹ್ಮ:-** ಪುಣ್ಯಮಯವೆನಿಸಿದ ಪುವರಾಸಂಗಮ ತೀರ್ಥವೆಂಬುದು ಗೌತಮೀ ನದಿಯಲ್ಲಿ ಇದ್ದು, ಅಲ್ಲಿ ಸಿದ್ದೇಶ್ವರನೆಂಬ ಹೆಸರಿನಿಂದ ಶಿವನು ನೆಲೆಸಿರುವನು. ಅದು ಜಾಗೃತ ಸ್ಥಳವೆನಿಸಿ, ಇಂದಿಗೂ ಭಕ್ತ, ಭಾವುಕರಿಗೆ, ಸ್ನಾನ, ಧ್ಯಾನ, ಆರಾಧನೆಯಿಂದ ಪಾಪ ಮುಕ್ತರಾಗಿ ಪರಮ ಪದವಿ ಪಡೆಯುವ ಶಾಶ್ವತವಾದ ಮುಕ್ತಿ ಮಂದಿರವೆನಿಸಿದೆ.

ಒಮ್ಮೆ, ದೇವತೆಗಳೂ, ದಾನವರೂ ತಮ್ಮ ಮೊದಲಿನ ವೈರಭಾವ ಮರೆತು ಒಂದುಗೂಡಿದರು. ಮೇರುಗಿರಿಗೆ ಬಂದ ಅವರೆಲ್ಲರೂ ಪರಸ್ಪರದಲ್ಲಿ ಒಮ್ಮತಕ್ಕೆ ಬಂದರು, ಆಲೋಚಿಸಿ ಅವರೆಂದರು:- "ನಾವೀರ್ವರೂ ಸ್ನೇಹದಿಂದ ವರ್ತಿಸಿದರೆ ಸುಖವಾಗಿರ ಬಹುದು. ನಾವೆಲ್ಲರೂ ಕಲೆತು ಅಮೃತವನ್ನು ಸಂಪಾದಿಸಿ ಕುಡಿಯೋಣ."

ಈ ನಿರ್ಧಾರದೊಂದಿಗೆ ದೇವಾಸುರರು ಒಂದಾಗಿ ಸಮುದ್ರಮಥನಕ್ಕೆ ಮುಂದಾದರು. ಮಂದರಗಿರಿಯನ್ನು ಕಡಗೋಲನ್ನಾಗಿ ಮಾಡಿಕೊಂಡು, ವಾಸುಕಿಯನ್ನು ಹಗ್ಗವನ್ನಾಗಿ ಮಾಡಿ, ಒಂದೆಡೆ ದೇವತೆಗಳು ಇನ್ನೊಂದೆಡೆ ದೈತ್ಯರು ನಿಂತುಕೊಂಡು ಮಥನಕಾರ್ಯ ಆರಂಭಿಸಿದರು. ದೀರ್ಘಕಾಲ ಸಮುದ್ರ ಮಥನ ಫಲವಾಗಿ, ಸಮುದ್ರದಿಂದ ಸರ್ವಶ್ರೇಷ್ಠವಾದ ಅಮೃತ ಉದಿಸಿತು. ಆಗ ಆಯಾಸಗೊಂಡ ಅವರು ತಮ್ಮಲ್ಲಿ ಮಾತನಾಡಿಕೊಂಡು, ಒಮ್ಮತಕ್ಕೆ ಬಂದರು. ಅಸುರರೆಲ್ಲರೂ ನಿದ್ರೆಮಾಡಲು ನಿರ್ಧರಿಸಿ, ಅಮೃತವನ್ನು ಕಾಯಲು ದೇವತೆಗಳಿಗೆ ಒಪ್ಪಿಸಿ ಹೊರಟು ಹೋದರು. ಅವರು ಹೋದ ಬಳಿಕ ದೇವತೆಗಳೆಲ್ಲರೂ ರಹಸ್ಯವಾಗಿ ಆಲೋಚಿಸಿ ಅಮೃತವನ್ನೆಲ್ಲಾ ತಾವೇ ಕುಡಿಯಲು ಹಂಚಿಕೆ ಮಾಡಿದರು. ಇವರ ಯೋಜನೆಗೆ ದೇವಗುರು ಬೃಹಸ್ಪತಿಯೂ ಸಮ್ಮತಿಸಿದ. ದೈತ್ಯರನ್ನು ಕಡೆಗಣಿಸಿ, ತಾವೇ ಅಮೃತ ಎಲ್ಲವನ್ನು ಕುಡಿದು ಅಮರರಾಗಲು ದೇವತೆಗಳು ಸನ್ನಾಹಮಾಡಿದರು.

ಅಮೃತಪಾನಕ್ಕೆ ಸೂಕ್ತ ಹಾಗೂ ಗೌಪ್ಯ ಸ್ಥಳದ ಬಗ್ಗೆ ಬಿಸಿ ಚರ್ಚೆಯಾಗಿ, ಸಮಸ್ಯೆ ಬಗೆಹರಿಯದೇ ಬೃಹಸ್ಪತಿಯ ಸಲಹೆಯಂತೆ, ನನ್ನ (ಬ್ರಹ್ಮ) ಬಳಿಗೆ ಬಂದರು ಅವರೆಲ್ಲ.

ಸೂಕ್ತವಾದ ಸ್ಥಳದ ಆಯ್ಕೆಗಾಗಿ, ಶಿವ ಹಾಗೂ ಹರಿಯರ ಸಲಹೆಯೂ ಅವಶ್ಯವೆನಿಸಿ ನಾನು ಅವರೊಡನೆ ಅವರ ಲೋಕಗಳಿಗೆ ಹೋಗಿ ಬಂದೆ. ಮುಂದಿನ ಕಾರ್ಯ ಕುರಿತು ಆಲೋಚಿಸಿದೆ. ನಾವೆಲ್ಲರೂ ಗಂಧರ್ವ ಕಿನ್ನರರೊಡನೆ ಮೇರುಗಿರಿಯ ಗುಹೆಯೊಂದರಲ್ಲಿ ಪ್ರವೇಶಿಸಿ ಅಮೃತಪಾನಕ್ಕೆ ಕುಳಿತೆವು. ನಮ್ಮ ಚಟುವಟಿಕೆಯ ಸುಳಿವು ಯಾವ ದೈತ್ಯರಿಗೂ ಗೊತ್ತಾಗದಂತೆ ಗೌಪ್ಯವಾಗಿ ನಡೆಯಿತು. ಸೂರ್ಯನು ದೇವತೆಗಳಲ್ಲದವರನ್ನು ಪತ್ತೆಮಾಡಲು ಕಾವಲು ನಿಂತಿದ್ದ. ಚಂದ್ರನು ನಮಗೆಲ್ಲ ಸಾಕಾಗುವಂತೆ, ಅಮೃತವನ್ನು ಹಂಚುತ್ತಲಿದ್ದನು. ಹರಿಯು ಸುದರ್ಶನಚಕ್ರ ಧರಿಸಿ ರಕ್ಷಣೆಯ ಹೊಣೆ ಹೊತ್ತಿದ್ದನು. ಹೀಗಾಗಿ ನಾವು ಅಮೃತಪಾನ ಮಾಡುವ ಸುಳಿವು ಯಾವ ದೈತ್ಯನಿಗೂ ಗೊತ್ತಾಗಲಿಲ್ಲ

ವಾದರೂ ರಾಹು ಒಬ್ಬ ಅಪವಾದವೆನ್ನಬೇಕಷ್ಟೆ ! ಆ ಮಾಯಾವಿಯಾದ ರಾಹವು ಮರುತ್ತುಗಳ ರೂಪಧರಿಸಿ, ಪಾನಪಾತ್ರೆಯನ್ನು ಹಿಡಿದು, ಮರುತ್ತುದೇವತೆಗಳ ಮಧ್ಯದಲ್ಲಿ ಕುಳಿತಿದ್ದನ್ನು ಮುಂದಾಗಿಯೇ ಸೂಚ್ಯವಾಗಿ ಸೂರ್ಯನು ಚಂದ್ರನಿಗೆ ತಿಳಿಸಿದನು. ಆದರೆ ಅಷ್ಟರಲ್ಲಿಯೇ ರಾಹುವಿಗೆ ಅಮೃತ ಉಣಬಡಿಸ ಲಾಗಿತ್ತು. ಈ ಸಮಾಚಾರವನ್ನು ಚಂದ್ರನು ಶ್ರೀಹರಿಗೆ ತಿಳಿಸಿದನು. ಆದರೆ ಕಾಲ ಮಿಂಚಿತ್ತು. ರಾಹು ಆಗಲೇ ಅಮೃತದ ಗುಟುಕು ಕುಡಿದಿದ್ದ. ಕೂಡಲೇ ಶ್ರೀಹರಿಯು ಚಕ್ರದಿಂದ ದೈತ್ಯನ ತಲೆಯನ್ನು ಕತ್ತರಿಸಿದನು. ಆದರೆ ಆ ಶಿರಸ್ಸು ಅಮೃತದಿಂದ ಅಮರವಾಗಿದ್ದಿತು.

ಶ್ರೀಹರಿಯ ಚಕ್ರದ ಹೊಡೆತದಿಂದ ರಾಹುವಿನ ರುಂಡಮುಂಡ ಬೇರೆಯಾಗಿದ್ದರೂ, ಅಮೃತಪಾನ ಪ್ರಭಾವದಿಂದ ಮುಂಡವು ಭೂಮಿಯನ್ನೇ ನಡುಗಿಸುತ್ತ ಗೌತಮೀ ನದಿಯ ದಕ್ಷಿಣ ತೀರದಲ್ಲಿ ಬಿದ್ದಿತು. ಮುಂಡವು ಅಮರತ್ವದಿಂದ ಆಶ್ಚರ್ಯಕರವಾಗಿ ತೋರಿತು. ರಾಹುವಿನ ರುಂಡ, ಮುಂಡಗಳೆರಡೂ ಹನಿಯಷ್ಟು ಅಮೃತ ಕುಡಿದ ಪ್ರಭಾವದಿಂದ ಅಮರವಾದವು. ಆದರೆ ಅವು ಒಂದಕ್ಕೊಂದು ಹೊಂದಿಕೊಂಡರೆ, ಅವನು ಮರಳಿ ಮತ್ತೆ ಜೀವಿಸಿ ಅಮರತ್ವ ಹೊಂದಿ ಮಹಾ ಅಸುರನಾಗಿ ದೇವತೆಗಳಿಗೆ ಮಾರಕನಾಗುವನು. ಭೂಮಿಯಲ್ಲಿ ಬಿದ್ದ ಮುಂಡ ನಾಶಪಡಿಸಲು, ದೇವತೆಗಳು ಗಾಬರಿಯಿಂದ ಗೌರೀಶನನ್ನು ಬೇಡಿಕೊಂಡರು.

ದೇವತೆಗಳೆಲ್ಲರ ದೀನವಾಣಿ ಕೇಳಿ, ಕಾಳಿಕಾದೇವಿ, ಶಿವನ ಆಯುಧಗಳನ್ನು ಧರಿಸಿ, ಶಿವಶಕ್ತಿ ಸ್ವರೂಪಿಣಿಯಾಗಿ, ಆ ದೈತ್ಯನ ದೇಹವನ್ನು ತಿನ್ನಲು ಮುಂದಾಗಿ ಬಂದಳು. ರುಂಡವಿಲ್ಲದ ಆ ರಾಹುವಿನ ಮುಂಡ, ಆ ಚಾಮುಂಡಿ ಶಕ್ತಿಯೊಡನೆ ಬಹುದಿನ ಯುದ್ಧ ಮಾಡಿತು. ಆ ಸಮಯಕ್ಕೆ ಶಿರೋರೂಪನಾದ ರಾಹು ದೇವತೆಗಳಿಗೆ-''ಮೊದಲು ನನ್ನ ಶರೀರದಲ್ಲಿಯ ಅಮೃತ ರಸವನ್ನು ತೆಗೆಯಿರಿ. ಅಂದರೆ ದೇಹವು ಕೂಡಲೇ ಭಸ್ಮವಾಗುವುದು.'' ಎಂದು ನುಡಿದ. ಅವನ ಮಾತಿಗೆ ದೇವತೆಗಳು ಸಂತುಷ್ಟರಾಗಿ ನೀನು ಗ್ರಹಗಳಲ್ಲಿ ಒಬ್ಬನಾಗು ಎಂದು ಅವನನ್ನು ನವಗ್ರಹಗಳಲ್ಲಿ ಸೇರಿಸಿದರು. ಕಾಲಿಯು ದೇವಶಕ್ತಿಯೊಡನೆ ಕೂಡಿ, ದೈತ್ಯನ ಶರೀರವನ್ನು ಭೇದಿಸಿ ಆದರಲ್ಲಿಯ ಅಮೃತರಸವನ್ನು ಹೊರಗೆ ತೆಗೆದಳು. ನಂತರ ಅವನ ಶರೀರವನ್ನು ನಾಶಪಡಿಸಿದಳು.

ಈ ಶಿವಶಕ್ತಿಗೆ ಭದ್ರಕಾಳಿಯೆಂದು ಕರೆಯುತ್ತಾರೆ. ಅವಳು ದೈತ್ಯಶರೀರ ಬಗೆದಾಗ ಅಮೃತರಸವು ಸ್ರವಿಸಿತು. ಮುಂದೆ ಅದೇ ನದಿಯಾಗಿ ಹರಿದು, ಪ್ರವರಾ ನದಿಯೆಂದು ಹೆಸರಾಯಿತು. ಆ ನದಿಯಲ್ಲಿ ಐದು ಸಾವಿರ ಚಿಕ್ಕಪುಟ್ಟ ಪುಣ್ಯಕ್ಷೇತ್ರಗಳಿರುವವು. ರಾಹು ದೇಹವನ್ನು ಬಗೆದ ಕಾಳಿಕಾದೇವಿಯನ್ನು ದೇವತೆಗಳು ಬಗೆಬಗೆಯಾಗಿ ಸ್ತುತಿಸಿದರು. ಹೀಗೆ ಶಿವ ಮತ್ತು ಶಿವಶಕ್ತಿ ಇವರು ಈ ಸ್ಥಳದಲ್ಲಿ ವಾಸಿಸಿ (ನೆಲೆಸಿ)ರುವದರಿಂದ ಈ ಸ್ಥಳಕ್ಕೆ ''ನಿವಾಸಪುರ'' ವೆಂದು ಕರೆಯುವರು. ಈ ರೀತಿ ಪ್ರವರಾನದಿ ಗೌತಮೀನದಿಯಲ್ಲಿ ಸೇರಿದ ಸಂಗಮ ಸ್ಥಳವು ಪ್ರಸಿದ್ಧವಾಗಿ ದೇವತೆಗಳಿಗೆ ಪ್ರಿಯವಾಗಿರುವದು. ಆ ಸಂಗಮದಲ್ಲಿ ಸ್ನಾನಮಾಡುವವರಿಗೆ ಭೋಗ ಮೋಕ್ಷಗಳು ಲಭಿಸುತ್ತವೆ. ಈ ಸಂಗಮತೀರ್ಥಕ್ಕೆ ಪ್ರವರಾ ಸಂಗಮವೆಂದು ಹೆಸರು ಬಂದಿದೆ. ಶಿವನಿಂದ ಪ್ರೇರಿತಳಾಗಿ, ಭದ್ರಕಾಳಿಯಾಗಿ ಬಂದು, ದೈತ್ಯನ ಶರೀರ ಭೇದಿಸಿದ ಆ ಸಿಂಹಸ್ವರೂಪಿಣಿಗೆ ಮುಂದೆ 'ಅಮೃತೇಶ್ವರಿ' ಎಂದೂ ಕರೆಯುತ್ತಾರೆ.

## ವೃದ್ಧಾಸಂಗಮ, ಹದಿನೇಳು ತೀರ್ಥ ವರ್ಣನೆ

**ಬ್ರಹ್ಮ:-** ವೃದ್ಧಾ ಸಂಗಮವೆಂಬ ಅಪೂರ್ವ ತೀರ್ಥ ಒಂದಿದ್ದು, ಅಲ್ಲಿ ಪರಮಶಿವನು ವೃದ್ಧೇಶ್ವರನೆಂಬ ಹೆಸರಿನಿಂದ ನೆಲೆಸಿರುತ್ತಾನೆ. ಆ ತೀರ್ಥದ ಪ್ರಭಾವಯುಕ್ತವಾದ ಮಹಿಮೆಯನ್ನು ವರ್ಣಿಸುವೆ, ಕೇಳು.

ಮಹಾತಪಸ್ವಿ ಗೌತಮನಿಗೆ ವೃದ್ಧಗೌತಮನೆಂಬ ಮಗನಿದ್ದು ಅವನು ಕುರೂಪಿ. ಹೀಗಾಗಿ ತಾರುಣ್ಯದಲ್ಲಿಯೇ ವೈರಾಗ್ಯಭಾವ ತಾಳಿ, ದೇಶಸಂಚಾರ ಕೈಕೊಂಡನು. ತನಗಿರುವ ಕುರೂಪದಿಂದ ಲಜ್ಜಿತನಾಗಿ ಅವನು ಸದಾ ಸಮವಯಸ್ಕರಿಂದ ದೂರ. ಹೀಗಾಗಿ ವೇದಾಧ್ಯಯನ ಮಾಡಲಿಲ್ಲ. ತಂದೆ ಗೌತಮ ಅವನ ಉಪನಯನ ಸಂಸ್ಕಾರ ಮಾಡಿದ್ದ ಅಷ್ಟೇ. ಶಾಸ್ತ್ರಾಧ್ಯಯನ ಮಾಡದಿದ್ದರೂ, ಸದಾಚಾರದಿಂದ ಅಗ್ನಿಕಾರ್ಯ, ಗಾಯತ್ರ್ಯುಪಾಸನೆ ಗಳಿಂದ ತಕ್ಕ ಮಟ್ಟಿಗೆ ಬ್ರಾಹ್ಮಣನಾಗಿದ್ದ. ಹೀಗಿದ್ದೂ ಅವನಿಗೆ ಮದುವೆಯಾಗಲಿಲ್ಲ. ಅವಿದ್ಯಾವಂತನೂ, ಕುರೂಪಿಯೂ ಆದವನಿಗೆ ಹೆಣ್ಣುಕೊಡುವವರು ಹಿಂದೇಟು ಹಾಕುತ್ತಿದ್ದರು. ತೀರ್ಥ, ದೇಶ, ಆಶ್ರಮಗಳನ್ನು ಸಂಚರಿಸುತ್ತ ಕಾಲ ಕಳೆಯುತ್ತಿದ್ದನು. ಹೀಗೆ ಸಂಚರಿಸುತ್ತ ಗೌತಮನು ಹಿಮಾಲಯಕ್ಕೆ ಬಂದನು. ಅಲ್ಲಿ ಸುಂದರವಾದ ಗುಹೆಯನ್ನು ಕಂಡು, ಅದರಲ್ಲಿ ವಾಸಿಸಲು ಬಯಸಿ, ಅದನ್ನು ಪ್ರವೇಶಿಸಿದಾಗ ಅಲ್ಲೊಬ್ಬ ಸ್ತ್ರೀ ಕುಳಿತಿದ್ದಳು.

ಆ ಸ್ತ್ರೀಯೂ ಸಹ ವೃದ್ಧಳೇ! ಇವನಂತೆ ಅವಳೂ ವೈರಾಗ್ಯ ಭಾವದಿಂದ ಬ್ರಹ್ಮಚಾರಿಣಿ ಯಾಗಿಯೇ ಬಾಳುತ್ತಿದ್ದಳು. ತಪಸ್ವಿನಿಯಂತೆ ನಿರಾಡಂಬರಜೀವನ ಅವಳದು. ತನಗಿಂತಲೂ ವಯಸ್ಸಿನಲ್ಲಿ ಹಿರಿಯಳೆಂಬುದನ್ನು ಊಹಿಸಿ ವೃದ್ಧಗೌತಮ ಅವಳಿಗೆ ನಮಸ್ಕರಿಸಲು ಹೋದಾಗ ಅವಳು ಅವನನ್ನು ತಡೆದು ನುಡಿದಳು : ಹಿಂದೆ ಆರ್ಷ್ಟಿಷೇಣನ ಮಗ ಋತುಧ್ವಜನೆಂಬ ರಾಜ. ಅವನು ಮಹಾಶೂರನೂ, ಬುದ್ಧಿಶಾಲಿಯೂ, ಕೀರ್ತಿವಂತನೂ ಆಗಿದ್ದ. ಅವನು ಒಂದು ದಿನ ಬೇಟೆಯಾಡುತ್ತ ಸೈನ್ಯದೊಡನೆ ಕಾಡಿಗೆ ಹೋದ. ಆಗ ಬಳಲಿಕೆಯ ಪರಿಹಾರಕ್ಕಾಗಿ ಈ ಗುಹೆಗೆ ಬಂದು ವಿಶ್ರಮಿಸಿಕೊಂಡನು. ಸುಂದರಾಂಗನೂ, ತರುಣನೂ ಆದ ಋತಧ್ವಜನನ್ನು ಸುಶ್ಯಾಮಾ ಎಂಬ ಅಪ್ಸರೆಯು ನೋಡಿ ಅನುರಕ್ತಳಾದಳು. ಆ ದಿವ್ಯ ಸುಂದರಿಯನ್ನು ಕಂಡ ರಸಿಕ ರಾಜನೂ ಅವಳಲ್ಲಿ ಮೋಹಿತನಾದನು. ಕೆಲವು ಕಾಲ ಅವರಿಬ್ಬರೂ ಸರಸದಿಂದ ವಿಹರಿಸಿದರು. ವಿಹಾರ ತೀರಿದೊಡನೆ, ರಾಜನು ಅಲ್ಲಿಂದ ದೂರವಾದ. ಅವರಿಂದ ಜನಿಸಿದವಳು ನಾನು. ನಂತರ ತಾಯಿಯೂ ಹೊರಟುಹೋದಳು. ಹೋಗುವ ಮುನ್ನ ಅವಳು ನನ್ನ ಕರೆದು, ''ಈ ಗುಹೆಯಲ್ಲಿ ಮೊದಲಿಗನಾಗಿ ಯಾವ ಪುರುಷನು ಪ್ರವೇಶಿಸುವನೋ ಅವನೇ ನಿನ್ನ ಪತಿಯಾಗುವನು'' ಎಂದು ಅಭಯ ಹೇಳಿ ತೆರಳಿದಳು.

''ಅಂದಿನಿಂದ ನಾನು ಯಾವ ಪುರುಷನನ್ನೂ ಕಣ್ಣೆತ್ತಿ ನೋಡಿಲ್ಲ ನನಗೆ ತಂದೆ ತಾಯಿ ಯಾರೂ ಇಲ್ಲ. ನನಗೆ ನೀನೇ ದಿಕ್ಕು. ನನ್ನನ್ನು ವರಿಸು. ನಿನ್ನ ನೆರಳಾಗಿ ನಾನು ಬಾಳುವೆ'' ಎಂದು ಮನದ ಆಶೆಯನ್ನು ವ್ಯಕ್ತಪಡಿಸಿದಳು. ವಯಸ್ಸಿನಿಂದ ಅವಳು ಅವನಿಗಿಂತ ಹಿರಿಯಳು. ಹೀಗಾಗಿ ಗೌತಮ ಅವಳನ್ನು ವರಿಸಲು ಆತಂಕ ವ್ಯಕ್ತಪಡಿಸಿದ. ಅವಳು ಅವನಿಗೆ ''ನೀನು ನಿರಾಕರಿಸಿದರೆ ನಿನ್ನ ಎದುರಿನಲ್ಲಿಯೇ ಪ್ರಾಣಬಿಡುವೆ'' ಎಂದು ಪಣವಿಟ್ಟಳು. ಅವಳ ಮಾತನ್ನು ಕೇಳಿ ವೃದ್ಧಗೌತಮ ಸಂತೈಸುವ ಧ್ವನಿಯಲ್ಲಿ ನುಡಿದ:

"ನಾನು ವಿದ್ಯಾವಂತನಲ್ಲ, ರೂಪವಂತನೂ ಅಲ್ಲ. ಮೇಲಾಗಿ ಮೂಗಿಲ್ಲದ ಕುರೂಪಿ. ಇಂಥವನನ್ನು ಕೈ ಹಿಡಿದು ನೀನು ಯಾವ ಸುಖ ಪಡೆಯುವೆ?"

ಅವನ ಈ ನಿಷ್ಕಪಟತನದ ನುಡಿಯಿಂದ ಅವಳಲ್ಲಿ ಅವನ ವಿಷಯವಾಗಿ ಆದರಾಭಿಮಾನ, ಒಲುಮೆಗಳು ಮಾತಾಗಿ ಹೊರಹೊಮ್ಮಿದವು. ಅವಳು ಮಾತು ಮುಂದುವರಿಸಿದಳು: "ನೀನು ಯಾವದಕ್ಕೂ ವ್ಯಥೆಪಡಬೇಡ. ನಾನು ಈಗಾಗಲೇ ಸರಸ್ವತಿಯನ್ನು ಒಲಿಸಿಕೊಂಡಿದ್ದೇನೆ. ಮತ್ತು ರೂಪವಂತರಾದ ಜಲಾಗ್ನಿ ದೇವತೆಗಳನ್ನು ಸಂತೋಷಪಡಿಸಿದ್ದೇನೆ. ಆದುದರಿಂದ ಸರಸ್ವತಿ ನಿನಗೆ ವಿದ್ಯೆಯನಿಧಿಯನ್ನೇ ಅನುಗ್ರಹಿಸಬಲ್ಲಳು. ಅಗ್ನಿಯು ನಿನಗೆ ಮನ್ಮಥನ ತಾರುಣ್ಯ, ರೂಪಲಾವಣ್ಯ ನೀಡಬಲ್ಲಳು. ಮುಖ್ಯ ನೀನು ಮನಸ್ಸುಮಾಡಿ ನನ್ನನ್ನು ವರಿಸು."

ಅವಳ ಮಾತಿಗೆ ಮಾರುತ್ತರ ನೀಡದೇ ವೃದ್ಧಗೌತಮ ಮೌನನಾಗಿದ್ದ. ಹೀಗೆ ಸ್ವಲ್ಪಕಾಲ ಕಳೆದನಂತರ, ಆ ವೃದ್ಧೆಯು ಅಗ್ನಿಯನ್ನೂ, ಸರಸ್ವತಿಯಿನ್ನೂ ಧ್ಯಾನಮಾಡಿದಳು. ಅವರ ಅನುಗ್ರಹ ಬಲದಿಂದ ವೃದ್ಧ ಗೌತಮನಿಗೆ ವಿದ್ಯೆಯನ್ನೂ ರೂಪವನ್ನು ದೊರಕಿಸಿ ಕೊಟ್ಟಳು. ಆ ವೃದ್ಧೆಯ ಪವಾಡ ಸದೃಶ ತಪಶ್ಶಕ್ತಿಗೆ ತಲೆಬಾಗಿ ವೃದ್ಧ ಗೌತಮ ಅವಳ ಮನದಾಸೆಯಂತೆ ವರಿಸಿದ. ಅದೇ ಗುಹೆಯಲ್ಲಿ ಅವರಿಬ್ಬರೂ ಪುನರಪಿ ತಾರುಣ್ಯ, ಲಾವಣ್ಯ ದೇಹಯುಕ್ತರಾಗಿ ಸುಖ, ಶಾಂತಿ, ಸಂಭ್ರಮದಿಂದ ಬಹುವರ್ಷ ವಿಹಾರಮಾಡಿದರು. ಈ ವಿಹಾರ ಪೂರಿತ ಶೃಂಗಾರ, ಸಂಭ್ರಮದಲ್ಲಿ ಅವರೀರ್ವರೂ ದಾಂಪತ್ಯ ಜೀವನದ ರಸನಿಮಿಷ ಕಳೆಯುತ್ತಿರುವಾಗ, ಆ ಗುಹೆಗೆ ತಪಸ್ವಿಗಳಾದ ವಶಿಷ್ಠ ವಾಮದೇವರು ಆಗಮಿಸಿದರು. ಮನೆಗೆ ಬಂದ ಮುನಿಗಳನ್ನು ವೃದ್ಧಗೌತಮನು ಸತ್ಕರಿಸಿ ಉಪಚರಿಸಿದನು. ಆ ಮುನಿಗಳೊಂದಿಗೆ ಯೌವನದಿಂದ ಉನ್ಮತ್ತರಾದ ಕೆಲವರು ತರುಣ ತಪಸ್ವಿಗಳೂ ಇದ್ದರು. ಈ ತರುಣರು ಈ ವೃದ್ಧಗೌತಮ ದಂಪತಿಗಳನ್ನು ಕಂಡು ಅಪಹಾಸ್ಯ ಮಾಡಿದರು. ಆದರಿಂದ ಇವರು ಲಜ್ಜಿತರಾಗಿ ಸ್ವಲ್ಪ ದುಃಖಿತರೂ ಆದರು.

ಅವರ ಆತಿಥ್ಯದಿಂದ ಪ್ರೀತರಾಗಿ, ಮುನಿಗಳು ತಮ್ಮಾಶ್ರಮಗಳಿಗೆ ಹೊರಟು ನಿಂತರು. ಆಗ ವೃದ್ಧ ಗೌತಮ ಹೆಂಡತಿಯೊಡನೆ ಅಗಸ್ತ್ಯ ಮುನಿಯಬಳಿಗೆ ಬಂದು ನಮಸ್ಕರಿಸಿ, ಶೀಘ್ರವಾಗಿ ಶ್ರೇಯಸ್ಸು ಪಡೆಯಲು ಎಲ್ಲಿ ತಪಸ್ಸು ಮಾಡಬೇಕು? ಭೋಗ ಮೋಕ್ಷಗಳು ಎಲ್ಲಿ ಲಭಿಸುವವು? ಎಂಬುದಾಗಿ ಪ್ರಶ್ನಿಸಿದಾಗ, ಆ ಮುನಿಯು ಅವರಿಗೆ ಗೌತಮೀ ತೀರವೇ ಪ್ರಶಸ್ತವಾಗಿದ್ದು, ಅಲ್ಲಿ ತಪಸ್ಸಾಚರಿಸಿದರೆ ಶೀಘ್ರವಾಗಿ ಭೋಗ ಮೋಕ್ಷ ದೊರಕುವದಾಗಿ ಅಭಿಪ್ರಾಯಪಟ್ಟು ಅನುಗ್ರಹಿಸಿ ತೆರಳಿದ.

ಅಗಸ್ತ್ಯನ ಉಪದೇಶ ಹೊಂದಿದ ಗೌತಮನು ತನ್ನ ವೃದ್ಧ ಹೆಂಡತಿಯೊಡನೆ ಗೌತಮೀತೀರದಲ್ಲಿ ದೀರ್ಘತಪಸ್ಸನ್ನಾಚರಿಸಿದನು. ಮತ್ತು ತನ್ನ ಪತ್ನಿಗಾಗಿ ಶ್ರೀಹರಿ ಯನ್ನು, ಮಹಾದೇವನನ್ನೂ ಭಕ್ತಿಯಿಂದ ಸ್ತುತಿಸಿದನು. ಅವರ ಭಕ್ತಿಗೆ ಪ್ರಸನ್ನಳಾದ ಗೌತಮಿಯು "ನನ್ನ ಜಲವನ್ನು ಮಂತ್ರಗಳಿಂದ ಅಭಿಮಂತ್ರಿಸಿ, ನಿನ್ನ ಪತ್ನಿಗೆ ಅಭಿಷೇಕ ಮಾಡು. ಇದರಿಂದ ಅವಳಿಗೆ ವೃದ್ಧಾಪ್ಯ ಮಾಯವಾಗಿ ತಾರುಣ್ಯ ಲಾವಣ್ಯಗಳು ಉದಿಸಿ ಬರುತ್ತವೆ. ಆಮೇಲೆ ರೂಪವತಿಯಾದ ನಿನ್ನ ಹೆಂಡತಿಯು ನಿನಗೆ ನನ್ನ ಜಲದಿಂದ ಅಭಿಷೇಕ ಮಾಡಿದರೆ ನೀನೂ ಸಹ ಸುರಸುಂದರನಾಗಿ ಮಾರ್ಪಡುವೆ" ಎಂದು ನುಡಿದು

ಅನುಗ್ರಹಮಾಡಿದಳು. ಆ ದಂಪತಿಗಳು, ಗೌತಮಿಯ ಉಪದೇಶದಂತೆ, ಪರಸ್ಪರರು ಅಭಿಷೇಕ ಮಾಡಿಕೊಂಡು ತಮ್ಮ ಅಭಿಲಾಷೆಯಂತೆ ತಾರುಣ್ಯಯುಕ್ತ ದೇಹ, ಆಕರ್ಷಕ ವ್ಯಕ್ತಿತ್ವ ಪಡೆದರು. ಈ ರಹಸ್ಯವನ್ನು ಅರಿತ ಎಲ್ಲ ಋಷಿಗಳು ಮುಂದೆಯೂ ಆ ಗೌತಮನನ್ನು ವೃದ್ಧಗೌತಮನೆಂದೇ ಕರೆದರು. ಆಗ ವೃದ್ಧಾದೇವಿಯು ಪ್ರತ್ಯಕ್ಷಳಾದ ಗೌತಮಿಯೊಡನೆ ''ಓ ದೇವಿ, ಈ ನದಿಯು ಇಂದಿನಿಂದ ನನ್ನ ಹೆಸರನ್ನು ಸಾರ್ಥಕಗೊಳಿಸುವಂತೆ ನದಿಯಾಗಿ ಹರಿಯಲಿ. ನಿನ್ನಲ್ಲಿ ಸೇರುವ ನನ್ನ ಹೆಸರಿನ ನದಿಯು ನಿನ್ನ ಉದರದಲ್ಲಿ ಸಂಗಮಿಸಲಿ'' ಎಂದು ನುಡಿದು, ಅಂತರ್ಧಾನವಾದಳು.

ಅಂದಿನಿಂದ ಆ ತೀರ್ಥವು ವೃದ್ಧಸಂಗಮತೀರ್ಥವೆಂದು ಹೆಸರಾಯಿತು. ಇಲ್ಲಿ ಸ್ನಾನ, ದಾನ, ಹವನ, ಹೋಮಮಾಡಿದರೆ, ರೂಪ, ಸೌಭಾಗ್ಯ, ಸಂಪತ್ತು, ಸಂತಾನ ಮುಂತಾದವುಗಳು ಲಭಿಸುತ್ತವೆ, ಪಿತೃಗಳು ಸಂತೃಪ್ತರಾಗುತ್ತಾರೆ. ಗೌತಮನು ಪ್ರತಿಷ್ಠಿಸಿದ ವೃದ್ಧಲಿಂಗೇಶ್ವರನು ಭಕ್ತರಿಂದ ಸದಾಕಾಲ ಪೂಜೆ ಸ್ವೀಕರಿಸುತ್ತ ಅವರಿಗೆ ಅನುಗ್ರಹದ ಮೂಲಕ ಸಕಲ ಸಂಪದಭಿವೃದ್ಧಿ ಮಾಡುತ್ತಿದ್ದಾನೆ.

## ಬುಧತೀರ್ಥವೇ ಮೊದಲಾದ ಹದಿನಾರು ಸಾವಿರ ತೀರ್ಥ ವರ್ಣನೆ

**ಬ್ರಹ್ಮ:-** ಈ ಪ್ರಪಂಚದಲ್ಲಿ ಬ್ರಹ್ಮಹತ್ಯಾ ದೋಷ ಪರಿಹರಿಸುವ ತೀರ್ಥ ಒಂದಿದೆ- ಅದುವೇ ಇಲಾತೀರ್ಥ.

ಬಹುಕಾಲದ ಹಿಂದೆ, ಸೂರ್ಯವಂಶದಲ್ಲಿ ಇಲನೆಂಬ ಕ್ಷತ್ರಿಯ ರಾಜನೊಬ್ಬ ಪ್ರಸಿದ್ಧನಾಗಿದ್ದ. ಒಂದು ದಿನ ಅವನು ದೊಡ್ಡ ಸೇನೆಯೊಡನೆ ಬೇಟೆಯಾಡುತ್ತ ಕಾಡಿನಲ್ಲಿ ಬಹುದೂರ ಹೋದ. ರಾಜನಿಗೆ ಬೇಟೆಯಾಡುವದರಲ್ಲಿ ಅತೀವ ಆಸಕ್ತಿ. ಹೀಗೆ ಬಹುದಿನ ಉರುಳಿದರೂ ಬೇಟೆಯಾಡುವದನ್ನು ಬಿಡದೇ ಮುಂದುವರಿಸಲು ಆಶಿಸಿ, ಮಂತ್ರಿಗಳಿಗೆಲ್ಲ ರಾಜ್ಯಕಾರ್ಯದಲ್ಲಿ ಗಮನವಿಡಲು ಆಜ್ಞಾಪಿಸಿ, ಕೆಲವು ಸಹಾಯಕರನ್ನು ತನ್ನ ಜೊತೆ ಇರಲು ಆಜ್ಞಾಪಿಸಿ, ಉಳಿದವರನ್ನು ರಾಜಧಾನಿಗೆ ಕಳಿಸಿದ. ರಾಜನು ಇತ್ತ ಕಾಡಿನಲ್ಲಿ ವಾಸಿಸುತ್ತ, ದಿನವೂ ಬೇಟೆಯಾಡುತ್ತ ದಿನ ಕಳೆಯುತ್ತಿರಲು ಒಂದು ದಿನ ಅವನು ರತ್ನಮಯವಾದ ಹಿಮಾಲಯಕ್ಕೆ ಹೋದ. ಅಲ್ಲಿ ರತ್ನಮಯವಾದ ಗುಹೆ ಕಂಡನು. ಆ ಗುಹೆಯಲ್ಲಿ ಸುಮನ್ಯುವೆಂಬ ಯಕ್ಷರಾಜನು ವಾಸವಾಗಿದ್ದನು. ಸಮಾದೇವಿ ಅವನ ಹೆಂಡತಿ. ಆ ಯಕ್ಷದಂಪತಿಗಳು ಮೃಗರೂಪಧರಿಸಿ, ಪ್ರಶಾಂತ ಹಿಮಾಲಯದಲ್ಲಿ ಸ್ವಚ್ಛಂದ ವಿಹಾರ ಮಾಡುತ್ತಿದ್ದರು. ಮೃಗರೂಪ ಧರಿಸಿದ ಯಕ್ಷನು ಇಲರಾಜನನ್ನು ಗುರುತಿಸಿದನು. ಆದರೆ ರಾಜನಿಗೆ ಅದು ಯಕ್ಷನಗುಹೆ ಎಂಬುದು ತಿಳಿದಿರಲಿಲ್ಲ. ಹೀಗಾಗಿ ಸುಂದರ ಹಾಗೂ ಸುಸಜ್ಜಿತ ಗುಹೆಯಲ್ಲಿ ರಾಜನು, ತನ್ನ ಸಹಾಯಕರೊಡನೆ ಸುಖವಾಗಿ ವಾಸಿಸತೊಡಗಿದನು.

ಈ ರೀತಿ ಇಲರಾಜನು ಪೂರ್ವಾನುಮತಿ ಇಲ್ಲದೆ, ಗುಹೆಯನ್ನು ಪ್ರವೇಶಿಸಿ, ತನ್ನ ಮನೆಯೆಂಬುವಂತೆ ಆಕ್ರಮಿಸಿದ್ದಕ್ಕಾಗಿ ಮೃಗರೂಪದಲ್ಲಿದ್ದ ಯಕ್ಷನು ಯೋಚನೆ ಗೀಡಾದನು. ತನ್ನ ವಾಸಸ್ಥಳವನ್ನೇ ಅಪಹರಿಸಿದ ದುಷ್ಟರಾಜನನ್ನು ಸಂಹರಿಸಲು ಹಂಚಿಕೆ ಹಾಕಿದ. ಕೊಬ್ಬಿರುವ ಇಲರಾಜನನ್ನು ಮಣ್ಣುಮುಕ್ಕಿಸಲು ಆ ಯಕ್ಷನು ತನ್ನ ಭಟರನ್ನು ಉದ್ದೇಶಿಸಿ, ''ಈ ದುಷ್ಟನನ್ನು ಆಚೆಗೆ ಅಟ್ಟಿ, ಮನೆಯನ್ನು ಬಿಟ್ಟು ತೆರಳುವಂತೆ ಮಾಡಿರಿ'' ಎಂದು ಕಟ್ಟಪ್ಪಣೆ ಮಾಡಿದ. ಒಡೆಯನ ಅಪ್ಪಣೆಯಂತೆ ಆ ಶೂರ ಯಕ್ಷಭಟರು ಇಲರಾಜ ನೊಡನೆ ಪರಿಶ್ರಮಿಸಿ ಹೋರಾಡಿದರು. ಆದರೆ ಅವನೊಂದಿಗೆ ಹೋರಾಟದಲ್ಲಿ ಹತರಾಗಿ

ಹೋದರು. ಬಳಿಕ ಉಳಿದವ ಯಕ್ಷರಾಜನೊಬ್ಬನೆ. ಹೀಗೆ ಮನೆಮಾರು ಕಳೆದುಕೊಂಡು, ಪರದೇಶಿಯಂತೆ ಯಕ್ಷನು ಅಡವಿಯಲ್ಲಿ ಮಡದಿಯೊಡನೆ ಅಲೆದಾಡಬೇಕಾಯಿತು.

ಮೃಗರೂಪದಲ್ಲಿದ್ದು ಕಾಡಿನಲ್ಲಿ ಅಲೆದಾಡುವಾಗ ಯಕ್ಷನು ಹೆಂಡತಿಗೆ ಒಂದು ಉಪಾಯ ಸೂಚಿಸುತ್ತ "ನೀನು ಸುಂದರ ಮೃಗರೂಪವನ್ನು ಧರಿಸಿ ಉಮಾವನಕ್ಕೆ ಅವನನ್ನು ಕರೆದೊಯ್ಯಬೇಕು. ಮೃಗಬೇಟೆಯಲ್ಲಿ ಸದಾ ಆಸಕ್ತನಾದ ಅವನು ನಿನ್ನ ಬೆನ್ನಟ್ಟಿ ಉಮಾವನಕ್ಕೆ ತಾನಾಗಿಯೇ ಬರುತ್ತಾನೆ. ಈ ಕಾರ್ಯವನ್ನು ಸ್ತ್ರೀಯಾದ ನೀನೇ ಮಾಡಲು ಶಕ್ಯ. ಯಾಕೆಂದರೆ ನಾನು ಅಲ್ಲಿ ಬರುವಂತಿಲ್ಲ" ಎಂದು ಹೇಳಿದಾಗ ಯಕ್ಷನ ಹೆಂಡತಿಯು ಅಚ್ಚರಿಯಲ್ಲಿ "ನೀನೇಕೆ ಉಮಾವನಕ್ಕೆ ಬರುವಂತಿಲ್ಲ? ಬಂದರೇನು ಅಪಾಯವಿದೆ! ಇದರ ರಹಸ್ಯ ಹೇಳು" ಎಂದಳು.

ಹೆಂಡತಿಯ ಕುತೂಹಲಕ್ಕೆ ಉತ್ತರವಾಗಿ ಯಕ್ಷ ರಹಸ್ಯ ಬಿತ್ತರಿಸಹತ್ತಿದ. "ಒಮ್ಮೆ ಈ ಹಿಮಾಲಯದಲ್ಲಿ ಪರಮೇಶ್ವರ ಪಾರ್ವತಿಯೊಡನೆಯೂ, ದೇವತೆಗಳೊಡನೆಯೂ, ಗಣಗಳೊಡನೆಯೂ ಸುಖವಾಗಿ ಸಂಚಾರ ಮಾಡುತ್ತಿದ್ದ. ಹೀಗಿರುವಾಗ ಒಮ್ಮೆ ಪಾರ್ವತಿಯು ಶಿವನೊಡನೆ ಏಕಾಂತದಲ್ಲಿರುವಾಗ "ಪುರುಷರು ಪ್ರವೇಶಿಸದಂತಹ ಒಂದು ವನಪ್ರದೇಶವನ್ನು ಅನುಗ್ರಹಿಸು. ಅದು ನನ್ನ ಹೆಸರಿನಲ್ಲಿ ಪ್ರಸಿದ್ಧವಾಗಿ 'ಉಮಾವನ' ವೆಂದು ಹೆಸರುವಾಸಿಯಾಗಿ ಮೆರೆಯಲಿ" ಎಂದು ವರ ಕೇಳಿದಳು. ಮಡದಿಯ ಮಾತಿಗೆ ಮಹಾದೇವ 'ತಥಾಸ್ತು' ಎನ್ನಬೇಕಷ್ಟೆ! ಉಮಾವನದಲ್ಲಿ ಪರಮೇಶ್ವರ, ನಂದಿ, ಗಣೇಶ, ಷಣ್ಮುಖರ ಹೊರತಾಗಿ ಇನ್ನಾರಾದರೂ ಪುರುಷರು ಪ್ರವೇಶಿದರೆ ಅವರು ತಕ್ಷಣ ಸ್ತ್ರೀರೂಪ ಹೊಂದಲಿ, ಎಂಬ ವರವನ್ನು ಸಹ ಪಾರ್ವತಿ ಪತಿಯಿಂದ ಪಡೆದಳು. ಪತಿಯು ಹೇಳಿದ ಈ ರಹಸ್ಯವನ್ನು ಅರ್ಥಮಾಡಿಕೊಂಡ ಯಕ್ಷನ ಹೆಂಡತಿಯೂ ಮೃಗರೂಪ ಧರಿಸಿ ಇಲರಾಜನೆದುರು ಬಂದು ನಿಂತಳು. ಆಗ ಯಕ್ಷನೂ ಸಹ ಅಲ್ಲಿಯೇ ಇದ್ದನು.

ಆ ಸುಂದರ ವನ್ಯಮೃಗ (ಯಕ್ಷನ ಹೆಂಡತಿ)ವನ್ನು ಕಂಡಕೂಡಲೇ ಇಲರಾಜನು ತಡಮಾಡದೆ, ಸುಸಜ್ಜಿತ ಕುದುರೆ ಏರಿ, ಬೆನ್ನಟ್ಟುತ್ತ ಉಮಾವನಕ್ಕೆ ಬಂದ. ವನಪ್ರವೇಶ ಬರುತ್ತಲೇ ಆ ಯಕ್ಷಸುಂದರಿಯು ತನ್ನ ಮಾಯಾಮೃಗವೇಷಬಿಟ್ಟು ಸುರಸುಂದರಾಂಗಿ ಯಾಗಿ ಅಶೋಕ ತರುವಿನ ಬಳಿ ನಿಂತಳು. ಜಿಂಕೆಯು ಕಾಣದಾಗಲು, ಅದನ್ನು ಅರಸುತ್ತ ಆಯಾಸಗೊಂಡು ಕುದುರೆ ಸವಾರನಾಗಿಯೇ ಬರುತ್ತಿದ್ದ ರಾಜನನ್ನು ಕಂಡು, ಆ ಯಕ್ಷ ಸುಂದರಿಯು ಗಹಗಹಿಸಿ ನಗುತ್ತ, "ಎಲೌ ಇಲೆ, ನೀನು ಸ್ತ್ರೀಯಾಗಿದ್ದು, ಪುರುಷವೇಷ ಧರಿಸಿ, ಓರ್ವಳೆ ಎಲ್ಲಿಗೆ ಹೊರಟಿರುವೆ?" ಎಂದಾಗ ರಾಜನು ಬೆಚ್ಚಿಬಿದ್ದು, ತನ್ನ ಶರೀರವನ್ನು ಅವಲೋಕಿಸಿದನು. ಪುರುಷನಾಗಿದ್ದು, ಇಲ್ಲಿಗೆ ಬರುತ್ತಲೇ ಇದ್ದಕ್ಕಿದ್ದಂತೆ ಸ್ತ್ರೀ ಅವಯವಗಳನ್ನು ಹೊಂದಿದ ರಾಜನಿಗೆ ಗಾಬರಿಯಾಯಿತು. ಇದರ ರಹಸ್ಯ ತಿಳಿಯಲು ಆ ಯಕ್ಷ ಸುಂದರಿಯನ್ನೇ ಪ್ರಶ್ನಿಸಿದ. ಆ ಯಕ್ಷ ಸುಂದರಿಯು ಇಲರಾಜನಿಗೆ ಉಮಾವನದ ವಿಷಯ ನಿರೂಪಿಸಿ, "ನೀನು ಈ ರೀತಿ ಹೆಂಗಸಾದುದಕ್ಕೆ ದುಃಖಿಸಬೇಡ."

**ಪ್ರೌಢೋಽಪಿ ಕೋಽತ್ರ ಜಾನಾತಿ ವಿಚಿತ್ರ ಭವಿತವ್ಯತಾಂ**

ಮುಂದಿನ ಘಟನೆಗಳು ಹೇಗೆ ಸಂಭವಿಸುವದೆಂಬುದು ಎಂತಹ ಜ್ಞಾನವಂತನಿಗೂ ತಿಳಿಯದ ವಿಷಯ. ನೀನು ಉಮಾವನದ ಮಹಿಮೆ ಅರಿತಿದ್ದರೆ ಎಚ್ಚರದಿಂದ ವರ್ತಿಸುತ್ತಿದ್ದೆ. ಈಗ ಆದದ್ದು ಆಗಿಹೋಗಿದೆ. ನಿನಗೆ ಸ್ತ್ರೀರೂಪ ಬಂದದ್ದನ್ನು

ಹೋಗಲಾಡಿಸಲು ಸುತರಾಂ ಸಾಧ್ಯವಿಲ್ಲ. ಇನ್ನು ಮೇಲೆ ನೀನು ಸ್ತ್ರೀಯಾಗಿಯೇ ಅವರಂತೆ ವರ್ತಿಸಬೇಕಾದದ್ದು ಅನಿವಾರ್ಯ, ಎಂದು ಹೇಳಿ ಸಮಾಧಾನಪಡಿಸಿದಳು.

ಆಗ ರಾಜನು ಇಲಾದೇವಿಯಾಗಿ ಯಕ್ಷಸ್ತ್ರೀಯಿಂದ ಸ್ತ್ರೀಯರ ಗುಣಧರ್ಮ, ವರ್ತನೆಗಳನ್ನು ಅಭ್ಯಸಿಸಿದ. ಸ್ತ್ರೀಯಾಗಿಯೇ ಕೆಲವು ಕಾಲ ಕಳೆದ. ತನಗೀ ಅವಸ್ಥೆ ಬಂದುದಕ್ಕಾಗಿ ಯಕ್ಷ ಸುಂದರಿಯನ್ನು ಆಗಾಗ ತನಗೆ ಪುನಃ ಪುರುಷರೂಪ ಹೊಂದುವ ಉಪಾಯ ಕೇಳುತಿದ್ದ. ಅವನ ಸ್ಥಿತಿಗೆ ಮರುಕತೋರುತ್ತ ನುಡಿದಳು ಅವಳು : "ಈ ವನಕ್ಕೆ ಪೂರ್ವದಲ್ಲಿ ಚಂದ್ರನ ಮಗನಾದ ಬುಧನು ವಾಸವಾಗಿದ್ದು, ಅವನು ನಿತ್ಯವೂ ತಂದೆಯನ್ನು ನೋಡಲು ಚಂದ್ರಲೋಕಕ್ಕೆ ಹೋಗುವದು ನಿತ್ಯದ ವಾಡಿಕೆ. ಬುಧನು ಇಲ್ಲಿ ಬರುವಾಗ ನೀನು ಅವನಿಗೆ ಕಾಣಿಸಿಕೋ, ಆಗ ನಿನ್ನ ಕಾರ್ಯ ಕೈಗೊಡುವದು. ನಿನ್ನ ಇಷ್ಟ ನೆರವೇರಲು ಕಾಲವೂ ಸಮೀಪಿಸಿದೆ."

ಮುಂದೆ ಆ ಯಕ್ಷ ದಂಪತಿಗಳು ಮೊದಲಿನಂತೆ ತಮ್ಮ ಗುಹೆಯಲ್ಲಿ ಸುಖದಿಂದ ಇದ್ದರು. ಇಲರಾಜನ ಸೇನಾಪರಿವಾರವೂ ಸಹ ಗುಹೆಯ ಒಂದೆಡೆ ಸುಖವಾಗಿದ್ದಿತು. ಇಲಾದೇವಿಯು ಉಮಾವನದಲ್ಲಿ ಸ್ತ್ರೀ ಸ್ವಭಾವಕ್ಕನುಸಾರವಾಗಿ, ವಯ್ಯಾರದಿಂದ ಗಾನ ಮಾಡುತ್ತ ಒಬ್ಬಳೇ ವಿಹರಿಸುತ್ತಿರುವಾಗ ಒಮ್ಮೆ ಬುಧನ ದೃಷ್ಟಿ ಅವಳತ್ತ ಹೋಯಿತು. ಮನದಲ್ಲಿ ಮೋಹ ಮೊಳೆಯಿತು. ಪ್ರಣಯದಾವೇಗದಲ್ಲಿ ಅವನೇ ಅವಳನ್ನು ಮದುವೆ ಯಾಗುವಂತೆ ಪ್ರಾರ್ಥಿಸಿದ. ಇಲೆಗೂ ಅವನು ಕೇಳುವದಷ್ಟೇ ಬೇಕಾಗಿತ್ತು. ಯಕ್ಷಿಣಿಯ ಮಾತನ್ನು ಮನದಲ್ಲಿ ನೆನೆದು ಸಂತೋಷದಿಂದ ಬುಧನನ್ನು ಮದುವೆಯಾದಳು. ಬುಧನು ಮದುವೆಯಾದ ನಂತರ ಇಲಾದೇವಿಯನ್ನು ತನ್ನ ಮನೆಗೆ ಕರೆದೊಯ್ದು ಕೆಲವು ಕಾಲ ರಸಿಕನಾದ ಬುಧ ಅವಳೊಡನೆ ವಿಹಾರ ಮಾಡಿದ.

ಅವರೀರ್ವರ ಪ್ರಣಯ ಫಲಿಸಿತು. ಬುಧ ಹೆಂಡತಿಯೆದುರು ನಗುತ್ತ ತೃಪ್ತಿ ಭಾವದಲ್ಲಿ ನುಡಿದ. "ನಿನಗೆ ಲೋಕ ಪ್ರಸಿದ್ಧನಾದ ಕ್ಷತ್ರಿಯ ಕುಮಾರನು ಉದಿಸಿ ಬರುವನು. ಅವನಿಂದ ನಮ್ಮ ಚಂದ್ರವಂಶ ಬೆಳೆದು ಮನೆತನದ ಘನತೆ ಘಮ ಘಮಿಸುತ್ತದೆ" ಬುಧನ ಮಾತು ನಿಜವಾದಂತೆ, ಶಿಶುವು ಹುಟ್ಟುವಾಗ ಹೆಚ್ಚಾದ ಧ್ವನಿಯಿಂದ ಅಳುತ್ತ, ಚೀರುತ್ತಲೇ ಹುಟ್ಟಿದ. ಅದಕ್ಕಾಗಿ ಅಲ್ಲಿ ಸೇರಿದ ಋಷಿಗಳೂ ದೇವತೆಗಳೂ, ಜಯ ಜಯಕಾರದ ಘೋಷದೊಂದಿಗೆ ಬುಧಪುತ್ರನಿಗೆ "ಪುರೂರವ" ಎಂದು ಕರೆದು ನಾಮಕರಣ ಮಾಡಿಬಿಟ್ಟರು.

ಬುಧ ಪುತ್ರನಾದ ಪುರೂರವ, ಸಕಲ ಲಕ್ಷಣಗಳಿಂದ ಹಾಗೂ ಲೋಕ ಪ್ರಿಯನಾಗುವ ಮುನ್ಸೂಚನೆಯನ್ನು ಬಾಲ್ಯದಿಂದಲೇ ತೋರಿಸಿದ. ಕ್ಷತ್ರಿಯರಿಗೆ ಉಚಿತವಾದ ಧನುರ್ವಿದ್ಯೆ ಯಲ್ಲಿ ಪಾರಂಗತನಾದ: ವಿದ್ಯೆ, ವಿನಯ, ವಿಚಾರ, ಸದಾಚಾರಗಳಿಂದ ತನ್ನ ತಾರುಣ್ಯದಲ್ಲಿಯೇ ಪ್ರತಿಭೆ ಬೀರಿದ. ದಿನದಿನವೂ ತನ್ನ ತಾಯಿಯು, ಅಂತರಿಕವಾಗಿ ಯಾವುದೋ ವ್ಯಥೆಯಿಂದ ಕೊರಗುತ್ತಿರುವದನ್ನು, ಸೂಕ್ಷ್ಮವಾಗಿ ಗಮನಿಸಿದ ಪುರೂರವ, ಅವಳನ್ನು ಪ್ರಶ್ನಿಸಿ 'ಅಮ್ಮಾ, ನಿನ್ನ ದುಃಖವೇನೆಂಬುದನ್ನು ನನಗಾದರೂ ಹೇಳಲಾರೆಯಾ?' ಎಂದಾಗ ಇಲಾದೇವಿಯು, ತನ್ನ ಪೂರ್ವೋತ್ತರವನ್ನೆಲ್ಲ ವಿವರಿಸಿ, ತಾನು ಉಮಾವನಕ್ಕೆ ಬಂದು ಸ್ತ್ರೀರೂಪ ಹೊಂದಿದ್ದು, ಬುಧನು ಕೈ ಹಿಡಿದು, ಸಂಸಾರ ಮಾಡಿದ ವಿಚಾರವನ್ನೆಲ್ಲಾ ತಿಳಿಸಿದಳು.

ಅವಳ ಈ ವಿಚಿತ್ರ ಜೀವನ ಇತಿಹಾಸ ಅರಿತು ಪುರೂರವನು ಸ್ವಲ್ಪ ವ್ಯಾಕುಲಗೊಂಡ. ತಾನು ಮುಂದೇನು ಮಾಡಬೇಕೆಂದು ಯೋಚಿಸಿ ಮತ್ತೆ ತಾಯಿಗೆ 'ಅಮ್ಮಾ ನಿನ್ನ ಮನಸ್ಸಿನಲ್ಲಿ

ಏನಾಗಬೇಕೆಂದು ಇದೆಯೋ ಅದನ್ನೇ ಆಜ್ಞಾಪಿಸು, ಮಾಡುವದು, ಅಥವಾ ನೆರವೇರಿಸುವದು ಮಗನಾದ ನನ್ನ ಕರ್ತವ್ಯ' ಎಂದು ನುಡಿದ. ಅವನ ಮಾತಿಗೆ ಇಲಾದೇವಿಯು 'ಹಿಂದಿನ ನನ್ನ ಪುರುಷ ಸ್ವರೂಪ ಪಡೆಯಬಯಸುತ್ತೇನೆ ಅಲ್ಲದೆ ಹಿಂದಿನ ನನ್ನ ಮಕ್ಕಳಿಗೂ, ನಿನಗೂ ರಾಜ್ಯಾಭಿಷೇಕವಾಗುವದನ್ನು ನಾನು ಕಣ್ಣಾರೆ ನೋಡಬೇಕೆಂಬ ಹಂಬಲ ತುಂಬಿದೆ. ನಿನ್ನ ಪ್ರಯತ್ನದ ಮೇಲೆ ನನ್ನ ಭವಿಷ್ಯ ಬದುಕು ಅವಲಂಬಿಸಿದೆ'' ಎಂದು ನುಡಿದಳು.

ಪುರೂರವನಿಗೆ ಅಷ್ಟರಿಂದಲೇ ತೃಪ್ತಿಯಾಗದೆ, ಮತ್ತೆ ಪ್ರಶ್ನಿಸಿದ 'ನೀನು ಪುನಃ ಪುರುಷನಾಗಲು ಯಾವ ಉಪಾಯವನ್ನು ಮಾಡಲಿ? ತಪಸ್ಸು ಮಾಡಲೆ? ಅಥವಾ ಯಾಗ ಮಾಡಲೆ? ಅದನ್ನೆಲ್ಲ ಹೇಳಿದಲ್ಲಿ ಅದಕ್ಕೆ ತಕ್ಕ ಪ್ರಯತ್ನಮಾಡಲು ಸಾಧ್ಯ. ಎಂದಾಗ ಇಲಾದೇವಿಯು ''ಎಲೈ ಕಂದಾ, ತಂದೆಯಾದ ಬುಧನ ಬಳಿಗೆ ಹೋಗಿ ಕೇಳು. ಅವನು ಎಲ್ಲವನ್ನು ಅರಿತವನು. ಅವನು ನಿನಗೆಲ್ಲ ಉಪಾಯ ಹೇಳಬಲ್ಲ ಸಮರ್ಥ'' ಎಂದಳು.

ತಾಯಿಯ ಮಾತಿನಂತೆ ಪುರೂರವನು ತಂದೆಯ ಬಳಿಗೆ ಹೋಗಿ, ಎಲ್ಲ ವಿಷಯವನ್ನು ವಿವರಿಸಿದ. ಅವನ ಮಾತು ಕೇಳಿದ ಬುಧನು ಗೌತಮೀನದಿಗೆ ಹೋಗಿ ಶಿವ-ಪಾರ್ವತಿ ಯರನ್ನು ಭಕ್ತಿ ಪುರಸ್ಸರವಾಗಿ ಪೂಜಿಸಿದರೆ ಅವರ ಕರುಣೆಯಿಂದ ಶಾಪ ನಿವೃತ್ತಿಯಾಗುವ ದೆಂದು ಹೇಳಿದ. ಹಿಮಾಲಯವನ್ನೂ, ತಂದೆ-ತಾಯಿಗಳನ್ನೂ, ಗುರುವನ್ನೂ ನಮಸ್ಕರಿಸಿ ಹೊರಟ ಮಗನನ್ನು ಅನುಸರಿಸಿ ಇಲಾ ಬುಧರೂ ಹೊರಟರು.

ಅವರೆಲ್ಲರೂ ಗೌತಮೀನದಿಯಲ್ಲಿ ಮಿಂದು ಶುಚಿರ್ಭೂತರಾಗಿ, ದೃಢಸಂಕಲ್ಪಗೈದು ಶಿವನಾರಾಧನೆಯಲ್ಲಿ ತೊಡಗಿದರು. ಅವರ ಅಹೋರಾತ್ರಿ, ಆರಾಧನೆ, ಭಜನೆ, ಕೀರ್ತನೆ, ಗಾಯನಗಳಿಂದ ಮೆಚ್ಚಿದ ಜಗನ್ಮಾತೆ ಪಾರ್ವತಿ ಪ್ರತ್ಯಕ್ಷಳಾಗಿ, ''ನಿಮಗೇನು ಬೇಕು ಬೇಡಿರಿ ಕರುಣಿಸುವೆ' ಎಂದಾಗ ಪುರೂರವನು ಕೈ ಮುಗಿದು, 'ಜಗನ್ಮಾತೆ, ಇಲರಾಜನು ತಿಳಿಯದೇ ನಿನ ಉಮಾವನ ಪ್ರವೇಶಿಸಿ, ಸ್ತ್ರೀಯಾದನು. ಅವನ ಅಪರಾಧ ಮನ್ನಿಸು ಪುನಃ ಅವನಿಗೆ ಪುಂಸ್ತ್ವವನ್ನು (ಪುರುಷತ್ವ) ಕರುಣಿಸಮ್ಮಾ'' ಎಂದು ಬೇಡಿಕೊಂಡ. ಅದಕ್ಕೆ ಶಿವನ ಪೂರ್ವಾನುಮತಿ ಪಡೆದು ಶಂಕರಿ 'ತಥಾಸ್ತು' ಎಂದು ವರವನ್ನಿತ್ತಳು. ಆಮೇಲೆ ಶಿವನು ದೇವಿಯ ಅಭಿಪ್ರಾಯ ಅನುಸರಿಸಿ 'ಇಲ್ಲಿ ಗೌತಮೀನದಿಯಲ್ಲಿ ಸ್ನಾನಮಾಡುವದರಿಂದಲೇ ಇಲರಾಜನು ಪುನಃ ಪುರುಷನಾಗುವನು' ಎಂದ.

ಆಮೇಲೆ ಇಲೆಯು ಗೌತಮೀ ನದಿಯಲ್ಲಿ ಸ್ನಾನಮಾಡಲು ಅವಳ ಶರೀರದಿಂದ ಯಕ್ಷಿಣಿಯು ಹೇಳಿಕೊಟ್ಟ ಗೀತನರ್ತನಗಳು, ಲಾವಣ್ಯ, ಅಲಂಕಾರಗಳೂ ನೀರಿನ ರೂಪದಿಂದ ಸ್ರವಿಸಿದವು. ಮುಂದೆ ಅವೇ ಗೀತ ನೃತ್ಯ ಲಾವಣ್ಯಗಳು, ನೃತ್ಯನದಿ, ಗೀತಾ ನದಿ, ಸೌಭಾಗ್ಯನದಿಗಳೆಂದು ಮೂರು ನದಿಗಳಾಗಿ ಗೌತಮೀ ನದಿಯನ್ನು ಸೇರಿದವು.

ಹೀಗೆ ಇಲರಾಜನು ಯಾಗಮಾಡಿದ ಸ್ಥಳ, ಅವನ ಮೊದಲಿನ ಪುತ್ರರು ಬಂದು ಸೇರಿದ ಸ್ಥಳ, ಯಕ್ಷಿಣಿಯಿಂದ ಇಲಾದೇವಿಗೆ ಬಂದ ನೃತ್ಯ, ಗೀತ ಸೌಭಾಗ್ಯಗಳು ನದಿಯಾಗಿ ಹರಿದು ಗೌತಮೀನದಿಯಲ್ಲಿ ಸಂಗಮಿಸಿದ ಸ್ಥಳ, ಇವುಗಳಲ್ಲಿ ಹದಿನಾರು ಸಾವಿರ ತೀರ್ಥ ಗಳುಂಟಾದವು. ಆ ತೀರ್ಥಗಳ ಎರಡು ತೀರ್ಥಗಳಲ್ಲಿ 'ಇಲೇಶ್ವರ' ಎಂಬ ಹೆಸರಿನಿಂದ ಶಂಕರನು ಸನ್ನಿಹಿತನಾಗಿರುವನು. ಆ ತೀರ್ಥಗಳಲ್ಲಿ ಸ್ನಾನ, ದಾನಮಾಡಿದರೆ ಎಲ್ಲ ಯಾಗಗಳ ಫಲವು ಲಭಿಸುವದು. ಈ ಇಲಾತೀರ್ಥದಲ್ಲಿ ಸ್ನಾನಮಾಡಿದರೆ ಸಕಲ ಸಿದ್ಧಿ ಉಂಟಾಗುವದಲ್ಲದೆ, ಬ್ರಹ್ಮಹತ್ಯೆಯ ದೋಷ ಸಹ ದೂರಾಗುವದು.

## ಚಕ್ರತೀರ್ಥ

**ಬ್ರಹ್ಮ:-** ನಾರದನೆ, ಬಹುಕಾಲದ ಹಿಂದೆ ದಕ್ಷಬ್ರಹ್ಮನು ಹಲವಾರು ಯಜ್ಞಗಳನ್ನು ನೆರವೇರಿಸಿದ ವಿಷಯ ನೀನು ಕೇಳಿ ಬಲ್ಲೆಯಷ್ಟೆ ! ಆದರಲ್ಲಿ ದಕ್ಷನು ಪರಮೇಶ್ವರನಾದ ಶಿವನನ್ನು ಯಜ್ಞಕ್ಕೆ ಆಹ್ವಾನಿಸಲಿಲ್ಲ. ಅಷ್ಟೇ ಅಲ್ಲ ತಾನಾಗಿಯೇ ಮನೆಗೆ ಬಂದ ಮಗಳಾದ ಸತೀದೇವಿಯನ್ನು ಆದರಿಸಲಿಲ್ಲ. ಮೇಲಾಗಿ ಅವಳ ಪತಿಯಾದ ಶಿವನನ್ನೇ ನಿಂದನೆ ಮಾಡಿದ. ತನ್ನೆದುರೇ ಪತಿಯ ಅವಹೇಳನನುಡಿ ಕೇಳಲಾರದೇ ಸಾಧ್ವಿಯಾದ ಸತೀದೇವಿ ಶಿವನನ್ನೇ ಧ್ಯಾನಮಾಡುತ್ತ ಯೋಗಮಾರ್ಗದಿಂದ ಶರೀರವನ್ನೇ ತ್ಯಜಿಸಿ ಈ ಲೋಕದಿಂದ ದೂರವಾದಳು.

ಮಹೇಶ್ವರನು ನಾರದನಿಂದ ಸತೀ ಪ್ರಾಣಬಿಟ್ಟ ಸಮಾಚಾರ ಅರಿತು, ಕೂಡಲೇ ಕುದಿಯುವ ಜ್ವಾಲಾಮುಖಿಯಾಗಿ, ಭಯಂಕರರಾದ ತನ್ನ ಪ್ರಮಥಗಣ ಹಾಗೂ ಭೂತಗಣಗಳೊಡನೆ ದಕ್ಷನ ಯಜ್ಞ ಶಾಲೆಗೆ ದಾಳಿಇಟ್ಟ. ಆ ಮಹಾಭೂತಗಳೆಲ್ಲವೂ ಈಶ್ವರನೊಡನೆ ಸೇರಿ ದಕ್ಷಯಾಗವನ್ನು ಧ್ವಂಸ ಮಾಡಿದರು. ಅದರಿಂದ ಯಜ್ಞ ಸಮಾರಂಭ ಹಾಹಾಕಾರ ತುಂಬಿ, ಗಲಿಬಿಲಿ ಉಂಟಾಯಿತು. ಹೀಗೆ ಯಜ್ಞ ಹಾಳಾಗುತ್ತಿರುವದನ್ನು ನೋಡಿ ಸೂರ್ಯನು ಶಂಕರನ ಮೇಲೇರಿ ಬಂದನು. ಪರಸ್ಪರ ಕಾದಾಟದಲ್ಲಿ ಶಿವನು ವೀರಾವೇಶದಿಂದ ಸೂರ್ಯನ ಹಲ್ಲು ಮುರಿದ. ದೇವೇಂದ್ರನನ್ನು ಹಣಿದು ಮೆತ್ತಗೆ ಮಾಡಿ ಅವರಿಬ್ಬರನ್ನು ಹೊಡೆದೋಡಿಸಿದ. ಶಿವನ ಶಕ್ತಿಸ್ವರೂಪನಾದ ವೀರಭದ್ರನು ಭಗನೆಂಬ ಆದಿತ್ಯನ ಕಣ್ಣುಗಳನ್ನೇ ಕಿತ್ತನು.

ಶಿವನ ರೌದ್ರಾವತಾರ ಕಂಡು ಅಲ್ಲಿರುವ ದೇವಾಧಿದೇವತೆಗಳು ತತ್ತರಿಸಿ ಹೋಗಿ ಶ್ರೀಹರಿಯ ಮೊರೆಹೊಕ್ಕರು. ದೇವತೆಗಳ ಮಾತನ್ನು ಕೇಳಿ ಆಗ ಹರಿಯು ಶಿವನ ಮೇಲೆ ಚಕ್ರವನ್ನು ಪ್ರಯೋಗಿಸಿದ. ವೇಗದಿಂದ ಬರುತ್ತಲಿರುವ ಆ ವಿಷ್ಣು ಚಕ್ರವನ್ನು ಶಿವನು ಹಿಡಿದು ನುಂಗಿಬಿಟ್ಟ. ಇದನ್ನು ಕಂಡ ಲೋಕಪಾಲಕರೆಲ್ಲರೂ ಪಲಾಯನಗೈದರು. ಈ ವಿಷಮ ಸನ್ನಿವೇಶದಲ್ಲಿ ದೀನನಾಗಿ ದಕ್ಷಬ್ರಹ್ಮನು ಪರಶಿವನನ್ನು ಪರಿಪರಿಯಿಂದ ಸ್ತುತಿಸಿದನು. ಶಿವನು ತನ್ನ ಪ್ರಕೋಪ ಭಾವಬಿಟ್ಟು ಪ್ರಶಾಂತನಾಗಲು ಎಲ್ಲ ದೇವಾಧಿದೇವತೆಗಳೂ ಬೇಡಿಕೊಂಡರು.

ದಕ್ಷಬ್ರಹ್ಮನ ಸ್ತುತಿಗೆ ಸತೀಶ ಪ್ರಸನ್ನನಾದನು. ನಗುತ್ತ ಅನುಗ್ರಹ ತೋರಿ, 'ವರಬೇಡು ಕೊಡುವೆ' ಎಂದಾಗ, ದಕ್ಷನು ತನ್ನ ಯಾಗವು ಪೂರ್ಣವಾಗುವಂತೆ ಪರಮಾನುಗ್ರಹ ಮಾಡಲು ಕೇಳಿಕೊಂಡ. ಶಿವ ಅವನಿಗೆ ಅನುಗ್ರಹಿಸಿ ಅಂತರ್ಧಾನನಾದ. ಆಮೇಲೆ ದೇವತೆಗಳೆಲ್ಲರೂ ಯಜ್ಞ ಪೂರ್ತಿಮಾಡಿ, ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಕೆಲವು ವರ್ಷಗಳು ಉರುಳಿದ ನಂತರ. ಒಮ್ಮೆ ದೇವ ದಾನವರಲ್ಲಿ ಘನಘೋರ ಸಂಗ್ರಾಮ ಸಂಭವಿಸಿತು. ದೇವತೆಗಳು ರಾಕ್ಷಸರಿಗೆ ಸೋತು, ಶ್ರೀಹರಿಗೆ ಶರಣಾಗತರಾಗಿ ರಕ್ಷಣೆ ಕೋರಿದರು. ಆಗ ಹರಿಯು ಅವರನ್ನು ಕುರಿತು "ದೇವತೆಗಳೇ, ನನ್ನ ಚಕ್ರವನ್ನೇ ಶಂಕರನು ಕಸಿದುಕೊಂಡಿರುವಾಗ ನಾನೇನು ಮಾಡಲಿ? ಅಲ್ಲದೆ ನೀವೂ ಭಯಗ್ರಸ್ತರಾಗಿರುವಿರಿ. ಆಗಲಿ ನಾನು ಹೇಗಾದರೂ ಮಾಡಿ ನಿಮ್ಮನ್ನು ರಕ್ಷಿಸುವೆ' ಎಂದು ಅಭಯ ಹೇಳಿದ, ಅವರೆಲ್ಲರೂ ಹೊರಟು ಹೋದರು.

ಏನಾಗಬೇಕೆಂದು ಇದೆಯೋ ಅದನ್ನೇ ಆಜ್ಞಾಪಿಸು, ಮಾಡುವದು, ಅಥವಾ ನೆರವೇರಿಸುವದು ಮಗನಾದ ನನ್ನ ಕರ್ತವ್ಯ' ಎಂದು ನುಡಿದ. ಅವನ ಮಾತಿಗೆ ಇಲಾದೇವಿಯು 'ಹಿಂದಿನ ನನ್ನ ಪುರುಷ ಸ್ವರೂಪ ಪಡೆಯಬಯಸುತ್ತೇನೆ ಅಲ್ಲದೆ ಹಿಂದಿನ ನನ್ನ ಮಕ್ಕಳಿಗೂ, ನಿನಗೂ ರಾಜ್ಯಾಭಿಷೇಕವಾಗುವದನ್ನು ನಾನು ಕಣ್ಣಾರೆ ನೋಡಬೇಕೆಂಬ ಹಂಬಲ ತುಂಬಿದೆ. ನಿನ್ನ ಪ್ರಯತ್ನದ ಮೇಲೆ ನನ್ನ ಭವಿಷ್ಯ ಬದುಕು ಅವಲಂಬಿಸಿದೆ'' ಎಂದು ನುಡಿದಳು.

ಪುರೂರವನಿಗೆ ಅಷ್ಟರಿಂದಲೇ ತೃಪ್ತಿಯಾಗದೆ, ಮತ್ತೆ ಪ್ರಶ್ನಿಸಿದ 'ನೀನು ಪುನಃ ಪುರುಷನಾಗಲು ಯಾವ ಉಪಾಯವನ್ನು ಮಾಡಲಿ? ತಪಸ್ಸು ಮಾಡಲೆ? ಅಥವಾ ಯಾಗ ಮಾಡಲೆ? ಅದನ್ನೆಲ್ಲ ಹೇಳಿದಲ್ಲಿ ಅದಕ್ಕೆ ತಕ್ಕ ಪ್ರಯತ್ನಮಾಡಲು ಸಾಧ್ಯ. ಎಂದಾಗ ಇಲಾದೇವಿಯು ''ಎಲೈ ಕಂದಾ, ತಂದೆಯಾದ ಬುಧನ ಬಳಿಗೆ ಹೋಗಿ ಕೇಳು. ಅವನು ಎಲ್ಲವನ್ನು ಅರಿತವನು. ಅವನು ನಿನಗೆಲ್ಲ ಉಪಾಯ ಹೇಳಬಲ್ಲ ಸಮರ್ಥ'' ಎಂದಳು.

ತಾಯಿಯ ಮಾತಿನಂತೆ ಪುರೂರವನು ತಂದೆಯ ಬಳಿಗೆ ಹೋಗಿ, ಎಲ್ಲ ವಿಷಯವನ್ನು ವಿವರಿಸಿದ. ಅವನ ಮಾತು ಕೇಳಿದ ಬುಧನು ಗೌತಮೀನದಿಗೆ ಹೋಗಿ ಶಿವ-ಪಾರ್ವತಿಯರನ್ನು ಭಕ್ತಿ ಪುರಸ್ಸರವಾಗಿ ಪೂಜಿಸಿದರೆ ಅವರ ಕರುಣೆಯಿಂದ ಶಾಪ ನಿವೃತ್ತಿಯಾಗುವದೆಂದು ಹೇಳಿದ. ಹಿಮಾಲಯವನ್ನೂ, ತಂದೆ-ತಾಯಿಗಳನ್ನೂ, ಗುರುವನ್ನೂ ನಮಸ್ಕರಿಸಿ ಹೊರಟ ಮಗನನ್ನು ಅನುಸರಿಸಿ ಇಲಾ ಬುಧರೂ ಹೊರಟರು.

ಅವರೆಲ್ಲರೂ ಗೌತಮೀನದಿಯಲ್ಲಿ ಮಿಂದು ಶುಚಿರ್ಭೂತರಾಗಿ, ದೃಢಸಂಕಲ್ಪಗೈದು ಶಿವನಾರಾಧನೆಯಲ್ಲಿ ತೊಡಗಿದರು. ಅವರ ಅಹೋರಾತ್ರಿ, ಆರಾಧನೆ, ಭಜನೆ, ಕೀರ್ತನೆ, ಗಾಯನಗಳಿಂದ ಮೆಚ್ಚಿದ ಜಗನ್ಮಾತೆ ಪಾರ್ವತಿ ಪ್ರತ್ಯಕ್ಷಳಾಗಿ, ''ನಿಮಗೇನು ಬೇಕು ಬೇಡಿರಿ ಕರುಣಿಸುವೆ'' ಎಂದಾಗ ಪುರೂರವನು ಕೈ ಮುಗಿದು, 'ಜಗನ್ಮಾತೆ, ಇಲರಾಜನು ತಿಳಿಯದೇ ನಿನ ಉಮಾವನ ಪ್ರವೇಶಿಸಿ, ಸ್ತ್ರೀಯಾದನು. ಅವನ ಅಪರಾಧ ಮನ್ನಿಸು ಪುನಃ ಅವನಿಗೆ ಪುಂಸ್ತ್ವವನ್ನು (ಪುರುಷತ್ವ) ಕರುಣಿಸಮ್ಮಾ'' ಎಂದು ಬೇಡಿಕೊಂಡ. ಅದಕ್ಕೆ ಶಿವನ ಪೂರ್ವಾನುಮತಿ ಪಡೆದು ಶಂಕರಿ 'ತಥಾಸ್ತು' ಎಂದು ವರವನ್ನಿತ್ತಳು. ಆಮೇಲೆ ಶಿವನು ದೇವಿಯ ಅಭಿಪ್ರಾಯ ಅನುಸರಿಸಿ 'ಇಲ್ಲಿ ಗೌತಮೀನದಿಯಲ್ಲಿ ಸ್ನಾನಮಾಡುವದರಿಂದಲೇ ಇಲರಾಜನು ಪುನಃ ಪುರುಷನಾಗುವನು' ಎಂದ.

ಆಮೇಲೆ ಇಲೆಯು ಗೌತಮೀ ನದಿಯಲ್ಲಿ ಸ್ನಾನಮಾಡಲು ಅವಳ ಶರೀರದಿಂದ ಯಕ್ಷಿಣಿಯು ಹೇಳಿಕೊಟ್ಟ ಗೀತನರ್ತನಗಳು, ಲಾವಣ್ಯ, ಅಲಂಕಾರಗಳೂ ನೀರಿನ ರೂಪದಿಂದ ಸ್ರವಿಸಿದವು. ಮುಂದೆ ಅವೇ ಗೀತ ನೃತ್ಯ ಲಾವಣ್ಯಗಳು, ನೃತ್ಯನದಿ, ಗೀತಾ ನದಿ, ಸೌಭಾಗ್ಯನದಿಗಳೆಂದು ಮೂರು ನದಿಗಳಾಗಿ ಗೌತಮೀ ನದಿಯನ್ನು ಸೇರಿದವು.

ಹೀಗೆ ಇಲರಾಜನು ಯಾಗಮಾಡಿದ ಸ್ಥಳ, ಅವನ ಮೊದಲಿನ ಪುತ್ರರು ಬಂದು ಸೇರಿದ ಸ್ಥಳ, ಯಕ್ಷಿಣಿಯಿಂದ ಇಲಾದೇವಿಗೆ ಬಂದ ನೃತ್ಯ, ಗೀತ ಸೌಭಾಗ್ಯಗಳು ನದಿಯಾಗಿ ಹರಿದು ಗೌತಮೀನದಿಯಲ್ಲಿ ಸಂಗಮಿಸಿದ ಸ್ಥಳ, ಇವುಗಳಲ್ಲಿ ಹದಿನಾರು ಸಾವಿರ ತೀರ್ಥಗಳುಂಟಾದವು. ಆ ತೀರ್ಥಗಳ ಎರಡು ತೀರ್ಥಗಳಲ್ಲಿ 'ಇಲೇಶ್ವರ' ಎಂಬ ಹೆಸರಿನಿಂದ ಶಂಕರನು ಸನ್ನಿಹಿತನಾಗಿರುವನು. ಆ ತೀರ್ಥಗಳಲ್ಲಿ ಸ್ನಾನ, ದಾನಮಾಡಿದರೆ ಎಲ್ಲ ಯಾಗಗಳ ಫಲವು ಲಭಿಸುವದು. ಈ ಇಲಾತೀರ್ಥದಲ್ಲಿ ಸ್ನಾನಮಾಡಿದರೆ ಸಕಲ ಸಿದ್ಧಿ ಉಂಟಾಗುವದಲ್ಲದೆ, ಬ್ರಹ್ಮಹತ್ಯೆಯ ದೋಷ ಸಹ ದೂರಾಗುವದು.

## ಚಕ್ರತೀರ್ಥ

**ಬ್ರಹ್ಮ**:- ನಾರದನೆ, ಬಹುಕಾಲದ ಹಿಂದೆ ದಕ್ಷಬ್ರಹ್ಮನು ಹಲವಾರು ಯಜ್ಞಗಳನ್ನು ನೆರವೇರಿಸಿದ ವಿಷಯ ನೀನು ಕೇಳಿ ಬಲ್ಲೆಯಷ್ಟೆ ! ಅದರಲ್ಲಿ ದಕ್ಷನು ಪರಮೇಶ್ವರನಾದ ಶಿವನನ್ನು ಯಜ್ಞಕ್ಕೆ ಆಹ್ವಾನಿಸಲಿಲ್ಲ. ಅಷ್ಟೇ ಅಲ್ಲ ತಾನಾಗಿಯೇ ಮನೆಗೆ ಬಂದ ಮಗಳಾದ ಸತೀದೇವಿಯನ್ನು ಆದರಿಸಲಿಲ್ಲ. ಮೇಲಾಗಿ ಅವಳ ಪತಿಯಾದ ಶಿವನನ್ನೇ ನಿಂದನೆ ಮಾಡಿದ. ತನ್ನೆದುರೇ ಪತಿಯ ಅವಹೇಳನನುಡಿ ಕೇಳಲಾರದೇ ಸಾಧ್ವಿಯಾದ ಸತೀದೇವಿ ಶಿವನನ್ನೇ ಧ್ಯಾನಮಾಡುತ್ತ ಯೋಗಮಾರ್ಗದಿಂದ ಶರೀರವನ್ನೇ ತ್ಯಜಿಸಿ ಈ ಲೋಕದಿಂದ ದೂರವಾದಳು.

ಮಹೇಶ್ವರನು ನಾರದನಿಂದ ಸತೀ ಪ್ರಾಣಬಿಟ್ಟ ಸಮಾಚಾರ ಅರಿತು, ಕೂಡಲೇ ಕುದಿಯುವ ಜ್ವಾಲಾಮುಖಿಯಾಗಿ, ಭಯಂಕರರಾದ ತನ್ನ ಪ್ರಮಥಗಣ ಹಾಗೂ ಭೂತಗಣಗಳೊಡನೆ ದಕ್ಷನ ಯಜ್ಞ ಶಾಲೆಗೆ ದಾಳಿಇಟ್ಟ. ಆ ಮಹಾಭೂತಗಳೆಲ್ಲವೂ ಈಶ್ವರನೊಡನೆ ಸೇರಿ ದಕ್ಷಯಾಗವನ್ನು ಧ್ವಂಸ ಮಾಡಿದರು. ಅದರಿಂದ ಯಜ್ಞ ಸಮಾರಂಭ ಹಾಹಾಕಾರ ತುಂಬಿ, ಗಲಿಬಿಲಿ ಉಂಟಾಯಿತು. ಹೀಗೆ ಯಜ್ಞ ಹಾಳಾಗುತ್ತಿರುವದನ್ನು ನೋಡಿ ಸೂರ್ಯನು ಶಂಕರನ ಮೇಲೇರಿ ಬಂದನು. ಪರಸ್ಪರ ಕಾದಾಟದಲ್ಲಿ ಶಿವನು ವೀರಾವೇಶದಿಂದ ಸೂರ್ಯನ ಹಲ್ಲು ಮುರಿದ. ದೇವೇಂದ್ರನನ್ನು ಹಣಿದು ಮೆತ್ತಗೆ ಮಾಡಿ ಅವರಿಬ್ಬರನ್ನು ಹೊಡೆದೋಡಿಸಿದ. ಶಿವನ ಶಕ್ತಿಸ್ವರೂಪನಾದ ವೀರಭದ್ರನು ಭಗನೆಂಬ ಆದಿತ್ಯನ ಕಣ್ಣುಗಳನ್ನೇ ಕಿತ್ತನು.

ಶಿವನ ರೌದ್ರಾವತಾರ ಕಂಡು ಅಲ್ಲಿರುವ ದೇವಾಧಿದೇವತೆಗಳು ತತ್ತರಿಸಿ ಹೋಗಿ ಶ್ರೀಹರಿಯ ಮೊರೆಹೊಕ್ಕರು. ದೇವತೆಗಳ ಮಾತನ್ನು ಕೇಳಿ ಆಗ ಹರಿಯು ಶಿವನ ಮೇಲೆ ಚಕ್ರವನ್ನು ಪ್ರಯೋಗಿಸಿದ. ವೇಗದಿಂದ ಬರುತ್ತಲಿರುವ ಆ ವಿಷ್ಣು ಚಕ್ರವನ್ನು ಶಿವನು ಹಿಡಿದು ನುಂಗಿಬಿಟ್ಟ. ಇದನ್ನು ಕಂಡ ಲೋಕಪಾಲಕರೆಲ್ಲರೂ ಪಲಾಯನಗೈದರು. ಈ ವಿಷಮ ಸನ್ನಿವೇಶದಲ್ಲಿ ದೀನನಾಗಿ ದಕ್ಷಬ್ರಹ್ಮನು ಪರಶಿವನನ್ನು ಪರಿಪರಿಯಿಂದ ಸ್ತುತಿಸಿದನು. ಶಿವನು ತನ್ನ ಪ್ರಕೋಪ ಭಾವಬಿಟ್ಟು ಪ್ರಶಾಂತನಾಗಲು ಎಲ್ಲ ದೇವಾಧಿದೇವತೆಗಳೂ ಬೇಡಿಕೊಂಡರು.

ದಕ್ಷಬ್ರಹ್ಮನ ಸ್ತುತಿಗೆ ಸತೀಶ ಪ್ರಸನ್ನನಾದನು. ನಗುತ್ತ ಅನುಗ್ರಹ ತೋರಿ, 'ವರಬೇಡು ಕೊಡುವೆ' ಎಂದಾಗ, ದಕ್ಷನು ತನ್ನ ಯಾಗವು ಪೂರ್ಣವಾಗುವಂತೆ ಪರಮಾನು ಗ್ರಹ ಮಾಡಲು ಕೇಳಿಕೊಂಡ. ಶಿವ ಅವನಿಗೆ ಅನುಗ್ರಹಿಸಿ ಅಂತರ್ಧಾನನಾದ. ಆಮೇಲೆ ದೇವತೆಗಳೆಲ್ಲರೂ ಯಜ್ಞ ಪೂರ್ತಿಮಾಡಿ, ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಕೆಲವು ವರ್ಷಗಳು ಉರುಳಿದ ನಂತರ. ಒಮ್ಮೆ ದೇವ ದಾನವರಲ್ಲಿ ಘನಘೋರ ಸಂಗ್ರಾಮ ಸಂಭವಿಸಿತು. ದೇವತೆಗಳು ರಾಕ್ಷಸರಿಗೆ ಸೋತು, ಶ್ರೀಹರಿಗೆ ಶರಣಾಗತರಾಗಿ ರಕ್ಷಣೆ ಕೋರಿದರು. ಆಗ ಹರಿಯು ಅವರನ್ನು ಕುರಿತು "ದೇವತೆಗಳೇ, ನನ್ನ ಚಕ್ರವನ್ನೇ ಶಂಕರನು ಕಸಿದುಕೊಂಡಿರುವಾಗ ನಾನೇನು ಮಾಡಲಿ? ಅಲ್ಲದೆ ನೀವೂ ಭಯಗ್ರಸ್ತ ರಾಗಿರುವಿರಿ. ಆಗಲಿ ನಾನು ಹೇಗಾದರೂ ಮಾಡಿ ನಿಮ್ಮನ್ನು ರಕ್ಷಿಸುವೆ' ಎಂದು ಅಭಯ ಹೇಳಿದ, ಅವರೆಲ್ಲರೂ ಹೊರಟು ಹೋದರು.

ನಂತರ ಹರಿಯು ಗೋದಾವರಿ (ಗೌತಮೀ) ತೀರಕ್ಕೆ ತೆರಳಿ, ನಿತ್ಯ ನಿರಂತರ ಲೋಕ ಶಿಕ್ಷಣಕ್ಕಾಗಿ ಏಕಚಿತ್ತದಿಂದ ಸದಾಶಿವನ ಆರಾಧನೆ ಕೈಕೊಂಡ. ಸಾವಿರ ಚಿನ್ನದ ಕಮಲಗಳಿಂದ ಶಿವಾರ್ಚನೆಗೈದ. ಹೀಗೆಯೇ ಹಲವು ದಿನಗಳು ಕಳೆದವು. ಒಂದು ದಿನ ಒಂದು ವಿಚಿತ್ರ ಘಟನೆ ನಡೆಯಿತು ಹೇಳುವೆನು, ಕೇಳು.

ಶ್ರೀಹರಿಯು ಶಿವನನ್ನು ಕಮಲಗಳಿಂದ ಪೂಜಿಸುವಾಗ ಒಂದುದಿನ ಸಾವಿರ ಕಮಲಗಳು ಪೂರ್ತಿಯಾಗಲಿಲ್ಲ. ಆಗ ಪುಂಡಲೀಕಾಕ್ಷನು ತನ್ನ ಕಣ್ಣನ್ನೇ ಕಿತ್ತು ಕೊನೆಯ ಕಮಲವನ್ನಾಗಿ ಶಿವನ ಪಾದಕ್ಕೆ ಅರ್ಪಿಸಿಬಿಟ್ಟ ಬೇಡರ ಕಣ್ಣಪ್ಪನಂತೆ. ಅವನ ಅಸದೃಶ ಭಕ್ತಿಗೆ ಶಿವಪಾರ್ವತಿಯರು ಸುಪ್ರಸನ್ನರಾದರು. ಎದುರಿನಲ್ಲಿ ಭಕ್ತಿಭಾವದಿಂದ ಮೈ ಮರೆತು ಕಣ್ಣುಮುಚ್ಚಿ ಕುಳಿತ ಶ್ರೀಹರಿಯನ್ನು ಪ್ರೀತಿಪ್ರೇಮದಿಂದ ಅಪ್ಪಿಕೊಂಡು ಆನಂದ ಭಾಷ್ಪ ಹರಿಸಿದರು. ಶಿವನೊಲಿದರೆ ಯಾವುದು ತಾನೇ ಅಸಾಧ್ಯ? ಶ್ರೀಹರಿಗೆ ತಕ್ಷಣ ಕಣ್ಣೂ ಬಂದಿತು; ಚಕ್ರವೂ ಅವನ ಕೈ ಸೇರಿತು.

ಆಗ ದೇವತೆಗಳೆಲ್ಲ ಹರಿಯನ್ನು, ಗೌತಮೀನದಿಯನ್ನು ಮನಸಾರೆ ಕೊಂಡಾಡಿದರು. ಧನ್ಯತೆಯ ಆನಂದಾಶ್ರುವಿನ ಕೋಡಿ ಹರಿಸಿದರು. ಈ ರೀತಿಯಾಗಿ ಶ್ರೀಹರಿಯು ಶಿವನನ್ನು ಅರ್ಚಿಸಿದಂತೆ ನಟಿಸಿ ಅವನ ಸಾಕ್ಷಾತ್ಕಾರ ಮಾಡಿಕೊಂಡು ಸುದರ್ಶನ ಚಕ್ರ ಪಡೆದನು. ಆದುದರಿಂದ ಆ ತೀರ್ಥಕ್ಕೆ ಚಕ್ರತೀರ್ಥವೆಂದು ಕರೆಯಲಾಗುತ್ತಿದೆ. ಆ ತೀರ್ಥದಲ್ಲಿ ಚಕ್ರೇಶ್ವರನೆಂದು, ಸ್ವಯಂ ಶಿವನೇ ನೆಲೆಸಿರುವನೆಂದ ಮೇಲೆ ಅದರ ಪಾವಿತ್ರ್ಯದ, ಮಹಿಮೆಯ ಗುಣಗಾನ ಮಾಡುವ ಅವಶ್ಯಕತೆಯೇ ಇಲ್ಲ. ಇಲ್ಲಿ ಪಿತೃಗಳನ್ನು ಉದ್ದೇಶಿಸಿ, ತರ್ಪಣ ನೀಡಿದರೆ ಪಿತೃಗಳು ಉತ್ತಮ ಲೋಕ ಹೊಂದಿ ಸುಖಿಸುವರು.

*ಇಲ್ಲಿಗೆ ಬ್ರಹ್ಮಮಹಾಪುರಾಣದಲ್ಲಿ ಇಪ್ಪತ್ತಾರನೆಯ ಅಧ್ಯಾಯ ಮುಗಿದುದು*

—○—

## ಚಕ್ರೇಶ್ವರ, ಪಿಪ್ಪಲೇಶ್ವರ, ಪಾಪಪ್ರಣಾಶನ ಗೋತೀರ್ಥ, ಪಿತೃತೀರ್ಥ ಮುಂತಾದ ಕೋಟಿತೀರ್ಥ ವರ್ಣನೆ

## ಅಧ್ಯಾಯ - ೨೭

**ಬ್ರಹ್ಮ:-** ಶ್ರೀಹರಿಗೆ ಸುಪ್ರಸನ್ನನಾಗಿ ಶಿವನು ಚಕ್ರವನ್ನು ಅನುಗ್ರಹಿಸಿದ, ತೀರ್ಥವು ಪಿಪ್ಪಲತೀರ್ಥವೆಂದು ಕರೆಯಲಾಗುತ್ತಿದ್ದು, ಅದರ ಮಹಿಮಾತಿಶಯವನ್ನು ಸಾವಿರ ಹೆಡೆಯ ಆದಿಶೇಷನೂ ಮಾಡಲಾರ! ಚಕ್ರತೀರ್ಥಕ್ಕೆ ಚಕ್ರೇಶ್ವರನೂ, ಪಿಪ್ಪಲತೀರ್ಥಕ್ಕೆ ಪಿಪ್ಪಲೇಶ್ವರರೂ ಹೆಸರು ಬರಲು ಕಾರಣರಾಗಿದ್ದಾರೆ. ನಾರದನೇ ಕೇಳು, ಆ ಪಿಪ್ಪಿಲ ಕ್ಷೇತ್ರದ ಪಾವಿತ್ರ್ಯದ ಗುಣಗಣ ಕಥನವು ವೇದಾದಿಗಳಲ್ಲಿಯೂ ವರ್ಣಿತವಾಗಿದೆ. ಅದನ್ನೇ ನಿನಗೆ ಸಂಕ್ಷೇಪಿಸಿ ವಿವರಿಸುತ್ತೇನೆ.

ಬಹುಕಾಲದ ಹಿಂದೆ, ದಧೀಚಿ ಎಂಬ ಮೇಧಾವಿಯೂ, ಮಹಾತ್ಮನೂ ಆದ ಮುನಿ ಪುಂಗವನಿದ್ದ. ಅವನಿಗೆ ಪತಿಪರಾಯಣಳಾದ ಪತ್ನಿ ಗಭಿಸ್ತಿನೀ ಅಥವಾ ವಡವಾ ಪ್ರಾಥೇಯೀ ಎಂದು ಹೆಸರು. ಅವಳೊಡನೆ ಗೃಹಸ್ಥಾಶ್ರಮಿಯಾದ ದಧೀಚಿಯು ಮಹಾ ತಪವನ್ನಾಚರಿಸುತ್ತ ತನ್ನ ಆಶ್ರಮದಲ್ಲಿ ವಾಸವಾಗಿದ್ದ. ಗೌತಮೀ ತೀರವಾಸಿಯಾದ

ಆ ದಧೀಚಿ ದೇವತೆಗಳನ್ನು, ಅತಿಥಿಗಳನ್ನು ಸತ್ಕರಿಸುತ್ತ ಸುಖ ಶಾಂತಿಯಿಂದ ಇರುತ್ತಿದ್ದ. ಹೀಗಿರುವಾಗ, ಒಂದು ದಿನ ಯುದ್ಧಮಾಡಿ ಜಯಿಸಿ ಬಂದ ರುದ್ರರು, ಅಶ್ವಿನೀ ದೇವತೆಗಳಲ್ಲದೆ, ದೇವೇಂದ್ರ, ವಿಷ್ಣು, ಯಮರೆಲ್ಲರೂ ದಧೀಚಿ ಆಶ್ರಮಕ್ಕೆ ಆಗಮಿಸಿದರು. ಆಗ ಅವನು ಪೂಜಿಸಿ, ಪತ್ನಿಯೊಡನೆ ಆದರ ಸತ್ಕಾರ ನೀಡಿ, ಕುಶಲ ಪ್ರಶ್ನಾದಿಗಳನ್ನು ಮಾಡಿದ. ದೇವತೆಗಳೆಲ್ಲರೂ ಯುದ್ಧ ಜಯಿಸಿ ಬಂದ ವಿಷಯ ವಿವರಿಸಿ, ''ಈಗ ನಾವು ಶತ್ರುಗಳನ್ನೆಲ್ಲ ಸದೆ ಬಡೆದಿದ್ದು, ಈ ಆಯುಧಗಳಿಗೂ ಸ್ವಲ್ಪಕಾಲ ವಿಶ್ರಾಂತಿ ಬೇಕಷ್ಟೆ ! ಈ ಆಯುಧಗಳನ್ನು ಸ್ವರ್ಗ, ಪಾತಾಳಗಳಲ್ಲಿ ಇಟ್ಟರೆ, ಮಾಯಾವಿಗಳಿಂದ ನಮ್ಮ ವೈರಿ ದೈತ್ಯ ದಾನವರು ಅಪಹರಿಸಬಹುದೆಂಬ ಭಯವಿದೆ ನಮಗೆ. ಆದುದರಿಂದ ನಿನ್ನಲ್ಲಿ ಕೆಲವು ಕಾಲ ಈ ಆಯುಧಗಳನ್ನು ಇಡುವ ನಿರ್ಧಾರ ಮಾಡಿದ್ದು ನೀನು ಅವುಗಳಿನ್ನಾಶ್ರಮದಲ್ಲಿ ಇಟ್ಟುಕೊಳ್ಳಲು ಒಪ್ಪುತ್ತೀ ಅಷ್ಟೇ?'' ಎಂದು ಪ್ರಶ್ನಿಸಿದರು.

ದೇವಾಧಿದೇವತೆಗಳೇ ದೈನ್ಯರಾಗಿ ನುಡಿಯುವಾಗ ದಯಾಳು ದಧೀಚಿಗೆ 'ಇಲ್ಲ'ವೆನ್ನಲು ನಾಲಿಗೆ ಏಳಲಿಲ್ಲ. ಅವನು ಸಮ್ಮತಿಸಿದ. ಅದು ಅವನ ಧರ್ಮಪತ್ನಿಗೆ ಸರಿ ಬರಲಿಲ್ಲ. ಪತಿಯೊಡನೆ ಅವಳು ''ಈ ದೇವ ಕಾರ್ಯವನ್ನು ಒಪ್ಪಿಕೊಳ್ಳಬೇಡಿರಿ. ಯಾಕೆಂದರೆ ದೇವತೆಗಳ ಆಯುಧಗಳನ್ನು ನಾವಿರಿಸಿಕೊಂಡರೆ ರಾಕ್ಷಸರು ನಮ್ಮ ಮೇಲೆ ವೈರತ್ವ ಸಾಧಿಸುವರು. ಅಲ್ಲದೆ ಅದೃಷ್ಟವಶಾತ್ ಯಾರಿಂದಾದರೂ ಅಪಹರಿಸಲ್ಪಟ್ಟರೆ ದೇವತೆಗಳ ವಿಶ್ವಾಸ ಕಳೆದುಕೊಳ್ಳಬೇಕಾದೀತು. ಮುಂದೆ ಅವರೇ ನಮ್ಮ ಮೇಲೆ ಕೋಪಗೊಂಡು ನಮ್ಮನ್ನೇ ನಾಶಮಾಡಲು ಮುಂದಾಗಬಹುದು.

ತಸ್ಮಾನ್ನೆದಂ ವೇದವಿದಾಂ ವರಿಷ್ಠ-
ಯುಕ್ತಂ ದ್ರವ್ಯೇ ಪರಕೀಯೇ ಮಮತ್ವಂ
ತಾವಚ್ಚ ಮೈತ್ರೀ ದ್ರವ್ಯಭಾವಶ್ಚ ತಾಪ-
ನ್ನಷ್ಟೇ ಹೃತೇ ರಿಪವಸ್ತೇ ಭವಂತಿ ॥

''ಇನ್ನೊಬ್ಬರ ವಸ್ತುವಿನಲ್ಲಿ ಮಮತೆಯನ್ನಿಟ್ಟುಕೊಳ್ಳಬಾರದು. ನೀನು ಮಹಾಪ್ರಾಜ್ಞನಿದ್ದು ನಿನಗೆ ಅದರಿಂದಾಗುವ ದುಷ್ಪರಿಣಾಮವೆಲ್ಲವನ್ನು ಊಹಿಸಬಲ್ಲೆ. ವಸ್ತುವು ನಾಶವಾಗುವ ವರೆಗೆ ದೇವತೆಗಳು ನಮ್ಮೊಡನೆ ಸ್ನೇಹಭಾವದಿಂದ ಇರುವರು. ಏನಾದರೂ ವ್ಯತ್ಯಾಸವಾದರೆ ಅವರೇ ನಮಗೆ ಶತ್ರುಗಳಾಗಬಹುದು'' ಎಂದು ಸಂಶಯ ವ್ಯಕ್ತಪಡಿಸಿದಳು.

ಅವಳ ಮಾತಿಗೆ ಸಮ್ಮತಿಸಿದನಾದರೂ, ದಧೀಚಿ ''ಈಗಾಗಲೇ ಅವರಿಗೆ ಒಪ್ಪಿ ಮಾತು ಕೊಟ್ಟಿರುವದಾಗಿ ಹೇಳಿ, 'ಅದೃಷ್ಟವಿದ್ದಂತಾಗಲಿ' ಎಂದು ನುಡಿದ. ಮುಂದೆ ದೇವತೆಗಳು ತಮ್ಮ ತೇಜಸ್ವಿಯಾದ ಆಯುಧಗಳನ್ನೆಲ್ಲ ದಧೀಚಿಮುನಿಗೆ ಒಪ್ಪಿಸಿ, ವಿಶ್ವಾಸದಿಂದ ಸಮಾಧಾನ ಚಿತ್ತರಾಗಿ ಅವರೆಲ್ಲ ಹೊರಟುಹೋದರು. ದಧೀಚಿಯಾದರೂ ತನ್ನ ಮಡದಿಯೊಂದಿಗೆ ಎಂದಿನಂತೆ ಸುಖವಾಗಿದ್ದನು.

ಬಹುಕಾಲ ಕಳೆದುಹೋಯಿತು. ಋತು, ಅಯನಗಳು ಉರುಳಿ ಹೊಸ ಋತು ಅಯನಗಳು ಬಂದರೂ, ದೇವತೆಗಳು ದಧೀಚಿ ಆಶ್ರಮದತ್ತ ಸುಳಿಯಲಿಲ್ಲ. ಆಯುಧ ಕೇಳಲೂ ಇಲ್ಲ. ಇದರಿಂದ ದಧೀಚಿ ಮುನಿಗೆ ಉಭಯ ಸಂಕಟಕ್ಕಿಟ್ಟು ತನ್ನ ಪ್ರಿಯ ಪತ್ನಿಯೊಡನೆ ''ದೇವತೆಗಳು ಆಯುಧ ತೆಗೆದುಕೊಂಡು ಹೋಗಲು ಬರಲೇಇಲ್ಲ

ಇದುವರೆಗೆ ಈಗೇನು ಮಾಡಲಿ?'' ಎಂದು ವಿಚಾರ ಪ್ರಸ್ತಾಪಿಸಿದ. ಅವಳಿಗೂ ಏನು ಹೇಳಬೇಕೆಂಬುದು ತೋಚದೇ, ''ನೀವೇ ಏನಾದರೂ ಉಪಾಯ ಚಿಂತಿಸಬೇಕು. ಇಲ್ಲದೆ ಹೋದರೆ ದೈತ್ಯರು ಆಯುಧಗಳನ್ನು ಅಪಹರಿಸುವದು ಖಂಡಿತ'' ಎಂದಳು.

ಆ ದೇವಾಸ್ತ್ರಗಳನ್ನು ರಕ್ಷಿಸಲು ದಧೀಚಿಯು ಅವುಗಳನ್ನು ಮಂತ್ರಜಲದಿಂದ ತೊಳೆದು ಅಸ್ತ್ರಗಳನ್ನು ಜಲವನ್ನಾಗಿ ಮಾರ್ಪಡಿಸಿದ. ಸರ್ವಾಸ್ತ್ರಸ್ವರೂಪವೂ, ತೇಜಸ್ವಿಯೂ ಆದ ಆ ಅಸ್ತ್ರಜಲವನ್ನೇ ಪೂರ್ತಿ ಕುಡಿದುಬಿಟ್ಟ. ಅದರಿಂದ ಆಯುಧಗಳಲ್ಲಿರುವ ಅಪೂರ್ವ ಶಕ್ತಿ ಕಳೆಗುಂದಿ ಕಾಲಕ್ರಮೇಣ ನಾಶವಾದವು. ಸ್ವಲ್ಪಕಾಲಾನಂತರ ದೇವತೆಗಳು ದಧೀಚಿ ಆಶ್ರಮಕ್ಕೆ ಬಂದು, ಆಯುಧಗಳನ್ನೆಲ್ಲ ಬೇಡಿದರು. ಆಗ ದಧೀಚಿಯು ಆ ಅಸ್ತ್ರಗಳನ್ನೆಲ್ಲ ತೊಳೆದು ಕುಡಿದಿರುವ ವಿಷಯ ತಿಳಿಸಿದ. ದೇವತೆಗಳು ಮತ್ತೆ ದೈತ್ಯರೊಡನೆ ಯುದ್ಧ ಮಾಡುವ ವಿಷಯ ಪ್ರಸ್ತಾಪಿಸಿದರು. ಆದರೆ ಆಯುಧಗಳಿಲ್ಲದೆ ಅವರನ್ನು ಜಯಿಸುವದು ಸುಲಭದ ಮಾತಲ್ಲ! ದಧೀಚಿ ಮುನಿಯು ದೇವತೆಗಳಿಗೆ ''ದೇವಶ್ರೇಷ್ಠರೆ, ಆಯುಧಗಳ ಬಗ್ಗೆ ನೀವು ಕಳವಳಪಡುವ ಅಗತ್ಯವಿಲ್ಲ. ಈಗ ಕಾಲವೇನೂ ಮಿಂಚಿ ಹೋಗಿಲ್ಲ. ನಾನು ಯೋಗಾಭ್ಯಾಸದಿಂದ ಪ್ರಾಣಗಳನ್ನು ಬಿಡುವೆನು. ನಂತರ ನನ್ನ ಅಸ್ಥಿಗಳಿಂದ ಉತ್ತಮವಾದ ಆಯುಧಗಳನ್ನು ಮಾಡಿಕೊಂಡು, ಅವುಗಳಿಂದ ಯುದ್ಧದಲ್ಲಿ ಜಯಶಾಲಿಗಳಾಗಿರಿ'' ಎಂದು ಸಲಹೆ ನೀಡಿದ.

ದೇವತೆಗಳಿಗೆ ಅವನ ಸಲಹೆ ಸರಿ ಅನಿಸಿತು. ಆದರೆ ಆ ಸಮಯದಲ್ಲಿ ಆ ಮುನಿಯ ಮಡದಿ ಗಭಸ್ತಿನೀ ಅಲ್ಲಿರಲಿಲ್ಲ. ಇದೂ ಒಂದು ಅನುಕೂಲವೇ ಆಯಿತು ದೇವತೆಗಳಿಗೆ. ಅವಳಿದ್ದರೆ ಪತಿಗೆ ಪ್ರಾಣತ್ಯಾಗ ಮಾಡಲು ಸುತಾರಾಂ ಒಪ್ಪುತ್ತಿರಲಿಲ್ಲ. ದೇವತೆಗಳು ದಧೀಚಿಗೆ ಅವಸರಪಡಿಸಿದರು. ದಧೀಚಿ ಪದ್ಮಾಸನಹಾಕಿ ಕುಳಿತು, ಕಣ್ಣುಮುಚ್ಚಿ ತನ್ನ ಆರಾಧ್ಯ ದೇವತೆಗಳನ್ನು ನೆನೆದು, ನಂತರ ಹಸನ್ಮುಖಿಯಾಗಿ, ಉದ್ಘಾಟಯೋಗ ಬಲದಿಂದ ಶರೀರವನ್ನುಬಿಟ್ಟನು. ನಂತರ ದೇವತೆಗಳು ವಿಶ್ವಕರ್ಮನಿಗೆ ಅವನ ಶರೀರದಲ್ಲಿಯ ಮೂಳೆಗಳಿಂದ ಶ್ರೇಷ್ಠವಾದ ಆಯುಧಗಳನ್ನು ರೂಪಿಸಿಕೊಡಲು ಆಜ್ಞಾಪಿಸಿದರು. ಅವರ ಆಜ್ಞೆಯಂತೆ ವಿಶ್ವಕರ್ಮ, ಕಲಾತ್ಮಕವಾಗಿ ಶ್ರಮವಹಿಸಿ, ಹದನವಾದ ಸುಂದರ ಆಯುಧಗಳನ್ನು ನಿರ್ಮಿಸಿ, ಅವರಿಗೊಪ್ಪಿಸಿ ತನ್ನ ಮನೆಗೆ ತೆರಳಿದ. ಅದುವರೆಗೆ ದಧೀಚಿ ಪತ್ನಿಯು ಗರ್ಭಿಣಿಯಾಗಿದ್ದವಳು, ನದಿಗೆ ನೀರುತರಲು ಹೋಗಿದ್ದಳು. ಮನೆಗೆ ಬಂದವಳೇ ಪತಿಯ ಸುಳಿವು ಇಲ್ಲದಿರುವದನ್ನು ತಿಳಿದು ಕಳವಳ ಪಡುತ್ತ ಪತಿಯನ್ನು ಕುರಿತು ಅಗ್ನಿಯನ್ನೇ ಕೇಳಿದಾಗ ಅವನು ಅದುವರೆಗಿನ ವಿಷಯವೆಲ್ಲ ವಿವರಿಸಿ. ''ಪತಿರಹಿತಳಾದ ನನಗೆ ಇನ್ನಿಲ್ಲಿ ಕೆಲಸವೇನು?'' ಎಂದುಕೊಂಡು ಅಗ್ನಿಪ್ರವೇಶ ಮಾಡಲು ಸಿದ್ಧಳಾದಳು. ತನಗಾದ ದುಃಖವನ್ನು ತಡೆದುಕೊಂಡು ಆ ಸಾಧ್ವಿಯು ತನ್ನ ಪತಿಯ ಧರ್ಮಬುದ್ಧಿಯನ್ನು ನೆನೆದಳು.

ಉತ್ಪದ್ಯತೇ ಯತ್ತು ವಿನಾಶಿ ಸರ್ವಂ
ನ ಶೋಚ್ಯಮಸ್ತೀತಿ ಮನುಷ್ಯಲೋಕೇ ।
ಗೋವಿಪ್ರದೇವಾರ್ಥಮಿಹ ತ್ಯಜಂತಿ
ಪ್ರಾಣಾನ್ಪ್ರಿಯಾನ್ಪುಣ್ಯಭಾಜೋ ಮನುಷ್ಯಾಃ ॥

ಈ ಜಗತ್ತಿನಲ್ಲಿ ಪ್ರತಿಯೊಂದು ಹುಟ್ಟಿದ ವಸ್ತುವು ನಾಶವಾಗುವದು ಖಂಡಿತ. ಅದಕ್ಕಾಗಿ ದುಃಖಿಸುವದು ವ್ಯರ್ಥ. ಆದರೆ ಗೋವು, ಬ್ರಾಹ್ಮಣ, ದೇವತೆಗಳಿಗಾಗಿ ತಮ್ಮ ಪ್ರಾಣ ಅರ್ಪಿಸುವವರು ಸತ್ಪುರುಷರು, ಅವರೇ ಪುಣ್ಯವಂತರು.

ಹೀಗೆ ಯೋಚಿಸಿ, ಅಲ್ಲಲ್ಲಿ, ಬಿದ್ದಿದ್ದ ಪತಿಯ ಚರ್ಮ, ಕೂದಲುಗಳನ್ನು ಸಂಗ್ರಹಿಸಿದಳು. ನಂತರ ಗರ್ಭಿಣಿಯಾದ ಅವಳು ತನ್ನ ಹೊಟ್ಟೆಯನ್ನೇ ಬಗೆದುಕೊಂಡು ಗರ್ಭದಲ್ಲಿರುವ ಶಿಶುವನ್ನೇ ಕೈಯಲ್ಲಿ ಹಿಡಿದುಕೊಂಡು, ಗೌತಮೀ ನದಿ ಹಾಗೂ ಭೂಮಿ, ಆಶ್ರಮ, ಅಲ್ಲಿರುವ ಗಿಡಬಳ್ಳಿಗಳ ಸಾಕ್ಷಿಯಾಗಿ, ''ಈ ಬಾಲಕನಿಗೆ ಇಂದಿನಿಂದ ತಾಯಿ, ತಂದೆಗಳಿಲ್ಲ; ಬಂಧು ಬಾಂಧವರಿಲ್ಲ. ತಬ್ಬಲಿ ಮಗುವನ್ನು ನೀವೇ ರಕ್ಷಿಸಿರಿ'' ಎಂದು ನುಡಿದು ಅಗ್ನಿಪ್ರದಕ್ಷಿಣೆಮಾಡಿ, ಆ ಬಾಲಕನನ್ನು ಅಲ್ಲಿಯೇ ಇದ್ದ ಒಂದು ಅಶ್ವತ್ಥ (ಪಿಪ್ಪಿಲ) ಗಿಡದಡಿ ಮಲಗಿಸಿ, ಮತ್ತೆ ಅಗ್ನಿಗೆ ನಮಸ್ಕರಿಸಿ ಅಗ್ನಿಪ್ರವೇಶಮಾಡಿ ಲೋಕದಿಂದ ದೂರವಾದಳು ತಬ್ಬಲಿಯಾದ ಮಗುವನ್ನು ಆ ಎಲ್ಲ ಮೂಕ ಪ್ರಾಣಿಗಳು, ವೃಕ್ಷಗಳೂ ಆರಕ್ಷಕರಾಗಿ, ಅವನನ್ನು ಪೋಷಣೆಮಾಡಲು ಮುಂದಾದವು. ಔಷಧಿ ವನಸ್ಪತಿಗಳೆಲ್ಲ ತನ್ನೊಡೆಯನಾದ ಚಂದ್ರನಲ್ಲಿ ಹೋಗಿ ಮಗುವಿಗೆ ಅಮೃತವನ್ನು ಬೇಡಿ ತಂದು ಉಣಿಸಿ, ಸಾಕಿ ಸಲಹಿದವು. ವನಚರ ಪಶುಪಕ್ಷಿಗಳೆಲ್ಲ ಅವನ ಒಡನಾಡಿಯಾದವು. ಶುಕ್ಲಪಕ್ಷದ ಚಂದ್ರನಂತೆ ಆ ಪಿಪ್ಪಿಲಾದನು ಬೆಳೆಯುತ್ತಿದ್ದನು. ಅದುವರೆಗೆ ಅವನು ವೃಕ್ಷಗಳೇ ತಂದೆ-ತಾಯಿಗಳೆಂದು ಭಾವಿಸಿದ್ದ. ಆದರೆ ಬರಬರುತ್ತ ಬುದ್ಧಿ ಬೆಳೆದ ಹಾಗೆ ನಾನು ವೃಕ್ಷಗಳಿಂದ ಹುಟ್ಟಿದ್ದಾದರೆ ನಾನು ಮನುಷ್ಯನಾಗಿ ಹೇಗೆ ಹುಟ್ಟಿದೆ? ಎನ್ನುವ ಪ್ರಶ್ನೆ ಎದುರಾಯಿತು.

ಒಂದು ದಿನ ಪಿಪ್ಪಲಾದನು ಈ ಸಂದೇಹವನ್ನು ವೃಕ್ಷ ಸಮೂಹದಲ್ಲಿ ವ್ಯಕ್ತಮಾಡಿದಾಗ ಅವುಗಳೆಲ್ಲ ಅವನ ಪೂರ್ವ ವೃತ್ತಾಂತವನ್ನೆಲ್ಲ ಬಹಿರಂಗ ಪಡಿಸಿದವು. ತಂದೆ, ತಾಯಿಗಳ ದುರಂತ ಅಂತ್ಯವನ್ನು ನೆನೆದು ಬಾಲಕ ಪಿಪ್ಪಿಲಾದ ವ್ಯಾಕುಲಗೊಂಡ, ಬಳಿಕ ಬಾಲಕನನ್ನು ವೃಕ್ಷಗಳು ಚಂದ್ರನಲ್ಲಿಗೆ ಕರೆದುಕೊಂಡು ಎಲ್ಲ ವಿಷಯ ವಿವರಿಸಿದವು. ಬಾಲತೇಜಸ್ವೀ ಪಿಪ್ಪಲಾದನನ್ನು ಕಂಡು ಚಂದ್ರ ಹರ್ಷಿತನಾದ. ಅವನನ್ನು ಪ್ರೀತಿಯಿಂದ ತಲೆನೇವರಿಸಿ ''ಕುಮಾರ, ನಿನಗೆ ಸಂಪೂರ್ಣವಾದ ವಿದ್ಯೆಯನ್ನು, ತಪಸ್ಸನ್ನು ನಿನಗೆ ಕೊಡುವೆ, ಅಷ್ಟೇ ಅಲ್ಲ ನನ್ನ ಅನುಗ್ರಹದಿಂದ ನೀನು ವೀರನೂ, ಸುಂದರನೂ, ಪ್ರತಿಭಾವಂತನೂ ಆಗಿ ಲೋಕೋತ್ತರ ಕಾರ್ಯಮಾಡುವೆ'' ಎಂದು ನುಡಿದಾಗ ಪಿಪ್ಪಲಾದ. ''ಓ ಚಂದ್ರದೇವ, ನೀನು ನೀಡುವ ಅನುಗ್ರಹವೆಲ್ಲ ಈಗ ವ್ಯರ್ಥ. ಮೊದಲು ನಾನು ನನ್ನ ತಂದೆಯನ್ನು ಸಂಹರಿಸಿದವರ ಸೇಡನ್ನು ತೀರಿಸಿಕೊಳ್ಳಬೇಕಾಗಿದೆ. ಅದಕ್ಕೆ ತಕ್ಕ ಉಪಾಯ ಹೇಳಿ ಮಾರ್ಗದರ್ಶನ ಮಾಡು'' ಎಂದುತ್ತರಿಸಿದ.

ಅವನ ವೀರೋಚಿತ ಮಾತು ಕೇಳಿ ಚಂದ್ರ ಮತ್ತಷ್ಟೂ ಹರ್ಷಗೊಂಡು ಹೇಳಿದ : ''ಕುಮಾರ, ನೀನೀಗ ಗೌತಮೀನದೀ ತೀರಕ್ಕೆ ಹೋಗು. ಪರಮೇಶ್ವರನು ಅಲ್ಲಿ ಚಕ್ರೇಶ್ವರನೆಂಬ ಹೆಸರಿನಲ್ಲಿ ನೆಲೆಸಿರುವನು. ಆ ತೀರ್ಥದಲ್ಲಿ ನೀನು ಸ್ವಲ್ಪಕಾಲ ಆರಾಧಿಸು. ಕರುಣಾನಿಧಿಯಾದ ಪಾರ್ವತಿಪತಿ ನಿನಗೆ ವರವನ್ನು ಅನುಗ್ರಹಿಸುವನು.''

ಚಂದ್ರನ ಸಲಹೆಯಂತೆ, ಪಿಪ್ಪಿಲಾದನು ಗೌತಮೀ ತೀರಕ್ಕೆ ಹೊರಡಲು ಸಿದ್ಧನಾದ. ಬಾಲಕ ಪಿಪ್ಪಿಲಾದನನ್ನು ಕರುಣೆಯಿಂದ ಪಿಪ್ಪಿಲವೃಕ್ಷಗಳಾದಿಯಾಗಿ ಅವನನ್ನು ಚಕ್ರೇಶ್ವರ ತೀರ್ಥದ ವರೆಗೆ ತಂದು ಬಿಟ್ಟು, ತಮ್ಮ ತಾಣಗಳಿಗೆ ಹಿಂತಿರುಗಿದವು. ಆಮೇಲೆ ಪಿಪ್ಪಿಲಾದನು ಗೌತಮಿಯಲ್ಲಿ ಮಿಂದು, ಚಕ್ರೇಶ್ವರನ ಧ್ಯಾನಮಾಡಲು ದೃಢಸಂಕಲ್ಪದಿಂದ ಕುಳಿತ, ಅನೇಕ ದಿನಗಳು ಉರುಳಿಹೋದವು. ವರ್ಷಗಳು ಗತಿಸಿಹೋದವು. ಪಿಪ್ಪಿಲಾದನ ಅಚಲ ಶ್ರದ್ಧೆ.

ನಿರಂತರ ಧ್ಯಾನ ಸ್ತುತಿಗಳಿಂದ ಸುಪ್ರೀತನಾದ ಶಂಕರನು ಪ್ರತ್ಯಕ್ಷನಾಗಿ, "ಎಲೈ ಪಿಪ್ಪಲಾದ, ನಿನಗೆ ಮಂಗಳವಾಗಲಿ. ಬೇಕಾದ ವರ ಕೇಳು ನೀಡುವೆ" ಎಂದು ಅಭಯ ಹಸ್ತ ತೋರಿದ. ಪಿಪ್ಪಲಾದ ಕೈ ಮುಗಿದು, "ಓ ಮಹಾದೇವ, ದೇವತೆಗಳ ದೆಶೆಯಿಂದಲೇ ನನ್ನ ತಂದೆ ತಾಯಿಗಳು ಹತರಾದದ್ದು ಕೇಳಿ ನನಗೆ ದುಃಖವಾಗಿದೆ. ಆದ್ದರಿಂದ ಅಂತಹ ವೈರಿಗಳನ್ನು ಸಂಹರಿಸದೇ ನನ್ನ ಆತ್ಮಕ್ಕೆ ಶಾಂತಿ ಇಲ್ಲ. ಅವರನ್ನು ಸಂಹರಿಸುವ ಶಕ್ತಿ ದಯಪಾಲಿಸು."

ಬಾಲಪಿಪ್ಪಲಾದನ ವರಯಾಚನೆ ಕೇಳಿ, ಮಹದೇವ ನಸುನಕ್ಕು ನಂತರ ನುಡಿದ: "ಭಲೆ ಭಲೆ ಬಾಲಕ, ನೀನು ಕೇಳುವದು ನ್ಯಾಯೋಚಿತವೇ ಆಗಿದೆ. ನೀನು ನನ್ನ ಮೂರನೆಯ ಕಣ್ಣನ್ನು ನೋಡಲು ಶಕ್ತಿಯುಳ್ಳವನಾದರೆ ದೇವತೆಗಳನ್ನು ಸಂಹರಿಸಬಲ್ಲೆ. ಆದರೆ ನೀನಿನ್ನೂ ಬಾಲಕ. ಇನ್ನೂ ಸ್ವಲ್ಪಕಾಲ ತಪಸ್ಸು ಮಾಡು ಕಾಲಮೂಲವೂ ಕೂಡಿಬರಬೇಕು. ನನ್ನ ತೃತೀಯ ಚಕ್ಷುಸ್ಸನ್ನು ನೋಡಲು ಸಾಮರ್ಥ್ಯ ಪಡೆದಾಗ ನಿನ್ನ ಮನದಿಷ್ಟಾರ್ಥ ಸಿದ್ಧಿಸುವದರಲ್ಲಿ ಸಂಶಯವಿಲ್ಲ" ಎಂದು ನುಡಿದು ಶಂಕರ ಅಂತರ್ಧಾನನಾದ.

ಶಿವನ ಸಲಹೆಗೆ ಅನುಗುಣವಾಗಿ, ಪಿಪ್ಪಲಾದನು ಗೌತಮೀನದಿತೀರದಲ್ಲಿ ದೀರ್ಘಕಾಲ ತಪಸ್ಸನ್ನು ಆಚರಿಸಿದ. ಸ್ವಸ್ತಿಕಾಸನದಲ್ಲಿ ಕುಳಿತು ತದೇಕ ಚಿತ್ತದಲ್ಲಿ ಶಿವಧ್ಯಾನ ಮಾಡುತ್ತಿದ್ದ. ಸುಷುಮ್ನಾ ನಾಡಿಯಲ್ಲಿ ಮನಸ್ಸನ್ನು ನಿಲ್ಲಿಸಿ, ಹೊರಗಿನ ದೃಷ್ಟಿಯಲ್ಲದೆ ಅಂತರಿಕ ದೃಷ್ಟಿಯಿಂದ ಒಂದಕ್ಕಿಂತೊಂದು ಉತ್ಕೃಷ್ಟವಾದ ರೂಪವನ್ನು ನೋಡುತ್ತ ಕೊನೆಗೆ ಶಿವನ ತೇಜೋರೂಪವನ್ನು ನೋಡಿದನು. ಅಲ್ಲಿಯೇ ಶಿವನ ಮೂರನೆಯ ಕಣ್ಣನ್ನು ನೋಡಿದನು.

ಆಗ ಹರನ ಮೂರನೆಯ ಕಣ್ಣಿನಿಂದ ಅಗ್ನಿರೂಪವಾದ ವಡವೆಯು ಹುಟ್ಟಿ "ನನಗೆ ಆಹಾರ ಕೊಡು" ಎಂದು ಹೇಳುತ್ತ ಹೊರಬಿದ್ದಿತು. ಅದರ ಹೆಸರು ಕೃತ್ತಿಕೆ. ಪಿಪ್ಪಿಲನ ತಾಯಿಯೇ ಸಕಲ ಪ್ರಾಣಿಗಳನ್ನು ನಾಶಮಾಡುವಂತಹ ವಡವಾ ರೂಪಳಾಗಿ ಜನಿಸಿದಳು. ದೇವತೆಗಳ ಸೇಡು ತೀರಿಸಿಕೊಳ್ಳಲೆಂದೇ ಜನಿಸಿದ ಕೃತ್ಯೆಯು, ಮೃತ್ಯುವಿನ ನಾಲಿಗೆಯಂತೆ ಕಂಡುಬಂದಳು. ಆ ಕೃತ್ಯೆಯು ಪಿಪ್ಪಲಾದನಿಗೆ- "ನಾನು ಮಾಡಬೇಕಾದ ಕಾರ್ಯವೇನು?" ಎಂದು ಕೇಳಿದಾಗ ತಡವಿಲ್ಲದೆ ಪಿಪ್ಪಲಾದ, "ನನ್ನ ವೈರಿಗಳಾದ ದೇವತೆಗಳನ್ನು ಸಂಹರಿಸು" ಎಂದು ಆಜ್ಞಾಪಿಸಿದ. ಆಗ ಎದುರಿನಲ್ಲಿದ್ದ ಪಿಪ್ಪಲಾದನನ್ನೇ ಕೃತ್ಯೆಯು ಹಿಡಿದಳು. ಆಗ ಅವನು ಭೀತನಾಗಿ "ಇದೇನು? ನನ್ನನ್ನೇ ಹಿಡಿದೆಯಲ್ಲಾ" ಎಂದು ಕೇಳಿದಾಗ, ಕೃತ್ಯೆಯು "ನಿನ್ನ ಶರೀರವು ದೇವ ನಿರ್ಮಿತವಾಗಿದೆ. ಆದ್ದರಿಂದ ನಿನ್ನನ್ನೇ ಮೊದಲು ನುಂಗುವೆ" ಎಂದಾಗ ಅವನು ರಕ್ಷಣೆಗಾಗಿ ಶಿವನ ಮೊರೆ ಹೊಕ್ಕ. ಆಗ ಶಿವನು ಕೃತ್ಯೆಗೆ "ಇಲ್ಲಿಂದ ಒಂದುಯೋಜನ ದೂರಹೋಗಿ ನಿನ್ನಕಾರ್ಯ ನಡೆಸು" ಎಂದು ಆಜ್ಞಾಪಿಸಿದಾಗ, ಅದು ಅಲ್ಲಿಂದ ಮುಂದೆ ಸರಿದುಹೋಯಿತು; ಅದೇ ವಡವಾಗ್ನಿಯೆಂದು ಕರೆಯಲ್ಪಡ ಹತ್ತಿತ್ತು.

ಆ ಕೃತ್ಯೆಯು ಲೋಕದಲ್ಲಿ ತನ್ನ ಉಗ್ರತೆಯಿಂದ, ಪ್ರಜ್ವಲಿಸುವ ಅಗ್ನಿಯಿಂದೇಳುವ ಜ್ವಾಲೆಗಳಿಂದ ಹಾವಳಿ ಎಬ್ಬಿಸಿದಳು. ಅವಳ ಪ್ರಖರ ಶಾಖದೆದುರು ಲೋಕದಲ್ಲಿರುವ ಎಲ್ಲ ಜೀವಜಂತುಗಳು ಹುರಪಳಿಸಿಹೋದವು. ದೇವತೆಗಳೂ ಭಯಗೊಂಡರು. ಶಂಕರನಲ್ಲಿ ಧಾವಿಸಿ ಬಂದು ರಕ್ಷಿಸಲು ಪ್ರಾರ್ಥಿಸಿದರು. ಆಗ ಶಿವನು ಆ ಎಲ್ಲ ದೇವತೆಗಳಿಗೆ ಸೂರ್ಯಮೂರ್ತಿಯಲ್ಲಿ ಅಂಶತಃ ನೆಲೆಸಲು ಸೂಚಿಸಿ, ಕೃತ್ಯೆಯ ಬಾಧೆಯನ್ನು ನಿವಾರಿಸಲು ಸಲಹೆಮಾಡಿದ.

ಅವನ ಸಲಹೆಯಂತೆ ದೇವತೆಗಳು ಪಾರಿಜಾತ ಮರದಿಂದ ಸೂರ್ಯನ ವಿಗ್ರಹ ಮಾಡಿಸಿದರು ಆ ಸೂರ್ಯವಿಗ್ರಹ ಮಾಡಿದ ಸ್ವಯಂ ವಿಶ್ವಕರ್ಮನೆ ಸೂರ್ಯನಿಗೆ "ನೀನು ಇಲ್ಲಿಯೇ ನೆಲೆಗೊಂಡು, ಈ ದೇವತೆಗಳೆಲ್ಲರನ್ನೂ ರಕ್ಷಿಸು. ನಾವೂ ಸಹ ಈ ಶಂಕರನ ಸನ್ನಿಧಿಯಲ್ಲಿ ಅಂಶದಿಂದ ನೆಲೆಸಿರುವೆವು" ಎಂದು ಹೇಳಿದ. ಅಂದಿನಿಂದ ಚಕ್ರೇಶ್ವರನ ಸುತ್ತಲೂ ಒಂದು ಯೋಜನ ದೂರದೊಳಗೆ ಗೌತಮೀನದಿಯ ಎರಡೂ ತೀರ ಪ್ರದೇಶಗಳಲ್ಲಿ ದೇವತೆಗಳು ಅರ್ಧಂಗುಲ ಪ್ರಮಾಣದಲ್ಲಿ ನೆಲೆಸಿರುವರು. ದೇವತೆಗಳ ನೆಲೆವೀಡಾದ ಆ ಪ್ರದೇಶದಲ್ಲಿ ಮೂರುಕೋಟಿ ಐದುನೂರು ತೀರ್ಥಗಳು ಉದ್ಭವಿಸಿವೆ.

ಆ ದೇವತೆಗಳೆಲ್ಲ ಶಿವನಿಗೆ ಪಿಪ್ಪಿಲಾದನನ್ನು ಸಾಂತ್ವನಗೊಳಿಸಲು ಹೇಳಿದಾಗ ಅವನು ಪಿಪ್ಪಿಲಾದನತ್ತ ಹೊರಳಿ, "ಪಿಪ್ಪಿಲಾದ, ದೇವತೆಗಳನ್ನು ನಾಶಪಡಿಸಿದರೂ, ನಿನ್ನ ತಂದೆಯು ಮರಳಿ ಬದುಕಿ ಬರಲಾರ. ದೇವತೆಗಳ ಪ್ರೀತ್ಯರ್ಥ ನಿನ್ನ ತಂದೆ ಪ್ರಾಣತ್ಯಾಗಮಾಡಿ, ಅಮರತ್ವ ಪಡೆದ. ನಿನ್ನ ತಾಯಿ ಪಾತಿವ್ರತ್ಯ ಧರ್ಮ ಆಚರಿಸಿ, ಪತಿಯನ್ನನುಸರಿಸಿ, ಸ್ವರ್ಗ ಸೇರಿದಳು. ಅಂಥವರ ಮಗನಾಗಿ ನೀನು ಸೇಡುತೀರಿಸಕೊಳ್ಳ ಹೊರಟಿರುವದು ಶೋಭಿಸುವ ಮಾತಲ್ಲ. ನೋಡು, ನಿನ್ನ ಭಯದಿಂದ ಹೆದರಿ ಸ್ವರ್ಗದಿಂದ ಓಡಿ ಬಂದಿರುವ ಈ ಆರ್ತರಾದ ದೇವತೆಗಳನ್ನು ರಕ್ಷಿಸು, ಆರ್ತರನ್ನು ರಕ್ಷಿಸುವುದಕ್ಕಿಂತಲೂ ಮಿಗಿಲಾದ ಪುಣ್ಯವು ಬೇರೆ ಇಲ್ಲ." ಎಂದು ಬುದ್ಧಿವಾದ ಹೇಳಿದ.

ನಂತರ ಪಿಪ್ಪಲಾದ ಶಿವನನ್ನು ಕುರಿತು ಮತ್ತೆ ಕೇಳಿದ : "ಓ ದೇವಾಧಿದೇವಾ, ನಾನು ಈ ವರೆಗೆ ತಾಯಿ, ತಂದೆಗಳ ಹೆಸರನ್ನು ಕೇಳುತ್ತಿರುವೆ ಹೊರತೂ, ಕಣ್ಣಿಂದ ನೋಡಿಲ್ಲ. ಅವರನ್ನು ನೋಡಬೇಕೆಂದು ಜೀವ ಕಾತರಗೊಂಡಿದೆ. ನೀನು ಅನುಗ್ರಹಿಸಿ, ಅವರ ದರ್ಶನ ಭಾಗ್ಯ ನನಗೆ ದಯಪಾಲಿಸು" ಎಂದ. ಅವನ ಮಾತಿಗೆ ದೇವತೆಗಳು ಅವನಿಗೆ, "ನಿನ್ನನ್ನು ನೋಡಲೆಂದೇ ಆತುರರಾಗಿ ನಿನ್ನ ತಂದೆತಾಯಿಗಳು ವಿಮಾನವನ್ನೇರಿ ಬಂದು ನಿನಗೆ ಕಾಣಿಸಿಕೊಳ್ಳುತ್ತಿದ್ದಾರೆ ನೋಡಲ್ಲಿ, ದೂರದಿಂದ ಆಕಾಶದ ಅಂಚಿನಿಂದ ಶೃಂಗರಿಸಿದ ವಿಮಾನದಲ್ಲಿ ಆಗಮಿಸುತ್ತಿದ್ದಾರೆ" ಎಂದು ಸೂಚಿಸಿದರು.

ಅತಿ ಅಚ್ಚರಿ ಆನಂದದಿಂದ, ಪಿಪ್ಪಿಲಾದ ವಿಮಾನಾರೂಢರಾಗಿ ಬಂದ ದಂಪತಿಗಳನ್ನು ಕಣ್ಣರಳಿಸಿ ಕಾತರದಿಂದ ನೋಡಿದ. ಆನಂದಾಶ್ರುಗಳನ್ನು ಹರಿಸುತ್ತ ದೇವತೆಗಳಾದ ಆ ಮಾತಾಪಿತೃಗಳನ್ನು ನೋಡಿ, ದುಃಖದಿಂದ ಮಾತನಾಡಲಾರದೆ ಮೂಕನಾಗಿ ಅವರತ್ತ ನೋಡುತ್ತಲೇ ಇದ್ದ. ಆಗ ಅವರೇ ಅವನನ್ನು ಉದ್ದೇಶಿಸಿ, "ಎಲೈ ಮಗನೇ ನೀನೇ ಧನ್ಯನು. ನಿನ್ನ ಕೀರ್ತಿಯು ಸ್ವರ್ಗದ ಸೀಮೆಯಲ್ಲೂ ಗಂಧ ಪರಿಮಳದಂತೆ ಪಸರಿಸಿದೆ. ಸಾಕ್ಷಾತ್ ಪರಶಿವನನ್ನೇ ಪ್ರತ್ಯಕ್ಷಗೊಳಿಸಿಕೊಂಡ ಮಹಾಭಾಗ್ಯಶಾಲಿ. ನೀನು ದೇವತೆಗಳನ್ನು ಸಹ ಮನ್ನಿಸಿ ನಿನ್ನ ಉದಾರಗುಣ ಮೆರೆಸಿರುವೆ ನಿನ್ನಿಂದ ನಮಗೆ ಸ್ವರ್ಗಲೋಕ ಪ್ರಾಪ್ತವಾಯಿತು" ಎಂದು ಹರ್ಷೋದ್ಗಾರದಿಂದ ಅನುಗ್ರಹಿಸಿದರು. ಆಗ ಪಿಪ್ಪಿಲಾದನ ತಲೆಯ ಮೇಲೆ ಸ್ವರ್ಗದಿಂದ ಹೂಮಳೆ ಸುರಿಯಿತು. ದೇವತೆಗಳು ಜಯಜಯಕಾರ ಮಾಡಿದರು.

ದಧೀಚಿ ಮುನಿಯು ಪುತ್ರನನ್ನು ಪುನಃ ಪುನಃ ಸಮಾಧಾನಪಡಿಸಿ, ದೇವತೆಗಳನ್ನು ವಂದಿಸಿ, ಅವರ ಅನುಮತಿ ಪಡೆದು, ಪತ್ನಿಯೊಡನೆ ಸ್ವರ್ಗಕ್ಕೆ ಹೋದನು. ದೇವತೆಗಳು,

ಕೃತ್ಯೆಯನ್ನೂ ಹಾಗೂ ಮಹಾಗ್ನಿಯನ್ನೂ ಶಾಂತಪಡಿಸಲು ಪಿಪ್ಪಲಾದನಿಗೆ ಪ್ರಾರ್ಥನೆ ಗೈದರು. ಆದರೆ ಕೃತ್ಯೆಯನ್ನು ನಿವಾರಿಸುವ ಶಕ್ತಿ ತನಗಿಲ್ಲವೆಂದು ನುಡಿದ. ಆ ಮೇಲೆ ದೇವತೆಗಳೇ ಕೃತ್ಯೆಯ ಬಳಿಗೆ ಹೋಗಿ ಅದನ್ನೂ ಅದರ ಅಗ್ನಿಯನ್ನೂ ಶಾಂತವಾಗುವಂತೆ ಉಪಾಯ ಕೇಳಿದರು "ಕೃತ್ಯೆಯು ಅದಕ್ಕೆ ಉತ್ತರವಾಗಿ "ಪಂಚಮಹಾಭೂತಗಳು, ಸ್ಥಿರಚರ ಪ್ರಾಣಿಗಳು ನಮಗೆ ಆಹುತಿಯಾಗಬೇಕು" ಎಂದಾಗ, ದೇವತೆಗಳು ನನ್ನ (ಬ್ರಹ್ಮ) ಜೊತೆಗೆ ಆಲೋಚಿಸಿ ವಡವಾದೇವಿಗೆ "ನೀವಿಬ್ಬರೂ ಜಗತ್ತೆಲ್ಲವನ್ನೂ ಕ್ರಮವಾಗಿ ಭಕ್ಷಿಸಿರಿ" ಎಂದು ಹೇಳಿದರು. ವಡವಿಯಾದ ಕೃತ್ಯೆಯು, ನದಿಯಾಗಿ ಗಂಗಾನದಿಯನ್ನು ಸೇರಿತು. ವಡವೆಯಿಂದ ಜನಿಸಿದ ಭಯಂಕರವಾದ ಆ ಅಗ್ನಿಯು ಪಂಚಭೂತಗಳಿಗೆ ಆದಿಯಾಯಿತು. ಮುಂದೆ ದೇವತೆಗಳ ಪ್ರಾರ್ಥನೆಯಂತೆ ಈ ವಡವೆಯನ್ನು, ಗಂಗೆ, ಯಮುನೆ, ನರ್ಮದೆ, ತಪತಿ, ಸರಸ್ವತಿಯರೆಂಬ ಪಂಚಕನ್ಯೆಯರು ಚಿನ್ನದ ಕಲಶದಲ್ಲಿ ರಿಸಿಕೊಂಡು ಸಮುದ್ರಕ್ಕೆ ಒಯ್ದರು.

ಆಮೇಲೆ ದೇವತೆಗಳು, ಶಿವನನ್ನು ಕುರಿತು "ಪರಮೇಶ್ವರ, ದಧೀಚಿಯ ಅಸ್ಥಿಗಳೂ, ಅಸ್ಥಿಯನ್ನಾಗಿ ಮಾಡಿದ ಗೋವುಗಳೂ, ಪರಿಶುದ್ಧವಾಗಲು ಏನು ಮಾಡಬೇಕು?" ಎಂದು ಕೇಳಿದಾಗ, ಶಿವನು "ನೀವೂ, ನಿಮ್ಮ ಆಯುಧಗಳೂ, ಗೋವುಗಳೂ ಈ ಗೌತಮೀ ನದಿಯಲ್ಲಿ ಸ್ನಾನಮಾಡಿದಾಗ ಪರಿಶುದ್ಧರಾಗುವಿರಿ" ಎಂದು ನುಡಿದ.

ಅವನ ಮಾತಿನಂತೆ ದೇವತೆಗಳು ಗೌತಮೀನದಿಯಲ್ಲಿ ಆಯುಧ ಸಮೇತ ಮಿಂದರು. ಅದರಿಂದ 'ಪಾಪನಾಶನತೀರ್ಥ' ಉದ್ಭವಿಸಿ, ಬ್ರಹ್ಮಹತ್ಯೆ ಕಳೆಯುವ ಪಾವನಗಂಗೆ ಎನಿಸಿತು. ಗೋವುಗಳು ಸ್ನಾನಮಾಡಿದ್ದ ತೀರ್ಥವು 'ಗೋತೀರ್ಥ'ವೆಂದು ಕರೆಯಲ್ಪಡ ಹತ್ತಿತ್ತು. ಇಲ್ಲಿ ಸ್ನಾನಮಾಡಿದರೆ ಗೋಮೇಧಯಾಗ ಫಲ ಪ್ರಾಪ್ತಿ ಇದೆ. ದಧೀಚಿ ಮುನಿಯ ಅಸ್ಥಿಗಳನ್ನು ತೊಳೆದ ಸ್ಥಳವು (ತೀರ್ಥ) ಪಿತೃಗಳಿಗೆ ಪ್ರಿಯವಾಯಿತು. ಈ 'ಪಿತೃತೀರ್ಥ'ದಲ್ಲಿ ಮೃತ ಮಾನವನ ಬೂದಿ, ಉಗುರು, ರೋಮಗಳು, ಸೇರಿದರೆ, ಅವನು ಎಂಥ ಪಾಪಾತ್ಮನೇ ಇರಲಿ, ಸ್ವರ್ಗಸೇರಿ ಅವನು ಬಹುಕಾಲ ಸುಖಿಸುವನು. ಪಿಪ್ಪಲಾದನಿಂದ ಬೀಳ್ಕೊಂಡು ದೇವತೆಗಳು ಸ್ವರ್ಗಕ್ಕೆ ತೆರಳಿದರು. ಕ್ರಮೇಣ ಪಿಪ್ಪಿಲ ವೃಕ್ಷಗಳು ಸ್ವರ್ಗಕ್ಕೆ ತೆರಳಿದವು. ನಂತರ ಪಿಪ್ಪಲಾದನು ಪಿಪ್ಪಿಲಾದ ವೃಕ್ಷಗಳ ಸ್ಥಾನವನ್ನು ಕ್ಷೇತ್ರಾಧಿಪತಿಗಳ ರಕ್ಷಣೆಯಲ್ಲಿರಿಸಿ, ಅಲ್ಲಿ ಶಂಕರನನ್ನು ಪ್ರತಿಷ್ಠಾಪಿಸಿ ಪೂಜೆಮಾಡಿದನು. ಆ ನಂತರ ಅವನು ಗೌತಮ ಮುನಿಯ ಮಗಳನ್ನು ಮದುವೆಯಾದನು. ಪುತ್ರರನ್ನು ಪಡೆದು ಸುಖ ಸಂಸಾರ ಹೊಂದಿದನು. ನಂತರ ಸ್ವರ್ಗ ಪಡೆದನು.

ಅಂದಿನಿಂದ ಆ ತೀರ್ಥವು 'ಪಿಪ್ಪಿಲತೀರ್ಥ'ವೆಂದು ಹೆಸರಾಯಿತು. ಆ ತೀರ್ಥದಲ್ಲಿ ಸ್ನಾನ ದಾನ ಮಾಡಿ, ಆದಿತ್ಯದರ್ಶನ ಪಡೆದರೆ ಸಕಲಯಾಗ ಫಲಪ್ರಾಪ್ತಿ ಇದೆ. ಆ ತೀರ್ಥದ ವಿಶೇಷ ಏನೆಂದರೆ- ಆ ತೀರ್ಥದಲ್ಲಿ ಸೂರ್ಯನೂ, ಸೂರ್ಯನಲ್ಲಿ ದೇವತೆಗಳೂ ಪ್ರತಿಷ್ಠಿತ ರಾದ ಮೂಲಕ ಆ ಕ್ಷೇತ್ರಕ್ಕೆ 'ಪ್ರತಿಷ್ಠಾನಕ್ಷೇತ್ರ'ವೆಂದು ಕರೆಯಲಾಗಿದ್ದು, ಈ ಕ್ಷೇತ್ರ ಸಂದರ್ಶನ, ಸ್ನಾನದಾನಗಳಿಂದ ಅಲಭ್ಯ ಸಿರಿ, ಸಂಪದ ಆಯುರಾರೋಗ್ಯ ಪ್ರಾಪ್ತಿಯಾಗುವದು.

## ನಾಗತೀರ್ಥ ಮಹಿಮಾ ವರ್ಣನೆ

**ಬ್ರಹ್ಮ:-** ಬಹುಕಾಲದ ಹಿಂದೆ, ಪ್ರತಿಷ್ಠಾನಪುರದಲ್ಲಿ ಶೂರಸೇನನೆಂಬ ರಾಜನಿದ್ದ. ಅವನು ಚಂದ್ರವಂಶದವನಿದ್ದು, ರಾಜಕಾರಣ ಪ್ರವೀಣನೂ, ಸುಗುಣನೂ ಶೂರನೂ,

ಸಾಹಸಿಯೂ ಆಗಿದ್ದ. ಆ ರಾಜನಿಗೆ ಬಹಳ ವರ್ಷಗಳ ನಂತರ ಸರ್ಪ ಒಂದು ಪುತ್ರನಾಗಿ ಜನಿಸಿತು. ಈ ಜನಿಸಿದ ಸರ್ಪವನ್ನು ರಾಜನು ಗುಟ್ಟಾಗಿರಿಸಿದನು. ಅದರಿಂದಾಗಿ ರಾಜನಿಗೆ ಸರ್ಪವು ಹುಟ್ಟಿದ ವಿಷಯ ಯಾರಿಗೂ ತಿಳಿದಿರಲೇ ಇಲ್ಲ. ಅಷ್ಟೇ ಅಲ್ಲ, ತಂದೆ-ತಾಯಿ ಹೊರತೂ ಸರ್ಪ ಹುಟ್ಟಿದ್ದು ಅರಮನೆಯೊಳಗಿದ್ದವರಿಗೆ ಎಳ್ಳಷ್ಟೂ ಗೊತ್ತಾಗಿರಲಿಲ್ಲ. ಮಗ ಹುಟ್ಟಿದ ವಿಷಯಕ್ಕಾಗಿ ತಂದೆ ತಾಯಿಗಳಿಗೆ ಚಿಂತೆ ಮಾಡುವಂತಾಯಿತು. ಆದರೆ ಆ ಸರ್ಪವು ಮನುಷ್ಯರಂತೆ ಮಾತನಾಡುತ್ತಿದ್ದಿತು. ಆದುದರಿಂದ ತಂದೆಗೆ ತನಗೆ ಧಾರ್ಮಿಕ ವಿಧಿಕರ್ಮಗಳನ್ನು ಮಾಡಿಸಲು ಸೂಚಿಸಿ, ವೇದಾಧ್ಯಯನ ಮಾಡಿಸಲು ಪ್ರಾರ್ಥಿಸಿತು. ತಂದೆ ಮಾಡಬೇಕಾದ ಧಾರ್ಮಿಕ, ಲೌಕಿಕ, ಕಾರ್ಯವನ್ನು ಚಾಣಾಕ್ಷ ರೀತಿಯಿಂದ, ಗುಪ್ತವಾಗಿ ನೆರವೇರಿಸಿದ ಆ ರಾಜ. ದಿನಗಳೆದಂತೆ, ಸರ್ಪವು ತಂದೆಯೊಡನೆ, ತನ್ನ ಮದುವೆ ಪ್ರಸ್ತಾಪ ಮಾಡಿದಾಗ, ತಂದೆಗೆ ಉಭಯ ಸಂಕಟಕ್ಕಿಟ್ಟುಕೊಂಡು, ಮುಂದೇನು ಮಾಡಲು ತೋಚದಂತಾಯಿತು.

ಸೂಕ್ಷ್ಮಬುದ್ಧಿಯ ಸರ್ಪವು ತನ್ನ ತಂದೆಯ ಅಂತರಿಕ ವೇದನೆಯನ್ನು, ವ್ಯಥೆಯನ್ನೂ ಅರಿತು, ಕ್ಷತ್ರಿಯರಿಗೆ ವಿಹಿತವಾದ ಅಂದರೆ ಯುದ್ಧದಲ್ಲಿ ಜಯಗಳಿಸಿ, ಬಲಾತ್ಕಾರದಿಂದ ವಧುವನ್ನು ಅಪಹರಿಸಿ ನಂತರ ಮದುವೆಮಾಡಿಕೊಳ್ಳುವ ವಿಚಾರ ಸೂಚಿಸಿತು. ಆ ರಾಜನು ಮದುವೆಮಾತನ್ನು ಚರ್ಚಿಸಲು, ಮುಂದೆ ಮಾಡಬಹುದಾದ ಕಾರ್ಯವಿಧಾನ ಕುರಿತು ವಿಚಾರಮಾಡಲು, ಮಂತ್ರಿಗಳ ಆಪ್ತಾಲೋಚನೆ ಸಭೆ ಕರೆದ. ತನ್ನ ಗುಣವಂತನಾದ ಮಗನೊಬ್ಬನಿಗೆ ಮದುವೆಮಾಡುವ ಹೊಣೆ ನಿಮ್ಮಮೇಲಿದೆ ಎಂದು ಹೇಳಿ, ಪುತ್ರನು ಸರ್ಪವೆಂಬುದನ್ನು ಬಹಿರಂಗವಾಗಿ ಹೇಳಲಿಲ್ಲ.

ಮಂತ್ರಿಗಳೆಲ್ಲ ಆಲೋಚಿಸಿ, ಅರಸನಿಗೆ, "ನಮ್ಮ ಪೂರ್ವದೇಶದ ರಾಜ್ಯದ ಪ್ರಭು ವಿಜಯರಾಜನಿಗೆ ಎಂಟುಮಂದಿ ಶೂರರಾದ ಮಕ್ಕಳಿದ್ದು, ಅವರಿಗೆ ಭೋಗವತಿ ಎಂಬ ಸೋದರಿಯು ಇರುವಳು. ಅವಳು ನಮ್ಮ ಯುವರಾಜರಿಗೆ ತಕ್ಕ ಕನ್ಯೆಯು" ಎಂಬುದಾಗಿ ಅಭಿಪ್ರಾಯಪೂರಿತ ಸಲಹೆನೀಡಿದರು. ಈ ಕಾರ್ಯಕ್ಕಾಗಿ ರಾಜನು ವೃದ್ಧ ಮಂತ್ರಿಯೊಬ್ಬನನ್ನು ನಿಯಮಿಸಿದ. ಅವನನ್ನು ವಸ್ತ್ರಾಲಂಕಾರಗಳಿಂದ ಗೌರವಿಸಿ ಸೇನೆಯೊಡನೆ ಕಳುಹಿಸಿದನು.

ಆ ಮಂತ್ರಿಯು ಪೂರ್ವದೇಶಕ್ಕೆ ಬಂದು ವಿಜಯರಾಜನನ್ನು ಕಂಡು, ಶೂರಸೇನನಿಂದ ತಂದ ಖಿಲ್ಲತ್ತುಗಳನ್ನಿತ್ತು ಗೌರವಿಸಿದನು. ನೀತಿವಾಕ್ಯಗಳಿಂದ, ಸುಳ್ಳು ಮಾಹಿತಿ ಪೂರೈಸಿ, ತನ್ನ ಬುದ್ಧಿವಂತಿಕೆಯಿಂದ ಭೋಗವತಿಗೂ ಶೂರಸೇನನ ಮಗನಾದ ನಾಗರಾಜನಿಗೂ ಮದುವೆ ನಿಶ್ಚಯಮಾಡಿಸಿದ. ಆ ವಿಜಯರಾಜನಿಗೆ ಬೆಲೆಬಾಳುವ ವಸ್ತ್ರಾಲಂಕಾರಗಳನ್ನು ಕೊಟ್ಟು ಗೌರವಿಸಿದನು. ಆ ರಾಜನಾದರೂ ಕನ್ಯೆಯನ್ನು ಕೊಡಲು ಒಪ್ಪಿಕೊಂಡನು. ವೃದ್ಧಮಂತ್ರಿ ಒಪ್ಪಿಸಿದಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿ, ಹಿಂತಿರುಗಿ ಬಂದು, ರಾಜನಿಗೆ ವಿಷಯವನ್ನು ವಿವರಿಸಿದ.

ಸ್ವಲ್ಪ ದಿನಗಳ ನಂತರ ವೃದ್ಧ ಮಂತ್ರಿ ಬೆಲೆಬಾಳುವ ವಸ್ತ್ರಾಲಂಕಾರ ತೆಗೆದುಕೊಂಡು ರಾಜಪರಿವಾರದೊಡನೆ ಹಾಗೂ ಸೈನ್ಯದೊಡನೆ ಮದುವೆಗಾಗಿ ವಿಜಯರಾಜನ ಪಟ್ಟಣಕ್ಕೆ ಬಂದು ಅವನನ್ನು ಕಂಡು, ಮಿಕ್ಕ ಮಂತ್ರಿಗಳೊಡನೆ ಆ ರಾಜನಿಗೆ ಹೀಗೆ ನುಡಿದ. "ಶೂರಸೇನ ರಾಜನ ಮಗನಾದ ನಾಗರಾಜನು ಇಲ್ಲಿಗೆ ಬರಲು ಇಷ್ಟಪಡುವದಿಲ್ಲ. ಕ್ಷತ್ರಿಯರಿಗೆ ಅನೇಕ ಬಗೆಯ ವಿವಾಹಗಳು ಬಳಕೆಯಲ್ಲಿವೆ. ಆದುದರಿಂದ ಈ ರಾಜಪುತ್ರನ

ಶಸ್ತ್ರ, ಅಲಂಕಾರಗಳೊಡನೆ ಕನ್ಯೆಯ ವಿವಾಹ ಏರ್ಪಡಿಸಿರಿ. ನಂತರ ರಾಜಕುಮಾರನ ಶಸ್ತ್ರದೊಂದಿಗೆ ಭೋಗವತಿಯ ವಿವಾಹ ಜರುಗಿ ಅವಳನ್ನು ಗಂಡನ ಮನೆಗೆ, ಸುವರ್ಣ, ಕುದುರೆ, ಗೋವುಗಳೊಡನೆ, ಮಂತ್ರಿ ಸಹಿತವಾಗಿ ಕಳಿಸಿದನು. ಮಂತ್ರಿಗಳು ಬಂದು ಶೂರಸೇನ ರಾಜನಿಗೆ ಅವನ ಸೊಸೆಯನ್ನೊಪ್ಪಿಸಿದರಲ್ಲದೆ, ವಿಜಯ ರಾಜನು ಕೊಟ್ಟ ವಿಚಿತ್ರವಾದ ಬೆಲೆಯುಳ್ಳ ಆಭರಣ, ಉಡುಗೊರೆಗಳನ್ನು ಶೂರಸೇನನಿಗೆ ಅರ್ಪಿಸಿದರು. ಕೆಲವು ದಿನ ಅಲ್ಲಿ ತಂಗಿದ್ದು, ಮರಳಿ ಅವರೆಲ್ಲ ತಮ್ಮ ರಾಜ್ಯಕ್ಕೆ ಹಿಂತಿರುಗಿದರು.

ಭೋಗವತಿಯು ರೂಪ, ಲಾವಣ್ಯದಲ್ಲಿ ಅಪ್ಸರೆಯನ್ನೂ ಹೋಲುವಂತಿದ್ದೂ ನಿತ್ಯವೂ ಅತ್ತೆ-ಮಾವಂದಿರ ಸೇವೆಮಾಡುತ್ತಿದ್ದಳು. ಭೋಗವತಿಯ ಪತಿಯಾದ ಆ ಘೋರ ಸರ್ಪವು ಒಂದು ನಿರ್ಜನಪ್ರದೇಶದಲ್ಲಿ ಏಕಾಂತ ಮಂದಿರದಲ್ಲಿದ್ದಿತು, ಸಕಲ ಸಾಧನ ಸಲಕರಣೆಗಳಿಂದ ಸುಸಜ್ಜಿತವಾಗಿತ್ತು ; ಸುಂದರವಾಗಿತ್ತು. ಆ ಸರ್ಪವು ತನ್ನ ತಂದೆ ತಾಯಿಗಳಿಗೆ ತನ್ನ ಮಡದಿ ಇದುವರೆಗೂ ತನ್ನ ಬಳಿಗೆ ಬಾರದಿರುವ ಬಗ್ಗೆ ಪ್ರಶ್ನಿಸಿದಾಗ, ತಾಯಿಯು ಈ ವಿಷಯದಲ್ಲಿ ಉಪಾಯ ಒಂದನ್ನು ಯೋಚಿಸಿದ್ದು ಕಾರ್ಯಗತಗೊಳಿಸ ಲಿರುವದಾಗಿ ಹೇಳಿ, ಸಂತೈಸಿದಳು.

ಒಂದು ದಿನ ನಂಬಿಕೆಯ ದಾಸಿಯೊಡನೆ, ರಾಜಮಾತೆಯು ಭೋಗವತಿಗೆ ರಹಸ್ಯ ವಿಚಾರವನ್ನು ತಿಳಿಸಿದಳು. ಅವಳಮಾತು ಕೇಳಿ, ಭೋಗವತಿಯು ''ಸಾಮಾನ್ಯವಾಗಿ ಮನುಷ್ಯಸ್ತ್ರೀಯರಿಗೆ ಮನುಷ್ಯನೇ ಪತಿಯಾಗುವನು. ಹೀಗಿರಲು ದೇವಪುರುಷನು ಪತಿಯಾಗಿ ಲಭಿಸುವದು ಪೂರ್ವಜನ್ಮದ ಪುಣ್ಯವೇ ಸರಿ'' ಎಂದು ನುಡಿದಳು. ಈ ಶುಭವಾರ್ತೆಯನ್ನು ಕೇಳಿದ ದಾಸಿಯು ಬಂದು ಸರ್ಪಕ್ಕೂ ರಾಜಮಾತೆಗೂ ತಿಳಿಸಿದಳು. ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಭೋಗವತಿಯು ದಾಸಿಯನ್ನು ಕರೆದು, ತನ್ನಪತಿ ಇರುವ ಸ್ಥಳವನ್ನು ತೋರಿಸಲು ಕೋರಿದಳು. ಅವಳನ್ನು ದಾಸಿಯು ರಾಜನಿರುವ ಏಕಾಂತಕ್ಕೆ ಕರೆದೊಯ್ದಳು. ಅಲಂಕೃತ ಕೋಣೆಯೊಂದರಲ್ಲಿ, ಹಾಸಿಗೆಯ ಮೇಲೆ ಮಲಗಿದ ಸರ್ಪವನ್ನು ನೋಡಿದಳು. ರತ್ನಭೂಷಿತವಾದ ಸರ್ಪರೂಪದ ಪತಿಯನ್ನು ನೋಡಿ ಭೋಗವತಿ ಬೆದರಲಿಲ್ಲ, ಬೆಚ್ಚಲಿಲ್ಲ, ದುಃಖಪಡಲಿಲ್ಲ. ಅದೇ ಹಾಸಿಗೆಯಲ್ಲಿ ಕುಳಿತು ಆ ಸರ್ಪವನ್ನು ಸಂಗೀತ, ನೃತ್ಯಾದಿಗಳಿಂದ ಸೇವೆ ಮಾಡಿದಳು. ಸುಗಂಧ ಕುಸುಮಗಳಿಂದ ಮತ್ತು ರುಚಿಯಾದ ಪಾನಗಳಿಂದ ಸಂತೋಷ ಗೊಳಿಸಿದಳು.

ಸೌಜನ್ಯದ, ಸರಳ ನಡೆನುಡಿ; ಸಂಪ್ರೀತಿಯುಕ್ತ ಭೋಗವತಿಯ ಉಪಚಾರದಿಂದ ಸರ್ಪಕ್ಕೆ ಹಿಂದಿನ ಜನ್ಮದ ಸ್ಮರಣ ಉಂಟಾಯಿತು. ಸರ್ಪರೂಪದಲ್ಲಿರುವ ತನ್ನನ್ನು ಕಂಡು ಭೋಗವತಿ ಹೆದರದಿರಲು ಕಾರಣವೇನು ಎಂಬುದಾಗಿ ಸ್ವಯಂ ರಾಜನೇ ಪ್ರಶ್ನಿಸಿದಾಗ ಅವಳೆಂದಳು. ''ಬ್ರಹ್ಮ ಬರಹ ಅಳಿಸಲು ಯಾರಿಂದಾಗಲೂ ಆಗದು. ಅವರಲ್ಲಿಯೂ ಸ್ತ್ರೀಯರಿಗೆ ಪತಿಯೇ ಪರದೈವ.'' ಅವಳ ಸೌಜನ್ಯಯುಕ್ತ ನುಡಿಗಳನ್ನು ಕೇಳಿ, ಸರ್ಪಕ್ಕೆ ಅತೀವ ಆನಂದವಾಯಿತು. ಆನಂದದಲ್ಲಿ ಅಭಿಮಾನ ಪ್ರೇಮತುಂಬಿದ ಧ್ವನಿಯಲ್ಲಿ ''ನಿನ್ನ ಅನುಗ್ರಹವೆಂಬಂತೆ ನನಗೀಗ ಪೂರ್ವ ಜನ್ಮದ ಸ್ಮರಣೆಯಾಗುತ್ತಲಿದೆ....''

....ಹೌದು, ಒಂದು ದಿನ ಪಾರ್ವತಿ ಪರಮೇಶ್ವರರು ಏಕಾಂತದಲ್ಲಿ ಸರಸಲ್ಲಾಪ ಮಾಡುತ್ತಿದ್ದರು. ಶಿವನು ಗಿರಿಜೆಯ ಮಾತು ಕೇಳುತ್ತ ನಕ್ಕುಬಿಟ್ಟ. ಅದನ್ನು ಕೇಳಿ, ಅವನ

ಕೈಯಲ್ಲಿದ್ದ ನನಗೂ ನಗು ತಡೆಯಲಾಗಲಿಲ್ಲ ನಕ್ಕು ಬಿಟ್ಟೆ. ನನ್ನ ನಗೆ ಕೇಳಿ, ಶಿವನಿಗೆ ಒಮ್ಮೆಲೆ ಕೋಪ ಉಕ್ಕಿ ಬಂತು. "ನೀನು ಮನುಷ್ಯ ಗರ್ಭದಲ್ಲಿ ಸರ್ಪವಾಗು" ಎಂದು ಶಾಪವಿತ್ತ. ಬಳಿಕ ಮತ್ತೆ ಅವನೇ "ನಿನಗೆ ಅಲ್ಲಿಯೂ ಪೂರ್ವ ಜನ್ಮದ ಜ್ಞಾನ ಉಂಟಾಗುವದು" ಎಂದು ಸಂತೈಸಿದ. "ನಾನು ಸಾಮಾನ್ಯ ಸರ್ಪವಲ್ಲ. ಆದಿಶೇಷನ ಮಗ ನಾಗೇಂದ್ರ. ಆ ಜನ್ಮದಲ್ಲಿ ನೀನೂ ನನ್ನ ಪತ್ನಿಯಾಗಿದ್ದೆ. ಸರ್ಪರೂಪದಲ್ಲಿ, ಭೋಗವತೀ ಎಂದೇ ನಿನಗೆ ಆಗಿನ ಹೆಸರೂ ಸಹ. ಆಗ ನಾನು ನೀನು ಕೂಡಿಕೊಂಡು ಶಿವನನ್ನು ಸ್ತುತಿಮಾಡಿದೆವು; ಅವನ ಅನುಗ್ರಹ ಪಡೆದೆವು. ಆಗ ಶಿವನು ಪ್ರಸನ್ನನಾಗಿ ಗೌತಮೀ ತೀರದಲ್ಲಿ ನನ್ನನ್ನು ಪೂಜಿಸಿದರೆ ನಿನಗೆ ಜ್ಞಾನೋದಯವಾಗುವದು ಖಂಡಿತ. ಆಗ ನಿನಗೆ ಈ ಭೋಗವತಿಯಿಂದ ಅವಳ ಸಹಾಯದಿಂದ ನಿನ್ನ ಶಾಪ ನಿವೃತ್ತಿ" ಎಂದು ಸಂತೈಸಿದ. ಈಗ ನೀನು ಮಾಡಬೇಕಾದದ್ದು ಇಷ್ಟೆ ನನ್ನನ್ನೂ ಗೌತಮೀ ತೀರಕ್ಕೆ ಒಯ್ದು, "ಅಲ್ಲಿ ನನ್ನ ಸಂಗಡ ಶಿವಪೂಜೆ ಮಾಡು. ಆಗ ಶಾಪ ನಿವೃತ್ತಿ ದೊರೆಯುತ್ತದೆ." ಎಂದು ವಿವರಿಸಿದ ಆ ನಾಗರಾಜ.

ಅದರಂತೆ ಭೋಗವತಿಯು ಪತಿಯೊಡನೆ ಗೌತಮೀ ತೀರದಲ್ಲಿ ಶಿವನಾರಾಧನೆ ಮಾಡಿದಳು. ಶಿವನ ಅನುಗ್ರಹದಿಂದ ಸರ್ಪ ದಿವ್ಯರೂಪ ಹೊಂದಿತು. ಆಮೇಲೆ ನಾಗನು ಹೆಂಡತಿಯೊಂದಿಗೆ ಶಿವಲೋಕಕ್ಕೆ ಹೊರಡುವ ವಿಚಾರವನ್ನು ತಂದೆಗೆ ಹೇಳಿದ. ತಂದೆ ಒಪ್ಪದೆ, "ನಾನು ದಿವಂಗತನಾದ ಮೇಲೆ, ನೀನು ಶಿವಲೋಕಕ್ಕೆ ಹೋಗಬಹುದು. ಅಲ್ಲಿಯವರೆಗೆ ರಾಜ್ಯವನ್ನಾಳುತ್ತ ಸುಖದಿಂದ ಇರು" ಎಂದು ಅಭಿಪ್ರಾಯಪಟ್ಟನು. ತಂದೆಯ ಮಾತನ್ನು ಮೀರದೆ, ಆ ನಾಗಪುರುಷನು ಪತ್ನಿಯೊಡನೆ ಹಲವಾರು ವರ್ಷ ಸುಖದಿಂದ ರಾಜ್ಯವಾಳಿದನು. ಪ್ರಜಾವತ್ಸಲನೆಂದು, ಧರ್ಮಸ್ವರೂಪಿಯೆಂದು ಪ್ರಜೆಗಳಿಂದ ಹೊಗಳಿಸಿಕೊಳ್ಳುತ್ತ, ರಾಜ್ಯವನ್ನು ವಿಸ್ತರಿಸಿದನು. ಧರ್ಮಕಾರ್ಯಗಳನ್ನು ನೆರವೇರಿಸುತ್ತ ವರ್ಣಾಶ್ರಮಧರ್ಮಪರಿಪಾಲನೆಮಾಡುತ್ತ ಜನಪ್ರಿಯನಾಗಿ ಬಾಳಿದನು. ಆ ನಂತರ ನಾಗಪುತ್ರರಲ್ಲಿ ರಾಜ್ಯಭಾರ ಇಳಿಸಿ, ಹೆಂಡತಿಯೊಡನೆ ಶಿವಲೋಕಕ್ಕೆ ತೆರಳಿದನು.

ಈ ತೀರ್ಥದಲ್ಲಿ ಭೋಗವತಿಯು ಶಿವನನ್ನು ಪ್ರತಿಷ್ಠಾಪಿಸಿರುವಳು. ಅಲ್ಲಿರುವ ಶಿವನಿಗೆ ನಾಗೇಶ್ವರನೆಂದು ಕರೆಯುವದು ವಾಡಿಕೆ ಮತ್ತು ಅಲ್ಲಿರುವ ತೀರ್ಥ "ನಾಗತೀರ್ಥ"ವೆಂದು ಕರೆಯುತ್ತಾರೆ. ಇಲ್ಲಿ ಸ್ನಾನ, ದಾನಗಳಿಂದ ಅತಿಶಯ ಸತ್ಫಲ ಪ್ರಾಪ್ತಿ ಇದೆ.

## ದೇವತೀರ್ಥ, ಮಾತೃತೀರ್ಥ ವರ್ಣನೆ

**ಬ್ರಹ್ಮ**:-ಸಕಲ ಸಿದ್ಧಿಯನ್ನುಂಟುಮಾಡಿ ಪಾಪಾತ್ಮರಾದ ಮನುಜನಮನದಕಲ್ಮಷ ತೊಳೆದು ಪಾವನಗೊಳಿಸುವ ತೀರ್ಥಒಂದಿದೆ. ಅದುವೇ "ಮಾತೃತೀರ್ಥ"ವೆಂದು ಕರೆಯಲ್ಪಡುತ್ತಿದೆ.

ಹಿಂದೊಮ್ಮೆ ದೇವದಾನವರಲ್ಲಿ ಮಾತಿನಲ್ಲಿ ವಿರಸ ತಲೆದೋರಿ, ಪರಸ್ಪರರು ಘರ್ಷಣೆಗಿಳಿದರು. ವೀರಾವೇಶದಿಂದ ಕಾದಾಡಿ ಘನಘೋರ ಯುದ್ಧವನ್ನೇ ಮಾಡಿದರು, ಆ ಯುದ್ಧ ದೇವತೆಗಳ ಪಾಲಿಗೆ ಅಪಜಯದ ಸಂಕೇತವೆನಿಸಿ, ದೈತ್ಯರ ಕೈ ಮೇಲಾಯಿತು. ಸೋಲು ನಮ್ಮ ಪಾಲಿಗೆ (ದೇವತೆಗಳ ಪಾಲಿಗೆ) ಶೂಲವಾದಂತಾಯಿತು. ಆಗ ನಾನು (ಬ್ರಹ್ಮ) ದೇವತೆಗಳೊಡನೆ, ಶಿವನನ್ನು ಅನನ್ಯ ಭಾವದಿಂದ ಸ್ತುತಿಸಿದೆವು. "ನೀನೇ ನಮಗೆ ದಾರಿ ತೋರುವ ಪರದೈವ" ಎಂದು ಪರಿಪರಿಯಿಂದ ಆರ್ತರಾಗಿ ಪ್ರಾರ್ಥಿಸಿದೆವು. ನಮ್ಮ ಆರ್ತನಾದಕ್ಕೆ ದಯಾಮಯನಾದ ಶಂಕರ ಅನುಕಂಪ ತೋರಿದ. ಪ್ರತ್ಯಕ್ಷನಾಗಿ ಪ್ರಸನ್ನ

ಮುಖಭಾವದಲ್ಲಿ ನಮ್ಮನ್ನು ಕುರಿತು "ದೇವನಾಯಕರೆ, ನಿಮಗೆ ಬೇಕಾಗಿರು ವದೇನು, ಕೇಳಿಕೊಡುವೆ? ಎಂದು ಅನುಗ್ರಹಮಾಡುತ್ತ ಪ್ರಶ್ನಿಸಿದ. ಶಂಕರನಲ್ಲಿ, ನಮಗಿರುವ ಭಯ, ಮುಂದೆ ತಲೆದೋರಬಹುದಾದ ವಿಷಮ ಸಮಸ್ಯೆಗಳ ಬಗ್ಗೆ ನಿವೇದನೆಮಾಡಿ ಕೊಂಡು, "ನೀನೇ ನಮ್ಮನ್ನು ರಕ್ಷಿಸಬೇಕು" ಎಂದು ಶರಣಾಗತಿ ಬೇಡಿ, ರಕ್ಷಣೆ ಕೋರಿದೆವು.

ನಮಗೆ ಒದಗಿಬಂದ ಈ ದುಃಖ ದಾರುಣಮಯ ಸನ್ನಿವೇಶವನ್ನು ಅರಿತ ಶಂಕರ ಕೂಡಲೇ ಕತ್ತಲೆ (ಘೋರ) ರೂಪದಿಂದ ರಾಕ್ಷಸರೊಡನೆ ಯುದ್ಧ ಆರಂಭಿಸಿದ. ಯುದ್ಧದಲ್ಲಿ ವೀರಾವೇಶದಿಂದ ದೈತ್ಯರೊಡನೆ ಕಾದಿದ. ಆಗ ಅವನ ಹಣೆಯಿಂದ ಬೆವರು ಹನಿಗಳು ಉದುರಿದವು. ಬಹು ಸಂಖ್ಯೆಯಲ್ಲಿ ದೈತ್ಯರಿದ್ದರೂ, ಶಿವನ ಪರಾಕ್ರಮದೆದುರು, ಅವರೆಲ್ಲ ಹೆಚ್ಚು ಹೊತ್ತು ಹೋರಾಡಲು ಧೈರ್ಯ, ಶೌರ್ಯ ಸಾಲದೇ, ಸ್ವರ್ಗದಿಂದ ಭೂಮಿಗೆ ಓಡಿಹೋದರು, ಶಂಕರ ಅವರನ್ನು ಬಿಟ್ಟರಷ್ಟೆ ! ಅಲ್ಲಿಗೂ ಅವರನ್ನು ಬೆಂಬತ್ತಿದ. ಅವನು ಹೋದೆಲ್ಲೆಲ್ಲಾ ಬೆವರುಹನಿಗಳು ಹಣೆಯಿಂದ ಉದುರುತ್ತಲೇ ಇದ್ದವು. ಶಿವನ ಹಣೆಯಿಂದ ಉದುರಿದ ಬೆವರು ಬಿಂದುಗಳಿಂದಲೇ ಮಂಗಳ ರೂಪೆಯರಾದ ಮಾತೃದೇವತೆಯರು ಜನಿಸಿದರು. ಆ ಮಾತೃಕೆಯರು ರುದ್ರನನ್ನು ಕುರಿತು ತಾವು ರಾಕ್ಷಸರನ್ನು ಸಂಹರಿಸುವದಾಗಿ ನುಡಿದಾಗ ಶಿವನು "ಅವರಿಗೆ ಸ್ವರ್ಗದಿಂದ ಭೂಮಿಗೆ, ಭೂಮಿಯಿಂದ ಪಾತಾಳಲೋಕಕ್ಕೆ ಹೋಗಿ ಅಡಗಿ ಕುಳಿತ, ದೈತ್ಯರನ್ನು ನಿರ್ನಾಮ ಮಾಡಿರಿ" ಎಂದು ಆಜ್ಞೆ ಇತ್ತ. ಅವನ ಆಜ್ಞೆಯಂತೆ ಆ ಎಲ್ಲ ಮಾತೃಕೆಯರು ಅಧೋಲೋಕಕ್ಕೆ ಧುಮಿಕಿ ಅಧಮರನ್ನೆಲ್ಲಾ ಸದೆಬಡಿದು, ಮರಳಿ ಅದೇ ದಾರಿಯಿಂದ ದೇವತೆಗಳ ಬಳಿಗೆ ಬಂದರು ಜಯಶೀಲರಾಗಿ.

ಮಾತೃಕಾದೇವತೆಯರು, ಪಾತಾಳಲೋಕದಿಂದ ಮರಳಿ ಬರುವವರೆಗೆ ದೇವತೆಗಳು, ಅವರಿಗಾಗಿ ಕಾದು ಕುಳಿತಿದ್ದರು. ಅವರು ಕುಳಿತ ನೆಲವು 'ಪ್ರತಿಷ್ಠಾನ ಕ್ಷೇತ್ರ' ಎಂದು ಮುಂದೆ ಪ್ರಸಿದ್ಧವಾಯಿತು. ಅಲ್ಲದೆ ಮಾತೃಕೆಯರು ಜನಿಸಿದ ಸ್ಥಳಗಳೆಲ್ಲ ಮಾತೃತೀರ್ಥ ವೆಂದು ಮನ್ನಿಸಲಾಗಿದೆ. ಈ ತೀರ್ಥಗಳಲ್ಲಿ ಸ್ನಾನ, ದಾನ, ಪಿತೃ ತರ್ಪಣಮಾಡಿದರೆ ಅಕ್ಷಯ ಪುಣ್ಯಫಲವಿದೆ ಎಂದು ಸ್ವಯ ಶಂಭುವೇ ವರ ಅನುಗ್ರಹಿಸಿದ್ದಾನೆ. ಅಲ್ಲದೆ ಮಾತೃ ತೀರ್ಥಮಹಿಮೆಯನ್ನು ಕೇಳಿದರೆ, ಇಲ್ಲವೆ ಓದಿದರೆ ಆಯುಸ್ಸೂ, ಸುಖವೂ ಲಭಿಸುತ್ತದೆ.

## ಬ್ರಹ್ಮತೀರ್ಥ, ಶಿರೋಲಿಂಗ ಶಿವತೀರ್ಥ, ಸೂರ್ಯತೀರ್ಥ ವರ್ಣನೆ

**ಬ್ರಹ್ಮ:-** ಈ ಮೊದಲು ಜರುಗಿದ ದೇವದಾನವರ ಘನ ಘೋರ ಸಂಗ್ರಾಮದಲ್ಲಿ ಶಿವನ ಕ್ರೋಧ, ಪ್ರತಾಪಕ್ಕೆ ಅಂಜಿ ದೈತ್ಯರೆಲ್ಲ ಪಾತಾಳಕ್ಕೆ ಓಡಿಹೋದರಷ್ಟೆ ! ಅಸಂಖ್ಯ ಮಾತೃಕಾ ದೇವತೆಯರು, ಆ ದೈತ್ಯ ದುರುಳರನ್ನು ಬೆಂಬತ್ತಿದಾಗ, ದೇವಸೈನ್ಯವು ಹಾಗೆಯೇ ನಿಂತು ಬಿಟ್ಟಿತು. ಆ ಸಮಯದಲ್ಲಿ ನನ್ನ (ಬ್ರಹ್ಮನ) ಭಯಂಕರವಾದ ಕತ್ತೆಯ ಆಕಾರದ ಭಯಂಕರ ಮುಖವು ತಾನಾಗಿಯೇ ಇದ್ದಕ್ಕಿದ್ದಂತೆ, "ನಿಲ್ಲಿರಿ, ನಿಲ್ಲಿರಿ ದೈತ್ಯರೆ, ನೀವೇಕೆ ಹಾಗೆ ಓಡುತ್ತಿದ್ದೀರಿ. ಈ ದೇವತೆಗಳೆಲ್ಲವನ್ನೂ ನಾನು ನುಂಗಿಬಿಡುತ್ತೇನೆ" ಎಂದು ಅರಚಿತು. ನಾನೆಷ್ಟು ತಡೆದರೂ, ಅದು ಕೇಳದೆ, ದೇವತೆಗಳನ್ನೇ ನುಂಗಲು ಮುಂದಾಯಿತು. ಆಗ ಅದರ ಕಿರುಚಾಟ, ಅರ್ಭಟ ಕೇಳಿ, ದೇವಗಣ ಗಡಗಡ ನಡುಗಿತು. ಬೇರೆ ಉಪಾಯ ಗಾಣದೆ, "ವಿಷ್ಣುವೇ ಈಗ ನಮ್ಮನ್ನು ಕಾಪಾಡು, ಕಾಪಾಡು" ಎಂದು ಮೊರೆಹೋಯಿತು. ವಿಷ್ಣುವು ತನ್ನ

ಸುದರ್ಶನ ಚಕ್ರದಿಂದ ಸುಲಭವಾಗಿ ಕತ್ತೆಯ ರುಂಡವನ್ನೇ ಕತ್ತರಿಸಬಹುದಾಗಿತ್ತು. ಹಾಗಾದಲ್ಲಿ ಜಗತ್ತಿಗೆ ಅಪಾಯ ಒದಗುವದನ್ನು ತಿಳಿದು, ದೇವತೆಗಳಿಗೆ ''ಮುಕ್ಕಣ್ಣನೇ ಈ ಬ್ರಹ್ಮಶಿರಸ್ಸನ್ನು ಕತ್ತರಿಸಿ ಜಗತ್ತನ್ನೂ ನಿಮ್ಮನ್ನು ರಕ್ಷಿಸಬಲ್ಲ; ಆದುದರಿಂದ ನೀವೆಲ್ಲ ಅವನನ್ನೇ ಮೊರೆ ಹೋಗಿರಿ'' ಎಂದ. ಅವನ ಮಾತಿನಂತೆ ಶಿವನ ಸ್ತುತಿಮಾಡಿದಾಗ, ಶಿವನು ಪ್ರಸನ್ನನಾಗಿ, ಅವರಿಗೆ ಬಂದೊದಗಿದ ಆಪತ್ತನ್ನು ಅರ್ಥಮಾಡಿಕೊಂಡು, ಲೋಕೋಪಕಾರಕ್ಕಾಗಿ, ಬ್ರಹ್ಮ ಶಿರಚ್ಛೇದಮಾಡಲು ಒಪ್ಪಿ, ತಕ್ಷಣವೇ ತನ್ನ ಉಗುರುಗಳಿಂದ ಕತ್ತರಿಸಿ, ''ಈ ಬ್ರಹ್ಮಶಿರ ಎಲ್ಲಿ ಇಡಲಿ?'' ಎಂದು ಅವರನ್ನೇ ಪ್ರಶ್ನಿಸಿದ.

ಆಗ ಭೂಮಿಯು ಅದರ ಭಾರಕ್ಕೆ ತಾನು ಪಾತಾಳದಲ್ಲಿ ಹುದುಗಿ ಹೋಗಬಹುದೆಂದು ಭಯ ವ್ಯಕ್ತಪಡಿಸಿತು. ಸಮುದ್ರರಾಜನೂ ಸಹ ''ಹಾಗೆ ಮಾಡಿದಲ್ಲಿ ನಾನು ಆದಿಶೇಷನ ಕಡೆಗೆ ಹೋಗಬೇಕಾದೀತು'' ಎಂದು ಅಂಜಿಕೆ ತೋರಿಸಿದ. ಆಗ ದೇವತೆಗಳು ಪುನಃ ಪರಮೇಶ್ವರನನ್ನು ಪ್ರಾರ್ಥಿಸಿದರು. ಆಗ ಶಿವನು ತನ್ನಲ್ಲಿಯೇ ಆಲೋಚಿಸಿದ. ''ಈ ಬ್ರಹ್ಮಶಿರವು ಕತ್ತರಿಸದಿದ್ದರೂ, ಜಗತ್ತನ್ನು ಸಂಹರಿಸುತ್ತಿತ್ತು. ಈಗ ಕತ್ತರಿಸಿದ್ದನ್ನು ಭೂಮಿಯ ಮೇಲಿಟ್ಟರೂ ಅಪಾಯ ತಪ್ಪುವಂತಿಲ್ಲ. ಈಗ ಏನು ಮಾಡಲಿ?'' ತಕ್ಷಣವೇ ಉಪಾಯ ಹೊಳೆಯಿತು. ಜಗತ್ತಿನ ಒಳಿತಿಗಾಗಿ, ಕೊನೆಗೆ ತಾನೇ ಬ್ರಹ್ಮಶಿರವನ್ನು ಧರಿಸಿದ.

ಶಿವಶಂಕರನ ಈ ಅದ್ಭುತ ಕಾರ್ಯಕಂಡು, ದೇವತೆಗಳ ಸಮೂಹ ಆಶ್ಚರ್ಯ ಚಕಿತರಾಗಿ ಹೋದರು. ಗೌತಮೀನದಿಗೆ ಹೋಗಿ ಭಕ್ತಿಯಿಂದ ಶಿವನನ್ನು ಉಪಾಸನೆಗೈದರು. ಹೀಗೆ ಪರಶಿವನು ಬ್ರಹ್ಮನ ಐದನೆಯ ಶಿರವನ್ನು ಕತ್ತರಿಸಿದ್ದರಿಂದ ಬ್ರಹ್ಮ ಚತುರ್ಮುಖನಾಗಿ ಸಂಗಮವಾಗಿ ಸೃಷ್ಟಿಕಾರ್ಯ ನೆರವೇರಿಸುವದು ಸುಗಮವಾಯಿತು. ಬ್ರಹ್ಮತೀರ್ಥಕ್ಕೆ ಹೋಗಿ ದರ್ಶನಮಾಡಿದ ನರನು ಎಂತಹ ಪಾಪವನ್ನೇ ಮಾಡಿದರೂ ಬ್ರಹ್ಮಲೋಕ ಪಡೆಯುತ್ತಾನೆ. ಹೀಗೆ ಶಿವನು ಬ್ರಹ್ಮಶಿರಚ್ಛೇದಮಾಡಿದ ಸ್ಥಳ ''ರುದ್ರತೀರ್ಥ''ವೆಂದಾಗಿದೆ. ಸೂರ್ಯನು ದೇವತಾಸ್ವರೂಪ ಹೊಂದಿ ಅಲ್ಲಿಯೇ ನೆಲೆಸಿದ ಕಾರಣ, ಅಲ್ಲಿ 'ಶೌರ್ಯತೀರ್ಥ' ಉದ್ಭವಿಸಿದೆ. ಆ ತೀರ್ಥದಲ್ಲಿ ಸ್ನಾನಮಾಡಿದರೆ ಸೂರ್ಯನಾರಾಯಣನಿಗೆ ಅರ್ಘ್ಯಾದಿಗಳನ್ನು ನೀಡಿದರೆ ಅವನಿಗೆ ಪುನರ್ಜನ್ಮವೇ ಇಲ್ಲ. ಮಹಾದೇವನು ಬ್ರಹ್ಮ ಶಿರಸ್ಸನ್ನು ಕತ್ತರಿಸಿ, ಅದನ್ನು ದೇವತೆಗಳ ಉತ್ಕರ್ಷಕ್ಕಾಗಿ 'ಅವಿಮುಕ್ತಕ್ಷೇತ್ರ'ದಲ್ಲಿ ಪ್ರತಿಷ್ಠಾಪಿಸಿದನು. ಆದಕಾರಣ, ಗೌತಮೀ ತೀರದಲ್ಲಿರುವ ಬ್ರಹ್ಮತೀರ್ಥದಲ್ಲಿ ಬ್ರಹ್ಮ ಶಿರವನ್ನು, ಅವಿಮುಕ್ತಕ್ಷೇತ್ರದಲ್ಲಿ ಸ್ಥಾಪಿಸಿದ ಬ್ರಹ್ಮಕಪಾಲವನ್ನೂ ದರ್ಶನಮಾಡಿದ ಮನುಷ್ಯನು ಬ್ರಹ್ಮಹತ್ಯಾದಿ ದೋಷ ಹೊಂದಿದ್ದರೂ ಸಹ ಪರಿಶುದ್ಧನಾಗಿ, ಮರಣಾ ನಂತರ ಪುಣ್ಯಲೋಕ ಹೊಂದುತ್ತಾನೆ.

## ಅವಿಘ್ನತೀರ್ಥ

**ಬ್ರಹ್ಮ:-** ಸರ್ವ ವಿಘ್ನಗಳನ್ನು ದೂರಮಾಡಿ, ಕೈಕೊಂಡ ಕಾರ್ಯಗಳು ಜಯಪ್ರದವೆನಿಸುವಂತೆ ಅಪೂರ್ವ ಜಾಗೃತತೀರ್ಥ ಒಂದಿದ್ದು ಅದು 'ಅವಿಘ್ನತೀರ್ಥ'ವೆಂದು ಕರೆಯಲ್ಪಡುತ್ತದೆ. ಅದರ ಮಹಿಮೆಯನ್ನು ವಿವರಿಸುತ್ತೇನೆ, ಕೇಳು.

ಒಮ್ಮೆ ಎಲ್ಲ ದೇವತೆಗಳು ಕಲೆತು, ಗೌತಮಿ ತೀರದ ಉತ್ತರ ದಿಶೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಯಾಗ ಒಂದನ್ನು ಆಚರಿಸಿದರು. ಆದರೆ ವಿಘ್ನಗಳ ಪರಿಣಾಮವಾಗಿ

ಹಮ್ಮಿಕೊಂಡ ಯಾಗ ಪೂರ್ತಿ ಕೊನೆಗಾಣಲೇ ಇಲ್ಲ. ಆಗ ಮುಂದಿನ ದಾರಿಗಾಣದೇ ದೇವಗಣವೆಲ್ಲ ನನ್ನ (ಬ್ರಹ್ಮ) ಬಳಿಗೆ ಬಂದು ಹೇಳಿಕೊಂಡರು. ನಾನು ಹರಿಯನ್ನು ಧ್ಯಾನಿಸಿ, ಕಾರಣವನ್ನು ತಿಳಿದು, ''ವಿಘ್ನೇಶ್ವರನಾದ ವಿನಾಯಕನಿಂದ ಈ ರೀತಿ ವಿಘ್ನಗಳು ಎದುರಾಗಿ, ಯಾಗ ನೆರವೇರಲಿಲ್ಲ. ನೀವೆಲ್ಲರೂ ಆದಿದೇವನಾದ ಗಜಮುಖನನ್ನು ಭಜಿಸಿ, ಪ್ರಾರ್ಥಿಸಿರಿ'' ಎಂದು ಸಲಹೆ ನೀಡಿದೆ.

ನನ್ನ ಸಲಹೆಗನುಸಾರ ಅವರೆಲ್ಲಾ ಗೌತಮೀನದಿಯಲ್ಲಿ ಮಿಂದು, ದೇವದೇವನಾದ ಗಜವನದನನ್ನು ಸಹಜ ಭಕ್ತಿಭಾವದಿಂದ ಭಜಿಸಿದರು-

''ಓ ದೇವ ನೀನು ಬ್ರಹ್ಮ, ವಿಷ್ಣು, ಮಹೇಶ್ವರರಿಗೂ ಸಹ ಪೂಜ್ಯನು; ವಂದ್ಯನು ಸಕಲ ಇಷ್ಟಾರ್ಥವನ್ನು ಪೂರೈಸುವಂತಹ ದೇವ, ನಿನ್ನ ಹೊರತು ಅನ್ಯ ದೇವರಿಲ್ಲ. ಇದನ್ನು ತಿಳಿದೇ ತ್ರಿಪುರಾಸುರ ಸಂಹಾರ ಕಾಲದಲ್ಲಿ ಪರಶಿವ ನಿನ್ನನ್ನು ಪೂಜಿಸಿದ. ಓ ವಿನಾಯಕ, ಪಾರ್ವತಿದೇವಿಯು ಚಿಂತಿಸಿದೊಡನೆಯೇ ನೀನು ಹುಟ್ಟಿದೆ. ಆದುದರಿಂದ ದೇವತೆಗಳು ನಿನ್ನನ್ನು 'ಸದ್ಯೋಜಾತ'ನೆಂದು ಕರೆದರು. ನೀನು ಜನಿಸಿದ ಕಾಲದಲ್ಲಿ ಲೋಕಗಳಲ್ಲೆಲ್ಲ ಸಂತೋಷ ಸಂಭ್ರಮದ ವಾತಾವರಣ ತುಂಬಿತ್ತು. ನಿನ್ನ ಬಾಲ್ಯಲೀಲೆಗಳೂ ಮೋಹಕವಾಗಿದ್ದವು. ಒಂದುದಿನ ನೀನು ತಾಯಿಯ ತೊಡೆಯ ಮೇಲೆ ಕುಳಿತಾಗ, ತಂದೆಯು ಶಿರಸ್ಸಿನಲ್ಲಿದ್ದ ಚಂದ್ರನನ್ನು ತಂದೆಯ (ಶಿವನ) ಜಡೆಯಲ್ಲಿ ಬಚ್ಚಿಟ್ಟನು. ಮತ್ತೊಂದು ಲೀಲಾಪ್ರಸಂಗವೆಂದರೆ, ತಾಯಿಯ ಮೊಲೆಯನ್ನು ಕುಡಿದು ತೃಪ್ತನಾಗಿದ್ದರೂ ನೀನು, ಸಹೋದರ ಷಣ್ಮುಖ ಕುಡಿಯಬಾರದೆಂದು ಹಠ ಹಿಡಿದೆ. ಅದಕ್ಕಾಗಿ ಶಿವನು, ''ನೀನು ಹೊಟ್ಟೆಬಾಕನಾದ್ದರಿಂದ ಲಂಬೋದರನಾಗೆಂದು'' ಕೋಪದಿಂದ ನಿನಗೆ ನುಡಿದ. ಒಮ್ಮೆ ದೇವತಾ ಸಭೆಯಲ್ಲಿ ತಂದೆಯಾದ ಶಿವನು ಉನ್ನತಾಸನದಲ್ಲಿ ಕುಳಿತಿದ್ದ. ಆಗ ನಿನಗೆ, ನಗೆಯಲ್ಲಿ ನರ್ತಿಸು ಎಂದಾಗ, ಕಾಲುಕಡಗ ಧರಿಸಿದ ನೀನು ಬಾಲಕನಿರುವಾಗ ನರ್ತನಮಾಡಿ ಎಲ್ಲರಿಗೂ ಹರುಷ ನೀಡಿದೆ. ಶಿವನು ಸಂತೋಷಗೊಂಡ. ನಿನಗೆ 'ಗಣೇಶ' ಪದವಿಯನ್ನೇ ಕೊಟ್ಟ. ಅದರಂತೆ ತಾಯಿಯಾದ ಗಿರಿಜೆಯನ್ನು ಮನೋಹರವಾದ ನರ್ತನ, ಇಂಪಾದ ಗಾಯನ, ಆಟ ಪಾಟ, ವಿನೋದಗಳಿಂದ ಸಂತೋಷಪಡಿಸುವೆ. ''ನಿನ್ನ ದರ್ಶನದಿಂದ ಧ್ಯಾನ, ಪೂಜೆ, ಆರಾಧನಾದಿಗಳಿಂದ ಸಕಲವಿಘ್ನಗಳೂ, ಭಯಗಳೂ ದೂರವಾಗಿ ಮನದಲ್ಲಿರುವ ಹಲವಾರು ಸದಿಚ್ಛೆಗಳು ಕೈಗೂಡುವವು. ನೀನೊಲಿದರೆ ಸಂಕಲ್ಪಗಳೆಲ್ಲ ಸುಲಭವಾಗಿ ನೆರವೇರುವವು. ಇಂತಹ ಮಹಾಮಹಿಮೆ ಯುಳ್ಳ, ಸ್ವತಂತ್ರಶಕ್ತಿಯುಳ್ಳ ಷಣ್ಮುಖಪ್ರಿಯವಾದ ಮೂಷಕವಾಹನನನ್ನು ಭಕ್ತಿಯಿಂದ ಪೂಜಿಸುವೆವು.''

ಈ ರೀತಿಯಾಗಿ ದೇವತೆಗಳೆಲ್ಲ ಭಕ್ತಿಪುರಸ್ಸರರಾಗಿ ಏಕದಂತನನ್ನು ಬಾಗಿ ಭಜಿಸಿದಾಗ, ಸಂತುಷ್ಟಿಯ ಆನಂದದ ಮುಖಮುದ್ರೆಯೊಂದಿಗೆ ಪ್ರಸನ್ನನಾದ ಗಣೇಶ. ದೇವತೆಗಳನ್ನು ಕುರಿತು ನುಡಿದ : ''ನಿಮಗೆ ಸಂಪೂರ್ಣ ಪ್ರೀತನಾಗಿ ಅನುಗ್ರಹಿಸಿದ್ದೇನೆ. ಇನ್ನುಮೇಲೆ ನಿಮ್ಮ ಯಾಗಕ್ಕೆ ಯಾವದೇವಿಘ್ನ ಬಾರವು. ನೀವು ಕೈಕೊಂಡ ಯಾಗ ಸಮಾರಂಭ ಸಾಂಗವಾಗಿ ನೆರವೇರಲಿ.''

ಗಣಪತಿಯೇ ಸ್ವಯಂ ಅನುಗ್ರಹಿಸಿದ ಮೇಲೆ ಶುಭಕಾರ್ಯಕ್ಕೆ ಅಡೆತಡೆಯ ಮಾತೇ ಇಲ್ಲ! ದೇವಯಾಗವು ನಿರ್ವಿಘ್ನವಾಗಿ ಮುಗಿಯಿತು. ಆಗ ಗಣೇಶನು ದೇವತೆಗಳಿಗೆ,

"ನನ್ನನ್ನು ಸದಾ ಧ್ಯಾನಿಸುವ ಭಕ್ತರಿಗೆ, ಸುತ್ತಿಸಿ ಪೂಜಿಸುವ ಭಾವುಕರಿಗೆ ವಿಘ್ನಗಳಷ್ಟೇ ದೂರವಾಗುವದಿಲ್ಲ. ಬಡತನ, ದುಃಖಗಳನ್ನೂ ಸಹ ನಾನು ದೂರಮಾಡುತ್ತೇನೆ" ಎಂದು ಅಭಯ ಹೇಳಿದನು. ಮುಂದೆ ಯಜ್ಞಕಾರ್ಯಾನಂತರ, ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ಪ್ರಯಾಣ ಮಾಡಿದರು.

ಅಂದಿನಿಂದ ಆ ತೀರ್ಥವು 'ಅವಿಘ್ನತೀರ್ಥ'ವೆಂದು ನಾಮಾಂಕಿತಗೊಂಡಿತು. ಈ ತೀರ್ಥದಲ್ಲಿ ಮಿಂದು. ಗಣಪನ ಧ್ಯಾನಮಾಡಿದರೆ ಆ ಮಾನವನ ಜೀವನದಲ್ಲಿ ಬಂದೊದಗುವ ವಿಘ್ನಗಳೆಲ್ಲ ದೂರವಾಗಿ, ಅವನ ಸಕಲ ಇಷ್ಟಾರ್ಥಗಳೆಲ್ಲ ಕೈಗೂಡುವವು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿದುದು*

—○—

## ಶಿವನ ಶೂಲ ರಾಕ್ಷಸನಾಶಕ್ಕೆ ಮೂಲ

**ಅಧ್ಯಾಯ - ೨೮**

## ಶೇಷತೀರ್ಥ ಮಹಾತ್ಮ್ಯ

**ಬ್ರಹ್ಮದೇವ ಅಂದದ್ದು -**

ನಾರದ, ಭೂಲೋಕದಲ್ಲಿ ಶೇಷತೀರ್ಥ ಎಂಬ ಒಂದು ಪರಮಪವಿತ್ರವಾದ ತೀರ್ಥ ಇದೆ. ಅದರ ಮಹಾತ್ಮ್ಯವನ್ನು ಹೇಳುತ್ತೇನೆ ಕೇಳು.

ಸರ್ಪಗಳಿಗೆಲ್ಲ ಅಧಿರಾಜ ಆದಿಶೇಷ. ಅವನಿಗೆ ಪಾತಾಳಲೋಕದ ಅಧಿಪತ್ಯವನ್ನು ನಾನೇ ಕೊಟ್ಟೆ. ಆ ಲೋಕವನ್ನು ಶಾಸನಗೈಯುತ್ತ ಅಲ್ಲಿಯೇ ವಾಸಮಾಡು ಎಂದು ಅಪ್ಪಣೆಯಿತ್ತೆ. ನನ್ನ ಆದೇಶದಂತೆ ತನ್ನ ಎಲ್ಲ ಪರಿವಾರಭೂತವಾದ ಸರ್ಪಸ್ನೇಹಿತ ರೊಡನೆ ಪಾತಾಳಕ್ಕೆ ತೆರಳಿದ ಆ ಆದಿಶೇಷ.

ಆದರೆ ಅಲ್ಲಿ ಇರುವ ದೈತ್ಯದಾನವರು ಇದನ್ನು ಹೇಗೆ ಸಹಿಸುವರು ? ತಮ್ಮ ಮೇಲೆ ಒಬ್ಬ ಯಾವನೋ ಅಧಿಕಾರಿಯನ್ನು ತಂದು ಹೇರಿದ್ದಾನೆ ಆ ಚತುರ್ಮುಖ ಎಂದು ಕೋಪವುಕ್ಕಿತು. ಮೊದಲೇ ಮುಂಗೋಪಿಗಳು ಅವರು. ಆಗಲೇ ಪಾತಾಳಕ್ಕೆ ಇಳಿದ ಆದಿಶೇಷನೊಂದಿಗೆ ಹುರುಡುಗಟ್ಟಿ ಹೋರಾಡಿದರು. ವೀರಾಧಿವೀರರು ಅಲ್ಲಿದ್ದ ದೈತ್ಯದಾನವರೆಲ್ಲ. ಅವರ ವೀರ್ಯ ಶೌರ್ಯಗಳನ್ನು ಎದುರಿಸಲಾಗಲಿಲ್ಲ ಆ ಹಾವಿನ ಅರಸನಿಗೆ. ದಾನವರಿಗೆ ಸೋತು ಅಲ್ಲಿಂದ ಓಡಿ ಬಂದ ಆದಿಶೇಷ ನನ್ನ ಬಳಿಗೆ ಬಂದು ವಿಜ್ಞಾಪಿಸಿದ. "ಪಿತಾಮಹ ! ನೀನೇನೋ ಕೃಪೆ ಮಾಡಿ ಪಾತಾಳಲೋಕದ ಅಧಿಪತ್ಯವನ್ನು ದಯಪಾಲಿಸಿರುವೆ. ಆದರೆ ಇದಕ್ಕೂ ಮೊದಲು ಅಲ್ಲಿ ಸ್ಥಾಪಿತರಾದವರು ದೈತೇಯ ದಾನವರು. ಅವರು ವೀರರಿದ್ದಷ್ಟೇ ಕ್ರೂರರು. ಕ್ರೂರರಿದ್ದಷ್ಟೇ ಪರೋತ್ಕರ್ಷದ ಅಸಹಿಷ್ಣುಗಳು. ಅವರು ನನ್ನನ್ನು ಪಾತಾಳಕ್ಕೆ ಬರಗೊಡುವುದಿಲ್ಲ. ಒಂದು ನಿಮಿಷವೂ ಅಲ್ಲಿ ಇರಗೊಡುವುದಿಲ್ಲ. ವಿಭುದ್ವಯ ಸಂಯೋಗವನ್ನು ಯಾವ ಜಾಣನೂ ಒಪ್ಪಲಾರೆ."

ಆಗ ನಾನು ಆ ಸರ್ಪಸಾರ್ವಭೌಮನಿಗೆ ಹೇಳಿದೆ "ಶೇಷ ! ನೀನು ಭೂಲೋಕದ ಗೌತಮೀತೀರಕ್ಕೆ ಹೋಗು ವೃದ್ಧದೇವಗಂಗೆಯೇ ಗೌತಮಿಯೆಂದು ಅಲ್ಲಿ ಕರೆಯಲ್ಪಡುತ್ತಾಳೆ. ಆ ಗೌತಮೀ ತೀರದಲ್ಲಿದ್ದ ಪರಮೇಶ್ವರನನ್ನು ಸ್ತೋತ್ರ ಮಾಡು,

ಇದರಿಂದ ನಿನ್ನ ಇಷ್ಟಾರ್ಥ ಕೈಗೂಡುವುದು. ಆ ಮಹಾದೇವನ ಹೊರತು ಮಾನವರ ಮನೋರಥಗಳನ್ನು ಪೂರ್ಣಮಾಡುವವನು ಮೂರುಲೋಕದಲ್ಲಿಯೇ ಬೇರೊಬ್ಬ ಇಲ್ಲ.

"ನಾನ್ಯೋಽಸ್ತಿ ಲೋಕತ್ರಿತಯೇ ಮನೋರಥಸಮರ್ಪಕಃ"

ನಾನು ಹೇಳುವುದೊಂದೇ ತಡ. ಆದಿಶೇಷ ಗಂಗಾತೀರಕ್ಕೆ ಹೋದ. ಮಂದಾಕಿನಿಯಲ್ಲಿ ಮಿಂದ, ಕೈಜೋಡಿಸಿದ. ಮಹಾದೇವನನ್ನು ಭಕ್ತಿಯಿಂದ ಸ್ತುತಿಸಿದ.

**ಶೇಷ ಉವಾಚ -**

"ನಮಸ್ತ್ರೈಲೋಕ್ಯನಾಥಾಯ ದಕ್ಷಯಜ್ಞ ವಿಭೇದಿನೇ ।
ಆದಿಕರ್ತ್ರೇ ನಮಸ್ತುಭ್ಯಂ ನಮಸ್ತ್ರೈಲೋಕ್ಯರೂಪಿಣೇ ॥"

ಮೂರುಲೋಕದ ಒಡೆಯನಾದ ಶಿವನಿಗೆ ನಮಸ್ಕಾರ. ದಕ್ಷಯಜ್ಞವನ್ನು ಧ್ವಂಸಗೈದವನಿಗೆ ವಂದನೆ. ಜಗತ್ತಿನ ಆದಿಕರ್ತಾರನೂ ವಿಶ್ವವ್ಯಾಪಿಯೂ ಆದ ನಿನಗೆ ನಮೋನಮಃ

"ಪಾಹಿ ಶಂಕರ ಸರ್ವೇಶ ಪಾಹಿ ಸೋಮೇಶ ಸರ್ವಗ ।
ಜಗನ್ನಾಥ ನಮಸ್ತುಭ್ಯಂ ದೇಹಿ ಮೇ ಮನಸೇಪ್ಸಿತಂ ॥

ಎಲ್ಲರಿಗೂ ಕಲ್ಯಾಣ ಉಂಟುಮಾಡುವ, ಸರ್ವಸ್ವಾಮಿಯಾದ ಶಂಕರನೇ ರಕ್ಷಿಸು. ಸರ್ವವ್ಯಾಪಿಯಾದ ಚಂದ್ರಶೇಖರನೇ ನಮ್ಮನ್ನು ಕಾಪಾಡು. ಜಗದೊಡೆಯನೇ ! ನಿನಗೆ ನಮಸ್ಕಾರ. ನನ್ನ ಮನಸ್ಸಿಗೆ ಅಭೀಪ್ಸಿತವಾದುದನ್ನು ನೀಡು.

ಆದಿಶೇಷನ ಈ ಪ್ರಾರ್ಥನೆಯನ್ನು ಕೇಳಿ ಪರಿತುಷ್ಟನಾದ ಪರಮೇಶ್ವರ. ಅವನು ಬಯಸಿದ ವರ ನೀಡಿದ. ದೈತ್ಯರು, ದಾನವರು, ರಾಕ್ಷಸರು ಶೇಷನಿಂದ ನಾಶಹೊಂದಲಿ ಎಂದು ಹರಸಿದ. ತನ್ನ ಕೈಯಲ್ಲಿಯ ಅಮೋಘ ತ್ರಿಶೂಲವನ್ನೇ ಶೇಷನಿಗೆ ಕೊಟ್ಟ. "ಈ ತ್ರಿಶೂಲದಿಂದ ನಿನ್ನ ವೈರಿಗಳಾದ ಅಸುರರೆಲ್ಲರನ್ನು ಸಂಹರಿಸು" ಎಂದು ಆದೇಶಿಸಿದ.

ಪರಮಸಂತೋಷವಾಯ್ತು ಆ ಸರ್ಪರಾಜನಿಗೆ. ಶಿವದತ್ತವಾದ ಆ ಶೂಲವನ್ನು ತೆಗೆದುಕೊಂಡು ನೇರವಾಗಿ ನಡೆದ ಪಾತಾಳಕ್ಕೆ. ದೇವದಾನವರನ್ನೆಲ್ಲ ಆಹ್ವಾನಿಸಿದ ಸಮರ ರಂಗಕ್ಕೆ. ಎಲ್ಲ ರಾಕ್ಷಸರೂ ಹುಮ್ಮಸ್ಸಿನಿಂದ ಆ ಹಾವಿನೊಡನೆ ಹೋರಾಡಲು ಬಂದರು. ಆದಿಶೇಷ ಹಾಗೂ ಆ ಅಶೇಷದೈತ್ಯ ದಾನವವೀರರ ನಡುವೆ ನಡೆಯಿತು ನಿಕರದ ಕಾಳಗ. ಸರ್ಪರಾಜನ ಬಳಿ ಇದ್ದಿತಲ್ಲವೇ ಪರಮೇಶ್ವರನ ಅಮೋಘವಾದ ಅಸ್ತ್ರ ತ್ರಿಶೂಲ! ಆದರಿಂದ ಆ ಆದಿಶೇಷನು ಎಲ್ಲ ದೈತ್ಯದಾನವರನ್ನೂ ಸದೆಬಡಿದ. ಪಾತಾಳ ಲೋಕದಲ್ಲಿ ನಿರಂತರವಾಗಿ ನೆಲೆನಿಂತು ನಿರಂಕುಶ ಶಾಸನ ನಡೆಯಿಸುತ್ತಲಿರುವ ಅಸುರ ವೀರರೆಲ್ಲರೂ ಪರಾಜಿತರಾಗಿ ಪಲಾಯನಸೂಕ್ತ ಪಠಿಸಿದರು. ವಿಜಯಶಾಲಿಯಾದ ಆ ಶೇಷದೇವನು ಭೂಲೋಕಕ್ಕೆ ಬಂದು ಕೈಲಾಸಪತಿಯನ್ನು ವಂದಿಸಿದ. ಆ ತ್ರಿಶೂಲವನ್ನು ಅವನಿಗೆ ಮರಳಿಸಿದ. ಶೇಷನು ಪಾತಾಳದಿಂದ ಎದ್ದು, ಭೂಮಿಯನ್ನು ಒದ್ದು ಮೇಲೆ ಬಂದ ಸ್ಥಾನದಲ್ಲಿ ದೊಡ್ಡದಾದ ಒಂದು ರಂಧ್ರವು ಏರ್ಪಟ್ಟಿತು. ಆ ಬಿಲದಿಂದಲೇ ಪಾತಾಳಗಂಗೆಯು ಪುಟಿದು ಮಹೀಮಂಡಲದಲ್ಲಿ ಹರಿಯಿತು. ಆ ನೀರು ಗೌತಮೀ ನದಿಯಲ್ಲಿ ಸೇರಿತು. ಅದೇ ಪಾತಾಳಗಂಗಾ ಹಾಗೂ ಗೌತಮೀ ಸಂಗಮಸ್ಥಳವಾಯಿತು. ಅಲ್ಲಿಯೇ ಶೇಷೇಶ್ವರನು ಸುಪ್ರತಿಷ್ಠಿತನಾಗಿದ್ದಾನೆ.

ಆ ಶೇಷೇಶ್ವರ ಲಿಂಗದ ಎದುರು ಆದಿಶೇಷನು ವಿಶಾಲವಾದ ಒಂದು ಹೋಮಕುಂಡ ನಿರ್ಮಿಸಿದ. ಅದರಲ್ಲಿ ಅಗ್ನಿಯನ್ನು ಪ್ರತಿಷ್ಠೆಗೈದು ಸ್ವಯಂ ಆದಿಶೇಷನೇ ಹೋಮ ಮಾಡಿದ. ಆ ಸ್ಥಳದಲ್ಲಿ ಹೋಮಾಗ್ನಿಯು ಯಾವಾಗಲೂ ಜಾಜ್ವಲ್ಯಮಾನವಾಗಿರುತ್ತದೆ. ಅಂತರ್ಜ್ವಲಿತವಾದ ಆ ಹೋಮಾಗ್ನಿಯಿಂದ ಆ ತೀರ್ಥದ ನೀರು ಹಾಗೂ ಆ ಗೌತಮಿಯ ಜಲವು ಈಗಲೂ ಬಿಸಿಬಿಸಿಯಾಗಿಯೇ ಇರುತ್ತದೆ. ಆ ಶೇಷತೀರ್ಥವು ಇಂದಿಗೂ ಅಲ್ಲಿನ ಉಷ್ಣೋದಕದಿಂದ ಹಿಂದಿನ ಇತಿಹಾಸಕ್ಕೆ ಸಾಕ್ಷಿಯಾಗಿ ನಿಂತುಕೊಂಡಿದೆ. ಇದು ನಾಗತೀರ್ಥ ಎಂದು ಪ್ರಸಿದ್ಧಿಯಾಯಿತು. ಆ ನಾಗತೀರ್ಥವು,

**ಸರ್ವಕಾಮಪ್ರದಂ ಪುಣ್ಯಂ ರೋಗದಾರಿದ್ರ್ಯನಾಶನಮ್ ।**
**ಆಯುರ್ಲಕ್ಷ್ಮೀಕರಂ ಚೈವ ಸ್ನಾನದಾನಾಚ್ಚ ಮುಕ್ತಿದಮ್ ॥**

ಈ ತೀರ್ಥವು ಇಷ್ಟಾರ್ಥಗಳನ್ನೆಲ್ಲ ಪೂರ್ಣಮಾಡುವುದು. ಇದರಲ್ಲಿನ ಸ್ನಾನವು ಅತ್ಯಂತ ಪುಣ್ಯಕರ. ರೋಗಗಳಿಗೆ ಇದೊಂದು ರಾಮಬಾಣ ಔಷಧ, ದಾರಿದ್ರ್ಯ ದೂರ ವಾಗುವುದು. ಈ ಉಷ್ಣೋದಕಸ್ನಾನದಿಂದ ಆಯುಷ್ಯ ಅಭಿವೃದ್ಧಿ, ಐಶ್ವರ್ಯ, ಮುಕ್ತಿಗಳು ಲಭಿಸುವವು. ಈ ಗೌತಮೀ ಪ್ರವಾಹಪರಿಸರದಲ್ಲಿ ಶೇಷತೀರ್ಥ, ಶೇಷೇಶ್ವರತೀರ್ಥ, ಶೂಲೇಶ್ವರತೀರ್ಥ, ಅಗ್ನಿಕುಂಡತೀರ್ಥ, ರಸಾತಲ ಗಂಗಾಸಂಗಮ ತೀರ್ಥ, ಉಷ್ಣತೀರ್ಥ ಮುಂತಾದ ಒಂದುನೂರಾಇಪ್ಪತ್ತು ತೀರ್ಥಗಳು ಇದ್ದು ಅವೆಲ್ಲವೂ ಸಂಪತ್‌ಪ್ರದಾಯಕ ವಾಗಿರುತ್ತವೆ.

## ಮುಪ್ಪು ತಪ್ಪಿತು ತಾರುಣ್ಯ ಒಪ್ಪಿತು

**ಬ್ರಹ್ಮ:-** ಮಹಾನಲ ವಡವಾನಲ ಎಂಬ ಎರಡು ತೀರ್ಥಗಳ ಮಹಿಮೆಯನ್ನು ಹೇಳುತ್ತೇನೆ ಕೇಳು. ಮಹಾನಲತೀರ್ಥದ ತೀರದಲ್ಲಿ ಮಹಾನಲ ಎಂಬ ಹೆಸರಿನಿಂದೇ ಶಂಕರನು ಅಧಿಷ್ಠಿತನಾಗಿದ್ದಾನೆ. ವಡವಾನದಿಯೂ ಅಲ್ಲಿಯೇ ಹರಿಯುತ್ತಲಿದೆ. ಮುಪ್ಪು ಸಾವುಗಳ ಹೆದರಿಕೆಯನ್ನು ಹೋಗಲಾಡಿಸುವ ಆ ತೀರ್ಥದ ಮಾಹಾತ್ಮ್ಯೆ ಇಂತಿದೆ.

ಪೂರ್ವಕಾಲದಲ್ಲಿ ನೈಮಿಷಾರಣ್ಯದಲ್ಲಿ ಹಲವಾರು ಮಹಾಮುನಿಗಳು ಮಹತ್ತರವಾದ ಒಂದು ಯಾಗವನ್ನು ಕೈಗೊಂಡಿದ್ದರು. ಆ ಯಜ್ಞದಲ್ಲಿ ಬಲಿಪಶುವನ್ನು ಕೊಲ್ಲುವ ಕೆಲಸವನ್ನು ಮೃತ್ಯುವಿಗೇ ಒಪ್ಪಿಸಿದರು. ಯಾಗದ ಪಶುವನ್ನು ಕೊಲ್ಲುವವನಿಗೆ 'ಶಮಿತ್ರ' ಎಂದು ಕರೆಯುವರು. ಈ ಯಜ್ಞವು ಬಹುಕಾಲದವರೆಗೆ ನಡೆಯಿತು. ಮೃತ್ಯುವು ಸ್ವಯಂ ಶಾಮಿತ್ರನಾಗಿ ಅಲ್ಲಿ ಆ ಯಜ್ಞವು ಮುಕ್ತಾಯವಾಗುವವರೆಗೆ ನೆಲೆಸಿದ್ದನು. ಆಗ ಭೂಲೋಕದಲ್ಲಿ ಪ್ರಾಣಿಗಳ ಜೀವವನ್ನು ಸೆಳೆದೊಯ್ಯುವ ಮೃತ್ಯುವೇ ಇಲ್ಲದಂತಾಯ್ತು. ಆದರಿಂದ ಯಾರೂ ಮರಣವನ್ನೇ ಹೊಂದಲಿಲ್ಲ. ಭೂಲೋಕದಿಂದ ಸ್ವರ್ಗಕ್ಕೂ ನರಕಕ್ಕೂ ಯಾರೂ ಬಾರದೇ ಶೂನ್ಯವಾದವು ಎರಡೂ ಲೋಕಗಳು. ಭೂಲೋಕವೆಲ್ಲವೂ ಮರಣವಿಲ್ಲದೇ ಸ್ವಚ್ಛಂದದಿಂದ ಬದುಕಿ ಉಳಿದ ಮಾನವರಿಂದಲೂ ದಾನವರಿಂದಲೂ ತುಂಬಿಹೋಯಿತು. ಸಾವು ತಮ್ಮ ಸಮೀಪಕ್ಕೂ ಸುಳಿಯದು ಎಂದು ತಿಳಿದುಕೊಂಡ ದೈತ್ಯರು ದರ್ಪೋದ್ಧತರಾದರು.

ಇದು ದೇವತೆಗಳಿಗೆಲ್ಲ ದೊಡ್ಡ ಚಿಂತೆಗಿಟ್ಟುಕೊಂಡಿತು. ಆ ದೈತ್ಯರನ್ನು ದೇವತೆಗಳೂ ಯಮನೂ ಸ್ವತಃ ನೈಮಿಷಾರಣ್ಯಕ್ಕೇ ಕೊಟ್ಟುಕಳಿಸಿದರು. ಅಲ್ಲಿರುವ ಬ್ರಾಹ್ಮಣರನ್ನು

ಸಂಹರಿಸಿ ಆ ಯಜ್ಞವನ್ನು ನಾಶಮಾಡಿರಿ ಎಂದು ದೇವತೆಗಳು ದೈತ್ಯರಿಗೆ ಸಲಹೆ ಮಾಡಿದರು. ಹಾಗೆ ಮಾಡಿದರೆ ಯಜ್ಞದಲ್ಲಿ ನಿಮಗೂ ಅರ್ಧಭಾಗ ಕೊಡುತ್ತೇವೆ ಎಂದು ಆಮಿಷ ತೋರಿದರು. ಮೊದಲೇ ಬ್ರಹ್ಮದ್ವೇಷಿಗಳು ಆ ದಾನವರು. ದೇವತೆಗಳು ಇಷ್ಟು ಹೇಳಿದ ಬಳಿಕ ಕೇಳುವುದೇನು? ಅವರೆಲ್ಲರೂ ನೇರವಾಗಿ ಆ ನೈಮಿಷಾರಣ್ಯಕ್ಕೆ ಬಂದರು. ಆಗ ದೇವತೆಗಳು ಅಲ್ಲಿಯೇ ಶಾಮಿತ್ರನಾಗಿ ನಿಂತುಕೊಂಡ ಮೃತ್ಯುವಿನೊಡನೆ ವಿಚಾರ ಮಾಡಿದರು. ಅನಂತರ ಆ ಅಗ್ನಿಯನ್ನು ಮಾತ್ರ ತೆಗೆದುಕೊಂಡು ಅವರೆಲ್ಲರೂ ಗೌತಮೀ ನದೀತೀರಕ್ಕೆ ಬಂದರು. ಅಲ್ಲಿ ಎಲ್ಲರೂ ಸ್ನಾನಮಾಡಿ ಮಹಾದೇವನನ್ನು ಸ್ತೋತ್ರಮಾಡಿದರು. ದೇವತೆಗಳೂ ಮೃತ್ಯುವೂ ಬ್ರಹ್ಮದೇವನೂ ಮಹಾದೇವನನ್ನು ಭಕ್ತಿಯಿಂದಸ್ತೋತ್ರಮಾಡಿ-

''ನಮ್ಮ ಯಜ್ಞವನ್ನೂ ನಮ್ಮನ್ನೂ ರಕ್ಷಿಸು, ಈ ಯಾಗವು ಪೂರ್ತಿಯಾಗುವಂತೆ ಅನುಗ್ರಹಿಸು'' ಎಂದು ಬೇಡಿಕೊಂಡರು.

ಅವರ ಪ್ರಾರ್ಥನೆಯಂತೆ ಆ ಮುಕ್ಕಣ್ಣನು ಋಷಿಗಳ ಯಜ್ಞವು ಮೃತ್ಯುವಿನ ಸಹಕಾರ ದಿಂದ ಪೂರ್ಣವಾಗುವಂತೆ ಅನುಗ್ರಹಿಸಿದ. ಆ ಯಜ್ಞದಲ್ಲಿ ಹವಿಸ್ಸನ್ನು ತೆಗೆದುಕೊಳ್ಳಲು ದೇವತೆಗಳೆಲ್ಲರೂ ಆಗಮಿಸಿದರು. ಅವರನ್ನು ನೋಡಿ ಮುನಿಗಳಿಗೆ ಬ್ರಹ್ಮಾಂಡದಷ್ಟು ಕೋಪ ಬಂದಿತು. ಮೃತ್ಯುವು ಕೂಡ ಕೆರಳಿ ಕ್ರುದ್ಧನಾಗಿ ನಿಂತ. ಆಗ ಆ ಮುನಿಗಳು ಹಾಗೂ ಮೃತ್ಯುವು ಕೂಡಿ ದೇವತೆಗಳಿಗೆ ಶಾಪಕೊಟ್ಟರು.

''ನಮ್ಮ ಯಜ್ಞವನ್ನು ನಾಶಪಡಿಸಲು ದಾನವರನ್ನು ಪ್ರೇರಿಸಿದವರು ನೀವೇ ಅಲ್ಲವೇ! ನಾವು ದೇವರಾಜ್ಯದ ಸ್ವಾಮಿತ್ವವನ್ನು ಪಡೆಯಲಿಕ್ಕಾಗಿ ಯಜ್ಞವನ್ನು ಕೈಗೊಂಡಿರಲಿಲ್ಲ. ಇಂದ್ರಪದವಿಯ ಆಸೆಯೂ ನಮಗಿಲ್ಲ. ಯಾವ ಕಾರಣವೂ ಇಲ್ಲದೇ ನಮ್ಮ ಮೇಲೆ ಮಾತ್ಸರ್ಯ ತಾಳಿದಿರಿ. ಈ ದೈತ್ಯರನ್ನು ನಮ್ಮ ಮೇಲೆ ಛೂಬಿಟ್ಟಿರಿ. ಇನ್ನು ಮೇಲೆ ನಿಮಗೂ ಆ ದೈತ್ಯರಿಗೂ ನಿರಂತರ ದ್ವೇಷ ಏರ್ಪಡಲಿ. ದಾನವರು ದೇವತೆಗಳಿಗೆ ಯಾವಾಗಲೂ ಶತ್ರುಗಳಾಗಿಯೇ ಉಳಿಯಲಿ''

ಆ ದಿನದಿಂದ ರಾಕ್ಷಸರು ದೇವತೆಗಳಿಗೆ ಜನ್ಮವೈರಿಗಳಾದರು. ಅನಂತರ ದೇವತೆಗಳೂ ಋಷಿಗಳೂ ವಡವಾದೇವಿಯನ್ನು ಕರೆದು ಅವಳನ್ನು ಮೃತ್ಯುವಿಗೆ ಕೊಟ್ಟು ಮದುವೆ ಮಾಡಿದರು. ಆ ವಡವಾದೇವಿಯನ್ನು ಅಭಿಷೇಕಿಸಿದ ಜಲವು ವಡವಾನದಿ ಆಯಿತು. ಮೃತ್ಯುವು ಅಲ್ಲಿ ಸ್ಥಾಪಿಸಿದ ಶಿವಲಿಂಗವು ಮಹಾನಲೇಶ್ವರ ಎಂದು ಪ್ರಸಿದ್ಧಿಯನ್ನು ಪಡೆಯಿತು. ಆ ತೀರ್ಥವು ವಡವಾಸಂಗಮತೀರ್ಥವೆಂದು ವಿಶ್ವವಿಶ್ರುತವಾಯಿತು. ಈ ಎಲ್ಲ ತೀರ್ಥಗಳೂ ಮಾನವರ ಇಷ್ಟಾರ್ಥಗಳನ್ನು ಪೂರ್ಣಮಾಡುವವು. ಈ ತೀರ್ಥಗಳ ಸ್ಮರಣ ಮಾತ್ರದಿಂದ ಜನರ ಪಾಪಪ್ರಣಾಶ ಆಗುವದು.

## ಆತ್ಮತೀರ್ಥ ಮಹಿಮೆ

**ಬ್ರಹ್ಮ:-** ಅಲ್ಲಿ ಆತ್ಮತೀರ್ಥವೆಂಬ ಒಂದು ಪವಿತ್ರತೀರ್ಥ ಇರುವುದು. ಆ ತೀರ್ಥದ ತೀರದಲ್ಲಿ ಪಾರ್ವತೀಪತಿಯು ಜ್ಞಾನೇಶ್ವರ ಎಂಬ ಹೆಸರಿನಿಂದ ನೆಲೆಸಿದ್ದಾನೆ. ಅದರ ಕಾರಣವನ್ನು ಕೇಳು. ಪೂರ್ವಕಾಲದಲ್ಲಿ ಅತ್ರಿಮಹಾಮುನಿಗೆ ಮೂವರು ಮಕ್ಕಳಿದ್ದರು. ದತ್ತ, ದುರ್ವಾಸ, ಸೋಮ ಎಂದು. ಅದರಲ್ಲಿ ದತ್ತ ಮಹಾಜ್ಞಾನಿ ಶಂಕರನ ಆತ್ಯಂತಿಕ ಭಕ್ತ. ಅವನು ಒಂದು ದಿನ ತಂದೆಯ ಬಳಿಗೆ ಬಂದ. ಭಕ್ತಿಯಿಂದ ನಮಸ್ಕರಿಸಿದ ವಿನಯದಿಂದ ಕೇಳಿದ.

**ದತ್ತ ಉವಾಚ**

"ಬ್ರಹ್ಮಜ್ಞಾನಂ ಕಥಂ ಮೇ ಸ್ಯಾತ್ ಕಂ ಪೃಚ್ಛಾಮಿ ಕ್ವಯಾಮಿ ಚ।"

ತಂದೆಯೇ ನನಗೆ ಬ್ರಹ್ಮಜ್ಞಾನವು ಹೇಗೆ ಆಗುವುದು? ಯಾರನ್ನು ಕೇಳಲಿ? ಯಾರ ಬಳಿಗೆ ಹೋಗಲಿ?

**ಅತ್ರಿ ಉವಾಚ**

"ಗೌತಮೀಪುತ್ರ ಗಚ್ಛ ತ್ವಂ ತತ್ರಸ್ತುಹಿ ಮಹೇಶ್ವರಮ್।
ಸ ತು ಪ್ರೀತೋ ಯದ್ಯೆವ ಸ್ಯಾತ್ ತದಾ ಜ್ಞಾನಮವಾಪ್ಸ್ಯಸಿ॥"

ಮಗನೆ, ಗೌತಮೀನದಿಯ ತೀರಕ್ಕೆ ಹೋಗು. ಅಲ್ಲಿ ಮಹೇಶ್ವರನು ನೆಲೆ ನಿಂತಿದ್ದಾನೆ. ಅವನನ್ನು ಸ್ತೋತ್ರ ಮಾಡು. ಅವನು ನಿನ್ನ ಮೇಲೆ ಪ್ರೀತನಾದರೆ ಅವನಿಂದ ನೀನು ದಿವ್ಯಜ್ಞಾನವನ್ನು ಪಡೆಯುವೆ.

ಹಾಗೆಯೇ ಆಗಲಿ ಎಂದ ಆ ದತ್ತಪುತ್ರ. ಗೌತಮೀ ಎಂದು ಪ್ರಸಿದ್ಧಳಾದ ಗಂಗೆಯ ದಂಡೆಗೆ ಬಂದ. ಸ್ನಾನಮಾಡಿದ ಶುಚಿರ್ಭೂತನಾದ. ಕೈ ಜೋಡಿಸಿದ. ಭಕ್ತಿಯಿಂದ ಮಹಾದೇವನನ್ನು ಸ್ತೋತ್ರ ಮಾಡಿದ.

**ದತ್ತ:-**

"ಸಂಸಾರಕೂಪೇ ಪತಿತೋಽಸ್ಮಿ ದೈವಾತ್
ಮೋಹೇನ ಗುಪ್ತೋ ಭವದುಃಖಪಂಕೇ।
ಅಜ್ಞಾನನಾಮ್ನಾ ತಮಸಾಽವೃತೋಹಂ
ಪರಂ ನ ವಿಂದಾಮಿ ಸುರಾಧಿನಾಥ॥"

ಅಮರರಿಗೆಲ್ಲ ಅಧಿಪತಿಯಾದ ಮಹಾದೇವ, ನಾನು ಈ ಸಂಸಾರವೆಂಬ ಹಾಳು ಬಾವಿಯಲ್ಲಿ ಬಿದ್ದಿದ್ದೇನೆ. ನನ್ನ ದುರ್ದೈವದಿಂದ ಗಾಢವಾದ ಅಜ್ಞಾನವು ನನ್ನನ್ನು ಆವರಿಸಿದೆ. ಈ ಸಂಸಾರದ ದುಃಖದ ಕೆಸರಿನಲ್ಲಿ ಮುಳುಗಿದ ನಾನು ಪರತತ್ವವಾದ ಪರಮಾತ್ಮನನ್ನು ಹೊಂದಲು ಅಶಕ್ತನಾಗಿದ್ದೇನೆ. ನೀನು ನನ್ನ ಮೇಲೆ ಸುಪ್ರಸನ್ನನಾಗು.

"ಆತ್ಮಜ್ಞಾನಂ ಚ ಮುಕ್ತಿಂ ಚ ಭುಕ್ತಿಂ ಚ ವಿಪುಲಾಂ ತ್ವಯಿ।
ತೀರ್ಥಸ್ಯಾಪಿ ಚ ಮಾಹಾತ್ಮ್ಯಂ ವರೋಽಯಂ ತ್ರಿದಶಾಽರ್ಚಿತ॥

ದೇವಪೂಜಿತನಾದ ಮಹಾದೇವ ನನಗೆ ಮುಖ್ಯವಾಗಿ ಪರಾತ್ ಪರತತ್ವವಾದ ಪರಮಾತ್ಮನ ದಿವ್ಯಜ್ಞಾನವನ್ನು ದಯಪಾಲಿಸು. ಮುಕ್ತಿಯನ್ನು ಕರುಣಿಸು. ನಿನ್ನಲ್ಲಿ ನಿಶ್ಚಲವಾದ ಭಕ್ತಿಯು ನಿರಂತರವೂ ಉಂಟಾಗಲಿ ಎಂದು ಅನುಗ್ರಹಿಸು. ಈ ತೀರ್ಥವು ಪುಣ್ಯತಮವಾಗುವಂತೆ ಅನುಗ್ರಹ ನೀಡು, ಎಂದು ಬೇಡಿಕೊಂಡ.

ಆ ದತ್ತಾತ್ರೇಯನ ಪ್ರಾರ್ಥನೆಗೆ ತಥಾಸ್ತು ಎಂದು ನುಡಿದ ಶಂಕರ ಅವನಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿದ ಮತ್ತು ಅಲ್ಲಿ ಸ್ನಾನ ಮಾಡಿದವರಿಗೆ ಪರಮೇಶ್ವರನು ಆತ್ಮಜ್ಞಾನವನ್ನು ಕರುಣಿಸುವನು. ಆದುದರಿಂದ ಆ ತೀರ್ಥವು ಆತ್ಮತೀರ್ಥವು ಎಂದು ಹೆಸರಾಯಿತು. ಆತ್ಮ ಎಂದರೆ ಪರಮಾತ್ಮ ಪರಬ್ರಹ್ಮ ಅವನ ಜ್ಞಾನವನ್ನು ಇಲ್ಲಿ ಮಿಂದವರಿಗೆ ಶಿವನು ಕರುಣಿಸುವುದರಿಂದ ಇದರ ಹೆಸರು ಸಾರ್ಥಕ.

## ಅಶ್ವತ್ಥ ತೀರ್ಥ ಮಹಾತ್ಮ್ಯೆ

**ಬ್ರಹ್ಮ:-** ಆ ಗೌತಮೀತೀರದಲ್ಲಿ ಅಶ್ವತ್ಥತೀರ್ಥ ಎಂದು ಹೆಸರಾದ ಪಿಪ್ಪಲ ತೀರ್ಥವು ಇರುತ್ತದೆ. ಅದರ ಉತ್ತರ ದಿಕ್ಕಿನಲ್ಲಿ ಮಂದತೀರ್ಥ ಎಂಬ ಮತ್ತೊಂದು ತೀರ್ಥವಿದೆ. ಆ ಎರಡು ತೀರ್ಥಗಳ ಇತಿ ವೃತ್ತವನ್ನು ಹೇಳುತ್ತೇನೆ.

ಪೂರ್ವಕಾಲದಲ್ಲಿ ಅಗಸ್ತ್ಯ ಎಂಬ ಮಹಾತಪಸ್ವಿಗಳಾದ ಮುನಿಗಳಿದ್ದರು. ಪರಮಪೂಜನೀಯರಾದ ಅವರು ಉತ್ತರದಿಕ್ಕಿಗೆ ಒಡೆಯರಾಗಿದ್ದರು. ಆ ಕಾಲದಲ್ಲಿ ವಿಂಧ್ಯಪರ್ವತವು ದಿನದಿನಕ್ಕೂ ಬೆಳೆಯುತ್ತಲಿದ್ದಿತು. ಕ್ಷಣಕ್ಕೊಮ್ಮೆ ಮುಗಿಲಿನೆಡೆ ತನ್ನ ದೆಂಗಾಡನ್ನು ಚಾಚುತ್ತಲಿದ್ದಿತು. ಈ ಗಿರಿಯು ಇದೇ ರೀತಿ ಬಾನಿನೆಡೆಗೆ ಬೆಳೆಯುತ್ತ ನಡೆದರೆ ಸೂರ್ಯ-ಚಂದ್ರರ ಗತಿಯೇ ನಿರುದ್ಧವಾಗುವುದು ಎಂದು ಸುರರಿಗೆಲ್ಲ ಹೆದರಿಕೆಯಾಯ್ತು. ಆಗ ಅವರೆಲ್ಲ ಬಂದು ಅಗಸ್ತ್ಯಮುನಿಗೆ ಕೈ ಮುಗಿದು ಕೇಳಿಕೊಂಡರು.

"ಈ ವಿಂಧ್ಯಾದ್ರಿಯ ಸ್ವಚ್ಛಂದವೃದ್ಧಿಯನ್ನು ತಡೆಯಿರಿ" ಎಂದು ದೇವತೆಗಳ ಪ್ರಾರ್ಥನೆಯಂತೆ ಅಗಸ್ತ್ಯಮುನಿಯು ಆ ವಿಂಧ್ಯ ಶೈಲದೆಡೆಗೆ ಹೊರಟರು. ತನ್ನ ಸಾವಿರಾರು ಜನ ಮುನಿವೃಂದದೊಡನೆ ಆ ವಿಂಧ್ಯಗಿರಿಯು "ಮೇರುಪರ್ವತಕ್ಕಿಂತ ಎತ್ತರವಾಗಿ ಬೆಳೆಯಬೇಕು. ಸೂರ್ಯನ ಮಾರ್ಗವನ್ನು ಪ್ರತಿಬಂಧಿಸಬೇಕು." ಎಂದು ಪಣ ತೊಟ್ಟಿತ್ತು. ಅದರಂತೆ ಅದರ ನೂರಾರು ಶಿಖರಗಳು ಉನ್ನತೋನ್ನತವಾಗಿ ಬಾನುದ್ದ ಬೆಳೆಯುತ್ತಲೇ ನಡೆದಿದ್ದವು. ಇಂಥ ವೇಳೆಯಲ್ಲಿ ಲೋಪಾಮುದ್ರೆಯ ಪತಿಯಾದ ಅಗಸ್ತ್ಯಮುನಿಯು ಆ ಬೆಟ್ಟದ ಬಳಿಗೆ ಬಂದರು. ಆ ವಿಂಧ್ಯಶೈಲವು ಆ ಮಹಾಮಹರ್ಷಿಗಳನ್ನು ಅತ್ಯಾದರದಿಂದ ಸತ್ಕರಿಸಿತು. ಆ ಮಹಾರಣ್ಯದ ಅತಿಥಿ ಸತ್ಕಾರವನ್ನು ಹೊಗಳಿ ಅಗಸ್ತ್ಯಮುನಿಗಳು ಹೀಗೆ ನುಡಿದರು. ದೇವತಾಕಾರ್ಯವನ್ನುಸಾಧಿಸುವುದೇ ಅವರ ಮುಖ್ಯ ಉದ್ದೇಶ ಆಗಿತ್ತು.

**ಅಗಸ್ತ್ಯ:-** ಶೈಲಶ್ರೇಷ್ಠ, ನಾನು ಈಗ ದಕ್ಷಿಣದಿಕ್ಕಿಗೆ ತೀರ್ಥಯಾತ್ರೆಗೆ ಹೊರಟಿದ್ದೇನೆ. ನನ್ನನ್ನು ಹಿಂಬಾಲಿಸಿ ಹಲವಾರು ಹಿರಿ ಕಿರಿಯ ಮುನಿಗಳು ಬರುತ್ತಲಿದ್ದಾರೆ. ಇವರೆಲ್ಲ ಮಹಾತತ್ವಜ್ಞಾನಿಗಳು. ನಮ್ಮೆಲ್ಲರಿಗೆ ನೀನು ದಾರಿಬಿಡು ನಿನ್ನ ದೇಹವನ್ನು ತುಸುತಗ್ಗಿಸು. ನಿನ್ನ ಶೈಲಶೃಂಗಗಳನ್ನೆಲ್ಲ ದಾಟಿ ನಾವು ದಕ್ಷಿಣಕ್ಕೆ ಹೋಗುವೆವು. ನಾವು ನಮ್ಮ ಯಾತ್ರೆ ಮುಗಿಸಿ ಮರಳಿಬರುವವರೆಗೆ ನೀನು ಹೀಗೆಯೇ ಬಾನಿನಡೆ ಬೆಳೆಯದೇ ಶೈಲಶೃಂಗಗಳನ್ನು ಮೇಲಕ್ಕೆ ಚಾಚದೇ ಸಂಕುಚಿತ ಶರೀರನಾಗಿ ಮಲಗಿಕೋ ಇದಕ್ಕೆ ನೀನು ತಪ್ಪತಕ್ಕದ್ದಲ್ಲ.

ಹಾಗೆಯೇ ಆಗಲಿ ಎಂದು ಮುನಿಯ ಆದೇಶಕ್ಕೆ ತಲೆಬಾಗಿತು ಆ ವಿಂಧ್ಯ ಶೈಲ. ವಿಕಾಸೋನ್ಮುಖವಾದ ತನ್ನ ಶಿಖರಗಳನ್ನೆಲ್ಲ ತಗ್ಗಿಸಿ. ಯಾವ ತನ್ನ ಶೃಂಗಾಂಗಗಳನ್ನೂ ಬೆಳೆಯ ಗೊಡದಂತೆ ಅದುಮಿಹಿಡಿದು ಮುನಿಮಂಡಲಕ್ಕೆಲ್ಲ ದಾಟಿಹೋಗಲು ದಾರಿ ಮಾಡಿಕೊಟ್ಟಿತು. ಆ ವಿಂಧ್ಯಾದ್ರಿಯನ್ನು ಎಲ್ಲ ಋಷಿಪುಂಗವರೊಂದಿಗೆ ಆನಂದದಿಂದ ದಾಟಿ ಅಗಸ್ತ್ಯಮುನಿಗಳು ದಕ್ಷಿಣದಿಕ್ಕಿಗೆ ಪ್ರಯಾಣ ಬೆಳೆಸಿದರು. ಅವರೆಲ್ಲರೂ ಗೌತಮೀ ಎಂದು ಹೆಸರಾದ ಗೋದಾವರೀನದಿಗೆ ಬಂದರು. ಅಲ್ಲಿ ಒಂದು ವರುಷದವರೆಗೆ ಸತ್ರಯಾಗವನ್ನು ಕೈಗೊಂಡರು.

ಆ ಕಾಲದಲ್ಲಿ ದಕ್ಷಿಣದಿಕ್ಕಿನಲ್ಲಿ ಅಶ್ವತ್ಥ ಪಿಪ್ಪಲ ಎಂಬ ಇಬ್ಬರು ರಾಕ್ಷಸರು ಬಹಳ ಪ್ರಬಲರಾಗಿದ್ದರು. ಅವರಿಬ್ಬರೂ ಆದಿದೈತ್ಯನಾದ ಕೈಟಭಾಸುರನ ಮಕ್ಕಳು. ಮಹಾ

ಧರ್ಮದ್ರೋಹಿಗಳು. ಅವರ ದುಷ್ಕೀರ್ತಿ ದೇವಲೋಕದವರೆಗೂ ಹರಡಿದ್ದಿತು. ಆ ದುರುಳ ರಾಕ್ಷಸರು ಬೇಕೆಂದಾಗ ಬಗೆಬಗೆಯ ರೂಪಗಳನ್ನು ಧರಿಸಬಲ್ಲವರಾಗಿದ್ದರು. ಆ ಇಬ್ಬರೂ ಕಪಟಿಗಳು. ಹಾಗೆಂದು ಅಶ್ವತ್ಥಾಸುರನು ಯಾವಾಗಲೂ ಅಶ್ವತ್ಥಮರದ ರೂಪದಿಂದ ಇರುತ್ತಿದ್ದ. ಪಿಪ್ಪಲಾಸುರ ಬ್ರಾಹ್ಮಣ ರೂಪದಿಂದ, ಅಂತೂ ಇಬ್ಬರ ಉದ್ದೇಶವೂ ಒಂದೇ, ಯಜ್ಞಧ್ವಂಸ. ಯಜ್ಞ ವಿನಾಶಕ್ಕಾಗಿ ಅವರು ಜಪ್ಪಿಸಿ ಕುಳಿತುಕೊಂಡಿದ್ದರು. ಯಜ್ಞಧ್ವಂಸಕ್ಕಾಗಿ ಸಮಯ ಕಾಯುತ್ತಿದ್ದ ಇಬ್ಬರೂ ಅಸುರರು ಬ್ರಾಹ್ಮಣರನ್ನು ಹಿಂಸಿಸದೇ ಒಂದು ದಿನವೂ ಇರುತ್ತಿರಲಿಲ್ಲ. ಬ್ರಹ್ಮಹತ್ಯೆಯು ಅವರ ನಿತ್ಯಚರ್ಯೆ. ಆಲದಮರದ ರೂಪದಿಂದ ಇದ್ದ ಅಶ್ವತ್ಥಾಸುರನು ನೆರಳನ್ನು ಆಶಿಸಿ ಆ ಮರದಡಿ ಬಂದವರನ್ನೆಲ್ಲ ಕೊಂದು ತಿಂದುಹಾಕುತ್ತಿದ್ದ. ಬ್ರಾಹ್ಮಣ ವೇಷದಿಂದಿದ್ದ ಪಿಪ್ಪಲಾಸುರನು ಸಾಮವೇದ ವಿದ್ವಾಂಸನಂತೆ ವಿಪ್ರವೇಷ ಧರಿಸಿದ್ದನು. ಅವನ ಬಳಿಗೆ ಅಧ್ಯಯನಕ್ಕಾಗಿ ಬಂದ ಶಿಷ್ಯರನ್ನೆಲ್ಲ ಹೊಡೆದು, ಬಡೆದು, ತಿಂದುಹಾಕುತ್ತಿದ್ದನು. ಅದರ ನೆನಪಿನ ಅವಶೇಷಕ್ಕಾಗಿಯೋ ಏನೋ ಸಾಮವೇದಿಗಳು ಇಂದಿಗೂ ನಿಷ್ಕರುಣಿಗಳಾಗಿದ್ದಾರೆ.

## ಶನೀಶ್ವರನಿಗೆ ಮುನೀಶ್ವರರ ಬಿನ್ನಹ

ಈ ದುಷ್ಟದೈತ್ಯರಿಬ್ಬರೂ ಕೈಕೊಂಡ ಬ್ರಾಹ್ಮಣಘಾತ ಕಾರ್ಯಕ್ರಮವು ಕೆಲವೇ ದಿನಗಳಲ್ಲಿ ಮಹಾಜ್ಞಾನಿಗಳಾದ ಮುನಿಮಹರ್ಷಿಗಳಿಗೆ ತಿಳಿದುಹೋಯಿತು. ಒಂದು ಕಾಡುಮರದ ರೂಪದಿಂದ ಅಶ್ವತ್ಥಾಸುರನೂ, ಸಾಮವೇದಿ ವಿದ್ವಾಂಸನ ರೂಪದಿಂದ ಪಿಪ್ಪಲಾಸುರನೂ ಜನರನ್ನು ವಂಚಿಸಿ ಮುಗ್ಧಮಾನವರ ಮಾರಣ ಹೋಮವನ್ನು ಮಾಡುವುದನ್ನು ಕಂಡು ಅವರಿಗೆ ಬಹಳ ದುಃಖವಾಯಿತು. ಗೌತಮೀನದಿಯ ದಕ್ಷಿಣತೀರದಲ್ಲಿ ಮಂದ ಎಂಬ ಓರ್ವ ಮುನಿಯು ತಪಸ್ಸನ್ನು ಮಾಡುತ್ತಲಿದ್ದ. ಅವನು ಸಾಕ್ಷಾತ್ ಸೂರ್ಯನ ಮಗನೇ; ಶನೀಶ್ವರ ಎಂದೂ ಅವನಿಗೆ ಹೆಸರು ಇದ್ದಿತು.

ಮುನಿಮಹರ್ಷಿಗಳೆಲ್ಲರೂ ಆ ಮಂದಮುನಿಯ ಮುಂದೆ ಅಶ್ವತ್ಥ ಪಿಪ್ಪಲರ ದಾರುಣ ಕೃತ್ಯವನ್ನು ನಿವೇದಿಸಿದರು. ''ಹೇಗಾದರೂ ಮಾಡಿ ಈ ಬ್ರಹ್ಮಹತ್ಯೆ ತಪ್ಪಿಸು'' ಎಂದು ಕೇಳಿಕೊಂಡರು.

**ಮಂದಮುನಿ:-** ಬ್ರಾಹ್ಮಣೋತ್ತಮರೆ, ನನ್ನ ತಪೋನುಷ್ಠಾನವು ಇನ್ನೂ ಪೂರ್ಣವಾಗಿಲ್ಲ. ನನ್ನ ತಪಸ್ಸಾಮರ್ಥ್ಯವು ಪೂರ್ಣತೆಯನ್ನು ಪಡೆಯದೇ ನಾನು ಹೇಗೆ ಆ ರಾಕ್ಷಸರನ್ನು ಸಂಹರಿಸಲಿ? ನನ್ನ ಈ ತಪಶ್ಚರ್ಯೆಯು ಪರಿಪೂರ್ಣವಾದ ಬಳಿಕ ಆ ದೈತ್ಯರನ್ನು ನಾನು ಸಂಹರಿಸುವೆನು.

**ಮುನಿಗಳು:-** ''ಸೂರ್ಯಪುತ್ರ, ಈಗಾಗಲೇ ಈ ದುಷ್ಟಭ್ರಷ್ಟರು ಬ್ರಾಹ್ಮಣ ಸಂಹಾರವನ್ನು ಅವಿಚ್ಛಿನ್ನವಾಗಿ ನಡೆಯಿಸಿದ್ದಾರೆ. ಅವರನ್ನು ಹೀಗೆಯೇ ಬಿಟ್ಟರೆ ಎಷ್ಟು ಜನ ಮುಗ್ಧ ಭೂಸುರರು ಅವರಿಗೆ ಬಲಿಯಾಗುವರೋ ಏನೋ! ಅದಕ್ಕಾಗಿ ನಾವು ನಿನ್ನ ಬಳಿಗೆ ಬಂದಿದ್ದೇವೆ. ನಿನ್ನ ತಪೋನುಷ್ಠಾನ ಪೂರ್ಣವಾಗುವವರೆಗೆ ಮತ್ತೆ ಎಷ್ಟೋ ಜನ ಬ್ರಾಹ್ಮಣರ ಸಂಹಾರ ಆಗಬಹುದು. ಅದಕ್ಕಾಗಿ ನಾವೆಲ್ಲರೂ ನಿನಗೆ ಈಗಲೇ ನಮ್ಮ ತಪಃಶಕ್ತಿಯನ್ನು ಧಾರೆಯೆರೆದು ನೀಡುತ್ತೇವೆ. ನಮ್ಮ ಹಾಗೂ ನಿನ್ನ ತಪೋಬಲದಿಂದ ನೀನು ದರ್ಪಿಷ್ಠರಾದ ಆ ದುಷ್ಟದುರುಳ ದೈತ್ಯದ್ವಯರನ್ನು ಈಗಲೇ ಧ್ವಂಸಮಾಡು.''

ಈ ರೀತಿಯಾಗಿ ಮುನಿಮನೀಷಿಗಳು ಮಾಡಿಕೊಂಡ ದೀನ ಪ್ರಾರ್ಥನೆಯನ್ನು ಮನ್ನಿಸಿ ಆ ಶನೈಶ್ಚರ ವಿಪ್ರವೇಷವನ್ನು ಧರಿಸಿದನು. ಆಲದಮರದ ರೂಪದಿಂದ ಬೀಗಿ ಬೆಳೆದು ನಿಂತ ಆ ವೃಕ್ಷಾಸುರನ ಬಳಿಗೆ ಹೋದನು. ಅಶ್ವತ್ಥ ವೃಕ್ಷಾಕಾರದ ಆ ಅಶ್ವತ್ಥಾಸುರನಿಗೆ ಪ್ರದಕ್ಷಿಣೆಯನ್ನು ಮಾಡತೊಡಗಿದನು.

## ಶನಿದೃಷ್ಟಿಯಿಂದ ದುಷ್ಟಸಂಹಾರ

ಬುದ್ಧಿಗೇಡಿಯಾದ ಆ ಅಶ್ವತ್ಥಾಸುರನಿಗೆ ಗೊತ್ತಿಲ್ಲ ಇವನು ಯಾರು ಎನ್ನುವುದು. ಅವನೊಬ್ಬ ಸಾಮಾನ್ಯ ಬ್ರಾಹ್ಮಣನೆಂದೇ ತಿಳಿದ ಆ ಅಸುರ ಅವನು ತನ್ನ ನಿತ್ಯ ಪದ್ಧತಿಯಂತೆ ತನ್ನ ಪ್ರದಕ್ಷಿಣೆ ಹಾಕುವ ಆ ಶನೈಶ್ಚರನನ್ನು ಸಾಮಾನ್ಯ ಬ್ರಾಹ್ಮಣ ಎಂದು ಭಕ್ಷಿಸಿಬಿಟ್ಟ. ಶನೈಶ್ಚರ ಆ ದೈತ್ಯನ ದೇಹದಲ್ಲಿ ಪ್ರವೇಶ ಮಾಡಿದ. ಒಳಗೆ ಹೋಗಿ ತನ್ನ ಶನಿದೃಷ್ಟಿಯನ್ನು ಬೀರಿ ಅವನ ದೇಹದ ಒಳಗಿನ ಭಾಗಗಳನ್ನೆಲ್ಲ ಕೆಕ್ಕರಿಸಿ ನೋಡಿದ. ಶನೈಶ್ಚರನ ತೀಕ್ಷ್ಣವಾದ ದೃಷ್ಟಿ ಪ್ರಹಾರದಿಂದ ಆ ದೈತ್ಯನ ದೇಹದೊಳಗಿನ ಕರುಳು ಅಸ್ಥಿ, ಮಾಂಸ, ಮಜ್ಜೆ ಎಲ್ಲವೂ ಹುರುಪಳಿಸಿ ಹೋದವು. ವಜ್ರಾಯುಧದಿಂದ ಪ್ರಹಾರ ಮಾಡಿದಂತೆ ಧರೆಗುರುಳಿದ ಆ ದುರ್ದಾನವ ಕ್ಷಣಾರ್ಧದಲ್ಲಿ ಆ ಅಶ್ವತ್ಥನನ್ನು ಭಸ್ಮಮಾಡಿದ ಸೂರ್ಯಪುತ್ರ. ಹೀಗೆ ಒಬ್ಬ ದೈತ್ಯನನ್ನು ಮಣ್ಣುಮುಕ್ಕಿಸಿ, ಆ ಮಂದ ಮುನಿಯು ಮೆಲ್ಲಮೆಲ್ಲನೇ ಪಿಪ್ಪಲಾಸುರನ ಬಳಿಗೆ ಬಂದ. ಸಾಮವೇದ ವಿದ್ವಾಂಸನಂತೆ ಆಢ್ಯತೆಯಿಂದ ಕುಳಿತಿದ್ದ ಪಿಪ್ಪಲಾಸುರ, ವೇದಾಧ್ಯಯನ ಮಾಡುವ ವಟುವಿನಂತೆ ನಟನೆ ಮಾಡುತ್ತ ಶನೈಶ್ಚರನು ಅಲ್ಲಿಗೆ ಬಂದ.

ಆ ಕಪಟಮುನಿಯು ಎಂದಿನಂತೆ ವಟುರೂಪಧಾರಿಯಾದ ಶನೈಶ್ಚರನನ್ನು ಭಕ್ಷಿಸಿಬಿಟ್ಟ. ದುಷ್ಟನ ಹೊಟ್ಟೆಯಲ್ಲಿ ಸೇರಿದ ಶನಿಯು ಮೊದಲಿನಂತೆ ಆ ಪಾಪಿಯ ಒಳ ಅವಯವ ಗಳನ್ನೆಲ್ಲ ತೀಕ್ಷ್ಣ ದೃಷ್ಟಿಯಿಂದ ನೋಡಿದ, ಶನಿದೃಷ್ಟಿ ತಾಕಿದ ಕೂಡಲೇ ದೈತ್ಯನ ದೇಹದೊಳಗಿನ ಕರುಳುಗಳೆಲ್ಲ ಹುರುಪಳಿಸಿ ಹೋದವು. ರಕ್ತ ಹೆಪ್ಪುಗಟ್ಟಿತು. ಇಡೀ ದೇಹವೆಲ್ಲವೂ ಕ್ಷಣಾರ್ಧದಲ್ಲಿ ಭಸ್ಮೀಭೂತವಾಯಿತು.

ಹೀಗೆ ಕೆಲವೇ ಸಮಯದಲ್ಲಿ ಶನೈಶ್ಚರನು ಇಬ್ಬರೂ ವ್ರಾತ್ಯರಾದ ದೈತ್ಯರನ್ನು ನಿರ್ನಾಮ ಮಾಡಿದ್ದನ್ನು ನೋಡಿ ಮುನಿಮಹರ್ಷಿಗಳೆಲ್ಲರಿಗೂ ಸಂತೋಷವಾಯ್ತು. ಅವರೆಲ್ಲರೂ ಸುಪ್ರಸನ್ನರಾದರು ಶನೈಶ್ವರನಿಗೆ "ಬೇಕಾದ ವರಗಳನ್ನು ಬೇಡಿಕೋ" ಎಂದು ಕೇಳಿದರು.

**ಶನೈಶ್ಚರ:-** ನನ್ನ ಶನಿವಾರದಲ್ಲಿ ಅಶ್ವತ್ಥಪ್ರದಕ್ಷಿಣೆ ಮಾಡುವವರ ಮನೋರಥ ಗಳೆಲ್ಲವೂ ಪೂರ್ಣವಾಗಲಿ. ಈ ಅಶ್ವತ್ಥತೀರ್ಥದಲ್ಲಿ ಸ್ನಾನಮಾಡುವವರ ಅಭೀಷ್ಟ- ಸಿದ್ಧಿಯಾಗಲಿ, ಶನಿವಾರ ತೀರ್ಥಸ್ನಾನ, ಅಶ್ವತ್ಥ ಪ್ರದಕ್ಷಿಣ ಮಾಡುವವರಿಗೆ ಶನಿಪೀಡೆ ಅಥವಾ ಯಾವುದೇ ಗ್ರಹಪೀಡೆ ಆಗದಿರಲಿ.

ಎಲ್ಲ ಮುನಿಗಳೂ "ತಥಾಸ್ತು" ಎಂದು ಶನೈಶ್ಚರನಿಗೆ ವರಗಳನ್ನು ನೀಡಿದರು. ಅಂದಿನಿಂದ ಆ ಒಂದು ತೀರ್ಥವು ಅಶ್ವತ್ಥ ತೀರ್ಥವೆಂದೂ ಮತ್ತೊಂದು ಪಿಪ್ಪಲತೀರ್ಥ ವೆಂದೂ ಪ್ರಸಿದ್ಧವಾದವು. ಅವಲ್ಲದೇ ಗೌತಮೀ ತೀರದಲ್ಲಿ ಶನೈಶ್ಚರತೀರ್ಥ; ಅಗಸ್ತ್ಯತೀರ್ಥ, ಯಾಜ್ಞಿಕತೀರ್ಥ, ಸಾಮಗತೀರ್ಥ ಎಂದು ಮುಂತಾದ ಹದಿನಾರು ಸಾವಿರದಾ ಎಂಟು ತೀರ್ಥಗಳು ಇರುತ್ತವೆ. ಆ ತೀರ್ಥಗಳಲ್ಲಿ ಸ್ನಾನದಾನ ಮಾಡಿದವರಿಗೆ ಸತ್ರಯಾಗದ ಫಲ ದೊರೆಯುವುದು.

## ಸೋಮತೀರ್ಥದ ಮಹಿಮೆ

**ಬ್ರಹ್ಮ**:- ಗೌತಮೀ ಎಂದ ಪ್ರಸಿದ್ಧವಾದ ಈ ಗೋದಾವರೀ ತೀರದಲ್ಲಿ ಸೋಮ ತೀರ್ಥವು ಅತ್ಯಂತ ಸುಪ್ರಸಿದ್ಧವಾದ ಒಂದು ಪವಿತ್ರ ತೀರ್ಥ. ಆ ತೀರ್ಥದಲ್ಲಿ ಮಿಂದು ದಾನ ಧರ್ಮ ಮಾಡಿದರೆ ಸೋಮಯಾಗ ಹಾಗೂ ಸೋಮಪಾನ ಮಾಡಿದ ಪುಣ್ಯವು ಲಭಿಸುವದು. ಔಷಧಿ ವನಸ್ಪತಿಗಳು ಜಗನ್ಮಾತೆಯರು, ಪೂರ್ವಕಾಲದಲ್ಲಿ ಮನುಷ್ಯರಂತೆಯೇ ಅವುಗಳು ಕೂಡ ಜೀವಂತ ಪ್ರಾಣಿಗಳೇ ಆಗಿದ್ದವು. ವಾಸ್ತಿಕವಾಗಿ ವಿಚಾರಿಸಿದರೆ ಈ ಔಷಧಿಗಳು ನನಗಿಂತಲೂ ಪುರಾತನವಾದವುಗಳು. ಧರ್ಮವು ನೆಲೆಸಿರುವುದು ಔಷಧಿಲತೆಗಳಲ್ಲಿಯೇ, ವೇದಾಧ್ಯನಯ ಹಾಗೂ ಯಜ್ಞಯಾಗಗಳು ಔಷಧಿಗಳ ಸಹಾಯದಿಂದಲೇ ನಡೆಯುವವು, ಹೆಚ್ಚಿಗೆ ಏನು? ಈ ಜಗತ್ತೆಲವೂ ನಿಂತಿರುವುದು, ಬಾಳಿರುವುದು, ಬದುಕಿರುವದು ಔಷಧಿ ವನಸ್ಪತಿಗಳಿಂದಲೇ. ಔಷಧಿಲತೆಗಳಲ್ಲಿ ರೋಗಗಳನ್ನು ಹೋಗಲಾಡಿಸುವ ಮಹಾಗುಣವಿದೆ. ಪ್ರಾಣಿಗಳು ಬದುಕಲು ಅತ್ಯಾವಶ್ಯಕವಾದ ಆಹಾರವೆಲ್ಲವೂ ಔಷಧಿಗಳಿಂದಲೇ ಲಭ್ಯ. ''ಔಷಧೀಭ್ಯಃ ಅನ್ನಂ'' ಎಂಬ ಶ್ರುತಿಯು ಔಷಧಿಗಳಿಗೆ ಮುಖ್ಯ ಅನ್ನ ಪ್ರದತ್ವವನ್ನು ಸಾರುತ್ತಿದೆ.

ಹಿಂದೆ ಒಂದು ಸಲ ಔಷಧಿಗಳು ನನ್ನಲ್ಲಿ ಬಂದು ವಂದಿಸಿ ಕೇಳಿಕೊಂಡವು ''ಬ್ರಹ್ಮದೇವ, ನಮಗೆ ಪತಿಯಾಗಿ ಇರುವಂತೆ ಒಬ್ಬ ರಾಜನನ್ನು ಕರುಣಿಸು''.

**ಬ್ರಹ್ಮ**:- ನಿಮಗೆ ಯೋಗ್ಯನಾದ ಓರ್ವ ರಾಜನನ್ನು ಪತಿಯಾಗಿ ಪಡೆಯುವಿರಿ ನೀವೆಲ್ಲರೂ ಗೌತಮೀ ಎಂದು ಪ್ರಸಿದ್ಧವಾದ ಗೋದಾವರಿ ತೀರಕ್ಕೆ ಹೋಗಿರಿ. ಅಲ್ಲಿ ಆ ಗೌತಮಿಯನ್ನು ಸ್ತುತಿಸಿ ಸಂತೋಷಪಡಿಸಿರಿ. ನನ್ನ ಆದೇಶದಂತೆ ಆ ಎಲ್ಲ ಔಷಧಿಗಳು ಗೌತಮೀನದಿಗೆ ಹೋಗಿ ಭಕ್ತಿಯಿಂದ ಅವಳ ಪ್ರಾರ್ಥನೆಯನ್ನು ಮಾಡಿದವು.

**ನಮೋಽಸ್ತು ತೇ ಮಾತರಭೀಷ್ಟದಾಯಿನಿ**
**ನಮೋಽಸ್ತು ತೇ ಬ್ರಹ್ಮಮಯೇಽಘನಾಶಿನಿ ।**
**ನಮೋಽಸ್ತು ತೇ ವಿಷ್ಣುಪಾದಾಬ್ಜ ನಿಃಸೃತೇ**
**ನಮೋಽಸ್ತು ತೇ ಶಂಭುಜಟಾವಿನಿಸ್ಸೃತೇ ॥**

ಜನರ ಅಭೀಷ್ಟಗಳನ್ನೆಲ್ಲ ಪೂರೈಸುವ ಗಂಗಾಮಾತೆಯೇ, ನಿನಗೆ ನಮಸ್ಕಾರ. ಎಲ್ಲರ ಪಾಪಗಳನ್ನು ಪರಿಹರಿಸುವ ಬ್ರಹ್ಮಗತಿಯನ್ನು ನೀಡುವ ಮಹಾತಾಯಿಯೇ, ನಿನಗೆ ನನ್ನ ನಮಸ್ಕಾರವಿರಲಿ. ವಿಷ್ಣುವಿನ ಪಾದದಿಂದ ಹೊರಟು, ಶಂಕರನ ಜಟಾ ಜೂಟದಿಂದ ಹೊರಬಿದ್ದು, ಹರಿದು ಬಂದ ಮಹಾನದಿಗೆ ನನ್ನ ನಮಸ್ಕಾರ.'' ಹೀಗೆ ಔಷಧಿ ವನಸ್ಪತಿಗಳು ಸ್ತೋತ್ರಮಾಡಲು ಗೌತಮೀನದಿಯು ಅವರಿಗೆ ಪ್ರಸನ್ನಳಾದಳು. ನಿಮಗೆ ಏನು ವರವನ್ನು ಕೊಡಲಿ? ಎಂದು ಕೇಳಿದಳು. ಅದಕ್ಕೆ ಔಷಧಿಗಳು ''ಜಗದಂಬೆಯಾದ ಗಂಗಾರೂಪಿಣಿ ಯಾದ ಗೋದಾವರಿಯೆ, ನಮ್ಮ ಮೇಲೆ ಪ್ರಸನ್ನಳಾಗಿದ್ದರೆ ಅತ್ಯಂತ ತೇಜಸ್ವಿಯಾದ ಒಬ್ಬ ರಾಜನು ನಮಗೆ ಪತಿಯಾಗುವಂತೆ ಅನುಗ್ರಹಿಸು'' ಎಂದು ಕೇಳಿಕೊಂಡರು.

ಆಗ ಆ ಗೌತಮಿಯು ''ಔಷಧಿಲತೆಗಳೆ, ನಾನು ಅಮೃತಸ್ವರೂಪಿಣಿ ಆಗಿದ್ದೇನೆ. ಜಗನ್ಮಾತೆಯರಾದ ನೀವೂ ಸಹ ಅಮೃತರೂಪರೇ ಆಗಿರುವಿರಿ. ಆದುದರಿಂದ ನಿಮಗೆ

ಅನುರೂಪನಾದ ವರನು ಕೂಡ ಅಮೃತಮಯನೇ ಆಗಬೇಕು. ಈ ಜಗತ್ತಿನಲ್ಲಿ ಅಮೃತಮಯನಾದ ತೇಜಸ್ಸಂಪನ್ನ ರಾಜನೆಂದರೆ ಚಂದ್ರನೊಬ್ಬನೇ. ಅದಕ್ಕಾಗಿ ಅವನನ್ನೇ ನಿಮಗೆ ಪತಿಯನ್ನಾಗಿ ಕರುಣಿಸುವೆನು'' ಎಂದು ಹೇಳಿದಳು. ಇದರಿಂದ ಔಷಧಿಗಳಿಗೆಲ್ಲ ಬಹಳ ಆನಂದವಾಯ್ತು. ತೃಪ್ತಿಯಿಂದ ಗೌತಮಿಯನ್ನು ವಂದಿಸಿ ತಮ್ಮ ತಮ್ಮ ಸ್ಥಾನಗಳಿಗೆ ಅವು ತೆರಳಿದವು. ಔಷಧಿಗಳು ಚಂದ್ರನನ್ನು ಪತಿಯನ್ನಾಗಿ ಪಡೆದ ಸ್ಥಳವು ಸೋಮತೀರ್ಥ ಎಂದು ಪ್ರಸಿದ್ಧವಾಗಿದೆ. ಇಲ್ಲಿ ಸ್ನಾನ-ದಾನ ಮಾಡಿದವನ ಪಿತೃಗಳು ಸ್ವರ್ಗಾರೋಹಣ ಮಾಡುತ್ತಾರೆ. ಮತ್ತು ಈ ತೀರ್ಥದ ಜಲದಲ್ಲಿ ಮಿಂದು ಆ ಉದಕವನ್ನು ಆಚಮನ ಮಾಡಿದವನು ಸೋಮಪಾನ ಮಾಡಿದ ಪುಣ್ಯಫಲವನ್ನು ಪಡೆಯುವನು.

## ಧ್ಯಾನತೀರ್ಥ ಮಹಾತ್ಮೆ

**ಬ್ರಹ್ಮ**:- ಈ ಗೌತಮೀ ತೀರದಲ್ಲಿ ಧ್ಯಾನತೀರ್ಥವೆಂಬ ಪ್ರಸಿದ್ಧವಾದ ತೀರ್ಥವಿದೆ. ಔಷಧಿ ವನಸ್ಪತಿಗಳು ಚಂದ್ರನನ್ನು ಪತಿಯನ್ನಾಗಿ ಪಡೆದ ಬಳಿಕ ಆ ಚಂದ್ರನಲ್ಲಿ ಒಂದು ಪ್ರಾರ್ಥನೆಯನ್ನು ಮಾಡಿಕೊಂಡವು. ''ಪ್ರಿಯತಮನಾದ ಚಂದ್ರದೇವ, ಗಂಗಾತೀರದಲ್ಲಿ ಸಸ್ಯ ಸಂಪನ್ನವಾದ ಭೂಮಿಯನ್ನು ದಾನಮಾಡಿದರೆ ಅವನಿಗೆ ಸರ್ವಾರ್ಥಸಿದ್ಧಿಯಾಗುವುದು. ಮತ್ತು ಗೋದಾನ ಮಾಡಿದರೆ ವಿಶೇಷ ಪುಣ್ಯ ಎಂದು ವೇದದಲ್ಲಿ ಹೇಳಲಾಗಿದೆ. ನಾವೆಲ್ಲ ಔಷಧಿಗಳು ಚಂದ್ರನ ರಾಣಿಯರು. ಚಂದ್ರನು ಔಷಧೀಶ್ವರ'' ಹೀಗೆ ತಿಳಿದು ಬ್ರಹ್ಮನಿಷ್ಠನಾದ ಬ್ರಾಹ್ಮಣನಿಗೆ ಔಷಧಿ ದಾನ ಮಾಡಿದವರನ್ನು ನೀನು ಉದ್ಧರಿಸಬೇಕು. ಯಜ್ಞ, ಪಿತೃಕಾರ್ಯ, ಹವ್ಯ-ಕವ್ಯಗಳನ್ನು ಮಾಡುವುದಕ್ಕಿಂತಲೂ ಔಷಧಿದಾನವು ಉತ್ತಮವಾದುದು. ಇಂಥ ಔಷಧಿ ಪ್ರದಾನವನ್ನು ಸತ್ಪಾತ್ರರಲ್ಲಿ ಮಾಡುವವರಿಗೆ ನೀನು ಸದ್ಗತಿಯನ್ನು ಕರುಣಿಸು. ಔಷಧೀಶ್ವರನಾದ ಚಂದ್ರನು ತನ್ನ ಪ್ರೇಯಸಿಯರಾದ ಔಷಧಿಲತೆಗಳ ಬಿನ್ನಹವನ್ನು ಮನ್ನಿಸಿದ. ಅದರಂತೆ ವರಗಳನ್ನು ನೀಡಿದ. ಅಂದಿನಿಂದ ಆ ತೀರ್ಥ ಸ್ಥಳದಲ್ಲಿ ಔಷಧಿ ತೀರ್ಥ, ಅಮೃತತೀರ್ಥ, ವೇದಗಾಥತೀರ್ಥ, ಮಾತೃತೀರ್ಥಗಳೆಂಬ ಅನೇಕ ತೀರ್ಥಗಳು ಉತ್ಪನ್ನವಾದವು ಈ ತೀರ್ಥಗಳಲ್ಲಿ ಸ್ನಾನ, ಜಪ, ಹೋಮ, ದಾನ, ಪಿತೃತರ್ಪಣ ಅನ್ನದಾನಾದಿಗಳನ್ನು ಮಾಡಿದರೆ ಅನಂತಪುಣ್ಯ ಪ್ರಾಪ್ತಿ ಆಗುವದರಲ್ಲಿ ಸಂದೇಹವಿಲ್ಲ.

## ವಿದರ್ಭಾಸಂಗಮತೀರ್ಥ ವರ್ಣನೆ

**ಬ್ರಹ್ಮ**:- ನಾರದ, ಈ ಗೌತಮೀತೀರದಲ್ಲಿ ವಿದರ್ಭಾಸಂಗಮತೀರ್ಥ, ರೇವತಿ ಸಂಗಮತೀರ್ಥ ಎಂಬ ಎರಡು ಪುಣ್ಯತೀರ್ಥಗಳು ಇರುವವು. ಆ ತೀರ್ಥಗಳ ಮಹಾತ್ಮ್ಯವನ್ನು ಹೇಳುತ್ತೇನೆ ಆಲಿಸು.

ಭರದ್ವಾಜ ಎಂಬ ಪ್ರಖ್ಯಾತನಾದ ಋಷಿಯು ಹಿಂದಿನ ಕಾಲದಲ್ಲಿ ಈ ಗೌತಮೀ ನದಿಯ ದಕ್ಷಿಣತೀರದಲ್ಲಿ ವಾಸವಾಗಿದ್ದ. ಆ ಭರದ್ವಾಜನು ಮಹಾತೇಜಸ್ವಿ, ಉಗ್ರತಪಸ್ವಿ. ಮಹಾಮನೀಷ. ಅವನಿಗೆ ಒಬ್ಬ ತಂಗಿ ಹೆಸರು ರೇವತಿ. ಆದರೆ ಅತ್ಯಂತ ಕುರೂಪಿ, ಕಾಡುರೂಪಕ್ಕೆ ಅನುಗುಣ ಅವಳ ಸ್ವರ ಅತ್ಯಂತ ಕರ್ಕಶ, ಮಾತು ಕೇಳಿದವರಿಗೆ ಕರ್ಣಕಠೋರ ಇಂಥ ಕುರೂಪಿಯೂ, ವಿಕೃತಸ್ವರೂಪಳೂ ಆದ ತಂಗಿಯೊಡನೆ ಆ ಭರದ್ವಾಜಮುನಿಯು

ಗೌತಮೀತೀರದಲ್ಲಿ ನೆಲೆಸಿದ್ದ. ಅವನಿಗೆ ಹಗಲಿರುಳೂ ತಂಗಿಯದೇ ಚಿಂತೆ ಇಂಥ ವಿದ್ರೂಪೀ ವಿಕೃತಧ್ವನಿಯ ಕಾಡು-ಹುಡುಗಿಯನ್ನು ಯಾರು ಮದುವೆಯಾಗುವರು? ಮದುವೆ ಯಾಗದಿದ್ದರೆ ನಾರಿಗೆ ಸದ್ಗತಿಯಿಲ್ಲ. ತಂದೆಯಿಲ್ಲದ ಇವಳನ್ನು ಯೋಗ್ಯ ವರನಿಗೆ ಮದುವೆ ಮಾಡಿಕೊಡುವ ಹೊಣೆಗಾರಿಕೆ ನನ್ನ ಹೆಗಲ ಮೇಲೆಯೇ ಇದೆ. ಇದಕ್ಕೇನುಪಾಯ?'' ಎಂದು ಭರದ್ವಾಜನು ಯೋಚನೆ ಮಾಡುತ್ತಲೇ ಇದ್ದ.

**ಕಸ್ಮೈ ದದ್ಯಾಮಿಮಾಂ ಕನ್ಯಾಂ ಸ್ವಸಾರಂ ಭೀಷಣಾಕೃತಿಮ್**
**ನ ಕಶ್ಚಿತ್ ಪ್ರತಿಗೃಹ್ಣಾತಿ ದಾತವ್ಯಾ ಚ ಸ್ವಸಾ ತಥಾ ॥**

ಈ ಭೀಕರಾಕಾರದ ಕನ್ಯೆಯನ್ನು ನಾನು ಯಾರಿಗೆ ಕೊಡಲಿ? ಇವಳನ್ನು ಮದುವೆ ಯಾಗಲು ಯಾವನೂ ಮುಂದೆ ಬರುತ್ತಿಲ್ಲ. ಆದರೆ ಕನ್ಯೆಯೆಂದ ಬಳಿಕ ಯಾರಿಗಾದರೂ ಮದುವೆ ಮಾಡಿಕೊಟ್ಟೇ ತೀರಬೇಕಷ್ಟೇ!

**ಅಹೋ ಭೂಯಾನ್ನಕಸ್ಯಾऽಪಿ ಕನ್ಯಾ ದುಃಖೈಕಕಾರಣಮ್ ।**
**ಮರಣಂ ಜೀವತೋऽಪ್ಯಸ್ಯ ಪ್ರಾಣಿನಸ್ತು ಪದೇ ಪದೇ ॥**

ಹಡೆದವರ ಹಾಗೂ ಒಡಹುಟ್ಟಿದವರ ದುಃಖಕ್ಕೆ ಮಾತ್ರ ಕಾರಣರಾದ ಕನ್ಯೆಯರು ಯಾರಿಗೂ ಹುಟ್ಟದಿರಲಿ! ಇಂಥ ಹೆಣ್ಣುಗಳ ಹೊಣೆ ಹೊತ್ತುಕೊಂಡವನಿಗೆ ಹೆಜ್ಜೆ ಹೆಜ್ಜೆಗೆ ಸಾವು. ಅವನು ಬದುಕಿದ್ದರೂ ಸತ್ತಂತೆಯೇ ಸರಿ.

ಹೀಗೆಲ್ಲ ಆ ಬ್ರಾಹ್ಮಣ ಭರದ್ವಾಜನು ಇರುವಾಗ ಒಂದು ದಿನ ಅವನ ಆಶ್ರಮಕ್ಕೆ ಪರಮಸುಂದರನಾದ ಒಬ್ಬ ಮುನಿಶ್ರೇಷ್ಠ ಬಂದ. ಅವನಿಗೆ ಹದಿನಾರು ವರ್ಷ. ಸುಂದರ ಶರೀರ ಶಾಂತಿ-ಕಾಂತಿ-ದಾಂತಿ ಮೂರೂ ಗುಣಗಳೂ ಅವನಲ್ಲಿ ಮೇಳವಿಸಿದ್ದವು.

ಅವನೊಬ್ಬ ಗುಣಗಳ ಖಣಿ. ಇಂಥ ತೇಜಃಪುಂಜನಾದ ತರುಣ ತಪಸ್ವೀ ತೇಜಸ್ವೀ ಮುನಿಯು ಬಂದು ಆ ಭರದ್ವಾಜ ಮುನಿಗೆ ನಮಿಸಿದ.

ಆಗ ಭರದ್ವಾಜನು ಅಭ್ಯಾಗತನಾದ ಆ ತರುಣತಾಪಸನನ್ನು ವಿಧಿಪೂರ್ವಕವಾಗಿ ಸತ್ಕರಿಸಿದ ''ನಿನ್ನ ಹೆಸರೇನು? ಮತ್ತು ಬಂದ ಕಾರ್ಯ ಏನು?'' ಎಂದು ಕೇಳಿದ. ಆಗ ವಿನೀತವಾದ ಆ ತರುಣತಾಪಸನು ಬಾಗಿ ಕೈ ಜೋಡಿಸಿ ನನ್ನ ಹೆಸರು ಕಠ. ನಾನು ವಿದ್ಯಾರ್ಥಿಯಾಗಿ ತಮ್ಮಲ್ಲಿ ಅಧ್ಯಯನ ಮಾಡಬೇಕೆಂದು ಬಂದಿದ್ದೇನೆ. ನನಗೆ ತಾವು ದಯವಿಟ್ಟು ವೇದಶಾಸ್ತ್ರ ವಿದ್ಯೆಗಳನ್ನು ಕಲಿಸಬೇಕು'' ಎಂದು ಕೇಳಿಕೊಂಡ.

ಭರದ್ವಾಜನಿಗೆ ಪರಮಾನಂದವಾಯ್ತು. ಇಂಥ ತೇಜಸ್ವಿ ತರುಣ ಶಿಷ್ಯನು ತನಗೆ ಅಧ್ಯಾಪನಕ್ಕೆ ದೊರೆತದ್ದರಿಂದ ಅವನ ಹೃದಯದಲ್ಲಿ ಹಿಗ್ಗು ಗರಿಗೆದರಿತ್ತು. ಆನಂದದಿಂದ ಅವನು ಹೇಳಿದ ''ವತ್ಸ ನಿನಗೆ ಬೇಕಾದುದನ್ನೆಲ್ಲ ಅಧ್ಯಯನ ಮಾಡು, ದೇವರ ದಯೆಯಿಂದ ನಾನು ವೇದ ವೇದಾಂತಗಳನ್ನೆಲ್ಲ ಓದಿದ್ದೇನೆ. ಪುರಾಣಗಳನ್ನೆಲ್ಲ ಅಧ್ಯಯನ ಮಾಡಿದ್ದೇನೆ. ಸ್ಮೃತಿಗಳನ್ನೆಲ್ಲ ಪರಿಶೀಲಿಸಿದ್ದೇನೆ. ಧರ್ಮಶಾಸ್ತ್ರವನ್ನೂ ಉಳಿದ ಅಧ್ಯಾತ್ಮವಿದ್ಯೆಯನ್ನೂ ಚೆನ್ನಾಗಿ ಗುರುಮುಖದಿಂದ ಅಧ್ಯಯನ ಮಾಡಿ ಪರ್ಯಾಪವಾದ ಜ್ಞಾನವನ್ನು ಪಡೆದಿದ್ದೇನೆ. ಗುರುಗಳ ಆಶೀರ್ವಾದದಿಂದ ತಿಳಿಯಬೇಕಾದುದನ್ನೆಲ್ಲ ಯಥಾಶಕ್ತಿ ತಿಳಿದಿದ್ದೇನೆ. ಅರಿಯಬೇಕಾದುದನ್ನೆಲ್ಲ ನನ್ನ ಬುದ್ಧಿಗೆ ನಿಲುಕಿದಷ್ಟು ಅರಿತಿದ್ದೇನೆ. ಜಿಜ್ಞಾಸುವಾಗಿ ನನ್ನಲ್ಲಿಗೆ ಬಂದ ನಿನಗೆ ಎಲ್ಲವನ್ನೂ ಕಲಿಸುತ್ತೇನೆ.

**ಕುಲೀನೋ ಧರ್ಮನಿರತೋ ಗುರುಶುಶ್ರೂಷಣೇ ರತಃ ।**
**ಅಭಿಮಾನೀ ಶ್ರುತಧರಃ ಶಿಷ್ಯಃ ಪುಣ್ಯೈರವಾಪ್ಯತೇ ॥**

ಹೇಳಿದ್ದನ್ನು ಧಾರಣ ಮಾಡುವ ಸಾಮರ್ಥ್ಯವುಳ್ಳ, ದೊಡ್ಡ ಕುಲದಲ್ಲಿ ಜನಿಸಿದ ಧರ್ಮ ಬುದ್ಧಿಯ ಸ್ವಾಭಿಮಾನಿಯಾದ ಶಿಷ್ಯನು ಗುರುಗಳಿಗೆ ವಿಶೇಷ ಪುಣ್ಯವಿದ್ದರೆ ಮಾತ್ರ ದೊರಕುತ್ತಾನೆ. ಈ ಎಲ್ಲ ಗುಣಗಳೂ ನಿನ್ನಲ್ಲಿ ಇವೆ. ವಿಶೇಷವಾಗಿ ನೀನು ಗುರುಗಳ ಶುಶ್ರೂಷೆಯಲ್ಲಿ ಉತ್ಸುಕನಾಗಿರುವೆ. ನಾನು ಕಲಿತದ್ದನ್ನೆಲ್ಲ ನಿನಗೆ ಕಲಿಸುವೆ.

ಆಗ ಆ ಕಠ ಎಂಬ ಶಿಷ್ಯನು ಕೈ ಮುಗಿದು, ಭರದ್ವಾಜಮುನಿಗೆ ಕೇಳಿಕೊಂಡ.

**"ಅಧ್ಯಾಪಯಸ್ವ ಭೋ ಬ್ರಹ್ಮನ್ ಶಿಷ್ಯಂ ಮಾಂ ವೀತಕಲ್ಮಷಮ್"**

"ಬ್ರಹ್ಮಜ್ಞಾನಿಗಳಾದ ಗುರುಗಳೇ ಪಾಪವಿದೂರನೂ ನಿಮ್ಮ ಶಿಷ್ಯನೂ ಆದ ನನಗೆ ವೇದಶಾಸ್ತ್ರ ಅಧ್ಯಯನವನ್ನು ಮಾಡಿಸಿರಿ. ನಾನು ನಿಮ್ಮ ಭಕ್ತ, ದೊಡ್ಡ ಕುಲದಲ್ಲಿ ಹುಟ್ಟಿದ್ದೇನೆ. ನನ್ನ ಜನ್ಮದಲ್ಲಿಯೇ ನಾನು ಸುಳ್ಳನ್ನು ಆಡುವುದಿಲ್ಲ. ನಿಮ್ಮ ಸೇವೆ ಮಾಡುವ ಸದವಕಾಶವನ್ನು, ತಮ್ಮಲ್ಲಿ ಅಧ್ಯಯನ ಮಾಡುವ ಸೌಭಾಗ್ಯವನ್ನು ನನಗೆ ಕರುಣಿಸಿ" ಎಂದು ಬೇಡಿಕೊಂಡ.

ಅವನ ವಿನಯಪೂರ್ವಕವಾದ ಈ ಬಿನ್ನಹವನ್ನು ಭರದ್ವಾಜಮುನಿಗಳು ಆನಂದದಿಂದ ಅಂಗೀಕರಿಸಿದರು. ಪ್ರೀತಿಯಿಂದ ಹಲವಾರು ವರ್ಷಗಳವರೆಗೆ ಅವನಿಗೆ ವೇದಶಾಸ್ತ್ರ ಅಧ್ಯಯನವನ್ನು ಮಾಡಿಸಿದರು. ತಮ್ಮ ಬಂದ ವಿದ್ಯೆಯನ್ನೆಲ್ಲ ಅವನಿಗಾಗಿ ಧಾರೆಯೆರೆದರು. ಕಠ ಹಠದಿಂದ ಓದಿ ಪ್ರಗಾಢ ಪಂಡಿತನಾದ. ಚತುಶ್ಶಾಸ್ತ್ರಗಳೂ ಅವನಿಗೆ ಕರತಲಾಮಲಕವಾದವು. ಅಧ್ಯಾತ್ಮ ವಿದ್ಯೆಯಲ್ಲಿ ಅವನು ಪ್ರಕಾಂಡ ಪಂಡಿತನಾದ. ಎಲ್ಲ ವಿದ್ಯಾಧ್ಯಯನ ಮುಗಿಸಿ ಉದ್ದಾಮವಿದ್ವಾಂಸನಾಗಿ ಮಾರ್ಪಟ್ಟ ಶಿಷ್ಯ ಕಠನು ಒಂದು ದಿನ ಗುರುಗಳನ್ನು ಕೇಳಿಕೊಂಡ.

ಗುರುಶ್ರೇಷ್ಠರೆ, ತಾವು ವಾತ್ಸಲ್ಯದಿಂದ ನನಗೆ ವೇದಶಾಸ್ತ್ರ ವಿದ್ಯೆಯನ್ನೆಲ್ಲ ಕಲಿಸಿದಿರಿ. ವೇದಾಂತ ವಿಶ್ವದ ಸಾಕ್ಷಾತ್ಕಾರವನ್ನೇ ನನಗೆ ಮಾಡಿಸಿದಿರಿ. ಆದಕ್ಕಾಗಿ ನಾನು ತಮಗೆ ಆಜನ್ಮ ಋಣಿ. ಈಗ ನಾನು ತಮಗೆ ಗುರುದಕ್ಷಿಣೆ ಕೊಡಬೇಕೆಂದು ಅಪೇಕ್ಷಿಸಿದ್ದೇನೆ. ತಮಗೆ ಮನೋಭಿಷ್ಟವಾದುದು ಯಾವುದು? ತಮಗೆ ಪ್ರಿಯವಾದ ಏನನ್ನು ನಾನು ನೀಡಲಿ ಹೇಳಿರಿ. ಎಂಥ ದುರ್ಲಭವಾದ ಗುರುದಕ್ಷಿಣೆಯಾದರೂ ನಾನು ಕೊಡಲು ಸಿದ್ಧ. ದಯಮಾಡಿ ತಾವು ತಿಳಿಸಬೇಕು.

**ವಿದ್ಯಾಂ ಪ್ರಾಪ್ಯಾಽಪಿಯೇ ಮೋಹಾತ್**
**ಸ್ವಗುರೋಃ ಪಾರಿತೋಷಿಕಮ್ ।**
**ನ ಪ್ರಯಚ್ಛಂತಿ ನಿರಯಂ**
**ತೇ ಯಾಂತ್ಯಾಚಂದ್ರತಾರಕಂ ॥**

ಗುರುಗಳಿಂದ ವಿದ್ಯೆಯನ್ನು ಪಡೆದು ಮೋಹದಿಂದ ಆ ಗುರುಗಳಿಗೆ ಅಭೀಪ್ಸಿತವಾದ ಪಾರಿತೋಷಕವನ್ನು ಅರ್ಥಾತ್ ಗುರುದಕ್ಷಿಣೆಯನ್ನು ಯಾರು ಕೊಡುವದಿಲ್ಲವೋ ಅವರು ಆಚಂದ್ರತಾರಕವಾದ ಶಾಶ್ವತ ನರಕವನ್ನು ಹೊಂದುತ್ತಾರೆ. ಆದುದರಿಂದ ನಾನು ತಮಗೆ ಇಚ್ಛಿತವಾದ ಗುರುದಕ್ಷಿಣೆ ಕೊಟ್ಟು ತಮ್ಮ ಅನುಗ್ರಹ ಪಡೆಯಬೇಕೆಂದಿದ್ದೇನೆ ದಯವಿಟ್ಟು ತಿಳಿಸಿರಿ. ಯಾವ ಗುರುದಕ್ಷಿಣೆ ತಮಗೆ ಬೇಕು?

ಭರದ್ವಾಜ ಮುನಿಗಳಿಗೆ ಪರಮಾನಂದವಾಯ್ತು. ಅವರು ಉತ್ಸಾಹದಿಂದ ಉಬ್ಬಿ ಹೇಳಿದರು ಶಿಷ್ಯೋತ್ತಮನಾದ ಕಠ! ನನಗೊಬ್ಬ ತಂಗಿ ಇರುತ್ತಾಳೆ. ಅವಳನ್ನು ನೀನು ವಿಧಿಪೂರ್ವಕವಾಗಿ ಮದುವೆ ಮಾಡಿಕೋ. ಅವಳು ಕುರೂಪಿ. ವಿಕೃತಸ್ವರ, ಅಂಥ ನನ್ನ ಕಾಡುರೂಪದ ತಂಗಿಯನ್ನು ಅತ್ಯಂತ ಪ್ರೀತಿಯಿಂದ ನೋಡಿಕೊಳ್ಳಬೇಕು. ಇದೇ ನನಗೆ ನೀನು ಕೊಡುವ ಗುರುದಕ್ಷಿಣೆ.

ಗುರುವಿನ ಈ ಮಾತನ್ನು ಕೇಳಿ ಶಿಷ್ಯ ಕಠ ಅಪ್ರತಿಭನಾದ. ಅವನು ಗಡಿಬಿಡಿಸಿ ಗುರುಗಳನ್ನು ಕೇಳಿದ. "ಗುರುಗಳೇ, ಶಿಷ್ಯನು ಗುರುವಿಗೆ ಮಗನಿದ್ದಂತೆ ಮತ್ತು ಪುತ್ರಸಮಾನ. ಗುರುವು ಶಿಷ್ಯರಿಗೆ ತಂದೆಯ ಸಮಾನ. ಅಂದ ಬಳಿಕ ಈ ನಿಮ್ಮ ತಂಗಿಯು ನನಗೂ ಕೂಡ ಸೋದರಿಗೆ ಸಮಾನಳು. ಸಹೋದರಿಯಂತಿರುವ ಈ ನಿಮ್ಮ ತಂಗಿಯನ್ನು ನಾನ ಹೇಗೆ ಮದುವೆಯಾಗಲಿ? ಈ ಸಂಬಂಧವು ಶಾಸ್ತ್ರ ಸಮ್ಮತವಾಗುವದೇ? ಅನ್ಯಾಯ ಎನಿಸಲಿಕ್ಕಿಲ್ಲವೆ? ಶಿಷ್ಯನ ಶಂಕಾತಂಕವನ್ನು ಪರಿಹರಿಸುತ್ತ ಗುರುಗಳು ನುಡಿದರು.

**ಭರದ್ವಾಜ:-**

**"ಮದ್ವಾಕ್ಯಂ ಕುರು ಸತ್ಯಂ ತ್ವಂ ಮಮಾಜ್ಞಾ ತವ ದಕ್ಷಿಣಾ ।**

ಕಠ! ನೀನು ನನ್ನ ವಚನವನ್ನು ಸತ್ಯವನ್ನಾಗಿ ಮಾಡು ಇದು ನನ್ನಾಜ್ಞೆ. ಇವೇ ನನಗೆ ನೀನು ಕೊಡಬೇಕಾದ ಗುರುದಕ್ಷಿಣೆ. ನಾನು ಎಲ್ಲವನ್ನು ಆಲೋಚನೆ ಮಾಡಿಯೇ ಹೇಳಿದ್ದೇನೆ. ಇದರಲ್ಲಿ ಯಾವ ಅನ್ಯಾಯವೂ ಇಲ್ಲ. ಅಧರ್ಮವೂ ಇಲ್ಲ. ಗುರುಗಳ ಆಜ್ಞಾಪರಿಪಾಲನೆಗಿಂತ ಹೆಚ್ಚಿನ ಧರ್ಮವಿಲ್ಲ. ನಿನ್ನ ಹಿತಕ್ಕಾಗಿಯೇ ನಾನು ಹೇಳುತ್ತಿದ್ದೇನೆ. ನನ್ನು ಮಾತನ್ನು ನಡೆಸು. ನನ್ನ ತಂಗಿಯ ಪಾಣಿಗ್ರಹಣ ಮಾಡು.

ಭರದ್ವಾಜ ಮುನಿಯ ಈ ಮಾತನ್ನು ಕೇಲಿ ಕಠನು 'ಗುರುವಾಜ್ಞೆ' ಎಂದು ಒಪ್ಪಿದ. ಅವರ ಆದೇಶದಂತೆ ರೇವತಿಯನ್ನು ವಿಧಿಪೂರ್ವಕವಾಗಿ ಪಾಣಿಗ್ರಹಣ ಮಾಡಿದ. ಅವಳನ್ನು ಮದುವೆಮಾಡಿಕೊಂಡು ತನ್ನ ಊರಿಗೆ, ತನ್ನ ಮನೆಗೆ ಕರೆದುಕೊಂಡು ಹೋದ. ಆದರೆ ಅವನಿಗೆ ಆ ವಿದ್ರೂಪ ಹೆಣ್ಣಿನ ಜೊತೆ ಸಂಸಾರ ಮಾಡಲು ಮನಸ್ಸೇ ಬರಲಿಲ್ಲ. ಗುರುಗಳ ಒತ್ತಾಯಕ್ಕೆ ಕಟ್ಟು ಬಿದ್ದು ಮದುವೆ ಆದರೂ ಅವನಿಗೆ ಅವಳಲ್ಲಿ ಅನುರಕ್ತಿ ಹುಟ್ಟಿರಲಿಲ್ಲ. ಅವಳ ಮುಖವನ್ನು ಕಂಡಕೂಡಲೇ ಅವನಿಗೆ ಜಿಗುಪ್ಸೆ ಉಂಟಾಗುತ್ತಿತ್ತು. ಅವಳ ಧ್ವನಿ ಆಲಿಸಿದಾಕ್ಷಣ ಕಿವಿಶೂಲೆ ಬಾಧಿಸುತ್ತಿತ್ತು. ಇಂಥ ಕಾಡು ಕುರೂಪಿ ಕನ್ಯೆಯೊಂದಿಗೆ ಬಾಳಿನುದ್ದಕ್ಕೂ ತಾನೂ ಸಂಸಾರ ಮಾಡುವುದು ಹೇಗೆ? ಅವನಿಗೆ ದೊಡ್ಡ ಚಿಂತೆಯಾಗಿತ್ತು. ಅವಳನ್ನು ನೋಡಿದಾಗಲ್ಲೆಲ್ಲ ಅಸಹ್ಯ ಭಾವನೆ ಉದಿಸುತ್ತಿತ್ತು. ಅದಕ್ಕಾಗಿ ಅವನು ಬಹಳ ಯೋಚನೆ ಮಾಡಿ ಒಂದು ನಿರ್ಧಾರಕ್ಕೆ ಬಂದ. ತನ್ನ ಹೆಂಡತಿಯಾದ ರೇವತಿಯನ್ನು ಕರೆದುಕೊಂಡು ನೇರವಾಗಿ ಗೌತಮೀತೀರಕ್ಕೆ ಬಂದ. ತನ್ನ ಮಡದಿಯೊಡನೆ ಆ ಗಂಗಾ ಜಲದಲ್ಲಿ ಮಿಂದ. ಪಾರ್ವತೀ ಪರಮೇಶ್ವರರ ಎದುರು ಕೈಮುಗಿದು ನಿಂದ. ಆ ಈಶದಂಪತಿಗಳನ್ನು ಭಕ್ತಿಯಿಂದ ಆರಾಧಿಸಿದ. ರೇವತಿಯು ಕೂಡ ಮಹಾತಾಯಿ ಪಾರ್ವತಿಯನ್ನು ಭಕ್ತ್ಯುದ್ರೇಕದಿಂದ ಭಜಿಸಿ, ಪೂಜಿಸಿ, ಆರಾಧಿಸಿ ಉಪಾಸಿಸಿ ಬಗೆಬಗೆಯಿಂದ ಸೇವೆಸಲ್ಲಿಸಿದಳು. ದಂಪತಿಗಳಿಬ್ಬರೂ ಆ ಗಂಗಾತೀರದಲ್ಲಿ ನಿಂತು ಅವಿಚ್ಛಿನ್ನವಾದ ಭಕ್ತಿಯಿಂದ ಪಾರ್ವತೀ ಪರಮೇಶ್ವರನನ್ನು ಜಪತಪಉಪಾಸನೆ ಆರಾಧನೆಗಳಿಂದ ಅರ್ಚಿಸಿ ಮೆಚ್ಚಿಸಿದರು.

ಪಾರ್ವತೀಪರಮೇಶ್ವರರು ಇವರ ಅವಿರತ ಧ್ಯಾನೋಪಾಸನೆಗಳಿಂದ ಪ್ರೀತರಾದರು. ಅರ್ಚನಾ ಆರಾಧನೆಗಳಿಂದ ಪ್ರಸನ್ನರಾದರು. ಭಜನೆ ಪೂಜೆಗಳಿಂದ ಪ್ರತ್ಯಕ್ಷ ಗೋಚರ ರಾದರು. ಅವರ ಸಾಕ್ಷಾತ್ ದರ್ಶನದಿಂದ ಆ ದಂಪತಿಗಳಿಬ್ಬರೂ ಆನಂದತುಂದಿಲರಾಗಿ ದೀರ್ಘದಂಡನ ಮಾಡಿ ಕೈ ಮುಗಿದು ನಿಂತರು. ಆನಂದ ಪರವಶರಾದ ಅವರ ಬಾಯಿಂದ ಮಾತುಗಳೇ ಹೊರಡಲಿಲ್ಲ. ಅಪಲಕನೇತ್ರದಿಂದ ಆ ಜಗತ್ತಿನ ತಾಯಿ-ತಂದೆಯರನ್ನೇ ನೋಡುತ್ತ ಮೂಕವಿಸ್ಮಿತರಾಗಿ ನಿಂತು ಕೊಂಡರು.

ಸರ್ವಜ್ಞ ಚೂಡಾಮಣಿಯಲ್ಲವೇ ಆ ಪರಮೇಶ್ವರ! ಇವರು ಬಾಯಿಬಿಟ್ಟು ಹೇಳದಿದ್ದರೂ ಇವರ ಅಭಿಪ್ರಾಯ ಪರಮೇಶ್ವರನಿಗೆ ತಿಳಿದಿತ್ತು. ರೇವತಿಯ ತಲೆಯ ಮೇಲೆ ಪರಮೇಶ್ವರ ತನ್ನ ವರದ ಹಸ್ತ ಇಟ್ಟ. ತಕ್ಷಣದಲ್ಲಿಯೇ ಅವಳ ಕುರೂಪ ಮಾಯವಾಯ್ತು. ಸುರೂಪ ಸ್ಫುರಿಸಿತು. ಅವಳ ಅಂಗಾಂಗಗಳಲ್ಲೆಲ್ಲ ಸೌಂದರ್ಯದ ಸಹಸ್ರಾರವನ್ನೇ ಅರಳಿಸಿ ಇಟ್ಟಂತಾಯಿತು. ಆವರೆಗೆ ಕಾಡು ಕುರೂಪಿ ಕಾಮಿನಿ ಎಂದು ತುಚ್ಛ ಕುತ್ಸಿತಳಾದ ಆ ರೇವತಿಯು ಪರಮೇಶ್ವರನ ಪ್ರಸಾದದಿಂದ ಕ್ಷಣಾರ್ಧದಲ್ಲಿ ಸುರಸುಂದರಿಯಾಗಿ ಮಾರ್ಪಟ್ಟಳು. ಆಗ ಕಠನು ಗೌತಮೀಜಲದ ನೀರನ್ನು ತೆಗೆದುಕೊಂಡು ಬಂದ ತನ್ನ ಸ್ಫುರದ್ರೂಪಿಣಿಯಾದ ರೂಪಸಿ ರೇವತಿಯೊಂದಿಗೆ ಪಾರ್ವತೀಪರಮೇಶ್ವರರ ಪಾದಪ್ರಕ್ಷಾಲನ ಮಾಡಿದ. ಆ ನೀರಿನಿಂದ ರೇವತಿಗೆ ಅಭಿಷೇಕ ಮಾಡಿದ. ರೇವತಿಯ ಶರೀರದಿಂದ ಕೆಳಗೆ ಹರಿದ ನೀರು ರೇವತಿ ಸಂಗಮತೀರ್ಥ. ಅದರಲ್ಲಿ ಸ್ನಾನ ಮಾಡಿದರೆ ಒಳ್ಳೆಯ ಸುಸ್ವರೂಪವೂ ಅನಿಂದ್ಯ ಸೌಂದರ್ಯವೂ ಪ್ರಾಪ್ತವಾಗುವವು. ಕಠನು ತನ್ನ ಮಡದಿಯಾದ ರೇವತಿಗೆ ಬಹಿರಂಗ ಸೌಂದರ್ಯ ಪ್ರಾಪ್ತವಾದ ಬಳಿಕ ಬಾಹ್ಯಶುದ್ಧಿಯಾದಂತೆ ಅಂತಃಶುದ್ಧಿಯೂ ಆಗಲಿ ಎಂದು ಅದೇ ಗೌತಮಿಯ ನೀರನ್ನು ರೇವತಿಗೆ ದರ್ಭೆಯಿಂದ ಪ್ರೋಕ್ಷಿಸಿ ಅಭಿಷೇಕಿಸಿದನು. ಆ ಅಭಿಷೇಕಜಲದಿಂದ ವಿದರ್ಭಾ ಎಂಬ ನದಿಯು ಪ್ರಾದುರ್ಭೂತವಾಗಿ ಗಂಗೆಯಲ್ಲಿ ಸಂಗಮಿಸಿತು. ಗೌತಮೀ ನದಿಯ ಈ ವಿದರ್ಭಾಸಂಗಮ ಹಾಗೂ ರೇವತೀ ಸಂಗಮತೀರ್ಥಗಳಲ್ಲಿ ಶ್ರದ್ಧೆಯಿಂದ ಸ್ನಾನಮಾಡಿ ದವನು ಭೋಗಗಳನ್ನು ಪಡೆಯುತ್ತಾನೆ. ಪಾನಮಾಡುವವನು ಮೋಕ್ಷಪಡೆಯುತ್ತಾನೆ.

## ಗೋವಿಂದ ತೀರ್ಥ ಮಹಿಮೆ

**ಬ್ರಹ್ಮ:-** ನಾರದ ಗೌತಮೀ ನದಿಯ ಉತ್ತರ ತೀರದಲ್ಲಿ ಗೋವಿಂದ ತೀರ್ಥ ಎಂಬ ಒಂದು ತೀರ್ಥವಿದೆ. ಆ ತೀರ್ಥದ ದಂಡೆಯ ಮೇಲೆ ವಿಷ್ಣು ಶಿವ ಇಬ್ಬರೂ ನೆಲೆನಿಂತಿದ್ದಾರೆ. ಆ ತೀರ್ಥದಲ್ಲಿ ಜ್ಞಾನದಿಂದಿಗಲೀ, ಅಜ್ಞಾನದಿಂದಾಗಲೀ ಸ್ನಾನಮಾಡಿದರೆ ಜ್ಞಾತಾಜ್ಞಾತ ಪಾಪಗಳೆಲ್ಲವೂ ಪರಿಹಾರ ಆಗುವವು.

ಹಿಂದಿನ ಕಲ್ಪದ ಆದಿಭಾಗದಲ್ಲಿ ಧನ್ವಂತರಿ ಎಂಬ ಅರಸನು ಇದ್ದ. ಅವನು ಆಯುಷ ಎಂಬುವನ ಪುತ್ರ. ಈ ಧನ್ವಂತರಿಯು ಬಗೆಬಗೆಯ ದಾನಗಳನ್ನು ನೀಡಿದ. ಎಲ್ಲ ವಿಧವಾದ ಭೋಗೋಪಭೋಗಗಳನ್ನು ಅನುಭವಿಸಿದ. ಆದರೆ ಈ ಭೋಗಾನುಭೋಗಗಳಿಂದ ಮಾನವನು ಅಧೋಗತಿಯನ್ನು ಹೊಂದುವನು ಎಂದು ತಿಳಿಯಿತು. ಕೂಡಲೇ ಅವನು ಜ್ಞಾನಿಗಳಿಂದ ವಿಷಮಸುಖದ ನಶ್ವರತೆಯನ್ನು ದುಷ್ಪರಿಣಾಮವನ್ನು ಅರಿತ. ಆ ಅರಸನು

ಅರೆಗಳಿಗೆಯಲ್ಲಿಯೇ ವಿರಕ್ತನಾದ. ವಿಷಮಸುಖದ ಅನುಭೂತಿಯನ್ನು ಸಂಪೂರ್ಣವಾಗಿ ಪರಿತ್ಯಜಿಸಿದ. ಅವನು ಪರಮಪವಿತ್ರವಾದ ನದೀಸಂಗಮದ ಪುಣ್ಯಸ್ಥಳದಲ್ಲಿ ಕುಳಿತು ಶಿವನನ್ನು ಕುರಿತು ಉಗ್ರತಪಸ್ಸನ್ನು ಆಚರಿಸಿದ. ಜ್ಞಾನವೈರಾಗ್ಯಗಳಿಂದ ವಿಜೃಂಭಿತವಾಗಿತ್ತು ಅವನ ತಪಶ್ಚರ್ಯೆ. ಈ ಧನ್ವಂತರಿಯು ಗಂಗಾತೀರದಲ್ಲಿ ನಿಂತು ಅನೇಕ ಜಪಗಳನ್ನು ಜಪಿಸಿದ. ತಪಗಳನ್ನು ತಪಿಸಿದ. ಹೋಮಗಳನ್ನು ಆಚರಿಸಿದ. ಅಧ್ಯಾತ್ಮ ಚಿಂತನೆ ಮಾಡುತ್ತ ತಪೋನುಷ್ಠಾನವನ್ನು ತದೈಕತಾನಲೀನ ಮಾನಸನಾಗಿ ಮಾಡುತ್ತಲಿದ್ದ. ಸಮುದ್ರದಲ್ಲಿ ಅವಿತುಕೊಂಡ ತಮಸಾಸುರನು ಒಮ್ಮೆ ಮೇಲೆ ಎದ್ದು ಬಂದ. ತನ್ನನ್ನು ಹಿಂದೆ ಗೆದ್ದು ಸಮುದ್ರದೆಡೆಗೆ ಓಡಿಸಿದ ಧನ್ವಂತರಿರಾಜನು ತಪೋಮಗ್ನನಾಗಿದ್ದನ್ನು ನೋಡಿ ಅವನಿಗೆ ದುರ್ಬುದ್ಧಿ ಹುಟ್ಟಿತು. ಸೇಡಿನಬುದ್ಧಿ ಅವನಮೇಲೆ ಸಿಡಿಲುಗುದುರೆಯಂತೆ ಸವಾರಿ ಮಾಡಿತು. ಉಗ್ರ ತಪವನ್ನು ಕೈಗೊಂಡ ಧನ್ವಂತರಿ ರಾಜನ ತಪೋಭಂಗಕ್ಕಾಗಿ ಆ ದುಷ್ಟ ಒಂದು ಕುಯುಕ್ತಿಯನ್ನು ಮಾಡಿದ. ಆ ಅಸುರನು ತನ್ನ ಮಾಯೆಯಿಂದ ಅಪ್ಸರಾಸ್ತ್ರೀಯಂತೆ ಅತ್ಯಂತ ಸುಂದರಳಾದ ಓರ್ವ ಮಾಯಾಂಗನೆಯನ್ನು ನಿರ್ಮಿಸಿದ. ಆ ಮಾಯಾಸುಂದರಿಯು ಮಂದಹಾಸ ಮಾಡುತ್ತ ಮಹಾರಾಜನ ಬಳಿಗೆ ಬಂದು ತನ್ನ ಸಂಗೀತ ನೃತ್ಯಗಳಿಂದ ರಾಜನ ಮನಸ್ಸನ್ನು ಮರಳು ಮಾಡಿದಳು. ಧನ್ವಂತರಿ ರಾಜನ ಮೇಲೆ ಅತ್ಯಂತ ಭಯಭಕ್ತಿಯ ನಟನೆಮಾಡುತ್ತ ಬಹುಕಾಲ ಅವನ ಸೇವೆಯನ್ನು ಪ್ರೀತಿಯಿಂದ ಮಾಡಿದಳು.

ಒಂದು ದಿನ ಮಹಾರಾಜನು ಅವಳನ್ನು ನೋಡಿ ಸ್ನೇಹದುಂಬಿ ಕೇಳಿದ. "ಸುಂದರಿ, ನೀನು ಯಾರು? ಯಾವ ಉದ್ದೇಶದಿಂದ ಈ ಘೋರಾರಣ್ಯದಲ್ಲಿ ಬಂದು ನಿಂತಿರುವೆ? ಯಾರನ್ನು ನೋಡಿ ನೀನು ಇಷ್ಟು ಸಂತಸಪಡುತ್ತಿರುವೆ? ಹೇಳು" ಎಂದು ನುಡಿದ.

ಅರಸನ ಈ ಸರಸಾಲಾಪವನ್ನು ಕೇಳಿ ಆ ಮಾಯಾ ಸುಂದರಿಯು "ಮಹಾರಾಜ, ನಾನು ಯಾರನ್ನು ನೋಡಿ ಸಂತಸಪಡುತ್ತಿರುವೆ ಎಂಬುದನ್ನು ಬಾಯಿಬಿಟ್ಟು ಹೇಳಬೇಕೆ? ಸುಕುಮಾರಾಂಗನಾದ ನಿನ್ನನ್ನು ಕಣ್ಣಿನಿಂದ ನೋಡಿದಾಗೆಲ್ಲ ನನ್ನ ಹೃದಯದಲ್ಲಿ ಆನಂದದ ತರಂಗಗಳೇ ಉದ್ಭವವಾಗುವವು. ನಾನು ದೇವೇಂದ್ರನ ರಾಜ್ಯಲಕ್ಷ್ಮೀ. ಮಹಾಪುಣ್ಯವಂತರಲ್ಲದವರಿಗೆ ನಾನೆಂದಿಗೂ ಲಭಿಸಲಾರೆ. ಕಂದರ್ಪ ಸುಂದರನಾದ ನಿನ್ನ ಸ್ಫುರದ್ರೂಪವನ್ನು ನೋಡಿ ನಾನು ಮರುಳಾಗಿ ಬಂದಿರುವೆ. ನೀನೇ ನನ್ನ ಮನದನ್ನ. ನಿನ್ನ ಪ್ರೇಮಾಮೃತಸಿಂಚನಕ್ಕಾಗಿ ನಾನು ಕಾದಿದ್ದೇನೆ ಕಾತರಿಸಿದ್ದೇನೆ." ಮಾಯಾಸುಂದರಿಯ ಈ ನಲುಮೆಯ ನುಡಿಯನ್ನು ಕೇಳಿ ಧನ್ವಂತರಿಯು ಮೋಹಗೊಂಡ ತನ್ನ ಘೋರತಪೋನುಷ್ಠಾನವನ್ನು ಬಿಟ್ಟುಬಿಟ್ಟ. ಯಾವಾಗಲೂ ಆ ಸುಂದರಿಯನ್ನೇ ಧ್ಯಾನಿಸತೊಡಗಿದ. ಹೀಗೆ ಮೋಹಾಂಧನಾಗಿ ಆ ಮಾಯಾಸುಂದರಿಯ ಬೆನ್ನುಹತ್ತಿ ರಾಜನು ತಿರುಗತೊಡಗಿದಾಗ ಅವನ ತಪಸ್ಸೆಲ್ಲ ಹಾಳಾಗಿ ಹೋಯಿತು.

ಹೀಗೆ ಅವನ ತಪೋಧನವೆಲ್ಲವೂ ಕ್ಷೀಣವಾಗಿ ಅವನು ಪುಣ್ಯದಿಂದ ರಿಕ್ತನಾಗಿ ನಿಂತುಕೊಂಡದ್ದನ್ನು ನೋಡಿ ಆ ಮಾಯಾಂಗನೆಯು ಅಲ್ಲಿಂದ ಅಂತರ್ಧಾನ ಹೊಂದಿ ತಮಸಾಸುರನ ಬಳಿಗೆ ಹೋಗಿಬಿಟ್ಟಳು. ತನ್ನ ಮನವನ್ನು ಮರಳುಮಾಡಿದ ಆ ಮಾಯಾಂಗನೆಯನ್ನು ಕಾಣದೇ ಧನ್ವಂತರಿ ಮಹಾರಾಜನು ಪರಿತಪಿಸಿದ. ಪ್ರೇಮಾಂಧನಾಗಿ ಆ ಕಾಮಾತುರನಾದ ರಾಜನು ಅವಳ ವಿರಹವೈಕ್ಲವ್ಯದಿಂದ

ಬಳಲತೊಡಗಿದ. ಆಗ ಬ್ರಹ್ಮದೇವನಾದ ನಾನು ಅವನ ಬಳಿಗೆ ಹೋದೆ. ತಾನು ಮೆಚ್ಚಿದ ಅಂಗನೆಯನ್ನು ಕಾಣದೇ ವಿರಹವ್ಯಥೆಯಿಂದ ವಿಹ್ವಲನಾದ ಆ ಧನ್ವಂತರಿಗೆ ನಾನೇ ಸಮಾಧಾನಪಡಿಸಿದೆ. "ಮಹಾರಾಜ ನೀನು ಹಿಂದೆ ಸೋಲಿಸಿ ಹೊಡೆದೋಡಿಸಿದ ಆ ತಮಸಾಸುರನು ತನ್ನ ಮಾಯೆಯಿಂದ ಓರ್ವ ಸುಂದರಸ್ತ್ರೀಯನ್ನು ನಿರ್ಮಿಸಿ ನಿನ್ನ ತಪಸ್ಸನ್ನು ಹಾಳುಮಾಡಿದ. ಇನ್ನು ಮೇಲೆ ನೀನು ಆ ಮಾಯಾಂಗನೆಯ ಮೋಹವನ್ನು ಬಿಟ್ಟುಬಿಡು ನಿನ್ನ ಲೋಕೋತ್ತರವಾದ ತಪಸ್ಸನ್ನೆಲ್ಲ ಆ ಮಾಯೆಯ ಹೆಣ್ಣಿನ ಮೂಲಕ ಹಾಳುಗೈದ ಆ ನಿನ್ನ ವೈರಿ ಕೃತಾರ್ಥನಾದ. ಸಾಮಾನ್ಯರಾದ ಮಾನವರೆಲ್ಲರೂ ಸಾಮಾನ್ಯಸ್ತ್ರೀಯರನ್ನು ನೋಡಿದ ಮಾತ್ರಕ್ಕೆ ಮರುಳಾಗುವರು. ಅಂದಬಳಿಕ ಮಾಯೆಯಿಂದ ಅಪ್ಸರೆಯಂಥ ರೂಪವನ್ನು ಧರಿಸಿ ಬಂದ ಆ ಬಿಂಕದ ಸಿಂಗಾರಿಗೆ ನೀನು ಮೋಹಗೊಂಡಿದ್ದು ಆಶ್ಚರ್ಯವೇನಲ್ಲ. ಅದಕ್ಕಾಗಿ ನೀನು ಅಧಿಕ ಪರಿತಾಪವನ್ನು ಪಡಬೇಡ" ಎಂದು ಸಂತೈಸಿದ.

ಆಗ ಲಜ್ಜೆಯಿಂದ ತಲೆತಗ್ಗಿಸಿದ ಧನ್ವಂತರಿಯು ಸಂಕೋಚದಿಂದ ನನ್ನನ್ನು ಕೇಳಿದ "ಪಿತಾಮಹ, ನಾನು ಬಹುಕಾಲ ತಪೋನುಷ್ಠಾನದಲ್ಲಿ ನಿರತನಾಗಿದ್ದರೂ ಆ ಮಾಯಾವಿನಿಯಾದ ಬಿನ್ನಾಣಗಿತ್ತಿಯ ಒನಪು ಒಯ್ಯಾರಕ್ಕೆ ಮನಸೋತದ್ದು ನಿಜವಾಗಿಯೂ ನಾಚಿಕೆಗೇಡುತನ. ನನಗೆ ಬುದ್ಧಿ ಹೋಯಿತು. ತಪಸ್ಸಿದ್ಧಿಯೂ ಹೋಯಿತು. ಈಗ ನಾನು ಪಶ್ಚಾತ್ತಾಪದಿಂದ ದಗ್ಧನಾಗಿದ್ದೇನೆ. ನನಗೆ ಮುಂದೆ ಏನು ಗತಿ? ಎಂದು ವ್ಯಸನದಿಂದ ಕೇಳಿಕೊಂಡ.

ಆಗ ನಾನು ಆ ಧನ್ವಂತರಿಗೆ "ದೇವದೇವೋತ್ತಮನಾದ ಆ ನಾರಾಯಣನಿಗೇ ನೀನು ಶರಣು ಹೋಗು. ಭಗವಂತನನ್ನು ಭಕ್ತಿಯಿಂದ ಅರ್ಚಿಸು. ನಿರಂತರ ತಪೋನುಷ್ಠಾನದಿಂದ ಸೇವಿಸು. ಆ ಪುರುಷೋತ್ತಮನ ಪ್ರಸಾದದಿಂದ ನಿನ್ನ ಕಳೆದುಹೋದ ತಪಸ್ಸಿನ ಸಿದ್ಧಿ. ಆತ್ಮಶುದ್ಧಿ ಅಧ್ಯಾತ್ಮಸಮೃದ್ಧಿ ಎಲ್ಲವೂ ಮರಳಿ ಬರುವವು. ಶರಣು ಬಂದವರನ್ನು ಕರುಣೆಯಿಂದ ಕೈ ಹಿಡಿದು ಕಾಪಾಡುವ ದಯಾಸಿಂಧು ಆ ಶ್ರೀಹರಿ. ಅವನನ್ನೇ ನೀನು ಅರ್ಚಿಸು, ಭಜಿಸು, ಪೂಜಿಸು, ಆರಾಧಿಸು ಉಪಾಸಿಸು." ಬ್ರಹ್ಮದೇವರ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ತಪಸ್ಸಿಗೆ ತೆರಳಿದ. ಪಶ್ಚಾತ್ತಾಪತಪ್ತನಾದ ಆ ಧನ್ವಂತರಿ ಹಿಮಗಿರಿಯನ್ನು ಸಾರಿದ. ಶಿಖರವನ್ನು ಏರಿದ. ಅಲ್ಲಿ ನಿಂತು ಬದ್ಧಾಂಜಲಿಪುಟನಾಗಿ ವಿಷ್ಣುವನ್ನು ಸ್ತುತಿಸಿದ.

### ಧನ್ವಂತರಿಃ ಉವಾಚ

"ಜಯ ವಿಷ್ಣೋ ಜಯಾಽಚಿಂತ್ಯ ಜಯ ಜಿಷ್ಣೋ ಜಯಾಽಚ್ಯುತ ।
ಜಯ ಗೋಪಾಲ ಲಕ್ಷ್ಮೀಶ ಜಯ ಕೃಷ್ಣ ಜಗನ್ಮಯ ॥

ಜಯ ಭೂತಪತೇ ನಾಥ ಜಯ ಪನ್ನಗಶಾಯಿನೇ
ಜಯ ಸರ್ವಗ ಗೋವಿಂದ ಜಯ ವಿಶ್ವಕೃತೇ ನಮಃ ॥

ಜಯ ಕಾಮದ ಕಾಮತ್ವಂ ಜಯ ರಾಮ ಗುಣಾರ್ಣವ
ಜಯ ಪುಷ್ಟಿದ ಪುಷ್ಟೀಶ ಜಯ ಕಲ್ಯಾಣದಾಯಿನೇ ॥

ಜಯ ವಾಮನ ವಿತ್ತೇಶ ಜಯ ಧೂಪಪತಾಕಿನೇ
ಜಯ ಸರ್ವಸ್ಯ ಜಗತೋ ದಾತೃಮೂರ್ತೇ ನಮೋಽಸ್ತುತೇ ॥

ತ್ವಮೇವ ಲೋಕತ್ರಯವರ್ತಿ ಜೀವ ನಿಕಾಯ ಸಂಕ್ಲೇಶವಿನಾಶದಕ್ಷಃ
ಶ್ರೀ ಪುಂಡರೀಕಾಕ್ಷ ಕೃಪಾನಿಧೇ ತ್ವಂ ನಿಧೇಹಿ ಪಾಣಿಂ
ಮಮಮೂರ್ಧ್ನಿ ವಿಷ್ಣೋ ॥

## ಮೂರು ಸಲ ಮಹೇಂದ್ರ ಪದದಿಂದ ಉರುಳಿದ ಮಹೀಪಾಲ

ಹೀಗೆ ಧನ್ವಂತರಿ ಸ್ತೋತ್ರ ಮಾಡಲು ಭಗವಂತನು ಸುಪ್ರೀತನಾದ. ಶಂಖಚಕ್ರಗಳನ್ನು ಧರಿಸಿದ ಆ ಪರಮೇಶ್ವರನು ಸುಪ್ರಸನ್ನನಾಗಿ ಧನ್ವಂತರಿಗೆ ವರದಹಸ್ತ ನೀಡಿದನು. ''ನಿನಗೆ ಬೇಕಾದುದನ್ನು ಕೇಳಿಕೋ'' ಎಂದು ಹೇಳಿದನು.

ಆಗ ದೂರದೃಷ್ಟಿಯ ಆ ಧನ್ವಂತರಿಯು ಭಗವಂತನ ಅದ್ಭುತವಾದ ಸಾಮರ್ಥ್ಯವನ್ನು ಚೆನ್ನಾಗಿ ಅರಿತವನಾದುದರಿಂದ ಧೈರ್ಯಮಾಡಿ ಒಂದು ವರವನ್ನು ಕೇಳಿಕೊಂಡ. ವರಪ್ರದನಾದ ಆ ಶ್ರೀಹರಿಯು ಒಮ್ಮೆ ಬೇಕಾದುದನ್ನು ಕೊಡುವೆನು ಎಂದು ಹೇಳಿದ ಬಳಿಕ ತಾನು ಏನು ಕೇಳಿದರೂ ಆ ವರವು ನಿಶ್ಚಿತವಾಗಿಯೂ ತನಗೆ ದೊರಕುವುದು ಎಂಬ ಭರವಸೆಯಿಂದ ಭಗವಂತನನ್ನು ಕೇಳಿಕೊಂಡ ''ನೀನು ನಿಜವಾಗಿಯೂ ನನ್ನ ಮೇಲೆ ಪ್ರಸನ್ನನಾಗಿದ್ದರೆ ದೇವೇಂದ್ರನ ದಿವ್ಯವಾದ ಆ ಸ್ವರ್ಗಾಧಿಪತ್ಯವನ್ನು ನನಗೆ ಕರುಣಿಸು ಆದರಿಂದ ನಾನು ಧನ್ಯನೆಂದು ಭಾವಿಸುವೆ. ಆ ಇಂದ್ರ ಪದವಿಯ ಆಸೆಯಿಂದಲೇ ನಾನು ಹಿಂದೆ ಮತ್ತು ಇಂದು ಈ ಘೋರತಪಸ್ಸನ್ನು ಆಚರಿಸಿದ್ದೇನೆ. ನನ್ನ ತಪಸ್ಸಿಗೆ ನೀನು ಈಗ ಪ್ರೀತನಾಗಿರುವೆ. ನಿನ್ನ ಹೊರತು ಸ್ವರ್ಗಾಧಿಪತ್ಯವನ್ನು ನೀಡಲು ಬೇರೆ ಯಾರು ಸಮರ್ಥರು! ಶರಣಾಗತರಾದವರಿಗೆ ಕರುಣೆಯಿಂದ ಮನೋಭೀಷ್ಟವನ್ನೆಲ್ಲ ಪ್ರದಾನಮಾಡುವ ಕರುಣೆಯ ಕೈದಾರಿಯಾದ ನೀನು ನನ್ನ ಈ ಬಹುದಿನದ ಬೇಡಿಕೆಯನ್ನು ನೀಡು ನನ್ನನ್ನು ಕೃತಾರ್ಥನನ್ನಾಗಿ ಮಾಡು.''

''ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ ಸಮರ್ಥನಲ್ಲವೇ'' ಆ ಲಕ್ಷ್ಮೀಪತಿ! ಧನ್ವಂತರಿಯ ಈ ದುರ್ಲಭ ಬೇಡಿಕೆಯನ್ನು ಸ್ವಾಮಿ ಅನುಮೋದಿಸಿದ. ''ನಿನಗೆ ದಯಪಾಲಿಸಿದ್ದೇನೆ ಹೋಗು. ಆ ದೇವೇಂದ್ರ ಪದವಿಯನ್ನು'' ಎಂದು ಹರಿಸಿದ. ಆಗ ಸಂತೋಷಾತಿಶಯದಿಂದ ಚರಣಾರವಿಂದಗಳಿಗೆ ಪೊಡಮೊಟ್ಟ ಧನ್ವಂತರಿಯನ್ನು ಅನುಗ್ರಹಿಸಿ ಅಂತರ್ಧಾನ ಹೊಂದಿದ ಆ ಜಗದೀಶ್ವರ. ಶ್ರೀಹರಿಯ ವಿಶೇಷ ಅನುಗ್ರಹದಿಂದ ಧನ್ವಂತರಿಯು ಕಾಲ ಪ್ರಾಪ್ತವಾದಾಗ ಇಂದ್ರಪದವಿಯನ್ನು ಪಡೆದ. ಈ ಇಂದ್ರನು ತಾನು ಹಿಂದೆ ಮಾಡಿದ ಅನೇಕ ಪಾಪಗಳ ಫಲವಾಗಿ ಮೂರು ಬಾರಿ ತನ್ನ ಇಂದ್ರ ಪದವಿಯನ್ನು ಕಳೆದುಕೊಂಡ. ಆದರೂ ಭಗವಂತನ ಅನುಗ್ರಹದಿಂದ ಕೆಲವುಕಾಲ ಕಳೆದ ಬಳಿಕ ನರಸಿಂಹ ದೇವರ ಆರಾಧನೆಯಿಂದ ಮತ್ತೆ ತನ್ನ ಸ್ಥಾನವನ್ನು ಪಡೆದುಕೊಂಡ. ವೃತ್ರಾಸುರನನ್ನು ಕೊಂದಾಗ ಬಂದ ಬ್ರಹ್ಮಹತ್ಯಾ ಪಾಪದಿಂದ ಒಂದು ಸಲ ಇಂದ್ರಪದವಿಯನ್ನು ಕಳೆದುಕೊಂಡ. ಸಿಂಧುಸೇನನ ವಧೆಯಿಂದ ಎರಡನೇ ಬಾರಿ ಇಂದ್ರನ ರಾಜ್ಯವು ಹೋಯಿತು. ಅಹಲ್ಯಾಸಂಗದಿಂದ ಮತ್ತೊಮ್ಮೆ ಇಂದ್ರನಿಗೆ ಕುತ್ತು ಬಂದಿತ್ತು. ಎಷ್ಟೇ ಕುತ್ತು ಆಪತ್ತುಗಳು ಒದಗಿ ಬಂದರೂ ಶ್ರೀಹರಿಯ ಚರಣಗಳಿಗೆ ಶರಣುಹೋಗಿ ಅವನ ಧ್ಯಾನೋಪಾಸನೆಗಳಿಂದ ತನ್ನ ಸ್ವಸ್ಥಾನವನ್ನು ಮತ್ತೆ ಪಡೆಯುತ್ತಿದ್ದ.

ಹೀಗೆ ಮೇಲಿಂದ ಮೇಲೆ ದೇವತಾಸಿಂಹಾಸನವು ತನ್ನ ಕೈತಪ್ಪಿ ಹೋಗುತ್ತಿರುವುದನ್ನು ಕುರಿತು ದೇವೇಂದ್ರನಿಗೆ ಬಹಳ ವ್ಯಥೆಯಾಯಿತು. ಅದಕ್ಕಾಗಿ ಅವನು ತನ್ನ ಗುರುವು ಬೃಹಸ್ಪತ್ಯಾಚಾರ್ಯರ ಬಳಿ ಬಂದು ಅವರನ್ನು ಕೈಮುಗಿದು ಕೇಳಿದ ''ಗುರುಗಳೇ, ಮೇಲಿಂದ ಮೇಲೆ ನನಗೆ ರಾಜ್ಯಭ್ರಂಶವಾಗಲು ಕಾರಣವೇನು? ಮಧ್ಯ ಮಧ್ಯದಲ್ಲಿ ಆಗಾಗ ಸ್ಥಾನಭ್ರಷ್ಟನಾಗಿ ತಲೆಮರೆಸಿ ತಿರುಗುವುದಕ್ಕಿಂತ ದರಿದ್ರನಾಗಿರುವುದೇ ಒಂದು ರೀತಿಯಿಂದ ಒಳ್ಳೆಯದು ಎನಿಸುವುದು. ಇದಕ್ಕೆ ಏನಾದರೂ ಉಪಾಯವನ್ನು ಹೇಳಿರಿ.''

ಆಗ ಆ ಸುರಗುರುವು ಅದಕ್ಕೆ ಪರಿಹಾರ ಹೇಳಲು ಆಗದೇ ಇಂದ್ರನನ್ನು ಕರೆದುಕೊಂಡು ನನ್ನ ಬಳಿಗೆ ಬಂದು ನನ್ನನ್ನು ನಮಸ್ಕರಿಸಿ ಕೇಳಿದ ''ಪರಮಪೂಜನೀಯರಾದ ಹಂಸವಾಹನ, ಮಹಾಮಹಿಮನಾದ ಈ ಮಹೇಂದ್ರ ಮೇಲಿಂದ ಮೇಲೆ ತನ್ನ ಇಂದ್ರಪದವಿಗೆ ಎರವಾಗುವದಕ್ಕೆ ಕಾರಣವೇನು? ದಯವಿಟ್ಟು ಅವನ ರಾಜ್ಯಭ್ರಂಶದ ಕಾರಣವನ್ನು ತಿಳಿಸಿರಿ.'' ಆಗ ನಾನು ಬಹಳ ಹೊತ್ತು ಯೋಚಿಸಿದೆ. ಆ ದೇವಗುರುವಿಗೆ ಹೇಳಿದೆ ''ಸುರಾಚಾರ್ಯ ಈ ಇಂದ್ರನು ಖಂಡಧರ್ಮ ಎಂಬ ದೋಷದಿಂದ ಆಗಾಗ ಪದಭ್ರಷ್ಟ ನಾಗುತ್ತಾನೆ. ಖಂಡದೋಷದ ಪ್ರಕಾರವನ್ನು ಹೇಳುತ್ತೇನೆ ಕೇಳು. ಕರ್ಮವನ್ನು ಮಾಡುವಾಗ ಉಕ್ತಕಾಲವನ್ನು ಮೀರಿ ಮಾಡುವುದು. ಶ್ರದ್ಧೆಯಿಲ್ಲದೇ ಮಂತ್ರಗಳನ್ನು ತಪ್ಪಾಗಿ ಉಚ್ಚರಿಸುವುದು. ಬ್ರಾಹ್ಮಣರಿಗೂ ಋತ್ವಿಜರಿಗೂ ಉಚಿತ ದಕ್ಷಿಣೆ ಕೊಡದಿರುವುದು ದಕ್ಷಿಣೆಗೆ ಯೋಗ್ಯವಲ್ಲದ ವಸ್ತುವನ್ನು ದಾನಮಾಡುವುದು. ದೇವತೆಗಳನ್ನು, ಬ್ರಾಹ್ಮಣರನ್ನೂ ಅವಮಾನಿಸುವುದು. ಹರಿದ್ವೇಷ, ಗುರುದ್ವೇಷ, ಬ್ರಹ್ಮದ್ರೋಹ ಮೊದಲಾದ ಪಾಪಕೃತ್ಯಗಳಿಂದ ಖಂಡಧರ್ಮ ಎಂಬ ದೋಷವು ತಟ್ಟುವುದು. ಇದರಿಂದ ಮನೋವೈಕ್ಲವ್ಯವೂ, ಸ್ಥಾನಭ್ರಂಶವೂ ಆಗುವವು.

ಅಮರಾಚಾರ್ಯ, ಈಗ ಸ್ಥಾನಭ್ರಷ್ಟನಾದ ಈ ಇಂದ್ರನ ಹಿಂದಿನ ಕಥೆ ಹೇಳುವೆ ಕೇಳು. ಇವನು ಪೂರ್ವಕಾಲದಲ್ಲಿ ಆಯುಷರಾಜನ ಮಗನಾದ ಧನ್ವಂತರಿ ಎಂಬ ಒಬ್ಬ ರಾಜನು ಆಗಿದ್ದ, ಹೈಮಾಚಲ ಶೃಂಗಾಂಗಣದಲ್ಲಿ ಬಹುತೀಕ್ಷ್ಣವಾದ ತಪೋನುಷ್ಠಾನದಲ್ಲಿ ತೊಡಗಿದ್ದ. ಇವನ ಜನ್ಮವೈರಿಯಾದ ತಮಸಾಸುರನು ಇವನ ತಪೋಭಂಗವನ್ನು ಮಾಡಲು ಓರ್ವ ಮಾಯಾವಿನಿ ಮಹಿಳೆಯನ್ನು ಕಳಿಸಿದ. ಅವಳ ಸ್ನೇಹವನ್ನು ನೆಚ್ಚಿ, ಮೋಹದಿಂದ ಮೆಚ್ಚಿ ಮರುಳಾದ ಇವನು ತನ್ನ ತಪೋಬಲವನ್ನೆಲ್ಲ ಹಾಳುಮಾಡಿಕೊಂಡ. ಕೆಟ್ಟ ಮೇಲೆ ಇವನಿಗೆ ಬುದ್ಧಿ ಬಂದಿತು. ಪಶ್ಚಾತ್ತಾಪದಿಂದ ಪರಿಪೂತನಾದ ಇವನು ಪುನಃ ಪಟ್ಟು ಹಿಡಿದು ಪರಮಾತ್ಮನನ್ನು ಕುರಿತು ಅತ್ಯುತ್ಕಟವಾದ ತಪವನ್ನು ತಪಿಸಿದ. ಉತ್ಕಟ ಭಕ್ತಿಯಿಂದ ಭಗವದಾರಾಧನೆ ಮಾಡಿದ. ಅದರಿಂದ ನಾರಾಯಣನು ಇವನ ಮೇಲೆ ದಯಾರ್ದ್ರವಾದ ದೃಷ್ಟಿಯನ್ನು ಇರಿಸಿ ಹರಿಸಿ ಅನುಗ್ರಹಿಸಿದ. ಮತ್ತು ಆ ಧನ್ವಂತರಿಯ ಅಪೇಕ್ಷೆಯ ಮೇರೆಗೆ ಅವನಿಗೆ ಮಹೇಂದ್ರ ಪದವಿಯನ್ನು ಕೊಡಮಾಡಿದ. ಅಂದಿನ ಆ ಧನ್ವಂತರಿಯೇ ಇಂದಿನ ಇಂದ್ರನಾಗಿ ಸ್ವರ್ಗ-ಸಿಂಹಾಸನದಲ್ಲಿ ಆಸೀನನಾಗಿದ್ದಾನೆ. ಆದರೂ ಅವನು ಹಿಂದೆ ಮಾಡಿದ ಖಂಡಧರ್ಮದ ದೋಷದಿಂದ ಅವನಿಗೆ ಪೌನಃಪುನ್ಯದಿಂದ ಈ ಸ್ಥಾನಭ್ರಂಶವು ಆಗುವದು.'' ಆಗ ಬ್ರಹ್ಮಸ್ಪತ್ಯಾಚಾರ್ಯನು ಮತ್ತೆ ನನ್ನನ್ನು ಕೇಳಿದ. ''ಪೂಜ್ಯ ಕಮಲಾಸನ ಆ ಖಂಡ ಧರ್ಮದೋಷವು ಹೇಗೆ ಪರಿಹಾರವಾಗುವದು? ಆ ದೋಷ ಪರಿಹಾರದ ಉಪಾಯವನ್ನು ದಯವಿಟ್ಟು ನನಗೆ ತಿಳಿಸಿರಿ''

ಅವನ ಈ ಬಿನ್ನಹವನ್ನು ಕೇಳಿ ನಾನು ಒಂದು ಕ್ಷಣ ಆಲೋಚನೆಗೈದೆ. ಆ ಇಂದ್ರ ಬೃಹಸ್ಪತಿ ಇಬ್ಬರನ್ನೂ ಕುರಿತು ಹೇಳಿದೆ. "ಸುರುಗುರು ಹಾಗೂ ಸುರಪತಿಗಳೇ, ನೀವಿಬ್ಬರೂ ಈಗ ಗೌತಮೀ ತೀರಕ್ಕೆ ಹೋಗಿರಿ ಅಲ್ಲಿ ಸ್ನಾನಮಾಡಿ ಹರಿಹರರನ್ನು ಸ್ತೋತ್ರ ಮಾಡಿ, ಆರಾಧಿಸಿ, ಉಪಾಸಿಸಿ, ಪೂಜಿಸಿರಿ. ಆ ಶಿವವಿಷ್ಣು ಎಂಬ ದೇವೋತ್ತಮರಿಂದ ಎಲ್ಲ ದೋಷಗಳು ಪರಿಹಾರ ಆಗುತ್ತವೆ." ಬ್ರಹ್ಮದೇವರ ಆದೇಶದಂತೆ ಅವರಿಬ್ಬರೂ ಸುರಪುರದ ದೊರೆ-ಗುರುಗಳು ಗೌತಮೀನದಿಗೆ ಪ್ರಯಾಣ ಬೆಳೆಸಿದರು. ಆ ಪವಿತ್ರವಾದ ನದಿಯ ತೀರ್ಥೋದಕದಲ್ಲಿ ಸ್ನಾನಮಾಡಿ ದೇವತಾ ಧುರೀಣರಾದ ಹರಿ-ಹರರನ್ನು ಸ್ತುತಿಸಿದರು.

ಇಂದ್ರ:-

ನಮೋ ವತ್ಸಾಯ ಕೂರ್ಮಾಯ ವರಾಹಾಯ ನಮೋ ನಮಃ ।
ನರಸಿಂಹಾಯ ದೇವಾಯ ವಾಮನಾಯ ನಮೋ ನಮಃ ॥

ನಮೋಽಸ್ತು ಹಯರೂಪಾಯ ತ್ರಿವಿಕ್ರಮ ನಮೋಽಸ್ತು ತೇ
ನಮೋಸ್ತು ಬುದ್ಧರೂಪಾಯ ರಾಮರೂಪಾಯ ಕಲ್ಕಿನೇ ॥

ವರುಣೇಂದ್ರ ಸ್ವರೂಪಾಯ ನಮಸ್ತ್ರೈಲೋಕ್ಯ ರೂಪಿಣೇ ।
ಬಿಭ್ರತ್ ಸರಸ್ವತೀಂ ವಕ್ತ್ರೇ ಸರ್ವಜ್ಞೋಽಸಿ ನಮೋಽಸ್ತು ತೇ ॥

ತಾವನ್ನಿಸ್ರೀಕತಾ ಪುಂಸಾಂ ಮಾಲಿನ್ಯಂ ದೈನ್ಯಮೇವವಾ ।
ಯಾವನ್ನಯಾಂತಿ ಶರಣಂ ಹರೇ ತ್ವಾಂ ಕರುಣಾರ್ಣವಮ್ ॥

ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಮುಂತಾದ ಅವತಾರಗಳನ್ನು ಮಾಡಿದ ಪರಮಾತ್ಮನಿಗೆ ನಮೋ ನಮಃ. ಹಯಗ್ರೀವ ರೂಪಿಯೂ ತ್ರಿವಿಕ್ರಮ ಸ್ವರೂಪಿಯೂ ಆದ ನಿನಗೆ ನಮಸ್ಕಾರ. ಬುದ್ಧರೂಪ, ರಾಮರೂಪ ಮತ್ತು ಕಲ್ಕಿ ಅವತಾರಗಳನ್ನು ತಾಳಿದ ಶ್ರೀಹರಿಗೆ ನನ್ನ ನಮಸ್ಕಾರ. ಅನಂತ ಅಚ್ಯುತ ಎಂದು ಹೆಸರಾದ ಪರಶುರಾಮನಿಗೆ ನನ್ನ ಸಾಷ್ಟಾಂಗ ಪ್ರಣಾಮ ವರುಣ- ಇಂದ್ರ ಯಮ ಇವರಲ್ಲಿ ಆಯಾ ಹೆಸರುಗಳಿಂದ ಇದ್ದು ಕಾರ್ಯಗಳನ್ನು ಮಾಡಿಸುವ ಸರ್ವಾಂತರ್ಯಾಮಿಗೆ ವಂದನೆ. ಮೂರು ಲೋಕಗಳನ್ನೆಲ್ಲ ವ್ಯಾಪಿಸಿದ ಪರಮೇಶ್ವರನಾದ ಆ ಶ್ರೀಹರಿಗೆ ನಮನಗಳು, ಸರಸ್ವತಿಯನ್ನು ಮುಖದಲ್ಲಿ ಧರಿಸಿದ ಸರ್ವಜ್ಞನಾದ ಭಗವಂತನೇ ನಿನಗೆ ನನ್ನ ಪ್ರಣಾಮಗಳು. ಮಾನವರಿಗೆ ದಾರಿದ್ರ್ಯವಾಗಲೀ, ದೋಷವಾಗಲೀ, ದೈನ್ಯವಾಗಲೀ ಶ್ರೀಹರಿಯ ಚರಣಗಳಿಗೆ ಶರಣು ಹೋಗುವವರೆಗೆ ಮಾತ್ರ ಇರುವವು. ಕರುಣಾವರುಣಾಲಯನಾದ ಆ ಲಕ್ಷ್ಮೀಪತಿಗೆ ಒಮ್ಮೆ ಮೊರೆಹೊಕ್ಕರೆ ಸಾಕು ದುಃಖ ದೈನ್ಯದಾರಿದ್ರ್ಯಗಳು ತಾವಾಗಿಯೇ ದೂರದೂರವಾಗಿ ಬಿಡುವವು.

ಬೃಹಸ್ಪತಿ

ಸ್ವರ್ಗಸ್ಯ ಮೋಕ್ಷಸ್ಯ ಜಗನ್ನಿವಾಸ ಸೋಪಾನ ಪಂಕ್ತಿಸ್ತವ ಭಕ್ತಿರೇಷಾ ।
ತ್ವತ್ಪಾದ ಸಂಪ್ರಾಪ್ತಿ ಫಲಾಪ್ತಯೇ ತು ಸೋಪಾನಪಂಕ್ತಿಂ
ನವದಂತಿಧೀರಾಃ ॥

ಜಗದಾಧಾರನಾದ ರುದ್ರದೇವ, ನಿನ್ನಲ್ಲಿ ಇಟ್ಟಿರುವ ಅವಿಚ್ಛಿನ್ನ ಭಕ್ತಿಯು ಸ್ವರ್ಗಕ್ಕೂ ಮೋಕ್ಷಕ್ಕೂ ಮೆಟ್ಟಿಲು ಎಂದು ಬಲ್ಲವರು ಹೇಳುತ್ತಾರೆ. ಆದರೆ ನಿನ್ನ ಚರಣಪ್ರಾಪ್ತಿಯಾಗದೇಕಾದರೆ ಯಾವದು ಮೆಟ್ಟಿಲು ಎನ್ನುವದನ್ನು ಮಾತ್ರ ಯಾವ ಬುದ್ಧಿವಂತನೂ ಹೇಳುವದಿಲ್ಲ. ಸ್ವರ್ಗಮೋಕ್ಷಗಳಿಗೆ ಮಾತ್ರ ಸೋಪಾನಗಳುಂಟು ಆದರೆ ನಿನ್ನ ಪಾದಾರವಿಂದ ಪ್ರಾಪ್ತಿಗೆ ಬೇರೆ ಸೋಪಾನವಿಲ್ಲ. ಅದಕ್ಕೆ ನಿನ್ನ ಅನುಗ್ರಹವೇ ಸೋಪಾನ ''ಯಮ್ಯೈವೇಷ ವೃಣುತೇ ತೇನ ಲಭ್ಯಃ' ನೀನಾಗಿ ನಿನ್ನ ಭಕ್ತನೆಂದು ಯಾವನನ್ನು ಪರಿಗ್ರಹಿಸುವೆಯೋ ಅವನಿಗೆ ಮಾತ್ರ ಲಭ್ಯ ಈ ನಿನ್ನ ಪಾದಾರವಿಂದದ್ವಂದ್ವ.

ತಸ್ಮಾದ್ದಮಾಲೋ ಮಮಭಕ್ತಿರಸ್ತು
ನ್ವೆವಾಸ್ತ್ಯುಪಾಯಸ್ತವ ರೂಪ ಸೇವಾ ।
ಆಶ್ರೀಯ ಮಾಲೋಕ್ಯ ಮಹತ್ವಮೀಶ
ಪಾಪೇಷು ಚಾಸ್ಮಾಸು ಕುರುಪ್ರಸಾದಮ್ ॥

ಆದುದರಿಂದ ಕರುಣಾ ಮೂರ್ತಿಯಾದ ಮಹಾದೇವ! ನನಗೆ ನಿನ್ನಲ್ಲಿ ನಿರಂತರ ಭಕ್ತಿ ಇರಲಿ ನಿನ್ನನ್ನು ಹೊಂದಲು ಬೇರೆ ಉಪಾಯವು ಯಾವುದೂ ಇರುವುದಿಲ್ಲ. ನಿನ್ನ ಸ್ತೋತ್ರ ಮಾಡುವುದೇ ನನ್ನ ನಿಜವಾದ ಸೇವೆ. ನನ್ನನ್ನು ನಿನ್ನ ಆಶ್ರಿಯ ಭಕ್ತನೆಂದು ಪರಿಗ್ರಹಿಸು ಪಾಪಿಗಳಾದ ನಮ್ಮ ಮೇಲೆ ದಯೆದೋರು. ನಿನ್ನ ಪ್ರಸಾದವನ್ನು ನಮಗೆ ನೀಡು.

ಹೀಗೆ ಇಂದ್ರ ಬೃಹಸ್ಪತಿಯರಿಂದ ಸಂಸ್ತುತರೂ ಸಮುಪಾಸಿತರೂ ಆದ ಹರಿಹರರು ಅವರಿಗೆ ಪ್ರಸನ್ನರಾಗಿ ಅಪೇಕ್ಷಿತವಾದ ವರ ಬೇಡಿ ಎಂದು ಹೇಳಿದರು. ಆಗ ದೇವೇಂದ್ರನು ವಿನಯದಿಂದ ವಂದಿಸಿ ಆ ಹರಿಹರನನ್ನು ಕೇಳಿಕೊಂಡ. ''ಪ್ರಪಂಚದ ಸೃಷ್ಟಿಕರ್ತಾರರಾದ ಹರಿಹರರೆ, ನನ್ನ ಸುರಸಾಮ್ರಾಜ್ಯವು ಮೇಲಿಂದ ಮೇಲೆ ನನ್ನಿಂದ ಕಳೆದುಹೋಗುತ್ತದೆ ಮತ್ತೆ ಹರಿಯ ಆರಾಧನೆಯಿಂದ ಪುನಃ ಪ್ರಾಪ್ತಿಯಾಗುತ್ತದೆ. ಇದು ನನ್ನ ಖಂಡ ದೋಷರೂಪವಾದ ಹಿಂದಿನ ಪಾಪದಿಂದ ಸಂಭವಿಸುತ್ತದೆ ಎಂದು ಹಿರಿಯರು ಹೇಳಿದ್ದಾರೆ. ಅದಕ್ಕಾಗಿ ನಾನೀಗ ತಮಗೆ ಶರಣು ಬಂದಿದ್ದೇನೆ. ತಪಃ ಪರಿಪೂತನಾಗಿ ನಿಮ್ಮ ಸ್ತೋತ್ರ ಮಾಡಿದ್ದೇನೆ ಸುಪ್ರಸನ್ನರಾದ ತಾವು ನನಗೆ ಆ ಸ್ವರ್ಗಾಧಿಪತ್ಯವು ಮೇಲಿಂದ ಮೇಲೆ ಕೈತಪ್ಪಿ ಹೋಗದಂತೆ ಅನುಗ್ರಹಿಸಿರಿ. ನಾನು ಆ ಇಂದ್ರಸಿಂಹಾಸನದಲ್ಲಿ ಚಿರಕಾಲ ಸ್ಥಿರನಾಗಿ ನಿಲ್ಲುವಂತೆ ಅನುಗ್ರಹ ಮಾಡಿರಿ.'

ಇಂದ್ರನ ಈ ಬೇಡಿಕೆಯನ್ನು ಶಿವ ಕೇಶವರಿಬ್ಬರೂ ತಥಾಸ್ತು ಎಂದು ಅನುಗ್ರಹಿಸಿದರು. ಅವರಿಗೆ ಹೇಳಿದರು. ''ಇಂದ್ರ-ಬೃಹಸ್ಪತಿಗಳೇ, ಗೌತಮೀತೀರದಲ್ಲಿ ಶ್ರಿದೈವತ್ಯ ಎಂಬ ತೀರ್ಥವಿರುವದು. ಆ ತೀರ್ಥದಲ್ಲಿ ನಾನು ಈಗ ಹೇಳುವ ಮಂತ್ರದಿಂದ ಸ್ನಾನ ಮಾಡಿರಿ ಮತ್ತು ಅದೇ ಮಂತ್ರದಿಂದ ಬೃಹಸ್ಪತಿಯು ನಮ್ಮನ್ನು ಧ್ಯಾನಿಸುತ್ತ ಇಂದ್ರನಿಗೆ ಅಭಿಷೇಕ ಮಾಡಿಸಲಿ ಅದರಿಂದ ಇಂದ್ರನಿಗೆ ಐಶ್ವರ್ಯವು ಸ್ಥಿರವಾಗುವುದು.

ಇಹ ಜನ್ಮಾನಿ ಪೂರ್ವಸ್ಮಿನ್ ಯತ್ಕಿಂಚಿತ್ ಸುಕೃತಂ ಕೃತಮ್ ।
ತತ್ ಸರ್ವಂ ಪೂರ್ಣತಾಂ ಯಾತು ಗೋದಾವರಿ ನಮೋಽಸ್ತು ತೇ ।

ಈ ಮಂತ್ರದಿಂದ ಗೌತಮೀನದಿಯಲ್ಲಿ ಸ್ನಾನಮಾಡಿ ಶಿವಕೇಶವರು ಹೇಳಿದಂತೆ ಬೃಹಸ್ಪತಿಯು ದೇವೇಂದ್ರನಿಗೆ ಗೌತಮೀನದಿಯಲ್ಲಿ ಅಭಿಷೇಕ ಮಾಡಿದರು.

ಆ ಅಭಿಷೇಕದ ನೀರಿನಿಂದ ನದಿಯೊಂದು ಜನಿಸಿ ಮಂಗಲಾ ನದಿ ಎಂದು ಕರೆಯಲ್ಪಟ್ಟಿತು. ಆ ನದಿಯು ಗೌತಮೀನದಿಗೆ ಸೇರಿ ಪುಣ್ಯತಮವಾದ ಸಂಗಮ ಸ್ಥಳವಾಯ್ತು. ಇಂದ್ರನು ಮಾಡಿದ ಶ್ರೀಹರಿಯ ಸ್ತೋತ್ರದ ಮಹಿಮೆಯಿಂದ ಪ್ರೀತನಾದ ಆ ಪುರುಷೋತ್ತಮನು ಆ ಸುರೇಶ್ವರನಿಗೆ ಸ್ಥಿರವಾದ ಸ್ವರ್ಗಾಧಿಪತ್ಯವನ್ನು ಕರುಣಿಸಿದ. ಇಂದ್ರನಿಗೆ ತ್ರಿಲೋಕರಾಜ್ಯವನ್ನು ಕೊಟ್ಟಿದ್ದರಿಂದ ಶ್ರೀಹರಿಗೆ ಗೋವಿಂದ ಎಂಬ ಹೆಸರು ಬಂದಿತು.

**ತನ್ನಾಮ್ನಾ ಚಾಽಪಿ ವಿಖ್ಯಾತೋ ಗೋವಿಂದ ಇತಿ ತತ್ರ ಚ ।**
**ತ್ರಿಲೋಕ ಸಂಮಿತಾ ಲಬ್ಧಾ ತೇನ ಗೌರ್ವಜ್ರಧಾರಿಣಾ ॥**

ಮೂರು ಲೋಕವನ್ನು ಒಳಗೊಂಡ ಭೂಮಿಯೆಲ್ಲವೂ ಗೋವಿಂದ ಎಂದು ಕರೆಯಲ್ಪಡುತ್ತದೆ. ಅದನ್ನು ಇಂದ್ರನಿಗೆ ದಯಪಾಲಿಸಿ ವಿಷ್ಣುವು ಗೋವಿಂದ ಎಂದು ಪ್ರಸಿದ್ಧನಾದ. ಶ್ರೀಹರಿಯು ಇಂದ್ರನಿಗೆ ಕೊಟ್ಟ ದೇವರಾಜ್ಯವು ಪಾರ್ವತೀಪತಿಯ ಅನುಗ್ರಹದಿಂದ ಸುಸ್ಥಿರವಾಯ್ತು.

ದೇವಗುರುವು ಆ ಪರಶಿವನನ್ನು ಸ್ತೋತ್ರ ಮಾಡಿದ ಸ್ಥಳದಲ್ಲಿ ಮಹಾದೇವನು ಸಿದ್ಧೇಶ್ವರನೆಂಬ ಹೆಸರಿನಿಂದ ಲಿಂಗರೂಪದಿಂದ ನೆನೆಸಿದ್ದಾನೆ. ಮತ್ತು ಹರಿಯು ಇಂದ್ರನನ್ನು ಹರಸಿ ಸ್ವರ್ಗಾಧಿಪತ್ಯವನ್ನು ಕರುಣಿಸಿದ ಸ್ಥಳದಲ್ಲಿ ಗೋವಿಂದ ತೀರ್ಥ, ಮಂಗಳಾಸಂಗಮ, ಕೂರ್ಮತೀರ್ಥ, ಬೃಹಸ್ಪತಿತೀರ್ಥ ಎಂಬ ಅನೇಕ ತೀರ್ಥಗಳು ಆಗಿರುತ್ತವೆ. ಈ ಪುಣ್ಯತೀರ್ಥಗಳಲ್ಲಿ ಸ್ನಾನ-ದಾನ ಮಾಡಿದರೆ ಅದರಿಂದ ಅನಂತ ಪುಣ್ಯ ಲಭಿಸುವುದು. ಪಿತೃಗಳಿಗೆ ಈ ಎಲ್ಲ ತೀರ್ಥಗಳೂ ಅತ್ಯಂತ ಪ್ರೀತ್ಯಾಸ್ಪದ ರಾಜ್ಯಭ್ರಷ್ಟರಾದವರು ಐಶ್ವರ್ಯಕಳೆದು ದರಿದ್ರರಾದವರು ಈ ತೀರ್ಥಮಾಹಾತ್ಮ್ಯ ಶ್ರವಣ ಮಾಡಿದರೆ ಅವರಿಗೆ ನಷ್ಟ ಸ್ಥಾನ ನಷ್ಟೈಶ್ವರ್ಯಗಳು ಪುನಃ ಪ್ರಾಪ್ತವಾಗುವವು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು*

—○—

## ರಾಮತೀರ್ಥ

ಅಧ್ಯಾಯ - ೨೯

**ಬ್ರಹ್ಮ:-** ಈ ಗೌತಮೀ ತೀರದಲ್ಲಿ ರಾಮತೀರ್ಥವಿದೆ. ಈ ತೀರ್ಥದ ಹೆಸರು ಹೇಳಿದರೂ ಸರಿ. ಕೇಳಿದರೂ ಸರಿ. ಭ್ರೂಣಹತ್ಯೆಯಂಥ ಮಹಾಪಾಪಗಳು ಪರಿಹಾರವಾಗುವವು.

ಹಿಂದೆ ಸೂರ್ಯವಂಶದಲ್ಲಿ ದಶರಥ ಎಂಬ ಪ್ರಸಿದ್ಧ ಅರಸನು ಇದ್ದ. ಅವನು ದೇವೇಂದ್ರನಂತೆ ಬಲಿಷ್ಠ, ಬಲಿಚಕ್ರವರ್ತಿಯಂತೆ ದಾನಿ ವಂಶಪರಂಪರೆಯಿಂದ ಬಂದ ಅಯೋಧ್ಯಾ ಸಾಮ್ರಾಜ್ಯವನ್ನು ವೈಭವದಿಂದ ಆಳುತ್ತಿದ್ದ. ಅವನಿಗೆ ಕೌಸಲ್ಯಾ, ಸುಮಿತ್ರಾ, ಕೈಕೇಯಿ ಎಂಬ ಮೂವರು ರಾಣಿಯರು. ಮೂವರೂ ರೂಪವತಿಯರು. ಸತ್ಕುಲ ಪ್ರಸೂತರು, ಗುಣಗಣಗಳು. ಬ್ರಹ್ಮಜ್ಞಾನಿಗಳಾದ ವಶಿಷ್ಠರೇ ಅವನ ಕುಲಪುರೋಹಿತರು. ಅವನ ಶಾಸನ ಕಾಲದಲ್ಲಿ ಆ ರಾಜ್ಯದಲ್ಲಿ ಅತಿವೃಷ್ಟಿಯಿಲ್ಲ ಅನಾವೃಷ್ಟಿಯಿಲ್ಲ. ಕ್ಷಾಮಡಾಮರಗಳ ಹೆಸರು ಇಲ್ಲ. ಜನರೆಲ್ಲರೂ ಹೃಷ್ಟಪುಷ್ಟರಾಗಿದ್ದರು. ಎಲ್ಲ ಪ್ರಜೆಗಳೂ

ವರ್ಣಾಶ್ರಮ ಉಚಿತವಾದ ಧರ್ಮಕರ್ಮಗಳನ್ನು ಆಚರಿಸುತ್ತಿದ್ದರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯಶೂದ್ರ ಈ ನಾಲ್ಕೂ ಮಾನದವರೂ ಆಚಾರಸಂಪನ್ನರಾಗಿದ್ದರು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮದ ಜನರೂ ಸ್ವೋಚಿತಕರ್ಮಾನುಷ್ಠಾನದಲ್ಲಿ ತತ್ಪರರಾಗಿದ್ದರು. ಆ ಅಯೋಧ್ಯೆಯ ಅರಸನು ನ್ಯಾಯದಿಂದ ರಾಜ್ಯವನ್ನು ಆಳುತ್ತಿದ್ದಾಗ ಒಂದು ವಿಚಿತ್ರ ಸನ್ನಿವೇಶ ಒದಗಿಬಂದಿತು. ನಾಕಲೋಕದಲ್ಲಿ ಘನಘೋರ ಸಂಗ್ರಾಮ ಮಸಗಿತ್ತು. ದೇವದಾನವರಲ್ಲಿ ಜಯಲಕ್ಷ್ಮೀ ಮಿಂಚಿನಂತೆ ಚಂಚಲ. ಒಮ್ಮೆ ದೇವತೆಗಳ ಕಡೆಗೆ ಒಲಿದು ಬಂದರೆ ಮತ್ತೊಮ್ಮೆ ರಾಕ್ಷಸರ ಕೊರಳಿಗೆ ಮಾಲೆ ಹಾಕುತ್ತಿದ್ದಳು. ಆಗ ದೇವದಾನವರು ಹರಿ-ಹರರಿಗೆ ಮೊರೆ ಇಟ್ಟರು. ಆಗ ಒಮ್ಮೆಲೇ ಅಶರೀರವಾಣಿ "ನರಲೋಕದ ದೊರೆಯಾದ ದಶರಥ ಯಾರ ಪಕ್ಷದಲ್ಲಿ ನಿಂತು ಹೋರಾಡುವನೋ ಅವರಿಗೆ ಗೆಲವು ನಿಶ್ಚಿತ ದಶರಥನನ್ನು ಎದುರಿಸುವವರು ಸೋಲು-ಸಾವುಗಳಿಗೆ ಈಡಾಗುವರು."

ಈ ದಾನುಲಿಯ ವಿಶೇಷ ಸೂಚನೆಯನ್ನು ತಿಳಿದು ದೇವದಾನವರೀರ್ವರೂ ಧರಾತಲದ ಕಡೆಗೆ ಧಾವಿಸಿದರು. ದಶರಥರಾಜನನ್ನು ತಮ್ಮ ಪಕ್ಷದಲ್ಲಿ ಸೇರಿಸಿಕೊಳ್ಳಲು ಇಬ್ಬರಿಗೂ ತವಕ, ಹುರುಪು, ಹುಟ್ಟಿತ್ತು. ಆಗ ದೇವೇಶ್ವರನಾದ ವಾಯುದೇವನು ಮುಂಚಿತವಾಗಿ ಅಯೋಧ್ಯೆಗೆ ಆಗಮಿಸಿದ. ಗುಟ್ಟಾಗಿ ಆ ಅಯೋಧ್ಯೆಯ ಅರಸನಿಗೆ ದೈತ್ಯ-ದಾನವರ ಪಕ್ಷದಲ್ಲಿ ಪ್ರವೇಶ ಮಾಡದೇ ಸುರರ ಪರವಾಗಿ ನಿಂತು ಯುದ್ಧ ಮಾಡಬೇಕು ಎಂದು ಹೇಳಿದ. ಅದಕ್ಕೆ ಆನಂದದಿಂದ ಒಪ್ಪಿದ ಆ ದಶರಥ ಮಹಾರಾಜ.

ಮುಂದೆ ಕೆಲವೇ ಸಮಯದಲ್ಲಿ ದೈತ್ಯರು ಬಂದರು. ದಶರಥನಿಗೆ ತಮ್ಮ ಪಕ್ಷಕ್ಕೆ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಅದಕ್ಕೆ ದಶರಥನು "ನಾನು ಈ ಮೊದಲೇ ದೇವತೆಗಳಿಗೆ ಮಾತು ಕೊಟ್ಟಾಗಿದೆ. ಅದನ್ನು ಮೀರುವದು ಸಾಧ್ಯವಿಲ್ಲ. ಆದುದರಿಂದ ನಾನು ದೇವಪಕ್ಷದಲ್ಲಿ ನಿಂತೇ ನಿಮ್ಮೊಡನೆ ಯುದ್ಧ ಮಾಡುವ ಎಂದು ಸ್ಪಷ್ಟವಾಗಿ ನುಡಿದ. ಮತ್ತೆ ಆರಂಭವಾಯ್ತು ಸುರಾಸುರ ಸಂಗ್ರಾಮ. ಎರಡು ಸೈನ್ಯಗಳೂ ಹಣಾಹಣಿ ಹೋರಾಡತೊಡಗಿದವು. ದೇವತೆಗಳ ಪಕ್ಷವಹಿಸಿ ದಶರಥರಾಜನು ಅಸುರ ವೀರರನ್ನೆಲ್ಲ ತುಂಡರಿಸತೊಡಗಿದ. ಅವನ ಅದ್ಭುತವಾದ ಶೌರ್ಯಾತಿಶಯವನ್ನು ನೋಡಿ ದೈತ್ಯರು ಬೆದರಿ ಬೆಚ್ಚಿದರು. ಹತಾಶರಾದರು. ಕೆಲವು ಧೂರ್ತರಾದ ದೈತ್ಯ ಧುರೀಣರು ಹಿಂದಿನಿಂದ ಬಂದು ದಶರಥನಿಗೆ ಗೊತ್ತಾಗದಂತೆ ಅವನ ರಥದ ಕೀಲ ಮುರಿದರು. ಸಮರ ಸಂಭ್ರಮದಲ್ಲಿ ಇದ್ದ ದಶರಥನಿಗೆ ಗೊತ್ತಾಗಲೇ ಇಲ್ಲ ತನ್ನ ತೇರಿನ ಕೀಲ ಮುರಿದದ್ದು. ಮುಂದೆ ಮುಖಮಾಡಿ ಅವನು ಕಲಿತನದಿಂದ ಕಾದುತ್ತಲಿದ್ದ. ದಶರಥನ ನೆಚ್ಚಿನ ಮಡದಿಯಾದ ಕೈಕೇಯಿಯು ಅವನ ಪಕ್ಕದಲ್ಲಿಯೇ ರಥದಲ್ಲಿ ಸುರಾಸುರಸಂಗ್ರಾಮದ ದಿದೃಕ್ಷೆಯಿಂದ ಕುಳಿತುಕೊಂಡಿದ್ದಳು. ಅವಳಿಗೆ ಗೊತ್ತಾಯಿತು ತನ್ನ ಪತಿಯ ರಥದ ಕೀಲ ಕಳಚಿಬಿದ್ದಿದೆ ಎಂದು. ಆಗ ಕೈಕೆಯಿಯು ಯುದ್ಧೋನ್ಮುಖನಾದ ದಶರಥನಿಗೆ ತಿಳಿಸದೇ ಕಳಚಿಬಿದ್ದ ಕೀಲದ ಸ್ಥಳದಲ್ಲಿ ತನ್ನ ಕೈಯನ್ನೇ ಇರಿಸಿ ರಥವು ಬೀಳದಂತೆ ಮಾಡಿದಳು. ಇದು ಆ ವೀರಪತ್ನಿಯ ಪತಿಭಕ್ತಿ ಶೌರ್ಯಗಳಿಗೆ ಸಾಕ್ಷೀಭೂತವಾಗಿತ್ತು. ಕೈಕೇಯಿಯು ಹಿಡಿದಿದ್ದ ರಥ ಚಕ್ರದ ಸಹಾಯದಿಂದ ಆ ಅಯೋಧ್ಯೆಯ ಅರಸನು ಅಮರಾಸುರ ರಣರಂಗದಲ್ಲಿ ಜಯಭೇರಿ ಬಾರಿಸಿದ. ವಿಜಯಲಕ್ಷ್ಮೀ ಒಲಿದು ಅವನ ಕೊರಳಿಗೆ ಗೆಲುವಿನ

ಮಾಲೆ ಹಾಕಿದಳು. ಅನಂತರ ದೇವತೆಗಳು ತಮಗೆ ಗೆಲುವನ್ನು ತಂದುಕೊಟ್ಟ ಆ ನರಲೋಕದ ನಾಥನನ್ನು ಆ ಅಮರಾವತಿಯಲ್ಲಿ ಸಂಭ್ರಮದಿಂದ ಸತ್ಕರಿಸಿದರು. ಮರಳಿ ಭೂಮಿಗೆ ಬರುವಾಗ ಅವನಿಗೆ ಕೈಕೇಯಿಯ ಸಾಹಸಕಾರ್ಯ ಗೊತ್ತಾಯಿತು. ಅವಳ ಪತಿಭಕ್ತಿ ಪ್ರಸಂಗಾವಧಾನ, ಧೈರ್ಯ ಶೌರ್ಯಗಳನ್ನು ಕಂಡು ಅವನಿಗೆ ಆದದ್ದು ಕೇವಲ ಆಶ್ಚರ್ಯಮಾತ್ರವಲ್ಲ ಅತ್ಯಾನಂದವೂ ಕೂಡ. ಪರಮಪ್ರೀತನಾದ ಅವನು ತನ್ನ ನೆಚ್ಚಿನ ನಲ್ಲೆಗೆ ಮೂರು ವರಗಳನ್ನು ನೀಡಿದ. ''ನೀನು ಬೇಕಾದುದನ್ನು ಕೇಳು ಕೇಳಿದ್ದನ್ನು ಕೊಡುವೆ. ನಿನ್ನ ಮನೋರಥಗಳನ್ನೆಲ್ಲ ಪೂರ್ಣಮಾಡುವೆ'' ಎಂದು ಹೇಳಿದ.

ಕೈಕೇಯಿಯು ಚೆಲುವೆ ಇದ್ದಷ್ಟೇ ಚತುರಳೂ ಆಗಿದ್ದಳು. ಅವನು ಕೊಡ ಮಾಡಿದ ಆ ಮೂರು ವರಗಳನ್ನು ಆಗಲೇ ಬಳಸಿಕೊಳ್ಳಲಿಲ್ಲ. ''ಪ್ರಿಯಕರ! ಆ ಮೂರು ವರಗಳೂ ನಿನ್ನಲ್ಲಿಯೇ ಇರಲಿ ಸಮಯಬಂದಾಗ ನಾನು ಅವುಗಳ ಸದುಪಯೋಗ ಮಾಡಿಕೊಳ್ಳುವೆ'' ಎಂದು ಹೇಳಿದಳು. ಪರಮಪ್ರೀತನಾದ ಆ ಮಹಾರಾಜ ತನ್ನ ಮನದನ್ನೆಯ ಮಾತುಗಳಿಂದ ಅವಳಿಗೆ ಅನೇಕಾನೇಕ ಆಭರಣಗಳನ್ನು ಬಹುಮಾನವಾಗಿ ಕೊಟ್ಟ.

**ಯೋಷಿತಾಂ ಕಿಮದೇಯಂ ಹಿ ಪ್ರಿಯಾಣಾಂ ಉಚಿತಾಗಮೇ ।**

ಪ್ರಿಯಕರನು ಪ್ರೇಯಸಿಗೆ ಯೋಗ್ಯ ಸಂದರ್ಭ ಬಂದಾಗ ಏನನ್ನು ಕೊಡಲಿಕ್ಕಿಲ್ಲ.

ಈ ಪ್ರಸಂಗದಿಂದ ದಶರಥನಿಗೆ ತನ್ನ ಚಿಕ್ಕ ಮಡದಿಯಾದ ಕೈಕೇಯಿಯ ಮೇಲೆ ಇದ್ದ ಪ್ರೇಮಾನುರಾಗಗಳು ಇಮ್ಮಡಿ ಮುಮ್ಮಡಿ, ಮಾತ್ರವಲ್ಲ ನೂರು ಮಡಿ ಹೆಚ್ಚಾದವು. ಸರಸಿಯಾದ ಆ ಅರಸಿಯೊಂದಿಗೆ ಮಹಾರಾಜ ಅಯೋಧ್ಯೆಯಲ್ಲಿ ಆನಂದದಿಂದ ಸುಖಜೀವನ ಸಾಗಿಸಿದ.

ರಾಜರು ಏಳುವಿಧವಾದ ವ್ಯಸನಗಳಿಂದ ದೂರ ಇರಬೇಕೆಂದು ನೀತಿಶಾಸ್ತ್ರದಲ್ಲಿ ವಿಧಿಸಿದ್ದಾರೆ. ಜೂಜು, ಬೇಟೆ, ಪಾನ ಪರಸ್ತ್ರೀ ಮುಂತಾದ ದುಶ್ಚಟಗಳಿಂದ ಧರಾ ಮಂಡಲದ ದೊರೆಗಳು ದೂರ ಇರಬೇಕೆಂದು ಪ್ರಾಚೀನಗ್ರಂಥಗಳ ರಾಜನೀತಿ ಸಂಹಿತೆಯಲ್ಲಿ ಕಟ್ಟಪ್ಪಣೆ ಮಾಡಿದ್ದಾರೆ.

**'ಸಪ್ತವ್ಯಸನಹೀನೇನ, ಭವಿತವ್ಯಂ ತು ಭೂಭುಜಾ'**

'ಏಳು ವ್ಯಸನಗಳಿಗೆ ರಾಜರು ಅಧೀನರಾಗಬಾರದು'.

ಇದೆಲ್ಲವೂ ಚೆನ್ನಾಗಿ ಗೊತ್ತು ಆ ದಶರಥ ಮಹಾರಾಜನಿಗೆ. ಆದರೆ ವಿಧಿಯು ಬಲಿಷ್ಠ ವಲ್ಲವೆ! ಭವಿತವ್ಯತೆಯನ್ನು ಯಾರು ತಪ್ಪಿಸುವರು? ನಿಯತಿಯ ವಶನಾದ ಆ ಕೋಸಲದ ರಾಜನು ಕಾಡಿಗೆ ಬೇಟೆಯಾಡಲಿಕ್ಕೆ ಹೋಗಿದ್ದ. ಅಲ್ಲಿಯ ಒಂದು ತಗ್ಗು ಪ್ರದೇಶದಲ್ಲಿ ಕುಳಿತು ಕ್ರೂರಮೃಗಗಳನ್ನು ಬಾಣಬಿಟ್ಟು ಬೇಟೆಯಾಡುತ್ತಲಿದ್ದ. ಅಲ್ಲಿ ತುಸು ದೂರದ ಒಂದು ಸರೋವರದಲ್ಲಿ ಕೊಡದಲ್ಲಿ ನೀರುತುಂಬುವ ಸಪ್ಪಳವಾಯ್ತು. ಯಾವುದೋ ಒಂದು ಕಾಡಾನೆಯು ನೀರುಕುಡಿಯಲು ಬಂದಿದೆ ಎಂದು ತಿಳಿದು ಕುಳಿತಸ್ಥಾನದಿಂದಲೇ ಶಬ್ದವೇಧಿ ಬಾಣಬಿಟ್ಟ. ಗುರಿತಪ್ಪಲಿಲ್ಲ. ಆ ಬಿಲ್ಲಾಳುವಿನ ಬಾಣ ನೀರನ್ನು ತುಂಬುತ್ತಲಿರುವ ಓರ್ವ ಋಷಿಕುಮಾರನಿಗೆ ಆ ತೀಕ್ಷ್ಣ ಬಾಣ ನೆಟ್ಟಿತು. ಅವನು ಆಗ ನರಳಿದ ''ಅಯ್ಯೋ! ಯಾವನು ಈ ಘೋರ ಕೃತ್ಯವನ್ನು ಮಾಡಿದನು? ಬ್ರಾಹ್ಮಣನಾದ

ನನ್ನನ್ನು ನಿಷ್ಕಾರಣವಾಗಿ ಏಕೆ ಬಾಣಪ್ರಯೋಗದಿಂದ ವಧಿಸಲು ಉದ್ಯುಕ್ತನಾಗಿದ್ದಾನೆ?'' ಅವನ ದೀನಧ್ವನಿಯನ್ನು ಕೇಳಿ ದಶರಥ ಅವನಿದ್ದಲ್ಲಿಗೆ ಧಾವಿಸಿ ಬಂದ ಓರ್ವ ಬ್ರಾಹ್ಮಣ ಋಷಿಯು ತನ್ನ ಅಚಾತುರ್ಯದಿಂದ ಸರೋವರದ ದಂಡೆಯ ಮೇಲೆ ಹತಪತಿತನಾಗಿದ್ದಾನೆ. ತನ್ನ ಶರದ ಆಘಾತವನ್ನು ತಾಳದೇ ಮೂರ್ಛಿತನಾಗಿ ಗೋಣು ಚೆಲ್ಲಿ ಬಿದ್ದು ಬಿಟ್ಟಿದ್ದ. ಕೂಡಲೇ ದಶರಥನು ಅವನಿಗೆ ಶೈತ್ಯೋಪಚಾರ ಮಾಡಿ ಎತ್ತಿ ಕೂಡಿಸಿ ಕೇಳಿದ ''ಬ್ರಾಹ್ಮಣಶ್ರೇಷ್ಠನೇ, ನೀನು ಯಾರು? ಇಲ್ಲಿಗೆ ಏಕೆ ಬಂದಿದ್ದೆ? ನಾನು ತಿಳಿಯದೇ ನಿನಗೆ ಬಾಣ ಪ್ರಯೋಗ ಮಾಡಿಬಿಟ್ಟೆ. ನನ್ನ ಈ ಪಾಪಕೃತ್ಯಕ್ಕೆ ಪ್ರಾಯಶ್ಚಿತ್ತವೇನು ಹೇಳು. ಬ್ರಹ್ಮಹತ್ಯೆ ಮಾಡಿದವರನ್ನು ಚಂಡಾಲರೂ ಮುಟ್ಟಬಾರದು; ಉಳಿದ ನಾಲ್ಕು ವರ್ಣದವರೂ ವಿಪ್ರವಧಮಾಡಿದವನನ್ನು ಕಣ್ಣಿನಿಂದಲೂ ನೋಡಬಾರದು. ನನ್ನ ಈ ಘೋರ ಅಪರಾಧವನ್ನು ಮನ್ನಿಸು. ನಾನು ಈಗ ಏನು ಮಾಡಲಿ? ಹೇಳು''. ಆಗ ಆ ಮುನಿಪುತ್ರನು ನುಡಿದನು. ''ಈಗ ನನ್ನ ಪ್ರಾಣಗಳು ಹೋಗುತ್ತಲಿವೆ. ಮಹಾರಾಜ ಈ ಪರ್ವತದ ಮೇಲ್ಭಾಗದಲ್ಲಿ ನಮ್ಮ ತಂದೆ ಶ್ರವಣಮುನಿಯು ತನ್ನ ಕುಟುಂಬದೊಂದಿಗೆ ವಾಸಮಾಡಿದ್ದಾರೆ. ಅವನಿಗೆ ನಾನು ಏಕಮಾತ್ರ ಪುತ್ರ. ನನ್ನ ತಂದೆ ತಾಯಿ ಇಬ್ಬರೂ ಕುರುಡರು ಮತ್ತು ಕಿವುಡರು. ಅವರಿಗೆ ನಾನೇ ಕಣ್ಣು ಕಿವಿ ಕಾಲು ಕೂಡ. ನಾನೊಬ್ಬನೇ ಅವರಿಗೆ ಇರುವ ಏಕಮಾತ್ರ ಆಧಾರ. ಮುಪ್ಪಿನ ಮುದುಕರಾದ ಆ ತಾಯಿ ತಂದೆಗಳನ್ನು ಸೇವೆ ಮಾಡುತ್ತ ನಾನು ಈ ಅರಣ್ಯದಲ್ಲಿ ವಾಸಮಾಡಿದ್ದೇನೆ. ಇಂದು ರಾತ್ರಿ ಅವರಿಗೆ ಒಮ್ಮೆಲೇ ಬಾಯಾರಿಕೆಯಾಯಿತು. ಅವರು ನನಗೆ ನೀರು ತರಲು ಹೇಳಿದರು. ನಾನು ಅವರ ಅಪ್ಪಣೆಯಂತೆ ಈ ರಾತ್ರಿ ಕಾಲದಲ್ಲಿ ಈ ಸರೋವರಕ್ಕೆ ಬಂದಿದ್ದೆ. ನೀನು ಕಾಡುಮೃಗಗಳಿಗಾಗಿ ಕಾದುಕೊಂಡು ಕುಳಿತದ್ದು ನನಗೆ ತಿಳಿಯಲಿಲ್ಲ. ನಾನು ಮನುಷ್ಯ ಬ್ರಾಹ್ಮಣ ಎಂದು ನಿನಗೆ ಗೊತ್ತಾಗಲಿಲ್ಲ. ನಿನ್ನಿಂದ ಈ ದಾರುಣವಾದ ಘೋರಕೃತ್ಯವು ಈಗ ನಡೆದುಹೋಯಿತು. ಈಗ ನನಗೆ ಮರಣ ಬಂದುದಕ್ಕೆ ದುಃಖವಿಲ್ಲ. ಆದರೆ ಹಣ್ಣು-ಹಣ್ಣು ಮುದುಕರಾದ ಆ ತಾಯಿ-ತಂದೆಗಳಿಗೆ ಮುಂದೆ ಯಾರು ಗತಿ? ನಾನು ಸತ್ತಹೋದ ಬಳಿಕ ಅವರು ಈ ಘೋರ ಅರಣ್ಯದಲ್ಲಿ ಹೇಗೆ ಜೀವಿಸುವರು? ವೃದ್ಧರೂ ಕುರುಡರೂ ಕಿವುಡರೂ ಆದ ಆ ತಾಯಿ-ತಂದೆಗಳ ಸೇವಾಭಾಗ್ಯವು ದೊರಕದೇ ನಾನು ಮಹಾಪಾಪಿಯಾದೆ. ಅಯ್ಯೋ ವಿಧಿಯೆ! ಪಿತೃಸೇವೆಯನ್ನು ತಪ್ಪಿಸಿ ನನಗೆ ಇದೇನು ಮಾಡಿರುವೆ? ಆದದ್ದು ಆಯಿತು ಮಹಾರಾಜ! ಈ ನೀರಿನ ಕಲಶವನ್ನು ತೆಗೆದುಕೊಂಡು ಹೋಗಿ ಅವರಿಗೆ ಕೊಡು ನೀರಡಿಕೆಯಿಂದ ಬಳಲುತ್ತಿರುವ ಆ ನನ್ನ ವೃದ್ಧಮಾತಾಪಿತರನ್ನು ನೀರು ಕೊಟ್ಟು ಬದುಕಿಸು.''

ಹೀಗೆ ಅವನು ಹೇಳುತ್ತಿರುವಂತೆಯೇ ಆ ಮುನಿಕುಮಾರನ ಪ್ರಾಣಹೋಯಿತು. ಅನಂತರ ದಶರಥನು ಆ ಜಲಕುಂಭವನ್ನು ತೆಗೆದುಕೊಂಡು ಆ ವೃದ್ಧದಂಪತಿಗಳು ಇದ್ದಲ್ಲಿಗೆ ಹೋದನು. ಆಗ ಅವರಿಬ್ಬರೂ ಪರಸ್ಪರ ಮಾತನಾಡುತ್ತಿದ್ದರು.

''ನಮಗೆ ಊರುಗೋಲಿನಂತೆ ಇರುವ ಆ ನಮ್ಮ ಮಗನು ಇನ್ನೂ ಏಕೆ ಬರಲಿಲ್ಲ? ಅವನಿಗೆ ಏನಾದರೂ ನಮ್ಮ ಮೇಲೆ ಬೇಸರವೇ? ಅಥವಾ ಸಿಟ್ಟಾಗಿರುವನೆ? ಅಥವಾ ಹಿಂಸ್ರಪ್ರಾಣಿಗಳು ಅವನನ್ನು ಹೊಡೆದು ತಿಂದಿರುವವೆ? ಅವನಿಗೆ ಏನಾದರೂ ಆದರೆ

ನಮ್ಮ ಗತಿಯೇನು? ಈ ಜಗತ್ತಿನಲ್ಲಿ ಅಂಥ ಒಳ್ಳೆ ಪುತ್ರನು ಯಾರಿಗೆ ಇರುವನು? ಅವನು ಎಂದಿಗೂ ನಮಗೆ ಎದುರು ಮಾತನಾಡಿದವನಲ್ಲ. ಎಷ್ಟು ಕೆಲಸ ಹೇಳಿದರೂ ಬೇಸರಗೊಂಡವನಲ್ಲ. ಅಂಥ ಮಗನನ್ನು ನೋಡದೇ ಇರುವ ನಮ್ಮ ಜೀವವು ವಜ್ರಕ್ಕಿಂತ ಕಠೋರವಾಗಿದೆ. ನಾವು ಬದುಕುವುದು ಬಾಳುವದು ಅವನಿಂದ. ನಮ್ಮ ಅನ್ನ, ಪಾನ, ಊಟ, ಉಡುಗೆ, ತೊಡಿಗೆ ಯಾವುದೂ ಅವನಿಲ್ಲದೇ ನಡೆಯುವಂತಿಲ್ಲ. ನಮ್ಮ ಸರ್ವಸ್ವವೇ ಅವನು. ಈಗ ಅವನು ಏಕೆ ಬಂದಿರಿಲಿಕ್ಕಿಲ್ಲ? ಅವನು ಬಾರದೇ ಇದ್ದರೆ ಮುಂದೆ ನಮಗೇನು ಗತಿ? ನಮ್ಮ ಪ್ರಾಣಗಳಾದರೂ ಬೇಗನೇ ಹೋಗುವದಿಲ್ಲವಲ್ಲ! ಏನು ಮಾಡೋಣ?'' ಎಂದು ಪರಿಪರಿಯಿಂದ ಹಲುಬುತ್ತಿದ್ದರು.

ಆಗ ದಶರಥನು ಮೆಲ್ಲನೇ ಅವರ ಬಳಿಗೆ ಹೋದ. ಹೆಜ್ಜೆಯ ಸಪ್ಪಳ ಕೇಳಿ ಆ ವೃದ್ಧ ದಂಪತಿಗಳಿಗೆ ಮಗನೇ ಬಂದನು ಎಂದು ಸಂತೋಷವಾಯಿತು. ಹರುಷ ದುಂಬಿ ಕೇಳಿದರು.

''ಮಗು, ಇಷ್ಟೇಕೆ ತಡಮಾಡಿದೆ? ನೀನೇ ನಮಗೆ ಕಣ್ಣು. ನೀನೇ ನಮಗೆ ಆಧಾರ, ಏಕೆ ಮಾತನಾಡಲೊಲ್ಲೆ? ಅಂಧರಾದ ಈ ತಾಯ್ತಂದೆಗಳ ಮೇಲೆ ನಿನಗೆ ಏನಾದರೂ ಕೋಪ ಬಂದಿದೆಯೆ?'' ಎಂದು ಕೇಳಿದರು.

ಅವರ ಮಾತನ್ನು ಕೇಳಿ ದಶರಥನ ಎದೆಗೆ ಬಾಣ ಬಿಟ್ಟಂತಾಯಿತು. ತನ್ನ ನೀಚಕಾರ್ಯಕ್ಕಾಗಿ ಅವನು ಮನಸ್ಸಿನಲ್ಲಿಯೇ ವ್ಯಥೆಗೊಂಡು ಹೆದರಿ ತಗ್ಗಿದ ದೀನದನಿಯಲ್ಲಿ ''ಇಗೋ ನೀರನ್ನು ತಂದಿದ್ದೇನೆ ಇದನ್ನು ಕುಡಿಯಿರಿ.'' ಎಂದು ಹೇಳಿದ. ಅವನ ಸ್ವರಭೇದವನ್ನು ಲಕ್ಷಿಸಿ ಆ ದಂಪತಿಗಳಿಗೆ ಇವನು ತಮ್ಮ ಮಗ ಅಲ್ಲ ಎಂದು ತಿಳಿದುಹೋಯಿತು. ''ನೀನು ಯಾರು? ಮೊದಲದನ್ನು ಹೇಳು. ಆಮೇಲೆ ನಾವು ನೀರು ಕುಡಿಯುವೆವು'' ಎಂದು ನುಡಿದರು. ಆಗ ಪಶ್ಚಾತ್ತಾಪದಗ್ಧನಾದ ಆ ಭೂಪತಿಯು ಖಿನ್ನವಿಷಣ್ಣನಾಗಿ ಭಯಭ್ರಾಂತನಾಗಿ ''ಪೂಜ್ಯರೆ, ನಿಮ್ಮ ಪುತ್ರನು ಆ ಸರೋವರದ ಬಳಿಯಲ್ಲಿ ಇರುವನು'' ಎಂದು ಮೆಲ್ಲನೇ ನುಡಿದನು. ಅದನ್ನು ಕೇಳಿ ಆ ವೃದ್ಧ ದಂಪತಿಗಳು ಮತ್ತಿಷ್ಟು ವಿಹ್ವಲಿತರಾಗಿ ''ನಿಜವಾದ ಸಮಾಚಾರ ಹೇಳು, ಸುಳ್ಳು ಹೇಳಬೇಡ'' ಎಂದರು. ಆಗ ನಿರುಪಾಯನಾದ ಆ ನರಪತಿಯು ನಡೆದ ಸಮಾಚಾರವನ್ನೆಲ್ಲ ಅವರಿಗೆ ತಿಳಿಸಿದ. ಅದನ್ನು ಕೇಳಿದ ತಕ್ಷಣ ಇಬ್ಬರೂ ಮುದುಕರು ಸಿಡಿಲು ಬಡಿದಂತೆ ನೆಲಕ್ಕೆ ಉರುಳಿದರು. ದುಃಖ ಉಕ್ಕರಿಸಿ ''ಅರಸನೆ! ನಮ್ಮನ್ನು ಈಗಲೇ ನಮ್ಮ ಮಗನು ಬಿದ್ದ ಸ್ಥಳಕ್ಕೆ ಕರೆದುಕೊಂಡು ಹೋಗು.''

ಆಗ ದಶರಥನು ಆ ವೈಶ್ರವಣ ಎಂಬ ಹೆಸರಿನ ವೃದ್ಧ ತಾಪಸನನ್ನೂ ಅವನ ಅಂಧ ಪತ್ನಿಯನ್ನೂ ಶ್ರವಣಕುಮಾರನು ಸತ್ತುಬಿದ್ದಿರುವ ಸ್ಥಳಕ್ಕೆ ಕರೆದುಕೊಂಡು ಹೋದ. ಜರಾಜೀರ್ಣರಾದ ಆ ಜರಠ ದಂಪತಿಗಳು ಬೀಳುತ್ತ ಏಳುತ್ತ ಮಗನಿದ್ದಲ್ಲಿಗೆ ಬಂದು ಅವನ ಶವದ ಮೇಲೆ ಬಿದ್ದು ಹೊರಳಾಡುತ್ತ ಅತ್ತರು. ರೋಷವುಕ್ಕಿ ದಶರಥನಿಗೆ ಅಕ್ಕಸತನದಿಂದ ಶಾಪಕೊಟ್ಟರು. ''ಪಾಪಿಯಾದ ದಶರಥ! ನಾವು ಈಗ ಪುತ್ರ ವಿರಹದಿಂದ ಅತ್ತು ಅತ್ತು ಸತ್ತು ಹೋಗುವಂತೆ ನೀನಾದರೂ ಮುಪ್ಪಿನ ವಯಸ್ಸಿನಲ್ಲಿ ಮಕ್ಕಳ ವಿರಹದಿಂದ ಅನಾಥನಂತೆ ಬಿದ್ದು ಮರಣ ಹೊಂದುವೆ'' ಎಂದು ಹೇಳಿ ಆ ದಂಪತಿಗಳಿಬ್ಬರೂ ಪ್ರಾಣಬಿಟ್ಟರು. ದುಃಖತಪ್ತನಾದ ಆ ದಶರಥರಾಜನು ಆ ಕಾಡಿನಲ್ಲಿಯೇ ಕಟ್ಟಿಗೆಗಳನ್ನು ಆಯ್ದು ತಂದು ಒಟ್ಟಿ

ಆ ಚಿತೆಯ ಮೇಲೆ ವೃದ್ಧ ದಂಪತಿಗಳನ್ನು ಇರಿಸಿ ದಹನ ಸಂಸ್ಕಾರ ಮಾಡಿದ. ಮತ್ತು ಸರೋವರದ ದಂಡೆಯ ಮೇಲೆ ತನ್ನ ಬಾಣ ನೆಟ್ಟು, ಗತಪ್ರಾಣನಾಗಿ ಬಿದ್ದಿದ್ದ ಶ್ರವಣಕುಮಾರನಿಗೂ ಯಥೋಚಿತ ಸಂಸ್ಕಾರವನ್ನು ಮಾಡಿದ.

## ಬ್ರಹ್ಮಹತ್ಯಾ ಪಾಪ ಪರಿಹಾರಕ್ಕೆ ಅಶ್ವಮೇಧಯಜ್ಞ

ಹೀಗೆ ದುಃಖತಪ್ತನಾದ ದಶರಥರಾಜನು ತನ್ನ ರಾಜಧಾನಿಯಾದ ಅಯೋಧ್ಯೆಗೆ ಮರಳಿದ. ಕುಲಗುರುಗಳಾದ ವಶಿಷ್ಠರ ಬಳಿಗೆ ಹೋಗಿ ದೈನ್ಯದಿಂದ ತನ್ನ ದುಃಖವನ್ನು ತೋಡಿಕೊಂಡ. ತಿಳಿಯದೇ ನಡೆದುಹೋದ ಈ ಬ್ರಹ್ಮಹತ್ಯಾ ಪಾಪಕ್ಕೆ ಏನು ಪ್ರಾಯಶ್ಚಿತ್ತ ಎಂದು ಕೇಳಿಕೊಂಡ. ಆಗ ಬ್ರಹ್ಮಿಷ್ಠರಾದ ಆ ಮುನಿಗಳು ವಿದ್ವಾಂಸರಾದ ವಿಪ್ರೋತ್ತಮರೊಂದಿಗೆ ಸಮಾಲೋಚಿಸಿ ಅಯೋಧ್ಯೆಯ ಅಧಿಪತಿಗೆ ಬ್ರಹ್ಮಹತ್ಯಾಪಾಪ ಪರಿಹಾರಾರ್ಥವಾಗಿ ಮಾಡಬೇಕಾದ ಪ್ರಾಯಶ್ಚಿತ್ತ ಹೇಳಿದರು.

"ಮಹಾರಾಜ! ಈ ಬ್ರಹ್ಮಹತ್ಯೆ ಭಯಂಕರ ಪಾಪ. ಸಾಮಾನ್ಯ ಪ್ರಾಯಶ್ಚಿತ್ತ ಯಾವುದರಿಂದಲೂ ಇದರ ಪರಿಹಾರ ದುಶ್ಶಕ. ಇದಕ್ಕಾಗಿ ನೀನು ಅಶ್ವಮೇಧ ಯಾಗ ಮಾಡು. ನೀನು ಈಗಲೇ ಕಶ್ಯಪ, ವಾಮದೇವ, ಗಾಲವ, ಜಾಬಾಲಿ, ವಿಶ್ವಾಮಿತ್ರ, ಜಮದಗ್ನಿ, ಅತ್ರಿ ಮೊದಲಾದ ಮುನಿಮಂಡಲದ ಮಾರ್ತಂಡರನ್ನು ಕರೆಯಿಸು. ಅವರಿಗೆಲ್ಲ ಪ್ರಭೂತದಾನದಕ್ಷಿಣೆಗಳನ್ನು ನೀಡು. ಆ ಅಶ್ವಮೇಧಯಾಗದಲ್ಲಿ ಯಥೇಚ್ಛವಾಗಿ ಅನ್ನದಾನ, ಗೋದಾನ, ಭೂದಾನ, ಸುವರ್ಣದಾನ, ದಕ್ಷಿಣಾದಾನಾದಿಗಳನ್ನು ಧಾರಾಳವಾಗಿ ಯೋಗ್ಯ ಬ್ರಾಹ್ಮಣರಿಗೂ, ದೀನ ದರಿದ್ರರಿಗೂ ಪ್ರದಾನ ಮಾಡು. ಬ್ರಹ್ಮವರ್ಚಸ್ವಿಗಳೂ, ತೀಕ್ಷ್ಣ ತಪಸ್ವಿಗಳೂ ಆದ ಆ ಮುನಿಮಹಾನುಭಾವರ ತಪೋಬಲ ದಿಂದಲೂ ಆಶೀರ್ವಾದಬಲದಿಂದಲೂ ನಿನ್ನ ಬ್ರಹ್ಮಹತ್ಯಾದೋಷವು ಪರಿಹಾರವಾಗುವದು. ಇಂಥ ಮಹಾಪಾಪಕ್ಕೆ ಮಹತ್ತರವಾದ ಅಶ್ವಮೇಧಯಜ್ಞವೇ ತಕ್ಕ ಪ್ರಾಯಶ್ಚಿತ್ತ."

ಕುಲಗುರುಗಳಾದ ಬ್ರಹ್ಮಜ್ಞಾನಿ ವಶಿಷ್ಠ ಮಹಾಮುನಿಗಳ ಆದೇಶವನ್ನು ದಶರಥ ಮಹೀಪತಿಯು ಅಕ್ಷರಶಃ ಪಾಲಿಸಿದ ಅವರು ಹೇಳಿದ ಋಷಿಗಳನ್ನೂ ಮತ್ತು ವಿವಿಧ ದೇಶಗಳ ವೇದ ವಿದ್ವಾಂಸರನ್ನೂ ಪ್ರಗಾಢಪಂಡಿತರಾದ ಪುರೋಹಿತರನ್ನೂ ಕರೆಸಿ ವಿಪುಲವಾದ ದಾನ ದಕ್ಷಿಣೆ ಅನ್ನವಿತರಣಾದಿಗಳಿಂದ ವೈಭವಪೂರ್ವಕವಾಗಿ ಅಶ್ವಮೇಧ ಯಾಗವನ್ನು ನೆರವೇರಿಸಿದ. ಆ ಸಮಯದಲ್ಲಿ ಆಕಾಶವಾಣಿಯಾಯಿತು. "ಈ ಅಶ್ವಮೇಧಯಾಗವನ್ನು ಮಾಡಿದ ಈ ದಶರಥರಾಜನ ಶರೀರವು ಪರಿಪೂತವಾಗಿದೆ. ಈಗ ಈ ಅಯೋಧ್ಯೆಯ ಅಧಿಪತಿಯು ವೀತಕಲ್ಮಷನಾಗಿ ಪರಮಪವಿತ್ರನಾಗಿದ್ದಾನೆ. ಇವನಲ್ಲಿ ಈಗ ಬ್ರಹ್ಮಹತ್ಯಾದೋಷದ ಲವಲೇಶವೂ ಇಲ್ಲ. ಈ ಪೂತಾತ್ಮನೊಡನೆ ಎಲ್ಲ ಪುಣ್ಯವಂತರೂ ಧಾರಾಳವಾಗಿ ವ್ಯವಹರಿಸ ಬಹುದು. ಇವನಿಗೆ ಮುಂದೆ ಒಳ್ಳೆ ಮಕ್ಕಳು ಜನಿಸುವರು. ಇವನ ಜ್ಯೇಷ್ಠ ಪುತ್ರನಿಂದ ಈ ದಶರಥನ ಜನ್ಮಜನ್ಮಾಂತರದ ಪಾಪರಾಶಿಯೆಲ್ಲವೂ ತೊಳೆದುಹೋಗುವುದು." ಈ ದಿವ್ಯವಾದ ಆಕಾಶವಾಣಿಯಿಂದ ಪ್ರಜಾಜನರಿಗೂ ಮುನಿಮಹರ್ಷಿ ಮಹನೀಯರಿಗೂ ದಶರಥರಾಜನ ವಿಷಯದಲ್ಲಿ ಗೌರವವು ಇಮ್ಮಡಿಸಿತು.

ಹೀಗೆ ಕೆಲಕಾಲ ಕಳೆಯಿತು. ಮುನಿಮಂಡಲದ ಮಾರ್ತಾಂಡರಂತಿದ್ದ ಋಷ್ಯಶೃಂಗ ಮತ್ತು ವಶಿಷ್ಠ ಮೊದಲಾದ ಋಷಿ ಋಷಭರ ಅನುಗ್ರಹದಿಂದ ಆ ದಶರಥ ರಾಜನಿಗೆ ನಾಲ್ಕು ಜನ ತೇಜಸ್ವಿ ಮಕ್ಕಳು ಜನಿಸಿದರು. ಅವರೆಲ್ಲರೂ ಭೂಲೋಕದಲ್ಲಿ ಅವತರಿಸಿದ್ದು ದೇವತಾಕಾರ್ಯಸಿದ್ಧಿಗಾಗಿ, ದಶರಥನ ಪಟ್ಟದರಾಣಿಯಾದ ಕೌಸಲ್ಯೆಯಿಂದ ರಾಮ, ಮತ್ತೊಬ್ಬ ಮಡದಿ ಸುಮಿತ್ರೆಯಲ್ಲಿ ಲಕ್ಷ್ಮಣ ಶತೃಘ್ನರು. ಕೊನೆಯ ಪತ್ನಿ ಕೈಕೇಯಿಯಲ್ಲಿ ಭರತನು ಹುಟ್ಟಿದರು. ನಾಲ್ಕೂ ರಾಜಕುಮಾರರು ಅತೀ ಬುದ್ಧಿವಂತರು ಮಿತ ಮಾತಿನವರು. ಕೃತಿಶೀಲರು. ತಂದೆಯ ಆಜ್ಞಾನುವರ್ತಿಗಳು.

## ವಿಶ್ವಾಮಿತ್ರರ ಆಗಮನ, ರಾಮ-ಲಕ್ಷ್ಮಣರ ಪ್ರಯಾಣ

ಒಂದು ದಿನ ದಶರಥನ ಅರಮನೆಗೆ ಮಹಾಮುನಿ ವಿಶ್ವಾಮಿತ್ರ ಆಗಮಿಸಿದ. ರಾಮಲಕ್ಷ್ಮಣರ ಮಹಾಮಹಿಮೆಯನ್ನು ಸಂಪೂರ್ಣವಾಗಿ ಅರಿತಿದ್ದ ವಿದಿತವೇದಿತವ್ಯನಾದ ಆ ವಿಶ್ವಾಮಿತ್ರಮುನಿ. ''ರಾಮಲಕ್ಷ್ಮಣರನ್ನು ಕಳಿಸು. ನಾನು ಕೈಕೊಂಡ ಯಜ್ಞ ರಕ್ಷಣೆಗಾಗಿ ಅವರು ಅತ್ಯಾವಶ್ಯಕ'' ಎಂದು ಕೇಳಿದರು ದಶರಥರಾಜನಿಗೆ.

ಬಹುಕಾಲದ ಮೇಲೆ ಬಹುಪುಣ್ಯ ಫಲವಾಗಿ ಪಡೆದಿದ್ದ ಆ ಅರಸ ರಾಮ ಲಕ್ಷ್ಮಣರನ್ನು. ಮುಪ್ಪಿನ ಕಾಲದಲ್ಲಿ ತನ್ನ ಮೆಚ್ಚಿನ ಮಕ್ಕಳನ್ನು ಬಿಟ್ಟು ಇರಲು ಅವನ ಮನಸ್ಸು ಸರ್ವಥಾ ಒಪ್ಪಲಿಲ್ಲ. ಅವನು ವಿನಯದಿಂದಾದರೂ ದೃಢ ನಿರ್ಧಾರದಿಂದ ಹೇಳಿದ. ''ಪೂಜ್ಯರೆ, ನನ್ನ ಪೂರ್ವಜನ್ಮದ ಪುಣ್ಯದಿಂದ ನಾನು ಮುಪ್ಪಿನ ಕಾಲದಲ್ಲಿ ಈ ಮಕ್ಕಳನ್ನು ಪಡೆದಿದ್ದೇನೆ. ನನ್ನ ಸಂತಸದ ನೆಲೆಯೇ ಈ ಮಕ್ಕಳು. ಇವರನ್ನು ಬಿಟ್ಟು ನಾನು ಇರಲಾರೆ. ನಿಮ್ಮೊಡನೆ ಕಳಿಸಲಾರೆ. ನಾನೇ ನಿಮ್ಮ ಯಜ್ಞಕ್ಕೆ ಸಹಾಯ ಮಾಡುವೆ. ಬೇಕು ಎಂದರೆ ನನ್ನ ರಾಜ್ಯ ಸಿರಿ ಸರ್ವಸ್ವವನ್ನೇ ತಮಗೆ ಅರ್ಪಿಸುವೆ.''

ಆಗ ವಶಿಷ್ಠರು ಮಧ್ಯದಲ್ಲಿ ಪ್ರವೇಶಿಸಿದರು. ಮಹಾರಾಜನಿಗೆ ಬುದ್ಧಿ ಹೇಳಿದರು. ''ದಶರಥ! ನೀನು ರಘುವಂಶದಲ್ಲಿ ಹುಟ್ಟಿರುವಿ ನೆನಪಿರಲಿ. ರಘುಕುಲದ ಹಿಂದಿನ ಯಾವ ರಾಜರೂ ಕೇಳಲಿಕ್ಕೆ ಬಂದವರಿಗೆ ಇಲ್ಲ ಎಂದು ಹೇಳಿಲ್ಲ. ಏನನ್ನು ಕೇಳಿದರೂ ಕೊಟ್ಟು ಕಳಿಸಿದ್ದಾರೆ ಅದೇ ರಘುವಂಶದಲ್ಲಿ ಹುಟ್ಟಿದ ನೀನು ವಿಶ್ವಾಮಿತ್ರರಂಥ ಮುನೀಶ್ವರರು ಕೇಳಲು ಬಂದಾಗ ಕಳಿಸುವುದಿಲ್ಲ ಎನ್ನಬೇಡ ಕಳಿಸು. ಅದರಿಂದ ನಿನ್ನ ಮಕ್ಕಳಿಗೇ ಒಳ್ಳೆಯದು. ನಿನಗೂ ಕ್ಷೇಮಾಭ್ಯುದಯ. ರಾಮಲಕ್ಷ್ಮಣರನ್ನು ಈ ಋಷಿ ಸತ್ತಮರೊಂದಿಗೆ ಕಳಿಸಿಕೊಡು.'' ದಶರಥನಿಗೆ ಇದೊಂದು ಬಿಸಿತುಪ್ಪ. ಮಕ್ಕಳನ್ನು ಬಿಟ್ಟು ಇರಲಾರ. ಋಷಿಯ ಬೇಡಿಕೆಯನ್ನು ತಿರಸ್ಕರಿಸಲಾರ. ಕೋಪಿಷ್ಠನಾದ ಮುನಿ ಶಾಪಕೊಟ್ಟರೆ? ಆ ಹೆದರಿಕೆ ಅವನ ಅಂತರಂಗವನ್ನು ಅಲುಗಾಡಿಸಿ ಬಿಟ್ಟಿತು. ಅವನಿಗೆ ಇಚ್ಛೆ ಇಲ್ಲದಿದ್ದರೂ ವಶಿಷ್ಠರ ಮಾತಿಗೆ ಮಣಿದು ರಾಮಲಕ್ಷ್ಮಣರನ್ನು ಕರೆದು ಹೇಳಿದ. ''ಪುತ್ರರೆ, ನೀವು ಬ್ರಹ್ಮರ್ಷಿ ವಿಶ್ವಾಮಿತ್ರರ ಜೊತೆ ಹೋಗಿರಿ. ಅವರ ಯಜ್ಞಕಾರ್ಯವನ್ನೂ ರಕ್ಷಿಸಿರಿ'' ಎಂದು ನಿಟ್ಟುಸಿರನ್ನು ಬಿಡುತ್ತಲೇ ನುಡಿದು ದುಃಖದಿಂದ ಪ್ರೀತಿಯ ಪುತ್ರರನ್ನು ಕಳಿಸಿಕೊಟ್ಟ ಆ ಮುನಿಯೊಂದಿಗೆ. ರಾಮಲಕ್ಷ್ಮಣರು ತಂದೆಯ ಮಾತನ್ನು ತಲೆಯ ಮೇಲೆ ಹೊತ್ತು ವಿಶ್ವಾಮಿತ್ರ ಮುನಿಯ ಹಿಂದಿನಿಂದ ನಡೆದರು. ಆ ಮಹಾಮುನಿಯು ದಾರಿಯಲ್ಲಿ ತಾನು ಮಹೇಶ್ವರನಿಂದ ಕಲಿತ ಧನುರ್ವಿದ್ಯೆಯನ್ನು ರಾಮಲಕ್ಷ್ಮಣರಿಗೆ ಉಪದೇಶಿಸಿದ. ಶಸ್ತ್ರ ವಿದ್ಯೆ,

ಅಸ್ತ್ರವಿದ್ಯೆ, ಲೌಕಿಕವಿದ್ಯೆ, ರಥವಿದ್ಯೆ, ಅಶ್ವವಿದ್ಯೆ, ಗದಾವಿದ್ಯೆ, ಗಜವಿದ್ಯೆ, ಮಂತ್ರ ಪ್ರಯೋಗ ಹಾಗೂ ಉಪಸಂಹಾರಗಳನ್ನು ಆ ರಾಜಕುಮಾರರಿಗೆ ಚೆನ್ನಾಗಿ ಕಲಿಸಿದ. ವಿದ್ಯೆಯನ್ನು ಪಡೆದ ರಾಮಲಕ್ಷ್ಮಣರು ಆ ಅರಣ್ಯದಲ್ಲಿ ನೆಲೆನಿಂತ ಮುನಿಮಂಡಲದ ಕ್ಷೇಮಕ್ಕಾಗಿ ತಾಟಕಾ ಎಂಬ ರಕ್ಕಸಿಯನ್ನು ಸಂಹರಿಸಿದರು. ಅನಂತರ ಶ್ರೀರಾಮನ ಪಾದಸ್ಪರ್ಶದಿಂದ ಕಲ್ಲಾಗಿ ಬಿದ್ದ ಅಹಲ್ಯೆ ಉದ್ಧಾರ ಹೊಂದಿದಳು ವಿಶ್ವಾಮಿತ್ರರ ಯಜ್ಞವನ್ನು ನಾಶಮಾಡ ಬಂದ ರಾಕ್ಷಸರೆಲ್ಲರೂ ರಾಮಲಕ್ಷ್ಮಣರ ಬಾಣ ಪ್ರಯೋಗದಿಂದ ನಿಹತರಾದರು.

ಅನಂತರ ವಿಶ್ವಾಮಿತ್ರರು ರಾಘವ ಸೋದರರನ್ನು ಕರೆದುಕೊಂಡು ಜನಕರಾಜನು ಕೈಗೊಂಡ ಮಹಾಯಜ್ಞಕ್ಕೆ ತೆರಳಿದರು. ಜನಕನ ಆಸ್ಥಾನದಲ್ಲಿ ಲಕ್ಷ್ಮಣನಿಂದ ಒಡಗೂಡಿದ ಶ್ರೀರಾಮನು ಗುರುಗಳು ತನಗೆ ಕಲಿಸಿದ ಧನುರ್ವಿದ್ಯಾ ಕೌಶಲ್ಯವನ್ನು ತೋರಿಸಿದನು. ರಾಮನ ಶಸ್ತ್ರಾಸ್ತ್ರ ಕೋವಿದತ್ವವನ್ನು ಕಂಡು ಪ್ರೀತನಾದ ಜನಕರಾಜನು ತನ್ನ ಮಗಳಾದ ಸೀತೆಯನ್ನು ಶ್ರೀರಾಮನಿಗೆ ಕೊಡಮಾಡಿದ. ಅಯೋನಿಜ ಳಾಗಿದ್ದಳು ಆ ಸೀತೆ. ಸಾಕ್ಷಾತ್ ಲಕ್ಷ್ಮೀದೇವಿಯೇ ಅವಳು ಇದರಂತೆ ಲಕ್ಷ್ಮಣ ಭರತ ಶತೃಘ್ನರಿಗೂ ವಶಿಷ್ಠ ಮೊದಲಾದ ಮುನಿಗಳ ಇಷ್ಟದಂತೆ ಜನಕರಾಜನು ತನ್ನ ಮನೆತನದ ಕನ್ಯೆಯರನ್ನು ಕೊಟ್ಟು ಮದುವೆಮಾಡಿದ. ಆ ನಾಲ್ಕೂ ದಶರಥರಾಜನ ಪುತ್ರರಾದ ರಾಜಕುಮಾರರ ವಿವಾಹವು ನಾಲ್ಕೂ ವಿದೇಹ ಕನ್ಯೆಯರೊಂದಿಗೆ ವೈಭವದಿಂದ ನೆರವೇರಿತು.

## ಮಲತಾಯಿಯ ಮಾತು ರಾಮನ ವನವಾಸಕ್ಕೆ ಹೇತು

ಬಹುಕಾಲ ಕಳೆದ ಬಳಿಕ ದಶರಥರಾಜನ ಮನದಲ್ಲಿ ಶ್ರೀರಾಮನಿಗೆ ತನ್ನ ರಾಜ್ಯ ಭಾರವಹಿಸುವ ಇಚ್ಛೆಯಾಯಿತು. ಅವನ ಈ ಸಂಕಲ್ಪವನ್ನು ಎಲ್ಲ ಪ್ರಜೆಗಳೂ ಮುನಿಮಹರ್ಷಿಗಳೂ, ಗುರುಮಂಡಲದವರೂ, ಪೌರಜಾನಪದರೂ ಅತ್ಯಂತ ಸಂತಸದಿಂದ ಒಪ್ಪಿದರು. ಯೌವರಾಜ್ಯಾಭಿಷೇಕದ ಸಿದ್ಧತೆಗಳು ಮಾಡಲ್ಪಟ್ಟವು. ಆಗ ಮಂಥರೆ ಎಂಬ ದುರ್ಬುದ್ಧಿಯ ಧೂರ್ತ ಮಹಿಳೆಯು ಮಾತ್ಸರ್ಯದಿಂದ ಒಡಗೂಡಿ ದಶರಥನ ಚಿಕ್ಕಮಡದಿಯಾದ ಕೈಕೇಯಿಯ ಬುದ್ಧಿ ಭೇದವನ್ನು ಮಾಡಿದಳು. ಕೈಕೇಯಿಯು ಮಹಾರಾಜನು ಹಿಂದೆ ತನಗೆ ಕೊಟ್ಟ ವರಗಳನ್ನು ನೆನಪಿಸಿ ''ರಾಮನು ವನವಾಸಕ್ಕೆ ಹೋಗಲಿ; ಭರತನಿಗೆ ಪಟ್ಟಾಭಿಷೇಕ ಆಗಲಿ'' ಎಂದು ಕೇಳಿದಳು. ರಾಮನ ರಾಜ್ಯಾಭಿಷೇಕಕ್ಕೆ ವಿಘ್ನವನ್ನು ಮಾಡಿ ಭರತನಿಗೆ ಪಟ್ಟಕಟ್ಟಬೇಕೆಂದು ಹಟಹಿಡಿದು ದಶರಥನನ್ನು ಮತ್ತೆ ಮತ್ತೆ ಬಲಾತ್ಕರಿಸಿದಳು. ಆದರೆ ದಶರಥನು ಕೈಕೇಯಿಯ ಈ ಮಾತನ್ನು ಒಪ್ಪಲಿಲ್ಲ. ಪರಂತು ಪಿತೃ-ಭಕ್ತನಾದ ಶ್ರೀರಾಮನು ತನ್ನ ತಂದೆಯ ಮಾತನ್ನು ಸತ್ಯವನ್ನಾಗಿ ಮಾಡಲು ಅರಣ್ಯಕ್ಕೆ ಹೊರಟ. ಸೀತೆಯು ಅವನನ್ನು ಹಿಂಬಾಲಿಸಿದಳು. ಲಕ್ಷ್ಮಣನೂ ಅವರನ್ನು ಬೆಂಬಲಿಸಿ ಅರಣ್ಯಕ್ಕೆ ತೆರಳಿದ. ಸತ್ಪುರುಷರ ಮನಸ್ಸು ಯಾವಾಗಲೂ ಪರಿಶುದ್ಧ ಅಂತ ಸನ್ಮಾನಸದಲ್ಲಿ ರಾಜ್ಯಲೋಭ ಸ್ವಾರ್ಥಗಳಿಗೆ ಪ್ರವೇಶವಿಲ್ಲ. ಆದುದರಿಂದ ಶ್ರೀರಾಮನು ಯಾವುದೇ ಮನೋವ್ಯಥೆಯಿಲ್ಲದೇ ನಿರ್ವಿಕಾರನಾಗಿ ಸಂತೋಷದಿಂದಲೇ ಕಾಡಿಗೆ ಹೋದ. ಪರಮಪತಿವ್ರತೆಯಾದ ಸೀತೆಯು ಮಹಾತ್ಮನಾದ ಲಕ್ಷ್ಮಣನೂ ಸ್ವಯಂ ಪ್ರೇರಣೆ ಯಿಂದಲೇ ವನವಾಸಕ್ಕೆ ರಾಮನೊಂದಿಗೆ ತೆರಳಿದರು. ಇತ್ತ ದಶರಥರಾಜನು ಪುತ್ರಶೋಕದಿಂದ ತೊಳಲಿ ಬಳಲಿ ಹಿಂದೆ ತನಗೆ ಬಂದ ಬ್ರಾಹ್ಮಣಶಾಪವನ್ನು ನೆನೆದು

ಮನದಲ್ಲಿಯೇ ಮರುಗಿದ. ದುಃಖಸಾಗರದಲ್ಲಿ ಕರಗಿದ. ಸತ್ಪುತ್ರರಾದ ರಾಮಲಕ್ಷ್ಮಣ ಸದ್ಗುಣಶೀಲ ಶಾಲಿನಿಯಾದ ಸೀತೆಯ ಪಾತಿವ್ರತ್ಯಗಳನ್ನು ನೆನೆದು ದುಃಖದಿಂದ ಅವರನ್ನೇ ಸ್ಮರಿಸುತ್ತ ಪ್ರಾಣ ಪರಿತ್ಯಾಗ ಮಾಡಿದ.

ಮುಂದೆ ರಾಮನು ಅರಣ್ಯದಲ್ಲಿ ಸಂಚರಿಸುತ್ತ ಚಿತ್ರಕೂಟಕ್ಕೆ ಸತೀಸೋದರರೊಂದಿಗೆ ಆಗಮಿಸಿದ. ಮೂರು ವರುಷ ಅಲ್ಲಿಯೇ ವಾಸಮಾಡಿದ. ಅಲ್ಲಿಂದ ದಕ್ಷಿಣ ದಿಕ್ಕಿಗೆ ಪ್ರವೇಶ. ದಂಡಕಾರಣ್ಯಕೆ ಪ್ರಯಾಣ ಬೆಳೆಸಿದ. ದಂಡಕಾರಣ್ಯದಲ್ಲಿ ಅಸಂಖ್ಯ ರಾಕ್ಷಸರು ಆ ರಾಕ್ಷಸರ ಭಯದಿಂದ ಋಷಿಗಳು ಆ ಬೆಂಗಾಡನ್ನು ತ್ಯಜಿಸಿ ಬಿಟ್ಟಿದ್ದರು. ಅಂಥ ಗೊಂಡಾರಣ್ಯದಲ್ಲಿ ರಾಮನು ಸಂಚರಿಸಿದ. ಅಲ್ಲಿದ್ದ ಪಾಪಿಗಳಾದ ರಾಕ್ಷಸರನ್ನೆಲ್ಲ ಸಂಹರಿಸಿದ. ಹೀಗೆ ದಂಡಕಾರಣ್ಯದಲ್ಲಿ ಸಂಚಾರ ಮಾಡುತ್ತ ಶ್ರೀರಾಮನು ಗೌತಮೀ ನದೀ ತೀರಕ್ಕೆ ಬಂದ.

ಇತ್ತ ರಾಮ ಲಕ್ಷ್ಮಣರು ಗೌತಮೀತೀರಕ್ಕೆ ಬಂದಾಗ ಅತ್ತ ದಶರಥ ಮಹಾರಾಜನು ಯಮಲೋಕದಲ್ಲಿ ನರಕದಲ್ಲಿ ನವೆಯುತ್ತಲಿದ್ದ. ಅವನು ತನ್ನ ತಾರುಣ್ಯದಲ್ಲಿ ಶ್ರವಣಕುಮಾರನನ್ನು ಬಾಣಬಿಟ್ಟು ಹೊಡೆದು ಕೊಂದಿದ್ದನಲ್ಲವೆ? ಆದರಿಂದ ಅವನಿಗೆ ಮೂರು ಬ್ರಹ್ಮಹತ್ಯಾ ದೋಷಗಳು ಬಂದಿದ್ದವು. ಶ್ರವಣಕುಮಾರ, ಅವನ ತಂದೆ ವೈಶ್ರವಣ ಮುನಿ ಮುತ್ತು ಶ್ರವಣನ ತಾಯಿ ಮೂವರನ್ನು ವಧಿಸಿದ್ದಕ್ಕೆ ಮೂರು ಬ್ರಹ್ಮಹತ್ಯಾ ಪಾಪಗಳು ತಟ್ಟಿ ತಿಕ್ಕಿ ಮುಕ್ಕುತ್ತಲೇ ಇದ್ದವು. ವಶಿಷ್ಠ ವಾಮದೇವ ಮುಂತಾದ ಋಷಿಗಳು ಅಶ್ವಮೇಧ ಯಾಗ ಮಾಡಿಸಿ ಅವನ ಬ್ರಹ್ಮಹತ್ಯಾ ಪಾಪಗಳನ್ನು ಕಳೆಯಲು ಯತ್ನಿಸಿದ್ದರೂ ಆ ಪಾಪಗಳು ಪೂರ್ಣ ಪರಿಹಾರವಾಗಿರಲಿಲ್ಲ. ತಕ್ಕಮಟ್ಟಿಗೆ ಉಪಮರ್ದವಾಗಿ ರಾಮಾದಿ ಅವತಾರಕ್ಕೆ ಇದ್ದ ಪ್ರತಿಬಂಧಕ ದೂರವಾಗಿದ್ದರೂ ಆ ಪ್ರಾರಬ್ಧವು ಅವನನ್ನು ಇನ್ನೂ ಬಿಟ್ಟಿರಲಿಲ್ಲ. ಅದಕ್ಕಾಗಿ ಅವನು ನರಕದಲ್ಲಿ ದುಃಖವನ್ನು ಯಮಯಾತನೆಯನ್ನು ಅನುಭವಿಸಬೇಕಾಗಿ ಬಂದಿದ್ದಿತು. ರಾಮಲಕ್ಷ್ಮಣರು ಸೀತೆಯೊಂದಿಗೆ ಗೌತಮೀತೀರಕ್ಕೆ ಬಂದಾಗ ಯಮದೇವರು ತನ್ನ ಸಂಯಮೀನೀಪುರದಲ್ಲಿ ತನ್ನ ದೂತರಿಗೆ ಹೇಳಿದ "ದೂತರೆ, ರಾಮಲಕ್ಷ್ಮಣರು ಗೌತಮೀತೀರವನ್ನು ಸಮೀಪಿಸಿದ್ದಾರೆ. ಆ ನದಿಯಲ್ಲಿ ಅವರೆಲ್ಲರೂ ಸ್ನಾನಮಾಡಿ ಪಿತೃಶ್ರಾದ್ಧ ಮಾಡಿದರೆ ಅವರ ತಂದೆಯಾದ ದಶರಥನ ಪಾಪಗಳೆಲ್ಲವೂ ಪರಿಹಾರವಾಗುವವು. ಈಗ ಅವನ ಮಕ್ಕಳು ಗೌತಮೀ ತೀರದಲ್ಲಿ ಸಮೀಪಿಸಿದ್ದರಿಂದಲೇ ಅವನ ಎಷ್ಟೋ ಪಾಪಗಳು ತೊಳೆದುಹೋಗಿವೆ. ಈಗಲೇ ದಶರಥನನ್ನು ನರಕದಿಂದ ಮೇಲಕ್ಕೆತ್ತಿರಿ." ದಶರಥರಾಜನನ್ನು ಯಮದೂತರು ನರಕದಿಂದ ಮೇಲಕ್ಕೆ ಎತ್ತಿದರು. ಯಮಯಾತನೆಗಳಿಂದ ಒಮ್ಮೆಲೇ ಪಾರಾದ ಆ ಅಯೋಧ್ಯಾಧಿಪತಿಗೆ ಸಂತೋಷ ಉಂಟಾಯಿತು. ಅವನು ಯಮದೂತರನ್ನು ಕೇಳಿದ "ಈ ಘೋರನರಕದಿಂದ ನನ್ನನ್ನು ಮೇಲಕ್ಕೆ ಎತ್ತಿದ್ದಕ್ಕಾಗಿ ನಿಮಗೆ ಅಭಿನಂದನೆಗಳು. ಆದರೆ ಒಮ್ಮೆಲೇ ನನ್ನನ್ನು ಈ ನರಕ ರೂಪದಿಂದ ಮೇಲೆತ್ತಲು ಏನು ಕಾರಣ?" ಎಂದು ಕೇಳಿದನು.

ಆಗ ಓರ್ವ ಯಮದೂತನು ದಶರಥನಿಗೆ "ಮಹಾರಾಜ ನಿನ್ನ ಮಕ್ಕಳು ಈಗ ಭೂಲೋಕದಲ್ಲಿ ಗೌತಮೀ ತೀರದ ಬಳಿ ಬಂದಿದ್ದಾರೆ ಆ ಗೌತಮಿಯನ್ನು ಸಮೀಪಿಸಿದ್ದರಿಂದಲೇ ನಿನಗೆ ಈ ನರಕಾರ್ಣವದಿಂದ ಉತ್ತಾರಣವಾಗಿದೆ. ಇನ್ನು ಅವರು ಈ ಗೌತಮೀತೀರದಲ್ಲಿ ನಿನ್ನನ್ನು ಸ್ಮರಿಸಿ ಸ್ನಾನ ಪಿಂಡಪ್ರದಾನ ಮಾಡಿದರೆ ನಿನ್ನ ಮೂರು

ಬ್ರಹ್ಮಹತ್ಯಾ ಪಾಪಗಳು ಪರಿಹಾರವಾಗಿ ನೀನು ನಿಷ್ಕಲ್ಮಷನಾಗಿ ದಿವ್ಯವಾದ ನಾಕಲೋಕವನ್ನು ಪಡೆಯುವಿ'' ಎಂದು ಹೇಳಿದರು. ಆಗ ದಶರಥರಾಜನು, ''ದೂತರೇ ಈಗ ನೀವು ಕಿಂಚಿತ್ ಕಾಲ ಇಲ್ಲಿಂದ ಬಿಡುಗಡೆ ಮಾಡಿರಿ. ನಾನು ನನ್ನ ಭೂಲೋಕಕ್ಕೆ ನನ್ನ ಮಕ್ಕಳಿದ್ದಲ್ಲಿಗೆ ಹೋಗಿ ಅವರಿಗೆ ಗೌತಮೀ ತೀರದಲ್ಲಿ ನನ್ನ ಶ್ರಾದ್ಧ ಮಾಡಲು ಹೇಳುವೆನು'' ಎಂದು ಕೇಳಿಕೊಂಡ.

## ಗೌತಮೀತೀರದ ಶ್ರಾದ್ಧ ದಿವ್ಯದೇಹ ಸಿದ್ಧ

ಆಗ ಯಮದೂತರು ದಶರಥರಾಜನನ್ನು ಬಿಡುಗಡೆ ಮಾಡಿದರು. ಕೂಡಲೇ ಆ ಮಹಾರಾಜನು ಯಾತನಾಶರೀರದಿಂದ ಇದ್ದರೂ ಗೌತಮೀತೀರಕ್ಕೆ ಬಂದ, ರಾಮ ಲಕ್ಷ್ಮಣ ಸೀತೆಯರು ಯಾತನಾಶರೀರದಲ್ಲಿದ್ದ ದಶರಥನನ್ನು ನೋಡಿದರು. ಆ ವಿಕಾರ ರೂಪದಲ್ಲಿ ಅವರಿಗೆ ಆ ದಶರಥನ ಗುರುತು ಸಿಗಲಿಲ್ಲ. ಇವನಾವನೋ ರಾಕ್ಷಸನಿರ ಬಹುದು ಎಂದು ಲಕ್ಷ್ಮಣನು ಖಡ್ಗ ಹಿರಿದ. ಆಗ ದಶರಥನು ಲಜ್ಜೆಯಿಂದ ತಲೆ ತಗ್ಗಿಸಿ ನುಡಿದ ''ಕುಮಾರರೇ, ನಾನು ನಿಮ್ಮ ತಂದೆಯಾದ ದಶರಥ. ನಾನು ಪ್ರಾಯದಲ್ಲಿದ್ದಾಗ ಒಬ್ಬ ಬ್ರಾಹ್ಮಣ ಹಾಗೂ ಅವನ ಮುಪ್ಪಿನ ತಾಯ್ತಂದೆಯರನ್ನು ಸಾವಿಗೀಡು ಮಾಡಿದ್ದೆ. ಆದರಿಂದ ಮೂರು ಬ್ರಹ್ಮಹತ್ಯಾ ಪಾತಕಗಳು ನನಗೆ ಅಂಟಿಕೊಂಡಿವೆ ಅದರಿಂದಲೇ ನನಗೆ ನರಕದಲ್ಲಿ ಬೇಯಬೇಕಾಗಿ ಬಂದಿದೆ. ಈ ಕಾರಣಕ್ಕಾಗಿಯೇ ನನಗೀಭೀಕರ ಯಾತನಾಶರೀರ ಪ್ರಾಪ್ತವಾಗಿದೆ.

ದಶರಥನ ಈ ಮಾತುಗಳನ್ನು ಕೇಳಿ ಆ ಮೂವರಿಗೂ ಬಹಳ ದುಃಖವಾಯಿತು. ಶ್ರೀರಾಮನಿಗಂತೂ ತಂದೆಯ ಕಷ್ಟವನ್ನು ನೋಡಿ ದಿಗ್‌ಭ್ರಮೆಯಾಯಿತು. ದುಃಖಾತಿಶಯ ದಿಂದ ಅವನು ಮೂರ್ಛಿತನಾಗಿ ಬಿದ್ದುಬಿಟ್ಟ. ಆಗ ಸೀತಾದೇವಿಯು ಬಂದು ''ಆರ್ಯಪುತ್ರ, ತಮ್ಮಂಥ ಮಹಾತ್ಮರು ದುಃಖಬಂದರೂ ದುಃಖಿಸುವುದಿಲ್ಲ. ದೈವ ಪ್ರಯತ್ನವನ್ನಾಗಲೀ ಮನುಷ್ಯ ಪ್ರಯತ್ನವನ್ನಾಗಲೀ ಮಾಡಲು ಉದ್ಯುಕ್ತರಾಗುವರು ನೀವು ಸಾವಿರ ಯುಗಗಳವರೆಗೆ ದುಃಖಪಟ್ಟರೂ ಈ ವಿಪತ್ತು ಕಳೆದು ಹೋಗಲಾರದು. ಬುದ್ಧಿವಂತರು ಹೀಗೆಂದೂ ಮೋಹಗೊಳ್ಳುವದಿಲ್ಲ. ಪ್ರಭು, ನಿನ್ನಲ್ಲಿ ನನ್ನದೊಂದು ಬೇಡಿಕೆ. ನಾವು ಈ ಗೌತಮೀತೀರದಲ್ಲಿ ಸ್ನಾನ ಮಾಡೋಣ. ಇಲ್ಲಿ ನಿಮ್ಮ ತಂದೆಯನ್ನು ಉದ್ದೇಶಿಸಿ ಶ್ರಾದ್ಧಮಾಡಿ ಪಿಂಡಪ್ರದಾನ ಮಾಡಿರಿ. ನಾವು ಮೂರು ಜನರ ಗೌತಮೀ ಸ್ನಾನ ಹಾಗೂ ಪಿಂಡಪ್ರದಾನಗಳಿಂದ ನಿಮ್ಮ ತಂದೆಯ ಮೂರೂ ಬ್ರಹ್ಮಹತ್ಯಾ ದೋಷಗಳು ಕಾವಾಗಿ ಪರಿಹೃತವಾಗುವವು'' ಎಂದು ಸಲಹೆ ಮಾಡಿದಳು. ಶ್ರೀರಾಮನು ಲಕ್ಷ್ಮಣ ನೊಂದಿಗೆ ಗೌತಮೀಸ್ನಾನ ಮಾಡಿ ಇಂಗುದೀಮರದ ಕಾಯಿಗಳನ್ನು, ಪಿಣ್ಯಾಕವನ್ನೂ ಉಪಯೋಗಿಸಿ ದಶರಥರಾಜನನ್ನು ಉದ್ದೇಶಿಸಿ ಪಿಂಡಪ್ರದಾನ ಮಾಡಿದನು. ಆಗ ಅಲ್ಲಿಯೇ ರಾಮಲಕ್ಷ್ಮಣ ಸೀತೆಯರ ಕಣ್ಣೆದುರು ಒಂದು ಅತ್ಯಾಶ್ಚರ್ಯ ನಡೆಯಿತು.

ಘೋರತರವಾದ ದಶರಥನ ಯಾತನಾಶರೀರ ತಕ್ಷಣ ಬಿದ್ದು ಹೋಗಿ ಅವನಿಗೆ ದಿವ್ಯಶರೀರ ಪ್ರಾಪ್ತವಾಯಿತು. ಆಗ ಅಲ್ಲಿ ದಶರಥರಾಜನ ಶವವು ಬಿದ್ದ ಸ್ಥಳವು 'ಶವತೀರ್ಥ' ಎಂದು ಪ್ರಸಿದ್ಧವಾಯಿತು. ಕೂಡಲೇ ಆ ತೀರ್ಥಕ್ಕೆ ಸ್ವರ್ಗದಿಂದ ಲೋಕಪಾಲಕರೂ, ರುದ್ರರೂ, ಆದಿತ್ಯರೂ, ಅಶ್ವಿನೀ ದೇವತೆಗಳೂ ಎಲ್ಲರೂ ವಿಮಾನಾರೂಢರಾಗಿ ದಯಮಾಡಿಸಿದರು. ಆ ಎಲ್ಲ ದೇವತೆಗಳ ಮಧ್ಯದಲ್ಲಿ ದಶರಥ

ರಾಜನು ವಿಮಾನಾರೂಢನಾಗಿ ಕುಳಿತುಕೊಂಡಿದ್ದ. ಸೂರ್ಯನಂತೆ ಪ್ರಕಾಶಮಾನವಾದ ಆ ದಶರಥಮಹಾರಾಜನನ್ನು ಕಿನ್ನರರು ಸ್ತೋತ್ರಮಾಡುತ್ತಿದ್ದರು.

ಇತ್ತ ಇಷ್ಟು ಹೊತ್ತಿನವರೆಗೆ ಯಾತನಾಮಯವಾದ ಶವರೂಪದಲ್ಲಿದ್ದ ತಂದೆಯನ್ನು ಕಾಣದೇ ರಾಮನು ವಿಮಾನದಲ್ಲಿ ಕುಳಿತ ದೇವತೆಗಳನ್ನು ಕೈಮುಗಿದು "ನಮ್ಮ ತಂದೆ ಎಲ್ಲಿ" ಎಂದು ಕೇಳಿದ. ಆಗ ಆ ದೇವತೆಗಳ ದಿವ್ಯವಾಣಿಯು ಹೀಗೆ ನುಡಿಯಿತು.

"ನಿನ್ನ ತಂದೆ ದಶರಥರಾಜನ ಮೂರು ಬ್ರಹ್ಮಹತ್ಯಾ ದೋಷಗಳು ನೀವು ಮೂವರೂ ಗೌತಮಿಯಲ್ಲಿ ಸ್ನಾನಮಾಡಿದ್ದರಿಂದ ಪರಿಹಾರಗೊಂಡಿವೆ. ನೀವು ಮಾಡಿದ ಪಿಂಡಪ್ರದಾನದ ಮಹಿಮೆಯಿಂದ ಅವನಿಗೆ ಅವನ ಪಾಪಶರೀರವು ಬಿದ್ದು ದಿವ್ಯರೂಪ ಬಂದಿದೆ. ದಿವ್ಯವಿಮಾನದಲ್ಲಿ ದೇವತೆಗಳ ಜೊತೆ ನಿನ್ನ ತಂದೆ ಕುಳಿತಿದ್ದಾನೆ ಅತ್ತ ನೋಡು."

ಆಗ ರಾಮನು ವಿಮಾನಾರೂಢನಾದ ತಮ್ಮ ತಂದೆಗೆ ಆ ಸೀತಾಲಕ್ಷ್ಮಣರೊಂದಿಗೆ ಸಾಷ್ಟಾಂಗ ವಂದನೆಗೈದ. ಆಗ ದಶರಥನು ಅವನಿಗೆ "ಎಲೈ ರಾಮ ನೀನು ಕೃತಕೃತ್ಯನಾದೆ. ನಿನಗೆ ಮಂಗಳವಾಗಲಿ. ನೀನು ಸೀತಾಲಕ್ಷ್ಮಣರೊಂದಿಗೆ ಗೌತಮಿಯಲ್ಲಿ ಮಿಂದು ಪಿಂಡ ಪ್ರದಾನಮಾಡಿದ್ದರಿಂದ ನಾನು ನರಕದಿಂದ ಪಾರಾದೆ ಮತ್ತು ಸ್ವರ್ಗವನ್ನು ಆರೋಹಿಸಲು ಉದ್ಯುಕ್ತನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿನ್ನಿಂದ ನಾನು ಉದ್ಧರಿಸಲ್ಪಟ್ಟೆ. ಹೀಗೆ ಜಗತ್ತಿನಲ್ಲಿ ಪಿತೃಗಳನ್ನು ಉದ್ಧರಿಸುವ ಪುತ್ರನೇ ಧನ್ಯ." ಎಂದು ಹೇಳಿ ಲಕ್ಷ್ಮಣ ಸೀತೆಯರಿಗೂ ಶ್ರೀರಾಮನೊಂದಿಗೆ ಆಶೀರ್ವಾದ ಮಾಡಿ ವಿಮಾನದಿಂದ ಸ್ವರ್ಗಾರೋಹಣ ಮಾಡಿದ. ಶ್ರೀರಾಮನು ದೇವತೆಗಳ ಮುಖದಿಂದ ದಕ್ಷಿಣದ ಗಂಗೆ ಎಂದು ಹೆಸರಾದ ಗೌತಮಿಯ ಮಹಾತ್ಮ್ಯವನ್ನು ಕೇಳಿ ಆಶ್ಚರ್ಯಚಕಿತನಾದ. ಅದೇ ಗೌತಮೀ ತೀರದಲ್ಲಿ ಸಂತೋಷದಿಂದ ಶಿವನನ್ನು ಪ್ರತಿಷ್ಠೆಗೈದು ಲೋಕಶಿಕ್ಷಣಕ್ಕಾಗಿ ಅರ್ಚಿಸಿ ಸ್ತುತಿಸಿದ. ಜನರು ಶಿವನನ್ನು ಹೇಗೆ ಧ್ಯಾನಿಸಬೇಕೆನ್ನುವದನ್ನು ಲೋಕವಿಡಂಬನಕ್ಕಾಗಿ ತಾನು ಬಾಯಿಂದ ಉಚ್ಚರಿಸಿ ಶಿವಭಕ್ತರಿಗೆಲ್ಲ ಮಾರ್ಗದರ್ಶನ ಮಾಡಿದ.

**ನಮಾಮಿ ಸಂಭುಂ ಪುರುಷಂ ಪುರಾಣಂ**
**ನಮಾಮಿ ಸರ್ವಜ್ಞಮಪಾರ ಭಾವಮ್**
**ನಮಾಮಿ ರುದ್ರಂ ಪ್ರಭುಮಕ್ಷಯಂತಂ**
**ನಮಾಮಿ ಶರ್ವಂ ಶಿರಸಾ ನಮಾಮಿ**
**ನಮಾಮಿ ದೇವಂ ಭವದುಃಖ ಶೋಕ ವಿನಾಶನಂ ಚಂದ್ರಧರಂ ನಮಾಮಿ**
**ನಮಾಮಿ ಗಂಗಾಧರ ಮೀಶಮೀಡ್ಯ- ಮುಮಾಧವಂ ದೇವವರಂ ॥**
**ನಮಾಮಿ ಅಜಾದೀಶ ಪುರಂದರಾದಿ ಸುರಾಸುರೈರರ್ಚಿತಪಾದಪದ್ಮಂ ॥**

ಹೀಗೆ ಶಂಕರನನ್ನು ಶ್ರೀರಾಮನು ಸ್ತೋತ್ರಗೈದ. ಆಗ ಆ ಕೈಲಾಸಪತಿಯು ಪ್ರಸನ್ನನಾಗಿ ನುಡಿದ. "ಶ್ರೀರಾಮ, ನಿನಗೆ ಮಂಗಳವಾಗಲಿ ಬೇಕಾದ ವರ ಕೇಳು."

ಆಗ ಶ್ರೀರಾಮನು "ಮಹಾದೇವ ನಾನು ಮಾಡಿದ ಈ ನಿನ್ನ ಸ್ತೋತ್ರದಿಂದ ಯಾರು ನಿನ್ನನ್ನು ಸ್ತುತಿಸುವರೋ ಅವರ ಕಾರ್ಯಗಳೆಲ್ಲವೂ ಸಿದ್ಧಿಸಲಿ. ಈ ತೀರ್ಥದಲ್ಲಿ ಪಿಂಡಪ್ರದಾನವನ್ನು ಮಾಡಿದವರ ಪಿತೃಗಳು ನರಕದಿಂದ ಉದ್ಧೃತರಾಗಿ ಪವಿತ್ರಾತ್ಮರಾಗಿ ಸ್ವರ್ಗವನ್ನು ಪಡೆಯಲಿ. ಹುಟ್ಟಿದಂದಿನಿಂದ ಮಾನವರು ಮಾಡಿದ ಮಾನಸಿಕ ವಾಚಿಕ,

ಕಾಯಿಕ ಮೂರು ವಿಧ ತಾಪಗಳೂ, ಪಾಪಗಳೂ ಈ ತೀರ್ಥಸ್ನಾನಮಾತ್ರದಿಂದ ನಾಶವಾಗಲಿ. ಇಲ್ಲಿ ನೀಡಿದ ಪ್ರತಿಯೊಂದು ದಾನಕ್ಕೂ ಅಕ್ಷಯಫಲ ಲಭಿಸಲಿ'' ಹೀಗೆ ಕೇಳಿದ ಶ್ರೀರಾಮನಿಗೆ ಶಂಕರನು ತಥಾಸ್ತು ಎಂದು ಅಂತರ್ಧಾನ ಹೊಂದಿದ. ಆಮೇಲೆ ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ಗೌತಮೀನದಿಯ ಉತ್ಪತ್ತಿಸ್ಥಾನಕ್ಕೆ ತೆರಳಿದ.

ಅಂದಿನಿಂದ ಆ ತೀರ್ಥವು ರಾಮತೀರ್ಥ ಎಂದು ಹೆಸರಾಯಿತು. ಲಕ್ಷ್ಮಣನ ಕೈಯಿಂದ ಬಾಣ ಬಿದ್ದ ಸ್ಥಳ ಬಾಣತೀರ್ಥ ಎಂದು ಹೆಸರಾಯಿತು. ಲಕ್ಷ್ಮಣಸ್ನಾನಮಾಡಿದ ತೀರ್ಥ ಲಕ್ಷ್ಮಣತೀರ್ಥ ಸೀತೆಯು ಭಗವಂತನನ್ನು ಬೆಳಸಿದ ಸ್ಥಳ ಸೀತಾತೀರ್ಥವೆಂದು ಪ್ರಸಿದ್ಧ ವಾಗಿದೆ. ನಾರಾಯಣಸ್ವರೂಪಿಯು ಶ್ರೀರಾಮನಪಾದಸಂಬಂಧದಿಂದ ಲೋಕಪಾವನೆ ಯಾದಳು. ಇಂಥ ರಾಮನು ಸ್ನಾನ ಮಾಡಿದ ರಾಮತೀರ್ಥದ ಮಹಿಮೆಯನ್ನು ಮತ್ತೆ ಮತ್ತೆ ಹೇಳಬೇಕಾಗಿಲ್ಲ. ರಾಮತೀರ್ಥದಂತ ತೀರ್ಥವು ಜಗತ್ತಿನಲ್ಲಿ ಬೇರೆಲ್ಲೂ ಇಲ್ಲ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು*

## ಪುತ್ರತೀರ್ಥ

**ಅಧ್ಯಾಯ - ೩೦**

**ಬ್ರಹ್ಮದೇವ:-** ನಾರದ, ಈ ಗೌತಮೀತೀರದಲ್ಲಿ ಪುತ್ರತೀರ್ಥ ಎಂಬ ಒಂದು ಪುಣ್ಯತೀರ್ಥವು ಇರುತ್ತದೆ. ಆ ತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳಿ.

ಹಿಂದೆ ದೇವದೈತ್ಯರಲ್ಲಿ ಭೀಕರ ಯುದ್ಧ ನಡೆಯಿತು. ದನುದೇವಿಯ ಮಕ್ಕಳಾದ ದಾನವರೂ ದೈತ್ಯರಿಗೆ ಬೆಂಬಲವಾಗಿ ಅಮರ ಸೇನೆಯೊಂದಿಗೆ ಹಣಾಹಣೆ ಹೋರಾಟಕ್ಕೆ ಅಣಿಯಾಗಿದ್ದರು. ದೈತೇಯರೂ ದಾನವರೂ ಒಗ್ಗಟ್ಟಾಗಿ ಕಲಿತನದಿಂದ ಕಾದಿದರೂ ವಿಜಯಲಕ್ಷ್ಮಿ ಅವರಿಗೆ ಒಲಿಯಲಿಲ್ಲ. ಆ ಕದನದಲ್ಲಿ ದೇವತೆಗಳ ಕೊರಳಿಗೆ ಜಯಮಾಲೆ. ದೈತ್ಯ ದಾನವರ ಕೊರಳಿಗೆ ಸೋಲಿನ ಸರಮಾಲೆ ಬಿದ್ದವು. ದೈತ್ಯರೂ ದಾನವರೂ ಪರಾಜಿತರಾಗಿ ಹತಪತಿತರಾಗಿ ಧಾರಾತೀರ್ಥದಲ್ಲಿ ಧರಾಶಾಯಿಯಾದರು. ಅಳಿದುಳಿದವರು ಪಲಾಯನ ಸೂಕ್ತ ಪಠಿಸಿ ಪ್ರಾಣ ಉಳಿಸಿಕೊಂಡರು.

ಇದರಿಂದ ದೈತ್ಯರ ತಾಯಿಯಾದ ದಿತಿದೇವಿಗೆ ಬಹಳ ದುಃಖವಾಯಿತು. ಅವಳು ತನ್ನ ಸವತಿಯಾದ ದನುದೇವಿಯ ಬಳಿಗೆ ಬಂದಳು. ದನುವಿನ ಪುತ್ರರಾದ ದಾನವರೂ ಕೂಡ ಆ ಸುರಾಸುರ ಸಂಗ್ರಾಮದಲ್ಲಿ ಸೋಲಿನ ಸವಿ ಉಂಡವರೇ, ಮರಣಾಂತಿಕ ನೋವು ನರಕಗಳನ್ನು ಕಂಡವರೇ. ಆದುದರಿಂದಲೆ ಬೆಂದೊಡಲಿನ ದಿತಿಗೂ ನೊಂದೊಡಲಿನ ದನುವಿಗೂ 'ಗಳಸ್ಯ ಗಂಟಸ್ಯ' ಸ್ನೇಹ ಎಂದಿನಿಂದಲೂ, ಈ ಯುದ್ಧದ ನಂತರ ಇನ್ನೂ ದಟ್ಟವಾಯಿತು ಆ ಸವತಿಯರ ನಡುವಿನ ನೇಹದ ನಂಟು. ಇಬ್ಬರೂ ಗಾಢವಾಗಿ ಗೂಢವಾಗಿ ಆಲೋಚನೆ ಗೈದರು. ತಮ್ಮ ಪುತ್ರರ ಪರಾಭವದ ಕಾರಣವನ್ನು ಸುತರ ಸೋಲು ಸಾವುಗಳಿಂದ ಸಂತಪ್ತಳಾದ ದಿತಿದೇವಿಗೆ ದನುವು ಒಂದು ಸಲಹೆಯನ್ನು ನೀಡಿದಳು. ''ದಿತಿದೇವಿ, ನೀನು ಪತಿಯಾದ ಕಶ್ಯಪರಿಗೆ ಮೆಚ್ಚಿನ ಮಡದಿ. ನೀನು ಇನ್ನೂ ಹೆಚ್ಚಿನ ಸೇವಾಶುಶ್ರೂಷೆಗಳನ್ನು ಮಾಡಿ ಅವರನ್ನು ಒಲಿಸಿಕೋ ಕಶ್ಯಪರು 'ಕರ್ತುಂ ಅಕರ್ತುಂ ಅನ್ಯಥಾತಕರ್ತುಂಚ' ಸಮರ್ಥರು ದೇಹವನ್ನು ದಂಡಿಸಿ ಎಡೆಬಿಡದೆ ಆರಾಧಿಸು ಆ ನಿನ್ನ

ಪತಿದೇವರನ್ನು. ಪ್ರೀತರಾದ ಅವರಿಗೆ ದೇವತೆಗಳನ್ನು ಗೆಲ್ಲುವ, ಇಂದ್ರನನ್ನು ಕೊಲ್ಲುವ ಓರ್ವ ಸಮರ್ಥ ಪುತ್ರನನ್ನು ಕರುಣಿಸುವಂತೆ ಕೇಳಿಕೊ. ಸರ್ವಶಕ್ತರು ನಮ್ಮಿಬ್ಬರ ಪತಿದೇವರಾದ ಆ ಮಹಾ ಮಹರ್ಷಿಗಳು ಅವರ ತಪೋಬಲದ ಆಶೀರ್ವಾದದಿಂದ ನಿನ್ನ ಇಷ್ಟಸಿದ್ಧಿ ಆಗುವುದು, ನಮ್ಮಿಬ್ಬರ ಕಷ್ಟಪರಿಹಾರವೂ ಆಗುವುದು.''

ಆ ದೈತ್ಯರ ಹೆತ್ತವ್ವ ಆ ಕ್ಷಣದಲ್ಲಿಯೇ ಅನುಷ್ಠಾನಕ್ಕೆ ಇಳಿಸಿದಳು ದನುವಿನ ಸೂಚನೆಯನ್ನು. ಹಗಲಿರುಳು ಪತಿಸೇವೆಗೈದಳು. ಕಾಯಕ್ಲೇಶವನ್ನು ಕಡೆಗಣಿಸಿ ತನುವನ್ನು ತೇದಳು. ಪರಿಪರಿಯಿಂದ ಪರಿಚರ್ಯೆಯನ್ನು ಮಾಡಿ ಪ್ರಿಯತಮನ ಪ್ರೇಮಪೂರ್ಣವಾದ ಅನುಗ್ರಹಕ್ಕೆ ಪಾತ್ರಳಾದಳು. ಅವಳ ಈ ನಿರಂತರ ಸೇವಾಶುಶ್ರೂಷೆಗಳಿಂದ ಪರಮ ಪ್ರಸನ್ನರಾದರು ತಪಸ್ವಿ ಕಶ್ಯಪರು. ನಲುಮೆದುಂಬಿ ನುಡಿದರು ತಮ್ಮ ಆ ನೆಚ್ಚಿನ ನಲ್ಲೆಗೆ. ''ಸಾಧ್ವೀಮಣಿಯಾದ ದಿತಿ, ನಿಚ್ಚನಿಚ್ಚಳವಾದ ನಿನ್ನ ಈ ಸೇವಾಭಾವದಿಂದ ನಾನು ಸಂತುಷ್ಟನಾಗಿದ್ದೇನೆ. ಬೇಕಾದ ವರ ಬೇಡು. ನಾನು ನೀಡುತ್ತೇನೆ.''

ಇದೇ ತನಗೊಂದು ಸುವರ್ಣಸಂಧಿ ಎಂದು ಬಗೆದಳು ಆ ಕಶ್ಯಪ ಕುಟುಂಬಿನಿ. ಮಂದಹಾಸಗೈದು ಮೆಲುದನಿಯಲ್ಲಿ ನುಡಿದಳು. ''ಹೃದಯವಲ್ಲಭ, ನೀನು ಪ್ರೀತನಾಗಿದ್ದರೆ ನನಗೆ ಒಬ್ಬ ವೀರಪುತ್ರನನ್ನು ಕರುಣಿಸು. ಅವನು ಜಗಜ್ಜೇತಾರ ನಾಗಬೇಕು. ಅವನು ವೀರಮಣಿ ಆಗಬೇಕು. ಸದ್ಗುಣಖಣಿ ಆಗಬೇಕು. ಎಲ್ಲರೂ ವಂದಿಸು ವಂತಿರಬೇಕು. ಅವನ ಗುಣಗೌರವ ಮಹಿಮೆಗಳು ನಾನು ವೀರಮಾತೆ ಎನಿಸಿ ಕೊಳ್ಳಬೇಕು. ಅಂಥ ವೀರವರೇಣ್ಯನಾದ ಶೂರಸತ್ಪುತ್ರನಿಂದ ಕದನದಲ್ಲಿ ಅವನ ಎದುರು ನಿಲ್ಲುವ ಧೈರ್ಯ ಸುರಾಸುರರಲ್ಲಿ ಯಾರಿಗೂ ಇರಬಾರದು. ಇಂಥ ಅಪ್ರತಿಮ ಪರಾಕ್ರಮ ಶಾಲಿಯಾದ ಪ್ರತಾಪಿ ಪುತ್ರನು ಹುಟ್ಟುವಂತೆ ಅನುಗ್ರಹಿಸಿರಿ'' ಎಂದು ಕೇಳಿಕೊಂಡಳು. ಇಂದ್ರನನ್ನೂ ದೇವತೆಗಳನ್ನೂ ಕೊಲ್ಲುವ ಮಗನಾಗಲಿ ಎಂದು ಕೇಳಿಕೊಳ್ಳಲು ಅವಳಿಗೇ ನಾಚಿಕೆ ಆಯಿತು. ಪರ್ಯಾಯವಾಗಿ ಅವಳು ಎಲ್ಲರನ್ನೂ ಅರ್ಥಾತ್ ದೇವತೆಗಳನ್ನೂ ದೇವೇಂದ್ರನನ್ನೂ ಗೆಲ್ಲುವ ಸರ್ವಸಮರ್ಥ ಸತ್ಪುತ್ರನನ್ನು ಕೇಳಿಕೊಂಡಿದ್ದಳು. ''ತಥಾಸ್ತು'' ಎಂದು ನುಡಿದರು ಕಶ್ಯಪರು.

''ದಿತಿ, ಇದಕ್ಕಾಗಿ ನೀನು ಬಹಳ ಕಠಿಣತರವಾದ ವ್ರತವನ್ನು ಕೈಕೊಳ್ಳಬೇಕಾಗುವದು. ಆ ವ್ರತಾಚರಣೆಯ ಅವಧಿಯೂ ಸಣ್ಣದಲ್ಲ. ಹನ್ನೆರಡುವರ್ಷ. ಇಂಥ ದೀರ್ಘಕಾಲದಲ್ಲಿ ದೇಹದಂಡನೆಮಾಡುತ್ತ ಈ ಕಠಿಣ ವ್ರತದ ಕಠೋರ ನಿಯಮ ವಿಧಿವಿಧಾನಗಳನ್ನು ಅನೂಚಾನವಾಗಿ ಪಾಲಿಸಬೇಕಾಗುವದು. ಈ ಸಂದರ್ಭದಲ್ಲಿ ಸಕಲ ತೀರ್ಥಕ್ಷೇತ್ರಯಾತ್ರೆ ಮಾಡಬೇಕು. ಸತ್ಪಾತ್ರದಲ್ಲಿ ದಾನ ನೀಡಬೇಕು. ಯಾವ ವ್ರತವನ್ನೂ ಬಿಡಬಾರದು. ಮಂತ್ರ ಜಪ ಹಾಗೂ ತಪೋನುಷ್ಠಾನ. ಮತ್ತು ದೇವ ಬ್ರಾಹ್ಮಣ ಪರಿಚರ್ಯೆಗಳು ಇದರಲ್ಲಿ ಅವರ್ಜನೀಯ. ಇವಿಲ್ಲದೆ ಯಾವ ಪ್ರಾಣಿಯ ಮನೋರಥಗಳು ಈಡೇರಬಲ್ಲವು!

**ತೀರ್ಥಸೇವಾ ಪಾತ್ರದಾನ ವ್ರತಚರ್ಯಾದಿ ವರ್ಜಿತಾಃ ।**
**ಕಥಮಾಸಾದಯಿಷ್ಯಂತಿ ಪ್ರಾಣಿನೋಽತ್ರಮನೋರಥಾನ್ ॥**

ದಿತಿ, ಸಂಜೆ ಮುಂಜಾವುಗಳು ಸಂಧ್ಯಾಕಾಲ, ಆ ಸಮಯದಲ್ಲಿ ಯಾರ ನಿಂದೆಯನ್ನು ಮಾಡಬಾರದು. ನಿಂದಿತಕರ್ಮಗಳನ್ನು ಆಚರಿಸಬಾರದು.

**ನಿಂದಿತಂಚನ ಕರ್ತವ್ಯಂ ಸಂಧ್ಯಯೋರುಭಯೋರವೆ**
**ನಸುಪ್ತವ್ಯಂ ನಗಂತವ್ಯಂ ಮುಕ್ತಕೇಳೀಚನೋಭವ"**

ತಲೆಗೂದಲನ್ನು ಬಿಚ್ಚಿಕೊಂಡು ಮಲಗಬಾರದು. ಎಲ್ಲಿಯೂ ಹೊರಗೆ ಹೋಗಬಾರದು. ಒನಕೆ, ಒರಳು, ಮರ, ಮಣಿ, ಪೀಠ, ಮುಚ್ಚಳಗಳನ್ನು ಹಗಲಿನಲ್ಲಿ ಯಾಗಲಿ ಇರುಳಿನಲ್ಲಿ ಆಗಲಿ ದಾಟಬಾರದು. ರಾತ್ರಿ ಉತ್ತರದಿಕ್ಕಿಗೆ ತಲೆಕೊಟ್ಟು ಮಲಗ ಬಾರದು. ಸುಳ್ಳು ಹೇಳಬಾರದು. ಪರಪುರುಷರನ್ನು ನೋಡಬಾರದು. ಈ ಎಲ್ಲ ನಿಯಮಗಳನ್ನೂ ನೀನು ತಪ್ಪದೆ ಪಾಲಿಸಿದರೆ ಮೂರು ಲೋಕಗಳನ್ನು ಗೆಲ್ಲಬಲ್ಲ ಪುತ್ರನು ನಿನಗೆ ಜನಿಸುವನು" ಎಂದು ಮುಂತಾಗಿ ವ್ರತ ಸೂಕ್ಷ್ಮಗಳನ್ನೆಲ್ಲ ದಿತಿಗೆ ತಿಳಿಸಿ ಹೇಳಿದರು ಪತಿ ಕಶ್ಯಪರು.

ದೃಢಸಂಕಲ್ಪಗೈದ ದಿತಿದೇವಿಯು ಒಂದು ಅಕ್ಷರವನ್ನು ತಪ್ಪದೆ ದೀರ್ಘಕಾಲೀನವಾದ ಆ ವ್ರತವನ್ನು ಯಾವದೇ ಲೋಪಬಾರದಂತೆ ಯಶಸ್ವಿಯಾಗಿ ಆಚರಿಸಿದಳು. ಆದರಿಂದ ಪ್ರೀತರಾದ ಕಶ್ಯಪರು ದಿತಿದೇವಿಯಲ್ಲಿ ತಮ್ಮ ಅಮೋಘವಾದ ವೀರ್ಯಾಧಾನವನ್ನು ಮಾಡಿದರು. ಅವಳ ಪುಣ್ಯಕರ್ಮಗಳ ಪ್ರಭಾವದಿಂದ ಅವಳ ಹೊಟ್ಟೆಯಲ್ಲಿ ಗರ್ಭವು ದಿನೇ ದಿನೇ ಅಭಿವೃದ್ಧಿಯನ್ನು ಹೊಂದತೊಡಗಿತು.

ಈ ದೈತ್ಯಗರ್ಭದ ಅಭಿವೃದ್ಧಿಯ ಸುದ್ದಿಯನ್ನು ಮಯಾಸುರನು ತನ್ನ ಮಾಯೆಯಿಂದ ಮೊಟ್ಟಮೊದಲು ತಿಳಿದುಕೊಂಡ. ಇಂದ್ರನಿಗೂ ಮಯಾಸುರನಿಗೂ ಘನಿಷ್ಠ ಸ್ನೇಹ. ಮೊದಲು ಅವರು ಜನ್ಮ ವೈರಿಗಳೇ ಆಗಿದ್ದರು. ಕಾರಣಾಂತರದಿಂದ ಅವರಲ್ಲಿ ಸಖ್ಯ ಏರ್ಪಟ್ಟಿತ್ತು. ದಿನಗಳೆದಂತೆ ಅವರ ಸ್ನೇಹ ಸೂತ್ರಗಳು ಹುರಿಗೊಂಡು ಮಿಥೋಮೈತ್ರಿಯು ಗಟ್ಟಿಗೊಂಡಿತ್ತು.

**ನಾರದ:-** ಪಿತಾಮಹ, ಮಯಾಸುರ ನಮುಚಿಯ ಸಹೋದರ. ಅವನನ್ನು ಮಹೇಂದ್ರ ಸಂಹರಿಸಿದ್ದ. ಆದರಿಂದ ಮಯಾಸುರನಿಗೂ ದೇವೇಂದ್ರನಿಗೂ ಘೋರ ವೈರ ಭಾವ ಏರ್ಪಟ್ಟಿತ್ತು. ಅಂದಬಳಿಕ ಆ ಮಯಾಸುರನು ಇಂದ್ರನಿಗೆ ಪುನಃ ಮಿತ್ರ ಹೇಗೆ ಆದ.

**ಬ್ರಹ್ಮದೇವ:-** ನಾರದ, ನಮುಚಿ ಮಹಾಬಲಿಷ್ಠ. ಒಮ್ಮೆ ಯುದ್ಧದಲ್ಲಿ ಅವನು ತನ್ನ ಶೌರ್ಯ ಪರಾಕ್ರಮಗಳಿಂದ ಸ್ವರ್ಗಾಧಿಪತಿಯನ್ನು ಸೋಲಿಸಿದ. ಅವನ ಪ್ರಾಣಾಂತಿಕವಾದ ಪ್ರಹಾರಗಳನ್ನು ತಾಳಲಾರದೆ ಇಂದ್ರ ರಣಾಂಗಣದಿಂದ ಸೋತು ಓಡತೊಡಗಿದ. ಗೆಲುವಿನ ಗೋಪುರ ಏರಿ ಗರ್ವೋದ್ಧತನಾದ ನಮುಚಿಯು ಅಂಜಿ ಓಡುತ್ತಲಿರುವ ಆ ಶಚೀಪತಿಯನ್ನು ಬೆನ್ನಟ್ಟಿದ. ಆಗ ಆ ದೇವತೆಗಳ ದೊರೆ ದಿಕ್ಕೆಟ್ಟು ಓಟ ಕಿತ್ತಿದ. ತನ್ನ ಐರಾವತವನ್ನು ಬಿಟ್ಟು ಕೆಳಗಿಳಿದು ದೇವಗಂಗೆಯ ನೀರಿನಲ್ಲಿ ಅಡಗಿಕೊಂಡ. ಅಲ್ಲಿಗೂ ನಮುಚಿಯು ಬೆನ್ನಟ್ಟಿ ಬರಲು ಇಂದ್ರ ಮಂದಾಕಿನಿಯ ನೊರೆಯಲ್ಲಿ ಮರೆಯಾದ. 'ಯಾವದೇ ಶಸ್ತ್ರ ಯಾವದೇ ಅಸ್ತ್ರದಿಂದ ಸಾಯಬಾರದು' ಎಂದು ವರವಿದ್ದಿತು ಆ ನಮುಚಿಗೆ. ಇದನ್ನು ತಿಳಿದ ಇಂದ್ರ ನದೀನೀರಿನ ನೊರೆಯಲ್ಲಿಯೇ ತನ್ನ ಘೋರಾಸ್ತ್ರವನ್ನು ಅಭಿಮಂತ್ರಿಸಿ ನಮುಚಿಯನ್ನು ಹೊಡೆದು ಕೊಂದ.

ಇದರಿಂದ ಮಯಾಸುರನಿಗೆ ಸುರಪತಿಯ ಮೇಲೆ ಬದ್ಧದ್ವೇಷ ಹುರುಡುಗಟ್ಟಿತು. ಅವನು ಶ್ರೀಹರಿಯನ್ನು ಕುರಿತು ಘೋರ ತಪಗೈದ. ಒಲಿದು ಬಂದ ನಾರಾಯಣನಿಂದ ನಾನಾ ಬಗೆಯಾದ ಮಾಯಾ ವರಗಳನ್ನು ಪಡೆದ. ಜಗನ್ಮಯನಾದ ಮಾಧವನು ನೀಡಿದ

ಮಾಯಾಸ್ತ್ರಗಳು ಅಮೋಘವಾಗಿದ್ದವು. ಅಷ್ಟೇ ವೀರ್ಯವತ್ತರವೂ ಆಗಿದ್ದವು. ಆ ಮಾಯಾಸ್ತ್ರಗಳ ಬಲದಿಂದ ಮದೋದ್ಧತನಾದ ಮಯಾಸುರ ದೇವೇಂದ್ರನ ಮೇಲೆ ದಾಳಿಯ ಸಿದ್ಧತೆಯನ್ನು ಮಾಡತೊಡಗಿದ. ಅಗ್ನಿಪೂಜೆ ಮಾಡಿದ. ಬ್ರಾಹ್ಮಣರಿಗೆ ವಿಪುಲವಾಗಿ ದಾನ ದಕ್ಷಿಣೆಗಳನ್ನು ನೀಡಿದ. ಬಂದವರಿಗೆಲ್ಲ ಬೇಡಿದ್ದನ್ನು ನೀಡ ತೊಡಗಿದ. 'ದೇಹಿ' ಎಂದು ಬಂದವರಿಗೆ ಎಂದೂ 'ನಾಸ್ತಿ' ಎನ್ನುತ್ತಿರಲಿಲ್ಲ. ವಾಯುದೇವನು ಬಂದು ಮಯಾಸುರನು ಕೈಕೊಳ್ಳಲಿರುವ ಸ್ವರ್ಗದ ದಾಳಿಯ ಬಗ್ಗೆ ಸುರೇಂದ್ರನಿಗೆ ಸಮಾಚಾರವನ್ನು ತಿಳಿಸಿದ ಆಗ ಆ ಸುರಪತಿಯು ಒಬ್ಬ ಬ್ರಾಹ್ಮಣನ ವೇಷದಿಂದ ಮಯಾಸುರನ ಬಳಿಗೆ ಬಂದು "ಓಂ ಭವತಿ ಭಿಕ್ಷಾಂದೇಹಿ" ಎಂದ. ಸ್ವಭಾವತ ಏವ ಧಾರಾಳಿ ಮಯಾಸುರ. ಕಪಟ ಬ್ರಾಹ್ಮಣನಿಗೆ ಬೇಕಾದ ವರ ಬೇಡು ಎಂದು ಹೇಳಿದ. ಆಗ ವಿಪ್ರವೇಷದ ವಾಸವನು "ದೈತ್ಯರಾಜ, ನನಗೆ ಬೇರೆ ಏನೂ ಬೇಡ. ಆದರೆ ನಿರಂತರ ನಿನ್ನ ಮೈತ್ರಿಯನ್ನು ಕೊಡು. ಎಂದೂ ಯಾವ ಕಾರಣಕ್ಕೂ ನಮ್ಮ ಆ ಸ್ನೇಹ ಸೌಹಾರ್ದದ ಗೆಳೆತನಕ್ಕೆ ಬಾಧೆ ಬರಬಾರದು" ಎಂದು ಕೇಳಿದನು. ಸ್ವಭಾವತ ಏವ ದಾನ ಧರ್ಮ ಶೀಲನು ಆದ ಮಯಾಸುರ ತಕ್ಷಣದಲ್ಲಿಯೇ ಆ ಬ್ರಾಹ್ಮಣನ ಬೇಡಿಕೆಗೆ 'ಅಸ್ತು' ಎಂದ. ಶ್ರೀಹರಿಯನ್ನು ಕುರಿತು ತಪಂಗೈದು ಅವನಿಂದ ವರ ಪಡೆದ ಬಳಿಕ ಅವನ ಸ್ವಭಾವದಲ್ಲಿ ಬಹಳ ಮಾರ್ಪಾಟು ಆಗಿತ್ತು. ದೈತ್ಯ ಜಾತಿಗನುಗುಣವಾಗಿ ಮೊದಲು ಅವನು ಕ್ರೂರನೇ ಆಗಿದ್ದ. ದೇವಬ್ರಾಹ್ಮಣ ದ್ವೇಷಿಯೂ ಆಗಿದ್ದ. ಆದರೆ ಹರಿಯ ಪ್ರಸಾದವನ್ನು ಪಡೆದ ಬಳಿಕ ಮೃದು ಹೃದಯನಾದ ಹರಿ ಭಕ್ತರಾದ ಬ್ರಾಹ್ಮಣರಲ್ಲಿ ವಿಶ್ವಾಸ ಕುದುರಿತು. ದೀನ ದುಃಖಿತರ ಮೇಲೆ ಅವನ ಹೃದಯದಲ್ಲಿ ದಯೆ ಮಡುಗಟ್ಟಿತು. ಸೋದರರನ್ನು ಸಂಹರಿಸಿದನೆಂದು ಸಹಸ್ರಾಕ್ಷನ ಮೇಲೆ ಕೋಪ ದ್ವೇಷಗಳು ಉಕ್ಕೇರುತ್ತಿದ್ದರೂ ಉಳಿದವರ ವಿಷಯದಲ್ಲಿ ಅವನು ಸದಾ ಸ್ನೇಹ ಶೀತಲನೇ ಆಗಿದ್ದ. ಬ್ರಾಹ್ಮಣ ವೇಷದಿಂದ ಬಂದು ದೇವರಾಜ ದೀನನಾಗಿ ಸ್ನೇಹ ಭಿಕ್ಷೆ ಬೇಡಿದಾಗ ಆನಂದದಿಂದ ಕೊಟ್ಟ. "ವಿಪ್ರೋತ್ತಮ, ನೀನು ನನಗೆ ಆಜೀವ ಜೀವ ಮಿತ್ರ. ಎಂದಿಗೂ ಯಾವ ಕಾರಣಕ್ಕೂ ನನ್ನ ನಿನ್ನ ಆ ಮಿತ್ರತ್ವಕ್ಕೆ ಭಂಗ ಬಾಧೆ ಬಾರದು. ಇದು ನನ್ನ ವಚನ. ನಮ್ಮ ಸಖ್ಯ ಚಿಕ್ಕೆ ಚಂದ್ರರಷ್ಟೇ ಚಿರಂತನ" ಎಂದು ಹೇಳಿದ.

ಅನಂತರ ಇಂದ್ರ ತನ್ನ ನಿಜರೂಪವನ್ನು ಪ್ರಕಟಗೊಳಿಸಿದ. "ನಿನ್ನ ಸ್ನೇಹ ಸೌಹಾರ್ದಕ್ಕೆ ಕಾತರಿಸಿ ನಾನು ಕಪಟ ವೇಷದಿಂದ ಬಂದು ನಿನ್ನ ಸ್ನೇಹ ಸೌಹಾರ್ದಗಳ ಯಾಚನೆ ಮಾಡಿದೆ. ನಿನ್ನ ವಚನವನ್ನು ಪಾಲಿಸು. ನಿನ್ನ ಸಖ್ಯವನ್ನು ದಯಪಾಲಿಸು" ಎಂದು ಕೇಳಿಕೊಂಡ. ಅಂದಿನಿಂದ ಮಯಾಸುರನು ದೇವೇಂದ್ರನ ಬಂಧುಹತ್ಯೆಯನ್ನು ಕ್ಷಮಿಸಿ ಬಿಟ್ಟ. ಅವನಿಗೆ ತನ್ನ ಸ್ನೇಹ ಹಸ್ತ ಚಾಚಿದ. ಅಂದಿನಿಂದ ಅವರಿಬ್ಬರ ಗೆಳೆತನ ಘನಿಷ್ಠವೂ ದೃಢಿಷ್ಠವೂ ಆಗಿದ್ದಿತು. ಅವರಿಬ್ಬರೂ ಪರಸ್ಪರ ಪ್ರೀತಿಯಿಂದ ಆಲಿಂಗಿಸಿ ಮಿಥೋಹಿತ ಚಿಂತನಕ್ಕಾಗಿ ಬದ್ಧ ಪ್ರತಿಜ್ಞರಾದರು.

ಆದುದರಿಂದಲೇ ಮಯಾಸುರನು ಇಂದ್ರನ ಅಮರಾವತಿಯ ಅರಮನೆಗೆ ಹೋಗಿ ದಿತಿ ದೇವಿಯ ವ್ರತದ ಸಮಾಚಾರ ತಿಳಿಸಿದ. ಅದಿತಿಯ ಮಕ್ಕಳಾದ ದೇವತೆಗಳ ಮೇಲೆ ವಿಜಯ ವನ್ನು ಸಾಧಿಸಲಿಕ್ಕಾಗಿಯೇ ಈ ವ್ರತಚಾರಣೆ ಎಂದು ಆ ದೈತ್ಯರಹಸ್ಯವನ್ನು ತಿಳಿಸಿಬಿಟ್ಟ. ಇದರಿಂದ ಹೆದರಿ ಹೌಹಾರಿದ ಸುರೇಶ್ವರ. ಮುಂದೇನು ಗತಿ ಎಂದು ಕೇಳಿದ ಮಿತ್ರ

ಮಯಾಸುರನನ್ನು. ಇಂಥ ವಿಷಯದಲ್ಲಿ ಅತಿಚತುರ ಆ ಮಯಾಸುರ ಅವನ ಮಿದುಳು ಒಂದು ಹಂಚಿಕೆಗಳ ಮಂಚಿಕೆ. ತಕ್ಷಣದಲ್ಲಿಯೇ ಅವನು ಆ ಕಾಕಿನಾಯಕನಿಗೆ ಒಂದು ಯುಕ್ತಿಯನ್ನು ಹೇಳಿಕೊಟ್ಟ. ಅದಕ್ಕಾಗಿ ಮೊದಲು ಅವನಿಗೆ ತನ್ನ ಮಾಯಾವಿದ್ಯೆಯನ್ನು ಕಲಿಸಿದ ಮತ್ತು ಹೇಳಿದ.

**ಮಯಾಸುರ:-** ದೇವೇಂದ್ರ, ನೀನು ಈಗ ಭೂಲೋಕದಲ್ಲಿ ಅಗಸ್ತ್ಯಾಶ್ರಮಕ್ಕೆ ಹೋಗು. ತನ್ನ ಮಗ ಶತ್ರುಭಯಂಕರನಾಗಲಿ ಎಂದು ದಿತಿದೇವಿಯು ಈಗ ಅಗಸ್ತ್ಯ ಋಷಿಗಳ ಸೇವೆ ಮಾಡುತ್ತಲಿದ್ದಾಳೆ. ನೀನು ಅಲ್ಲಿಗೇ ಹೋಗು. ನಾನು ನಿನ್ನ ಸೇವೆ ಮಾಡಲಿಕ್ಕೆಂದೇ ಬಂದಿದ್ದೇನೆ ಎಂದು ಅವಳಿಗೆ ಹೇಳು. ಕೆಲವು ದಿನ ನೀನು ಅವಳನ್ನು ಪರಿ ಪರಿಯಿಂದ ಸೇವಿಸು. ನಿನ್ನ ಅತಿಶಯಿತವಾದ ಸೇವೆ ಹಾಗೂ ಶ್ರದ್ಧಾಯುಕ್ತವಾದ ಪರಿಚರ್ಯೆಯಿಂದ ಅವಳನ್ನು ಒಲಿಸಿಕೊ. ಸಮಯ ಬಂದಾಗ ನಾನು ಕಲಿಸಿದ ಮಾಯಾ ವಿದ್ಯೆಯಿಂದ ಅತಿ ಸೂಕ್ಷ್ಮವಾದ ರೂಪವನ್ನು ತೆಗೆದುಕೊಂಡು ಅವಳ ಹೊಟ್ಟೆಯಲ್ಲಿ ಪ್ರವೇಶಿಸು. ಅಲ್ಲಿ ಬೃಹದಾಕಾರವಾಗಿ ಬೆಳೆಯುತ್ತಲಿದೆ ನಿನ್ನ ಹಂತಕವಾಗುವ ದೈತ್ಯ ಪಿಂಡ. ಅದನ್ನು ಅಲ್ಲಿಯೇ ಛೇದಿಸು. ತುಂಡುತುಂಡಾಗಿ ಛೇದಿಸು. ಅದು ಸತ್ತಾದರೂ ಹೋಗಬೇಕು. ಇಲ್ಲದಿದ್ದರೆ ಸಂಪೂರ್ಣ ನಿನಗೆ ವಶವಾಗಿ ಅನುಚರವಾಗಿಯಾದರೂ ಉಳಿಯಬೇಕು. ಅಲ್ಲಿಯ ವರೆಗೆ ಆ ಪಾಪದ ಪಿಂಡವನ್ನು ಸೀಳು. ಹತ್ತಾರು ಹೋಳು ಮಾಡು. ಇಷ್ಟು ಮಾಡಿದರೆ ಮಾತ್ರ ನಿನಗೆ ಶತ್ರುವಿನ ಹೆದರಿಕೆ ತಪ್ಪುವದು.''

ಮಯಾಸುರನ ಉಕ್ತಿ ಯುಕ್ತಿ ಎರಡೂ ಹಿಡಿಸಿದವು ಮಘವಂತನಿಗೆ. ಆ ಕ್ಷಣ ದಲ್ಲಿಯೇ ನೆಲಕ್ಕಿಳಿದ ನಾಕನಾಥ. ಮಯಾಸುರನ ಮಾತನ್ನೂ ಕೃತಿಗೆ ಇಳಿಸಿದ. ಅಗಸ್ತ್ಯರ ಆಶ್ರಮಕ್ಕೆ ಆಗಮಿಸಿದ. ಅಲ್ಲಿ ದಿತಿದೇವಿ ಬಲಿಷ್ಠ ಪುತ್ರ ಪ್ರಾಪ್ತಿಗಾಗಿ ಕಶ್ಯಪರ ಆದೇಶದಂತೆ ಅಗಸ್ತ್ಯರ ಸೇವೆ ಗೈಯುತ್ತಾ ಇದ್ದಳು. ಅವಳ ಸೇವೆಯನ್ನು ಇಂದ್ರ ಮಾಡತೊಡಗಿದ. ದಿನ ತುಂಬಿದ ಅವಳಿಗೆ ಪರಿಚಾರಕನೊಬ್ಬ ಬೇಕೇ ಆಗಿತ್ತು. ಇಂದ್ರ ತಾನಾಗಿ ಬಂದು ಕೈಂಕರ್ಯಕ್ಕೆ ಅಣಿಯಾಗಿ ಅವಳ ಸೇವೆ ಶುಶ್ರೂಷೆ ಮಾಡುವದು ಅವಳಿಗೆ ಇಷ್ಟವೇ ಆಯಿತು. ಅದರಿಂದ ಅವಳಿಗೆ ತುಷ್ಟಿಯು ಆಯಿತು. ತೃಪ್ತಿ ಕೂಡ.

ದಿತಿಯು ಕಶ್ಯಪರು ಕಟ್ಟುನಿಟ್ಟಾಗಿ ಹೇಳಿದ ವ್ರತದ ವಿಧಿ ನಿಯಮಗಳಿಗೆ ಎಲ್ಲಿಯಾದರೂ ತಪ್ಪಿ ನಡೆದರೆ ಅವಳಲ್ಲಿ ಸೂಕ್ಷ್ಮರೂಪದಿಂದ ಪ್ರವೇಶ ಮಾಡಬೇಕೆಂದು ಜಪ್ಪಿಸಿ ಕಾದು ಕುಳಿತ ಆ ವಜ್ರಾಯುಧ. ಆದರೆ ಒಳ್ಳೆ ನಿಯಮನಿಷ್ಠಳು ದೈತ್ಯಮಾತೆ. ವ್ರತಾನುಷ್ಠಾನದ ನಿಯಮಗಳನ್ನೆಲ್ಲ ಚಾಚೂ ತಪ್ಪದೆ ಪಾಲಿಸುತ್ತಿದ್ದಳು. ಸಾವಿರ ಕಣ್ಣುಗಳಲ್ಲಿ ಎಣ್ಣೆ ಹಾಕಿಕೊಂಡು ಕಾಯುತ್ತಲಿದ್ದ ಸುರಸತ್ತಮ ಅಪ್ಪಿ ತಪ್ಪಿ ಕೂಡ ತಪ್ಪು ಮಾಡುತ್ತಿದ್ದಿಲ್ಲ ಅವಳು. ಆದರೆ ಒಂದು ದಿನ ಅವಳಿಂದ ಒಂದು ಸಣ್ಣ ಪ್ರಮಾಣದ ತಪ್ಪು ನಡೆದು ಹೋಯಿತು? ಕಠೋರ ವ್ರತದ ಆಚರಣೆಯಿಂದ ದಮ್ಮನೆ ದಣಿದು ಹೋದ ಅವಳಿಗೆ ಒಂದು ದಿನ ಸಂಧ್ಯಾಕಾಲದಲ್ಲಿಯೆ ನಿದ್ದೆಯ ಮಬ್ಬು. ಮುಸಂಜೆಯಲ್ಲಿಯೇ ಕಣ್ಣು ಮುಚ್ಚಿದವು. ಕಾದುಕೊಂಡೇ ಕೂತಿದ್ದ ಇಂದ್ರ. ಇದೇ ಸಮಯ ಎಂದು ಮಾಯೆಯಿಂದ ದಿತಿಯ ಗರ್ಭದಲ್ಲಿ ಸೂಕ್ಷ್ಮರೂಪದಿಂದ ಒಳ ಹೊಕ್ಕ. ಗರ್ಭಕೋಶವನ್ನು ವಜ್ರಾಯುಧದಿಂದ ಹಣಿಯ ತೊಡಗಿದ.

ಆಗ ಆ ಗರ್ಭವು ಧೈರ್ಯದಿಂದ ''ಸುರನಾಥ, ಇದು ಅನ್ಯಾಯವಲ್ಲವೇ! ನಾನು ನಿನ್ನ ಸೋದರ. ನನ್ನನ್ನು ನೀನು ಕೊಲ್ಲುವದಾದರೂ ಏತಕ್ಕಾಗಿ? ನನ್ನನ್ನು ಹೊಡೆಯ ಬೇಕೆಂದಿದ್ದರೆ ನಾನು ಗರ್ಭದಿಂದ ಹೊರಗೆ ಬರುವವರೆಗೆ ತಾಳು. ಹೊರಬಂದು ನಾನು ನಿನ್ನೊಡನೆ ಯುದ್ಧಮಾಡಿ ಸಾಯುತ್ತೇನೆ. ನೂರು ಯಾಗ ಮಾಡಿ ಮೂರು ಲೋಕದ ಪತಿಯಾದ ನೀನು 'ಪುರಂದರ' ವೈರಿಗೆ ಪಟ್ಟಣನಾಶಕ. ಬಲನ ಬಲವನ್ನು ಬಗ್ಗು ಬಡಿದವ. ಜಂಭನ ಜಂಭ ಮುರಿದೊಟ್ಟಿದವ. ಪಾಕನನ್ನು ಓಕಿದವ. ಇಂಥ ಮಹಾ ಪರಾಕ್ರಮ ಶಾಲಿಯಾದ ನೀನು ಇನ್ನೂ ಹುಟ್ಟಿದ ಹಸುಳೆಯನ್ನು ಕಪಟದಿಂದ ಹೊಸಕಿ ಹಾಕುವದೇ! ನಿನ್ನಂಥವರು ಅಡ್ಡ ದಾರಿ ಹಿಡಿದವರೇ! ಛೀ ಇದೇನು ಅನ್ಯಾಯ ! ಎಳೆ ಕಂದನನ್ನು ಕೊಲ್ಲಲಿಕ್ಕೆ ನಿನಗೆ ನಾಚಿಕೆಯಾದರೂ ಹೇಗೆ ಆಗುವುದಿಲ್ಲ! ನನ್ನನ್ನು ಕೊಂದರೆ ನಿನಗೆ ಬರುವದಾದರೂ ಏನು! ಕೀರ್ತಿಯೆ? ಪುಣ್ಯವೇ? ಯಾವದೂ ಇಲ್ಲ. ನೀನು ದೊಡ್ಡ ಮನುಷ್ಯ. ದೇವತಾ ಸಾರ್ವಭೌಮ. ಇಂಥವರು ಇಂಥ ಜಘನ್ಯ ಕೃತ್ಯ ಮಾಡುವರೇ!

**ಕುಮಾರ್ಗೇನ ಪ್ರವರ್ತಂತೇ ಮಹಾಂತೋऽವೇ ವಿಪದ್ಗತಾಃ**
**ಕುರ್ವಂತಿ ಗರ್ಹಿತಂ ಕರ್ಮ ನ ಕುಲೀನಾಃ ಕದಾಚನ ॥**

ದೊಡ್ಡವರು ಎಂಥ ಸಂಕಟ ಕಾಲ ಬಂದರೂ ದಾರಿ ತಪ್ಪಿ ಅನ್ಯಾಯ ಮಾರ್ಗದಿಂದ ಎಂದೂ ನಡೆಯುವುದಿಲ್ಲ. ಸತ್ಕುಲದಲ್ಲಿ ಜನಿಸಿದವರು ಎಂದೂ ಕುತ್ಸಿತವಾದ ಕಾರ್ಯವನ್ನು ಮಾಡುವದಿಲ್ಲ. ನನ್ನನ್ನು ಕೊಂದರೆ ನಿನಗೆ ಬ್ರಹ್ಮಹತ್ಯಾ ದೋಷ ಬರುವದು. ನಾನು ಬ್ರಾಹ್ಮಣೋತ್ತಮರಾದ ಕಶ್ಯಪರ ಮಗನಲ್ಲವೇ? ಅದರಿಂದ ನಿನಗೆ ಬ್ರಹ್ಮಹತ್ಯಾ ಪಾಪ, ಎಳೆ ಕೂಸಾದ ನನ್ನನ್ನು ಸಂಹರಿಸಿದರೆ ಶಿಶು ಹತ್ಯಾ ಪಾಪವೂ ನಿನಗೆ ಬಿಟ್ಟಿದ್ದಲ್ಲ. ದಯಮಾಡಿ ಕೊಲ್ಲಬೇಡ ನನ್ನನ್ನು ಬದುಕಗೊಡು.'' ಹೀಗೆ ಆ ಗರ್ಭತ ಶಿಶು ದೀನ ದೂನವಾಗಿ ಬೇಡಿಕೊಳ್ಳುತ್ತಲಿದ್ದರೂ ದೇವೇಂದ್ರ ದಯಾಶೂನ್ಯನಾಗಿ ವಜ್ರಾಯುಧದಿಂದ ಆ ಗರ್ಭವನ್ನು ಕತ್ತರಿಸಿದ. ಅವನು ಮಾಡಿದ ವಜ್ರ ಪ್ರಹಾರದಿಂದ ಗರ್ಭ ಏಳು ಹೋಳು ಆಯಿತು. ಆ ಆಖಂಡಲ ತನ್ನ ಪ್ರಚಂಡ ಆಯುಧದಿಂದ ತುಂಡರಿಸಿ ಮತ್ತೆ ಏಳೇಳು ಭಾಗ ಮಾಡಿದ. ವಜ್ರಾಘಾತದಿಂದ ಭಿನ್ನ ಭಿನ್ನವಾದ ಆ ಗರ್ಭದ ಶಕಲಗಳು ಒಟ್ಟು ನಲವತ್ತೊಂಬತ್ತು ಶಿಶು ಶಕಲಗಳಾದವು.

ಇಂದ್ರನಿಂದ ಖಂಡಿಸಲ್ಪಟ್ಟ ಗರ್ಭಪಿಂಡದ ಆ ಎಲ್ಲ ಖಂಡ ತುಂಡಗಳೂ ಒಳ್ಳೆ ತೇಜಃಪುಂಜವಾಗಿ ದೇದೀಪ್ಯವಾಗಿದ್ದವು. ಇಂದ್ರನ ಘೋರಾಯುಧದ ಏಟಗಳನ್ನು ತಾಳಲಾರದೆ ಅವೆಲ್ಲವೂ ಅಳತೊಡಗಿದವು. ಆಗ ಇಂದ್ರನು ಅವುಗಳಿಗೆ ''ಮಾರುತ ಮಾರುತ'' ''ಅಳಬೇಡಿ ಅಳಬೇಡಿ'' ಎಂದು ಹೇಳಿದ್ದರಿಂದ ಅವೆಲ್ಲವೂ ಮರುತ್ ಗಣ ಎಂದು ಸುರಲೋಕದಲ್ಲಿ ಪೂಜ್ಯವೂ ಪ್ರಸಿದ್ಧವೂ ಆದವು.

ಅಗಸ್ತ್ಯ ಋಷಿಗಳ ಆಶ್ರಮದಲ್ಲಿಯೇ ದಿತಿಗರ್ಭವನ್ನು ಪ್ರವೇಶಿಸಿ ದೇವೇಂದ್ರ ಗರ್ಭ ವಿಭಾಗಮಾಡಿದ್ದರಿಂದ ಅವರು ಯುದ್ಧಗಳಲ್ಲಿ ಮೇಲಿಂದ ಮೇಲೆ ಸೋಲನ್ನು ಅನುಭವಿಸು ಎಂದು ಶಪಿಸಿದರು. ದಿತಿದೇವಿಯೂ ಅವನಿಗೆ ''ಇಂದ್ರ, ನೀನು ಹೇಡಿಯಂತೆ ನನ್ನ ಉದರವನ್ನು ಪ್ರವೇಶಿಸಿ ಗರ್ಭಚ್ಛೇದವನ್ನು ಮಾಡಿರುವೆ. ಆದುದರಿಂದ ನೀನು ಸ್ತ್ರೀಯ ರಿಂದ ಅವಮಾನಿತನಾಗಿ ರಾಜ್ಯವನ್ನು ಕಳೆದುಕೊಳ್ಳುವೆ'' ಎಂದು ಕೋಪದಿಂದ ಶಾಪವಿತ್ತಳು.

ಆದರಿಂದ ವ್ಯಥಿತನಾದ ಇಂದ್ರನು ತನ್ನ ತಂದೆ ಕಶ್ಯಪರೊಂದಿಗೆ ಕೂಡಿಕೊಂಡು ನನ್ನ ಬಳಿಗೆ ಬಂದ. ಈ ಶಾಪತಾಪ ಪಾಪಗಳ ಪರಿಹಾರಕ್ಕೆ ಉಪಾಯವೇನು'' ಎಂದು ಕೇಳಿದ. ಅದಕ್ಕೆ ನಾನು ಅವನಿಗೆ ''ನೀನು ನಿನ್ನ ತಂದೆ ಕಶ್ಯಪ ಪ್ರಜಾಪತಿಯೊಂದಿಗೆ ಗೌತಮೀ ತೀರಕ್ಕೆ ಹೋಗು. ಅಲ್ಲಿ ಸ್ನಾನಮಾಡಿ ಅಲ್ಲಿ ನೆಲೆಸಿರುವ ಪರಮೇಶ್ವರನನ್ನು ಭಕ್ತಿಯಿಂದ ಸ್ತುತಿಸಿರಿ. ಆ ಮಹಾದೇವನೊಬ್ಬನೇ ನಿನ್ನ ಶಾಪಪಾಪಗಳನ್ನು ಪರಿಹರಿಸಲಿಕ್ಕೆ ಸಮರ್ಥನು'' ಎಂದು ಸೂಚಿಸಿದೆ. ಅದರಂತೆ ಕಶ್ಯಪ ಪ್ರಜಾಪತಿಗಳು ತಾವೇ ಮುಂದಾಗಿ ಮಗನಾದ ಇಂದ್ರನನ್ನು ಕರಕೊಂಡು ಗೌತಮೀ ತೀರಕ್ಕೆ ಹೋಗಿ ಅಲ್ಲಿರುವ ಶಂಕರನನ್ನು ಶ್ರದ್ಧೆಯಿಂದ ಆರಾಧಿಸಿ ಸ್ತೋತ್ರ ಮಾಡಿದರು.

**ಕಶ್ಯಪ ಉವಾಚ**

**ಪಾಹಿ ಶಂಕರ ದೇವೇಶ ಪಾಹಿ ಲೋಕನಮಸ್ಕೃತ**
**ಪಾಹಿ ಪಾವನವಾಗೀಶ ಪಾಹಿ ಪನ್ನಗಭೂಷಣ ॥**

ಜನರಿಗೆಲ್ಲ ಸುಖವನ್ನು ನೀಡುವ ಮಹಾದೇವ, ನೀನು ದೇವತೆಗಳಿಗೆಲ್ಲ ಒಡೆಯ ಜಗತ್ತಿನಲ್ಲಿಯ ಎಲ್ಲ ಜನರಿಂದಲೂ ನೀನು ವಂದಿತನಾಗಿರುವೆ. ನೀನೇ ವಾಗೀಶ ಗಿರೀಶ. ನೀನು ಪರಮಪಾವನ. ನಾಗಭೂಷಣನಾದ ಶಂಕರ ನಮ್ಮನ್ನೆಲ್ಲ ರಕ್ಷಿಸು.

**ಘೋರಸಂಸಾರಕಾಂತಾರ ಸಂಚಾರೋದ್ವಿಗ್ನ ಚೇತಸಾಂ**
**ಶರೀರಿಣಾಂ ಕೃಪಾಸಿಂಧೋ ತ್ವಮೇವ ಶರಣಂ ಶಿವ ॥**

ಈ ಸಂಸಾರ ಎಂಬುದೊಂದು ಭಯಂಕರ ಬೆಂಗಾಡು. ಇಲ್ಲಿ ತಿರುತಿರುಗಿ ಬಳಲಿ ಬೆಂಡಾದ ಮನುಷ್ಯರಿಗೆಲ್ಲ ಕೃಪಾಸಾಗರನಾದ ನೀನೇ ರಕ್ಷಕ ಶರಣು. ಹೀಗೆ ಸ್ತೋತ್ರಮಾಡುತ್ತಲಿರುವ ಕಶ್ಯಪ ಮುನಿಯ ಎದುರಿಗೆ ಪ್ರತ್ಯಕ್ಷನಾಗಿ ಬಂದು ನಿಂತ ಪರಮೇಶ್ವರ. ನಿನಗೆ ಬೇಕಾದ ವರವನ್ನು ಬೇಡು ಎಂದು ಹೇಳಿದ. ಆಗ ಕಶ್ಯಪ ಪ್ರಜಾಪತಿಯು ವಿನಯದಿಂದ ನಡೆದುದನ್ನೆಲ್ಲ ವಿಸ್ತಾರವಾಗಿ ಹೇಳಿದ. ದೇವದಾನವ ದ್ವೇಷವನ್ನು, ಇಂದ್ರ ಮಾಡಿದ ದಿತಿ ಗರ್ಭಪ್ರಹಾರವನ್ನೂ ಅಗಸ್ತ್ಯ ಹಾಗೂ ದಿತಿದೇವಿಯರು ಶಚೀಪತಿಗೆ ಇತ್ತ ಶಾಪವನ್ನು ಶಿವನಿಗೆ ಶ್ರುತಪಡಿಸಿದ. ದಿತಿದೇವಿ ಅಗಸ್ತ್ಯರೂ ಅಲ್ಲಿಯೇ ಬಂದು ನಿಂತಿದ್ದರು.

ಆಗ ಗಿರಿಜಾಧವನು ಮೊದಲು ಬೆಂದೊಡಲಿನ ನೊಂದತಾಯಿಯಾದ ದಿತಿಗೆ ಸಮಾದಾನ ಹೇಳಿದ ''ದಿತಿ, ನಿನ್ನ ಹೊಟ್ಟೆಯಲ್ಲಿ ಹುಟ್ಟಿ ಹೊರ ಬರುವ ನಲವತ್ತೊಂಬತ್ತು ಮಂದಿ ನಿನ್ನ ಮಕ್ಕಳೆಲ್ಲರು ಸುಂದರರೂ ಬಲಿಷ್ಠರೂ ಆಗುವರು. ಅವರು ದೈತ್ಯರಾದರೂ ದೇವತೆಗಳಂತೆ ಯಜ್ಞಗಳಲ್ಲಿ ಹವಿರ್ಭಾಗಗಳನ್ನು ಪಡೆಯುವರು. ಯಜ್ಞ ಮಾಡುವ ವರೆಲ್ಲರೂ ಇಂದ್ರನಿಗಿಂತ ಮೊದಲು ನಿನ್ನ ಮಕ್ಕಳಾದ ಮರುತರಿಗೆ ಹವಿಸ್ಸನ್ನು ನೀಡುವರು. ಅವರೆಲ್ಲರೂ ಇಂದ್ರನೊಡನೆ ಸ್ನೇಹ ಸೌಹಾರ್ದದಿಂದ ಅದೃಷ್ಟವಂತರಾಗಿ ಅಮರರಾಗಿ ಬಾಳುವರು. ಕಶ್ಯಪ ಪ್ರಜಾಪತಿಯೆ, ನಿನ್ನ ಪುತ್ರನಾದ ಇಂದ್ರನು ಮರುದ್ಗಣದಿಂದ ಕೂಡಿಕೊಂಡು ವೈರಿಗಳಿಗೆ ಅಜೇಯನಾಗುವನು. ನೀನು ಆನಂದದಿಂದ ಇರು.

ಅಗಸ್ತ್ಯ, ನೀನು ಇಂದ್ರನ ಮೇಲೆ ರುಷ್ಟನಾಗಬೇಡ. ನಿನ್ನ ಆಶ್ರಮದಲ್ಲಿ ಇದ್ದು ಬಲಿಷ್ಠ ಭಾಗ್ಯವಂತ ಪುತ್ರಪ್ರಾಪ್ತಿಗಾಗಿ ಹರಿಗುರುಗಳ ಆರಾಧನೆ ಮತ್ತು ಜಪ ವ್ರತ

ಉಪೋಷಣಾದಿಗಳನ್ನು ಮಾಡಿದ ದಿತಿದೇವಿಯ ಮಕ್ಕಳೆಲ್ಲರೂ ಸಾವು ನೋವುಗಳನ್ನೆಲ್ಲ ಮೀರಿ ಮೃತ್ಯುಂಜಯರಾಗುವರು.

ದಿತಿದೇವಿ, ನೀನು ಮೂರುಲೋಕಗಳಲ್ಲಿಯೇ ಅತ್ಯಂತ ವೀರನೂ ಶೂರನೂ ಐಶ್ವರ್ಯವಂತನೂ ಭಾಗ್ಯವಂತನೂ ಆದ ಒಬ್ಬ ಮಗನು ಆಗಲಿ ಎಂದು ಬಯಸಿ ಬೇಡಿ ಜಪತಪೋನುಷ್ಠಾನವನ್ನು ಕೈಕೊಂಡಿದ್ದಿಯಷ್ಟೇ! ಈಗ ನೋಡು. ನಿನ್ನ ಅದೃಷ್ಟ. ನೀನು ಬೇಡಿದ್ದ ಒಬ್ಬ ಮಗನನ್ನಾದರೆ ಈಗ ನಿನಗೆ ಹುಟ್ಟುವ ಮಕ್ಕಳು ನಲವತ್ತೊಂಬತ್ತು. ಒಬ್ಬೊಬ್ಬರೂ ಶೂರರು. ಪ್ರತಿಯೊಬ್ಬರೂ ಮಹಾಬಲಿಷ್ಠರು. ಸಾವು ಅವರ ಸಮೀಪಕ್ಕೂ ಬರಲಾರದು. ಸೋಲು ಸನಿಹದಲ್ಲಿಯೇ ಸುಳಿಯದು. ಎಂಥ ಭಾಗ್ಯವಂತರಮ್ಮ ನಿನ್ನ ಚಿರಂಜೀವರು! ಎಲ್ಲರಿಗೂ ಕುಬೇರನ ಐಶ್ವರ್ಯ. ಚಂದ್ರನ ಕಾಂತಿ, ಇಂದ್ರನ ಗೌರವ ಮತ್ತೇನು ಬೇಕು! ಆದುದರಿಂದ ಮನೋವ್ಯಥೆಯನ್ನು ಬಿಟ್ಟು ಬಿಡು. ನೀನು ಬಯಸಿದ್ದಕ್ಕಿಂತ ಅತ್ಯಧಿಕವಾಗಿಯೇ ಫಲಪ್ರಾಪ್ತಿ ಆಗಿದೆ. ಮತ್ತೆ ಬೇರೆ ಏನಾದರೂ ಅಪೇಕ್ಷೆ ಇದ್ದರೆ ಬೇಡಿಕೋ ನೀನು ಕೇಳಿದ ವರನನ್ನು ನೀಡಲು ನಾನು ಇದೋ ಸಿದ್ಧ.'' ಆಗ ದಿತಿದೇವಿಯು ಆನಂದದಿಂದ ಚಂದ್ರಚೂಡನನ್ನು ವಂದಿಸಿದಳು. ಮತ್ತು ಕೈಜೋಡಿಸಿ ಕೇಳಿಕೊಂಡಳು ''ದೇವ ದೇವ ಈ ಗೌತಮೀ ನದಿಯ ಈ ತೀರ್ಥದಲ್ಲಿ ಸ್ನಾನ ಮಾಡಿದವರಿಗೆಲ್ಲ ನನ್ನಂತೆ ಸತ್ಪುತ್ರರು ಜನಿಸುವಂತೆ ಅನುಗ್ರಹಿಸು.

**ಮಹಾದೇವ:-** ಸ್ತ್ರೀಯರಿಗಾಗಲಿ ಪುರುಷರಿಗಾಗಲಿ ಬಂಜೆತನ ಎನ್ನುವದು ಘೋರ ಪಾಪದ ಫಲ. ಅಂಥ ಮಹಾಪಾಪವು ಕೂಡ ಗೌತಮೀ ತೀರದ ಈ ಪುತ್ರ ತೀರ್ಥದಲ್ಲಿ ಸ್ನಾನಮಾಡಿದರೆ ಪರಿಹೃತವಾಗುವದು. ಈ ತೀರ್ಥದಲ್ಲಿ ಸ್ನಾನಮಾಡಿ ಶಿವಸ್ತುತಿಯನ್ನು ಪಠಿಸಿದವರಿಗೆ ಒಳ್ಳೆ ಪುತ್ರರು ಜನಿಸುವರು. ವಂಶದ ಕುಡಿ ಕಡಿಯುವದು ಎರಡು ದೋಷ ದಿಂದ ಅಡವಿಟ್ಟ ಪದಾರ್ಥಗಳನ್ನು ಅಪಹರಿಸುವದು. ಹೆರವರ ಮುತ್ತು ರತ್ನ ಚಿನ್ನಗಳನ್ನು ಕದಿಯುವದು ಬಂಜೆತನಕ್ಕೆ ಈ ದೋಷಗಳೇ ಮೂಲ. ಈ ತೀರ್ಥದಲ್ಲಿ ಮಿಂದು ಮಹಾದೇವನನ್ನು ಸ್ತೋತ್ರಮಾಡಿದರೆ ಅವರೆಡೂ ಪಾಪಗಳು ಪರಿಹಾರ ಕಾಣುವವು.

**ಬ್ರಹ್ಮ:-** ಅಂದಿನಿಂದ ಆ ತೀರ್ಥವು ಪುತ್ರತೀರ್ಥ ಎಂದು ಹೆಸರಾಯಿತು. ಇಂದ್ರನಿಗೂ ಮರುತರಿಗೂ ಮೈತ್ರಿ ಏರ್ಪಟ್ಟ ತೀರ್ಥವು ಮೈತ್ರಿತೀರ್ಥ ಎಂದೂ ಪ್ರಖ್ಯಾತವಾಯಿತು. ಇಂದ್ರನ ಶಾಪ ಕಳೆದುಹೋದ ತನ್ನ ಸಂಪದವನ್ನು ಮರಳಿ ಪಡೆದ ತೀರ್ಥವು ಕಮಲಾತೀರ್ಥ ಎಂದು ಹೆಸರಾಯಿತು. ಒಟ್ಟು ಗೌತಮೀ ನದಿಯ ಈ ಪರಿಸರ ಪ್ರಾಂತದ ತೀರೋಪಾಂತದಲ್ಲಿ ಒಂದು ಲಕ್ಷ ತೀರ್ಥಗಳು ರಾರಾಜಮಾನವಾಗಿರುತ್ತವೆ.

## ಯಮತೀರ್ಥ

ಯಮತೀರ್ಥ ಎಂಬ ಒಂದು ಪ್ರಸಿದ್ಧವಾದ ತೀರ್ಥ ಇದೆ. ಪಿತೃಗಳಿಗೆ ಪ್ರಿಯವಾದ ಆ ತೀರ್ಥದಲ್ಲಿ ಸ್ನಾನ, ಪಾನ, ಪಿತೃತರ್ಪಣಾದಿಗಳ್ನು ಮಾಡುವವರು ದಕ್ಷಫಲ ಅದೃಷ್ಟಫಲ ಎರಡನ್ನೂ ಹೊಂದುತ್ತಾರೆ. ಪಿತೃಗಳಿಗೆ ಪ್ರಿಯವಾದ ಆ ತೀರ್ಥದ ಮಹಿಮೆ ಇಲ್ಲಿದೆ.

ಅನುಹ್ರಾದ ಎಂಬ ಒಂದು ಕಪೋತ ಇದ್ದಿತು. ಅದು ಮೃತ್ಯುವಿನ ಮಗನ ಮಗ-(ಮೊಮ್ಮಗ) ಆ ಕಪೋತದ ಮಡದಿ ಹೇತಿ ಎಂಬ ಕಪೋತಿ. ಅದು ಮೃತ್ಯುವಿನ ಮಗಳ

ಮಗಳು (ಮೊಮ್ಮಗಳು) ಆ ಕಪೋತ ದಂಪತಿಗಳಿಗೆ ಅನೇಕ ಮಕ್ಕಳು ಮೊಮ್ಮೊಕ್ಕಳು ಜನಿಸಿದರು. ಆ ಅನುಹ್ರಾದ ಎಂಬ ಪಾರಿವಾಳಕ್ಕೆ ಅಗ್ನಿಪುತ್ರನಾದ ಉಲೂಕ ಎಂಬ ಗೂಬೆಯು ಬಲಿಷ್ಠವಾದ ಶತ್ರು ಆಗಿದ್ದಿತು. ಆ ಉಲೂಕ ಅಗ್ನಿಯ ಪುತ್ರ. ಈ ಪಾರಿವಾಳಕ್ಕೂ ಆ ಗೂಬೆಗೂ ಬಹುಕಾಲದ ವೈರ ಬೆಳೆದು ಬಂದಿತ್ತು. ಅದರ ಇದರ ಮಕ್ಕಳಿಗೂ ಮೊಮ್ಮಕ್ಕಳಿಗೂ ತಲೆಮಾರಿಗೂ ಆ ದ್ವೇಷ ಅನುವಂಶಿಕವಾಗಿ ಬಂದಿತು. ಈ ಎರಡು ಕುಟುಂಬಗಳ ನಡುವೆ ಬಹುಕಾಲ ಯುದ್ಧ ನಡೆಯಿತು. ಆದರೆ ನಿಶ್ಚಿತವಾದ ಸೋಲು ಗೆಲವು ಯಾವ ಹಕ್ಕಿಗೂ ದಕ್ಕಲಿಲ್ಲ.

ಪಾರಿವಾಳವು ತನ್ನ ಅಜ್ಜನಾದ ಯಮಧರ್ಮನನ್ನು ಆರಾಧಿಸಿ ಯಮ್ಯಾಸ್ತ್ರವನ್ನು ಪಡೆಯಿತು, ಅದರಿಂದ ಬಲಿಷ್ಠವೂ ಆಯಿತು. ಉಲೂಕವೇನು ಕಡಿಮೆ ! ಅದಕ್ಕೂ ಅಗ್ನಿದೇವ ಅಜ್ಜನಾಗಿದ್ದ. ಅಜ್ಜನನ್ನು ಆರಾಧಿಸಿ ಈ ಮೊಮ್ಮಗ ಉಲೂಕ ಅಗ್ನೇಯಾಸ್ತ್ರವನ್ನು ಪಡೆದು ಅಜಿಂಕ್ಯ ಆಯಿತು. ಅದರೊಟ್ಟಿಗೆ ಮದೋನ್ಮತ್ತತೆ ಅದರಲ್ಲಿ ಉಕ್ಕಿಬಂದಿತು. ದಿವ್ಯಾಸ್ತ್ರಗಳ ಸಾಕ್ಷಿಯಾದ ಬಳಿಕ ಕೇಳುವದೇನು! ಶುರುವಾಯಿತು, ಆ ಎರಡೂ ಹಕ್ಕಿಗಳ ನಡುವೆ ಹೋರಾಟ. ಉಲೂಕವು ಕಪೋತದ ಮೇಲೆ ಆಗ್ನೇಯಾಸ್ತ್ರವನ್ನೂ ಪ್ರಯೋಗಿಸಿತು. ಕಪೋತವು ತನ್ನ ಅಜ್ಜನಿಂದ ಪಡೆದ ಯಮದಂಡ ಹಾಗೂ ಮೃತ್ಯುಪಾಶವನ್ನು ಪ್ರಯೋಗಿಸಿತು. ಉಲೂಕದ ಆಗ್ನೇಯಾಸ್ತ್ರ ಪ್ರಭಾವದಿಂದ ಕಪೋತದ ಕುಟುಂಬವೇ ಬೆಂಕಿಯಲ್ಲಿ ಸುಡತೊಡಗಿತು. ಆಗ ಪತಿವ್ರತೆ ಯಾದ ಆ ಪಾರಿವಾಳದ ಪತ್ನಿಯು ವ್ಯಥೆಯಿಂದ ವಿವ್ಹಲಳಾಗಿ ಅಗ್ನಿಯನ್ನು ಸುತ್ತಿಸಿದಳು.

ಮುಖಭೂತಂ ಚ ದೇವಾನಾಂ ದೇವಾನಾಂ ಹವ್ಯವಾಹನಂ ।
ಹೋತಾರಂಚಾಪಿ ದೇವಾನಾಂ ದೇವಾನಾಂ ದೂತಮೇವ ಚ ॥
ತಂ ದೇವಂ ಶರಣಂ ಯಾಮಿ ಆದಿದೇವಂ ವಿಭಾವಸುಂ ।
ಅಂತಸ್ಥಿತಪ್ರಾಣರೂಪೋ ಬಹಿಶ್ಚಾನ್ನ ಪ್ರದೋಹಿ ಯಃ ॥
ಯೋ ಯಜ್ಞಸಾಧನಂ ಯಾಮಿ ಶರಣಂ ತಂ ಧನಂಜಯಂ ॥

ದೇವತೆಗಳಿಗೆ ಮುಖನಾಗಿ ಆ ಸುರರಿಗೆಲ್ಲ ಆಹುತಿಯನ್ನು ಒದಗಿಸುವ ಮತ್ತು ದೇವಯಜ್ಞಗಳನ್ನು ಮಾಡಿಸುವ ಆದುದರಿಂದಲೇ ದೇವದೂತ ಎಂದೆನಿಸಿದ ಅಗ್ನಿ ದೇವನನ್ನು ಶರಣು ಹೊಂದಿದ್ದೇನೆ. ಪ್ರಾಣಿಗಳ ಶರೀರದೊಳಗೆ ಪ್ರಾಣರೂಪದಿಂದ ಇದ್ದು ಹೊರಗೆ ಜನರು ಉಂಡ ಅನ್ನವನ್ನು ಶುಚಿಯಾಗಿ ಬೇಯಿಸಿ ದೇಹವೃದ್ಧಿ ಮಾಡಿ ರಕ್ಷಿಸುವ ಮತ್ತು ಯಜ್ಞಕ್ಕೆ ಮುಖ್ಯ ಸಾಧನವೂ ಆದ ಅಗ್ನಿದೇವನನ್ನು ಮೊರೆಹೊಕ್ಕಿರುವೆನು. ದೇವ, ನನ್ನ ಗಂಡನೂ ಮಕ್ಕಳೂ ನಿನ್ನ ಅಸ್ತ್ರದಿಂದ ಸುಡುತ್ತಲಿದ್ದಾರೆ. ಅವರನ್ನು ರಕ್ಷಿಸು.

ಕಪೋತಿಯ ಈ ಸ್ತೋತ್ರದಿಂದ ಪ್ರಸನ್ನನಾದ ಅಗ್ನಿಯು "ಸಾಧ್ವಿ, ಯುದ್ಧದಲ್ಲಿ ಪ್ರಯೋಗಿಸಿದ ಈ ನನ್ನ ಆಗ್ನೇಯಾಸ್ತ್ರವು ಅಮೋಘ. ಇದನ್ನು ನಾನು ಎಲ್ಲಿ ಪ್ರಯೋಗಿಸಲಿ? ಒಮ್ಮೆ ಪ್ರಯೋಗ ಮಾಡಿದ ಈ ನನ್ನ ಆಗ್ನೇಯಾಸ್ತ್ರ ಎಲ್ಲಿಯಾದರೂ ಬೀಳಲೇ ಬೇಕು. ನಿನ್ನ ಗಂಡ ಮಕ್ಕಳು ಈ ಅಸ್ತ್ರಕ್ಕೆ ಆಹುತಿ ಆಗುವದು ಬೇಡವಾದರೆ ಈ ಅಸ್ತ್ರಜ್ವಾಲೆ ಯಾರನ್ನು ಕಬಳಿಸಬೇಕು?" ಅದಕ್ಕೆ ಆ ಕಪೋತಿಯು "ಅಗ್ನಿದೇವ, ಆ ನಿನ್ನ ಆಗ್ನೇಯಾಸ್ತ್ರವು ನನ್ನ ಮೇಲೆ ಬೀಳಲಿ. ನನ್ನ ಗಂಡ ಮತ್ತು ಮಕ್ಕಳು ಅಕ್ಷತರಾಗಿ

ಸುರಕ್ಷಿತವಾಗಿ ಉಳಿಯಲಿ. ನಿನ್ನ ಅಸ್ತ್ರ ಪ್ರಯೋಗವು ಸಾರ್ಥಕವಾಗಲಿ. ಅಗ್ನಿದೇವ ನಿನಗೆ ನಮಸ್ಕಾರ'' ಎಂದು ಹೇಳಿದಳು.

ಕಪೋತಿಯ ಈ ವಚನವನ್ನು ಕೇಳಿ ಪರಿತುಷ್ಟನಾದ ಆ ವಹ್ನಿದೇವ. ಅವಳನ್ನು ಸಂತೈಸುತ್ತ ನುಡಿದ, ''ಪತಿವ್ರತೆಯಾದ ಕಪೋತಿಯೇ, ನಿನ್ನ ಈ ಪತಿಭಕ್ತಿಯಿಂದ ನಾನು ಸಂತುಷ್ಟನಾಗಿದ್ದೇನೆ. ನಿನ್ನ ಪತಿಯನ್ನು ಪುತ್ರರನ್ನೂ ರಕ್ಷಿಸುತ್ತೇನೆ. ನನ್ನ ಈ ಅಗ್ನೇಯಾಸ್ತ್ರವು ನಿನ್ನಗಂಡನನ್ನೂ ಮಕ್ಕಳನ್ನೂ ದಹಿಸಲಾರದು. ನೀನು ನಿಶ್ಚಿಂತೆಯಿಂದ ಮನೆಗೆ ಮರಳು'' ಎಂದು ಹೇಳಿ ಅಲ್ಲಿಯೇ ಅಗ್ನಿದೇವ ಅಂತರ್ಧಾನ ಹೊಂದಿದ.

ಅತ್ತ ಕಪೋತವು ಉಲೂಕದ ಮೇಲೆ ಬಿಟ್ಟ ಯಮದಂಡವು ಆ ಗೂಬೆಯನ್ನು ಪ್ರಾಣಾಂತಕ ಪ್ರಹಾರಗಳಿಂದ ಗಾಸಿಗೊಳಿಸುತ್ತಿತ್ತು. ಪತಿಯು ಮೃತ್ಯುಪಾಶದಿಂದ ಪ್ರಹತನಾಗುತ್ತಿರುವದನ್ನು ಕಂಡು ವಿಹ್ವಲಳಾದ ಆ ಉಲೂಖ ಪತ್ನಿಯು ಯಮಧರ್ಮನನ್ನು ಪ್ರಾರ್ಥಿಸಿದಳು-

### ಉಲೂಕೀ ಉವಾಚ

**ತ್ವದ್ಭೀತಾ ಅನುದ್ರವಂತೇ ಜನಾಃ ತ್ವದ್ಭೀತಾ ಬ್ರಹ್ಮಚರ್ಯಂ ಚರಂತಿ ।**
**ತ್ವದ್ಭೀತಾಃ ಸಾಧು ಚರಂತಿ ಧೀರಾಃ ತ್ವದ್ಭೀತಾಃ ಕರ್ಮ ನಿಷ್ಠಾ ಭವಂತಿ ॥**
**ತ್ವದ್ಭೀತಾಃ ಸಾಮ್ಯ ತಾಮಾಶ್ರಯಂತೇ ತ್ವದ್ಭೀತಾಃ ಸೋಮಪಾನಂ ಭಜಂತೇ**
**ತ್ವದ್ಭೀತಾಶ್ಚಾನ ಗೋದಾನ ನಿಷ್ಠಾಃ ತ್ವದ್ಭೀತಾ ಬ್ರಹ್ಮವಾದಂ ವದತಿ**

''ಓ ಯಮದೇವ, ಜನರು ನಿನ್ನನ್ನು ನೋಡಿ ಭಯಭ್ರಾಂತರಾಗಿ ಓಡುವರು. ಬ್ರಹ್ಮಚಾರಿಗಳು ಬ್ರಹ್ಮಚರ್ಯ ವ್ರತವನ್ನು ಆಚರಿಸುವದು ನಿನ್ನ ಭಯದಿಂದಲೇ. ಜನರು ಧರ್ಮಕರ್ಮಗಳನ್ನು ಮಾಡುವದು ನಿನ್ನ ಭೀತಿಯಿಂದಲೇ. ಸಕಲ ಜನರ ಸದಾಚಾರ ನಿಷ್ಠೆಗೆ ನಿನ್ನ ಭಯವೇ ಮೂಲ ಕಾರಣ. ನಿನ್ನ ಭಯದಿಂದಲೇ ಎಂಥ ಕ್ರೂರರೂ ಶಾಂತರಾಗುತ್ತಾರೆ ಸಾಧು ಸಜ್ಜನರು ಮಾಡುವ ಸೋಮಪಾನ, ಅನ್ನದಾನ, ಗೋದಾನ, ವೇದಾಧ್ಯಯನ ಮೊದಲಾದ ಎಲ್ಲವೂ ನಿನ್ನ ಭಯದಿಂದಲೇ. ಎಂಥ ಕ್ರೂರರೂ ಶಾಂತರಾಗುತ್ತಾರೆ ಸಾಧು ಸಜ್ಜನರು ಮಾಡುವ ಸೋಮಪಾನ, ಅನ್ನದಾನ, ಗೋದಾನ, ವೇದಾಧ್ಯಯನ ಮೊದಲಾದ ಎಲ್ಲವೂ ನಿನ್ನ ಭಯದಿಂದಲೇ ಯಥಾ ಪ್ರಕಾರ ಈ ಜಗತ್ತಿನಲ್ಲಿ ನಡೆಯುತ್ತಲಿವೆ.'' ಉಲೂಕಿಯ ಪ್ರಾರ್ಥನೆಯಿಂದ ಪರಿತುಷ್ಟನಾದ ಆ ಶ್ರಾದ್ಧದೇವ ಮತ್ತು ನುಡಿದ ''ಉಲೂಕಿ ನಿನಗೆ ಮಂಗಳವಾಗಲಿ. ನಿನಗೆ ಬೇಕಾದ ವರವನ್ನು ಕೇಳು. ಕೊಡುತ್ತೇನೆ.''

ಪರೇತಪತಿಯ ಈ ನುಡಿಯನ್ನು ಕೇಳಿ ಸಂತುಷ್ಟಳಾದ ಆ ಗೂಬೆಯ ಗೃಹಿಣಿಯು ವಿನಯದಿಂದ ಆ ಮೃತ್ಯುದೇವನನ್ನು ವಂದಿಸಿ ನುಡಿದಳು ''ಪ್ರಭು, ನನ್ನ ಪತಿಯಾದ ಉಲೂಕನು ನಿನ್ನ ಕ್ರೂರಪಾಶಗಳಿಂದ ಬಂಧಿಸಲ್ಪಟ್ಟಿದ್ದಾನೆ. ಮಿತ್ರ ಯಮದಂಡದಿಂದ ಪ್ರಹರಿಸಲ್ಪಡುತ್ತಿದ್ದಾನೆ. ಆ ನನ್ನ ಪತಿಯನ್ನು ಪುತ್ರರನ್ನು ಕಾಪಾಡು.''

ಆಗ ಯಮನು ''ಸಾಧ್ವಿ, ನನ್ನ ಯಮಪಾಶ ಹಾಗೂ ಯಮದಂಡಗಳು ಅಮೋಘ. ಒಮ್ಮೆ ಅವುಗಳನ್ನು ಪ್ರಯೋಗಿಸಿದ ಮೇಲೆ ಯಾರಾದರೂ ಅವಕ್ಕೆ ಗುರಿಯಾಗಲೇಬೇಕು.

ಈಗ ಹೇಳು ಆ ನನ್ನ ಯಾಮ್ಯಾಸ್ತ್ರಗಳು ಯಾರನ್ನು ಕಬಳಿಸಲಿ.'' ಆಗ ಆ ಉಲೂಕಪತ್ನಿಯು ಕೈಮುಗಿದು ಬೇಡಿಕೊಂಡಳು ಯಮಧರ್ಮನನ್ನು ''ದೇವೋತ್ತಮ, ನಿನ್ನ ಯಮಪಾಶ ಹಾಗೂ ಯಮ ದಂಡಗಳಿಗೆ ನನ್ನನ್ನು ಗುರಿಪಡಿಸು. ನಿನ್ನ ಆ ಎರಡು ಅಸ್ತ್ರಗಳು ನನ್ನನ್ನು ಬಲಿ ತೆಗೆದುಕೊಂಡು ಶಾಂತವಾಗಲಿ. ನನ್ನ ಪತಿಸುತರು ಮೃತ್ಯುಪಾಶದಿಂದ ಪಾರಾಗಲಿ.''

ಉಲೂಕಪತ್ನಿಯ ಈ ಪತಿಭಕ್ತಿ ಹಾಗೂ ಪುತ್ರವಾತ್ಸಲ್ಯ ಕಂಡು ಯಮನ ಹೃದಯ ಕರಗಿತು. ಅವನು ಸಂತಸ ತುಂಬಿ ನುಡಿದ- ''ಉಲೂಕಿ ನೀನು ಮಹಾ ಪತಿವ್ರತೆ, ನಿನ್ನ ಪತಿಭಕ್ತಿಯನ್ನು ನಾನು ಮೆಚ್ಚಿದೆ. ನಿನ್ನ ಪರೀಕ್ಷೆಗಾಗಿ ನಾನು ಹಾಗೆ ಹೇಳಿದ್ದೆ. ಇನ್ನು ಮೇಲೆ ನನ್ನ ಆ ಪಾಶ ಹಾಗೂ ದಂಡದಿಂದ ನಿಮಗೆ ಏನೂ ಬಾಧೆ ಆಗದು. ನಿನ್ನ ಪತಿ ಪುತ್ರರು ಸುರಕ್ಷಿತವಾಗಿ ಉಳಿಯುವರು. ನೀನು ಅವರೊಡನೆ ಸುಖವಾಗಿ ಬಾಳು.''

ಹೀಗೆ ಅಗ್ನಿ ಹಾಗೂ ಯಮ ಇಬ್ಬರೂ ಕೂಡಿ ಆ ಗೂಬೆ ಹಾಗೂ ಪಾರಿವಾಳ ಕುಟುಂಬಗಳ ದೀರ್ಘಕಾಲೀನವಾದ ದ್ವೇಷವನ್ನು ಅಳಿದರು. ತಮ್ಮ ತಮ್ಮ ಅಸ್ತ್ರಗಳನ್ನು ಉಪಸಂಹರಿಸಿದರು. ಆ ಎರಡೂ ಪಕ್ಷಿಗಳ ನಡುವೆ ಮಧುರಮೈತ್ರಿಯ ಸ್ನೇಹಸಂಬಂಧ ಬೆಳೆಯುವಂತೆ ಮಾಡಿದರು. ಅವರಿಬ್ಬರೂ ಆ ಹಕ್ಕಿಗಳಿಗೆ 'ಬೇಕಾದ ವರ ಬೇಡಿರಿ' ಎಂದು ಹೇಳಿದರು. ಆ ದೇವೋತ್ತಮರ ಮಾತನ್ನು ಕೇಳಿ ಆ ಎರಡೂ ಪಕ್ಷಿಗಳೂ ನುಡಿದವು- ''ಪೂಜ್ಯರೇ ಪಾಪದಿಂದ ಪಕ್ಷಿಗಳಾಗಿ ಜನಿಸಿದ ನಮಗೆ ವರಗಳು ಏಕೆ! ನಾವು ಕೇವಲ ಸ್ವಾರ್ಥಕ್ಕಾಗಿ ನಿಮ್ಮಿಂದ ವರಗಳನ್ನು ಬೇಡಲಾರೆವು.

**ಆತ್ಮಾರ್ಥಂ ಯಸ್ತು ಯಾಚೇತ ಸಶೋಚ್ಯೋಹಿ ಸುರೇಶ್ವರೌ**
**ಜೀವಿತಂ ಸಫಲಂ ತಸ್ಯ ಯಃ ಪರಾರ್ಥೋದ್ಯತಃ ಸದಾ**

ಯಾವನು ಕೇವಲ ತನ್ನ ಹಿತಕ್ಕಾಗಿಯೇ ಯೋಚನೆ ಮಾಡುವನೋ ಅವನು ಶೋಚನೀಯನೂ ನಿಂದ್ಯನೂ ಆಗಿರುತ್ತಾನೆ. ಯಾವನು ಪರಾರ್ಥಕ್ಕಾಗಿ ಕೆಲಸಮಾಡುತ್ತಾನೋ ಅವನ ಜನ್ಮವೇ ಸಾರ್ಥಕ.

**ಅಗ್ನಿರಾಪೋ ರವಿಃ ಪೃಥ್ವೀ ಧಾನ್ಯಾನಿ ವಿವಿಧಾನಿ ಚ**
**ಪರಾರ್ಥಂ ವರ್ತನಂ ತೇಷಾಂ, ಸತಾಂ ಚಾಪಿ ವಿಶೇಷತಃ**

''ಬೆಂಕಿ, ನೀರು, ಸೂರ್ಯ, ಪೃಥ್ವಿ, ಧಾನ್ಯ, ಇವುಗಳೆಲ್ಲವೂ ಪರಾರ್ಥಕ್ಕಾಗಿಯೇ ಇರುವವು. ಅದರಂತೆ ಸಜ್ಜನರೂ ಕೂಡಾ ಜೀವಿಸುವದು ಪರರ ಹಿತಕ್ಕಾಗಿಯೇ. ಅದಕ್ಕಾಗಿ ನಾವು ಸ್ವಾರ್ಥಕ್ಕಾಗಿ ಏನೂ ನಿಮ್ಮಲ್ಲಿ ಬೇಡಲಾರೆವು. ಆದರೆ ಲೋಕ ಹಿತಕ್ಕಾಗಿ ನಿಮ್ಮಲ್ಲಿ ಒಂದು ವರವನ್ನು ಕೇಳಿಕೊಳ್ಳುತ್ತೇವೆ. ಈ ಗಂಗಾನದಿಯ ದಕ್ಷಿಣ ತೀರ ಹಾಗೂ ಉತ್ತರ ತೀರಗಳಲ್ಲಿ ನಮ್ಮ ಆಶ್ರಮಗಳು ಇರಲಿ, ಇದು ನಾವು ಬೇಡುವ ಮೊದಲನೇಯ ವರವು. ಇನ್ನೂ ಒಂದು ವರವನ್ನು ನಮಗೆ ನೀಡಿರಿ. ಗಂಗಾನದಿಯ ಈ ದಕ್ಷಿಣೋತ್ತರ ತೀರ್ಥಗಳಲ್ಲಿ ಸ್ನಾನ, ದಾನ, ಜಪ, ಹೋಮ, ಪಿತೃಶ್ರಾದ್ಧಾದಿಗಳನ್ನು ಮಾಡಿದವರಿಗೆ ಅಕ್ಷಯ ಪುಣ್ಯ ಲಭಿಸಲಿ.''

ಪಕ್ಷಿಗಳ ಈ ಪ್ರಾರ್ಥನೆಯನ್ನು ತಕ್ಷಣದಲ್ಲಿಯೇ ಮನ್ನಿಸಿದರು ಆ ಅಗ್ನಿದೇವ ಯಮದೇವರು. ಮತ್ತು ಸುಪ್ರಸನ್ನರಾಗಿ ಅವುಗಳಿಗೆ ಹೇಳಿದರು. ''ಕಪೋತಿ ಮತ್ತು ಉಲೂಖಿಯು ಹೇಳಿದ ಅಗ್ನಿ ಯಮಸ್ತೋತ್ರಗಳನ್ನು ಪಠಿಸುವವರಿಗೆ ಅಕಾಲ ಮೃತ್ಯು

ಎಂದೂ ಬರುವದಿಲ್ಲಾ ಯಾವ ರೋಗಗಳು ಉಂಟಾಗುವದಿಲ್ಲಾ. ಅಗ್ನಿಭಯ, ನರಕ ಭಯ ಇಲ್ಲ ಮತ್ತು ಸಕಲೈಶ್ವರ್ಯ ಪ್ರಾಪ್ತಿಯೂ ಆಗುವದು. ಇಲ್ಲಿರುವ ತೀರ್ಥಗಳಿಗೆಲ್ಲ. ಯಮತೀರ್ಥ, ಕಪೋತ ತೀರ್ಥ, ಉಲೂಕ ತೀರ್ಥ ಉಲೂಕೀ ತೀರ್ಥ ಎಂದು ಹೆಸರು ಪ್ರಸಿದ್ಧಿ ಉಂಟಾಗುವದು.

## ತಪಸ್ತೀರ್ಥ

**ಬ್ರಹ್ಮ:-** ಈ ಗೌತಮೀತೀರದಲ್ಲಿ ತಪಸ್ತೀರ್ಥ ಎಂಬ ತೀರ್ಥವು ಪಿತೃದೇವತೆಗಳಿಗೆ ಅತ್ಯಂತ ಪ್ರಿಯಕರವಾಗಿದೆ. ಈ ತೀರ್ಥದ ತೀರದಲ್ಲಿ ಹಿಂದೆ ಋಷಿಗಳಲ್ಲಿ ಪರಸ್ಪರ ಒಂದು ಚರ್ಚೆ ಪ್ರಾರಂಭವಾಯಿತು. ಅಗ್ನಿ, ಜಲ ಎರಡರಲ್ಲಿ ಯಾವದು ಶ್ರೇಷ್ಠ? ಕೆಲವು ಮುನಿಗಳ ವಾದ 'ಜಲವೇ ಶ್ರೇಷ್ಠ'. ಅನ್ನಂ ಆಪ ಎಂದು ಶ್ರುತಿಯೇ ಇಲ್ಲವೇ! ನೀರಿನಿಂದಲೇ ಅನ್ನವು ಆಗುವದು. ನೀರಿನಿಂದಲೇ ಪದಾರ್ಥಗಳು ಪರಿಶುದ್ಧವು ಆಗುವವು. ಜಲವೇ ಜಗತ್ತಿಗೇ ಆಧಾರ, ನೀರು ನರಲೋಕಕ್ಕೆ ತಾಯಿ ಇದ್ದಂತೆ, ಜಲವು ಜಗತ್ತಿನ ಜೀವಕ್ಕೆ ಆಧಾರವಾದುದರಿಂದ ಬಲ್ಲವರು ಜೀವನ ಎಂದೇ ಜಲಕ್ಕೆ ಹೆಸರು ಇಟ್ಟಿರುತ್ತಾರೆ. ಅಮೃತ ಹುಟ್ಟಿದ್ದು ನೀರಿನಿಂದಲೆ ಆದುದರಿಂದ ಜಲವೇ ಸರ್ವಶ್ರೇಷ್ಠ.

ಇದು ಕೆಲವೊಂದು ವಿಶಿಷ್ಟ ಮುನಿಗಳ ಆಪೋದೇವಿಯ ಮೀಮಾಂಸೆ. ಇದನ್ನು ಕೇಳಿದ ಹಲವಾರು ಅಗ್ನಿದೇವಿ ಉಪಾಸಕರು ಕೆರಳಿ ಕೆಂಡವಾದರು. ಅವರ ಕೋಪಾಗ್ನಿ ಉದ್ದೀಪಿತವಾಯಿತು. ಅವರು ಅಷೇ ಉತ್ಸಾಹದಿಂದ ಪಾವಕ ಪಾರಮ್ಯವನ್ನು ವಿವರಿಸಿದರು. ''ಈ ಜಗತ್ತೆಲ್ಲವು ಅಗ್ನಿಯಿಂದಲೇ ಜೀವಿಸುವದು. ಆ ಅಗ್ನಿಯು ಪರಂಜ್ಯೋತಿ ರೂಪವಾಗಿದೆ. ಶರೀರದೊಳಗೆ ಅಂತರ್ಜ್ಯೋತಿಯೂ ಆಗಿದೆ. ಮೂರು ಲೋಕಗಳಲ್ಲಿ ಅಗ್ನಿ ಇಲ್ಲದ ಸ್ಥಳವಿಲ್ಲ. ಪಂಚಭೂತಗಳಲ್ಲಿ ಅಗ್ನಿಯಂಥ ಉತ್ತಮ ಭೂತ ಇನ್ನೊಂದಿಲ್ಲ, ಸ್ತ್ರೀಯೋನಿಯಲ್ಲಿ ಪುರುಷನಿಂದ ವಿಸರ್ಜಿಸಲ್ಪಟ್ಟ ಬೀಜವು ದೇಹ ರೂಪವನ್ನು ಹೊಂದಬೇಕಾದರೆ ಅಗ್ನಿ ಶಕ್ತಿಯೇ ಕಾರಣ. ದೇವತೆಗಳಿಗೆ ಅಗ್ನಿಯೇ ಮುಖ. ಯಜ್ಞಯಾಗಾದಿ ಕಾರ್ಯಗಳು ನಡೆಯುವದು ಈ ಅಗ್ನಿಯಿಂದಲೇ'' ಇದು ಅಗ್ನಿ ಉಪಾಸಕರ ವೀರಾವೇಶದ ತಮ್ಮ ಮತಮಂಡನೆ ಆಗಿತ್ತು. ಹೀಗೆ ಪರಸ್ಪರ ವಾದಿಸುತ್ತ ಆ ಮುನಿ ಮಂಡಲದ ಮೇಧಾವೀ ಮಹನೀಯರು ನನ್ನ ಕಡೆಗೆ ಬಂದು ನನ್ನನ್ನು ಕೇಳಿದರು.

''ಓ ಬ್ರಹ್ಮದೇವ, ನೀನು ಜಗತ್ತಿಗೆ ಮಹಾಪ್ರಭು. ಸರ್ವಜ್ಞ. ಆದರೂ ನೀನೆ ನಮ್ಮ ಪ್ರಶ್ನೆಗೆ ಉತ್ತರ ಹೇಳು. ಅಗ್ನಿಯು ಶ್ರೇಷ್ಠವೇ ಜಲವು ಶ್ರೇಷ್ಠವೇ?''

ಆಗ ನಾನು ಆ ಮುನಿಗಳಿಗೆ ಹೀಗೆ ಹೇಳಿದೆ-

''ಅಗ್ನಿ ಜಲ ಎರಡರಿಂದಲೂ ಹವ್ಯಕವ್ಯಗಳು ನಡೆಯುವವು. ಅಮೃತ, ಆಹಾರ, ಅನ್ನ ಪಚನಾದಿಗಳು ಆಗುವದು ಈ ಅಗ್ನಿ ಜಲಗಳಿಂದಲೇ. ಇವೆರಡರಿಂದಲೇ ಶರೀರಧಾರಣೆ ಮತ್ತು ಜೀವನ ನಿರ್ವಹಣೆಗಳು ನಡೆಯುವವು. ಆದುದರಿಂದ ಇವೆರಡೂ ಶ್ರೇಷ್ಠವಾಗಿರುತ್ತವೆ. ಇವುಗಳಲ್ಲಿ ಒಂದು ಶ್ರೇಷ್ಠ ಮತ್ತೊಂದು ಕಡಿಮೆ ಇಲ್ಲ.''

ಆ ಮುನಿಗಳಿಗೆ ನನ್ನ ಮಾತಿನಿಂದ ಸಮಾಧಾನವಾಗಲಿಲ್ಲ ಮತ್ತು ನಿಶ್ಚಯ ಜ್ಞಾನವು ಉಂಟಾಗಲಿಲ್ಲ. ಅಗ್ನಿ ಜಲ ಸಮ ಎಂಬ ಮಾತನ್ನು ಅವರು ನಂಬಲಿಲ್ಲ. ಅವರು ವಾಯುದೇವನ ಕಡೆಗೆ ಹೋದರು. ಮತ್ತೆ ಅವನನ್ನು ಪ್ರಶ್ನಿಸಿದರು-

"ಓ ವಾಯುದೇವ, ನೀನು ಜಗತ್ತಿನ ಪ್ರಾಣಸ್ವರೂಪ, ಸತ್ಯವೂ ನಿನ್ನಲ್ಲೆ ನೆಲಸಿರುತ್ತದೆ. ಅಗ್ನಿ ಜಲಗಳಲ್ಲಿ ಯಾವುದು ಶ್ರೇಷ್ಠ? ಹೇಳು."

ವಾಯು ಅಂದದ್ದು- "ಅಗ್ನಿಯೇ ಶ್ರೇಷ್ಠ ಅಗ್ನಿಯಲ್ಲಿಯೇ ಎಲ್ಲವೂ ಸುಪ್ರತಿಷ್ಠಿತವಾಗಿದೆ"

ವಾಯುದೇವನ ಈ ಮತ ಮುನಿಗಳಿಗೆ ಸಮ್ಮತ ಆಗಲಿಲ್ಲ. ಅವರೆಲ್ಲರೂ ಭೂದೇವಿ ಬಳಿಗೆ ಹೋದರು. ಅವಳನ್ನು ಕುರಿತು ನುಡಿದರು. "ಭೂದೇವಿ, ನೀನು ಜಗತ್ತಿಗೇ ಆಧಾರ ಭೂತಳಾಗಿ ಇರುವೆ. ನಿಜ ಹೇಳು. ಈ ನೀರು ಬೆಂಕಿಗಳಲ್ಲಿ ಯಾರು ಶ್ರೇಷ್ಠ? ಭೂದೇವಿ ಅಂದದ್ದು ಜಲವೇ ಶ್ರೇಷ್ಠ ನನಗೂ ಕೂಡಾ ಆ ನೀರೇ ಆಧಾರ. ಜಲವೂ ಅನಾದಿ. ಅದು ಶ್ರೇಷ್ಠ. ಜಲವೆ ಅಗ್ನಿಗಿಂತ ಶ್ರೇಷ್ಠ ಎಂಬ ಭೂದೇವಿಯ ಮಾತು ಋಷಿಗಳಿಗೆ ಒಪ್ಪಿಗೆ ಯಾಗಲಿಲ್ಲ. ಅವರೆಲ್ಲರೂ ಹಾಲಿನ ಕಡಲಿನಲ್ಲಿ ಪವಡಿಸಿರುವ ಹರಿಯ ಬಳಿಗೆ ತೆರಳಿದರು. ಪದ್ಮ ಶಂಖ, ಚಕ್ರ, ಗದೆಗಳು ಮುಂತಾದ ಆಯುಧಗಳನ್ನು ತನ್ನ ಆ ನಾಲ್ಕು ಕೈಗಳಲ್ಲಿ ಧರಿಸಿದ್ದ. ಆ ಭಗವಂತ. ಬಗೆಬಗೆಯ ನುಡಿಗಳಿಂದ ಅವರು ಆ ಭಗವಂತನನ್ನು ಸ್ತುತಿಸಿದರು.

**"ಯೋ ವೇದಸರ್ವಂ ಭುವನಮ್ ಭವಿಷ್ಯದ್**
**ಯಜ್ಞಾಯ ಮಾನಂ ಚ ಗುಹಾ ನಿವಿಷ್ಟಮ್**
**ಲೋಕತ್ರಯಂ ಚಿತ್ರವಿಚಿತ್ರರೂಪ-**
**ಮಂತೇ ಸಮಸ್ತಂ ಚ ಯಮಾವಿವೇಶ**

ಹಿಂದೆ ಆದದ್ದನ್ನು, ಇಂದು ನಡೆದಿದ್ದನ್ನು ಮುಂದೆ ಆಗುವ ಸಕಲ ವಿಷಯಗಳನ್ನು ಬಲ್ಲವ ಆ ಭಗವಂತನು ಒಬ್ಬನೇ. ಅವನು ಎಲ್ಲರ ಹೃದಯ ಗುಹೆಯಲ್ಲಿ ವಾಸವಾಗಿದ್ದಾನೆ. ಚಿತ್ರವಿಚಿತ್ರವಾದ ಈ ಪ್ರಪಂಚವೆಲ್ಲವೂ ಕೊನೆಗೆ ಅಂತ್ಯಕಾಲದಲ್ಲಿ ಅವನಲ್ಲಿಯೆ ಲಯವಾಗುವದು ಅಂತಹ ಸರ್ವಜ್ಞನು ಸರ್ವಕರ್ತನು ಆದ ಶ್ರೀಹರಿಯನ್ನು ನಾವು ಮೊರೆ ಹೊಕ್ಕಿದ್ದೇವೆ.

ಭಗವನ್ ಪಂಚ ಮಹಾಭೂತಗಳಲ್ಲಿ ಅತ್ಯಂತ ಶ್ರೇಷ್ಠ ಯಾವುದು? ಇದನ್ನು ನಾವು ಎಷ್ಟು ಚರ್ಚಿಸಿದರೂ ಸರಿಯಾದ ನಿರ್ಣಯ ದೊರಕುತ್ತಿಲ್ಲ. ಅದಕ್ಕಾಗಿ ನಿನ್ನ ಬಳಿಗೆ ಬಂದಿದ್ದೇವೆ. ಈ ವಿಷಯದಲ್ಲಿ ಯಥಾರ್ಥವಾದ ನಿರ್ಣಯವನ್ನು ನೀನೇ ಹೇಳು.

ಆಗ ಆ ಎಲ್ಲ ಮಹಾಋಷಿಗಳ ಪ್ರಶ್ನೆಯನ್ನು ಕೇಳಿ ಪರಮಾತ್ಮನು ಅಶರೀರವಾಣಿಯ ಮುಖಾಂತರ ವಾಗ್ದೇವಿಯ ರೂಪದಿಂದ ಹೀಗೆ ಉತ್ತರ ಕೊಟ್ಟನು. "ಋಷಿಗಳೆ! ನೀವು ಭಕ್ತಿ ಶ್ರದ್ಧೆಯಿಂದ ಅಗ್ನಿ ಜಲ ಎರಡನ್ನೂ ಆರಾಧಿಸಿರಿ. ಯಾವ ಭೂತವು ಮೊದಲು ಸಿದ್ಧಿಸುವದೋ ಅದೇ ಶ್ರೇಷ್ಠ." ಅದನ್ನು ಕೇಳಿ ಋಷಿಗಳು "ಹಾಗೇ ಆಗಲಿ" ಎಂದು ನುಡಿದು ವಿರಕ್ತರಾಗಿ ಅಲ್ಲಿಂದ ಮರಳಿದರು. ಈಗಾಗಲೇ ಭೂತಶ್ರೇಷ್ಠತೆಯ ನಿರ್ಣಯವನ್ನು ಮಾಡುವ ಕಾರ್ಯದಲ್ಲಿ ಎಲ್ಲ ಮುನಿಗಳು ಸಾಕಷ್ಟು ದಣಿದುಕೊಂಡಿದ್ದರು. ವೀತರಾಗ ಪೂತಾತ್ಮರಾದ ಆ ಮುನಿ ಮಹರ್ಷಿಗಳೆಲ್ಲರೂ ಗೌತಮೀ ತೀರಕ್ಕೆ ಬಂದರು. ಆ ನದೀತಟಾಕದಲ್ಲಿ ಕೆಲವು ಋಷಿಗಳು ಅಗ್ನಿಯನ್ನು ಪೂಜಿಸಿದರು. ಹಲವರು ಜಲ ದೇವತೆಯನ್ನು ಅರ್ಚಿಸಿದರು.

ಆಗ ವೇದಮಾತೆಯಾದ ವಾಗ್ದೇವತೆಯು ನಿರ್ಣಯಾತ್ಮಕವಾದ ಧ್ವನಿಯಲ್ಲಿ ಆ ಮುನಿ ಮಹರ್ಷಿಗಳನ್ನು ಕುರಿತು ನುಡಿದಳು "ಋಷಿವರ್ಯರೇ "ಅಗ್ನೇರಾಪಃ" ಎಂದು ವೇದ

ಘೋಷಿಸುತ್ತದೆ. ನೀರು ಹುಟ್ಟುವದು ಅಗ್ನಿಯಿಂದಲೇ. ಜಲದಿಂದಲೇ ಶರೀರ ಶುದ್ಧಿಯಾಗುವದು. ನೀರಿನಲ್ಲಿ ಸ್ನಾನಮಾಡಿ ಆಚಮನ ಮಾಡಿದ ಮೇಲೆಯೇ ಎಲ್ಲ ವೇದೋಕ್ತಕ್ರಮಗಳಲ್ಲಿ ಅಧಿಕಾರವು ಸಿದ್ಧಿಸುವುದು. ಜಲದಲ್ಲಿ ಮಜ್ಜನ ಮಾಡಿ ಶುದ್ಧನಾಗದಿದ್ದರೆ ಮನುಷ್ಯನು ಅಶುಚಿ. ಅವನಿಗೆ ಯಾವ ಕರ್ಮದಲ್ಲಿಯೂ ಅಧಿಕಾರವಿಲ್ಲ. ಆದುದರಿಂದ ಅಗ್ನಿಗಿಂತ ಹಾಗೂ ಇತರ ಭೂತಗಳಿಗಿಂತ ಜಲವೇ ಶ್ರೇಷ್ಠ. ಹೀಗೆ ಅಶರೀರ ವಾಣಿಯು ಅಪ್ ತತ್ವದ ಶ್ರೇಷ್ಠತೆಯನ್ನು ಘೋಷಿಸಿದ್ದನ್ನು ಕೇಳಿ ವೇದವಾದಿಗಳಾದ ಮುನಿಮಾನನೀಯರೆಲ್ಲರು ಸಲಿಲವೇ ಶ್ರೇಷ್ಠ ಎಂದು ನಿರ್ಣಯಿಸಿ ಕೊಂಡರು. ಈ ವಿಷಯವು ಗೌತಮೀ ತೀರದಲ್ಲಿ ಋಷಿಗಳು ಸತ್ರಯಾಗ ಮಾಡುವಾಗ ಚರ್ಚಿಸಲ್ಪಟ್ಟು ನಿರ್ಣೀತವಾದದ್ದರಿಂದ ಆ ಸ್ಥಳವು ಸತ್ರ ತೀರ್ಥ ಎಂದು ಹೆಸರಾಯಿತು. ಸಾಕ್ಷಾತ್ ಸರಸ್ವತೀ ದೇವಿಯೇ ಆಕಾಶವಾಣಿಯ ಮುಖಾಂತರ ಆ ತೀರ್ಥದಲ್ಲಿ ಋಷಿಗಳ ಸಂಶಯವನ್ನು ಪರಿಹರಿಸಿದಳು. ಅನಂತರ ಆ ವಾಗ್ದೇವಿಯೇ ಸರಸ್ವತೀ ನದೀ ರೂಪದಿಂದ ಹರಿದು ಗೌತಮೀನದಿಯಲ್ಲಿ ಸೇರಿದಳು. ಈ ಸರಸ್ವತೀಗೌತಮೀ ನದಿಗಳ ಸಂಗಮ ಸ್ಥಳದ ಮಹಿಮೆಯನ್ನು ಯಾವನು ವರ್ಣಿಸಬಲ್ಲನು!

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತನೆಯ ಅಧ್ಯಾಯ ಮುಗಿದುದು*

—○—

## ದೇವತೀರ್ಥ

**ಅಧ್ಯಾಯ - ೩೧**

**ಬ್ರಹ್ಮ:-** ವೃದ್ಧಗಂಗಾ ಎಂದು ಹೆಸರಾದ ಗೌತಮೀನದಿಯ ಉತ್ತರ ತೀರದಲ್ಲಿ ದೇವತೀರ್ಥ ಎಂಬ ಒಂದು ತೀರ್ಥ ಇರುತ್ತದೆ. ಅದರ ಮಹಿಮೆಯ ಶ್ರವಣವು ಪಾಪಹಾರಕ ಮತ್ತು ಭವತಾರಕ. ಆ ದೇವತೀರ್ಥದ ಮಹಾತ್ಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಆರ್ಷ್ಟಿಷೇಣ ಎಂಬ ಅರಸನು ಇದ್ದ. ಸದ್ಗುಣ ಸಂಪನ್ನ ಆಗಿದ್ದ ಆ ಮಹಾರಾಜ. ಜಯಾ ಅವನಿಗೆ ತಕ್ಕ ಹೆಂಡತಿ. ಅವಳು ಗುಣದಿಂದ ಗೌರಿ, ರೂಪದಿಂದ ರತಿ, ಕಾಂತಿಯಲ್ಲಿ ಸಾಕ್ಷಾತ ಮಹಾಲಕ್ಷ್ಮಿ, ಆ ಭೂಪಾಲನಿಗೆ ಭರ ಎಂಬ ಒಬ್ಬ ಗಂಡು ಮಗ ಇದ್ದ. ಅವನು ಬುದ್ಧಿವಂತನಿದ್ದಂತೆ ಪಿತೃಭಕ್ತನೂ ಆಗಿದ್ದ. ಅವನಿಗೆ ಚತುರ್ವೇದಗಳಲ್ಲಿ ಮಾತ್ರವಲ್ಲ ಧರ್ಮವೇದ, ಆಯುರ್ವೇದದಲ್ಲೂ ಪ್ರಗಾಢ ಪಾಂಡಿತ್ಯ. ಸುಪ್ರಭೆ ಅವನಿಗೆ ಗುಣಾನುಗುಣಳೂ ರೂಪಾನುರೂಪಳೂ ಆದ ಭಾರ್ಯೆ ಆಗಿದ್ದಳು. ಒಮ್ಮೆ ಆ ಆರ್ಷ್ಟಿಷೇಣ ರಾಜನು ತನ್ನ ಸಾಮ್ರಾಜ್ಯ ರಕ್ಷಣೆಯ ಭಾರವನ್ನು ಮಗನಾದ ಭರನಿಗೆ ಒಪ್ಪಿಸಿ ಪುರೋಹಿತರೊಡನೆ ಯಜ್ಞದೀಕ್ಷೆಯನ್ನು ಕೈಗೊಂಡ. ಸರಸ್ವತೀನದಿಯ ತೀರದಲ್ಲಿ ವೇದಕೋವಿದರೂ ಶಾಸ್ತ್ರಪಂಡಿತರೂ ಆದ ಋಷಿಗಳಿಂದ ಕೂಡಿಕೊಂಡು ಆ ಮಹಾರಾಜನು ಅಶ್ವಮೇಧಯಾಗವನ್ನು ಪ್ರಾರಂಭಿಸಿದ. ಆಗ ಒಂದು ಘೋರ ದುರ್ಘಟನೆ ಸಂಭವಿಸಿತು. ಆ ಕಾಲದಲ್ಲಿ ಮಿಥುವೆಂಬ ಮಹಾ ಪಾಪಿಷ್ಠನಾದ ದೈತ್ಯ ಈ ಯಜ್ಞವನ್ನು ವಿಧ್ವಂಸ ಮಾಡಲು ಅಲ್ಲಿಗೆ ಬಂದ. ಬ್ರಾಹ್ಮಣ ಮತ್ತು ಅಗ್ನಿಗಳ ಸಮ್ಮುಖದಲ್ಲಿ ದೀಕ್ಷಿತನಾಗಿ ಯಜ್ಞವನ್ನು ಮಾಡುತ್ತಿದ್ದ ಆರ್ಷ್ಟಿಷೇಣ ಮಹಾರಾಜನ ಮೇಲೆ ಒಮ್ಮೆಲೆ ದಾಳಿ ಮಾಡಿದ. ಆ ರಕ್ಕಸನು ಕ್ರೂರನಿದ್ದಂತೆ ಶೂರನೂ ಆಗಿದ್ದ.

ಮದಾಂಧನಾದ ಆ ದೈತ್ಯ ಒಮ್ಮೆಲೆ ಯಜ್ಞಮಂಟಪದಲ್ಲಿ ನುಗ್ಗಿ ಯಾಗವನ್ನು ಧ್ವಂಸ ಮಾಡಿದ. ಮಹಾರಾಜನನ್ನೂ ಅವನ ಮಡದಿಯನ್ನೂ ಅಪಹರಿಸಿದ. ಪುರೋಹಿತನ್ನು ಕೂಡ ಬಿಡಲಿಲ್ಲ. ಮಹಾರಾಜರೊಡನೆ ಪುರೋಹಿತನನ್ನೂ ಅಪಹರಿಸಿಕೊಂಡು ಪಾತಾಳಕ್ಕೆ ಹೋಗಿಬಿಟ್ಟ. ಹೀಗೆ ಪತ್ನಿ ಪುರೋಹಿತ ರೊಂದಿಗೆ ಅರ್ಷ್ಟಿಷೇಣ ಮಹಾರಾಜರನ್ನು ದುಷ್ಟನಾದ ಮಿಥು ದೈತ್ಯನು ಅಪಹರಿಸಿ ಪಾತಾಳಕ್ಕೆ ತೆರಳಿದ ಬಳಿಕ ಅಶ್ವಮೇಧ ಯಾಗವು ಸಂಪೂರ್ಣ ನಾಶವಾಗಿ ಹೋಯಿತು.

ಆ ರಾಜನ ಪುರೋಹಿತನಿಗೆ ದೇವಾಪಿ ಎಂಬ ಪುತ್ರನು ಇದ್ದ ಅವನಿಗೆ ಇನ್ನೂ ಚಿಕ್ಕ ವಯಸ್ಸು. ಕುಮಾರನು ಮನೆಯಲ್ಲಿ ತನ್ನ ತಾಯಿ ಮಾತ್ರ ಇದ್ದು ತಂದೆ ಇಲ್ಲದ್ದನ್ನು ನೋಡಿ ಆಶ್ಚರ್ಯಪಟ್ಟ. ಅವನ ಮನಸ್ಸಿಗೂ ಬಹಳ ವ್ಯಥೆ ಎನಿಸಿತು. ಆ ಮಗು ತಾಯಿಯನ್ನು ಕೇಳಿತು. ''ತಾಯಿ, ತನ್ನ ತಂದೆ ಎಲ್ಲಿಗೆ ಹೋಗಿದ್ದಾರೆ? ತಂದೆ ಇಲ್ಲದೆ ನಾನು ಬಹಳದಿನ ಬದುಕಲಾರೆ, ನಿಜ ಹೇಳು. ಎಲ್ಲಿ ಇದ್ದಾನೆ ನನ್ನ ತಂದೆ, ನೀನು ಹೇಳದಿದ್ದರೆ ನಾನು ಬೆಂಕಿಯಲ್ಲಾದರೂ ಬೀಳುವೆನು, ನೀರಿನಲ್ಲಾದರೂ ಮುಳುಗಿ ಸಾಯುವೆನು.'' ಅವನ ಈ ಮಾತನ್ನು ಕೇಳಿ ತಾಯಿ ನುಡಿದಳು ''ಕುಮಾರ, ನಿನ್ನ ತಂದೆ ಆ ಅರ್ಷ್ಟಿಷೇಣ ಮಹಾರಾಜನಿಂದ ಅಶ್ವಮೇಧಯಾಗವನ್ನು ಮಾಡಿಸುತ್ತಿದ್ದ ಕಾಲದಲ್ಲಿ ಮಿಥು ಎಂಬ ದರ್ಪೋದ್ಧತನಾದ ದುಷ್ಟ ರಾಕ್ಷಸ ಬಂದು ಪುರೋಹಿತನಾದ ನಿನ್ನ ತಂದೆಯನ್ನೂ ಯಜ್ಞ ದೀಕ್ಷಿತರಾದ ರಾಜದಂಪತಿಗಳನ್ನೂ ಅಪಹರಿಸಿಕೊಂಡು ಪಾತಾಳ ಲೋಕಕ್ಕೆ ಒಯ್ದಿದ್ದಾನೆ. ಅವನ ಈ ದುಷ್ಕೃತ್ಯವನ್ನು ದೇವತೆಗಳು, ಬ್ರಾಹ್ಮಣರು, ಋತ್ವಿಜರೂ ನಿಸ್ಸಹಾಯಕರಾಗಿ ಅವನನ್ನು ತಡೆಯಲಾಗದೆ ನೋಡುತ್ತ ನಿಂತಿದ್ದರು. ಯಾರಿಗೂ ಏನೂ ಮಾಡಲಿಕ್ಕೆ ಆಗಲಿಲ್ಲ. ರಾಜಕುಮಾರನಾದ ಭರನೂ ಕೂಡ ಮಹಾಬಲಿಷ್ಠನಾದ ಆ ದುಷ್ಟದೈತ್ಯನನ್ನು ಎದುರಿಸಲಿಕ್ಕೆ ಆಗದೆ ಹತಾಶನಾಗಿ ಕೈಚೆಲ್ಲಿ ನಿರೂಪಾಯನಾಗಿ ಕುಳಿತುಕೊಂಡಿದ್ದಾನೆ.''

ತಾಯಿಯ ಈ ಮಾತನ್ನು ಕೇಳಿ ಪುರೋಹಿತ ಪುತ್ರನಾದ ದೇವಾಪಿಯು ರಾಜನ ಮಗನಾದ ಭರನ ಬಳಿಗೆ ಹೋದ. ಮತ್ತು ಅವನಿಗೆ ''ರಾಜಕುಮಾರ, ಮಿಥುದೈತ್ಯನು ಬಲಾತ್ಕಾರದಿಂದ ಪಾತಾಳಕ್ಕೆ ಒಯ್ದು ನಿನ್ನ ತಂದೆ ತಾಯಿಗಳನ್ನು ಹಾಗೂ ನನ್ನ ತಂದೆಯನ್ನೂ, ನಾನು ತಪಸ್ಸು, ಬ್ರಹ್ಮಚರ್ಯ, ವ್ರತನಿಯಮಗಳಿಂದ ಕರೆತರುತ್ತೇನೆ. ಪರಾಜಯವನ್ನು ಹೊಂದಿ ಬಳಿಕ ಅದಕ್ಕೆ ತಕ್ಕ ಪ್ರತೀಕಾರವನ್ನು ಮಾಡದಿದ್ದರೆ ಅವನು ನರಾಧಮ ಎನಿಸುವನು. ಅಂಥವನು ಬದುಕಿದ್ದರೂ ಸತ್ತಂತೆ. ನಾನು ಅವರೆಲ್ಲರನ್ನು ತಿರುಗಿ ಕರೆದುಕೊಂಡು ಬರಲು ಹೋಗುತ್ತೇನೆ, ಅಲ್ಲಿಯವರೆಗೆ ನೀನು ನನ್ನ ತಾಯಿಯನ್ನು ರಕ್ಷಿಸು. ನ್ಯಾಯದಿಂದ ಈ ರಾಜ್ಯವನ್ನು ನಿನ್ನ ತಂದೆಯಂತೆ ಪರಿಪಾಲಿಸು'' ಎಂದು ಹೇಳಿ ತನ್ನ ತಾಯಿಯನ್ನು ರಾಜಕುಮಾರ ಭರನಿಗೆ ಒಪ್ಪಿಸಿ ದೇವಾಪಿಯು ಅಲ್ಲಿಂದ ತೆರಳಿದ. ಮೊದಲು ಅವನು ಋತ್ವಿಜರ ಬಳಿಗೆ ಬಂದ. ಅವರಿಗೆ ನೇರವಾಗಿ ಪ್ರಶ್ನೆ ಕೇಳಿದ. ''ಋತ್ವಿಜರೆ, ನೀವೆಲ್ಲರೂ ನೋಡುತ್ತಿದ್ದಂತೆಯೇ ದುಷ್ಟ ದೈತ್ಯನು ಮಹಾರಾಜರ ಯಜ್ಞವನ್ನು ಹಾಳುಮಾಡಿದ. ದೀಕ್ಷಿತರಾದ ರಾಜದಂಪತಿಗಳನ್ನೂ ಪುರೋಹಿತರಾದ ನನ್ನ ತಂದೆಯನ್ನೂ ಅಪಹರಿಸಿದ. ಅವರನ್ನೆಲ್ಲ ರಕ್ಷಿಸುವುದು ಋತ್ವಿಜರಾದ ನಿಮ್ಮ ಕರ್ತವ್ಯವಾಗಿತ್ತು. ಅವರೆಲ್ಲರೂ ಸುರಕ್ಷಿತವಾಗಿ ನನಗೆ ದೊರಕುವಂತೆ ಮಾಡಿರಿ. ಇಲ್ಲದಿದ್ದರೆ ನಾನು ನಿಮಗೆ ಶಾಪ ಕೊಡುತ್ತೇನೆ.''

ಪುರೋಹಿತ ಪುತ್ರನಾದ ದೇವಾಪಿಯ ಈ ಮಾತನ್ನು ಕೇಳಿ ಋತ್ವಿಜರು ಹೇಳಿದರು. "ಕುಮಾರ, ಈ ಅಗ್ನಿಯೇ ಶ್ರೇಷ್ಠ. ನಾವೆಲ್ಲರೂ ಅಗ್ನಿಯ ಪರಿಚಾರಕರು. ಅಗ್ನಿಯೇ ಯಜ್ಞದಲ್ಲಿ ಹವಿಸ್ಸಿನ ಭೋಕ್ತಾ ಮತ್ತು ಫಲದಾತ ಆಗಿದ್ದಾನೆ. ಅವನನ್ನೇ ಕೇಳು." ಎಂದು ಹೇಳಿದರು. ಆಗ ದೇವಾಪಿಯು ಋತ್ವಿಜರನ್ನು ಬಿಟ್ಟು ಅಗ್ನಿಯ ಬಳಿಗೆ ಬಂದು ಕೇಳಿದ. ಆಗ ಅಗ್ನಿಯು "ದೇವಾಪಿ ಕುಮಾರ, ಋತ್ವಿಜರಂತೆ ನಾನು ಕೂಡ ದೇವತೆಗಳ ಪರಿಚಾರಕನೆ. ಎಲ್ಲ ದೇವತೆಗಳಿಗೂ ಹವಿರ್ಭಾಗವನ್ನು ಮುಟ್ಟಿಸುವ ಕೆಲಸ ನನ್ನದು. ಆ ಫಲಕ್ಕೆ ಭಾಗಿಗಳೂ, ರಕ್ಷಕರೂ, ದೇವತೆಗಳೇ ಆಗಿರುತ್ತಾರೆ" ಎಂದು ನುಡಿದ. ಅದನ್ನು ಕೇಳಿ ದೇವಾಪಿಯು ದೇವತೆಗಳ ಬಳಿಗೆ ಹೋಗಿ ನಮಸ್ಕರಿಸಿ ಅದೇ ಪ್ರಶ್ನೆಯನ್ನು ಕೇಳಿದ. ಆಗ ದೇವತೆಗಳು ಅವನನ್ನು ಕುರಿತು ಹೀಗೆ ನುಡಿದರು. "ದೇವಾಪಿ, ನಾವು ಋತ್ವಿಜರು ವೇದಮಂತ್ರಗಳಿಂದ ಕರೆದಾಗ ಮಾತ್ರ ಯಜ್ಞಮಂಟಪಕ್ಕೆ ಬಂದು ನಮ್ಮ ಹವಿರ್ಭಾಗವನ್ನು ಸ್ವೀಕರಿಸುತ್ತೇವೆ. ಯಜ್ಞದ ವಿಷಯದಲ್ಲಿ ನಾವು ಸ್ವತಂತ್ರರಲ್ಲ. ವೇದಾ ಧೀನರು. ಆದುದರಿಂದ ನೀನು ಈ ವಿಷಯವಾಗಿ ವೇದಗಳನ್ನೇ ಕೇಳು" ಎಂದು ಹೇಳಿದರು.

ಅನಂತರ ದೇವಾಪಿಯು ಶುಚಿರ್ಭೂತನಾಗಿ ಧ್ಯಾನಗೈದ. ತಪಸ್ಸನ್ನು ಆಚರಿಸಿದ. ಭಕ್ತಿಯಿಂದ ಉಪಾಸನೆ ಮಾಡಿ ವೇದಗಳನ್ನು ಆಹ್ವಾನ ಮಾಡಿದ. ಆಗ ವೇದಗಳು ದೇವಾಪಿಯ ಎದಿರು ಆವಿರ್ಭವಿಸಿದವು. ಮತ್ತು ಹೇಳಿದವು "ಕುಮಾರ, ನಾವು ಕೂಡ ಪರತಂತ್ರರೆ. ಈಶ್ವರನ ಅಧೀನರು. ಆ ಮಹೇಶ್ವರನು, ಜಗದಾಧಾರ. ಅವನಿಗೆ ಬೇರೆ ಯಾವ ಆಧಾರವೂ ಇಲ್ಲ. ಅವನು ಸರ್ವಸಮರ್ಥ ಮತ್ತು ಸರ್ವಜ್ಞ. ಅವನ ಅನುಗ್ರಹದಿಂದ ನಾವು ನಿನಗೆ ನಿನ್ನ ತಂದೆ ಹಾಗು ರಾಜರಾಣಿಯರು ದೊರಕುವ ಉಪಾಯವನ್ನು ಹೇಳುತ್ತೇವೆ ಕೇಳು. ರಾಜಪುರೋಹಿತನಾದ ನಿನ್ನ ತಂದೆಯು ಮತ್ತು ರಾಜ ರಾಣಿಯರೂ ಈಗ ಆ ದೈತ್ಯನಿಂದ ಪಾತಾಳ ಲೋಕದಲ್ಲಿ ಇರಿಸಲ್ಪಟ್ಟಿದ್ದಾರೆ. ಆ ದುಷ್ಟ ಮಿಥು ರಾಕ್ಷಸನನ್ನು ಸಂಹರಿಸಿದ ಬಳಿಕವೇ ಪಾತಾಳದಿಂದ ಅವರೆಲ್ಲರ ಬಿಡುಗಡೆಯಾಗುವುದು. ಅದಕ್ಕಾಗಿ ನೀನು ಗೌತಮೀನದಿಗೆ ಹೋಗಿ ಅಲ್ಲಿ ಸ್ನಾನ ಮಾಡಿ ಪರಮೇಶ್ವರನನ್ನು ಧ್ಯಾನ ಮಾಡು. ಅವನ ಅನುಗ್ರಹದಿಂದ ನಿನ್ನ ಮನೋರಥವು ಪೂರ್ಣವಾಗುವುದು" ಎಂದು. ವೇದಗಳ ಮಾತಿನಂತೆ ದೇವಾಪಿಯು ಗೌತಮೀನದಿಗೆ ಹೋದ. ಅಲ್ಲಿ ಸ್ನಾನಮಾಡಿ ಭಕ್ತಿಯಿಂದ ಮಹಾದೇವನನ್ನು ಸ್ತೋತ್ರ ಮಾಡಿದ.

**ಬಾಲೋऽಹಂ ದೇವದೇವೇಶ, ಗುರುಣಾಂ ತ್ವಂ ಗುರುರ್ಮಮ.**
**ನಮೇಶಕ್ತಿರ್ಹಿ ತ್ವತ್‌ಸ್ತವನೇ ತುಭ್ಯಂ ಶಂಭೋ ನಮೋऽಸ್ತು ತೇ**

ದೇವದೇವನಾದ ಮಹಾದೇವ, ನೀನು ಎಲ್ಲ ದೇವತೆಗಳಿಗೂ ಒಡೆಯ, ಗುರುಗಳಿಗೆಲ್ಲ ಗುರು, ನಿನ್ನನ್ನು ಸ್ತೋತ್ರಮಾಡಲಿಕ್ಕೆ ನನಗೆ ಶಕ್ತಿ ಇಲ್ಲ. ಮಹಾದೇವ, ನಿನಗೆ ನನ್ನ ನಮಸ್ಕಾರ."

ದೇವಾಪಿಯ ಸ್ತೋತ್ರವನ್ನು ಕೇಳಿ ಪರಮೇಶ್ವರನು ಪ್ರೀತನಾದ. ಅವನಿಗೆ ತನ್ನ ಪ್ರತ್ಯಕ್ಷ ದರ್ಶನವನ್ನು ತೋರಿಸಿದ. ಬೇಕಾದ ವರವನ್ನು ಬೇಡು ಎಂದು ಹೇಳಿದ. ಆಗ ವಾತಾಪಿಯು ಕೈ ಮುಗಿದು "ಓ ಜಗನ್ನಾಥ, ಮಿಥು ದೈತ್ಯನು ಯಜ್ಞದೀಕ್ಷಿತರಾದ ರಾಜರಾಣಿಯರನ್ನೂ ಮತ್ತು ಅವನ ಪುರೋಹಿತನಾದ ನನ್ನ ತಂದೆ ಉಪಮನ್ಯುವನ್ನೂ ಅಪಹರಿಸಿಕೊಂಡು ಹೋಗಿದ್ದಾನೆ. ಆ ದೈತ್ಯನನ್ನು ಕೊಂದು ನನ್ನ ತಂದೆ ಹಾಗು ರಾಜರಾಣಿಯರು ನನಗೆ ಲಭಿಸುವಂತೆ ಅನುಗ್ರಹಿಸು" ಎಂದು ಕೇಳಿಕೊಂಡನು.

ದೇವಾಪಿಯ ಮಾತಿಗೆ ಶಂಕರನು 'ತಥಾಸ್ತು' ಎಂದು ಹೇಳಿದನು. ಮತ್ತು ತನ್ನ ಸೇವಕನೂ ಗಣಾಧೀಶನೂ ಆದ ನಂದಿಕೇಶನನ್ನು ಕರೆದು ಅವನ ಕೈಯಲ್ಲಿ ತನ್ನ ತ್ರಿಶೂಲ ಆಯುಧವನ್ನು ಕೊಟ್ಟು ಪಾತಾಳಕ್ಕೆ ಕಳಿಸಿದನು. ಹಾಗು ಆ ದೈತ್ಯನನ್ನು ವಧಿಸಿ ರಾಜರಾಣಿಯರನ್ನೂ ಪುರೋಹಿತನನ್ನು ಬಿಡಿಸಿಕೊಂಡು ಬರಲು ಕಟ್ಟಪ್ಪಣೆಯನ್ನು ನೀಡಿದನು. ಪರಮೇಶ್ವರನ ಆದೇಶದಂತೆ ನಂದಿಕೇಶ್ವರನು ಪಾತಾಳಕ್ಕೆ ಹೋದನು. ಮಿಥು ರಾಕ್ಷಸನನ್ನು ಕೊಂದು ಅವನ ಅನುಯಾಯಿಗಳಾದ ಉಳಿದ ರಾಕ್ಷಸರನ್ನು ಸಂಹರಿಸಿದನು ಮತ್ತು ದೇವಾಪಿಯು ತಂದೆಯಾದ ಉಪಮನ್ಯು ಮತು ರಾಜರಾಣಿಯರನ್ನು ಬಿಡಿಸಿತಂದು ದೇವಾಪಿಗೆ ಒಪ್ಪಿಸಿದನು.

ದೇವಾಪಿಯ ಶತಪ್ರಯತ್ನದಿಂದ ನಂದಿಕೇಶ್ವರನ ಸಹಾಯದಿಂದ ಸುರಕ್ಷಿತವಾಗಿ ಮರಳಿಬಂದ ಆರ್ಷ್ಟಿಷೇಣ ಮಹಾರಾಜನು ತನ್ನ ಪುರೋಹಿತನಾದ ಉಪಮನ್ಯುವಿನ ನೇತೃತ್ವದಲ್ಲಿ ಅಶ್ವಮೇಧ ಯಾಗವನ್ನು ಪುನಃ ಪ್ರಾರಂಭಿಸಿ ಮುಕ್ತಾಯಗೊಳಿಸಿದ. ಆ ಯಜ್ಞಕ್ಕೆ ಬಂದ ಋತ್ವಿಜರೂ, ದೇವತೆಗಳೂ, ಅಗ್ನಿಯೂ ವೇದಗಳೂ ಮತ್ತು ಋಷಿಗಳೆಲ್ಲರೂ, ದೇವಾಪಿಯ ಮೇಲೆ ಅತ್ಯಂತ ಸುಪ್ರೀತರಾಗಿ ಅವನಿಗೆ ಹೇಳಿದರು.

''ದೇವಾಪಿ, ಭಕ್ತವತ್ಸಲನಾದ ಮಹಾದೇವನು ಪ್ರತ್ಯಕ್ಷವಾದ ಈ ಸ್ಥಳವು ಇನ್ನು ಮುಂದೆ ದೇವತೀರ್ಥ ಎಂದು ಪ್ರಸಿದ್ಧವಾಗುವದು. ಇದರಿಂದ ನಿನ್ನ ಇಷ್ಟಾರ್ಥಗಳೆಲ್ಲವೂ ಪೂರ್ಣವಾಗುವವು, ಆ ಚಂದ್ರಾರ್ಕವಾಗಿ ನಿನ್ನ ಕೀರ್ತಿಯು ಚಿರವಾಗಿ ಬೆಳಗುವುದು'' ಎಂದು ಅನುಗ್ರಹಿಸಿದರು. ಆರ್ಷ್ಟಿಷೇಣ ಮಹಾರಾಜನ ಅಶ್ವಮೇಧ ಯಜ್ಞವು ಮುಗಿದ ಬಳಿಕ ದೇವತೆಗಳೆಲ್ಲರೂ ಗೌತಮೀನದಿಯಲ್ಲಿ ಸ್ನಾನಮಾಡಿ ಕೃತಾರ್ಥರಾಗಿ ಸ್ವರ್ಗಕ್ಕೆ ತೆರಳಿದರು.

## ತಪೋವನತೀರ್ಥ

**ಬ್ರಹ್ಮ:-** ಗೌತಮೀ ನದಿಯ ದಕ್ಷಿಣ ತೀರದಲ್ಲಿ ಒಂದು ತಪೋವನ ಇರುತ್ತದೆ ಅಲ್ಲಿ ನಂದಿನೀಸಂಗಮ ಸಿದ್ಧೇಶ್ವರ ಸಂಗಮ ಮತ್ತು ಶಾರ್ದೂಲತೀರ್ಥ ಎಂಬ ತೀರ್ಥಗಳು ಇರುತ್ತವೆ. ಪಾಪಗಳನ್ನು ಲೋಪಗೊಳಿಸಲು ಈ ತೀರ್ಥಗಳ ಮಹಿಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ದೇವತೆಗಳಿಗೆ ಹವಿರ್ಭಾಗಗಳನ್ನು ಒದಗಿಸುವ ಅಗ್ನಿಯು ದಕ್ಷ ಪ್ರಜಾಪತಿಯ ಮಗಳಾದ ಸ್ವಾಹಾದೇವಿಯನ್ನು ಪ್ರೀತಿಯಿಂದ ಮದುವೆಯಾಗಿದ್ದ. ಅವಳಿಗೆ ಬಹಳ ಕಾಲದವರೆಗೆ ಸಂತಾನವಾಗಲಿಲ್ಲ. ಅವಳು ತನ್ನ ಪತಿಯಾದ ಅಗ್ನಿಯನ್ನು ಅದಕ್ಕಾಗಿ ಪ್ರಾರ್ಥಿಸಿಕೊಂಡಳು. ಅದಕ್ಕೆ ಅಗ್ನಿದೇವನು ''ಭಗವಂತನ ದಯದಿಂದ ನಿನಗೆ ಬೇಗನೆ ಒಳ್ಳೆಯ ಸಂತತಿ ಉಂಟಾಗುವುದು'' ಎಂದು ಹೇಳಿದನು. ಕೆಲವು ಕಾಲ ಕಳೆಯಿತು. ತಾರಕಾಸುರ ಎಂಬ ದುಷ್ಟದೈತ್ಯ ಲೋಕಕಂಟಕನಾಗಿ ಬೆಳೆದ. ಇತ್ತ ಪಾರ್ವತೀ-ಪರಮೇಶ್ವರರು ತಮ್ಮ ಏಕಾಂತ ಕ್ರೀಡೆಯಲ್ಲಿ ಸರಸ ವಿಹಾರದಲ್ಲಿ ಇರುತ್ತಿದ್ದರು. ಆಗ ದೇವತೆಗಳು ತಮ್ಮ ಕಾರ್ಯಸಿದ್ಧಿಗಾಗಿ ಅಗ್ನಿಯ ಬಳಿಗೆ ಬಂದು ಬಿನ್ನವಿಸಿದರು ''ವೈಶ್ವಾನರ, ಶಂಕರನ ಬಳಿಗೆ ಹೋಗಿ ನೀನು ಸುರನರರಿಗೆಲ್ಲ ತಾರಕಾಸುರನಿಂದ ಭಯಾಪಾಯವು ಒದಗಿರುವುದನ್ನು ನಿವೇದಿಸು.'' ಅದನ್ನು ಕೇಳಿ ಅಗ್ನಿಯು ''ಸುರಸತ್ತಮರೆ, ದಂಪತಿಗಳು ಏಕಾಂತದಲ್ಲಿ ಇದ್ದಾಗ ಯಾರೂ ಅವರ ಬಳಿಗೆ ಹೋಗಬಾರದು. ಇದು ಸಾಮಾನ್ಯ ನೀತಿ.

ಶಿವ-ಪಾರ್ವತಿ ಯರಂತೂ ದೇವದೇವೋತ್ತಮರು ಅವರು ಕಾಮಕೇಳೀಲೋಲರಾಗಿ ವಿಹಾರ ಸಂಭ್ರಮದಲ್ಲಿ ಇರುವಾಗ, ಮಧ್ಯದಲ್ಲಿ ಹೋಗಿ ಅವರ ಸರಸವಿಹಾರಕ್ಕೆ ವಿಘ್ನ ಒಡ್ಡುವುದು ಘೋರ ಅನ್ಯಾಯ. ಸತಿಪತಿಗಳ ರತಿಕ್ರೀಡೆಗೆ ಆತಂಕವನ್ನು ಉಂಟು ಮಾಡಿದವರು ನರಕದಲ್ಲಿ ಬೀಳುತ್ತಾರೆ'' ಎಂದು ತನ್ನ ಅಸಮರ್ಥತೆಯನ್ನು ಸೂಚಿಸಿದನು.

ಆಗ ಆ ದೇವತೆಗಳು ಆ ಅಗ್ನಿಗೆ ''ವಹ್ನಿದೇವ, ಇದು ಸುರಕಾರ್ಯ. ದೇವಕುಲವೆಲ್ಲವು ಸಂಕಟದಲ್ಲಿ ಸಿಲುಕಿದೆ. ತಾರಕಾಸುರನ ಭಯದಿಂದ ನಮ್ಮೆಲ್ಲರಿಗೂ ತಾರಕನೂ ಭಯಪರಿಹಾರಕನೂ ಆದ ಮಹಾಪುರುಷನೆಂದರೆ ಆ ಪರಮೇಶ್ವರನೊಬ್ಬನೆ. ಆದುದರಿಂದ ನೀನು ಏನೇ ಆದರೂ ಆ ಗಂಗಾಧರನ ಬಳಿಗೆ ಹೋಗಿ ಈ ಸುರಪುರದ ನಾಗರಕರಿಗೆಲ್ಲ ಬಂದ ಸಂಕಟವನ್ನು ನಿವೇದಿಸು'' ಎಂದು ಒತ್ತಾಯಪಡಿಸಿದರು. ಆಗ ಅಗ್ನಿಯು ಆ ಸುರರ ಆಗ್ರಹಕ್ಕೆ ಮಣಿದು ಸತೀಶಂಕರರ ವಿಹಾರ ಮಂದಿರಕ್ಕೆ ಹೋದ. ನಿಜರೂಪದಿಂದ ಹೋಗಲು ಸಂಕೋಚವೆನಿಸಿ ಆ ಅನಿಲದೇವನು ಗಿಳಿಯರೂಪವನ್ನು ಸ್ವೀಕರಿಸಿದ. ಶಿವಸದನದ ಅಂತಃಪುರದೊಳಗೆ ಪ್ರವೇಶಿಸಲು ಅವನಿಗೆ ಶಕ್ತಿಕುಂಠಿತವಾಯಿತು. ಕಿಟಕಿಯ ಬಾಗಿಲಲ್ಲಿಯೇ ತನ್ನ ರೆಕ್ಕೆಯನ್ನು ಕೊಡುಹುತ್ತಾ ಅಧೋಮುಖನಾಗಿ ಕುಳಿತುಕೊಂಡ. ಅದು ಪರಮೇಶ್ವರನ ದೃಷ್ಟಿಗೆ ಗೋಚರವಾಯಿತು. ಅವನ ಮುಖದಲ್ಲಿ ಮಂದಹಾಸ ಮಿನುಗಿತು. ಅವನು ನಸುನಕ್ಕು ನಲ್ಲೆಗೆ ನುಡಿದ.

''ದೇವಿ, ಇತ್ತ ನೋಡು, ಆ ಕಿಟಕಿಯ ಬಾಗಿಲಲ್ಲಿ ಒಂದು ಗಿಳಿ ಪಟಪಟನೆ ರೆಕ್ಕೆಯನ್ನು ಬಡಿಯುತ್ತ ಕುಳಿತುಕೊಂಡಿದೆ. ಅದು ಅಗ್ನಿ ದೇವತೆಗಳ ಆದೇಶದಂತೆ ಗಿಳಿಯ ರೂಪದಿಂದ ಬಂದಿದ್ದಾನೆ.'' ಆಗ ಪಾರ್ವತಿಯು ಗಿಳಿರೂಪದ ಅಗ್ನಿಯ ಕಡೆಗೆ ನೋಡಿದಳು. ಅವಳಿಗೆ ನಾಚಿಕೆ ಎನಿಸಿತು. ಅವಳು ವಿಹಾರ ಕ್ರೀಡೆಯನ್ನು ಅಷ್ಟಕ್ಕೇ ಬಿಟ್ಟು ಎದ್ದು ಹೋದಳು. ಅದರಿಂದ ಆ ತ್ರಿಪುರಾರಿಗೆ ರಸಭಂಗವಾಯಿತು. ಅವನು ಶುಕರೂಪದಿಂದಿದ್ದ ಆ ಅಗ್ನಿಯನ್ನು ಕರೆದು ಹೇಳಿದ- ''ಎಲೈ ಅಗ್ನಿಯೇ, ನಿನ್ನ ನಿಜ ರೂಪ ನನಗೆ ತಿಳಿಯಿತು. ನಮ್ಮ ವಿಹಾರ ಕ್ರೀಡೆಯನ್ನು ನೀನು ಅರ್ಧಕ್ಕೆ ತಡೆದೆ. ಈಗ ನೀನು ನನ್ನ ಬಳಿಗೆ ಬಾ. ಎದುರು ಮಾತನಾಡಬೇಡ. ಮೆಲ್ಲನೆ ಬಾಯಿತೆರೆ. ಈ ನನ್ನ ವೀರ್ಯವನ್ನು ನಿನ್ನ ಮುಖದಿಂದ ಕುಡಿದು ಉದರದಲ್ಲಿ ಧರಿಸು'' ಎಂದು ಹೇಳಿ ಅಗ್ನಿಯ ಮುಖದಲ್ಲಿ ತನ್ನ ವೀರ್ಯವತ್ತರವಾದ ರೇತಸ್ಸನ್ನು ಸಿಂಚನ ಮಾಡಿದ. ಆದರೆ ಅಗ್ನಿಗೆ ಆ ಶಿವ ವೀರ್ಯವನ್ನು ಧರಿಸಲಿಕ್ಕೆ ಆಗಲಿಲ್ಲ. ಅದರ ತಾಪವನ್ನು ತಾಳಲಾರದೆ ದೇವ ನದಿಯಾದ ಗಂಗೆಯ ತೀರಕ್ಕೆ ಬಂದನು. ಅದನ್ನು ಅಲ್ಲಿಗೆ ಬಂದ ಆರು ಜನ ಕೃತ್ತಿಕ ಮಾತೆಯರಿಗೆ ಅರ್ಪಿಸಿದನು. ಆದರಿಂದ ಕಾರ್ತಿಕೇಯನ ಉತ್ಪತ್ತಿಯಾಯಿತು. ಆ ಮಗುವನ್ನು ಆರು ಜನ ಕೃತ್ತಿಕಾ ಮಾತೆಯರು ಪೋಷಣೆ ಮಾಡಿದರು. ಇದರಿಂದ ಆ ಕಾರ್ತಿಕೇಯನಿಗೆ ಷಣ್ಮುಖ ಎಂದು ಹೆಸರಾಯಿತು.

ಅಗ್ನಿಯ ದೇಹದಲ್ಲಿ ಶಿವ ರೇತಸ್ಸಿನ ಕಿಂಚಿತ್ ಅಂಶ ಉಳಿದುಕೊಂಡಿತು. ಅಗ್ನಿಯು ತನ್ನ ಪ್ರಿಯ ಪತ್ನಿಯಾದ ಸ್ವಾಹಾದೇವಿಯೊಂದಿಗೆ ವಿಹಾರ ಮಾಡುವಾಗ ಅವನ ರೇತಸ್ಸಿನೊಂದಿಗೆ ಶಿವನ ವೀರ್ಯವು ಸ್ವಾಹಾ ಪತ್ನಿಯ ಗರ್ಭದಲ್ಲಿ ಪ್ರವೇಶಿಸಿತು. ಈ ವೀರ್ಯ ಸಂಕರದಿಂದ ಆ ಅಗ್ನಿ ಪತ್ನಿಯಲ್ಲಿ ಸುವರ್ಣ ಎಂಬ ಗಂಡು ಮಗನು ಸುವರ್ಣಾ ಎಂಬ ಹೆಣ್ಣು ಮಗಳೂ ಜನಿಸಿದರು. ಆ ಎರಡು ಮಕ್ಕಳು ರೂಪದಿಂದ

ಅಪ್ರತಿಮರಾಗಿದ್ದರು. ಚಲುವಿನ ಖಣಿ ಆಗಿದ್ದರು. ಅಗ್ನಿದೇವನಿಗೆ ಅತ್ಯಂತ ಪ್ರೀತಿಯ ಅಚ್ಚುಮೆಚ್ಚಿನ ಪುತ್ರರಾಗಿದ್ದ ಅಗ್ನಿಯು ಬೆಳೆದುನಿಂತ ತನ್ನ ಆ ಇಬ್ಬರು ಮಕ್ಕಳ ಮದುವೆ ಮಾಡಿದನು. ಸುವರ್ಣೆಯನ್ನು ಯಮಧರ್ಮನಿಗೆ ಕೊಟ್ಟು ವಿವಾಹವನ್ನು ನೆರವೇರಿಸಿದನು. ಮಗನಾದ ಸುವರ್ಣನಿಗೆ ಸಂಕಲ್ಪಾದೇವಿಯೊಂದಿಗೆ ವಿವಾಹ ಮಾಡಿದ. ಅಗ್ನಿಯ ಈ ಇಬ್ಬರು ಮಕ್ಕಳು ರೇತಸ್ಸ ಸಂಗಮದಿಂದ ಜನಿಸಿದ್ದರು. ಆದರಿಂದ ಅವರಿಬ್ಬರಲ್ಲಿಯೂ ವ್ಯಭಿಚಾರದೋಷ ಉಂಟಾಯಿತು. ಸುವರ್ಣನಿಗೆ ಪ್ರಾಯಬಂದಾಗ ಹರೆಯದ ಸಿರಿ ಅಂಗಾಂಗಗಳಲ್ಲಿ ವಿಜೃಂಭಿಸಿತು. ಅವನು ಅತಿಕಾಮಿಯಾದ. ಅನೇಕ ದೇವತೆಗಳ ಮತ್ತು ಅನೇಕ ದೇವತಾ ಸುಂದರಿಯರ ಮತ್ತು ಋಷಿರಮಣಿಯರ ರೂಪಸಂಪದವನ್ನು ನೋಡಿ ತರುಣ ವಯಸ್ಸಿನ ಸುವರ್ಣನಲ್ಲಿ ಅನುರಾಗ ಅರಳಿತು. ಕಾಮ ಕೆರಳಿತು. ಆದರೆ ಆ ದೇವತಾ ಸ್ತ್ರೀಯರು ಮತ್ತು ಋಷಿಪತ್ನಿಯರು ಪರಮ ಪತಿವ್ರತೆಯರು; ತಾನು ಕರೆದರೆ ಎಂದೂ ಬರುವುದಿಲ್ಲ ಎಂದು ಅವನಿಗೆ ಗೊತ್ತು. ಆದಕ್ಕಾಗಿ ಅವನು ಒಂದು ಹಂಚಿಕೆ ಹೂಡಿದ. ತಾನೆ ಆ ದೇವಗಂಧರ್ವರ ಹಾಗೂ ಋಷಿ ಮುನಿಗಳ ರೂಪ ತೆಗೆದುಕೊಂಡು ಅವರವರ ಪತ್ನಿಯರ ಬಳಿಗೆ ಹೋದ. ತಮ್ಮ ತಮ್ಮ ಪತಿಯೆಂದು ಭಾವಿಸಿ ಅವರೆಲ್ಲರು ಇವನೊಡನೆ ಕಾಮ ಕೇಳಿ ವಿಲಾಸಕ್ಕೆ ಇಳಿದರು. ಹೀಗೆ ಅನೇಕ ಸುರಸುಂದರಿಯರೊಂದಿಗೂ ಮುನಿಪತ್ನಿಯರೊಂದಿಗೂ ಅವನು ಲೀಲಾವಿಹಾರಗೈದ.

ಇದರಂತೆ ಅಗ್ನಿ ಸ್ವಾಹಾ ದಂಪತಿಗಳ ಮಗಳಾದ ಸುವರ್ಣಾದೇವಿಯೂ ಕೂಡ. ರೇತಸ್ಸಿನ ಸಂಕರದಿಂದಲೇ ಜನಿಸಿದ್ದರಿಂದ ಅವಳು ಕೂಡ ಸ್ವೈರಿಣೀ ಆದಳು. ಸುರಾಸುರ ಗಂಧರ್ವ ಪಿತೃದೇವತೆಗಳಲ್ಲಿ ತನಗೆ ಮನಬಂದ ಸುಂದರ ಪುರುಷರೊಡನೆ ಅವರವರ ಹೆಂಡಂದಿರ ರೂಪವನ್ನು ತೆಗೆದುಕೊಂಡು ವಿಹಾರ ಕ್ರೀಡೆಗಳನ್ನು ಸ್ವಚ್ಛಂದದಿಂದ ಆಡಿ ಆನಂದವನ್ನು ಅನುಭವಿಸುತ್ತಿದ್ದಳು. ಅಗ್ನಿ ಪುತ್ರ ಪುತ್ರಿಯರ ಈ ಸ್ವೈರಾಚಾರ ಹಾಗೂ ಸ್ವಚ್ಛಂದ ವಿಹಾರಗಳನ್ನು ಕಂಡು ದೇವತೆಗಳಿಗೆ ಕೋಪ ಬಂದಿತು. ಆಗ ಅವರು ಕೋಪದಿಂದ ಅವರಿಬ್ಬರಿಗೂ ಶಾಪಕೊಟ್ಟರು "ನೀವು ನರನಾರಿಯರೆಲ್ಲರನ್ನು ಮೋಸಗೊಳಿಸಿ ಪಾಪಕರವಾದ ವ್ಯಭಿಚಾರವನ್ನು ಮಾಡುತ್ತಿರುವಿರಿ. ಆದರಿಂದ ನಿಮಗೆ ಹೀನಕುಲದವರಿಂದ ನಿಂದಿತವಾದ ಸಂಗ ಸಹವಾಸಗಳು ಉಂಟಾಗಲಿ." ಹೀಗೆ ಕುಪಿತರಾದ ದೇವತೆಗಳಿಂದ ಮಕ್ಕಳಿಬ್ಬರು ಶಪಿತರಾದದ್ದನ್ನು ಕಂಡು ಚಿಂತಾಕ್ರಾಂತನಾದ ಆ ಅಗ್ನಿದೇವ. ಅವನು ಪರಮೇಶ್ವರನಿಗೆ ಶರಣುಹೋದ. ತನ್ನ ಮಕ್ಕಳ ದುರವಸ್ಥೆಯನ್ನು ಬಣ್ಣಿಸಿ ಅವರನ್ನು ಶಾಪ ವಿಮುಕ್ತರಾಗಬೇಕೆಂದು ಬಿನ್ನವಿಸಿಕೊಂಡ ಹಾಗೂ ಪರಮೇಶ್ವರನನ್ನು ಭಕ್ತಿಪೂರ್ವಕವಾಗಿ ಪ್ರಾರ್ಥನೆ ಮಾಡಿದ. ಅಗ್ನಿಯ ಪ್ರಾರ್ಥನೆಯಿಂದ ಪ್ರೀತನಾದ ಪರಮೇಶ್ವರನು ಅಗ್ನಿಯ ಸಂತಾನಕ್ಕೆ ಅಭಯವನ್ನು ನೀಡಿ ವರವನ್ನು ಇತ್ತು ಅನುಗ್ರಹಿಸಿದ. ಮತ್ತು ನಲಮೆದುಂಬಿ ಹೇಳಿದ-

"ಅಗ್ನಿದೇವ, ನನ್ನ ವೀರ್ಯದಿಂದ ನಿನ್ನ ಮಗ ಸುವರ್ಣನು ಜನಿಸಿದ್ದಾನೆ. ಇವನು ಇನ್ನು ಮೇಲೆ ಸುವರ್ಣಎಂಬ (ಬಂಗಾರ) ಧಾತು ರೂಪದಿಂದ ಜಗತ್ತಿನಲ್ಲಿ ಮಾನ್ಯನಾಗಲಿ. ಇನ್ನು ಮೇಲೆ ಇವನು ತನ್ನ ಅವ್ಯಾಪಾರ ದುರ್ವ್ಯಾಪಾರವನ್ನು ನಿಲ್ಲಿಸಲಿ. ನಿನ್ನಲ್ಲಿ ನನ್ನ ವೀರ್ಯದಿಂದ ಉತ್ಪನ್ನವಾದ ಈ ಸುವರ್ಣವು ಇನ್ನು ಮೇಲೆ ಐಶ್ವರ್ಯ ಸ್ಥಾನದಲ್ಲಿ ಮೆರೆಯಲಿ. ದೇವತೆಗಳಿಗೆ ಪ್ರಿಯವಾಗಲಿ. ಯಜ್ಞಯಾಗಗಳಿಗೂ ದಾನಧರ್ಮಗಳಿಗೂ

ಮುಖ್ಯ ದಕ್ಷಿಣಾರೂಪದಿಂದ ಎಲ್ಲ ಪುಣ್ಯ ಕಾರ್ಯಗಳಿಗೂ ಉಪಾದೇಯವಾಗಲಿ. ಪ್ರಾಣದೇಹದಲ್ಲಿ ವೀರ್ಯವು ಅತಿ ಶ್ರೇಷ್ಠವಾದುದು. ಅದರಲ್ಲಿಯೂ ನನ್ನ ವೀರ್ಯವನ್ನು ಕೇಳಬೇಕೆ? ಮೇಲಾಗಿ ಆ ವೀರ್ಯವು ನಿನ್ನಲ್ಲಿ ರೂಪಗೊಂಡಿರುವುದು. ಇಂತಹ ಸುವರ್ಣನ ಶ್ರೇಷ್ಠ್ಯವನ್ನು ವರ್ಣಿಸುವದೇನು? ಇವನಿಂದ ಸಕಲೈಶ್ವರ್ಯವೂ ಉಂಟಾಗುವುದು. ಸುವರ್ಣವಿಲ್ಲದವನು ಬದುಕಿದ್ದರೂ ಸತ್ತಂತೆಯೇ ಸುವರ್ಣವುಳ್ಳ ಧನಿಕನು ಗುಣಹೀನ ನಾಗಿದ್ದರೂ ಗೌರವಾರ್ಹನಾಗುವನು. ಧನವಿಲ್ಲದವನು ಎಂತಹ ಸುಗುಣಿಯಾದರೂ ಮಾನ್ಯನಾಗುವುದಿಲ್ಲ, ಗೌರವಸ್ಥನಾಗುವುದಿಲ್ಲ. ಆದುದರಿಂದ ಈ ಸುವರ್ಣನಿಗಿಂತಲೂ ಶ್ರೇಷ್ಠ ವಸ್ತುವು ಯಾವುದೂ ಇಲ್ಲ. ಅದರಂತೆ ಈ ಸುವರ್ಣದೇವಿಯೂ ಶ್ರೇಷ್ಠಳು. ಆದರೂ ಇವಳು ಚಂಚಲೆಯಾಗುವಳು. ಇವಳು ನೋಡಿದರೆ ಶೂನ್ಯವಸ್ತುವು ಪರಿಪೂರ್ಣ ವಾಗುವದು. ಇವಳು ಸರ್ವತ್ರ ಸಂಚರಿಸುವ ಸಾಕ್ಷಾತ್ ಲಕ್ಷ್ಮೀಸ್ವರೂಪಿಣಿಯೇ ಆಗುವಳು. ಇವಳನ್ನು ಜ್ಞಾನಿಗಳು ಮತ್ತು ವಿವೇಕಿಗಳು ಸದುಪಯೋಗ ಪಡಿಸುವದರಿಂದ ಇವಳ ಶಾಪ ವಿಮುಕ್ತಿಯಾಗಿ ಪರಮ ಪವಿತ್ರೆಯಾಗಿ ಹರಿಪ್ರಿಯೆ ಎನಿಸುವಳು.''

ಹೀಗೆ ಆ ಗಿರಿಜಾಪತಿಯು ಅಗ್ನಿಯ ಮಕ್ಕಳಿಗೆ ವರಪ್ರದಾನವನ್ನು ಮಾಡಿ ಲೋಕ ಕ್ಷೇಮಕ್ಕಾಗಿ ಅಲ್ಲಿ ಲಿಂಗರೂಪದಿಂದ ನೆಲಸಿದ. ಆ ಮಹಾದೇವನಿಂದ ವರಗಳನ್ನು ಪಡೆದು ಅಗ್ನಿಯು ತನ್ನ ಮಡದಿ ಮಕ್ಕಳೊಂದಿಗೆ ಸಂತೋಷದಿಂದ ಇದ್ದ. ಲಕ್ಷ್ಮಿಯ ಸಂಪೂರ್ಣ ಅನುಗ್ರಹಕ್ಕೆ ಪಾತ್ರಳಾದ ಸುವರ್ಣಾದೇವಿಯು ಆ ಮಹಾತಾಯಿಯ ಆದೇಶದಿಂದ ಒಡಗೂಡಿ ಸುರ, ನರ, ದೈತ್ಯ, ದಾನವ, ಯಕ್ಷಗಂಧರ್ವರೆಲ್ಲರ ಪುಣ್ಯಕಾರ್ಯಗಳಲ್ಲಿ ಉಪಯುಕ್ತಳಾಗಿ ಒಂದು ರೂಪದಿಂದ ಯಮಧರ್ಮನ ಮಡದಿಯಾದ ಸುವರ್ಣಾದೇವಿಯಾಗಿ ಸಂತಸದಿಂದ ಅವನೊಡನೆ ಬಾಳುವೆ ಮಾಡುತ್ತಿದ್ದಳು. ಸುವರ್ಣನು ತನ್ನ ಕಾಮಕೇಲೀಕಲಾಪಗಳನ್ನೆಲ್ಲ ಬಿಟ್ಟು ಮಹೇಶ್ವರನ ಅಪ್ಪಣೆ ಮತ್ತು ತನ್ನ ತಂದೆ ಅಗ್ನಿಯ ಆದೇಶದಂತೆ ಯೋಗ್ಯಾಯೋಗ್ಯ ಕಾರ್ಯಗಳಲ್ಲಿ ಉಪಯುಕ್ತನಾಗಿ ಅದಕ್ಕೆ ತಕ್ಕ ಫಲಾಫಲಗಳಿಗೆ ಕಾರಣನಾಗುತ್ತಿದ್ದನು.

ಈ ಮಧ್ಯದಲ್ಲಿ ಶಾರ್ದೂಲ ಎಂಬ ದುಷ್ಟ ರಾಕ್ಷಸ ಯಮನನ್ನು ಮೋಸಗೊಳಿಸಿದ. ಅವನ ಪತ್ನಿಯಾದ ಸುವರ್ಣಾದೇವಿಯನ್ನು ತನ್ನ ಅರಮನೆಗೆ ಸೆಳೆದೊಯ್ದ. ಆಗ ಅಗ್ನಿದೇವನೂ ಅವನ ಅಳಿಯನಾದ ಯಮಧರ್ಮನೂ ಶ್ರೀಹರಿಯಲ್ಲಿ ಮೊರೆ ಇಟ್ಟರು. ಆಗ ಶ್ರೀವಿಷ್ಣುವು ನೇರ ಪಾತಾಳಲೋಕಕ್ಕೆ ತೆರಳಿದ. ಶಾರ್ದೂಲಾಸುರನೊಡನೆ ಸೆಣಸಿದ. ಅರೆನಿಮಿಷದಲ್ಲಿ ತನ್ನ ಸುದರ್ಶನ ಚಕ್ರದಿಂದ ಆ ದೈತ್ಯಾಧಮನ ತಲೆಯನ್ನು ಕತ್ತರಿಸಿದ. ಶಂಕರ ಮತ್ತು ಅಗ್ನಿದೇವರ ಸಂಯುಕ್ತ ಪುತ್ರಿಯಾದ ಸುವರ್ಣಾದೇವಿಯನ್ನು ಸುರಕ್ಷಿತವಾಗಿ ಮರಳಿ ಕರೆತಂದ. ಪಾರ್ವತಿ ಪತಿಗೆ ಅವಳನ್ನು ತಂದು ಒಪ್ಪಿಸಿದ. ಮಹೇಶನು ಆತನ ಮಗಳನ್ನು ವಾತ್ಸಲ್ಯದಿಂದ ಬಿಗಿದಪ್ಪಿ ಸಂತಸಗೊಂಡ.

ಶ್ರೀಹರಿಯು ಶಾರ್ದೂಲಾಸುರನ ಶಿರವನ್ನು ತರಿದು ನೆತ್ತರ ಮೆತ್ತಿದ ತನ್ನ ಸುದರ್ಶನ ಚಕ್ರವನ್ನು ಗೌತಮೀ ನದಿಯ ನೀರಿನಲ್ಲಿ ತೊಳೆದ. ಆ ಸ್ಥಳಕ್ಕೆ ಶಾರ್ದೂಲ ತೀರ್ಥವೆಂದೂ ಚಕ್ರತೀರ್ಥವೆಂದೂ ಕರೆಯುತ್ತಾರೆ.

ಅಗ್ನಿ ಮತ್ತು ಯಮದೇವರಿಗೆ ಶಾರ್ದೂಲಾಸುರನಿಂದ ಪಾರಾಗಿಬಂದ ಸುವರ್ಣಾ ದೇವಿಯನ್ನು ಕಂಡು ಆನಂದಬಾಷ್ಪ ಉದುರಿದವು. ಆ ಆನಂದಜಲದಿಂದ ಆನಂದಾ ನಂದಿನೀ

ಎಂಬ ಎರಡು ನದಿಗಳು ಹುಟ್ಟಿ ಗೌತಮೀ ನದಿಯೊಂದಿಗೆ ಸಂಗಮಿಸಿದವು ಅಗ್ನಿಯು ತಪಸ್ಸುಮಾಡಿದ ಸ್ಥಳವು ತಪೋವನವೆಂದು ಪ್ರಸಿದ್ಧವಾಯಿತು. ತಪೋವನ ಮತ್ತು ಶಾರ್ದೂಲ ತೀರ್ಥಗಳ ಮಧ್ಯದಲ್ಲಿ ಸಾವಿರಾರು ತೀರ್ಥಗಳು ಇರುವವು. ಈ ತೀರ್ಥಗಳ ಮಹಾತ್ಮೆಯನ್ನು ತಿಳಿದು ಪಠಿಸಿ, ಸ್ಮರಿಸಿ, ಸ್ನಾನದಾನಾದಿಗಳನ್ನು ಮಾಡುವವರ ಇಷ್ಟಾರ್ಥಗಳ ಸಿದ್ಧಿಯಾಗುವದು, ಕೊನೆಗೆ ಅವರೆಲ್ಲರೂ ವಿಷ್ಣುಲೋಕದಲ್ಲಿ ವಿಹರಿಸುವರು.

## ಇಂದ್ರೇಶ್ವರ ತೀರ್ಥ

**ಬ್ರಹ್ಮದೇವ:-** ಗೌತಮೀನದಿಯ ದಕ್ಷಿಣ ತೀರದಲ್ಲಿ ಇಂದ್ರೇಶ್ವರ ಎಂಬ ಹೆಸರಿನ ತೀರ್ಥವಿರುತ್ತದೆ. ಅದರ ಮಹಿಮೆಯನ್ನು ಹೇಳುತ್ತೇನೆ ಕೇಳು.

ಹಿಂದೆ ನಮುಚಿ ಎಂಬ ಮಹಾ ಪರಾಕ್ರಮಿಯಾದ ಒಬ್ಬ ದೈತ್ಯ ಇದ್ದನು. ಅವನಿಗೂ ಇಂದ್ರನಿಗೂ ಘನಘೋರ ಯುದ್ಧವಾಯಿತು. 'ಯಾವ ಶಸ್ತ್ರಾಸ್ತ್ರಗಳಿಂದಲೂ ಸಾಯದಾರದು' ಎಂದು ಅವನಿಗೆ ವರ ಇದ್ದಿತು. ಅದನ್ನು ತಿಳಿದ ದೇವೇಂದ್ರ ನೀರಿನ ಬುರುಗಿನಿಂದ ಹೊಡೆದು 'ನಮೂಚಿ'ಯ ತಲೆಯನ್ನು ಕತ್ತರಿಸಿದ. ಆ ನೀರಿನ ನೊರೆ ಗೌತಮೀ ನದಿಯ ದಕ್ಷಿಣ ತೀರದಲ್ಲಿ ಬಿದ್ದು ಅಲ್ಲಿಯ ಭೂಮಿಯನ್ನು ಭೇದಿಸಿ ಪಾತಾಳಕ್ಕೆ ಪ್ರವೇಶಿಸಿತು. ಆ ಭಿನ್ನವಾದ ಮಾರ್ಗದಿಂದ ಪಾತಾಳಲೋಕದಲ್ಲಿ ಇದ್ದ ಪವಿತ್ರವಾದ ಗಂಗೆಯ ನೀರು 'ಫೇನಾನದಿ' ಎಂಬ ಹೆಸರಿನಿಂದ ಹರಿಯಿತು. ಹಾಗು ಅದು ಗೌತಮೀ ನದಿಯನ್ನು ಕೂಡಿಕೊಂಡಿತು. ಈ 'ಫೇನಾಗೌತಮಿ' ಸಂಗಮವು 'ಗಂಗಾ ಯಮುನಾ' ಸಂಗಮದಂತೆ ಪರಮ ಪವಿತ್ರ ಹಾಗು ಪಾಪಹಾರಕ.

ಹನುಮಂತನಿಗೆ ಒಬ್ಬ ಮಲತಾಯಿಯಿದ್ದಳು. ಯಾವುದೋ ದೈವೀಶಾಪದಿಂದ ಅವಳಿಗೆ ಬೆಕ್ಕಿನ ಜನ್ಮ ಬಂದಿತ್ತು. ಇಲ್ಲಿ ಬಂದು ಸ್ನಾನಮಾಡಿದ್ದರಿಂದ ಆ ಮಾರ್ಜಾಲ ಶಾಪದಿಂದ ಅವಳಿಗೆ ಮುಕ್ತಿ ದೊರೆಯಿತು. ಅದಕ್ಕಾಗಿ ಆ ತೀರ್ಥಕ್ಕೆ ''ಮಾರ್ಜಾರತೀರ್ಥ'' ಎಂತಲೂ ''ಹನುಮಂತ್ತೀರ್ಥ''ವೆಂತಲೂ ಕರೆಯುವರು. ಇನ್ನು 'ವೃಕ್ಷಾಕಪಿ'' ತೀರ್ಥ ಮತ್ತು ಅಬ್ಜಕ ತೀರ್ಥಗಳ ಮಹಾತ್ಮೆಯನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಒಬ್ಬ ದೈತ್ಯನಿದ್ದನು. ಅವನ ಹೆಸರು ಹಿರಣ್ಯ ಅವನು ಮಹಾಬಲಿಷ್ಠ. ಅವನು ತಪಸ್ಸು ಮಾಡಿ ವರ ಪಡೆದಿದ್ದ. ಅದರಿಂದ ಅವನು ದೇವತೆಗಳಿಗೇ ಅಜೇಯನಾಗಿದ್ದ.

ಆ ಹಿರಣ್ಯ ದೈತ್ಯನಿಗೆ 'ಮಹಾಶನಿ' ಎಂಬ ಒಬ್ಬ ಮಗನು ಇದ್ದ. ತಂದೆಯಂತೆ ಮಗ, ಅಷ್ಟೇ ಪರಾಕ್ರಮಿ. ಅವನ ಹೆಂಡತಿ 'ಪರಾಜಿತ'. ಈ ಮಹಾಶನಿಗೂ ದೇವೇಂದ್ರನಿಗೂ ಭೀಕರವಾದ ಕದನ ಏರ್ಪಟ್ಟಿತು. 'ಮಹಾಶನಿ'ಯ ಅತ್ಯಂತ ಶೌರ್ಯ ಪರಾಕ್ರಮದಿಂದ ದೇವೇಂದ್ರನು ಪರಾಜಿತನಾದ. ಸೋತ ಆ ಸುರರಾಜನನ್ನು ಅವನ ವಾಹನವಾದ ಐರಾವತದೊಡನೆ ಬಂಧಿಸಿ ತನ್ನ ತಂದೆಯ ಬಳಿಗೆ ಕಳುಹಿಸಿಕೊಟ್ಟ. ಆ ಹಿರಣ್ಯ ದೇವೇಂದ್ರನನ್ನು ತನ್ನ ಅರಮನೆಯಲ್ಲಿ ಇಟ್ಟು ರಕ್ಷಿಸುತ್ತಿದ್ದ. ಪ್ರಬಲ ಪರಾಕ್ರಮಿಯಾದ ಮಹಾಶನಿಯು ದೇವಲೋಕದ ಮೇಲೆ ದಿಗ್ವಿಜಯವನ್ನು ಮಾಡಿ ಸುರಪತಿಯನ್ನು ಸೆರೆಹಿಡಿದ. ಬಳಿಕ ವರುಣನ ಮೇಲೆ ದಂಡಯಾತ್ರೆಗೆ ಹೊರಟ. ಮಹಾ ಬುದ್ಧಿವಂತ ಆ ವರುಣ. ಅಷ್ಟೇ ಯುಕ್ತಿಯಲ್ಲಿಯೂ ಚತುರ. ಉಕ್ತಿಯಲ್ಲಿಯೂ ಮಧುರ. ಅವನು ತನ್ನ ಮೇಲೆ ದಾಳಿಮಾಡಲು ಬಂದ ಮಹಾಶನಿಯೊಂದಿಗೆ ಮಧುರವಾದ ಮಾತನ್ನು ಆಡಿ

ಅವನನ್ನು ಒಲಿಸಿದ. ಅವನಿಗೆ ತನ್ನ ಮಗಳನ್ನೆ ಮದುವೆಮಾಡಿಕೊಟ್ಟ. ಮತ್ತು ತನ್ನ ವಾಸಸ್ಥಾನವಾದ ಸಮುದ್ರವನ್ನೇ ತನ್ನ ಅಳಿಯನಿಗೆ ನೆಲೆಊರಿ ನಿಲ್ಲಲು ಸ್ಥಾನವನ್ನು ಕೊಟ್ಟ. ಅವರಿಬ್ಬರ ನಡುವೆ ಗಾಢ ಮೈತ್ರಿಯುಂಟಾಯಿತು. ವರುಣನ ಮಗಳಾದ 'ವಾರುಣೀದೇವಿ'ಯು 'ಮಹಾಶನಿಗೆ' ಪ್ರಿಯ ಪತ್ನಿಯಾದಳು. ಶೌರ್ಯವೀರ್ಯ, ಧೈರ್ಯಗಳಲ್ಲಿ ಆ ಕಾಲದಲ್ಲಿ 'ಮಹಾಶನಿ'ಗೆ ಸರಿ ಸಮಾನರಾದವರು ಯಾರೂ ಇರಲಿಲ್ಲ.

ಸ್ವರ್ಗಲೋಕವನ್ನು 'ಮಹಾಶನಿ'ಯು ಆಕ್ರಮಿಸಿದ ಬಳಿಕ ದೇವತೆಗಳೆಲ್ಲರೂ ಅನಾಥರಾದರು. ಅವರೆಲ್ಲರೂ ಶ್ರೀಹರಿಯ ಬಳಿ ಹೋಗಿ ದೇವಲೋಕದ ದುರ್ದಶೆಯನ್ನೂ ದೇವೇಂದ್ರನ ದುರವಸ್ಥೆಯನ್ನು ತಿಳಿಸಿದರು. ಇಂದ್ರನು ಹಿರಣ್ಯನ ಬಂದೀಖಾನೆಯಿಂದ ಮರಳಿ ನಾಕಲೋಕಕ್ಕೆ ಬರುವಂತೆ ಮಾಡಲು ವಿಜ್ಞಾಪಿಸಿ ಕೊಂಡರು. ಆಗ ಮಹಾವಿಷ್ಣು ವರುಣನ ಬಳಿಗೆ ಹೋಗಿ ದೇವೇಂದ್ರನನ್ನು ಬಂಧಮುಕ್ತನನ್ನಾಗಿ ಮಾಡಲು ಆದೇಶಿಸಿದನು. ಸ್ವತಃ ಶ್ರೀಹರಿಯೇ ಬಂದು ಹೇಳಿದ್ದರಿಂದ ವರುಣನು ತನ್ನ ಅಳಿಯ 'ಮಹಾಶನಿ'ಯನ್ನು ಕರೆದು ಐರಾವತದೊಡನೆ ಇಂದ್ರನನ್ನು ಬಿಟ್ಟು ಕೊಡಲು ಹೇಳಿದನು. ಮಹಾಶನಿಗೆ ಮಾವನ ಮೇಲೆ ಪ್ರೀತಿ. ಇಂದ್ರನ ಮೇಲೆ ದ್ವೇಷ. ಇಂದ್ರನನ್ನು ಬಿಟ್ಟುಕೊಡಲು ಇಷ್ಟವಿಲ್ಲ. ಮಾವನನ್ನು ಎದುರು ಹಾಕಿಕೊಳ್ಳಲು ದಾಕ್ಷಿಣ್ಯ. ಅಂತೂ ಕೊನೆಗೆ ನಿರ್ವಾಹವಿಲ್ಲದೆ ಮಾವನ ಮಾತಿಗೆ ಕಟ್ಟು ಬಿದ್ದು ಇಂದ್ರನನ್ನು ಬಿಟ್ಟು ಕೊಟ್ಟ.

ಆದರೆ ಮರ್ಮಾಂತಿಕವಾದ ಕಠೋರ ಬಿರುನುಡಿಗಳಿಂದ ಇಂದ್ರನನ್ನು ಹೀಗಳಿದ ನಿರ್ಭರ್ತ್ಸನೆಗೈದು "ನಾಚಿಕೆಯಿಲ್ಲದವ"ನೆಂದು ನಿಂದಿಸಿದ. "ದೇವೇಂದ್ರ, ನೀನು ಮಹಾ ಪರಾಕ್ರಮಶಾಲಿಯಲ್ಲವೆ! ಅಸುರನೊಡನೆ ಕಾದಾಡಿ ಸೆರೆ ಸಿಕ್ಕ ನಿನ್ನನ್ನು ಯಾರು ಸುರ ಸಮ್ರಾಟನೆಂದು ಹೇಳುವರು! ಬಂಧನಕ್ಕೆ ಸಿಕ್ಕದ ಸ್ತ್ರೀಯನ್ನು ಪುರುಷರು ಬಿಡುವದು ನ್ಯಾಯ. ಎಷ್ಟೆಂದರೂ ಹೆಣ್ಣು ಅಬಲೆ ತಾನೆ! ಆದರೆ ನೀನು ಗಂಡಸು. ಮೇಲೆ ಸ್ವರ್ಗ ಸಮ್ರಾಟ. ಈಗ ನೀನು ನಮ್ಮ ಮಾವನ ವಶೀಲಿ ಹಚ್ಚಿ ನನ್ನಿಂದ ಬಿಡುಗಡೆ ಹೊಂದುತ್ತಿರುವೆ. ನಿನಗೆ ನಾಚಿಕೆ ಎನಿಸುತ್ತಿಲ್ಲವೇ! ನಿನ್ನೊಡನೆ ಹೋರಾಡುವಾಗ ಆ ವಜ್ರಾಯುಧ ಎಲ್ಲಿ ಹೋಗಿತ್ತು? ಈಗ ವರುಣನಿಂದ ಬಿಡುಗಡೆ ಹೊಂದಿ ಅಮರಾವತಿಗೆ ಹೋಗಿ ಅಲ್ಲಿಯ ದೇವ ಗಂಧರ್ವರಿಗೆ ಮೋರೆ ತೋರಿಸಲು ನಿನಗೆ ಲಜ್ಜೆ ಎನಿಸುವದಿಲ್ಲವೇ! ವೈರಿಯಿಂದ ಸೋತು ಸೋಲಿನ ಸರ ಮಾಲೆಗಳನ್ನು ಕೊರಳಲ್ಲಿ ಹಾಕಿಕೊಂಡು ಸುರಸುಂದರಿಯರೊಂದಿಗೆ ಸ್ವಚ್ಛಂದ ವಿಹಾರ ಮಾಡಲಿಕ್ಕೆ ನಿನಗೆ ಸಂಕೋಚವಾದರೂ ಹೇಗೆ ಆಗುವದಿಲ್ಲ! ನಿನ್ನಂಥ ನಿರ್ಲಜ್ಜನನ್ನು ನಿರ್ಮಾಣ ಮಾಡಿದ ಬ್ರಹ್ಮದೇವನಾದರೂ ವ್ಯಥೆಪಟ್ಟುಕೊಳ್ಳಬಹುದು. ನನ್ನ ಮಾವನಾದರು ಇವನಿಗೆ ನೀನು ಶರಣು ಬಂದಿರುವದರಿಂದ ಅವನ ಮಾತಿನಂತೆ ನಿನ್ನನ್ನು ಬಿಟ್ಟುಕೊಟ್ಟಿದ್ದೇನೆ. ನಿನ್ನನ್ನು ಬಿಡಿಸಿದ ಅವನು ಇಂದಿನಿಂದ ನಿನ್ನ ಗುರು. ನೀನು ಅವನ ಶಿಷ್ಯ, ಭೃತ್ಯ, ಕಿಂಕರ, ನೀನು ಇನ್ನು ಮುಂದೆ ಕೊನೆಯವರೆಗೂ ವರುಣನ ಚರಣ ಪರಿಚಾರಕನಾಗೇಯ ನಡೆಯಬೇಕು. ಇಲ್ಲದಿದ್ದರೆ ಮತ್ತೆ ನಿನ್ನನ್ನು ಬಂಧಿಸಿ ಪಾತಾಳದ ಬಂಧೀಖಾನಿಯಲ್ಲಿ ಕೊಳೆ ಹಾಕುವೆನು' ಎಂದು ಹೇಳಿ ಇಂದ್ರನನ್ನು ಅಪಮಾನಗೊಳಿಸಿ, ಸ್ವರ್ಗಕ್ಕೆ ಕಳುಹಿಸಿಕೊಟ್ಟನು.

ಇದರಿಂದ ಆ ಶಚೀಪತಿಗೆ ಮುಖಭಂಗವಾಗಿ ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಅವನು ಅಮರಾವತಿಗೆ ತೆರಳಿದನು. ಅವನ ರಾಣಿಯಾದ ಶಚೀದೇವಿಗೆ ತನ್ನ ಪತಿಗೆ ಆದ

ಅವಮಾನದಿಂದ ಬಹಳ ದುಃಖವಾಯಿತು. ಅತಿಶಯ ಬುದ್ಧಿವಂತಳಾಗಿದ್ದಳು ಆ ಇಂದ್ರಾಣಿ. ಹೇಗಾದರೂ ಮಾಡಿ ದೈತ್ಯ ಸಭೆಯಲ್ಲಿಯೇ ತನ್ನ ಪತಿಯನ್ನು ತುಚ್ಛಮಾಡಿ ಕುಚ್ಛಿತ ದೃಷ್ಟಿಯಿಂದ ನಿರ್ಭತ್ಸನೆ ಗೈದ ಆ ದುಷ್ಟ ದೈತ್ಯನನ್ನು ವಧಿಸುವ ಉಪಾಯವನ್ನು ಯೋಚಿಸಿ ತನ್ನ ಪತಿಯಾದ ದೇವೇಂದ್ರನಿಗೆ ಸೂಚಿಸಿದಳು. "ಪ್ರಿಯಕರ, ನಿನಗಾದ ಈ ಘೋರ ಅಪಮಾನದಿಂದ ನಿನ್ನನ್ನು ಪಾರುಮಾಡುವ ಉಪಾಯವನ್ನು ಆ ಪರಮೇಶ್ವರನು ಮಾತ್ರ ಅರುಹಬಲ್ಲ. ಆದ್ದರಿಂದ ನೀನು ಗೌತಮೀ ತೀರಕ್ಕೆ ಹೋಗಿ ಆ ಶಂಕರನನ್ನು ಆರಾಧಿಸು. ಈ ವಿಷಯದಲ್ಲಿ ಅವನೇ ದಾರಿತೋರಲು ಸಮರ್ಥ. ಶಚೀದೇವಿಯ ಸೂಚನೆಯಂತೆ ಸುರಪತಿಯು ಗೌತಮೀ ತೀರಕ್ಕೆ ಬಂದು ಪರಮೇಶ್ವರನನ್ನು ಪ್ರಾರ್ಥಿಸಿದ. ಅವನ ಪ್ರಾರ್ಥನೆಯಿಂದ ಪ್ರೀತಪ್ರಸನ್ನನಾದ ಪರಮೇಶ್ವರನು ಇಂದ್ರನಿಗೆ ಹೇಳಿದ. "ಸುರನಾಥ, ನೀನು ನಿನ್ನ ಮಡದಿಯೊಡನೆ ಈ ಗೌತಮೀ ಫೇನಾ ಸಂಗಮದ ತೀರದಲ್ಲಿ ನಿಂತು ಶ್ರೀಹರಿಯನ್ನು ಕುರಿತು ತಪಸ್ಸು ಮಾಡು. ಗಂಗಾನದಿಯ ದಕ್ಷಿಣತೀರದಲ್ಲಿ ಆಪಸ್ತಂಬ ಎಂಬ ನನ್ನ ಭಕ್ತಾಗ್ರೇಸರನಾದ ಮಹರ್ಷಿ ಇರುವನು. ಅವನು ನೀವು ದಂಪತಿಗಳು ಆ ನಾರಾಯಣನನ್ನು ಕುರಿತು ತಪಸ್ಸು ಮಾಡುವಲ್ಲಿ ಸಂಪೂರ್ಣ ಸಹಕರಿಸುವನು." ಪರಮೇಶ್ವರನ ಈ ಪ್ರೇರಣಾ ಸಂದೇಶದಂತೆ ದೇವೇಂದ್ರನು ಶಚೀದೇವಿಯೊಡನೆ ಆಪಸ್ತಂಭ ಮುನಿಯ ಬಳಿಗೆ ಹೋಗಿ ಅವನನ್ನು ಕರೆದುಕೊಂಡು ಫೇನಾ, ಗಂಗಾನದಿಗಳ ಸ್ನಾನಮಾಡಿ. ಭಕ್ತಿಪೂರ್ವಕವಾಗಿ ಆ ಶ್ರೀಹರಿಯನ್ನು ಸ್ತೋತ್ರಮಾಡಿದನು. ಶ್ರದ್ಧಾಭಕ್ತಿ ಸಮನ್ವಿತವಾದ ಅವನ ಸ್ತೋತ್ರಗಾನದಿಂದ ನಾರಾಯಣನು ಪ್ರಸನ್ನನಾಗಿ ಪ್ರತ್ಯಕ್ಷದರುಶನ ನೀಡಿದನು. "ಬೇಕಾದ ವರವನ್ನು ಕೇಳು" ಎಂದು ಹೇಳಿದನು.

ಆಗ ಆ ಶಚೀನಾಥನು "ತನ್ನ ವೈರಿಯಾದ ಮಹಾಶನಿಯನ್ನು ಸಂಹರಿಸಲು ಸಮರ್ಥನಾದ ಒಬ್ಬ ವೀರ ಪುರುಷನನ್ನು ಅನುಗ್ರಹಿಸು ಎಂದು ಕೇಳಿಕೊಂಡನು. 'ತಥಾಸ್ತು' ಎಂದು ಹೇಳಿದ ಆ ಲಕ್ಷ್ಮೀಪತಿ. ಶ್ರೀಹರಿಯ ವರದ ಮಹಿಮೆಯಿಂದ ಮತ್ತು ಗಂಗೆ ಗಂಗಾಧರರ ಅನುಗ್ರಹದಿಂದ ಆ ಗೌತಮೀ ಜಲದ ಮಧ್ಯದಿಂದಲೇ ಓರ್ವ ವೀರಪುರುಷನು ಜನಿಸಿದನು. ಶಿವ ಮತ್ತು ಕೇಶವ ಇಬ್ಬರ ವಿಶೇಷ ಅಂಶದಿಂದ ಜನಿಸಿದನು. ಆ ವೀರ ಪುರುಷನಲ್ಲಿ ಪ್ರಚಂಡ ಶಕ್ತಿಯು ಸಂಚಿತವಾಗಿತ್ತು. ಅವನಿಗೆ ಅಬ್ಜಕ ವೃಷಾಕಪಿ ಎಂದು ಎರಡು ಹೆಸರುಗಳಿದ್ದವು. ಅವನು ಚಕ್ರ ಮತ್ತು ತ್ರಿಶೂಲ ಎರಡನ್ನು ತನ್ನ ಕೈಗಳಲ್ಲಿ ಧರಿಸಿದ್ದನು. ಹರಿಹರರ ಆದೇಶದಂತೆ ಅವನು ನೇರವಾಗಿ ಪಾತಾಳಕ್ಕೆ ಹೋಗಿ ಇಂದ್ರಶತ್ರುವಾದ ಮಹಾಶನಿಯನ್ನು ತನ್ನ ಪರಾಕ್ರಮದಿಂದ ವಧಿಸಿ ವಿಜೃಂಭಿಸಿದ. ಇದರಿಂದ ಇಂದ್ರದಂಪತಿಗಳಿಗೆ ಪರಮ ಸಂತೋಷವಾಯಿತು. ಆ ವೃಷಾಕಪಿಯು ದೇವೇಂದ್ರನಿಗೆ ಅಂದಿನಿಂದ ಜೀವ ಮಿತ್ರನೂ, ಸಮಯೋಚಿತ ಸಲಹೆಗಾರನೂ ಆಗಿ ದೇವತೆಗಳಿಗೆಲ್ಲ ಪರಮ ಪ್ರೀತ್ಯಾಸ್ಪದನಾದನು. ಈ ಸಂದರ್ಭ ನಿಮಿತ್ತವಾಗಿ ಗೌತಮೀ ನದಿಯಲ್ಲಿ ಇಂದ್ರೇಶ್ವರ ತೀರ್ಥ ಅಬ್ಜಕತೀರ್ಥ ಎಂದು ಎರಡು ತೀರ್ಥಗಳು ಸುಪ್ರಸಿದ್ಧವಾದವು. ಈ ಅಬ್ಜಕತೀರ್ಥವು ಗೌತಮೀ ನದಿಯ ಹೃದಯವೆಂದು ಮುನಿಗಳು ಅಲ್ಲಿ ಸ್ನಾನ ಪಾನಾದಿಗಳನ್ನೇ ಮಾಡಿ ಸದ್ಗತಿಯನ್ನು ಹೊಂದುವರು. ಆ ತೀರ್ಥದಲ್ಲಿ ಹರಿಹರರು ಸರ್ವದಾ ಸನ್ನಿಹಿತರಾಗಿರುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತೊಂದನೆಯ ಅಧ್ಯಾಯ ಮುಗಿದುದು*

**ಬ್ರಹ್ಮ:-** ಆಪಸ್ತಂಭ ಎಂಬ ತೀರ್ಥವು ಮೂರು ಲೋಕದಲ್ಲಿಯೂ ಪ್ರಸಿದ್ಧ ವಾದುದು. ಇದರ ಸ್ಮರಣಮಾತ್ರದಿಂದಲೇ ಸರ್ವಪಾಪವಿನಾಶ ನಿಶ್ಚಿತ.

ಪೂರ್ವಕಾಲದಲ್ಲಿ ಆಪಸ್ತಂಭ ಎಂಬ ಮಹಾಮಹಿಮನಾದ ಮಹರ್ಷಿ ಇದ್ದನು. ಪರಮ ಪತಿವ್ರತೆ ಅವನ ಮಡದಿ. ಅಕ್ಷಸೂತ್ರೆ ಎಂದು ಅವಳ ಹೆಸರು. ಆ ದಂಪತಿಗಳಿಗೆ ಕರ್ಕಿ ಎಂಬ ಒಬ್ಬ ಸತ್‌ಪುತ್ರ ಇದ್ದ. ಮಹಾಜ್ಞಾನಿಯಾಗಿದ್ದ. ಒಂದು ದಿನ ಆಪಸ್ತಂಬರ ಆಶ್ರಮಕ್ಕೆ ಅಗಸ್ತ್ಯಋಷಿಗಳು ಆಗಮಿಸಿದರು. ಆ ಮಹಾಮುನಿಯನ್ನು ಅರ್ಘ್ಯಪಾದ್ಯಾದಿ ಗಳಿಂದ ಸತ್ಕರಿಸಿದ ಆ ಆಪ್ತಸ್ತಂಬಮುನಿ. ಅವನ ಶಿಷ್ಯರು ಯಥೋಚಿತವಾಗಿ ಆ ಮಹರ್ಷಿಯನ್ನು ಪೂಜಿಸಿದರು. ಅನಂತ ಆಪಸ್ತಂಬ ಮುನಿಯು ತನ್ನ ಆಶ್ರಮಕ್ಕೆ ದಯಮಾಡಿಸಿದ. ಮುನಿಮನೀಷಿಗಳಾದ ಅಗಸ್ತ್ಯರನ್ನು ಪ್ರಶ್ನಿಸಿದ- ''ಮುನಿವರ್ಯ, ಬ್ರಹ್ಮ, ವಿಷ್ಣು ಮಹೇಶ್ವರ ಈ ಮೂವರು ದೇವತೆಗಳಲ್ಲಿ ಶ್ರೇಷ್ಠರಾಗಿದ್ದಾರೆ. ಆದರೆ ಈ ತ್ರಿಮೂರ್ತಿಗಳಲ್ಲಿ ಸರ್ವೋತ್ತಮನು ಯಾರು? ಮಾನವರಿಗೆ ಭೋಗಗಳನ್ನು ಮೋಕ್ಷವನ್ನು ದಯಪಾಲಿಸುವ ದೇವೋತ್ತಮ ಯಾರು? ಯಜ್ಞಯಾಗಗಳಲ್ಲಿ ಅನಾದಿ ಅನಂತನಾದ ಪರಮ ಪುರುಷೋತ್ತಮ ಯಾರು? ನನ್ನ ಈ ಸಂಶಯವನ್ನು ಹೋಗಲಾಡಿಸಿರಿ.

**ಅಗಸ್ತ್ಯ:-** ಈ ಮೂರು ದೇವತೆಗಳಲ್ಲಿ ಯದ್ಯಪಿ ತಿಲಮಾತ್ರ ಭೇದವಿಲ್ಲ. ಆದರೂ ಮನುಷ್ಯರ ಸರ್ವಾರ್ಥ ಸಿದ್ಧಿಯಾಗುವದು ಆ ಶಂಕರನಿಂದಲೇ. ಅವನು ಸುಖಸ್ವರೂಪಿ. ಚರಾಚರ ಪ್ರಪಂಚಕ್ಕೆಲ್ಲ ನಿಮಿತ್ಯಕಾರಣ. ಪರಾತ್ಪರ ಪರಂಜ್ಯೋತಿ ಸ್ವರೂಪ. ಅವನನ್ನೇ ನೀನು ಅತ್ಯಂತಿಕವಾದ ಭಕ್ತಿಯಿಂದ ಆರಾಧಿಸು. ದಂಡಕಾರಣ್ಯದಲ್ಲಿ ಗೌತಮೀತೀರದಲ್ಲಿ ನೆಲೆಸಿದ ಆ ಶಂಕರನು ಸರ್ವಪಾಪ ಪರಿಹಾರಕನು ಆಗಿದ್ದಾನೆ. ಆ ಪರಶಿವನೇ ಬ್ರಹ್ಮನಾಗಿ ಪ್ರಪಂಚವನ್ನೆಲ್ಲಾ ಸೃಷ್ಟಿಮಾಡುವನು. ವಿಷ್ಣುರೂಪದಿಂದ ಎಲ್ಲರನ್ನೂ ರಕ್ಷಿಸುವನು. ರುದ್ರನಾಗಿ ಸರ್ವರನ್ನು ಪರಿಹರಿಸುವನು. ಇಂಥ ಸರ್ವಸ್ವಾಮಿಯಾದ ವರರೂಪಿ ಭಗವಂತನನ್ನೇ ವೇದಗಳು ಸ್ತುತಿಸುವವು.

ಅಗಸ್ತ್ಯ ಮಹರ್ಷಿಯ ಮಾತನ್ನು ಕೇಳಿ ಆಪಸ್ತಂಬ ಮಹರ್ಷಿಗೆ ಪರಮಸಂತೋಷ ವಾಯಿತು. ಅವನ ಸಂಶಯ ಪರಿಹಾರವಾಯಿತು. ಅಗಸ್ತ್ಯರ ಆದೇಶದಂತೆ ಗಂಗಾತೀರಕ್ಕೆ ಹೋಗಿ ಭಕ್ತಿಯಿಂದ ಅದರಲ್ಲಿ ಮಿಂದು ಈ ಸ್ತೋತ್ರದಿಂದ ಆ ಪರಶಿವನನ್ನು ಪ್ರಾರ್ಥಿಸಿದನು.

### ಆಪಸ್ತಂಬ ಉವಾಚ

**ಕಾಷ್ಠೇಷು ವಹ್ನಿಃ ಕುಸುಮೇಷು ಗಂಧೋ, ಕಾಷ್ಠೇಷು ವಹ್ನಿಃ ಕುಸುಮೇಷು ಗಂಧೋ**
**ಬೀಜೇಶು ವೃಕ್ಷಾದಿ ದೃಶಸ್ಸು ಹೇಮ ॥**
**ಬೀಜೇಷು ವೃಕ್ಷಾದಿ ದೃಷತ್ಸು ಹೇಮ ॥**
**ಭೂತೇಷು ಸರ್ವೇಶು ತವಾಸ್ತುಯೋನೇ,**
**ಭೂತೇಷುಸರ್ವೇಷುಚಯೋಽಂತರಸ್ಥಃ ತಂ**
**ಸೋಮನಾಥಂ ಶರಣಂ ವಯಾಮಿ ॥**
**ತಂ ಸೋಮನಾಥಂ ಶರಣ ಪ್ರಯಾಮಿ ॥**

ಕಟ್ಟಿಗೆಯಲ್ಲಿ ಬೆಂಕಿಯಾಗಿ, ಹೂಗಳಲ್ಲಿ ಸುಗಂಧವಾಗಿ, ಬೀಜಗಳಲ್ಲಿ ವೃಕ್ಷರೂಪಿ ಯಾಗಿ, ಕಲ್ಲುಗಳಲ್ಲಿ ಬಂಗಾರವಾಗಿ, ಸರ್ವಪ್ರಾಣಿಗಳಲ್ಲಿಯೂ ಅಂತರ್ಯಾಮಿ ಯಾಗಿ ಇರುವ ಆ ಚಂದ್ರಚೂಡನನ್ನು ಮೊರೆಹೊಕ್ಕಿದ್ದೇನೆ. ಯಾವನು ಚರಾಚರಾತ್ಮಕವಾದ ಈ ಜಗತ್ತನ್ನೆಲ್ಲ ಲೀಲೆಯಿಂದ ಸೃಷ್ಟಿಮಾಡಿ ಮೂರು ಲೋಕಗಳನ್ನು ಪಾಲನೆಮಾಡಿ ವಿಶ್ವರೂಪಿ ಎನಿಸುವನೊ? ಮತ್ತು ಯಾವನು ಈ ಜೀವ ಜಡಾತ್ಮಕವಾದ ಜಗತ್ತಿನಿಂದ ಅತ್ಯಂತ ಭಿನ್ನನಾಗಿರುವನೊ? ಅಂತಹ ಸೋಮೇಶ್ವರನಿಗೆ ಶರಣು ಹೋಗುತ್ತೇನೆ. ಅವನ ಈ ಸ್ತೋತ್ರದಿಂದ ಸುಪ್ರಸನ್ನನಾದ ಆ ಪಾರ್ವತೀದೇವಿಯಪತಿ ಬೇಕಾದ ವರಬೇಡು ನೀಡುವೆನು, ಎಂದು ಹೇಳಿದನು. ಆಗ ಆ ಆಪಸ್ತಂಬ ಮುನಿಯು ತನ್ನ ಮತ್ತು ಎಲ್ಲರ ಕ್ಷೇಮಕ್ಕಾಗಿ ಈ ವರವನ್ನು ಕೇಳಿಕೊಂಡ.

"ಪ್ರಭು, ಈ ತೀರ್ಥದಲ್ಲಿ ಸ್ನಾನಮಾಡಿ, ಪರಮೇಶ್ವರನಾದ ನಿನ್ನ ದರ್ಶನ ಮಾಡಿಕೊಂಡವರಿಗೆ ಇಷ್ಟ ಪ್ರಾಪ್ತಿ, ಅನಿಷ್ಟ ನಿವೃತ್ತಿ ಎರಡು ಆಗಲಿ" ಎಂದು ಕೇಳಿಕೊಂಡ. ತಥಾಸ್ತು ಎಂದು ನುಡಿದು ಆ ನಾಗಭೂಷಣನು ಆಪಸ್ತಂಬ ಮುನಿಯನ್ನು ಅನುಗ್ರಹಿಸಿದ. ಅಂದಿನಿಂದ ಆ ತೀರ್ಥವು ಆಪಸ್ತಂಬ ತೀರ್ಥ ಎಂದು ಪ್ರಸಿದ್ಧವಾಯಿತು.

## ಯಮತೀರ್ಥ

**ಬ್ರಹ್ಮದೇವ:-** ನಾರದ ಈ ಗೌತಮೀತೀರದಲ್ಲಿ ಯಮತೀರ್ಥ ಎಂಬ ಸರ್ವಪಾಪ ಪರಿಹಾರಕವಾದ ಒಂದು ಶ್ರೇಷ್ಠ ತೀರ್ಥ ಇರುತ್ತದೆ. ಆ ತೀರ್ಥವು ಸಮಸ್ತ ಪಿತೃದೇವತೆ ಗಳಿಗೆ ಪರಮ ಪ್ರೀತ್ಯಾಸ್ಪದವಾದುದು. ಆ ತೀರ್ಥದ ಮಹಾತ್ಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ, ದೇವತೆಗಳ ಪಟ್ಟಣವಾದ ಅಮರಾವತಿಯಲ್ಲಿ ಸರಮಾ ಎಂಬ ಹೆಸರಿನ ಒಂದು ಹೆಣ್ಣುನಾಯಿ ಇತ್ತು. ಆ ಸರಮೆಗೆ ಎರಡು ನಾಯಿ ಮರಿಗಳಿದ್ದವು. ಸೂಕ್ಷ್ಮ ದೃಷ್ಟಿಯ ಆ ಶ್ವಾನ ಶಿಶುಗಳು, ಯಮದೇವರಿಗೆ ಪ್ರೀತಿಯ ಸೇವಕವಾಗಿದ್ದವು. ಬುದ್ಧಿವಂತ ವಾದ ಆ ನಾಯಿಗಳು ನಿತ್ಯವೂ ಮೃತಜೀವರನ್ನು ಯಮಲೋಕಕ್ಕೆ ಒಯ್ಯುತ್ತಿದ್ದವು. ದೇವಶುನಿಯಾದ ಸರಮೆಯು ದೇವತೆಗಳಿಂದ ತಮ್ಮ ಹಸುಗಳನ್ನು ರಕ್ಷಿಸಲಿಕ್ಕಾಗಿ ನೇಮಿಸಲ್ಪಟ್ಟಿತ್ತು. ದೇವಧೇನುಗಳ ರಕ್ಷಣೆ ಮಾಡುತ್ತಿರುವ ಆ ಸರಮೆಯನ್ನು ಒಂದು ದಿನ ದೈತ್ಯದಾನವರು ಅನುಸರಣೆ ಮಾಡಿ ಓಲೈಸಿದರು. ಅದಕ್ಕೆ ರುಚಿರುಚಿಯಾದ ಆಹಾರವನ್ನು ಕೊಟ್ಟು ಮಧುರವಾಗಿ ಮಾತನಾಡಿ, ಆ ದೇವ ಶುನಿಗೆ ಆಶೆಹಚ್ಚಿ ಅದನ್ನು ಒಡಂಬಡಿಸಿ ದೇವತೆಗಳ ಯಜ್ಞ ಪಶುಗಳನ್ನೆಲ್ಲಾ ಅಪಹರಿಸಿದರು. ಅನಂತರ, ಆ ಸರಮೆಯು ದೇವತೆಗಳ ಬಳಿಗೆ ಬಂದಿತು. ದೀನವಾಗಿ ಪ್ರಾರ್ಥಿಸಿತು.

"ಸುರೋತ್ತಮರೆ, ರಾಕ್ಷಸರು ನನ್ನನ್ನು ಬಂಧಿಸಿ ಹೊಡೆದು ನಿಮ್ಮ ಎಲ್ಲಾ ಹಸುಗಳನ್ನು ಯಜ್ಞ ಪಶುಗಳನ್ನೂ ಅಪಹರಿಸಿದರು" ಎಂದು ಹೇಳಿತು.

ಸರಮೆಯ ಈ ಮಾತನ್ನು ಕೇಳಿ ಬೃಹಸ್ಪತಿಯು ದೇವತೆಗಳನ್ನು ಕುರಿತು ಹೇಳಿದರು. "ದೇವತೆಗಳೇ, ಈ ಸರಮೆಯ ಮುಖವನ್ನು ನೋಡಿದರೆ, ಇದು ಸುಳ್ಳು ನುಡಿಯುತ್ತದೆ ಎಂದು ಗೊತ್ತಾಗುವುದು. ಇದರ ಮುಖದ ಮೇಲೆ ಅಪರಾಧ ಮಾಡಿದ್ದು ಸ್ಪಷ್ಟವಾಗಿ ಕಂಡು ಬರುತ್ತವೆ. ಈ ದೇವ ಶುನಿಯ ಸಮ್ಮತಿಯಿಂದಲೇ ದೈತ್ಯರು ನಮ್ಮ ಯಜ್ಞಪಶುಗಳನ್ನು ಕದ್ದು ಒಯ್ದಿದ್ದಾರೆ."

ಸುರಾಚಾರ್ಯರ ಈ ಮಾತನ್ನು ಕೇಳಿ ಶುಚೀಪತಿಗೆ ಕೋಪಬಂದಿತು. ಅವನು ಆ ಸರಮೆಯನ್ನು ಕಾಲಿನಿಂದ ಒದ್ದು ಬಿಟ್ಟ. ಕೂಡಲೇ ಆ ಸರಮೆಯ ಬಾಯಿಂದ ಹಾಲು ಸುರಿಯ ತೊಡಗಿತು. ಆಗ ದೇವೇಂದ್ರ ಅದನ್ನು ಗದ್ದರಿಸಿದ- ''ದುಷ್ಟಳಾದ ಸರಮೆ, ನಿನ್ನ ಅಪರಾಧ ಈಗ ಹೊರಬಿದ್ದಿತು ನೋಡು. ನೀನು ದೈತ್ಯರು ಕೊಟ್ಟ ಹಾಲನ್ನು ಕುಡಿದು ಅವರಿಗೆ ನಮ್ಮ ಹಸುಗಳನ್ನು ಅಪಹರಿಸಲು ಒಪ್ಪಿಗೆಯನ್ನು ಕೊಟ್ಟಿರುವಿ. ದೈತ್ಯರು ಕೊಟ್ಟ ಸವಿ ಸವಿಯಾದ ಭಕ್ಷ್ಯಗಳ ಆಸೆಯಿಂದ ನಮ್ಮ ಯಜ್ಞ ಪಶುಗಳನ್ನು ಅವರಿಗೆ ನೀಡಿ ಬಂದಿರುವಿ. ಅದುದರಿಂದ ನೀನು ಈ ಮಹಾಅಪರಾಧಕ್ಕಾಗಿ ಭೂಲೋಕದಲ್ಲಿ ನಾಯಿಯಾಗಿ ನೀನು ಜನಿಸು ಹೋಗು ಇದು ನೀನು ದೇವತೆಗಳಿಗೆ ಮಾಡಿದ ಮಹಾ ಅಪರಾಧಕ್ಕೆ ತಕ್ಕ ಶಾಸ್ತಿ.''

ದೇವೇಂದ್ರನ ಶಾಪದಂತೆ ಆ ದೇವಲೋಕದ ಸರಮೆಯು ಭೂಲೋಕದಲ್ಲಿ ಒಂದು ಭಯಂಕರವಾದ ಶುನಕಿಯಾಗಿ ಹುಟ್ಟಿತು. ಅನಂತರ ಆ ಸುರರಾಜನು ವಿಷ್ಣುವಿನ ಬಳಿಗೆ ಬಂದನು ಮತ್ತು ವಿನಯದಿಂದ ನಿವೇದಿಸಿದನು. ''ಮಹಾಪ್ರಭು ದೈತ್ಯರು ದಾನವರು ಕೂಡಿ ನಮ್ಮ ದೇವಲೋಕದ ಧೇನುಗಳೆನ್ನೆಲ್ಲಾ ಅಪಹರಿಸಿದ್ದಾರೆ. ಆ ಸುರಲೋಕದ ಗೋವುಗಳನ್ನೆಲ್ಲ ದಯಮಾಡಿ ನೀನು ನಮಗೆ ತಂದುಕೊಡು'' ಎಂದು ಕೇಳಿಕೊಂಡರು. ದೇವತೆಗಳ ಹಾಗೂ ದೇವೇಂದ್ರನ ಈ ಬಿನ್ನಹವನ್ನು ಮನ್ನಿಸಿ ಶ್ರೀಹರಿಯು ದೇವತಾ ಕಾರ್ಯಕ್ಕೆ ಅಣಿಯಾದನು. ಭೂಲೋಕಕ್ಕೆ ಬಂದು ದಂಡಕಾರಣ್ಯದಲ್ಲಿ ನೆಲಸಿದ ಆ ದೈತ್ಯದಾನವರನ್ನೆಲ್ಲಾ ತನ್ನ ಶಾರ್ಙ್ಗ ಧನುಸ್ಸಿನಿಂದ ಹೊಡೆದು ಓಡಿಸಿದನು. ಆ ದೇವ ಶತ್ರುಗಳೆಲ್ಲರೂ ವಿಷ್ಣುವಿನ ಭಯದಿಂದ ದಕ್ಷಿಣ ದಿಕ್ಕಿಗೆ ಓಡಿಹೋದರು. ಅನಂತರ ಆ ಶ್ರೀಹರಿಯು ಗರುಡಾರೂಢನಾಗಿ ಆ ಸುರವೈರಿಗಳನ್ನು ಬೆನ್ನಟ್ಟಿ ಹೋಗಿ ತನ್ನ ಶಾಂರ್ಗ್ಯ ಧನುಸ್ಸಿನಿಂದ ಅಮೋಘವಾದ ಬಾಣ ಪ್ರಯೋಗಮಾಡಿ ಆ ಸುರಶತ್ರುಗಳನ್ನು ಸಂಹರಿಸಿದನು. ದೇವತೆಗಳಿಗೆ ಅವರ ಗೋಧನವನ್ನು ಮರಳಿ ತಂದು ಒಪ್ಪಿಸಿದನು. ಆ ಸ್ಥಳವು ಬಾಣ ತೀರ್ಥವೆಂದೂ, ವಿಷ್ಣುತೀರ್ಥವೆಂದೂ, ಗೋತೀರ್ಥವೆಂದೂ ಪ್ರಸಿದ್ಧವಾದವು. ರಾಕ್ಷಸರು ಅಪಹರಿಸಿದ ಗೋವುಗಳನ್ನೆಲ್ಲಾ ದೇವತೆಗಳು ಗೌತಮೀನದಿಯ ದಕ್ಷಿಣ ತೀರದಲ್ಲಿ ಒಟ್ಟು ಸೇರಿಸಿ ಒಂದು ಗೋಶಾಲೆಯನ್ನು ನಿರ್ಮಿಸಿದರು. ಆ ಗೋಕ್ಷೀರದಿಂದ ಮಹಾಯಜ್ಞವನ್ನು ಮಾಡಿದರು. ಆ ಗೋವುಗಳನ್ನು ಒಟ್ಟು ನಿಲ್ಲಿಸಿದ ಸ್ಥಳವು ಗೋದ್ವೀಪ ಎನಿಸುವದು. ಆ ದ್ವೀಪದಲ್ಲಿ ಯಾಗ ನಡೆದ ಸ್ಥಳವು ಯಜ್ಞತೀರ್ಥವೆಂದು ಹೆಸರಾಯಿತು.

ಸರಮೆಯ ಮಕ್ಕಳಾದ ಆ ಎರಡು ಯಮಕಿಂಕರರಾದ ಶ್ವಾನಗಳು, ತಮ್ಮ ಒಡೆಯನಾದ ಯಮನ ಬಳಿಗೆ ಹೋದವು. ತಮ್ಮ ತಾಯಿಯು ಮಾಡಿದ ಅಪರಾಧವನ್ನು ಅದಕ್ಕೆ ದೇವೇಂದ್ರನು ಇತ್ತ ಶಾಪವನ್ನು ತಿಳಿಸಿದವು. ಮತ್ತು ತಮ್ಮ ತಾಯಿ ಈ ಘೋರವಾದ ಶಾಪದಿಂದ ಮುಕ್ತವಾಗಬೇಕಾದರೆ ನಾವು ಏನು ಮಾಡಬೇಕು ಎಂದು ಕೇಳಿದವು. ಇದನ್ನು ಕೇಳಿ ಯಮಧರ್ಮನು ತನ್ನ ತಂದೆಯಾದ ಸೂರ್ಯನ ಬಳಿಗೆ ಹೋಗಿ, ನಡೆದ ಸಮಾಚಾರವನ್ನು ತಿಳಿಸಿದನು. ಮತ್ತು ಇದಕ್ಕೆ ಏನು ಉಪಾಯ ಎಂದು ಕೇಳಿದನು. ಅದಕ್ಕೆ ಆ ಸೂರ್ಯನಾರಾಯಣನು ಯಮಧರ್ಮನಿಗೆ ''ವತ್ಸ, ನೀನು ಲೋಕ ಪಾವನಿಯಾದ ಗಂಗಾನದಿಯ ತೀರಕ್ಕೆ ಹೋಗು, ಆ ನದಿಯಲ್ಲಿ ಸ್ನಾನಮಾಡು

ಭಕ್ತಿಯಿಂದ ಬ್ರಹ್ಮ, ವಿಷ್ಣು, ಶಿವ, ಸೂರ್ಯ ನಾಲ್ಕು ಜನರನ್ನು ಕ್ರಮವಾಗಿ ಸ್ತೋತ್ರಮಾಡು ಅದರಿಂದ ನಿನ್ನ ಸೇವಕರಾದ ಆ ಶ್ವಾನಗಳ ಇಷ್ಟಾರ್ಥವು ಸಿದ್ಧಿಸುವುದು. ಅವುಗಳ ತಾಯಿಯಾದ ಸರಮೆಯ ಶಾಪವಿಮೋಚನೆಯಾಗುವುದು.''

ಅನಂತರ ಆ ಯಮಧರ್ಮನು ಸೂರ್ಯನ ಆಣತಿಯಂತೆ ಗಂಗೆಯ ದಕ್ಷಿಣ ತೀರಕ್ಕೆ ಹೋಗಿ ಬ್ರಹ್ಮನನ್ನು, ಸೂರ್ಯನನ್ನು, ಉತ್ತರತೀರದಲ್ಲಿ ಹರಿಹರರನ್ನು ಸ್ತೋತ್ರಮಾಡಿದನು. ಆಗ ಬ್ರಹ್ಮನೂ, ವಿಷ್ಣು ಮಹೇಶ್ವರ, ಸೂರ್ಯರೂ ಯಮನಿಗೆ ಪ್ರಸನ್ನರಾಗಿ ವರವನ್ನು ಕೊಟ್ಟರು. ಮತ್ತು ಸರಮೆಯ ಶಾಪವನ್ನು ಹೋಗಿಸಿದರು. ಇಲ್ಲಿಯ ಈ ತೀರ್ಥಗಳಲ್ಲಿ ಸ್ನಾನಪಾನಾದಿಗಳನ್ನು, ಪಿತೃ ಕಾರ್ಯಗಳನ್ನು ಮಾಡಿದವರ ಪಿತೃಗಳು ಉದ್ಧಾರವಾಗುವರು. ಮತ್ತು ಪಾಪಗಳು ಪರಿಹಾರವಾಗುವವು.

## ಯಕ್ಷಿಣೀ ಸಂಗಮ

**ಬ್ರಹ್ಮ:-** ಈ ಗೌತಮೀತೀರದಲ್ಲಿ ಯಕ್ಷಿಣೀಸಂಗಮ ಎಂಬ ಒಂದು ತೀರ್ಥ ಇದೆ. ಅದರ ಮಹಿಮೆಯನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ವಿಶ್ವಾವಸು ಎಂಬ ಯಕ್ಷನಿಗೆ ತ್ರಿಪಲಾ ಎಂಬ ಮಗಳಿದ್ದಳು. ಅವಳು ಹಾಸ್ಯ ಪ್ರಿಯಳು, ಹುಡುಗಾಟಿಕೆಯ ವಯಸ್ಸು. ಕಂಡವರನ್ನೆಲ್ಲಾ ಉಪಹಾಸ ಮಾಡಿ ನಕ್ಕುಬಿಡುವುದು ಅವಳ ಸ್ವಭಾವ. ಒಮ್ಮೆ ಆ ಗೌತಮೀತೀರದಲ್ಲಿ ಋಷಿಗಳೆಲ್ಲರೂ ಒಂದು ಯಜ್ಞಮಾಡುತ್ತಿದ್ದರು. ಸರ್ವದಾ ಉಪವಾಸ ಮಾಡಿ ತಪೋನುಷ್ಠಾನಗೈಯುವ ಆ ಮುನಿಗಳು ಸೊರಗಿ ಕೃಶಕಾಯರಾಗಿದ್ದರು. ಬಡಕಲ ಶರೀರದ ಆ ಋಷಿಮುನಿಗಳನ್ನು ನೋಡಿ ತ್ರಿಪಲೆಯು, ಉಪಹಾಸ ಮಾಡಿ ನಕ್ಕಳು ಮತ್ತು ಋಷಿಗಳು ಯಜ್ಞಕಾಲದಲ್ಲಿ ಉಚ್ಚರಿಸುವ ಆಶ್ರಾವಯ ''ಶ್ರೌಷಟ್'' ಅಸ್ತ್ರಾಯಫಟ್'' ಇತ್ಯಾದಿ ಮಂತ್ರಗಳನ್ನು ಅವರಂತೆ ತಾನು ಉಚ್ಚರಿಸಿ, ಅವರಿಗೆ ಅಣಕಿಸಿ, ಅಪಸ್ವರದಲ್ಲಿ ತಾನು ಅವರು ಹೇಳುವ ಮಂತ್ರ ಹೇಳಿ ಅವಮಾನ ಮಾಡಿದಳು. ಆಗ ಆ ಋಷಿಗಳು ಅವಳನ್ನು ನೀನು ನದಿಯಾಗಿ ಹರಿದು ಹೋಗು' ಎಂದು ಶಾಪಕೊಟ್ಟರು. ಋಷಿಗಳ ಶಾಪದಿಂದ ತ್ರಿಪತಿಯು ಯಕ್ಷಮೀಯೆಂಬ ನದಿಯಾಗಿ ಹರಿದಳು. ಆಗ ಅವಳ ತಂದೆಯಾದ ವಿಶ್ವಾವಸು ಆ ಋಷಿಗಳನ್ನು ಪೂಜಿಸಿದ. ಅವರ ಆಜ್ಞೆಯಂತೆ, ಮಹಾದೇವರನ್ನು ಆರಾಧಿಸಿದ. ಆ ಭಗವಂತನನ್ನು ಪ್ರಾರ್ಥಿಸಿದ್ದರಿಂದ ಆ ಯಕ್ಷಿಣೀಯ ನದಿಯು ಗೌತಮೀನದಿಯೊಂದಿಗೆ ಸಂಗಮಿಸುವಂತೆ ಆಯಿತು. ಅದರಿಂದ ಯಕ್ಷಿಣಿಯ ಶಾಪವು ಪರಿಹಾರವಾಯಿತು. ಅಂದಿನಿಂದ ಅದು ಯಕ್ಷಿಣೀ ಸಂಗಮತೀರ್ಥ ಎಂದು ಪ್ರಸಿದ್ಧವಾಯಿತು.

## ಶುಕ್ಲತೀರ್ಥ

**ಬ್ರಹ್ಮ:-** ನಾರದ, ಗೌತಮೀ ತೀರದಲ್ಲಿ ಇರುವ ಶುಕ್ಲತೀರ್ಥವು ನೆನೆದ ಮಾತ್ರಕ್ಕೆ ಇಷ್ಟಾರ್ಥಗಳನ್ನು ಪೂರ್ಣಮಾಡುವ ಪುಣ್ಯತೀರ್ಥವಾಗಿದೆ.

ಪೂರ್ವಕಾಲದಲ್ಲಿ ಭರದ್ವಾಜ ಎಂಬ ಓರ್ವ ಮಹಾಮುನಿಯು ಪೈಠೀನಸೀ ಎಂಬ ಪತಿವ್ರತೆಯಾದ ಪ್ರಿಯ ಪತ್ನಿಯೊಂದಿಗೆ ವಾಸವಾಗಿದ್ದನು. ಗೌತಮೀ ತೀರದಲ್ಲಿ ಒಂದುದಿನ ಭರದ್ವಾಜ ಮುನಿಯು ಹೋಮವನ್ನು ಮಾಡುವಾಗ ಅಗ್ನಿ ಮತ್ತು ಇಂದ್ರರಿಗೆ

ನೀಡಲು ಪುರೋಡಾಶ ಎಂಬ ಹೋಮದ್ರವ್ಯವನ್ನು ಸಿದ್ಧಮಾಡಿ ಇರಿಸಿದ್ದನು. ಆಗ ಆ ಅಗ್ನಿ ಕುಂಡದ ಹೋಮ ಧೂಮದಿಂದ ಓರ್ವ ಭೀಕರ ಆಕಾರದ ರಾಕ್ಷಸನು ಉದ್ಭವನಾದನು. ಅವನು ಇಂದ್ರ, ಅಗ್ನಿಗಳಿಗೆಂದು ಸಿದ್ಧಪಡಿಸಿ ಇಟ್ಟ ಪುರೋಡಾಶವನ್ನು ತಾನೇ ತಿಂದು ಹಾಕಿದನು. ಆಗ ಭರದ್ವಾಜ ಮುನಿಯು ಅವನಿಗೆ ಸಿಟ್ಟಿನಿಂದ "ನನ್ನ ಯಜ್ಞವನ್ನು ಹಾಳುಮಾಡಿ ಪುರೋಡಾಶವನ್ನು ಭಕ್ಷಿಸಿದ ನೀನು ಯಾರು?" ಎಂದು ಕೇಳಿದನು. ಅದಕ್ಕೆ ಆ ದೈತ್ಯನು "ಮಹಾಮುನಿಯೇ, ನಾನು ಪ್ರಾಚೀನಬರ್ಹಿ ಮತ್ತು ಸಂಧ್ಯಾದೇವಿ ಎಂಬ ದಂಪತಿಗಳಿಂದ ಹುಟ್ಟಿದ ಹಿರಿಯ ಮಗನು. ಬ್ರಹ್ಮದೇವನು ನನಗೆ ಯಜ್ಞದ ಹವಿಸ್ಸನ್ನು ತಿನ್ನು ಎಂದು ವರವನ್ನು ಕೊಟ್ಟಿದ್ದಾನೆ. ಅದರಿಂದ ನನಗೆ ಹವ್ಯಘ್ನ ಎಂಬ ಹೆಸರು ಬಂದಿದೆ. ಬ್ರಹ್ಮದೇವರ ವರದ ಬಲದಿಂದಲೇ ನಾನು ಯಜ್ಞವನ್ನು ಹಾಳುಮಾಡುತ್ತೇನೆ ಯೂಪಸ್ತಂಭವನ್ನು ಕತ್ತರಿಸುತ್ತೇನೆ."

ಅವನ ಮಾತು ಕೇಳಿ ಭರದ್ವಾಜ ಮುನಿಯು ನಮ್ರನಾಗಿ "ರಾಕ್ಷಸನೇ, ನೀನು ಯಜ್ಞಶತ್ರು ಎಂದು ನನಗೆ ಈಗ ತಿಳಿದುಬಂದಿತು. ಆದರೂ ನೀನು ನನ್ನ ಬಿನ್ನಹದ ಮೇರೆಗೆ ನನ್ನ ಯಜ್ಞವನ್ನು ರಕ್ಷಿಸು, ಯಜ್ಞಯಾಗಾದಿ ಧರ್ಮ ಕರ್ಮಗಳು ನನಗೆ ಪರಮಪ್ರಿಯ ವಾಗಿರುತ್ತವೆ" ಎಂದು ಹೇಳಿದನು. ಮುನಿಯ ಮಾತಿಗೆ ಆ ರಕ್ಕಸನು ದೀನನಾಗಿ ನುಡಿದನು. "ಮಹಾಮುನಿಯೇ, ಹಿಂದೆ ಬ್ರಹ್ಮದೇವನು ನನ್ನ ಯಾವುದೋ ಒಂದು ಅಪರಾಧಕ್ಕಾಗಿ ದೇವ ದಾನವರ ಎದುರೇ ನನ್ನನ್ನು ಶಪಿಸಿದನು. ಆಗ ಲೋಕಪಿತಾಮಹರಾದ ಆ ಬ್ರಹ್ಮದೇವರನ್ನು ನಾನು ಶ್ರದ್ಧೆಯಿಂದ ಆರಾಧಿಸಿದೆ. ಆಗ ಆ ಶಾರದಾಪತಿಯು ನನ್ನ ಮೇಲೆ ಅನುಗ್ರಹ ಮಾಡಿ "ಯಾರಾದರೂ ಮುನಿಗಳು ನಿನಗೆ ಅಮೃತದಿಂದ ಅಭಿಷೇಕ ಮಾಡಿದರೆ ಈ ಶಾಪವು ಪರಿಹಾರವಾಗುವುದು" ಎಂದು ಹೇಳಿದರು. ಆದುದರಿಂದ ಆ ಬ್ರಹ್ಮದೇವನ ಮಾತಿನಂತೆ ನೀನು ನನಗೆ ಅಮೃತದಿಂದ ಅಭಿಷೇಕ ಮಾಡು." ಅದನ್ನು ಕೇಳಿ, ಭರದ್ವಾಜ ಮುನಿಯು ಆ ಹವ್ಯಘ್ನನಿಗೆ ಪ್ರಶ್ನಿಸಿದ "ಹವ್ಯಘ್ನ ನಾನೇನೋ ನನ್ನ ಯಾಗದ ರಕ್ಷಣೆಗಾಗಿ ನಿನಗೆ ಅಮೃತದಿಂದ ಅಭಿಷೇಕ ಮಾಡಲು ಸಿದ್ಧನಾಗಿದ್ದೇನೆ. ಆದರೆ ಆ ಅಮೃತವು ದೊರಕುವ ಬಗೆ ಏನು? ಪೂರ್ವಕಾಲದಲ್ಲಿ ದೇವತೆಗಳು ದೈತ್ಯರು ಕೂಡಿ ಕಷ್ಟಪಟ್ಟು ಹಾಲಿನ ಹೆಗ್ಗಡಲನ್ನು ಕಡೆದರು. ಅದರ ಫಲವಾಗಿ ಅಮೃತವನ್ನು ಪಡೆದರು. ಆ ಅಮೃತ ದೇವೇಂದ್ರನ ರಾಜಧಾನಿಯಾದ ಅಮರಾವತಿಯಲ್ಲಿ ಇದೆ. ಅಲ್ಲಿಂದ ಅದನ್ನು ತರುವುದು ಹೇಗೆ? ನಿನಗೆ ಅಭಿಷೇಕ ಮಾಡುವುದು ಹೇಗೆ? ಆ ಅಮೃತವನ್ನು ಪಡೆಯುವ ಸುಲಭ ಉಪಾಯ ನಿನಗೆ ಗೊತ್ತಿದ್ದರೆ ತಿಳಿಸು" ಎಂದು ಕೇಳಿದನು.

ಭರದ್ವಾಜನ ಈ ಮಾತನ್ನು ಕೇಳಿ ಆ ರಕ್ಕಸನು ಉತ್ಸಾಹದಿಂದ ನುಡಿದ, "ಮುನಿವರ್ಯ, ಈ ಜಗತ್ತಿನಲ್ಲಿ ಮೂರು ಪದಾರ್ಥಗಳು ಅಮೃತ ಎನಿಸುವವು. ಹಸುವಿನ ತುಪ್ಪ, ಸೋಮಲತೆಯ ರಸ ಮತ್ತು ಗೌತಮೀನದಿಯ ನೀರು, ಈ ಮೂರು ಶ್ರೇಷ್ಠ ಅಮೃತ ಎನಿಸಿವೆ. ನೀನು ಈಗ ಇಲ್ಲಿ ಸುಲಭ ಲಭ್ಯವಾದ ಗೌತಮೀನದಿಯ ನೀರಿನಿಂದ ನನಗೆ ಅಭಿಷೇಕ ಮಾಡು ಎಂದು ಕೇಳಿಕೊಂಡನು. ಇದನ್ನು ಕೇಳಿ ಭರದ್ವಾಜ ಮುನಿಗೆ ಅತ್ಯಂತ ಸಂತೋಷವಾಯಿತು. ಕೂಡಲೇ ಅವನು ಗೌತಮೀ ಎಂದು ಪ್ರಸಿದ್ಧವಾದ ಗಂಗಾ ನದಿಯ ಅಮೃತ ಜಲವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಆ ಹವ್ಯಘ್ನ ರಾಕ್ಷಸನಿಗೆ

ಅಭಿಷೇಕ ಮಾಡಿದನು. ಮತ್ತು ತಾನು ಮಾಡುತ್ತಿರುವ ಯಜ್ಞದ ಯೂಪಸ್ತಂಬ ಯಜ್ಞ ಪಶು ಮತ್ತು ಋತ್ವಿಜರು, ಯಜ್ಞಮಂಟಪ ಮೊದಲಾದ ಯಜ್ಞಮಂಟಪಗಳನ್ನು ಗೌತಮೀಜಲದಿಂದ ಪ್ರೋಕ್ಷಿಸಿದನು. ಅದರಿಂದ ಅವೆಲ್ಲವೂ ಪೂತವಾದವು ಮತ್ತು ಮೊದಲು ಕಡುಕಪ್ಪು ಬಣ್ಣದವನಾಗಿದ್ದ ಆ ಹವ್ಯಘ್ನ ರಾಕ್ಷಸನು ಕೂಡ ಗೌತಮೀಜಲದ ಅಮೃತಾಭಿಷೇಕದ ಫಲದಿಂದ ಪರಿಶುದ್ಧನಾಗಿ ಬಿಳಿಬಣ್ಣದಿಂದ ಶಶಿಶುಭ್ರನಾಗಿ ಶೋಭಿಸಿದ. ಅಂದಿನಿಂದ ಆ ತೀರ್ಥವು ಶುಕ್ಲತೀರ್ಥ ಎಂದು ಪ್ರಸಿದ್ಧವಾಯಿತು. ಈ ಶುಕ್ಲತೀರ್ಥವು ಮಾನವರಿಗೆ ಸ್ವರ್ಗವನ್ನು ಪ್ರವೇಶಮಾಡಲು ತೆರೆದಿಟ್ಟ ಬಾಗಿಲದಂತೆ ಇದೆ.

## ಚಕ್ರತೀರ್ಥ

**ಬ್ರಹ್ಮ:-** "ನಾರದ, ಗೌತಮೀತೀರದಲ್ಲಿರುವ ಚಕ್ರತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ವಶಿಷ್ಠನೇ ಮೊದಲಾದ ಸಪ್ತಋಷಿಗಳು ಗೌತಮೀ ತೀರದಲ್ಲಿ ಒಂದು ಮಹಾಯಜ್ಞವನ್ನು ಕೈಕೊಂಡಿದ್ದರು. ಆ ಯಜ್ಞಕ್ಕೆ ಭೀಕರ ಆಕಾರದ ಅನೇಕ ದುಷ್ಟರಾದ ದಾನವರು ಬಂದು ವಿಘ್ನಗಳನ್ನು ಮಾಡತೊಡಗಿದರು. ಆಗ ಮುನಿಗಳು ನನ್ನ ಬಳಿಗೆ ಬಂದು ಬೇಡಿಕೊಂಡರು. ಆಗ ನಾನು ನನ್ನ ಇಚ್ಛೆಯಿಂದ ಓರ್ವ ಸುಂದರಿಯನ್ನು ನಿರ್ಮಿಸಿ ಋಷಿಗಳ ಯಜ್ಞಕ್ಕಾಗಿ ಕಳುಹಿಸಿಕೊಟ್ಟೆ. ಅವಳ ಹೆಸರು ಮಾಯಾ-ಕಪ್ಪು ಮಿಶ್ರಿತವಾದ ಕೆಂಪುಬಣ್ಣದ ಅವಳಿಗೆ ಮುಕ್ತಕೇಶಿ ಎಂದು ಹೆಸರು ಇದ್ದಿತು. ಅವಳ ಬಲದಿಂದ ಋಷಿಗಳೆಲ್ಲರೂ ಮತ್ತೆ ಗೌತಮೀತೀರಕ್ಕೆ ಬಂದು ಪುನಃ ಯಜ್ಞ ಪ್ರಾರಂಭಿಸಿದರು. ಆ ಯಜ್ಞವನ್ನು ಹಾಳು ಮಾಡಲು ಎಲ್ಲ ರಾಕ್ಷಸರು ಏರಿ ಬಂದರು. ಆ ರಕ್ಕಸರ ಮಧ್ಯದಲ್ಲಿ ಶಂಬಕಾಸುರ ಮಹಾವೀರ, ಕ್ರೂರ, ಶೂರ. ದೈತ್ಯರನ್ನು ನಾಶಮಾಡಲು ಮುಕ್ತಕೇಶಿಯು ಅವರ ಮೇಲೆ ಪ್ರಯೋಗಿಸಿದ ಮಾಯಾ ಶಕ್ತಿಯನ್ನು ಶಂಭಾಸುರ ನುಂಗಿ ನೀರು ಕುಡಿದ. ಅವನ ಈ ಘೋರಕರ್ಮವನ್ನು ಕಂಡು ಹೆದರಿ ಹೌಹಾರಿದ ಋಷಿಗಳು ಸಾಕ್ಷಾತ್ ವಿಷ್ಣುವಿಗೆ ಶರಣುಹೋದರು.

ಆಗ ಆ ಭಗವಂತನು ಮುನಿಗಳ ಯಜ್ಞ ರಕ್ಷಣೆಗಾಗಿ ತನ್ನ ಕೈಯಲ್ಲಿರುವ ಸುದರ್ಶನ ಚಕ್ರವನ್ನು ಕಳುಹಿಸಿಕೊಟ್ಟ. ಆ ಸುದರ್ಶನ ಚಕ್ರವು ಅರೇಕ್ಷಣದಲ್ಲಿ ಮುನಿಯಜ್ಞಕ್ಕೆ ವಿಘ್ನಕಾರಿಗಳಾದ ಶಂಬಕಾಸುರನನ್ನೂ ಅವನ ಹಿಂಬಾಲಕರಾದ ಹುಂಭ, ಶುಂಭ ದೈತ್ಯಾಧಮರನ್ನೂ ಕಡಿದು ಕತ್ತರಿಸಿ ಹಾಕಿತು. ಅನಂತರ ಆ ಸಪ್ತಋಷಿಗಳು ತಾವು ಪ್ರಾರಂಭಿಸಿದ ಮಹಾಯಜ್ಞವನ್ನು ಪೂರ್ಣಗೊಳಿಸಿದರು. ದೈತ್ಯರ ರಕ್ತವು ಮೆತ್ತಿದ ಆ ಚಕ್ರವನ್ನು ಗೌತಮೀ ಜಲದಲ್ಲಿ ತೊಳೆದರು. ಅಂದಿನಿಂದ ಆ ತೀರ್ಥವು ಚಕ್ರತೀರ್ಥ ಎಂದು ಖ್ಯಾತಿಪಡೆಯಿತು. ಅಲ್ಲಿ ಸ್ನಾನ, ದಾನ ಮಾಡಿದರೆ ಸತ್ರಯಾಗದ ಪುಣ್ಯಫಲವು ತಪ್ಪದೇ ಲಭಿಸುವುದು.

## ವಾಣೀ ಸಂಗಮತೀರ್ಥ

**ಬ್ರಹ್ಮ:-** ಈ ಗೌತಮೀ ತೀರದಲ್ಲಿ ವಾಣೀಸಂಗಮ ಎಂಬ ತೀರ್ಥ ಇದೆ. ಅದರ ಹಿಂದೆ ಒಂದು ವಿಚಿತ್ರ ಇತಿಹಾಸ ಇದೆ. ಪೂರ್ವಕಾಲದಲ್ಲಿ ಬ್ರಹ್ಮ, ವಿಷ್ಣುಗಳಲ್ಲಿ ನಾನು ಶ್ರೇಷ್ಠ ತಾನು ಶ್ರೇಷ್ಠ ಎಂಬ ವಾದವಿವಾದ ಉಂಟಾಯಿತು. ಆಗ ಅವರಿಬ್ಬರ ನಟ್ಟ ನಡುವೆ

ಮಹಾದೇವನು ಜ್ಯೋತಿರ್ಮಯವಾದ ಲಿಂಗರೂಪದಿಂದ ಆವಿರ್ಭವಿಸಿದನು. ಮತ್ತು ನಾನು ಹಾಗೂ ವಿಷ್ಣು ಇಬ್ಬರನ್ನು ಸಂಬೋಧಿಸಿ ಮಹಾದೇವನ ವಾಣಿಯು ಹೊರಟಿತು. ''ನೀವಿಬ್ಬರೂ ಕಲಹ ಮಾಡಬೇಡಿರಿ. ಇಲ್ಲಿ ಉದ್ಭೂತವಾದ ಶಿವಲಿಂಗದ ಕೊನೆಯನ್ನು ಯಾವನು ನೋಡುವನು ಅವನೇ ಶ್ರೇಷ್ಠ.''

ಆಗ ಚತುರ್ಮುಖನಾದ ನಾನು ಲಿಂಗದ ಮೇಲ್ಭಾಗವನ್ನು ನೋಡಲು ಹೊರಟೆ. ಹರಿಯು ಕೆಳಭಾಗವನ್ನು ನೋಡಲು ಹೊರಟನು. ಆ ಶಿವಲಿಂಗದ ಕೊನೆಯನ್ನು ನಾವಿಬ್ಬರೂ ಕಾಣಲಿಲ್ಲ. ಇಬ್ಬರೂ ನಮ್ಮ ಪ್ರಯತ್ನದಲ್ಲಿ ವಿಫಲರಾಗಿ ಮರಳಿ ಬಂದೆವು. ಆಗ ನನ್ನ ತಲೆಯಲ್ಲಿ ಒಂದು ದುರ್ವಿಚಾರವು ಹೊಳೆಯಿತು. ''ಈಗ ನಾನು ಶಿವಲಿಂಗದ ಕೊನೆಯನ್ನು ಕಂಡುಬಂದಿದ್ದೇನೆ ಎಂದು ಸುಳ್ಳು ಹೇಳಿದರೆ ವಿಷ್ಣುವಿಗಿಂತ ನಾನೇ ಶ್ರೇಷ್ಠ ಎಂದು ನಿರ್ಣಯವಾಗುವುದು. ಆದರೆ, ಇಂಥ ಘೋರವಾದ ಸುಳ್ಳನ್ನು ಯಾವ ಮುಖದಿಂದ ಹೇಳಲಿ! ಈಗ ನನಗೆ ಇದ್ದ ನಾಲ್ಕು ಮುಖಗಳು ಕೂಡ ಸತ್ಯವಾದಿಯಾಗಿರುತ್ತವೆ. ಯಥಾರ್ಥವಾದಿಯಾದ ಈ ಚತುರ್ಮುಖಗಳಿಂದ ನಾನು ಸುಳ್ಳನ್ನು ಹೇಗೆ ಹೇಳುವುದು! ಎಲ್ಲ ಪಾಪಗಳಲ್ಲಿ ಅಸತ್ಯವಚನವು ಮಹಾಪಾಪ ಎಂದು ಹೇಳಲ್ಪಟ್ಟಿದೆ. ಆದುದರಿಂದ ನನಗೆ ಇದ್ದ ಪರಮಪವಿತ್ರನಾದ ಈ ಚತುರ್ಮುಖಗಳಿಂದ ಸುಳ್ಳನ್ನು ಸರ್ವಥಾ ಹೇಳಲಾರೆ, ಅದಕ್ಕಾಗಿ ಈ ಸುಳ್ಳನ್ನು ಹೇಳುವ ಉದ್ದೇಶದಿಂದಲೇ ಹೊಸದಾಗಿ ಒಂದು ರಾಸಭ ಮುಖವನ್ನು ನಿರ್ಮಿಸಿಕೊಂಡು ಅದರಿಂದ ಸುಳ್ಳನ್ನು ಹೇಳುವೆನು'' ಎಂದು ನಿಶ್ಚಯಿಸಿದೆ. ಅನಂತರ ಪಿತಾಮಹನಾದ ನಾನು ಶಿವಲಿಂಗ ಇದ್ದಲ್ಲಿಗೆ ಬಂದೆ. ಅಲ್ಲಿಯೇ ಕುಳಿತಿದ್ದ ನಾರಾಯಣ, ಅವನನ್ನು ಕುರಿತು ''ಜಗತ್ಪ್ರಭುವಾದ ಜನಾರ್ದನ, ನಾನು ಶಿವಲಿಂಗದ ಕೊನೆ ಯನ್ನು ಕಂಡಿದ್ದೇನೆ. ಆದುದರಿಂದ ನಾನೇ ನಿನಗಿಂತ ಶ್ರೇಷ್ಠ.'' ಎಂದು ಧೈರ್ಯವಾಗಿ ನುಡಿದೆ.

ಹೀಗೆ ನನ್ನ ಪಂಚಮ ಮುಖವು ಅಸತ್ಯವನ್ನು ನುಡಿಯುತ್ತಲಿರುವಾಗಲೇ, ಮಹಾವಿಷ್ಣುವು, ಮಹಾದೇವರು ಒಮ್ಮೆಲೇ ಏಕೀಭೂತರಾಗಿ ಸೂರ್ಯಚಂದ್ರರಂತೆ ಅಲ್ಲಿ ಕಂಗೊಳಿಸಿದರು. ನನಗೆ ಹರಿಹರರ ಈ ಐಕ್ಯವನ್ನು ಕಂಡು ಆಶ್ಚರ್ಯದ ಆಘಾತವೇ ಆಯಿತು. ನಾನು ಹೆದರಿ ಹೌಹಾರಿ ಹೋದೆ. ಆಗ ಜಗದೊಡೆಯರಾದ ಆ ಶಿವಕೇಶವರು ಕಡುಕೋಪದಿಂದ ನನ್ನ ಐದನೇ ಮುಖದಿಂದ ಹೊರಬಂದ ವಾಣಿಗೆ ಹೇಳಿದನು. ''ದುಷ್ಟಳಾದ ವಾಗ್ದೇವಿಯೇ, ನೀನು ಬ್ರಹ್ಮನ ಮಾತಿನಲ್ಲಿ ನೆಲಸಿ ಸುಳ್ಳು ಹೇಳಿದೆ. ಆದುದರಿಂದ ನೀನು ತಗ್ಗು ಇದ್ದಲ್ಲಿ ಹರಿದು ಹೋಗುವ ನದಿಯಾಗು. ಅಸತ್ಯಕ್ಕಿಂತ ಹೆಚ್ಚಿನ ಪಾಪವು ಬೇರೆಯಿಲ್ಲ'' ಎಂದು ಶಾಪಕೊಟ್ಟರು.''

ಶಿವಕೇಶವರ ಈ ಶಾಪಾಕ್ಷರಗಳಿಂದ ಖಿನ್ನವಿಷಣ್ಣಳಾದ ಆ ವಾಗ್ದೇವಿಯ ತ್ರಿಲೋಚನ, ಅರವಿಂದಲೋಚನರನ್ನು ಭಕ್ತಿಯಿಂದ ನಮಸ್ಕರಿಸಿ ತನ್ನ ಶಾಪದ ಮುಕ್ತಿಯಾಗಬೇಕೆಂದು ಕೇಳಿದಳು. ಮತ್ತು ಆ ಇಬ್ಬರು ದೇವೋತ್ತಮರನ್ನು ಶ್ರದ್ಧೆಯಿಂದ ಸ್ತುತಿಸಿ ಪ್ರಾರ್ಥಿಸಿ ಕೊಂಡಳು. ವಾಗ್ದೇವಿಯ ಈ ಸ್ತುತಿ, ನಲೆ, ತಲೆಗಳಿಂದ ಸುಪ್ರೀತರಾದ ಆ ಹರಿಹರರು. ಆ ವಾಗ್ದೇವಿಯನ್ನು ಕುರಿತು, ''ದೇವಿ, ಮೊದಲಿನಂತೆ ನೀನು ಲೋಕಪಾವನಿಯಾದ ಗಂಗೆಯೊಡನೆ ಸಂಗಮಿಸಿದರೆ ನಿನ್ನ ದೇಹವು ಪಾವನವಾಗುವುದು'' ಎಂದು ಹೇಳಿದರು. ಆ

ದೇವೋತ್ತಮರ ಆದೇಶದಂತೆ ನದೀರೂಪಳಾದ ವಾಗ್ದೇವಿಯು ಗಂಗೆಯಲ್ಲಿಯೂ, ಗೌತಮಿಯಲ್ಲಿ ಸೇರಿದಳು. ಗೌತಮಿ ನದಿ ಸೇರಿದ ವಾಗ್ದೇವಿಯು ವಾಣೀನದಿಯೆಂದೂ, ಗಂಗೆಯಲ್ಲಿ ಸೇರಿದ ವಾಗ್ದೇವಿಗೆ ಸರಸ್ವತೀ ನದಿಯೆಂದೂ ಪ್ರಸಿದ್ಧಿ ಆಯಿತು. ವಾಗ್ದೇವಿಯು ಮಹಾದೇವನನ್ನು ಸ್ತುತಿಸಿ ಶಾಪ ನಿವೃತ್ತಿಯನ್ನು ಹೊಂದಿದ್ದರಿಂದ ಇದು ವಾಣೀಸಂಗಮ ತೀರ್ಥ ಎಂದು ಜಗತ್‌ಪೂಜ್ಯವಾಯಿತು. ಬ್ರಹ್ಮನು ಆ ತೀರ್ಥದಲ್ಲಿ ತನ್ನ ಅಸತ್ಯ ವಚನದ ದೋಷವನ್ನು ಕಳೆದು ತನ್ನ ಸ್ವಸ್ಥಾನಕ್ಕೆ ಮರಳಿದನು.

## ವಿಷ್ಣುತೀರ್ಥ

**ಬ್ರಹ್ಮ:-** ನಾರದಾ, ಗೌತಮೀ ನದಿಯ ದಂಡೆಯಲ್ಲಿರುವ ವಿಷ್ಣು ತೀರ್ಥದ ಮಹಾತ್ಮೆಯನ್ನು ಹೇಳುತ್ತೇನೆ ಕೇಳು.

ಬಹುಕಾಲದ ಹಿಂದೆ ಮುದ್ಗಲ ಎಂಬ ಮಹಾಮುನಿಯು ತನ್ನ ಭಾಗೀರಥಿ ದೇವಿ ಎಂಬ ಮಡದಿಯೊಡನೆ ಗಂಗಾತೀರದಲ್ಲಿ ವಾಸ ಮಾಡಿದ್ದನು. ಆ ಮುದ್ಗಲ ಮುನಿಗೆ ಮೌದ್ಗಲ್ಯ ಎಂಬ ಪರಮವಿಷ್ಣು ಭಕ್ತನಾದ ಪುತ್ರನು ಇದ್ದನು. ಆ ಮೌದ್ಗಲ್ಯನ ಹೆಂಡತಿ ಜಾಬಾಲಾದೇವಿಯು ಪರಮ ಪತಿವ್ರತೆಯಾಗಿದ್ದಳು. ಋಷಿ ಕುಮಾರನಾದ ಆ ಮೌದ್ಗಲ್ಯ ಮುನಿಯು ಪ್ರತಿದಿನವೂ ತಪ್ಪದೇ ಗಂಗಾಸ್ನಾನವನ್ನು ಮಾಡುತ್ತಿದ್ದನು. ಸ್ನಾನಮಾಡಿ ಗುರುಗಳ ಅಪ್ಪಣೆಯಂತೆ ದರ್ಭಮೃತ್ತಿಕೆ ಹಾಗೂ ಶಮೀಪುಷ್ಪಗಳಿಂದ ಶ್ರೀಹರಿಯನ್ನು ತನ್ನ ಹೃದಯ ಕಮಲದಲ್ಲಿಯೇ ಆವಾಹನ ಮಾಡುತ್ತಿದ್ದ ಮತ್ತು ಭಕ್ತಿಯಿಂದ, ಆ ಜಗತ್ ಪ್ರಭುವಾದ ಶ್ರೀಹರಿಯನ್ನು ಆಹ್ವಾನ ಮಾಡುತ್ತಿದ್ದ. ಮೌದ್ಗಲ್ಯ ಆಹ್ವಾನ ಮಾಡಿದ ಕೂಡಲೇ ಲಕ್ಷ್ಮೀಪತಿಯಾದ ನಾರಾಯಣನು ಶಂಖ, ಚಕ್ರ, ಗದಾ, ಪದ್ಮಧಾರಿಯಾಗಿ ಗರುಡನನ್ನು ಏರಿಕೊಂಡು ಅಲ್ಲಿಗೇ ಬರುತ್ತಿದ್ದ. ಆಗ ಮೌದ್ಗಲ್ಯನು ಪರಮಾನಂದಭರಿತನಾಗಿ ಆ ಪರಮಾತ್ಮನನ್ನು ಅತ್ಯಂತ ಭಕ್ತಿಯಿಂದ ಅರ್ಚಿಸುತ್ತಿದ್ದ. ಮೌದ್ಗಲ್ಯನ ಷೋಡಶೋಪಚಾರಗಳೆಲ್ಲವೂ ಮುಗಿದ ಬಳಿಕ ಮಹಾ ವಿಷ್ಣುವು ಸುಪ್ರಸನ್ನನಾಗಿ ಮೌದ್ಗಲ್ಯನಿಗೆ ಅನೇಕ ಆಶ್ಚರ್ಯಕರವಾದ ತತ್ವಗಳನ್ನು ಕಥೆಗಳನ್ನು ಪ್ರಮೇಯಗಳನ್ನು ಹೇಳುತ್ತಿದ್ದ. ಪೂಜೆ ಮಧ್ಯಾಹ್ನದವರೆಗೂ ನಡೆಯುತ್ತಿತ್ತು. ಅವರಿಬ್ಬರ ಈ ಸಂಭಾಷಣೆ. ಅನಂತರ ಶ್ರೀಹರಿಯು ''ವತ್ಸ, ಹೊತ್ತು ನೆತ್ತಿಗೆ ಏರಿದೆ, ನೀನು ತುಂಬಾ ಆಯಾಸಗೊಂಡಿರುವೆ. ನೀನು ಮನೆಗೆ ಹೋಗು'' ಎಂದು ಹೇಳಿ ಮನೆಗೆ ಕಳುಹಿಸುತ್ತಿದ್ದ. ಮೌದ್ಗಲ್ಯನು ವಿಷ್ಣುವಿನ ಸಾಕ್ಷಾತ್ ದರ್ಶನವನ್ನು ಮಾಡಿಕೊಂಡು ಅವನು ಹೇಳಿದ ಅದ್ಭುತವಾದ ಕಥಾಮೃತವನ್ನು ಪಾನಮಾಡಿ ಮನೆಗೆ ಬರುತ್ತಿದ್ದ.

ಬರುವಾಗ ಏನಾದರೂ ಆಹಾರ ವಸ್ತುವನ್ನು ಸಂಪಾದಿಸಿಕೊಂಡು ಮನೆಗೆ ಬಂದು ತನ್ನ ಪತ್ನಿ ಜಾಬಾಲಾದೇವೀ ಕೈಯಲ್ಲಿ ಕೊಡುತ್ತಿದ್ದ. ಪರಮ ಪತಿವ್ರತೆಯಾದ ಆ ಮೌದ್ಗಲ್ಯನ ಮಡದಿಯು ತನ್ನ ಪತಿಯು ತಂದುಕೊಟ್ಟ ಹಣ್ಣು ಹಂಪಲ, ತರಕಾರಿ, ಗಡ್ಡೆಗೆಣಸುಗಳನ್ನೆಲ್ಲ ತೊಳೆದು, ಶುಚಿಗೊಳಿಸಿ ಸಂಸ್ಕರಿಸಿ ಪಾಕಮಾಡಿ ಬಂದ ಅತಿಥಿಗಳಿಗೂ ತನ್ನ ಪತಿ ಪುತ್ರರಿಗೂ ಊಣ ಬಡಿಸುತ್ತಿದ್ದಳು. ಅನಂತರ ತಾನು ಶ್ರೀಹರಿ ಪ್ರಸಾದ ಎಂದು ಅದನ್ನು ಊಟಮಾಡುತ್ತಿದ್ದಳು. ಎಲ್ಲರ ಊಟ, ವಿಶ್ರಾಂತಿ ಹಾಗೂ

ದೈನಂದಿನ ಕಾರ್ಯಕ್ರಮಗಳು ಮುಗಿದ ಬಳಿಕ, ರಾತ್ರಿಕಾಲದಲ್ಲಿ ಮೌದ್ಗಲ್ಯನು ತನ್ನ ಪರಿವಾರದವರೆಲ್ಲರಿಗೂ, ಅಂದು ತನ್ನ ಪೂಜೆಯ ನಂತರ ಶ್ರೀಹರಿಯು ತನಗೆ ಹೇಳಿದ ಕೌತುಕಕಾರಕವಾದ ಕಥೆ, ತತ್ವ ಪ್ರಮೇಯಗಳನ್ನೆಲ್ಲಾ ರಸವತ್ತಾಗಿ ಹೇಳುತ್ತಿದ್ದ.

ಹೀಗೆ ಎಷ್ಟೊ ದಿನ ಕಳೆಯಿತು. ಒಂದು ದಿನ ರಾತ್ರಿ ಏಕಾಂತದಲ್ಲಿ ಜಾಬಾಲೆಯು ತನ್ನ ಮನದನ್ನನಾದ ಮೌದ್ಗಲ್ಯನಿಗೆ ಪ್ರಶ್ನೆ ಮಾಡಿದಳು.

''ಸ್ವಾಮಿ, ನಿಜವಾಗಿಯೂ ನೀವು ಪುಣ್ಯವಂತರು. ಪ್ರತಿದಿನವೂ ದೇವದೇವೋತ್ತಮರಾದ ಆ ಪರಬ್ರಹ್ಮನನ್ನು ಕಣ್ಣಿನಿಂದ ಕಾಣುತ್ತೀರಿ, ಪ್ರೀತಿಯಿಂದ ಅವನೊಡನೆ ಮಾತನಾಡುತ್ತೀರಿ; ಇಷ್ಟಾದರೂ ನಮಗೆ ಈ ದಾರಿದ್ರ್ಯದ ಶನಿ ಏಕೆ ತಪ್ಪಲೊಲ್ಲದು? ಪರಾತ್ಪರ ಪುರುಷೋತ್ತಮನಾದ ಆ ಭಗವಂತನನ್ನು ಒಮ್ಮೆ ಭಕ್ತಿಯಿಂದ ಸ್ಮರಣ ಮಾಡಿದರೂ ಸಾಕು. ಮುಪ್ಪು ತಪ್ಪಿಹೋಗುವುದೇ? ಮರಣ ದೂರ ಹೋಗುವುದೇ? ದಾರಿದ್ರ್ಯ ಕಳೆದು ಹೋಗುವುದು. ಅಂದ ಬಳಿಕ ಆ ಪರದೇವತೆಯನ್ನು ನೀವು ನಿತ್ಯವೂ ಸಂದರ್ಶನವನ್ನು ಮಾಡಿದ ಬಳಿಕ ನಮ್ಮ ಈ ದಾರಿದ್ರ್ಯವು ಅಕ್ಷತವಾಗಿ ಉಳಿದುದು ಏಕೆ? ಅವನಲ್ಲೇ ಸಾಕ್ಷಾತ್ ಆಗಿ ಕೇಳಿರಿ'' ಎಂದು ಖಚಿತೋಚಿತವಾಗಿ ನುಡಿದಳು.

ಮಡದಿಯ ಮಾತಿಗೆ ಮೌದ್ಗಲ್ಯನು ಸಮ್ಮತಿಸಿದ, ಮರುದಿನ ಗಂಗಾ ತೀರಕ್ಕೆ ಧಾವಿಸಿದ. ಆ ಜಾಹ್ನವಿಯ ಜಲದಲ್ಲಿ ಮಿಂದು, ನಿಂದ, ಯಥಾ ಪ್ರಕಾರ ಭಗವಂತನನ್ನು ಹೃದಯ ಕಮಲದಲ್ಲಿ ಆಹ್ವಾನಿಸಿದ. ಭಕ್ತಿಯಿಂದ ಆಹ್ವಾನಿಸಿದ ಕೂಡಲೇ ಸ್ವಾಮಿ ಶ್ರೀಹರಿ ಕಣ್ಣೆದುರು ಪ್ರತ್ಯಕ್ಷನಾಗಿ ಬಂದು ನಿಂತುಕೊಂಡ. ಅವನಿಗೆ ಅರ್ಘ್ಯಪಾದ್ಯಾದಿಗಳನ್ನು ಇಟ್ಟು, ತುಳಸಿ ಪುಷ್ಪಗಳಿಂದ ಮೌದ್ಗಲ್ಯನು ಸಹಸ್ರಾರ್ಚನೆ ಮಾಡಿದ. ಅನಂತರ ಮೌದ್ಗಲ್ಯನು ಭಕ್ತಿಯಿಂದ ಕೈ ಮುಗಿದು ಎದ್ದು ನಿಂತು ಕೇಳಿಕೊಂಡ. ''ಜಗದೀಶ್ವರ ನಿನ್ನ ಸ್ಮರಣ ಮಾತ್ರದಿಂದಲೇ ಜನರ ದುಃಖ ದಾರಿದ್ರ್ಯ ದುಷ್ಕರ್ಮ ಎಲ್ಲವೂ ದೂರವಾಗುತ್ತವೆ. ಆದರೆ ನಮಗೆ ಪ್ರತಿ ದಿನವೂ ನಿನ್ನ ದರ್ಶನವಾದರೂ ನನ್ನ ದಟ್ಟ ದಾರಿದ್ರ್ಯವು ಮಾತ್ರ ಗಟ್ಟಿಯಾಗಿ ಹಾಗೇ ಹೇಗೆ ಉಳಿದಿದೆ? ನನ್ನ ಕಷ್ಟಕಾರ್ಪಣ್ಯಗಳು ಇನ್ನುವರೆಗೂ ಕಡಿಮೆಯಾಗಲಿಲ್ಲ. ಇದಕ್ಕೆ ಕಾರಣವೇನು? ಎಂದು ಪ್ರಶ್ನೆಮಾಡಿದನು.

ಆಗ ಆ ಲಕ್ಷ್ಮೀಪತಿಯು ನಸು ನಕ್ಕು ನುಡಿದನು. ''ಮೌದ್ಗಲ್ಯ ಈ ಲೋಕದಲ್ಲಿ ಮಾನವನು ತಾನು ಮಾಡಿದ ಕರ್ಮದಿಂದಲೇ ಅದಕ್ಕೆ ಅನುಗುಣವಾದ ಸುಖವನ್ನು ದುಃಖವನ್ನು ಅನುಭವಿಸುವನು. ಪೂರ್ವದಲ್ಲಿ ದಾನ ಮಾಡದಿದ್ದರೆ ಅವನಿಗೆ ಈಗ ಭೋಗಭಾಗ್ಯಗಳು ಒದಗಿ ಬರುವುದಿಲ್ಲ. ದರ್ಭೆ, ಮೃತ್ತಿಕೆ, ಮಂತ್ರ ತಪಸ್ಸಿನಿಂದ ಶರೀರ ಶುದ್ಧಿ ಮನಃಶುದ್ಧಿಯಾಗುವುದು. ಅಷ್ಟರಿಂದಲೇ ಮನುಷ್ಯನಿಗೆ ಸುಖೋಪಭೋಗವು ಲಭ್ಯವಾಗುವುದಿಲ್ಲ. ಅದಕ್ಕಾಗಿ ದಾನ ಧರ್ಮವನ್ನು ಮಾಡಲೇಬೇಕು. ಆದುದರಿಂದ ನೀನು ಈ ಗೌತಮೀತೀರದಲ್ಲಿ ನನ್ನನ್ನು ಉದ್ದೇಶಿಸಿ ಏನಾದರೂ ಬ್ರಾಹ್ಮಣೋತ್ತಮರಿಗೆ ದಾನಮಾಡು ಅಥವಾ ನನಗೆ ಸಾಕ್ಷಾತ್ತಾಗಿ ಯಾವುದಾದರೂ ಆಹಾರ ಪದಾರ್ಥವನ್ನು ತಂದು ನಿವೇದಿಸು ನೀನು ನನಗೆ ಅತ್ಯಲ್ಪವನ್ನು ದಾನವನ್ನು ಮಾಡಿದರೂ ನಾನೂ ಅದನ್ನೇ ಅನಂತಪಟ್ಟು ಭೋಗ ಭಾಗ್ಯಗಳನ್ನು ಕರುಣಿಸುತ್ತೇನೆ'' ಎಂದು ಹೇಳಿದನು. ಪರಮಾತ್ಮನ ಈ ನುಡಿಯನ್ನು ಕೇಳಿ ಮೌದ್ಗಲನು ''ದೇವೇಶ್ವರ, ದಾನ ಮಾಡಲು ನನ್ನಲ್ಲಿ ಈಗ ಯಾವ

ವಸ್ತುವೂ ಇಲ್ಲ. ನನ್ನಲ್ಲಿದ್ದ ದೇಹ, ಇಂದ್ರಿಯ, ಆತ್ಮ, ಮನಸ್ಸು ಎಲ್ಲವನ್ನು ನಿನಗೆ ಅರ್ಪಿಸಿದ್ದೇನೆ. ನಾನು ನಿನಗೆ ಬೇರೆ ಏನು ನೀಡಲಿ?'' ಎಂದು ಬಿನ್ನವಿಸಿ ಬೆಸಗೊಂಡನು.

ಆಗ ಆ ಕ್ಷಣದಲ್ಲಿಯೇ ಆ ಅಧೋಕ್ಷಜನು ತನ್ನ ವಾಹನನಾದ ಗರುಡನನ್ನು ಕರೆದು ಮೌದ್ಗಲ್ಯನಿಗೆ ಒಂದು ಧಾನ್ಯದ ಕಾಳನ್ನು ತಂದು ಕೊಡಲು ಹೇಳಿದ. ಕೂಡಲೇ ಗರುಡನು ಮೌದ್ಗಲ್ಯನಿಗೆ ಒಂದು ಧಾನ್ಯದ ಕಾಳನ್ನು ತಂದುಕೊಟ್ಟನು. ಮೌದ್ಗಲ್ಯನು ಆ ಧಾನ್ಯವನ್ನು ಕೈಯಲ್ಲಿ ಹಿಡಿದು ಭಗವಂತನಿಗೆ ಭಕ್ತಿಯಿಂದ ಸಮರ್ಪಿಸಿ, ''ಶ್ರೀಹರಿ, ಪ್ರೀಯತಾಂ'' ಎಂದು ನುಡಿದು ನಿವೇದಿಸಿ ಕೈಮುಗಿದ. ಮೌದ್ಗಲ್ಯನಿಂದ ಒಂದು ಧಾನ್ಯಕಣವನ್ನು ಸ್ವೀಕರಿಸಿದ. ಶ್ರೀಹರಿಯು ಸದ್ಯ ಏವ ಸುಪ್ರೀತನಾಗಿ, ವಿಶ್ವಕರ್ಮನನ್ನು ಕರೆದು ಹೇಳಿದ. ''ವಿಶ್ವಕರ್ಮ, ಈ ಮೌದ್ಗಲ್ಯನಿಗೆ ಸಕಲ ವಿಧವಾದ ಭೋಗ ಭಾಗ್ಯಗಳನ್ನು ಕೂಡಲೇ ತಂದು ಕೊಡು. ಇವನಿಗೆ ಮಾತ್ರವಲ್ಲ. ಇವನ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಆದಿಯಾಗಿ ಏಳು ತಲೆಮಾರುಗಳ ವರೆಗೆ ಕುಳಿತು ಉಂಡರೂ ಸವೆಯದಂತಹ ಸಿರಿ ಸಂಪತ್ತನ್ನು ತಂದುಕೊಡು. ಎಲ್ಲ ವಿಧವಾದ ಭೋಗ ಭಾಗ್ಯಗಳನ್ನು ಇವನ ಮುಂದಿನ ಪೀಳಿಗೆಯವರು ಆನಂದ ದಿಂದ ಅನುಭವಿಸಲಿ ಅವರ ಮನೆಯಲ್ಲಿ ಗೋಧನ ಬಂಗಾರ, ಧನ, ಧಾನ್ಯ, ವಸ್ತ್ರ ಆಭರಣ ಮಾತ್ರವಲ್ಲದೆ ಅವರು ಬಯಸಿದ ಎಲ್ಲ ಭೋಗೋಪಭೋಗ ಸಾಮಗ್ರಿಗಳು ಅವರಿಗೆ ಸಮೃದ್ಧವಾಗಿ ದೊರಕುವಂತೆ ಮಾಡು. ಅವರ ಮನೆತನದಲ್ಲಿ ಮುಂದೆ ಎಂದೂ ಯಾರಿಗೂ ಬಡತನವು ಬಾರದಂತೆ ನೋಡಿಕೋ.''

ಪರಮಾತ್ಮನ ಅಪ್ಪಣೆಯಿಂದ ಆ ಮೌದ್ಗಲ್ಯನಿಗೆ ಸಕಲ ವಿಧವಾದ ಸುಖ ಸಂಪದಗಳು ಭಾಗ್ಯ ವೈಭವ ಸಮೃದ್ಧಿಗಳು ವಿಪುಲವಾಗಿ ಒದಗಿ ಬಂದವು. ಅವನ ಆಶ್ರಮದಲ್ಲಿ ಸಕಲೈಶ್ವರ್ಯಗಳು ತುಂಬಿ ತುಳುಕ ತೊಡಗಿದವು. ಹೀಗೆ ಆ ಮೌದ್ಗಲ್ಯ ಮುನಿಯು ಈ ಗೌತಮೀ ತೀರದಲ್ಲಿ ಮಿಂದು ಮಹಾವಿಷ್ಣುವನ್ನು ಮಹಾಭಕ್ತಿ ಭಾವಭರಿತನಾಗಿ ಅರ್ಚಿಸಿದ್ದರ ಫಲವಾಗಿ ಅವನಿಗೆ ಅಪರಂಪಾರ ಐಶ್ವರ್ಯವು ಸುಖ ಸಂಪದಗಳು ಸೌಭಾಗ್ಯ ಸಮೃದ್ಧಿಯೂ ಒದಗಿ ಬಂದವು. ಅವನು ತನ್ನ ತಾಯಿ ತಂದೆ ಮಕ್ಕಳು ಮೊಮಕ್ಕಳು ಬಂಧು ಬಾಂಧವರೊಂದಿಗೆ ಇಲ್ಲಿ ಬದುಕಿ ಇರುವವರೆಗೆ ಸಕಲ ವಿಧವಾದ ಭೋಗ ಭಾಗ್ಯವನ್ನು ಅನುಭವಿಸಿದ. ಅಂತ್ಯದಲ್ಲಿ ಮೋಕ್ಷವನ್ನು ಕೂಡ ಪಡೆದ. ಅಂದಿನಿಂದ ಆ ತೀರ್ಥವು ಮೌದ್ಗಲ್ಯ ತೀರ್ಥ, ವೈಷ್ಣವ ತೀರ್ಥ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯಿತು. ಆ ತೀರ್ಥದಲ್ಲಿ ಸ್ನಾನಮಾಡಿ ಶ್ರೀಹರಿಯನ್ನು ಪೂಜಿಸಿ ದಾನ ಧರ್ಮಗಳನ್ನು ಮಾಡಿದರೆ ಭಗವಂತನು ಸುಪ್ರೀತನಾಗಿ ಭೋಗ ಮೋಕ್ಷ ಎರಡನ್ನು ದಯಪಾಲಿಸುವರು.

## ಲಕ್ಷ್ಮೀ ತೀರ್ಥ

**ಬ್ರಹ್ಮ**:- ನಾರದ, ಈ ಗೌತಮೀ ತೀರದಲ್ಲಿ ಲಕ್ಷ್ಮೀ ತೀರ್ಥ ಎಂಬ ಹೆಸರಿನ ಒಂದು ತೀರ್ಥ ಇದೆ. ಅದು ಐಶ್ವರ್ಯಪ್ರದ ಅದರಿಂದ ಆ ತೀರ್ಥದಲ್ಲಿ ಸ್ನಾನ ದಾನಾದಿಗಳಿಂದ ದೈನ್ಯ ನೀಗುವುದು; ದಾರಿದ್ರ್ಯ ಹೋಗುವುದು. ಅದರ ಮಹಿಮೆ ಇಲ್ಲಿದೆ.

ಹಿಂದೆ ಒಮ್ಮೆ ಸಂಪತ್ತಿನ ದೇವತೆಯಾದ ಲಕ್ಷ್ಮೀಗೂ ದಾರಿದ್ರ್ಯ ದೇವತೆಗೂ ಹೊಡೆ ದಾಟ ಉಂಟಾಯಿತು. ನಾನು ಶ್ರೇಷ್ಠ ತಾನು ಶ್ರೇಷ್ಠ ಎಂದು ಇಬ್ಬರು ವಾದಿಸಿದರು. ತಮ್ಮ ತಮ್ಮ

ಮತವನ್ನೆ ಸಾಧಿಸಿದರು. ಅದಕ್ಕೆ ದಾರಿದ್ರ್ಯ ದೇವತೆಯು ಲಕ್ಷ್ಮೀಗೆ ಹೇಳಿದಳು. ''ಲಕ್ಷ್ಮೀ, ನಿನಗಿಂತ ನಾನೇ ಮೊದಲು ಜನಿಸಿದವಳು. ನಾನು ನಿನ್ನ ಅಕ್ಕ 'ಅಕ್ಕಾಬಾಯಿ' ಎಂದೇ ನನ್ನನ್ನು ಕರೆಯುವರು. ನಾನು ಇರುವಲ್ಲಿ ಕಾಮ, ಕ್ರೋಧ, ಲೋಭ, ಅಹಂಕಾರ ಅಸೂಯೆ ಮುಂತಾದ ದುರ್ ಗುಣಗಳು ಸುಳಿಯುವುದಿಲ್ಲ. ಮೋಕ್ಷವು ಕೂಡ ನನ್ನನ್ನೇ ಆಶ್ರಯಿಸುವುದು.''

ಅದನ್ನು ಕೇಳಿ ಲಕ್ಷ್ಮಿಯ ಅಧ್ಯಕತೆಯಿಂದ ನುಡಿದಳು. ''ಮಾನವನ ಕುಲ, ಶೀಲ, ಜೀವನ ಎಲ್ಲದಕ್ಕೂ ಬೆಲೆ ಬರುವುದು ನನ್ನಿಂದ. ಲಕ್ಷ್ಮೀ ಇಲ್ಲದ ಮನುಷ್ಯನು ಬದುಕಿದ್ದರೂ ಸತ್ತಂತೆ, ನನ್ನನ್ನು ಹೊಂದಿರುವ ಮಾನವನನ್ನು ಎಲ್ಲರೂ ಗೌರವಿಸುವರು. ಧನವಿಲ್ಲದವನು ಶಿವನಂತೆ ಸಾತ್ವಿಕನಾದರೂ ಅವನನ್ನು ಎಲ್ಲರೂ ತಿರಸ್ಕರಿಸುವರು. ಮನುಷ್ಯನು ದಾರಿದ್ರ್ಯದಿಂದ ದುಃಖ ದುರವಸ್ಥೆಗಳಿಗೆ ಈಡಾಗಿ 'ದೇಹಿ' ಎಂದು ಯಾಚನೆಗಾಗಿ ಕೈ ಒಡ್ಡಿದರೆ ಅವನಲ್ಲಿ ಇರುವ ಬುದ್ಧಿ, ಲಜ್ಜೆ, ಐಶ್ವರ್ಯ, ಕಾಂತಿ, ಕೀರ್ತಿ ಎಂಬ ಐದು ದೇವತೆಗಳು ಅವನನ್ನು ಬಿಟ್ಟು ಹೊರಟು ಹೋಗುವವು. ಮಾನವರಲ್ಲಿ ದಾರಿದ್ರ್ಯ ಎಂಬುದು ಮಹಾ ಪಾಪ. ದರಿದ್ರರನ್ನು ಯಾರೂ ಗೌರವಿಸುವುದಿಲ್ಲ. ಆದುದರಿಂದಲೇ ನಾನು ಎಷ್ಟೋ ಪಟ್ಟು ಶ್ರೇಷ್ಠಳಾಗಿದ್ದೇನೆ.''

ಲಕ್ಷ್ಮಿದೇವಿಯ ಈ ಅಹಂಕಾರದ ನುಡಿಯನ್ನು ಕೇಳಿ ಅಷ್ಟೆ. ಖಡಾಖಂಡಿತವಾಗಿ ಉತ್ತರ ಕೊಟ್ಟಳು ದಾರಿದ್ರ್ಯದೇವಿ.

''ಲಕ್ಷ್ಮೀ, ನಾನೇ ಶ್ರೇಷ್ಠಳೆಂದು ಹೇಳಿಕೊಳ್ಳಲು ನಿನಗೆ ಲಜ್ಜೆ ಎನಿಸುವುದಿಲ್ಲವೇ? ನೀನು ನಿರಂತರವೂ ನೆಲೆ ನಿಲ್ಲುವುದು ಪಾಪಿಗಳಲ್ಲಿ ಪಾಪಾತ್ಮಕರನ್ನು ಕಟ್ಟಿಕೊಂಡು ಪುಣ್ಯಾತ್ಮರನ್ನು ಬಿಟ್ಟುಕೊಟ್ಟಿರುವಿ ನಂಬಿದವರನ್ನು ಮೋಸಮಾಡುವ ಸ್ವಭಾವವುಳ್ಳ ನೀನು ಆತ್ಮಶ್ಲಾಘನೆಯನ್ನು ಹೇಗೆ ಮಾಡಿಕೊಳ್ಳುವೆ? ನಿನ್ನನ್ನು ಹೊಂದಬೇಕಾದರೆ ಭಯಂಕರ ಕಷ್ಟ ಪಡಬೇಕಾಗುವುದು. ನಿನ್ನನ್ನು ಅರಸಿಕೊಂಡು ಹೊರಟವರಿಗೆ ಸುಖವು ಬಿಸಿಲುಕುದುರೆ ನೀನು ಬಂದಕೂಡಲೇ ಜನರಿಗೆ ಮದ ಏರಿಬಿಡುವುದು. ಮದ್ಯಪಾನದಿಂದ ಉಂಟಾಗುವ ಮದಕ್ಕಿಂತಲೂ ಐಶ್ವರ್ಯಮದವು ದಾರುಣವಾದುದು. ನೀನು ಪ್ರಾಯಃ ನೀಚರಲ್ಲಿಯೇ ನೆಲಸಿರುವೆ. ನಾನು ಧರ್ಮಿಷ್ಠರಾದ ಸಜ್ಜನರಲ್ಲಿ ನಿತ್ಯಾಂತರವೂ ನೆಲಸಿರುತ್ತೇನೆ. ಶಿವಭಕ್ತರೂ, ವಿಷ್ಣುಭಕ್ತರೂ, ಮಹಾತ್ಮರೂ, ಧರ್ಮಾತ್ಮರೂ, ಗುಣವಂತರು, ಆಚಾರಶೀಲರೂ ಜ್ಞಾನಿಗಳೂ, ಶೂರರೂ, ಸಂತರೂ, ಸಾಧುಗಳು, ಮೊದಲಾದವರಲ್ಲಿ ನಾನು ನೆಲಸಿರುವೆನು. ಆದರೆ ನೀನು ಮಾತ್ರ ರಾಜಾಶ್ರಯದಲ್ಲಿ ಇದ್ದು ದುಷ್ಟರು, ಕ್ರೂರರು, ಚಾಡಿಕೋರರು, ಮೋಸಗಾರರು, ಜಿಪುಣರು, ಅನಾಚಾರಿಗಳು, ಕೃತಘ್ನರು, ಧರ್ಮದ್ರೋಹಿಗಳು, ದೇವ ದ್ವೇಷಿಗಳು, ಮುಂತಾದವರಲ್ಲಿ ನೆಲಸಿರುವೆ. ಆದುದರಿಂದ ನಿನ್ನಗಿಂತ ತಾನೇ ಶ್ರೇಷ್ಠಳು.''

ಹೀಗೆ ವಾದಿಸುತ್ತಾ ಆ ಲಕ್ಷ್ಮೀದೇವಿಯು ದರಿದ್ರಾದೇವಿಯು ಇಬ್ಬರು ನನ್ನ ಬಳಿಗೆ ಬಂದರು. ತಮ್ಮ ತಮ್ಮ ಪಕ್ಷವನ್ನು ಹೇಳಿದರು. ಅದನ್ನು ಕೇಳಿ ನಾನು ಅವರಿಗೆ ಹೇಳಿದೆ. ''ದೇವಿಯರೇ ನನಗಿಂತಲೂ ಭೂದೇವಿಯು ಹಿರಿಯಳು ಮತ್ತು ನನಗೂ ಪೂಜ್ಯಳು, ಆ ಭೂದೇವಿಗಿಂತ ಜಲದೇವತೆಯು ಹಿರಿಯಳು. ನೀವಿಬ್ಬರೂ ಆ ಜಲದೇವತೆಯನ್ನೇ ವಿಚಾರಿಸಿ. ಸ್ತ್ರೀಯರ ವಿಷಯದಲ್ಲಿ ಸ್ತ್ರೀಯರೇ ನಿರ್ಣಯವನ್ನು ಕೊಡುವರು. ಆ ಜಲ ದೇವತೆಯಲ್ಲಿಯೂ ನನ್ನ ಕಮಂಡಲದಿಂದ ಜನಿಸಿದ ಗಂಗೆಯು ಶ್ರೇಷ್ಠಳಾಗಿದ್ದಾಳೆ. ಆ

ಗಂಗೆಯಲ್ಲಿಯೂ ವೃದ್ಧ ಗಂಗೆಯೆಂದು ಶ್ರೇಷ್ಠಳಾದ ಗೌತಮಿನದಿಯು ಶ್ರೇಷ್ಠಳಾಗಿದ್ದಾಳೆ. ಅವಳನ್ನೇ ಈ ವಿಷಯದಲ್ಲಿ ನೀವಿಬ್ಬರೂ ಹೋಗಿ ನಿರ್ಣಯವನ್ನು ನೀಡಲು ಕೇಳಿಕೊಳ್ಳಿ.

ಆ ಶಾರದಾ ಪತಿಯ ಸಲಹೆಯಂತೆ ಲಕ್ಷ್ಮೀದೇವಿಯು ದರಿದ್ರಾದೇವಿಯು ಗೌತಮೀ ನದಿಗೆ ಬಂದು ಅವಳಲ್ಲಿ ಮಿಂದು ತಮ್ಮ ತಮ್ಮ ಪಕ್ಷವನ್ನು ಮಧ್ಯಸ್ಥರಂತೆ ಮಂಡಿಸಿದರು. ಆಗ ಅಲ್ಲಿ ಎಲ್ಲ ಲೋಕಪಾಲಕರೂ ಉಪಸ್ಥಿತರಿದ್ದರು. ಅವರೆಲ್ಲರ ಎದುರು ಗೌತಮೀ ನದಿಯು ಸಿರಿದೇವಿಯನ್ನು ಪ್ರಶಂಸಿಸುತ್ತಾ ದರಿದ್ರಾದೇವಿಗೆ ಹೇಳಿದರು.

''ದರಿದ್ರಾದೇವಿಗಿಂತ ಲಕ್ಷ್ಮಿಯೇ ಶ್ರೇಷ್ಠಳಾಗಿದ್ದಾಳೆ. ಬ್ರಹ್ಮ ತೇಜಸ್ಸು ತಪಃಶಕ್ತಿ, ಯಜ್ಞಫಲ, ಐಶ್ವರ್ಯ, ಜ್ಞಾನ, ಬುದ್ಧಿ, ಪ್ರತಿಭೆ, ಪ್ರಜ್ಞೆ, ಸರಸ್ವತಿ ಎಲ್ಲವೂ ಲಕ್ಷ್ಮೀ ಸ್ವರೂಪವೇ ಆಗಿವೆ. ಆದರಂತೆ ಭೋಗ, ಮೋಕ್ಷ, ಧೈರ್ಯ, ಕ್ಷಮೆ, ಸಿದ್ಧಿ ಸಂತೋಷ ಪುಷ್ಟಿ, ಶಾಂತಿ, ಭೂಮಿ ಇವೆಲ್ಲವು ಈ ಮಹಾಲಕ್ಷ್ಮೀಯ ಸ್ವರೂಪಭೂತವಾಗಿವೆ. ಹಾಗೂ ವೇದ ಶುದ್ಧಿ ಔಷಧಿ ಸ್ವರ್ಗ, ಬೆಳದಿಂಗಳು ಸಕಲವಿಧವಾದ ಮಂಗಳ ಇವೆಲ್ಲವು ಲಕ್ಷ್ಮಿಯ ಸ್ವರೂಪಾಂಶದಿಂದ ಒಡಗೂಡಿರುತ್ತವೆ. ಮತ್ತು ಬ್ರಾಹ್ಮಣರು ಜ್ಞಾನಿಗಳು, ಸಾಧುಗಳು ವಿದ್ಯಾವಂತರೂ ಆಚಾರಶೀಲರೂ, ಮೊದಲಾದವರಲ್ಲಿ ಇರುವ ಜ್ಞಾನ, ವೈರಾಗ್ಯ, ಶಮ, ದಮ, ಸದಾಚಾರ ಮೊದಲಾದ ಸದ್ಗುಣಗಳೆಲ್ಲವೂ ಲಕ್ಷ್ಮೀಯ ಮಹಿಮೆಯೇ ಆಗಿವೆ. ಜಗತ್ತಿನಲ್ಲಿ ಕಾಣುವ ಉತ್ತಮೋತ್ತಮವಾದ ವಸ್ತುಗಳಲ್ಲಿರುವ ಶ್ರೇಷ್ಠಭಾಗ ಸತ್ವಸಾರಗಳೆಲ್ಲವೂ ಲಕ್ಷ್ಮೀರೂಪವೇ ಆಗಿರುತ್ತವೆ. ಲಕ್ಷ್ಮೀ ಇಲ್ಲದ ವಸ್ತುವೇ ಜಗತ್ತಿನಲ್ಲಿ ಬೇರೆ ಇಲ್ಲ. ವಸ್ತು ಸ್ಥಿತಿಯು ಹೀಗಿರಲು ಸರ್ವಸುಂದರಿಯು, ಸರ್ವಮಂಗಳೆಯು, ಸೌಭಾಗ್ಯ ಸ್ವರೂಪಿಣಿಯು ಆದ ಲಕ್ಷ್ಮೀದೇವಿಯೊಂದಿಗೆ ಸ್ಪರ್ಧೆಗೆ ಇಳಿಯಲು ನಿನಗೆ ನಾಚಿಕೆ ಯಾಗುವುದಿಲ್ಲವೇ ಹೋಗು ಹೋಗು ಈ ಮಹಾಲಕ್ಷ್ಮೀಯೊಂದಿಗೆ ನೀನು ಎಂದಿಗೂ ಕುರುಡುಗಟ್ಟಿ ಹೋರಾಟಕ್ಕೆ ನಿಲ್ಲಬೇಡ ಎಂದು ಹೇಳಿ ಗಂಗೆಯು ದರಿದ್ರಾದೇವಿಯನ್ನು ಕಳುಹಿಸಿಕೊಟ್ಟಳು.

ಅಂದಿನಿಂದ ಈ ಗೌತಮೀ ಗಂಗಾ ತೀರ್ಥವು ಲಕ್ಷ್ಮೀ ತೀರ್ಥ ಎಂದು ಪ್ರಸಿದ್ಧಿಯನ್ನು ಪಡೆಯಿತು. ಈ ತೀರ್ಥವು ತನ್ನಸ್ನಾನ ದಾನಮಾಡುವವರ ದಾರಿದ್ರ್ಯವನ್ನು ಹೋಗಲಾಡಿಸಿ, ಐಶ್ವರ್ಯವನ್ನು ಪ್ರದಾನ ಮಾಡುವುದು.

## ಭಾನುತೀರ್ಥ

**ಬ್ರಹ್ಮ:-** ದೇವಮುನಿಯೇ ಭಾನುತೀರ್ಥ ಎಂಬ ಗೌತಮೀ ತೀರದ ಪವಿತ್ರವಾದ ತೀರ್ಥವು ಸರ್ವಪಾಪಗಳನ್ನು ಕಳೆಯುವದು ಅನಿಷ್ಟಗಳನ್ನೆಲ್ಲಾ ಅಳಿಯುವದು. ಈ ಭಾವ ತೀರ್ಥದ ಮಹಿಮೆ ಅತ್ಯಾಶ್ಚರ್ಯಕರ.

ಬಹುಪೂರ್ವಕಾಲದ ಒಂದು ಘಟನೆ. ಶರ್ಯಾತಿ ಎಂಬ ಒಬ್ಬ ರಾಜ. ಅವನು ಅತ್ಯಂತ ಧರ್ಮಿಷ್ಠ. ಅವನ ಹೆಂಡತಿ ಸ್ಥದಿಷ್ಠಾದೇವಿ. ಅವಳು ರೂಪವತಿ, ಗುಣವತಿ, ಶೀಲವತಿ, ವಿದ್ಯಾವತಿ ನಾಲ್ಕೂ ಆಗಿದ್ದಳು. ಆ ಶರ್ಯಾತಿ ರಾಜನಿಗೆ ಪುರೋಹಿತನಾಗಿದ್ದ ಬ್ರಹ್ಮಋಷಿ ಮಧುಚ್ಛಂದ. ಅವನು ಜಿತೇಂದ್ರಿಯನಾಗಿದ್ದು ಬ್ರಹ್ಮವರ್ಚಸ್ವಿಯಾಗಿದ್ದ. ಒಂದು ದಿನ ಆ ಶರ್ಯಾತಿ ಮಹಾರಾಜನು ದೇಶ ದೇಶಾಂತರಗಳ ದಿಗ್ವಿಜಯಕ್ಕಾಗಿ ಹೊರಟ. ಅರಸನ ದಂಡ ಯಾತ್ರೆಯಲ್ಲಿ ರಾಜಪುರೋಹಿತನಾದ ಮಧುಶ್ಚಂದನು ಅವನೊಡನೆಯೆ ಸಹಪ್ರಯಾಣ

ಬೆಳೆಸಿದ್ದ. ದಾರಿಯಲ್ಲಿ ಒಂದು ಕಾಡು. ಆ ಕಾಡಿನಲ್ಲಿ ತರು ವೃಂದಗಳ ಒಂದುಗೂಡಿನಲಿ ರಾಜಪರಿವಾರವು ವಿಶ್ರಾಂತಿಗೆಂದು ಬೀಡುಬಿಟ್ಟಿತ್ತು. ಅಲ್ಲಿಯ ನಿಸರ್ಗ ಸೌಂದರ್ಯವನ್ನು ಕಂಡು ರಾಜನ ಮನಸ್ಸು ಉಲ್ಲಸಿತವಾಗಿತ್ತು. ಮುಖ ವಿಕಸಿತ. ನೇತ್ರ ವಿಸ್ತಾರಿತ. ಆದರೆ ರಾಜಪುರೋಹಿತನಾದ ಮಧುಚ್ಛಂದನು ಮಾತ್ರ ಏಕೋ ಖಿನ್ನ ವಿಘ್ನನಾಗಿದ್ದ. ಅವನ ಮುಖ ಚಿಂತಾಕ್ರಾಂತವಾಗಿತ್ತು. ಅದನ್ನು ನೋಡಿ ಮಹಾರಾಜನು ಅವನನ್ನು ಕೇಳಿದ.

"ವಿಪ್ರೋತ್ತಮ, ನನ್ನ ಈ ವಿಶಾಲರಾಜ್ಯದಲ್ಲಿ ನೀನೇ ಮಹಾಜ್ಞಾನಿ. ಆದರೂ ಕೂಡ ನಿನ್ನ ಮುಖದಲ್ಲಿ ವಿಷಾದದ ರೇಖೆ ಎದ್ದು ಕಾಣುತ್ತದೆ. ನೀನು ಯಾವುದೋ ಚಿಂತೆಯಲ್ಲಿ ಕೊರಗುತ್ತಿರುವಂತೆ ತೋರುವುದು. ನಿನ್ನ ಈ ಪರಿತಾಪಕ್ಕೆ ಕಾರಣವೇನು? ನೀನು ನನ್ನ ರಾಜ್ಯದಲ್ಲಿ ನನಗೆ ಪರಮ ಪೂಜನೀಯ ಮತ್ತು ಸರ್ವದಾಪಿ ವಂದನೀಯ. ನೀನು ಸಂತಸ ಗೊಂಡು ಸಂತತವು ಪರಿತೃಪ್ತನಾಗಿ ಇದ್ದರೆ ಮಾತ್ರ ಶಾಂತಿ ಸಮೃದ್ಧಿಗಳು ಉಂಟಾಗುವುವು. ನಾನು ಈ ಭೂಮಂಡಲವನ್ನೆ ಜಯಿಸಿರುವೆನು. ಜಗತ್ತಿನಲ್ಲಿರುವ ರಾಜಮಹಾರಾಜರೆಲ್ಲರೂ ನನ್ನ ಅಂಕಿತದಲ್ಲಿ ಇರುವರು. ಇಂತಹ ಸಂತೋಷದ ಸಮಯದಲ್ಲಿ ನೀನೇಕೆ ಚಿಂತಾಕ್ರಾಂತ ನಾಗಿ ಇರುವೆ? ಅದರ ಕಾರಣವೇನು? ಅದನ್ನು ನನಗೆ ಹೇಳು."

ಅದನ್ನು ಕೇಳಿ ಮಹರ್ಷಿಯಾದ ಮಧುಚ್ಛಂದ ಮುನಿಯು ಮಹಾರಾಜನಿಗೆ ತನ್ನ ಖೇದ ವಿಷಾದದ ಕಾರಣವನ್ನು ಹೇಳಿದನು.

"ಮಹಾರಾಜ ನನ್ನ ಮಡದಿಯು ನಾನು ಬರುವಾಗ ಇಂದು ರಾತ್ರಿ ಕತ್ತಲೆಯಾಗುವುದ ರೊಳಗಾಗಿ ಮನೆಗೆ ಬರಬೇಕು ಎಂದು ಹೇಳಿದ್ದಾಳೆ. ಆದರೆ ಈಗಾಗಲೇ ಅರ್ಧರಾತ್ರಿಯು ಕಳೆಯಬಂದಿತು. ಅವಳು ಹೇಳಿದ ಅವಧಿಯೊಳಗಾಗಿ ನಮಗೆ ಮನೆ ಮುಟ್ಟಲಿಕ್ಕೆ ಆಗಲಿಲ್ಲ. ಅದಕ್ಕಾಗಿ ಚಿಂತೆ ಮಾಡುತ್ತಿರುವೆನು. ಈಗಲಾದರೂ ಬೇಗ ಹೊರಡಿರಿ. ನನ್ನ ಹೆಂಡತಿಯು ಪತಿ ಇನ್ನೂ ಬರಲಿಲ್ಲ ಎಂದು ಚಿಂತೆಯಿಂದ ಅಂತರಂಗದಲ್ಲಿ ಬೇಯುತ್ತಲೇ ಇರುತ್ತಾಳೆ. ನನ್ನ ಈ ದೇಹಕ್ಕೆ ನನ್ನ ಕಾಂತೆಯೇ ಒಡತಿ. ಆಸೆಯಿಂದ ಅವಳು ನನ್ನನ್ನು, ನನ್ನ ದಾರಿಯನ್ನು ನಿರೀಕ್ಷಿಸುತ್ತಾ ಇರುತ್ತಾಳೆ. ನಾನು ಈಗ ಅವಳ ಬಗೆಗೆ ಚಿಂತಿಸುತ್ತಾ ಇರುತ್ತೇನೆ. ಅದರಿಂದಲೇ ನನ್ನ ಮುಖದ ಮೇಲೆ ವಿಷಾದದ ಛಾಯೇ ಬಿದ್ದಂತೆ ತಮಗೆ ತೋರಿದೆ."

ಶರ್ಯಾತಿ ಮಹಾರಾಜನು ಪ್ರಣಯಾತುರನಾದ ತನ್ನ ಪುರೋಹಿತನು ಉದ್ವಿಗ್ನ ಮನಸ್ಕನಾಗಿ ಈ ರೀತಿ ನುಡಿದುದನ್ನು ಕೇಳಿ ನಕ್ಕು ಬಿಟ್ಟ. ಮಂದಹಾಸ ಮಾಡಿ ಮಹಾರಾಜನು ಮಧುಶ್ಚಂದನಿಗೆ ನುಡಿದ. "ವಿಪ್ರವರ್ಯಾ, ನೀನು ನನಗೆ ಅಧ್ಯಾತ್ಮದ ಗುರು, ಜೀವ ಮಿತ್ರ ಮೇಲಾಗಿ ಆಸ್ಥಾನ ಪಂಡಿತ. ಇದಲ್ಲದೆ ನೀನು ಮಹಾಜ್ಞಾನಿ. ನಿನ್ನಂತಹ ಬುದ್ಧಿವಂತಾ, ಶ್ರೇಷ್ಠನಾದ ಮಹಾಪುರುಷನಿಗೆ ನಾನು ಹೊಸದಾಗಿ ಹೇಳುವಂತಹುದು ಏನೂ ಇರುವುದಿಲ್ಲ. ಆದರೆ ನಿನ್ನಂತಹ ಬಲ್ಲಿದನಾದ ಬ್ರಾಹ್ಮಣ ಹೀಗೆ ಆತ್ಮವಿಡಂಬನೆ ಮಾಡಿಕೊಳ್ಳುವುದು ನನಗೆ ಅಚ್ಚರಿಯುಂಟು ಮಾಡಿದೆ. ಪ್ರಪಂಚದಲ್ಲಿರುವ ಭೋಗ ಸಾಮಗ್ರಿಗಳು ಮಡದಿ ಮಕ್ಕಳು, ಹಣ, ಪ್ರೇಮ, ಕಾಮ ಎಲ್ಲವು ಕ್ಷಣಿಕವಲ್ಲವೆ! ಈಗ ಇದ್ದುದು ಮುಂದಿನ ಕ್ಷಣದಲ್ಲಿ ಇರುವುದಿಲ್ಲ. ನಶ್ವರವಾದ ಈ ಲೌಕಿಕ ಪದಾರ್ಥಗಳನ್ನು ಕಟ್ಟಿಕೊಂಡು ನಮಗೆ ಏನು ಆಗಬೇಕಾಗಿದೆ? ನಿನ್ನಂತಹ ಮಹಾತ್ಮರಿಗೂ ಕ್ಷಣಕ್ಷಣದಲ್ಲಿಯೂ ಕ್ಷಯಿಷ್ಣುವಾದ ಈ ಸಾಂಸಾರಿಕ ಸುಖದಲ್ಲಿ ಇಷ್ಟು ಆಶೆಯೆ! ಆಶ್ಚರ್ಯ, ಆಶ್ಚರ್ಯ ಅತ್ಯಾಶ್ಚರ್ಯ."

ಮಹಾರಾಜನ ಈ ಮಾತನ್ನು ತನ್ನ ಮೇಲಿನ ಆಕ್ಷೇಪ ಎಂದು ಪರಿಗ್ರಹಿಸಿ ಮಹಾಮನೀಷೀ ಆದ ಮಧುಶ್ಚಂದ ಮಹರ್ಷಿಯು ಉತ್ತರಿಸಿದ. ''ಮಹಾರಾಜ, ದಾಂಪತ್ಯ ಧರ್ಮದ ಮರ್ಮವನ್ನು ನೀನು ಚೆನ್ನಾಗಿ ಅರಿತಿಲ್ಲ. ಪ್ರೇಮ ಪೂರ್ಣರಾದ ದಂಪತಿಗಳಲ್ಲಿ ಪರಸ್ಪರ ಅನುಕೂಲವಾದ ಸರಸ ದಾಂಪತ್ಯವು ಸಾಮರಸ್ಯದಿಂದ ಸಂಪನ್ನನಾಗಿ ಇದ್ದರೆ ಧರ್ಮ, ಅರ್ಥ ಕಾಮ ಎಂಬ ಈ ತ್ರಿವರ್ಗವು ಅಲ್ಲಿ ಸಮೃದ್ಧವಾಗಿ, ಫಲಪ್ರದವಾಗಿ, ಸಮೀಚೀನವಾಗಿ, ಕ್ಷೇಮಂಕರವಾಗಿ ಇರುತ್ತದೆ. ಇಂತಹ ಅನ್ಯೋನ್ಯ ಪ್ರೇಮದ ಅನುರೂಪದ ದಾಂಪತ್ಯದಲ್ಲಿ ಹೀಗೆ ಪರಸ್ಪರ ಪ್ರೇಮಾಭಿಕಾಮುಕರಾಗಿ ಇರುವುದು ಎಂದೂ ದೂಷಣವಲ್ಲ. ಪ್ರತ್ಯುತ ಪರಸ್ಪರ ಭೂಷಣವೇ ಆಗಿದೆ. ಇಂಥ ಸಂದರ್ಭದಲ್ಲಿ ವಿರಹ ಸಹಿಷ್ಣುತೆ ವಿರಹ ವೈಕ್ಲವ್ಯಗಳು ಮಿಥೋಮಿಲನ ಕಾತರತೆಗಳು ಅವಶ್ಯಂಭಾವಿ ಆಗಿರುತ್ತವೆ.''

ಹೀಗೆ ರಾಜಪುರೋಹಿತರ ಮಾತುಕತೆ ಮುಗಿದ ಬಳಿಕ ಇಬ್ಬರೂ ಮೌನವಾದರು. ಮಹಾರಾಜನು ತನ್ನ ಪರಿವಾರದೊಂದಿಗೆ ರಾಜಧಾನಿಗೆ ಮರಳಿದ. ಪುರೋಹಿತನ ಪತ್ನಿಯ ಪ್ರೇಮವನ್ನು ಒರೆಗಲ್ಲಿಗೆ ಹಚ್ಚಿಬಿಡಬೇಕೆಂಬ ತವಕವು ಅವನ ಮನಸ್ಸಿನಲ್ಲಿ ಮೂಡಿತು. ಅದಕ್ಕಾಗಿ ಅವನು ತನ್ನ ಪಟ್ಟಣದಲ್ಲಿ ಕೂಡಲೇ ಈ ಸಮಾಚಾರವನ್ನು ಮುಂಚಿತವಾಗಿ ದೂತರಿಂದ ಅರುಹಿದ. ''ಶರ್ಯಾತಿ ಮಹಾರಾಜನು ದಿಗ್ವಿಜಯಕ್ಕೆ ಹೋದಾಗ ದಾರಿಯಲ್ಲಿ ಓರ್ವ ವೀರರಾಕ್ಷಸನು ಬಂದು ರಾಜನನ್ನೂ ಪುರೋಹಿತನನ್ನೂ ಕೊಂದು ಪಾತಾಳ ಲೋಕವನ್ನು ಹೊಕ್ಕುಬಿಟ್ಟ.'' ರಾಜ ಮತ್ತು ಪುರೋಹಿತರು ರಾಜಧಾನಿಗೆ ಮರಳುವುದಕ್ಕಿಂತ ಮುನ್ನ ಈ ಸುದ್ದಿಯು ಊರಲ್ಲೆಲ್ಲಾ ಹಬ್ಬಿಬಿಟ್ಟಿತು. ಒಮ್ಮೆಲೇ ಅನಿರೀಕ್ಷಿತವಾಗಿ ಸಿಡಿಲಿನಂತೆ ಎರಗಿದ ಈ ಸುದ್ದಿಯನ್ನು ಕೇಳಿ ರಾಜನ ನಿರೀಕ್ಷೆಯಲ್ಲಿ ಕುಳಿತ ಅಂತಃಪುರ ಪರಿವಾರಕ್ಕೆಲ್ಲಾ ಆಘಾತವಾಯಿತು. ಮಹಾರಾಣಿಯು ನೆಲಕ್ಕೆ ಬಿದ್ದು ದುಃಖಿಸತೊಡಗಿದಳು. ಅವಳು ಮಂತ್ರಿ ಸೇನಾಪತಿಗಳನ್ನು ಕರೆದು ''ಈ ವಾರ್ತೆಯು ಸುಳ್ಳೋ ಸತ್ಯವೋ ಬೇಗ ತಿಳಿದುಕೊಂಡು ಬನ್ನಿರಿ'' ಎಂದು ಆಜ್ಞಾಪಿಸಿದಳು.

ಈ ದುಃಖ ಸಮಾಚಾರವು ಇಡೀ ಊರಲ್ಲೆಲ್ಲಾ ಕಾಡ್ಗಿಚ್ಚಿನಂತೆ ಹಬ್ಬಿತು. ಪುರೋಹಿತ ಮಧುಶ್ಚಂದನ ಮನೆಗೂ ಈ ದಾರುಣ ವಾರ್ತೆ ಬಂದಿತು. ''ಮಹಾರಾಜನ ಜೊತೆಗೆ ಮಧುಶ್ಚಂದ ಮುನಿಯು ದುಷ್ಟ ದೈತ್ಯನ ದಾಳಿಗೆ ಮರಣ ಹೊಂದಿದ್ದಾನೆ'' ಎಂಬ ದುರಂತ ಸುದ್ದಿಯನ್ನು ಕೇಳಿದ ತಕ್ಷಣವೇ ಮಧುಶ್ಚಂದನ ಪತ್ನಿಯು ಒಮ್ಮಿಂದೊಮ್ಮೆಲೇ ಎದೆವೊಡೆದು ಸತ್ತುಹೋದಳು. ಪತಿಯ ನಿಧನದ ವಾರ್ತೆಯನ್ನು ಶ್ರವಣ ಮಾಡಿದ ಮರುಕ್ಷಣದಲ್ಲಿಯೇ ಅವಳ ಪ್ರಾಣಪಕ್ಷಿ ಹಾರಿಹೋಯಿತು. ಮಹಾರಾಜ ಶರ್ಯಾತಿಯು ತಾನು ಹಬ್ಬಿಸಿದ ತಮ್ಮಿಬ್ಬರ ಮರಣದ ಸುದ್ದಿಯು ತನ್ನ ಅಂತಃಪುರದಲ್ಲಿಯೂ ಮತ್ತು ಪುರೋಹಿತನ ಮನೆಯಲ್ಲಿಯೂ ಯಾವ ಪರಿಣಾಮ ಉಂಟುಮಾಡುತ್ತದೆ ಎಂಬುದನ್ನು ನೋಡಿಬರಲು ಅವನು ಎರಡು ಕಡೆಗೂ ಗುಪ್ತದೂತರನ್ನು ಕಳಿಸಿಕೊಟ್ಟನು. ಅವರು ಹೋಗಿ ಮಹಾರಾಜನಿಗೆ ಅಡವಿಯಲ್ಲಿಯೇ ಈ ಎರಡೂ ಸಮಾಚಾರ ತಿಳಿಸಿದರು.

ಪುರೋಹಿತನ ಪ್ರಿಯ ಪತ್ನಿಯು ಪತಿ ಮರಣದ ಘೋರ ಸಮಾಚಾರ ಕೇಳಿಯೇ ತಕ್ಷಣದಲ್ಲಿ ಪ್ರಾಣಬಿಟ್ಟಳು ಎಂಬುದನ್ನು ತಿಳಿದು ಮಹಾರಾಜನಿಗೆ ಆಶ್ಚರ್ಯ ಮತ್ತು ಆಘಾತವಾಯಿತು. ಮತ್ತು ತನ್ನ ಈ ಪ್ರಮಾದ ಕಾರ್ಯಕ್ಕಾಗಿ ಕಡು ಪಶ್ಚಾತ್ತಾಪವೂ ಆಯಿತು. ಅವನು ವಿಪ್ರಪತ್ನಿಯ ಮರಣದ ಸಮಾಚಾರವನ್ನು ತಂದ ದೂತರಿಗೆ ''ಮೊದಲು

ಓಡಿಹೋಗಿ ನೀವು ಆ ಪುರೋಹಿತನ ಮಡದಿಯ ಶರೀರವನ್ನು ರಕ್ಷಿಸಿರಿ. ರಾಜ ಮತ್ತು ಪುರೋಹಿತ ಇಬ್ಬರೂ ಕೂಡಿ ಬರುತ್ತಲಿದ್ದಾರೆ ಎಂದು ಅವರಿಗೆ ತಿಳಿಸಿರಿ. ನಾವಿಬ್ಬರೂ ಬರುವ ವರೆಗೆ ಶವಸಂಸ್ಕಾರ ಮಾಡಬಾರದು ಎಂದು ಹೇಳಿ ಮುಂದಿನ ಕಾರ್ಯವನ್ನು ತಡೆಹಿಡಿಯಿರಿ.''

ಹೀಗೆ ಅಪ್ಪಣೆ ಮಾಡಿದ ಬಳಿಕ ರಾಜನು ತಾನು ಮಾಡಿದ ಘೋರ ಪಾಪಕ್ಕಾಗಿ ಮನಸ್ಸಿನಲ್ಲಿ ಬಹಳ ಮಿಡುಕಿದ. ಇದಕ್ಕೆ ಏನು ಮಾಡಬೇಕು ಎಂದು ಅವನಿಗೆ ತಿಳಿಯದಾಯಿತು. ಅವನು ಚಿಂತಾಕ್ರಾಂತನಾಗಿ ಕುಳಿತುಕೊಂಡ. ಆಗ ಒಮ್ಮೆಲೇ ಆಕಾಶವಾಣಿ ಯಾಯಿತು. ''ಮಹಾರಾಜ, ನೀನು ಗೌತಮೀನದಿಗೆ ಹೋಗು. ಅಲ್ಲಿ ಹೋಗಿ ಗಂಗೆಯಲ್ಲಿ ಸ್ನಾನಮಾಡಿದರೆ ನಿನ್ನ ದುಃಖಗಳೆಲ್ಲವೂ ಕೊನೆಗೊಳ್ಳುವುವು. ನಿನ್ನ ಚಿಂತೆ ಪರಿಹಾರವಾಗುವುದು. ಸಕಲದುಃಖಗಳನ್ನು ಹೋಗಲಾಡಿಸುವುದರಲ್ಲಿ ಗಂಗೆಯಂತಹ ಸಮರ್ಥ ನದಿ ಬೇರೆಯಿಲ್ಲ.'' ಆಕಾಶವಾಣಿ ಆದೇಶದಂತೆ ಶರ್ಯಾತಿ ದೊರೆಯು ಗೌತಮೀ ತೀರಕ್ಕೆ ತೆರಳಿದ. ಅಲ್ಲಿ ಸ್ನಾನ ದಾನ ಪುಣ್ಯ ಕಾರ್ಯ ಮಾಡಿದ. ಮತ್ತು ಪಿತೃಗಳನ್ನು ಕುರಿತು ತರ್ಪಣ ನೀಡಿದ. ಬ್ರಾಹ್ಮಣರಿಗೆಲ್ಲ ಭೂರಿಭೋಜನ ಮಾಡಿಸಿದ. ಅನಂತರ ತನ್ನ ಪುರೋಹಿತನಾದ ಮಧುಶ್ಚಂದ್ರನಿಗೆ ವಿಪುಲವಾಗಿ ದಾನ ದಕ್ಷಿಣೆಗಳನ್ನು ನೀಡಿದ. ಬೇರೆ ಬೇರೆ ತೀರ್ಥಗಳಲ್ಲಿ ಶ್ರದ್ಧೆಯಿಂದ ದಾನಮಾಡು ಎಂದು ಹೇಳಿಕಳುಹಿಸಿದ. ಅರಸನ ಈ ಕಾರ್ಯದ ಮರ್ಮವು ಪುರೋಹಿತನಿಗೆ ತಿಳಿಯಲಿಲ್ಲ. ರಾಜನ ಆದೇಶದಂತೆ ರಾಜ ಪುರೋಹಿತನೂ ಮಹಾಮಹಿಮೆ ಆದ ಮಧುಶ್ಚಂದ್ರನು ಅಲ್ಲಿಂದ ಹೊರಟುಹೋದ.

ರಾಜನು ತನ್ನ ಸೇವಾ ಪರಿವಾರವನ್ನೆಲ್ಲಾ ರಾಜಧಾನಿಗೆ ಕಳುಹಿಸಿಕೊಟ್ಟ. ಅನಂತರ ತಾನು ಆ ಗಂಗಾ ತೀರದಲ್ಲಿಯೇ ಅಗ್ನಿ ಪ್ರವೇಶಕ್ಕಾಗಿ ಒಂದು ಚಿತೆಯನ್ನು ಏರ್ಪಡಿಸಿದ. ಅಲ್ಲಿಯ ವನದೇವತೆಗೂ ಹಾಗೂ ದಿಗ್ದೇವತೆಗಳಿಗೂ ಆಕಾಶದಲ್ಲಿ ಬೆಳಗುವ ಸೂರ್ಯನಿಗೂ ಕೈಯೆತ್ತಿ ನಮಸ್ಕಾರ ಮಾಡಿದ ಮತ್ತು ಉಚ್ಚಕಂಠದಿಂದ 'ಗಂಗಾದೇವಿ, ಸೂರ್ಯದೇವ' ವನದೇವತೆ ಹಾಗೂ ದಿಗ್ದೇವತೆಗಳನ್ನು ಕುರಿತು ಧ್ವನಿಯೆತ್ತಿ, ಕೈಯೆತ್ತಿ, ಕೊರಳೆತ್ತಿ, ಗಟ್ಟಿಯಾಗಿ ಮಹಾರಾಜನು ನುಡಿದ. ''ದೇವ ದೇವಿಯರೇ, ನಾನು ಈ ವರೆಗೆ ದಾನ ಮಾಡಿದ್ದು, ಧರ್ಮ ಮಾಡಿದ್ದು, ಯಜ್ಞ ಮಾಡಿದ್ದು ನಿಜವಾದರೆ ಔರಸ ಪುತ್ರರಂತೆ ಎಲ್ಲ ಪ್ರಜೆಗಳನ್ನು ಪರಿಪಾಲನೆಯನ್ನು ಮಾಡಿದ್ದು ಸತ್ಯವಾದರೆ ಆ ಎಲ್ಲ ಪುಣ್ಯ ಪ್ರಭಾವದಿಂದ ನಮ್ಮ ಪುರೋಹಿತನ ಪತ್ನಿಯಾದ ಸಾಧ್ವಿಮಣಿಯು ಬದುಕಿ ಬರಲಿ. ನನ್ನ ಆಯುಷ್ಯವನ್ನೆಲ್ಲ ಅವಳಿಗೆ ಈ ಮೂಲಕ ಪ್ರದಾನ ಮಾಡಿದ್ದೇನೆ.'' ಎಂದು ನುಡಿದ 'ಧಗ ಧಗ' ಉರಿಯುತ್ತಿರುವ ಆ ಚಿತೆಯ ಅಗ್ನಿಯಲ್ಲಿ ಮಹಾರಾಜನು ಧುಮುಕಿಬಿಟ್ಟನು.

ಹೀಗೆ ಉಚ್ಚಕಂಠದಿಂದ ತಾನು ಧಾರೆಯೆರೆದ ತನ್ನ ಶೇಷಾಯುಷ್ಯದಿಂದ ಗಂಗಾಸೂರ್ಯರ ಅನುಗ್ರಹದಿಂದ ಪುರೋಹಿತ ಪತ್ನಿಯು ಬದುಕಿ ಬರಲಿ ಎಂದು ಹಾರೈಸಿ ಶರ್ಯಾತಿಯು ಅಗ್ನಿಪ್ರವೇಶ ಮಾಡಿದಕೂಡಲೇ ನಿಜವಾಗಿಯೂ ಪುರೋಹಿತನ ಮಡದಿಯು ಮರಳಿ ಬದುಕಿದಳು. ಅದನ್ನು ನೋಡಿ ಎಲ್ಲ ಜನರಿಗೂ ಅತ್ಯಾಶ್ಚರ್ಯವಾಯಿತು.

ಅನಂತರದಲ್ಲಿ ಮಧುಶ್ಚಂದನಿಗೆ ಶರ್ಯಾತಿಯು ತನ್ನ ಮಡದಿಯ ಪುನರುಜ್ಜೀವನಕ್ಕಾಗಿ ಬೆಂಕಿಯಲ್ಲಿ ಬಿದ್ದದ್ದು ಅವನು ಸತ್ತದ್ದು ತನ್ನ ಹೆಂಡತಿ ಬದುಕಿದ್ದು ಎಲ್ಲವೂ ಸೇವಕರ ಮುಖಾಂತರ ತಿಳಿದು ಬಂದಿತು. ಆಗ ಅವನಿಗೆ ಸಂತೋಷದ ಜೊತೆಗೆ ಚಿಂತೆಯೂ ಮನದ ಅಂತಃರಂಗವನ್ನು ಕೊರೆಯ ತೊಡಗಿತು. ಈಗ ನಾನು ಏನು ಮಾಡಲಿ?

ಬದುಕಿ ಬಂದ ತನ್ನ ಪ್ರಿಯ ಪತ್ನಿಯ ಬಳಿಗೆ ಹೋಗಲೇ ಅಥವಾ ನನ್ನ ಮಡದಿಗಾಗಿ ಪ್ರಾಣತೆತ್ತ ಮಹಾರಾಜನನ್ನು ಮತ್ತೆ ಬದುಕಿಸಲಿಕ್ಕಾಗಿ ನಾನೇ ಅಗ್ನಿಪ್ರವೇಶ ಮಾಡಲೋ ಅಥವಾ ಅರಸನ ಜೀವ ಸಂಜೀವನಕ್ಕಾಗಿ ಸೂರ್ಯನನ್ನು ಕುರಿತು ತಪಸ್ಸನ್ನು ಆಚರಿಸಲೇ, ಏನುಮಾಡಲಿ ಎಂದು ಕಿಂಚಿತ್ಕಾಲ ಪರ್ಯಂತ ಅವನು ಯೋಚಿಸಿದನು. ಹೀಗೆ ಕೆಲಸಮಯ ಯೋಚನೆ ಮಾಡಿದ ಬಳಿಕ ಸೂರ್ಯದೇವನನ್ನು ಇದಕ್ಕಾಗಿ ಆರಾಧಿಸು ವುದೇ ಒಳ್ಳೆಯದು ಎಂದು ನಿಶ್ಚಯಿಸಿದನು. ಅದರಂತೆ ಸೂರ್ಯನಾರಾಯಣನನ್ನು ಕುರಿತು ಕೆಲಕಾಲ ಜಪತಪೋನುಷ್ಠಾನಗೈದು ಭಕ್ತಿ ಭರಿತನಾಗಿ ಸೂರ್ಯನನ್ನು ಸ್ತೋತ್ರ ಮಾಡಿದನು.

**ಮಧುಶ್ಚಂದಾ ಉವಾಚ-**

**ನಮೋಸ್ತು ತಸ್ಮೈ ಸೂರ್ಯಾಯ**
**ಮುಕ್ತಯೇಽಮಿತ ತೇಜಸೇ**
**ಛಂದೋಮಯಾಯ ದೇವಾಯ**
**ಓಂಕಾರಾರ್ಥಾಯ ತೇ ನಮಃ ॥**

ಅಪರಮಿತವಾದ ತೇಜಸ್ಸುಳ್ಳ ಮುಕ್ತಿಪ್ರದಾತನಾದ ವೇದಸ್ವರೂಪಿಯು ಆದ ಓಂಕಾರದ ಅರ್ಥಭೂತನಾದ ಕ್ರೀಡಾದಿ ಗುಣ ವಿಶಿಷ್ಟನಾದ ಸೂರ್ಯನಾರಾಯಣನೇ ನಿನಗೆ ನನ್ನ ನಮಸ್ಕಾರ. ಮಧುಶ್ಚಂದ ಮಹರ್ಷಿಯ ಈ ಭಾವಭಕ್ತಿ ಭರಿತವಾದ ಸ್ತೋತ್ರವನ್ನು ಕೇಳಿ ಮತ್ತು ಅವನು ಮಾಡಿದ ಜಪೋತಪೋನುಷ್ಠಾನ ರೂಪ ತನ್ನ ಆರಾಧನೆಯನ್ನು ಗಮನಿಸಿ ಪರಮ ಸಂತುಷ್ಟನಾದ ಆ ಸವಿತೃದೇವ ಮತ್ತು ಮಧುಶ್ಚಂದ ಮಹಾಮುನಿಗೆ ಬೇಕಾದ ವರ ಬೇಡು ಎಂದು ಹೇಳಿದ. ಆಗ ಮಹಾಮನಿಷಿಯಾದ ಮಧುಶ್ಚಂದ ಮುನಿಯು ತನ್ನ ಮೇಲೆ ಸುಪ್ರಸನ್ನನಾದ ಸೂರ್ಯದೇವನಿಗೆ ನಾಲ್ಕು ವರ ಕೇಳಿದ. "ಅಗ್ನಿಪ್ರವೇಶ ಮಾಡಿ ಮರಣ ಹೊಂದಿದ ಮಹಾರಾಜನು ಮರಳಿ ಬದುಕಲಿ ಯಾವಾಗಲೂ ಸರಿಯಾಗಿ ಸತ್ಯವಾಗಿ ನುಡಿಯುವ ನನ್ನ ಮಡದಿಯು ನನಗೆ ದೊರಕಲಿ ನನಗೆ ಸದ್ಗುಣಿಗಳಾದ ಪುತ್ರರು ಜನಿಸಲಿ. ಮಹಾರಾಜನಿಗೂ ಕೂಡ ಶ್ರೇಷ್ಠರಾದ ಪುತ್ರರು ಉತ್ಪನ್ನರಾಗಲಿ."

ಪ್ರಸನ್ನನಾದ ಸೂರ್ಯ ಭಗವಾನನು ಮಧುಶ್ಚಂದನು ಕೇಳಿದ ನಾಲ್ಕು ವರಗಳನ್ನು ದಯಪಾಲಿಸಿದನು. ಅವನ ದಯೆಯಿಂದ ಬೆಂಕಿಯಲ್ಲಿ ಬಿದ್ದ ಮಹಾರಾಜ ಬದುಕಿಬಂದ. ನಾರೀರತ್ನಳಾದ ಪುರೋಹಿತ ಪತ್ನಿಯು ಬದುಕಿ ಸುರಕ್ಷಿತವಾಗಿ ತನ್ನ ಪತಿಯ ಬಳಿಗೆ ಬಂದಳು. ರಾಜನಿಗೂ ಪುರೋಹಿತನಿಗೂ ಸತ್ಪುತ್ರರು ಜನಿಸುವಂತೆ ಪೂರ್ಣಾನುಗ್ರಹವನ್ನು ಆ ಎರಡೂ ಕುಟುಂಬಗಳ ಮೇಲೆ ದಿವಾಕರನು ಪಾಲಿಸಿದ. ಅಂದಿನಿಂದ ಆ ತೀರ್ಥವು ಭಾನುತೀರ್ಥ, ಮೃತ ಸಂಜೀವನ ತೀರ್ಥ ಶರ್ಯಾತಿ ತೀರ್ಥ ಮಧುಶ್ಚಂದ್ರ ತೀರ್ಥ ಎಂದು ಪ್ರಸಿದ್ಧವಾಯಿತು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿದುದು*

—○—

## ಖಡ್ಗ ತೀರ್ಥ ಮಹಿಮೆ

ಅಧ್ಯಾಯ - ೩೩

ಕವಷಮುನಿಗೆ ಪೈಲುಷ ಎಂಬ ಪುತ್ರನು ಇದ್ದ. ಅವರದು ದೊಡ್ಡ ಕುಟುಂಬ ಅವರಿಗೆ ಪ್ರಿತಾರ್ಜಿತವಾದ ಆಸ್ತಿ ಇರಲಿಲ್ಲ. ಮನೆಯಲ್ಲಿ ಕೂತು ಉಣ್ಣುವ ಜನ ಅನೇಕ. ತಂದೆ, ತಾಯಿ, ಮಕ್ಕಳು ಪರಿವಾರ ಇಷ್ಟು ಜನರು ಹೊಟ್ಟೆ ತುಂಬುವುದು ಹೇಗೆ? ಎಂದು ಚಿಂತೆ ಹತ್ತಿತ್ತು ಆ ಕವಷಕುಮಾರ ಪೈಲೂಷನಿಗೆ. ಅವನು ಹಣ ಸಂಪಾದಿಸುವ ಪ್ರಯತ್ನವೆಲ್ಲವು ವ್ಯರ್ಥವಾಯಿತು. ದೈವವು ಪ್ರತಿಕೂಲವಾದಾಗ ಯಾವ ಕಾರ್ಯವು ಯಶಸ್ವಿಯಾಗಿ ಕೈಗೂಡವುದಿಲ್ಲ. ಕುಟುಂಬ ಪೋಷಣೆಗಾಗಿ ಧನವು ಅತ್ಯಾವಶ್ಯಕ. ಧನವು ನ್ಯಾಯ ಮಾರ್ಗದಿಂದ ದೊರೆಯುವುದಿಲ್ಲ. ಅದಕ್ಕಾಗಿ ಅಡ್ಡ ದಾರಿ ಹಿಡಿಯಲು ಅವನಿಗೆ ಮನಸ್ಸಿಲ್ಲ. ಅದಕ್ಕಾಗಿ ಅವನು ನ್ಯಾಯ ಮಾರ್ಗದಲ್ಲಿ ಹಣ ಸಂಪಾದಿಸಬೇಕೆಂದು ವ್ಯಾಪಾರ ಉದ್ಯೋಗ ಗಳನ್ನು ಮಾಡಿ ಕೈಸುಟ್ಟುಕೊಂಡ. ಎಲ್ಲ ಕಡೆಯಲ್ಲಿಯೂ ಹಾನಿ ಗ್ಲಾನಿ ಎರಡೂ ಒದಗಿದವು. ಅದರಿಂದ ಅವನಿಗೆ ವೈರಾಗ್ಯವು ಉತ್ಪನ್ನವಾಯಿತು. ಆದರೂ ಅವನಿಗೆ ಆಶೆ ಮಾತ್ರ ಬಿಡಲಿಲ್ಲ. ಈ ಆಶೆಯನ್ನು ಭೇದಿಸಲು ಏನು ಮಾಡಬೇಕು ಎಂದು ಚಿಂತಿಸುತ್ತಾ ತನ್ನ ತಂದೆಯನ್ನು ಕೇಳಿದ. ''ಪೂಜ್ಯ ತಂದೆಯೇ, ಜ್ಞಾನರೂಪವಾದ ಖಡ್ಗದಿಂದ ನಾನು ಕಾಮಕ್ರೋಧಾಧಿ ವೈರಿಗಳನ್ನು ಸಂಹರಿಸಬೇಕೆಂದಿರುವೆ. ಘೋರ ಸಂಸಾರವನ್ನು ಕೊನೆಗೊಳಿಸಬೇಕೆಂದು ನಿರ್ಧರಿಸಿರುವೆ. ಅಂತಹ ಜ್ಞಾನವು ನನಗೆ ಹೇಗೆ ಲಭಿಸುವದು ಹೇಳು'' ಎಂದು.

ಅದನ್ನು ಕೇಳಿ ಕವಷ ಮುನಿಯು ಹೇಳಿದ **''ಜ್ಞಾನಂ ಇಚ್ಛೇತ್ ಮಹೇಶ್ವರಾತ್** ದಿವ್ಯಜ್ಞಾನವನ್ನು ಈಶ್ವರನಿಂದಲೇ ಪಡೆಯಬೇಕು ಎಂದು ವೇದ ಹೇಳುತ್ತಿದೆ. ಅದರಿಂದ ಮಹಾದೇವನನ್ನು ಆರಾಧಿಸು ಅವನು ನಿನಗೆ ಸಂತುಷ್ಟನಾಗಿ ಮೋಕ್ಷೋಪದಾಯಕವಾದ ಜ್ಞಾನವನ್ನು ಅನುಗ್ರಹಿಸುವನು.''

ತಂದೆಯ ಈ ವಚನವನ್ನು ಕೇಳಿ ಪೈಲೂಷನು ಅವನ ಆಜ್ಞೆಯಂತೆ ಪರಶಿವನನ್ನು ಆರಾಧಿಸಿದನು. ಅದರಿಂದ ಪರಿತುಷ್ಟನಾದ ಪರಮೇಶ್ವರನು ಪೈಲೂಷನಿಗೆ ಸಂಸಾರಬಂಧ ನಿವರ್ತಕವಾದ ಗುಹ್ಯಾದ್ ಗುಹ್ಯತರವಾದ ದಿವ್ಯಜ್ಞಾನವನ್ನು ಕರುಣಿಸಿದನು. ಆಜ್ಞಾನದಿಂದ ಸಿದ್ಧಿಯನ್ನು ಶುದ್ಧಿಯನ್ನು ಅಪೂರೋಕ್ಷಾನುಭೂತಿಯನ್ನು ಪಡೆದ ಪೈಲೂಷನು ಪರಮ ಭಗವದ್ಭಕ್ತನಾಗಿ ಲೋಕಕ್ಕೆಲ್ಲ ಹಿತಕರವಾದ ಕೆಲವು ಅನುಭವೋಕ್ತಿಗಳನ್ನು ಹೇಳಿದನು.

**ಪೈಲೂಷ ಉವಾಚ-**

**ಕ್ರೋಧಸ್ತು ಪ್ರಥಮಃ ಶತ್ರುಃ**
**ನಿಷ್ಫಲೋ ದೇಹನಾಶನಃ ।**
**ಜ್ಞಾನಖಡ್ಗೇನ ತಂ ಭಿತ್ವಾ**
**ಪರಮಂ ಸುಖಮಾಪ್ನುಯಾತ್ ॥**

ಮಾನವನಿಗೆ ಮೊದಲನೇ ವೈರಿಯೆಂದರೆ ಕೋಪ. ಅದರಿಂದ ಯಾವ ಪ್ರಯೋಜನವೂ ಇಲ್ಲ. ಆದರೂ ಅದು ದೇಹವನ್ನೇ ನಾಶಮಾಡಿಬಿಡುವದು. ಆ ಕೋಪ ರೂಪವಾದ ರಿಪುವನ್ನು ಜ್ಞಾನರೂಪವಾದ ಖಡ್ಗದಿಂದ ಕಡಿದುಹಾಕಿ ಮನುಷ್ಯನು ಶ್ರೇಷ್ಠವಾದ ಸುಖವನ್ನು ಹೊಂದಬೇಕು.

**ತೃಷ್ಣಾ ಬಹುವಿಧಾ ಮಾಯಾ ಬಂಧಿನೀ ಪಾಪಕಾರಿಣೀ ।**
**ಛಿತ್ವಾ ತಾಂ ಜ್ಞಾನಖಡ್ಗೇನ ಸುಖಂ ತಿಷ್ಠತಿ ಮಾನವಃ ॥**

ಆಸೆ ಎಂಬುದು ಅನೇಕ ವಿಧ. ಅದೆಲ್ಲವು ಒಂದು ಬಗೆಯ ಮಾಯೆ. ಆ ತೃಷ್ಣೆಯು ಸಂಸಾರ ಬಂಧನದಲ್ಲಿ ಮಾನವನನ್ನು ಕೆಡುಹುವುದು ಮನುಷ್ಯರಿಂದ ಬೇರೆ ಬೇರೆ ಪಾಪಗಳನ್ನು ಮಾಡಿಸುವುದು ಆ ತೃಷ್ಣೆಯೇ. ಅಂಥ ಆ ಆಸೆಯನ್ನು ಜ್ಞಾನ ರೂಪ ಖಡ್ಗದಿಂದ ಛೇದಿಸಿದವನು ಸುಖವನ್ನು ಹೊಂದುತ್ತಾನೆ.

**ಪಿಶಾಚೀವ ವಿಶತ್ಯಂತಃ ನಿರ್ದಹೇಚ್ಛಾತ್ಮನಃ ಸುಖಮ್**
**ಪೂರ್ಣಜ್ಞಾನಾಸಿನಾ ಛಿತ್ವಾ ಜೀವನ್‌ಮುಕ್ತಿಮವಾಪ್ನುಯಾತ್ ॥**

ಈ ಆಶೆಯು ಪಿಶಾಚಿಯಂತೆ ಒಮ್ಮೆ ಮನುಷ್ಯನಲ್ಲಿ ಹೊಕ್ಕಿತು ಎಂದರೆ ಆ ಮಾನವನಲ್ಲಿರುವ ಸುಖ ಸಮಾಧಾನಗಳನ್ನೆಲ್ಲ ಅದು ಸುಟ್ಟುಹಾಕುವುದು. ಗುಣಪೂರ್ಣನಾದ ಪರಬ್ರಹ್ಮನ ಜ್ಞಾನರೂಪ ಖಡ್ಗದಿಂದ ಆ ಆಶಾಪಿಶಾಚಿಯನ್ನು ಕಡಿದು ಹಾಕಿದರೆ ಮನುಷ್ಯನು ಜೀವನ್ಮುಕ್ತನಾಗುವನು. ಎಂದರೆ ಜೀವಂತನಾಗಿದ್ದಾಗಲೇ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ.

ಹೀಗೆ ಪೈಲೂಷನು ಶಂಕರನ ಪ್ರಸಾದದಿಂದ ಜ್ಞಾನವನ್ನೂ ಪಡೆದು ಆ ಜ್ಞಾನಖಡ್ಗದಿಂದ ಮೋಹ, ಮಮತೆ, ಅಹಂಕಾರ, ಅಜ್ಞಾನ, ಕಾಮ, ಕ್ರೋಧ, ಲೋಭ ಮುಂತಾದ ಅವಗುಣಗಳನ್ನೆಲ್ಲ ಕಡಿದುಹಾಕಿ ಮುಕ್ತಿಯನ್ನು ಹೊಂದಿದನು. ಅಂದಿನಿಂದ ಆ ತೀರ್ಥವು ಖಡ್ಗತೀರ್ಥ ಎಂದು ಪ್ರಖ್ಯಾತವಾಯಿತು.

## ನಕಲೀ ಇಂದ್ರನ ಅಧಃಪಾತ

**ಬ್ರಹ್ಮ**:- ನಾರದಾ ನೀನು ಆತ್ರೇಯ ತೀರ್ಥ ಅನ್ವಿಂದ್ರತೀರ್ಥ ಎಂಬ ಹೆಸರಿನ ತೀರ್ಥಗಳನ್ನು ಬಲ್ಲೆಯಷ್ಟೆ! ಕಳೆದುಹೋದ ರಾಜ್ಯವನ್ನು ಮರಳಿ ಲಭಿಸುವಂತೆ ಮಾಡಿದ ಆ ತೀರ್ಥಗಳ ಮಹಿಮೆಯನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಆತ್ರೇಯ ಎಂಬ ಮಹರ್ಷಿಯು ಅನೇಕ ಜನ ಮುನಿಮಾನ್ಯರೊಂದಿಗೆ ಕೂಡಿಕೊಂಡು ಗೌತಮೀನದಿಯ ಉತ್ತರತೀರದಲ್ಲಿ ಮಹಾಯಾಗಗಳನ್ನು ಆರಂಭಿಸಿದ. ಆ ಯಾಗದಲ್ಲಿ ಆಹುತಿಯನ್ನು ನೀಡುವ ಹೋತೃ ಆಗಿ ಅಗ್ನಿಯು ಕುಳಿತುಕೊಂಡ. ಆ ಯಜ್ಞವನ್ನು ಮುಗಿಸಿ ಆತ್ರೆಯನು ಮಹೇಶ್ವರಯಾಗವನ್ನು ಮಾಡಿ ಮಲಗಿದ. ಆ ಯಜ್ಞಗಳ ಪ್ರಭಾವದಿಂದ ಆತ್ರೇಯ ಮಹರ್ಷಿಗೆ ಸಕಲಸಿದ್ಧಿಗಳು ಕರತಲಾಮಲಕ ವಾದವು, ಮನಬಂದಕಡೆ ಸಂಚರಿಸುವ ಕಾಮಗಾಮಿತ್ವ ರೂಪವಾದ ಶಕ್ತಿಯು ಲಭಿಸಿತು. ಆ ತಪಸ್ಸಿನ ಶಕ್ತಿಯಿಂದ ಆತ್ರೇಯನು ಸ್ವರ್ಗಲೋಕ, ಭೂಲೋಕ, ಪಾತಾಳಲೋಕಗಳಲ್ಲಿ ಮನಬಂದಕಡೆ ಸ್ವೈರ ಸಂಚಾರ ಮಾಡುತ್ತಿದ್ದ ಅಡೆತಡೆಗಳಿಲ್ಲದೆ ಸ್ವಚ್ಛಂಧ ಗಮನದಿಂದ ಎಲ್ಲಿ ಬೇಕು ಅಲ್ಲಿಗೆ ಹೋಗಿ, ಸ್ವೈರ ವಿಹಾರ ಮಾಡಿಬರುತ್ತಿದ್ದ.

ಒಂದು ದಿನ ಆ ಆತ್ರೆಯನು ಸುರೇಶ್ವರರ ರಾಜಧಾನಿಯಾದ ಅಮರಾವತಿಗೆ ತೆರಳಿದ. ಆ ಅಮರರ ಒಡ್ಡೋಲಗದಲ್ಲಿ ರತ್ನಖಚಿತವಾದ ಸಿಂಹಾಸನದ ಮೇಲೆ ದೇವೇಂದ್ರನು ಶಚೀದೇವಿಯೊಡನೆ ಮಂಡಿಸಿದ್ದು ದೇವತೆಗಳು ಅವನನ್ನು ಓಲೈಸುತ್ತಿದ್ದರು. ಸಿದ್ಧಸಾಧ್ಯರೂ ಮುನಿಮಹರ್ಷಿಗಳೂ ಆ ಶಚೀಪತಿಯನ್ನು ಸ್ತುತಿಸುತ್ತಿದ್ದರು ಗಂಧರ್ವರು

ಹಾಡುತ್ತಿದ್ದರು ಅವನೆದುರು ರಂಭಾ-ಊರ್ವಶಿ-ಮುಂತಾದ ಅಪ್ಸರಾ ಸ್ತ್ರೀಯರ ನಲ್ಗ್ ಣಿ ಸುತವು ನಡೆಯುತ್ತಿತ್ತು. ಆ ಸುರೇಶ್ವರನ ಅಕ್ಕಪಕ್ಕದಲ್ಲಿ ಹಲವಾರು ಅಮರ ಲಲನೆಯರು ನಿಂತು ಚಿನ್ನದ ಚಾಮರಗಳಿಂದ ಗಾಳಿ ಬೀಸುತ್ತಿದ್ದರು ಇಂದ್ರನ ಪಕ್ಕದಲ್ಲಿ ಶಚೀದೇವಿ ತೊಡೆಯ ಮೇಲೆ ಪುತ್ರ, ಎಡಬಲಗಳಲ್ಲಿ ಸಪ್ತಋಷಿಗಳು ನೆಲದಿಂದ ನೆಗೆದು ನಾಗಲೋಕಕ್ಕೆ ಬಂದ ಆತ್ರೇಯ ಮುನಿಯು ದೇವರಾಜನ ಈ ವೈಭವಗಳನ್ನು ಕಂಡು ಕರುಬಿದ, ಮಹೇಂದ್ರನ ಭೋಗೈಶ್ವರಗಳನ್ನು ಕಂಡು ಮರುಳಾದ. ಆ ಇಂದ್ರನ ಸ್ಥಾನ, ಮಾನ ಸುಖಸಂಪದಗಳು, ತನಗೂ ಬರಬೇಕು ಎಂದು ಆಸೆಗೊಂಡು. ಭೂಲೋಕದಲ್ಲಿ ಅನೇಕ ಯಜ್ಞಯಾಗಗಳನ್ನು ಮಾಡಿದ್ದ ಆ ಅತ್ರೆಯನನ್ನು ಸುರಪುರದಲ್ಲಿ ನಾಗಲೋಕದ ವರಿಷ್ಠರು ಸತ್ಕರಿಸಿದರು ಆತಿಥ್ಯ ನೀಡಿದರು. ಅದನ್ನೆಲ್ಲಾ ಸ್ವೀಕರಿಸಿ ಮಹೇಂದ್ರಪುರಿಯ ಮಹಾ ವೈಭವವನ್ನು ನೋಡಿ ಆತ್ರೇಯನು ಮರಳಿ ಬಂದ ಭೂಲೋಕದ ಕಾಡಿನ ಗೂಡಿನಲ್ಲಿರುವ ತನ್ನ ಆಶ್ರಮದ ಎಲೆಮನೆಗೆ. ಅಲ್ಲಿ ಜೀರ್ಣಶೀರ್ಣವಾದ ತನ್ನ ಪರ್ಣಕುಟೀರವನ್ನು ಮತ್ತು ತನ್ನ ಧನ್ಯದಾರಿದ್ರ, ದುರವಸ್ಥೆಗಳನ್ನು ಕಂಡು ಅವನಿಗೆ ರೋಸಿ ಹೋಯಿತು. ಜೀವನದಲ್ಲಿ ಜಿಹಾಸೆ ಬದುಕಿನಲ್ಲಿ ಜಿಗುಪ್ಸೆ ಒಮ್ಮೆಲೆ ಅವನ ಮನದಲ್ಲಿ ಹುಟ್ಟಿಕೊಂಡವು. ಆಗ ಅವನು ತನ್ನ ಎದೆಯ ತಿದಿಯಲ್ಲಿ ಕುದಿಯುತ್ತಿರುವ ದುಗುಡ ದುಮ್ಮಾನಗಳನ್ನು ತನ್ನ ನಲುಮೆಯ ಮಡದಿಯ ಮುಂದೆ ಹೇಳಿಕೊಂಡ.

"ಕಾಂತೆಯೇ ದೇವೇಂದ್ರನ ಮಹಾವೈಭವವನ್ನು ನೋಡಿಬಂದ ನನಗೆ ನಮ್ಮ ಆಶ್ರಮದ ದರಿದ್ರ ಜೀವನವು ಸೇರದಂತಾಗಿದೆ. ಈ ನಮ್ಮ ಎಲೆಮನೆಯ ತುದಿಬದಿ ಬದುಗಳಲ್ಲಿ ಬೆಳೆವ ಗಡ್ಡೆ ಗೆಣಸುಗಳು ಮತ್ತು ನಮ್ಮ ಹಸುಗಳು ಹಾಲು ಮೊಸರು ಬೆಣ್ಣೆ ತುಪ್ಪ ಮೊದಲಾದ ದ್ರವ್ಯಪದಾರ್ಥಗಳು ಆ ಸುರಲೋಕ ಅಮೃತಕ್ಕೆ ಸಾಟಿಯಾಗಲು ಉಂಟೆ? ಅದರ ರುಚಿ ಅದರ ರಸ, ಈ ಮಣ್ಣಿನಲ್ಲಿ ಹಣ್ಣೊಪಡೆದ ಪದಾರ್ಥಗಳಿಗೆ ಹೇಗೆ ಬಂದಿತು? ಆ ಇಂದ್ರಪುರಿಯ ಆ ತಿಂಡಿತಿನಿಸುಗಳು ಏನೂ ರುಚಿ! ಅಲ್ಲಿಯ ಆಸನ ವಸ್ತ್ರ ಅಲಂಕಾರ ಭೋಗ ಸಾಮಗ್ರಿಗಳು ಎಷ್ಟು ಮನೋಹರ! ಅಲ್ಲಿ ಹಾಡುವ ಹಾಡು ಅಪ್ಸರೆಯರ ಕುಣಿತ ಗಂಧರ್ವರ ಗಾನ, ಋಷಿಮುನಿಗಳ ಸ್ತೋತ್ರ ಗೀತೆ ಗಾದೆಗಳು ಎಷ್ಟು ಇಂಪು! ಅಲ್ಲಿಯ ಒಂದೊಂದು ವಸ್ತುವೂ ವರ್ಣನಾತೀತ. ಆ ಸುರಪುರಿಯಲ್ಲಿರುವ ಉದ್ಯಾನ ಉಪವನಗಳನ್ನು ನೋಡಲಿಕ್ಕೆ ನಮ್ಮ ಎರಡು ಕಣ್ಣು ಸಾಲದು, ಹೇಗಾದರೂ ಮಾಡಿ ನನ್ನ ತಪಃಶ್ಶಕ್ತಿಯಿಂದ ಆ ನಾಗಲೋಕಕ್ಕೆ ಸಮಾನವಾದ ನವನಗರವನ್ನು ನಾನು ನಿರ್ಮಿಸಬೇಕು ಅಂಥ ದಿವ್ಯಐಶ್ವರ್ಯವನ್ನು ಇಲ್ಲಿ ನೆಲದಲ್ಲಿಯೇ ನಿರ್ಮಿಸಬೇಕು. ಆ ವಾಸವನ ವೈಭವವು ಈ ಭೂಮಿಯ ಮಣ್ಣಿನಲ್ಲಿಯೇ ಕಣ್ಣು ತೆರೆಯುವಂತೆ ಮಾಡಬೇಕು ಅಂತಹ ಅನುಪಮ ಐಶ್ವರ್ಯವನ್ನು ನಾನು ಇಲ್ಲಿಯೇ ಜೀವಂತವಾಗಿ ಇದ್ದು ಅನುಭವಿಸಬೇಕು."

ಹೀಗೆ ಏನೇನೋ ಮನೋರಥದ ಮಂಡಿಗೆಗಳನ್ನು ಮಾಡಿದ ಆ ಮೊಂಡ ಮುನಿ. ಅದಕ್ಕಾಗಿ ಚಂಡಹಿಡಿದು ಪ್ರಪಂಚದ ತಪಸ್ಸನ್ನು ಗೈದ, ಆ ತಪೋಬಲದಿಂದ ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆಯಿಸಿದ. ಅವನನ್ನು ಕುರಿತು ಆಜ್ಞಾಪಿಸಿದ ಧಾಟಿಯಲ್ಲಿ ನುಡಿದ-

"ಪೂಜ್ಯನಾದ ವಿಶ್ವಕರ್ಮನೆ, ನಿಜವಾಗಿಯೂ ನೀನು ಮಹಾತ್ಮ. ಸರ್ವಕಾರ್ಯ ಸಮರ್ಥ. ನಾನು ನನ್ನ ಸ್ವಚ್ಛಂಧಸ್ವೈರ ಸಂಚಾರ ಸಮರ್ಥವಾದ ತಪಃಶ್ಶಕ್ತಿಯಿಂದ

ಅಮರಾವತಿಗೆ ಹೋಗಿದ್ದೆ. ಅಲ್ಲಿಯ ದೇವೇಂದ್ರನ ಅದ್ಭುತ ವೈಭವವನ್ನು ನೋಡಿದೆ. ಅದನ್ನು ನೋಡಿದಂದಿನಿಂದ ನನ್ನ ಮನಸ್ಸಿನಲ್ಲಿ ಆ ಇಂದ್ರಭೋಗದ ಆಸೆ ಮಾಡಿದೆ. ಅದಕ್ಕಾಗಿ ನೀನು ನನಗಾಗಿ ಹೊಸ ಇಂದ್ರಪದವಿಯನ್ನೆ ನಿರ್ಮಿಸು. ಅಂತದೇ ಸ್ಥಾನ, ಅಂಥದೇ ರಾಜ್ಯ ಅಲ್ಲಿರುವ ಕಲ್ಪವೃಕ್ಷ ಕಾಮಧೇನುಗಳಿಗೆ ಸಮಾನವಾದ ವೃಕ್ಷಗಳನ್ನು, ಹಸುಗಳನ್ನು ನಿರ್ಮಿಸು, ಇಂದ್ರಲೋಕದಂತೆ ವಜ್ರ ಖಚಿತವಾದ ಅರಮನೆ, ಸರ್ವಾಂಗ ಸುಂದರಿಯಾದ ಶಚಿಯಂತಿರುವ ಓರ್ವ ಮಹಾರಾಣಿ. ಇಂದ್ರನ ಸಭೆಯಾದ ಸುಧರ್ಮದಂತೆ ಒಂದು ಸಭೆ, ರಂಭಾ, ಊರ್ವಶಿ ಮೊದಲಾದ ಅಪ್ಸರೆಯರು, ಉಚ್ಛೈಶ್ರವದಂಥ ಆನೆ ಕುದುರೆಗಳು ವಜ್ರಾಯುಧದಂಥಾ ಆಯುಧ ಎಲ್ಲವನ್ನು ನೀನು ಬೇಗನೆ ನಿರ್ಮಾಣ ಮಾಡು, ತಡಮಾಡಬೇಡಾ, ನೀನು ಮಾಡದಿದ್ದರೆ ನಾನು ನನ್ನ ತಪೋಬಲದಿಂದ ಹಾಗೂ ಶಾಪದ ಪ್ರಭಾವದಿಂದ ನಿನ್ನನ್ನೆ ಸುಟ್ಟು ಬೂದಿಮಾಡುತ್ತೇನೆ.''

''ಆತ್ರೇಯನ ಈ ಅತ್ಯುಗ್ರವಾದ ಶಾಸನವನ್ನು ಕೇಳಿ ಗಡ ಗಡ ನಡುಗಿ ಹೋದ ಆ ದೇವತೆಗಳ ಬಡಿಗ. ತಪಸ್ವಿ ಬ್ರಾಹ್ಮಣ ಅವನ ಕಮಂಡಲ ತುಂಬ ಶಾಪ ಜಲತುಂಬಿದೆ. ಒಲ್ಲೆ ಎಂದರೆ ಶಾಪ ಜಲವನ್ನೆಲ್ಲ ನನ್ನ ಮೇಲೆ ಗೊಜ್ಜ ಬಿಡುವ. ಆದುದರಿಂದ ಅವನ ತಪಸ್ಸಿನ ಮೂಲ ಧನವನ್ನೆ ಬಳಸಿಕೊಂಡು ನಾನು ನವೋನವವಾದ ನಾಕಲೋಕವನ್ನೆ ಈ ಬ್ರಾಹ್ಮಣನಿಗಾಗಿ ನಿರ್ಮಿಸಿ ಕೊಡುತ್ತೇನೆ'' ಎಂದು ವಿಚಾರಿಸಿ ಆತ್ರೇಯನು ಆಜ್ಞೆಯನ್ನು ಕೃತಿಯಲ್ಲಿ ಇಳಿಸಿದ, ಸುರಲೋಕ, ಸುರಸುಂದರಿಯರು ಹೊಸದಾಗಿಯೇ ಅವನಿಂದ ಸೃಷ್ಟಿರಾದರು ಹೊಚ್ಚ ಹೊಸದಾದ ಕಲ್ಪವೃಕ್ಷ, ಕಾಮಧೇನುಗಳನ್ನು, ಸುಧರ್ಮ ದೇವಸಭೆಯನ್ನು, ಉಚ್ಛೈಶ್ರವ, ಐರಾವತಗಳನ್ನು ನಿರ್ಮಾಣ ಮಾಡಿದ. ಅವನ ಪತ್ನಿಯನ್ನು ಅವಳು ಬೇಡವೆಂದರೂ ಕೇಳದೇ ಶಚೀದೇವಿಯನ್ನಾಗಿ ಮಾರ್ಪಡಿಸಿದ. ಹೀಗೆ ತನ್ನ ಅಪೇಕ್ಷೆಯಂತೆ ವಿಶ್ವಕರ್ಮನು ನಾಗಲೋಕದಂತೆ ಇರುವ ನವನಗರವನ್ನು ನಿರ್ಮಿಸಿದ್ದನ್ನು ನೋಡಿ ಆತ್ರೇಯ ಅತ್ಯಂತ ಪರಿತುಷ್ಟನಾದ, ಆತ್ರೇಯ ಆಶ್ರಮದಲ್ಲಿ ಒಮ್ಮಿಂದೊಮ್ಮೆಲೇ ಉದ್ಭೂತವಾದ ಇಂದ್ರ ವೈಭವದ ಈ ಮಾಯಾಪುರಿಯನ್ನು ನೋಡಿ ದೈತ್ಯ ದಾನವರೆಲ್ಲರೂ ಆಶ್ಚರ್ಯ ಚಕಿತರಾದರು.

''ನಮ್ಮ ವೈರಿಯಾದ ಇಂದ್ರನು ಅನಾಯಾಸವಾಗಿ ಸ್ವರ್ಗಲೋಕವನ್ನು ಬಿಟ್ಟು ಭೂಲೋಕಕ್ಕೆ ಬಂದಿದ್ದಾನೆ. ಈ ಇಂದ್ರನು ಹಿಂದೆ ನಮ್ಮ ಕುಲಶ್ರೇಷ್ಠನಾದ ವೃತ್ರಾಸುರನನ್ನು ಕೊಂದಿದ್ದಾನೆ. ಈಗ ಅವನು ಈ ನೆಲದಲ್ಲಿಯೇ ನಮ್ಮ ಕೈಗೆ ಸಿಕ್ಕಿದ್ದಾನೆ. ನಮಗೆ ಸ್ವರ್ಗಕ್ಕೆ ಹೋಗುವ ಆಯಾಸವಿಲ್ಲ. ನಾವು ಇಲ್ಲಿಯೇ ಅವನನ್ನು ಕೊಂದು ಹಾಕಿಬಿಡೋಣ ಮತ್ತು ಅವನ ಸುರವೈಭವವನ್ನೆಲ್ಲ ಇಲ್ಲಿಯೇ ಸೂರೆ ಮಾಡೋಣ. ಇದರಿಂದ ಸ್ವರ್ಗ ಲೋಕವ ಸಾಮ್ರಾಜ್ಯ ವೈಭವಗಳೆಲ್ಲವು ನಮಗೆ ಕಷ್ಟಕ್ಲೇಶವಿಲ್ಲದೆ ಕೈಸೇರುವುವು'' ಎಂದೆಲ್ಲ ಯೋಚಿಸಿ ಆತ್ರೇಯ ಮುನಿಯ ಆಶ್ರಮಕ್ಕೆ ಮುತ್ತಿಗೆ ಹಾಕಿದರು. ಆ ಆಶ್ರಮದಲ್ಲಿ ವಿಶ್ವಕರ್ಮನು ತನ್ನ ನಿರ್ಮಾಣ ಕರ್ಮದ ಕೌಶಲ್ಯದಿಂದ ನವ್ಯ ದಿವ್ಯವಾದ ಇಂದ್ರ ನಗರಿಯನ್ನೇ ನಿರ್ಮಿಸಿದ್ದ. ಆ ಸುರಪುರಿಯ ವೈಭವ ಸಾಮ್ರಾಜ್ಯದ ಪಡಿಯಚ್ಚುಗಳೆಲ್ಲ ಅಚ್ಚಳಿಯದೇ ಹೊಚ್ಚ ಹೊಸದಾಗಿ ಮೈತಳೆದು ನಿಂತಿದ್ದವು. ಆತ್ರೇಯ ಮುನಿ ಸ್ವಯಂ ಸುರರಾಜನಾಗಿ ಮಾರ್ಪಡಿಸಲ್ಪಟ್ಟು ಇಂದ್ರ ಸಿಂಹಾಸನದಲ್ಲಿ

ವಿರಾಜಮಾನನಾಗಿದ್ದ. ಅವನ ಮಡದಿಯು ಶಚೀರಾಣಿಯಾಗಿ ಅವನ ಪಕ್ಕದಲ್ಲಿಯೇ ಸುರಸಮ್ರಾಟನ ಸಿಂಹಾಸನದ ಅರ್ಧಾಸನದಲ್ಲಿ ಆಸೀನಳಾಗಿದ್ದಳು. ದರ್ಪೋದ್ಧತರಾದ ದೈತ್ಯದಾನವರು ಆ ಕೃತಕ ಇಂದ್ರಪುರಿಯ ಮೇಲೆ ಭೀಕರ ಘೋರಾ ಯುಧಗಳನ್ನು ಹಿಡಿದು ಒಮ್ಮೆಲೇ ಎರಗಿದರು. ದೇವೇಂದ್ರಾಕಾರದ ಆತ್ರೇಯ ಹೆದರಿ ಹೌಹಾರಿದ. ಮಹಾದರ್ಪಿಷ್ಠರೂ ಬಲಿಷ್ಠರೂ ಆದ ಆ ದೈತ್ಯರನ್ನು ಹೇಗೆ ಎದುರಿಸಬೇಕು ಎನ್ನುವುದು ಅವನಿಗೆ ಹೊಳೆಯದಾಯಿತು. ವಿಶ್ವಕರ್ಮನು ನಿರ್ಮಿಸಿಕೊಟ್ಟ ವಜ್ರಾಯುಧ ವನ್ನು ವೈರಿಗಳ ಮೇಲೆ ಹೇಗೆ ಪ್ರಯೋಗಿಸಬೇಕು ಎನ್ನುವುದು ಅವನಿಗೆ ತಿಳಿಯದಾಯಿತು.

ಕ್ಷಣಾರ್ಧದಲ್ಲಿ ಶೂರ ವೀರರು ಧೀರದಾರುಣರು ಆದ ಆ ದೈತ್ಯ ದಾನವರು ಅವನ ನವ್ಯನಾಕ ಲೋಕವನ್ನೆಲ್ಲ ಆಕ್ರಮಿಸಿ ಬಿಟ್ಟರು. ಈ ನೂತನ ದೇವೇಂದ್ರ ದಂಪತಿಗಳ ಮೇಲೆ ಏರಿಬಂದರು. ಆಗ ಆ ಆತ್ರೇಯ ಮುನಿಯು ಸಂಭ್ರಾಂತನಾಗಿ ವೇದೋಕ್ತವಾದ ಇಂದ್ರ ಸೂಕ್ತವನ್ನು ಹೇಳುತ್ತಾ ದೇವೇಂದ್ರನನ್ನು ಪ್ರಾರ್ಥಿಸಿದನು.

**ಆತ್ರೇಯ ಉವಾಚ-**

''ನೂರು ಯಾಗಗಳನ್ನು ಮಾಡಿ ಇಂದ್ರಪದವಿಯನ್ನು ಪಡೆದವನೂ ಹವಿರ್ಭಾಗಿ ಯಾದವನೂ ಮೂರು ಲೋಕಗಳನ್ನು ಪಾಲಿಸುವವನೂ ಇಂದ್ರನು ನಮ್ಮೆಲ್ಲರನ್ನು ರಕ್ಷಿಸಲಿ.'' ಈ ರೀತಿಯಾಗಿ ಇಂದ್ರಸೂಕ್ತದಿಂದ ದೇವೇಂದ್ರನನ್ನು ಸ್ತೋತ್ರಮಾಡಿ ಆ ಆತ್ರೇಯನು ತನ್ನ ಮೇಲೆ ದಾಳಿಯಿಟ್ಟ ದೈತ್ಯ ದಾನವರನ್ನು ಕುರಿತು ಹೆದರಿ ಕೈಜೋಡಿಸಿ ನುಡಿದ. ''ದೈತ್ಯದಾನವರೇ, ನಾನು ನಿಜವಾದ ಇಂದ್ರನಲ್ಲ ಇವಳು ನಿಜವಾದ ಶಚೀದೇವಿ ಯಲ್ಲ. ನಾನು ಆತ್ರೇಯ. ಇದೇ ನೆಲದಲ್ಲಿಯೇ ಹುಟ್ಟಿ ಬೆಳೆದ ನಿಮ್ಮವನೇ ಆದ ಹುಲು ಮನುಜ. ನನ್ನ ಪಕ್ಕದಲ್ಲಿ ಇರುವ ಇವಳು ಶಚೀದೇವಿಯಂತೂ ಸರ್ವಥಾ ಅಲ್ಲ. ನೀವು ಕಾಣುವ ಈ ಕೃತಕಪುರಿಯು ಅಮರಾವತಿಯಲ್ಲ. ಇಲ್ಲಿ ಸುತ್ತಲೂ ನಂದನವನದಂತೆ ಕಂಗೊಳಿಸುವ ಉಪವನವು ನಂದನವನವು ಖಂಡಿತ ಅಲ್ಲ. ಇದೊಂದು ನನ್ನ ತಪೋವನ ಇದು ಸತ್ಯ. ವೃತ್ರವೈರಿಯು, ವಜ್ರಧಾರಿಯು, ಬೆಟ್ಟಗಳ ರೆಕ್ಕೆಗಳನ್ನು ವಜ್ರಾಯುಧಾದಿಂದ ಕತ್ತರಿಸಿದವನೂ ಆದ ದೇವೇಂದ್ರ ಎಂದರೆ ಸಹಸ್ರಾಕ್ಷ. ಎಂದರೆ ಸಾವಿರ ಕಣ್ಣು ಉಳ್ಳವ. ನನ್ನನ್ನು ಚೆನ್ನಾಗಿ ನೋಡಿರಿ. ನನಗೆ ಕಣ್ಣುಗಳು ಇರುವುದು ಎರಡು ಮಾತ್ರ. ನಾನಂತೂ ಆ ಸಹಸ್ರಾಕ್ಷ ಆಗಬಲ್ಲೇ? ನನ್ನಂತಹ ಬಡಬ್ರಾಹ್ಮಣನಿಂದ ಮತ್ತು ಬಡಕಲ ಬ್ರಾಹ್ಮಣನಿಂದ ವೃತ್ರಾಸುರನನ್ನು ಸಂಹರಿಸಲಿಕ್ಕೆ ಆದೀತೆ? ನಾನೇ ಆ ವೃತ್ರ ವೈರಿಯೆಂದು ನೀವು ನನ್ನ ಮೇಲೆ ಸೇಡು ತೀರಿಸಿಕೊಳ್ಳಲಿಕ್ಕೆ ಬಂದಿರುವಿರಿ. ಇಲ್ಲಿ ಇರುವುದು ನಿಜವಾದ ವಜ್ರಾಯುಧವಲ್ಲ. ಅದರ ನಕಲು ಆಯುಧ ಇದನ್ನು ಕೂಡ ನನಗೆ ಎತ್ತಲಿಕ್ಕೆ ಆಗುವದಿಲ್ಲ. ಇದನ್ನು ಪ್ರಯೋಗಿಸುವ ಮಾತು ದೂರೇ ಉಳಿಯಿತು. ಇಂಥ ವಜ್ರಪಾಣಿಯೂ ವೃತ್ರಾಂತಕನೂ ಪರ್ವತ ಭೇದಕನೂ ಶಚಿಪತಿಯೂ ಆದ ಯಥಾರ್ಥ ದೇವೇಂದ್ರನು ಮುಗಿಲ ಮೇಲಿನ ಸ್ವರ್ಗಲೋಕದಲ್ಲಿ ಇರುತ್ತಾನೆ. ನಾನೊಬ್ಬ ಆಸೆ ಬುರುಕ ಬ್ರಾಹ್ಮಣ. ಇಂದ್ರ ವೈಭವದ ಭೋಗದ ಆಸೆಯಿಂದ ನಾನು ಮಾಡಿದ ತಪೋಬಲವನ್ನೆಲ್ಲ ಉಪಯೋಗಿಸಿ ಆ ಇಂದ್ರ ವೈಭವವನ್ನೆಲ್ಲ ನೆಲದ ಮೇಲೆ ಆಕರ್ಷಿಸಿ ತಂದಿರುವೆನು. ಅದೇ ನನಗೆ ಈಗ ಮುಳುವಾಗಿದೆ. ನಾನೇ ನಿಜವಾದ ಇಂದ್ರನೆಂಬ ಭ್ರಾಂತಿಯಿಂದ ನೀವು ನನ್ನನ್ನು ಕೊಲ್ಲಲಿಕ್ಕೆ ಬಂದಿದ್ದೀರಿ.

ನಿಮಗೆ ವಸ್ತು ಸ್ಥಿತಿಯನ್ನು ನಿವೇದಿಸಿದ್ದೇನೆ. ಈಗ ದಯಮಾಡಿ ನನ್ನನ್ನು ಬಿಟ್ಟು ಬಿಡಿರಿ'' ಎಂದು ಆತ್ರೇಯನು ಆ ದೈತ್ಯಧುರೀಣರಿಗೆಲ್ಲ ದೈನ್ಯದಿಂದ ಅಂಗಲಾಚಿ ಬೇಡಿಕೊಂಡನು.

ಅದನ್ನು ಕೇಳಿ ಆ ದೈತ್ಯರಿಗೂ ಕೂಡ ನಗೆ ಬಂದಿತು. ಆ ಆಶೆಬುರಕ ಬ್ರಾಹ್ಮಣನ ದೈನ್ಯ ದುರವಸ್ಥೆಗಳನ್ನು ಕಂಡು ಅವರಿಗೆ ದಯೆ ಹುಟ್ಟಿತು. ಅವರು ನಗುತ್ತಾ ನುಡಿದರು. ''ಎಲೈ ಆತ್ರೇಯ. ನಿನ್ನ ಈ ಹುಚ್ಚು ಹವ್ಯಾಸ ನೋಡಿ ನಮಗೆ ನಗೆ ಬರುವುದು. ಇನ್ನು ಮೇಲಾದರೂ ನೀನು ಇಂದ್ರ ವೈಭವದ ಆಸೆಯನ್ನು ಬಿಟ್ಟುಬಿಡು. ದೇವೇಂದ್ರನ ಅನುಕರಣೆ ಮಾಡಲಿಕ್ಕೆ ಹೋಗಬೇಡ. ನೀನು ಈ ಎಲ್ಲ ಕೃತಿಮ ವೈಭವವನ್ನು ಉಪಸಂಹರಿಸಿ ಬಿಡು'' ಎಂದು ಗದರಿಸಿ ಕರುಣೆಯಿಂದ ಆ ಬ್ರಾಹ್ಮಣನಿಗೆ ಏನೂ ಮಾಡದೇ ದೈತ್ಯರೆಲ್ಲರು ಹೊರಟು ಹೋದರು.

ಅವರು ಹೋದ ಕೂಡಲೇ ಆತ್ರೇಯನು ವಿಶ್ವಕರ್ಮನನ್ನು ಕರೆಸಿ, ''ವಿಶ್ವಕರ್ಮನೇ, ನೀನು ನಿರ್ಮಿಸಿದ ಈ ಇಂದ್ರ ವೈಭವವನ್ನೆಲ್ಲಾ ಕೂಡಲೇ ಉಪಸಂಹರಿಸು ಇವೆಲ್ಲವು ನನ್ನನ್ನೆ ಸಂಹರಿಸಲು ಕಾರಣವಾಗುತ್ತಲಿವೆ. ಈ ಇಂದ್ರನ ಕೃತಕ ವೈಭವದಿಂದ ನನಗೆ ಏನೂ ಪ್ರಯೋಜನವಿಲ್ಲ. ಅನ್ಯಾಯವಾಗಿ ನಾವು ಯಾವುದನ್ನಾದರೂ ಬಲವಂತದಿಂದ ಎಳೆದು ತಂದರೆ ಅದರಿಂದ ಎಂದೂ ಸುಖ ಉಂಟಾಗಲಾರದು. ನನ್ನ ಆಶ್ರಮ ಮೊದಲಿದ್ದಂತೆ ಆಗಲಿ. ಮೃಗ ಪಕ್ಷಿಗಳು ಮರಗಳು ಲತಾಮಂಟಪಗಳು ತಿಳಿನೀರಿನ ತೊರೆಗಳು ನಿರ್ಮಲ ಜಲದ ಹೊಕ್ಕರಣಗಳು ಇಲ್ಲಿಯ ಏಕಾಂತ ಆಶ್ರಮಗಳು ಇಲ್ಲಿಯ ನಿಸರ್ಗ ಸುಂದರ ಪರಿಸರವು ಎಷ್ಟು ರಮಣೀಯ! ನನ್ನ ಮೊದಲಿನ ಏಕಾಂತ ರಮಣೀಯವಾದ ಪುಣ್ಯಾಶ್ರಮವನ್ನು ಮೊದಲಿದ್ದಂತೆಯೇ ಮಾಡಿಕೊಡು. ನನಗೆ ಇಂದ್ರ ವೈಭವದ ಐಶ್ವರ್ಯವು ಬೇಡ ನನಗೆ ಮೊದಲಿದ್ದಂತೆಯೇ ಎಲ್ಲವನ್ನೂ ರೂಪಿಸಿಕೊಡು ನನ್ನ ಮೇಲೆ ಅನುಗ್ರಹಮಾಡು ಎಂದು ಬೇಡಿಕೊಂಡ.''

ಇದನ್ನು ಕೇಳಿ ವಿಶ್ವಕರ್ಮನು ನಸುನಗುತ್ತಾ ತಾನು ನವೀನವಾಗಿ ನಿರ್ಮಿಸಿದ ಇಂದ್ರ ವೈಭವನ್ನು ಉಪಸಂಹರಿಸಿದ. ಆತ್ರೇಯ ಮುನಿಯು ಯಥಾ ಪ್ರಕಾರ ತನ್ನ ಧರ್ಮಪತ್ನಿ ಹಾಗೂ ಪಟ್ಟ ಶಿಷ್ಯರೊಂದಿಗೆ ಗೌತಮೀ ತೀರದ ತನ್ನ ಮೊದಲಿನ ಆಶ್ರಮದೊಂದಿಗೆ ತಪೋಜೀವನವನ್ನು ಮುಂದುವರೆಸಿದ. ತಪೋಯಜ್ಞ, ಸ್ವಾಧ್ಯಾಯ ಜ್ಞಾನಯಜ್ಞಗಳನ್ನು ಅವಿರತವಾಗಿ ನೆರವೇರಿಸಿದ. ಅದರಿಂದ ದೇವತೆಗಳು ಪ್ರೀತರಾಗಿ ಅವನನ್ನು ಆಶೀರ್ವದಿಸಿದರು. ಆ ಆತ್ರೇಯ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಜನ್ಮಾಂತರದಲ್ಲಿ ಎಂದಾದರು ಒಂದು ದಿನ ಅದಕ್ಕೆ ತಕ್ಕ ಸಾಧನ ಪರಿಪೂರ್ತಿಯಾಗಿ ಪುರಂದರಪದಕ್ಕೆ ಅವಶ್ಯವಾದ ಪುಣ್ಯವು ಪರಿಪಾಕೋನ್ಮುಖವಾಗಿದ್ದರೆ ಇಂದ್ರಪದವಿಯು ಖಂಡಿತವಾಗಿಯೂ ದೊರಕುವುದು. ಸಾಮಾನ್ಯರಿಗೆ ಈ ತೀರ್ಥದಲ್ಲಿ ಮಿಂದು ಬಂದು ದಾನ ಧರ್ಮಾದಿಗಳನ್ನು ಮಾಡಿದರೆ ಅಥವಾ ಈ ತೀರ್ಥವನ್ನು ಸ್ಮರಿಸಿದರೇ ಪಾಪ ಪರಿಹಾರವಾಗುವುದು.

## ಕಪಿಲಾ ಸಂಗಮ

**ಬ್ರಹ್ಮ:-** ನಾರದಾ, ಕಪಿಲಾಸಂಗಮ ಎಂಬ ತೀರ್ಥ ಪುಣ್ಯಪ್ರದ. ಅದರ ಮಹಾತ್ಮ್ಯೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಗೌತಮೀತೀರದಲ್ಲಿ ಮಹಾಜ್ಞಾನಿಯಾದ ಕಪಿಲ ಎಂಬ ಮಹರ್ಷಿಯು ತಪಸ್ಸು ಮಾಡುತ್ತಿದ್ದ. ಆ ಕಾಲದಲ್ಲಿ ಮಹಾ ಪಾಪಿಯಾದ ವೇನ ಎಂಬ

ಲೋಕಕಂಟಕನಾದ ದುಷ್ಟರಾಜನನ್ನು ಬ್ರಹ್ಮಋಷಿಗಳು ಶಾಪಕೊಟ್ಟು ನಾಶಮಾಡಿದ್ದರು. ರಾಜ್ಯವೆಲ್ಲವೂ ಅರಾಜಕವಾಗಿತ್ತು. ಪ್ರಜೆಗಳು ಅನಾಥರಾಗಿದ್ದರು. ಇದನ್ನು ತಿಳಿದು ವಾಮ ದೇವ ಮೊದಲಾದ ಮಹಾಮಹರ್ಷಿಗಳು.

ಕಪಿಲ ಮುನಿಯ ಮಾತಿನಂತೆ ವಾಮದೇವ ಮೊದಲಾದ ಮಹರ್ಷಿಗಳು ವೇನನ ತೊಡೆಯನ್ನು ಕಡೆದರು. ಅದರಿಂದ ಕಪ್ಪುಬಣ್ಣ, ಭಯಂಕರ ಪರಾಕ್ರಮಶಾಲಿಯಾದ ಓರ್ವ ಪುರುಷನು ಹುಟ್ಟಿದನು. ಅವನಿಗೆ ''ನಿಷಾದ'' ಎಂದು ಹೆಸರಾಯಿತು. ನಿಷಾದ ಎಂದರೆ ಬೇಡ ಎಂದು ಅರ್ಥ. ಅವನಿಂದ ಮುಂದೆ ನಿಷಾದರ ಅರ್ಥಾತ್ ಬೇಡರ ಸಂತಾನವು ಬೆಳೆಯಿತು. ಅನಂತರ ವಾಮದೇವನೇ ಮೊದಲಾದ ಮಹಾಮುನಿಗಳು ವೇನನ ಶವ ಶರೀರದ ಧರ್ಮಯುಕ್ತವಾದ ಬಲಗೈಯನ್ನು ಕಡೆದರು. ಆದರಿಂದ ಸಕಲ ರಾಜ ಲಕ್ಷಣಗಳಿಂದ ಶೋಭಿಸುವ ಗಂಭೀರ ಧ್ವನಿಯ ಪೃಥು ಎಂಬ ರಾಜನು ಹುಟ್ಟಿದನು. ಆ ಪೃಥು ರಾಜನು ಸಕಲ ವಿಧವಾದ ರಾಜ ಲಕ್ಷಣಗಳಿಂದಲೂ ಬ್ರಹ್ಮತೇಜಸ್ಸಿನಿಂದಲೂ ಒಡಗೂಡಿದ್ದನು. ದೇವತೆಗಳೆಲ್ಲರು ಅವನನ್ನು ಅಭಿನಂದಿಸಿ ಉತ್ತಮೋತ್ತಮ ವಾದ ವರಗಳನ್ನು ಅವನಿಗೆ ದಯಪಾಲಿಸಿದರು ಮತ್ತು ಅನೇಕ ಅಮೋಘವಾದ ಅಸ್ತ್ರಗಳನ್ನು ರಹಸ್ಯವಾದ ಮಂತ್ರಗಳನ್ನು ಅನುಗ್ರಹಿಸಿದರು. ಮತ್ತು ಪ್ರಾಣಿಗಳಿಗೆಲ್ಲ ಆಹಾರವನ್ನು ಕಲ್ಪಿಸಲಿಕ್ಕೆ ಹೇಳಿದರು. ''ಭೂದೇವಿಯು ಎಲ್ಲ ಔಷಧಿ ವನಸ್ಪತಿಗಳನ್ನು ಆಹಾರ ಪದಾರ್ಥಗಳನ್ನು ತನ್ನಲ್ಲಿ ಅಡಗಿಸಿ ಇಟ್ಟುಕೊಂಡಿದ್ದಾಳೆ. ಅವನ್ನೆಲ್ಲ ಹೊರತೆಗೆದು ಪ್ರಾಣಿಗಳಿಗೆಲ್ಲ ಹೊಟ್ಟೆಗೆ ಅನ್ನ, ದೇಹಕ್ಕೆ ಆರೋಗ್ಯ ಆರೋಗ್ಯಕ್ಕಾಗಿ ಪುಷ್ಟಿದಾಯಕ ಪದಾರ್ಥಗಳು ಜನರಿಗೆಲ್ಲ ದೊರಕುವಂತೆ ಮಾಡು'' ಎಂದು ಅವನಿಗೆ ಆದೇಶವಿತ್ತರು.

ಈ ಮಾತನ್ನು ಕೇಳಿದ ಕೂಡಲೇ ಕೈಯಲ್ಲಿ ಬಿಲ್ಲನ್ನು ಸ್ವೀಕರಿಸಿದ ಆ ಪೃಥುರಾಜ. ಅದರಲ್ಲಿ ಬಾಣವನ್ನು ಹೂಡಿದ. ಹೆದೆಯನ್ನು ಏರಿಸಿದ. ಧನುಷ್ಟಂಕಾರ ಮಾಡಿದ. ಭೂದೇವಿ ಯನ್ನು ಬೆದರಿಸಿದ. ''ಭೂದೇವಿ, ಎಲ್ಲ ಔಷಧಿ ವನಸ್ಪತಿ ಆಹಾರಗಳನ್ನು ನೀನು ನುಂಗಿ ಕುಳಿತಿದ್ದೀಯಾ? ಪ್ರಜೆಗಳ ಕಲ್ಯಾಣಕ್ಕಾಗಿ ಅವುಗಳನ್ನೆಲ್ಲ ಕೊಡು ಹೊರಗೆ ತೆಗೆದು ಇಡು.''

ಪೃಥುರಾಜನನ್ನು ನೋಡಿಯೇ ಹೆದರಿದ ಭೂದೇವಿಯು ಅವನ ಮಾತಿನಿಂದ ಮತ್ತಷ್ಟು ಬೆದರಿದಳು ವಿಶಾಲ ದೃಷ್ಟಿಯ ಆ ಮಹಾರಾಜನನ್ನು ಕುರಿತು ಆ ಭೂಮಿ ತಾಯಿಯು ''ಮಹಾರಾಜ, ಆಹಾರ, ವನಸ್ಪತಿ, ಔಷಧ ಎಲ್ಲವೂ ನನ್ನಲ್ಲಿ ಜೀರ್ಣವಾಗಿ ಹೋಗಿರುತ್ತದೆ. ಈಗ ನಾನು ಅವುಗಳನ್ನೆಲ್ಲ ಎಲ್ಲಿಂದ ತರಲಿ! ಹೇಗೆ ಕೊಡಲಿ?'' ಎಂದು ಕೇಳಿದಳು.

ಅವಳ ಮಾತನ್ನು ಕೇಳಿ ಪೃಥುರಾಜನಿಗೆ ಮತ್ತಷ್ಟು ಕೋಪ ಕೆರಳಿತು. ಅವನು ಗಡುಸಾಗಿ ಗದ್ದರಿಸಿದ. ''ಭೂದೇವಿ ನೀನು ಔಷಧಿ, ಆಹಾರಗಳನ್ನು ಕೊಡದಿದ್ದರೆ, ನಾನು ಈಗಲೇ ನಿನ್ನನ್ನು ಕೊಂದುಹಾಕುತ್ತೇನೆ.''

ಅದನ್ನು ಕೇಳಿ ಭೂಮಿಯು ನಡುಗುತ್ತಾ ನುಡಿದಳು. ''ರಾಜಶ್ರೇಷ್ಠ, ನೀನು ಮಹಾಜ್ಞಾನಿ. ನೀನು ಅಬಲೆಯಾದ ನನ್ನನ್ನು ಕೊಲ್ಲುವೆಯಾ? ಸ್ತ್ರೀಹತ್ಯಾ ಪಾಪಬರುವುದಿಲ್ಲವೇ? ಒಂದು ವೇಳೆ ನನ್ನನ್ನು ಕೊಂದರೆ ನಿನ್ನ ಪ್ರಜೆಗಳಿಗೆ ನಿಲ್ಲಲು ನೆಲವೆಲ್ಲಿ? ಜನರಿಗೆಲ್ಲ ಉಳಿಯಲು ಸ್ಥಳವೆಲ್ಲಿ ನಿನಗೆ ನೆಲೆಯೆಲ್ಲಿ? ಇದನ್ನೆಲ್ಲ ವಿಚಾರಮಾಡಿರುವೆಯಾ?''

ಆಗ ಪೃಥುರಾಜನು "ಭೂದೇವಿ, ಒಬ್ಬರನ್ನು ವಧಿಸಿದರೆ ಅನೇಕ ಜನರಿಗೆ, ಉಪಕಾರವಾಗುತ್ತಿದ್ದರೆ, ಅವನು ಪುರುಷನೇ ಇರಲಿ ಸ್ತ್ರೀಯೇ ಇರಲಿ, ಕೊಂದರೆ ಪಾಪವಿಲ್ಲ, ಜನರೆಲ್ಲರು ಬಾಳಿ ಬದುಕಲು ಅತ್ಯಾವಶ್ಯಕವಾದ ವನಸ್ಪತಿಗಳನ್ನೆಲ್ಲ ನುಂಗಿಹಾಕಿದ ನಿನ್ನನ್ನು ಕೊಂದರೆ ಸ್ತ್ರೀಹತ್ಯಾ ಪಾಪ ಬರುವುದಿಲ್ಲ.

**ಯಸ್ಮಿನ್ ನಿಪಾತಿತೇ ಸೌಖ್ಯಂ**
**ಬಹೂನಾಂ ಉಪಜಾಯತೇ ।**
**ಮುನಯಃ ತದ್ವಧಂ ಪ್ರಾಹುಃ**
**ಅಶ್ವಮೇಧಶತಾಧಿಕಂ ॥"**

ಯಾವ ಒಬ್ಬನನ್ನು ಕೊಂದರೆ, ಅನೇಕಾನೇಕ ಜನರಿಗೆ ಉಪಕಾರ ಆಗುವುದೋ, ಲೋಕಕ್ಷೇಮಕ್ಕಾಗಿ ಅಂಥ ಓರ್ವ ವ್ಯಕ್ತಿಯನ್ನು ವಧಿಸಿದರೆ ನೂರು ಅಶ್ವಮೇಧ ಯಜ್ಞ ಮಾಡಿದ ಪುಣ್ಯ ಬರುವುದು ಎಂದು ಶಾಸ್ತ್ರಕಾರರು ಹೇಳುತ್ತಾರೆ."

ಹೀಗೆ ಭೂದೇವಿ ಹಾಗೂ ಪೃಥುಮಹಾರಾಜರ ನಡುವೆ ನಡೆದ ಮಾತಿನ ಮಸೆತ ಅಥವಾ ವಾಕ್ಕಲಹವು ವಿರಸಕ್ಕೆ ತಿರುಗಿ ವಿಕೋಪಕ್ಕೆ ಹೋದಾಗ, ದೇವತೆಗಳು ಮಧ್ಯದಲ್ಲಿ ಪ್ರವೇಶಿಸಿದರು. ಇಬ್ಬರನ್ನು ಸಂತೈಸಿ ಹಿತವಚನಗಳನ್ನು ಹೇಳಿ ಭೂಮಿಯನ್ನು ಕುರಿತು ನುಡಿದರು. "ಭೂದೇವಿ, ನೀನು ಭೂಮಾತೆ ಇದ್ದು ಈಗ ಗೋಮಾತೆಯಾಗು. ಹಸುವಿನ ಹಾಲಿನ ರೂಪದಿಂದ ಈ ಪೃಥುರಾಜನಿಗೆ ಆಹಾರ, ವನಸ್ಪತಿ, ಔಷಧಿ, ಬೇಕಾದುದನ್ನೆಲ್ಲ ನೀಡು ಅದರಿಂದ ಈ ಪೃಥ್ವೀ ಪತಿಯಾದ ಈ ಪೃಥುರಾಜನು ಪ್ರೀತನಾಗುವನು. ಇವನ ಎಲ್ಲ ಪ್ರಜೆಗಳ ಪ್ರಾಣರಕ್ಷಣೆಯಾಗುವದು, ಆದರಿಂದ ಲೋಕಕ್ಕೆಲ್ಲ ಕ್ಷೇಮ ಉಂಟಾಗುವುದು." ದೇವತೆಗಳ ಆದೇಶದಂತೆ ಭೂದೇವಿಯು ಹಸುವಿನ ರೂಪವನ್ನು ಧರಿಸಿ ಕಪಿಲ ಮುನಿಯ ಬಳಿಯಲ್ಲಿ ನಿಂತುಕೊಂಡಳು. ಪೃಥುರಾಜನು ಹಸುವಿನ ರೂಪದಲ್ಲಿದ್ದ ಆ ಭೂದೇವಿಯಿಂದ ಆಹಾರ ವಸ್ತುಗಳನ್ನು ಕರೆದನು. ಇದರಂತೆ ದೇವತೆಗಳು, ಗಂಧರ್ವರು, ಋಷಿಗಳು, ಕಪಿಲ ಮಹಾಮುನಿ, ವಾಮದೇವ ಮೊದಲಾದ ಮುನಿ ಮನೀಷಿಗಳು, ನರ್ಮದಾ, ಸರಸ್ವತಿ, ಭಾಗೀರಥೀ, ಗೋದಾವರಿ, ಮೊದಲಾದ ಪುಣ್ಯ ನದಿಗಳಲ್ಲಿ ಗೋರೂಪಳಾದ ಭೂದೇವಿಯಿಂದ ತಮಗೆ ಬೇಕು ಬೇಕಾದ ಪದಾರ್ಥಗಳನ್ನು ಹಾಲಿನ ರೂಪದಿಂದ ಕರೆದರು. ಗೌತಮೀ ತೀರದಲ್ಲಿ ಪೃಥುರಾಜನು ಕರೆಯಲು ಅವನಿಂದ ಪವಿತ್ರವಾದ ಕಪಿಲಾ ಎಂಬ ನದಿಯು ಜನಿಸಿತು. ಆ ಕಪಿಲಾನದಿಯು ಗೌತಮೀ ನದಿಯನ್ನು ಸೇರಿತು. ಅವನಿಂದ ಆ ತೀರ್ಥವು ಕಪಿಲಾಸಂಗಮ ತೀರ್ಥ ಎಂದು ಹೆಸರಾಯಿತು.

## ದೇವಸ್ಥಾ ತೀರ್ಥ

**ಬ್ರಹ್ಮ:-** ಈ ಗೌತಮೀ ತೀರದ ದೇವಸ್ಥಾನ ಎಂಬ ಪ್ರಸಿದ್ಧ ತೀರ್ಥದ ಮಹಿಮೆ ಹೀಗಿದೆ. ಬಹುಕಾಲದ ಹಿಂದೆ ಕೃತಯುಗದ ಪ್ರಾರಂಭದಲ್ಲಿ ದೇವದಾನವರ ನಡುವೆ ಘೋರ ಯುದ್ಧ ನಡೆಯಿತು. ಅನಂತರದಲ್ಲಿ ಅವರಿಬ್ಬರ ನಡುವೆ ಹರಿಯ ಹಂಚಿಕೆಯಂತೆ ಒಡಂಬಡಿಕೆಯು ಆಯಿತು. ಅನಂತರ ಅವರಿಬ್ಬರು ಒಟ್ಟುಗೂಡಿ ಹಾಲಿನ ಹೆಗ್ಗಡಲನ್ನು ಆದಿಶೇಷ ಎಂಬ ಹಾವನ್ನೇ ಹಗ್ಗವನ್ನಾಗಿ ಮಾಡಿ ಮಂದರ ಪರ್ವತವನ್ನು ಇಟ್ಟು ಮಂಥನ

ಮಾಡಿದರು. ಆ ಸಮುದ್ರ ಮಂಥನದಿಂದ ಅಮೃತವು ಹುಟ್ಟಿತು. ಆಗ ದೈತ್ಯಕುಲದಲ್ಲಿ ಪರಮ ಸುಂದರಿಯಾದ ಸಿಂಹಿಕಾ ಎಂಬ ನಾರೀಮಣಿ ಇದ್ದಳು. ಅವಳ ಮಗನೇ ರಾಹು ಎಂಬ ದೈತ್ಯ ಅವನು ಮಹಾ ಬಲಿಷ್ಠ. ಅಷ್ಟೇ ಯುಕ್ತಿವಂತ. ಎಲ್ಲದರಲ್ಲಿಯೂ ಚತುರಮತಿ ಮತ್ತು ಪ್ರತ್ಯುತ್ಪನ್ನ ಮತಿಯೂ ಆಗಿದ್ದ. ರಾಕ್ಷಸರ ಗುಂಪಿನಲ್ಲಿ ಅಮೃತ ಕಲಶಕ್ಕಾಗಿ ವಿವಾದ ಉತ್ಪನ್ನವಾದಾಗ ಅವರೆಲ್ಲರೂ ಅದೇ ಸಮಯದಲ್ಲಿ ಅಲ್ಲಿಗೆ ಬಂದ ತ್ರಿಲೋಕ ಸುಂದರಿಯಾದ ಮೋಹಿನೀ ಎಂಬ ಮಾಯಾಂಗನೆಯ ಕೈಯಲ್ಲಿ ಆ ಅಮೃತ ಕಲಶವನ್ನು ಕೊಟ್ಟರು. ಇದನ್ನೆಲ್ಲ ನಮ್ಮ ದೈತ್ಯರಿಗೇ ನೀನು ಸಮನಾಗಿ ಹಂಚು ಎಂದು ಹೇಳಿದರು. ಆ ಚಂಚಾಲಕ್ಷಿಯ ಮಿಸುನಿ ಬಣ್ಣ, ಮಿಂಚಿನ ಕಣ್ಣು, ಬೆಡಗು ಬಿನ್ನಾಣಗಳಿಗೆ ಮನಸೋತು ಮರುಳಾದ ದಾನವ ಧುರೀಣರನ್ನೆಲ್ಲ ವಂಚಿಸಿ ದೇವತೆಗಳಿಗೆ ಮಾತ್ರ ಅಮೃತವನ್ನು ಅವಳು ಹಂಚತೊಡಗಿದಳು. ಚಾಣಾಕ್ಷನಾದ ರಾಹು ದೈತ್ಯರ ಸಾಲಿನಿಂದ ತೆವಳಿಕೊಂಡು ದೇವತೆಗಳ ಸುರಶ್ರೇಣಿಯನ್ನು ಸಾರಿದ. ಅಮೃತಕ್ಕಾಗಿ ಕೈ ಒಡ್ಡಿದ. ಅಮೃತವು ರಾಹುವಿನ ಕೈಯಲ್ಲಿ ಬಿತ್ತು ಇದು ಸೂರ್ಯ ಚಂದ್ರರ ಕಣ್ಣಿಗೂ ಬಿತ್ತು. ಅವರು ಕೂಡಲೇ ವಿಷ್ಣುವಿಗೆ ಸನ್ನೆ ಮಾಡಿದರು. ತಕ್ಷಣದಲ್ಲಿ ಮೋಹಿನೀ ರೂಪ ಧರಿಸಿದ ವಿಷ್ಣು ರಾಹುವಿನ ತಲೆಯನ್ನು ಕತ್ತರಿಸಿದ. ಆದರೆ ಚತುರನಾದ ರಾಹು ಅಷ್ಟರಲ್ಲಿ ಅವಸರದಿಂದ ಅಮೃತವನ್ನು ತನ್ನ ಗಂಟಲಿಗೆ ಇಳಿಸಿಬಿಟ್ಟಿದ್ದ. ಅಮೃತ ಪ್ರಾಶನ ಆಗಿ ಹೋಗಿತ್ತು. ಅದರಿಂದ ಅವನು ಅಮರನಾದ. ದೇವತೆಗಳ ನವಗ್ರಹದಲ್ಲಿ ಸ್ಥಾನವನ್ನು ಗಿಟ್ಟಿಸಿಕೊಂಡ. ಆದರೆ ಅವನ ಸಂತತಿ ಮಾತ್ರ ರಾಕ್ಷಸ ಸಂತತಿಯಾಗಿಯೇ ಉಳಿಯಿತು. ರಾಹುವಿಗೆ ಮೇಘಹಾಸ ಎಂಬ ಮಗನು ಇದ್ದ. ಅವನು ಅಪ್ಪಟರಾಕ್ಷಸ, ಅವನ ತಂದೆಯನ್ನು ಹರಿ ಕೊಂದದ್ದಕ್ಕಾಗಿ ಅವನಿಗೆ ದುಃಖವಾಯಿತು. ಆಗ ಅವನು ಗೌತಮೀ ತೀರದಲ್ಲಿ ನಿಂತು ಘೋರ ತಪಸ್ಸನ್ನು ಆಚರಿಸಿದ. ಅವನ ಆ ದಾರುಣವಾದ ತಪಸ್ಸಿನಿಂದ ಊರ್ಧ್ವ ಲೋಕಗಳಲ್ಲಿ ಝಳ ತಾಗಿತು. ಅವನ ತಪಸ್ಸಿನ ತೀಕ್ಷ್ಣತೆಗೆ ಬಿಸಿತಾಕಿ ಬೆಚ್ಚಿದ ದೇವತೆಗಳು ಅವನ ಬಳಿಗೆ ಬಂದು ನುಡಿದರು. ''ಮಹಾಬಲಿಷ್ಠನಾದ ದೈತ್ಯಕುಮಾರ. ನಿನ್ನ ಈ ಘೋರ ತಪಸ್ಸನ್ನು ನಿಲ್ಲಿಸು ಗೌತಮೀ ಹಾಗೂ ಗಂಗಾಧರರ ಅನುಗ್ರಹದಿಂದ ನಿನ್ನ ಮನೋರಥಗಳೆಲ್ಲವು ಪೂರ್ಣವಾಗುವವು. ಶಿವಗಂಗೆಯರ, ಪ್ರಸಾದವಾದರೆ ಯಾವುದು ತಾನೇ ದುರ್ಲಭ ಈ ಲೋಕದಲ್ಲಿ?''

ದೇವತೆಗಳ ಆ ನುಡಿಯನ್ನು ಕೇಳಿ ಮೇಘಹಾಸನು ಗಂಭೀರನಾಗಿ ನುಡಿದ. ''ಸುರೇಶ್ವರರೇ, ನೀವು ನನ್ನ ಪೂಜ್ಯ ತಂದೆಯಾದ ರಾಹುವನ್ನು ಹರಿಯಿಂದ ಕೊಲ್ಲಿಸಿ ಅಪಮಾನ ಮಾಡಿದ್ದೀರಿ. ನನ್ನ ಪಾಲಿಗೆ ನನ್ನ ತಂದೆಯೇ ನನಗೆ ದೇವರು. ನೀವು ನನಗೂ ನನ್ನ ತಂದೆಗೂ ಹಿತವಾದುದನ್ನು ಪ್ರಿಯವಾದುದನ್ನು ಮಾಡಿದರೆ ಮಾತ್ರ ನಾನು ಈ ತಪಸ್ಸಿನಿಂದ ನಿವೃತ್ತನಾಗುತ್ತೇನೆ. ಇಲ್ಲದಿದ್ದರೆ ನಾನು ಆ ಸೇಡನ್ನು ತೀರಿಸಿಕೊಳ್ಳದೆ ಬಿಡುವುದಿಲ್ಲ, ಅಲ್ಲಿಯವರೆಗೆ ನಾನು ತಪಸ್ಸನ್ನು ನಿಲ್ಲಿಸುವುದಿಲ್ಲ. ತಂದೆಗೆ ಮಾಡಿದ ಉಪಚಾರದ ಸೇಡನ್ನು ತೀರಿಸಿಕೊಳ್ಳುವುದು ಪುತ್ರನ ಮುಖ್ಯವಾದ ಕರ್ತವ್ಯ. ಈಗ ನೀವು ನನ್ನ ಬಳಿಗೆ ಬಂದಿದ್ದೀರಿ. ನನ್ನ ದಾರುಣವಾದ ತಪಸ್ಸನ್ನು ನಿಲ್ಲಿಸಲು ಬೇಡಿಕೊಳ್ಳುತ್ತೀರಿ, ಇದರಿಂದ ನನ್ನ ಸೇಡು ತೀರಿದಂತಾಗಿದೆ. ಇನ್ನು ಮುಂದೆ ನೀವು ನಮ್ಮಿಬ್ಬರಿಗೂ ಸಂತೋಷವಾಗುವಂತೆ ಮಾಡಿದರೆ, ನಾನು ಸೇಡಿನ ಭಾವನೆಯನ್ನು ತ್ಯಜಿಸಿ ತಪಸ್ಸನ್ನು ನಿಲ್ಲಿಸಿ ನಿಮ್ಮೊಡನೆ ಸ್ನೇಹವನ್ನು ಬೆಳೆಸುತ್ತೇನೆ. ಈಗ ನೀವು ನನಗೂ ನಮ್ಮ ತಂದೆಗೂ ಸಂತೋಷವಾಗುವಂತೆ, ಉಚ್ಛಸ್ಥಾನಮಾನವನ್ನು ಕೊಟ್ಟು ಗೌರವಿಸಿರಿ. ಸಂತೋಷವುಂಟಾಗುವಂತೆ ಮಾಡಿರಿ.''

ಆಗ ದೇವತೆಗಳು ಮೇಘಹಾಸನ ತಂದೆಯಾದ ರಾಹುವನ್ನು ನವಗ್ರಹಗಳ ಮಂಡಲದಲ್ಲಿ ಇರಿಸಿ ಮಾನಾರ್ಹವಾದ ಸ್ಥಾನವನ್ನು ನೀಡಿದರು. ಮತ್ತು ದೇವತಾ ಗಣದಲ್ಲಿಯೇ ಅವನನ್ನು ಅವನ ಅಮರವಾದ ಕೇತುಖಂಡವನ್ನು ಸೇರಿಸಿಕೊಂಡರು. ಹಾಗೂ ಅವನ ಪುತ್ರನಾದ ಮೇಘಹಾಸನನ್ನು ರಾಕ್ಷಸಕುಲಕ್ಕೆ ಅಧಿರಾಜನನ್ನಾಗಿ ಮಾಡಿ ಅವನಿಗೂ ವಿಶೇಷ ಗೌರವವನ್ನು ತೋರಿಸಿದರು. ಅವನು ರಾಕ್ಷಸೇಶ್ವರನಾಗಿ ನೈರುತ್ಯ ದಿಕ್ಕಿನಲ್ಲಿ ನೆಲಸಿದನು. ಮತ್ತು ಅವನು ದೇವತೆಗಳಿಂದ ಸಿದ್ಧಿಪ್ರಸಿದ್ಧಿಯನ್ನು ಪಡೆದ ಆ ಸ್ಥಳಕ್ಕೆ ದೈತ್ಯೇಶ್ವರ ತೀರ್ಥ ಎಂದು ಹೆಸರಿಟ್ಟರು. ದೇವತೆಗಳೆಲ್ಲರು ವೇಘಹಾಸನ ಸಂತೋಷಕ್ಕಾಗಿ ಅಲ್ಲಿ ಸೇರಿದ್ದರಿಂದ ಮತ್ತು ದೇವದೇವನಾದ ಮಹಾದೇವನು ಅಲ್ಲಿ ನೆಲೆಸಿದ್ದರಿಂದ ಅದಕ್ಕೆ ದೇವತೀರ್ಥ ಎಂದು ಹೆಸರಾಯಿತು.

## ಸಿದ್ಧೇಶ್ವರ ತೀರ್ಥ

**ಬ್ರಹ್ಮ**:- ಗೌತಮೀತೀರದ ಸಿದ್ಧೇಶ್ವರ ಎಂಬ ಪುಣ್ಯ ತೀರ್ಥದಲ್ಲಿ ಶಿವನು ಸ್ವಯಂ ನೆಲಸಿದ್ದಾನೆ. ಪೂರ್ವಕಾಲದಲ್ಲಿ ಪುಲಸ್ತ್ಯ ಪ್ರಜಾಪತಿಯ ಕುಲದಲ್ಲಿ ಹತ್ತು ಮುಖದ ರಾವಣ ಜನಿಸಿದ. ಅವನು ಲೋಕ ಭಯಂಕರ. ನನ್ನ ವರದಿಂದ ಮಹಾಬಲಿಷ್ಠನಾಗಿದ್ದ ಅಷ್ಟೇ ಗರ್ವಿಷ್ಠ ಕೂಡ. ದೇಶ ದೇಶಗಳಲ್ಲಿ ದಿಗ್ವಿಜಯ ಮಾಡುತ್ತಾ ಅವನು ಚಂದ್ರಲೋಕದ ವರೆಗೂ ಬಂದು ಮುಟ್ಟಿದ. ಚಂದ್ರನೊಡನೆಯೇ ಸುರುವಾಯಿತು ಅವನ ಸೆಣಸಾಟ. ಅದನ್ನು ನೋಡಿ ನನಗೆ ಬಹಳ ಕೆಡಕು ಎನಿಸಿತು. ನಾನು ಆ ದಶಕಂಠನಿಗೆ ಅಷ್ಟೋತ್ತರ ಶತನಾಮ ಮಂತ್ರವನ್ನು ಉಪದೇಶಿಸಿ ಈ ಚಂದ್ರನೊಡನೆ ನೀನು ನಡೆಸಿರುವ ಹೋರಾಟದಿಂದ ಹಿಂದಿರುಗು ಎಂದು ಉಪದೇಶಿಸಿದೆ. ನನ್ನ ಆದೇಶವನ್ನು ಪುಣ್ಯಕ್ಕೆ ಆ ರಾವಣ ಉಪದೇಶವೆಂದು ತಿಳಿದು ಮನ್ನಿಸಿ ಯುದ್ಧದಿಂದ ಹಿಂದಿರುಗಿದ್ದ. ಮತ್ತು ಶಂಕರನ ಅಷ್ಟೋತ್ತರ ಶತನಾಮ ಮಂತ್ರವನ್ನು ಭಕ್ತಿಯಿಂದ ಜಪಿಸಿದ. ಅದರಿಂದ ಅವನಿಗೆ ಸಮೃದ್ಧಿ ಉಂಟಾಯಿತು. ಚಂದ್ರ ಲೋಕದಿಂದ ತನ್ನ ಮಂತ್ರಿಯೊಡನೆ ತನ್ನ ಪುಷ್ಪಕ ವಿಮಾನವನ್ನು ಆರೋಹಣ ಮಾಡಿ ಲಂಕೆಯ ಕಡೆಗೆ ಪ್ರಯಾಣ ಹೊರಟ. ಆಕಾಶಮಾರ್ಗದಲ್ಲಿ ಅವನು ವಿಮಾನಾರೂಢನಾಗಿ ಬರುತ್ತಲಿರುವಾಗ ಅವನಿಗೆ ಸ್ವರ್ಗ, ಅಂತರಿಕ್ಷ, ಭೂಲೋಕಗಳಲ್ಲಿಯ ರಮಣೀಯ ದೃಶ್ಯಗಳು ದಶದಿಗ್ಗಜಗಳು ತಪೋನಿರತರಾದ ಗಗನಯೋಗಿಗಳು ಕಣ್ಣಿಗೆ ಬಿದ್ದರು. ಅದರಂತೆ ಅವನಿಗೆ ಲಂಕಾಪಟ್ಟಣಕ್ಕೆ ಮರಳಿ ಬರುವಾಗ ಬಾನುದ್ದ ಬೆಳೆದುನಿಂತ, ಕೈಲಾಸ ಎಂಬ ಬೃಹದಾಕಾರದ ಬೆಟ್ಟವು ಲೋಚನಗೋಚರವಾಯಿತು. ಆ ಪರ್ವತದ ಪರಮ ರಮಣೀಯತೆಯನ್ನು ಕಂಡು ರಾವಣನ ಇಪ್ಪತ್ತು ಕಣ್ಣುಗಳು ಆಶ್ಚರ್ಯದಿಂದ ಅರಳಿದವು. ಅವನು ಕಾತುರಾಕ್ರಾಂತನಾಗಿ ತನ್ನ ಮಂತ್ರಿಯನ್ನು ಕೇಳಿದನು.

''ಮಂತ್ರಿಗಳೇ, ಅತ್ಯಂತ ಮನೋಹರವಾದ ಈ ಶ್ರೀಶೈಲದಲ್ಲಿ ನೆಲಸಿದ ಪುಣ್ಯಾತ್ಮರು ಯಾರು? ಎಷ್ಟು ಚೇತೋಹಾರಿಯಾಗಿದೆ? ಇದರಲ್ಲಿಯ ನಿಸರ್ಗ ಸೌಂದರ್ಯ! ಈ ವರಗಿರಿಯನ್ನು ನಾನು ಭೂಮಿಗೆ ತೆಗೆದುಕೊಂಡು ಹೋಗುತ್ತೇನೆ. ನನ್ನ ರಾಜಧಾನಿಯಾದ ಲಂಕೆಯ ಪಕ್ಕದಲ್ಲಿ ಇದನ್ನು ಒಯಿದರೆ ಎಂಥ ಶೋಭೆ ಬರುವುದು.''

ರಾವಣನ ಮಾತನ್ನು ಕೇಳಿ ಸೂಕ್ತ ಸಲಹೆಗಾರರಾದ ಅವನ ಸಚಿವರು ''ಪ್ರಭು ಇದು ಸಾಕ್ಷಾತ್ ಶಂಕರನ ವಾಸಸ್ಥಾನವಾದ ಕೈಲಾಸಗಿರಿ. ಇದನ್ನು ಇಲ್ಲಿಂದ ಕಿತ್ತುವುದೂ ಎತ್ತುವುದೂ ಅಥವಾಹೊತ್ತು ಒಯ್ಯುವುದೂ ಸುಲಭವೂ ಅಲ್ಲ, ಸಮಂಜಸವೂ ಅಲ್ಲ.'' ಎಂದು ಹೇಳಿದರು.

ಆದರೆ ಚಂಡಿಯಾದ ರಾವಣ ಕೇಳುವನೇ ಆ ಮಂತ್ರಿಗಳ ಮಾತನ್ನು? ಇನ್ನೊಬ್ಬರು ಹೇಳಿದ್ದನ್ನು ಕೇಳುವ ಜಾಯಮಾನವೇ ರಾವಣನದು ಆಗಿರಲಿಲ್ಲ. ಮನಬಂದಂತೆ ನಡೆಯುವುದು, ಇಚ್ಛೆಬಂದಂತೆ ನುಡಿಯುವುದು ಅವನ ಸ್ವಭಾವವೇ ಆಗಿತ್ತು. ಅವನು ತನ್ನ ಪುಷ್ಪಕ ವಿಮಾನವನ್ನು ಅಲ್ಲಿಯೇ ಒಂದೆಡೆ ನಿಲ್ಲಿಸಿದ. ತನ್ನ ಮಂತ್ರಿ ಗಳನ್ನು ಅದರಲ್ಲಿಯೇ ಕೂಡಿಸಿದ. ತಾನು ಮಾತ್ರ ನಡೆದು ಹೋಗಿ ಕೈಲಾಸದ ಬುಡದ ಬಳಿಗೆ ಬಂದ. ತನ್ನ ಶಕ್ತಿ ಸಾಮರ್ಥ್ಯದ ಬಗೆಗೆ ಅವನಿಗೆ ಭಯಂಕರವಾದ ಗರ್ವವಿದ್ದಿತು. ಮದಮತ್ತನಾದ ಆ ದಶಕಂಠನು ಆ ಕೈಲಾಸಗಿರಿಯ ಮೂಲವನ್ನು ಹಿಡಿದು ಅಲುಗಾಡಿಸ ತೊಡಗಿದ. ಮಹಾಪ್ರಯತ್ನದಿಂದ ಆ ಬೆಟ್ಟದ ಬುಡದಲ್ಲಿ ಹೊಕ್ಕು ತನ್ನ ನೀಳ ತೋಳುಗಳಿಂದ ಅದನ್ನು ಎತ್ತಿ ಹೆಗಲ ಮೇಲೆ ಹೊತ್ತು ತೂಗತೊಡಗಿದ. ತಕ್ಷಣದಲ್ಲಿಯೇ ತಿಳಿದು ಹೋಯಿತು, ಆ ಭವಾನೀಪತಿಗೆ ಈ ದೈತ್ಯೇಶ್ವರನ ಈ ದುಸ್ಸಾಹಸ. ಅವನು ಕುಳಿತಲ್ಲಿಯೇ ತನ್ನ ಕಾಲಿನ ಹೆಬ್ಬೆರಳಿನಿಂದ ಆ ಬೆಟ್ಟವನ್ನು ಬಲವಾಗಿ ಒತ್ತಿದ. ಆ ಕ್ಷಣದಲ್ಲಿ ಗರ್ವಿಷ್ಠನಾದ ರಾವಣ ರಾಕ್ಷಸ ವಿಷ್ಣು ತುಳಿದ ಬಲಿ ಚಕ್ರವರ್ತಿಯಂತೆ ಪಾತಾಳಕ್ಕೆ ಇಳಿದು ಹೋದ. ದೇಹವೆಲ್ಲವೂ ಜರ್ಜರಿತವಾಯಿತು. ವಜ್ರ ಕಠೋರವಾದ ಅವನ ಶರೀರದ ಸಂಧಿ ಬಂಧಗಳೆಲ್ಲವೂ ಜರ್ಜರಿತವಾದವು. ಬೆಟ್ಟದ ಭಾರಕ್ಕಿಂತ ಶಿವನ ಕಾಲಿನ ಬೊಟ್ಟಿನ ತುಳಿತದಿಂದ ರಾವಣ ಕೆಳಗೆ ಹತ್ತಿಕ್ಕಲ್ಪಟ್ಟು ರಸಾತಳಕ್ಕೆ ಇಳಿದುಹೋದ.

ಅದರ ಭಾರವನ್ನು ತಾಳಲಾರದೇ ಕಂಗೆಟ್ಟು ಶಿವನಲ್ಲಿ ಮೊರೆಇಟ್ಟ. "ಕೈಲಾಸಪತಿಯೇ, ಕರುಣಿಸು ನಿನ್ನ ಭಕ್ತನಾದ ಈ ರಾವಣನನ್ನು ಕಾಪಾಡು" ಎಂದು ಕೂಗಿಕೊಂಡ. ದಯಾ ಸಮುದ್ರವಲ್ಲವೇ ಆ ಧೂರ್ಜಟಿ! ರಾವಣನು ಪಡುತ್ತಿರುವ ಸಂಕಟವನ್ನು ಅವನ ಆರ್ತದನಿಯ ಕೂಗಾಟ ಕಿರುಚಾಟವನ್ನೂ ಕೇಳಿ ಕರಗಿಹೋದ ಕರುಣಾಳು ಆದ ಆ ಕೈಲಾಸಪತಿ. ತನ್ನ ಸತೀಮಣಿಯಾದ ಪಾರ್ವತೀದೇವಿಯೊಂದಿಗೆ ರಾವಣನನ್ನು ಅನುಗ್ರಹಿಸಿ ಅವನಿಗೆ ಬೇಕಾದ ಇಷ್ಟಾರ್ಥಗಳನ್ನೆಲ್ಲ ಕರುಣಿಸಿದ. ಅಪರಾಧಿಗಳ ಮೇಲೆಯೂ ಅನುಗ್ರಹವನ್ನು ಮಾಡುವುದೇ ದೊಡ್ಡವರ ಲಕ್ಷಣ ಮತ್ತು ಸ್ವಭಾವ. ಪರಶಿವನ ಪರಮ ಪ್ರಸಾದದಿಂದ ಆಳ ಪಾತಾಳದ ಮೂಲಕ ಇಳಿದು ಹೋದ ರಾವಣ ಮತ್ತೆ ಮೇಲಕ್ಕೆ ಬಂದ. ಅನಂತರ ಲಂಕೆಯ ಕಡೆಗೆ ತನ್ನ ಪ್ರಯಾಣವನ್ನು ಬೆಳೆಸಿದ. ದಾರಿಯಲ್ಲಿ ಶಿವನ ಜಟಾಜೂಟದಿಂದ ಹೊರ ಹೊಮ್ಮಿಬಂದು ವೃದ್ಧ ಗಂಗೆಯೆನಿಸಿದ. ಗೌತಮೀ ತೀರಕ್ಕೆ ಬಂದು ಆ ಪರಮೇಶ್ವರನಿಗೆ ರುದ್ರ ಸೂಕ್ತಪಠಣ ಪೂರ್ವಕವಾಗಿ ಗಂಗಾ ಜಲದಿಂದ ಅಭಿಷೇಕ ಮಾಡಿದ. ಸುಪ್ರಸನ್ನನಾದ ಗಂಗಾಧರನಿಂದ ಒಂದು ಮಹಾ ಖಡ್ಗವನ್ನೂ ಮತ್ತು ಸರ್ವಾರ್ಥ ಸಿದ್ಧಿಯನ್ನೂ ಅಪರಿಮಿತವಾದ ಐಶ್ವರ್ಯವನ್ನೂ ಆ ಪರಮೇಶ್ವರನ ಪರಮ ಪ್ರಸಾದವನ್ನಾಗಿ ಪಡೆದ. ಮತ್ತು ಅಲ್ಲಿಯೇ ನಿಂತು ನಾನು ಉಪದೇಶಿಸಿದ ಅಷ್ಟೋತ್ತರ ಶತನಾಮದ ಶಿವ ಮಂತ್ರವನ್ನು ಭಕ್ತಿಯಿಂದ ಅವಿಚ್ಛಿನ್ನವಾಗಿ ಜಪಿಸಿದ. ಅದರಿಂದ ಅವನಿಗೆ ಆ ಮಂತ್ರ ಸಿದ್ಧಿಯಾಯಿತು. ಅಂದಿನಿಂದ ಆ ತೀರ್ಥಕ್ಕೆ ಸಿದ್ಧಿ ತೀರ್ಥ ಎಂದು ಹೆಸರು ಬಂದಿತು. ಆ ಸಿದ್ಧಿ ತೀರ್ಥವನ್ನು ಸಿದ್ಧಯೋಗಿಗಳೆಲ್ಲರು ಸೇವಿಸುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತಮೂರನೆಯ ಅಧ್ಯಾಯ ಮುಗಿದುದು*

—೦—

## ಮಡದಿಯಾದವಳು ಮಾತೆಯೂ ಆಗಬಹುದು | ಅಧ್ಯಾಯ - ೩೪

**ಬ್ರಹ್ಮ:-** ಪೂರ್ವಕಾಲದಲ್ಲಿ ಅತ್ರಿ ಎಂಬ ಹೆಸರಿನ ಓರ್ವ ಬ್ರಹ್ಮಋಷಿಯು, ತ್ರಿಮೂರ್ತಿಗಳನ್ನು ಆರಾಧಿಸಿದ. ಮತ್ತು "ಬ್ರಹ್ಮ, ವಿಷ್ಣು, ಮಹೇಶ್ವರಾದ ನೀವು ಜಗತ್ತಿನಲ್ಲಿ ತ್ರಿಮೂರ್ತಿಗಳೆಂದು ಪ್ರಸಿದ್ಧರಾಗಿದ್ದೀರಿ. ನೀವು ಮೂವರು ನನಗೆ ಮಕ್ಕಳಾಗಿ ಜನಿಸಿರಿ, ಹಾಗೂ ನಿಮಗೆ ತಂಗಿಯಾಗಿ ಓರ್ವ ಹೆಣ್ಣು ಮಗಳು ನನಗೆ ಉತ್ಪನ್ನವಾಗಲಿ." ಎಂದು ವರವನ್ನು ಬೇಡಿಕೊಂಡ. 'ತಥಾಸ್ತು' ಎಂದರು ತ್ರಿಮೂರ್ತಿಗಳು. ಅತ್ರಿ ಮುನಿಯ ಅಪೇಕ್ಷೆಯಂತೆ ಹರಿಹರ ಬ್ರಹ್ಮರು ಅವನ ಪುತ್ರರಾಗಿ ಜನಿಸಿ ಬಂದರು. ಅತ್ರೇಯಿ ಎಂಬ ಹೆಣ್ಣು ಮಗಳು ಹುಟ್ಟಿದಳು. ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ ಶಂಕರನ ಅಂಶದಿಂದ ದುರ್ವಾಸ ಮುನಿಯೂ ಬ್ರಹ್ಮನ ಅಂಶದಿಂದ ಚಂದ್ರನೂ ಅತ್ರಿ ಋಷಿಯ ಮಕ್ಕಳಾಗಿ ಹುಟ್ಟಿದರು. ಆ ತ್ರಿಮೂರ್ತಿಗಳ ಅನುಗ್ರಹದಿಂದ ಅತ್ರಿ ಅನಸೂಯಾ ದಂಪತಿಗಳಿಗೆ ಹುಟ್ಟಿದ ಹೆಣ್ಣು ಮಗುವೆ ಆತ್ರೇಯಿ.

ಅತ್ರಿ ಮಹರ್ಷಿಯು ತನ್ನ ಮಗಳಾದ ಹಾಗೂ ಗುಣವತಿಯೂ, ರೂಪವತಿಯೂ, ವಿನಯವತಿಯೂ, ಶೀಲವತಿಯೂ, ಲಜ್ಜಾವತಿಯೂ ಆದ ಆತ್ರೇಯಿಯನ್ನು ಅಗ್ನಿಕುಮಾರ ಅಂಗಿರಸನಿಗೆ ಮದುವೆ ಮಾಡಿಕೊಟ್ಟನು. ಅಂಗಿರಸನು ಸಾಕ್ಷಾತ್ ಅಗ್ನಿಯ ಪುತ್ರನೇ ಆಗಿದ್ದ. ಅವನ ನಡೆನುಡಿ, ಕ್ರಿಯೆ ಎಲ್ಲದರಲ್ಲಿಯೂ ಅಗ್ನಿಯ ಆವೇಶ ಇರುತ್ತಿತ್ತು. ನುಡಿದರೆ ಅವನ ನುಡಿಗಳೆಲ್ಲವೂ ಕಿಡಿ ಯಾಗಿಯೇ ಇರುತ್ತಿದ್ದವು. ಸ್ವಭಾವಂತೂ ಕಿಡಿಕಿಡಿ. ಮಡದಿಯಾದ ಆತ್ರೇಯಿಯೊಡನೆ ಯಾವಾಗಲೂ ಬಿರುನುಡಿಯಿಂದಲೇ ಮಾತನಾಡುತ್ತಿದ್ದ. ಆದರೆ ಋಷಿಕುಮಾರಿಯಾದ ಆತ್ರೇಯಿ ಮಾತ್ರ ಪರಮ ಶಾಂತಳು. ಪತಿಪ್ರಾಣಳು, ಹಗಲಿರುಳು ತನ್ನ ಪತಿದೇವನ ಶುಶ್ರೂಷೆಯಲ್ಲಿಯೇ ನಿರತಳು.

ಆ ಆತ್ರೇಯಿಯಲ್ಲಿ ಅಗ್ನಿದೇವನಿಗೆ ಆಂಗೀರಸಕುಮಾರರು ಹುಟ್ಟಿದರು. ಅವರು ತಂದೆಯಂತೆ ಮಹಾ ತೇಜಸ್ವಿಗಳೇ ಆದರೂ ತಾಯಿಯ ಗುಣವಾದ ಶಾಂತಿ ಸಮಾಧಾನವನ್ನು ಹೊಂದಿದ್ದರು. ತಂದೆಯ ಕಿಡಿನುಡಿ ಬಿರುನುಡಿಗಳಿಂದ ತಮ್ಮ ತಾಯಿಯು ನೊಂದು ಕೊಂಡಾಗ, ಬೆಂದುಹೋದಾಗ ಆ ಮಕ್ಕಳೇ ಬಂದು ಅವಳನ್ನು ಸಂತೈಸುತ್ತಿದ್ದರು. ಆದರೂ ಸಾಧ್ವೀಶಿಖಾಮಣಿಯಾದ ಆತ್ರೇಯಿಗೆ ತನ್ನ ಪತಿಯಾದ ಅಂಗಿರಸನು ನುಡಿಯುವ ಕಠಿಣ ಮಾತುಗಳಿಂದ ಬಹಳ ನೋವುಂಟಾಗುತ್ತಿತ್ತು. ಒಂದು ದಿನ ಅವಳು ತನ್ನ ಮಾವನಾದ ಅಗ್ನಿದೇವನ ಬಳಿಗೆ ಬಂದು ಕೈಜೋಡಿಸಿ ನಮಸ್ಕಾರ ಮಾಡಿ, ವಿನಯದಿಂದ ನುಡಿದಳು.

"ಅನಲದೇವ, ನಾನು ಅತ್ರಿ ಮುನಿಯ ಮಗಳು ನಿಮ್ಮ ಸೊಸೆ. ನಾನು ಅತ್ಯಂತ ಶ್ರದ್ಧೆಯಿಂದ ನಿರಂತರವೂ ಪತಿ ಸೇವೆಯನ್ನು ಮಾಡುತ್ತಲೇ ಇರುತ್ತೇನೆ. ಅವರೇ ಕರುಣಿಸಿದ ಈ ಪ್ರೀತಿಯ ಪುತ್ರರನ್ನು ಪೋಷಣೆ ಮಾಡುತ್ತೇನೆ. ಹೀಗಿದ್ದರೂ ಈ ಪತಿದೇವರು ನನಗೆ ಕಠೋರವಾದ ವಾಕ್ಯವನ್ನು ಆಡುವರು. ಕಾರಣವಿಲ್ಲದೇ ನನ್ನ ಮೇಲೆ ಕೋಪಗೊಳ್ಳುವರು. ಆದುದರಿಂದ ನೀವೇ ನನ್ನನ್ನು ಈ ಸಂಕಟದಿಂದ ಪಾರುಮಾಡಬೇಕು. ನೀವು ದೇವತಾ ಶ್ರೇಷ್ಠರಲ್ಲವೇ?"

ಅವಳ ಈ ದೀನ ನುಡಿಯನ್ನು ಕೇಳಿ ಮಾವನಾದ ಅಗ್ನಿಗೆ ಕೆಡುಕೆನಿಸಿತು. ಅವನು ವಾತ್ಸಲ್ಯ ತುಂಬಿ ತನ್ನ ಸೊಸೆ ಅತ್ರೇಯಿಗೆ ನುಡಿದ. ''ಸಾಧ್ವಿ, ನಿನ್ನ ಗಂಡ ಎಷ್ಟೆಂದರೂ ನನ್ನ ಮಗನಲ್ಲವೇ? ಅಗ್ನಿರೂಪಿಯಾದ ನನ್ನ ಅಂಶ ಬಹಳಷ್ಟು ಅವನಲ್ಲಿ ಸೇರಿಕೊಂಡಿದೆ. ಅವನ ಸ್ವಭಾವವು ಶಾಂತವಾಗುವಂತೆ ಏನಾದರೂ ಉಪಾಯವನ್ನು ಮಾಡಬೇಕು. ಆತ್ರೇಯಿ ಈ ನನ್ನ ಮಗನಾದ ಅಂಗೀರಸನು, ಅಗ್ನಿಯಲ್ಲಿಯೇ ಪ್ರವೇಶ ಮಾಡಿಬಿಡಲಿ, ಆಗ ನೀನು ಅವನನ್ನು ಜಲರೂಪಳಾಗಿ ಶಾಂತಗೊಳಿಸು'' ಎಂದು ಹೇಳಿದ.

ಇದನ್ನು ಕೇಳಿ ಆತ್ರೇಯಿಯು ಮತ್ತಿಷ್ಟು ಪರಿತಾಪ ಪಟ್ಟಳು. ದೀನಳಾಗಿ ತನ್ನ ಮಾವನ ಮುಂದೆ ನುಡಿದಳು. ''ಪೂಜ್ಯರೇ, ಏನಾದರೂ ನನ್ನ ಪತಿಯು ಅಗ್ನಿ ಪ್ರವೇಶ ಮಾಡುವುದು ಬೇಡ, ಅವರು ಎಷ್ಟೇ ಕಠೋರ ವಾಕ್ಯಗಳನ್ನು ನುಡಿಯಲಿ, ತಾಳ್ಮೆಯಿಂದ ನಾನು ಅದನ್ನೆಲ್ಲವನ್ನು ಸಹಿಸಿ ಕೊಳ್ಳುತ್ತೇನೆ. ಗಂಡನಿಗೆ ವಿರುದ್ಧವಾಗಿ ನಡೆದು, ನುಡಿದು ಸ್ತ್ರೀಯರು ಬದುಕಿ ಮಾಡು ವದೇನು? ಪತಿಯು ಶಾಂತರೀತಿಯಿಂದ ನುಡಿದರೆ ಅಷ್ಟೇ ಸಾಕು, ಅದೇ ನಮ್ಮ ದೊಡ್ಡ ಭಾಗ್ಯ''

ಸೊಸೆಯ ಈ ಮಾತನ್ನು ಅವಳ ಪತಿಭಕ್ತಿಯನ್ನು ನೋಡಿ ಸಂತೋಷವಾಯಿತು ಆ ಅಗ್ನಿದೇವನಿಗೆ. ಆದರೂ ಅವನು ಆತ್ರೀಯಿಗೆ ತಿಳಿಹೇಳುತ್ತಾ ನುಡಿದನು, ''ಅಗ್ನಿಯಾದ ನಾನು ಜಲ ಮತ್ತು ಸ್ಥಿರಚರರೂಪವಾದ ಶರೀರಗಳಲ್ಲಿ ನೆಲಸಿರುವೆನು, ನಿನ್ನ ಪತಿಗೆ ನಾನೇ ಆಶ್ರಯ, ಮತ್ತು ನಾನೇ ತಂದೆ. ತಂದೆ, ಮಗ ಒಂದೇ ಅಲ್ಲವೇ? ಆದುದರಿಂದ ಅಂಗಿರಸನು ಅಗ್ನಿಪ್ರವೇಶ ಮಾಡಿದರೂ ತಂದೆಯ ಬಳಿಗೆ ಬಂದಂತೆ. ಅದರಿಂದ ಎಂದೂ ನಿನ್ನ ಪತಿಯು ಬೆಂದು ಹೋಗುವುದಿಲ್ಲ. ಬಾಡಿ ಹೋಗುವುದಿಲ್ಲ, ಆ ವಿಷಯದಲ್ಲಿ ನೀನು ಚಿಂತೆಯನ್ನು ಬಿಟ್ಟುಬಿಡು. ಜಲದೇವತೆಯು ಜಗತ್ತಿಗೆ ಮಾತೃಸ್ಥಾನದಲ್ಲಿ ಇರುತ್ತದೆ. ಅಗ್ನಿಯು ಜಲಕ್ಕೆ ಮಾವನು, ಇದನ್ನೆಲ್ಲ ತಿಳಿದು ನೀನು ಚಿಂತೆಯನ್ನು, ವ್ಯಥೆಯನ್ನು ಬಿಟ್ಟುಬಿಡು.''

ಅವಳ ಈ ಮಾರ್ಮಿಕ ಪ್ರಶ್ನೆಯನ್ನು ಕೇಳಿ ಮಾವನಾದ ಅಗ್ನಿಯು ಮಂದಹಾಸ ಮಾಡುತ್ತಾ ನುಡಿದರು, ''ಮಗಳೇ ಮಹಿಳೆಯು ಮದುವೆಯಾದ ಕೂಡಲೇ ಮೊದಲು ಪತ್ನಿ ಎನಿಸುವಳು. ಮುಂದೆ ಗೃಹ ಕೃತವನ್ನು ಮಾಡುತ್ತಾ, ತನ್ನ ಪತಿಪುತ್ರರನ್ನು ಪೋಷಿಸುವುದರಿಂದ ಭಾರ್ಯೆ ಎನಿಸುವಳು. ಮುಂದೆ ಮಕ್ಕಳನ್ನು ಹಡೆಯುವುದರಿಂದ ನಾರಿಯು ಜಾಯಾ ಎನಿಸುವಳು. ಅಂದರೇ ಪತಿಯೇ, ತನ್ನ ಅಂಶರೂಪದಿಂದ ಅವಳಲ್ಲಿ ಹುಟ್ಟನ್ನು ಪಡೆಯುವದು. ಜಾಯೆಯಲ್ಲಿ ಪುರುಷನು ತಾನೇ ಜನಿಸುವುದರಿಂದ ಭಾರ್ಯೆಯೋ ಜಾಯೆ ಎನಿಸುವಳು.

**''ಆತ್ಮಾವೈ ಪುತ್ರ ನಾಮಾಸೀತ್ । ಜಾಯಾಯಾಃ ತದ್ಧಿಜಾಯಾತ್ವಂ । ಯದಸ್ಯಾಂ ಜಾಯತೇ ಪುನಃ''**

ಮುಂತಾದ ಶ್ರುತಿ ಸ್ಮೃತಿ ವಚನಗಳು ಪತಿಯು ಪುತ್ರನಾಗಿ ಪತ್ನಿಯಲ್ಲಿ ಹುಟ್ಟಿ ಬರುತ್ತಾನೆ ಎಂದು ಹೇಳುತ್ತವೆ. ಆ ಪತಿಯ ಪ್ರತಿರೂಪನಾದ ಪುತ್ರನನ್ನು ಲಾಲಿಸಿ, ಪಾಲಿಸಿ, ಪೋಷಿಸುವುದರಿಂದ ಅವಳು ತಾಯಿಯೂ ಆಗುವಳು. ಪೋಷಿಸುವ ಶಕ್ತಿಯು ಮಾತೆಯ ಒಂದು ಅಂಶವೇ ಸರಿ. ಆದುದರಿಂದ ನೀನು ನನ್ನ ಮಗನಿಗೇ, ನಿನ್ನ ಶೀಲ ಸೌಂದರ್ಯದಿಂದ ಮಡದಿಯೂ ನಿಜ. ಗ್ರಹ ಕೃತ್ಯಗಳನ್ನು ಮಾಡುವುದರಿಂದ ಭಾರ್ಯೆಯೂ ಸರಿ, ಪುತ್ರರೂಪವಾಗಿ ಹುಟ್ಟಿದ ಅವನ ಮಕ್ಕಳನ್ನು ಪೋಷಿಸುವುದರಿಂದ ತಾಯಿಯೂ ಸರಿ.

ಯೋಽಸ್ಯಾಂ ಪ್ರಜಾತಃ ಸತುಪುತ್ರ ಏವಽ ।
ಸಾತಸ್ಯ ಮಾತ್ರೈವ ನ ಸಂಶಯೋಽಽತ್ರ ।
ತಸ್ಮಾದ್ ವದಂತೀ ಶೃತಿ ತತ್ವ ವಿಜ್ಞಾಃ
ಸಾನ್ಯೈವ ಯೋಷಿತ್ ತನಯೇಽಽಭಿಜಾತೇ ॥

''ಮಹಿಳೆಯಲ್ಲಿ ಪುತ್ರ ರೂಪನಾಗಿ ಹುಟ್ಟಿಬಂದ ಪತಿಯು ಅವಳಿಗೆ ಮಗನು. ಅವನನ್ನು ಪೋಷಣೆ ಮಾಡುವುದರಿಂದ ಅವಳು ಅವರಿಗೆ ತಾಯಿಯಾಗುವುದು ನಿಶ್ಚಿತ ಇದರಲ್ಲಿ ಸಂಶಯವೇ ಇಲ್ಲ. ಆದುದರಿಂದ ವೇದ ವಿದ್ವಾಂಸರು ಮಗ ಹುಟ್ಟಿದ ಬಳಿಕ ಮಹಿಳೆಯು ಕೇವಲ ಮಡದಿಯಲ್ಲ ಮಾತೆಯೂ ಅಹುದು'' ಎಂದು ಹೇಳಿದ್ದಾರೆ.

ಮಾವನ ಮಾತನ್ನು ಕೇಳಿ ಆತ್ರೇಯಿಯು ಕೂಡಲೇ ಜಲರೂಪದಿಂದ ನದಿಯಾಗಿ ಹರಿದಳು. ಅಗ್ನಿಯ ಪ್ರತಿರೂಪನಾದ ಪತಿಯನ್ನು ಸಲಿಲ ಸ್ವರೂಪದಿಂದ ಆವರಿಸಿದಳು. ಅವರಿಂದ ಆತ್ರೇಯ ಅಂಗಿರಸರು ಪರಿಶುದ್ಧರೂ, ಶಾಂತರೂ ಸುಂದರರೂ ಆಗಿ ಕಂಗೊಳಿಸಿದರು. ಆಗ ಆ ದಂಪತಿಗಳು ಲಕ್ಷ್ಮೀನಾರಾಯಣರಂತೆಯೂ, ಶಿವಪಾರ್ವತಿಯಂತೆಯೂ ರೋಹಿಣೀ ಚಂದ್ರರಂತೆಯೂ ಸವಿಶೇಷ ಶೋಭೆಯಿಂದ ಸುಂದರರಾಗಿ ಕಂಗೊಳಿಸಿದರು. ಪತಿ ಅಂಗಿರಸನನ್ನು ಆವರಿಸಲು ಆತ್ರೇಯಿಯು ಸಲಿಲರೂಪಳಾದಾಗ ಪರುಷ್ಣೀ ಎಂಬ ನದಿಯಾಗಿ ಹರಿದಳು, ಅವಳು ಮತ್ತೇ ಗೌತಮೀ ಗಂಗೆಯನ್ನು ಸೇರಿದಳು. ಈ ಪರುಷ್ಣೀನದಿಯ ತೀರದಲ್ಲಿ ಮುಂದೆ ಆಂಗೀರಸಗೋತ್ರದ ಮುನಿ ಮಹನೀಯರು, ಅನೇಕ ಯಜ್ಞಯಾಗಗಳನ್ನು ಮಾಡಿದರು. ಈ ಗಂಗಾ ಪರುಷ್ಣೀ ನದಿಗಳ ಪವಿತ್ರವಾದ ಸಂಗಮ ಸ್ಥಳದಲ್ಲಿ ಸ್ನಾನ, ದಾನ ಮಾಡುವುದರಿಂದ ಲಭಿಸುವ ಪುಣ್ಯ ಇಷ್ಟೇ ಎಂದು ಯಾರಿಗೂ ಹೇಳಲಿಕ್ಕೆ ಸಾಧ್ಯವಿಲ್ಲ.

## ''ಮಾರ್ಕಂಡೇಯ ತೀರ್ಥ''

**ಬ್ರಹ್ಮ**:- ನಾರದಾ, ಪೂರ್ವಕಾಲದಲ್ಲಿ ಒಂದು ಯಜ್ಞಮಂಟಪದಲ್ಲಿ ವಶಿಷ್ಠ, ಅತ್ರಿ, ಭರದ್ವಾಜ, ಗೌತಮ, ಯಜ್ಞವಲ್ಕ್ಯ, ಜಾಬಾಲಿ ಮತ್ತು ಮಾರ್ಕಂಡೇಯ ಮುಂತಾದ ಮಹಾ ಮಹಾಮುನೀಶ್ವರರು ಒಂದೆಡೆ ಸೇರಿದ್ದರು. ಪ್ರತಿಯೊಬ್ಬರೂ ಪಂಡಿತ ಪ್ರಕಾಂಡರು. ಎಲ್ಲರಿಗೂ ವೇದಗಳಲ್ಲಿ ವಿಶಿಷ್ಟ ವೈದುಷ್ಯ ಇದ್ದಿತು. ಪುರಾಣ, ನ್ಯಾಯ, ಮೀಮಾಂಸಾ ಗಳಲ್ಲಿ ಪ್ರತಿಯೊಬ್ಬರೂ ಪಾರಂಗತರು. ಅವರೆಲ್ಲರ ಜ್ಞಾನವು ಕೂಲಂಕಷ ಮತ್ತು ತಲಸ್ಪರ್ಶಿ. ಹೀಗೆ ಅಪರೂಪಕ್ಕಾಗಿ ಯಜ್ಞವಾಟಿಕೆಯಲ್ಲಿ ಸೇರಿದ ಆ ಮುನಿಮಹರ್ಷಿಗಳಲ್ಲಿ ಜ್ಞಾನಶ್ರೇಷ್ಠವೋ, ಕರ್ಮಶ್ರೇಷ್ಠವೋ ಎಂಬ ವಾದ ಹುಟ್ಟಿತು. ಕೆಲವರು ಜ್ಞಾನವೇ ಶ್ರೇಷ್ಠ ಎಂದು ಪ್ರಶಂಸಿದರು. ಹಲವರು ಕರ್ಮವೇ ಶ್ರೇಷ್ಠ ಎಂದು ವಾದಿಸಿದರು. ಅವರಲ್ಲಿಯೇ ಮತ್ತೆ ಕೆಲವರು ಜ್ಞಾನ, ಕರ್ಮ ಎರಡೂ ಸಮಾನವಾಗಿಯೇ ಶ್ರೇಷ್ಠ ಎಂದು ಪ್ರಶಂಸಿದರು. ಹೀಗೆ ನಡೆದ ವಾದ ವಿವಾದದಿಂದ ಯಾವ ವಿಷಯವೂ ನಿರ್ಣಯವಾಗಲಿಲ್ಲ. ಅವರೆಲ್ಲರೂ ವಾದಮಾಡುತ್ತ ಬ್ರಹ್ಮನಾದ ನನ್ನ ಬಳಿಗೆ ಬಂದರು. ನನ್ನ ಅಭಿಪ್ರಾಯವನ್ನು ತಿಳಿದುಕೊಂಡು, ಪರಮೇಶ್ವರನ ಬಳಿಗೆ ಹೋದರು. ಅವನ ಮಾತು ಕೂಡ ಅವರಿಗೆ ಒಪ್ಪಿಗೆಯಾಗಲಿಲ್ಲ.

ಆಗ ಅವರು ಪರಮಾತ್ಮನಾದ ಶ್ರೀಹರಿಯ ಬಳಿಗೆ ಹೋಗಿ ತಮ್ಮ ತಮ್ಮ ವಾದಗಳನ್ನು ಮಂಡಿಸಿದರು. ಕೊನೆಗೂ ಯಾವ ನಿರ್ಣಯವೂ ಆಗಲಿಲ್ಲ. ಯಾರ ಮಾತನ್ನೂ ಸರ್ವಸಮ್ಮತ ಎನಿಸಲಿಲ್ಲ. ಆಗ ಅವರೆಲ್ಲರೂ ಗೌತಮೀ ತೀರದಲ್ಲಿರುವ

ಮಹಾದೇವರನ್ನು ಭಕ್ತಿಯಿಂದ ಪೂಜಿಸಿದರು. ಶ್ರದ್ಧೆಯಿಂದ ಆರಾಧಿಸಿದರು. ಮತ್ತು "ಪಿನಾಕ ಪ್ರಾಣಿಯೇ ನೀನು ನಮ್ಮೆಲ್ಲರ ವಾದವನ್ನು ಕೇಳಿಕೊಂಡಿರುವೆ. ತ್ರಿಮೂರ್ತಿಗಳ ಅಭಿಪ್ರಾಯವಂತೂ ನಿನಗೆ ವಿದಿತವು ಇದೆ. ಇದೆಲ್ಲವನ್ನು ನೀನೇ ಆಲೋಚಿಸಿ ವಿಚಾರಿಸಿ ಸಿದ್ಧಾಂತವನ್ನು ನಿರ್ಣಯಿಸಿ, ನಮಗೆ ಯೋಗ್ಯ ವಾದ ಒಂದು ಉತ್ತರವನ್ನು ಕೊಡು. ನಿನ್ನ ವಚನ ನಮಗೆ ಶ್ರದ್ಧಾಮಾನ್ಯ" ಎಂದು ಹೇಳಿದರು.

ಆಗ ಮಹಾದೇವನು "ಮುನಿ ಪುಂಗವರೇ, ಕರ್ಮವೇ ಶ್ರೇಷ್ಠ. ಜ್ಞಾನವೂ ಕೂಡ ಪರಿಪೂರ್ಣವಾದ ಕರ್ಮದ ಒಂದು ರೂಪವೇ. ಕ್ರಿಯೆಯನ್ನು ಬಿಟ್ಟು ಜ್ಞಾನವಿಲ್ಲ. ಕರ್ಮ ಅಥವಾ ಕ್ರಿಯೆಯಿಂದಲೇ ಎಲ್ಲ ಪ್ರಾಣಿಗಳು ಸಿದ್ಧಿಪಡೆಯುವವು. ವಿದ್ಯಾಭ್ಯಾಸ, ಯಜ್ಞ, ಯಾಗ, ಯೋಗ, ದೇವಪೂಜೆ ಎಲ್ಲವೂ ಕರ್ಮರೂಪವೇ ಆಗಿವೆ. ಕರ್ಮವನ್ನು ಮಾಡದೇ ಯಾವ ಪ್ರಾಣಿಯೂ ಬದುಕಿ ಇರಲಾರ. ಎಲ್ಲದಕ್ಕೂ ಕರ್ಮವೇ ಕಾರಣ. ಕರ್ಮದಿಂದಲೇ ಜಗತ್ತಿನ ಸ್ಥಿತಿ, ಗತಿ, ಕರ್ಮವು ಅಲ್ಲದೇ ಇರುವ ಕ್ಷಣದಲ್ಲಿ ಪ್ರಳಯವೇ ಸಿದ್ಧವಾಗುವುದು" ಎಂದು ನಿರ್ಣಯಾತ್ಮಕವಾಗಿ ಹೇಳಿದ.

ಶಿವನ ಈ ನಿರ್ಣಯವು ಮಾರ್ಕಂಡೇಯ ಮುಂತಾದ ಮುನಿಗಳಿಗೆಲ್ಲ ಸಮ್ಮತ ವಾಯಿತು. ಅವರೆಲ್ಲರೂ ಸ್ವೋಚಿತ ಕರ್ಮಾನುಷ್ಠಾನವನ್ನು ಮಾಡುವದೇ ಪ್ರತಿಯೊಬ್ಬರ ಕರ್ತವ್ಯವೆಂದು ಘೋಷಿಸಿದರು. ಈ ಕರ್ಮಶ್ರೇಷ್ಠತೆಯ ಚರ್ಚೆಯಲ್ಲಿ ಮಾರ್ಕಂಡೇಯ ಮಹರ್ಷಿಯು ಮುಖ್ಯ ಪಾತ್ರವಹಿಸಿದ್ದರಿಂದ ಈ ವಿಚಾರಣಾ ಸಂಕಿರಣ ನಡೆದ ಸ್ಥಳಕ್ಕೆ ಮಾರ್ಕಂಡೇಯ ತೀರ್ಥ ಎಂದು ಹೆಸರು ಬಂದಿತು.

## ಯಾಯಾತಿ ತೀರ್ಥ ವರ್ಣನ

**ಬ್ರಹ್ಮ**:- ನಾರದಾ, ಹಿಂದೆ ನಹುಷರಾಜನ ಮಗನಾದ ಯಯಾತಿ ಎಂಬ ಅರಸನು ಪೃಥ್ವೀಮಂಡಲವನ್ನು ವೈಭವದಿಂದ ಆಳುತ್ತಿದ್ದ. ಅವನಿಗೆ ದೇವಯಾನಿ ಶರ್ಮಿಷ್ಠೆ ಎಂಬ ಇಬ್ಬರು ಮಡದಿಯರು. ದೇವಯಾನಿಯು ದೈತ್ಯರ ಗುರು ಶುಕ್ರಾಚಾರ್ಯರ ಮಗಳು. ಶರ್ಮಿಷ್ಠೆಯು ವೃಷಪರ್ವ ಎಂಬ ರಾಕ್ಷಸ ರಾಜನ ನೆಚ್ಚಿನ ಮಗಳು. ಆ ರಾಜಕುಮಾರಿ ಈ ಋಷಿಕುಮಾರಿ ಇಬ್ಬರೂ ಸುಂದರಿಯರು. ಶೀಲಜ್ಞಾನ, ಕಳೆ, ಕಾಂತಿ, ಸೌಂದರ್ಯ, ಮಾಧುರ್ಯ ಎಲ್ಲ ಗುಣಗಳು ಅವರಲ್ಲಿ ನೆಲೆಸಿದ್ದವು. ಪ್ರಸಂಗವಶಾತ್ ರಾಜಕುಮಾರಿ, ಋಷಿಕುಮಾರಿಯರು ಆದ ಆ ದೇವಯಾನಿ ಶರ್ಮಿಷ್ಠೆ ಇಬ್ಬರು ಯಯಾತಿ ಮಹಾರಾಜನ ಹೆಂಡತಿಯರಾದರು. ದೇವಯಾನಿಗೆ ಯದು, ತುರ್ಮಸು ಎಂಬ ಇಬ್ಬರು ಗಂಡುಮಕ್ಕಳು ಹುಟ್ಟಿದರು. ಶರ್ಮಿಷ್ಠೆಗೆ ದ್ರುಹ್ಯ, ಅನು, ಪೂರು ಎಂಬ ಮೂವರು ಸತ್ಪುತ್ರರು ಹುಟ್ಟಿದರು. ಯಯಾತಿಯ ಈ ಪಂಚಪುತ್ರರೂ ಇಂದ್ರಾದಿ ದೇವತೆಗಳಂತೆ ಕಾಂತಿಸಂಪನ್ನರೂ, ಅಗ್ನಿಯಂತೆ ತೇಜಸ್ವಿಗಳೂ ವರುಣನಂತೆ ಪರಾಕ್ರಮ ಶಾಲಿಗಳೂ ಆಗಿದ್ದರು.

ಆದರೆ ಶರ್ಮಿಷ್ಠೆಗೆ ಮೂರುಜನ ಮಕ್ಕಳಿದ್ದೂ ತಮಗೆ ಎರಡೇ ಮಕ್ಕಳಾದರು ಎಂದು ದೇವಯಾನಿಗೆ ಚಿಂತೆಯಾಯಿತು. ಶರ್ಮಿಷ್ಠೆಯನ್ನು ಅವಳು ತನ್ನ ಸೇವೆ ಮಾಡಲು ದಾಸಿಯನ್ನಾಗಿ ಕರೆತಂದಿದ್ದಳು. ಆದರೆ ಚತುರಮತಿಯಾದ ಶರ್ಮಿಷ್ಠೆಯು ಯಯಾತಿಯ ಮನವನ್ನು ಸೆಳೆದು ಗುಟ್ಟಾಗಿಯೇ ಅವನನ್ನು ಮದುವೆಯಾಗಿ ಮುತ್ತಿನಂಥ ಮೂರು ಮಕ್ಕಳನ್ನು ಪಡೆದಿದ್ದಳು. ಇದು ದೇವಯಾನಿಯ ಹೃದಯದಲ್ಲಿ ಅಸೂಯೆಯ ಕಿಡಿಯನ್ನು

ಹೊತ್ತಿಸಿತು. ಅದು ದ್ವೇಷದ ದಳ್ಳುರಿಯಾಗಿ ದಹಿಸತೊಡಗಿತು. ಆಗ ಅವಳು ಧಾವಿಸಿ ತಂದೆಯ ಬಳಿಗೆ ಬಂದಳು. "ತಂದೆಯೇ ಘಾತವಾಯಿತು, ದಾಸಿ ಎಂದು ಬಂದ ಶರ್ಮಿಷ್ಠೆಯು ನನ್ನ ಪತಿಯನ್ನು ರಹಸ್ಯವಾಗಿ ಮದುವೆಯಾಗಿ ಮೂರು ಮಕ್ಕಳನ್ನು ಪಡೆದಿದ್ದಾಳೆ. ನನಗೆ ಮಾತ್ರ ಇಬ್ಬರೇ ಮಕ್ಕಳು. ಮಡದಿಯಾದ ನನಗಿಂತ ದಾಸಿಯಾದ ಅವಳೇ ಅದೃಷ್ಟವತಿಯೂ ಭಾಗ್ಯವತಿಯೂ ಆದಳು. ಇದನ್ನು ನಾನು ಹೇಗೆ ಸಹಿಸಲಿ? ನನಗೆ ಇದು ಸಹಿಸಲಾಗದ ಅವಮಾನ. ಹೀಗೆ ಪತಿಯಿಂದ ಅವಮಾನಿತಳಾಗಿ ತಿರಸ್ಕೃತಳಾಗಿ ಬದುಕುವುದಕ್ಕಿಂತ ಮರಣವೇ ಮೇಲು, ನಾನು ಬದುಕಲಾರೆ, ಸಾಯುತ್ತೇನೆ."

ಮಗಳು ದೇವಯಾನಿಯ ಈ ನೊಂದ ನುಡಿಯನ್ನು ಕೇಳಿ ಕೋಪ ಕೆರಳಿತು. ಶುಕ್ಲಾಚಾರ್ಯರಿಗೆ ಸಿಟ್ಟಿನ ಭರದಲ್ಲಿ ಅವರು ಅಳಿಯನಾದ ಯಯಾತಿಗೆ ಮುಪ್ಪಿನ ಮುದುಕನಾಗು ಎಂದು ಶಾಪವನ್ನು ಕೊಟ್ಟು ಬಿಟ್ಟರು.

ಶುಕ್ರಾಚಾರ್ಯರ ಈ ಮಾತನ್ನು ಕೇಳಿ ಯಯಾತಿರಾಜನಿಗೆ ಬಹಳ ವ್ಯಥೆಯಾಯಿತು. ಅವನು ವಿನಯದಿಂದ ಕೈ ಜೋಡಿಸಿ ಹೇಳಿದ. "ಗುರುಗಳೇ, ಇದರಲ್ಲಿ ನನ್ನದು ಏನೂ ತಪ್ಪಿಲ್ಲ. ನಾನು ಎಂದೂ ದೇವಯಾನಿಯನ್ನು ತಿರಸ್ಕರಿಸಿಲ್ಲ. ದಾಸಿಯಾಗಿ ದುಡಿಯುವ ರಾಜಕುಮಾರಿ ಶರ್ಮಿಷ್ಠೆಯ ಮೇಲೆ ದಯದೋರಿದ್ದೇನೂ ನಿಜ. ಅವಳ ಅದೃಷ್ಟವೂ ಚೆನ್ನಾಗಿದ್ದುದರಿಂದ ನನ್ನ ಕೈಹಿಡಿದಳು. ಸುದೈವದಿಂದ ಅವಳಿಗೆ ಮೂರು ಮಕ್ಕಳು ಹುಟ್ಟಿದವು. ಅವರವರ ಪೂರ್ವಕರ್ಮ, ಪುಣ್ಯಫಲವನ್ನು ಅನುಸರಿಸಿ ಮಕ್ಕಳು ಹುಟ್ಟುತ್ತಾರೆ. ಆದರೆ ಶರ್ಮಿಷ್ಠೆಯ ಪತಿನಿಷ್ಠೆ, ಸವತಿ ವಾತ್ಸಲ್ಯ, ಶಾಂತಸ್ವಭಾವ, ಅವಳ ಉತ್ಕರ್ಷಕ್ಕೆ ಕಾರಣವಾಗಿದೆ. ಗರ್ವಿಷ್ಠಳಾದ ದೇವಯಾನಿಯು ತಾನು ಶುಕ್ರಾಚಾರ್ಯರ ಮಗಳು ಎಂದು ಯಾವಾಗಲೂ ಹೊಗೆಯಾಡುತ್ತಾ ಇರುತ್ತಾಳೆ. ಶರ್ಮಿಷ್ಠೆಯನ್ನೂ ಅವಳ ಮಕ್ಕಳನ್ನೂ ಕಂಡರೆ ಉರಿದು ಬೀಳುತ್ತಾಳೆ. ಅದಕ್ಕಾಗಿ ನನ್ನನ್ನು ಇರುಳು ಹಗಲು ಹಂಗಿಸಿ ತೊಂದರೆ ಕೊಡುತ್ತಿದ್ದಾಳೆ. ಇಷ್ಟಾದರೂ ನಾನು ಅವಳನ್ನು ಎಂದೂ ಕಡೆಗಣಿಸಿಲ್ಲ, ನಿಂದಿಸುವುದಿಲ್ಲ, ನಾನು ಅವಳೊಡನೆ ಪ್ರೀತಿಯಿಂದಲೇ ಇರುತ್ತೇನೆ. ಆದರೂ ಅವಳು ನಿಮ್ಮ ಬಳಿಗೆ ಬಂದು ಚಾಡಿ ಹೇಳಿದ್ದಾಳೆ. ನೀವು ಅವಳ ಮಾತು ಕೇಳಿ ಕೋಪಗೊಂಡಿರಿ. ಮುದುಕನಾಗು ಎಂದು ಶಾಪಕೊಟ್ಟರಿ. ನಾನೊಬ್ಬ ಜರಾಜೀರ್ಣನಾದ ಜರಠನಾಗಿ ಕುಳಿತುಕೊಂಡರೆ, ತರುಣಿಯಾದ ನಿಮ್ಮ ಮಗಳಿಗೂ ಅನಿಷ್ಟವಲ್ಲವೇ? ನೀವೇ ವಿಚಾರಿಸಿರಿ." ಮಹಾರಾಜನ ಮಾತನ್ನು ಕೇಳಿ ಶುಕ್ರಾಚಾರ್ಯರು ಸ್ತಬ್ಧರಾದರು. ಹತ್ತು ನಿಮಿಷ ಕಣ್ಣು ಮುಚ್ಚಿಕೊಂಡು ಕುಳಿತರು. ಅವರ ಜ್ಞಾನದೃಷ್ಟಿಗೆ ಎಲ್ಲವು ತಿಳಿದು ಹೋಯಿತು. ನಾನು ತಿಳಿಯದೇ ಶಾಪಕೊಟ್ಟು ನನ್ನ ಮಗಳ ಸಂಸಾರ ಸುಖಕ್ಕೆ ಕಲ್ಲು ಹಾಕಿದಂತಾಗಿದೆ ಎಂದು ವಿಚಾರಿಸಿ ಯಯಾತಿಗೆ ನುಡಿದರು.

"ಮಹಾರಾಜ, ನಾನು ದೇವಯಾನಿಯ ಮಾತನ್ನು ಕೇಳಿ ನಿನಗೆ ಶಾಪಕೊಟ್ಟಾಯಿತು. ಅದನ್ನು ಹಿಂದಿರುಗಿಸುವುದು ಶಕ್ಯವಿಲ್ಲ. ಅದು ನಡೆದೇ ತೀರಬೇಕು. ಆದರೆ ನೀನು ಈ ನಿನ್ನ ಮುಪ್ಪನ್ನು ನಿನ್ನ ಐದು ಮಕ್ಕಳಲ್ಲಿ ಯಾರಿಗಾದರೂ ಕೊಟ್ಟು ಅವರ ತಾರುಣ್ಯ ಪಡೆದು ಮತ್ತೆ ಯೌವನದ ಸುಖವನ್ನು ದೇವಯಾನಿಯೊಂದಿಗೆ ಅನುಭವಿಸಬಹುದು. ಇದೇ ನಾನು ನಿನ್ನ ಮೇಲೆ ಮಾಡುವ ಪರಮಾನುಗ್ರಹ."

ಯಯಾತಿಯು ಶುಕ್ರಾಚಾರ್ಯರ ಮಾತನ್ನು ಕೇಳಿ ತನ್ನ ಮಕ್ಕಳ ಪಿತೃ ಪ್ರೇಮವನ್ನು ಪರೀಕ್ಷಿಸಲು ಹೊರಟ. ತನ್ನ ಐದು ಮಂದಿ ಮಕ್ಕಳಲ್ಲಿಯೇ ಜ್ಯೇಷ್ಠನಾದ ಯದುಕುಮಾರನ ಬಳಿಗೆ ಬಂದ. ದೈನ್ಯದಿಂದ ಅವನಿಗೆ ಹೇಳಿಕೊಂಡ.

''ಯದು, ನಿಮ್ಮ ಅಜ್ಜನ ಶಾಪದಿಂದ ನನಗೆ ಮುಪ್ಪು ಬಂದಿದೆ. ನೀನು ನನ್ನ ಮುಪ್ಪನ್ನು ತೆಗೆದುಕೊಂಡು ನಿನ್ನ ತಾರುಣ್ಯವನ್ನು ನನಗೆ ನೀಡು ತಿಳಿದವ, ಜೇಷ್ಠ ಪುತ್ರ ವಿದ್ಯಾವಂತ ತಂದೆಯ ಆಜ್ಞೆಯನ್ನು ಪಾಲಿಸುವವನೇ ನಿಜವಾದ ಪುತ್ರ ಎನಿಸುವನು.''

ಯದುಕುಮಾರನು ಒಪ್ಪಲಿಲ್ಲ, ಯಯಾತಿಯ ಬೇಡಿಕೆಯನ್ನು ತಿರಸ್ಕರಿಸಿದ, ಅದರಂತೆ ದೇವಯಾನಿಯ ಇನ್ನೊಬ್ಬ ಮಗನಾದ ತುರ್ವಸನೂ ತಂದೆಗೆ ತಾರುಣ್ಯವನ್ನು ಕೊಡಲು ಸಮ್ಮತಿಸಲಿಲ್ಲ. ಅದೇ ರೀತಿಯಾಗಿ ಶರ್ಮಿಷ್ಠೆಯ ಮಕ್ಕಳಾದ ದ್ರುಹ್ಯ, ಅನು ಇಬ್ಬರು ತಮ್ಮ ತಾರುಣ್ಯದೊಂದಿಗೆ ತಮ್ಮ ತಂದೆಯ ಮುಪ್ಪನ್ನು ವಿನಿಮಯ ಮಾಡಿಕೊಳ್ಳಲು ಸಿದ್ಧರಾಗಲಿಲ್ಲ. ಅದರಿಂದ ಯಯಾತಿ ಮಹಾರಾಜನಿಗೆ ಬ್ರಹ್ಮಾಂಡ ಕೋಪ ಬಂದು ಅವರೆಲ್ಲರಿಗೂ ಹಿಡಿಶಾಪ ಹಾಕಿದ.

ಕೊನೆಗೆ ತನ್ನ ಹಾಗೂ ಶರ್ಮಿಷ್ಠೆಯ ಕೊನೆಯ ಮಗನಾದ ಪೂರುನ ಬಳಿಗೆ ಬಂದು ತನ್ನ ಬೇಡಿಕೆಯನ್ನು ಅವನ ಎದುರು ಇರಿಸಿದ. ಕಡೆ ಹುಟ್ಟುಮಗನಾದ ಪೂರುವು ತನ್ನ ತಂದೆಯ ಮಾತಿಗೆ ಆನಂದದಿಂದ ಸಮ್ಮತಿಸಿ ತನ್ನ ತಾರುಣ್ಯವನ್ನು ತಂದೆಗೆ ಧಾರೆಯೆರೆದ. ತಾನು ಅಪ್ಪನ ಮುಪ್ಪನ್ನು ಅಪ್ಪಿ ಹಿಡಿದ. ಶುಕ್ರಾಚಾರ್ಯರ ತಪೋಬಲದಿಂದ ಈ ತಂದೆ ಮಕ್ಕಳ ದಾರ್ಥಕ್ಕೆ ತಾರುಣ್ಯದ ವಿನಿಮಯ ಯಶಸ್ವಿಯಾಗಿ ನಡೆಯಿತು.

ತರುಣ ರಾಜಕುಮಾರನಾದ ಪೂರು ಮುಪ್ಪಿನ ಮುದುಕನಾಗಿ ಭೋಗೋಪಭೋಗ ಹಾಗೂ ರಾಗಾನುರಾಗಗಳನ್ನು ಎಲ್ಲ ಬಿಟ್ಟು, ಮನೆಯಲ್ಲಿ ಮೂಲೆ ಹಿಡಿದು ಕುಳಿತ. ಹೊಸ ಹರೆಯಿಂದ ನವತರುಣನಾಗಿ ಬಲಿಷ್ಠನಾಗಿ ಮಾರ್ಪಡಿಸಲ್ಪಟ್ಟ ಯಯಾತಿ ಮಹಾರಾಜನು ಮಗನ ಪುಣ್ಯದಿಂದ ಹೊಸ ಯೌವ್ವನ ಪಡೆದು ಒಂದು ಸಾವಿರ ವರುಷ ವಿಷಯ ಸುಖವನ್ನು ಅನುಭವಿಸಿದ. ಯೌವ್ವನದಲ್ಲಿ ಅನುಭವಿಸಬಹುದಾದ ರತಿ ಕ್ರೀಡೆಗಳ ಎಲ್ಲ ಪ್ರಕಾರಗಳನ್ನು ಉಂಡು ಅನುಭವಿಸಿದ. ಸಾವಿರ ವರ್ಷಗಳ ನಂತರ ಯಯಾತಿ ದಂಪತಿಗಳಿಗೆ ತಾರುಣ್ಯದ ಸುಖೋಪಭೋಗ ಗಳಲ್ಲಿ ತೃಪ್ತಿ ಉಂಟಾಯಿತು. ''ಸಾಕು ಈ ಸಾಂಸಾರಿಕ ಸುಖ ಬೇಕಿಲ್ಲ. ಇನ್ನು ಮುಂದೆ ಈ ಶೃಂಗಾರ ಸೌಖ್ಯ. ಇಂದೇ ಹೊಸ ಹರೆಯದ ಈ ರಸಾನುಭೂತಿಗೆ ವಿದಾಯವನ್ನು ಹೇಳುವೆನು'' ಎಂದು ನಿಶ್ಚಯಿಸಿದ. ತನ್ನ ಪ್ರೀತಿಯ ಪುತ್ರನಾದ ಪೂರುವನ್ನು ಕರೆದು ''ವತ್ಸ, ನಿನ್ನ ಅಮೂಲ್ಯವಾದ ತಾರುಣ್ಯವನ್ನು ಪಡೆದು ನಾನು ವಿಷಯ ಸುಖವನ್ನು ಯಥೇಚ್ಛವಾಗಿ ಅನುಭವಿಸಿದೆ. ನನಗೆ ಈಗ ಅದರಲ್ಲಿ ಅಲಂಬುದ್ಧಿ ಹುಟ್ಟಿದೆ. ನೀನು ಈ ನಿನ್ನ ಯೌವ್ವನವನ್ನು ತೆಗೆದುಕೋ. ನನ್ನ ಮುಪ್ಪನ್ನು ನನಗೆ ಕೊಡು'' ಎಂದು ಕೇಳಿದನು. ಇದಕ್ಕೆ ಪೂರು ಒಪ್ಪಲಿಲ್ಲ. ಅವನು ತನ್ನ ತಂದೆಯನ್ನು ಕುರಿತು ''ಪೂಜ್ಯ ತಂದೆಯೇ, ನಾನು ಒಮ್ಮೆ ಸಂತೋಷದಿಂದ ನನ್ನ ತಾರುಣ್ಯವನ್ನು ಕೊಟ್ಟಿದ್ದೇನೆ. ನಾನು ಅದನ್ನು ಮರಳಿ ತೆಗೆದುಕೊಳ್ಳಲಾರೆ. ಈ ಜಗತ್ತಿನಲ್ಲಿ ಹುಟ್ಟಿನ ಎಲ್ಲ ಪ್ರಾಣಿಗಳಿಗೂ ಒಂದಿಲ್ಲ ಒಂದು ದಿನ ಮುಪ್ಪು ಬರುವುದು ತಪ್ಪಿದ್ದಲ್ಲ. ಬಲಾತ್ಕಾರವಾಗಿ ಮುಪ್ಪಿನ ಕಾಲದಲ್ಲಿ ಬರುವ ಆ ಮುಪ್ಪನ್ನಾದರೂ ನಾವು ಒಪ್ಪಿ ಅನುಭವಿಸಲೇ ಬೇಕಷ್ಟೇ! ನನ್ನ ತಂದೆಯ ಉಪಕಾರಕ್ಕಾಗಿ ನಾನು ಈಗಲೇ ಅಂಗೀಕರಿಸಿದ್ದೇನೆ. ಇದನ್ನು ನಿನಗೆ ಮರಳಿ ಒಪ್ಪಿಸುವುದು ನನ್ನ ದೃಷ್ಟಿಯಲ್ಲಿ ಮಹಾ ಅಪರಾಧ. ಆದುದರಿಂದ ನೀನು ನನಗೆ ತಾರುಣ್ಯವನ್ನು ಕೊಡುವುದು ಬೇಡ. ನೀನು ನಿರಂತರವೂ ನವ ತರುಣನಾಗಿ ವಿಷಯ

ಸುಖಗಳನ್ನು ಅನುಭವಿಸುತ್ತಾ ಇರು. ನಾನು ಸ್ವಸಂತೋಷದಿಂದ ಅಂಗೀಕರಿಸಿದ ಈ ಮುಪ್ಪನ್ನು ಪರಮೇಶ್ವರನ ಉಪಾಸನೆಯಿಂದ ಕಳೆದುಕೊಳ್ಳುತ್ತೇನೆ.''

ಹೀಗೆ ಹೇಳಿ ಪೂರು ಗಂಗಾತೀರಕ್ಕೆ ಬಂದನು. ಗೌತಮಿಯ ದಕ್ಷಿಣತೀರದಲ್ಲಿ ನಿಂತು ಘೋರ ತಪಸ್ಸನ್ನು ಆಚರಿಸಿದನು. ಅವನ ಉಗ್ರ ತಪೋನುಷ್ಠಾನಕ್ಕೆ ಪ್ರಸನ್ನನಾದ ಪರಮೇಶ್ವರನು ಅವನಿಗೆ ಪ್ರತ್ಯಕ್ಷನಾಗಿ 'ಬೇಕಾದ ವರ ಬೇಡು' ಎಂದು ಹೇಳಿದನು. ಆಗ ಪೂರು ಕೈ ಮುಗಿದು ಆ ಕೈಲಾಸಪತಿಯನ್ನು ಕೇಳಿಕೊಂಡ ''ಮಹಾಪ್ರಭು ಶುಕ್ರಾಚಾರ್ಯರ ಶಾಪದಿಂದ ನಮ್ಮ ತಂದೆಗೆ ಬಂದ ಮುಪ್ಪನ್ನು ನಾನು ಸ್ವೀಕರಿಸಿದ್ದೇನೆ. ಅದು ಈಗ ನಾಶವಾಗಿ ನನಗೆ ತಾರುಣ್ಯವು ಬರಬೇಕು. ಮತ್ತು ನನ್ನ ತಂದೆಯಿಂದ ಶಪಿಸಲ್ಪಟ್ಟ ನನ್ನ ನಾಲ್ಕು ಜನ ಸಹೋದರರು ಶಾಪಮುಕ್ತರಾಗಬೇಕು.'' ಪೂರುವಿನ ಬೇಡಿಕೆಯನ್ನು ಮಹಾದೇವನು ಮನ್ನಿಸಿದ. ಅವನ ಮುಪ್ಪನ್ನು ಕಳೆದು ಹೊಸ ತಾರುಣ್ಯವನ್ನು ಅವನಿಗೆ ದಯಪಾಲಿಸಿದ. ಅವನ ಸಹೋದರರ ಶಾಪವನ್ನೂ ಹೋಗಲಾಡಿಸಿದ. ಅಂದಿನಿಂದ ಆ ತೀರ್ಥವು ಮುಪ್ಪು ಹಾಗೂ ರೋಗಗಳನ್ನು ಕಳೆಯುವ ಪರಮ ಪವಿತ್ರ ತೀರ್ಥ ಎಂದು ಹೆಸರಾಯಿತು. ಆ ತೀರ್ಥಕ್ಕೆ ಕಾಲಂಜರ ತೀರ್ಥ ಎಂದು ಹೆಸರು ಬಂದಿದೆ.

## ಅಪ್ಸರೋಯುಗ ತೀರ್ಥ ಹಾಗೂ ಅಪ್ಸರಾಸಂಗಮ ತೀರ್ಥಗಳ ಮಹಾಮಹಿಮೆ

**ಬ್ರಹ್ಮ:-** ನಾರದ, ಪೂರ್ವಕಾಲದಲ್ಲಿ ವಶಿಷ್ಠ ವಿಶ್ವಾಮಿತ್ರರ ನಡುವೆ ಯಾವುದೋ ಕಾರಣದಿಂದ ಸ್ಪರ್ಧೆ ಉಂಟಾಗಿತ್ತು. ವಿಶ್ವಾಮಿತ್ರನು ಬ್ರಾಹ್ಮಣತ್ವವನ್ನು ಪಡೆಯಲಿಕ್ಕಾಗಿ ನಿಯಮಬದ್ಧನಾಗಿ ತಪಸ್ಸನ್ನು ಮಾಡುತ್ತಲಿದ್ದ. ಇಂದ್ರನಿಗೆ ಹೊಟ್ಟೆಕಿಚ್ಚು. ತನ್ನ ಇಂದ್ರಪದವಿಯನ್ನು ಎಲ್ಲಿ ಕಬಳಿಸುವನೋ ಎಂದು ಮಹಾ ಚಿಂತೆ ಆ ಮಹೇಂದ್ರನಿಗೆ. ತನ್ನ ಮೆಚ್ಚಿನ ಅಪ್ಸರೆಯರ ಬಳಗದಲ್ಲಿ ಚತುರಮತಿಯಾದ ಮೇನಕೆಯನ್ನು ಕರೆದು ಹೇಳಿದ ''ನೀನು ಭೂಲೋಕಕ್ಕೆ ಹೋಗು. ಅಲ್ಲಿ ಗಂಗಾತೀರದಲ್ಲಿ ಘೋರತಪಸ್ಸಿಗೆ ತೊಡಗಿದ್ದಾನೆ ಮಹಾಮುನಿ ವಿಶ್ವಾಮಿತ್ರ. ನಿನ್ನ ಅನಿಂದ್ಯ ಸೌಂದರ್ಯದಿಂದ, ಒನಪು ಒಯ್ಯಾರಗಳಿಂದ ಆ ಮುನಿಯ ಮನವನ್ನು ಮೋಹಗೊಳಿಸು ಅವನ ಸ್ನೇಹಗಳಿಸು ತಪಸ್ಸು ಹಾಳುಗೆಡು. ಯಶಸ್ವಿನಿಯಾಗಿ ಅಮರಾವತಿಗೆ ಮರಳಿಬಿಡು.'' ಇಂದ್ರನ ಆಣತಿಗೆ ತಲೆಬಾಗಿದಳು ಆ ಸ್ವರ್ಗದ ಚೆಲೆವೆಣ್ಣು. ಮಹೀಮಂಡಲಕ್ಕೆ ಇಳಿದು ಬಂದಳು. ಅವಳ ರೂಪ ಸುರಲೋಕ ದಷ್ಟೇ ಅಪರೂಪ. ಹಾವಭಾವ ಮುನಿಯ ಮನಸ್ಸಿನ ಮೇಲೆ ತುಂಬು ಪ್ರಭಾವ ಬೀರಿತು ಆ ತರಳೆಯ ಸೌಂದರ್ಯ ಹಾಗೂ ಬಿಂಕ ಬಿನ್ನಾಣಗಳಿಗೆ ಮರುಳಾದ ರಾಜರ್ಷಿ, ಮಹರ್ಷಿ ವಿಶ್ವಾಮಿತ್ರ ಆ ಮುನಿಯಿಂದ ಮೇನಕೆಗೆ ಒಂದು ಮಗಳು ಹುಟ್ಟಿತು. ಅದೊಂದು ಮೇನಕೆ ಯದೇ ಪಡಿಯಚ್ಚು. ಅವಳೇ ಮುಂದೆ ದುಷ್ಯಂತರಾಜನ ನೆಚ್ಚಿನ ಮಡದಿ ಶಕುಂತಲೆಯಾಗಿ ಹೆಸರಾದಳು. ಆ ಶಕುಂತಲೆಗೆ ದುಷ್ಯಂತನಿಂದ ಭರತ ಎಂಬ ವೀರವರೇಣ್ಯನಾದ ಶೂರಪುತ್ರ ಜನಿಸಿದ. ಅವನಿಂದಲೇ ಈ ದೇಶ ಭರತಖಂಡ ಎಂದು ಹೆಸರಾಯಿತು. ವಿಶ್ವಾಮಿತ್ರನ ಮನವನ್ನು ಮುಗ್ಧಗೊಳಿಸಿ ಮಗಳನ್ನು ಹಡೆದ ಬಳಿಕ ಆ ಮೇನಕೆಯು ಅಮರಾವತಿಗೆ ಮರಳಿಹೋದಳು. ಅನಂತರ ವಿಶ್ವಾಮಿತ್ರನಿಗೆ ಬುದ್ಧಿ ಬಂದಿತು. ವೈರಾಗ್ಯ ಉದಿಸಿ ನಿಂದಿತು. ಅವನು ಅಲ್ಲಿಂದ ಎದ್ದು ತಾನು ಇದ್ದ ಆ ತೀರ್ಥವನ್ನು ಬಿಟ್ಟು ಗಂಗೆಯ ದಕ್ಷಿಣತೀರ್ಥವಾದ ಕಾಲಿಂದೀಶ್ವರನು ನೆಲೆಸಿದ ಸ್ಥಳಕ್ಕೆ ಬಂದು ನಿಂತನು. ಮತ್ತೆ ಆರಂಭವಾಯ್ತು.

ವಿಶ್ವಾಮಿತ್ರಮುನಿಯ ಅತ್ಯುಗ್ರತಪಸ್ಸು. ಹಿಂದೆ ಮಾಡಿದ ಎಲ್ಲ ತಪಸ್ಸುಗಳಿಗಿಂತ ದಾರುಣವಾಗಿತ್ತು ಕಾಲಂಜರೇಶ್ವರ ತೀರ್ಥದ ತಡಿಯಲ್ಲಿ ಅವನು ಕೈಗೊಂಡ ತಪಸ್ಸು. ಮತ್ತೆ ದೇವೇಂದ್ರನಿಗೆ ಚಿಂತಾಚಕ್ರ ಬೆನ್ನು ಹತ್ತಿತ್ತು. ಅವನು ತನ್ನ ಅಪ್ಸರೆಯರ ಬಳಗದಲ್ಲಿಯೇ "ಸೌಂದರ್ಯಖನಿ" ಎಂದು ಪ್ರಸಿದ್ಧ ರಾದ ರಂಭೆ, ತ್ರಿಲೋತ್ತಮೆ, ಮೊದಲಾದವರನ್ನು ಕರೆದು ವಿಶ್ವಾಮಿತ್ರನ ತಪಸ್ಸನ್ನು ಹಾಳು ಮಾಡಲು ಹೇಳಿದ. ಆದರೆ ಅವರೆಲ್ಲರಿಗೂ ಗೊತ್ತು ಒಮ್ಮೆ ಕಾಲು ಜಾರಿದ ಆ ಕಠೋರ ಮುನಿ ಮತ್ತೆ ಇನ್ನು ಹೆಣ್ಣಿನ ಬಿಂಕಬಿನ್ನಾಣಗಳಿಗೆ ಮಣಿಯುವದಿಲ್ಲ, ಕಾಮೋನ್ಮಾದಕ್ಕೆ ವಶನಾಗುವುದಿಲ್ಲ' ಎಂದು, ಇಷ್ಟೇ ಅಲ್ಲ ಯಾವ ಹೆಣ್ಣು ಬಂದರೂ ಕಣ್ಣು ಎತ್ತಿ ನೋಡದಿರುವಂಥ ಚಿತ್ತಸ್ಥೈರ್ಯ, ಇಂದ್ರಿಯ ಸಂಯಮಗಳನ್ನು ರೂಢಿಸಿ ಬೆಳೆಸಿಕೊಂಡ ಆ ಕೆಂಡದಂಥ ಮುನಿ ತನ್ನನ್ನು ಮರಳು ಮಾಡಲು ಬಂದ ನಮ್ಮನ್ನು ಕಂಡರೆ ಶಾಪ ತೂರುವನು, ಕೆಂಡಕಾರುವನು, ಆದುದರಿಂದ ಅವನ ಬಳಿ ಸುಳಿಯುವದು ತಮ್ಮ ಪ್ರಾಣಕ್ಕೇ ಅಪಾಯ ಎಂದು ಅವರೆಲ್ಲರೂ ವಿಶ್ವಾಮಿತ್ರ ಮುನಿಯ ಬಳಿಗೆ ಹೋಗಲು ನಿರಾಕರಿಸಿದರು.

ಇಂದ್ರನ ಬತ್ತಳಿಕೆಯಲ್ಲಿ ಬಾಣಗಳಿಗೇನು ಕೊರತೆ? ಅಮರಾವತಿಯ ಅಪ್ಸರೆಯರಲ್ಲಿ ಗಂಭೀರೆ ಮತ್ತು ಅತಿಗಂಭೀರೆ ಎಂಬ ಹರೆಯದ ಇಬ್ಬರು ಹೆಂಗಳೆಯರು. ಅವರಿಗೆ ತಾವು ರೂಪರಾಣಿಯರು ಎಂಥ ಸಂಯಮಿ ಮುನಿಯ ಮನವನ್ನೂ ಮರುಳುಗೊಳಿಸಬಲ್ಲೆವು ಎಂಬ ಅಹಂಕಾರ ತುಂಬಿ ತುಳುಕುತ್ತಿತ್ತು. ರಂಭೆ ಊರ್ವಶಿಯಂಥ ಸ್ವರ್ಗದ ಚೆಲುವಿನ ಪುತ್ಥಳಿಗಳಿಗೇ ನೀಗದ ಮಹಾಕಾರ್ಯವನ್ನು ಸಾಧಿಸಿ ಸುರರಾಜನ ಸಂಪ್ರೀತಿಯನ್ನು ಪಡೆಯಬೇಕೆಂಬ ಛಲವಿದ್ದಿತು. ಅವರು ಇಂದ್ರನ ಆದೇಶ ಒಪ್ಪಿದರು. ಅವರಿಬ್ಬರೂ ದೇವೇಂದ್ರನಿಗೆ ಆತ್ಮ ವಿಶ್ವಾಸದಿಂದ ನುಡಿದರು. "ದೇವರಾಜ, ನಾವು ಭೂಲೋಕಕ್ಕೆ ಹೋಗುತ್ತೇವೆ. ನಮ್ಮ ಹಾವ ಭಾವ ಕುಣಿತ-ಮಣಿತ ಸಂಗೀತ ಮಧುರಾಲಾಪಗಳಿಂದ ಆ ಮುನಿಯ ಮನಸ್ಸನ್ನು ಮರುಳು ಮಾಡುತ್ತೇವೆ. ಹೆಣ್ಣಿನ ಕಣ್ಣಿನ ನೋಟಕ್ಕೆ ಲೀಲಾ ವಿಲಾಸಗಳಿಗೆ ವಶರಾಗದ ಮಾನವರು ಯಾರಿದ್ದಾರೆ. ಭೂಮಂಡಲದಲ್ಲಿ? ನಾವು ನಿಶ್ಚಿತ ವಾಗಿಯೂ ವಿಶ್ವಾಮಿತ್ರನ ಮನಸ್ಸನ್ನು ಜಯಿಸಬಲ್ಲೆವು" ಎಂದು ನುಡಿದು ಆ ಸುರರಾಜನಲ್ಲಿ ವಿಶ್ವಾಸ ಮೂಡಿಸಿ ಭೂತಲಕ್ಕೆ ಇಳಿದರು.

ಕಾಲಂಜರಗಿರಿಯಲ್ಲಿ ಉಗ್ರಾತ್ ಉಗ್ರತರವಾದ ತಪೋನುಷ್ಠಾನವನ್ನು ಅವ್ಯಗ್ರ ಬುದ್ಧಿಯಿಂದ ಮಾಡುತ್ತಿರುವ ಆ ಮಹಾ ಮಹರ್ಷಿಯ ಬಳಿಗೆ ಸುರಲೋಕದ ರಮಣೀ ಮಣಿಗಳು ಐತಂದರು. ದೂರಿಂದಲೇ ಅಸಂಪ್ರಜ್ಞಾತ ಸಮಾಧಿಗೆ ಇಳಿದು ಪರಾತ್ಪರ ತತ್ವವನ್ನು ತನ್ನ ಅಂತರ್ದೃಷ್ಟಿಯಿಂದ ಕಂಡು ಜಪತಪೋನಿರತನಾದ ಆ ಮಹರ್ಷಿಯ ತಪಶ್ಚರ್ಯೆಯನ್ನೂ ಅವನ ದಿನಚರಿಯನ್ನೂ ಗಮನಿಸಿದರು. ಮೃತ್ಯುವಿಗೂ ಮುಪ್ಪಿಗೂ ಜಗ್ಗದಂತೆ ಸ್ಥಿರಚಿತ್ತನಾಗಿ ತಪಸ್ಸನ್ನು ಗೈಯುತ್ತಿದ್ದ ಆ ಮುನಿಯು ಕೈಲಾಸ ಬೆಟ್ಟದಿಂದ ಇಳಿದು ಬಂದ ಸಾಕ್ಷಾತ್ ಪರಮೇಶ್ವರನಂತೆಯೇ ತೋರುತ್ತಿದ್ದ. ಒಂದು ಸಾವಿರ ವರ್ಷ ಆ ಅಪ್ಸರೆಯರು ವಿಶ್ವಾಮಿತ್ರನ ತಪೋಭಂಗಕ್ಕಾಗಿ ಕಾದುನಿಂತರು. ದೂರದಿಂದಲೇ ಹಾಡಿ ಪಾಡಿದರು. ಕುಣಿದು ಕುಪ್ಪಳಿಸಿದರು. ಸಂಗೀತದ ವಿವಿಧ ಭಂಗಿಗಳಿಂದ ತಮ್ಮ ಉನ್ಮಾದ ದೃಷ್ಟಿಕ್ಷೇಪದಿಂದ ಆ ಮುನಿಯ ಮನಸ್ಸನ್ನು ಸೆಳೆಯಲು ಪ್ರಯತ್ನಿಸಿದರು. ಆದರೆ ಸ್ಥಿರಚಿತ್ತನಾದ ಆ ವಿಶ್ವಾಮಿತ್ರ ಒಮ್ಮೆಯೂ ಆ ಹೆಣ್ಣುಗಳ ಕಡೆ ಕಣ್ಣೆತ್ತಿ ನೋಡಲಿಲ್ಲ.

ಆದರೆ ಒಂದು ದಿನ ಆ ಯುವತಿಯರು ಹುಚ್ಚು ಸಾಹಸಮಾಡಿ ಮುನಿಯ ಆಶ್ರಮದ ಒಳಗೇ ಬಂದರು. ಧೈರ್ಯ ಮಾಡಿ ಅವನ ಬಳಿಯಲ್ಲಿಯೇ ನಿಂದರು. ವಿವಿಧ ವಿಲಾಸ ವಿನೋದಗಳಿಂದ ಅವನನ್ನು ಕೆಣಕಿದರು. ಅವರ ಈ ಹುಚ್ಚು ಧೈರ್ಯವನ್ನು ಕಂಡು ಮುನಿಗೆ ಕೋಪ ಬಂದಿತು. ತನ್ನ ತಪಸ್ಸನ್ನು ಹಾಳುಮಾಡಬೇಕೆಂಬ ಬುದ್ಧಿಯಿಂದ ಅವರು ಮಾಡುವ ಶೃಂಗಾರ ಚೇಷ್ಟೆಯನ್ನು ಸಮೀಪದಿಂದಲೇ ಕಂಡ ಬಳಿಕ ಮುನಿಗೆ ಯುವತಿಯರಿಗಿಂತ ಅವರನ್ನು ಕಳಿಸಿದ ದೇವೇಂದ್ರನ ಮೇಲೆಯೇ ಕೋಪ ಉಕ್ಕಿತು. ಇಬ್ಬರಿಗೂ ತಕ್ಕ ಶಾಸ್ತಿ, ಮಾಡಬೇಕೆಂದು ಅವನು ಆ ಇಬ್ಬರೂ ಸ್ವರ್ಗಲೋಕದ ಸುಂದರಿಯರನ್ನು "ನೀವು ನೀರಾಗಿ, ನದಿಯಾಗಿ ಹರಿದು ಹೋಗಿರಿ" ಎಂದು ಶಪಿಸಿದನು. ಆಗ ಆ ಇಬ್ಬರೂ ಅಪ್ಸರಾಸ್ತ್ರೀಯರು ಹೆದರಿಹೌಹಾರಿ ಮುನಿಯ ಪಾದಕ್ಕೆ ಬಿದ್ದರು. ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಿಂದ ವಿಶ್ವಾಮಿತ್ರ ಮುನಿಗೆ ಕರುಣೆ ಬಂದಿತು. "ನೀವು ನನ್ನ ಶಾಪದಂತೆ ನದಿಯಾಗಿ ಹರಿದು ಗಂಗೆಯೊಡನೆ ಸಂಗಮಿಸಿದರೆ ನಿಮಗೆ ನಿಮ್ಮ ಮೊದಲಿನ ಅಪ್ಸರೆಯರ ರೂಪವು ಪುನಃ ಪ್ರಾಪ್ತವಾಗುವದು. ಇನ್ನು ಮೇಲಾದರೂ ಆ ದೇವೇಂದ್ರನು ನನ್ನ ಬಳಿಗೆ ಅಪ್ಸರೆಯನ್ನು ಅಟ್ಟಿ ನನ್ನ ತಪೋಭಂಗ ಮಾಡುವ ಕೆಲಸಕ್ಕೆ ಕೈ ಹಾಕದಿರಲಿ." ಎಂದು ಹೇಳಿದನು.

ಆ ಮಹಾಮುನಿಯ ಶಾಪದಂತೆ ಅವರಿಬ್ಬರೂ ದೇವಲೋಕದ ಗಣಿಕೆಯರು ನದಿಯಾಗಿ ಹರಿದರು. ಆ ನದಿಗಳಿಗೆ "ಅಪ್ಸರೋಯುಗ" ಎಂದು ಹೆಸರಾಯಿತು. ಆ ಎರಡೂ ನದಿಗಳೂ ಮೊದಲು ಒಂದಕ್ಕೊಂದು ಸಂಧಿಸಿ ನಂತರ ಎರಡೂ ಕೂಡಿ ಗಂಗೆಯೊಂದಿಗೆ ಸಂಗಮಿಸಿದವು. ಅದೇ ಅಪ್ಸರಾಸಂಗಮ ತೀರ್ಥ ಎಂದು ಪ್ರಸಿದ್ಧವಾಗಿದೆ. ಈ ಅಪ್ಸರೋಯುಗ ತೀರ್ಥ ಮತ್ತು ಅಪ್ಸರಾಸಂಗಮ ತೀರ್ಥಗಳಲ್ಲಿ ಸ್ನಾನ ಪಾನ ಮಾಡಿದವರು ಸರ್ವಪಾಪಗಳಿಂದ ಮುಕ್ತರಾಗುತ್ತಾರೆ.

## ಕಣ್ವತೀರ್ಥ

**ಬ್ರಹ್ಮ:-** ನಾರದ, ಪ್ರಾಚೀನ ಕಾಲದಲ್ಲಿ ಕಣ್ವ ಎಂಬ ಮಹರ್ಷಿಗೆ ಬಾಹ್ಲೀಕ ಎಂಬ ಮಗನಿದ್ದ. ಅವನು ಜ್ಯೇಷ್ಠ ಪುತ್ರನಾಗಿದ್ದು ವೇದ ವೇದಾಂಗ ಪಾರಂಗತನಾಗಿದ್ದ. ಕಾಣ್ವ ಎಂತಲೂ ಅವನ ಹೆಸರು. ಮಹಾಕರ್ಮಠ ಈ ಕಾಣ್ವ ಮಹರ್ಷಿ. ಪ್ರತಿ ದಿನವೂ ಗೌತಮೀ ತೀರದಲ್ಲಿ ಅಗ್ನಿಹೋತ್ರ ಮಾಡುತ್ತ ಪ್ರತಿಪರ್ವಗಳಲ್ಲೂ ಇಷ್ಟಿಗಳನ್ನು ಮಾಡುತ್ತಿದ್ದ. ಪ್ರಾತಃಕಾಲದಲ್ಲಿ ಪತ್ನಿಯೊಡನೆ ಅಗ್ನಿಹೋತ್ರ ಮಾಡುವದನ್ನು ಅವನೆಂದೂ ತಪ್ಪಿಸುತ್ತಿರಲಿಲ್ಲ. ಒಂದು ದಿನ ಎಂದಿನಂತೆ ಅಗ್ನಿಹೋತ್ರ ಆರಂಭಿಸಿದ. ಉರಿಯುತ್ತಿದ್ದ ಹೋಮಕುಂಡದಲ್ಲಿ ಒಂದು ಆಹುತಿ ಮಂತ್ರೋಚ್ಚಾರಣೆ ಮಾಡಿ ಹಾಕಿದ. ಎರಡನೇ ಆಹುತಿ ಹಾಕಲು ಕೈಯಲ್ಲಿ ತೆಗೆದುಕೊಂಡ. ಆದರೆ ಅಷ್ಟರಲ್ಲಿ ಅಗ್ನಿಕುಂಡದಲ್ಲಿ ಅಗ್ನಿ ಶಾಂತವಾಯಿತು ಆ ಮುನಿಗೆ ವಿಷಾದವೆನಿಸಿತು. ಮುಂದೇನು ಎಂಬ ಚಿಂತೆ ಆಯಿತು. ಎರಡು ಆಹುತಿಗಳ ಮಧ್ಯೆ ಹೋಮಾಗ್ನಿ ನಂದಿಹೋಗಿದೆ. ಬೇರೆ ವೈದಿಕಾಗ್ನಿಯನ್ನಾಗಲೀ ಲೌಕಿಕಾಗ್ನಿಯನ್ನಾಗಲೀ ಪ್ರತಿಷ್ಠಿಸಬೇಕೆ? ಎರಡನೇ ಆಹುತಿಯನ್ನು ಎಲ್ಲಿ ಹೋಮಮಾಡಲಿ? ಅಥವಾ ಬೇರೆ ಆಹುತಿಯನ್ನೇ ತೆಗೆದುಕೊಳ್ಳಬೇಕೆ? ಎಷ್ಟು ಯೋಚಿಸಿದರೂ ಬಗೆಹರಿಯದಾಯಿತು. ಆಗ ಆಕಾಶವಾಣಿಯಾಯಿತು.

"ನೀನು ಬೇರೆ ಅಗ್ನಿಯನ್ನು ಪ್ರತಿಷ್ಠಾಪಿಸಬೇಕಿಲ್ಲ. ಹಿಂದೆ ನಿನ್ನ ಹೋಮ ಕುಂಡದಲ್ಲಿ ಅರ್ಧಸುಟ್ಟಿರುವ ಕಟ್ಟಿಗೆಯ ತುಂಡುಗಳಲ್ಲಿ ಅಗ್ನಿಯ ಕಣಗಳು ಉಳಿದಿರುತ್ತದೆ. ಅದನ್ನೇ ಉದ್ದೀಪನಗೊಳಿಸಿ ಅದರಲ್ಲಿ ನಿನ್ನ ಎರಡನೇ ಆಹುತಿಯನ್ನು ಹೋಮಿಸು."

ಈ ಆಕಾಶವಾಣಿಯ ಆದೇಶ ಕಾಣ್ವನಿಗೆ ಸಮ್ಮತವಾಗಲಿಲ್ಲ. ಇದು ಅಶಾಸ್ತ್ರೀಯ ಎಂದು ಅನಿಸಿತು ಅವನ ಮನಸ್ಸಿಗೆ. ಆದುದರಿಂದ ಅವನು ನಭೋವಾಣಿಯ ಮಾತಿನಂತೆ ನಡೆಯದೆ ಸುಮ್ಮನೇ ಕುಳಿತುಕೊಂಡ. ಆಗ ಪುನಃ ಆಕಾಶವಾಣಿ ಮೊಳಗಿತು. "ಹಿರಣ್ಯವು ಅಗ್ನಿಯ ಪುತ್ರ. ತಂದೆ ಮಗ ಇಬ್ಬರೂ ಒಂದೇ ಮಗನಿಗೆ ಸಮರ್ಪಿಸಿದರೆ ತಂದೆಗೂ ಸಂತೋಷವಾಗುವುದು. ತಂದೆಗೆ ಕೊಡಬೇಕಾದುದನ್ನು ಮಗನಿಗೆ ಕೊಟ್ಟರೆ ಕೋಟಿಪಟ್ಟು ಫಲ. ಅರ್ಧದಗ್ಧವಾಗಿ ಉಳಿದ ಹೋಮದ ಕಾಷ್ಠಗಳನ್ನು ಪುನಃ ಉದ್ದೀಪಿಸಿ ಅದನ್ನು ಹೋಮಾಗ್ನಿಯನ್ನಾಗಿಸಿದಾಗ ಅದು ಹಿರಣ್ಯ ಎನಿಸುವದು. ಇಂಥ ಹಿರಣ್ಯರೂಪ ಅಗ್ನಿಯಲ್ಲಿ ಆಹುತಿ ನೀಡಿದರೆ ಕೋಟಿಪುಣ್ಯ ಫಲ." ಈ ಆಕಾಶವಾಣಿಯು ಅಲ್ಲಿನ ಎಲ್ಲ ಋತ್ವಿಜರಿಗೂ ಒಪ್ಪಿಗೆಯಾಯಿತು. ಅವರೆಲ್ಲರೂ ಆಕಾಶವಾಣಿಯ ಆದೇಶದಂತೆ ಹೋಮಕಾರ್ಯ ನಡೆಸಿದರು. ಅಂದಿನಿಂದ ಕಾಣ್ವಮುನಿಯು ಕೋಟಿಪಟ್ಟು ಪುಣ್ಯಕೊಡುವ ಯಜ್ಞವನ್ನು ಹಿರಣ್ಯಕಾಷ್ಠದಲ್ಲಿ ಮಾಡಿದ ಆ ತೀರ್ಥವು ಕೋಟಿ ತೀರ್ಥ ಎಂದು ಪ್ರಸಿದ್ಧವಾಯಿತು. ಈ ತೀರ್ಥಗಳಲ್ಲಿ ಸ್ನಾನ-ದಾನಗಳನ್ನು ಮಾಡಿದರೆ ಕೋಟಿ ಗುಣ ಪುಣ್ಯಫಲವು ಲಭಿಸುವದು.

## ನಾರಸಿಂಹ ತೀರ್ಥ

**ಬ್ರಹ್ಮ:-** ಪೂರ್ವಕಾಲದಲ್ಲಿ ಹಿರಣ್ಯಕಶಿಪು ಎಂಬ ಮಹಾಬಲಿಷ್ಠನಾದ ಅಷ್ಟೇ ದರ್ಪಿಷ್ಠನಾದ ರಾಕ್ಷಸೇಶ್ವರನು ಇದ್ದ. ಅವನು ತನ್ನ ತಪೋಬಲದಿಂದ ಬ್ರಹ್ಮನಿಂದ ಅನೇಕ ವರಗಳನ್ನು ಪಡೆದು ದೇವತೆಗಳಿಗೂ ದುರ್ಧರ್ಷನಾಗಿ ನಿಂತುಕೊಂಡಿದ್ದ. ಅವನ ಮಗನಾದ ಪ್ರಹ್ಲಾದನು ಶ್ರೀಹರಿಯ ಪರಮಭಕ್ತ. ಆದುದರಿಂದ ಹಿರಣ್ಯಕಶಿಪುನಿಗೆ ಪ್ರಹ್ಲಾದನ ಮೇಲೆ ಬಹಳ ದ್ವೇಷ. ಪ್ರಹ್ಲಾದನನ್ನು ಹರಿಭಕ್ತನಾದುದರಿಂದ ಕೊಂದುಹಾಕ ಬೇಕೆಂದು ಬಗೆಬಗೆಯಿಂದ ಪ್ರಯತ್ನ ಮಾಡಿದ. ಆದರೆ ಶ್ರೀಹರಿಯ ಅನುಗ್ರಹದಿಂದ ಆ ಪ್ರಹ್ಲಾದ ಎಲ್ಲ ವಿಧವಾದ ಮೃತ್ಯು ಭಯವನ್ನು ಮೆಟ್ಟಿನಿಂತಿದ್ದ. ಆ ಸಮಯದಲ್ಲಿ ಶ್ರೀಹರಿಯು ಅರ್ಧಸಿಂಹ, ಅರ್ಧಮನುಷ್ಯನ ಆಕಾರದಿಂದ ನರಸಿಂಹನಾಗಿ ಹಿರಣ್ಯ ಕಶಿಪುವಿನ ಆಸ್ಥಾನದ ಕಂಭದಿಂದ ತನ್ನ ಸರ್ವತ್ರ ವ್ಯಾಪ್ತಿಯನ್ನು ಪ್ರಕಟಿಸುತ್ತ ಪ್ರಾದುರ್ಭೂತನಾದ. ತನ್ನ ಉಗುರಿನಿಂದ ಹಿರಣ್ಯಕಶಿಪುವನ್ನು ಸಂಹರಿಸಿದ. ಅನಂತರ ತನ್ನ ಮೇಲೆ ಏರಿ ಬಂದ ವೀರಾಗ್ರಣಿಗಳಾದ ಹಿರಣ್ಯಕಶಿಪುವಿನ ಹಿಂಬಾಲಕರಾದ ದೈತ್ಯರನ್ನೆಲ್ಲ ವಧಿಸಿದ. ಸ್ವರ್ಗ, ಭೂಮಿ, ಪಾತಾಳ, ಪರ್ವತ, ಸಮುದ್ರ, ಗ್ರಾಮ, ಪಟ್ಟಣ ಎಲ್ಲ ಕಡೆಯೂ ನಾನಾರೂಪಗಳಿಂದ ನೆಲೆಸಿರುವ ರಾಕ್ಷಸರನ್ನೆಲ್ಲ ನರಸಿಂಹರೂಪಿಯಾದ ನಾರಾಯಣನು ಕೊಂದುಹಾಕಿದ. ಆಕಾಶ, ವಾಯುಲೋಕ, ದ್ಯುತಿರ್ಲೋಕ ಮುಂತಾದ ಸ್ಥಳಗಳಲ್ಲಿ ವ್ಯಾಪಿಸಿರುವ ರಾಕ್ಷಸರೆಲ್ಲರೂ ವಜ್ರಾಯುಧಕ್ಕಿಂತ ಹರಿತವಾದ ನರಸಿಂಹನ ಉಗುರುಗಳಿಂದ ಹತ ಪತಿತರಾಗಿ ಹೋದರು.

ಹೀಗೆ ಹರಿದ್ವೇಷಿಗಳಾದ ದೈತ್ಯಾಧಮರನ್ನೆಲ್ಲ ಇದ್ದಲ್ಲಿ ಹೋಗಿ ಮರ್ದಿಸಿ ಬಂದ ನರಸಿಂಹನು ಗೌತಮೀ ತೀರದ ಅಂಬರ್ಯ ಎಂಬ ಸ್ಥಳಕ್ಕೆ ಬಂದ. ಅಲ್ಲಿ ಒಬ್ಬ ದುರ್ಮಂದಾಂಧನಾದ ದುಷ್ಟ ದೈತ್ಯನಿದ್ದ. ಅವನ ಹೆಸರೂ ಕೂಡ ಹರಿ ಎಂದೇ ಇದ್ದಿತು.

ಅವನು ಧೈರ್ಯದಿಂದ ನರಸಿಂಹನನ್ನು ಎದುರಿಸಿದ. ಶೌರ್ಯದಿಂದ ಅವರೊಡನೆ ಹೋರಾಡಿದ. ಕೊನೆಗೆ ದೇವತೆಗಳಿಗೂ ಕೂಡ ಮೀರಿನಿಂತ ದುರ್ಜಯನಾದ ಆ ದಾನವನನ್ನು ನರಸಿಂಹದೇವನು ಗೌತಮೀ ನದಿಯ ಉತ್ತರತೀರದಲ್ಲಿ ಸಂಹಾರ ಮಾಡಿದ. ಅಂದಿನಿಂದ ಆ ತೀರ್ಥವು ನಾರಸಿಂಹ ತೀರ್ಥ ಎಂದು ಪ್ರಸಿದ್ಧವಾಯಿತು.

## ಮಗನನ್ನು ಮಾರಿದ. ಪಿಶಾಚನಾಗಿ ತೋರಿದ

**ಬ್ರಹ್ಮ:-** ಬಹಳ ಹಿಂದಿನ ಕಾಲದ ಘಟನೆ. ಸೂಯವ ಎಂಬ ಬ್ರಾಹ್ಮಣನಿಗೆ ದಟ್ಟ ದಾರಿದ್ರ್ಯ ಹುಟ್ಟಿದಂದಿನಿಂದ ಕಡುಬಡತನವು ಅವನನ್ನು ಬೆನ್ನಟ್ಟಿಬಂದಿತ್ತು. ದಯನೀಯವಾದ ದಾರಿದ್ರ್ಯದಿಂದ ತೊಳಲಿ ಬಳಲಿದ ಅವನಿಗೆ ಸಂಸಾರವನ್ನು ನಿರ್ವಹಿಸುವದು ಬಹಳೇ ಕಠಿಣ ಕಾರ್ಯವಾಗಿತ್ತು. ಅವನಿಗೆ ಒಬ್ಬನೇ ಒಬ್ಬ ಗಂಡುಮಗ. ಅಜೀಗರ್ತಿ ಎಂದು ಅವನ ಹೆಸರು. ಅಜೀಗರ್ತಿಗೆ ಬಡತನ ತಂದೆಯಿಂದಲೇ ಬಳುವಳಿಯಾಗಿ ಬಂದಿತ್ತು ತಂದೆಗಿಂತ ಮಗನಾದ ಅಜೀಗರ್ತಿಯ ಕುಟುಂಬ ಇನ್ನೂ ದೊಡ್ಡದು. ಅವನಿಗೆ ಮೂರು ಗಂಡು, ಶುನಃಪುಚ್ಛ, ಶುನಶ್ಶೇಪ ಮತ್ತು ಶುನೋಲಾಂಗೂಲ. ಈ ಮೂರೂ ಮಕ್ಕಳೂ ಸದಾಚಾರಸಂಪನ್ನರು. ಅಧ್ಯಾತ್ಮವಿದ್ಯೆಯಲ್ಲಿ ನಿಪುಣರು. ಆದರೆ ಯಾರಿಗೂ ಧನಸಂಪಾದನೆಯ ಕಲೆ ಗೊತ್ತಿಲ್ಲ. ಬೆಳೆದ ಸಂಸಾರದಲ್ಲಿ ಇಷ್ಟು ಜನ ಮಕ್ಕಳಿಗೂ ತಮಗೂ ಹೊಟ್ಟೆತುಂಬಿ ಕೊಳ್ಳುವದೇ ಅಜೀಗರ್ತನಿಗೆ ದೊಡ್ಡ ಸಮಸ್ಯೆಯಾಯಿತು. ಕೊನೆಗೆ ಅವನು ಯಜ್ಞದಲ್ಲಿ ಬಲಿಕೊಡಲಿಕ್ಕಾಗಿ ಹಣ ತೆಗೆದುಕೊಂಡು ತನ್ನ ಮಗನನ್ನು ಮಾರಲು ನಿರ್ಧರಿಸಿದ. ಹಿರಿಯ ಮಗನನ್ನು ಮಾರಲು ತಂದೆಯಾದ ತನಗೆ ಇಷ್ಟವಿರಲಿಲ್ಲ. ಕೊನೆಯ ಮಗನನ್ನು ಮಾರಲು ತಾಯಿಗೆ ಮನಸ್ಸು ಇರಲಿಲ್ಲ. ನಡುವಿನವನಾದ ಶುನಶ್ಶೇಫನನ್ನು ಹೇರಳ ಹಣ ತೆಗೆದುಕೊಂಡು ಸಿರಿವಂತನಾದ ಓರ್ವ ಕ್ಷತ್ರಿಯ ರಾಜಕುಮಾರನಿಗೆ ಮಾರಿದ. ಪ್ರಭೂತವಾದ ದ್ರವ್ಯವನ್ನು ಕೊಟ್ಟು ಆ ಕ್ಷತ್ರಿಯರಾಜ ಪುತ್ರ ಈ ಬ್ರಾಹ್ಮಣಕುಮಾರನನ್ನು ತನ್ನ ಯಜ್ಞಭೂಮಿಗೆ ಕರೆದೊಯ್ದ. ಅವನ ತಂದೆ ವರುಣನಿಗೆ ಪುತ್ರ ಬಲಿಯನ್ನು ಕೊಡುತ್ತೇನೆಂದು ಹರಕೆ ಹೊತ್ತಿದ್ದ. ಆ ಪುತ್ರನಿಗೆ ತಂದೆಯ ಹರಕೆ ಗೊತ್ತಾಗಿ ಅವನು ಅಡವಿಗೆ ಹೋಗಿ ಅಜೀಗರ್ತನಿಗೆ ಬೇಡಿದಷ್ಟು ದ್ರವ್ಯಕೊಟ್ಟು ತನ್ನ ಬದಲಾಗಿ ಬಲಿಕೊಡಲು ಶುನಶ್ಶೇಫನನ್ನು ಹಿಡಿದುಕೊಂಡು ಬಂದ. ಆದರೆ ಯಜ್ಞಮಂಟಪದಲ್ಲಿ ನೆರೆದ ಯಾವ ಋತ್ವಿಜರೂ ಬ್ರಾಹ್ಮಣಕುಮಾರನನ್ನು ಕಡಿಯಲು ಸಿದ್ಧರಾಗಲಿಲ್ಲ. ಯಜ್ಞದಲ್ಲಿ ಪಶುವನ್ನು ಕಡಿಯಲು 'ಶಮಿತ್ರ' ಎಂಬ ಋತ್ವಿಜನು ಇರುತ್ತಾನೆ. ಅವನು ಕುರಿ ಅಥವಾ ಬೇರೆ ಪಶುವನ್ನು ಕಡಿದು ಯಜ್ಞದಲ್ಲಿ ಆಹುತಿ ನೀಡುತ್ತಾನೆ. ಆದರೆ ಈಗ ಬ್ರಾಹ್ಮಣಕುಮಾರನನ್ನೇ ಹಿಡಿದು ತಂದು ಪಶುವನ್ನಾಗಿ ಮಾಡಿದ್ದ ರಾಜಪುತ್ರ ತನ್ನ ಬದಲು ಅವನನ್ನು ಕಡಿಯುವ ಪ್ರಸಂಗ ಬಂದದ್ದರಿಂದ ಶಮಿತ್ರನ ಆ ಕ್ರೂರಕೃತ್ಯವನ್ನು ಮಾಡಲು ಯಾವ ಋತ್ವಿಜರೂ ಒಪ್ಪಲಿಲ್ಲ. ಆಗ ರಾಜಕುಮಾರನು ಮತ್ತೆ ಶುನಶ್ಶೇಫನ ತಂದೆಯಾದ ಅಜೀಗರ್ತನ ಬಳಿಗೆ ಹೋದ. ಅವನಿಗೆ ಅಧಿಕಾಧಿಕವಾಗಿ ಬೇಡಿದಷ್ಟು ಹಣ ಸುರುವಿ ಅವನನ್ನು 'ಶಮಿತ್ರ'ನಾಗಲು ಒಪ್ಪಿಸಿ ಕರೆತಂದ. ಬ್ರಾಹ್ಮಣಾಧಮನಾದ ಅಜೀಗರ್ತನು ಧನಲೋಭದಿಂದ ತನ್ನ ಮಗನನ್ನೇ ಕಡಿಯಲು ಮುಂದಾದ. ಆಗ ಭಯಭ್ರಾಂತನಾದ ಶುನಶ್ಶೇಫನು ಮಹರ್ಷಿ ವಿಶ್ವಾಮಿತ್ರರಿಗೆ ಶರಣು ಹೋದ. ಆಗ ವಿಶ್ವಾಮಿತ್ರರು ಅವನ ಮೇಲಿನ ಕರುಣೆಯಿಂದ ಅವನಿಗೆ ಎರಡು ವೇದಮಂತ್ರಗಳನ್ನು ಉಪದೇಶಿಸಿದರು. ಮತ್ತು ಅವನನ್ನು ತಮ್ಮ ಮಗನೆಂದು ಪರಿಗಣಿಸಿ

ಚಿರಂಜೀವಿಯಾಗು ಎಂದು ಆಶೀರ್ವದಿಸಿದರು. ಶುನಶ್ಶೇಪನು ವಿಶ್ವಾಮಿತ್ರರಿಂದ ಉಪದಿಷ್ಟವಾದ ವೇದಮಂತ್ರ ಗಳಿಂದ ವರುಣನನ್ನು ಪ್ರಾರ್ಥಿಸಿದ. ಆ ವೇದೋಕ್ತಿ ಸ್ತೋತ್ರದಿಂದ ವರುಣದೇವನು ಸುಪ್ರೀತನಾದ. ಶುನಶ್ಶೇಪನನ್ನು ಬಲಿ ಬಂಧನದಿಂದ ಬಿಡುಗಡೆಮಾಡಿ ರಾಜನನ್ನು ರಾಜ ಕುಮಾರನನ್ನೂ ಅನುಗ್ರಹಿಸಿದ. ಶುನಶ್ಶೇಫನು ವಿಶ್ವಾಮಿತ್ರ ಪುತ್ರನೆಂದು ಜಗನ್ಮಾನ್ಯನಾದ.

ಆದರೆ ಹಣದ ಆಸೆಯಿಂದ ಮಗನ ತಲೆಯನ್ನು ಕಡಿಯಲು ಉದ್ಯುಕ್ತನಾದ ಅಜೀಗರ್ತ ಬ್ರಾಹ್ಮಣನಿಗೆ ಮಾತ್ರ ಘೋರನರಕ ಪ್ರಾಪ್ತವಾಯಿತು. ಅಲ್ಲಿ ಅನೇಕ ವಿಧ ಯಾತನೆಗಳನ್ನು ಅನುಭವಿಸಿ, ಅನೇಕ ದುರ್ಯೋನಿಗಳಲ್ಲಿ ಹುಟ್ಟಿ, ಕೊನೆಗೆ ಪಿಶಾಚಜನ್ಮ ಪಡೆದ. ಯಮದೂತರು ಆ ಪಿಶಾಚನನ್ನು ನೀರು-ನೆರಳುಗಳಿಲ್ಲದ ನಿರ್ಜನ ಕಾಡು ಗೂಡುಗಳಲ್ಲಿ ಅಲೆದಾಡಿಸುತ್ತಿದ್ದರು. ಬೇಸಿಗೆ ಕಾಲದ ಸುಡುಬಿಸಿಲಲ್ಲಿ ಅವನನ್ನು ಬೇಯಿಸುತ್ತಿದ್ದರು. ಮಗ, ಮಗಳು, ಭೂಮಿ, ಕುದುರೆ, ಹಸು ಮುಂತಾದವುಗಳ ಮಾರಾಟ ಮಾಡುವವರು ಘೋರನರಕ ಯಾತನೆ ಅನುಭವಿಸಬೇಕಾಗುವುದು. ತನ್ನ ಭಯಂಕರ ಪಾಪದ ಪರಿಣಾಮವಾಗಿ ಪಿಶಾಚಜನ್ಮವನ್ನು ಹೊಂದಿದ ಅಜೀಗರ್ತಿಯನ್ನು ಯಮದೂತರು ಬಗೆಬಗೆಯಿಂದ ಹಿಂಸಿಸುತ್ತಿದ್ದರು. ಅವರ ತಾಡನೆ-ಪೀಡನೆಗಳನ್ನು ತಾಳಲಾಗದೇ ಆ ಪಿಶಾಚವು ತಾನು ಹಿಂದೆ ಮಾಡಿದ ದುಷ್ಕರ್ಮವನ್ನು ನೆನೆಯುತ್ತ ಅಳುತ್ತಿತ್ತು.

ಒಂದು ದಿನ ಅಜೀಗರ್ತಿಯ ನಡುವಿನ ಮಗನಾದ ಶುನಶ್ಶೇಪನು ದಾರಿಯಲ್ಲಿ ಹೋಗುವಾಗ ಪಿಶಾಚದ ರೋದನಧ್ವನಿಯನ್ನು ಕೇಳಿದನು. ಅಡವಿಯ ಮಧ್ಯದಲ್ಲಿ ಆರ್ತ ಧ್ವನಿಯಿಂದ ಆಕ್ರಂದನವನ್ನು ಮಾಡುವ ಆ ಪಿಶಾಚಿಯ ದೀನ ವಿಲಾಪ ಕೇಳಿ ಶುನಶ್ಶೇಪನು ಅದನ್ನು ''ನೀನು ಯಾರು? ಎಂದು ಕೇಳಿದನು. ಆಗ ಆ ಪಿಶಾಚವು ದೊಡ್ಡ ದನಿಯಿಂದ ಅಳುತ್ತ ''ನಾನು ಶುನಶ್ಶೇಪನ ತಂದೆ. ಹಣದ ಆಶೆಯಿಂದ ನನ್ನ ಮಗನನ್ನು ಬಲಿ ಕೊಡಲಿಕ್ಕೂ ತಲೆ ಕಡಿಯಲಿಕ್ಕೂ ಸಿದ್ಧನಾದೆ. ಅದರಿಂದ ನನಗೆ ಬದುಕಿ ಇದ್ದಾಗಲೇ ಮಹಾರೋಗವು ಅಡರಿತು. ಸತ್ತ ಬಳಿಕ ನಾನಾ ನರಕಗಳಲ್ಲಿ ಅನಂತರ ಯಾತನೆಗಳನ್ನು ಅನುಭವಿಸಬೇಕಾಯಿತು. ಅಷ್ಟಕ್ಕೇ ತೀರಲಿಲ್ಲ ನನ್ನ ದುರವಸ್ಥೆ. ಮತ್ತೆ ಈಗ ಪಿಶಾಚ ಜನ್ಮವನ್ನು ಹೊಂದಿ ಕಡುಕಷ್ಟವನ್ನು ಅನುಭವಿಸುತ್ತಿದ್ದೇನೆ. ಯಮದೂತರು ನನಗೆ ಪ್ರತಿಕ್ಷಣವೂ ಚುಚ್ಚಿ, ತಿವಿದು, ಹೊಡೆದು, ಘೋರಯಾತನೆಗಳನ್ನು ನೀಡುತ್ತಲಿದ್ದಾರೆ. ಇದನ್ನು ಕೇಳಿದ ಶುನಶ್ಶೇಫನಿಗೆ ದುಃಖ ಉಕ್ಕಿ ಬಂದಿತು. ಅವನು ಆ ಪಿಶಾಚಕ್ಕೆ ಕೈ ಮುಗಿದು ''ಅಪ್ಪಾ! ನೀನು ನನ್ನ ತಂದೆ, ನೀನು ಮಾರಾಟ ಮಾಡಿದ ಮಗ ಶುನಶ್ಶೇಫನೇ ನಾನು. ನಿನ್ನ ಘೋರದುಃಖಕ್ಕೆಲ್ಲ ನಾನೇ ಕಾರಣ. ನಾನು ತಪಸ್ಸನ್ನು ಮಾಡಿ ನಿನ್ನನ್ನು ಈ ದುರ್ಯೋನಿ ಯಿಂದ ಬಿಡುಗಡೆ ಮಾಡುತ್ತೇನೆ ಮತ್ತು ಶ್ರೀಹರಿಯನ್ನು ಆರಾಧಿಸಿ ನಿನಗೆ ಸದ್ಗತಿ-ಸ್ವರ್ಗಗತಿ ದೊರಕುವಂತೆ ಮಾಡುತ್ತೇನೆ'' ಎಂದು ಆ ಪಿಶಾಚದ ಮುಂದೆ ಪ್ರತಿಜ್ಞೆ ಮಾಡಿದ ಅದನ್ನು ಕೇಳಿಯೇ ಆ ಪಿಶಾಚಕ್ಕೆ ಎಷ್ಟೋ ಸಂತೋಷವಾಯಿತು. ಅನಂತರ ಶುನಶ್ಶೇಫನು ತಾನು ಪ್ರತಿಜ್ಞೆ ಮಾಡಿದಂತೆ ತಂದೆಯನ್ನು ಉದ್ಧಾರ ಮಾಡಲು ಗೌತಮೀಕ್ಷೇತ್ರಕ್ಕೆ ಬಂದ. ಅಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ಹರಿಯನ್ನೂ, ಹರನನ್ನೂ ಆರಾಧಿಸಿದನು. ವಿಷ್ಣುಮಂತ್ರ, ಶಿವಮಂತ್ರಗಳನ್ನು ಹಗಲಿರುಳೂ ಜಪಿಸಿದ. ತಂದೆಯ ಉದ್ಧಾರಕ್ಕಾಗಿ ಉಗ್ರತಪಸ್ಸನ್ನೇ ಮಾಡಿದ. ನಂತರ ಹರಿಹರರ ಸುಪ್ರಸಾದವನ್ನು ಹೊಂದಿ ಅವರ ಆಜ್ಞೆಯ ಮೇರೆಗೆ ಪ್ರೇತರೂಪನಾದ ತನ್ನ ತಂದೆಗೆ ಗಂಗೆಯ ನೀರಿನಿಂದ ತರ್ಪಣವನ್ನು ಕೊಟ್ಟ.

ಗಂಗಾಜಲದ ಮಹಿಮೆ ಅತ್ಯದ್ಭುತವಾದುದು. ಗೌತಮೀ ತೀರದ ಗಂಗೆಯ ಸಲಿಲದಿಂದ ಶುನಶ್ಶೇಪನು ತರ್ಪಣವನ್ನು ಕೊಟ್ಟ ಕೂಡಲೇ ಅಜೀಗರ್ತಿಗೆ ಪಿಶಾಚ ಜನ್ಮದಿಂದ ಮುಕ್ತಿಯಾಯಿತು. ಅವನು ಆ ಕ್ಷಣದಲ್ಲಿಯೇ ಪೂತಾವದಾತನಾದನು. ಕೂಡಲೇ ದೇವಲೋಕದಿಂದ ವಿಮಾನ ಬಂದಿತು. ಅಜೀಗರ್ತಿ ಬ್ರಾಹ್ಮಣನಿಗೆ ದಿವ್ಯ ಶರೀರವು ಪ್ರಾಪ್ತವಾಯಿತು. ದೇವತೆಗಳು ಇಳಿದುಬಂದು ಅಜೀಗರ್ತಿಯನ್ನು ವಿಮಾನದಲ್ಲಿ ಒಯ್ದು ಕುಳ್ಳಿರಿಸಿದರು. ತನ್ನ ಮಗನು ಗಂಗಾಜಲದಿಂದ ಕೊಟ್ಟ ಪಿತೃತರ್ಪಣದಿಂದಲೂ ಗಂಗಾನದಿಯ ಪ್ರಭಾವದಿಂದಲೂ ಹರಿಹರರ ಅನುಗ್ರಹದಿಂದಲೂ ಬ್ರಾಹ್ಮಣಾಧಮನಾದ ಅಜೀಗರ್ತಿಯು ದಿವ್ಯದೇಹಿಯಾಗಿ ಸೂರ್ಯನಂತೆ ಹೊಳೆಯುವ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದ. ಅಂದಿನಿಂದ ಈ ತೀರ್ಥವು ಪೈಶಾಚತೀರ್ಥ ಎಂದು ಪ್ರಸಿದ್ಧವಾಗಿದೆ. ಇಲ್ಲಿ ಸ್ನಾನ, ಪಾನ, ದಾನಾದಿಗಳನ್ನು ಮಾಡುವದರಿಂದ ಪ್ರೇತತ್ವ ನಿವೃತ್ತಿ ಆಗುವದು. ಸರ್ವರೋಗಗಳ ನಿವಾರಣೆ ಆಗುವದು, ಸರ್ವಪಾಪ ಪರಿಹಾರ ಆಗುವದು.

## ನಿಮ್ನ ಭೇದ ತೀರ್ಥದ ಮಹಾತ್ಮ್ಯೆ

**ಬ್ರಹ್ಮ:-** ನಾರದ, ನೀನು ಪರಮ ಧಾರ್ಮಿಕನಾದ ಪುರೂರರಾಜನ ಹೆಸರನ್ನು ಕೇಳಿರುವೆಯಷ್ಟೆ. ಅವನಿಗೆ ಐಲ ಎಂದೂ ಹೆಸರಿದ್ದಿತು. ಸ್ವರ್ಗಲೋಕದ ಅತಿ ಸುಂದರಿ ಅಪ್ಸರೆಯಾದ ಊರ್ವಶಿಯನ್ನು ಮೋಹಿಸಿದ. ಚೆಲುವಿನ ಚಿತ್ತಾರದಂತಿರುವ ಅಂಥ ಚಾರುಗಾತ್ರಿಯರನ್ನು ಕಂಡಾಗ ಯಾರ ಚಿತ್ತವು ಕಾಮವಶವಾಗುವದಿಲ್ಲ! ದೇವಗಣಿಕೆಯಾದ ಊರ್ವಶಿಯು ಕೂಡ ಮಹಾರಾಜನ ರೂಪ ಸೌಂದರ್ಯಕ್ಕೆ ಮುಗ್ಧಳಾಗಿದ್ದಳು. ಅವಳು ಈ ಭೂಲೋಕದ ಭೂಪತಿಯನ್ನು ನೋಡಿ ಮೆಚ್ಚಿ ಒಲಿದು ತಾನಾಗಿ ಸ್ವರ್ಗದಿಂದ ಇಳಿದು ಅವನ ಬಳಿ ಬಂದಳು. ಆದರೆ ಅವಳು ಈ ಭೂಲೋಕದಲ್ಲಿ ಮಹಾರಾಜನ ಪ್ರೇಯಸಿಯಾಗಿ ಅವನ ಅಂತಃಪುರದಲ್ಲಿ ನೆಲೆನಿಲ್ಲಲು ಎರಡು ಕರಾರುಗಳನ್ನು ಹಾಕಿದಳು. "ತಾನು ಭೂಲೋಕದಲ್ಲಿದ್ದಾಗ ಈ ನರಲೋಕದ ಯಾವ ಆಹಾರವನ್ನೂ ಮುಟ್ಟುವದಿಲ್ಲ. ಆದರೆ ಗೋಘೃತವನ್ನು ಮಾತ್ರ ಸೇವಿಸುತ್ತೇನೆ. ನನಗೆ ಹಸುವಿನ ತುಪ್ಪವನ್ನು ಮಾತ್ರ ಆಹಾರವಾಗಿ ನಾನಿರುವವರೆಗೆ ನೀಡಬೇಕು. ಮತ್ತು ರಾಜನು ನನ್ನ ಕಣ್ಣಿಗೆ ಎಂದೂ ನಗ್ನಾವಸ್ಥೆಯಲ್ಲಿ ಕಾಣಸಬಾರದು. ಈ ಮಾತಿಗೆ ತಪ್ಪಿದರೆ ನಾನು ತಕ್ಷಣದಲ್ಲಿಯೇ ನೆಲಬಿಟ್ಟು ನಾಕವನ್ನು ಸೇರುತ್ತೇನೆ" ಅವಳ ಈ ಎರಡೂ ನಿಬಂಧನೆಗಳನ್ನು ಸಂತೋಷದಿಂದ ಒಪ್ಪಿದ ಮಹಾರಾಜ. ವಿಧಿಪೂರ್ವಕವಾಗಿ ಆರ್ಷಪದ್ಧತಿಯಿಂದ ವೇದೋಕ್ತ ಮಂತ್ರಗಳಿಂದ ಅವಳೊಡನೆ ಮದುವೆ ಯಾದ. ಮಧು ಚಂದ್ರವಿಹಾರಗೈದ. ಕಾಮಕೇಳೀಲೋಲನಾಗಿ ಜೀವನದ ರಸನಿಮಿಷ ಗಳನ್ನು ಅನುಭವಿಸುತ್ತ ಇದ್ದ. ಅತ್ತ ಸ್ವರ್ಗಲೋಕದಲ್ಲಿ ಊರ್ವಶಿಯಿಲ್ಲದೇ ದೇವತೆ ಗಳಿಗೆಲ್ಲ ಸ್ವರ್ಗವೇ ಶೂನ್ಯ ಎನಿಸಿತು. ಹೇಗಾದರೂ ಮಾಡಿ ಅವರು ಆ ದೇವಸುಂದರಿಯನ್ನು ಸ್ವರ್ಗಕ್ಕೆ ಮರಳಿ ಕರೆದುಕೊಂಡು ಬರಬೇಕೆಂದು ಒಂದು ಹಂಚಿಕೆ ಮಾಡಿದರು.

ಊರ್ವಶಿಯು ಭೂತಲದಲ್ಲಿ ಪರೂರವನ ಅಂತಃಪುರದಲ್ಲಿದ್ದಾಗ ಎರಡು ಮೇಕೆಯ ಮರಿಗಳನ್ನು ಪ್ರೀತಿಯಿಂದ ಸಾಕಿದ್ದಳು. ಒಂದು ದಿನ ಪುರೂರನು ಊರ್ವಶಿಯೊಡನೆ ರಾತ್ರಿಕಾಲದಲ್ಲಿ ಶಯನ ಮಾಡಿದಾಗ ದೇವಲೋಕದ ಗಂಧರ್ವರು ಬಂದು ಊರ್ವಶಿಯ ಮಕ್ಕಳಂತಿರುವ ಮೇಕೆಗಳನ್ನು ಕದ್ದು ವೈಯ್ದರು. ಒಯ್ಯುವಾಗ ಆ ಮೇಕೆಗಳು

ಕೆಟ್ಟಧ್ವನಿಯಿಂದ ಚೀರಿದವು. ಅವುಗಳ 'ಮ್ಯಾಮ್ಯಾ' ಸ್ವರವನ್ನು ಕೇಳಿ ಮಹಾರಾಜನು ಮಲಗಿದಲ್ಲಿಂದಲೇ ಎದ್ದು ಅವುಗಳನ್ನು ಬಿಡಿಸಿಕೊಂಡು ಬರಲು ಧಾವಿಸಿದನು. ಗಂಧರ್ವರು ಅವುಗಳನ್ನೂ ಗಗನ ಮಾರ್ಗದಿಂದ ಕದ್ದು ಒಯ್ಯುತ್ತಿದ್ದರು. ಅವುಗಳನ್ನು ಬಿಡಿಸಿ ತರಲು ಮಹಾರಾಜನು ಒಮ್ಮೆಲೇ ಗಗನಕ್ಕೆ ನೆಗೆದ. ಮಲಗಿದ ಹಾಗೇ ಎದ್ದು ಕಳ್ಳರನ್ನು ಬೆನ್ನಟ್ಟಿದ ಮಹಾರಾಜ ನಗ್ನಾವಸ್ಥೆಯಲ್ಲಿದ್ದ. ಆಗ ಗಂಧರ್ವರು ಪ್ರಕಾಶಮಾನವಾದ ಮಿಂಚಿನ ಗೊಂಚಲನ್ನೇ ಚಮಕಿಸಿದರು. ಆದ್ದರಿಂದ ಊರ್ವಶಿಗೆ ಮಹಾರಾಜನ ನಗ್ನ ರೂಪ ಗೋಚರವಾಯಿತು. 'ನಿಜರೂಪದಲ್ಲಿ (ನಗ್ನ) ಅವನು ಎಂದೂ ತನ್ನ ಕಣ್ಣಿಗೆ ಬೀಳಬಾರದೆಂದು' ಅವನ ಜೊತೆ ಕರಾರು ಮಾಡಿದ್ದಳು. ಈಗ ಗಂಧರ್ವರ ಹಂಚಿಕೆಯಿಂದ ಮಹಾರಾಜನು ಹುಟ್ಟಿದ ಮಹರ್ದಶೆಯಲ್ಲಿಯೆ ಅವಳ ಕಣ್ಣಿಗೆ ಕಂಡು ಬಂದದ್ದರಿಂದ ಪುರೂರವನ್ನು ಬಿಟ್ಟು ಸ್ವರ್ಗಕ್ಕೆ ತೆರಳಿದಳು. ಊರ್ವಶಿಯು ತನ್ನನ್ನು ಬಿಟ್ಟು ಹೊರಟು ಹೋದದ್ದರಿಂದ ಮಹಾರಾಜನಿಗೆ ಬಹಳ ದುಃಖವಾಯಿತು. ಊಟ, ನಿದ್ದೆ, ರಾಜ್ಯ ಶಾಸನ ಎಲ್ಲವನ್ನು ಅವನು ಬಿಟ್ಟುಬಿಟ್ಟ. ವಿರಹ ವೈಕ್ಲವ್ಯ ದಿಂದ ಸತತವೂ ಚಿಂತಾಕ್ರಾಂತನಾದ ಊರ್ವಶಿಯನ್ನೇ ಧ್ಯಾನಿಸತೊಡಗಿದ. ಪ್ರೇಯಸಿಯ ವಿರಹ ಕಾತರನಾದ ಮಹಾರಾಜನು ಜೀವನ್ಮರಣಾವಸ್ಥೆಯಲ್ಲಿ ತೊಳಲ ತೊಡಗಿದ. ಆಗ ಅವನ ಕುಲಗುರುಗಳಾದ ವಶಿಷ್ಠರು ಅವನ ಬಳಿಗೆ ಬಂದರು. ದುಃಖ ಸಂತಪ್ತನಾದ ಮಹಾರಾಜನಿಗೆ ಸಾಂತ್ವನ ಪರವಾದ ಮಾತುಗಳನ್ನು ಹೇಳಿದರು.

ಪುರೂರವ, ಆ ಊರ್ವಶಿಯ ಚಿಂತೆಯನ್ನು ಬಿಟ್ಟುಬಿಡು. ಅವಳು ನಿನ್ನ ಅಂತಃಪುರ ವನ್ನು ಪರಿತ್ಯಜಿಸಿ ಸ್ವರ್ಗಲೋಕಕ್ಕೆ ಹೊರಟು ಹೋಗಿದ್ದಾಳೆ. ಸ್ವರ್ಗಕ್ಕೆ ಹೋಗುವದೆಂದರೆ ಮರಣ ಹೊಂದಿದ್ದಾಳೆ ಎಂದೇ ಅರ್ಥ. ನಾರಿಯರ ಹೃದಯ ನಿನಗೆ ತಿಳಿದಿಲ್ಲ. ದುತರ್ಶಟ ಗಳಂತೆ ಮಹಿಳೆಯರ ಮನಸ್ಸು ಅತ್ಯಂತ ಚಂಚಲ. ವಂಚಕತನವು ಅವರ ಹುಟ್ಟುಗುಣ. ಅವರಲ್ಲಿ ಶೌರ್ಯವಿಲ್ಲದಿದ್ದರೂ ಶೌರ್ಯ ಹುಟ್ಟಿನಿಂದಲೇ ಬೆಳೆದು ಬಂದಿರುತ್ತದೆ. ಅಂತಹ ನಾರಿಯರಿಂದ ಮಾನವನು ಚಿರಂತನ ಸೌಖ್ಯವನ್ನು ಬಯಸಿದರೆ ಹೇಗೆ ಲಭ್ಯವಾದೀತು! ಇದನ್ನೆಲ್ಲ ವಿಚಾರಿಸಿ ನೀನು ಊರ್ವಶಿಯ ಹಂಬಲವನ್ನು ಬಿಟ್ಟುಬಿಡು. ಹರಿಹರನನ್ನು ಆರಾಧಿಸು, ಗೌತಮೀ ತೀರಕ್ಕೆ ಹೋಗಿ ಅಲ್ಲಿ ನಿಂತು ತಪಸ್ಸನ್ನು ಮಾಡಿ ದೇವತೆಗಳನ್ನು ಆರಾಧಿಸು. ಹೀಗೆ ವಶಿಷ್ಠರು ಪರಿಪರಿಯಿಂದ ಅವನಿಗೆ ತಿಳಿಹೇಳಿದರು. ಅವರ ಆದೇಶದಂತೆ ಪುರೂರನ ಮಹಾರಾಜನು ಗೌತಮೀತೀರಕ್ಕೆ ಬಂದು ಜಪತಪೋನುಷ್ಠಾನಗಳಲ್ಲಿ ನಿರತ ನಾದನು. ಅದರಿಂದ ಅವನ ಮನಸ್ಸಿಗೆ ಶಾಂತಿ ದೊರೆಯಿತು. ಸಮಾಧಾನ ದೊರೆಯಿತು. ಅಲ್ಲಿ ಅನೇಕ ಯಜ್ಞಗಳನ್ನು ಮಾಡಿದನು ಮತ್ತು ಋತ್ವಿಜರಿಗೆ ವಿಪುಲವಾಗಿ ದಾನ ಪ್ರಾಣಗಳನ್ನು ಕೊಟ್ಟನು. ಅವನು ಯಜ್ಞಮಾಡಿದ ಸ್ಥಳವು ಯಜ್ಞ ದ್ವೀಪವೆಂದು ಪ್ರಸಿದ್ಧವಾಯಿತು. ಪ್ರತಿಯೊಂದು ಹುಣ್ಣಿಮೆಯ ದಿನ ಊರ್ವಶಿಯು ಯಜ್ಞ ದ್ವೀಪಕ್ಕೆ ಬರುತ್ತಿದ್ದಳು. ಮಹಾರಾಜನೊಂದಿಗೆ ಒಂದು ರಾತ್ರಿ ಆನಂದದಿಂದ ಇರುತ್ತಿದ್ದಳು. ಆ ತೀರ್ಥಕ್ಕೆ ''ಫಲತೀರ್ಥ''ವೆಂದು ಹೆಸರು. ಅಲ್ಲಿ ಸ್ನಾನದಾನ ಮಾಡಿದವರಿಗೆ ವಿಶೇಷ ಪುಣ್ಯಫಲ ಉಂಟು. ಅದಕ್ಕೆ ಪುರೂರನ ತೀರ್ಥವೆಂತಲೂ ಹೆಸರು. ಅಲ್ಲದೇ ಅದು 'ನಿಮ್ನ ಭೇದ ತೀರ್ಥ' ಎಂದೂ ಕರೆಯಲ್ಪಡುವದು. ಪುರೂರವನು ಯಾವ ಕಾರ್ಯದಲ್ಲಿಯೂ ನ್ಯೂನತೆಯನ್ನು ಮಾಡುತ್ತಿರಲಿಲ್ಲ. ಆದುದರಿಂದ ಅದು ನಿಮ್ನ ಭೇದ ತೀರ್ಥ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಯಿತು.

## ನಂದೀತಟ ತೀರ್ಥ

**ಬ್ರಹ್ಮ:-** ನಾರದ, ನಂದೀತಟ ಎಂದು ಪ್ರಸಿದ್ಧವಾದ ತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳು. ನೀನು ಬ್ರಹ್ಮಪುತ್ರನಾದ ಅತ್ರಿ ಋಷಿಯ ಹೆಸರನ್ನು ಕೇಳಿರುವೆಯಷ್ಟೇ ಆ ಅತ್ರಿ ಹಾಗೂ ಅನುಸೂಯ ದೇವಿ ದಂಪತಿಗಳಲ್ಲಿ ಚಂದ್ರನು ಪುತ್ರನಾಗಿ ಜನಿಸಿದನು. ಅವನು ದೇವಗುರುವಾದ ಬೃಹಸ್ಪತಿ ಆಚಾರ್ಯರಲ್ಲಿ ಚತುರ್ವೇದಗಳನ್ನೂ, ಧನುರ್ವೇದ ವನ್ನು ಉಳಿದ ಎಲ್ಲಾ ಕಲಾಪಲಾಪಗಳನ್ನು ವಿಧ್ಯುಕ್ತವಾಗಿ ಅಧ್ಯಯನ ಮಾಡಿದನು. ಅಧ್ಯಾಯನ ಎಲ್ಲವೂ ಮುಗಿದ ಬಳಿಕ ಚಂದ್ರನು ಬೃಹಸ್ಪತಿಯನ್ನು ಕುರಿತು "ಗುರುಗಳೇ, ನಾನು ತಮಗೆ ಆಚಾರ್ಯ ಪೂಜೆಯನ್ನು ಮಾಡಬೇಕೆಂದು ನಿರ್ಧರಿಸಿರುವೆ. ನನ್ನ ಸೇವೆಯನ್ನು ತಾವು ದಯವಿಟ್ಟು ಸ್ವೀಕರಿಸಬೇಕು.

ಶಿಷ್ಯನಾದ ಚಂದ್ರನ ಮಾತನ್ನು ಕೇಳಿ "ಒಳಗೆ ನನ್ನ ಪತ್ನಿಯಾದ ತಾರೆ ಇರುತ್ತಾಳೆ. ಅವಳನ್ನು ಕೇಳು." ಎಂದು ಹೇಳಿದರು. ಆಗ ಚಂದ್ರನು ತಾರಾದೇವಿಯನ್ನು ವಿಚಾರಿಸಲು ಬೃಹಸ್ಪತಿಯ ಅಂತಃಪುರದಲ್ಲಿ ಪ್ರವೇಶಿಸಿದ.

ನೂರು ಅಪ್ಸರೆಗಿಂತಲೂ ಮಿಗಿಲಾದ ಸೌಂದರ್ಯ ಅವಳ ಶರೀರದಲ್ಲಿ ಸಹಸ್ರಾರದಂತೆ ಅರಳಿನಿಂತಿತ್ತು. ಅವಳ ಲೋಕೋತ್ತರವಾದ ಲಾವಣ್ಯವನ್ನು ಕಂಡು ಚಂದ್ರ ಮುಗ್ಧನಾದ. ಆಕಾಶದ ರತ್ನದೀಪದಂತಿದ್ದ ಚಂದ್ರನ ಸೌಂದರ್ಯವು ಕೂಡ ಅದ್ವಿತೀಯ ವಾಗಿದ್ದಿತು. ಅದರಿಂದ ತಾರೆಯು ಆಕರ್ಷಿತಳಾಗಿದ್ದಳು. ತನ್ನ ಮೇಲೆ ಮೋಹಗೊಂಡ ತಾರಾದೇವಿಯನ್ನು ಚಂದ್ರನು ಗುಟ್ಟಾಗಿ ತನ್ನ ಮನೆಗೆ ಕರೆದುಕೊಂಡು ಬಂದ. ತನ್ನ ಧರ್ಮಪತ್ನಿಯಾದ ರೋಹಿಣಿಯ ರೋಷರೊಚ್ಚುಗಳನ್ನು ಕಡೆಗಣಿಸಿ ಅನೇಕ ವರ್ಷಗಳ ಕಾಲ ವಿಹರಿಸಿದ ಆ ತಾರೆಯೊಡನೆ.

ಆಗ ಬೃಹಸ್ಪತ್ಯಾಚಾರ್ಯರು ಚಂದ್ರನಿಗೆ ತನ್ನ ಪತ್ನಿಯನ್ನು ಬಿಟ್ಟುಕೊಡಲು ಪರಿಪರಿಯಿಂದ ಹೇಳಿದರು, ದೇವತೆಗಳಿಂದ ಹೇಳಿಸಿದರು. ಆದರೆ ಚಂದ್ರ ಯಾರ ಮಾತನ್ನೂ ಕೇಳುವ ಪರಿಸ್ಥಿತಿಯಲ್ಲಿರಲಿಲ್ಲ. ಕಾಮಾಂಧನಾದ ಚಂದ್ರ, ಪ್ರೇಮಾಂಧಳಾದ ತಾರಾದೇವಿ ಇಬ್ಬರೂ ಯಾರ ಮಾತನ್ನು ಲೆಕ್ಕಿಸದೆ, ಯಾರಿಗೂ ಹೆದರದೆ ಸ್ವಚ್ಛಂದ ವಿಹಾರಗೈಯ್ಯುತ್ತಾ ಚಕ್ಕಂದದಿಂದ ಚಂದ್ರನ ಅಂತಃಪುರದಲ್ಲಿ ಇದ್ದುಬಿಟ್ಟಳು. ತಾರಾದೇವಿಯನ್ನು ಅವಳ ಪತಿಗೆ ಕೊಡಿಸಬೇಕು ಎಂದು ಅವಳನ್ನು ಗಂಡನ ಮನೆಗೆ ಕಳುಹಿಸಬೇಕು ಎಂದು ಸುರೇಶ್ವರರು ಮಾಡಿದ ಎಲ್ಲಾ ಪ್ರಯತ್ನಗಳು ವಿಫಲವಾದವು.

ಆಗ ಆಸುರ ಗುರುಗಳು ನಿರುಪಾಯರಾಗಿ ದೈತ್ಯಾಚಾರ್ಯರಾದ ಶುಕ್ರಾಚಾರ್ಯರ ಬಳಿಗೆ ಹೋಗಿ ತಮ್ಮ ದುರವಸ್ಥೆಯನ್ನು ಹೇಳಿದರು. ಹೇಗಾದರೂ ಮಾಡಿ ಚಂದ್ರನಿಗೆ ಬುದ್ಧಿ ಹೇಳಿ ಬೆದರಿಸಿಯಾದರೂ ನನ್ನ ಮಡದಿಯನ್ನು ಬಿಡುವಂತೆ ಮಾಡಿರಿ ಎಂದು ದೈನ್ಯದಿಂದ ಕೇಳಿಕೊಂಡರು.

ಅದನ್ನು ಕೇಳಿ ಶುಕ್ರಾಚಾರ್ಯರಿಗೆ ಬಹಳ ಕೆಡುಕೆನಿಸಿತು. ಚಂದ್ರನ ಮೇಲೆ ಕೋಪವೂ ಬಂದಿತು. ಆಗ ಅವರು ತಾರೆ ಚಂದ್ರರು ಇರುವ ಸ್ಥಳಕ್ಕೆ ಹೋಗಿ ಅವನಿಗೆ ಶಾಪಕೊಟ್ಟರು. "ಪಾಪಿಯೇ, ನೀನು ಕಾಮಾಂಧನು, ಮದಾಂಧನು ಆಗಿ ಗುರುಪತ್ನಿಯನ್ನು ಗಮನ ಮಾಡಿರುವೆ ಆದ್ದರಿಂದ ನಿನಗೆ ಕ್ಷಯರೋಗವು ಬರಲಿ" ಎಂದು ಕಠೋರವಾಗಿ ಶಪಿಸಿದರು.

ಆಗ ಚಂದ್ರನು ತಾರೆಯನ್ನು ಬಿಟ್ಟುಕೊಟ್ಟನು. ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋದ ಬೃಹಸ್ಪತ್ಯಾಚಾರ್ಯರು ಋಷಿಗಳನ್ನೂ, ದೇವತೆಗಳನ್ನೂ, ಕರೆದು ತನ್ನ ಪತ್ನಿಯು ಮಾಡಿದ ಪರಪುರುಷ ಸಂಪರ್ಕರೂಪ ಮಹಾಪಾಪಕ್ಕೆ ಪ್ರಾಯಶ್ಚಿತ್ತ ವೇನು ಎಂದು ಕೇಳಿದರು. ಆಗ ದೇವತೆಗಳು ಶ್ರುತಿಮತವನ್ನು ತಿಳಿದು "ಈ ತಾರಾದೇವಿಯು ತನ್ನ ಪತಿಯೊಡನೆ ಕೂಡಿ ಭಕ್ತಿಯಿಂದ ಗೌತಮೀತೀರದಲ್ಲಿ ಸ್ನಾನಮಾಡಲಿ. ಅದರಿಂದ ಅವಳಿಗೆ ವ್ಯಭಿಚಾರದೋಷ ದಿಂದ ಬಂದ ಪಾಪವು ಪರಿಹಾರ ವಾಗುವದು. ಶುದ್ಧಿ ಸಿದ್ಧಿಯೂ ಆಗುವದು" ಎಂದು ಹೇಳಿದರು. ದೇವತೆಗಳ ಸಲಹೆಯಂತೆ ತಾರಾಗೇವಿಯು ತನ್ನ ಪತಿ ಬೃಹಸ್ಪಾತ್ಯಾಚಾರ್ಯರ ಜೊತೆಗೆ ಗೌತಮೀ ನದಿಯಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿದಳು. ಅದರಿಂದ ಅವಳ ಘೋರಪಾತಕವು ಪರಿಹಾರವಾಗಿ ಅವಳು ಪರಿಶುದ್ಧಳಾದಳು. ಅದನ್ನು ಕಂಡು ಶುಕ್ರಾಚಾರ್ಯರಿಗೂ, ಬೃಹಸ್ಪತ್ಯಾಚಾರ್ಯರಿಗೂ ಬಹಳ ಆನಂದವಾಯಿತು. ಸಂತುಷ್ಟರಾದ ಗುರು ಬೃಹಾಸ್ಪತ್ಯಾಚಾರ್ಯರು ಆ ಗೌತಮೀ ನದಿಯನ್ನು ಕುರಿತು ಹೇಳಿದರು. 'ಗೌತಮಿನದಿಯೇ, ನೀನು ನಿಜವಾಗಿಯೂ ಲೋಕಪಾವನಿಯಾದ ಗಂಗೆಯೇ ಆಗಿರುವೆ. ನೀನು ನಮಗೆ ಯಾವಾಗಲೂ ಪೂಜ್ಯಳು. ಭಕ್ತರಿಗೆಲ್ಲಾ ಮುಕ್ತಿದಾತೆಯು ನಾನು ಹನ್ನೆರಡುವರ್ಷಕ್ಕೊಮ್ಮೆ ಸಿಂಹರಾಶಿಗೆ ಬಂದಾಗ ನಿನ್ನಲ್ಲಿ ಸ್ನಾನಮಾಡಿದವರಿಗೆ ಅತ್ಯಧಿಕ ವಾದ ಪುಣ್ಯವು ದೊರೆಯುವದು. ನಾನು ಸಿಂಹಸ್ತನಾದಾಗ ಮೂರು ಲೋಕದಲ್ಲಿರುವ ಎಲ್ಲಾ ತೀರ್ಥಗಳು ನಿನ್ನಲ್ಲಿ ಸ್ನಾನಮಾಡಲು ಬರುವವು. ಈ ವೃದ್ಧಗಂಗೆಯ ತೀರ್ಥದಲ್ಲಿ ಪರಮೇಶ್ವರನ ವಾಹನವಾದ ನಂದೀಶ್ವರನು ಆನಂದದಿಂದ ಸಂಚರಿಸುತ್ತಾನೆ. ಆದುದರಿಂದ ಇಂದು "ನಂದೀತಟ ತೀರ್ಥ"ವೆಂದು ಪ್ರಸಿದ್ಧವಾಗುತ್ತದೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತನಾಲ್ಕನೆಯ ಅಧ್ಯಾಯ ಮುಗಿದುದು*

—○—

## ಭಾವತೀರ್ಥದ ಮಹಾತ್ಮೆ

**ಅಧ್ಯಾಯ - ೩೫**

**ಬ್ರಹ್ಮ**:- ನಾರದಾ ಸೂರ್ಯವಂಶದಲ್ಲಿ ಪ್ರಾಚೀನಬರ್ಹಿ ಎಂಬ ರಾಜನು ಕ್ಷತ್ರಿಯ ಕುಲದಲ್ಲಿಯೇ ಸರ್ವಶ್ರೇಷ್ಠನಾಗಿದ್ದನು. ಅವನು ಧರ್ಮಾತ್ಮ, ನ್ಯಾಯಪಕ್ಷಪಾತಿ, ನೀರ ಮೇಲಿನ ತಾವರೆಯಂತೆ ಸಂಸಾರದಲ್ಲಿದ್ದರೂ ವಿರಕ್ತನಾಗಿದ್ದ. ಆದರೆ ಅವನಿಗೆ ಪುತ್ರಸಂತಾನವಿರಲಿಲ್ಲ. ಸಂತತಿಯ ಅಪೇಕ್ಷೆಯಿಂದ ಆ ಪ್ರಾಚೀನಬರ್ಹಿ ಮಹಾರಾಜನು ಯಜ್ಞವನ್ನು ಮಾಡಿದನು. ಆ ಯಜ್ಞದಿಂದ ಪ್ರಸನ್ನನಾದ ಪರಮೇಶ್ವರನು ನಿನಗೆ ಇಷ್ಟವಾದ ವರವನ್ನು ಬೇಡಿಕೋ ಎಂದು ಹೇಳಿದನು. ಅದಕ್ಕೆ ಪ್ರಾಚೀನಬರ್ಹಿಯು "ಪ್ರಭು ನನಗೆ ಓರ್ವ ಸತ್ಪುತ್ರನನ್ನು ಕರುಣಿಸು" ಎಂದು ಕೇಳಿಕೊಂಡ. ಪ್ರೀತನಾದ ಪಾರ್ವತಿಯ ಪತಿಯು ಅವನ ಪ್ರಾರ್ಥನೆಯನ್ನು ಮನ್ನಿಸಿದ. ಮತ್ತು ಅವನಿಗೆ ಹೇಳಿದ. "ರಾಜನೇ, ನೀನು ನನ್ನಹಣೆಯಲ್ಲಿರುವ ಮೂರನೇಕಣ್ಣನ್ನು ಲಕ್ಷವಿಟ್ಟು ನೋಡು." ಅವನ ಆದೇಶದಂತೆ ಪ್ರಾಚೀನಬರ್ಹಿಯು ಫಾಲಲೋಚನನ ಲಲಾಟದಲ್ಲಿರುವ ಮೂರನೇಯ ಕಣ್ಣನ್ನು ಎಮೆ ಮಿಳುಕಿಸದೇ ನೋಡಿದ. ಹಾಗೇ ಅವನು ನೋಡುತ್ತಿರು ವಾಗಲೇ ಆ ಪರಶಿವನ ಚಾಕ್ಷುಷ ತೇಜಸ್ಸಿನಿಂದ ಒಬ್ಬ ಮಗನು ಹುಟ್ಟಿದ. ಅವನಿಗೆ ಮಹಿಮ ಎಂದು ಹೆಸರಾಯಿತು. ಅವನು ಪರಮೇಶ್ವರನ ಮಹಾಮಹಿಮೆಯನ್ನು ಸ್ತೋತ್ರರೂಪ ದಿಂದ ಬಣ್ಣಿಸಿ ಕೊಂಡಾಡಿದ. ಇದೇ ಅತ್ಯಂತ ಪ್ರಾಚೀನವಾದ ಶಿವಮಹಿಮ ಸ್ತೋತ್ರ.

ಇಂಥ ಪುತ್ರನನ್ನು ಪಡೆದು ಪ್ರಾಚೀನಬರ್ಹಿಯು ಆ ಭಗವಂತನನ್ನು ಕುರಿತು ''ಭಗವಾನ್, ನಾನು ನಿಂತು ನಿನ್ನನ್ನು ಕುರಿತು ತಪಸ್ಸನ್ನು ಮಾಡಿ ಸತ್ಪುತ್ರನನ್ನು ಪಡೆದ ಈ ಸ್ಥಳವು ಜನರ ದುಃಖದಾರಿದ್ರ್ಯಗಳನ್ನು ನಿವಾರಿಸಿ ಸರ್ವಾಭೀಷ್ಟಗಳನ್ನು ಪೂರೈಸುವ ಪುಣ್ಯತೀರ್ಥವಾಗಲಿ ಎಂದು ಕೇಳಿದ. ಅವನ ಭಕ್ತಿಭಾವದಿಂದ ಸುಪ್ರಸನ್ನನಾದ ಪ್ರಭು ಪರಮೇಶ್ವರನು 'ತಥಾಸ್ತು' ಎಂದು ವರವನ್ನು ಕರುಣಿಸಿದನು. ಗೌತಮೀತೀರದಲ್ಲಿ ಭವನ ಅನುಗ್ರಹದಿಂದ ಪ್ರಾಚೀನಬರ್ಹಿ ರಾಜನಿಗೆ ಅವನ ಭಾವಾನುಗುಣವಾಗಿ ಪುತ್ರ ಸಂತಾನವಾದುದ್ದರಿಂದ ಅದು ಭಾವತೀರ್ಥ ಎಂದು ಪ್ರಸಿದ್ಧವಾಯಿತು.

## ರಾಮನ ಸೀತಾವಿರಹ, ಪರಿವಾರಕ್ಕೆ ದುಸ್ಸಹ

**ಬ್ರಹ್ಮ**:- ಇದು ರಾಮಾಯಣ ಕಾಲದ ಕತೆ. ದಶರಥ ಪುತ್ರನಾದ ಶ್ರೀರಾಮನು ತನ್ನ ಮಡದಿಯಾದ ಸೀತೆಯನ್ನು ರಾವಣನು ಕದ್ದು ಒಯ್ದಿದ್ದನ್ನು ಕೇಳಿ ದುಃಖಿತನಾದ. ಸುಗ್ರೀವ ಹನುಮಂತ ಮೊದಲಾದ ಕಪಿಗಳ ಸಹಾಯದಿಂದ ಸಮುದ್ರಕ್ಕೆ ಸೇತುವೆ ಕಟ್ಟಿದ. ರಾವಣನನ್ನು ಸಂಹರಿಸಿ, ಅಯೋಧ್ಯೆಗೆ ಬಂದು ಸೀತೆಯೊಡನೆ ಪಟ್ಟಾಭಿಷಿಕ್ತನಾದ. ಕೆಲವು ದಿನಗಳು ಕಳೆದ ನಂತರ ಒಬ್ಬ ದುಷ್ಟ ಅಗಸನು ಸೀತೆಯ ಮೇಲೆ ಅಪವಾದ ಹೊರಿಸಿದ. ಅದನ್ನು ಕೇಳಿ ಶ್ರೀರಾಮನು ಗರ್ಭಿಣಿಯಾದ ಸೀತೆಯನ್ನು ಕಾಡಿನಲ್ಲಿ ಬಿಡಲು ಲಕ್ಷ್ಮಣನಿಗೆ ಹೇಳಿದ. ರಾಜನಾದವನು ನಿಷ್ಕಲಂಕ ವ್ಯಕ್ತಿಯಾಗಿರಬೇಕು ಎಂದು ರಾಜನೀತಿಯ ಆದರ್ಶವನ್ನು ಆದರಿಸಿ ಶ್ರೀರಾಮನು ಸೀತೆಯನ್ನು ಪರಿತ್ಯಜಿಸಿದ. ಕಾಡಿನಲ್ಲಿ ಅನಾಥಳಾದ ಸೀತೆ ವಾಲ್ಮೀಕಿ ಮುನಿಯ ಆಶ್ರಮದಲ್ಲಿ ಲವ, ಕುಶ ಎಂಬ ರಾಮಪುತ್ರರಿಗೆ ಜನ್ಮವಿತ್ತಳು. ಕೆಲವು ದಿನಗಳ ಬಳಿಕ ಶ್ರೀರಾಮನು ಅಶ್ವಮೇಧಯಾಗವನ್ನು ಮಾಡಬೇಕೆಂದು ಲಕ್ಷ್ಮಣನೊಡನೆ ದೀಕ್ಷೆಯನ್ನು ಕೈಕೊಂಡ. ಆ ಸಮಯದಲ್ಲಿ ಲವ-ಕುಶ ಎಂಬ ಶ್ರೀರಾಮನ ಪ್ರತಿಭಾಶಾಲಿಗಳಾದ ಪುತ್ರರು ವಾಲ್ಮೀಕಿರಚಿತ ರಾಮಾಯಣವನ್ನು ಯಜ್ಞಮಂಟಪದಲ್ಲಿ ಸುಸ್ವರವಾಗಿ ಗಾನಮಾಡಿದರು.

ಅವರು ತನ್ನ ಮಕ್ಕಳೇ ಎಂದು ತಿಳಿದು ಶ್ರೀರಾಮನಿಗೆ ಪರಮ ಸಂತೋಷವಾಯಿತು. ಅವನು ಪ್ರೀತಿಯಿಂದ ಅವರಿಬ್ಬರನ್ನು ಬರಸೆಳೆದು ಬಿಗಿದಪ್ಪಿ ತೊಡೆಯ ಮೇಲೆ ಕುಳಿಸಿಕೊಂಡು ಮುತ್ತಿಕ್ಕಿ, ಸೀತೆಯ ವಿರಹದಿಂದ ದುಃಖಾಕ್ರಾಂತನಾದ.

ಅದೇ ವೇಳೆಯಲ್ಲಿ ಲಂಕೆಯಿಂದ ವಿಭೀಷಣನೇ ಮೊದಲಾದ ರಾಕ್ಷಸರೂ ಕಿಷ್ಕಿಂಧೆ ಯಿಂದ ಸುಗ್ರೀವ, ಹನುಮಂತ ಮೊದಲಾದ ಕಪಿವೀರರೂ ಆಗಮಿಸಿದರು. ಅವರೆಲ್ಲರಿಗೂ ಶ್ರೀರಾಮನ ಸೀತಾಪರಿತ್ಯಾಗದ ಸಮಾಚಾರ ಕೇಳಿ ಮತ್ತು ತನ್ಮೂಲಕವಾಗಿ ಶ್ರೀರಾಮನು ಪಡುತ್ತಿರುವ ಕಡುಕಷ್ಟವನ್ನು ನೋಡಿ ಬಹಳ ದುಃಖವಾಯಿತು. ಇದಕ್ಕೆ ಅವರು ಏನೂ ಮಾಡುವಂತೆ ಇರಲಿಲ್ಲ. ಸೀತೆಯು ಅಗ್ನಿಪ್ರವೇಶ ಮಾಡಿ ಶುದ್ಧಳೆಂದು ಸಿದ್ಧವಾಗಿದ್ದರೂ ಶ್ರೀರಾಮನು ''ರಾಜನು, ರಾಜನ ಪತ್ನಿಯು ನಿಷ್ಕಂಲಕ ಚಾರಿತ್ರವುಳ್ಳವರೂ ವಿವಾದಾತೀತ ವ್ಯಕ್ತಿಗಳೂ ಆಗಿ ಇರಬೇಕು'' ಎಂಬ ರಾಜಧರ್ಮದ ಆದರ್ಶವನ್ನು ಬಿಡಲು ಸಿದ್ಧನಿರಲಿಲ್ಲ. ಶ್ರೀರಾಮನಿಗೆ ಅವನ ಆದರ್ಶವನ್ನು ಪರಿತ್ಯಾಗ ಮಾಡು ಎಂದು ಹೇಳಲಿಕ್ಕೂ ಅವರಿಗೆ ಬಾಯಿಬಾರದು. ಸೀತಾದೇವಿಯ ವಿರಹ ವ್ಯಥೆಯಿಂದ ಮನಸ್ಸಿನಲ್ಲಿಯೇ ಕುದಿದು ಕ್ಲೇಶ ಪಡುವ ಶ್ರೀರಾಮನ ದೈನ್ಯ ದುರವ್ಯಸ್ಥೆಗಳನ್ನು ನೋಡಲಾಗದೆ ಈ ಉಭಯ ವಿಧವಾದ ಧರ್ಮ ಸಂಕಟದಲ್ಲಿ ಅವರು ಬಿದ್ದು ತೊಳಲಿ ಬಳಲಿದರು. ತಮ್ಮ ಮಾನಸಿಕವಾದ ಈ ದುಃಖ

ದುಮ್ಮಾನಗಳನ್ನು ಪರಿಹರಿಸಿಕೊಳ್ಳಲು ಏಕ ಮಾತ್ರ ಉಪಾಯ ಎಂದು ಗೌತಮೀತೀರಕ್ಕೆ ಬಂದರು. ಶ್ರೀರಾಮನು ಅವರನ್ನು ಹಿಂಬಾಲಿಸಿ ಅಂಗದ ಹನುಮಂತ, ವಿಭೀಷಣ, ಸುಗ್ರೀವ, ಜಾಂಬವಂತ, ತಾರ, ಲಕ್ಷ್ಮಣ ಮುಂತಾದ ತನ್ನ ಆತ್ಮೀಯ ಪರಿಜನರನ್ನು ಕೂಡಿಕೊಂಡು ಗೌತಮೀ ಕ್ಷೇತ್ರಕ್ಕೆ ಬಂದ. ಅಲ್ಲಿ ಎಲ್ಲರೂ ಲೋಕಮಾತೆಯಾದ ಸೀತಾದೇವಿಯನ್ನು ಸ್ಮರಿಸುತ್ತಾ ಗಂಗೆಯಲ್ಲಿ ಮಿಂದು ಗಂಗಾಧರನನ್ನು ಸೇವಿಸಿದರು. ಆದರಿಂದ ಶ್ರೀರಾಮನಿಗೂ, ಅವನ ಪರಿವಾರ ಭೂತರಾದ ಸಹಸ್ರಾರು ಜನರಿಗೂ ಸೀತಾವಿಯೋಗ ಜನ್ಯವಾದ ದುಃಖಶಮನವಾಗಿ ಮನಸ್ಸಿಗೆ ಶಾಂತಿ, ಸಂತಸ ಸಮಾಧಾನಗಳು ಪ್ರಾಪ್ತವಾದವು. ಈ ಕಾರಣದಿಂದ ಗೌತಮೀ ತೀರದ ಆ ತೀರ್ಥಕ್ಕೆ ಸಹಸ್ರ ಕುಂಡ ತೀರ್ಥ ಎಂದು ಹೆಸರಾಯಿತು.

## ಕಪಿಲಾಸಂಗಮ ತೀರ್ಥ

**ಬ್ರಹ್ಮ:-** ಗೌತಮೀ ನದಿಯ ದಕ್ಷಿಣ ತೀರದಲ್ಲಿ ಅಂಗೀರಸರು ಎಂಬ ಋಷಿಗಳು ಸೂರ್ಯನನ್ನು ಭಕ್ತಿಯಿಂದ ಪೂಜಿಸದರು. ಆಗ ಸೂರ್ಯದೇವನು ಪ್ರಸನ್ನನಾಗಿ ದಕ್ಷಿಣ ಭಾಗದ ಭೂಮಿಯನ್ನು ನೀಡಿದನು. ಆ ಭೂಮಿಯಲ್ಲಿ ಸೈಂಹಿಕೆ ಎಂಬ ರಕ್ಕಸಿಯು ಉತ್ಪನ್ನಳಾಗಿ ಅಲ್ಲಿದ್ದ ಜನರನ್ನೆಲ್ಲ ತಿನ್ನಲು ಪ್ರಾರಂಭಿಸಿದಳು. ಆಗ ಜನರೆಲ್ಲರು ಗಾಬರಿಯಾಗಿ ಅಂಗಿರಸ ಋಷಿಗಳ ಬಳಿಗೆ ಹೋಗಿ ಈ ಸಮಾಚಾರ ತಿಳಿಸಿದರು. ಆಗ ಅಂಗಿರಸರು, ಆದಿತ್ಯನ ಬಳಿಗೆ ಹೋಗಿ ''ಸೂರ್ಯ, ನೀನು ಕೊಟ್ಟ ಭೂಮಿಯನ್ನು ಹಿಂದಕ್ಕೆ ತೆಗೆದುಕೋ ಅಲ್ಲಿ ಭೂಮಿಯಿಂದ ಹುಟ್ಟಿದ ಸೈಂಹಿಕೆ ಎಂಬ ರಕ್ಕಸಿಯು ಅಲ್ಲಿದ್ದವರನ್ನೆಲ್ಲ ಮುಕ್ಕುತ್ತಿದ್ದಾಳೆ. ಆದುದರಿಂದ ಇದು ನಮಗೆ ಬೇಡ'' ಎಂದು ಹೇಳಿದರು.

ಅದಕ್ಕೆ ಆ ದಿವಾಕರನು ''ಪೂಜ್ಯರೆ, ದಾನ ಕೊಟ್ಟಿದ್ದನ್ನು ನಾನು ಎಂದೂ ತಿರುಗಿ ಕೊಳ್ಳಲಾರೆ. ಒಮ್ಮೆ ದಾನರೂಪವಾಗಿ ಕೊಟ್ಟಿದ್ದನ್ನು ಹಿಂತೆಗೆದುಕೊಂಡರೆ ಅರವತ್ತು ಸಾವಿರ ವರ್ಷ ಅಮೇಧ್ಯದಲ್ಲಿ ಕ್ರಿಮಿಯಾಗಿ ಬಳಲುತ್ತಾನೆ ಎಂದು ಶಾಸ್ತ್ರದಲ್ಲಿ ಹೇಳಿದೆ. ಆದುದರಿಂದ ನಾನು ಕೊಟ್ಟ ಭೂಮಿಯನ್ನು ಹಿಂದಕ್ಕೆ ತೆಗದುಕೊಳ್ಳಲಾರೆ. ಬೇಕಾದರೆ ಆ ಭೂಮಿಯನ್ನು ಕ್ರಯರೂಪವಾಗಿ ತೆಗೆದುಕೊಳ್ಳುತ್ತೇನೆ'' ಎಂದು ಹೇಳಿದನು. ಆಗ ಅಂಗೀರಸ ಮುನಿಗಳು, ಗಂಗಾ ನದಿಯ ದಕ್ಷಿಣ ತೀರದಲ್ಲಿ ಕಪಿಲ ಗೋರೂಪ ದಿಂದ ಇರುವ ಭೂಮಿಯನ್ನು ಸೂರ್ಯದೇವನಿಗೆ ಅವನಿಂದ ಕಪಿಲಾಧೇನುವನ್ನು ಕ್ರಯ ರೂಪವಾಗಿ ಪಡೆದು ಬಿಟ್ಟುಕೊಟ್ಟರು. ಆ ಭೂಮಿಯು ಸೂರ್ಯನ ವಶದಲ್ಲಿ ಹೋದ ಬಳಿಕ ಸೈಂಹಿಕೆಯು ತನ್ನ ದುಸ್ಸಾಹಸದಿಂದ ನಿವೃತ್ತಳಾದಳು.

ಜನರು ನಿರ್ಭಯವಾಗಿ ಅಲ್ಲಿ ವಾಸಿಸಿದರು. ಅಲ್ಲಿ ಭಕ್ತರಿಗೆಲ್ಲ ಭುಕ್ತಿ ಮುಕ್ತಿ ಕೊಡುವ ಸಾಕ್ಷಾತ್ ವಿಷ್ಣುವು ಮೂರ್ತಿವಂತನಾಗಿ ನೆಲೆನಿಂತಿದ್ದಾನೆ. ಮುನಿಗಳು ಕ್ರಯ ರೂಪವಾಗಿ ಕಪಿಲಾಗೋವನ್ನು ಕೊಟ್ಟದ್ದರಿಂದ ಆ ಸ್ಥಳವು ಕಪಿಲಾಸಂಗಮ ತೀರ್ಥ ಎಂದು ಪ್ರಸಿದ್ಧವಾಯಿತು. ಕಪಿಲಾ ನದಿಯು ಇಲ್ಲಿ ಗೌತಮೀ ನದಿಯನ್ನು ಸೇರುವದರಿಂದ ಕಪಿಲಾಸಂಗಮ ತೀರ್ಥ ಎಂಬ ಅದರ ಹೆಸರು ಸಾರ್ಥಕವಾಗಿದೆ.

## ಶಂಖತೀರ್ಥ ವರ್ಣನ

**ಬ್ರಹ್ಮ:-** ಕೃತಯುಗದ ಪ್ರಾರಂಭದಲ್ಲಿ ಬ್ರಹ್ಮನಾದ ನಾನು ಸಾಮವೇದವನ್ನು ಗಾನ ಮಾಡುತ್ತಾ ಇದ್ದೆ. ಆಗ ಅನೇಕ ರಾಕ್ಷಸರು ನಾನಾ ಆಯುಧಗಳನ್ನು ಧರಿಸಿ ನನ್ನನ್ನೇ ನುಂಗಲು ಬಂದರು. ಆಗ ನಾನು ನಾರಾಯಣನಿಗೆ ಶರಣು ಹೋದೆ.

ಇಂಥ ಪುತ್ರನನ್ನು ಪಡೆದು ಪ್ರಾಚೀನಬರ್ಹಿಯು ಆ ಭಗವಂತನನ್ನು ಕುರಿತು "ಭಗವಾನ್, ನಾನು ನಿಂತು ನಿನ್ನನ್ನು ಕುರಿತು ತಪಸ್ಸನ್ನು ಮಾಡಿ ಸತ್ಪುತ್ರನನ್ನು ಪಡೆದ ಈ ಸ್ಥಳವು ಜನರ ದುಃಖದಾರಿದ್ರ್ಯಗಳನ್ನು ನಿವಾರಿಸಿ ಸರ್ವಾಭೀಷ್ಟಗಳನ್ನು ಪೂರೈಸುವ ಪುಣ್ಯತೀರ್ಥವಾಗಲಿ ಎಂದು ಕೇಳಿದ. ಅವನ ಭಕ್ತಿಭಾವದಿಂದ ಸುಪ್ರಸನ್ನನಾದ ಪ್ರಭು ಪರಮೇಶ್ವರನು 'ತಥಾಸ್ತು' ಎಂದು ವರವನ್ನು ಕರುಣಿಸಿದನು. ಗೌತಮೀತೀರದಲ್ಲಿ ಭವನ ಅನುಗ್ರಹದಿಂದ ಪ್ರಾಚೀನಬರ್ಹಿ ರಾಜನಿಗೆ ಅವನ ಭಾವಾನುಗುಣವಾಗಿ ಪುತ್ರ ಸಂತಾನವಾದುದ್ದರಿಂದ ಅದು ಭಾವತೀರ್ಥ ಎಂದು ಪ್ರಸಿದ್ಧವಾಯಿತು.

## ರಾಮನ ಸೀತಾವಿರಹ, ಪರಿವಾರಕ್ಕೆ ದುಸ್ಸಹ

ಬ್ರಹ್ಮ:- ಇದು ರಾಮಾಯಣ ಕಾಲದ ಕತೆ. ದಶರಥ ಪುತ್ರನಾದ ಶ್ರೀರಾಮನು ತನ್ನ ಮಡದಿಯಾದ ಸೀತೆಯನ್ನು ರಾವಣನು ಕದ್ದು ಒಯ್ದಿದ್ದನ್ನು ಕೇಳಿ ದುಃಖಿತನಾದ. ಸುಗ್ರೀವ ಹನುಮಂತ ಮೊದಲಾದ ಕಪಿಗಳ ಸಹಾಯದಿಂದ ಸಮುದ್ರಕ್ಕೆ ಸೇತುವೆ ಕಟ್ಟಿದ. ರಾವಣನನ್ನು ಸಂಹರಿಸಿ, ಅಯೋಧ್ಯೆಗೆ ಬಂದು ಸೀತೆಯೊಡನೆ ಪಟ್ಟಾಭಿಷಿಕ್ತನಾದ. ಕೆಲವು ದಿನಗಳು ಕಳೆದ ನಂತರ ಒಬ್ಬ ದುಷ್ಟ ಅಗಸನು ಸೀತೆಯ ಮೇಲೆ ಅಪವಾದ ಹೊರಿಸಿದ. ಅದನ್ನು ಕೇಳಿ ಶ್ರೀರಾಮನು ಗರ್ಭಿಣಿಯಾದ ಸೀತೆಯನ್ನು ಕಾಡಿನಲ್ಲಿ ಬಿಡಲು ಲಕ್ಷ್ಮಣನಿಗೆ ಹೇಳಿದ. ರಾಜನಾದವನು ನಿಷ್ಕಲಂಕ ವ್ಯಕ್ತಿಯಾಗಿರಬೇಕು ಎಂದು ರಾಜನೀತಿಯ ಆದರ್ಶವನ್ನು ಆದರಿಸಿ ಶ್ರೀರಾಮನು ಸೀತೆಯನ್ನು ಪರಿತ್ಯಜಿಸಿದ. ಕಾಡಿನಲ್ಲಿ ಅನಾಥಳಾದ ಸೀತೆ ವಾಲ್ಮೀಕಿ ಮುನಿಯ ಆಶ್ರಮದಲ್ಲಿ ಲವ, ಕುಶ ಎಂಬ ರಾಮಪುತ್ರರಿಗೆ ಜನ್ಮವಿತ್ತಳು. ಕೆಲವು ದಿನಗಳ ಬಳಿಕ ಶ್ರೀರಾಮನು ಅಶ್ವಮೇಧಯಾಗವನ್ನು ಮಾಡಬೇಕೆಂದು ಲಕ್ಷ್ಮಣನೊಡನೆ ದೀಕ್ಷೆಯನ್ನು ಕೈಕೊಂಡ. ಆ ಸಮಯದಲ್ಲಿ ಲವ-ಕುಶ ಎಂಬ ಶ್ರೀರಾಮನ ಪ್ರತಿಭಾಶಾಲಿಗಳಾದ ಪುತ್ರರು ವಾಲ್ಮೀಕಿರಚಿತ ರಾಮಾಯಣವನ್ನು ಯಜ್ಞಮಂಟಪದಲ್ಲಿ ಸುಸ್ವರವಾಗಿ ಗಾನಮಾಡಿದರು.

ಅವರು ತನ್ನ ಮಕ್ಕಳೇ ಎಂದು ತಿಳಿದು ಶ್ರೀರಾಮನಿಗೆ ಪರಮ ಸಂತೋಷವಾಯಿತು. ಅವನು ಪ್ರೀತಿಯಿಂದ ಅವರಿಬ್ಬರನ್ನು ಬರಸೆಳೆದು ಬಿಗಿದಪ್ಪಿ ತೊಡೆಯ ಮೇಲೆ ಕುಳಿಸಿಕೊಂಡು ಮುತ್ತಿಕ್ಕಿ, ಸೀತೆಯ ವಿರಹದಿಂದ ದುಃಖಾಕ್ರಾಂತನಾದ.

ಅದೇ ವೇಳೆಯಲ್ಲಿ ಲಂಕೆಯಿಂದ ವಿಭೀಷಣನೇ ಮೊದಲಾದ ರಾಕ್ಷಸರೂ ಕಿಷ್ಕಿಂಧೆಯಿಂದ ಸುಗ್ರೀವ, ಹನುಮಂತ ಮೊದಲಾದ ಕಪಿವೀರರೂ ಆಗಮಿಸಿದರು. ಅವರೆಲ್ಲರಿಗೂ ಶ್ರೀರಾಮನ ಸೀತಾಪರಿತ್ಯಾಗದ ಸಮಾಚಾರ ಕೇಳಿ ಮತ್ತು ತನ್ಮೂಲಕವಾಗಿ ಶ್ರೀರಾಮನು ಪಡುತ್ತಿರುವ ಕಡುಕಷ್ಟವನ್ನು ನೋಡಿ ಬಹಳ ದುಃಖವಾಯಿತು. ಇದಕ್ಕೆ ಅವರು ಏನೂ ಮಾಡುವಂತೆ ಇರಲಿಲ್ಲ. ಸೀತೆಯು ಅಗ್ನಿಪ್ರವೇಶ ಮಾಡಿ ಶುದ್ಧಳೆಂದು ಸಿದ್ಧವಾಗಿದ್ದರೂ ಶ್ರೀರಾಮನು "ರಾಜನು, ರಾಜನ ಪತ್ನಿಯು ನಿಷ್ಕಲಂಕ ಚಾರಿತ್ರವುಳ್ಳವರೂ ವಿವಾದಾತೀತ ವ್ಯಕ್ತಿಗಳೂ ಆಗಿ ಇರಬೇಕು" ಎಂಬ ರಾಜಧರ್ಮದ ಆದರ್ಶವನ್ನು ಬಿಡಲು ಸಿದ್ಧನಿರಲಿಲ್ಲ. ಶ್ರೀರಾಮನಿಗೆ ಅವನ ಆದರ್ಶವನ್ನು ಪರಿತ್ಯಾಗ ಮಾಡು ಎಂದು ಹೇಳಲಿಕ್ಕೂ ಅವರಿಗೆ ಬಾಯಿಬಾರದು. ಸೀತಾದೇವಿಯ ವಿರಹ ವ್ಯಥೆಯಿಂದ ಮನಸ್ಸಿನಲ್ಲಿಯೇ ಕುದಿದು ಕ್ಲೇಶ ಪಡುವ ಶ್ರೀರಾಮನ ದೈನ್ಯ ದುರವಸ್ಥೆಗಳನ್ನು ನೋಡಲಾಗದೆ ಈ ಉಭಯ ವಿಧವಾದ ಧರ್ಮ ಸಂಕಟದಲ್ಲಿ ಅವರು ಬಿದ್ದು ತೊಳಲಿ ಬಳಲಿದರು. ತಮ್ಮ ಮಾನಸಿಕವಾದ ಈ ದುಃಖ

ದುಮ್ಮಾನಗಳನ್ನು ಪರಿಹರಿಸಿಕೊಳ್ಳಲು ಏಕ ಮಾತ್ರ ಉಪಾಯ ಎಂದು ಗೌತಮೀತೀರಕ್ಕೆ ಬಂದರು. ಶ್ರೀರಾಮನು ಅವರನ್ನು ಹಿಂಬಾಲಿಸಿ ಅಂಗದ ಹನುಮಂತ, ವಿಭೀಷಣ, ಸುಗ್ರೀವ, ಜಾಂಬವಂತ, ತಾರ, ಲಕ್ಷ್ಮಣ ಮುಂತಾದ ತನ್ನ ಆತ್ಮೀಯ ಪರಿಜನರನ್ನು ಕೂಡಿಕೊಂಡು ಗೌತಮೀ ಕ್ಷೇತ್ರಕ್ಕೆ ಬಂದ. ಅಲ್ಲಿ ಎಲ್ಲರೂ ಲೋಕಮಾತೆಯಾದ ಸೀತಾದೇವಿಯನ್ನು ಸ್ಮರಿಸುತ್ತಾ ಗಂಗೆಯಲ್ಲಿ ಮಿಂದು ಗಂಗಾಧರನನ್ನು ಸೇವಿಸಿದರು. ಅದರಿಂದ ಶ್ರೀರಾಮನಿಗೂ, ಅವನ ಪರಿವಾರ ಭೂತರಾದ ಸಹಸ್ರಾರು ಜನರಿಗೂ ಸೀತಾವಿಯೋಗ ಜನ್ಯವಾದ ದುಃಖಶಮನವಾಗಿ ಮನಸ್ಸಿಗೆ ಶಾಂತಿ, ಸಂತಸ ಸಮಾಧಾನಗಳು ಪ್ರಾಪ್ತವಾದವು. ಈ ಕಾರಣದಿಂದ ಗೌತಮೀ ತೀರದ ಆ ತೀರ್ಥಕ್ಕೆ ಸಹಸ್ರ ಕುಂಡ ತೀರ್ಥ ಎಂದು ಹೆಸರಾಯಿತು.

## ಕಪಿಲಾಸಂಗಮ ತೀರ್ಥ

**ಬ್ರಹ್ಮ:-** ಗೌತಮೀ ನದಿಯ ದಕ್ಷಿಣ ತೀರದಲ್ಲಿ ಅಂಗೀರಸರು ಎಂಬ ಋಷಿಗಳು ಸೂರ್ಯನನ್ನು ಭಕ್ತಿಯಿಂದ ಪೂಜಿಸದರು. ಆಗ ಸೂರ್ಯದೇವನು ಪ್ರಸನ್ನನಾಗಿ ದಕ್ಷಿಣ ಭಾಗದ ಭೂಮಿಯನ್ನು ನೀಡಿದನು. ಆ ಭೂಮಿಯಲ್ಲಿ ಸೈಂಹಿಕೆ ಎಂಬ ರಕ್ಕಸಿಯು ಉತ್ಪನ್ನಳಾಗಿ ಅಲ್ಲಿದ್ದ ಜನರನ್ನೆಲ್ಲ ತಿನ್ನಲು ಪ್ರಾರಂಭಿಸಿದಳು. ಆಗ ಜನರೆಲ್ಲರು ಗಾಬರಿಯಾಗಿ ಅಂಗಿರಸ ಋಷಿಗಳ ಬಳಿಗೆ ಹೋಗಿ ಈ ಸಮಾಚಾರ ತಿಳಿಸಿದರು. ಆಗ ಅಂಗಿರಸರು, ಆದಿತ್ಯನ ಬಳಿಗೆ ಹೋಗಿ "ಸೂರ್ಯ, ನೀನು ಕೊಟ್ಟ ಭೂಮಿಯನ್ನು ಹಿಂದಕ್ಕೆ ತೆಗೆದುಕೋ ಅಲ್ಲಿ ಭೂಮಿಯಿಂದ ಹುಟ್ಟಿದ ಸೈಂಹಿಕೆ ಎಂಬ ರಕ್ಕಸಿಯು ಅಲ್ಲಿದ್ದವರನ್ನೆಲ್ಲ ಮುಕ್ಕುತ್ತಿದ್ದಾಳೆ. ಆದುದರಿಂದ ಇದು ನಮಗೆ ಬೇಡ" ಎಂದು ಹೇಳಿದರು.

ಅದಕ್ಕೆ ಆ ದಿವಾಕರನು "ಪೂಜ್ಯರೆ, ದಾನ ಕೊಟ್ಟಿದ್ದನ್ನು ನಾನು ಎಂದೂ ತಿರುಗಿ ಕೊಳ್ಳಲಾರೆ. ಒಮ್ಮೆ ದಾನರೂಪವಾಗಿ ಕೊಟ್ಟಿದ್ದನ್ನು ಹಿಂತೆಗೆದುಕೊಂಡರೆ ಅರವತ್ತು ಸಾವಿರ ವರ್ಷ ಅಮೇಧ್ಯದಲ್ಲಿ ಕ್ರಿಮಿಯಾಗಿ ಬಳಲುತ್ತಾನೆ ಎಂದು ಶಾಸ್ತ್ರದಲ್ಲಿ ಹೇಳಿದೆ. ಆದುದರಿಂದ ನಾನು ಕೊಟ್ಟ ಭೂಮಿಯನ್ನು ಹಿಂದಕ್ಕೆ ತೆಗದುಕೊಳ್ಳಲಾರೆ. ಬೇಕಾದರೆ ಆ ಭೂಮಿಯನ್ನು ಕ್ರಯರೂಪವಾಗಿ ತೆಗೆದುಕೊಳ್ಳುತ್ತೇನೆ" ಎಂದು ಹೇಳಿದನು. ಆಗ ಅಂಗೀರಸ ಮುನಿಗಳು, ಗಂಗಾ ನದಿಯ ದಕ್ಷಿಣ ತೀರದಲ್ಲಿ ಕಪಿಲ ಗೋರೂಪ ದಿಂದ ಇರುವ ಭೂಮಿಯನ್ನು ಸೂರ್ಯದೇವನಿಗೆ ಅವನಿಂದ ಕಪಿಲಾಧೇನುವನ್ನು ಕ್ರಯ ರೂಪವಾಗಿ ಪಡೆದು ಬಿಟ್ಟುಕೊಟ್ಟರು. ಆ ಭೂಮಿಯು ಸೂರ್ಯನ ವಶದಲ್ಲಿ ಹೋದ ಬಳಿಕ ಸೈಂಹಿಕೆಯು ತನ್ನ ದುಸ್ಸಾಹಸದಿಂದ ನಿವೃತ್ತಳಾದಳು.

ಜನರು ನಿರ್ಭಯವಾಗಿ ಅಲ್ಲಿ ವಾಸಿಸಿದರು. ಅಲ್ಲಿ ಭಕ್ತರಿಗೆಲ್ಲ ಭುಕ್ತಿ ಮುಕ್ತಿ ಕೊಡುವ ಸಾಕ್ಷಾತ್ ವಿಷ್ಣುವು ಮೂರ್ತಿವಂತನಾಗಿ ನೆಲೆನಿಂತಿದ್ದಾನೆ. ಮುನಿಗಳು ಕ್ರಯ ರೂಪವಾಗಿ ಕಪಿಲಾಗೋವನ್ನು ಕೊಟ್ಟದ್ದರಿಂದ ಆ ಸ್ಥಳವು ಕಪಿಲಾಸಂಗಮ ತೀರ್ಥ ಎಂದು ಪ್ರಸಿದ್ಧವಾಯಿತು. ಕಪಿಲಾ ನದಿಯು ಇಲ್ಲಿ ಗೌತಮೀ ನದಿಯನ್ನು ಸೇರುವದರಿಂದ ಕಪಿಲಾಸಂಗಮ ತೀರ್ಥ ಎಂಬ ಅದರ ಹೆಸರು ಸಾರ್ಥಕವಾಗಿದೆ.

## ಶಂಖತೀರ್ಥ ವರ್ಣನ

**ಬ್ರಹ್ಮ:-** ಕೃತಯುಗದ ಪ್ರಾರಂಭದಲ್ಲಿ ಬ್ರಹ್ಮನಾದ ನಾನು ಸಾಮವೇದವನ್ನು ಗಾನ ಮಾಡುತ್ತಾ ಇದ್ದೆ. ಆಗ ಅನೇಕ ರಾಕ್ಷಸರು ನಾನಾ ಆಯುಧಗಳನ್ನು ಧರಿಸಿ ನನ್ನನ್ನೇ ನುಂಗಲು ಬಂದರು. ಆಗ ನಾನು ನಾರಾಯಣನಿಗೆ ಶರಣು ಹೋದೆ.

ಆಗ ಶ್ರೀಹರಿಯು ನನ್ನ ಮೊರೆಯನ್ನು ಕೇಳಿ ತನ್ನ ಕರಕಮಲದಲ್ಲಿ ಸುದರ್ಶನ ಚಕ್ರವನ್ನು ಹಿಡಿದು ದುರುಳ ದಾನವರನ್ನೆಲ್ಲ ಕಡಿದು ಬಗೆದ. ಅನಂತರ ಆ ದೈತ್ಯ ಸಂಹಾರ ಮಾಡಿ ಸಂತುಷ್ಟನಾದ ಭಗವಂತನು ತನ್ನ ದಿಗ್ವಿಜಯ ಸೂಚನೆಗಾಗಿ ಶಂಖವನ್ನು ಊದಿದ. ಆ ಶಂಖಧ್ವನಿಯನ್ನು ಕೇಳಿಯೇ ಅಳಿದುಳಿದ ದೈತ್ಯ ದಾನವರೆಲ್ಲರೂ ಸತ್ತು ಹೋದರು. ಆದುದರಿಂದ ಅದು ಶಂಖತೀರ್ಥ ಎಂದು ಪ್ರಸಿದ್ಧವಾಯಿತು. ಈ ಶಂಖತೀರ್ಥದ ಸ್ಮರಣೆಯಿಂದ ಮಾನವರ ಕಷ್ಟಗಳು ಪರಿಹಾರವಾಗುವವು. ಇಷ್ಟಾರ್ಥ ಲಾಭವಾಗುವದು. ಇಲ್ಲಿ ಸ್ನಾನ ಮಾಡಿದರೆ ಎಲ್ಲ ಪಾಪಪರಿಹಾರವಾಗುವುದು.

## ಕಿಷ್ಕಿಂಧಾ ತೀರ್ಥ

**ಬ್ರಹ್ಮ:-** ನಾರದಾ, ಹಿಂದೆ ಕೌಸಲ್ಯಾ ದಶರಥ ಪುತ್ರಶ್ರೇಷ್ಠನಾದ ಶ್ರೀರಾಮನು ಲೋಕ ಭಯಂಕರನಾದ ರಾವಣನನ್ನು ಕೊಂದನಷ್ಟೆ! ಆ ರಾವಣನ ಮಾರಣರೂಪ ಮಹಾಕಾರ್ಯವು ಶ್ರೀರಾಮನಿಗೆ ಕಿಷ್ಕಿಂಧಾ ವಾಸಿಗಳಾದ ಕಪಿವೀರರ ಸಹಾಯದಿಂದಲೇ ಸಾಧ್ಯವಾಯಿತು. ಲಂಕೆಯಲ್ಲಿ ಶ್ರೀರಾಮನು ಕುಂಭಕರ್ಣ, ಇಂದ್ರಜಿತ್, ಹಾಗೂ ಉಳಿದ ಎಲ್ಲ ರಾಕ್ಷಸ ಪರಿವಾರದೊಂದಿಗೆ ರಾವಣನನ್ನು ಸಂಹರಿಸಿ, ಸೀತಾ, ಲಕ್ಷ್ಮಣ ಮತ್ತು ಉಳಿದ ಕಪಿಗಳೊಂದಿಗೆ ಅಯೋಧ್ಯೆಗೆ ಹೊರಟ. ಆ ಶ್ರೀರಾಮನ ಅಯೋಧ್ಯಾ ಪ್ರಯಾಣಕ್ಕೆ ಕುಬೇರನು ತನ್ನ ಪುಷ್ಪಕ ವಿಮಾನವನ್ನು ಒದಗಿಸಿದ್ದ. ಕಾಮಗಾಮಿಯಾದ ಆ ವರವಿಮಾನದಲ್ಲಿ ಕುಳಿತು ಹನುಮಂತ ಮೊದಲಾದವ ರೊಂದಿಗೆ ಶ್ರೀರಾಮನು ಪ್ರಯಾಣಿಸುವಾಗ ದಾರಿಯಲ್ಲಿ ಶ್ರೀರಾಮನಿಗೆ ಗೌತಮೀ ನದಿಯ ದರ್ಶನವಾಯಿತು. ಆಗ ಶ್ರೀರಾಮನು ವಿಮಾನವನ್ನು ಕೆಳಗೆ ಇಳಿಸಿ ಗೌತಮಿ ತೀರದಲ್ಲಿ ಬಂದು ನಿಂತು, ಹನುಮಂತ ಮುಂತಾದ ಕಪಿಗಳೂ, ವಿಭೀಷಣ, ಜಾಂಬವಂತ ಮುಂತಾದ ತನ್ನ ಇಷ್ಟ ಮಿತ್ರರಿಗೂ ಗೌತಮೀನದಿಯ ಮಹಿಮೆಯನ್ನು ತಿಳಿಸಿ ಹೇಳಿದ. "ವೀರರೇ, ಈ ಗೌತಮೀ ನದಿಯ ಪ್ರಭಾವದಿಂದ ನಮ್ಮ ತಂದೆ ದಶರಥ ಮಹಾರಾಜನು ಪಾಪಮುಕ್ತನಾಗಿ ಸ್ವರ್ಗವನ್ನು ಪಡೆದ. ಇದರ ಪುಣ್ಯ ಪ್ರಭಾವದಿಂದಲೇ ನನಗೆ ಸುಗ್ರೀವ, ವಿಭೀಷಣ ಜಾಂಬವಂತರಂಥ ಮಿತ್ರರು. ಹನುಮಂತನಂಥ ಸೇವಕನೂ ದೊರಕಿದರು. ಇವರೆಲ್ಲರ ಸಹಾಯದಿಂದಲೇ ನಾನು ಕಳೆದು ಹೋದ ಸೀತೆಯನ್ನು ಮರಳಿ ಪಡೆದೆ. ಈ ಗೌತಮಿಯು ನದಿಗಳಿಗೆಲ್ಲ ತಾಯಿ, ನಾನು ಮನಸ್ಸು, ಮೈ ಮತ್ತು ಮಾತುಗಳಿಂದ, ತ್ರಿಕರಣ ಶುದ್ಧಿ ಪೂರ್ವಕವಾಗಿ ಈ ಗಂಗಾ ನದಿಯನ್ನು ಶರಣು ಹೊಂದುತ್ತೇನೆ."

ಶ್ರೀರಾಮನ ಈ ಮಾತನ್ನು ಕೇಳಿ ಎಲ್ಲರಿಗೂ ಆ ವೃದ್ಧ ಗಂಗೆಯ ವಿಷಯದಲ್ಲಿ ಭಕ್ತಿ ಶ್ರದ್ಧೆಗಳು ಉಂಟಾದವು. ಅವರೆಲ್ಲರೂ ಆ ನದಿಯಲ್ಲಿ ಸ್ನಾನಮಾಡಿ ಪುಷ್ಪೋಪಹಾರ ಗಳಿಂದ ಪೂಜಿಸಿದರು. ಶ್ರೀರಾಮನು ಆ ಗೋದಾವರಿ ನದಿಯನ್ನು ಅದರ ತೀರದಲ್ಲಿರುವ ಪರಮೇಶ್ವರನನ್ನು ಭಕ್ತಿಯಿಂದ ಸ್ತೋತ್ರ ಮಾಡಿದನು. ಪೂಜೆ, ಪ್ರಾರ್ಥನೆ ಎಲ್ಲ ಮುಗಿದ ಬಳಿಕ ವಿಭೀಷಣನು "ನಮಗೆ ಇಷ್ಟರಿಂದ ಪ್ರೀತಿ ಯಾಗಿಲ್ಲ, ನಾವು ಇನ್ನು ನಾಲ್ಕು ರಾತ್ರಿ ಇಲ್ಲಿಯೇ ಇದ್ದು ಈ ನದಿಯನ್ನು ಏತತ್ತೀರ ವಾಸಿಯಾದ ಶಂಕರನನ್ನು ಪೂಜೆ ಮಾಡೋಣ. ಅನಂತರವೇ ಅಯೋಧ್ಯೆಗೆ ಹೋಗೋಣ" ಎಂದು ಹೇಳಿದನು. ಅದನ್ನು ಎಲ್ಲ ವಾನರರು ಅನುಮೋದಿಸಿದರು. ಆಗ ಅದನು ಶ್ರೀರಾಮನು ಒಪ್ಪಿ ಅಲ್ಲಿಯೇ

ಉಳಿದುಕೊಂಡನು. ಬಳಿಕ ಎಲ್ಲರ ವಾನರರೇ ಮೊದಲಾದ ಶ್ರೀರಾಮ ಪರಿವಾರದವರು, ಗಂಗಾ ತೀರದಲ್ಲಿ ಸರ್ವೇಶ್ವರನಾದ ಶಂಕರನ ಪೂಜೆಯನ್ನು ಮಾಡಿ ಭ್ರಾತೃಪ್ರಿಯ ಎಂಬ ತೀರ್ಥಕ್ಕೆ ಹೋದರು. ಅಲ್ಲಿ ಸಿದ್ಧೇಶ್ವರ ಎಂಬ ಜಗತ್ಪ್ರಸಿದ್ಧವಾದ ಈಶ್ವರ ಲಿಂಗವನ್ನು ಶ್ರೀರಾಮನೊಂದಿಗೆ ಎಲ್ಲ ಋಕ್ಷ ವಾನರರು, ಪೂಜೆಗೈದರು. ರಾವಣನು ಇಷ್ಟು ಪ್ರಬಲನಾಗಿ ಮೆರೆದದ್ದು ಈ ಸಿದ್ಧೇಶ್ವರನ ವರ ಪ್ರಭಾವದಿಂದಲೇ, ಆ ರಾಮನ ಅನುಯಾಯಿಗಳೆಲ್ಲರೂ ತಮತಮಗೆ ಬೇಕಾದ ಲಿಂಗಗಳನ್ನು ಸ್ಥಾಪಿಸಿಕೊಂಡು, ಆ ಇಷ್ಟ ಲಿಂಗಗಳ ಪೂಜೆ ಮಾಡುತ್ತಾ, ಐದು ದಿನ ಆ ಗೌತಮೀ ತೀರದಲ್ಲಿ ವಾಸವಾಗಿದ್ದರು.

ವಾಯು ಪುತ್ರ ಹನುಮಂತನು ಮಾತ್ರ ಅವಿರತವಾಗಿ ಶ್ರೀರಾಮನ ಸೇವೆಯನ್ನು ಮಾಡುತ್ತಿದ್ದನು. ಆಗ ಆ ಸೀತಾಪತಿಯು ಹನುಮಂತನನ್ನು ಕರೆದು, ''ಇವರ ಈ ಎಲ್ಲ ಭಕ್ತರ ಪರಮೇಶ್ವರ ಪೂಜೆಯು ಮುಗಿಸಿದೆ. ಅವರು ಪೂಜಿಸಿದ ಇಷ್ಟ ಲಿಂಗಗಳನ್ನೆಲ್ಲ, ಈ ಗೌತಮೀ ನದಿಯಲ್ಲಿ ವಿಸರ್ಜನೆ ಮಾಡು. ಇದರಲ್ಲಿ ಈಶ್ವರನ ಭಕ್ತರಿಂದಲೂ, ನನ್ನಿಂದಲೂ, ಮತ್ತು ಬೇರೆಯವರಿಂದಲೂ ಶಾಸ್ತ್ರೋಕ್ತ ವಿಧಿ ಪೂರ್ವಕವಾಗಿ ಸ್ಥಾಪಿಸಿ ಪೂಜಿಸಲ್ಪಟ್ಟ ಲಿಂಗಗಳನ್ನು ಅವರವರ ಪೂಜೆ ಮುಗಿದಿದ್ದರಿಂದ, ಈ ನದಿಯಲ್ಲಿ ವಿಸರ್ಜಿಸಿ ಬಾ.''

ಶ್ರೀರಾಮನ ಆದೇಶದಂತೆ ಹನುಮಂತನು ಆ ಲಿಂಗಗಳನ್ನು ಕೈಯಿಂದ ಕೀಳಲು ಪ್ರಯತ್ನ ಪಟ್ಟನು. ಆದರೆ ಎಷ್ಟು ಕಷ್ಟಪಟ್ಟು ಕೀಳಬೇಕೆಂದರೂ, ಆ ಮಾರುತಿಗೆ ಅಲ್ಲಿಯ ಒಂದು ಲಿಂಗವನ್ನೂ ಕದಲಿಸಲು ಆಗಲಿಲ್ಲ. ತನ್ನ ದೀರ್ಘತಮವಾದ ಬಾಲದಿಂದ ಸುತ್ತಿ ಎತ್ತಿ ಕಿತ್ತಬೇಕೆಂಬ ಅವನ ಪರಿಶ್ರಮವು ವ್ಯರ್ಥವಾಯಿತು. ಅದನ್ನು ನೋಡಿ ಆಶ್ಚರ್ಯ ಚಕಿತನಾದ ಶ್ರೀರಾಮನು ಧಾವಿಸಿ ಆ ಲಿಂಗ ಇರುವಲ್ಲಿ ಹೋದ. ಅಚಲನಾಗಿ ನಿಂತುಕೊಂಡ. ಮೊದಲು ಹನುಮಂತನು ಕೈ ಹಾಕಿದರೂ ಕದಲದ ಲಿಂಗವನ್ನು ನೋಡಿ ಶ್ರೀರಾಮನು ಭಕ್ತಿಭಾವ ಪರವಶನಾದ. ಬ್ರಾಹ್ಮಣರನ್ನು ಕರೆಯಿಸಿ ಅವರಿಂದ ಆ ಲಿಂಗ ಪೂಜೆಯನ್ನು ಮಾಡಿಸಿ, ಪ್ರದಕ್ಷಿಣೆ ಮಾಡಿ, ಅಲ್ಲಿರುವ ಎಲ್ಲ ಲಿಂಗಗಳಿಗೂ ಕ್ರಮವಾಗಿ ಸಮಸ್ಕರಿಸಿದ. ಅದರಂತೆ ಕಿಷ್ಕಿಂಧಾ ವಾಸಿಗಳಾದ ಎಲ್ಲ ವಾನರರೂ, ಜಾಂಬವಂತನೂ, ವಿಭೀಷಣನೂ, ಆ ತೀರ್ಥವನ್ನು ಅಲ್ಲಿರುವ ಪರಮೇಶ್ವರನನ್ನು ಭಕ್ತಿಯಿಂದ ಪೂಜೆಮಾಡಿದರು. ಅದಕ್ಕೆ ಕಿಷ್ಕಿಂಧಾ ತೀರ್ಥ ಎಂದು ಹೆಸರು ಬಂದು ಪ್ರಸಿದ್ಧಿಯಾಯಿತು.

## ''ವ್ಯಾಸತೀರ್ಥ ಮಹಿಮೆ''

**ಬ್ರಹ್ಮ**:-ಗೌತಮೀತೀರದ ವ್ಯಾಸತೀರ್ಥಕ್ಕೆ ಪ್ರಾಚೇತನ ತೀರ್ಥ ಎಂದೂ ಕರೆಯುತ್ತಾರೆ. ನನಗೆ, ಸೃಷ್ಟಿ ಕಾರ್ಯದಲ್ಲಿ ಸಹಾಯಕರಾಗಲು ಹತ್ತು ಜನ ಮಾನಸ ಪುತ್ರರನ್ನು ನಾನು ಯುಗದ ಆದಿಕಾಲದಲ್ಲಿ ನನ್ನ ಇಚ್ಛಾ ಶಕ್ತಿಯಿಂದ ಪಡೆದೆ. ಅವರೆಲ್ಲರೂ ನನ್ನ ಮಾನಸ ಪುತ್ರರು. ಆ ನನ್ನ ಹತ್ತೂ ಮಾನಸ ಪುತ್ರರೂ ಈ ಪೃಥವಿಯ ಅರ್ಥಾಥ್ ಲಿಂಗ ಶರೀರದ ಕೊನೆಯೆಂಬುದನ್ನು ತಿಳಿಯಲು ಮರೆತುಹೋದರು. ಭಗವದಾರಾಧನೆಯಲ್ಲಿಯೇ ತಲ್ಲೀನರಾದ ಅವರು ಮರಳಿ ಬರಲ್ಲೇ ಇಲ್ಲ. ಅನಂತರ ನಾನು ಮತ್ತೆ ಹತ್ತು ಮಾನಸ ಪುತ್ರರನ್ನು ಹೊಸ ಪ್ರಜಾಪತಿಗಳನ್ನಾಗಿ ಸೃಷ್ಟಿಮಾಡಿದೆ. ಅವರೆಲ್ಲರೂ ತಮ್ಮ ಹಿರಿಯ ಅಣ್ಣಂದಿರನ್ನು ಹುಡುಕಲು ಹೋದರು. ಹೋದವರು ಯಾರೂ ಮರಳಿ ಬರಲಿಲ್ಲ. ಅನಂತರ ನಾನು ಮತ್ತೆ ಆಂಗೀರಸರು ಎಂಬ ಪ್ರಜಾಪತಿಗಳನ್ನು ನನ್ನ ಸಂಕಲ್ಪ

ಶಕ್ತಿಯಿಂದ ಹುಟ್ಟಿಸಿದೆ. ಈ ಅಂಗೀರಸರು ವೇದವೇದಾಂಗ ಪಾರಂಗತರು. ಸರ್ವಶಾಸ್ತ್ರ ವಿಶಾರದರೂ ಆಗಿದ್ದರು. ಅವರೆಲ್ಲರೂ ಹೋಗುವಾಗ, ನನಗೆ ನಮಸ್ಕಾರ ಮಾಡಿದರು. ನನ್ನ ಅಪ್ಪಣೆಯನ್ನು ಪಡೆದು ತಪಸ್ಸಿಗೆ ಹೊರಟರು. ಆದರೆ ತಮ್ಮ ತಾಯಿಯಾದ ಸರಸ್ವತಿಯನ್ನು ಮಾತ್ರ ನಮಸ್ಕರಿಸಲಿಲ್ಲ. ಅವಳ ಅಪ್ಪಣೆಯನ್ನು ಕೇಳಲಿಲ್ಲ. ನಾರದ,

''ಸರ್ವೇಭ್ಯೋ ಹ್ಯಧಿಕಾಮಾತಾ । ಗುರುಭ್ಯೋ ಗೌರವೇಣ ಹಿ ॥

ಎಲ್ಲ ಗುರುಗಳಿಗಿಂತ ತಾಯಿಯು ಮಿಗಿಲು. ಅತ್ಯಧಿಕ ಗೌರವಾದರಗಳಿಗೆ ಅರ್ಹಳು ಎಂದು ಶಾಸ್ತ್ರದ ಆದೇಶ. ಅದನ್ನು ಧಿಕ್ಕರಿಸಿ ಈ ಅಂಗೀರಸರು ಮಾತೆಯನ್ನು ವಂದಿಸದೇ ಅವಳ ಅಪ್ಪಣೆಯನ್ನು ಪಡೆಯದೇ ತಪಸ್ಸಿಗೆ ಹೊರಟರು. ಆದರಿಂದ ಅವರ ತಾಯಿಯ ಕೃದ್ಧಳಾಗಿ ''ನಿಮ್ಮ ಯಾವುದೇ ವಿಧವಾದ ತಪಸ್ಸು ಸಿದ್ಧಿಸದೇ ಹೋಗಲಿ'' ಎಂದು ಶಾಪಕೊಟ್ಟಳು.

ಮಾತೆಯ ಮಾತನ್ನು ಗಮನಿಸದೆ ಅಂಗೀರಸರೆಲ್ಲರೂ ತಪೋನುಷ್ಠಾನಕ್ಕೆ ತೆರಳಿದರು. ಅನೇಕ ಪುಣ್ಯ ಕ್ಷೇತ್ರಗಳಲ್ಲಿಯೂ ಪವಿತ್ರ ನದೀ ತೀರಗಳಲ್ಲಿಯೂ ಅವರು ತೀಕ್ಷ್ಣತರವಾದ ತಪಸ್ಸನ್ನು ಆಚರಿಸಿದರು. ಜಪಗಳನ್ನು ಜಪಿಸಿದರು. ಮಂತ್ರಗಳನ್ನು ಪಠಿಸಿದರು.

ದೇವ ದೇವೋತ್ತಮರ ಆರಾಧನೆ, ಉಪಾಸನೆ, ಯಜನ, ಭಜನ, ಪೂಜೆಗಳನ್ನು ಭಕ್ತಿಯಿಂದ ಮಾಡಿದರು. ಆದರೆ ಎಲ್ಲವೂ ವ್ಯರ್ಥ. ಪರಿಶ್ರಮ ಮಾತ್ರ ಸತ್ಯ. ಪ್ರಯೋಜನ ಶೂನ್ಯ. ಇಷ್ಟೇ ಅಲ್ಲದೇ ಅವರ ತಪೋನುಷ್ಠಾನಕ್ಕೆ ಹೆಜ್ಜೆ ಹೆಜ್ಜೆಗೆ ವಿಘ್ನಗಳು ರಾಕ್ಷಸರಿಂದ ಹಲವಾರು ಕಡೆ ಉಪದ್ರವ ಮತ್ತು ಕೆಲವು ಕಡೆ ಮಾನವರಿಂದ ಅಡೆತಡೆ, ಇನ್ನು ಎಷ್ಟೋ ತೀರ್ಥಕ್ಷೇತ್ರಗಳಲ್ಲಿ ನಾರೀಕುಲದಿಂದಲೇ ಅವರ ತಪೋನುಷ್ಠಾನಕ್ಕೆ ಪ್ರತಿಬಂಧಕ.

ಹೀಗೆ ಅವರು ಹಲವಾರು ಸ್ಥಾನಗಳಲ್ಲಿ ತಪಶ್ಚರ್ಯೆವನ್ನು ಮಾಡಿ ಸಿದ್ಧಿಯನ್ನು ಕಾಣದೇ, ಯಾವುದೇ ವಿಧವಾದ ಫಲಪ್ರಯೋಜನವನ್ನು ಪಡೆಯದೇ ಕಾಯಕ್ಲೇಶವನ್ನು ಮಾತ್ರ ಹೊಂದಿ ಕ್ಷೀಣಕಾಯರಾಗಿ ಕಂಗೆಟ್ಟು, ಅಗಸ್ತ್ಯಮುನಿಗಳ ಬಳಿಗೆ ಬಂದರು. ಆ ಅಗಸ್ತ್ಯ ಮಹಾಮುನಿಗಳು ಜಗದ್ ಗುರುಗಳಲ್ಲವೇ! ಕೊಡದಿಂದ ಹುಟ್ಟಿದ ಆ ತಾಪಸೋತ್ತಮರು ತಪೋನಿಧಿಗಳೇ ಆಗಿದ್ದರು. ಅಗ್ನಿಯ ಅಂಶದಿಂದ ಒಡಗೂಡಿದ ವಿಫಲ ಪ್ರಯತ್ನರಾದ ಆ ಅಂಗೀರಸ ಮುನಿಗಳೆಲ್ಲರೂ ತಪೋನಿಧಿ ಅಗಸ್ತ್ಯರ ಬಳಿಗೆ ಬಂದು ಬಾಗಿ ನಿಂದು ಬೆಸಗೊಂಡರು. ''ಪೂಜ್ಯರೇ ನಾವು ಎಷ್ಟು ರೀತಿಯಿಂದ ತಪೋನುಷ್ಠಾನವನ್ನು ಮಾಡಿದರೂ ಸಿದ್ಧಿ ನಮ್ಮ ಪಾಲಿಗೆ ಬಿಸಿಲು ಕುದುರೆಯಾಗಿದೆ. ನಾವು ಕೈಕೊಂಡ ಅತ್ಯುಗ್ರವಾದ ತಪೋನುಷ್ಠಾನ ಗಳೆಲ್ಲವೂ ಫಲಪ್ರಯೋಜನವಿಲ್ಲದೇ ಶೂನ್ಯವಾಗಿ ವ್ಯರ್ಥವಾಗುತ್ತಿದೆ. ನಾವು ಯಾವ ಉಪಾಯವನ್ನು ಕೈಕೊಂಡರೂ ಅವೆಲ್ಲವೂ ನಿರರ್ಥಕವೇ ಆಗುತ್ತಲಿದೆ. ಇದಕ್ಕೆ ಏನು ಕಾರಣ? ನಮ್ಮ ತಪಸ್ಸು ಏನು ಮಾಡಿದರೆ ಸಾರ್ಥಕವಾಗಬಹುದು? ನಮಗೆ ತಪಃಸ್ಸಿದ್ಧಿ ಬರುವ ಬಗೆ ಹೇಗೆ?

ತಾವು ಮಹಾಜ್ಞಾನಿಗಳು, ತಪೋನುಷ್ಠಾನದಿಂದ ತಾವು ತಪಸ್ವಿ ಮಂಡಲದಲ್ಲಿಯೇ ಶ್ರೇಷ್ಠರೂ ಆಗಿರುವಿರಿ. ಜ್ಞಾನಿಗಳಲ್ಲಿ ನೀವು ಅತ್ಯಂತ ಗರಿಷ್ಠರಾದ ಬ್ರಹ್ಮಜ್ಞಾನಿಗಳು. ವಕ್ತಾರರಲ್ಲಿ ವಾಚಸ್ಪತಿಗಳು. ಜಿತೇಂದ್ರಿಯರಲ್ಲಿ ಸರ್ವಮಾನ್ಯರು. ನೀವು ಮಹಾತಪಸ್ವಿಗಳಾದರೂ ಪರಮ ಶಾಂತರು. ಸಿದ್ಧ ಪುರುಷರಾದರೂ ಪರೋಪಕಾರಿಗಳು. ಆದುದರಿಂದ ನೀವು ನಮ್ಮ ಸಮಸ್ಯೆಗೆಪರಿಹಾರವನ್ನು ದಯವಿಟ್ಟು ಹೇಳಿರಿ.'' ಅಂಗೀರಸರು ಹೀಗೆ

ಅಂಗಲಾಚಿ ತಮ್ಮನ್ನು ಬೇಡಿಕೊಳ್ಳಲು ಮಹಾಮನಿಷಿ ಮುನಿಪುಂಗವರಾದ ಅಗಸ್ತ್ಯರು ಕ್ಷಣಕಾಲ ಮೌನಸಮಾಧಿಯಲ್ಲಿ ಕಣ್ಣುಮುಚ್ಚಿ ಕುಳಿತುಕೊಂಡರು. ಅನಂತರ ಯೋಚಿಸಿ ನುಡಿದರು.

"ಮುನಿಗಳೇ, ನಿಮ್ಮ ತಂದೆಯಾದ ಚತುರ್ಮುಖನು ಹತ್ತು ಜನ ಪ್ರಜಾಪತಿಗಳಾದ ತಮ್ಮ ಮಾನಸ ಪುತ್ರರನ್ನು ಮೊಟ್ಟ ಮೊದಲು ಸೃಷ್ಟಿಸಿರುವುದನ್ನು ನೀವು ಬಲ್ಲಿರಷ್ಟೆ? ಅವರೆಲ್ಲರೂ ಮತ್ತು ಅವರ ಸೋದರರೂ ಪರತತ್ವ ಅನ್ವೇಷಣೆಯಲ್ಲಿ ಹೊರಟುಹೋದರು. ಅವರೆಲ್ಲರೂ ಸತ್ಯಸಂಶೋಧನೆಯ ಕಾರ್ಯದಲ್ಲಿ ತಮ್ಮ ದೇಹವನ್ನು ತೇಯುತ್ತಲಿದ್ದಾರೆ. ಅವರು ಅಚಿರಾದೇವ ಪರಬ್ರಹ್ಮನ ಸಾಕ್ಷಾತ್ಕಾರ ಮಾಡಿಕೊಂಡು ಸಚ್ಚಿದಾನಂದಾತ್ಮಕ ವಾದ ಭಗವಂತನ ಸಾಲೋಕ್ಯ, ಸಾರೂಪ್ಯ, ಸಾಯುಜ್ಯ ಸಾಮೀಪ್ಯಾದಿ ಮೋಕ್ಷಗಳನ್ನು ಯಥಾಶಕ್ತಿ ಸ್ವಸ್ವರೂಪ ಯೋಗ್ಯತೆಗನುಗುಣವಾಗಿ ಪಡೆಯಲಿರುವರು. ಅವರನ್ನು ಹುಡುಕಲು ಹೊರಟಿರುವವರೇ ನೀವು. ಆಂಗೀರಸರಾದ ನೀವು ಇದೇ ರೀತಿಯಾಗಿ ತಪಸ್ಸನ್ನು, ಮಾಡುತ್ತಾ ನಿರಾಶರಾಗದೇ, ಪ್ರಯತ್ನವನ್ನು ಮುಂದುವರೆಸಿದರೆ, ನಿಮ್ಮ ತಾಯಿ ಹರಿಸಿದರೆ ತಪಃಸ್ಸಿದ್ಧಿ ಖಂಡಿತ. ಒಂದಾನೊಂದು ಕಾಲದಲ್ಲಿ ನೀವೆಲ್ಲರೂ ನಿಶ್ಚಿತವಾಗಿ ಪ್ರಜಾಪತಿ ಪದವಿಗೆ ಬರುವಿರಿ ಎಂದು ಹೇಳಿದರೆ ಅತಿಶಯೋಕ್ತಿ ಅಲ್ಲ. ಆದಕ್ಕಾಗಿ ಮೊದಲು ನೀವು ಲೋಕಪಾವನಿಯಾದ ಗೌತಮೀ ತೀರಕ್ಕೆ ಹೋಗಿರಿ. ಶಿವನಿಗೆ ಅತ್ಯಂತ ಪ್ರೀತ್ಯಾಸ್ಪದಳಾದ ಗಂಗೆಯನ್ನು ಬಿಟ್ಟರೆ ನಿಮಗೆ ಬೇರೆ ಉಪಾಯವಿಲ್ಲ. ಆ ಗಂಗಾನದಿಯ ಒಂದು ಪುಣ್ಯಪ್ರದೇಶದಲ್ಲಿ ಎಲೆಮನೆಯನ್ನು ಕಟ್ಟಿಕೊಂಡು ನೀವು ನಿಮ್ಮ ತಪೋನುಷ್ಠಾನ, ಪಿತೃಸೇವನವನ್ನು ಜಪವನ್ನೂ ಮುಂದವರೆಸಿರಿ. ಭಕ್ತಿ ಶ್ರದ್ಧಾದಿಗಳಿಂದ ಶಂಕರನನ್ನು ಆರಾಧಿಸಿರಿ. ನಿಮ್ಮ ಜಪತಪೋನುಷ್ಠಾನಗಳೆಲ್ಲವೂ ಕೈಲಾಸಪತಿಯಲ್ಲಿಯೇ ಕೇಂದ್ರೀಕೃತವಾಗಲಿ. ಜಗದ್‌ಗುರುವಲ್ಲವೇ ಆ ನಾಗಭೂಷಣನು! ನಿಮಗೂ ಕೂಡ ಅರನೇ ಗುರುವಾಗಿ ನಿಮ್ಮ ಎಲ್ಲ ಸಂಶಯಗಳನ್ನು ಪರಿಹರಿಸುವನು. ನಿಮಗೆ ಸರಿಯಾದ ಮಾರ್ಗದರ್ಶನವನ್ನು ಮಾಡಿಸುವನು. ಸದ್ಗುರುವಿನ ಸೇವೆ ಮಾಡದೇ ಯಾರಿಗೂ ಆತ್ಮಶುದ್ಧಿಯಾಗಲಾರದು. ತಾಯ್ತಂದೆಗಳನ್ನು ಪೂಜಿಸದೇ ತಪಃಸ್ಸಿದ್ಧಿ ದೊರೆಯಲಾರದು."

ಆಗಸ್ತ್ಯರ ಆದೇಶವನ್ನು ತಲೆಯಲ್ಲಿ ಹೊತ್ತು ಆ ಆಂಗೀರಸರು ಗಂಗಾತೀರಕ್ಕೆ ಬಂದರು. ಅವರಲ್ಲಿ ಐದು ಜನರು ಗಂಗೆಯ ಉತ್ತರ ಭಾಗದಲ್ಲಿಯೂ, ಐದು ಜನರು ದಕ್ಷಿಣ ಭಾಗದಲ್ಲಿಯೂ ನಿಂತು ತಾಯಿ ತಂದೆಗಳನ್ನು ವಂದಿಸಿ ಪೂಜಿಸಿ ಅಗಸ್ತ್ಯರು ಹೇಳಿದಂತೆ ಪಾರ್ವತೀಪತಿಯನ್ನು ತಮ್ಮ ತಪಸ್ಸಮಾಧಿಯಿಂದ ಪೂಜೆಮಾಡುತ್ತಾ ಆರಾಧನೆ ಗೈದರು. ಏಕಾಂತ ಭಕ್ತಿಯಿಂದ ಪರಮಾತಮ್ಮನ್ನೂ ಶಾರದೆಯನ್ನೂ ನನ್ನನ್ನೂ ಅರ್ಚಿಸಿ ಮೆಚ್ಚಿಸಿ ದೇವತಾನುಗ್ರಹಕ್ಕೆ ಪಾತ್ರರಾದರು. ಅವರು ಆಸನಸಿದ್ಧಿ, ಆತ್ಮಶುದ್ಧಿ, ಇಂದ್ರಿಯನಿಗ್ರಹ, ಮನೋಜಯ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನಧಾರಣಾದಿಗಳಿಂದ ಅಪರೋಕ್ಷಜ್ಞಾನ ವನ್ನೂ ಪಡೆದು ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಂಡರು. ಸ್ವಯಂತ್ರಿಪುರಾರಿಯೇ ಅವರಿಗೆ ಮಾರ್ಗದರ್ಶಕನಾಗಿ ನಿಂತಿದ್ದನಷ್ಟೇ? ಅವನ ನೇತೃತ್ವದಲ್ಲಿ ನಿರ್ವಿಘ್ನವಾಗಿ ಸಾಗಿತು ಅವರ ಪರಮಾರ್ಥಸಾಧನೆ. ಅವರ ಸಾಧನಾಷ್ಠಾನವೆಲ್ಲವು ಪರಿಪಾಕಗೊಂಡು, ಬ್ರಹ್ಮನನ್ನೆ ಕಂಡು, ಬ್ರಹ್ಮಾನುಭೂತಿಯ ಸವಿಯನ್ನು ಉಂಡು ಅವರೆಲ್ಲರೂ ಕೃತಾರ್ಥರಾದರು. ಅವರ ಮೇಲೆ ದೇವಾಧಿದೇವತೆಗಳೆಲ್ಲರೂ ಸುಪ್ರೀತರಾದರು.

ಆಗ ಸ್ವಯಂ ನಾನು (ಬ್ರಹ್ಮನು) ಅವರನ್ನು ಪ್ರಜಾಪತಿ ಸ್ಥಾನಕ್ಕೆ ತರಬೇತಿಗೊಳಿಸುವುದಕ್ಕಾಗಿ ಯುಗದ ಆದಿಯಲ್ಲಿ ಸೃಷ್ಟಿಮಾಡುವ ಕ್ರಮವನ್ನು ಹೇಳಿಕೊಟ್ಟೆ. ಅಧರ್ಮವನ್ನು ಹೊಡೆದೋಡಿಸಿ ವೇದಗಳನ್ನು ಸ್ಥಾಪಿಸುವ ಬಗೆಯನ್ನು ಹೇಳಿಕೊಟ್ಟೆ. ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳ ಸಿದ್ಧಿಗಾಗಿ ಮತ್ತು ಲೋಕೋಪಕಾರಕ್ಕಾಗಿ ಕೈಕೊಳ್ಳಬೇಕಾದ ಕ್ರಮಗಳನ್ನು ಅವರಿಗೆ ಬೋಧಿಸಿದೆ. ಪುರಾಣ, ಸ್ಮೃತಿ, ವೇದ, ಧರ್ಮ, ಶಾಸ್ತ್ರಗಳ ಅರ್ಥಗಳನ್ನು ಬೋಧಿಸುವ, ಸಾಧಿಸುವ, ಪ್ರತಿಪಾದಿಸುವ ಪದ್ಧತಿಯನ್ನು ನಿರೂಪಿಸಿದೆ. ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಪ್ರಕಾರವನ್ನು ಕೂಡ ಹೇಳಿಕೊಟ್ಟೆ. ಅವರೆಲ್ಲರೂ ಪ್ರಜಾಪತಿ ಪಟ್ಟಕ್ಕೆ ಬಂದು, ಆಸ್ಥಾನದ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿರ್ವಹಿಸಲಿಕ್ಕೆ ಬೇಕಾದ ವಿಷಯಗಳನ್ನೆಲ್ಲಾ ವಿವರವಾಗಿ ಅವರಿಗೆ ತಿಳಿಸಿದೆ. ಸರಸ್ವತಿಯೂ ಪಾದಪ್ರಣತರಾದ ಅವರ ಮೇಲೆ ಅನುಗ್ರಹ ಗೈದು ಜ್ಞಾನದಾನ ಮಾಡಿದಳು. ಮುಂದೆ ಲೋಕದಲ್ಲಿ ಅಧರ್ಮವು ಹರಡಿ ವೇದಮಾರ್ಗಕ್ಕೆ ಚ್ಯುತಿ ಬಂದರೆ ಆ ಆಂಗೀರಸರೆಲ್ಲರೂ ಒಬ್ಬಬ್ಬರಾಗಿ ಪ್ರಜಾಪತಿ ಪದವಿಗೆ ಬಂದು ಬ್ರಹ್ಮರಾಗಿ ನನ್ನ ಕಾರ್ಯವನ್ನು ಮಾಡುವರು. ಮುಂದೆ ಅವರೆಲ್ಲರೂ ವೇದವಿಭಾಗ ಮಾಡಿ ವೇದವ್ಯಾಸ ರೆಂದೂ ಸಿದ್ಧಿಪ್ರಸಿದ್ಧಿಯನ್ನು ಪಡೆಯುವರು. ಲೋಕೋಪಕಾರಿಗಳೂ ಆಗುವರು.

ಹೀಗೆ ನನ್ನ ಇಚ್ಛೆಯನ್ನು ಅನುಸರಿಸಿ ಮತ್ತು ಅಪ್ಪಣೆಯನ್ನು ಪರಿಪಾಲಿಸಿ ಅವರೆಲ್ಲರೂ ಗಂಗಾ ತೀರದಲ್ಲಿ ತಮ್ಮ ತಪಃಸ್ಸಿದ್ಧಿಯನ್ನು ಪಡೆದು ಜನ್ಮವನ್ನು ಸಾರ್ಥಕ ಪಡಿಸಿಕೊಂಡರು. ಇದಕ್ಕೆ ಶಂಕರನ ಪರಮಾನುಗ್ರಹವೇ ಮುಖ್ಯ ಕಾರಣವಾಯಿತು. ಆ ಶಿವನು ಸರ್ವಾತ್ಮಕನು, ಸರ್ವವ್ಯಾಪಿಯು, ಸರ್ವವಸ್ತುಸ್ವರೂಪಿಯೂ ಆಗಿದ್ದಾನೆ. ಆ ಶಿವನು ಇದ್ದಲ್ಲಿ ವಿಷ್ಣು, ಬ್ರಹ್ಮನಾದ ನಾನು, ಸೂರ್ಯ, ಅಗ್ನಿ, ವರುಣ, ಎಲ್ಲರೂ ಸನ್ನಿಹಿತ ರಾಗಿರುತ್ತೇವೆ. ಪರಾತ್ಪರನಾದ ಪರಬ್ರಹ್ಮನೇ, ತ್ರಿಮೂರ್ತಿಗಳಾದ ನಮ್ಮಲ್ಲಿ ನಿಂತು ಸೃಷ್ಟಿ ಸ್ಥಿತಿ ಸಂಹಾರಾದಿಕಾರ್ಯ ಮಾಡಿ ಬ್ರಹ್ಮ, ವಿಷ್ಣು ಮಹೇಶ್ವರ ಎಂಬ ಹೆಸರನ್ನು ಪಡೆಯುತ್ತಾನೆ. ಅಗ್ನಿ, ಸೂರ್ಯ, ಜಲ ಮೊದಲಾದವುಗಳಲ್ಲಿಯೂ ಆ ಪರಾಶಕ್ತಿಯೇ ನಿಂತು ತತ್ತತ್ಕಾರ್ಯ ಗಳನ್ನು ಮಾಡಿಸುತ್ತದೆ. ಆ ಪರಮೇಶ್ವರನ ಅನುಗ್ರಹವನ್ನು ಪಡೆದ ಆ ಆಂಗೀರಸರನ್ನು ಧರ್ಮವ್ಯಾಸ, ವೇದವ್ಯಾಸ, ಪದವಿಗೆ ಬರುವವರು ಎಂದು ತಿಳಿಯಬೇಕು. ಆ ತೀರ್ಥವು ವೇದವ್ಯಾಸ ಪದವಿಯನ್ನು ಅಲಂಕರಿಸಲಿರುವ ಆಂಗೀರಸರ ತೀರ್ಥವಾಗಿರುವುದರಿಂದ ಅದಕ್ಕೆ ವ್ಯಾಸ ತೀರ್ಥ ಎಂದು ಹೆಸರು ಬಂದಿದೆ.

## ವಂಜರಾ ಸಂಗಮ ತೀರ್ಥ

**ಬ್ರಹ್ಮ:-** ಪೂರ್ವಕಾಲದಲ್ಲಿ ದೇವದಾನವರು ಕ್ಷೀರ ಸಮುದ್ರ ಎಂದು ಪ್ರಸಿದ್ಧವಾದ ಹಾಲ್ಗಡಲನ್ನು ಮಂಥನ ಮಾಡಿದರಷ್ಟೆ? ಆ ಸಂದರ್ಭದಲ್ಲಿ ಕಶ್ಯಪ ಪತ್ನಿಯರಾದ ಕದ್ರೂ, ವಿನತೆಯರೆಂಬ ಅಕ್ಕ ತಂಗಿಯರು ಮರುದಿನ ಹುಟ್ಟಿ ಬರಲಿರುವ ಉಚ್ಚೈಶ್ರವ ಕುದುರೆಯ ಬಣ್ಣದ ವಿಷಯದಲ್ಲಿ ಜಿದ್ದು ಕಟ್ಟಿದರು. ಆ ಸ್ಪರ್ಧೆಯಲ್ಲಿ ಹಾವುಗಳ ತಾಯಿಯಾದ ಕದ್ರೂವು ಗೆದ್ದಳು. ಗರುಡನ ತಾಯಿಯಾದ್ದ ವಿನತೆಯು ಸೋತಳು. ವಾಸ್ತವಿಕವಾಗಿ ವಿನತೆಯು ಹೇಳಿದಂತೆ ಉಚ್ಚೈಶ್ರವದ ಬಣ್ಣ ಅಚ್ಚ ಬಿಳಿಯದೇ ಆಗಿದ್ದಿತು. ಆಗ ನಾಗಮಾತೆಯಾದ ಕದ್ರುವು ಮೋಸ ಮಾಡಿ, ತನ್ನ ಮಕ್ಕಳಾದ ಕರಿ ಹಾವುಗಳಿಂದ ಆ

ಕುದುರೆಯ ಬಾಲದ ತುಂಬ ಮೆತ್ತಿಸಿ ಅದು ಕಪ್ಪಾಗಿ ಕಾಣುವಂತೆ ಮಾಡಿದಳು. ಇದರಿಂದ ಅವರ ಸ್ಪರ್ಧೆಯ ಕರಾರಿನಂತೆ ವಿನತೆಯು ಕದ್ರುವಿನ ಮನೆಯಲ್ಲಿ ದಾಸಿಯಾಗಿ ದುಡಿಯಬೇಕಾಯಿತು. ಅದರಿಂದ ಅವಳ ಮಗನಾದ ಗರುಡನು ಕೂಡ ಕದ್ರುವಿನ ಮಕ್ಕಳಾದ ಹಾವುಗಳಿಗೆಲ್ಲ ಅಡಿಯಾಳಾಗಿ ಜೀತದಾಳಾಗಿ ದುಡಿಯುವ ಪ್ರಸಂಗ ಬಂದಿತು.

ಮೋಸದಿಂದ ವಿನತೆಯನ್ನು ದಾಸಿಯನ್ನಾಗಿ ಮಾಡಿಕೊಂಡ ಕದ್ರು ಹಾಗೂ ಅವಳ ಮಕ್ಕಳಾದ ಸರ್ಪಗಳು ಗರುಡನ ಮೇಲೆಯೂ ಅವನ ತಾಯಿಯ ಮೇಲೆಯೂ ದರ್ಪವನ್ನು ಮಾಡುತ್ತಾ ಹಗಲಿರುಳು ದಯಾ ದಾಕ್ಷಿಣ್ಯವಿಲ್ಲದೇ ತಾಯಿ ಮಕ್ಕಳಾದ ಆ ಗರುಡನನ್ನೂ ವಿನತೆಯನ್ನೂ ದುಡಿಸಿಕೊಳ್ಳುತ್ತಿದ್ದರು. ಜಘನ್ಯವಾದ ದಾಸ್ಯವೃತ್ತಿಯಿಂದ ಪಕ್ಷಿಪ್ರಪಂಚದ ಸಾರ್ವಭೌಮನಾದ ಗರುಡನು ಕೂಡ ಬೆಂದು ಬಳಲಿ ಹೋದ. ಹಾವುಗಳ ಅಸಂಗತ ಆಜ್ಞೆಗಳನ್ನು ದಾಸ್ಯಧರ್ಮದಿಂದ ಪಾಲಿಸಿ, ಆಲಿಸಿ, ನೊಂದು ನಲುಗಿ ಹೋದ ಅವನು ತನ್ನ ಮನಸ್ಸಿನಲ್ಲಿ ವಿಚಾರಿಸಿದ. ''ಪಾರತಂತ್ರ್ಯ ಪರಮದುಃಖ, ಸ್ವಾತಂತ್ರ್ಯ ಪರಮಸುಖ. ಈ ಜಗತ್ತಿನಲ್ಲಿ ಸ್ವಾತಂತ್ರ್ಯವೇ ಸರ್ವಸುಖ, ಈ ಜಗತ್ತಿನಲ್ಲಿ ಅತ್ಯಂತ ಸುಖಿಗಳೆಂದರೆ ಸ್ವತಂತ್ರ ಪುರುಷರು. ಅವರು ಬೇಕಾದಲ್ಲಿ ಸುಖವಾಗಿ ಮಲಗಿ ನಿದ್ರಿಸುವರು. ಆನಂದದಿಂದ ಹಾಡಿಕುಣಿದು ಕುಪ್ಪಳಿಸುವರು. ಸ್ವಚ್ಛಂದದಿಂದ ತಮಗೆ ಇಷ್ಟವಾದುದನ್ನು ಯಥೇಷ್ಟವಾಗಿ ತಿಂದು ತೇಗುವರು, ಸ್ವತಂತ್ರರೇ, ಧನ್ಯರು, ಮಾನ್ಯರು, ದಾಸ್ಯ ಎಂದರೆ ಯಾವ ಜನ್ಮ, ದೈನ್ಯ, ದುಃಖ, ದುರವಸ್ಥೆ, ದಾರಿದ್ರ್ಯಗಳು ಒಟ್ಟಿಸಿದಂತೆ. ದಾಸ್ಯದಲ್ಲಿರುವವರ ಜನ್ಮಕ್ಕೆ ಧಿಕ್ಕಾರ.''

ಈ ರೀತಿಯಾಗಿ ಚಿಂತಿಸಿ ಆಲೋಚಿಸಿ ಗರುಡನು ತಮ್ಮ ತಾಯಿಯ ಬಳಿಗೆ ಬಂದು ದುಃಖೋದ್ರೇಕದಿಂದ ದೀನನಾಗಿ ಕೇಳಿದನು- ''ತಾಯಿ, ನೀನು ದಾಸಿಯಾಗಿ, ಈ ದುಷ್ಟ ಹಾವುಗಳ ಮನೆಯಲ್ಲಿ ದುಡಿಯಲು ಕಾರಣವೇನು? ನೀನು ಹಾವುರಾಣಿಯ ದಾಸಿಯಾದದ್ದು ನಿನ್ನ ತಪ್ಪಿನಿಂದಲೇ ಅಥವಾ ನನ್ನ ತಪ್ಪಿನಿಂದಲೇ ಅಥವಾ ನನ್ನಪ್ಪನ ತಪ್ಪಿನಿಂದಲೇ, ಕಾರಣ ತಿಳಿಸು.''

ಮಗನ ಮಾತಿಗೆ ಆ ಮಾತೆಯು ನೊಂದು ನುಡಿದಳು. ''ವತ್ಸ, ಇದಕ್ಕೆ ನನ್ನ ದುರ್ದೈವ ಮತ್ತು ನಿನ್ನ ದುರದೃಷ್ಟ ಕಾರಣ. ಸಮುದ್ರ ಮಥನ ಕಾಲದಲ್ಲಿ ಉಚ್ಚೈಶ್ರವ ಕುದುರೆಯ ಬಣ್ಣ ಬೆಳ್ಳಗಾಗಿರುವುದು ಎಂದು ನಾನು ಜಿದ್ದು ಕಟ್ಟಿದ್ದೆ. ನಾನು ಹೇಳಿದಂತೆ ಅದರ ಸರ್ವಾಂಗವೂ ಅಚ್ಚ ಬಿಳಿ ಬಣ್ಣದ್ದೇ ಆಗಿತ್ತು. ಆದರೆ ದುರ್ದೈವದಿಂದ ಅದರ ಬಾಲ ಮಾತ್ರ ಕಪ್ಪಾಗಿ ಹೊರಟದ್ದರಿಂದ ನಮ್ಮಿಬ್ಬರ ಕರಾರಿನಂತೆ ನಾನು ಅವಳ ದಾಸಿಯಾಗ ಬೇಕಾಯಿತು. ಇದೆಲ್ಲವು ನನ್ನದೇ ತಪ್ಪು. ನನ್ನ ತಪ್ಪಿನಿಂದಾಗಿಯೇ ನೀನು ಕೂಡ ಅವಳ ಮಕ್ಕಳ ದಾಸನಾಗಿ ದುಡಿಯಬೇಕಾಗಿ ಬಂದಿದೆ. ನಾನು ದಾಸನಾದ ಬಳಿಕ ನನ್ನ ಮಗನಾದ ನೀನೂ ಅನಿವಾರ್ಯವಾಗಿ ದಾಸ್ಯವನ್ನು ಸ್ವೀಕರಿಸಬೇಕಾಗಿ ಬಂದಿದೆ.'' ತಾಯಿಯ ಈ ಮಾತನ್ನು ಕೇಳಿ ಮಾತೃ ಭಕ್ತನಾದ ಗರುಡ ಮುಂದೆ ಏನೂ ಮಾಡಲಿಲ್ಲ. ಹಾವುಗಳ ಹಾರಾಟ, ಏರಾಟ, ಚೀರಾಟಗಳನ್ನು ಸಹಿಸಿದ. ಅವರ ಆಜ್ಞೆಯನ್ನು ತಪ್ಪದೇ ಪಾಲಿಸಿದ. ಅವರ ಹುಚ್ಚು ಹುಡುಗಾಟದ ಅಪ್ಪಣೆಗಳನ್ನೆಲ್ಲ ತಪ್ಪದೇ ಪಾಲಿಸಿ ವಿನತಾ ಕುಮಾರನಾದ ಅವನು ಅವರಿಗೆ ವಿನೀತನಾಗಿ ನಡೆದುಕೊಂಡನು.

ಒಂದು ದಿನ ಸರ್ಪಗಳ ತಾಯಿಯಾದ ಆ ಕದ್ರುವು ವಿನತೆಯನ್ನು ಕರೆದು ''ಸೋದರಿ, ನಿನ್ನ ಮಗನಾದ ಗರುಡ ಸರ್ವ ಸಮರ್ಥ. ಅವನು ಬೇಕು ಎಂದಾಗ ಮುಗಿಲಿನ ಎತ್ತರಕ್ಕೆ

ಏರಬಲ್ಲ. ಸೂರ್ಯನ ಹತ್ತಿರ ಸಾಗಬಲ್ಲ. ಪಾತಾಳದ ಆಳಕ್ಕೂ ಇಳಿಯಬಲ್ಲ. ಅವನ ತಾಯಿಯಾದ ನೀನು ದಾಸಿಯಾದರೂ ಧನ್ಯಳು. ಆದುದರಿಂದ ಈಗ ನೀನು ನಿನ್ನ ಮಗನನ್ನು ಕರೆ. ನನ್ನ ಮಕ್ಕಳಾದ ಸರ್ವಶ್ರೇಷ್ಠರೆಲ್ಲರೂ ಪಾತಾಳಲೋಕಕ್ಕೆ ಹೋಗಿ ಅಲ್ಲಿಯ ಸುಂದರವಾದ ತಾಣಗಳನ್ನು ವೈಭವಗಳನ್ನು ನೋಡಿ ಬರಬೇಕೆಂದು ಇಚ್ಛೆ ಪಡೆದಿದ್ದಾರೆ. ಅವರನ್ನೆಲ್ಲ ಗರುಡ ಕರೆದುಕೊಂಡು ಹೋಗಿ ಪಾತಾಳ ಲೋಕ ವಿಹಾರವನ್ನು ಮಾಡಿಸಿಕೊಂಡು ಬರಲಿ.'' ಎಂದು ಹೇಳಿದಳು.

ಆಗ ವಿನತೆಯು ಗರುಡನಿಗೆ ಸರ್ಪಕುಲದ ಈ ಬಯಕೆಯನ್ನು ತಿಳಿಸಿದಳು. ಅದನ್ನು ಪೂರ್ಣಮಾಡು ಎಂದು ಹೇಳಿದಳು. ಅತ್ಯಂತ ವಿನೀತನಾದ ಆ ವಿನತಾ ಪುತ್ರನು ತಾಯಿಯ ಅಪ್ಪಣೆಯಂತೆ ಹಾವುಗಳನ್ನೆಲ್ಲ ಪಾತಾಳಲೋಕಕ್ಕೆ ಕರೆದುಕೊಂಡು ಹೋದನು. ಆ ಅಧೋ ಲೋಕದಲ್ಲಿ ಆ ಹಾವುಗಳೆಲ್ಲವೂ ಹಾರಾಡಿ, ತಿರುಗಾಡಿ, ಸ್ವೈರ ವಿಹಾರವನ್ನು ಮಾಡಿ ಸಂತೋಷ ದಿಂದ ನಕ್ಕು ನಲಿನಾಡಿದರು. ಅನಂತರ ಆ ಪಾತಾಳ ಲೋಕ ಸಂದರ್ಶನ ಸ್ವೈರ ಸಂಚಾರ ಮುಗಿದ ಬಳಿಕ ಮತ್ತೆ ಮರಳಿ ಭೂಲೋಕಕ್ಕೆ ಕರೆ ತಂದನು ಗರುಡ ಆ ಹಾವಿನ ಮರಿಗಳನ್ನು. ಅನಂತರ ಆ ಸರ್ಪಗಳಿಗೆಲ್ಲ ಸೂರ್ಯಲೋಕ ಸಂದರ್ಶನದ ಕುತೂಹಲವುಂಟಾಯಿತು. ಅವರೆಲ್ಲರೂ ಗರುಡನಿಗೆ ವಿನತಾದೇವಿಯ ಮುಖಾಂತರವಾಗಿ ರವಿಲೋಕಕ್ಕೆ ಕರೆದು ಕೊಂಡು ಹೋಗಬೇಕೆಂದು ಹೇಳಿದರು. ಆಗ ಗರುಡನು ನಿರ್ವಾಹವಿಲ್ಲದೇ ಅವರ ಆಜ್ಞೆಯನ್ನು ಒಪ್ಪಿಕೊಂಡ. ಸರ್ಪಗಳೆಲ್ಲವೂ ಉತ್ಸಾಹದಿಂದ ಗರುಡನ ಹೆಗಲಮೇಲೆ ಸವಾರಿ ಮಾಡಿದವು. ಆಗ ಗರುಡನು ಗಗನಕ್ಕೆ ಹಾರಿದ. ಮೇಲೆಮೇಲೆ ಏರಿದ. ಮೆಲ್ಲಮೆಲ್ಲನೆ ಸೂರ್ಯ ಮಂಡಲದ ಸಮೀಪಕ್ಕೆ ಸಾಗಿದ ಹಾವುಗಳೆಲ್ಲವೂ ಗರುಡನಿಗೆ ಮೇಲೆ ಕುಳಿತು ಆಜ್ಞೆ ಮಾಡುತ್ತಲಿದ್ದವು. ''ಗರುಡ ಬೇಗ ಬೇಗ ನಡೆ. ನಮಗೆ ಸೂರ್ಯ ನಾರಾಯಣನನ್ನು ನೋಡಬೇಕಾಗಿದೆ. ನೀನು ಹೀಗೆ ಮಂದ ಮಂದವಾಗಿ ಮೆಲ್ಲಮೆಲ್ಲನೆ ಹಾರುತ್ತ ನಡೆದರೆ ನಾವು ಆ ರವಿಮಂಡಲವನ್ನು ಮುಟ್ಟುವುದೆಂತು? ಆದುದರಿಂದ ಬೇಗನೆ ಮೇಲೆವಿರು. ವೇಗವನ್ನು ಅಧಿಕಗೊಳಿಸು. ನಾವು ಬೇಗ ಸೂರ್ಯಲೋಕದ ಸಂದರ್ಶನವನ್ನು ಮಾಡಿ ಕೃತಾರ್ಥರಾಗುತ್ತೇವೆ.'' ಎಂದು ಗರುಡನಿಗೆ ಅವಸರ ಪಡಿಸಿದವು. ಆಗ ಗರುಡನು ಅವರ ಅಪ್ಪಣೆಯಂತೆ ಅತ್ಯಂತ ವೇಗದಿಂದ ಮೇಲೆ ಮೇಲೆ ಏರಿದ. ಸೂರ್ಯ ಮಂಡಲ ಸಮೀಪಕ್ಕೆ ಹೋದ. ಮೇಲೆ ಮೇಲೆ ಹೋದಂತೆ ಸೂರ್ಯನ ತೇಜಸ್ಸಿನಿಂದ ಹಾವುಗಳೆಲ್ಲವೂ ಬೇಯತೊಡಗಿದವು. ರವಿ ಮಂಡಲದ ತಾಪವನ್ನು ಆ ಸರ್ಪಗಳಿಗೆ ತಡೆದು ಕೊಳ್ಳಲಿಕ್ಕೆ ಆಗಲಿಲ್ಲ. ಅತ್ಯಂತ ಉಲ್ಬಣವಾದ ಆ ದಿವಾಕರನ ದಿವ್ಯ ಜ್ಯೋತಿಯ ದಹನ ದೀಧಿತಿಯಿಂದ ಹಾವುಗಳೆಲ್ಲ ಹೌಹಾರಿದವು. ಹುರುಪಳಿಸಿ ಹೋದವು. ಗರುಡನನ್ನು ಬೇಡಿಕೊಂಡವು ''ಗರುಡ, ಸಾಕಿನ್ನು ಈ ಗಗನಾಂಗಣದ ಉಡ್ಡಾಣ. ಈ ಸೂರ್ಯನ ಪ್ರಖರ ಕಿರಣಗಳನ್ನು ನಮ್ಮಿಂದ ಸಹಿಸಲಿಕ್ಕೆ ಆಗುವುದಿಲ್ಲ. ಭೂಲೋಕಕ್ಕೆ ಬೇಗ ಹಿಂತಿರುಗು. ನಿನಗೆ ನಮ್ಮ ಸಾಷ್ಟಾಂಗನಮಸ್ಕಾರ, ಬೇಗನೆ ಕೆಳಗೆ ಇಳಿ.'' ಎಂದು ಬೇಡಿಕೊಂಡವು. ಅದಕ್ಕೆ ಗರುಡನು ಗಡುಸಾಗಿ ಗರ್ಜಿಸಿದ. ನೀವು ದಾಸರಾದ ನಮಗೆ ದಣಿಗಳಷ್ಟೆ! ನನಗೆ ಮೊದಲು ತಾಯಿ ಮಕ್ಕಳು ಕೂಡಿ 'ಸೂರ್ಯಲೋಕವನ್ನು ತೋರಿಸು' ಎಂದು ಅಪ್ಪಣೆ ಮಾಡಿದ್ದೀರಷ್ಟೇ! ಅದರಂತೆ ನಾನು ತಲೆಯ ಮೇಲೆ ನಿಮ್ಮ ಆಜ್ಞೆಯನ್ನೂ, ಹೆಗಲ ಮೇಲೆ ನಿಮ್ಮನ್ನೂ ಹೊತ್ತುಕೊಂಡು ಗಗನಾಂಗಣದಲ್ಲಿ ಏರುತ್ತಲಿದ್ದೇನೆ. ನಿಮ್ಮ ಅಪೇಕ್ಷೆಯಂತೆ ಮತ್ತು

ಆದೇಶದಂತೆ ನಿಮಗೆ ಸೂರ್ಯದರ್ಶನ ಮಾಡಿಸುತ್ತೇನೆ' ಎಂದು ಹೇಳಿ ಮತ್ತೂ ಮೇಲೆ ಮುಗಿಲಿನಮೇಲೆ ಸೂರ್ಯನಿಗೆ ಎದುರಾಗಿ ಏರಿದರು.

ಸೂರ್ಯನ ತಾಪದಿಂದ ಅನೇಕ ಸರ್ಪಗಳ ಹೆಡೆಗಳು ಸುಟ್ಟವು. ಮೈಯ ಚರ್ಮಗಳು ಬೆಂದು ಹೋದವು. ಬಹಳಷ್ಟು ಹಾವುಗಳು ಮೈಸುಟ್ಟು ಜೀರ್ಣ ಎಂಬ ದ್ವೀಪದಲ್ಲಿ ಬಿದ್ದವು. ಸಾವಿರಾರು ಹಾವುಗಳು ಮೈಸುಟ್ಟು ಕರಕಾಗಿ ನೆಲಕ್ಕೆ ಬಿದ್ದು ಹೊರಳಾಡ ತೊಡಗಿದವು. ಅವುಗಳ ಆರ್ತನಾದ ದುಃಖದ ಚೀತ್ಕಾರಗಳನ್ನು ಕೇಳಿ ತಾಯಿಯಾದ ಕದ್ರೂವು ಸಂಕಟಪಟ್ಟು ತನ್ನ ದಾಸಿಯಾದ ವಿನತೆಯನ್ನು ಕುರಿತು ಹೇಳಿದಳು. ''ತಂಗೀ, ನಿನ್ನ ಮಗನು ದುರ್ಬುದ್ಧಿಯಿಂದ ನನ್ನ ಮಕ್ಕಳನ್ನೆಲ್ಲ ಸೂರ್ಯತೇಜಸ್ಸಿಗೆ ಬಲಿಕೊಡುತ್ತಲಿದ್ದಾನೆ. ಬೇಗ ಅವನನ್ನು ಕೆಳಗೆಕರೆ. ನನ್ನ ಮಕ್ಕಳೆಲ್ಲವೂ ಸೂರ್ಯನಕಿರಣಗಳ ಕಾವಿನಿಂದ ಹುರಪಳಿಸಿ ಹೋಗುತ್ತಲಿವೆ. ಬೆಂಕಿಯಲ್ಲಿ ಬಿದ್ದಂತೆ ಎಲ್ಲೆಲ್ಲಿಯೋ ಬಿದ್ದು ಅಳುತ್ತಾ ಹೊರಳಾಡುತ್ತಲಿವೆ. ಬೇಗ ನಿನ್ನ ಮಗನನ್ನು ತಿರುಗಿಬರಲಿಕ್ಕೆ ಹೇಳು.'' ಎಂದು ಬಿನ್ನವಿಸಿದಳು.

ಅವಳ ಮಾತಿನಂತೆ ವಿನತೆಯು ಗರುಡನನ್ನು ಬೇಗ ಮರಳಿಬಾ ಎಂದು ಹೇಳಿ ಕೆಳಗೆ ಕರೆಸಿಕೊಂಡಳು. ತಾಯಿಯ ಅಪ್ಪಣೆಯಂತೆ ಗರುಡನು ಕೆಳಗೆ ಇಳಿದು ಬಂದು ಕೈ ಮುಗಿದು ಕೇಳಿದ. ''ತಾಯಿ, ನಾನು ಏನು ಮಾಡಲಿ?'' ಆಗ ವಿನತೆಯು ''ಪುತ್ರ, ನೀವುಹಾವುಗಳನ್ನೆಲ್ಲ ಹೊತ್ತು ಸೂರ್ಯಲೋಕದ ಸಮೀಪಕ್ಕೆ ಏರಿ. ಆ ಸರ್ಪಗಳಿಗೆಲ್ಲ ಬಿಸಿ ತಾಕಿಸಿ ಅವು ಕಸಿವಿಸಿಕೊಂಡು ನೆಲಕ್ಕೆ ಕುಸಿಯುವಂತೆ ಮಾಡಿದ್ದು ತಪ್ಪು. ಅವರು ನಮಗೆ ಒಡೆಯರು, ಅವರಿಗೆ ಅವರ ಮಾತಿಗೆ ವ್ಯತಿರಿಕ್ತವಾಗಿ ನಾವು ನಡೆಯುವುದು ನ್ಯಾಯವಲ್ಲ. ವೈರಿಗಳಿಗೂ ಕೂಡ ನಾವು ಅನಿಷ್ಟವಾಗುವಂತೆ ನಡೆದು ಕೊಳ್ಳಬಾರದು. ಚಂದ್ರನು ವೇದಶಾಸ್ತ್ರ ಪಂಡಿತನ ಮನೆಯನ್ನು ಬೆಳಗಿದಂತೆ ಚಂಡಾಲನ ಗುಡಿಸಲ ಮೇಲೆಯೂ ತನ್ನ ಚಂದ್ರಿಕೆಯ ಕಾಂತಿಯನ್ನು ಚಲ್ಲುವನಷ್ಟೆ? ಮೋಸದಿಂದ ಒಬ್ಬರಿಗೆ ಅನಿಷ್ಟವನ್ನು ಮಾಡಿದವರು ಪುರುಷಾಧಮರು. ಈಗ ನೀನು ಆ ಹಾವುಗಳೆಲ್ಲ, ಬಿಸಿಲಿನ ಬೇಗೆಯಿಂದ ಬಳಲುವಂತೆ ಹಾಗೂ ದುಃಖಾಗ್ನಿಯಲ್ಲಿ ಬೇಯುವಂತೆ ಮಾಡಿರುವೆ. ಆದರಿಂದ ಅವರು ಈಗ ಬಹಳ ಕಾಯಕ್ಲೇಶ ವನ್ನು ಪಡುವಂತಾಗಿದೆ. ಅವರು ಕೂಡಲೇ ಶಾಂತರಾಗುವಂತೆ ತಮ್ಮ ಮೊದಲಿನ ಸ್ವಾಸ್ಥ್ಯವನ್ನು ಪಡೆಯುವಂತೆ ಏನಾದರೂ ಉಪಾಯ ಮಾಡು'' ಎಂದು ಹೇಳಿದಳು.

ಆಗ ಗರುಡನು ತಾಯಿಗೆ ಕೈಮುಗಿದು ''ಅಮ್ಮ, ಇದರಲ್ಲಿ ನನ್ನದು ಏನು ತಪ್ಪಿದೆ! ನಾನು ಹೇಳಿ ಕೇಳಿ ಹಾವುಗಳ ದಾಸ. ಒಡೆಯನ ಅಪ್ಪಣೆಯನ್ನು ಪಾಲಿಸುವುದಷ್ಟೆ ದಾಸನ ಕರ್ತವ್ಯ. ಅವರು ನನ್ನ ಹೆಗಲ ಮೇಲೆ ಏರಿ 'ಗಗನಕ್ಕೆ ಹಾರು' ಎಂದರು ಹಾರಿದೆ. ''ಸೂರ್ಯ ಮಂಡಲದ ದರ್ಶನ ಮಾಡಿಸು'' ಎಂದರು ಅದನ್ನೂ ಮಾಡಿಸಿದೆ. ''ಹಾರಾಟ ಸಾಕು, ಇನ್ನು ಕೆಳಗೆ ಇಳಿ'' ಎಂದರು. ನಾನು ಸರ್‍ರನೆ ಕೆಳಗೆ ಇಳಿದೆ. ಅವರು ಸೂರ್ಯಮಂಡಲದ ಸಮೀಪಕ್ಕೆ ಹೋದಾಗ ಅದರ ಉಷ್ಣತೆಯ ಅತಿಶಯದಿಂದ ಬೆಂದು ಹೋದರು. ನಾನು ಕೆಳಗೆ ಇಳಿಯುವಷ್ಟರಲ್ಲಿ ಅವರ ದೇಹವು ಅರ್ಧಮರ್ಧ ಸುಟ್ಟು ಹೋದಂತಾಯಿತು. ಈಗ ಅವರು ನನಗೆ ಏನು ಮಾಡು ಎನ್ನುವರೋ ಅದನ್ನು ಮಾಡಲು ಸಿದ್ಧನಿದ್ದೇನೆ.'' ಎಂದು ವಿಜ್ಞಾಪಿಸಿದನು.

ವಿನತೆಯು ಮಗನ ಮಾತನ್ನುಕೇಳಿ ಕದ್ರುವನ್ನೇ ವಿಚಾರಿಸಿದಳು. ''ಅಕ್ಕಾ, ಸಂತಪ್ತ ರಾದ ನಿನ್ನ ಮಕ್ಕಳಿಗೆ ಏನು ಮಾಡಿದರೆ ಶಾಂತಿ ಉಂಟಾಗುವದು? ಅವರ ಅರ್ಧ ದಗ್ಧವಾದ

ದೇಹಗಳಿಗೆ ಏನು ಮಾಡಿದರೆ ಶಾಂತಿ ಸುಖ ಉಂಟಾಗುವುದು? ಅವರೆಲ್ಲರ ಆ ಸುಟ್ಟ ಗಾಯ ಮಾಯಲು ಉಪಾಯವೇನು?'' ಎಂದು.

ಆಗ ಕದ್ರುವು ತನ್ನ ಮಕ್ಕಳನ್ನು ವಿಚಾರಿಸಿದಳು. ''ಅಪ್ಪಾ, ನಿಮಗೆ ಏನಾದರೆ ಶಾಂತಿ ಉಂಟಾಗುವುದು? ಏನು ಮಾಡಿದರೆ ಸಂತಪ್ತವಾದ ನಿಮ್ಮ ದೇಹಕ್ಕೆ ತಂಪು. ತಣಿವು, ತೃಪ್ತಿ ಆಗುವುದು? ಹೇಳಿರಿ. ಈ ಗರುಡನಿಂದ ಅದನ್ನು ಮಾಡಿಸುತ್ತೇನೆ.'' ಆಗ ಹಾವುಗಳಲ್ಲಿ ಹಿರಿಯರಾದ ಮುದಿ ಹಾವುಗಳೆಲ್ಲವೂ ಕೂಡಿ ವಿಚಾರಿಸಿ ಹೇಳಿದವು. ''ಅಮ್ಮಾ, ಪಾತಾಳದಲ್ಲಿರುವ ಗಂಗೆಯ ನೀರನ್ನು ತಂದು ನಮ್ಮ ಮೇಲೆ ಗರುಡನು ಚಿಮುಕಿಸಿದರೆ ಶಾಂತಿ ಉಂಟಾಗುವುದು. ಮತ್ತು ದೇವೇಂದ್ರನು ನಮ್ಮ ಮೇಲೆ ದೃಷ್ಟಿಯನ್ನು ಮಾಡಿದರೆ ಅದರಿಂದಲೂ ನಮ್ಮ ದೇಹದ ತಾಪ, ಮನಸ್ಸಿನ ಸಂತಾಪ ಎರಡೂ ಶಾಂತವಾಗುವವು.

ಗರುಡನು ಇಷ್ಟು ಕೆಲಸ ಮಾಡಿದರೆ ಸಾಕು ಸೂರ್ಯಮಂಡಲವನ್ನು ಸಮೀಪಿಸುವ ನಮ್ಮ ಹುಚ್ಚುಹಂಬಲದಿಂದ ನಾವೆಲ್ಲರೂ ಈ ದೇಹದಾಹವನ್ನು ಅನುಭವಿಸು ವಂತಾಯಿತು. ಕೈಯಲ್ಲಿ ಸಮರ್ಥನಾದ ದಾಸ ಸಿಕ್ಕಿದ್ದಾನೆ ಎಂದು ಕಂಡ ಕಂಡಂತೆ ಅವನನ್ನು ದುಡಿಸಿಕೊಳ್ಳಬೇಕೆಂಬ ನಮ್ಮ ದುರ್ಬುದ್ಧಿಗೆ ಪ್ರಾಯಶ್ಚಿತ್ತ ದೊರೆತಂತಾಯಿತು. ಈಗ ಪಾತಾಳ ಲೋಕದಿಂದ ಗಂಗೆಯ ಸಂಜೀವಿನಿಯ ನೀರು ಮತ್ತು ಸ್ವರ್ಗಲೋಕದ ಆಕಾಶ ಗಂಗೆಯ ನೀರು ಎರಡನ್ನು ತಂದು ನಮ್ಮ ಮೇಲೆ ಚಿಮುಕಿಸಿದರೆ ನಮ್ಮೆಲ್ಲರ ಈ ದಗ್ಧ ದೇಹಗಳ ಪುನರ್ಜೀವನವಾಗುವದು. ಸೂರ್ಯ ಜ್ವಾಲೆಗೆ ಬೆಂದು ಕರಕಾಗಿ ಹೋಗಿರುವ ಸರ್ಪಶರೀರಗಳ ಸಂಜೀವನವಾಗುವುದು. ನಮಗೆ ಸೂರ್ಯರಶ್ಮಿಯಿಂದ ಉಂಟಾದ ಅಕಾಲ ಮುಪ್ಪುಮರಣಗಳು ತಪ್ಪಿ ನಮಗೆಲ್ಲ ಹೊಸಜೀವನ ಪ್ರಾರಂಭವಾಗುವದು. ಆದುದರಿಂದ ಬೇಗನೆ ಈ ಗರುಡನು ಭೂಮ್ಯಾಕಾಶಗಳಿಂದ ಉಭಯ ಲೋಕದ ಗಂಗಾ ಜಲವನ್ನು ತಂದು ಆ ಅಮೃತರಸವನ್ನು ನಮ್ಮ ಮೇಲೆ ಪ್ರೋಕ್ಷಿಸಲಿ' ಎಂದು ಹೇಳಿದವು.

ಆಗ ಗರುಡನು ತಾಯಿಯ ಆಜ್ಞೆಯಂತೆ ತಕ್ಷಣದಲ್ಲಿಯೇ ರಸಾತಳಕ್ಕೆ ಇಳಿದನು. ಆ ಪಾತಾಳ ಲೋಕದಿಂದ ಪ್ರವಾಹವೇ ಪುಟಿದು ಗೌತಮೀ ತೀರದಲ್ಲಿ ಹರಿಯುವಂತೆ ಮಾಡಿದನು. ದೇಹದಾಹದಿಂದ ಚಡಪಡಿಸುತ್ತ ಸೂಧೀಧಿತಿಯ, ದೀಪ್ತಿಯಿಂದ ದಂದಹ್ಯ ಮಾನವಾಗತಕ್ಕ ಆ ಸರ್ಪಗಳ ವೃಂದದ ಮೇಲೆ ಗಂಗೆ ಬೀಳುವಂತೆ ಮಾಡಿದ. ಬಳಿಕ ದೇವೇಂದ್ರನ ಬಳಿಗೆ ಹೋಗಿ ಅವನಿಗೆ ಬಿನ್ನಹವನ್ನು ಮಾಡಿಕೊಂಡು ಮೇಘಗಳ ಮುಖಾಂತರ ಅಮೃತ ವೃಷ್ಟಿಯನ್ನು ಆಕಾಶ ಗಂಗಾಜಲದಿಂದ ಮಾಡುವಂತೆ ಕೇಳಿಕೊಂಡನು, ಗರುಡನು ಎರಡು ಲೋಕಗಳ ಗಂಗಾ ಜಲವನ್ನು ತಂದು ಆ ಹಾವುಗಳ ಹಿಂಡಿನ ಮೇಲೆ ಚಿಮುಕಿಸಿದ ಸ್ಥಳವು ಈ ಗೌತಮೀ ತೀರದಲ್ಲಿ ಆಗಿದ್ದಿತು, ಉಭಯ ಲೋಕದ ಗಂಗಾಜಲವು ಹಾವುಗಳ ಪಾಲಿಗೆ ಅಮೃತವಾಹಿನಿಯಾಗಿ ಈ ಗೌತಮೀ ದಕ್ಷಿಣ ತೀರದಲ್ಲಿ ಹರಿಯುವುದು. ಅದರಿಂದ ಎಲ್ಲ ಹಾವುಗಳ ದೇಹದ ದಾಹವೆಲ್ಲವೂ ಅಳಿದು ಅವುಗಳ ಮಿದುವಾದ ಶರೀರವು ಮತ್ತೇ ಮೊದಲಿನಂತೆ ನಿರೋಗವಾಗಿ, ಉರಿ ಸಂಕಟಯೆಲ್ಲವೂ ಶಾಂತವಾಗಿ, ಮತ್ತೆ ಮೊದಲಿನ ಆರೋಗ್ಯಪೂರ್ಣವಾದ ಚಾಕಚಕ್ಯತೆಯಿಂದ ಮಿಂಚಿನಂತೆ ಹೊಳೆಯತೊಡಗಿತು. ಆ ಕಾಲದಲ್ಲಿ ಒದಗಿದ ಹಾವುಗಳ ಮುಪ್ಪು ಕಳೆದು ಮೊದಲಿನ ಆರೋಗ್ಯ ಗೆಲವು, ನಲಿವು, ಶಕ್ತಿ, ತಾರುಣ್ಯ ಎಲ್ಲವೂ ಯಥಾಪೂರ್ವಕವಾಗಿ ಅವುಗಳಿಗೆ

ಪ್ರಾಪ್ತವಾದವು, ಸ್ವರ್ಗಪಾತಾಳ ಲೋಕದಿಂದ ಉಕ್ಕಿ ಮಿಕ್ಕಿಬಂದ, ಆ ಉಭಯ ಲೋಕದ ಗಂಗೆಯ ಸಲಿಲವು ನದಿಯಾಗಿ ಹರಿದು ವಂಜರ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಅದು ಈ ಗೌತಮೀಯೊಡನೆ ಸಂಗಮಿಸಿ ವಂಜರಾಸಂಗಮಾ ಎಂಬ ಪುಣ್ಯತೀರ್ಥವು ಏರ್ಪಟ್ಟಿತು. ಈ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ಜನರಿಗೆ ಮುಪ್ಪು, ದಾರಿದ್ರ್ಯ, ದುಃಖ, ದೈನ್ಯ, ಚಿಂತೆ, ಸಂತಾಪ ಎಲ್ಲವೂ ಆ ಹಾವುಗಳಿಗೆ ಆದಂತೆ ತಕ್ಷಣದಲ್ಲಿ ದೂರವಾಗುವವು. ಇದರ ಸ್ಮರಣೆಯಿಂದ ಪಾಪರಾಶಿ ನಾಶವಾಗುವುದು.

## ದೇವಾಗಮ ತೀರ್ಥ

**ಬ್ರಹ್ಮ:-** ನಾರದಾ, ಸರ್ವಇಷ್ಟಾರ್ಥಗಳನ್ನು ಪೂರ್ಣಮಾಡುವ ದೇವಾಗಮ ತೀರ್ಥದ ಮಹಿಮೆಯನ್ನು ಹೇಳುತ್ತೇನೆ, ಕೇಳು.

ಪ್ರಾಚೀನ ಕಾಲದಲ್ಲಿ, ದೇವತೆಗಳಿಗೂ, ದೈತ್ಯರಿಗೂ ಘನಘೋರವಾದ ಸಂಗ್ರಾಮ ನಡೆಯಿತು. ದೇವ ಪಕ್ಷದಲ್ಲಿ ಅಗ್ನಿ, ಇಂದ್ರ, ವರುಣ, ವಿಶ್ವಕರ್ಮ, ಸೂರ್ಯ, ಅಶ್ವಿನಿ ದೇವತೆಗಳು, ಅಷ್ಟದಿಕ್ಪಾಲಕರು, ದ್ವಾದಶ ಆದಿತ್ಯರು, ನಲವತ್ತೊಂಬತ್ತು ಮರುದ್ಗಣಗಳು, ಮೊದಲಾದ ಸುರಗಣಾಧೀಶರೆಲ್ಲರೂ ಹೋರಾಟದಲ್ಲಿ ಪ್ರಮುಖ ಭಾಗವಹಿಸಿದ್ದರು. ದೈತ್ಯಗಣದಲ್ಲಿ ವೃತ್ರಾಸುರ, ಬಲಿಚಕ್ರವರ್ತಿ, ಸಮೇಚಿ, ಶಂಬರ, ಮಯ, ಅಹಿ, ತ್ವಾಷ್ಟ್ರಿ ಮೊದಲಾದವರು ಯುದ್ಧಾಸಕ್ತರಾದ ದಾನವ ಧುರೀಣರಾಗಿದ್ದರು. ದೈತ್ಯರೆಲ್ಲರೂ ತ್ರಿಕೂಟಾಚಲದ ಮಾರ್ಗವಾಗಿ ಮಲಯ ಪರ್ವತದಲ್ಲಿ ತಂಗಿ ದಕ್ಷಿಣ ಸಮುದ್ರ ತೀರಕ್ಕೆ ಬಂದರು. ದೇವತೆಗಳು ಗೌತಮೀತೀರದಲ್ಲಿ ಎಲ್ಲರೂ ಬಂದು ಸೇರಿದರು. ಉಭಯತರೂ ಯುದ್ಧೋತ್ಸಾಹದಿಂದ ಹೊರಟು ನಿಂತಾಗ, ದೇವತೆಗಳೆ ಲ್ಲರೂ ಮೊದಲು ಗೌತಮೀ ತೀರದಲ್ಲಿ ನೆಲಿಸಿದ ಮಹೇಶ್ವರನ್ನು ಸ್ತೋತ್ರ ಮಾಡಿದರು ಪರಮೇಶ್ವರನು ಅವರಿಗೆ, ವೃದ್ಧ ಗಂಗೆಯೆಂದು ಹೆಸರಾದ ಗೋದಾವರಿಯನ್ನು ಭಕ್ತಿಯಿಂದ ಪೂಜಿಸಿರಿ. ಆದರಿಂದ ನಿಮಗೆ ಯುದ್ಧದಲ್ಲಿ ವಿಜಯವು ಸುನಿಶ್ಚಿತೆ ಎಂದು ಆಕಾಶವಾಣಿ ಮೂಲಕ ಪರಮೇಶ್ವರನ ಸಂದೇಶವು ಬಂದು ತಲುಪಿತು. ''ಗೌತಮೀ ತೀರದಲ್ಲಿ ನಿಂತು ಹರಿಯನ್ನು ಹರನನ್ನು ಆರಾಧಿಸಿದವನಿಗೆ ವಿಜಯ-ಲಕ್ಷ್ಮಿಯು ತಾನಾಗಿ ವಲಿದು ಬರುವುದು ಸುನಿಶ್ಚಿತ'' ಹೀಗೆ ಮತ್ತೆ ಮತ್ತೆ ಆಕಾಶವಾಣಿಯ ಸಂದೇಶವನ್ನು ಕೇಳಿ ದೇವತೆಗಳು ಶಿವನನ್ನೂ ಕೇಶವನನ್ನು ಭಕ್ತಿಯಿಂದ ಪೂಜಿಸಿದರು. ಆ ಪೂಜೆ ಹಾಗೂ ಭಕ್ತಿಯುಕ್ತವಾದ ಆರಾಧನೆಯಿಂದ ಪರಮ ಪ್ರೀತರಾದ ಲಕ್ಷ್ಮೀಶ, ಗೌರೀಶರು ಆ ಸುರ ವೃಂದದ ಮೇಲೆ ಪೂರ್ಣ ಅನುಗ್ರಹವನ್ನು ಮಾಡಿದರು. ಹೀಗೆ ದೇವೋತ್ತಮರ ಪರಮ ಪ್ರಸಾದ ಪೂರ್ಣ ಅನುಗ್ರಹವನ್ನು ಪಡೆದು ದೇವತೆಗಳು ದೈತ್ಯರೊಡನೆ ಕಲಿತನದಿಂದ ಕಾದಿದರು, ಹರಿಹರರ ಪರಮ ಪ್ರಸಾದದ ಬೆಂಬಲದಿಂದ ಬಲಸಂಪನ್ನರಾದ ದೇವತೆಗಳ ಎದುರು ನಿಲ್ಲಲಾರದೆ, ಅಸುರರೆಲ್ಲರೂ ಸೋತು ಓಡಿಹೋದರು. ಇದ್ದವರೆಲ್ಲರೂ ರಣಾಂಗಣದಲ್ಲಿ ಹತಪತಿರರಾದರು ಅನಂತರ ವೈರಿಗಳಾದ ಅಸುರರನ್ನೆಲ್ಲ ಸೋಲಿಸಿ ಸಂಹರಿಸಿ ವಿಜಯ ಶಾಲಿಗಳಾಗಿ ಸುರವೃಂದ ದವರೆಲ್ಲ ಜಯ ಭೇರಿಯನ್ನು ಬಾರಿಸುತ್ತ ಸ್ವರ್ಗಕ್ಕೆ ತೆರಳಿದರು. ದೇವತೆಗಳೆಲ್ಲರೂ ಬಂದು ಇಳಿದ ಗೌತಮೀ ತೀರದ ಆ ಸ್ಥಳವು ದೇವಾಗಮ ತೀರ್ಥ ಎಂದು ಹೆಸರು ಬಂದಿದೆ.

## ಕುಶತರ್ಪಣತೀರ್ಥ

**ಬ್ರಹ್ಮ:-** ನಾರದ, ಸೃಷ್ಟಿಯ ಆದಿಕಾಲದಲ್ಲಿ ಪರಮಾತ್ಮನು ಅವ್ಯಕ್ತ ಸ್ವರೂಪನಾಗಿದ್ದನು ಅವನು ಪ್ರಕೃತಿ ತತ್ವಕ್ಕೆ ಅಭಿಮಾನಿಯಾದ ಲಕ್ಷ್ಮೀದೇವಿಯೊಂದಿಗೆ ಒಡಗೂಡಿ ವಿಹರಿಸಿದಾಗ ಮಹತತ್ವವು ಹುಟ್ಟಿತು. ಆ ಮಹಾತತ್ವವು ಭಗವಂತನ ಚೊಚ್ಚಲ ಮಗನಾದ ನನಗೆ ಶರೀರಭೂತವಾಯಿತು. ನನ್ನಿಂದ ಪೃಥ್ವಿ, ವಾಯು, ಆಕಾಶ, ತೇಜಸ್ಸು, ಜಲ ಮುಂತಾದ ಪಂಚ ಮಹಾಭೂತಗಳು ತನ್ಮಾತ್ರೇಗಳೂ ಹುಟ್ಟಿದವು. ಆಗ ನನಗೆ ಮುಂದೆ ಏನು ಮಾಡಬೇಕೆಂದು ತೋಚಲಿಲ್ಲ. ತಪಸ್ಸನ್ನು ಮಾಡು ಎಂದು ಅಶರೀರ ವಾಣಿಯ ಮೂಲಕ ನನಗೆ ಪರಮಾತ್ಮನ ಆದೇಶವಾಯಿತು. ಅದರಂತೆ ನಾನು ಬಹುಕಾಲದ ವರೆಗೆ ತಪಸ್ಸನ್ನು ಮಾಡಿದೆ. ಅನಂತರ ಆ ಪರಬ್ರಹ್ಮನೇ ಆಕಾಶವಾಣಿ ಮೂಲಕ "ಯಜ್ಞವನ್ನು ಮಾಡು" ಎಂದು ಅಪ್ಪಣೆ ಮಾಡಿದನು. ಆದರೆ ನನಗೆ ಆ ಯಜ್ಞವನ್ನು ಯಾವ ಸ್ಥಳದಲ್ಲಿ ಮಾಡಬೇಕು ಎಂದು ತಿಳಿಯಲಿಲ್ಲ. ನಾನು ಮತ್ತೆ ಪರಮಾತ್ಮನಲ್ಲಿ ಮೊರೆಯಿಟ್ಟೆ.

ನನ್ನ ಬಿನ್ನಹಕ್ಕೆ ಭಗವಂತ ಏನು ಉತ್ತರ ಕೊಡದಿದ್ದರೂ, ಅವನ ಪ್ರೇರಣೆಯಿಂದ ಓಂಕಾರ ವಾಕ್ಯಳೂ ಮಾತ್ರ ಸ್ವರೂಪಳೂ, ಆದ ಲಕ್ಷ್ಮೀದೇವಿಯು ನನ್ನನ್ನು ಕುರಿತು ಸ್ಪಷ್ಟವಾಗಿ ಹೇಳಿದಳು. "ಚತುರ್ಮುಖ, ಕರ್ಮಭೂಮಿಯಲ್ಲಿ ನೀನು ಯೋಗವನ್ನು ಮಾಡು. ಯಜ್ಞೇಶನೂ, ಯಜ್ಞಪುರುಷನೂ ಆದ ಶ್ರೀಹರಿಯೇ ನಿನಗೆ ಸ್ವಾಹಾ, ಸ್ವಧಾ, ಮಂತ್ರ, ಬ್ರಾಹ್ಮಣ, ಹವಿಸ್ಸು ಮುಂತಾದ ಎಲ್ಲಸಾಧನ ಸಲಕರಣೆಗಳ ಸ್ವರೂಪನಾಗಿ ನಿನಗೆ ಯಜ್ಞ ಫಲಪ್ರದಾತನಾಗುವನು. ಸುಮೇರು ಪರ್ವತದ ಹಾಗೂ ಹಿಮವತ್ಪರ್ವತದ ದಕ್ಷಿಣ ಭಾಗದ ಭೂಮಿಯನ್ನೂ ಮತ್ತು ವಿಂಧ್ಯಪರ್ವತ ಮತ್ತು ಸಹ್ಯಪರ್ವತಗಳ ದಕ್ಷಿಣ ಭಾಗದಲ್ಲಿರುವ ಭೂಮಿಯನ್ನೂ ಕರ್ಮಭೂಮಿ ಎಂದು ಹೇಳುವರು. ನೀನು ಅಲ್ಲಿ ಹೋಗಿ ಯಜ್ಞವನ್ನು ಮಾಡು. ಅದರಿಂದ ನಿನ್ನ ಇಷ್ಟಾರ್ಥ ಸಿದ್ಧಿಸಿ ಲೋಕೋದ್ಧಾರ ವಾಗುವುದು."

ನಾನು ಅದರಂತೆ, ಆಕಾಶವಾಣೀ, ಮುಖಾಂತರ ಭಗವಂತನು ಮತ್ತೂ ಲಕ್ಷ್ಮೀ ದೇವಿಯೂ ನಿರ್ದೇಶಿಸಿದ ಸ್ಥಳದಲ್ಲಿ ಯಜ್ಞಕ್ಕೋಸ್ಕರ ಸಂಕಲ್ಪ ಮಾಡಿದೆ. ವೇದೋಕ್ತವಾದ ವಿಧಿ ವಿಧಾನಗಳಿಂದ ಯಜ್ಞವನ್ನು ಪ್ರಾರಂಭ ಮಾಡಿದೆ. ಆಗ ನನ್ನ ಮುಖದಿಂದ ಇತಿಹಾಸ, ಪುರಾಣ, ಬೇರೆ ಬೇರೆ ಶಾಸ್ತ್ರಗಳು ಎಲ್ಲವೂ ಲೋಕಕ್ಷೇಮಕ್ಕಾಗಿ ಹೊರಬಿದ್ದು ಬಂದವು. ವೇದಗಳೂ ಕೂಡ ನನ್ನ ಸ್ಮರಣಪಥದಲ್ಲಿ ಬಂದು ಇಳಿದವು. ಆ ಕ್ಷಣದಲ್ಲಿಯೇ ನಾನು ಸಕಲ ವೇದಗಳ ಮರ್ಮವನ್ನು ಅರಿತೆ, ಗೂಢಾರ್ಥ, ಪರಮಾರ್ಥಗಳನ್ನೆಲ್ಲ ತಿಳಿದುಕೊಂಡೆ. ಅನಂತರ ಭಗವಂತನನ್ನು ಉದ್ದೇಶಿಸಿ ವೇದೋಕ್ತವಾದ ಪುರುಷ ಸೂಕ್ತವನ್ನು ಸ್ಮರಿಸಿ ಪಾರಾಯಣ ಮಾಡಿದೆ. ಮತ್ತು ಯಜ್ಞಕ್ಕೆ ಬೇಕಾದ ವೇದ ನಿರ್ದಿಷ್ಟವಾದ ಉಪಕರಣ ಗಳನ್ನೆಲ್ಲ ಸಜ್ಜುಗೊಳಿಸಿ ಯಜ್ಞ ಕಾರ್ಯವನ್ನು ಪ್ರಾರಂಭಿಸಿದೆ. ನಾನು ಆ ಯಜ್ಞ ದೀಕ್ಷೆ ಯನ್ನು ಸ್ವೀಕರಿಸಿದ ಸ್ಥಾನಕ್ಕೆ ಬ್ರಹ್ಮದೇಶ ಎಂದು ಹೆಸರು ಬಂದಿತು. ಹಾಗೂ ನಾನು ಯಾವ ಪರ್ವತ ದಲ್ಲಿ ದೇವರನ್ನು ಆರಾಧಿಸಿದ್ದೇನೋ ಆ ಪರ್ವತವು ಬ್ರಹ್ಮಗಿರಿ ಎಂದು ಪ್ರಸಿದ್ಧವಾಯಿತು.

ನಾರದಾ, ನನ್ನ ಪವಿತ್ರವಾದ ಯಜ್ಞವು ಆ ಬ್ರಹ್ಮಗಿರಿಯ ಸುತ್ತಲೂ ಇಪ್ಪತ್ತುನಾಲ್ಕು ಯೋಜನ ವಿಸ್ತಾರದಲ್ಲಿ ಹಬ್ಬಿಕೊಂಡಿತ್ತು. ಅದರ ನಟ್ಟನಡುವೆ ಯಜ್ಞ ವೇದಿಕೆಯನ್ನು ಸಿದ್ಧಪಡಿಸಿದೆ. ಆ ವೇದಿಕೆಯ ದಕ್ಷಿಣಭಾಗದಲ್ಲಿ, ಪ್ರಾಜಾಪತ್ಯ ಅಗ್ನಿಯನ್ನೂ, ಉಳಿದ

ಮೂರು ಧಿಗ್ಭಾಗಗಳಲ್ಲಿ ದಕ್ಷಿಣಾಗ್ನಿ, ಆಹವನೀಯ ಅಗ್ನಿಯನ್ನೂ ಸ್ಥಾಪಿಸಿದೆನು. ಪತ್ನಿಯಿಲ್ಲದೇ ಯಜ್ಞವನ್ನು ಮಾಡಿದರೆ ಫಲ ಸಿದ್ಧಿಸುವುದಿಲ್ಲ ಎಂದು ವೇದ ವಚನ ಇರುವುದರಿಂದ ನಾನು ನನ್ನ ಶರೀರವನ್ನು ಎರಡು ಭಾಗಗಳನ್ನಾಗಿ ಮಾಡಿದೆ. ಪೂರ್ವಾರ್ಧ ದಿಂದ ನನ್ನ ಪತ್ನಿ ಸರಸ್ವತಿ ಹುಟ್ಟಿದಳು. ಉತ್ತರಾರ್ಧದಿಂದ ಸ್ವಯಂ ನಾನೇ ಸ್ವಯಂಭೂ ಆಗಿ ಉದ್ಭವಿಸಿದೆ. ಅಂದಿನಿಂದ ಮಾನವರ ಶರೀರದ ಅರ್ಧ ಭಾಗವೇ ಧರ್ಮಪತ್ನಿ ಎಂದೂ ಸಿದ್ಧವಾಯಿತು. ಆ ಯಜ್ಞಕ್ಕಾಗಿ ನಾನು ವಸಂತ ಋತುವನ್ನು ಆಜ್ಯ (ತುಪ್ಪ)ವನ್ನಾಗಿಯೂ ಗ್ರೀಷ್ಮ ಋತುವನ್ನು ಸುಮಿಧೆಯನ್ನಾಗಿಯೂ, ಶರದೃತುವನ್ನು ಹವಿಸ್ಸನ್ನಾಗಿಯೂ, ವರ್ಷಋತು ವನ್ನು ದರ್ಭೆಯನ್ನಾಗಿಯೂ ಮಾಡಿಕೊಂಡೆ. ಏಳು ಛಂದಸ್ಸುಗಳೇ ಸಪ್ತಪರಿಧಿಗಳಾದವು. ಕಲಾಕಾಷ್ಠಾ, ನಿಮೇಷ ಮೊದಲಾದವುಗಳೆಲ್ಲವೂ ಸಮಿಧೆಪಾತ್ರೆ, ದರ್ಭಗಳಾಗಿ ಯಜ್ಞದ ಉಪಯೋಗಕ್ಕೆ ಬಂದವು. ಅನಾದಿಕಾಲವು ಯಜ್ಞಸ್ತಂಭವಾಯಿತು. ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೇ ಪಶುವನ್ನು ಕಟ್ಟುವ ಮೂರು ಹಗ್ಗಗಳಾದವು. ಸಾಕ್ಷಾತ್ ಪುರುಷನೇ ಯಜ್ಞಪಶು ಆದನು. ನಾನು ಅವನನ್ನು ಅಶರೀರವಾಣಿಯ ಆದೇಶದಂತೆ ಪುರುಷಸೂಕ್ತದಿಂದ ಸ್ತೋತ್ರ ಮಾಡಿದೆ. ಅನಂತರ ಆ ಪಶುವನ್ನು ಗುಣಪಾಶಗಳಿಂದ ಕಾಲ ಯೂಪಕ್ಕೆ ಕಟ್ಟಿ ಬರ್ಹಿಷಿನ್ನ ಮೇಲೆ ಪ್ರತಿಷ್ಠಿತವಾದ ಅದರ ಮೇಲೆ ಯಜ್ಞವಿಧಿಗೆ ಅನುಸಾರವಾಗಿ ಪ್ರೋಕ್ಷಣೆಯನ್ನು ಮಾಡಿದೆ.

ಇದೆಲ್ಲವು ಆದ ನಂತರ ಅದೇ ಸಮಯದಲ್ಲಿ ಆ ಯಜ್ಞಪುರುಷನ ಮುಖದಿಂದ ಬ್ರಾಹ್ಮಣರು, ಬಾಹುಗಳಿಂದ ಕ್ಷತ್ರಿಯರು ಮುಖದಿಂದ ಇಂದ್ರನು, ವಾಣಿಯಿಂದ ಅಗ್ನಿಯು. ಪ್ರಾಣದಿಂದ ವಾಯುವು, ಕಿವಿಯಿಂದ ದಿಕ್ಕುಗಳು ತಲೆಯಿಂದ ಸ್ವರ್ಗವು ಉತ್ಪನ್ನ ವಾದವು. ಅದೇ ಯಜ್ಞಪುರುಷನ ಮನಸ್ಸಿನಿಂದ ಚಂದ್ರ, ಕಣ್ಣಿನಿಂದ ಸೂರ್ಯ ನಾಭಿಯಿಂದ ಅಂತರಿಕ್ಷ, ತೊಡೆಗಳಿಂದ ವೈಶ್ಯರು, ಕಾಲುಗಳಿಂದ ಶೂದ್ರರು, ಮತ್ತು ಭೂಮಿಯು ಹುಟ್ಟಿದರು. ರೋಮಕೂಪಗಳಿಂದ ಋಷಿಗಳು, ತಲೆಯ ಕೂದಲು ಔಷಧಿಗಳು ಜನಿಸಿದವು. ಅದರಂತೆ ಉಗುರುಗಳಿಂದ ಗ್ರಾಮಗಳು, ಅರಣ್ಯಗಳು, ಪಶುಗಳು, ಹುಟ್ಟಿಬಂದವು. ಪಾಯು ಉಪಸ್ಥಗಳಿಂದ ಕ್ರಿಮಿಕೀಟ ಪಕ್ಷಿಗಳು ಜನಿಸಿದವು.

ಆಗ ಮತ್ತೆ ಆಕಾಶವಾಣಿಯಾಯಿತು. ''ಬ್ರಹ್ಮ, ಯಜ್ಞವೆಲ್ಲವು ಪೂರ್ಣವಾಯಿತು. ನಿನ್ನ ಅಪೇಕ್ಷೆಯಂತೆ ಸೃಷ್ಟಿಯೂ ಆಯಿತು. ಈಗ ನೀನು ಅಗ್ನಿಯಲ್ಲಿ ಯಜ್ಞ ಪಾತ್ರೆ ಮುಂತಾದವು ಗಳನ್ನು ಹೋಮಮಾಡಿ ಹಾಕು. ಯಜ್ಞಸ್ತಂಭವನ್ನೂ ಪ್ರಣೀತಾಪಾತ್ರೆಯನ್ನೂ, ದರ್ಭೆಯನ್ನು ವಿಸರ್ಜನೆ ಮಾಡು. ಋತ್ವಿಗ್‌ರೂಪ, ಯಜ್ಞರೂಪ, ಉದ್ದೇಶ, ಧ್ಯೇಯ, ಸ್ರುವ, ಪುರುಷ, ಪಾಶ ಮೊದಲಾದವುಗಳನ್ನೆಲ್ಲ ವಿಸರ್ಜನ ಮಾಡಿಬಿಡು.'' ಆಕಾಶವಾಣಿಯ ಈ ಅಪ್ಪಣೆಯನ್ನು ಕೇಳಿ ನಾನು ದಕ್ಷಿಣಾಗ್ನಿ, ಪ್ರಾಜಾಪತ್ಯಾಗ್ನಿ ಆಹವನೀಯ ಅಗ್ನಿ ಮುಂತಾದ ಕಡೆಗಳಲ್ಲಿ ಕ್ರಮವಾಗಿ ಹೋಮಮಾಡಿದೆ. ಪ್ರತಿಯೊಂದು ಹೋಮಕುಂಡದ ಸಮೀಪದಲ್ಲಿ ನಾನು ಕುಳಿತುಕೊಂಡು ಎಲ್ಲ ಹೋಮದ ಮಂತ್ರಗಳಲ್ಲಿಯೂ, ಹೋಮ ಹವನಾದಿ ವಿಧಿ ವಿಧಾನಗಳಲ್ಲಿಯೂ ಮುಖ್ಯವಾಗಿ ವಿಷ್ಣುವನ್ನೇ ಅನುಸಂಧಾನ ಮಾಡಿಕೊಂಡು ಅವನ ಉದ್ದೇಶದಿಂದಲೇ ಹೋಮ ಮಾಡುತ್ತಿದ್ದೆ.

ನನ್ನಿಂದ ಉಪಾಸ್ಯನಾದ ವಿಷ್ಣುವು ಜಗನ್ಮಯ, ಸರ್ವಲೋಕೈಕನಾಥ ಸರ್ವಕರ್ತ, ಪುರುಷನಾಮಕನಾದ ಆ ಭಗವಂತನೇ ಯಜ್ಞದ ಮುಖ್ಯ ದೇವತೆ. ''ಆಹವನೀಯಾಗ್ನಿಯಲ್ಲಿ

ಶುಕ್ಲರೂಪಧರನಾದ ವಿಷ್ಣುವು ದಕ್ಷಿಣಾಗ್ನಿಯಲ್ಲಿ ಶ್ಯಾಮರೂಪ ಧರನಾದ ವಿಷ್ಣುವು. ಗಾರ್ಹಪತ್ಯಾಗ್ನಿಯಲ್ಲಿ ಪೀತರೂಪ ಧರನಾದ ವಿಷ್ಣುವು ಇದ್ದನು. ಆ ಯಜ್ಞ ಪ್ರದೇಶದಲ್ಲಿ ಸರ್ವತ್ರಾಪಿ ಯಾವಾಗಲೂ ವಿಷ್ಣುವು ವ್ಯಾಪ್ತನಾಗಿಯೇ ಇದ್ದನು. ಸರ್ವದೇಶಗಳಲ್ಲಿಯೂ, ಸರ್ವಕಾಲಗಳಲ್ಲಿಯೂ, ಸರ್ವತ್ರಾಪಿ ಇರುವ ಏಕೈಕ ದೇವೋತ್ತಮ ಎಂದರೆ ಆ ವಿಷ್ಣುವೇ ಸರಿ. ಅವನನ್ನು ಬಿಟ್ಟು ಈ ಪ್ರಪಂಚದಲ್ಲಿ ಸ್ವತಂತ್ರವಾಗಿ ಯಾವ ವಸ್ತುವೂ ಇರುವುದಿಲ್ಲ'' ಹೀಗೆ ನುಡಿದು ನಾನು (ಬ್ರಹ್ಮ) ಮಂತ್ರದಿಂದ ಪಾತ್ರೆಯಲ್ಲಿರುವ ನೀರನ್ನು ಬಗ್ಗಿಸಿದೆನು. ಮುಂದೆ ಆ ನೀರು ಪ್ರಣೀತಾ ಎಂಬ ನದಿಯಾಯಿತು. ಅನಂತರ ನಾರದಾ ನನಗೆ ಆ ನದಿಯ ಮೇಲೆ ಪೂಜ್ಯತಾ ಬುದ್ಧಿ ಹುಟ್ಟಿತು. ಅನಂತರ ಆ ನೀರನ್ನು ದರ್ಭೆಯಿಂದ ಪ್ರೋಕ್ಷಿಸಿಕೊಂಡೆ. ಆಗ ಅತ್ತ ಇತ್ತ ಬಿದ್ದು ಚಲ್ಲಿದ ನೀರಿನ ಬಿಂದುಗಳೆಲ್ಲವೂ ತೀರ್ಥವಾದವು. ವಿಷ್ಣುವು ಕುಳಿತುಕೊಳ್ಳುತ್ತಿದ್ದ ಯಜ್ಞ ವೇದಿಕೆಯ ಸೋಪಾನ ಪಂಕ್ತಿಗಳೆಲ್ಲವೂ ಎಲ್ಲರಿಗೂ ವೈಕುಂಠಕ್ಕೆ ಹೋಗುವ ಮೆಟ್ಟಿಲುಗಳಾದವು.

ಆ ಪುಣ್ಯ ಪ್ರದೇಶಗಳಲ್ಲಿ ಪ್ರೋಕ್ಷಣೆ ಮಾಡಿಕೊಂಡ ದರ್ಭಗಳು ಅಲ್ಲಲ್ಲಿ ಬಿದ್ದದ್ದರಿಂದ ಆ ಪ್ರದೇಶಕ್ಕೆ ಕುಶ ತರ್ಪಣ ಎಂದು ಹೆಸರಾಯಿತು. ಕಾರಣಾನಂತರದಿಂದ ಆ ಪ್ರಣೀತಾ ನದಿಗೆ ಗೌತಮೀ ನದಿಯೂ ಬಂದು ಕೂಡಿತು. ಅಂದಿನಿಂದಾ ಅದಕ್ಕೆ ಪ್ರಣೀತಾ ಸಂಗಮ ಎಂದೂ, ಕುಶತರ್ಪಣ ಪ್ರದೇಶದಲ್ಲಿರುವ ತೀರ್ಥಕ್ಕೆ ಕುಶತರ್ಪಣ ತೀರ್ಥ ಎಂದೂ ಪ್ರಸಿದ್ಧಿಯಾಯಿತು. ನಾನು ಯಜ್ಞ ಮಂಟಪದಲ್ಲಿ ಕಲ್ಪಿಸಿದ ಯೂಪಸ್ತಂಭದಲ್ಲಿ ಲೋಕ ಪೂಜ್ಯನಾದ ವಿಷ್ಣು ಇದ್ದನು. ಆ ಯೂಪವು ಮುಂದೆ ಅಕ್ಷಯನಾದ ಆಲದ ಮರವಾಯಿತು. ಕಾಲರೂಪವಾದ ಅದನ್ನು ಸ್ಮರಿಸಿದರೆ ಯಜ್ಞ ಮಾಡಿದ ಪುಣ್ಯ ಬರುವುದು. ಆ ಪ್ರಣೀತಾ ಸಂಗಮದಲ್ಲಿಯೂ ಕುಶ ತರ್ಪಣ ತೀರ್ಥದಲ್ಲಿಯೂ ಸ್ನಾನ ದಾನಾದಿ ಗಳನ್ನು ಮಾಡಿದವರು ಸರ್ವರಿಂದಲೂ ಸ್ಪೃಹಣೀಯವಾದ ದಿವ್ಯಗತಿಯನ್ನು ಹೊಂದುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತೈದನೆಯ ಅಧ್ಯಾಯ ಮುಗಿದುದು*

—○—

## ಶಿವನ ಕರುಣೆ, ಸುರರ ಭಯನಿವಾರಣೆ

**ಅಧ್ಯಾಯ - ೩೬**

**ಬ್ರಹ್ಮ:-** ನಾರದಾ ದೇವತೆಗಳಿಗೂ ದೈತ್ಯರಿಗೂ ಪೂರ್ವ ಕಾಲದಲ್ಲಿ ಯುದ್ಧಗಳು ನಡೆಯುತ್ತಲೇ ಇದ್ದವು. ಒಂದು ಸಲ ರಣರಂಗದಲ್ಲಿ ದೇವತೆಗಳಿಗೆ ಸೋಲುಂಟಾಯಿತು. ದೈತ್ಯರೇ ಗೆದ್ದು ಬಿಟ್ಟರು. ಸಂಗ್ರಾಮದಲ್ಲಿ ಪರಾಜಿತರಾದ ಸುರವರರೆಲ್ಲರೂ ನನ್ನ ಬಳಿಗೆ ಬಂದು ತಮಗೆ ಅಭಯವನ್ನು ಕರುಣಿಸು ಎಂದು ಕೇಳಿಕೊಂಡರು.

ಆಗ ನಾನು ಅವರಿಗೆ ''ನೀವೆಲ್ಲರೂ ಈಗಲೇ ಗೌತಮೀ ತೀರಕ್ಕೆ ಹೋಗಿರಿ ಅಲ್ಲಿ ನಿತ್ಯ ನಿರಂತರವೂ ನೆಲೆನಿಂತ ಪಾರ್ವತೀಪತಿಯನ್ನು ಭಕ್ತಿಯಿಂದ ಪೂಜಿಸಿರಿ. ಅವನ ದಯೆಯಿಂದ ನಿಮ್ಮ ಭಯಾಪಾಯಗಳೆಲ್ಲವೂ ತಾವಾಗಿಯೇ ನಾಶವಾಗುವವು.'' ಎಂದು ಆದೇಶವಿತ್ತೆನು. ಅದರಂತೆ ದೇವತೆಗಳು ಗೌತಮೀ ತೀರಕ್ಕೆ ಬಂದು ಪರಮೇಶ್ವರನನ್ನು ಸ್ತುತಿಸಿದರು. ನೆಲೆಸಿದರು, ಕೆಲವರು ತಪಸ್ಸನ್ನು ಆಚರಿಸಿದರು. ಹಲವರು ಹಾಡಿಪಾಡಿ

ಕೊಂಡಾಡಿದರು. ಮತ್ತು ಕೆಲವು ದೇವತಾ ಸ್ತ್ರೀಯರು ಅವನನ್ನು ಸ್ತುತಿಸುತ್ತ ನರ್ತನೆ ಮಾಡಿದರು. ಅಂತೂ ಅವರ ಎಲ್ಲ ಕಾರ್ಯಗಳ ಮುಖ್ಯಗುರಿ ಈಶ್ವರನೇ ಆಗಿದ್ದ. ಹೀಗೆ ಏಕಾಗ್ರ ಮನಸ್ಸಿನಿಂದ ತನ್ನ ಸರ್ವಸೇವೆಯನ್ನು ಮಾಡುತ್ತಲಿರುವ ಆ ದೇವತೆಗಳಿಗೆ ಪರಮೇಶ್ವರನು ಪ್ರತ್ಯಕ್ಷನಾಗಿ "ಬೇಕಾದ ವರಬೇಡಿರಿ." ಎಂದು ಹೇಳಿದ. ಆಗ ದೇವತೆಗಳು, ಆ ದೇವೋತ್ತಮನಿಗೆ ತಲೆಬಾಗಿ ವಂದಿಸಿ "ಸ್ವಾಮಿ, ವಿಜಯ ಲಕ್ಷ್ಮಿಯು ನಮಗೆ ಒಲಿಯುವಂತೆ ಒಂದು ವರವನ್ನು ಮಾತ್ರ ಕರುಣಿಸು" ಎಂದು ಕೇಳಿಕೊಂಡರು.

ಆಗ ರುದ್ರದೇವನು ದೇವತೆಗಳನ್ನು ಸಂತೈಸಿದನು. ಅನಂತರ ತನ್ನ ತೇಜಸ್ಸಿನಿಂದ ಮನ್ಯೂ ಎಂಬ ಹೆಸರಿನ ಪುರುಷನನ್ನು ನಿರ್ಮಿಸಿದನು. ಅವನೇ ದೇವತೆಗಳ ಸೇನಾಧ್ಯಕ್ಷ.

ಅನಂತರ ದೇವತೆಗಳು ಮಹಾದೇವನಿಗೆ ಮಣಿದು, ಅವನ ಪರಮಾನುಗ್ರಹಕ್ಕೆ ಪಾತ್ರರಾಗಿ ರುದ್ರ ದೇವರ ತೇಜಸ್ಸಂಭೂತನಾದ ಮನ್ಯುವಿನೊಂದಿಗೆ ಸ್ವರ್ಗಕ್ಕೆ ತೆರಳಿದರು.

ಬಳಿಕ ಕೆಲವುದಿನಗಳ ನಂತರ ಮತ್ತೆ ದೇವದಾನವರಲ್ಲಿ ಯುದ್ಧವು ಪ್ರಾರಂಭವಾಯಿತು. ಆಗ ದೇವತೆಗಳು ಆ ಮನ್ಯು ಪುರುಷನನ್ನು ಕುರಿತು ಕೈಮುಗಿದು ಪ್ರಾರ್ಥಿಸಿಕೊಂಡರು. "ಸ್ವಾಮಿ ಈಗ ಯುದ್ಧಕಾಲವು ಪ್ರಾಪ್ತವಾಗಿದೆ. ನೀನೇ ನಮಗೆ ಸೇನಾಧಿಪತಿಯಾಗು. ನಮಗೆ ಜಯವನ್ನು ತಂದು ಕೊಡು. ನೀನೇ ಇಂದ್ರ, ವರುಣ ಹಾಗೂ ಲೋಕಪಾಲಕ. ದೇವತೆಗಳಿಗೆ ಗೆಲವನ್ನು ತಂದುಕೊಡಲು ನೀನು ಎಲ್ಲ ದೇವತೆಗಳಲ್ಲಿಯೂ ಪ್ರವೇಶಮಾಡು." ಎಂದು. ಅವರ ಪ್ರಾರ್ಥನೆಯನ್ನು ಮನ್ನಿಸಿ ಆ ಮನ್ಯುನ್ನ ರುದ್ರರೂಪನಾಗಿ ದೈತ್ಯರೊಡನೆ ಯುದ್ಧಮಾಡಿ ಅವರನ್ನೆಲ್ಲ ಗೆದ್ದು ದೇವತೆಗಳಿಗೆ ವಿಜಯವನ್ನು ತಂದುಕೊಟ್ಟ. ದೇವತೆಗಳು ಗೌತಮೀ ತೀರದಲ್ಲಿ ಶಿವನನ್ನು ಪೂಜಿಸಿ, ವಿಜಯವನ್ನು ಮನ್ಯುವನ್ನೂ ಪಡೆದ ಸ್ಥಳವು ಮನ್ಯು ತೀರ್ಥ ಎಂದು ಪ್ರಸಿದ್ಧವಾಗಿದೆ.

## ಬ್ರಾಹ್ಮಣನ ಮೈಯಲ್ಲಿ ಭಗವಂತ

**ಬ್ರಹ್ಮ:-** ನಾರದನೆ, ಪುಷ್ಪೋತ್ಕಟ ಎಂಬ ಪೂರ್ವಭಾಗದ ಗೌತಮೀನದಿಯ ತೀರದಲ್ಲಿ ಶುಭ್ರ ಎಂಬ ಶೇಷ ಪರ್ವತ ಇರುತ್ತದೆ. ಆ ಪರ್ವತದಲ್ಲಿ ಶಾಕಲ್ಯನೆಂಬ ಋಷಿಯು ತಪೋನುಷ್ಠಾನದಲ್ಲಿ ನಿರತನಾಗಿದ್ದ. ಆ ಮಹಾಮುನಿಯು ಪರಮವಿರಕ್ತ ಅಲ್ಲದೆ ಭಕ್ತ. ಎಲ್ಲಾ ಪ್ರಾಣಿಗಳು ನಿತ್ಯವು ಅವನನ್ನು ನಮಸ್ಕರಿಸಿ ಸ್ತೋತ್ರ ಮಾಡುತ್ತಿದ್ದವು. ಸದಾ ಸರ್ವಾದಾ ವೇದಾಧ್ಯಯನ ಹೋಮಹವನ ಹಾಗೂ ಜಪತಪಾನುಷ್ಠಾನುಗಳಲ್ಲಿ ನಿರತನಾದ ಕರ್ಮಠ. ಆ ಮುನಿವರನಿಗೆ ಪರಶು ಎಂಬ ಭಯಂಕರ ದೈತ್ಯನು ವಿರೋಧಿ ಆಗಿದ್ದ. ದುರ್ಬುದ್ಧಿಯ ಆ ದುಷ್ಟ ರಕ್ಕಸನೂ ಕಂಡಲ್ಲೆಲ್ಲಾ ಬ್ರಾಹ್ಮಣರನ್ನು ತುಂಡರಿಸಿ, ಯಜ್ಞ ಹವನಗಳನ್ನು ಕೆಡಿಸುತ್ತಿದ್ದ. ಆ ದುರಾತ್ಮನು ವರದ ಬಲದಿಂದ ಕಾಮರೂಪಿಯಾಗಿದ್ದ. ಎಲ್ಲರಿಗೂ ತೊಂದರೆ ಕೊಡುತ್ತಿದ್ದಾ. ಆ ಪಾಪಿಯು ಒಮ್ಮೆ ಬ್ರಾಹ್ಮಣರೂಪವನ್ನೂ ಮತ್ತೊಮ್ಮೆ ಬ್ರಹ್ಮರಾಕ್ಷಸನ ರೂಪವನ್ನೂ ಧರಿಸಿ ಶಾಕಲ್ಯನ ಆಶ್ರಮದ ಪರಿಸರ ಪ್ರಾಂತ್ಯದಲ್ಲಿಯೆ ತಿರುಗುತ್ತಿದ್ದ. ಒಮ್ಮೆ ದೇವತೆ, ಮತ್ತೊಮ್ಮೆ ಹೆಂಗಸು, ಮಗದೊಮ್ಮೆ ಮಗ, ಒಂದೊಂದು ಸಲ ಬಾಲಕರ ರೂಪಗಳನ್ನು ಸ್ವೀಕರಿಸಿ ಜನರನ್ನು ವಂಚಿಸಿ ಹಂಚಿಕೆ ಹಾಕಿ ಬ್ರಾಹ್ಮಣರನ್ನು ಕೊಲ್ಲಲು ಸಂಚುಮಾಡುತ್ತಿದ್ದ.

ಮಹಾಮಾಯಿಯಾದ ಆ ರಾಕ್ಷಸನು ಪ್ರತಿದಿನವೂ ಶಾಕಲ್ಯನ ಬಳಿ ಬಂದು ಅವನನ್ನು ಸಂಹರಿಸುವ ಪ್ರಯತ್ನ ಮಾಡುತ್ತಿದ್ದ ಆದರೆ ರಾಕ್ಷಸನಿಗೆ ತಪಸ್ವಿಯನ್ನು ಕೊಲ್ಲಲಾಗಲಿಲ್ಲ. ಒಂದು ಸಲ ಆ ಶಾಕಲ್ಯ ಮುನಿಯು ದೇವರ ಪೂಜೆ ಮಾಡಿ ಮುಗಿಸಿ, ಭೋಜನಕ್ಕಾಗಿ ಮನೆಗೆ ಬರುತ್ತಿದ್ದ. ಈ ಸಮಯದಲ್ಲಿ ಆ ಪರಶು ರಾಕ್ಷಸನು ಮುಪ್ಪಿನ ಮುದುಕನಾಗಿ ಒಬ್ಬ ವೃದ್ಧ ಬ್ರಾಹ್ಮಣ ವೇಷಧರಿಸಿ ಒಂದು ಕನ್ನೆಯನ್ನು ಕರೆದುಕೊಂಡು ಶಾಕಲ್ಯ ಮುನಿಯ ಬಳಿ ಬಂದು ನುಡಿದನು. "ವಿಪ್ರೋತ್ತಮ, ನಾನೂ, ಈ ಕನ್ನೆಯೂ ಬಹಳ ಹಸಿದು ಭೋಜನಾರ್ಥವಾಗಿ ಬಂದಿರುವೆವು. ನಮಗೆ ಊಟಕ್ಕೆ ಹಾಕು. ಆತಿಥ್ಯ ಕಾಲದಲ್ಲಿ ಅತಿಥಿಗಳು ಊಟಮಾಡಿ ಹೋದರೆ ಆ ಮನುಷ್ಯನು ಕೃತಾರ್ಥನಾಗುವನು. ಊಟಕ್ಕೆ ಕುಳಿತ ಕಾಲದಲ್ಲಿ ಅತಿಥಿ ಬಂದರೆ ತಾನು ಉಣ್ಣುವುದನ್ನು ಅವನಿಗೆ ಬಡಿಸಿದರೆ ಭೂಮಿಯನ್ನು ದಾನ ಕೊಟ್ಟಷ್ಟು ಪುಣ್ಯ ಬರುವುದು." ಆ ಅತಿಥಿಯ ಮಾತನ್ನು ಕೇಳಿ ಶಾಕಲ್ಯ ಮುನಿಯು "ನಿನಗೆ ಯಥೇಚ್ಛವಾಗಿ ಊಟ ನೀಡುವೆನು" ಎಂದು ಹೇಳಿ, ಅವನನ್ನು ಉಚ್ಚ ಆಸನದಲ್ಲಿ ಕೂಡಿಸಿ ಯಥಾವಿಧಿ ಪೂಜಿಸಿದ. ಅನಂತರ ಅವನಿಗೆ ಎಲೆ ಬಡಿಸಿ, ವಿವಿಧ ಭಕ್ಷ್ಯಭೋಜನ ಪಕ್ವಾನ್ನಗಳನ್ನು ಹಾಕಿ ಊಟ ಮಾಡು ಎಂದು ಹೇಳಿ ಆಪೋಶನವನ್ನು ಅವನ ಕೈಯಲ್ಲಿ ಹಾಕಿದ.

ಆಗ ಆ ರಾಕ್ಷಸನು ಆಪೋಶನವನ್ನು ಹಿಡಿದು "ಶಾಕಲ್ಯ, ಬಂದ ಅತಿಥಿಯನ್ನು ತೃಪ್ತಿಪಡಿಸಿದರೆ ದೇವರುಗಳು ತೃಪ್ತರಾಗುತ್ತಾರೆ. ಆದ್ದರಿಂದ ನಾನು ನಿನ್ನ ಅತಿಥಿ. ನಾನು ನಿನ್ನ ಇಷ್ಟಾರ್ಥಗಳನ್ನು ಪೂರೈಸುತ್ತೇನೆ. ಒಂದು ವಚನ ಕೊಟ್ಟರೆ ಈ ಆಪೋಶನವನ್ನು ತೆಗೆದುಕೊಳ್ಳುತ್ತೇನೆ" ಎಂದು ಹೇಳಿದ.

ಆಗ ಶಾಕಲ್ಯ "ನೀನು ಏನು ಕೇಳಿದರೂ ಕೊಡುತ್ತೇನೆ. ನಿನ್ನ ಇಷ್ಟಾರ್ಥವನ್ನೆಲ್ಲಾ ಪೂರೈಸುತ್ತೇನೆ. ಆಪೋಶನವನ್ನು ತೆಗೆದುಕೊ" ಎಂದಾಗ ಆ ವೃದ್ಧಬ್ರಾಹ್ಮಣ ವೇಷದಲ್ಲಿದ್ದ ರಾಕ್ಷಸ ಗಹಗಹಿಸಿ ನಕ್ಕು ಅಟ್ಟಹಾಸದಿಂದ "ನಾನು ಯಾರೆಂದು ತಿಳಿದಿರುವೆ? ನಾನು ಬ್ರಾಹ್ಮಣನೂ ಅಲ್ಲಾ, ವೃದ್ಧನೂ ಅಲ್ಲಾ, ಕೃಷ್ಣನೂ ಅಲ್ಲಾ, ನಾನು ನಿನ್ನ ಶತ್ರು, ಮನ್ಯು ಎಂಬ ರಾಕ್ಷಸ. ನಿನ್ನನ್ನು ಕೊಂದು ತಿಂದು ಹಾಕಬೇಕೆಂದು ನಾನು ಬಯಸಿದ್ದೇನೆ, ನಾನು ನಿನ್ನ ಅತಿಥಿಯಾದುದರಿಂದ ನಿನ್ನ ದೇಹವನ್ನೇ ನನಗೆ ಸಮರ್ಪಿಸಿ ನೀನು ಕೃತಾರ್ಥನಾಗು. ನಾನು ನಿನ್ನನ್ನು ತಿಂದು ತೇಗುವೆ" ಎಂದು ಹೇಳಿದನು.

ಅವನ ಮಾತನ್ನು ಕೇಳಿ ಶಾಕಲ್ಯನು, ಆ ದೈತ್ಯನನ್ನು ಕುರಿತು ನುಡಿದನು. "ವೇದಶಾಸ್ತ್ರವನ್ನು ಬಲ್ಲವರೂ ಮತ್ತು ತಪಸ್ವಿಗಳೂ ತಾವು ನುಡಿದದ್ದನ್ನು ಎಂದೂ ಹಿಂದೆ ತೆಗೆದುಕೊಳ್ಳುವುದಿಲ್ಲಾ. ನೀನು ಅತಿಥಿಯಾಗಿ ನನ್ನ ದೇಹವನ್ನು ಭಕ್ಷಣೆ ಮಾಡುತ್ತೇನೆ ಎಂದು ಕೋರಿದ್ದಿ. ಅವಶ್ಯವಾಗಿ ಮಾಡು. ಆದರೆ ಅದಕ್ಕಿಂತಾ ಮೊದಲು ನಿನಗೆ ನಾನು ಹೇಳುವ ಹಿತವಚನವನ್ನು ಕೇಳು. ನಾನು ಬ್ರಾಹ್ಮಣ, ನನ್ನ ಶರೀರ ವಜ್ರಕಠೋರ, ವಿಷ್ಣು ನನ್ನ ಶರೀರವನ್ನು ಯಾವಾಗಲೂ ಕಾಪಾಡುತ್ತಾನೆ. ನಾನು ಪ್ರತಿದಿನವೂ ರಕ್ಷಾಕವಚ ರೂಪವಾದ ಒಂದು ಮಂತ್ರ ಹೇಳಿ ಸರ್ವಾಂಗ ರಕ್ಷಣೆಗಾಗಿ ಆ ವಿಷ್ಣುವನ್ನು ಪ್ರಾರ್ಥಿಸುತ್ತೇನೆ."

ಪಾದೌ ರಕ್ಷತು ಮೇ ವಿಷ್ಣುಃ ಶಿರೋ ದೇವೋ ಜನಾರ್ದನಃ
ಬಾಹೂ ರಕ್ಷತು ವಾರಾಹೋಃ ಪೃಷ್ಠಂ ರಕ್ಷತು ಕೂರ್ಮರಾಟ್ ॥

ಪೃಷ್ಠಂ ರಕ್ಷತು ಧರ್ಮರಾಟ್ ॥
ಹೃದಯಂ ರಕ್ಷತಾತ್ ಕೃಷ್ಣೋ
ಹ್ಯಂಗುಲೀ ರಕ್ಷತಾತ್ ಮೃಗಃ
ಮುಖಂ ರಕ್ಷತು ವಾಗೀಶೋ
ನೇತ್ರೇ ರಕ್ಷತು ಪಕ್ಷಿಗಃ
ಶ್ರೋತ್ರಂ ರಕ್ಷತು ವಿತೇಶಃ
ಸರ್ವತೋ ರಕ್ಷತಾದ್ ಭವಃ
ನಾನಾ ಪತ್ಸ್ವೇಕ ಶರಣಂ ದೇವೋ ನಾರಾಯಣಃ ಸ್ವಯಮ್ ॥

"ನನ್ನ ಕಾಲುಗಳನ್ನು ವಿಷ್ಣುವು ರಕ್ಷಿಸಲಿ, ತಲೆಯನ್ನು ಜನಾರ್ದನ ಬೆನ್ನನ್ನು ಕೂರ್ಮ, ಹೃದಯವನ್ನು ಕೃಷ್ಣ, ಬೆರಳುಗಳನ್ನು ಗರುಡವಾಹನ, ಕಿವಿಗಳನ್ನು ಕುಬೇರ, ಸರ್ವತ್ರಾಪಿ ಪರಮಾತ್ಮ, ಸಕಲ ವಿಧವಾದ ಕುತ್ತು ವಿಪತ್ತುಗಳಲ್ಲಿ ಶ್ರೀಮನ್ನನಾರಾಯಣನೇ ಕಾಪಾಡಲಿ" ನನ್ನನ್ನು. ಎಂದು ಪ್ರತಿನಿತ್ಯವೂ ಆ ಭಗವಂತನನ್ನು ನಾನು ಬೇಡಿಕೊಳ್ಳುತ್ತೇನೆ. ಈ ಭಗವಂತನ ಸ್ತೋತ್ರದಿಂದ ನನ್ನ ದೇಹವು ವಜ್ರ ಕಠೋರವಾಗಿದೆ. ನಾನು ಹೇಳುವುದನ್ನು ಹೇಳಿದ್ದೇನೆ. ಬೇಕಾದರೆ ನನ್ನನ್ನು ಭಕ್ಷಿಸು, ಬೇಡವಾದರೆ ಬಿಟ್ಟುಬಿಡು. ನಿನ್ನ ಇಷ್ಟದಂತೆ ಮಾಡು ಈ ವಿಷಯದಲ್ಲಿ ನೀನು ಸ್ವತಂತ್ರನಾಗಿರುವೆ" ಎಂದನು.

ಶಾಕಲ್ಯನ ಮಾತನ್ನು ಕೇಳಿ ರಾಕ್ಷಸ ಇನ್ನೂ ಕೃದ್ಧನಾಗಿ ಅವನನ್ನು ಒಮ್ಮೆ ಉರಿಗಣ್ಣಿನಿಂದ ನೋಡಿ ಭೀಕರ ಆಕಾಶದಿಂದ ತಿನ್ನಲಿಕ್ಕೆ ಬಂದ. ಭಯಂಕರ ಮುಖವುಳ್ಳ ಆ ರಾಕ್ಷಸನು ಶಾಕಲ್ಯನ ಬಳಿ ನುಗ್ಗಿದ. ಇಂಥ ಹೊಚ್ಚಹೊಸದಾದ ರಸಭರಿತ ಆಹಾರ ಆ ಕಾಲದಲ್ಲಿ ಅವನಿಗೆ ಸಿಕ್ಕಿದ್ದರಿಂದ ಆನಂದಭರಿತನಾಗಿ ಒಮ್ಮೆಲೆ ನುಂಗಲೆಂದು ಶಾಕಲ್ಯನ ಬಳಿ ದೃಷ್ಟಿ ಹೊರಳಿ ನೋಡಿದ. ಆ ಸಮಯದಲ್ಲಿ ಆ ದೈತ್ಯನಿಗೆ. ಕಂಡದ್ದೇನು? ಶಂಖ, ಚಕ್ರ, ಗದಾಧಾರಿ ವಿಷ್ಣುವೇ ಕಣ್ಣೆದುರು ನಿಂತಂತಾಯಿತು. ಸಾವಿರ ಕಾಲು, ಸಾವಿರ ತಲೆ, ಸಾವಿರ ಕೈಗಳು, ಸಾವಿರ ಕಣ್ಣುಗಳುಳ್ಳ ಆ ಮಹಾವಿಷ್ಣುವಿನ ರೂಪವೇ ಆ ಬ್ರಾಹ್ಮಣನಲ್ಲಿ ಆ ರಾಕ್ಷಸನಿಗೆ ಕಂಡಂತಾಯಿತು. ಕೂಡಲೇ ಪರಶು ಹೌಹಾರಿ ಶಾಕಲ್ಯನ ಪಾದದ ಮೇಲೆ ಬಿದ್ದು ಅವನಿಗೆ ಮತ್ತೆ ಮತ್ತೆ ನಮಸ್ಕರಿಸಿ ಹೇಳಿದ. "ಎಲೈ ಬ್ರಾಹ್ಮಣ, ಈಗ ನನಗೆ ನಿನ್ನಲ್ಲಿ ಆ ಪುರುಷೋತ್ತಮನಾದ ಮತ್ತು ಜಗದಜನ್ಮಾದಿಕಾರಿಯಾದ ಸಾಕ್ಷಾತ್ ವಿಷ್ಣುವೇ ನಿಂತುಕೊಂಡಂತೆ ತೋರುತ್ತದೆ. ಭಗವಂತನ ಧ್ಯಾನೋಪಾಸನೆಯನ್ನು ನಿತ್ಯನಿರಂತರ ಮಾಡಿ ನೀನು ನನಗೆ ಭಗವದ್ ಸ್ವರೂಪವಾಗಿಯೇ ತೋರುತ್ತಿರುವೆ. ನಾನು ನಿನಗೆ ಶರಣು ಬಂದಿರುವೆ. ನನ್ನ ಅಪರಾಧಗಳನ್ನು ಕ್ಷಮಿಸು. ನಿನ್ನನ್ನು ಭಕ್ಷಿಸಬೇಕೆಂದು ಬಂದ ನನ್ನ ಮಹಾ ಪಾಪವನ್ನು ತೊಳೆಯತಕ್ಕ ಯಾವುದಾದರೂ ಪುಣ್ಯತೀರ್ಥವಿದ್ದರೆ ತಿಳಿಸು. ಅಜ್ಞಾನದಿಂದಾಗಲೀ, ಪ್ರಮಾದದಿಂದಾಗಲೀ, ದ್ವೇಷದಿಂದಾಗಲೀ ಮಾಡಿದ ಮಹಾತ್ಮರ ದರ್ಶನವು ಎಂದೂ ವ್ಯರ್ಥವಾಗುವುದಿಲ್ಲಾ. ಆದುದರಿಂದ ನಿನ್ನಂತಹ ಮಹಾಪುರುಷನನ್ನು ದ್ವೇಷದಿಂದ ಸಂದರ್ಶಿಸಿದ್ದರೂ ನನಗೆ ನಿನ್ನ ದರುಶನವು ಎಂದೂ ವ್ಯರ್ಥವಾಗಲಾರದು. ನೀನು ನನಗೆ ಉದ್ಧಾರವಾಗುವ ಮಾರ್ಗ ತೋರಿಸು" ಎಂದು ಅಂಗಲಾಚಿದ.

ಆಗ ಶಾಕಲ್ಯನು "ರಾಕ್ಷಸೇಶ್ವರಾ, ನೀನು ಮೊದಲು ಗೌತಮೀ ಎಂದು ಹೆಸರಾದ ನದೀತೀರಕ್ಕೆ ಹೋಗಿ ಅಲ್ಲಿ ನಿಂತು ನಾರಾಯಣನನ್ನು ಸ್ತೋತ್ರಮಾಡು, ಮಾನವರ

ಕಷ್ಟಾನಿಷ್ಟ ಪರಿಹಾರಕ್ಕೂ, ಇಷ್ಟದ ಪ್ರಾಪ್ತಿಗೂ ಶ್ರೀಮನ್ ನಾರಾಯಣನ ಸ್ತುತಿ, ನತಿ, ನುತಿಗಳ ಹೊರತಾಗಿ ಬೇರೆ ಮಾರ್ಗವಿಲ್ಲ ಎಂದು ಹೇಳಿದನು. ಅವನ ಮಾತಿನಂತೆ ಪರಶು, ಗಂಗಾ ತೀರಕ್ಕೆ ಬಂದು, ಅದರಲ್ಲಿ ಮಿಂದು ಕೈ ಮುಗಿದು ನಿಂತ; ಅವನಿಗೆ ಮೊದಲು ಸರಸ್ವತಿಯು ಲೋಚನಗೋಚರವಾದಳು. ಅವಳನ್ನು ಬೇಡಿ ಕೊಂಡ. ಅವಳು ಅವನಿಗೆ ವಿಷ್ಣು ಸ್ತೋತ್ರವನ್ನು ಹೇಳಿಕೊಟ್ಟಳು. ಆದ್ದರಿಂದ ಆ ದೈತ್ಯನು ಭಕ್ತಿಯಿಂದ ಹರಿಸ್ತೋತ್ರ ಮಾಡಿದ ಅದರಿಂದ ಶ್ರೀಹರಿಯು ಸಂತುಷ್ಟನಾಗಿ ಅವನಿಗೆ ಸದ್ಗತಿಯನ್ನು ಕರುಣಿಸಿದ. ಭಗವಂತನ ಅನುಗ್ರಹ ಹಾಗೂ ಗೌತಮಿಯ ಕೃಪೆ, ಶಾಕಲ್ಯನ ಆಶೀರ್ವಾದ, ಸರಸ್ವತಿಯ ಪ್ರಸಾದ ಹಾಗೂ ನರಸಿಂಹನ ಆಶೀರ್ವಾದದಿಂದ ಆ ಮಹಾರಾಕ್ಷಸನು ತನ್ನ ಎಲ್ಲ ಪಾಪಗಳನ್ನು ತೊಳೆದುಕೊಂಡು ಸ್ವರ್ಗಕ್ಕೆ ಹೋದನು. ಆದ್ದರಿಂದ ಅಂದಿನಿಂದ ಆ ತೀರ್ಥಕ್ಕೆ ಸಾರಸ್ವತ ತೀರ್ಥವೆಂದು ಹೆಸರಾಯಿತು.

## ಗದಾಧರನ ದರ್ಶನದಿಂದ ಪಕ್ಷಿಜನ್ಮದಿಂದ ಮುಕ್ತಿ

**ಬ್ರಹ್ಮ:-** ನಾರದಾ, ಈ ಗಂಗಾನದಿಯ ಉತ್ತರತೀರದಲ್ಲಿ ಶುಭ್ರ ಎಂಬ ಪರ್ವತದಲ್ಲಿ ಭಗವಾನ್ ಶ್ರೀವಿಷ್ಣುವು ಗಧಾಧರ ರೂಪದಿಂದ ನೆಲೆ ನಿಂತಿದ್ದಾನೆ. ಆ ಶುಭ್ರ ಪರ್ವತದಲ್ಲಿ, ಚಿಚ್ಚುಕಾ ಎಂಬ ಪಕ್ಷಿಯು ವಾಸವಾಗಿದ್ದಿತು. ಆ ಪಕ್ಷಿರಾಜನಿಗೆ ಭೇರುಂಡ ಪಕ್ಷಿ ಎಂತಲೂ ಹೆಸರು. ಆ ಭೇರುಂಡವು ಮಾಂಸಾಹಾರಿ ಪಕ್ಷಿ ಗೌತಮೀ ನದಿಯು ಆ ಶುಭ್ರ ಪರ್ವತದ ಮಧ್ಯದಲ್ಲಿಯೇ ಹರಿದು ಇಕ್ಕೆಲದ ತೀರಗಳಲ್ಲಿ ನಿಸರ್ಗ ಸೌಂದರ್ಯವು ಮನೋಹರವಾಗಿ ಕಂಡು ಬರುತ್ತಿತ್ತು. ನಿಬಿಡವಾಗಿ ಬೆಳೆದ ಗಿಡಗುಂಪುಗಳೂ, ಹೂಹಣ್ಣುಗಳ ಸಮೃದ್ಧಿಯಿಂದ ಬಾಗಿದ ಬಳ್ಳಿವಾಡಗಳೂ ಆ ಪ್ರದೇಶವನ್ನು ಪ್ರಪಂಚದಲ್ಲಿಯೇ ಒಂದು ಸುಂದರವಾದ ತಾಣವನ್ನಾಗಿ ಗೈದಿದ್ದವು. ಅನೇಕ ಋಷಿಮುನಿಗಳು, ಸಿದ್ಧರು, ಶರಣರು, ಅಲ್ಲಿ ವಾಸವಾಗಿದ್ದರು. ಅನೇಕ ಮುನಿ ಮಹರ್ಷಿಗಳಿಂದ ಮಂಡಿತವಾದ ಆ ಶುಭ್ರ ಎಂಬ ಶ್ರೀಶೈಲಕ್ಕೆ ಪೂರ್ವ ದೇಶಗಳ ಸಮ್ರಾಟನಾದ ಪವಮಾನ ಎಂಬ ಪ್ರಖ್ಯಾತ ರಾಜನು ಆಗಮಿಸಿದನು. ಗೋ ಬ್ರಾಹ್ಮಣರನ್ನು ಪ್ರೀತಿಯಿಂದ ಪರಿಪಾಲಿಸುವ ಆ ಪವಮಾನ ಮಹಾರಾಜನು ತನ್ನ ಸೇನಾಪರಿವಾರ ಪುರೋಹಿತರೊಂದಿಗೆ ಅಲ್ಲಿಗೆ ಸಂಚಾರ ಮಾಡುತ್ತ ಆಗಮಿಸಿದ್ದ. ಪ್ರಕೃತಿ ಸೌಂದರ್ಯದ ನೆಲೆಬೀಡಾದ ಆ ತಂಪಿನ ತಾಣದಲ್ಲಿ ಹೂ ಭಾರದಿಂದ ಬಾಗಿ ಬಳಕುತ್ತಿರುವ ಮಂಜು ಲತಾ ಕುಂಜಗಳಲ್ಲಿ ಚಲುವಿನ ಚಿಟ್ಟೆಗಳಂತಿರುವ ತನ್ನ ರಾಣಿಯರೊಂದಿಗೆ ಅವನು ಸ್ವಚ್ಛಂದ ವಿಹಾರ ಲೀಲೆಗಳನ್ನು ನಡೆಸಿದ. ಇಂಪಾದ ಸಂಗೀತ, ನೃತ್ಯ, ವಾದ್ಯ ಗೀತೆಗಳಿಂದ ಲೀಲಾಲೋಲನಾಗಿ ಚಿಕ್ಕಂದದಿಂದ ವಿಹಾರಗೈದು ಆನಂದದ ರಸನಿಮಿಷಗಳನ್ನು ಅನುಭವಿಸಿದ. ಅನಂತರ ಆ ಪವಮಾನನು ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದು ಕ್ರೂರ ಪ್ರಾಣಿಗಳನ್ನು ಬೇಟೆಯಾಡಿದ. ಬೇಟೆಯಿಂದ ಬಳಲಿ ಬೆಂಡಾದ ಆ ಮಹಾರಾಜನು ವಿಶ್ರಾಂತಿಗಾಗಿ ಆ ಗೌತಮೀ ತೀರದಲ್ಲಿ ಬಾನುದ್ದ ಬೆಳೆದು ನಿಂತ ಒಂದು ಹೆಮ್ಮರದ ನೆರಳಿನಲ್ಲಿ ವಿಶ್ರಾಂತಿಗಾಗಿ ಬಂದು ಕುಳಿತಿದ್ದ. ಆಗ ಆ ಮರದ ಟೊಂಗೆಯಲ್ಲಿ ಎರಡು ಮುಖವುಳ್ಳ ಬೃಹದ್‌ಗಾತ್ರದ ಆ ಭೇರುಂಡ ಪಕ್ಷಿಯು ಅವನ ಕಣ್ಣಿಗೆ ಬಿದ್ದಿತು. ಮಹಾರಾಜನಿಗೆ ಪಕ್ಷಿಪ್ರಪಂಚದ ಅದ್ಭುತ ಈ ಉಭಯಮುಖಿಯಾದ ಭೇರುಂಡಪಕ್ಷಿ ಎನಿಸಿತು.

ಅವನು ಕೌತುಕದಿಂದ ಅದನ್ನು ಕೇಳಿದ. "ಪಕ್ಷಿರಾಜ, ಎರಡು ಮುಖವುಳ್ಳ ನೀನು ಯಾರು? ನೀನು ಚಿಂತಾಕ್ರಾಂತನಾದಂತೆ ಕಾಣುತ್ತಿರುವಿ. ಎಲ್ಲೆಡೆಗೂ ಪ್ರಕೃತಿಯ ಚೆಲುವು ಚೆಲ್ಲುವರಿದ ನೈಸರ್ಗಿಕವಾದ ಈ ಗಿರಿಧಾಮದಲ್ಲಿ ಯಾವ ಪ್ರಾಣಿಗಳೂ ದುಃಖಿತವಾಗಿ ಇರುವುದಿಲ್ಲ. ಇಲ್ಲಿರುವ ಎಲ್ಲ ಪಶುಪಕ್ಷಿಗಳು, ಖಗಮೃಗಗಳು, ನರವಾನರರು, ಆನಂದದಿಂದ ನಕ್ಕು ನಲಿಯುತ್ತಲಿವೆ. ನೀನು ಮಾತ್ರ ಚಿಂತಾಕ್ರಾಂತನು, ದುಃಖದಗ್ಧನು ಆದಂತೆ ಕಾಣುತ್ತಲಿರುವಿ. ನಿನ್ನ ದುಃಖಕ್ಕೆ ಏನು ಕಾರಣ?"

ಮಹಾರಾಜನ ಈ ಪ್ರಶ್ನೆಯನ್ನು ಕೇಳಿ ಆ ಗಂಡಭೇರುಂಡ ಪಕ್ಷಿಯು ನಿಟ್ಟುಸುರು ಬಿಟ್ಟು ರಾಜನನ್ನು ಕುರಿತು ನುಡಿಯಿತು. "ಮಹಾರಾಜ, ನನಗೆ ಯಾರಿಂದಲೂ ಭಯವಿಲ್ಲ. ಯಾರಿಗೂ ನನ್ನಿಂದ ಭಯವೂ ಇಲ್ಲ. ಮಹಾರಾಜ, ಈ ಪರ್ವತವನ್ನು ನೋಡಿದಿಯಾ! ಇಲ್ಲಿ ಯಾವಾಗಲೂ ಸರ್ವಋತುಗಳ ಸುಗ್ಗಿ. ಹಣ್ಣು ಹೂ, ಕಾಯಿ, ಕುಷಿ, ಮಿಡಿ, ದಾಂಗುಡಿ ಇಟ್ಟು ಈ ವಿಜನವನಾಂತದ ಪ್ರಾಂತವೆಲ್ಲವು ಚೆಲುವಿನ ಖಣಿಯಾಗಿ ಕಂಗೊಳಿಸುತ್ತದೆ. ಇಂಥ ಈ ಅರಣ್ಯವು ಮುನಿ ಮನುಜರಿಂದಲೂ ಫಲಪುಷ್ಪಗಳಿಂದಲೂ ಸಮೃದ್ಧವಾಗಿದ್ದರೂ ನನಗೆ ಏಕೋ ಬಯಲು ಬಯಲಾಗಿ ಶೂನ್ಯ ಶೂನ್ಯವಾಗಿ ತೋರುತ್ತಿದೆ. ಇದರಿಂದ ನನಗೆ ಅಪಾರ ದುಃಖವಾಗುತ್ತಿದೆ. ನನಗೆ ಸ್ವಲ್ಪವೂ ಸುಖವಿಲ್ಲ, ನಿದ್ರೆಯಿಲ್ಲ, ವಿಶ್ರಾಂತಿಯಿಲ್ಲ."

ಹಕ್ಕಿಯ ಈ ಮಾತನ್ನು ಕೇಳಿ ಪವಮಾನ ರಾಜನಿಗೆ ಇನ್ನೂ ಆಶ್ಚರ್ಯ. ಕೌತುಕಾವಿಷ್ಟನಾಗಿ ಮತ್ತೆ ಕೇಳಿದ. ಪವಮಾನ ರಾಜ ಆ ಪಕ್ಷಿಯನ್ನು "ಎಲೈ ಪಕ್ಷಿಯೇ ನೀನು ಯಾರು? ಏನು ಪಾಪ ಮಾಡಿರುವೆ? ಸೌಂದರ್ಯದಿಂದ ಸಮೃದ್ಧವಾಗಿ ಹಣ್ಣು, ಹೂ, ಹಕ್ಕಿ, ಮರ, ಬಳ್ಳಿಗಳಿಂದ ತುಂಬಿ ತುಳುಕುತ್ತಲಿರುವ ಈ ಕಾನನದ ಕಾವಣ ನಿನಗೆ ಶೂನ್ಯವಾಗಿ ಬರಿದೋ ಬರಿದಾಗಿ ಕಾಣಲು ಕಾರಣವೇನು? ನೀನು ಏನು ಪಾಪ ಮಾಡಿರುವೆ? ಎಲ್ಲ ಪ್ರಾಣಿಗಳು ತಮ್ಮ ಒಂದೇ ಮುಖದಿಂದ ಅಂದಚಂದವಾದ ಈ ವನಶ್ರೀಯನ್ನು ನೋಡಿ ಆನಂದ ಪಡುತ್ತಿವೆ. ಅಂದಬಳಿಕ ಎರಡು ಮುಖದಿಂದ ಇಲ್ಲಿಯ ವನ ಉಪವನಗಳ ಸೊಬಗನ್ನು ಸವಿಯಬಹುದಾದ ನೀನು ದುಃಖಿಧೀರ್ಣ ನಾಗಿರುವೆ. ನಿನ್ನ ಅಸಂತೋಷಕ್ಕೆ ಕಾರಣವೇನು? ನೀನು ಈ ಜನ್ಮದಲ್ಲಿಯಾಗಲಿ ನಿನ್ನ ಹಿಂದಿನ ಜನ್ಮದಲ್ಲಿ ಯಾಗಲಿ, ಯಾವ ಘೋರ ಪಾಪ ಮಾಡಿರುವೆ?"

ಮಹಾರಾಜನ ಈ ಮಾತನ್ನು ಕೇಳಿ ಆ ಪಕ್ಷಿಯು ಮತ್ತೊಮ್ಮೆ ನಿಟ್ಟುಸಿರು ಬಿಟ್ಟು ನುಡಿಯಿತು. "ಪ್ರಭು ಪವಮಾನ ನನ್ನ ಪೂರ್ವವೃತ್ತಾಂತವನ್ನು ಕೇಳು. ಹಿಂದಿನ ಜನ್ಮದಲ್ಲಿ ನಾನೊಬ್ಬ ಬ್ರಾಹ್ಮಣ, ವೇದ ವೇದಾಂಗಗಳಲ್ಲಿ ಪಾರಂಗತ ವೇದಾಂತದಲ್ಲಿ ಪರಿಣತ ಪ್ರಜ್ಞೆ, ಇತರ ಶಾಸ್ತ್ರಗಳಲ್ಲಿಯೂ ನನಗೆ ಪಾಂಡಿತ್ಯ ಇದ್ದಿತು. ಪರಿನಿಶ್ಚಿತವಾದ ಪಾಂಡಿತ್ಯ ಸರ್ವ ವಿಷಯಗಳಲ್ಲಿ ಇದ್ದಿತು. ಇಷ್ಟೆಲ್ಲಾ ನಾನು ಓದಿಬರೆದು ಪಂಡಿತನಾಗಿದ್ದರೂ ನನ್ನ ಆಚಾರ ಮಾತ್ರ ದುರಾಚಾರವಾಗಿದ್ದಿತು. ನನಗೆ ಯಾವಾಗಲೂ ಚಾಡಿ ಹೇಳುವದು, ಮೋಸ ಮಾಡುವದು. ವಂಚನೆಗೈಯುವುದೇ ಮುಂತಾದ ವ್ಯಸನಗಳು ಅಂಟಿಕೊಂಡಿದ್ದವು. ಸತ್ಯವನ್ನು ನಾನು ಎಂದೂ ನುಡಿಯುತ್ತಿರಲಿಲ್ಲ. ಪರನಿಂದೆಯಲ್ಲಿ ನನಗೆ ತುಂಬಾ ಆಸಕ್ತಿ. ಉಪಕಾರ ಸ್ಮರಣೆಯನ್ನು ನಾನು ಎಂದೂ ಮಾಡುತ್ತಿರಲಿಲ್ಲ. ಗುರುಹಿರಿಯರ ದ್ರೋಹ ಮಾಡಿದೆ ಸ್ನೇಹಿತರನ್ನು ವಂಚಿಸಿದೆ. ನನ್ನ ಸ್ವಾಮಿಗೆ ವಿಶ್ವಾಸಘಾತ ಮಾಡಿದೆ. ಪ್ರೀತಿಯ ದಂಪತಿಗಳನ್ನು ಅಗಲಿಸಿದೆ ಎಷ್ಟೋ ಜನರನ್ನು ಪ್ರಾಣಿಗಳನ್ನು ಹಿಂಸಿಸಿದೆ. ಆ ಕಾಲದಲ್ಲಿ

ನಾನು ಮಾಡಿದ ಪಾಪ ಕೆಲಸವೇ ಇಲ್ಲ. ನನ್ನಂತಹ ಪಾಪಿ ಮೂರು ಲೋಕದಲ್ಲಿ ಹುಡುಕಿದರೂ ಸಿಕ್ಕಲಿಕ್ಕಿಲ್ಲ. ಆ ಪೂರ್ವಜನ್ಮದಲ್ಲಿ ದುರ್ಬುದ್ಧಿ ದುರ್ವಿಚಾರ ಗಳಿಂದ ನಾನು ಗೈದ ಘೋರಪಾಪಗಳ ಫಲವಾಗಿ ನನಗೆ ಈ ಕ್ರೂರ ಪಕ್ಷಿಜನ್ಮ ಈಗ ಬಂದಿದೆ. ಆಗ ನಾನುಮಾಡಿದ ಪಾಪಗಳ ಪರಿಣಾಮವಾಗಿ ನಾನು ಈಗ ದುಃಖವನ್ನು ಅನುಭವಿಸುತ್ತಿದ್ದೇನೆ. ಫಲಪುಷ್ಪ ಸಮೃದ್ಧಿಯಿಂದ ತುಂಬಿ ತುಳುಕುತ್ತಿರುವ ಈ ಶೈಲ ಶ್ರೇಣಿಯೆಲ್ಲವೂ ಬರಿದೋ ಬರಿದು, ತೆರವೋ ತೆರವು ಆಗಿ ನನಗೆ ಕಾಣುತ್ತದೆ.

ಮಹಾರಾಜ ಪಂಚಮಹಾಪಾತಕಗಳಲ್ಲಿ ಬ್ರಹ್ಮಹತ್ಯಾ ಪಾತಕವು ಭೀಕರವಾದುದು. ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಆ ಬ್ರಹ್ಮಹತ್ಯೆಗೆ ಸಮಾನವಾದ ಇನ್ನೂ ಅನೇಕ ಪಾಪಗಳು ಈ ಜಗತ್ತಿನಲ್ಲಿ ಇವೆ. ಯುದ್ಧದಲ್ಲಿ ವೈರಿಗಳು ಸೋತು ಶರಣಾಗತರಾಗಿ ದೈನ್ಯದಿಂದ ಜೀವಭಿಕ್ಷೆಯನ್ನು ಅಂಗಲಾಚಿದಾಗ ಅವರನ್ನು ಕೊಲ್ಲುವುದು ಬ್ರಹ್ಮಹತ್ಯಾ ಪಾತಕ. ಯುದ್ಧದಲ್ಲಿ ಹೆದರಿ ಓಡಿಹೋಗುತ್ತಿರುವವರನ್ನು ಬೆನ್ನಟ್ಟಿ ಜೀವದಾನ ಮಾಡು ಎಂದು ಅವರು ಮೊರೆ ಇಟ್ಟರೂ ಕೇಳದೇ ಕ್ರೌರ್ಯದಿಂದ ಅವರನ್ನು ಕೊಂದುಹಾಕುವುದು ಕ್ಷತ್ರಿಯನಿಗೆ ಘೋರಪಾಪ. ಬ್ರಾಹ್ಮಣನಾದವನು ಗುರುವಿನಲ್ಲಿ ಓದಿ ವಿದ್ಯೆಪಡೆದು ಪಂಡಿತನಾಗಿ ಪ್ರಬುದ್ಧನಾದ ಬಳಿಕ ಆ ಗುರುವನ್ನು ಧಿಕ್ಕರಿಸುವುದು ಬ್ರಹ್ಮಹತ್ಯೆ. ಬ್ರಾಹ್ಮಣ ದ್ವೇಷವನ್ನು ಮಾಡುವುದು, ಜನರ ಎದುರು ಒಳ್ಳೆಯ ಮಾತು ಹೇಳಿ ಹಿಂದಿನಿಂದ ನಿಂದೆ ಮಾಡುವುದು, ವೇದ ವೇದಾಂತಗಳನ್ನು ಅಪ್ರಮಾಣ ಎಂದು ಅಲ್ಲಗಳೆಯುವುದು, ಧರ್ಮದ್ರೋಹ, ದೇವದ್ವೇಷ ಭಗವನ್ ನಿಂದೆ, ಮುಂತಾದವುಗಳೆಲ್ಲ ಬ್ರಹ್ಮಹತ್ಯಾ ಪಾತಕ ಎನಿಸುತ್ತವೆ. ನಾನು ಈ ಎಲ್ಲ ಪಾಪಗಳನ್ನೂ ಆಗ ಮಾಡುತ್ತಲಿದ್ದೆ. ಇಷ್ಟೆಲ್ಲ ದುಷ್ಟಕಾರ್ಯ ದೇಶಾದಷ್ಟು ನಾನು ಮಾಡಿದ್ದರೂ ಯಾವುದೋ ಒಂದು ಪುಣ್ಯಕಾರ್ಯವನ್ನು ಆಗ ಮಾಡಿದ್ದೆ. ಆ ಪುಣ್ಯದ ಪ್ರಭಾವದಿಂದ ಈಗ ನನಗೆ ಜನ್ಮಾಂತರದ ಸ್ಮರಣೆ ಜಾಗರೂಕ ವಾಗಿರುತ್ತದೆ. ಆದುದರಿಂದ ದಯಾಬಂಧುವಾದ ಪವಮಾನ ಮಹಾರಾಜ, ಈಗ ನೀನು ನನಗೆ ಒಂದು ಉಪಕಾರ ಮಾಡು.

ಈ ಪರ್ವತದ ಮಧ್ಯಭಾಗದಲ್ಲಿ ಗೌತಮೀ ತೀರದಲ್ಲಿ ಪರಮ ಪವಿತ್ರವಾದ ಒಂದು ತೀರ್ಥವು ಇರುವುದು ಅದು ಈ ನದಿಯ ಉತ್ತರ ತೀರದಲ್ಲಿ ಗದಾಧರ ತೀರ್ಥ ಎಂದು ಅದಕ್ಕೆ ಹೆಸರು ಇರುತ್ತದೆ. ನೀನು ದಯಮಾಡಿ ನನ್ನನ್ನು ಆ ಪುಣ್ಯತಮ ತೀರ್ಥಕ್ಕೆ ಕರೆದು ಕೊಂಡು ಹೋಗು. ಅಲ್ಲಿರುವ ಶ್ರೀ ಗದಾಧರನ ದರ್ಶನವನ್ನು ಮಾಡಿಸು. ನಾನು ಆ ಸ್ವಾಮಿಯ ದರ್ಶನವನ್ನು ತೆಗೆದುಕೊಳ್ಳಬೇಕೆಂದು ಬಹಳ ಪ್ರಯತ್ನಪಟ್ಟೆ. ದಾರುಣವಾದ ನನ್ನ ಪೂರ್ವದ ಪಾಪರಾಶಿಗಳ ಪರಿಣಾಮವಾಗಿ ನನಗೆ ಅತ್ತ ಹೆಜ್ಜೆಇಡುವುದಕ್ಕೂ ಆಗಲೊಲ್ಲದು. ಆದುದರಿಂದ ನೀನು ಮುಂದಾಗಿ ನಡೆಸಿಕೊಂಡು ಆ ಗದಾಧರ ತೀರ್ಥಕ್ಕೆ ಕರೆದುಕೊಂಡು ಹೋಗು. ಈ ಹಿಂದೆ ನಾನು ಗೌತಮೀ ನದಿಯ ಉತ್ತರ ತೀರದಲ್ಲಿರುವ ಆ ಗದಾಧರ ತೀರ್ಥಕ್ಕೆ ಹೊರಟಾಗ ಅನೇಕ ಕ್ರೂರ ಪ್ರಾಣಿಗಳು ಹೆಜ್ಜೆ ಹೆಜ್ಜೆಗೂ ನನಗೆ ಎದುರಾಗಿ ನಾನು ಆ ದಿವ್ಯಕ್ಷೇತ್ರಕ್ಕೆ ಸಾಗದಂತೆ ವಿಘ್ನವನ್ನು ಒಡ್ಡುತ್ತವೆ. ನಾನು ಹಾಗೇ ಮುಂದುವರೆದರೆ ಹುಲಿ, ಸಿಂಹ, ಆನೆ, ಚಿರತೆ, ಮುಂತಾದ ಕ್ರೂರ ಶ್ವಾಪದಗಳು ನನ್ನ ಮೇಲೆ ಎರಗಿ ಕ್ಷಣದಲ್ಲಿ ನನ್ನನ್ನು ಕೊಂದು ತಿಂದು ಮುಗಿಸಿ ಬಿಡುತ್ತವೆ.

ಆದುದರಿಂದ ಮಹಾರಾಜ, ಖಡ್ಗಪಾಣಿಯಾಗಿ ನೀನು ನನ್ನ ಮುಂದೆ ನಡೆ. ಬಿಲ್ಲು, ಬಾಣ, ಖಡ್ಗ, ಪರಶು ಮುಂತಾದ ಆಯುಧಗಳನ್ನು ಹಿಡಿದು ಹೊರಟ ನಿನ್ನನ್ನು ನೋಡಿಯೇ ಕ್ರೂರ ಮೃಗಗಳೆಲ್ಲವೂ ಹೆದರಿ ಚೆದುರಿ ಹೋಗುತ್ತವೆ. ನನ್ನ ಪುಣ್ಯ ತೀರ್ಥ ಕ್ಷೇತ್ರ ಯಾತ್ರೆಯು ನಿರ್ವಿಘ್ನವಾಗಿ ಕೊನೆಗೊಳ್ಳುವುದು. ನನ್ನನ್ನು ಗದಾಧರ ತೀರ್ಥಕ್ಕೆ ಕರೆದುಕೊಂಡು ಹೋಗಿ ಆ ಗದಾಧರನ ದರ್ಶನವಾಗುವಂತೆ ನೀನು ಮಾಡಿದರೆ ನನ್ನ ಮೇಲೆ ಪರಮ ಉಪಕಾರವಾಗುವುದು. ಈ ಜಗತ್ತಿನಲ್ಲಿ ದುಃಖ ಕಳೆದು, ಪಾಪ ಅಳಿದು ಶಾಂತಿ ಸಂತಸ ಸದ್ಗತಿಯನ್ನು ನೀಡುವಲ್ಲಿ ಗಧಾಧರನಿಗೆ ಸಸುನಾದ ದೇವರು ಯಾರು ಇವರು?

ಚಿಚ್ಚುಕಾ ಎಂಬ ಹೆಸರಿನ ಆ ಭೇರುಂಡ ಪಕ್ಷಿಯ ಈ ಮಾತನ್ನು ಕೇಳಿ ಪವಮಾನ ದೊರೆಯು ಅದರ ಅಪೇಕ್ಷೆಯಂತೆ, ತಾನು ಧನುರ್ಬಾಣ ಪಾಣಿಯಾಗಿ ಆ ಪಕ್ಷಿಯನ್ನು ಕರೆದುಕೊಂಡು ಗೌತಮಿಯ ಉತ್ತರ ಭಾಗಕ್ಕೆ ಬಂದ. ಅದಕೆ ಗಂಗೆಯ ಸ್ನಾನ, ಗದಾಧರ ದರುಶನ ಎರಡನ್ನು ಮಾಡಿಸಿದ. ಆಗ ಆ ಚಿಚ್ಚಿಕಾ ಪಕ್ಷಿಯು ಗಂಗೆಯಲ್ಲಿ ಮಿಂದು ಕೈ ಮುಗಿದು ನಿಂದು ಗಧಾಧರನ ಮೂರ್ತಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಭಕ್ತಿಯಿಂದ ಆ ಭಗವಂತನನ್ನು ಸ್ತೋತ್ರಮಾಡಿ ಪ್ರಾರ್ಥನೆಗೈದಿತು "ದಯಾವಂತನಾದ ಭಗವಂತ, ಗಧಾಧರ ಸ್ವಾಮಿಯೆ, ಮಹಾಪಾಪಿಯಾದ ನನ್ನನ್ನು ಉದ್ಧಾರಮಾಡು. ನಾನು ಮಾಡಿದ ಪಾಪ ಅಪಾರ. ಅದರಂತೆ ನಿನ್ನ ಕರುಣೆಯೂ ಅಪರಂಪಾರ. ನಮ್ಮಂಥ ಘೋರ ಪಾತಕಿಗಳನ್ನು ನಿನ್ನ ಹೊರತು ಬೇರೆ ಅನ್ಯರು ಯಾರು ತಾನೆ ಉದ್ಧರಿಸಬಲ್ಲರು!" ಎಂದು ಪರಿ ಪರಿಯಿಂದ ದೀನನಾಗಿ ಪ್ರಾರ್ಥಿಸಿಕೊಂಡ. ಅದರಂತೆ ಆ ಗೌತಮೀ ನದಿಯನ್ನು ಕೂಡ "ಗಂಗಾ ತಾಯಿಯೇ ಮಹಾ ಪಾಪಿಷ್ಠನಾದ ಈ ದುರ್ಜಂತುವನ್ನು ನೀನೇ ಕರುಣೆಯಿಂದ ಕಾಪಾಡು. ನೀನು ಬರಿ ನೀರನ್ನು ತುಂಬಿದ ಜಲವಾಹಿನಿ ಮಾತ್ರವಲ್ಲ. ಕರುಣಾ ಕಲ್ಲೋಲನಿಯೂ ಆಗಿರುವೆ. ನನ್ನನ್ನು ರಕ್ಷಿಸು ಉದ್ಧರಿಸು. ನನ್ನ ಪಾಪಗಳನ್ನೆಲ್ಲ ತೊಳೆದು ಹಾಕು" ಎಂದು ಬೇಡಿಕೊಂಡ.

ಹೀಗೆ ಗಂಗೆ, ಗಂಗಾಜನಕರನ್ನು ಭಕ್ತಿಯಿಂದ ಸ್ತೋತ್ರಮಾಡಿ ಪ್ರಾರ್ಥಿಸಿದ್ದರ ಪರಿಣಾಮವಾಗಿ ಆ ಚಿಚ್ಚುಕ ಪಕ್ಷಿಗೆ ಆ ದುರ್ಯೋನಿಯಿಂದ ಮುಕ್ತಿಯಾಯಿತು. ಅದು ತನ್ನ ಪಾಪಶರೀರವನ್ನು ಬಿಟ್ಟು ಆ ಪರ್ವತಪ್ರಾಂತದಲ್ಲಿದ್ದವರೂ ಮತ್ತು ಪವಮಾನಮಹಾರಾಜನು ನೋಡುತ್ತಿರುವಂತೆಯೇ ವಿಮಾನದಲ್ಲಿ ಕುಳಿತು ಸ್ವರ್ಗಾರೋಹಣ ಮಾಡಿತು.

ಅನಂತರ ಆ ಪವಮಾನ ಮಹಾರಾಜನು ತನ್ನ ಪತ್ನಿ, ಪುತ್ರ, ಮಿತ್ರ, ಮಂತ್ರಿ, ಸೇನಾ ಪರಿವಾರದೊಂದಿಗೆ ತನ್ನ ರಾಜಧಾನಿಗೆ ತೆರಳಿದ. ಅಂದಿನಿಂದ ಆ ತೀರ್ಥಕ್ಕೆ ಪವಮಾನ ತೀರ್ಥ, ಚಿಚ್ಚುಕ ತೀರ್ಥ, ಗದಾಧರ ತೀರ್ಥ ಎಂದು ಹಲವಾರು ಹೆಸರುಗಳು ಬಂದು ಅದು ಪ್ರಪಂಚದಲ್ಲಿ ಪರಮ ಪಾವನ ತೀರ್ಥ ಎಂದು ಪ್ರಸಿದ್ಧಿ ಆಯಿತು.

## ನರಕಕ್ಕೆ ಹೋಗದಿರಲು ಉಪಾಯ

**ಬ್ರಹ್ಮ:-** ಸೂರ್ಯದೇವನಿಗೆ ಇಬ್ಬರು ಮಡದಿಯರು. ದೇವತೆಗಳ ಬಡಿಗನಾದ ವಿಶ್ವಕರ್ಮನ ಮಗಳಾದ ಉಷಾ ಎಂಬುವವಳು ಅವನ ಮೊದಲನೇ ಹೆಂಡತಿ ಉಷೆ ಅಲ್ಲದೇ ಸೂರ್ಯನಿಗೆ ಛಾಯಾ ಎಂಬ ಮತ್ತೊಬ್ಬ ಮಡದಿಯೂ ಇದ್ದಳು. ಉಷೆಯಲ್ಲಿ ಸೂರ್ಯನಾರಾಯಣನಿಗೆ ವೈವಸ್ವತಮನು ಎಂಬ ಗಂಡುಮಗನು ಇದ್ದನು. ಎರಡನೇ

ಹೆಂಡತಿಯಾದ ಛಾಯೆಯಲ್ಲಿ ಶನೀಶ್ವರ ಎಂಬ ಗಂಡುಮಗನೂ ವಿಷ್ಟಿ ಎಂಬ ಹೆಣ್ಣು ಮಗಳೂ ಇದ್ದರು. ಶನಿಯ ತಂಗಿಯಾದ ವಿಷ್ಟಿಯು ಮಹಾಕ್ರೂರಳೂ, ಅತ್ಯಂತ ಪಾಪಿಷ್ಠಳೂ, ಆಗಿದ್ದಳು. ಅವಳನ್ನು ಯಾರಿಗಾದರೂ ಯೋಗ್ಯ ವರನಿಗೆ ಮದುವೆಮಾಡಿ ಕೊಡಬೇಕೆಂದು ಸೂರ್ಯಭಗವಂತನು ಎಲ್ಲ ಕಡೆಗೂ ವಿಚಾರ ಮಾಡಿದನು. ಕೇಳಿದ ವರಗಳೆಲ್ಲರೂ ಅವಳನ್ನು ಸ್ಪಷ್ಟವಾಗಿಯೇ ನಿರಾಕರಿಸುತ್ತಿದ್ದರು. ಇಂಥ ದುಷ್ಟ ಹೆಂಡತಿಯನ್ನು ಕಟ್ಟಿಕೊಂಡರೆ ನಮ್ಮ ಗತಿಯೇನು ಎಂದು ತಿರುಗಿ ಸೂರ್ಯನನ್ನೇ ಕೇಳುತ್ತಿದ್ದರು. ಇದರಿಂದಾಗಿ ಎಷ್ಟು ಪ್ರಯತ್ನ ಮಾಡಿದರೂ ಅವಳಿಗೆ ಯಾವ ವರ ಹತ್ತಲಿಲ್ಲ. ಯಾರೂ ಅವಳನ್ನು ಒಪ್ಪಲಿಲ್ಲ. ಹೀಗೆ ನಿರುಪಾಯನಾಗಿ ಆ ದಿವಾಕರನೂ ಚಿಂತಿತನಾಗಿ ಕುಳಿತುಕೊಂಡ.

ಆಗ ದುಷ್ಟ ಸ್ವಭಾವದ ಆ ವಿಷ್ಟಿಯು ತನ್ನ ತಂದೆಯ ಬಳಿಗೆ ಬಂದು ಧೈರ್ಯದಿಂದ ಅವನನ್ನು ಅಧಿಕ್ಷೇಪಿಸಿ ನುಡಿದಳು. ''ತಂದೆಯೇ, ನೀನು ನನ್ನ ಮದುವೆ ಮಾಡದೇ ಹಾಗೆಯೇ ಕುಳಿತೆಯಲ್ಲ! ತಂದೆಯಾದವನು ಹತ್ತು ವರುಷ ತುಂಬುವುದರೊಳಗಾಗಿ ಮಗಳನ್ನು ರೂಪವಂತನೂ, ಗುಣವಂತನೂ, ಹಣವಂತನೂ, ವಿದ್ಯಾವಂತನೂ, ಸತ್ಕುಲ ಪ್ರಸೂತನೂ, ಕೀರ್ತಿವಂತನೂ ಆದ ವರನಿಗೆ ಕೊಟ್ಟು ಮದುವೆ ಮಾಡಬೇಕು. ಸಕಾಲದಲ್ಲಿ ಹೆಣ್ಣು ಮಕ್ಕಳ ಮದುವೆಮಾಡದಿದ್ದ ತಂದೆಗೆ ಘೋರ ನರಕವು ತಪ್ಪಿದ್ದಲ್ಲ.''

ಈ ಮಗಳ ಮಾತನ್ನು ಕೇಳಿ ಸೂರ್ಯನು ''ಪುತ್ರಿಯೇ, ನಾನು ಅದೇ ಪ್ರಯತ್ನ ದಲ್ಲಿದ್ದೇನೆ. ನೀನು ಹೇಳಿದ ಗುಣವುಳ್ಳ ಯಾವ ವರನೂ ಭಯಂಕರ ರೂಪ ಹಾಗೂ ದುರ್ಗುಣಗಳ ಮೂರ್ತಿಯಂತಿರುವ ನಿನ್ನನ್ನು ಮದುವೆಯಾಗಲು ಸಮ್ಮತಿಸುವುದಿಲ್ಲ. ಅದಕ್ಕೆ ಏನು ಮಾಡಲಿ'' ಎಂದೂ ಕೇಳಿದನು.

ಆಗ ವಿಷ್ಟಿಯು ''ಹೆಣ್ಣಾದ ಬಳಿಕ ಮದುವೆಯಂತೂ ಆಗಲೇ ಬೇಕು. ಒಳ್ಳೆ ವರ ಸಿಕ್ಕದಿದ್ದರೆ, ಎಂಥವನಿಗಾದರೂ ನನ್ನನ್ನು ಕೊಟ್ಟು ಮದುವೆಮಾಡು. ಮುಂದೆ ನನ್ನ ಅದೃಷ್ಟ ಇದ್ದಂತೆ ಆಗುವುದು'' ಎಂದು ಹೇಳಿದಳು.

ಮಗಳ ಮಾತನ್ನು ಕೇಳಿ ಆ ಸೂರ್ಯನು ತ್ವಷ್ಟುಪ್ರಜಾಪತಿಯ ಮಗನಾದ ವಿಶ್ವರೂಪ ಎಂಬುವ ವರನಿಗೆ ಕೊಟ್ಟು ಮದುವೆ ಮಾಡಿದ. ಅವನು ಕೂಡ ಇವಳಷ್ಟೇ ಭೀಕರವಾದ ಆಕಾರ, ಕ್ರೂರ ಸ್ವಭಾವವುಳ್ಳವನು ಆಗಿದ್ದ. ರೂಪ, ಗುಣಗಳಲ್ಲಿ ಅನುರೂಪವಾಗಿದ್ದಿತು ಅವರ ದಾಂಪತ್ಯ. ಕೆಲವು ವರ್ಷಗಳವರೆಗೆ ಅವರಿಬ್ಬರೂ ಪತಿ ಪತ್ನಿಯರೂ ಅನ್ಯೋನ್ಯ ಪ್ರೀತಿಯಿಂದ ಇದ್ದರು.

ಆದರೆ ಇಬ್ಬರೂ ದುಷ್ಟರ ಸಂಸಾರ ಹೇಗೆ ಚಿರಕಾಲ ಸರಸವಾಗಿ ನಡೆದೀತು. ಅವನು ಕ್ರೂರ, ಇವಳು ಕಠೋರೆ. ಅವನು ದುಷ್ಟ, ಇವಳು ದುರುಳೆ. ಅವಳು ಪಾಪಿ, ಇವನು ಸಂತಾಪಿ. ಅವನು ಮತ್ತ ಇವಳು ಉನ್ಮತ್ತೆ. ಹೀಗಾಗಿ ಕೆಲವೇ ದಿನಗಳಲ್ಲಿ ಕೊನೆಗೊಂಡಿತು ಅವರ ದಾಂಪತ್ಯ ಜೀವನ. ಪರಸ್ಪರ ದೀರ್ಘ ದ್ವೇಷವೇ ಅವರಿಬ್ಬರ ನಡುವೆ ಬೆಳೆದು ಬಿದ್ದಿತು. ಆ ದುಷ್ಟದಂಪತಿಗಳ ಹೊಟ್ಟೆಯಿಂದ ಗಂಡ, ಅತಿಗಂಪ ರಕ್ತಾಕ್ಷ, ಕ್ರೋಧನ, ವ್ಯಯ, ಮರ್ಮುಖಿ, ಹರ್ಷಣ ಎಂಬ ಆರು ಜನ ಮಕ್ಕಳು ಹುಟ್ಟಿದನು. ಅವರಲ್ಲಿ ಐದು ಜನರು ತಮ್ಮ ತಂದೆ ತಾಯಿಗಳಂತೆ ದುರ್ಗುಣಿಗಳಾಗದೇ ಒಳ್ಳೇ ಗುಣಗಳನ್ನೇ ಹೊಂದಿದ್ದರು. ಕೊನೆಯವನಾದ ಹರ್ಷಣನು ಕೂಡ ಒಳ್ಳೆ ಸಜ್ಜನ, ಪಾಪಭೀರು,

ಪುಣ್ಯವಂತ, ಸದ್ಗುಣಶಾಲಿ, ಶಾಂತ, ದಾಂತ ಪರಮ ಜ್ಞಾನಿಯು ಆಗಿದ್ದ. ಆದರೆ ದುರ್ದೈವದಿಂದ ದಟ್ಟ ದರಿದ್ರನೂ ಆಗಿದ್ದ.

ಒಂದು ದಿನ ಅವನು ತನ್ನ ಸೋದರ ಮಾವನಾದ ಯಮಧರ್ಮನನ್ನು ನೋಡಲು ಅವನ ರಾಜಧಾನಿಯಾದ ಸಂಯಮನೀಪುರಕ್ಕೆ ಹೋದ. ಅಲ್ಲಿ ಅನೇಕ ಪ್ರಾಣಿಗಳು ನರಕದಲ್ಲಿ ಬಿದ್ದು ಹೊರಳಾಡುತ್ತಿದ್ದವು. ನರಳಾಡುತ್ತಿದ್ದವು. ಅವರ ಆ ನರಕ ಯಾತನೆ ನೋಡಿ ಮನಸ್ಸಿಗೆ ಬಹಳ ದುಃಖವಾಯಿತು ಹರ್ಷನಿಗೆ. ಅವನು ಯಮಧರ್ಮನನ್ನು ನಮಸ್ಕರಿಸಿ ಕೈಮುಗಿದು ಕೇಳಿದ.

''ತೀರ್ಥಸ್ವರೂಪಿಯಾದ ತಂದೆಯೇ, ಈ ನಿನ್ನ ಸಂಯಮನೀಪುರದ ನರಕ ಲೋಕದಲ್ಲಿ ಎಷ್ಟು ಜನ ನರಲೋಕದ ಪ್ರಾಣಿಗಳು ದಾರುಣವಾದ ದುಃಖವನ್ನು ಅನುಭವಿಸುತ್ತಿರುವರು! ಅವರ ಪೂರ್ವಜನ್ಮದ ದುಷ್ಟಕರ್ಮದಿಂದ ಅವರಿಗೆ ಇಂಥ ಘೋರ ನರಕವು ಪ್ರಾಪ್ತವಾಗಿದೆ. ವಿಶ್ವರೂಪ, ವಿಷ್ಟಿ ದಂಪತಿಗಳಿಗೆ ನಾವು ಆರು ಜನ ಮಕ್ಕಳು. ಆ ನಮ್ಮ ತಾಯಿ ತಂದೆಗಳಿಬ್ಬರೂ ಭೀಕರ ಆಕಾರ, ಕ್ರೂರ ಸ್ವಭಾವ, ಘೋರ ಆಚಾರವುಳ್ಳವರು, ಆದರೆ ಅವರ ಮಕ್ಕಳಾದ ನನ್ನ ಸಹೋದರರೆಲ್ಲರೂ ಮಹಾತ್ಮರೂ, ಧರ್ಮಾತ್ಮರೂ, ಶಾಂತ ಸ್ವಭಾವದವರೂ ಆಗಿರುತ್ತಾರೆ. ಆ ನನ್ನ ಸಹೋದರರಿಗೂ ಮತ್ತು ನನ್ನ ದುಷ್ಟರಾದ ತಾಯಿತಂದೆಗಳಿಗೂ ಇಂಥ ಘೋರ ನರಕವು ಎಂದಿಗೂ ಆಗಬಾರದು. ಅದಕ್ಕೆ ಏನು ಉಪಾಯ ಹೇಳು. ನಮ್ಮವರು ಯಾರೂ ನಿನ್ನ ಲೋಕಕ್ಕೆ ಬಾರದೇ ಸ್ವರ್ಗಲೋಕಕ್ಕೆ ಹೋಗುವಂತೆ ಆಗಬೇಕು. ನನ್ನ ಸೋದರರ ಹಾಗೂ ಮಾತಾ ಪಿತೃಗಳ ಪುಣ್ಯಲೋಕ ಪ್ರಾಪ್ತಿಗೆ, ಒಂದು ನಿರುಪಾಯ ಉಪಾಯವನ್ನು ನನಗೆ ದಯವಿಟ್ಟು ಹೇಳಿಕೊಡು'' ಎಂದು ಪ್ರಾರ್ಥಿಸಿದ.

ಹರ್ಷಣನ ಮಾತನ್ನು ಕೇಳಿ ಯಮಧರ್ಮನು ಅವನಿಗೆ ನುಡಿದ ''ಹರ್ಷಣ ನೀನು ಮಾತನಾಡಿದ್ದು ನಿನ್ನ ತಾಯಿಯ ತಂದೆಯಾದ ಸೂರ್ಯನಾರಾಯಣನಿಗೆ ಅನೂರೂಪ ವಾಗಿಯೇ ಇದೆ. ನಿನ್ನ ಪರಿವಾರದವರೆಲ್ಲರಿಗೂ ನರಕದರ್ಶನ ಆಗದೇ ಪುಣ್ಯಲೋಕ ಪ್ರಾಪ್ತಿಯಾಗಲು ಒಂದು ಉಪಾಯವಿದೆ. ನೀನು ಮೊದಲು ಗೌತಮೀತೀರಕ್ಕೆ ಹೋಗು. ಅಲ್ಲಿ ಹೋಗಿ ಸ್ನಾನ ಮಾಡಿ ಒಂದೇ ಮನಸ್ಸಿನಿಂದ ವಿಷ್ಣುವನ್ನು ಸ್ತೋತ್ರ ಮಾಡು. ಆಗ ಭಗವಂತನು ಭಕ್ತಿಗೆ ಮೆಚ್ಚಿ ಸಂತುಷ್ಟನಾದರೆ ಅವನು ನಿನಗೆ ಅಭೀಷ್ಟವಾದ ವರವನ್ನು ಕೊಡುವನು ಎಂದು ಹೇಳಿದನು.

ಯಮಧರ್ಮನ ಮಾತಿನಂತೆ ಹರ್ಷಣನು ಗೌತಮೀತೀರಕ್ಕೆ ಹೋಗಿ ಅಲ್ಲಿ ಸ್ನಾನ ಮಾಡಿ, ಶುಚಿರ್ಭೂತನಾಗಿ ವಿಷ್ಣುವನ್ನು ಸ್ತೋತ್ರ ಮಾಡಿದ, ಭಕ್ತಿಯಿಂದ ಆರಾಧಿಸಿದ. ಏಕಾಗ್ರ ಮನಸ್ಸಿನಿಂದ ತಪಸ್ಸನ್ನು ಮಾಡಿದ. ಅದರಿಂದ ಹರಿಯು ಪ್ರೀತನಾದ ''ನನ್ನ ತಾಯಿ ತಂದೆಗಳಿಗೂ, ಸಹೋದರರಿಗೂ, ನನಗೂ ಎಲ್ಲರಿಗೂ ನರಕ ದರ್ಶನವಾಗದೇ, ನಿನ್ನ ಪೂರ್ಣ ಅನುಗ್ರಹವಾಗಿ ಪುಣ್ಯಲೋಕ ಪ್ರಾಪ್ತಿಯಾಗುವಂತೆ ಅನುಗ್ರಹಿಸು'' ಎಂದು ಕೇಳಿಕೊಂಡ. ''ತಥಾಸ್ತು''ಎಂದು ಭಗವಂತನು ಸುಪ್ರಸನ್ನನಾಗಿ ಆ ಹರ್ಷಣನನಿಗೆ ಅಭೀಷ್ಟವಾದ ವರವನ್ನು ಕರುಣಿಸಿದ ಮತ್ತು ಅವನಿಗೆ ಕುಲಭದ್ರ ಎಂಬ ವರವನ್ನು ಕೊಟ್ಟು, ನಿನ್ನ ಸಂಬಂಧಿಗಳೆಲ್ಲರೂ, ಭದ್ರರು ಎಂದು ಹೆಸರುಳ್ಳವರು ಆಗಲಿ ಎಂದು ವರವನ್ನು

ನೀಡಿದ. ಅಂದಿನಿಂದ ಹರ್ಷಣನ ತಾಯಿ ಭದ್ರಾ, ತಂದೆ ಭದ್ರ, ಮಕ್ಕಳೆಲ್ಲರೂ ಭದ್ರರು ಎಂದೇ ಪ್ರಸಿದ್ಧರಾದರು. ಆ ತೀರ್ಥಕ್ಕೂ ಕೂಡ ಭದ್ರ ತೀರ್ಥ ಎಂದೇ ಹೆಸರು ಬಂದಿತು. ಭದ್ರ ಎಂದರೇ ಕಲ್ಯಾಣ. ಶ್ರೀಹರಿಯೇ ಜನರಿಗೆಲ್ಲ ಸುಭದ್ರವನ್ನು ಉಂಟುಮಾಡುವ ಕಲ್ಯಾಣಮೂರ್ತಿ. ಇಲ್ಲಿಯ ಈ ಭದ್ರತೀರ್ಥದಲ್ಲಿ ಸ್ನಾನ ಮಾಡುವವರು ಭದ್ರಪತಿಯಾದ ಹರಿಯ ಪರಮಾನುಗ್ರಹ ಹೊಂದಿ ಸ್ವರ್ಗಾದಿ ಸದ್ಗತಿಯನ್ನು ಹೊಂದುತ್ತಾರೆ.

## ಪತತ್ರಿ ತೀರ್ಥ ವರ್ಣನ

**ಬ್ರಹ್ಮ:**- ನಾರದ, ಪತತ್ರಿ ಎಂಬ ತೀರ್ಥ ಪರಮ ಪವಿತ್ರ. ಅದರ ಚರಿತ್ರ ಅತಿ ವಿಚಿತ್ರ. ಅದನ್ನು ನಿರೂಪಿಸುತ್ತೇನೆ ಶ್ರವಣ ಮಾಡು.

ಅಂತರ್ವೇದಿ ಎಂಬ ನಗರದಲ್ಲಿ ಅಸಂದಿವ ಎಂಬ ಒಬ್ಬ ಬ್ರಾಹ್ಮಣನಿದ್ದ. ಅವನು ವೇದ ಗಳಲ್ಲಿ ಕೋವಿದ. ಶಾಸ್ತ್ರಗಳಲ್ಲಿ ಸಿದ್ಧ ಹಸ್ತ ಪುರಾಣಗಳಲ್ಲಿ ಪಾರಂಗತ. ಇದರಂತೆ ಅವನ ಸೋದರರೂ ಪಂಡಿತರೂ ಸದ್ಗುಣಿಗಳೂ ಸದಾಚಾರ ಸಂಪನ್ನರೂ ಆಗಿದ್ದರು. ಅವರಲ್ಲಿ ಕೊನೆಯವನಾದ ಆಸಂದಿವ ಎಲ್ಲರಿಗಿಂತ ಬುದ್ಧಿವಂತ, ಒಳ್ಳೆ ರೂಪವಂತ, ಗುಣವಂತ. ಈ ಕಿರಿಯ ಮಗನ ಮದುವೆ ಮಾಡಬೇಕೆಂದು ತಂದೆ ಸಿದ್ಧತೆಯನ್ನು ನಡೆಸಿದ. ಒಂದು ದಿನ ತಂದೆ ಮಲಗಿದಾಗ ಓರ್ವ ಘೋರರಾಕ್ಷಸಿಯು ಬಂದು ಮಲಗಿದ ಆಸಂದಿವನನ್ನು ಎತ್ತಿಕೊಂಡು ಹೋದಳು. ಮಲಗಿದಾಗ ತಲೆಗೆ ಏನನ್ನೂ ಸುತ್ತಿಕೊಂಡಿದಿಲ್ಲ. ಮಲಗುವಾಗ ಶ್ರೀಹರಿಯನ್ನು ಸ್ಮರಿಸಿದ್ದಿಲ್ಲ. ಆದುದರಿಂದ ಆ ರಕ್ಕಸಿಗೆ ಅವನನ್ನು ಅಪಹರಿಸುವುದು ಸುಲಭ ಸಾಧ್ಯವಾಯಿತು.

ಗೌತಮೀನದಿಯ ದಕ್ಷಿಣ ತೀರದಲ್ಲಿ ಶ್ರೀಗಿರಿಯ ಉತ್ತರಕ್ಕೆ ಧರ್ಮನಿಲಯ ಎಂಬ ನಗರವಿದೆ. ಬೃಹತ್ಕೀರ್ತಿ ಎಂಬ ರಾಜ ಅದನ್ನು ಆಳುತ್ತಿದ್ದ ಅವನ ರಾಜಧಾನಿಯಾದ ಆ ನಗರಕ್ಕೆ ಆಸಂದಿವನನ್ನು ರಕ್ಕಸಿಯು ಹೊತ್ತು ತಂದು ಒಂದೆಡೆ ಇರಿಸಿದಳು. ತಾನು ಒಬ್ಬ ಮುದುಕಿಯ ವೇಷ ಧರಿಸಿ ಆಸಂದಿವನಿಗೆ ಹೇಳಿದಳು. ''ಬ್ರಾಹ್ಮಣ ನೀನು ಈ ನಗರದಲ್ಲಿ ನಿನ್ನ ಬ್ರಾಹ್ಮಣ ಧರ್ಮಕ್ಕೆ ಉಚಿತವಾದ ಸ್ನಾನ ಸಂಧ್ಯೆ ಮಾಡಿಕೊಂಡು ಇರು. ಜನರಿಗೆಲ್ಲ ನಾನು ನಿನ್ನ ತಾಯಿ ಎಂದು ಹೇಳು. ಇಲ್ಲದಿದ್ದರೆ ನಿನ್ನನ್ನು ಕೊಂದು ಹಾಕುತ್ತೇನೆ.''

ಅವಳ ಮಾತನ್ನು ಕೇಳಿ ಹೆದರಿಹೋದ ಆಸಂದಿವ ಅವಳನ್ನು ಕುರಿತು ''ನೀನು ಯಾರು'' ಎಂದು ಹೇಳಿದ.

ಅದಕ್ಕೆ ಆ ರಕ್ಕಸಿಯು ನಕ್ಕು ''ನಾನು ಕಾಮರೂಪಿಯಾದ ರಾಕ್ಷಸಿ, ಕಂಕಾಲಿನಿ ಎಂದು ನನ್ನ ಹೆಸರು. ನೀನು ನಾನು ಹೇಳಿದಂತೆ ಕೇಳಿದರೆ, ಹೇಳಿದ್ದನ್ನು ಮಾಡಿದರೆ ನಿನಗೆ ನಾನು ಏನೂ ಮಾಡುವದಿಲ್ಲ. ನನ್ನ ಮಾತಿಗೆ ವಿರುದ್ಧವಾಗಿ ನಡೆದರೆ ಮಾತ್ರ ನಿನ್ನನ್ನು ಕೊಲ್ಲದೆ ಬಿಡುವದಿಲ್ಲ ಎಂದು ಗಟ್ಟಿಸಿ ಹೇಳಿದಳು.

ಆಗ ಭಯಭ್ರಾಂತನಾದ ಆಸಂದಿವ ಅವಳಿಗೆ ''ನೀನು ಹೇಳಿದಂತೆ ನಡೆಯುತ್ತೇನೆ. ನಿನ್ನ ಆಜ್ಞೆಯನ್ನು ಪಾಲಿಸುತ್ತೇನೆ'' ಎಂದು ತಿಳಿಸಿದ.

ಅನಂತರ ಕಂಕಾಲಿನಿಯು ವೃದ್ಧನಾರಿಯ ರೂಪವನ್ನು ಧರಿಸಿ ಆಸಂದಿವನನ್ನ ಕರೆದುಕೊಂಡು ''ಇವನು ನನ್ನ ಮಗ'' ಎಂದು ಹೇಳುತ್ತ ಎಲ್ಲ ಕಡೆಗೂ ಸಂಚಾರ

ಮಾಡುತ್ತಿದ್ದಳು. ಮುದುಕಿಯಾದರೂ ಆ ಮಾಯಾಂಗನೆಯು ತನ್ನ ಅಂಗಸೌಷ್ಠವದಿಂದ ಒಳ್ಳೆ ಸುಂದರಿಯಾದ ಸೀಮಂತಿನಿಯಂತೆ ತೋರುತ್ತಿದ್ದಳು. ಜನರೆಲ್ಲರೂ ಅವಳೊಬ್ಬ ಸಾಧ್ವೀಶಿಖಾಮಣಿಯಾದ ಮುಪ್ಪಿನ ಮುತ್ತೈದೆ ಎಂದು ಗೌರವಿಸುತ್ತಿದ್ದರು. ಅವಳು ಆಸಂದಿವನನ್ನು ಎಲ್ಲರಿಗೂ ಪರಿಚಯಿಸಿ "ಇವನು ನನ್ನ ಮಗ. ಇವನ ಹೆಸರು ಗುಣಾಕರ" ಎಂದು ಹೇಳಿ ಅವನೊಡನೆ ಎಲ್ಲ ಕಡೆಗೂ ಸುತ್ತಿದಳು. ಆಸಂದಿವನೂ ಒಳ್ಳೆ ಸುಕುಮಾರ. ಸುಂದರಾಂಗ. ತರುಣ ತೇಜಸ್ವಿ. ಬ್ರಹ್ಮವರ್ಚಸ್ವಿ. ಅವನ ಸುಂದರ ರೂಪ ಹಾಗೂ ಶೀಲ ಸದ್ಗುಣಗಳನ್ನು ನೋಡಿ ಆ ಊರಲ್ಲಿರುವ ಓರ್ವ ವಿಪ್ರೋತ್ತಮನು ತನ್ನ ಮಗಳನ್ನು ಆಸಂದಿವನಿಗೆ ಕೊಟ್ಟು ಮದುವೆ ಮಾಡಿದ. ಅವನ ಮಗಳು ರೂಪವತಿಯೂ, ಗುಣವತಿಯೂ ಕಾಂತಿಮತಿಯೂ ಆಗಿದ್ದಳು. "ಸದ್ಗುಣಮಣಿಗಳಿಗೆ ಖಣಿಯಂತಿರುವ ಮಡದಿ ಹಾಗೂ ತಾನೂ ಇಬ್ಬರೂ ಆ ದುಷ್ಟ ರಕ್ಕಸಿಯ ಕೈಯಲ್ಲಿ ಸಿಕ್ಕು ಹಾಕಿಕೊಂಡಿದ್ದು ಒಂದಿಲ್ಲ ಒಂದು ದಿನ ಇವಳು ತಮ್ಮನ್ನು ಕೊಂದು ಹಾಕುವದು ನಿಶ್ಚಿತ. ಇವಳ ಕೈಯಿಂದ ಪಾರಾಗುವ ಬಗೆ ಹೇಗೆ" ಎಂದು ಆಸಂದಿವ ಯೋಚಿಸತೊಡಗಿದ.

ಒಂದು ದಿನ ಅವನು ಏಕಾಂತದಲ್ಲಿ ತನ್ನ ಪ್ರಿಯ ಪತ್ನಿಗೆ ಎಲ್ಲ ಸಮಾಚಾರವನ್ನೂ ತಿಳಿಸಿ "ಈ ರಾಕ್ಷಸಿಯ ಕೈಯಿಂದ ಪಾರಾಗುವ ಬಗೆ ಹೇಗೆ? ತಡಮಾಡಿದರೆ ಈ ದಾನವಿಯು ತಮ್ಮಿಬ್ಬರನ್ನೂ ಮುರಿದು ತಿಂದು ಬಿಡುವಳು. ಈ ಘೋರ ಸಂಕಟದಿಂದ ಸುರಕ್ಷಿತವಾಗಿ ನಮ್ಮನ್ನು ಯಾರು ಪಾರುಗಾಣಿಸಬಲ್ಲರು" ಎಂದು ಚಿಂತೋದ್ಭ್ರಾಂತನಾಗಿ ನುಡಿದ.

ಆಸಂದಿವ ಮಡದಿಯ ಚೆಲುವಿಯಿದ್ದಂತೆ ಚತುರೆಯೂ ಆಗಿದ್ದಳು. ವಿನಯವತಿ ಆದಂತೆ ವಿವೇಕವತಿಯೂ ಆಗಿದ್ದಳು. ತನ್ನ ಪತಿಯ ದುರಂತ ಚಿಂತೆಯನ್ನು ತಿಳಿದ ಅವಳು ಕ್ಷಣ ಕಾಲ ಆಲೋಚನೆಗೈದು ಹೇಳಿದಳು. "ಪತಿದೇವ, ಇದಕ್ಕೇಕೆ ಇಷ್ಟು ಚಿಂತೆ? ತಾವು ಹೇಗೂ ಗೌತಮೀ ತೀರದಲ್ಲಿ ಇರುವಿರಿ. ಇಲ್ಲಿ ಸಾಕ್ಷಾತ್ ಶ್ರೀಹರಿಯೇ ನಾರಾಯಣ ರೂಪದಿಂದ ನೆಲಿಸಿರುವನು. ಅವನನ್ನು ಭಕ್ತಿಯಿಂದ ಭಜಿಸಿರಿ ಶ್ರದ್ಧೆಯಿಂದ ಪೂಜಿಸಿರಿ. ನಿಮ್ಮನ್ನು ಆ ಶ್ರೀಹರಿಯೇ ಈ ರಕ್ಕಸಿಯ ಕೈಯಿಂದ ಪಾರು ಮಾಡುವನು. ವಿಷ್ಣುಭಕ್ತರಿಗೆ ಭಯವೆಲ್ಲಿ? ಗೌತಮೀ ನದಿಯ ಗಂಗಾಜಲದಲ್ಲಿ ಸ್ನಾನಮಾಡಿದವರಿಗೆ ಅಪಾಯವೆಲ್ಲಿ? ಇಲ್ಲಿ ಮಿಂದು ನಾರಾಯಣನ ಮುಂದೆ ನಿಂದು ಅವನನ್ನು ಪ್ರಕ್ರಿಯಾವನತರಾಗಿ ಪ್ರಾರ್ಥಿಸಿರಿ. ಭಕ್ತ್ಯುದ್ರೇಕದಿಂದ ಅರ್ಚಿಸಿರಿ. ಆ ಪರಮಾತ್ಮ ಪ್ರೀತನಾಗಿ ಭಯನಿವಾರಣ ಮಾಡುವನು."

ಭಾರ್ಯೆ ಆಡಿದ ಈ ಬೋಧ ಪ್ರಸಾದವಾದ ನುಡಿಯನ್ನು ಕೇಳಿ ಆಸಂದಿವನ ಭಕ್ತಿ ಭಾವಭರಿತನಾಗಿ ನಾರಾಯಣನನ್ನು ಪ್ರಾರ್ಥಿಸಿದನು.

**ತ್ವಮಂತರಾತ್ಮಾ ಜಗತೋಽಸ್ಯ ನಾಥ ತ್ವಮೇವ ಕರ್ತಾಸ್ಯ ಮುಕುಂದಹರ್ತಾ ।**
**ತ್ವಂ ಪಾಲಕಃ ಪಾಲಯಸೇನ ದೀನಮನಾಥಬಂಧೋ ನರಸಿಂಹ ಕಸ್ಮಾತ್ ॥**

ಜಗದೊಡೆಯನಾದ ನರಸಿಂಹ, ನೀನು ಈ ಎಲ್ಲ ಜಗತ್ತಿಗೂ ಅಂತರ್ಯಾಮಿಯಾಗಿ ನಿಯಾಮಕನಾಗಿರುವೆ. ಈ ಪ್ರಪಂಚವನ್ನೆಲ್ಲ ಹುಟ್ಟಿಸಿದವನು ನೀನೇ. ಹುಟ್ಟಿದ ಎಲ್ಲರನ್ನೂ ರಕ್ಷಿಸುವವನೂ ನೀನೇ. ಕೊನೆಯಲ್ಲಿ ಎಲ್ಲರನ್ನೂ ಸಂಹರಿಸುವವನೂ, ಅಂತ್ಯದಲ್ಲಿ ಮೋಕ್ಷವನ್ನು ಕರುಣಿಸುವವನೂ ನೀನೇ ಆಗಿರುವೆ. ನೀನು ಅನಾಥ ಬಂಧು. ನಾನು ಅನಾಥ, ದೀನ, ಇಂಥ ನನ್ನನ್ನು ಏಕೆ ಉದ್ಧರಿಸಲೊಲ್ಲೆ?

ಅಸಂದಿವನ ಈ ಕರುಣಾಭರಿತ ದೀನ ಪ್ರಾರ್ಥನೆಯನ್ನು ಆಲಿಸಿ ಶ್ರೀಮನ್ನಾರಾಯಣನು ತಕ್ಷಣದಲ್ಲಿ ಪ್ರತ್ಯಕ್ಷನಾದ. ತನ್ನ ಸುದರ್ಶನ ಚಕ್ರದಿಂದ ಕಂಕಾಲಿನಿ ಎಂಬ ಆ ಕ್ರೂರ ರಾಕ್ಷಸಿಯನ್ನು ಹೊಡೆದು, ಕತ್ತರಿಸಿ, ಕೊಂದುಹಾಕಿದ ಮತ್ತು ಅಸಂದಿವ ದಂಪತಿಗಳಿಗೆ ಬೇಕಾದ ವರವನ್ನು ಕೊಟ್ಟು ಆ ಕುಟುಂಬದ ಎಲ್ಲರನ್ನೂ ಅನುಗ್ರಹಿಸಿದ. ಅಸಂದಿವನ ತಾಯಿ, ತಂದೆ, ಸೋದರ ಎಲ್ಲರೂ ಬಂದು ಆ ನಾರಾಯಣದೇವರು ನೆಲೆನಿಂತ ನಾರಾಯಣ ತೀರ್ಥದಲ್ಲಿ ಸ್ನಾನಮಾಡಿ ಭಕ್ತಿಯಿಂದ ಭಗವಂತನನ್ನು ಭಜಿಸಿ, ಪ್ರಾರ್ಥಿಸಿ, ಪೂತರಾಗಿ, ಸದ್ಗತಿಯನ್ನು ಹೊಂದಿದರು. ವಿಪ್ರೋತ್ತಮನಾದ ಅಸಂದಿವನು ಸ್ನಾನಮಾಡಿ ಸಕುಟುಂಬ ಉದ್ಧಾರ ಹೊಂದಿದ್ದರಿಂದ ಅದಕ್ಕೆ ವಿಪ್ರತೀರ್ಥ ಎಂದೂ ಹೆಸರಾಯಿತು.

## ಭಾನುತೀರ್ಥ ಮಹಿಮೆ

**ಬ್ರಹ್ಮ**:- ಭಾನುತೀರ್ಥದ ಸನಿಹದಲ್ಲಿಯೇ ತ್ವಾಷ್ಟ್ರತೀರ್ಥ, ಮಾಹೇಶ್ವರ ತೀರ್ಥ, ಐಂದ್ರ ತೀರ್ಥ, ಆಗ್ನೇಯ ತೀರ್ಥ ಎಂಬ ಮತ್ತೆ ಬೇರೆ ತೀರ್ಥಗಳೂ ಇರುತ್ತವೆ. ಅವುಗಳ ಮಹಿಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಅಭಿಷ್ಟುತ ಎಂಬ ಭೂಪಾಲನು ಇದ್ದ. ಅವನು ಒಮ್ಮೆ ಅಶ್ವಮೇಧ ಯಜ್ಞವನ್ನು ಮಾಡಬೇಕೆಂದು ಸಂಕಲ್ಪಿಸಿದ. ವಶಿಷ್ಠ, ಅತ್ರಿ, ವಾಮದೇವ ಮೊದಲಾದ ಮಹಾಮಹಾಮುನಿಗಳೂ, ರಾಜರೂ, ಗೃಹಸ್ಥರೂ ಆ ಅಶ್ವಮೇಧ ಯಾಗಕ್ಕಾಗಿ ಆಗಮಿಸಿದ್ದರು. ಮಹರ್ಷಿ ವಶಿಷ್ಠರ ಸೂಚನೆಯಂತೆ ಅಭಿಷ್ಟುತ ಮಹಾರಾಜನು ಯಾಗಕ್ಕಾಗಿ ಭೂಮಿಯನ್ನು ನೀಡಬೇಕೆಂದು ಸೂರ್ಯನನ್ನು ಪ್ರಾರ್ಥಿಸಿದನು. ಸವಿತೃದೇವನು ಸಂತೋಷದಿಂದ ಪವಿತ್ರವಾದ ವೇದಿಕೆಯನ್ನು ನೀಡಿದನು. ಅಲ್ಲಿ ಮಹಾರಾಜನು ವೈಭವದಿಂದ ಅಶ್ವಮೇಧಯಜ್ಞವನ್ನು ಯಥಾಸಾಂಗವಾಗಿ ನೆರವೇರಿಸಿದನು. ಭಾನುಪ್ರದತ್ತವಾದ ಭೂಭಾಗದಲ್ಲಿ ಆ ಯಜ್ಞ ನಡೆದದ್ದರಿಂದ ಅದಕ್ಕೆ ಭಾನುತೀರ್ಥವೆಂದು ಹೆಸರು ಬಂದಿತು. ದೇವತೆಗಳ ಉದ್ದೇಶದಿಂದ ಮಾಡಿದ ಈ ಯಜ್ಞಕ್ಕೆ ಅನೇಕ ದೇವತೆಗಳು ಬಂದಿದ್ದರು. ಅದರಂತೆ ಎಷ್ಟೋ ದೈತ್ಯರೂ ಕೂಡ ಬ್ರಾಹ್ಮಣ ರೂಪ ವೇಷ ತೊಟ್ಟು ಯಜ್ಞವಾಟದಲ್ಲಿ ನುಗ್ಗಿಬಿಟ್ಟರು. ಭಸ್ಮ, ಊರ್ಧ್ವಪುಂಡ್ರ, ನಾಮ ಮುದ್ರಾದಿಗಳನ್ನು ಧರಿಸಿ ಸಾಮಗಾಯನವನ್ನು ಮಾಡುತ್ತ ಯಜ್ಞಶಾಲೆಯಲ್ಲಿ ಪ್ರವೇಶಿಸಿದ ಆ ಪ್ರಚ್ಛನ್ನ ದೈತ್ಯರನ್ನು ಯಾರಿಗೂ ತಡೆಯಲಿಕ್ಕೆ ಆಗಲಿಲ್ಲ. ಒಳಗೆ ಬಂದ ಆ ಬ್ರಾಹ್ಮಣ ವೇಷಿಗಳು ಯಜ್ಞವಾಟದಲ್ಲಿಯೇ ಕುಳಿತು ಚಮಸ ಪಾತ್ರ ಸೋಮಲತೆ, ಸೋಮಪಾನ ಮುಂತಾದ ಯಾಜ್ಞಿಕ ವಿಧಿಗಳನ್ನೂ ಋತ್ವಿಜರನ್ನೂ ಹಾಸ್ಯಮಾಡಿ ನಿಂದಿಸುತ್ತ ಕುಳಿತಿದ್ದರು. ಯಾರಿಗೂ ಅವರು ದೈತ್ಯರೆಂದು ಸಂದೇಹವೇ ಬರಲಿಲ್ಲ. ಆದರೆ ಸೂಕ್ಷ್ಮಮತಿಗಳಾದ ತ್ವಷ್ಟ್ರವಿನ ಮಗ ವಿಶ್ವರೂಪಾಚಾರ್ಯರು ಕಂಡು ಹಿಡಿದರು ಇವರೆಲ್ಲರೂ ದೈತ್ಯಾಧಮರೆಂದು. ತಿಳಿದಕೂಡಲೆ ವಿಶ್ವರೂಪನು ತಂದೆಗೆ ಅಂಗುಲಿ ನಿರ್ದೇಶಪೂರ್ವಕವಾಗಿ ಇವರೆಲ್ಲ ದಾನವರೆಂದು ತೋರಿಸಿದ. ಆಗ ತ್ವಷ್ಟಾರನು ದೇವತೆಗಳನ್ನು ಕರೆದು ಯಜ್ಞವೇದಿಕೆಯ ಸುತ್ತಲೂ ಯಜ್ಞಮಂಟಪದ ಒಳಗೂ ರಕ್ಷೋಘ್ನ ಮಂತ್ರದಿಂದ ನೀರನ್ನು ಅಭಿಮಂತ್ರಣ ಮಾಡಿ ಎಲ್ಲ ಕಡೆಗೂ ಪ್ರೋಕ್ಷಣ ಮಾಡಿರೆಂದು ಹೇಳಿದ. ಅದರಂತೆ ದೇವತೆಗಳು ಅಭಿಮಂತ್ರಿತ ಜಲವನ್ನು ಎಲ್ಲ ಕಡೆಗೂ ಸಿಂಪಡಿಸಿದರು. ಅದರಿಂದ ಅನೇಕ

ರಾಕ್ಷಸರು ಇದ್ದಲ್ಲಿಯೇ ಸುಟ್ಟು ಬೂದಿಯಾದರು. ಹಲವರು ಹೆದರಿ ಓಡಿಹೋದರು. ಇದರಿಂದ ಅದಕ್ಕೆ ತ್ವಾಷ್ಟ್ರತೀರ್ಥ ಎಂದು ಹೆಸರಾಯಿತು.

ತ್ವಷ್ಟಾರನ ಮಾತನ್ನು ಕೇಳದೆ ಋತ್ವಿಜರನ್ನು ಹೊಡೆಯಬಂದ ಅಸುರರನ್ನು ಯಮನು ತನ್ನ ಯಮದಂಡದಿಂದ ಹೊಡೆದು ನಾಶಪಡಿಸಿದನು. ಅದರಿಂದ ಅದು ಯಾಮ್ಯತೀರ್ಥ ಎಂದು ಪ್ರಸಿದ್ಧಿ ಪಡೆಯಿತು. ರಾಕ್ಷಸರೆಲ್ಲ ನಾಶವಾದ ಬಳಿಕ ಮಹಾರಾಜನು ಆಜ್ಯಧಾರೆಯಿಂದ ಆಹುತಿಯನ್ನು ಕೊಟ್ಟು ಅಗ್ನಿಯನ್ನು ಸಂತೃಪ್ತಿಪಡಿಸಿದ್ದರಿಂದ ಅಗ್ನಿತೀರ್ಥವು ರೂಪುಗೊಂಡಿತು. ಅಭಿಷ್ಟುತ ಮಹಾರಾಜನ ಯಜ್ಞದಿಂದ ಇಂದ್ರನು ಸಂತುಷ್ಟನಾಗಿ ನೀನು ಚಕ್ರವರ್ತಿ ರಾಜನಾಗಿ ಬಹುಕಾಲ ಬಾಳು ಎಂದು ಅನುಗ್ರಹಿಸಿದ್ದರಿಂದ ಅಲ್ಲಿ ಇಂದ್ರತೀರ್ಥ ನಿರ್ಮಾಣವಾಯಿತು. ಆ ಪುಣ್ಯಭೂಮಿಯಲ್ಲಿ ನಿಂತು ಅಭಿಷ್ಟುತನು ವಿಷ್ಣುವನ್ನೂ ಮಹೇಶ್ವರನನ್ನೂ ಭಕ್ತಿಯಿಂದ ಆರಾಧಿಸಿ ವರವನ್ನು ಪಡೆದಿದ್ದರಿಂದ ಅದಕ್ಕೆ ಮಹೇಶ್ವರ ತೀರ್ಥ ಎಂದು ಅಭಿದಾನವು ಪ್ರಾಪ್ತವಾಯಿತು.

## ಭೀಮತೀರ್ಥ

**ಬ್ರಹ್ಮ:-** ಗೌತಮೀ ನದಿಯ ದಕ್ಷಿಣತೀರದಲ್ಲಿರುವ ಶ್ರೀಗಿರಿಯ ಉತ್ತರಭಾಗದಲ್ಲಿ ಆದಿಕೇಶ ಎಂಬ ಹೆಸರಿನ ಲಿಂಗರೂಪಿಯಾದ ಮಹಾದೇವನು ಇರುವನು. ಆ ಸ್ಥಳದಲ್ಲಿ ಸಿಂಧುದ್ವೀಪ ಎಂಬ ಒಬ್ಬ ಧಾರ್ಮಿಕ ಬುದ್ಧಿಯ ಋಷಿಯು ವೇದ ಎಂಬ ತನ್ನ ತಮ್ಮನೊಂದಿಗೆ ವಾಸಿಸುತ್ತಿದ್ದ. ಇಬ್ಬರೂ ಆದಿಕೇಶನ ಪರಮಭಕ್ತರು. ಪ್ರತಿದಿನವೂ ಮಧ್ಯಾಹ್ನದಲ್ಲಿ ಆ ಶಿವಸ್ವಾಮಿಯನ್ನು ಭಕ್ತಿಯಿಂದ ಪೂಜಿಸುತ್ತಿದ್ದರು. ಅದೇ ಪರ್ವತದಲ್ಲಿ ಓರ್ವ ಅನಾಮಧೇಯನಾದ ಬೇಡಜಾತಿಯ ಶಿವಭಕ್ತನೂ ಇದ್ದ. ಸಿಂಧುದ್ವೀಪ ಹಾಗೂ ಅವನ ಸೋದರ ವೇದ ಇಬ್ಬರೂ ಪೂಜೆಮಾಡಿ ಹೋದ ಬಳಿಕ ಬೇಡನು ಬಂದು ಆದಿಕೇಶ ಲಿಂಗವನ್ನು ಪೂಜಿಸುತ್ತಿದ್ದನು. ಆದರೆ ಆ ಬೇಡನ ಪೂಜೆಯು ಮಾತ್ರ ಅತಿವಿಚಿತ್ರವೂ ಅಸಹ್ಯವೂ ಆಗಿದ್ದಿತು. ಅವನು ಗಂಗಾನದಿಯಲ್ಲಿ ಸ್ನಾನಮಾಡಿ ಬಾಯಿತುಂಬ ನೀರು ತುಂಬಿಕೊಂಡು ಬಂದು ಶಿವಲಿಂಗದ ಮೇಲೆ ಉಗುಳಿ ತನ್ನ ಗಂಡೂಷ ಜಲದಿಂದಲೇ ಅಭಿಷೇಕ ಮಾಡುತ್ತಿದ್ದನು. ತಾನು ಬೇಟೆ ಆಡಿಕೊಂಡು ತಂದ ಮೃಗಪಕ್ಷಿಗಳ ಮಾಂಸವನ್ನೇ ನೀಲಕಂಠನಿಗೆ ನೈವೇದ್ಯವನ್ನಾಗಿ ನಿವೇದಿಸುತ್ತಿದ್ದನು. ಸಿಂಧುದ್ವೀಪ ಮತ್ತು ವೇದ ಬಂಧುಗಳು ಮೊದಲು ಶಿವನ ಪೂಜೆಮಾಡಿ ಮುಗಿಸಿ ಊರಲ್ಲಿ ಭಿಕ್ಷೆ ಬೇಡಲು ಹೋದಾಗ ಆ ಬೇಡನು ಬಂದು ಅವರು ಮಾಡಿದ ಪೂಜೆ ಅಲಂಕಾರಗಳನ್ನೆಲ್ಲ ಕಿತ್ತಿಹಾಕಿ, ಕಸದ ಬುಟ್ಟಿಗೆ ಎತ್ತಿ ಒಗೆದು ತನ್ನ ತಾಮಸ ಪೂಜೆಯನ್ನು ಭಕ್ತಿಯಿಂದ ನೆರವೇರಿಸುತ್ತಿದ್ದನು.

ಅದು ಒಂದು ದಿನ ವೇದನ ಕಣ್ಣಿಗೆ ಬಿದ್ದಿತು. ತಾವು ಮಾಡಿದ ಪೂಜೆಯನ್ನೆಲ್ಲ ತೆಗೆದು ಹಾಕಿ ಎಂಜಲು ನೀರು ಮಾಂಸಗಳಿಂದ ದೂಷಿತವಾದ ಪೂಜೆಯನ್ನು ಭಿಲ್ಲನು ಮಾಡುವುದನ್ನು ನೋಡಿ ವೇದನು ನಖಶಿಖಾಂತ ಸಿಟ್ಟು ತುಂಬಿ ಕೋಪದಿಂದ ಕೆಂಡಮಂಡಲವಾದ. ಆ ಬೇಡನನ್ನೇ ಕೊಂದುಬಿಡಬೇಕೆಂದು ನಿರ್ಧರಿಸಿದ. ಪೂಜೆ ಮುಗಿಸಿ ಭಿಲ್ಲನು ಹೊರಗೆ ಬಂದಕೂಡಲೆ ಹಿಂದಿನಿಂದ ದೊಡ್ಡ ಕಲ್ಲನ್ನು ತಲೆಯ ಮೇಲೆ ಹಾಕಿ ಸಾಯಿಸಬೇಕೆಂದು ಹೊರಗೆ ಕಾದು ಕುಳಿತುಕೊಂಡಿದ್ದ.

ಅಷ್ಟರಲ್ಲಿ ಆದಿಕೇಶ ದೇವನು ಅವನಿಗೆ ಪ್ರತ್ಯಕ್ಷನಾಗಿ "ನೀನು ನಾಳೆ ಬಂದು ಆ ಬೇಡನು ಮಾಡುವ ನನ್ನ ಪೂಜೆಯನ್ನು ನೋಡು" ಎಂದು ಹೇಳಿದ.

ಅದರಂತೆ ಮರುದಿನ ವೇದ ಸ್ನಾನಮಾಡಿಕೊಂಡು ಬಂದ. ಶಿವಲಿಂಗದ ಪಿಂಡಿಕೆಯ ತಲೆಯಮೇಲೆ ಭಯಂಕರ ಘಾಯವಾಗಿ ನೆತ್ತರು ಬಸಿಯುತ್ತಿತ್ತು. ಆಗ ವೇದನು ಅದನ್ನು ನೋಡಿ ನೀರು ತಂದು ಲಿಂಗವನ್ನು ಸ್ವಚ್ಛವಾಗಿ ತೊಳೆದ. ಆದರೂ ರಕ್ತ ಒಸರುವುದು ನಿಲ್ಲಲಿಲ್ಲ. ಧಾರಾಕಾರವಾಗಿ ನೆತ್ತರು ಸುರಿಯತೊಡಗಿತು. ಆಗ ವೇದ ಸೆಗಣಿ ಮಣ್ಣು ತಂದು ಆದಿಕೇಶವನ ನೆತ್ತಿಗೆ ಮೆತ್ತಿದ. ಅದರಿಂದ ರಕ್ತಪ್ರವಾಹ ನಿಂತಿತು. ಬಳಿಕ ಪೂಜೆ ಮುಗಿಸಿಕೊಂಡು ವೇದ ಮನೆಗೆ ಹೊರಟ.

ಅದೇ ವೇಳೆಯಲ್ಲಿ ಭಿಲ್ಲ ಬಂದ. ಶಿವಲಿಂಗದ ನಡುನೆತ್ತಿಯ ತುಂಬ ನೆತ್ತರ ಮೆತ್ತಿದ್ದನ್ನು ನೋಡಿದ. ಅದನ್ನು ಮುಚ್ಚಲು ಶಗಣಿ ಮಣ್ಣು ಮೆತ್ತಿದ್ದನ್ನೂ ನೋಡಿದ. ಅದನ್ನು ಕಂಡಕೂಡಲೆ ಭಿಲ್ಲನು ದುಃಖಾಕ್ರಾಂತನಾಗಿ 'ಭಗವಂತನಿಗೆ ಹೀಗೆ ಹೇಗೆ ಆಯಿತು? ದೇವನಿಗೆ ಹೀಗೆ ಪ್ರಾಣಾಂತಿಕ ಘಾಯವಾಗಿದ್ದರೂ ನಾನು ಹೀಗೇ ಬದುಕಿ ಉಳಿದಿದ್ದೇನಲ್ಲ! ಇದು ಅನ್ಯಾಯ. ದೇವನ ತಲೆಯ ಮೇಲೆ ರಕ್ತ ಬಂದದ್ದನ್ನು ಶೆಗಣಿ ಮಣ್ಣು ಮೆತ್ತಿದ್ದನ್ನೂ ನಾನು ನೋಡಲಾರೆ. ನನ್ನ ದೇವನಿಗೆ ಈ ಪರಿ ಗಾಯವಾಗಿ ನೆತ್ತರ ಬಸಿಯುವಂತಾದರೆ ನಾನೇಕೆ ಬದುಕಿ ಇರಬೇಕು?" ಎಂದು ಎನ್ನುತ್ತ ತನ್ನ ಹರಿತವಾದ ಬಾಣದಿಂದ ತನ್ನ ಮೈಯನ್ನೆ ಚುಚ್ಚಿಕೊಂಡ. ಮತ್ತೆ ಮತ್ತೆ ಚುಚ್ಚಿಕೊಂಡ. ಅವನ ಅಂಗಾಂಗಗಳಿಂದಲೂ ನೆತ್ತರ ಚಿಮ್ಮತೊಡಗಿತು.

ಆದಿಕೇಶನೇ ಬಂದು ಅವನನ್ನು ತಡೆದ. ಅಲ್ಲಿಯೇ ನಿಂತ ವೇದನಿಗೆ ಹೇಳಿದ. "ವೇದ ನೋಡಿದೆಯಾ! ನನ್ನ ತಲೆಗೆ ಗಾಯವಾಗಿ ನೆತ್ತರ ಪುಟಿಯುವದನ್ನು ನೀನು ನೋಡಿ ಬರಿಮಣ್ಣು ಶೆಗಣಿ ತಂದು ಮೆತ್ತಿದೆ. ಆದರೆ ಈ ಭಿಲ್ಲನು ಮಾತ್ರ ನನಗಾಗಿ ತನ್ನ ಪ್ರಾಣವನ್ನೇ ಕೊಡಲಿಕ್ಕೆ ಹೊರಟದ್ದಾನೆ. ಅವನ ಭಕ್ತಿಗೆ ಮೆಚ್ಚಿದ್ದೇನೆ. ಅವನ ಪೂಜೆ ತಾಮಸವಾದರೂ ಭಕ್ತಿ ಸಾತ್ವಿಕವಾದುದರಿಂದ ಅವನ ಪೂಜಾ ಪರ್ಯುಪಾಸನೆಗಳಿಗೆ ನಾನು ಪ್ರೀತನಾಗಿದ್ದೇನೆ. ಅದಕ್ಕಾಗಿ ಮೊದಲು ಅವನಿಗೆ ವರ ಕೊಟ್ಟು ನಿನಗೂ ಬೇಕಾದ ವರ ಕೊಡುತ್ತೇನೆ" ಎಂದು ಅವನನ್ನು ಸಂತೈಸಿದ. ಮತ್ತು ಅದರಂತೆ ಆ ಭಿಲ್ಲನಿಗೂ ಹಾಗೂ ವೇದನಿಗೂ ಅಭೀಪ್ಸಿತವಾದ ವರಗಳನ್ನಿತ್ತು ಹರಸಿದ. ಅಂದಿನಿಂದ ಆ ತೀರ್ಥ ಭಿಲ್ಲತೀರ್ಥ ಎಂದು ಪ್ರಸಿದ್ಧವಾಯಿತು.

## ಚಕ್ಷುತೀರ್ಥ ಮಹಿಮೆ

**ಬ್ರಹ್ಮ:-** ಗೌತಮೀ ನದಿಯ ದಕ್ಷಿಣ ತೀರದಲ್ಲಿ ಚಕ್ಷುತೀರ್ಥವೆಂಬ ತೀರ್ಥ ಇರುತ್ತದೆ. ಆ ಗೌತಮೀ ತೀರದಲ್ಲಿ 'ಭೌವನ' ಎಂಬ ಪಟ್ಟಣವನ್ನು 'ಭೌಮನ' ಎಂಬ ಹೆಸರಿನ ರಾಜನು ಆಳುತ್ತಿದ್ದ. ಆ ಊರಿನಲ್ಲಿ ವೃದ್ಧಕೌಶಿಕೆ ಎಂಬ ವೇದಾಂತ ವಿದ್ವಾಂಸನಾದ ಬ್ರಾಹ್ಮಣನಿದ್ದ. ಅವನ ಮಗನೇ ಗೌತಮ ಎಂಬ ವೇದಪಂಡಿತ. ತಂದೆಯ ಬಳಿ ಇವನು ಸಂಪ್ರದಾಯದಂತೆ ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದ. ಆದರೆ ತಾಯಿಯ ದೋಷದಿಂದ ಅವನಲ್ಲಿ ಅನೇಕ ದುರ್ಗುಣಗಳು ಸೇರಿಕೊಂಡಿದ್ದವು. ಅವನು ಪ್ರಬುದ್ಧನಾದ ಬಲಿಕ ಅವನ ವಯಸ್ಸಿನ ಜೊತೆಗೆ ದೇಹವೂ ದೇಹಡೆ ಜೊತೆಗೆ

ದುರ್ಬುದ್ಧಿಯೂ ಮತ್ತು ದುರ್ವಿಚಾರ ದುರಾಚಾರಗಳೂ ಬೆಳೆದು ನಿಂತವು. ಆ ಗೌತಮನಿಗೆ ಮಣಿಕುಂಡಲ ಎಂಬ ವೈಶ್ಯ ಜಾತಿಯ ತರುಣನು ಗೆಳೆಯನಾಗಿದ್ದ. ಮಣಿ ಕುಂಡಲ ಆಗರ್ಭ ಶ್ರೀಮಂತ. ಗೌತಮ ದಟ್ಟ ದರಿದ್ರ. ಹುಟ್ಟು ದರಿದ್ರ. ಅವನು ಬ್ರಾಹ್ಮಣ, ಇವನು ವೈಶ್ಯ ಆದರೂ ಅವರಿಬ್ಬರ ನಡುವೆ ಮಧುರ ಮೈತ್ರೀ ಸಂಬಂಧ ಹುರಿಗೊಂಡಿತ್ತು. ಒಂದು ದಿನ ಗೌತಮನು ಮಣಿಕುಂಡಲನಿಗೆ ಹೇಳಿದ. "ಮಿತ್ರ ನಾವು ಬೆಳೆದು ದೊಡ್ಡವರಾಗಿದ್ದೇವೆ. ಈಗ ನಾವು ಧನವನ್ನು ಸಂಪಾದನೆ ಮಾಡೋಣ. ದುಡ್ಡಿಗಾಗಿ ದೇಶಾಂತರ ಸಂಚಾರ ಮಾಡೋಣ. ಸಮುದ್ರವನ್ನು ದಾಟೋಣ. ಪರ್ವತಗಳನ್ನು ಉಲ್ಲಂಘಿಸೋಣ. ಹೇಗಾದರೂ ಮಾಡಿ ಐಶ್ವರ್ಯವನ್ನು ಸಂಪಾದಿಸೋಣ. ಹಣವಿಲ್ಲದೇ ಇದ್ದ ಮನುಷ್ಯ ಹೆಣಕ್ಕಿಂತ ಕಡೆ."

**ಮಣಿಕುಂಡಲ:-** ಗೆಳೆಯ ಗೌತಮ, ನನ್ನ ತಂದೆ ಬೇಕಾದಷ್ಟು ಹಣವನ್ನು ಸಂಪಾದಿಸಿದ್ದಾನೆ. ನಮ್ಮ ಮನೆಯಲ್ಲಿ ಅಪರಿಮಿತವಾದ ಐಶ್ವರ್ಯ ಒಟ್ಟಿದೆ. ಮತ್ತೇಕೆ ಧನಸಂಪಾದನೆಯ ಪ್ರಯಾಸ?

**ಗೌತಮ:-** ಮಿತ್ರಕುಂಡಲ, ದ್ರವ್ಯ, ಧರ್ಮ, ಜ್ಞಾನ, ಭೋಗಗಳು ಎಷ್ಟಾದರೂ ಸಾಕು ಎನ್ನಬಾರದು. ಶಕ್ತಿ ಇದ್ದಾಗ, ಶಕ್ಯವಿದ್ದಾಗ ದ್ರವ್ಯವನ್ನು ಸಂಪಾದಿಸುತ್ತಲೇ ಇರಬೇಕು. ಇದರಲ್ಲಿ ಮುಖ್ಯವಾದ ಇನ್ನೊಂದು ಅಂಶವೆಂದರೆ ಮನುಷ್ಯನು ಸ್ವಯಂ ಸಂಪಾದನೆ ಮಾಡಿದ ಹಣದಿಂದಲೇ ಬಾಳಬೇಕು. ತಂದೆ ಗಳಿಸಿಟ್ಟ ದ್ರ್ಯವವನ್ನು ಭೋಗಿಸುವುದು ಅತ್ಯಂತ ನಿಂದ್ಯ. ಹೇಯ ಕೂಡ. ತಾನೇ ಪ್ರಭೂತತರವಾದ ಧನವನ್ನು ಸ್ವಪ್ರಯತ್ನದಿಂದಲೇ ಸಂಪಾದಿಸಿ ತಂದೆಗೂ ಬಳಗದವರಿಗೂ ಕೊಡಬೇಕು. ಅಂಥ ಮಗನಿಗೆ ಮಾತ್ರ ಪುತ್ರ ಎಂಬ ಹೆಸರು ಸಾರ್ಥಕ."

ಬ್ರಾಹ್ಮಣ ಮಿತ್ರನಾದ ಗೌತಮನ ಮಾತನ್ನು ಕೇಳಿ ಸರಳಸ್ವಭಾವದ ಮಣಿಕುಂಡಲನು ತನ್ನ ಮನೆಯಲ್ಲಿದ್ದ ಮುತ್ತು ರತ್ನಗಳನ್ನೂ ತೆಗೆದುಕೊಂಡು ಬಂದ. ಇದರಿಂದ ನಾವು ದಿಗ್ದೇಶ ಸಂಚಾರಮಾಡಿ ಹೆಚ್ಚಿನ ಹಣಗಳಿಸಿ ನಮ್ಮ ಊರಿಗೆ ಮರಳೋಣ ಎಂದು ಹೇಳಿದ.

ಹೀಗೆ ವಿಚಾರಿಸಿ ಮಣಿಕುಂಡಲ ಮತ್ತು ಗೌತಮ ಇಬ್ಬರೂ ಕೂಡಿ ದ್ರವ್ಯವನ್ನು ಗಳಿಸಬೇಕೆಂದು ದೇಶಸಂಚಾರ ಕೈಗೊಂಡರು. ಧೂರ್ತನಾದ ಗೌತಮನು ಮಣಿಕುಂಡಲನ ಸಂಪತ್ತನ್ನೆಲ್ಲ ಹೇಗಾದರೂ ಮಾಡಿ ಅಪಹರಿಸಬೇಕೆಂದು ದುರಾಲೋಚನೆ ಮಾಡುತ್ತಿದ್ದ. ಅವನ ಈ ದುರಾಲೋಚನೆಗಳು ಸಾಧುಸ್ವಭಾವದ ಮಣಿಕುಂಡಲನಿಗೆ ತಿಳಿಯಲಿಲ್ಲ.

ಒಂದುದಿನ ಗೌತಮ ಹೇಳಿದ. "ಕುಂಡಲ, ಅಧರ್ಮದಿಂದಲೇ ಮನುಷ್ಯರಿಗೆ ಸುಖ-ಸಂಪತ್ತು ಸಮೃದ್ಧಿಗಳು ಪ್ರಾಪ್ತವಾಗುತ್ತವೆ. ಈ ಜಗತ್ತಿನಲ್ಲಿ ಪ್ರಾಯಃ ಧರ್ಮಿಷ್ಠರೆಲ್ಲರೂ ದಟ್ಟದರಿದ್ರರು. ಅಧರ್ಮ ಮಾಡುವವರು ಶ್ರೀಮಂತರಾಗಿ ಭಾಗ್ಯಭೋಗಗಳನ್ನು ಅನುಭವಿಸುವದು ನಮ್ಮ ಕಣ್ಣಿಗೇ ಕಾಣುತ್ತಲಿದೆ. ಆದುದರಿಂದ ವ್ಯರ್ಥವಾದ ಧರ್ಮಾಚರಣೆಯನ್ನು ಮಾಡಬಾರದು.

**ಕುಂಡಲ:-** ಛೀ, ಇದೇನು ಹೇಳುವೆ! ನೀನು ಬ್ರಾಹ್ಮಣನಾಗಿ ಧರ್ಮವನ್ನು ನಿಂದಿಸುವೆಯಾ? ಧರ್ಮವೇ ಸುಖದ ಮೂಲ. ಅಧರ್ಮದಿಂದ ದುಃಖ ಭಯ ದಾರಿದ್ರ್ಯ, ಕ್ಲೇಶ, ಎಲ್ಲವೂ ಅಟ್ಟಿಸಿಕೊಂಡು ಬರುತ್ತವೆ. ಎಲ್ಲ ಧರ್ಮವೋ ಅಲ್ಲಿ

ಮುಕ್ತಿ. ಎಲ್ಲಿ ಧರ್ಮವೋ ಅಲ್ಲಿ ಸುಖ'' ಎಂದು ವಾದಿಸಿದ. ಹೀಗೆ ಅವರಿಬ್ಬರ ನಡುವೆ ತೀಕ್ಷ್ಣವಾದ ವಾದ-ವಿವಾದವು ನಡೆಯಿತು.

ಕೊನೆಗೆ ಅವರಿಬ್ಬರೂ ಮಧ್ಯಸ್ಥರ ಮುಖಾಂತರ ತಮ್ಮ ವಾದವಿವಾದಗಳನ್ನು ನಿರ್ಣಯಿಸಬೇಕು, ಇದರಲ್ಲಿ ಗೆದ್ದವರಿಗೆ ಸೋತವನು ತನ್ನ ಬಳಿಯಿರುವ ಧನವನ್ನೆಲ್ಲ ಕೊಡಬೇಕು ಎಂದು ನಿಯಮ ಮಾಡಿಕೊಂಡರು. ಮಹಾಠಕ್ಕನೂ, ಧೂರ್ತನೂ ಸ್ವಾರ್ಥಿಯೂ ಆದ ಗೌತಮನು ನಾಸ್ತಿಕರೂ ಅಧಾರ್ಮಿಕರೂ ಇರುವಲ್ಲಿ ಮಣಿಕುಂಡಲನನ್ನು ಕರೆದೊಯ್ದು. ಅವರ ಮುಂದೆ ತಮ್ಮಿಬ್ಬರ ವಿವಾದಕ್ಕೆ ಮೂಲವಾದ ಸಂದೇಹವನ್ನು ಇಟ್ಟರು.''ಮನುಷ್ಯನಿಗೆ ಸುಖ, ಸಮೃದ್ಧಿ, ಸಂಪತ್ತು ಸೌಭಾಗ್ಯ ಧರ್ಮದಿಂದಲೋ ಅಧರ್ಮದಿಂದಲೋ?

''ಪ್ರಪಂಚದಲ್ಲಿ ಧರ್ಮ ಮಾಡುವವರು ಸುಖಿಗಳೋ ಧರ್ಮ ಬಿಟ್ಟವರೊ?''

ಮಹಾನಾಸ್ತಿಕರಾದ ಆ ಮೂರ್ಖ ಮಧ್ಯಸ್ಥರು ''ಧರ್ಮಾಚರಣೆ ಮಾಡುವವರು, ಪುಣ್ಯಕರ್ಮಗಳನ್ನು ಆಚರಿಸುವವರು ದುಃಖಿತರೂ ದರಿದ್ರರೂ ಇರುವರು. ಅಧರ್ಮ ಶೀಲರೂ ಪಾಪಿಷ್ಠರೂ ಮಾತ್ರ ಸುಖದಿಂದ ವೈಭವದಿಂದ ಬಾಳಿ ಬದುಕುತ್ತಾರೆ'' ಎಂದು ತಮ್ಮ ನಿರ್ಣಯ ಕೊಟ್ಟರು.

ಅವರ ನಿರ್ಣಯವನ್ನು ಕೇಳಿ ಗೌತಮನು ಉತ್ಸಾಹದಿಂದ ಕುಂಡಲನ ಬಳಿ ಇದ್ದ ಮುತ್ತು ರತ್ನಾದಿ ಐಶ್ವರ್ಯವನ್ನೆಲ್ಲ ಸೆಳೆದುಕೊಂಡ ಮತ್ತು ಅವನಿಗೆ ಉಪಹಾಸದಿಂದ ಕೇಳಿದ ''ಮಿತ್ರ, ನೀನು ಧರ್ಮಕ್ಕೆ ಜೋತುಬಿದ್ದು ಪಣದಲ್ಲಿ ಸೋತು ಹೋದೆ. ನಿನ್ನ ಹಣವನ್ನೆಲ್ಲ ಕಳೆದುಕೊಂಡೆ. ಅಧರ್ಮದಿಂದಲೇ ಸುಖ ಸಮೃದ್ಧಿ ಎಂಬ ನನ್ನ ವಾದವನ್ನು ಈಗಲಾದರೂ ಒಪ್ಪುವೆಯಾ?'' ಎಂದು ಕೇಳಿದ. ಅದಕ್ಕೆ ಧರ್ಮಪ್ರಾಣನಾದ ಆ ವೈಶ್ಯ ಹೇಳಿದ. ''ಮಿತ್ರ, ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಕು ಬಗೆಯಾದ ಪುರುಷಾರ್ಥಗಳಲ್ಲಿ ಧರ್ಮವೇ ಪ್ರಥಮ ಮತ್ತು ಪ್ರಧಾನ. ಧರ್ಮದಿಂದಲೇ ಅರ್ಥ ಕಾಮಗಳು, ಧರ್ಮದಿಂದಲೇ ಮೋಕ್ಷ. ನನ್ನ ಸರ್ವಸ್ವ ಹೋದರೂ ಧರ್ಮವೇ ಶ್ರೇಷ್ಠ ಎಂಬ ಮಾತನ್ನು ಹಿಂದೆಗೆಯಲಾರೆ. ಇದಕ್ಕೆ ನಾನು ಈಗಲೂ 'ಬೆಟ್ಟ ಕಟ್ಟಲು ಸಿದ್ಧ'' ಎಂದು ಹೇಳಿದ. ಗೌತಮ ಪಣಒಡ್ಡಲು ನಿನ್ನಲ್ಲಿ ಹಣ ಎಲ್ಲಿದೆ? ಎಲ್ಲ ಸೋತಿರುವಿಯಷ್ಟೆ ಧರ್ಮದ ಹೆಸರಿನಲ್ಲಿ! ಈಗ ಬೇಕಾದರೆ ನಿನಗೆ ಧರ್ಮದಲ್ಲಿ ಅಚಲ ವಿಶ್ವಾಸವಿದ್ದರೆ ನಿನ್ನೆರಡು ಕೈಗಳನ್ನು ಪಣಕ್ಕಿಡು.

ಧರ್ಮಪ್ರಾಣನಾದ ಆ ಮಣಿಕುಂಡಲ ಧರ್ಮಕ್ಕಾಗಿ ತನ್ನ ಎರಡೂ ಕೈಗಳನ್ನೂ ಪಣಕ್ಕಿಟ್ಟ. ಇದರ ನಿರ್ಣಾಯಕರೂ ಅದೇ ಧರ್ಮದ್ರೋಹಿಗಳಾದ ಮೂರ್ಖಶಿಖಾ ಮಣಿಗಳೇ. ಗೌತಮ ಸೋತ ಅವರ ನಿರ್ಣಯದಂತೆ. ಪಾಪಿಗಳು ಅವನ ಎರಡೂ ಕೈಗಳನ್ನು ತುಂಡರಿಸಿಬಿಟ್ಟರು. ಇಷ್ಟಾದರೂ ಆ ವೈಶ್ಯ ತನ್ನ ಧರ್ಮದ ನಿಷ್ಠೆಯನ್ನು ಬಿಡಲಿಲ್ಲ. ಅವರಿಬ್ಬರೂ ಹೀಗೆಯೇ ವಾದವಿವಾದ ಮಾಡುತ್ತ ಗಂಗಾತೀರಕ್ಕೆ ಬಂದರು. ಅಲ್ಲಿಯೂ ಅವರ ಜಿದ್ದು ಮುಗಿದಿರಲಿಲ್ಲ. ಧರ್ಮವೇ ಶ್ರೇಷ್ಠ ಎಂದು ಮಣಿಕುಂಡಲ ಪಟ್ಟು ಹಿಡಿದ.

''ನೀನು ಬೇಕಾದುದನ್ನು ಮಾಡು. ಧರ್ಮವೇ ಶ್ರೇಷ್ಠ ಎಂಬ ನನ್ನ ಸದಾಗ್ರಹ ಬಿಡಲಾರೆ. ಧರ್ಮ, ದೇವರು, ಗುರುಗಳು, ಬ್ರಾಹ್ಮಣ ಮತ್ತು ವಿಷ್ಣು ಈ ಪಂಚ ಪದಾರ್ಥಗಳು ಪ್ರಪಂಚದಲ್ಲಿಯೇ ವಂದನೀಯ. ಇವುಗಳ ನಿಂದೆ ಮಾಡುವವನು ಪಾಪಿ,

ಅಸ್ಪೃಶ್ಯ ಅಂಥ ಧರ್ಮ ದ್ರೋಹಿಯನ್ನು ಮುಟ್ಟಬಾರದು'' ಎಂದು ಮೊಂಡಗೈಯಿಂದಲೇ ಸಾಧಿಸಿ ವಾದಿಸಿದ. ಆಗ ಗೌತಮನು ಸಿಟ್ಟಿನಿಂದ ಅಟ್ಟಹಾಸ ಮಾಡುತ್ತ ನುಡಿದ. ''ಹಾಗಾದರೆ ಈಗ ನಮ್ಮಿಬ್ಬರ ಪ್ರಾಣಗಳನ್ನೇ ಪಣಕ್ಕಿಡೋಣ. ಗೆದ್ದವರಿಗೆ ಸೋತವರು ತಮ್ಮ ಪ್ರಾಣವನ್ನೇ ಕೊಡಬೇಕು'' ಎಂದು ಕುಹಕತನದಿಂದ ನುಡಿದ.

''ಧರ್ಮಕ್ಕಾಗಿ ಧರ್ಮದ ಶ್ರೇಷ್ಠತೆ ಸಾರಲಿಕ್ಕಾಗಿ ಪ್ರಾಣಬಿಡಲೂ ನಾನು ಸಿದ್ಧ'' ಎಂದು ಮಣಿಕುಂಡಲ ಹೇಳಿದ.

ಮತ್ತೆ ಅವರಿಬ್ಬರೂ ಮೂರ್ಖ ಷಂಡಲಿಯ ಎದುರು ಹಾಜರಾದರು. ಪಾಪಿಗಳ ನಿರ್ಣಯ ಯಥಾಪ್ರಕಾರ ಗೌತಮನ ಪರವಾಗಿಯೇ ಇದ್ದಿತು. ಅವರ ನಿರ್ಣಯ ಕೇಳಿದ ತಕ್ಷಣ ಗೌತಮ ಹಾರಿಬಂದ. ಮಣಿಕುಂಡಲನನ್ನು ಎಳೆದು ನೆಲದ ಮೇಲೆ ಕೆಡವಿದ. ಅವನ ಎದೆಯ ಮೇಲೆ ಕುಳಿತು ಮಣಿಕುಂಡಲನ ಕಣ್ಣುಗುಡ್ಡೆ ಯನ್ನೇ ಕಿತ್ತಿದ್ದ. ಮತ್ತು ಅವನಿಗೆ ಹೇಳಿದ. ''ಮೂರ್ಖಶಿಖಾಮಣಿ ಮಣಿಕುಂಡಲ, ಧರ್ಮವನ್ನು ನಂಬಿದುದಕ್ಕೆ ನಿನ್ನ ಗತಿಯೇನಾಯಿತು ನೋಡಿಕೋ. ನಿನ್ನ ಬಳಿಯಿದ್ದ ಅಪಾರ ಐಶ್ವರ್ಯ ಹೋಯಿತು. ಕೈಗಳು ಕಡಿದುಹೋದವು. ಕಣ್ಣುಗಳು ಕಿತ್ತಿ ಹೋದವು. ಈಗಾದರೂ ನಿನಗೆ ಬುದ್ಧಿ ಬಂತೆ? ಧರ್ಮದ ಹುಚ್ಚು ಹೋಯಿತೆ? ಇನ್ನಾದರೂ ಧರ್ಮಶ್ರೇಷ್ಠವೆಂದು ಅಪಲಪಿಸುವುದನ್ನು ಬಿಟ್ಟುಬಿಡು. ನಮ್ಮ ಮೊದಲಿನ ಮಿತ್ರತ್ವ ನೆನೆದು ನಿನ್ನನ್ನು ಜೀವಂತ ಬಿಟ್ಟಿದ್ದೇನೆ. ಇನ್ನಾರ ಮುಂದೂ ಧರ್ಮಶ್ರೇಷ್ಠ ಎಂದು ಹೇಳಬೇಡ. ಅಧರ್ಮವೇ ಶ್ರೇಷ್ಠ ಎಂಬುವದು ನಿನ್ನ ಅನುಭವದಿಂದಲೇ ನಿನಗೆ ತಿಳಿಯಿತಷ್ಟೆ! ಎಲ್ಲಿಯಾದರೂ ಬದುಕಿ ಉಳಿ'' ಎಂದು ಹೇಳಿ ಹೊರಟುಹೋದ.

ಇತ್ತ ಹಣ, ಕೈಗಳು, ಕಣ್ಣು ಎಲ್ಲವನ್ನೂ ಧರ್ಮಕ್ಕಾಗಿ ಕಳೆದುಕೊಂಡು ಕುಳಿತ ಮಣಿಕುಂಡಲನಿಗೆ ಧರ್ಮದ ಮೇಲಿನ ಶ್ರದ್ಧೆ ತಿಲಮಾತ್ರವೂ ಕಡಿಮೆಯಾಗಲಿಲ್ಲ. ಆದರೆ ಕಣ್ಣು ಕೈಗಳಿಲ್ಲದೇ ಇನ್ನು ಮುಂದೆ ಬದುಕುವುದು ಬಾಳುವುದು ಹೇಗೆ? ಎಂಬ ಚಿಂತೆಯಿಂದ ದುಃಖಸಾಗರದಲ್ಲಿ ಮುಳುಗಿದ. ಹೊತ್ತು ಕಂತಿತು, ರಾತ್ರಿ ಆಯಿತು. ಅಂದು ಏಕಾದಶಿ. ಅವನು ಉಪವಾಸಮಾಡಿ ರಾತ್ರಿ ಜಾಗರಣವನ್ನೂ ಮಾಡಿದ. ದ್ವಾದಶಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ಗೌತಮೀ ನದಿಯ ತೀರದಲ್ಲಿ ಕುಳಿತಿದ್ದ. ರಾಕ್ಷಸೇಶ್ವರನಾದ ವಿಭೀಷಣ ಮತ್ತು ಅವನ ಮಗ ವೈಭೀಷಣಿ ಇಬ್ಬರೂ ಗೌತಮೀ ತೀರದಲ್ಲಿನ ಯೋಗೇಶ್ವರೀ ಪೂಜೆಗಾಗಿ ಬಂದರು. ವೈಭೀಷಿಣಿಯು ಧರ್ಮಕ್ಕಾಗಿ ಕೈಕಳೆದುಕೊಂಡು ಕುರುಡನಾಗಿ ಕುಳಿತ ಮಣಿಕುಂಡಲನ ಅವಸ್ಥೆಯನ್ನು ಕೇಳಿ ತಿಳಿದ. ತನ್ನ ತಂದೆ ವಿಭೀಷಣನಿಗೆ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದ. ಆಗ ವಿಭೀಷಣನು ಆ ವೈಶ್ಯನ ಧರ್ಮಬುದ್ಧಿಯನ್ನು ಕಂಡು ಪ್ರೀತನಾಗಿ ಹೇಳಿದ. ''ನನ್ನ ಸ್ವಾಮಿ, ಗುರು, ಮಿತ್ರ, ಬಂಧು ಸರ್ವಸ್ವವೂ ಶ್ರೀರಾಮ. ಅವನ ದೂತನಾದ ಹನುಮಂತನು ಯುದ್ಧ ಸಮಯದಲ್ಲಿ ಸತ್ತವರನ್ನು ಬದುಕಿಸಲು ಸಂಜೀವಿನೀ ಪರ್ವತವನ್ನು ತಂದು ಕೆಲಸಮುಗಿದ ಬಳಿಕ ಅದನ್ನು ಅಲ್ಲಿಯೇ ಒಯ್ದು ಇಟ್ಟುಬಂದ. ಅದರಲ್ಲಿ ಇರುವ ಮೃತಸಂಜೀವಿನೀ ವಿಶಲ್ಯಕರಣೀ ಎಂಬ ವನಸ್ಪತಿಗಳನ್ನು ತಂದು ಈ ವೈಶ್ಯನಿಗೆ ತೇದು ಹಚ್ಚಿದರೆ ಇವನಿಗೆ ಕಡಿದ ಕೈಗಳು ಚಿಗಿತು ಬರುವವು. ಮತ್ತು ಕಿತ್ತಿ ತೆಗೆದ ಕಣ್ಣು ಮತ್ತೆ ಸುಸ್ಥಿತವಾಗುವುದು. ನಾನು ನಿನಗೆ ಆ ಗಿಡಮೂಲಿಕೆಗಳನ್ನು ತೋರಿಸುತ್ತೇನೆ ನಡೆ'' ಎಂದು ಹೇಳಿ

ರಾಮಭಕ್ತನಾದ ವಿಭೀಷಣನು ತನ್ನ ಮಗನ ಮುಖಾಂತರ ಆ ಮೃತಸಂಜೀವಿನೀ ಹಾಗೂ ವಿಶಲ್ಯಕರಣೀ ಎಂಬ ಎರಡೂ ವನಸ್ಪತಿಯ ರೆಂಬೆಗಳನ್ನು ತೆಗೆದುಕೊಂಡು ಬಂದ.

ವಿಭೀಷಣನ ಆದೇಶದಂತೆ ಗೌತಮೀ ತೀರದಲ್ಲಿ ಕುಳಿತ ಮಣಿಕುಂಡಲನ ಹೃದಯದಲ್ಲಿ "ಇಷೇತ್ವೋರ್ಜೇತ್ವಾ" ಎಂಬ ಮಂತ್ರವನ್ನು ಹೇಳಿ ಎದೆಯಲ್ಲಿ ವನಸ್ಪತಿಯ ರೆಂಬೆಯನ್ನು ಚುಚ್ಚಿದ. ವೈಭೀಷಿಣಿಯು ಶ್ರೀರಾಮನನ್ನು ಸ್ಮರಿಸಿ, ಹನುಮಂತನನ್ನು ನಮಿಸಿ ಆ ಗಿಡಮೂಲಿಕೆಗಳನ್ನು ವೈಶ್ಯನ ಹೃದಯದಲ್ಲಿ ತೂರಿಸಿದ ಕೂಡಲೇ ಅವನಿಗೆ ಒಮ್ಮೆಲೇ ಎರಡೂ ಕೈಗಳು ಚಿಗಿತು ಚಿಗುರಿ ನಿಂತವು. ಯಥಾಪ್ರಕಾರ ಸುಂದರವಾದ ನೇತ್ರಕಮಲವೂ ಮೊದಲಿದ್ದಂತೆಯೇ ಮೂಡಿಬಂತು. ಆ ವೈಶ್ಯನು ಇದೆಲ್ಲವೂ ತನ್ನ ಧರ್ಮನಿಷ್ಠೆಯ ಪ್ರಬಾವ ಎಂದು ತಿಳಿದು ವಿಭೀಷಣನನ್ನು ವಂದಿಸಿದ. ಮತ್ತು ಆ ವನಸ್ಪತಿಯ ಶಾಖೆಯನ್ನು ಕೈಯಲ್ಲಿ ಹಿಡಿದು ಸ್ನಾನ ಮಾಡಿದ. ಅನಂತರ ಆ ಗೌತಮೀ ನದಿಯನ್ನೂ, ಅದರ ತೀರದಲ್ಲಿರುವ ಯೋಗೇಶ್ವರನಾದ ಶ್ರೀಹರಿಯನ್ನೂ ನಮಿಸಿ ಅಲ್ಲಿಂದ ಪ್ರಯಾಣ ಹೊರಟ. ಧರ್ಮನಿಷ್ಠೆಯ ಪ್ರಭಾವದಿಂದ ಕುಂಡಲನ ಕೈಕಾಲು ಎಲ್ಲವೂ ಸುಸ್ಥಿರವಾಗಿದ್ದವು.

ಅವನು ಸಂಚಾರ ಕ್ರಮದಿಂದ ಪರಿಭ್ರಮಿಸುತ್ತ ಮಹಾಪುರ ಎಂಬ ಪಟ್ಟಣಕ್ಕೆ ಬಂದ. ಅಲ್ಲಿ ಒಬ್ಬ ಬಲಿಷ್ಠನಾದ ರಾಜ. ಮಹಾರಾಜ ಎಂದೇ ಅವನ ಹೆಸರು. ಅವನಿಗೆ ಗಂಡುಮಕ್ಕಳು ಇರಲಿಲ್ಲ. ಒಬ್ಬ ಹೆಣ್ಣುಮಗಳು ಮಾತ್ರ. ರೂಪವತಿ ಇವಳಾಗಿದ್ದರೂ ಹುಟ್ಟು ಕುರುಡಿಯಾಗಿದ್ದಳು. ಆಕೆ ಪ್ರಾಯಪ್ರಬುದ್ಧಳಾದ ಬಳಿಕ ಮಹಾರಾಜ ಒಂದು ಘೋಷಣೆ ಹೊರಡಿಸಿದ. "ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಸದ್ಗುಣಿಯಾಗಲಿ, ದುರ್ಗುಣಿಯೇ ಆಗಲಿ, ಯಾರು ಅಂಧಳಾದ ನನ್ನ ಮಗಳ ಕಣ್ಣನ್ನು ತಂದು ಕೊಡುವರೋ ಅವನಿಗೆ ಈ ನನ್ನ ಕನ್ಯಾಮಣಿಯನ್ನು ಕೊಡುತ್ತೇನೆ. ಅವನಿಗೇ ಈ ಸಾಮ್ರಾಜ್ಯವನ್ನೂ ಕೊಟ್ಟು ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡುವೆ."

ಹೀಗೆ ಮಹಾರಾಜನು ಘೋಷಿಸಿದರೂ ಯಾವ ವರನೂ ಮುಂದೆ ಬಂದಿರಲಿಲ್ಲ. ಅವಳಿಗೆ ದೃಷ್ಟಿ ದಾನ ಮಾಡಲು ಸಮರ್ಥ ವರ ದೊರಕಿರಲಿಲ್ಲ.

ಮಣಿಕುಂಡಲನು ಅಕಸ್ಮಾತ್ತಾಗಿ ಆ ಮಹಾಪುರಕ್ಕೆ ಸಂಚಾರ ಕ್ರಮದಿಂದ ಬಂದ. ನಾನು ರಾಜಕುಮಾರಿಗೆ ಚಕ್ಷು ಪಾಟವವನ್ನು ತಂದುಕೊಡುತ್ತೇನೆ ಎಂದು ಹೇಳಿದ. ಆಗ ಮಹಾರಾಜನು ಅವನನ್ನು ಕರೆದು ತನ್ನ ಮಗಳನ್ನು ಅವನ ಮುಂದೆ ನಿಲ್ಲಿಸಿದ. ಕೂಡಲೇ ಆ ವೈಶನು ಗೌತಮೀ ತೀರದಿಂದ ತಾನು ತಂದಿದ್ದ ವಿಶಲ್ಯಕರಣೀ ವೃಕ್ಷದ ರೆಂಬೆಯನ್ನು ರಾಜಕನ್ಯೆಯ ಕಣ್ಣಿಗೆ ಸ್ಪರ್ಶಮಾಡಿಸಿದ. ಆ ಕ್ಷಣದಲ್ಲಿಯೇ ಅವಳು ಚಕ್ಷುಷ್ಮತಿಯಾಗಿ ಕಮಲಲೋಚನೆಯಾಗಿ ಮಾರ್ಪಟ್ಟಳು. ಮಹಾರಾಜನಿಗೆ ಪರಮಾನಂದ. ಅತ್ಯಂತ ವೈಭವದಿಂದ ತನ್ನ ಮಗಳನ್ನು ಕೊಟ್ಟು ಕುಂಡಲನೊಂದಿಗೆ ವಿವಾಹ ಸಮಾರಂಭವನ್ನು ನೆರವೇರಿಸಿ ಅವನಿಗೆ ತನ್ನ ರಾಜ್ಯವನ್ನು ಒಪ್ಪಿಸಿದ. ಹಾಗೂ ತಾನು ಅರಣ್ಯಕ್ಕೆ ತಪಸ್ಸಿಗಾಗಿ ತೆರಳಿದ. ಮಣಿಕುಂಡಲನು ಚಾರುಚಕ್ಷುಷ್ಮತಿಯಾಗಿ ಚೆಲವು ಒಲವು ನಲಿವುಗಳನ್ನು ಮೈಗೂಡಿಸಿಕೊಂಡ ರಾಜಕುಮಾರಿಯೊಂದಿಗೆ ಸಿಂಹಾಸನಾಸೀನನಾಗಿ ಧರ್ಮದಿಂದ ಪ್ರಜಾ

ಜನರನ್ನು ಪಾಲಿಸುತ್ತಿದ್ದ. ಯಜ್ಞ, ಯಾಗ, ದಾನ, ಪೂಜೆ ಮುಂತಾದ ಧರ್ಮಕಾರ್ಯಗಳಲ್ಲಿಯೇ ತನ್ನ ಐಶ್ವರ್ಯವನ್ನೆಲ್ಲ ವಿನಿಯೋಗಿಸುತ್ತಿದ್ದ.

ಆದರೆ ಅವನಿಗೆ ಅಂತರಂಗದಲ್ಲಿ ಒಂದು ಚಿಂತೆ ಸತತವೂ ಕೊರೆಯುತ್ತಿತ್ತು ತನ್ನ ಮಿತ್ರನಾದ ಆ ಗೌತಮ ಬ್ರಾಹ್ಮಣ ಏನು ಆದ? ಎಲ್ಲಿಗೆ ಹೋದ? ಆ ಮಿತ್ರನನ್ನು ಬರಮಾಡಿಕೊಂಡು ಅವನ ಜೊತೆ ತನ್ನ ರಾಜೈಶ್ವರ್ಯದ ಸುಖವನ್ನು ಹಂಚಿಕೊಳ್ಳಬೇಕು ಎಂದು ಬಲವತ್ತರ ಬಯಕೆ. ಅವನಿಗೆ ಎಷ್ಟು ಹುಡುಕಿಸಿದರೂ ಸಿಗಲಿಲ್ಲ ತನ್ನನ್ನು ವಂಚಿಸಿದ ಧೂರ್ತ ಗೌತಮ. ಮುಂದೆ ಒಂದು ದಿನ ಅಕಸ್ಮಾತ್ತಾಗಿ ಅವನ ಕಣ್ಣಿಗೆ ಆ ಗೌತಮಿ ಕಂಡು ಬಂದ. ಕಪಟ ಪಣದಲ್ಲಿ ಮಣಿಕುಂಡಲನಿಂದ ಕಿತ್ತಿಕೊಂಡ ಹಣವನ್ನೆಲ್ಲ ಅವನು ಜೂಜಾಟದಲ್ಲಿ ಸೋತು ದಟ್ಟದರಿದ್ರನಾಗಿ ದೈನ್ಯ ದುರವಸ್ಥೆಗಳಿಂದ ಜರ್ಜರಿತನಾಗಿದ್ದ. ಅವನನ್ನು ಕಂಡು ಮಣಿಕುಂಡಲನಿಗೆ ಬಹಳ ದುಃಖವಾಯಿತು. ಆದರದಿಂದ ಅವನನ್ನು ತನ್ನ ಅರಮನೆಗೆ ಕರೆತಂದು ಪ್ರೀತಿಯಿಂದ ಉಪಚರಿಸಿದ. ಮಿತ್ರನೆಂದು ಸತ್ಕರಿಸಿದ. ಬ್ರಾಹ್ಮಣನೆಂದು ಪೂಜಿಸಿದ. ಮತ್ತು ಮೃದುವಾಗಿ ನುಡಿದ "ಧರ್ಮದ ಮಹಿಮೆಯನ್ನು ನಂಬಿದ್ದರಿಂದ ನನಗೆ ಕತ್ತರಿಸಿದ ಕೈಗಳು ಬಂದವು. ಮುತ್ತಿನಂಥ ಹೆಂಡತಿ, ರಾಜ್ಯ, ಅಧಿಕಾರ, ಐಶ್ವರ್ಯ ಎಲ್ಲವೂ ಪ್ರಾಪ್ತವಾಯಿತು. ಇದೆಲ್ಲವೂ ಧರ್ಮದ ಪ್ರಭಾವದಿಂದಲೇ. ನೀನು ಧರ್ಮವನ್ನು ನಿಂದಿಸಿ ದರಿದ್ರದುಃಖಿತ ದೀನನಾಗಿ ದುರವಸ್ಥೆಯನ್ನು ಹೊಂದಿರುವೆ. ಈಗಲಾದರೂ ಒಪ್ಪುವೆಯಾ?" ಎಂದು ಕೇಳಿದ.

ಆಗ ಗೌತಮನು ನಾಚಿಕೆಯಿಂದ ತಲೆತಗ್ಗಿಸಿ ಮಣಿಕುಂಡಲನಿಗೆ "ಯತೋ ಧರ್ಮಸ್ತತೋ ಜಯ", ಧರ್ಮವೇ ಶ್ರೇಷ್ಠ. ಧರ್ಮವನ್ನು ನಿಂದಿಸಿದುದಕ್ಕಾಗಿ ನನಗೆ ಪಶ್ಚಾತ್ತಾಪವಾಗಿದೆ. ಧರ್ಮನಿಂದನೆಯ ಈ ನನ್ನ ಪಾಪಕ್ಕಾಗಿ ಏನು ಪ್ರಾಯಶ್ಚಿತ್ತ? ಎಂದು ವಿನಂತಿಸಿದ.

ಆಗ ಮಣಿಕುಂಡಲನು ಗೌತಮನನ್ನು ಕರೆದುಕೊಂಡು ಗೌತಮೀನದಿಗೆ ಹೋಗಿ ಅದರಲ್ಲಿ ಸ್ನಾನ ಮಾಡಿಸಿದ. ಸ್ನಾನದಿಂದ ಶುದ್ಧನಾದ ಆ ಗೌತಮನಿಂದ ಅನೇಕ ಯಜ್ಞಯಾಗಗಳನ್ನು ಮಾಡಿಸಿದ. ಧ್ಯಾನ-ದಾನ ಯಜ್ಞ ಪೂಜೆ ನಿರಂತರ ಹರಿಸೇವೆಗಳನ್ನು ತಾನು ಮಾಡಿ ಅವನಿಂದಲೂ ಮಾಡಿಸಿದ. ಅವನಿಗೆ ಸದ್ಗತಿಯು ದೊರೆಯುವಂತೆ ಮಾಡಿದ. ಗೌತಮೀ ತೀರದಲ್ಲಿ ಮಾಡಿದ ಯೋಗೀಶ್ವರನಾದ ಶ್ರೀಹರಿಯ ಧ್ಯಾನೋಪಾಸನೆ ಯಜ್ಞಯಾಗಾದಿಗಳ ಪುಣ್ಯಪ್ರಭಾವದಿಂದ ಅವರಿಬ್ಬರೂ ಮಿತ್ರರು ಉದ್ಧೃತರಾಗಿ ಸ್ವರ್ಗಲೋಕವನ್ನು ಹೊಂದಿದರು. ಅಂದಿನಿಂದ ಆತೀರ್ಥಕ್ಕೆ ಮೃತ ಸಂಜೀವನ ತೀರ್ಥ ಮತ್ತು ಚಕ್ಷುಸ್ತೀರ್ಥ ಎಂಬ ಹೆಸರು ಬಂದಿತು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತಾರನೆಯ ಅಧ್ಯಾಯ ಮುಗಿದುದು*

—o—

**ಬ್ರಹ್ಮ**:- ಊರ್ವಶೀತೀರ್ಥದ ದಂಡೆಯ ಮೇಲೆ ಮಹಾದೇವನೂ ಮತ್ತು ಮಹಾವಿಷ್ಣುವೂ ನೆಲೆನಿಂತಿದ್ದಾರೆ. ಪೂರ್ವಕಾಲದಲ್ಲಿ ಪ್ರಮತಿ ಎಂಬ ಶೂರನಾದ ಸಾರ್ವಭೌಮನು ತನ್ನ ಪರಾಕ್ರಮದಿಂದ ಭೂಲೋಕದ ವೈರಿಗಳನ್ನೆಲ್ಲ ಗೆದ್ದ. ಅನಂತರ ಸ್ವರ್ಗದ ಅಮರಾವತಿಗೆ ಹೋಗಿ ದೇವೇಂದ್ರನೊಡನೆ ದ್ಯೂತವನ್ನಾಡಿದ. ಆ ದ್ಯೂತದಲ್ಲಿ ಇಂದ್ರನು ತನ್ನ ದೇವಲೋಕದ ಸುಂದರಿಯಾದ ಊರ್ವಶಿಯನ್ನೇ ಪಣವಾಗಿ ಇಟ್ಟ. ದ್ಯೂತವಿದ್ಯೆಯಲ್ಲಿ ಪರಿನಿಷ್ಠಿತನಾದ ಪ್ರಮತಿ ಮಹಾರಾಜನು ಆ ಕ್ರೀಡೆಯಲ್ಲಿ ಚತುರತೆಯಿಂದ ಆಟವಾಡಿ ಊರ್ವಶಿಯನ್ನು ಗೆದ್ದುಬಿಟ್ಟ. ಗೆಲುವಿನಿಂದ ಗರ್ವಿಷ್ಠನಾದ ಪ್ರಮತಿಯು "ದೇವೇಂದ್ರ, ನಾನು ನಿನ್ನೊಡನೆ ಆಡಿ ಊರ್ವಶಿಯನ್ನು ಗೆದ್ದೆ. ಸ್ವರ್ಗಲೋಕದ ಮತ್ತಾವುದಾದರೂ ಅಮೂಲ್ಯ ವಸ್ತುವನ್ನು ಪಣಕ್ಕೆ ಇಡು."

ತನಗೆ ಉಂಟಾದ ಸೋಲಿನಿಂದ ಖಿನ್ನನಾದ ಸುರರಾಜ. ಗೆಲ್ಲಬೇಕೆಂಬ ಆಸೆಯಿಂದ ತನ್ನ ವಜ್ರಾಯುಧವನ್ನೇ ಪಣಕ್ಕೆ ಒಡ್ಡಿದ. ಚತುರಮತಿಯಾದ ಪ್ರಮತಿಯು ದಾಳಗಳನ್ನು ಉರುಳಿಸಿ ತನ್ನ ಕ್ರೀಡಾ ಕೌಶಲ್ಯದಿಂದ ದೇವೇಂದ್ರನ ಅಮೋಘ ಅಸ್ತ್ರವಾದ ವಜ್ರಾಯುಧವನ್ನೂ ಸಹ ಗೆದ್ದುಬಿಟ್ಟ. ದೇವಲೋಕದ ಅತ್ಯಮೂಲ್ಯವಾದ ಎರಡು ವಸ್ತುಗಳನ್ನು ಕಳೆದುಕೊಂಡು ಪುರಂದರನು ಖಿನ್ನ ವಿಷಣ್ಣನಾಗಿ ಕುಳಿತ. ಆಗ ಅಲ್ಲಿಗೆ ಗಂಧರ್ವರ ಅಧೀಶ್ವರನಾದ ವಿಶ್ವಾವಸುವು ಆಗಮಿಸಿದ. ಅವನು ತನ್ನ ಗಂಧರ್ವವಿದ್ಯೆಯ ವೈದುಷ್ಯದಿಂದ ತಾನೂ ಬಂದು ಆಡಲಿಕ್ಕೆ ಇಂದ್ರನ ಪಕ್ಷದಲ್ಲಿ ಕುಳಿತುಕೊಂಡ. ಧೂರ್ತನಾದ ಪ್ರಮತಿ ಮಹಾರಾಜನು ಅಲ್ಪ ಸಮಯದಲ್ಲಿಯೇ ವಿಶ್ವಾವಸು ಹಾಗೂ ದೇವೇಂದ್ರ ಇಬ್ಬರನ್ನೂ ಸೋಲಿಸಿದ; ಮತ್ತು ಉಪಹಾಸಗರ್ಭಿತವಾಗಿ ನಕ್ಕು ದೇವೇಂದ್ರನಿಗೆ ನುಡಿದ. "ದೇವರಾಜ, ನೀನು ಯುದ್ಧದಲ್ಲಿ ಗೆಲ್ಲಲಾರೆ. ದ್ಯೂತದಲ್ಲಿ ಜಯಿಸಲಾರೆ. ಎಲ್ಲಿ ಹೋದರೂ ಸೋಲು ನಿನ್ನ ಮುಂದೆ ಸಾಲುಗಟ್ಟಿ ನಿಲ್ಲುವುದು. ಇನ್ನು ಮೇಲೆ ನೀನು ನನ್ನ ಸೇವಕನಾಗು. ಎಲ್ಲದರಲ್ಲಿಯೂ ಅಕುಶಲನಾದ ನಿನಗೆ ಸುರಲೋಕದ ಅಧಿಪತ್ಯವನ್ನು, ಇಂದ್ರಪದವಿಯನ್ನು ಯಾರು ಕೊಟ್ಟರು? ಹೇಗೆ ಕೊಟ್ಟರು? ಇನ್ನು ಮೇಲೆ ನನ್ನ ಸೇವೆ ಮಾಡುತ್ತ ಇರು. ಕಿಂಚಿತ್ ಬುದ್ಧಿ ಬಲವೂ ಪ್ರಾಪ್ತವಾದೀತು" ಎಂದು ಹೇಳಿ ಇಂದ್ರನು ತನಗೆ ಪಣದಲ್ಲಿ ಸೋತ ಊರ್ವಶಿಯನ್ನು ಕುರಿತು ಹೇಳಿದ "ಊರ್ವಶಿ ನೀನು ನಮ್ಮ ಮನೆಗೆ ನಡೆ. ನನ್ನ ಮನೆಯಲ್ಲಿ ದಾಸಿಯಾಗಿ ಗೃಹಕೃತ್ಯಗಳನ್ನು ಮಾಡು."

ಪ್ರಮತಿಯ ಮಾತು ಕೇಳಿ ದೇವಗಣಿಕೆಯಾದ ಊರ್ವಶಿಯು "ಭೂಲೋಕದ ಸಾರ್ವಭೌಮ, ನಾನು ಸ್ವರ್ಗದಲ್ಲಿ ದೇವೇಂದ್ರನ ಮನದನ್ನೆಯಾಗಿ ಇರುವಂತೆ ನಿನ್ನ ಮನೆಯಲ್ಲಿ ನಿನ್ನ ಅಂತಃಪುರದಲ್ಲಿಯಾದರೂ ನಿನ್ನ ಮನರಂಜನೆಯನ್ನು ಮಾಡುತ್ತ ಸಂಗೀತ ನರ್ತನ ಮಾಡುತ್ತ ಇರುತ್ತೇನೆ ದೇವಲೋಕದ ಹೆಣ್ಣಾದ ನಾನು ಮಾನವರ ಮನೆಯ ದಾಸಿಯಾಗಿ ಇರಲಾರೆ. ರಾಣಿಯಾಗಿ ಬೇಕಾದರೆ ಇರುತ್ತೇನೆ" ಎಂದು ಹೇಳಿದಳು.

ಅವಳ ಮಾತನ್ನು ಕೇಳಿ ಪ್ರಮತಿರಾಜನು ಗರ್ವಾಂಧನಾಗಿ ಅನಾದರದಿಂದ ಅವಳಿಗೆ ಹೇಳಿದ. "ಊರ್ವಶಿ, ನಿನ್ನಂಥ ದಾಸಿಯರು ನನ್ನ ಮನೆಯಲ್ಲಿ ಅನೇಕರಿದ್ದಾರೆ. ನಿನಗಿಂತ ಚೆಲುವೆಯರಾದ ಹೆಣ್ಣುಗಳೂ ನನ್ನ ಅಂತಃಪುರದಲ್ಲಿ ನನ್ನ ಸೇವೆಗಾಗಿ ಕೈ ಕಟ್ಟಿ ನಿಂತಿದ್ದಾರೆ.

ನನ್ನ ರಾಣೀವಾಸದಲ್ಲಿ ನಿನ್ನಂಥ ಗಣಿಕೆಯರಿಗೆ ಪ್ರವೇಶ ನೀಡಲಾರೆ. ನನ್ನ ಮನೆಯಲ್ಲಿಯ ಕಾರ್ಯಗಳನ್ನೂ, ಗೃಹಕೃತ್ಯದ ಸೇವೆಯನ್ನು ನಾನು ಹೇಳಿದಂತೆ ನೀನು ಮಾಡು. ನನ್ನ ದಾಸಿ ಎಂಬುದನ್ನು ಮರೆಯದಿರು. ದಾಸಿಯಾದವಳಿಗೆ ಮನೆಗೆಲಸ ಮಾಡಲು ನಾಚಿಕೆ ಏಕೆ?''

ಇದನ್ನು ಕೇಳಿ ಅಲ್ಲಿಯೇ ನಿಂತ ವಿಶ್ವಾವಸುವಿನ ಮಗನಾದ ಚಿತ್ರಸೇನನಿಗೆ ಕೋಪ ಕೆರಳಿತು. ಹೃದಯದಲ್ಲಿ ಈರ್ಷ್ಯೆಯ ಅಗ್ನಿ ಭುಗಿಲ್ಲೆಂದಿತು. ಅವನಾಗ ಪ್ರಮತಿಗೆ ಹೇಳಿದ. ''ರಾಜನೆ, ನಾವಿಬ್ಬರೂ ನಿರ್ಣಾಯಕ ಆಟ ಒಂದನ್ನು ಆಡೋಣ. ಅದರಲ್ಲಿ ನಮ್ಮ ನಮ್ಮ ರಾಜ್ಯ,ಕೋಶ, ಅಧಿಕಾರ ಜೀವಿತ ಸರ್ವಸ್ವವನ್ನು ಪಣಕ್ಕೆ ಇಟ್ಟು ಆಡೋಣ'' ಎಂದು ಹೇಳಿದ.

ಪ್ರಮತಿ ಮಹಾರಾಜನಿಗೆ ವಿಜಯ ಮದ ಮಸ್ತಕಕ್ಕೆ ಏರಿತ್ತು. ಅವನೂ ಈ ಸರ್ವಸ್ವ ಪಣದ ಆಟಕ್ಕೆ ಸಿದ್ಧನಾದ. ತುರುಸಿನ ದ್ಯೂತದ ಆಟವು ಅತಿಬಿರುಸಿನಿಂದ ನಡೆಯಿತು. ಗಾಂಧರ್ವ ವಿದ್ಯೆಯ ಪ್ರಭಾವದಿಂದ ಆ ವಿಶ್ವಾವಸುವಿನ ಕುಮಾರನಾದ ಚಿತ್ರಸೇನನು ಜಗತ್ತಿನಲ್ಲಿಯೇ ಅಜಿಂಕ್ಯನಾಗಿದ್ದ. ಯುದ್ಧದಲ್ಲೇ ಆಗಲಿ ದ್ಯೂತದಲ್ಲೇ ಆಗಲಿ ಅವನಿಗೆ ಎಂದೂ ಸೋಲು ಉಂಟಾಗಿರಲಿಲ್ಲ. ತಂದೆ ಹಾಗೂ ಇಂದ್ರನ ಪರಾಜಯದಿಂದ ಇಡೀ ದೇವಲೋಕಕ್ಕೆ ಭಯಂಕರವಾದ ಅಪಜಯ ಅಪಮಾನಗಳುಂಟಾಗಿ ಮೂರು ಲೋಕದಲ್ಲಿಯೂ ಅಪಕೀರ್ತಿ ಪಸರಿಸುವಂತಾಗಿತ್ತು. ಇದನ್ನೆಲ್ಲ ನೋಡಿ ತರುಣನಾದ ಗಂಧರ್ವರಾಜಕುಮಾರನಾದ ಚಿತ್ರಸೇನನು ತನ್ನ ತಂದೆ ಹಾಗೂ ದೇವೇಂದ್ರನನ್ನು ಪಕ್ಕಕ್ಕೆ ಸರಿಸಿ ತಾನೇ ಸರ್ವಸ್ವವನ್ನು ಪಣಕ್ಕೆ ಇರಿಸಿ ಗಂಧರ್ವ ವಿದ್ಯೆಯ ಪ್ರಭಾವದಿಂದ ಆಟವಾಡಿ ಆ ನರಲೋಕದ ಭೂಪತಿಯನ್ನು ಸೋಲಿಸಿದ. ಪ್ರಮತಿಯ ರಾಜ್ಯ ಕೋಶ, ಬಲ, ಅಧಿಕಾರ ಎಲ್ಲವನ್ನೂ ಗೆದ್ದು ಕೊಂಡುಬಿಟ್ಟ. ಗರ್ವಿಷ್ಠನಾದ ಪ್ರಮತಿಯನ್ನು ಗಂಧರ್ವಪಾಶದಿಂದ ಬಂಧಿಸಿ ತನ್ನ ದಾಸನನ್ನಾಗಿಸಿದ. ಇಂದ್ರ, ಊರ್ವಶಿ, ವಿಶ್ವಾವಸು ಇವರೆಲ್ಲರನ್ನೂ ತನ್ನ ದಾಸರನ್ನಾಗಿಸಿದ. ಪ್ರಮತಿಯನ್ನೇ ಚಿತ್ರಸೇನನು ಗೆದ್ದದ್ದರಿಂದ ಅವರೆಲ್ಲರೂ ದಾಸ್ಯದಿಂದ ಮುಕ್ತರಾದರು.

ಇತ್ತ ಭೂಲೋಕದಲ್ಲಿ ಪ್ರಮತಿಯು ಸ್ವರ್ಗಲೋಕದಿಂದ ಮರಳಿ ಬಹುಕಾಲ ಬಾರದೇ ಇದ್ದುದರಿಂದ ಕೋಲಾಹಲ ಉಂಟಾಯಿತು. ಪ್ರಮತಿಯ ಮಗನಾದ ಸುಮತಿಯು ಆಗ ಚಿಂತಾಕ್ರಾಂತನಾಗಿ ಎಲ್ಲೆಡೆ ತನ್ನ ತಂದೆಯನ್ನು ಹುಡುಕಿಸಿದ. ನಮ್ಮ ತಂದೆಯನ್ನು ಯಮನು ಎಲ್ಲಿ ಬಂಧಿಸಿ ಇಟ್ಟಿದ್ದಾನೆ? ಎಂದು ಹಗಲಿರುಳೂ ಯೋಚನೆ ಮಾಡಿದ. ಕೊನೆಗೆ ತಮ್ಮ ಕುಲಗುರುಗಳಾದ ಮಧುಚ್ಛಂದರ ಬಳಿಗೆ ಹೋಗಿ ತನ್ನ ತಂದೆಯ ಸಮಾಚಾರ ಏನು ಎಂದು ಕೇಳಿದ. ಸರ್ವಜ್ಞಕಲ್ಪರಾದ ಮಧುಚ್ಛಂದ ಮಹರ್ಷಿಗಳು ಧ್ಯಾನ ದೃಷ್ಟಿಯಿಂದ ಎಲ್ಲವನ್ನೂ ಅರಿತು ಹೇಳಿದರು. ''ಸುಮತಿಕುಮಾರ, ನಿನ್ನ ತಂದೆಯು ಸ್ವರ್ಗಲೋಕಕ್ಕೆ ಹೋಗಿ ಇಂದ್ರನ ಜೊತೆ ಕಪಟದಿಂದ ದ್ಯೂತವನ್ನು ಆಡಿ ಸರ್ವಸ್ವವನ್ನೂ ಸೋತಿದ್ದಾನೆ. ದ್ಯೂತವು ವೇದದಲ್ಲಿಯೇ ನಿಷೇಧಿಸಲ್ಪಟ್ಟಿದೆ. ಬೇಸಾಯ, ಗೋರಕ್ಷಣೆ, ವಾಣಿಜ್ಯ ಮುಂತಾದ ಯಾವುದೇ ವೃತ್ತಿಯನ್ನು ಮಾಡಿದರೂ ಕ್ಷತ್ರಿಯನಿಗೆ ದೋಷವಿಲ್ಲ. ಆದರೆ ಕಪಟ ವೃತ್ತಿಯಿಂದ ದ್ಯೂತ ಅಥವಾ ಜೂಜಾಟ ಮಾತ್ರ ಆಡಬಾರದು ಎಂದು ಶಾಸ್ತ್ರದಲ್ಲಿ ಸ್ಪಷ್ಟ ನಿಷೇಧ ಇದೆ. ಇಷ್ಟೆಲ್ಲ ತಿಳಿದರೂ ನಿನ್ನ ತಂದೆ ಸ್ವರ್ಗಕ್ಕೂ ಹೋಗಿ ಸುರರಾಜ್ಯವನ್ನು ಮಾಯಾದ್ಯೂತಿದಿಂದ ಗೆದ್ದು ತರಬೇಕು ಎಂಬ ದುರಾಸೆಯಿಂದ ಹೋಗಿ

ದ್ಯೂತಮಾಡಿ ತನ್ನ ಸರ್ವಸ್ವವನ್ನು ಕಳೆದುಕೊಂಡ. ತಾನೂ ಕೂಡ ಬಂಧಿತನಾದ.'' ಅದನ್ನು ಕೇಳಿ ಅತ್ಯಂತ ದುಃಖಿತನಾದ ಸಮತಿಕುಮಾರನು ಮಧುಚ್ಛಂದರಿಗೆ ಕೈಜೋಡಿಸಿ ದೈನ್ಯದಿಂದ ''ಪೂಜ್ಯರೇ ನನ್ನ ತಂದೆಯು ಹೇಗೆ ಬಂಧಮುಕ್ತನಾದಾನು? ಅವನ ಕಳೆದು ಹೋದ ರಾಜ್ಯವು ಮರಳಿ ಅವನಿಗೇ ಹೇಗೆ ದೊರೆಯಬಹುದು?'' ಎಂದು ಕೇಳಿದ. ಆಗ ಮಹರ್ಷಿ ಮಧುಚ್ಛಂದರು ''ರಾಜಕುಮಾರ, ನೀನು ಗೌತಮೀನದಿಗೆ ಹೋಗು. ಅಲ್ಲಿ ನೆಲೆ ನಿಂತ ಶಂಕ, ಶ್ರೀಹರಿ, ಅದಿತಿ, ವರುಣ ಮುಂತಾದ ದೇವತೆಗಳನ್ನು ಪೂಜೆ ಮಾಡು. ಎಂದರೆ ಮಾತ್ರ ನಿನ್ನ ತಂದೆಗೆ ಗಂಧರ್ವಪಾಶದಿಂದ ಮೋಚನವಾಗುವದು. ದ್ಯೂತಕ್ರೀಡೆಯಲ್ಲಿ ಕಳೆದ ರಾಜ್ಯವೂ ಮರಳಿ ದೊರೆಯುವುದು'' ಎಂದು ಸುಮತಿಯ ತಂದೆಯ ಬಂಧ ಮೋಚನದ ಉಪಾಯವನ್ನು ಹೇಳಿಕೊಟ್ಟರು.

ಮಧುಚ್ಛಂದರ ಮಾತಿನಂತೆ ಪ್ರಮತಿಯ ಪಿತೃಭಕ್ತ ಪುತ್ರನಾದ ಸುಮತಿಯು ಗೌತಮೀತೀರಕ್ಕೆ ಬಂದ. ಅನೇಕ ವರ್ಷ ಹರಿಹರರನ್ನು ಕುರಿತು ತಪಸ್ಸು ಮಾಡಿದ. ಆ ತಪಃ ಪ್ರಭಾವದಿಂದ ಒಂದು ಸಾವಿರ ವರ್ಷ ಇಂದ್ರಲೋಕದ ಬಂದೀಮನೆಯಲ್ಲಿ ಬಂಧಿತನಾಗಿ ಇದ್ದ ಪ್ರಮತಿಯು ಹರಿಹರರ ಆಶೀರ್ವಾದದಿಂದ ಮುಕ್ತನಾದ. ಆ ಮಗನ ಪುಣ್ಯರಾಶಿಯಿಂದ ಅವನಿಗೆ ತನ್ನ ನಷ್ಟರಾಜ್ಯವು ಮರಳಿ ದೊರಕಿತು. ಶಿವಕೇಶವರ ಆಜ್ಞೆಯಂತೆ ವಿಶ್ವಾವಸುವು ಪ್ರಮತಿಗೆ ಗಂಧರ್ವ ವಿದ್ಯೆಯನ್ನೂ ಕಲಿಸಿದ. ಅದರಿಂದ ಅವನು ಇಂದ್ರನಿಗೆ ಪ್ರಿಯಮಿತ್ರನೂ ಆದ. ಹರಿ, ಹರ ಮತ್ತು ಗಂಗಾ ನದಿಗಳ ಪ್ರಸಾದವಾದರೆ ಯಾವುದು ತಾನೇ ದುರ್ಲಭ? ಈ ಇತಿಹಾಸದ ಸಾಕ್ಷೀಭೂತವಾಗಿ ಇಂದಿಗೂ ಆ ಗೋದಾವರೀ ತೀರದಲ್ಲಿ ಶಾಂಭವ ತೀರ್ಥ, ವೈಷ್ಣವತೀರ್ಥ, ಊರ್ವಶೀ ತೀರ್ಥ, ಕೈತವತೀರ್ಥ ಎಂಬ ತೀರ್ಥಗಳು ಕಂಗೊಳಿಸುತ್ತಿವೆ. ಅಲ್ಲಿ ಸ್ನಾನ ದಾನಾದಿಗಳನ್ನು ಮಾಡುವದರಿಂದ ಮಾನವರು ಪಾಪ ಪಾಶದಿಂದ ಮುಕ್ತರಾಗುತ್ತಾರೆ.

## ಗೋದಾವರೀ ಸಮುದ್ರ ಸಂಗಮ

**ಬ್ರಹ್ಮ:-** ವಿಷ್ಣುವಿನ ಪಾದದಿಂದ ಹೊರಟ ಗಂಗೆಯು ಲೋಕೋಪಕಾರಕ್ಕಾಗಿ ಪೂರ್ವ ಸಮುದ್ರಕ್ಕೆ ಅಭಿಮುಖಳಾಗಿ ಹರಿದಳು. ವಿಷ್ಣು ಪಾದ ಪ್ರಸೂತಳಾದ ಆ ದೇವ ನದಿಯನ್ನು ಮೊದಲು ಕಮಂಡಲುವಿನಲ್ಲಿ ಇರಿಸಿದೆ ಅದನ್ನು ಅನಂತರ ಮಹಾದೇವನು ತನ್ನ ತಲೆಯ ಮೇಲೆ ಧರಿಸಿದ. ಗೌತಮಮುನಿಯು ಆರಾಧಿಸಿ ಗಂಗೆಯನ್ನು ಭೂಲೋಕಕ್ಕೆ ಕರೆ ತಂದ. ಹೀಗೆ ಹರಿಹರ-ಬ್ರಹ್ಮರಿಂದ ಸಂಭಾವಿತಳಾದ, ಗೋದಾವರಿಯೆಂದೂ ಪ್ರತಿಥಳಾದ ಆ ದೇವ ಗಂಗೆಯನ್ನು ಸಮುದ್ರರಾಜನು ಸ್ವಾಗತಿಸಿದನು. ಕೈಮುಗಿದು ಹೀಗೆಂದ. ''ಲೋಕಪಾವನೆಯಾದ ದೇವಗಂಗೆ, ನನ್ನಲ್ಲಿ ಅನರ್ಘ್ಯವಾದ ರತ್ನಗಳು ತುಂಬಿವೆ. ನನ್ನಲ್ಲಿದ್ದ ಅಮೃತವನ್ನು ಧನ್ವಂತರಿಯ ಮೂಲಕ ನಾನೇ ದೇವತೆಗಳಿಗೆ ನೀಡಿದೆ. ನನ್ನ ವೀಚಿಯ ಒಡಲಿನಲ್ಲಿ ಇಂದಿರೆಯೊಂದಿಗೆ ಒಡಗೂಡಿ ಶ್ರೀಹರಿಯು ಮಲಗಿದ್ದಾನೆ. ಇವೆಲ್ಲರನ್ನೂ ಧರಿಸಿದ ನನಗೆ ತುಸುವೂ ಆಯಾಸವಿಲ್ಲ. ನೀನು ಸರ್ವಶ್ರೇಷ್ಠಳು. ನೀನೂ ಕೂಡ ನಿನ್ನ ಸಕಲ ಪ್ರವಾಹದಿಂದ ಏಕರೂಪಳಾಗಿ ಬಂದರೆ ನಿನ್ನ ಓಘವನ್ನೂ ವೇಗವನ್ನೂ ತಡೆಯಲಾರೆ. ರಭಸ ತಾಳಲಾರೆ. ಅದಕ್ಕಾಗಿ ನೀನು ಅನೇಕ ಕಮಲಗಳಾಗಿ ಹರಿದು ಬಂದು ನನ್ನನ್ನು ಸಂಗಮಿಸು.''

ಸಿಂಧುರಾಜನ ಈ ಮಾತನ್ನು ಕೇಳಿ ದೇವಗಂಗೆಯೆನಿಸಿದ ಆ ಗೋದಾವರಿಯು ಮಾರ್ನುಡಿದಳು. "ಸಮುದ್ರನಾಥ, ನಾನು ನಿನ್ನೊಡನೆ ಸಂಗಮಿಸಬೇಕೆಂದು ಅಪೇಕ್ಷಿ ಇದ್ದರೆ ಅರುಂಧತೀ ಸಹಿತರಾದ ಸಪ್ತರ್ಷಿಗಳನ್ನೂ, ಅವರೆಲ್ಲ ಮಡದಿಯರನ್ನೂ ನೀನು ಆಹ್ವಾನಿಸು. ಆಗ ನಾನು ಅವರೆಲ್ಲರೊಂದಿಗೆ ಕೂಡಿಕೊಂಡೇ ನಿನ್ನಲ್ಲಿ ಸಂಗಮಿಸುವೆನು."

ಗೋದಾವರಿಯ ಮಾತಿನಂತೆ ಸಮುದ್ರರಾಜನು ವಶಿಷ್ಠ ಮೊದಲಾದ ಸಪ್ತರ್ಷಿಗಳನ್ನು, ಅರುಂಧತಿ ಮೊದಲಾದ ಅವರ ಏಳು ಜನ ಮಡದಿ ಮುತ್ತೈದೆಯರನ್ನೂ ಕರೆ ತಂದ. ಆಗ ಆ ದೇವಗಂಗೆಯು ಏಳು ಸರಳುಗಳ ರೂಪದಿಂದ ಹರಿದು ಸಮುದ್ರವನ್ನು ಕೂಡಿದಳು. ಆ ಗೋದವಾರಿಯ ಸಮುದ್ರಕ್ಕೆ ಸೇರಿದ ಏಳೂ ಪ್ರವಾಹಗಳು ಆಯಾ ಋಷಿಗಳ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಅಲ್ಲಿ ಸ್ನಾನದಾನ ಮಾಡಿದವರು ಉದ್ಧೃತರಾಗುವರು.

## ಭೀಮೇಶ ತೀರ್ಥ

**ಬ್ರಹ್ಮ:-** ಅಲ್ಲಿಗೆ ಬಂದ ವಶಿಷ್ಠರೇ ಮೊದಲಾದ ಸಪ್ತರ್ಷಿಗಳು ಅಲ್ಲಿ ತಪಶ್ಚರ್ಯೆಯನ್ನು ಮಾಡಿದರೂ ಆ ಸ್ಥಳಕ್ಕೆ ಋಷಿಸತ್ರ ಎಂಬ ಹೆಸರು ಬಂದಿತು. ಅಲ್ಲಿ ಭೀಮೇಶ್ವರ ಎಂಬ ಹೆಸರಿನಿಂದ ಶಂಕರನು ಸುಪ್ರತಿಷ್ಠಿತನಾಗಿದ್ದಾನೆ. ಅಲ್ಲಿಯೇ ಗಂಗೆಯು ಏಳು ಪ್ರವಾಹಗಳಾಗಿ ಹರಿದಿದ್ದಾಳೆ. ಗಂಗೆಯ ಏಳು ಕವಲು ಪ್ರವಾಹಗಳಿಗೆ ವಾಶಿಷ್ಠೀ, ವೈಶ್ವಾಮಿತ್ರೀ, ವಾಮದೇವೀ, ಗೌತಮೀ, ಭಾರದ್ವಾಜೀ, ಆತ್ರೇಯೀ, ಜಾಮದಗ್ನಿ ಎಂದು ಏಳು ಹೆಸರುಗಳು ಬಂದಿರುತ್ತವೆ. ಎಲ್ಲ ಋಷಿಗಳೂ ಸೇರಿ ದೊಡ್ಡ ಯಜ್ಞವೊಂದನ್ನು ಅಲ್ಲಿ ಆಚರಿಸಿದರು. ಅದಕ್ಕಾಗಿಯೇ ಆ ಸ್ಥಳಕ್ಕೆ 'ಋಷಿ ಸತ್ರ' ಎಂಬ ಹೆಸರು ಅನ್ವರ್ಥ. ಆ ಮುನಿಗಳು ಯಜ್ಞಮಾಡುತ್ತ ಕುಳಿತಾಗ ವಿಶ್ವರೂಪ ಎಂಬ ದೇವ ವೈರಿಯು ಅಲ್ಲಿಗೆ ಬಂದ. ವಿನಯದಿಂದ ಋಷಿಗಳನ್ನು ಕೇಳಿದ. "ಪೂಜ್ಯರೆ, ನನಗೆ ದೇವತೆಗಳಿಗಿಂತ ಬಲಿಷ್ಠನಾದ ಒಬ್ಬ ಮಗನು ಹುಟ್ಟಬೇಕು. ಅದಕ್ಕಾಗಿ ಯಾವ ಯಜ್ಞ ಎಂಥ ತಪ ಆಚರಿಸಬೇಕು ದಯವಿಟ್ಟು ಹೇಳಿರಿ. ಆಗ ಸಪ್ತರ್ಷಿಗಳು ಅವನಿಗೆ ಸಾತ್ವಿಕ ರಾಜಸ ತಾಮಸ ಕರ್ಮಗಳ ಫಲಾಫಲಗಳನ್ನು ತಿಳಿಸಿದರು. ಸ್ವಾತಿಕ ಕರ್ಮಗಳಿಂದ ಒಳ್ಳೆ ಫಲಗಳು ದೊರಕುವವು ಎಂದೂ ಹೇಳಿದರು. ಆದರೆ ದೈತ್ಯನಾದ ಆ ವಿಶ್ವರೂಪನು ತಾಮಸೀಭಾವನೆಯಿಂದ ಬಹುಕಾಲ ತಾಮಸ ತಪಸ್ಸನ್ನೇ ಮಾಡಿದನು. ಮತ್ತು ಎಲ್ಲ ಋಷಿಗಳ ಎದುರಿಗೆ ಅವರು ಬೇಡಬೇಡವೆಂದರೂ ಕೇಳದೇ ರೌದ್ರಪುರುಷನನ್ನು ಧ್ಯಾನಮಾಡುತ್ತ ಉರಿಯುತ್ತಿರುವ ಅಗ್ನಿಕುಂಡದಲ್ಲಿ ಹಾಕಿಕೊಂಡು ಆತ್ಮಾರ್ಪಣೆ ಮಾಡಿಕೊಂಡನು. ಅವನ ಈ ಭೀಮಕರ್ಮದಿಂದ ವೃತ್ರಾಸುರ ಜನಿಸಿದ. ಋಷಿಗಳು ಅಲ್ಲಿಯೇ ನೆಲೆನಿಂತ ಭೀಮೇಶ್ವರನನ್ನು ನಮಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಈ ಭೀಮೇಶ್ವರನ ಸನ್ನಿಧಾನದಲ್ಲಿಯೇ ಗೋದಾವರಿಯು ಸಮುದ್ರರಾಜನನ್ನು ಅನೇಕ ಪ್ರವಾಹಗಳಿಂದ ಬಿಗಿದಪ್ಪಿದ್ದರಿಂದ ಇದಕ್ಕೆ ಗೋದಾವರಿ ಸಮುದ್ರ ಸಂಗಮ ತೀರ್ಥ ಎಂದು ಹೆಸರು ಬಂದಿದೆ. ಇಲ್ಲಿಯೇ ಋಷಿಸತ್ರ ತೀರ್ಥ, ಭೀಮೇಶ್ವರ ತೀರ್ಥಗಳು ಲೋಕಪಾವನವಾಗಿ ಕಂಗೊಳಿಸುತ್ತಲಿವೆ.

## ಗಂಗಾಸಾಗರ ಸಂಗಮತೀರ್ಥ

**ಬ್ರಹ್ಮ:-** ದೇವ ಗಂಗೆಯಾದ ಗೋದಾವರಿಯು ದಕ್ಷಿಣ ದಿಕ್ಕಿನಲ್ಲಿ ಹರಿದು ಗೋದಾವರಿಯೆಂದು ಪ್ರಸಿದ್ಧಳಾಗಿ ಪೂರ್ವಸಮುದ್ರದೊಡನೆ ಸಂಗಮಿಸಿದಳು. ಆ ನದೀ

ಸಂಗಮತೀರ್ಥವನ್ನು ಎಲ್ಲ ದೇವತೆಗಳೂ, ಋಷಿಗಳೂ ಸ್ತೋತ್ರಮಾಡುತ್ತಾರೆ. ವಶಿಷ್ಠ, ಜಾಬಾಲಿ, ಯಾಜ್ಞವಲ್ಕ್ಯ, ಕ್ರುತು, ಅಂಗಿರಸ, ದಕ್ಷ, ಮರೀಚಿ, ಶಾತಾತಪ, ಶೌನಕ, ದೇವರಾತ, ಭೃಗು ಅಗ್ನಿವೇಶ್ಯ, ವಿಶ್ವಾಮಿತ್ರ, ಮನು ಅಗಸ್ತ್ಯ, ಮಾರ್ಕಂಡೇಯ, ಪಿಪ್ಪಲ, ಗಾಲವ ಮೊದಲಾದ ಎಲ್ಲ ಋಷಿಗಳೂ ವೇದೋಕ್ತ ಮಂತ್ರದಿಂದ ಈ ಗಂಗಾಸಾಗರ ಸಂಗಮಸ್ಥಳವನ್ನು ಸ್ತೋತ್ರ ಮಾಡಿದ್ದಾರೆ. ಅವರ ಸ್ತೋತ್ರರೂಪವಾದ ಪ್ರಾರ್ಥನಾ ಮಂತ್ರದಿಂದ ಶಂಕರ ಶ್ರೀಹರಿ ಇಬ್ಬರೂ ದೇವೋತ್ತಮರೂ ತಮ್ಮ ಸಾಕ್ಷಾತ್ಕಾರವನ್ನು ಅವರಿಗೆ ಕರುಣಿಸಿದರು. ಆ ಸಂಗಮದ ಸಪ್ತಸ್ಥಲಗಳೂ ಪರಮಪವಿತ್ರ ತೀರ್ಥಗಳಾಗಿದ್ದು ಅಲ್ಲಿ ಹರಿ ಹರರು ತಾವೇ ನೆಲೆನಿಂತು ಸ್ನಾನದಾನ ಮಾಡುವವರಿಗೆ ಇಷ್ಟಾರ್ಥಗಳನ್ನು ಕರುಣಿಸುತ್ತಿದ್ದಾರೆ.

ಮಹಾದೇವರು ಗೌತಮಋಷಿಯಿಂದ ಪ್ರತಿಷ್ಠಿತನಾಗಿ ಸಂಗಮಸ್ಥಳದಲ್ಲಿ ನೆಲೆಸಿದ ಪ್ರದೇಶವು ಗೌತಮೇಶ್ವರ ತೀರ್ಥ ಎಂದು ಹೆಸರಾಗಿದೆ. ಅಲ್ಲಿ ಲಕ್ಷ್ಮಿಯೊಂದಿಗೆ ನಾರಾಯಣನೂ ನಿತ್ಯವೂ ಸನ್ನಿಹಿತನಾಗಿದ್ದಾನೆ. ಅಲ್ಲಿ ಇನ್ನೊಂದೆಡೆಯಲ್ಲಿ ನಾನೇ ಶಂಕರನನ್ನು ಸ್ಥಾಪಿಸಿದ್ದು ಅದು ಬ್ರಹ್ಮೇಶ್ವರ ಎಂದು ಹೆಸರಾಗಿದೆ. ಅಲ್ಲಿಯೇ ಮತ್ತೊಂದು ಕಡೆ ನಾನು ಪ್ರಾರ್ಥನೆ ಮಾಡಿದಾಗ ಮಹಾವಿಷ್ಣುವು ಬಂದು ಸನ್ನಿಹಿತನಾಗಿದ್ದಾನೆ. ಅದಕ್ಕೆ ಚಕ್ರಪಾಣಿ ತೀರ್ಥ ಎನ್ನುತ್ತಾರೆ. ಹಯಗ್ರೀವ ರೂಪಿಯಾದ ಹರಿಯು ನೆಲೆಸಿದ ತಾಣ ಐಂದ್ರತೀರ್ಥ. ಸೋಮೇಶ್ವರನು ನಿಂತದ್ದು ಸೋಮತೀರ್ಥ. ಹಿಂದೆ ಋಷಿಗಳು ಯಜ್ಞದಲ್ಲಿ ಸೋಮಾಭಿಷವವನ್ನು ಮಾಡಿ 'ಇಂದ್ರಾಯೇಂದೋ ಪರಿಸ್ರವ' ಮುಂತಾದ ಮಂತ್ರಗಳಿಂದ ಸೋಮರಸವನ್ನು ಸಿದ್ಧಪಡಿಸಿ ದೇವೇಂದ್ರನಿಗೆ ನೀಡಿದರು. ಅದರಿಂದ ಇಂದ್ರಯಜ್ಞವು ಪೂರ್ಣವಾಯಿತು. ಅದರಿಂದಾಗಿ ಅವು ಸೋಮತೀರ್ಥವೆಂದು ಪ್ರಸಿದ್ಧವಾಗಿದೆ. ಹಿಂದೆ ಅಗ್ನಿಯು ಅನೇಕ ಯಜ್ಞಗಳನ್ನು ಮಾಡಿ ನನ್ನನ್ನು ಅರ್ಥಾತ್ ಬ್ರಹ್ಮನನ್ನು ಆರಾಧಿಸಿದ್ದ. ಆದುದರಿಂದ ನಾನು ಅಲ್ಲಿಯೇ ವಿಷ್ಣು ಶಿವ ಸಮೇತರಾಗಿ ಲೋಕೋಪಕಾರಕ್ಕಾಗಿ ಕಾಲೂರಿ ನಿಂತುಕೊಂಡೆ. ಈ ಕಾರಣದಿಂದ ಅದು ಅಗ್ನಿತೀರ್ಥ ಎಂದು ಹೆಸರುವಾಸಿಯಾಗಿದೆ.

ಈ ಗೌತಮೀ ತೀರದಲ್ಲಿ ಆದಿತ್ಯ ತೀರ್ಥವೆಂಬ ತೀರ್ಥವಿದೆ. ಅದರ ವೃತ್ತಾಂತ ಚಮತ್ಕಾರಪೂರ್ಣವಾಗಿದೆ. ಇಲ್ಲಿಯ ಸೋಮತೀರ್ಥದ ತೀರದಲ್ಲಿ ನಾನು (ಬ್ರಹ್ಮನು) ವಿಷ್ಣು ಹಾಗು ಮಹೇಶ್ವರ ಮೂವರೂ ಸುಪ್ರತಿಷ್ಠಿತರಾಗಿ ನಿಂತುಕೊಂಡಿದ್ದರಿಂದ ನಮ್ಮ ಸೇವೆಗಾಗಿ ಪ್ರತಿನಿತ್ಯ ಅಲ್ಲಿಗೆ ಸೂರ್ಯನು ಬರುತ್ತಾನೆ. ಆದರೆ ಅವನು ನಿಯಮಿತವಾದ ಒಂದೇ ರೂಪದಿಂದ ಬರುವದಿಲ್ಲ. ಬೇರೆ ಬೇರೆ ರೂಪ, ಬೇರೆ ವೇಷ, ಬೇರೆ ಬೇರೆ ದೇಹಗಳಿಂದಲೂ ಪ್ರತಿನಿತ್ಯ ಮಧ್ಯಾಹ್ನಕಾಲದಲ್ಲಿ ತ್ರಿಮೂರ್ತಿಗಳ ದರ್ಶನಕ್ಕಾಗಿ ಬರುತ್ತಾನೆ. ಯಾವ ರೂಪದಿಂದ ಬರುತ್ತಾನೆ ಎಂಬುದು ಯಾರಿಗೂ ಗೊತ್ತಾಗುವುದಿಲ್ಲ. ಆದುದರಿಂದ ಅಲ್ಲಿಗೆ ಬಂದ ಜನರು ಯಾರನ್ನು ಕಂಡರೂ ಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ. ಶಿಶು, ವೃದ್ಧ, ತರುಣ, ರೋಗಿಷ್ಠ, ಹುಚ್ಚ, ಉನ್ಮತ್ತ ಯಾರೇ ಇದ್ದರೂ ಅವರಿಗೆಲ್ಲ ಕೈಮುಗಿಯುತ್ತಾರೆ. ಕಂಡವರೆಲ್ಲರಿಗೂ ಪಾದಮುಟ್ಟಿ ನಮಸ್ಕಾರ ಮಾಡುತ್ತಾರೆ. ಏಕೆಂದರೆ ಅವರಲ್ಲಿ ಯಾವನಾದರೂ ಒಬ್ಬ ಸೂರ್ಯದೇವನೇ ಇರಬಹುದು. ಅಲ್ಲಿದ್ದವರೆಲ್ಲರಿಗೂ ನಮಿಸಿದರೆ ಅವರಲ್ಲಿ ಒಬ್ಬನಾದರೂ ತ್ರಿಮೂರ್ತಿ ದರ್ಶನಕ್ಕೆ ಬಂದ ಸೂರ್ಯನೇ ಇರುತ್ತಾನೆ ಎಂಬ ಭಾವನೆಯಿಂದ ಸರ್ವರೂ ಸರ್ವರಿಗೂ ನಮಸ್ಕಾರ ಮಾಡುತ್ತಾರೆ. ಈ ಆದಿತ್ಯತೀರ್ಥಕ್ಕೆ ಬಾರ್ಹಸ್ಪತ್ಯತೀರ್ಥ ಎಂದೂ

ಕರೆಯುತ್ತಾರೆ. ಪೂರ್ವಕಾಲದಲ್ಲಿ ಸುರಗುರುವಾದ ಬೃಹಸ್ಪತ್ಯಾಚಾರ್ಯರು ಈ ತೀರ್ಥದ ದಂಡೆಯ ಮೇಲೆ ಅನೇಕ ಯಜ್ಞಗಳನ್ನು ಮಾಡಿದರು. ಆಗ ಅವರ ಶಿಷ್ಯರಾದ ಎಲ್ಲ ದೇವತೆಗಳು ಇದೇ ಆದಿತ್ಯ ತೀರ್ಥದ ತೀರದಲ್ಲಿ ಬೃಹಸ್ಪತ್ಯಾಚಾರ್ಯರನ್ನು ಪೂಜಿಸಿದರು. ಬಾರ್ಹಸ್ಪತ್ಯ ತೀರ್ಥ ಎಂಬ ನಾಮಾಂಕವೂ ಇದಕ್ಕೆ ಅಂದಿನಿಂದಲೇ ಬಳಕೆಯಲ್ಲಿ ಬಂದಿತು. ಅಲ್ಲಿಯೇ ಸಮೀಪದಲ್ಲಿರುವ ಇಂದ್ರಗೋಪ ಪರ್ವತದಲ್ಲಿ ಹಿಮಾಲಯನು ಬಂದು ಕಾರಣಾಂತರದಿಂದ ಒಂದು ಮಹಾದೇವರ ಲಿಂಗವನ್ನು ಪ್ರತಿಷ್ಠಾಪಿಸಿದನು. ಆದುದರಿಂದ ಅದು "ಆದಿತೀರ್ಥ" ಎಂದು ಪ್ರಸಿದ್ಧವಾಯಿತು, ಅಲ್ಲಿ ಸ್ನಾನದಾನ ಮಾಡುವದರಿಂದ ಎಲ್ಲ ಮನೋರಥಗಳೂ ಪೂರ್ಣವಾಗುತ್ತವೆ.

ಹೀಗೆ ಬ್ರಹ್ಮಗಿರಿಯಿಂದ ಹೊರಟು ಈ ವೃದ್ಧಗಂಗೆಯು ಸಮುದ್ರಕ್ಕೆ ಕೂಡುವವರೆಗೆ ಎರಡೂ ತೀರಗಳಲ್ಲಿ ಇರುವ ಅನೇಕ ತೀರ್ಥಗಳ ಮಹಿಮೆಯನ್ನು ನಾನು ಸಂಕ್ಷೇಪವಾಗಿ ಹೇಳಿದ್ದೇನೆ. ವೇದಗಳಲ್ಲಿ ಮತ್ತು ಪುರಾಣಗಳಲ್ಲಿ ಋಷಿಗಳಿಂದ ಕೊಂಡಾಡಲ್ಪಟ್ಟ ಈ ಗೌತಮೀನದಿಯು ಲೋಕವಂದ್ಯಳು. ಅವಳ ಮಹಾಮಹಿಮೆಯನ್ನು ಹಾಗೂ ಪ್ರಭಾವವನ್ನು ಪೂರ್ಣವಾಗಿ ಹೇಳಲು ಯಾರಿಗೆ ಶಕ್ತಿ ಉಂಟು? ಈ ಗೌತಮೀನದಿಯ ದಂಡೆಯ ಮೇಲೆ ಇರುವ ಪ್ರತಿಯೊಂದು ತೀರ್ಥದ ಮಹಿಮೆಯನ್ನು ಹೇಳಲು ಇಬ್ಬರು ಮಾತ್ರ ಸಮರ್ಥರು ಲಕ್ಷ್ಮೀಪತಿಯಾದ ನಾರಾಯಣ ಶಾರದಾಪತಿಯಾದ ಬ್ರಹ್ಮ. ಜಗತ್ತಿನಲ್ಲಿ ಎಲ್ಲ ನದಿಗಳೂ ಕೆಲವೊಂದು ವಿಶಿಷ್ಟಸ್ಥಾನಗಳಲ್ಲಿ ಮಾತ್ರ ಅತಿಶಯ ಪುಣ್ಯ ಪ್ರದವಾಗಿರುತ್ತವೆ. ಮತ್ತು ಸಾಮಾನ್ಯವಾಗಿ ನದಿಗಳೆಲ್ಲವೂ ವೈಶಾಖ, ಕಾರ್ತೀಕ, ಮಾಘ ಮುಂತಾದ ಮಾಸಗಳಲ್ಲಿ ಮಾತ್ರ ಸ್ನಾನದಾನಾದಿಗಳಿಂದ ವಿಶೇಷ ಪುಣ್ಯಪ್ರದವಾಗಿರುತ್ತವೆ. ಆದರೆ ಗೌತಮೀ ನದಿಯು ಮಾತ್ರ ಸರ್ವದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಪುಣ್ಯದಾಯಿನಿಯೂ ಶುಭಪ್ರದಳೂ ಕಲ್ಯಾಣಕಾರಿಣಿಯೂ ಆಗಿರುತ್ತಾಳೆ.

**ಬ್ರಹ್ಮ:-** ಗಂಗೆಯು ಮೊಟ್ಟಮೊದಲು ವಾಮನರೂಪಿಯಾದ ವಿಷ್ಣುವಿನ ಪಾದದಿಂದ ಹುಟ್ಟಿದಳು. ಅನಂತರ ಆ ವಿಷ್ಣುಪದಿಯಾದ ಗಂಗೆಯು ನನ್ನಿಂದ (ಬ್ರಹ್ಮನಿಂದ) ಕಮಂಡಲುವಿನಲ್ಲಿ ಧರಿಸಲ್ಪಟ್ಟಿತು ಮುಂದೆ ಅದನ್ನೇ ಪರಮೇಶ್ವರನು ತನ್ನ ಜಟಾಜೂಟದಲ್ಲಿ ಧರಿಸಿದ ಹೀಗೆ ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳಿಂದ ಪುರಸ್ಕೃತಳಾದ ಆ ಗಂಗೆಯು ಸರ್ವಲೋಕವಂದ್ಯಳಾದಳು. ಮುಂದೆ ಗೌತಮ ಮುನಿಯು ತನ್ನ ಜನ್ಮ ತೇಜಸ್ಸಿನಿಂದ ಪ್ರಭಾವದಿಂದ ಮಹಾದೇವರನ್ನು ಒಲಿಸಿ ಶಿವನ ಜಟೆಯಲ್ಲಿದ್ದ ಆ ದೇವಗಂಗೆಯನ್ನು ಭೂಲೋಕಕ್ಕೆ ಕರೆದುಕೊಂಡು ಬಂದ. ಅವಳು ಭಾರತ ಭೂಖಂಡದ ನೆಲದುದ್ದ ಹರಿದು ಪೂರ್ವಸಮುದ್ರವನ್ನು ಸಂಗಮಿಸಿದಳು.

ಈ ಗಂಗೆಯು ಮಹಾದೇವರಿಗೆ ಅತ್ಯಂತ ಪ್ರಿಯತಮೆಯಾದಳು. ಆಗ ಪಾರ್ವತಿ ದೇವಿಗೆ ತನ್ನ ಪತಿಪರಮೇಶ್ವರ ಮನಸ್ಸು ಅನ್ಯತ್ರ ಆಸಕ್ತವಾದುದನ್ನು ನೋಡಿ ವಿಷಣ್ಣವಾಯಿತು. ಆ ಸತೀದೇವಿಯು ತನ್ನ ಮಗನಾದ ಗಣಪತಿಯನ್ನು ಕರೆದು ಹೇಳಿದಳು.

**ಪಾರ್ವತಿ:-** ವತ್ಸ, ಗಣೇಶ ನಿನ್ನ ತಂದೆಯಾದ ಮಹಾದೇವನು ತಲೆಯ ಮೇಲೆ ಗಂಗೆಯನ್ನು ಹೊತ್ತು ನಿಂತಿದ್ದಾನೆ. ಅವನಿಗೆ ಯಾವಾಗಲೂ ಗಂಗೆಯದೇ ಧ್ಯಾನ. ಮಹಾದೇವನಿದ್ದಲ್ಲಿಯೇ ಎಲ್ಲ ದೇವತೆಗಳೂ ನೆಲೆಸಿರುತ್ತಾರೆ. ಹೀಗಾಗಿ ಎಲ್ಲ

ದೇವತೆಗಳೂ ಮಹಾದೇವನೂ ಗಂಗೋಪಾಸಕರೇ ಆಗಿದ್ದಾರೆ. ನೀನು ಹೇಗಾದರೂ ಪ್ರಯತ್ನಮಾಡಿ ಮಹಾದೇವನು ಗಂಗೆಯಿಂದ ನಿವೃತ್ತವಾಗುವಂತೆ ಮಾಡು.

**ಗಣಪತಿ:-** ತಾಯಿ, ನನ್ನ ತಂದೆಯನ್ನು ಗಂಗೆಯಿಂದ ಪರಾಙ್ಮುಖನನ್ನಾಗಿ ಮಾಡುವದು ಸಾಧ್ಯವಿಲ್ಲ. ಸುರೋತ್ತಮರೆಲ್ಲರೂ ಮಹಾದೇವನನ್ನು ಬಿಟ್ಟು ಬರುವದಿಲ್ಲ. ಹೀಗಾಗಿ ದೇವತೆಗಳನ್ನಾಗಲೀ, ಪರಮೇಶ್ವರನನ್ನಾಗಲೀ ಗಂಗೆಯಿಂದ ಬಿಡಿಸಿ ಇತ್ತ ಕಡೆ ತರುವದು ಸಾಧ್ಯವಿಲ್ಲ. ಈ ವಿಷಯದಲ್ಲಿ ಇನ್ನೂ ಒಂದು ಕಾರಣ ಇದೆ. ಶಿವನ ಮೇಲಿನ ಗಂಗೆಯನ್ನು ಗೌತಮಮುನಿಯು ಲೋಕಹಿತಕ್ಕಾಗಿ ಶಿವನ ಜಟೆಯಿಂದ ಕೆಳಗೆ ಇಳಿಸಿದ. ಅದಕ್ಕಾಗಿ ಗೌತಮ ಮುನಿಯು ಪಶುಪತಿಯನ್ನು ಕುರಿತು ಘೋರ ತಪ ಕೈಗೊಂಡ. ಅನೇಕ ಮಂತ್ರಸ್ತೋತ್ರ ಗಳನ್ನು ಪಠಿಸಿದ. ಗೌತಮನ ಜಪ ತಪ ಸ್ತೋತ್ರಗಳಿಂದ ಪರಿತುಷ್ಟನಾದ ಪರಮೇಶ್ವರನು ''ನಿನಗೆ ಬೇಕಾದ ವರಬೇಡು'' ಎಂದ. ಅದನ್ನು ಕೇಳಿ ಗೌತಮ ಮುನಿಯು ''ಶಂಕರ ನಿನ್ನ ಜಡೆಯಲ್ಲಿರುವ ಗಂಗಾನದಿಯನ್ನು ನನಗೆ ಕೊಟ್ಟುಬಿಡು'' ಎಂದು ಕೇಳಿಕೊಂಡ.

**ಶಂಕರ:-** ಇದು ಜನರ ಉಪಕಾರಕ್ಕಾಗಿ ಪ್ರಪಂಚದ ಉಪಯೋಗಕ್ಕಾಗಿ ನೀನು ಕೇಳಿದ ವರವಾಯ್ತು. ನಿನ್ನ ವೈಯಕ್ತಿಕ ಪ್ರಯೋಜನಕ್ಕಾಗಿಯೂ ಒಂದು ವರ ಬೇಡು ಕೊಡುತ್ತೇನೆ.

**ಗೌತಮ:-** ಪ್ರಭು ಪರಮೇಶ್ವರ, ಈ ಗೌತಮೀ ನದಿಯು ಬ್ರಹ್ಮಗಿರಿಯಿಂದ ಹೊರಟು ಪೂರ್ವಸಮುದ್ರವನ್ನು ಸೇರುವವರೆಗೆ ಎಷ್ಟು ತೀರ್ಥಗಳು, ಕ್ಷೇತ್ರಗಳು, ಸ್ಥಾನಗಳು ಇರುತ್ತವೆಯೋ, ಅಲ್ಲಿ ಎಲ್ಲ ಕಡೆಗೂ ನೀನು ಸಾಕ್ಷಾತ್ ಸನ್ನಿಹಿತನಾಗಬೇಕು. ಅಲ್ಲಿ ಮಿಂದವರ ಮನಃಕಾಮನೆಗಳನ್ನೆಲ್ಲ ಪೂರ್ಣಮಾಡಬೇಕು. ನಿನ್ನ ಸನ್ನಿಧಾನ ಎಲ್ಲಿರುವದೋ ಅಲ್ಲಿ ಎಲ್ಲ ತೀರ್ಥಗಳೂ ತಾವಾಗಿಯೇ ಆಗಿರುತ್ತವೆ. ಆದುದರಿಂದ ನೀನು ಗೌತಮೀ ನದಿಯ ಪರಿಪೂರ್ಣ ಪ್ರವಾಹದುದ್ದಕ್ಕೂ ಸನ್ನಿಹಿತನಾಗಿ ಇರು.

**ಮಹಾದೇವ:-** ಭಕ್ತಾಗ್ರೇಸರ, ನಿನ್ನ ಅಪೇಕ್ಷೆಯಂತೆ ನಾನು ಗೌತಮೀ ತೀರದಲ್ಲಿ ಸರ್ವತ್ರ ಸನ್ನಿಹಿತನಾಗುತ್ತೇನೆ. ಈ ಗೌತಮೀ ನದಿಯಲ್ಲಿ ಭಕ್ತಿಯಿಂದ ಸ್ನಾನಮಾಡಿದರೆ ಸಪ್ತದ್ವೀಪವತಿಯಾದ ಪೃಥ್ವಿಯನ್ನೇ ದಾನಮಾಡಿದಷ್ಟು ಪುಣ್ಯಬರುತ್ತದೆ ಮತ್ತು ಸೂರ್ಯ ಚಂದ್ರಗ್ರಹಣ ಕಾಲದಲ್ಲಿ ಈ ನದಿಯಲ್ಲಿ ಸ್ನಾನಮಾಡಿದರೆ ''ವಿಷ್ಣುಪ್ರೇರಣಮಾ ವಿಷ್ಣು ಪ್ರೀತ್ಯರ್ಥಂ'' ಸುಂದರವಾದ ಸವತ್ಸವಾದ ಸಹಸ್ರ ಗೋವುಗಳನ್ನು ದಾನಮಾಡಿದ ಪುಣ್ಯ ಲಭಿಸುತ್ತದೆ. ನೀನು ನನ್ನ ಜಟಾಜೂಟದಿಂದ ಪ್ರಾರ್ಥಿಸಿ ತೆಗೆದುಕೊಂಡು ಹೋದ ಗಂಗೆಯು ಸರ್ವಪಾಪ ಪ್ರಣಾಶಿನಿಯೂ ಸರ್ವಾಭೀಷ್ಟ ಪ್ರದಾಯಿನಿಯೂ ಆಗಿರುತ್ತಾಳೆ. ನಾನು ಈ ಗೋದಾತೀರವನ್ನು ಬಿಟ್ಟು ಹೋಗುವದೇ ಇಲ್ಲ. ನನ್ನ ಪರಿವಾರ ದೇವತೆ ಗಳೊಂದಿಗೆ ಗೋದಾತೀರದಲ್ಲಿಯೇ ನೆಲೆಸುತ್ತೇನೆ''

ಗಣಪತಿಯು ಹೀಗೆ ತನ್ನ ತಾಯಿಗೆ ಶಂಕರ ಮತ್ತು ಗಂಗೆಯರ ಅವರ್ಜನೀಯ ಸನ್ನಿಧಿ ಸಂಬಂಧಗಳನ್ನು ತಿಳಿಸಿ ಹೇಳಿ ''ತಾಯಿ ಇವೆಲ್ಲ ಕಾರಣಗಳಿಂದ ನಿನ್ನ ಪತಿ ಪರಮೇಶ್ವರನಿಗೆ ಗಂಗೆಯಲ್ಲಿ ದೃಢತರ ಸ್ನೇಹವು ನಿಗೂಢವಾಗಿದೆ. ಆದುದರಿಂದ ಅವನನ್ನು ಗಂಗೆಯಿಂದ ಪರಾಙ್ಮುಖನನ್ನಾಗಿ ಮಾಡುವುದು ಸಾಧ್ಯವಿಲ್ಲ. ಮಹಾದೇವರು ವೃದ್ಧಗಂಗೆ ಎಂದು ಹೆಸರಾದ ಗೌತಮೀತೀರದಲ್ಲಿಯೇ ಇದ್ದುದರಿಂದ ಸುರರೂ, ನರರೂ ದಾನವರೂ ಎಲ್ಲರೂ ಆ ಗೌತಮೀತೀರಕ್ಕೆ ಧಾವಿಸುತ್ತಾರೆ. ಅವರನ್ನು ಗಂಗಾಗಮನದಿಂದ ತಡೆಯಲು

ನಾನು ವಿಘ್ನವುಂಟು ಮಾಡುತ್ತೇನೆ. ಗಂಗಾಸ್ನಾನಕ್ಕಾಗಿ ವಿಘ್ನಗಳನ್ನು ಒಡ್ಡಿ ಜನರನ್ನು ತಡೆಯುವದರಿಂದ ನನಗೆ 'ವಿಘ್ನೇಶ' ಎಂಬ ಹೆಸರು ಬರುವದು. ಆದರೂ ಚಿಂತೆಯಿಲ್ಲ. ನಾನು ಆ ಪುಣ್ಯಕಾರ್ಯವನ್ನು ಪೂರೈಸದಂತೆ ವಿಘ್ನವ್ಯೂಹವನ್ನೇ ರಚಿಸುತ್ತೇನೆ. ನಾನು ಒಡ್ಡುವ ವಿಘ್ನಗಳನ್ನೆಲ್ಲ ಎದುರಿಸಿ ಭಕ್ತಿಯ ಉತ್ಕಟತೆಯಿಂದ ಗೌತಮೀ ನದಿಗೆ ಹೋದವರು ಕೃತಾರ್ಥರಾಗುತ್ತಾರೆ. ಗಂಗಾಸ್ನಾನ ಮಾಡಬೇಕೆಂದು ಮನೆಯಿಂದ ಹೊರಟ ಕೂಡಲೇ ಬಗೆಬಗೆಯ ವಿಘ್ನವಿಡ್ಡೂರಗಳು ಮಾನವರನ್ನು ಮುತ್ತುತ್ತವೆ. ಅವುಗಳನ್ನೆಲ್ಲ ಮೀರಿ ಮೆಟ್ಟಿ ಗಂಗೆಯ ತೀರಕ್ಕೆ ಸಾರಿ ಗೋದಾವರೀ (ಗೌತಮೀ) ನೀರಿನಲ್ಲಿ ಮಿಂದವರ ಪುಣ್ಯ ಅಗಣ್ಯ.'' ಎಂದು ತನ್ನ ಅಶಕ್ತತೆಯನ್ನು ಪ್ರಕಟಿಸಿದನು. ಅದನ್ನು ಕೇಳಿ ಗೌರಿಯು ತಾನೂ ಗೌತಮೀತೀರಕ್ಕೆ ಬಂದು ಶಿವನೊಂದಿಗೆ ನಿರಂತರ ನೆಲಿಸಿ ನಿಂತಳು. ಇಂಥ ಈ ಗೋದಾವರಿಯ ಮಹಿಮೆಯನ್ನು ಮಹಾದೇವನೂ ಬಣ್ಣಿಸಲಾರ. ಗಂಗೆಯ ಮಹಿಮೆ ವೇದೋಕ್ತವಾಗಿದೆ. ಪುರಾಣಗಳಲ್ಲಿಯೂ ಪ್ರಥಿತವಾಗಿದೆ. ಗಂಗಾ ಗೋದಾವರಿ, ಗೌತಮೀ ಮುಂತಾಗಿ ಈ ನದಿಯ ಹೆಸರನ್ನು ಉಚ್ಚರಿಸಿದವ ಸಹ ವಾಂಛಿತಾರ್ಥ ಪಡೆಯುತ್ತಾನೆ ಎಂದು ವೇದಶಾಸ್ತ್ರಗಳಲ್ಲಿ ಹೇಳಲಾಗಿದೆ.

**ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥**

''ಗಂಗಾ-ಗಂಗಾ ಎಂದು ನೂರಾರು ಯೋಜನ ದೂರದಲ್ಲಿದ್ದ ಮಾನವರು ಹೇಳಿದರೂ ಕೂಡ ಎಲ್ಲ ಪಾಪಗಳಿಂದ ಮುಕ್ತರಾಗಿ ವಿಷ್ಣುಲೋಕವನ್ನು ಹೊಂದುತ್ತಾರೆ.''

ಒಟ್ಟು ಈ ಪ್ರಪಂಚದಲ್ಲಿ ಮೂರುಕೋಟಿ ಐವತ್ತುಲಕ್ಷ ತೀರ್ಥಗಳು ಇರುತ್ತವೆ. ಆ ಎಲ್ಲ ಪುಣ್ಯತೀರ್ಥಗಳೂ ಗುರು ಸಿಂಹರಾಶಿಗೆ ಬಂದಾಗ ಗೋದಾವರೀ ನದಿಯಲ್ಲಿ ಸ್ನಾನಮಾಡಲು ಬರುತ್ತವೆ. ಅರವತ್ತುಸಾವಿರ ವರ್ಷ ಭಾಗೀರಥಿಯಲ್ಲಿ ಸ್ನಾನ ಮಾಡಿದಷ್ಟು ಪುಣ್ಯವು ಗುರುವು ಸಿಂಹಸ್ಥನಾದಾಗ ಒಮ್ಮೆ ಸ್ನಾನಮಾಡಿದರೂ ಬರುತ್ತದೆ. ಈ ಗೋದಾವರೀ ನದಿಯಲ್ಲಿ ಅತ್ತ ಹರಿದಾಗ ಭಾಗಿರಥಿ ಇತ್ತ ಅವಳೇ ಗೋದಾವರಿ.

ನೂರು ವಾಜಪೇಯ ಯಜ್ಞಗಳನ್ನು ಸಾವಿರ ಅಶ್ವಮೇಧ ಯಾಗಗಳನ್ನು ಮಾಡುವದರಿಂದ ಬರುವಷ್ಟು ಪುಣ್ಯವು ಈ ಗೋದಾವರೀ ಮಾಹಾತ್ಮ್ಯಶ್ರವಣದಿಂದ ಬರುತ್ತದೆ. ಸ್ವಯಂ ಬ್ರಹ್ಮದೇವರೇ ಹೇಳಿದ ಈ ಗೌತಮೀ ಮಹಾತ್ಮ್ಯದ ಪುರಾಣದ ಪುಸ್ತಕವು ಯಾರ ಮನೆಯಲ್ಲಿ ಇರುವದೋ ಅವರಿಗೆ ಕಲಿಕಾಲದ ಭಯವೇ ಇರುವದಿಲ್ಲ. ಅವರಲ್ಲಿ ಪಾಪದ ಪ್ರಸಕ್ತಿಯೂ ಇಲ್ಲ. ಈ ಪುರಾಣವನ್ನು ಕಂಡ ಕಂಡವರಿಗೆ ಹೇಳಬಾರದು. ಶ್ರದ್ಧಾಳುವಾದ, ಶಾಂತಸ್ವಭಾವದ ವಿಷ್ಣುಭಕ್ತನಿಗೆ ಮಾತ್ರ ಹೇಳಬೇಕು. ಈ ಗೌತಮೀ ಮಾಹಾತ್ಮ್ಯ ಪುಸ್ತಕವನ್ನು ಬರೆದು ಬ್ರಾಹ್ಮಣನಿಗೆ ದಾನಕೊಟ್ಟರೆ ಅವನು ಸರ್ವಪಾಪ ಮುಕ್ತನಾಗುವನು. ಮುಂದೆಂದೂ ಅವನಿಗೆ ಗರ್ಭವಾಸ ದುಃಖವು ಪ್ರಾಪ್ತವಾಗುವದಿಲ್ಲ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತೇಳನೆಯ ಅಧ್ಯಾಯ ಮುಗಿದುದು*

—o—

**ಮುನಿಗಳು:-** ಪಿತಾಮಹರೇ, ಭಗವಂತನ ಕಥೆಯನ್ನು ಎಷ್ಟು ಕೇಳಿದರೂ ನಮಗೆ ತೃಪ್ತಿಯಿಲ್ಲ. ಅನಂತರೂಪಿಯಾದ ವಾಸುದೇವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ನೀವು ಹೇಳಿದಿರಿ; ನಾವು ಕೇಳಿದೆವು. ತಾವತಾ ಅಷ್ಟರಿಂದ ನಮಗೆ ತೃಪ್ತಿಯಾಗಲಿಲ್ಲ. ಆದುದರಿಂದ ವಿಸ್ತಾರವಾಗಿ ಆ ಭಗವನ್ ಮಹಿಮೆಯನ್ನು ಬಣ್ಣಿಸಿರಿ.

**ಬ್ರಹ್ಮ:-** ಮುನೀಶ್ವರರೇ ಭಗವಂತನಾದ ಅನಂತ ವಾಸುದೇವನ ಮಹಾತ್ಮೆ, ಸರ್ವ ಸಾರಭೂತವಾದುದು. ಅದು ಸರ್ವಶ್ರೇಷ್ಠ. ಅದು ಕೇಳಲು ರಮ್ಯ ಹೇಳಲು ರಸಭರಿತ. ಇಂಥ ಆ ಅನಂತನ ಕಾತುರ ಭರಿತವಾದ ದಿವ್ಯ ಚರಿತ್ರೆಯನ್ನು ಬಿತ್ತರಿಸುತ್ತೇನೆ ಕೇಳಿ.

ಹಿಂದೆ ಆದಿಕಲ್ಪದಲ್ಲಿ ನಾನು ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆಸಿದೆ. ಸರ್ವಕಲ್ಪ ದಲ್ಲಿಯೂ ಈ ವಿಶ್ವಕರ್ಮನೇ ಶಿಲ್ಪಿಶ್ರೇಷ್ಠ. ಅವನನ್ನು ನಾನು ವಿಶ್ವಾಸದಿಂದ ಕರೆದು ಪ್ರೀತಿಯಿಂದ ಹೇಳಿದೆ. ''ವಿಶ್ವಕರ್ಮ, ನೀನು ಕಲ್ಲಿನಲ್ಲಿ ಒಂದು ಸುಂದರವಾದ ವಾಸುದೇವ ಮೂರ್ತಿಯನ್ನು ಕಡಿದುಯಿಡು ಆ ಪ್ರತಿಮೆಯನ್ನು ನೋಡಿದ ಕೂಡಲೇ ಇಂದ್ರಾದಿ ದೇವತೆಗಳಲ್ಲಿಯೂ, ಮಾನವರಲ್ಲಿಯೂ ಭಕ್ತಿಭಾವ ಉತ್ಪನ್ನವಾಗಬೇಕು. ದುಷ್ಟದೈತ್ಯರು ನೋಡಿದರೆ ಅವರಿಗೆ ಹೆದರಿಕೆ ಹುಟ್ಟಬೇಕು. ಇಂಥ ಚಿತ್ರವಿಚಿತ್ರವಾದ ವಾಸುದೇವನ ಶಿಲಾವಿಗ್ರಹವನ್ನು ನೀನು ನಿರ್ಮಿಸು. ನಿನ್ನಿಂದ ನಿರ್ಮಿತವಾದ ವಾಸುದೇವನ ಆ ಸರ್ವಾಂಗ ಸುಂದರ ಮೂರ್ತಿಯನ್ನು ಸುಮೇರು ಪರ್ವತದ ಶಿಖರದಲ್ಲಿ ಸ್ಥಾಪನೆ ಮಾಡಿಸುತ್ತೇನೆ'' ಎಂದು ಹೇಳಿದನು.

ನಾನು ಆಜ್ಞೆಮಾಡುವುದೊಂದೇ ತಡ ಕಡಿದೇಬಿಟ್ಟ ವಿಶ್ವಕರ್ಮ, ಆ ಸುಂದರ ಮೂರ್ತಿಯನ್ನು. ತುಂಬು ತಾವರೆಯಂತೆ ವಿಶಾಲವಾದ ಕಣ್ಣುಗಳು, ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳು, ಎದೆಯ ಮೇಲೆ ಶ್ರೀವತ್ಸ, ಕೊರಳಲ್ಲಿ ವನಮಾಲೆ, ತಲೆಯ ಮೇಲೆ ರತ್ನಖಚಿತವಾದ ಕಿರೀಟ. ಇಂಥ ಮನಮೋಹಕವಾದ ದಿವ್ಯಮೂರ್ತಿಗೆ ಪೀತಾಂಬರವನ್ನು ಉಡಿಸಿ ಎರಡು ಕಿವಿಗಳಲ್ಲಿ ಕರ್ಣಕುಂಡಲಗಳು ಹೊಳೆಯುವಂತೆ ಮಾಡಿದ್ದರಿಂದ ಅದರ ಕಳೆಕಾಂತಿಗಳಿಗೆ ಕಿರೀಟವಿಟ್ಟಂತೆ ಆಗಿತ್ತು. ಆ ಮೂರ್ತಿಯನ್ನು ನಾನು ಒಳ್ಳೆ ಶುಭ ಮುಹೂರ್ತದಲ್ಲಿ ಮೇರು ಪರ್ವತದ ಶೃಂಗಾಂಗಣದಲ್ಲಿರುವ ನನ್ನ ಬ್ರಹ್ಮ ಸದನದಲ್ಲಿ ಪ್ರತಿಷ್ಠೆಗೈದೆನು. ಇಂದ್ರನು ಮೇಲಿಂದ ಮೇಲೆ ಅಲ್ಲಿಗೆ ಬಂದು ಭಕ್ತಿಯಿಂದ ಆ ಅನಂತ ವಾಸುದೇವನ ಪೂಜೆ ಮಾಡಿದನು. ಅದರಿಂದ ಅವನಿಗೆ ವಿಶಿಷ್ಟ ಬಲವು ಪ್ರಾಪ್ತವಾಯಿತು. ಆ ಪರಮಾತ್ಮಪೂಜಾ ಲಭ್ಯವಾದ ಪ್ರತಾಪದಿಂದ ಆ ಪುರಂದರನು ವೃತ್ರಾಸುರ, ನಮುಚಿ, ಮುಂತಾದ ಬಲಿಷ್ಠ ವೈರಿ ವೀರರನ್ನು ಸೋಲಿಸಿ ವಿಜಯಶಾಲಿಯಾದ. ಅದರಿಂದ ಅವನಲ್ಲಿ ಭಕ್ತಿ ಉದ್ರೇಕವಾಗಿ ಆ ಪ್ರತಿಮೆಯನ್ನು ನನ್ನನ್ನು ಬೇಡಿಕೊಂಡು ಅಮರಾವತಿಗೆ ಒಯ್ದು ಅಲ್ಲಿಯೇ ಅನುದಿನವೂ ಪೂಜೆಮಾಡುತ್ತಿದ್ದನು.

ಮುಂದೆ, ಕೆಲ ವರುಷಗಳು ಉರುಳಿದ ಬಳಿಕ ರಾಕ್ಷಸೇಶ್ವರನಾದ ರಾವಣನು ನನ್ನನ್ನು ಕುರಿತು ಘೋರ ತಪಸ್ಸನ್ನು ಮಾಡಿದನು. ಸುರ, ನರ, ಅಸುರ, ಸರ್ಪ ಮುಂತಾದವು ಗಳಿಂದಾಗಲಿ ಶಾಪ, ತಾಪ, ಕೋಪ, ಪ್ರಹಾರಗಳಿಂದಾಗಲಿ ತನಗೆ ಮರಣ ಬರಬಾರದೆಂದು ಬೇಡಿಕೊಂಡನು. ಪರಿತುಷ್ಟನಾದ ನಾನು ಅವನಿಗೆ ಬೇಡಿದ ವರವನ್ನು ಕೊಟ್ಟೆನು. ನನ್ನ

ವರಬಲದಿಂದ ಬಲಿಷ್ಠನಾದ ಆ ಲಂಕಾಧಿಪತಿಯು ಗರ್ವಿಷ್ಠನು, ದುಷ್ಟನೂ ಆದನು. ಸ್ವರ್ಗಕ್ಕೇ ಲಗ್ಗೆ ಇತ್ತು ಇಂದ್ರನನ್ನು ಗೆದ್ದನು. ಅವನ ಮಗನಾದ ಮೇಘನಾಥನಿಗೆ ಇಂದ್ರನನ್ನು ಸೋಲಿಸಿದ್ದರಿಂದ ಇಂದ್ರಜಿತ್ ಎಂಬ ಹೆಸರು ಬಂದಿತು. ಇಂದ್ರನ ಅರಮನೆಯನ್ನು ಆಕ್ರಮಿಸಿದ ಬಳಿಕ ರಾವಣನು ಅಲ್ಲಿಂದ ಅನಂತ ವಾಸುದೇವನ ದಿವ್ಯವಿಗ್ರಹವನ್ನು ಕಂಡನು. ಸರ್ವಲಕ್ಷಣ ಸಂಪನ್ನವೂ ಶಂಖ, ಚಕ್ರಾದಿ ಗಳಿಂದ ಅಲಂಕೃತವೂ, ವೈಜಯಂತಿ, ವನಮಾಲಾದಿ ಹಾರಗಳಿಂದ ಪರಿಶೋಭಿತವೂ ಆದ ಆ ದಿವ್ಯವಿಗ್ರಹವು ರಾವಣನ ಮನಸ್ಸನ್ನು ಸೆಳೆಯಿತು.

ಅವನೇನೋ ಮಹಾ ವಿಷ್ಣುದ್ವೇಷಿ. ಹರಿಯ ಹೆಸರು ಹೇಳಲಿಕ್ಕೂ ಹೇಸಿಕೊಳ್ಳುತ್ತಿದ್ದ. ಇಂಥ ಹರಿದ್ವೇಷಿಯಾದರೂ ಆ ರಾವಣನಿಗೆ ಆ ವಾಸುದೇವ ಮೂರ್ತಿಯು ಅತ್ಯಂತ ಮನಮೋಹಕವಾಗಿ ಕಂಡಿತು. ಅವನು ಹಿಂದಿರುಗಿ ಲಂಕೆಗೆ ತೆರಳುವಾಗ ಸ್ವರ್ಗದ ಚತುರ್ದಶ ರತ್ನಗಳಲ್ಲಿ ಒಂದನ್ನೂ ಒಯ್ಯಲಿಲ್ಲ. ಆದರೆ ಪರಮಸುಂದರವಾದ ಆ ವಾಸುದೇವಮೂರ್ತಿಯನ್ನು ಮಾತ್ರ ಅವನಿಗೆ ಬಿಟ್ಟು ಹೋಗಲಿಕ್ಕೆ ಆಗಲಿಲ್ಲ. ಅಷ್ಟು ಮೋಹಕವಾಗಿತ್ತು. ವಿಶ್ವಕರ್ಮ ನಿರ್ಮಿತ ವಾದ ಆ ಅನಂತ ಪ್ರತಿಮೆ ಅಷ್ಟು ವಿಷ್ಣುದ್ವೇಷಿಯಾಗಿದ್ದರೂ ಆ ದಶಕಂಠನು ಆ ವಿಷ್ಣು ಪ್ರತಿಮೆಯನ್ನು ತನ್ನ ಪುಷ್ಪಕ ವಿಮಾನದಲ್ಲಿ ಇಟ್ಟುಕೊಂಡು ಲಂಕಾಪಟ್ಟಣಕ್ಕೆ ಒಯ್ದನು.

ರಾವಣನ ತಮ್ಮನಾದ ವಿಭೀಷಣನು ಮಹಾ ಭಗವದ್ಭಕ್ತ. ಶ್ರೀಹರಿಯಲ್ಲಿ ಅತ್ಯಂತಿಕ ನಿಷ್ಠೆ. ಅವನಿಗೆ ತನ್ನ ಅಣ್ಣನು ತಂದ ಜಗನ್ಮೋಹಕವಾದ ಆ ಪ್ರತಿಮೆಯನ್ನು ನೋಡಿ ಆ ರಾವಣ ಅನುಜನು ಅದರ ಪಾದಕ್ಕೆ ಪೊರಮಟ್ಟು ಅದನ್ನು ಪೂಜಿಸಿ ಪರಿತೋಷ ಪಟ್ಟ. ಅನಂತರ ಒಂದು ದಿನ ಅವನು ರಾವಣನ ಬಳಿಗೆ ಹೋಗಿ ಕೈ ಮುಗಿದು ಕೇಳಿಕೊಂಡನು. ''ಪ್ರೀತಿಯ ಅಣ್ಣ, ನೀನು ಸ್ವರ್ಗಲೋಕದಿಂದ ತಂದ ಈ ವಿಷ್ಣು ಪ್ರತಿಮೆಯನ್ನು ನನಗೆ ಕೊಡು ಇದನ್ನು ನಾನು ಭಕ್ತಿಯಿಂದ ಪೂಜಿಸಿ ಮುಕ್ತಿಯನ್ನು ಹೊಂದುತ್ತೇನೆ.''

ವಿಭೀಷಣನ ಮಾತನ್ನು ಕೇಳಿ ರಾವಣನು, ''ಈ ವಿಷ್ಣುವಿನ ವಿಗ್ರಹವನ್ನು ನೀನೇ ತೆಗೆದುಕೊಂಡು ಹೋಗು. ನನಗೇನು ಇದು ಬೇಕಾಗಿಲ್ಲ. ನಾನು ವಿಷ್ಣುಭಕ್ತನೂ ಅಲ್ಲ. ಪ್ರತಿಮಾ ನಿರ್ಮಾಣದ ಕೌಶಲ್ಯವನ್ನು ಕಂಡು ಅದರ ಮೋಹಕತೆಗೆ ಮುಗ್ಧನಾಗಿ ಅದನ್ನು ಇಲ್ಲಿ ತಂದಿದ್ದೆ. ನಾನು ಪರಮೇಶ್ವರನ ಭಕ್ತ. ಪುರುಷೋತ್ತಮನ ಈ ಪ್ರತಿಮೆಯನ್ನು ಪೂಜಿಸಲಾರೆ. ನಾನು ಬದುಕಿ ಇದ್ದುದ್ದು, ಮೂರು ಲೋಕಗಳನ್ನು ಗೆದ್ದದ್ದು ಆ ಪರಮೇಶ್ವರನ ಪರಮಾನುಗ್ರಹದಿಂದಲೇ. ಈ ವಿಷ್ಣುವಿನ ಪ್ರತಿಮೆಯಿಂದ ನನಗೆ ಏನು ಆಗಬೇಕಾಗಿದೆ! ಅವಶ್ಯವಾಗಿ ನೀನು ತೆಗೆದುಕೊಂಡು ಹೋಗು'' ಎಂದು ಹೇಳಿದನು.

ಅದನ್ನು ಕೇಳಿ ಸಂತಸಭರಿತನಾದ ವಿಭೀಷಣನು ಆ ಪ್ರತಿಮೆಯನ್ನು ತನ್ನ ಮನೆಯಲ್ಲಿ ಇರಿಸಿದ. ಅದರಲ್ಲಿ ಅತ್ಯಂತ ಭಕ್ತಿಯನ್ನು ಇರಿಸಿದ. ಹಗಲಿರುಳು ಪೂಜಿಸಿದ. ಅದರಿಂದ ಅವನ ಮನಸ್ಸಿಗೆ ತುಷ್ಟಿ, ದೇಹಕ್ಕೆ ಪುಷ್ಟಿ ಎರಡೂ ಉಂಟಾದವು. ಆ ಪ್ರತಿಮೆಯ ಪೂಜಾ ಪರಿವಾಸನೆಯ ಪ್ರಭಾವದಿಂದ ಅವನು ಚಿರಂಜೀವಿತ್ವ ಪಟ್ಟಕ್ಕೆ ಏರಿದ. ಆ ವಿಷ್ಣುವಿನ ದಿವ್ಯ ವಿಗ್ರಹವು ಮನೆಬಿಟ್ಟು ಹೋದ ಕೂಡಲೇ ರಾವಣನಿಗೆ ಅಳಿಗಾಲ ಪ್ರಾರಂಭವಾಯಿತು. ಮಹಾಪರಾಕ್ರಮಶಾಲಿಯಾದ ಅವನು ದೇಶದೇಶಗಳಿಗೆ ದಾಳಿಇಟ್ಟ. ತನ್ನ ದಿಗ್ವಿಜಯದಲ್ಲಿ

ದೇವತಾದಿ ಲೋಕಗಳನ್ನೆಲ್ಲ ಗೆದ್ದ. ಅವನು ದಾಳಿಯಿಟ್ಟ ಕಡೆಗೆಲ್ಲ ವಿಜಯವನ್ನು ಸಾಧಿಸಿ ಅಲ್ಲಿರುವ ಮಣಿ ಮುತ್ತಾದಿ ಬೆಲೆಬಾಳುವ ವಸ್ತುಗಳನ್ನೂ, ಸುಂದರ ಸ್ತ್ರೀಯರನ್ನೂ ಅಪಹರಿಸಿ ತರುತ್ತಿದ್ದ. ಮುಂದೆ ಒಂದು ದಿನ ತ್ರಿಪುರ ಸುಂದರಿಯಾದ ಸೀತಾಮಾತೆಯ ಚೆಲುವಿಕೆಯ ಕೀರ್ತಿ ಅವನ ಕಿವಿಗೆ ಬಿದ್ದಿತು. ಕಾಮದ ಹುಚ್ಚು ಎದ್ದಿತು. ಆದರೂ ಅವನಿಗೆ ರಾಮನೆಂದರೇ ಏನೋ ಭಯ. ಮಾರೀಚ, ಸುಬಾಹು, ಖರ, ದೂಷಣಾದಿಗಳನ್ನು ಕಣ್ಣು ಮಿಟುಕಿಸುವಷ್ಟರಲ್ಲಿ ಮಣ್ಣುಗೂಡಿಸಿದ ಅವನ ಪರಾಕ್ರಮವನ್ನು ಕೇಳಿ ಬೆಚ್ಚಿದ್ದ ಬೆದರಿದ್ದ. ಆದುದರಿಂದ ಅವನಿಗೆ ಜಾನಕಿಯನ್ನು ಸಾಕ್ಷಾತ್ಆಗಿ ಅಲ್ಲಿಹೋಗಿ ರಾಮನ ಎದುರು ಸೆಳೆದು ತರುವ ಆದಟು ಇರಲಿಲ್ಲ. ಕಳ್ಳತನದಿಂದ ಸೀತೆಯನ್ನು ಕದ್ದುತಂದು ತನ್ನ ಅಶೋಕವನದಲ್ಲಿ ಅವಳನ್ನು ಇರಿಸಿದ.

ಈ ಸುದ್ದಿ ತಿಳಿದ ಶ್ರೀರಾಮ ಕೆಳಿ ಕೆಂಡವಾದ, ಹನುಮಂತ, ಸುಗ್ರೀವ, ಮುಂತಾದ ವಾನರ ವೀರರೊಂದಿಗೆ ಸಮುದ್ರಕ್ಕೆ ಸೇತುವೆ ಕಟ್ಟಿದ. ಲಂಕೆಗೆ ಲಗ್ಗೆಹಾಕಿ, ದೈತ್ಯ ವೀರರನ್ನೆಲ್ಲ ಬಗ್ಗುಬಡಿದ. ಕುಂಭಕರ್ಣನನ್ನು ಸಂಹರಿಸಿದ. ಲಕ್ಷ್ಮಣ ಇಂದ್ರಜಿತನನ್ನು ಕೊಂದು ಹಾಕಿದ. ಕೊನೆಗೆ ಶ್ರೀರಾಮ ರಾವಣಾಸುರನನ್ನು ಲೀಲಾಜಾಲವಾಗಿ ವಧೆಗೈದ. ಅನಂತರ ಅಗ್ನಿಪ್ರವೇಶದಿಂದ ಶುದ್ಧಳೂ, ಪರಮಪತಿವ್ರತೆಯೆಂದು ಸಿದ್ಧಳೂ ಆದ ಸೀತೆಯನ್ನು ಪ್ರೀತಿಯಿಂದ ಪರಿಗ್ರಹಿಸಿದ.

ಶ್ರೀರಾಮನು ಸೀತೆಯೊಂದಿಗೆ ಅಯೋಧ್ಯೆಗೆ ಹೊರಟಾಗ ವಿಭೀಷಣನು ತನ್ನ ಪ್ರೀತಿಯ ಕಾಣಿಕೆ ಎಂದು ದಿವ್ಯಸುಂದರವಾದ ಆ ವಾಸುದೇವ ವಿಗ್ರಹವನ್ನು ಕೊಟ್ಟನು.

ಶ್ರೀರಾಮನು ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾಗಿ, ಹನ್ನೊಂದುಸಾವಿರ ವರುಷ ಆ ವಾಸುದೇವ ಮೂರ್ತಿಯನ್ನು ಪೂಜೆಮಾಡಿದ. ಕೊನೆಗೆ ಆ ಸೀತಾಪತಿಯು ತಾನು ಪರಂಧಾಮಕ್ಕೆ ತೆರಳುವಾಗ ಆ ಅನಂತ ವಾಸುದೇವಮೂರ್ತಿಯನ್ನು ಸಮುದ್ರರಾಜನಿಗೆ ಕೊಟ್ಟು "ಸಮುದ್ರರಾಜ, ಈ ಪ್ರತಿಮೆ ಒಂದು ದಿವ್ಯರತ್ನ. ನೀನು ನಿಜವಾಗಿಯೂ ರತ್ನಾಕರ. ಈ ರತ್ನವೂ ನಿನ್ನಲ್ಲಿಯೇ ಇರಲು ಯೋಗ್ಯ ಅದಕ್ಕಾಗಿ ಇದನ್ನು ನಾನು ನಿನಗೆ ಕೊಟ್ಟಿದ್ದೇನೆ ತೆಗೆದುಕೋ" ಎಂದು ನಲುಮೆ ದುಂಬಿ ನುಡಿದ. ಭಗವಂತನ ಆದೇಶದಂತೆ ಆ ವರುಣದೇವನು ವಾಸುದೇವ ವಿಗ್ರಹವನ್ನು ತನ್ನ ವಶದಲ್ಲಿ ತೆಗೆದುಕೊಂಡ. ಮುಂದೆ ಎಷ್ಟೋ ಕಾಲ ಉರುಳಿತು. ತ್ರೇತಾಯುಗ ಹೊರಳಿತು. ದ್ವಾಪರಯುಗವು ಮುಗಿಯ ಬಂದಿತು. ಕಲಿದ್ವಾಪರಗಳ ಸಂಧಿಕಾಲದಲ್ಲಿ ಭಗವಂತನ ಕೃಷ್ಣಾವತಾರವಾಯಿತು. ಅವನಿತಲದ ಅಮರಾವತಿಯಂತಿದ್ದ ಆ ದ್ವಾರಕಾ ಪಟ್ಟಣದಲ್ಲಿ, ವಾಸುದೇವ ರೂಪಿಯಾದ ಶ್ರೀಕೃಷ್ಣ ವಾಸವಾಗಿದ್ದ. ಆಗ ಸಮುದ್ರರಾಜನು ಬಂದು ವಸುದೇವ ಪುತ್ರನಾದ ವಾಸುದೇವನಿಗೆ ತನ್ನಲ್ಲಿದ್ದ ವಾಸುದೇವ ಮೂರ್ತಿಯನ್ನು ತಂದು ಒಪ್ಪಿಸಿದ.

ದ್ವಾಪರದ ಅಂತಿಮ ಭಾಗದಲ್ಲಿ ಶ್ರೀಕೃಷ್ಣನು ತಾನು ವೈಕುಂಠಕ್ಕೆ ತೆರಳುವಾಗ ಆ ವಾಸುದೇವ ಮೂರ್ತಿಯನ್ನು ದ್ವಾರಕೆಯಲ್ಲಿಯೇ ಪ್ರತಿಷ್ಠೆಗೊಳಿಸಿದ. "ಭಕ್ತರೂ ಈ ನನ್ನ ಮೂರ್ತಿಯನ್ನು ಪೂಜಿಸಿ, ಭಜಿಸಿ, ಆರಾಧಿಸಿ, ನನ್ನ ವಿರಹವೇದನೆಯನ್ನು ಮರೆಯಲಿ ತಮ್ಮ ಮುಕ್ತಿ ಮಂದಿರದ ಬಾಗಿಲು ತೆರೆಯಲಿ, ಇಲ್ಲಿ ಭಕ್ತಿಯನ್ನು ಅಲ್ಲಿ ಮುಕ್ತಿಯನ್ನು ಪಡೆಯಲಿ" ಎಂದು ಹರಿಸಿ ಹಾರೈಸಿದ ದ್ವಾರಕೆಯಲ್ಲಿ ಸಾಕ್ಷಾತ್ ಶ್ರೀಕೃಷ್ಣನಿಂದಲೇ

ಸುಪ್ರತಿಷ್ಠಿತವಾದ ಆ ವಿಷ್ಣು ವಿಗ್ರಹವನ್ನು ನೋಡಿದವರೂ ಪೂಜೆಮಾಡಿದವರೂ ಅದರ ಮಹಿಮೆ ಪಾಡಿದವರೂ ವೈಕುಂಠಲೋಕವನ್ನು ಹೊಂದುವರು.

## ಪುರುಷೋತ್ತಮಕ್ಷೇತ್ರ

**ಬ್ರಹ್ಮ:-** ''ಋಷಿಗಳಿರಾ, ದ್ವಾರಕೆಯಲ್ಲಿ ಶ್ರೀಕೃಷ್ಣನು ಪರಮ ಪುರುಷೋತ್ತಮನಾದ ಅನಂತವಾಸುದೇವ ಪ್ರತಿಮೆಯನ್ನು ಪ್ರತಿಷ್ಠಾಪಿಸಿ ಪೂಜಿಸಿದ್ದರಿಂದ ಅದು ಪುರುಷೋತ್ತಮ ಕ್ಷೇತ್ರ ಎಂದು ಪ್ರಸಿದ್ಧಿಯನ್ನು ಪಡೆಯಿತು. ಭಜಕರಿಗೆ ಭುಕ್ತಿ ಮುಕ್ತಿ ಪ್ರದ ಈ ಪುಣ್ಯಕ್ಷೇತ್ರ.

ಕಂಸ, ಕೇಶಿ, ವೃಷಭಾಸುರ, ಶಿಶುಪಾಲ, ದಂತವಕ್ರ ಮುಂತಾದ ದುಷ್ಟರಾಜರನ್ನು ಸಂಹರಿಸಿ ಶ್ರೀಕೃಷ್ಣನು ಈ ಪುರುಷೋತ್ತಮ ಕ್ಷೇತ್ರದಲ್ಲಿ ಆ ಅನಂತ ವಾಸುದೇವ ರೂಪದಿಂದ ಸ್ವಯಂ ಸನ್ನಿಹಿತನಾಗಿ ನಿಂತುಕೊಂಡಿದ್ದಾನೆ. ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿ ಪೀತಾಂಬರವನ್ನು ಉಟ್ಟುಕೊಂಡು ನಿಂತ ಆ ವಿಷ್ಣುವಿನ ಪ್ರತಿಮೆಯನ್ನು ಮತ್ತು ಅದರ ಅಕ್ಕಪಕ್ಕದಲ್ಲಿರುವ ಸುಭದ್ರ, ಬಲರಾಮ ದೇವರನ್ನು ದರುಶನ ಮಾಡಿದವರು ಮೋಕ್ಷವನ್ನು ಪಡೆಯುವರು.

ಬೇರೆ ಕ್ಷೇತ್ರದಲ್ಲಿ ಹತ್ತುಸಾವಿರ ವರುಷ ತಪಸ್ಸನ್ನು ಮಾಡಿದರೆ ಬರುವಷ್ಟು ಪುಣ್ಯವು, ಈ ಪುರುಷ್ತೋತಮ ಕ್ಷೇತ್ರದಲ್ಲಿ ನಾಲ್ಕು ವರ್ಷ ಅಥವಾ ನಾಲ್ಕು ತಿಂಗಳ ವಾಸ ಮಾಡಿ ಸ್ನಾನದಾನ ಮಾಡುವುದರಿಂದ ಲಭಿಸುತ್ತದೆ. ನಾನಾವಿಧ ಯಜ್ಞ ಬಗೆಬಗೆಯ ವ್ರತ ನೇಮಗಳು ಸಕಲ ವಿಧ ತೀರ್ಥಕ್ಷೇತ್ರ ಯಾತ್ರೆ ಮಾಡುವುದರಿಂದ ಲಭಿಸುವ ಪುಣ್ಯ ಫಲವು ಈ ಪುಣ್ಯಕ್ಷೇತ್ರದಲ್ಲಿ ಪ್ರತಿನಿತ್ಯ ಜಿತೇಂದ್ರಿಯನಾಗಿ ವಾಸುದೇವನ ಸೇವೆ ಮಾಡಿದವನಿಗೆ ಪ್ರಾಪ್ತವಾಗುವುದು. ಈ ಕ್ಷೇತ್ರದಲ್ಲಿರುವ ವಟವೃಕ್ಷ ಹಾಗೂ ಸಮುದ್ರಗಳ ಮಧ್ಯಭಾಗದಲ್ಲಿ ದೇಹ ತ್ಯಾಗ ಮಾಡುವವರು ನಿಶ್ಚಿತವಾಗಿಯೂ ವೈಕುಂಠಲೋಕವನ್ನು ಪಡೆಯುತ್ತಾರೆ. ಈ ಕ್ಷೇತ್ರದ ಪುರುಷೋತ್ತಮನ ಸನ್ನಿಧಿಯಲ್ಲಿ ಕ್ರಿಮಿ, ಕೀಟ, ಪತಂಗ, ಖಗ, ಮೃಗ, ಪಶು, ಪಕ್ಷಿ ಯಾವ ಪ್ರಾಣಿಯಾದರೂ ದೇಹತ್ಯಾಗ ಮಾಡಿದರೆ ಉತ್ತಮ ಗತಿಯನ್ನು ಹೊಂದುವರು. ಇಂಥ ಮೋಕ್ಷಪ್ರದವಾದ ಕ್ಷೇತ್ರವು ಈ ಪ್ರಪಂಚದಲ್ಲಿ ಇದು ಒಂದೇ'' ವೇದವ್ಯಾಸ ಬ್ರಹ್ಮನ ಈ ಮಾತುಗಳನ್ನು ಕೇಳಿ ಋಷಿಗಳೆಲ್ಲರು ಆ ಪುರುಷೋತ್ತಮ ಕ್ಷೇತ್ರದಲ್ಲಿ ವಾಸಗೈದರು. ಆ ಪರಮಪುರುಷನನ್ನು ಪೂಜಿಸಿದರು ಅದರಿಂದಾಗಿ ಅವರೆಲ್ಲರು ಪರಮ ಪದವನ್ನು ಐದಿದರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತೆಂಟನೆಯ ಅಧ್ಯಾಯ ಮುಗಿದುದು*

—o—

**ವ್ಯಾಸಮಹರ್ಷಿ:-** ಋಷಿ ಶ್ರೇಷ್ಠರೇ, ಪೂರ್ವಕಾಲದಲ್ಲಿ ಗೌತಮೀ ತೀರದ ನಿಸರ್ಗ ಸುಂದರವಾದ ಪರಿಸರ ಪ್ರದೇಶದಲ್ಲಿ ಕಂಡು ಎಂಬ ಮಹರ್ಷಿಯ ಪುಣ್ಯಾಶ್ರಮವು ಇದ್ದಿತು. ವಿವಿಧ ಲತಾವೃಕ್ಷಗಳಿಂದಲೂ, ಫಲಪುಷ್ಪಗಳಿಂದಲೂ ಸಮೃದ್ಧವಾದ ಆ ತಪೋ ವನದಲ್ಲಿ ಖಗ, ಮೃಗಗಳೆಲ್ಲವೂ ನಿರ್ಭಯವಾಗಿ ಅಲ್ಲಿಯ ಋಷಿಗಳೊಡನೆ ಸಹ ಜೀವನವನ್ನು ನಡೆಸುತ್ತಿದ್ದವು. ನಿಸರ್ಗ ರಮಣೀಯವಾದ ಆ ಪುಣ್ಯಾಶ್ರಮದಲ್ಲಿ ಕಂಡು ಮಹಾ ಮುನಿಯು ಘೋರ ತಪವನ್ನು ಆಚರಿಸುತ್ತಿದ್ದ.

ಬೇಸಗೆಯ ಕಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿ, ಮಳೆಗಾಲದಲ್ಲಿ ಕಂಠಮಟ್ಟ ನೀರಿನಲ್ಲಿ ಚಳಿಗಾಲದಲ್ಲಿ ಬಟಬಯಲಿನಲ್ಲಿಯ ಶಿಲಾಫಲಕದಮೇಲೆ ನಿಂತು ಕಠಿಣಕರವಾದ ತಪಸ್ಸನ್ನು ಆಚರಿಸುತ್ತಿದ್ದ ಆ ಕಂಡುಮುನಿ. ಆ ಮುನಿಮನಿಷಿಯ ತಪಸ್ಸಿನ ತೀಕ್ಷ್ಣತೆಯನ್ನು ನೋಡಿ ಮುನಿಗಳು ಬೆದರಿದರು. ಋಷಿಗಳು ಬೆಚ್ಚಿದರು. ದೇವತೆಗಳು ಭಯ ಭ್ರಾಂತರಾದರು. ಇಂದ್ರನು ಚಿಂತಾಕ್ರಾಂತನಾದ. ಕಂಡುಮುನಿಯ ಈ ಪ್ರಚಂಡ ತಪಸ್ಸನ್ನು ಭಂಗಗೊಳಿಸಲು ಅವನು ತನ್ನ ಲೋಕದ ಬೆಲೆವೆಣ್ಣುಗಳಾದ ರಂಭೆ, ಊರ್ವಶಿ, ಮೇನಕೆ, ಮೊದಲಾದವರಿಗೆ ಹೇಳಿದ. ಆದರೆ ಈ ಉಗ್ರ ಸ್ವಭಾವದ ಕಂಡುವಿನ ಏಕಾಗ್ರ ಚಿತ್ತದ ತಪಸ್ಸನ್ನು ಭಂಗಗೊಳಿಸಲು ಯಾರಿಗೂ ಧೈರ್ಯವಾಗಲಿಲ್ಲ, ಅವರೆಲ್ಲರು ನಿರಾಕರಿಸಿದರು.

ಆಗ ದೇವೇಂದ್ರನು ಪ್ರಮ್ಲೋಚೆ ಎಂಬ ಸುರಸುಂದರಿಗೆ ಕಂಡು ಮುನಿಯ ತಪಸ್ಸನ್ನು ಹಾಳುಗೈಯಲು ಹೇಳಿದ. ಅವಳು ಕೂಡ ಆ ಮುನಿಯ ಕೋಪ ಶಾಪಗಳಿಗೆ ಹೆದರಿ ದೇವೇಂದ್ರನಿಗೆ ದೈನ್ಯದಿಂದ ಹೇಳಿಕೊಂಡಳು. "ಪ್ರಭು, ನಿನ್ನ ಆಸ್ಥಾನದಲ್ಲಿ ನನಗಿಂತಲೂ ಸುಂದಯರಾದ ಅನೇಕ ಅಪ್ಸರೆಯರು ಇರುವರು. ಊರ್ವಶಿ, ಮೇನಕಾ, ರಂಭಾ, ಘೃತಾಚಿ, ಪುಂಚಿ ಕಸ್ಥಲೀ, ವಿಶ್ವಾಚೀ, ಸಹಜನ್ಯ, ಪೂರ್ವಚಿತ್ತ, ತಿಲೋತ್ತಮಾ, ಅಲಂಬುಷಾ, ಮಿಶ್ರಕೇಶೀ, ಶಶಿಲೇಖಾ, ವಾಮನಾ ಮುಂತಾದ ಚಲುವಿನ ಖಣಿಗಳಂತಿದ್ದ ಜಗನ್ಮೋ ಹಿನಿಯರು ಇರುವರು. ಅವರೆಲ್ಲರೂ ಕಾಮನ ಅರಗಿಣಿಗಳು, ಬಗೆಬಗೆಯ ಕಾಮ ಕೇಳೀ ಲೀಲಾ ವಿಲಾಸದಲ್ಲಿ ಚತುರರು. ಆ ಚಾರುಗಾತ್ರಿಯರನ್ನು ಈ ಭೂಲೋಕದ ಕಂಡು ಮುನಿಯ ಬಳಿಗೆ ಕಳುಹಿಸಿ ಕೊಡಿರಿ. ನನಗೆ ಈ ಕಂಡು ಮುನಿಯ ಬ್ರಹ್ಮಾಂಡ ಕೋಪ ಭಯಂಕರ ಶಾಪಗಳನ್ನು ನೆನೆದ ಮಾತ್ರಕ್ಕೆ ಭಯ ಕಂಪ ಉಂಟಾಗುತ್ತದೆ. ದಯವಿಟ್ಟು ಕ್ಷಮಿಸಿ".

ಆಗ ದೇವೇಂದ್ರನು ಅಧಿಕಾರ ವಾಣಿಯಿಂದ ಆ ದೇವ ಗಣಿಕೆಯನ್ನು ಬೆದರಿಸಿ. "ಪ್ರಮ್ಲೋಚೆ, ನೀನು ಸೌಂದರ್ಯ, ಮಾಧುರ್ಯ, ಚಾತುರ್ಯ ಯಾವುದರಲ್ಲಿಯೂ ಈ ಎಲ್ಲ ಅಮರಾವತಿಯ ಅಪ್ಸರೆಯರಿಗೆ ಕಡಿಮೆ ಇಲ್ಲ. ನಿನ್ನ ರೂಪಶ್ರೀ ಲೋಕಮೋಹಕ, ಮುನಿಜನರಿಗೆ ಮಾದಕ. ಆದುದರಿಂದ ನೀನು ಈಗ ಆ ಮುನಿಯ ಮನೋಮೀನಕ್ಕೆ ಗಾಳ ಹಾಕಲು ನೀನೇ ಹೋಗಬೇಕು. ನಿನ್ನಿಂದಲೇ ಇದು ಸಾಧ್ಯ. ನಿನ್ನ ಹಾವಭಾವ, ವನಪು ವಯ್ಯಾರ, ಅಂಗಚೇಷ್ಟೆ, ಶೃಂಗಾರ ವಿಲಾಸಗಳಿಂದ ಆ ಮುನಿಯು ಮೋಹಗೊಳ್ಳುವುದು ನಿಶ್ಚಿತ. ಇದರಿಂದ ಸುರಲೋಕದಲ್ಲಿ ನಿನ್ನ ಪ್ರತಿಷ್ಠೆ ಗೌರವ ಹೆಚ್ಚುವವು. ನಿನಗೆ ಸಹಾಯಕರಾಗಿ ಕಾಮ, ವಸಂತ, ಮಂದ, ಮಾರುತ, ಬೆಳದಿಂಗಳು ಎಲ್ಲವೂ ಬರುವವು" ಎಂದು ಹೇಳಿದನು. ಸ್ವರ್ಗಸಮ್ರಾಟನ ಆ ಪ್ರೋತ್ಸಾಹ ಹಾಗೂ ಪ್ರಶಂಸಾ ನುಡಿಗಳಿಂದ

ಉಬ್ಬಿಹೋದ ಪ್ರಮ್ಲೋಚೆಯು ಸ್ವರ್ಗದಿಂದ ಹೊರಟಳು. ಮಧುಮಾಸ, ಮನ್ಮಥ, ಮಂದಾನಿಲ ಮುಂತಾದವುಗಳಿಂದ ಕೂಡಿಕೊಂಡು ಆಕಾಶಮಾರ್ಗವಾಗಿ ಗೌತಮೀ ತೀರದ ಕಂಡು ಮುನಿಯ ಆಶ್ರಮಕ್ಕೆ ಕಾಲು ಇರಿಸಿದಳು. ಆ ತಪೋವನವು ನಂದನ ವನದಂತೆಯೇ ಮಂದಾರ, ಮಾಕಂದ, ನಂದ್ಯಾವರ್ತ, ನಾಗ, ಪುನ್ನಾಗ, ತಾಳ, ತಮಾಳ, ಮುಂತಾದ ಗಿಡ ಬಳ್ಳಿಗಳಿಂದ ಸುಂದರವಾಗಿತ್ತು. ಅಲ್ಲಿಯ ತಿಳಿ ನೀರಿನ ಕೊಳಗಳಲ್ಲಿ ತುಂಬು ತಾವರೆಗಳು ಬಿರಿದು ತುಂಬಿಗಳಿಗೆ ಆದರದ ಆಮಂತ್ರಣ ವನ್ನು ಈಯುತ್ತಿದ್ದವು. ಶುಕಪಿಕಗಳ, ಕಲ ಕಲ ಧ್ವನಿಯು ಕಿವಿಗೆ ಇಂಪನ್ನು ಉಂಟು ಮಾಡುತ್ತಿತ್ತು.

ಕಾಮನ ಆದೇಶದಂತೆ ಎಲ್ಲ ಕಡೆಗೂ ವಸಂತ ಮಾಸವು ಇಳಿದು ನಿಂದಿತು. ಒಣಗಿ ನಿಂತ ಮಾವು, ಬೇವು, ಹೊನ್ನೆ, ದಾಡಿಮೆ, ಸೀಬೆ, ಹಲಸು, ಕಿತ್ತಳೆ, ಶಿರೀಷ, ನೆಲ್ಲಿ, ಗೇರು, ಮುತ್ತಗ ಇಂಗುದ, ಕರವೀರ ಮುಂತಾದ ವೃಕ್ಷಗಳಲ್ಲಿ ಒಮ್ಮೆಲೆ ಚಿಗುರು ಚಿಗಿತು, ಮುಗುಳು ಮೊಳೆತು, ಕುಡಿ, ಮಡಿಗಳಿಂದ ದಾಂಗುಡಿ ಇಟ್ಟಿತು. ಅಶೋಕ, ಪುನ್ನಾಗ ತಾಳೆ, ಬಕುಲ, ಪಾರಿಜಾತ, ಕೋವಿದಾರ, ಮಂದಾರ, ನೈದಿಲೆ, ಪಾತಾಳ, ಮುಂತಾದ ಬಗೆ ಬಗೆಯ ಬಳ್ಳಿವಾಡಗಳಲ್ಲಿ, ಹೂವಿನ ಸುಗ್ಗಿಯು ನುಗ್ಗಿ ಬಂದಿತು. ಸ್ಪಟಿಕ ಶುಭ್ರವಾದ ಹೊಕ್ಕರಣೆ ಗಳಲ್ಲಿ ಕುಮುದ, ಕಮಲ, ಕಲಾರ ಮುಂತಾದ ಹೂಗಳು ಅರಳಿ ಸುಗಂಧವನ್ನು ಬೀರುತ್ತ ನಿಂತುಕೊಂಡವು.

ಇಂಥ ಸಂದರ್ಭದಲ್ಲಿ ಚಲುವಿಕೆಯ ಪುತ್ಥಳಿಯಂತಿರುವ ಪ್ರಮ್ಲೋಚೆಯು ತನ್ನ ಶೃಂಗಾರ ಭರಿತವಾದ ಅಂಗ ಚೇಷ್ಟೆಗಳಿಂದ ಪ್ರೇಕ್ಷಕರ ಮನವನ್ನು ಸೂರೆಗೊಳ್ಳುತ್ತ, ಮಹಾಮುನಿಯು ತಪಸ್ಸನ್ನು ಮಾಡುತ್ತ ಕುಳಿತುಕೊಂಡ ತಾಣಕ್ಕೆ ಬಂದಳು. ತನ್ನ ಬಗೆಬಗೆಯ ಬಿಂಕ ಬಿನ್ನಾಣ, ವನಪು, ವೈಯಾರ, ಕುಣಿತ, ಭಣಿತ, ಸಂಗೀತದ ತಾನ ವಿತಾನ ಹಾಗೂ ಭಾವ ಭಂಗಿಗಳಿಂದ ಮುನಿಯ ಎದುರು ತನ್ನನ್ನು ತೆರೆದು ತೋರಿದಳು. ಸ್ವರ್ಗ ಸೀಮೆಯ ಅಲೌಕಿಕ ಸುಂದರಿಯ ತುಂಬು ತಾರುಣ್ಯ, ಲಲಿತ ಲಾವಣ್ಯ, ಹಾಗೂ ಉನ್ಮಾದಕವಾದ ಶೃಂಗಾರ ಚೇಷ್ಟೆಗಳು ಆ ಮುನಿಯ ಮನಸ್ಸನ್ನು ಸೆರೆಹಿಡಿದವು. ಅವಳ ಕಮನೀಯವಾದ ಕಾಯಕಾಂತಿ ಯಿಂದಲೂ, ರಮಣೀಯವಾದ ವಿಲಾಸ ವಿಭ್ರಮಗಳಿಂದಲೂ ಮುಗ್ಧನಾದ ಆ ಮುನಿಯ ಮನ್ಮಥೋನ್ಮಥಿತ ಚಿತ್ತ ಚಂಚಲವಾಯಿತು. ಮೈರೋಮಾಂಚಿತವಾಯಿತು. ಹೆಗಲ ಮೇಲೆ ಹೊದೆದ ಉತ್ತರಿಯುಗಳಿತವಾಯಿತು. ಮೋಹ, ಮುಗ್ಧನಾದ ಆ ಮುನಿಯು ಪ್ರಮ್ಲೋಚೆಯ ಬಳಿಗೆ ಬಂದು ಕೇಳಿದ, "ಸುಂದರಿ, ನೀನು ಯಾರು? ಎಲ್ಲಿಂದ ಬಂದೆ? ನಿನ್ನ ಮನೆಯಲ್ಲಿ? ನಿನ್ನ ಸಂಬಂಧಿಗಳು ಯಾರು? ನಿನ್ನ ಮುಗ್ಧ ಮನೋಹರವಾದ ಈ ಮಂದಹಾಸದಿಂದ ನನ್ನ ಮನಸ್ಸನ್ನೇ ನೀನು ಅಪಹರಿಸಿ ಬಿಟ್ಟಿರುವೆ. ನಿಜ ಹೇಳು ನೀನು ಯಾರು?" ಎಂದು.

ಆಗ ಪ್ರಮ್ಲೋಚೆಯು ತನ್ನ ಕಡೆಗಣ್ಣಿನ ನೋಟದಿಂದ ಮುನಿಯನ್ನು ನೋಡಿ ಮೋಹಕವಾಗಿ, ಮಂದಹಾಸ ಮಾಡಿ, ನಸುನಗುತ್ತ ನುಡಿದಳು. "ಮುನಿಗಳೆ, ನಾನು ನಿಮ್ಮ ಸೇವಕಿ, ಹೂ ಕೊಯ್ಯಲಿಕ್ಕೆಯೆಂದು ಈ ತಪೋವನಕ್ಕೆ ಬಂದಿರುತ್ತೇನೆ. ನಾನು ನಿಮ್ಮ ಚರಣದಾಸಿ. ನೀವು ಕಾಲಿನಿಂದ ತೋರಿದ್ದನ್ನು ತಲೆಯ ಮೇಲೆ ಹೊತ್ತು ನಡೆಯುತ್ತೇನೆ, ಅಪ್ಪಣೆಯಾಗಲಿ, ನಿಮ್ಮ ಅಪ್ಪಣೆಯನ್ನು ತಪ್ಪದೇ ಪಾಲಿಸುತ್ತೇನೆ."

ಪ್ರಮ್ಲೋಚೆಯ ಮುಗ್ಧ ಮಧುರವಾದ ಆ ಮಾತುಗಳನ್ನು ಕೇಳಿ ಮೋಹಿತನಾದ ಆ ಮುನಿ ಧೈರ್ಯವಾಗಿ ಅವಳ ಕೈ ಹಿಡಿದ. ಆಶ್ರಮದ ಒಳಗೆ ಅವಳನ್ನು ಕೈ ಹಿಡಿದು

ಕರೆದುಕೊಂಡು ಹೋದ. ಅದನ್ನು ನೋಡಿ ಕಾಮನು, ಮಂದ ಮಾರುತನು, ಮಧು ಮಾಸವು, ಚಂದ್ರನೂ, ಎಲ್ಲರೂ ತಮ್ಮ ಕಾರ್ಯವು ಆಯಿತೆಂದು ಕೃತಾರ್ಥತೆಯಿಂದ ದೇವಲೋಕಕ್ಕೆ ತೆರಳಿದರು. ಇಂದ್ರನಿಗೆ ಹೋಗಿ 'ಪ್ರಮ್ಲೋಚೆಯ ಬುಟ್ಟಿಗೆ ಮೀನಬಿದ್ದಿದೆ' ಎಂದು ಸಂತಸ ತುಂಬಿ ಹೇಳಿದರು.

ಇತ್ತ ಕಂಡು ಮುನಿಯು ಪ್ರಮ್ಲೋಚೆಯ ಆಪೇಕ್ಷೆಯಂತೆ ಆಶ್ರಮವನ್ನು ಅಂತಃಪುರ ವನ್ನಾಗಿ ಮಾರ್ಪಡಿಸಿದನು. ತಪೋವನವು ಉಪವನವಾಯಿತು. ತನ್ನ ತಾಪಸರೂಪವನ್ನು ಬಿಟ್ಟು ಕಂಡು ಋಷಿಯು ಮನ್ಮಥನಂಥ ದಿವ್ಯಸುಂದರವಾದ ರೂಪವನ್ನು ಧರಿಸಿದ. ಅವರ ಅಂಗಾಂಗಗಳಲ್ಲಿ ಹೊಸಹರೆಯ ಸಿರಿ ಸೊಬಗುಗಳು ಕಂಗೊಳಿಸತೊಡಗಿದವು. ಹದಿನಾರು ವರುಷದ ಪ್ರಾಯದ ಸುಂದರ ಕಾಯದ ಮನ್ಮಥನಾಗಿ ಮಾರ್ಪಟ್ಟ ಮುನಿಯು ತನ್ನ ತಪೋಬಲದಿಂದ ಬಗೆಬಗೆಯ ಬೆಲೆಬಾಳುವ ಬಟ್ಟೆಗಳನ್ನು ಉಟ್ಟು ಮುತ್ತು ರತ್ನ ಬಂಗಾರದ ಆಭರಣಗಳನ್ನು ತೊಟ್ಟು ನಾನಾವಿಧ ಪರಿಮಳ ದ್ರವ್ಯಗಳನ್ನು ಲೇಪಿಸಿಕೊಂಡ.

ಕಂಡು ಮುನಿಯ ಈ ಅತ್ಯದ್ಭುತವಾದ ತಪೋಮಹಿಮೆಯನ್ನು ಕಂಡು ಆಶ್ಚರ್ಯಪಟ್ಟು, "ಅಬ್ಬಾ! ಏನು ಈ ಮುನಿಯ ತಪಃಪ್ರಭಾವ! ಅರೆಚಣದಲ್ಲಿ ಮುಪ್ಪಿನ ಮುದುಕ ತೇಜಸ್ವಿ ತರುಣನಾದ. ಕೃಶಕಾಯ, ಸುಂದರಾಂಗನಾದ. ತಪೋವನ ಉಪವನವಾಯಿತು. ನೆಲದ ಮರಗಳೆಲ್ಲವೂ ದೇವತರುಗಳಾದವು. ಈ ಆಶ್ರಮ ನಂದನವನವಾಯಿತು ಕ್ಷಿಣ ದೇಹದ ಈ ಮುನಿ ಇಂದ್ರ ಚಂದ್ರರಂತೆ ಸುಂದರಾಂಗನಾದ. ತಪಸ್ಸಿಗೆ ಮೀರಿದ್ದು ಯಾವುದಿದೆ! ಇಂಥ ತೇಜಸ್ವಿ ತಪಸ್ವಿ ವರ್ಚಸ್ವಿ, ಮನಸ್ವಿ, ಮುನಿಮನವನ್ನು ಗೆದ್ದು, ಅವನೊಡನೆ ಸ್ವಚ್ಛಂದದಿಂದ ಮಧುಚಂದ್ರ ವಿಹಾರ ಗೈಯುವ ಆನಂದದ ಸುವರ್ಣ ಸಂಧಿಯನ್ನು ಪಡೆದ ನಾನೇ ಧನ್ಯಳು" ಎಂದು ಉದ್ಗಾರ ತೆಗೆದಳು ದೇವಗಣಿಕೆಯಾದ ಆ ಪ್ರಮ್ಲೋಚೆ.

ಹೀಗೆ ಪ್ರಾರಂಭವಾಯಿತು ಆ ತಪಸ್ವಿಯ ಶೃಂಗಾರ ಜೀವನ. ಬಹುಕಾಲದವರೆಗೆ ರಾಗಾನುರಾಗಗಳಿಂದ ಒಡಗೂಡಿ ಆ ದೇವ ಗಣಿಕೆಯೊಡನೆ ಆ ಮಹಾಮುನಿಯು ಭೂಲೋಕದಲ್ಲಿಯೇ ಸ್ವರ್ಗೀಯ ಭೋಗೋಪಭೋಗಗಳನ್ನೆಲ್ಲ ಅನುಭವಿಸಿದ ಪ್ರಮ್ಲೋಚೆಯ ಕಾಮ ಕೇಳೀ ವಿಲಾಸ ಲಾಲಸನಾದ ಆ ಋಷಿಯು ಸ್ನಾನ ಸಂಧ್ಯೆಗಳನ್ನು ಮರೆತ. ಜಪತಪಗಳನ್ನು ತೊರೆದ. ಹೋಮ, ವ್ರತನಿಯಮ ಉಪವಾಸಗಳಂತೂ ಎಲ್ಲಿಯೋ ಹೋದವು. ಧ್ಯಾನ. ಮೌನ, ಜ್ಞಾನ, ಉಪಾಸನೆಗಳೆಲ್ಲವೂ ಪ್ರಮ್ಲೋಚನೆಯ ಅನುನಯ, ಅಭಿನಯ ಪ್ರಸಾದನೆಗಳಲ್ಲಿ ಲೀನವಾದವು. ಹಗಲಿರುಳು ಪ್ರಮ್ಲೋಚೆಯ ನೋಟ ಬೇಟ, ಕೂಟಗಳಲ್ಲಿ ಆಸಕ್ತನಾದ ಮುನಿಯ ತಪಸ್ಸೆಲ್ಲವೂ ಕ್ಷೀಣವಾಯಿತು.

ಹೀಗೆ ದೇವಾಂಗನೆಯ ಜೊತೆಗೆ ಶೃಂಗಾರ ಚೇಷ್ಟೆಯಲ್ಲಿ ನಿರತನಾದ ಮುನಿಗೆ ಹೊತ್ತು ಹೊರಳಿದ್ದು ವರುಷ ಉರುಳಿದ್ದು, ಕಾಲ ಕಳೆದದ್ದು ಗೊತ್ತೇ ಆಗಲಿಲ್ಲ. ಆದರೆ ಪ್ರಮ್ಲೋಚೆಯು ಮಾತ್ರ ಆಗಾಗ ಅವನಿಂದ ದೂರಳಾಗಿ ಒಮ್ಮೊಮ್ಮೆ ಕೃತಕ ಕೋಪವನ್ನು ನಟಿಸುತ್ತ ಅವನಲ್ಲಿ ಕಾಮವನ್ನು ಕೆರಳಿಸುತ್ತ, ಕೊನೆಗೆ ಹೃದಯವನ್ನು ಅರಳಿಸುತ್ತ ಸಂತಸವನ್ನು ಬೀರುತ್ತ ತನ್ನ ಬೆರಳ ತುದಿಯ ಮೇಲೆ ಮರುಳನಾದ ಆ ಮುನಿಯನ್ನು ಕುಣಿಸುತ್ತಿದ್ದಳು. ಹೀಗೆ ನೂರುವರುಷಕಾಲ ಮಂದರಪರ್ವತದ ಸುಂದರವಾದ ಕಂದರ

ಪ್ರದೇಶದಲ್ಲಿ ಹದಿಹರೆಯದ ಹೊಸ ಹುಡುಗರಾಗಿ ರಸ ಕ್ರೀಡೆಗಳನ್ನು ಆಡಿದರು, ಆ ಮುನಿಮಾನಿನಿಯರು. ಶೃಂಗಾರ ರಸ ತರಂಗಿತರಾಗಿ ಸಂಗೀತವನ್ನು ಹಾಡಿದರು. ಹೀಗೆ ಅವರ ಉದ್ದಾಮ ಕೇಳೀವಿಲಾಸವು ರಸಭರಿತವಾಗಿ ಸಾಗುತ್ತಿದ್ದಾಗ. ಒಂದು ದಿನ ಆ ಸುಂದರಿಯು ಮಂದಹಾಸ ಮಾಡಿ ಮುನಿಗೆ ಹೇಳಿದಳು "ಭಗವನ್, ನಾನು ಸ್ವರ್ಗದ ಸೇವಕಿ ಇಂದ್ರನ ದಾಸಿ. ಅಮರಾವತಿಯ ಅಪ್ಸರೆ ನಾನು ಇಲ್ಲಿ ಬಂದು ಒಂದು ನೂರು ವರುಷದ ಮೇಲಾಯಿತು. ನನ್ನ ಒಡೆಯ ಆ ನಾಕಲೋಕದಲ್ಲಿ ನನಗಾಗಿ ಕಾಯುತ್ತಿದ್ದಾನೆ. ನಾನು ಬೇಗ ಹೋಗಬೇಕು, ಅಪ್ಪಣೆ ಕೊಡಿ" ಎಂದು ಕೇಳಿದಳು.

ಆದರೆ ಕಂಡು ಮುನಿಗೆ ಅವಳನ್ನು ಕಂಡ ಬಳಿಕ ಮರಳಿ ತನ್ನ ತಪೋಜೀವನಕ್ಕೆ ಬರಲು ಇಚ್ಛೆಯೇ ಇರಲಿಲ್ಲ. ಈ ಸುರ ಲಲನೆ ತನ್ನ ತಪಸ್ಸಿನ ಫಲವೇ ಎಂದು ಅವನು ಭಾವಿಸಿ ಬಿಟ್ಟಿದ್ದ. ಅವಳನ್ನು ಬಿಟ್ಟು ಇರುವುದು ಅವನಿಗೆ ಅಶಕ್ಯ ಎನಿಸಿತ್ತು. ಆದುದರಿಂದ ಕಂಡು ಮುನಿಯು ದೀನ ದೀನನಾಗಿ ಅವಳನ್ನು ಕೇಳಿಕೊಂಡ. "ಅಮರಾಂಗನೆಯೇ, ಇನ್ನು ಕೆಲವು ದಿನ ನೀನು ಇಲ್ಲಿಯೇ ನಿಲ್ಲು. ನಿನ್ನನ್ನು ಬಿಟ್ಟು ನಾನು ಬದುಕಲಾರೆ. ಮೋಹನಾಂಗಿಯಾದ ನಿನ್ನ ಅಂಗ ಸುಖ ನನಗೆ ನಿಂತ ನೆಲದಲ್ಲಿಯೆ ಸ್ವರ್ಗ ಸುಖವನ್ನು ತಂದುಕೊಟ್ಟಿದೆ. ದಯವಿಟ್ಟು ಇನ್ನು ಕೆಲವು ವರುಷಗಳವರೆಗೆ ನನ್ನ ಜೊತೆಗೆ ವಿಹರಿಸು. ನನಗೆ ಹರ್ಷವನ್ನು ನೀಡು."

ನೂರು ವರುಷ ಹರುಷದಿಂದ ಆ ಮುನಿ ಮಾರ್ತಂಡನೊಂದಿಗೆ ವಿಹಾರ ಸುಖವನ್ನು ಅನುಭವಿಸಿದ ಆ ಅಪ್ಸರೆಗೆ ಈ ನರಲೋಕದ ನವ ಯುವಕ ಇಷ್ಟನಾಗಿದ್ದ. ಅವನ ಸಂಗ ಸುಖ ನಿಜವಾಗಿಯೂ ಅವಳ ಅಂತರಂಗದಲ್ಲಿ ಆನಂದದ ತರಂಗಗಳನ್ನು ಉಂಟು ಮಾಡಿತ್ತು. ಅದರಿಂದ ಅವಳು ಆ ಮುನಿಯ ಬಿನ್ನಹವನ್ನು ಮನ್ನಿಸಿ ಮತ್ತೆ ನೂರು ವರುಷ ಅವನ ಆಶ್ರಮದಲ್ಲಿ ನಿಂತಳು. ಹೊಸ ಹೊಸ ರೀತಿಯ ರಸ ಕೇಳಿ, ರಾಸ ಗೋಷ್ಠಿಗಳಿಂದ ಅವನ ಮನಸ್ಸನ್ನು ರಮಿಸಿದಳು. ಮತ್ತು ಮತ್ತೂ ಪ್ರೇಮಿಸಿದಳು. ಮತ್ತಿಷ್ಟು ಕಾಮಿಸಿದಳು. ಯಥೇಷ್ಟ ಭೋಗಿಸಿದಳು.

ಹೀಗೆ ಮತ್ತೆ ಒಂದು ನೂರು ವರುಷ ಕಳೆಯಿತು. ಪ್ರಮ್ಲೋಚೆಗೆ ದೇವಲೋಕದ ದೂರೆಯ ಭಯ ಕಾಡುತ್ತಿತ್ತು. ಆದುದರಿಂದ ಅವಳು ಮತ್ತೆ ಆ ಮಹಾಮುನಿಗೆ "ನಾನು ದೇವಲೋಕಕ್ಕೆ ಹೋಗುತ್ತೇನೆ. ಅಪ್ಪಣೆ ಕೊಡಿ" ಎಂದು ಕೇಳಿಕೊಂಡಳು. ದಿನ ಕಳೆದಂತೆ ಆ ಮುನಿಮನದಲ್ಲಿ ಕಾಮಕ್ಕಪಾಸೆ ಉದ್ದೀಪಿತವಾಗುತ್ತಿತ್ತು. ವಿಷಯ ತೃಷ್ಣೆ ಅತ್ಯಧಿಕವಾಗುತ್ತಿತ್ತು. ಅವನು ಮತ್ತೆ ಮತ್ತೆ ಕಾಶಿನಿಯನ್ನು ನಮ್ರನಾಗಿ ಕೇಳಿಕೊಂಡ. "ಮಾನಿನಿ, ನಾನು ನಿನ್ನನ್ನು ಬಿಡಲಾರೆ, ಸ್ವರ್ಗಕ್ಕೆ ಹೋಗಲು ಅಪ್ಪಣೆ ಕೊಡಲಾರೆ, ನಾನು ಸಾಕು ಎನ್ನುವವರೆಗೆ ನೀನು ನನ್ನೊಡನೆ ಇರಬೇಕು. ನನ್ನ ಕಾಮನೆಗಳನ್ನು ತಣಿಸಬೇಕು. ಮನಸ್ಸನ್ನು ಸಂತೋಷ ಗೊಳಿಸಬೇಕು. ನಾನು ನಿನ್ನನ್ನು ಬಿಡಲಾರೆ" ಎಂದು ಗಟ್ಟಿಯಾಗಿ ಗದರಿಸಿ ಹೇಳಿದನು.

ಪ್ರಮ್ಲೋಚೆಗೆ ಉಭಯ ಸಂಕಟ, ಅತ್ತ ತನ್ನ ಒಡೆಯನಾದ ದೇವೇಂದ್ರನ ಕೋಪದ ಭಯ. ಇತ್ತ ಈ ಕಂಡು ಮುನಿಯ ಶಾಪದ ಭಯ. ಅತ್ತ ದರಿ, ಇತ್ತ ಪುಲಿ. ಆ ಅಬಲೆಯು ಉಭಯ ಸಂಕಟದಲ್ಲಿ ಬಿದ್ದು ಒದ್ದಾಡಿದಳು. ಕೊನೆಗೆ ಕಂಡು ಮುನಿಯ ದಾಕ್ಷಿಣ್ಯಕ್ಕೆ ಒಳಗಾಗಿ, ಅವನ ಕೋಪ, ಶಾಪಗಳಿಗೆ ಬೆದರಿ ಮತ್ತೂ ನೂರಾರು ವರುಷ ಆ ಆಶ್ರಮದಲ್ಲಿ ಆ ಮುನಿಯ ಮನದನ್ನೆಯಾಗಿ ಇದ್ದಳು. ಆ ಋಷಿಗೆ ರಸರಾತ್ರಿಗಳನ್ನು ಒದಗಿಸಿದಳು.

ಹೀಗೆ ದೇವಲೋಕಕ್ಕೆ ಹೋಗಬೇಕೆಂದು ಕಂಡುನನ್ನು ಕೇಳಿದಾಗಲೆಲ್ಲ ಆ ಕಂಡುಮುನಿ ಕೆಂಡವಾಗುತ್ತಿದ್ದ. ಅದನ್ನು ಕಂಡು ಹೆದರಿ ಆ ದೇವ ಸುಂದರಿಯು ಮತ್ತೆ ಅಲ್ಲಿಯೇ ನೆಲೆನಿಲ್ಲುತ್ತಿದ್ದಳು. ಅವನ ಹಸಿವನ್ನು ಹಿಂಗಿಸುತ್ತಿದ್ದಳು. ಅವನ ಕಾಮದಾಹವನ್ನು ಪ್ರೇಮಸ್ನೇಹವನ್ನು ತೃಪ್ತಿಗೊಳಿಸುತ್ತಿದ್ದಳು. ಹೀಗೆ ಎಷ್ಟೋ ವರುಷಗಳು ಕಳೆದ ಬಳಿಕ ಒಂದು ದಿನ ಆ ಕಂಡುಮಹರ್ಷಿಯು ತನ್ನ ಆಶ್ರಮದಿಂದ ಅವಸರವಾಗಿ ಹೊರ ಹೊರಟನು. ಆಗ ಪ್ರಮ್ಲೋಚನೆಯು ಧಾವಿಸಿ ಬಂದು ಅವನ ಕೈ ಹಿಡಿದು "ಇದೇನು ಇಷ್ಟು ಅವಸರವಾಗಿ ತಾವು ಎಲ್ಲಿ ಹೊರಟಿರುವಿರಿ!" ಎಂದು ಕೇಳಿದಳು. ಅದಕ್ಕೆ ಆ ಕಂಡು ಮುನಿಯು "ಮಂಗಳಾಂಗಿ, ನಿನಗೆ ಕಣ್ಣಿಗೆ ಕಾಣಿಸುವು ದಿಲ್ಲವೇ? ಸೂರ್ಯನು ಅಸ್ತಮಿಸುತ್ತಲಿದ್ದಾನೆ. ಸಾಯಂಕಾಲ ಸಮೀಪಿಸುತ್ತಲಿದೆ. ನಾನು ಸಂಧ್ಯಾವಂದನೆ ಮಾಡಬೇಕು. ಸೂರ್ಯನು ಮುಳುಗುವಷ್ಟರಲ್ಲಿ ಅವನಿಗೆ ಅರ್ಘ್ಯವನ್ನು ಕೊಡಬೇಕು. ಇಲ್ಲದಿದ್ದರೆ ಕರ್ಮಲೋಪವು ಆಗುವುದು" ಎಂದು ಹೇಳಿದನು.

ಅವನ ಮಾತನ್ನು ಕೇಳಿ ಪ್ರಮ್ಲೋಚೆಗೆ ಆಶ್ಚರ್ಯವಾಯಿತು. ನಗೆಯೂ ಬಂದಿತು. ಅವಳು ಸುಂದರವಾಗಿ ಮಂದಹಾಸಮಾಡಿ "ಮುನಿಪುಂಗವ ಇದೇನು ಇಂದು ಮಾತ್ರ ಸೂರ್ಯಾಸ್ತವಾಗುತ್ತಿದೆಯೇ? ನೀವು ಇತ್ತೀಚೆಗೆ ಎಷ್ಟೋದಿನಗಳಿಂದ ಸಂಧ್ಯಾವಂದನೆ ಯನ್ನು ಮಾಡಿಲ್ಲ, ಸೂರ್ಯನಿಗೆ ಅರ್ಘ್ಯವನ್ನು ನೀಡಿಲ್ಲ. ಕಾಮ ನಿಮ್ಮನ್ನು ಕುರುಡನನ್ನಾಗಿಸಿದ್ದಾನೆ. ಪ್ರೇಮ ಆಹ್ನಿಕಗಳನ್ನೆಲ್ಲ ಮರೆಸಿದ್ದಾನೆ. ಇಂದು ಮಾತ್ರ ನಿಮಗೆ ಸ್ನಾನ ಸಂಧ್ಯೋಪಾಸನೆ ನೆನಪಾಗಿವೆ" ಎಂದು ಹೇಳಿದಳು.

ಅದನ್ನು ಕೇಳಿ ವಿಸ್ಮಯ ಸ್ತಿಮಿತನಾದ ಆ ಮುನಿಯು ದಿಗ್ಭ್ರಾಂತನಾಗಿ ಆ ಪ್ರಮ್ಲೋಚೆ ಯನ್ನು ಕೇಳಿದ. "ಶುಭಾಂಗಿ, ಇದೇನು ನೀನು ಈ ರೀತಿ ಮಾತನಾಡುತ್ತಿರುವೆ? ನಾನು ನಿನ್ನನ್ನು ನೋಡಿದ್ದು ಇಂದು ಬೆಳಗಿನ ಜಾವದಲ್ಲಿ ಅಲ್ಲವೇ? ಆಗಲೇ ನಿನ್ನನ್ನು ಕರೆದುಕೊಂಡು ಆಶ್ರಮಕ್ಕೆ ಬಂದೆ. ನಿನ್ನೊಡನೆ ವಿಹರಿಸಿದೆ. ಈಗ ಹಗಲು ತಿರುಗಿತು. ನಂತರ ಸಂಧ್ಯಾಕಾಲವು ಪ್ರಾಪ್ತವಾಯಿತು. ಅದಕ್ಕಾಗಿ ನಾನು ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಲು ಹೊರಟ್ಟಿದ್ದೇನೆ ಇದರಲ್ಲಿ ನಗುವಂತಹುದು ಏನಿದೆ?"

ಆಗ ಪ್ರಮ್ಲೋಚೆಯು "ಎಲೈ ಬ್ರಾಹ್ಮಣ, ನಾನು ಪ್ರಾತಃಕಾಲದಲ್ಲಿ ಇಲ್ಲಿಗೆ ಬಂದದ್ದೇನೋ ನಿಜ. ಅದು ಸುಳ್ಳಲ್ಲ. ಈಗ ಸಾಯಂಕಾಲವಾದದ್ದೂ ಸುಳ್ಳಲ್ಲ. ಆದರೆ ಅಂದಿನ ಬೆಳಗು ಇಂದಿನ ಸಂಜೆ ಇವುಗಳ ನಡುವೆ ಎಷ್ಟೋ ನೂರು ವರುಷಗಳು ಕಳೆದು ಹೋಗಿವೆ. ನಿಮಗೆ ಈ ಕಾಲದ ಅರಿವು ಇಲ್ಲ. ನಿಮ್ಮ ಧರ್ಮ ಕರ್ಮಗಳ ಪರಿವೆಯು ಇಲ್ಲ. ಈ ವೈಷಯಿಕ ಸುಖಗಳ ರಾಗಾನುರಾಗಗಳಲ್ಲಿಯೂ, ಭೋಗದ ಭೋಗಗಳಲ್ಲಿಯೂ ಮುಳುಗಿ ಹೋದ ನೀವು ಹೊತ್ತು ಹೊರಳಿದ್ದನ್ನು ಗಮನಿಸಿಲ್ಲ. ವರುಷ ಉರುಳಿದ್ದನ್ನು ಲಕ್ಷಿಸಲಿಲ್ಲ. ಶತಕಾನು ಶತಕಗಳು ತೆರಳಿದ್ದನ್ನು ಅರಿಯಲಿಲ್ಲ" ಎಂದು ಹೇಳಿದಳು.

ಅದನ್ನು ಕೇಳಿ ಕಂಡು ಮುನಿಗೆ ಮಹಾ ಕಾತುರವಾಯಿತು. ಅವನು ಕುತೂಹಲದಿಂದ ಮತ್ತೆ ಆ ಕಾಮಾಕ್ಷಿಗೆ ಕೇಳಿದ. "ಚಾರುಗಾತ್ರಿ ಹಾಗಾದರೆ ನಾನು ನಿನ್ನೊಡನೆ ಎಷ್ಟು ಕಾಲ ರಮಿಸಿದೆ? ನನ್ನ ಸ್ನಾನ, ಸಂಧ್ಯೆ, ಪೂಜೆ, ಜಪ ತಪಗಳಿಂದ ವಿರಮಿಸಿದೆ? ಅದನ್ನು ಹೇಳು" ಎಂದು ಕೇಳಿದನು.

ಆಗ ಪ್ರಮ್ಲೋಚೆಯು ಧೈರ್ಯವಾಗಿ ಹೇಳಿದಳು. ''ಸ್ವಾಮಿ ನಾನು ಇಲ್ಲಿ ಬಂದು, ನಿನ್ನೊಡನೆ ನಿಂದು ಸಂಸಾರ ಮಾಡಲು ಹತ್ತಿ, ಒಂಬತ್ತು ನೂರು ವರುಷಗಳು ಕಳೆದು ಅದರ ಮೇಲೆ ಆರು ತಿಂಗಳ ಮೂರು ದಿನಗಳು ಸಂದಿವೆ. ಇದು ನಿಜ. ನಾನು ಸುಳ್ಳು ಹೇಳುವುದಿಲ್ಲ. ಮಧ್ಯ ಮಧ್ಯದಲ್ಲಿ ನಾನು ತಮ್ಮನ್ನು ಕೇಳುತ್ತಿದ್ದೆ 'ನನ್ನನ್ನು ಬಿಡಿ ಸ್ವರ್ಗಕ್ಕೆ ಹೋಗಲು ಅಪ್ಪಣೆ ಕೊಡಿ' ಎಂದು. ಆದರೆ ಕಾಮ ವಾಸನೆಯು ಹಿಂಗದ ನೀವು ನನ್ನನ್ನು ಒತ್ತಾಸುಯಿತ್ತಲೇ ಇದ್ದಿರಿ. ನಿಮ್ಮ ಕೋಪ ಶಾಪಗಳಿಗೆ ಹೆದರಿ ನಾನು ನನ್ನ ಭೂಲೋಕದ ವಾಸವನ್ನು ಮತ್ತೆ ಮತ್ತೆ ಬೆಳೆಸಿದೆ. ಇದು ಸತ್ಯವಾದ ಮಾತು. ನಿಮ್ಮಂಥವರ ಎದುರು ನಾನು ಸುಳ್ಳು ಹೇಳುವೆನೆ? ಇನ್ನಾದರೂ ನನ್ನನ್ನು ಬಿಟ್ಟು ಬಿಡಿ. ಸ್ವರ್ಗಕ್ಕೆ ಹೋಗ ಗೊಡಿ'' ಎಂದು ಬೇಡಿಕೊಂಡಳು.

ಆಗ ಕಂಡು ಮುನಿಗೆ ಎಚ್ಚರ ಬಂದಿತು. ತನ್ನ ತಪ್ಪಿನ ಅರಿವಾಯಿತು. ಅವನ ಮನಸ್ಸಿಗೆ ಆಘಾತವೂ ಆಯಿತು. ''ಅಯ್ಯೋ, ಎಂಥ ಅನಾಹುತ ಆಯಿತು. ಸದಾಚಾರಿಯಾದ ನಾನು ಈ ಹೆಣ್ಣಿನ ಮೋಹದಿಂದ ಅನಾಚಾರಿಯಾದೆನು, ನನಗೆ ಧಿಕ್ಕಾರವಿರಲಿ ಬಹುಕಾಲ ನಾನು ಮಾಡಿದ ತಪಸ್ಸೆಲ್ಲವು ಹಾಳಾಯಿತು. ಈ ಮಾಯಾಂಗನೆಯ ಮಾದಕ ರೂಪ ಮೋಹಕ ಚೇಷ್ಟೆಗಳಿಂದ ಮುಗ್ಧನಾಗಿ ನಾನು ನನ್ನ ತಪೋಜೀವನವನ್ನೆಲ್ಲ ಹಾಳು ಮಾಡಿಕೊಂಡೆ. ಈ ನನ್ನ ಅನಾಚಾರಕ್ಕೆಲ್ಲ ಮುಖ್ಯವಾಗಿ ಕಾಮನೇ ಕಾರಣ, ಈ ಕಾಮಿನಿಯೂ ಕಾರಣ'' ಎಂದು ತನ್ನನ್ನು ತಾನು ನಿಂದಿಸಿಕೊಂಡು ''ಪ್ರಮ್ಲೋಚೆಯನ್ನು ಕುರಿತು ನುಡಿದನು ''ಎಲೋ ಪಾಪಿಷ್ಠೆಯ, ನಡೆ. ಇಲ್ಲಿಂದ ನನ್ನನ್ನು ಬಿಟ್ಟುಹೋಗು ಇಲ್ಲಿಂದ ತೊಲಗು, ನಿನಗೆ ಬೇಕಾದಲ್ಲಿಗೆ ಹೋಗಿಬಿಡು. ನೀನು ನನ್ನ ತಪ್ಸನ್ನು ಭಂಗಗೊಳಿಸಬೇಕೆಂದು ಬಂದಿದ್ದೆಯಷ್ಟೇ? ಆ ನಿನ್ನ ಕಾರ್ಯವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದೆ. ಚಿರಸಂಚಿತವಾದ ನನ್ನ ತಪಸ್ಸನ್ನೆಲ್ಲ ಮಣ್ಣುಗೂಡಿಸಿ ದೇವೇಂದ್ರನನ್ನು ಮೆಚ್ಚಿಸಿದೆ. ದೇವತಾ ಕಾರ್ಯವನ್ನೇ ಸಾಧಿಸಿದೆ. ನಾನು ಈಗ ನನ್ನ ಕೋಪಾಗ್ನಿಯಿಂದ ನಿನ್ನನ್ನು ಸುಟ್ಟು ಬೂದಿ ಮಾಡಬಲ್ಲೆ, ಆದರೆ ನಾನು ಹಾಗೆ ಮಾಡಲಾರೆ, ನಾನು ವಿವೇಕಿ. ಬೇರೆ ಮುನಿಗಳಂತೆ ಅವಿವೇಕಿ ಅಲ್ಲ. ಏಳು ಹೆಜ್ಜೆ ಕೂಡಿ ನಡೆದರೆ ಪರಸ್ಪರ ಸ್ನೇಹ ಮೈತ್ರಿ ಉಂಟಾಗುವುದೆಂದು ಹಿರಿಯರು ಹೇಳಿರುವರು. ನಾನು ನಿನ್ನೊಡನೆ ಅನೇಕ ದಿವಸ, ಅದೇಕೆ ಅನೇಕ ವರುಷಗಳ ಕಾಲ ವಾಸಮಾಡಿದ್ದೇನೆ. ನಿನ್ನೊಡನೆ ವಿಹರಿಸಿದ್ದೇನೆ. ಇದರಲ್ಲಿ ನಿನ್ನದೇನು ತಪ್ಪು! ಕಾಮಾಂಧನಾಗಿ ಕಾಮಿನಿಯ ಬೆನ್ನು ಹತ್ತಿದ್ದು ನನ್ನದೇ ಅಪರಾಧ. ನಾನು ಇಂದ್ರಿಯಗಳ ವಶನಾಗಿ ಹೀಗೆ ಮಾಡಿದೆ. ಇಂದ್ರನ ವಶಳಾಗಿ ನೀನು ಹಾಗೆ ಮಾಡಿದೆ. ನನ್ನ ದುರ್ವಿಧಿ ಹೀಗೆ ಮಾಡಿಸಿತು. ನೀನು ಬೇಗನೆ ಇಲ್ಲಿಂದ ಹೊರಟು ಹೋಗು. ನಾನು ನಿನ್ನನ್ನು ಶಪಿಸುವುದಿಲ್ಲ.''

ಮುನಿಯ ಮಾತನ್ನು ಕೇಳಿ ಪ್ರಮ್ಲೋಚೆಯು ಅವನ ಆಶ್ರಮವನ್ನು ಬಿಟ್ಟು ಹೊರಟಳು. ಕಂಡು ಮುನಿಯು ತನ್ನ ಮೇಲೆಯೆ ಕೋಪಗೊಂಡದ್ದನ್ನು ನೋಡಿ ಅವಳು ಹೆದರಿ ಕಂಗಾಲಾದಳು, ಆ ಮುನಿಯ ಮುಖವನ್ನು ಕಂಡೇ ಅವಳು ನಡುಗಿಹೋದಳು ಮೈಯೆಲ್ಲವು ಬೆವರಿಟ್ಟಿತು. ಅವಳು ದಾರಿಯಲ್ಲಿ ಬೆಳೆದ ಮರದ ಚಿಗುರುಗಳಿಂದ ತನ್ನ ಶರೀರದ ಬೆವರನ್ನು ಒರೆಸಿಕೊಂಡಳು. ಕಂಡುವಿನೊಡನೆ ಅವಳು ವಿಹಾರ ಗೈಯುತ್ತ ಆಶ್ರಮದಲ್ಲಿ ಇದ್ದುದರ ಫಲವಾಗಿ ಗರ್ಭಿಣಿಯಾಗಿದ್ದಳು. ಆ ಗರ್ಭವು ಬೆವರಿನ ಮೂಲಕವಾಗಿ ತರು ಲತೆಗಳಲ್ಲಿ ಹರಿದು ಬಂದಿತು. ಬೆವರಿನ ಮೂಲಕ ಹರಿದು ಬಂದ ಆ ಗರ್ಭವನ್ನು ವೃಕ್ಷಗಳು

ಹೀಗೆ ದೇವಲೋಕಕ್ಕೆ ಹೋಗಬೇಕೆಂದು ಕಂಡುನನ್ನು ಕೇಳಿದಾಗಲೆಲ್ಲ ಆ ಕಂಡುಮುನಿ ಕೆಂಡವಾಗುತ್ತಿದ್ದ. ಅದನ್ನು ಕಂಡು ಹೆದರಿ ಆ ದೇವ ಸುಂದರಿಯು ಮತ್ತೆ ಅಲ್ಲಿಯೇ ನೆಲೆನಿಲ್ಲುತ್ತಿದ್ದಳು. ಅವನ ಹಸಿವನ್ನು ಹಿಂಗಿಸುತ್ತಿದ್ದಳು. ಅವನ ಕಾಮದಾಹವನ್ನು ಪ್ರೇಮಸ್ನೇಹವನ್ನು ತೃಪ್ತಿಗೊಳಿಸುತ್ತಿದ್ದಳು. ಹೀಗೆ ಎಷ್ಟೋ ವರುಷಗಳು ಕಳೆದ ಬಳಿಕ ಒಂದು ದಿನ ಆ ಕಂಡುಮಹರ್ಷಿಯು ತನ್ನ ಆಶ್ರಮದಿಂದ ಅವಸರವಾಗಿ ಹೊರ ಹೊರಟನು. ಆಗ ಪ್ರಮ್ಲೋಚನೆಯು ಧಾವಿಸಿ ಬಂದು ಅವನ ಕೈ ಹಿಡಿದು ''ಇದೇನು ಇಷ್ಟು ಅವಸರವಾಗಿ ತಾವು ಎಲ್ಲಿ ಹೊರಟಿರುವಿರಿ!'' ಎಂದು ಕೇಳಿದಳು. ಅದಕ್ಕೆ ಆ ಕಂಡು ಮುನಿಯು ''ಮಂಗಳಾಂಗಿ, ನಿನಗೆ ಕಣ್ಣಿಗೆ ಕಾಣಿಸುವು ದಿಲ್ಲವೇ? ಸೂರ್ಯನು ಅಸ್ತಮಿಸುತ್ತಲಿದ್ದಾನೆ. ಸಾಯಂಕಾಲ ಸಮೀಪಿಸುತ್ತಲಿದೆ. ನಾನು ಸಂಧ್ಯಾವಂದನೆ ಮಾಡಬೇಕು. ಸೂರ್ಯನು ಮುಳುಗುವಷ್ಟರಲ್ಲಿ ಅವನಿಗೆ ಅರ್ಘ್ಯವನ್ನು ಕೊಡಬೇಕು. ಇಲ್ಲದಿದ್ದರೆ ಕರ್ಮಲೋಪವು ಆಗುವುದು'' ಎಂದು ಹೇಳಿದನು.

ಅವನ ಮಾತನ್ನು ಕೇಳಿ ಪ್ರಮ್ಲೋಚೆಗೆ ಆಶ್ಚರ್ಯವಾಯಿತು. ನಗೆಯೂ ಬಂದಿತು. ಅವಳು ಸುಂದರವಾಗಿ ಮಂದಹಾಸಮಾಡಿ ''ಮುನಿಪುಂಗವ ಇದೇನು ಇಂದು ಮಾತ್ರ ಸೂರ್ಯಾಸ್ತವಾಗುತ್ತಿದೆಯೇ? ನೀವು ಇತ್ತೀಚೆಗೆ ಎಷ್ಟೋದಿನಗಳಿಂದ ಸಂಧ್ಯಾವಂದನೆ ಯನ್ನು ಮಾಡಿಲ್ಲ, ಸೂರ್ಯನಿಗೆ ಅರ್ಘ್ಯವನ್ನು ನೀಡಿಲ್ಲ. ಕಾಮ ನಿಮ್ಮನ್ನು ಕುರುಡನನ್ನಾಗಿಸಿದ್ದಾನೆ. ಪ್ರೇಮ ಆಹ್ನಿಕಗಳನ್ನೆಲ್ಲ ಮರೆಸಿದ್ದಾನೆ. ಇಂದು ಮಾತ್ರ ನಿಮಗೆ ಸ್ನಾನ ಸಂಧ್ಯೋಪಾಸನೆ ನೆನಪಾಗಿವೆ'' ಎಂದು ಹೇಳಿದಳು.

ಅದನ್ನು ಕೇಳಿ ವಿಸ್ಮಯ ಸ್ತಿಮಿತನಾದ ಆ ಮುನಿಯು ದಿಗ್ಭ್ರಾಂತನಾಗಿ ಆ ಪ್ರಮ್ಲೋಚೆ ಯನ್ನು ಕೇಳಿದ. ''ಶುಭಾಂಗಿ, ಇದೇನು ನೀನು ಈ ರೀತಿ ಮಾತನಾಡುತ್ತಿರುವೆ? ನಾನು ನಿನ್ನನ್ನು ನೋಡಿದ್ದು ಇಂದು ಬೆಳಗಿನ ಜಾವದಲ್ಲಿ ಅಲ್ಲವೇ? ಆಗಲೇ ನಿನ್ನನ್ನು ಕರೆದುಕೊಂಡು ಆಶ್ರಮಕ್ಕೆ ಬಂದೆ. ನಿನ್ನೊಡನೆ ವಿಹರಿಸಿದೆ. ಈಗ ಹಗಲು ತಿರುಗಿತು. ನಂತರ ಸಂಧ್ಯಾಕಾಲವು ಪ್ರಾಪ್ತವಾಯಿತು. ಅದಕ್ಕಾಗಿ ನಾನು ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಲು ಹೊರಟ್ಟಿದ್ದೇನೆ ಇದರಲ್ಲಿ ನಗುವಂತಹುದು ಏನಿದೆ?''

ಆಗ ಪ್ರಮ್ಲೋಚೆಯು ''ಎಲೈ ಬ್ರಾಹ್ಮಣ, ನಾನು ಪ್ರಾತಃಕಾಲದಲ್ಲಿ ಇಲ್ಲಿಗೆ ಬಂದದ್ದೇನೋ ನಿಜ. ಅದು ಸುಳ್ಳಲ್ಲ. ಈಗ ಸಾಯಂಕಾಲವಾದದ್ದೂ ಸುಳ್ಳಲ್ಲ. ಆದರೆ ಅಂದಿನ ಬೆಳಗು ಇಂದಿನ ಸಂಜೆ ಇವುಗಳ ನಡುವೆ ಎಷ್ಟೋ ನೂರು ವರುಷಗಳು ಕಳೆದು ಹೋಗಿವೆ. ನಿಮಗೆ ಈ ಕಾಲದ ಅರಿವು ಇಲ್ಲ. ನಿಮ್ಮ ಧರ್ಮ ಕರ್ಮಗಳ ಪರಿವೆಯು ಇಲ್ಲ. ಈ ವೈಷಯಿಕ ಸುಖಗಳ ರಾಗಾನುರಾಗಗಳಲ್ಲಿಯೂ, ಭೋಗದ ಭೋಗಗಳಲ್ಲಿಯೂ ಮುಳುಗಿ ಹೋದ ನೀವು ಹೊತ್ತು ಹೊರಳಿದ್ದನ್ನು ಗಮನಿಸಿಲ್ಲ. ವರುಷ ಉರುಳಿದ್ದನ್ನು ಲಕ್ಷಿಸಲಿಲ್ಲ. ಶತಕಾನು ಶತಕಗಳು ತೆರಳಿದ್ದನ್ನು ಅರಿಯಲಿಲ್ಲ'' ಎಂದು ಹೇಳಿದಳು.

ಅದನ್ನು ಕೇಳಿ ಕಂಡು ಮುನಿಗೆ ಮಹಾ ಕಾತುರವಾಯಿತು. ಅವನು ಕುತೂಹಲದಿಂದ ಮತ್ತೆ ಆ ಕಾಮಾಕ್ಷಿಗೆ ಕೇಳಿದ. ''ಚಾರುಗಾತ್ರಿ ಹಾಗಾದರೆ ನಾನು ನಿನ್ನೊಡನೆ ಎಷ್ಟು ಕಾಲ ರಮಿಸಿದೆ? ನನ್ನ ಸ್ನಾನ, ಸಂಧ್ಯೆ, ಪೂಜೆ, ಜಪ ತಪಗಳಿಂದ ವಿರಮಿಸಿದೆ? ಅದನ್ನು ಹೇಳು'' ಎಂದು ಕೇಳಿದನು.

ಆಗ ಪ್ರಮ್ಲೋಚೆಯು ಧೈರ್ಯವಾಗಿ ಹೇಳಿದಳು. ''ಸ್ವಾಮಿ ನಾನು ಇಲ್ಲಿ ಬಂದು, ನಿನ್ನೊಡನೆ ನಿಂದು ಸಂಸಾರ ಮಾಡಲು ಹತ್ತಿ, ಒಂಬತ್ತು ನೂರು ವರುಷಗಳು ಕಳೆದು ಅದರ ಮೇಲೆ ಆರು ತಿಂಗಳ ಮೂರು ದಿನಗಳು ಸಂದಿವೆ. ಇದು ನಿಜ. ನಾನು ಸುಳ್ಳು ಹೇಳುವುದಿಲ್ಲ. ಮಧ್ಯ ಮಧ್ಯದಲ್ಲಿ ನಾನು ತಮ್ಮನ್ನು ಕೇಳುತ್ತಿದ್ದೆ 'ನನ್ನನ್ನು ಬಿಡಿ ಸ್ವರ್ಗಕ್ಕೆ ಹೋಗಲು ಅಪ್ಪಣೆ ಕೊಡಿ' ಎಂದು. ಆದರೆ ಕಾಮ ವಾಸನೆಯು ಹಿಂಗದ ನೀವು ನನ್ನನ್ನು ಒತ್ತಾಸುಯಿತ್ತಲೇ ಇದ್ದಿರಿ. ನಿಮ್ಮ ಕೋಪ ಶಾಪಗಳಿಗೆ ಹೆದರಿ ನಾನು ನನ್ನ ಭೂಲೋಕದ ವಾಸವನ್ನು ಮತ್ತೆ ಮತ್ತೆ ಬೆಳೆಸಿದೆ. ಇದು ಸತ್ಯವಾದ ಮಾತು. ನಿಮ್ಮಂಥವರ ಎದುರು ನಾನು ಸುಳ್ಳು ಹೇಳುವೆನೆ? ಇನ್ನಾದರೂ ನನ್ನನ್ನು ಬಿಟ್ಟು ಬಿಡಿ. ಸ್ವರ್ಗಕ್ಕೆ ಹೋಗ ಗೊಡಿ'' ಎಂದು ಬೇಡಿಕೊಂಡಳು.

ಆಗ ಕಂಡು ಮುನಿಗೆ ಎಚ್ಚರ ಬಂದಿತು. ತನ್ನ ತಪ್ಪಿನ ಅರಿವಾಯಿತು. ಅವನ ಮನಸ್ಸಿಗೆ ಆಘಾತವೂ ಆಯಿತು. ''ಅಯ್ಯೋ, ಎಂಥ ಅನಾಹುತ ಆಯಿತು. ಸದಾಚಾರಿಯಾದ ನಾನು ಈ ಹೆಣ್ಣಿನ ಮೋಹದಿಂದ ಅನಾಚಾರಿಯಾದೆನು, ನನಗೆ ಧಿಕ್ಕಾರವಿರಲಿ ಬಹುಕಾಲ ನಾನು ಮಾಡಿದ ತಪಸ್ಸೆಲ್ಲವು ಹಾಳಾಯಿತು. ಈ ಮಾಯಾಂಗನೆಯ ಮಾದಕ ರೂಪ ಮೋಹಕ ಚೇಷ್ಟೆಗಳಿಂದ ಮುಗ್ಧನಾಗಿ ನಾನು ನನ್ನ ತಪೋಜೀವನವನ್ನೆಲ್ಲ ಹಾಳು ಮಾಡಿಕೊಂಡೆ. ಈ ನನ್ನ ಅನಾಚಾರಕ್ಕೆಲ್ಲ ಮುಖ್ಯವಾಗಿ ಕಾಮನೇ ಕಾರಣ, ಈ ಕಾಮಿನಿಯೂ ಕಾರಣ'' ಎಂದು ತನ್ನನ್ನು ತಾನು ನಿಂದಿಸಿಕೊಂಡು ''ಪ್ರಮ್ಲೋಚೆಯನ್ನು ಕುರಿತು ನುಡಿದನು ''ಎಲೋ ಪಾಪಿಷ್ಠೆಯ, ನಡೆ. ಇಲ್ಲಿಂದ ನನ್ನನ್ನು ಬಿಟ್ಟುಹೋಗು ಇಲ್ಲಿಂದ ತೊಲಗು, ನಿನಗೆ ಬೇಕಾದಲ್ಲಿಗೆ ಹೋಗಿಬಿಡು. ನೀನು ನನ್ನ ತಪ್ಸನ್ನು ಭಂಗಗೊಳಿಸಬೇಕೆಂದು ಬಂದಿದ್ದೆಯಷ್ಟೇ? ಆ ನಿನ್ನ ಕಾರ್ಯವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದೆ. ಚಿರಸಂಚಿತವಾದ ನನ್ನ ತಪಸ್ಸನ್ನೆಲ್ಲ ಮಣ್ಣುಗೂಡಿಸಿ ದೇವೇಂದ್ರನನ್ನು ಮೆಚ್ಚಿಸಿದೆ. ದೇವತಾ ಕಾರ್ಯವನ್ನೇ ಸಾಧಿಸಿದೆ. ನಾನು ಈಗ ನನ್ನ ಕೋಪಾಗ್ನಿಯಿಂದ ನಿನ್ನನ್ನು ಸುಟ್ಟು ಬೂದಿ ಮಾಡಬಲ್ಲೆ, ಆದರೆ ನಾನು ಹಾಗೆ ಮಾಡಲಾರೆ, ನಾನು ವಿವೇಕಿ. ಬೇರೆ ಮುನಿಗಳಂತೆ ಅವಿವೇಕಿ ಅಲ್ಲ. ಏಳು ಹೆಜ್ಜೆ ಕೂಡಿ ನಡೆದರೆ ಪರಸ್ಪರ ಸ್ನೇಹ ಮೈತ್ರಿ ಉಂಟಾಗುವುದೆಂದು ಹಿರಿಯರು ಹೇಳಿರುವರು. ನಾನು ನಿನ್ನೊಡನೆ ಅನೇಕ ದಿವಸ, ಅದೇಕೆ ಅನೇಕ ವರುಷಗಳ ಕಾಲ ವಾಸಮಾಡಿದ್ದೇನೆ. ನಿನ್ನೊಡನೆ ವಿಹರಿಸಿದ್ದೇನೆ. ಇದರಲ್ಲಿ ನಿನ್ನದೇನು ತಪ್ಪು! ಕಾಮಾಂಧನಾಗಿ ಕಾಮಿನಿಯ ಬೆನ್ನು ಹತ್ತಿದ್ದು ನನ್ನದೇ ಅಪರಾಧ. ನಾನು ಇಂದ್ರಿಯಗಳ ವಶನಾಗಿ ಹೀಗೆ ಮಾಡಿದೆ. ಇಂದ್ರನ ವಶಳಾಗಿ ನೀನು ಹಾಗೆ ಮಾಡಿದೆ. ನನ್ನ ದುರ್ವಿಧಿ ಹೀಗೆ ಮಾಡಿಸಿತು. ನೀನು ಬೇಗನೆ ಇಲ್ಲಿಂದ ಹೊರಟು ಹೋಗು. ನಾನು ನಿನ್ನನ್ನು ಶಪಿಸುವುದಿಲ್ಲ.''

ಮುನಿಯ ಮಾತನ್ನು ಕೇಳಿ ಪ್ರಮ್ಲೋಚೆಯು ಅವನ ಆಶ್ರಮವನ್ನು ಬಿಟ್ಟು ಹೊರಟಳು. ಕಂಡು ಮುನಿಯು ತನ್ನ ಮೇಲೆಯೆ ಕೋಪಗೊಂಡದ್ದನ್ನು ನೋಡಿ ಅವಳು ಹೆದರಿ ಕಂಗಾಲಾದಳು, ಆ ಮುನಿಯ ಮುಖವನ್ನು ಕಂಡೇ ಅವಳು ನಡುಗಿಹೋದಳು ಮೈಯೆಲ್ಲವು ಬೆವರಿಟ್ಟಿತು. ಅವಳು ದಾರಿಯಲ್ಲಿ ಬೆಳೆದ ಮರದ ಚಿಗುರುಗಳಿಂದ ತನ್ನ ಶರೀರದ ಬೆವರನ್ನು ಒರೆಸಿಕೊಂಡಳು. ಕಂಡುವಿನೊಡನೆ ಅವಳು ವಿಹಾರ ಗೈಯುತ್ತ ಆಶ್ರಮದಲ್ಲಿ ಇದ್ದುದರ ಫಲವಾಗಿ ಗರ್ಭಿಣಿಯಾಗಿದ್ದಳು. ಆ ಗರ್ಭವು ಬೆವರಿನ ಮೂಲಕವಾಗಿ ತರು ಲತೆಗಳಲ್ಲಿ ಹರಿದು ಬಂದಿತು. ಬೆವರಿನ ಮೂಲಕ ಹರಿದು ಬಂದ ಆ ಗರ್ಭವನ್ನು ವೃಕ್ಷಗಳು

ಸ್ವೀಕರಿಸಿದವು. ವಾಯುವು, ತನ್ನ ತಂಗಾಳಿಯ ಮೂಲಕ ಅದನ್ನು ಪೋಷಿಸಿದನು. ಚಂದ್ರನು ತನ್ನ ಚಂದ್ರಿಕೆಯ ಕಿರಣಗಳಿಂದ ಅದನ್ನು ಸ್ವೀಕರಿಸಿ ತಂಪಿಂಪುಗಳನ್ನು ಉಂಟು ಮಾಡಿದ ಹೀಗೆ ಆ ಗರ್ಭವು ಬೆಳೆದು ಮಾರಿಷಾ ಎಂಬ ಕನ್ನೆಯು ಹುಟ್ಟಿದಳು.

ಅವಳನ್ನು ಮುಂದೆ ಚಂದ್ರನು ಹತ್ತು ಜನ ಪ್ರಾಚೇತಸರಿಗೆ ಮದುವೆ ಮಾಡಿ ಕೊಟ್ಟನು. ಅವರಿಂದ ಮಾರಿಷೆಯಲ್ಲಿ ದಕ್ಷಪ್ರಜಾಪತಿಯು ಮಗನಾಗಿ ಹುಟ್ಟಿದನು.

ಹೀಗೆ ಕಂಡು ಮುನಿಯು ತನ್ನ ತಪಸ್ಸೆಲ್ಲವು ಪ್ರಮ್ಲೋಚೆಯಿಂದ ನಷ್ಟವಾದದ್ದನ್ನು ಕಂಡು ಪರಮಪವಿತ್ರವಾದ ಪುರುಷೋತ್ತಮ ಕ್ಷೇತ್ರಕ್ಕೆ ಸಮುದ್ರದ ದಕ್ಷಿಣತೀರಕ್ಕೆ ಹೊರಟು ಹೋದನು. ಅಲ್ಲಿ ನಿಂತು ಸಾಕ್ಷಾತ್ ಪರಮೇಶ್ವರನ ಸಾಕಾರ ರೂಪಿಯಾದ ವಿಷ್ಣುವನ್ನು ಜಪತಪೋನುಷ್ಠಾನ ರೂಪವಾದ ನಿರಂತರ ಆರಾಧನೆಯಿಂದ ಹಾಗೂ ಪರ್ಯುಪಾಸನೆ ಯಿಂದ ಸೇವಿಸಿದನು. ಮತ್ತು ಭಕ್ತಿಯಿಂದ ಸ್ತೋತ್ರ ಮಾಡಿದನು. ನೆಲದಲ್ಲಿ ಅಂಗುಟವನ್ನು ಊರಿ ಎರಡು ಕೈಗಳನ್ನು ಮೇಲೆಎತ್ತಿ ಬ್ರಹ್ಮಪಾರ ಎಂಬ ಮಂತ್ರವನ್ನು ಉಚ್ಚರಿಸಿ ಜಪವನ್ನು ಏಕಾಗ್ರ ಚಿತ್ತನಾಗಿ ಜಪಮಾಡಿದನು. ಅದೇ ಜಗತ್ತಿನಲ್ಲಿ ಬ್ರಹ್ಮಪಾರ ಸ್ತೋತ್ರ ಎಂದು ಪ್ರಸಿದ್ಧಿಯಾಗಿದೆ. ಪ್ರತಿಯೊಬ್ಬರು ಆ ಕಂಡು ಮುನಿ ಮಾಡಿದ ಬ್ರಹ್ಮಪಾರ ಸ್ತೋತ್ರವನ್ನು ಪೂಜಾ ಪ್ರಾರಂಭದಲ್ಲಿ ಜಪಿಸಬೇಕು. ಅದರಿಂದ ಪೂಜಾಫಲ ಸಿದ್ಧಿ ಆಗುವುದು.

### ಬ್ರಹ್ಮಪಾರ ಸ್ತೋತ್ರ

ಬ್ರಹ್ಮಪಾರಂ ಮುನೇ ಶ್ರೋತುಂ ಇಚ್ಛಾಮ; ಪರಮಂ ಸ್ತವಮ್ ।
ಜಪತಾ ಕಂಡುನಾ ದೇವೋ ಯೇನಾರಾಧ್ಯತ ಕೇಶವ
ಪಾರಂ ಪರಂ ವಿಷ್ಣುರಪಾರಪಾರಃ
ಪಾರಃ ಪರಾಣಾಂ ಅಪಿ ಪಾರ ಪಾರಃ ॥

ಸಬ್ರಹ್ಮಪಾರಃ ಪರಪಾರಭೂತಃ
ಪರಃ ಪರಾಣಾಂ ಅಪಿ ಪಾರಪಾರಃ ॥

ಸ ಕಾರಣಂ ಕಾರಣ ಸಂಶ್ರಿತೋಽಪಿ
ತಸ್ಯಾಪಿ ಹೇತುಃ ಪರಹೇತು ಹೇತು ॥

ಕಾರ್ಯೋಽಪಿ ಚೈಷ ಸಹ ಕರ್ಮಕತ-
ರೂಪೈರನೇಕೈರವತೀಹ ಸರ್ವಮ್ ॥

ಬ್ರಹ್ಮ ಪ್ರಭುರ್ಬ್ರಹ್ಮ ಸ ಸರ್ವಭೂತೋ
ಬ್ರಹ್ಮ ಪ್ರಜಾನಾಂ ಪತಿರಚ್ಯುತೋಽಸೌ ।
ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣುಃ
ಅಪಕ್ಷಯಾದ್ಯೈರಖಿಲೈರಸಂಗ
ಬ್ರಹ್ಮಾಕ್ಷರಮಜಂ ನಿತ್ಯಂ ಮಥಾಸೌ ಪುರುಷೋತ್ತಮಃ ॥
ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ॥

ಏತದ್ವೈ ಬ್ರಹ್ಮಪಾರಾಖ್ಯಂ ಸಂಸ್ತವಂ ಪರಮಂ ಜಪನ್ ।
ಅವಾಪ ಪರಮಾಂ ಸಿದ್ಧಿಂ ಸ ಸಮಾರಾಧ್ಯ ಕೇಶವಮ್ ॥

**ಪ್ರಚೇತಸರು:-** ಜಪ ಮಾಡತಕ್ಕ ''ಕಂಡು'' ಋಷಿಗಳು ಕಂಡುಕೊಂಡ ಆ ಬ್ರಹ್ಮ ಪಾರಸ್ತೋತ್ರವನ್ನು ಕೇಳಬೇಕೆಂದು ನಮಗೆ ಬಯಕೆಯಾಗಿದೆ. ಯಾವ ಮಂತ್ರದ ಜಪದಿಂದ ಶ್ರೀ ಹರಿಯು ಸುಪ್ರಸನ್ನನಾಗಿರುವನೋ ಅಂಥ ಸ್ತೋತ್ರವು ಎಲ್ಲರಿಗೂ ಜಪಿಸಲು ಯೋಗ್ಯವಾಗಿದೆ ಅದನ್ನು ನಮಗಾಗಿ ತಿಳಿಸಬೇಕು.

**ಸೋಮ:-** ಅಪರಂಪಾರವಾದ ಈ ಸಂಸಾರ ಸಾಗರದಿಂದ ಭಕ್ತರನ್ನು ಆ ಪರಮಾತ್ಮನೇ ಪಾರುಗೊಳಿಸಬಲ್ಲನು. ಅವನು ಶ್ರೇಷ್ಠರಾದ ದೇವಾಧಿದೇವತೆಗಿಂತ ಅತ್ಯಂತ ಶ್ರೇಷ್ಠತಮನು. ಅವನೇ ಪರಮಾರ್ಥ, ಪರಾವರ ಜೀವಿಗಳಿಗೆಲ್ಲ ಪರಗತಿಯನ್ನು ಈಯುವ ಅವನೇ ವೇದರಾಶಿಯ ಕೊನೆಯ ಗುರಿ, ಪರಮಮುಖ್ಯಾರ್ಥ. ಬ್ರಹ್ಮದೇವರ ''ಪರಾರ್ಧ'' ಪೂರ್ಣಾಯುಷ್ಯದ ಅವಸಾನ ಕಾಲದಲ್ಲಿ ನಡೆದ ಬ್ರಹ್ಮ ಪ್ರಳಯದಲ್ಲಿಯೂ ಕೂಡ ಅಪಾರ ಪ್ರಳಯ ಜಲನಿಧಿಯ ನೀರಿನಲ್ಲಿ ಲೀಲೆಯಿಂದ ಪಾರಾಗಿ ಆಲದೆಲೆಯ ಮೇಲೆ ಬಾಲನಾಗಿ ತೇಲಾಡುವ ಧೀರನವನೊಬ್ಬನೇ ಚೇತನ ರಾಶಿಯಲ್ಲಿ ಉತ್ತಮರಿಗೆಲ್ಲ ಅವನು ಅತ್ಯುತ್ತಮ ಶ್ರೇಷ್ಠತೆಯ ತಾರತಮ್ಯ ಶ್ರೇಣಿಯಲ್ಲಿ ಕೊನೆಯ ಮೆಟ್ಟಿಲು ಅವನೇ. ಹಿರಿತನದ ತಾರತಮ್ಯದ ತುದಿ ಅವನು. ಸರ್ವಕ್ಕೂ ಕಾರಣನಾಗಿದ್ದಾನೆ. ನಮಗೆ ಕಾರಣಗಳೆಂದು ತೋರುವ ಎಲ್ಲಕ್ಕೂ ಅವನೇ ಮೂಲಕಾರಣ. ಪ್ರಪಂಚಕ್ಕೆ ಕಾರಣಗಳಾದ ಪಂಚಮಹಾ ಭೂತಗಳಿಗೆ ಮೂಲಕಾರಣವಾದ ಪ್ರಕೃತಿತತ್ವಕ್ಕೂ ಕೂಡ ಅವನೇ ಕಾರಣ ನಾಗಿದ್ದಾನೆ. ಸರ್ವಶ್ರೇಷ್ಠವೂ, ಸರ್ವಕಾರಣವೂ ಆದ ಪ್ರಕೃತ್ಯಭಿಮಾನಿ ಮಹಾಲಕ್ಷ್ಮಿಗೂ ಕೂಡ ಅವನೇ ಮುಖ್ಯ ಕಾರಣನಾಗಿದ್ದಾನೆ. ಉಳಿದೆಲ್ಲ ಕಾರಣಗಳಿಗೆ ಕಾರಣತ್ವವು ಬಂದಿರುವದು ಅವನಿಂದ. ಅದರಂತೆ ಕಾರ್ಯಗಳಲ್ಲೆಲ್ಲ ಅವನು ನೆಲೆಸಿರುವದರಿಂದ ಅವನ ಮಹಿಮೆಯಿಂದ ಅವುಗಳಲ್ಲಿ ಸತ್ತಾಪ್ರತೀತಿಗಳು ಉಂಟಾಗುತ್ತವೆ. ಕಾರ್ಯವಾಗುವದು ಅವನ ದಯೆಯಿಂದ ಕಾರ್ಯದಲ್ಲಿಯೂ, ಕಾರಣದಲ್ಲಿಯೂ ನಿಂತುಕೊಂಡು ತಾನೇ ಕರ್ತೃವೂ ಕರ್ಮವೂ ಆಗಿ ಎಲ್ಲ ಕ್ರಿಯೆಗಳನ್ನೂ ತಾನೇ ಮಾಡಿಸಿ ಜಗದ್ರಕ್ಷೆಯ ಭಾರವನ್ನು ನಿರ್ವಹಿಸುತ್ತಲಿದ್ದಾನೆ ಬ್ರಹ್ಮದೇವರನ್ನು ಅವನೇ ಹುಟ್ಟಿಸಿದನು. ಮತ್ತು ಆ ಬ್ರಹ್ಮದೇವರು ಕಳೆದುಕೊಂಡ ವೇದರಾಶಿಯನ್ನು ಅವರಿಗೆ ಮರಳಿ ತಂದುಕೊಟ್ಟವನೂ ಅವನೇ, ಈ ವಿಶ್ವವನ್ನೆಲ್ಲ ವ್ಯಾಪಿಸಿದ ನಿಜವಾದ ಪರಬ್ರಹ್ಮನೆಂದರೆ ಆ ನಾರಾಯಣನೇ, ಚತುರ್ಮುಖ ಬ್ರಹ್ಮನಲ್ಲಿ ನಿಂತು ಪ್ರಪಂಚವನ್ನೂ, ಪ್ರಜೆಗಳನ್ನು ಸೃಷ್ಟಿಮಾಡಿದವನು ಪರಬ್ರಹ್ಮನೆ. ಅವನು ಸರ್ವಸದ್ಗುಣ ಪರಿಪೂರ್ಣನೂ, ಸರ್ವವಿಧನಾಶರಹಿತನೂ ನಿತ್ಯನೂ ಆಗಿದ್ದು ಅವನ ಜನನ ಜಾಲದಲ್ಲಿ ಸಿಗುವದಿಲ್ಲ. ಸಾವು ಅವನ ಸನಿಹವೂ ಸುಳಿಯದು, ಮೋಹಪಾಶವು ಅವನನ್ನು ಎಳೆಯದು. ''ಇಂಥ ನಿತ್ಯ ಸತ್ಯ ಸ್ವರೂಪನಾದ ಆ ಪರಬ್ರಹ್ಮನಿಗೆ ಅಕ್ಷರಬ್ರಹ್ಮನೆಂದೂ ಕ್ಷರಾಕ್ಷರ ಪುರುಷರಿಂದ ಉತ್ತಮನಾಗಿದ್ದರಿಂದ ಪುರುಷೋತ್ತಮನೆಂದೂ ಹೆಸರು. ಪರಾತ್ಪರ ಪುರುಷೋತ್ತಮ ನಾದ ನಿರ್ದೋಷ ನಾರಾಯಣನ ನಿತ್ಯ ಸ್ಮರಣೆಯಿಂದ ನಮ್ಮಲ್ಲಿ ರಾಗದ್ವೇಷಾದಿ ದೋಷಗಳೆಲ್ಲವೂ ದೂರವಾಗಲಿ.'' ಇಂಥ ಶ್ರೇಷ್ಠವಾದ ಬ್ರಹ್ಮಪಾರಸ್ತೋತ್ರವನ್ನು ಭಕ್ತಿಯಿಂದ ಜಪಿಸಿ ಕಂಡು ಮುನಿಯು ಭಗವಂತನನ್ನು ಒಲಿಸಿ ದಿವ್ಯಸಿದ್ಧಿಯನ್ನು ಪಡೆದನು.

ಕಂಡು ಮುನಿ ಮಾಡುತ್ತಿರುವ ಬ್ರಹ್ಮಪಾರಸ್ತೋತ್ರದಿಂದ ಪುರುಷೋತ್ತಮನು ಪರಮ ಸಂತುಷ್ಟನಾದನು. ಗರುಡಾರೂಢನಾಗಿ ಬಂದು ಅವನಿಗೆ ತನ್ನ ಸಾಕ್ಷಾತ್

ದರ್ಶನವನ್ನು ಇತ್ತು. ಪ್ರೀತ ಪ್ರಸನ್ನನಾಗಿ 'ಬೇಕಾದ ವರ ಬೇಡು' ಎಂದು ಹೇಳಿದನು. ಅಗಸಿಯ ಹೂವಿನಂತೆ ಶ್ಯಾಮ ಸುಂದರನಾದ ಆ ಶ್ರೀಹರಿಯು ತಲೆಯ ಮೇಲೆ ಕಿರೀಟ, ಕೈಗಳಲ್ಲಿ ಶಂಖಚಕ್ರಗಳು, ಕೊರಳಲ್ಲಿ ವನಮಾಲೆ, ಕಟಿಯಲ್ಲಿ ಪೀತಾಂಬರವನ್ನು ಧರಿಸಿ ಸರ್ವಲಕ್ಷಣ ಸಂಪನ್ನನಾಗಿ ಶೋಭಿಸುತ್ತಿದ್ದ ಆ ಭಗವಂತನ ದಿವ್ಯ ದರ್ಶನದಿಂದ ಕಂಡು ರೋಮಾಂಚ ಕಂಚುಕಿತನಾದ. ಭೂಮಿಯಲ್ಲಿ ಸಾಷ್ಟಾಂಗ ಪ್ರಣಾಮ ಮಾಡಿದ. ವೇದ ವೇದಾಂತಗಳ ಅರ್ಥ ಗರ್ಭಿತವಾದ ಮಾತಿನಲ್ಲಿ ಭಕ್ತಿಯಿಂದ ಸ್ತೋತ್ರವನ್ನು ಮಾಡಿದ.

ನಾರಾಯಣ ಹರೇ ಕೃಷ್ಣ ಶ್ರೀವತ್ಸಾಂಕ ಜಗತ್ಪತೇ
ಜಗದ್ಬೀಜ ಜಗದ್ಧಾಮ ಜಗತ್ಸಾಕ್ಷಿನ್ ನಮೋಸ್ತು ತೇ ॥

ಅವ್ಯಕ್ತ ವಿಷ್ಣೋ ಪ್ರಭವ ಪ್ರಧಾನ ಪುರುಷೋತ್ತಮ
ಪುಂಡರೀಕಾಕ್ಷ ಗೋವಿಂದ ಲೋಕನಾಥ ನಮೋಸ್ತು ತೇ ॥

ವಾಸುದೇವ ನಮಸ್ತೇಸ್ತು ಸುರೋತ್ತಮ ನಮೋ ನಮಃ
ಜನಾರ್ದನ ನಮಸ್ತೇಸ್ತು ನಮಸ್ತೆಸ್ತು ಸನಾತನ ॥

ನಮಸ್ತೇ ಮಧುಹಂತ್ರೇ ಚ ನಮಸ್ತೇ ಪುಷ್ಕರೆಕ್ಷಣ
ಕೈಟಾಭಗ್ನ ನಮಸ್ತೇ ಸುಬ್ರಮಣ್ಯ ನಮೋಸ್ತು ತೇ ॥

ನಮೋಚಿಂತಾಯ ಸೂಕ್ಷ್ಮಾಯ ಮುಖ್ಯಾಯಚ ವರಾಯಚ
ಪರಮಾಣು ಸ್ವರೂಪಾಯ ಯೋಗಿ ಗಮ್ಯಾಯ ತೇ ನಮಃ ॥

ಹೀಗೆ ಪರಿಪರಿಯಿಂದ ಭಗವಂತನನ್ನು ಸ್ತೋತ್ರಮಾಡಿದ ಬಳಿಕ ಪ್ರೀತನಾದ ಆ ಪರಮಾತ್ಮನು 'ನಿನಗೆ ಬೇಕಾದುದನ್ನು ಬೇಡಿಕೊ' ಎಂದು ಮತ್ತೆ ಹೇಳಿದನು. ಆಗ ಕಂಡು ಮುನಿಯು ಕೈಜೋಡಿಸಿ ವಿನಯದಿಂದ ಆ ವಿಷ್ಣುವನ್ನು ವಂದಿಸಿ, ''ಜಗನ್ನಾಥ, ಈ ಸಂಸಾರವು ಅನಿತ್ಯ. ಇದನ್ನು ದಾಟುವುದು ಬಹಳ ಕಷ್ಟ, ಇದು ದುಃಖಮಯ. ಗಾಳಿಗೆ ಹೊಯ್ದಾಡುವ ಬಾಳೆಯ ಎಲೆಯಂತೆ ಚಂಚಲ, ಮಾನವನ ಬದುಕು ತಾವರೆಯ ಎಲೆಯ ಮೇಲೆ ತೋಯದ ಬಿಂದುವಿನಂತೆ ಕ್ಷಣಿಕ ಮತ್ತು ನಶ್ವರ. ಈ ಸಂಸಾರ ಅಪಾರ ಮತ್ತು ಭೀಕರ. ಈ ಸಂಸಾರದಲ್ಲಿ ನಾನು ಬಹುಕಾಲ ಮಾಯಾ ಜಾಲಕ್ಕೆ ಒಳಗಾಗಿ ಅನೇಕ ಯೋನಿಗಳಲ್ಲಿ ಭ್ರಮಿಸಿದೆನು. ಕಾಮಿನಿ, ಕಾಂಚನ, ಮನೆ, ಅಧಿಕಾರ ಮುಂತಾದ ಆಶಾಪಾಶಗಳಲ್ಲಿ ಬಿದ್ದು, ಆ ಕ್ಷಣಿಕ ಸುಖವನ್ನೇ ಪರಮ ಸುಖವೆಂದು ಬಗೆದು ಈ ಸಂಸಾರ ಶರಧಿಯಲ್ಲಿ ದಡಕಾಣದೆ ತೇಲಾಡುತ್ತಿದ್ದೇನೆ. ಈ ಭವಾಟವಿಯಲ್ಲಿ ಭಯ ಭ್ರಾಂತನಾಗಿ ತಿರುಗುತ್ತಿರುವ ನಾನು ನಿನ್ನ ಚರಣಕ್ಕೆ ಶರಣು ಬಂದಿದ್ದೇನೆ. ಈ ಸಂಸಾರ ಸಾಗರದಿಂದ ನನ್ನನ್ನು ಉದ್ಧಾರ ಮಾಡು. ಪುನಃ ಈ ಪ್ರಪಂಚಕ್ಕೆ ಮರಳಿ ಬಾರದಂತೆ ಮೋಕ್ಷಪದವಿ ಇತ್ತು ನಿನ್ನ ಸಮೀಪಕ್ಕೆ ನನ್ನನ್ನು ಕರೆದುಕೊ''. ಎಂದು ಭಕ್ತಿ ಭಾರಭರಿತನಾಗಿ ಬೇಡಿಕೊಂಡನು.

ಆಗ ಪುರುಷೋತ್ತಮ ಕ್ಷೇತ್ರದಲ್ಲಿ ನಿರಂತರವಾಗಿ ನೆಲೆನಿಂತ ಆ ನಾರಾಯಣನು ಕಂಡು ಮುನಿಗೆ ಹೇಳಿದ. ''ಮುನಿಶ್ರೇಷ್ಠ, ನೀನು ನನ್ನ ಏಕಾಂತ ಭಕ್ತ. ಈ ಪುರುಷೋತ್ತಮ ಕ್ಷೇತ್ರದಲ್ಲಿ ಸುಪ್ರತಿಷ್ಠಿತನಾದ ನನ್ನನ್ನು ನೀನು ಭಕ್ತಿಯಿಂದ ಪೂಜಿಸಿದರೆ, ನನ್ನ ಅತ್ಯರ್ಥ ಪ್ರಸಾದವನ್ನು ಅದರಿಂದ ಮೋಕ್ಷವನ್ನು ಪಡೆಯುವೆ. ನನ್ನನ್ನು ಕ್ಷತ್ರಿಯ ವೈಶ್ಯ ಸ್ತ್ರೀ ಶೂದ್ರ

ಅಥವಾ ನಾಯಿಮಾಂಸ ತಿನ್ನುವ ಚಂಡಾಲ, ಯಾರೇಆಗಲಿ ನನ್ನನ್ನು ಭಕ್ತಿಯಿಂದ ಆರಾಧಿಸಿ, ಅರ್ಚಿಸಿ, ಪೂಜಿಸಿ, ಪ್ರಾರ್ಥಿಸಿ ಸೇವೆ ಮಾಡಿದರೆ ಅವರಿಗೆ ನನ್ನ ಪ್ರಸಾದದಿಂದ ಸಿದ್ಧಿಯು, ಸಮೃದ್ಧಿಯು ಪ್ರಾಪ್ತವಾಗುವುದು. ನೀನಂತೂ ಬ್ರಾಹ್ಮಣ, ಮೇಲೆ ಮುನಿ. ನನ್ನ ಏಕಾಂತ ಭಕ್ತ ನಿನಗೆ ಪ್ರಸನ್ನನಾದ ನಾನು ಬೇಡಿದ್ದನ್ನೆಲ್ಲ ಕೊಟ್ಟು ಅನುಗ್ರಹಿಸಿದ್ದೇನೆ.'' ಹೀಗೆ ಹೇಳಿ ಆ ಪುರುಷೋತ್ತಮನು ಅಂತರ್ಹಿತನಾದ. ಅಂದಿನಿಂದ ಆ ಪುರುಷೋತ್ತಮ ಕ್ಷೇತ್ರವು ಮೋಕ್ಷ ಕ್ಷೇತ್ರ ಎಂದು ಪ್ರಖ್ಯಾತವಾಯಿತು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—○—

## ಅಥಾತೋ ವಿಷ್ಣುಜಿಜ್ಞಾಸಾ

## ಅಧ್ಯಾಯ - ೪೦

**ಸೂತ:-** ಭಗವಾನ್ ಶ್ರೀವೇದವ್ಯಾಸ ದೇವರು ಪುರುಷೋತ್ತಮ ಕ್ಷೇತ್ರದ ಬಣ್ಣನೆ ಮಾಡಿದುದನ್ನು ಕೇಳಿ, ಶ್ರಾವಕರಾದ ಋಷಿ ಮುನಿಗಳಿಗೆಲ್ಲ ಪರಮ ಸಂತೋಷವಾಯಿತು. ಆದರೆ ಅವರಿಗೆ ಇನ್ನು ಆ ಕ್ಷೇತ್ರದ ಬಗ್ಗೆ ಮತ್ತು ಆ ಭಗವಂತನ ಬಗೆಗೆ ಕೇಳಬೇಕೆಂಬ ಕುತೂಹಲ. ಅದರ ಜೊತೆಗೆ ಅವರ ಮನಸ್ಸಿನಲ್ಲಿ ಎಂದಿನಿಂದಲೂ ಸಮಸ್ಯೆಯಾಗಿ ಒಂದು ಸಂಶಯ ಕಾಡುತ್ತಿತ್ತು. ಜಗಜ್ಜನ್ಮಾದಿ ಕಾರಣನಾದ ಮತ್ತು ಪರಾತ್ಪರ ಪರಂಜ್ಯೋತಿ ಸ್ವರೂಪನಾದ ಶ್ರೀವಿಷ್ಣುವು ಈ ಭೂಮಿಯಲ್ಲಿ ತನ್ನ ಅಣ್ಣ ಬಲರಾಮ, ತಂಗಿ ಸುಭದ್ರೆಯೊಂದಿಗೆ ಏಕೆ ಹುಟ್ಟಿದ? ಅದರಲ್ಲಿಯೂ ನಂದಗೋಕುಲದಲ್ಲಿ ಹುಟ್ಟಲು ಕಾರಣವೇನು? ಅವರು ಮಾಡಿದ ಅದ್ಭುತ ಕರ್ಮಗಳು ಯಾವುವು? ಅವನು ಆವು ಗೋವುಗಳನ್ನು ರಕ್ಷಿಸುವ ದನಕಾಯುವ ಗೋಪಾಲ ಕುಲದಲ್ಲಿ ಹುಟ್ಟಿದ್ದೇಕೆ? ಆ ಶ್ರೀಹರಿ ಯೇನು ಸಾಮಾನ್ಯನೆ? ಪ್ರಳಯ ಕಾಲದಲ್ಲಿ ಈ ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲ ಸಂಹರಿಸಿ ತನ್ನ ಕಕ್ಷೆಯಲ್ಲಿ ಇಟ್ಟುಕೊಂಡು ಆ ಸಮುದ್ರ ಜಲದಲ್ಲಿ ಶಯನ ಮಾಡುವನು.

ಅನಂತರ ಅವನ ಹೊಕ್ಕಳದ ಹೊಂದಾವರೆಯಿಂದ ನಾಲ್ಕು ಮುಖದ ಒಂದು ಸುಂದರ ಮಗು ಜನಿಸಿತು. ಅದೇ ಚತುರ್ಮುಖ ಬ್ರಹ್ಮ. ವಿಷ್ಣುವಿನ ಆದೇಶದಿಂದ ಆ ಬ್ರಹ್ಮನು ಪಂಚಭೂತಾತ್ಮಕವಾದ ಪ್ರಪಂಚವನ್ನೆಲ್ಲ ಸೃಷ್ಟಿ ಮಾಡಿದ. ಹಿರಣ್ಯಾಕ್ಷ ಎಂಬ ದೈತ್ಯನು ಭೂಮಿಯನ್ನು ಕದ್ದು ಪಾತಾಳದಲ್ಲಿ ಅವಿತು ಕೊಂಡಾಗ ಆ ವಿಷ್ಣುವು ವರಾಹ ರೂಪವನ್ನು ಧರಿಸಿ ತನ್ನ ಕೋರೆದಾಡೆಯ ಮೇಲೆ ಭೂಮಂಡಲವನ್ನು ಎತ್ತಿ ತಂದು ಭೂಮಿಯನ್ನು ಉದ್ಧರಿಸಿದನು. ಅರ್ಧಸಿಂಹ ಅರ್ಧಮಾನವ ಸಂಯುಕ್ತ ಶರೀರವುಳ್ಳ ನರಸಿಂಹಾವತಾರ ಮಾಡಿ ಹಿರಣ್ಯಕಶ್ಯಪುವನ್ನು ಸಂಹರಿಸಿದನು.

ತನ್ನನ್ನು ಬಹುಕಾಲ ಆರಾಧಿಸಿದ ಅದಿತಿ ಕಶ್ಯಪ ದಂಪತಿಗಳಿಂದ ವಾಮನರೂಪಿಯಾಗಿ ಹುಟ್ಟಿ ಬಲಿ ಚಕ್ರವರ್ತಿಯಿಂದ ಮೂರು ಪಾದ ಭೂಮಿಯನ್ನು ಬೇಡಿ ಪಡೆದನು. ಅನಂತರ ಯೋಗ ಮಹಿಮೆಯಿಂದ ತ್ರಿವಿಕ್ರಮ ಎಂಬ ವಿರಾಟರೂಪವನ್ನು ತೆಗೆದುಕೊಂಡು ಮೂರು ಲೋಕವನ್ನು ಅಳೆದುಕೊಂಡು, ದೇವೇಂದ್ರನ ಪದಚ್ಯುತಿಗೆ ಕಾರಣನಾದ ಬಲಿಯನ್ನು ಮೆಟ್ಟಿ ಪಾತಾಳಕ್ಕೆ ತುಳಿದನು. ಅನಂತರ ಇಂದ್ರನನ್ನೆ ದೇವತೆಗಳಿಗೆಲ್ಲ ಅಧೀಶ್ವರನನ್ನಾಗಿ ಮಾಡಿ, ಸ್ವರ್ಗಸಿಂಹಾಸನದಲ್ಲಿ ಕೂಡಿಸಿದನು. ಆ ಮಹಾವಿಷ್ಣುವು ಗಾರ್ಹಪತ್ಯ ವಿಧಿಯನ್ನು

ಅನುಸರಿಸಿ, ಅನ್ವಾಹಾರ ಎಂಬ ಕರ್ಮದಿಂದ ಅಗ್ನಿಕಾರ್ಯವು ನೆರವೇರುವಂತೆ ಮಾಡಿದನು. ಆಹವನೀಯ ಅಗ್ನಿಯನ್ನು, ವೇದವನ್ನು, ದೀಕ್ಷೆಯನ್ನು, ಪ್ರೋಕ್ಷಣೀಪಾತ್ರಸ್ರುವ, ಇತರ ಯಜ್ಞಪಾತ್ರೆ, ಮತ್ತು ಚರೂ, ಉಲುಖಿಲ, ಯಜ್ಞಕಂಭ, ಸಮಿಧೆ, ಸ್ರುವ, ಸೋಮ, ಪವಿತ್ರ, ಪರಿಧಿ ಮುಂತಾದ ಯಜ್ಞಕ್ಕೆಬೇಕಾದ ಸಾಧನ ಸಲಕರಣೆಯನ್ನೆಲ್ಲ ಅವನೇ ಯಜ್ಞಕ್ಕಾಗಿ ನಿರ್ಮಿಸಿದನು. ದೇವತೆಗಳು ಹವಿರ್ಭಾಗವನ್ನು ಭಕ್ಷಿಸುವಂತೆ ಮಾಡಿ, ಯಜ್ಞ ಯಾಗಗಳಿಂದ ಸುರಸ್ತೋಮಕ್ಕೆಲ್ಲ ಭೋಗವುಂಟಾಗುವಂತೆ ಯಜ್ಞಕರ್ಮವನ್ನು ಸೃಷ್ಟಿಸಿದನು. ಯಜ್ಞಕ್ಕೆ ಬೇಕಾದ ಚಮಸ ಮೊದಲಾದ ಸಾಮಾನುಗಳನ್ನೂ, ಋತ್ವಿಜರನ್ನು, ಯಜಮಾನರನ್ನು ಸಮಿಧೆ ಮೊದಲಾದವುಗಳನ್ನು ಅವನೆ ಸೃಷ್ಟಿಮಾಡಿದನು. ಅದರಿಂದ ಆ ಪುರುಷನಾದ ಪರಮಾತ್ಮನಿಗೆ ಯಜ್ಞಪುರುಷ ಎಂದೇ ಹೆಸರಾಯಿತು.

ಕಾಲವನ್ನು ಕ್ಷಣ, ನಿಮಿಷ, ಕಾಷ್ಠ ಎಂಬ ಮೂರು ಬಗೆಯಾಗಿ ವಿಭಾಗಮಾಡಿದವನು ಅವನೇ, ಮುಹೂರ್ತ, ತಿಥಿ, ಮಾಸ, ದಿವಸ, ಸಂವತ್ಸರ, ಋತು ಇವೆಲ್ಲವುಗಳನ್ನು ಕಾಲಯೋಗಕ್ಕೆ ಅನುಸಾರವಾಗಿ ಅವನೆ ನಿರ್ಮಿಸಿದನು. ಪ್ರತ್ಯಕ್ಷ್ಯ ಅನುಮಾನ, ಉಪಮಾನ ಎಂಬ ಮೂರು ಪ್ರಮಾಣಗಳನ್ನು ಆ ಭಗವಂತನು ನಿರ್ಮಿಸಿದನು. ಭೂಮಿ ಸ್ವರ್ಗ ಪಾತಾಳ ಎಂಬ ಮೂರು ಲೋಕಗಳನ್ನು ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಮೂರು ದೇವತೆಗಳನ್ನು, ದಕ್ಷಿಣಾಗ್ನಿ, ಗಾರ್ಹಪತ್ಯಾಗ್ನಿ, ಆಹವನೀಯ ಅಗ್ನಿ ಎಂಬ ಮೂರು ಅಗ್ನಿಗಳನ್ನು ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಎಂಬ ಮೂರು ಕಾಲಗಳನ್ನು ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳನ್ನು ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಕರ್ಮಗಳನ್ನು ಆ ಪರಮಾತ್ಮನೆ ಸೃಷ್ಟಿಸಿದ. ಪರಮ ಪುರುಷನಾದ ಆ ವಿಶ್ವಂಭರನೆ ಧರ್ಮವನ್ನು ತಿಳಿದು, ವೇದದ ಮರ್ಮವನ್ನು ಅರಿತು, ಸದಾಚಾರ ಸದ್ಗುಣ ಸಂಪನ್ನರಾದ ಸಾತ್ವಿಕರಿಗೆ ಮೋಕ್ಷವನ್ನು, ಪಾಪಿಗಳಿಗೆ ನರಕವನ್ನು ಕೊಡುವನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಾಲ್ಕು ವರ್ಣಗಳ ನಿರ್ಮಾತನು ಅವನೆ. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸಗಳೆಂಬ ನಾಲ್ಕು ಆಶ್ರಮಗಳಿಗೆ ಅವನೇ ಆಶ್ರಯ. ಚಂದ್ರ, ಸೂರ್ಯ, ಗ್ರಹ, ನಕ್ಷತ್ರ, ನೀಹಾರಿಕೆ ಮುಂತಾದ ಜ್ಯೋತಿರ್ಮಯನಾದ ಪರಂಜ್ಯೋತಿ ಸ್ವರೂಪನಾದ ಆ ಶ್ರೀಹರಿಯೇ ದ್ವಾದಶ ಆದಿತ್ಯರಿಗೆ ಅಧಿಪತಿ. ದೈತ್ಯರಿಗೆ ನಾಶಕ. ಯುಗಾಂತ್ಯದಲ್ಲಿ ಎಲ್ಲರಿಗೂ ಅಂತಕ. ಪ್ರಳಯಕಾಲ ಬಂದಾಗ ಅವನು ಅಂತಕನಾದ ಯಮಧರ್ಮನಿಗೂ ಹಂತಕನಾಗಿ ಅಂತಕಾಂತಕ ಎನಿಸುವನು. ಸಂಸಾರ ಎಂಬ ಸಮುದ್ರಕ್ಕೆ ಅವನೇ ಸೇತು. ಮೋಕ್ಷಕ್ಕೆ ಹೇತು. ಪವಿತ್ರಗಳಿಗೆಲ್ಲ ಪವಿತ್ರ. ಜ್ಞಾನಿಗಳಲ್ಲಿ ಪರಮಜ್ಞಾನಿ. ಪ್ರಭಾವಶಾಲಿಗಳಿಗೆಲ್ಲ ಮಹಾಪ್ರಭು. ಸೌಮ್ಯ ವಸ್ತುಗಳಲ್ಲಿ ಚಂದ್ರನಂತೆ ಆಹ್ಲಾದಕಾರಿ. ತೇಜಸ್ವಿಗಳಲ್ಲಿ ಅಗ್ನಿಸ್ವರೂಪ.

ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ ಹುಟ್ಟುವವು. ಈ ಆಕಾಶ, ಅಗ್ನಿ, ಪ್ರಾಣವಾಯು, ಪೃಥ್ವಿ, ಜಲ ಎಲ್ಲವೂ ಆ ಮಧುಸೂದನ ರೂಪಿಯಾದ ಭಗವಂತ ನಿಂದಲೇ ಸಂಸೃಷ್ಟ. ಆಹಾರವನ್ನು ಭಕ್ಷಿಸುವುದರಿಂದ ರಕ್ತವು ಉಂಟಾಗುವುದು. ರಕ್ತದಿಂದ ಮಾಂಸ, ಮಾಂಸದಿಂದ ಮೇದಸ್ಸು, ಮೇದಸ್ಸಿನಿಂದ ಮೂಳೆಗಳು. ಮೂಳೆಯಿಂದ ಮಜ್ಜೆ, ಮಜ್ಜೆಯಿಂದ ವೀರ್ಯ, ಆ ವೀರ್ಯದಿಂದ ಗರ್ಭವು ಉಂಟಾಗುವುದು. ಇದೆಲ್ಲದಕ್ಕೂ ರಸ ಪ್ರಧಾನವಾದ ರಕ್ತವೇ ಕಾರಣ. ಗರ್ಭದಲ್ಲಿ ನೀರಿನ ಸಂಬಂಧವಾದುದು ಮೊದಲನೆ ಭಾಗ. ಇದಕ್ಕೆ ಸೌಮ್ಯರಾಶಿ ಎನ್ನುವರು. ಆ ಗರ್ಭದಲ್ಲಿ

ಅಗ್ನಿ ಸಂಬಂಧ ಆದುದು ಎರಡನೆಯ ರಾಶಿ. ವೀರ್ಯವು ಚಂದ್ರಾತ್ಮಕವಾಗಿಯೂ, ರಜಸ್ಸು ಅಗ್ನ್ಯಾತ್ಮಕವಾಗಿಯೂ ಇರುವುದು. ವೀರ್ಯವು ಕಫ ಸಂಬಂಧ ಪ್ರಧಾನವಾದುದು. ಪಿತ್ತ ಸಂಬಂಧದಿಂದ ರಕ್ತ. ಕಫವು ಹೃದಯದಲ್ಲಿ ಇರುವುದು. ನಾಭಿಯಲ್ಲಿ ಪಿತ್ತ ಇರುವುದು. ಹೃದಯವು ದೇಹದ ಮಧ್ಯಭಾಗದಲ್ಲಿ ಇರುವುದು. ಅಲ್ಲಿಯೇ ಮನಸ್ಸು ಸಹ ಇರುವುದು. ನಾಭಿ ಮತ್ತು ಕೋಷ್ಠಗಳ ಮಧ್ಯಭಾಗದಲ್ಲಿ ಅಗ್ನಿ ಇರುವನು. ಪ್ರಜಾಪತಿಯು ಮನಸ್ಸಿನ ದೇವತೆ. ಕಫಕ್ಕೆ ಚಂದ್ರನು ದೇವತೆ. ಪಿತ್ತವು ಅಗ್ನ್ಯಾತ್ಮಕವಾಗಿದೆ. ಚಂದ್ರ ಅಗ್ನಿಗಳ ಮಧುರ ಸಂಬಂಧದಿಂದ ಉದ್ಭವಿಸಿದೆ. ಈ ಪ್ರಪಂಚ. ಈ ರೀತಿಯಾಗಿ ಸಾವಿರಾರು ಗರ್ಭಗಳು ಉಂಟಾಗುತ್ತಿರಲು ಆ ಗರ್ಭಗಳಲ್ಲಿ ಪರಮಾತ್ಮನ ಪ್ರೇರಣೆಯಿಂದ ವಾಯು ಸಂಚಾರವಾಗುವುದು. ವಾಯು ಐದು ಬಗೆಯಾಗಿದೆ. ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂದು ಪ್ರಾಣ ವಾಯುವು ಪರಮಾತ್ಮನ ಸುತ್ತಲೂ ಆವರಿಸಿಕೊಂಡು ಅವನ ಪರಿಚರ್ಯೆಯನ್ನು ಮಾಡುತ್ತ ಅವನ ಪ್ರೇರಣೆಗಾಗಿ ಕಾದುಕೊಂಡಿರುತ್ತದೆ. ಅಪಾನ ವಾಯುವು ಶರೀರದ ಪಶ್ಚಿಮ ಭಾಗದಲ್ಲಿ ಸಂಚರಿಸುತ್ತದೆ. ಉದಾನ ವಾಯುವು ಶರೀರದ ಅರ್ಧಭಾಗದಲ್ಲಿ ಸಂಚರಿಸುತ್ತದೆ. ವ್ಯಾನವು ಶರೀರವನ್ನೆಲ್ಲ ಆಕ್ರಮಿಸಿರುತ್ತದೆ. ಸಮಾನ ವಾಯುವಿನ ಸಂಚಾರ ಕಂಠ ಪ್ರದೇಶದಲ್ಲಿ ಪೃಥ್ವಿ, ವಾಯು, ಆಕಾಶ, ಅಗ್ನಿ, ಜಲ ಇವೇ ಪಂಚಮಹಾಭೂತಗಳು, ಗರ್ಭವು ಪಂಚ ಭೂತಾತ್ಮಕವಾದುದು. ಈ ಪಂಚಮಹಾ ಭೂತಗಳು ಪ್ರಾಣಿಗಳಲ್ಲಿ ಹತ್ತು ಇಂದ್ರಿಯಗಳಲ್ಲಿ ಸೇರಿಕೊಂಡು ತಮ್ಮ ತಮ್ಮ ಸ್ಥಾನಗಳನ್ನು ಅವಲಂಬಿಸಿಕೊಳ್ಳುವವು. ಪಾರ್ಥಿವ ಭಾಗವು ಶರೀರವನ್ನು ವಾಯುವಿನ ಭಾಗವೂ ಶರೀರವನ್ನು ಸೇರಿಕೊಳ್ಳುವವು.

ಆಕಾಶಯೋನಿಗಳಿಂದ ಛಿದ್ರಗಳು ನೀರಿನಿಂದ ಸ್ರಾವವು ಜ್ಯೋತಿಯಿಂದ ಚಕ್ಷುಸು, ತೇಜಸ್ಸು ಉತ್ಪನ್ನವಾಗುವವು. ಇವುಗಳಿಗೆಲ್ಲ ಮನಸ್ಸೆ ಆತ್ಮಸ್ವರೂಪ. ಮಾನವರ ಪಂಚ ಕರ್ಮೇಂದ್ರಿಯ ಪಂಚ ಜ್ಞಾನೇಂದ್ರಿಯ ಹಾಗೂ ಪ್ರಕೃತಿಯ ಗುಣತ್ರಯದಿಂದ ರೂಪಗೊಂಡ ಪಂಚ ಮಹಾಭೂತಗಳು ಹಾಗೂ ಪಂಚತನ್ಮಾತ್ರೆಗಳು, ಮನಸ್ಸು, ಚಿತ್ತ, ಬುದ್ಧಿ ಅಹಂಕಾರ ಮೊದಲಾಗಿ ಒಟ್ಟು ಇಪ್ಪತ್ನಾಲ್ಕು ತತ್ವಗಳಿಗೆ ತತ್ವಾಭಿಮಾನಿಗಳಾದ ದೇವತೆಗಳು ನಿಯಾಮಕರಾಗಿದ್ದಾರೆ. ಆ ದೇವತೆಗಳಿಗೆಲ್ಲ ನಿಯಾಮಕ ಸಾಕ್ಷಾತ್ ಶ್ರೀಹರಿ ಅವನೇ ಚರಾಚರ ಪ್ರಪಂಚದ ನಿರ್ಮಾಪಕ ಸಂರಕ್ಷಕ ಮತ್ತು ಸಂಹಾರಕ. ಅವನಿಗೆ ಪರಬ್ರಹ್ಮ ನಾರಾಯಣ, ಪುರುಷೋತ್ತಮ, ವಾಸುದೇವ ಮುಂತಾದ ಹೆಸರುಗಳು.

## ದೇವೋತ್ತಮನು ದನಗಾಹಿ ಆದುದು ಏಕೆ?

ಏವಂ ಗುಣವಿಶೇಷಣ ವಿಶಿಷ್ಟನಾದ, ಮಹತೋಮಹೀಯನೂ, ಅಣೋರಣೀ ಯನೂ ಆದ ಆ ಪರಬ್ರಹ್ಮನು ಈ ನಶ್ವರವಾದ ಭೂಲೋಕದಲ್ಲಿ ಮನುಷ್ಯನಾಗಿ, ಮಗು ವಾಗಿ, ದನಗಾಹಿಯಾಗಿ ಹುಟ್ಟಿದ್ದು ಹೇಗೆ? ಅವತರಿಸಿದ್ದು ಏಕೆ? ಇದಕ್ಕೆ ಕಾರಣ ಏನು? ದೇವತೆಗಳಲ್ಲಿ ವೈಕುಂಠನೆಂದೂ, ಮನುಷ್ಯರಲ್ಲಿ ಕೃಷ್ಣನೆಂದೂ ಅವನಿಗೆ ಹೆಸರು ಇದೆ. ಅವನು ಅಪೇಕ್ಷೆ ಪಟ್ಟರೆ ಮೋಕ್ಷವನ್ನು ಕೊಡಬಲ್ಲ. ವಸ್ತುತಸ್ತು ಮೋಕ್ಷವನ್ನು ಅವನೊಬ್ಬನೆ ಕೊಡಬಲ್ಲ. ಅವನ ಹೊರತು ಮಿಕ್ಕ ಯಾವ ದೇವತೆಗಳಿಗೂ ಮೋಕ್ಷವನ್ನು ಕೊಡುವ ಅಧಿಕಾರವಿಲ್ಲ.

ಈ ಅಖಂಡ ಬ್ರಹ್ಮಾಂಡವನ್ನು ನಿರ್ಮಿಸಿದ ಬ್ರಹ್ಮನನ್ನು ಹಡೆದವನು ಅವನೆ. ಇಂದ್ರ, ರುದ್ರ, ಧರ್ಮ, ಶುಕ್ರ, ಗುರು, ಮುಂತಾದ ಮುವತ್ತುಮೂರು ಕೋಟಿ ದೇವತೆಗಳಿಗೂ ಅವನೆ ಸೃಷ್ಟಾರ. ದಾನವರಿಗೂ ಮಾನವರಿಗೂ ಅವನೆ ರಕ್ಷಿತಾರ. ಪ್ರಳಯ ಕಾಲದಲ್ಲಿ ಸರ್ವಪ್ರಾಣಿಗಳಿಗೂ ಅವನೆ ಪರಿಹಾರ ಕಾರಣ. ಇಂತಹ ಬ್ರಹ್ಮಾದಿಗಳನ್ನು, ಬ್ರಹ್ಮಾಂಡ ಗಳನ್ನು ನಿರ್ಮಿಸಿದ ಆ ಭಗವಂತನು ಮನುಕುಲದಲ್ಲಿ, ಅದರಲ್ಲಿಯು ವಿಶಿಷ್ಟವಾದ ಯದುಕುಲದಲ್ಲಿಯೂ ಹುಟ್ಟಿದ್ದು ಏಕೆ? ನಮ್ಮ ಈ ಎಲ್ಲ ಪ್ರಶ್ನೆ ಪರಂಪರೆಗೆ ದಯವಿಟ್ಟು ಸರಿಯಾಗಿ ಉತ್ತರಿಸಿರಿ.

## ಧರ್ಮಸಂಸ್ಥಾಪನಾರ್ಥಾಯ

**ವ್ಯಾಸಮಹರ್ಷಿ:-** ದೇವತೆಗಳಿಗೆ ಒಡೆಯನೂ, ಸರ್ವಸಮರ್ಥನೂ ನಾಶರಹಿತನೂ ನಿತ್ಯಸತ್ಯ ಸ್ವರೂಪಿಯೂ ಪುರಾಣಪುರುಷನೂ ಆದ ವಿಷ್ಣುವಿಗೆ ನಮಸ್ಕಾರ ಮಾಡುತ್ತೇನೆ. ಅವನು ಅನಿರುದ್ಧ ಪ್ರದ್ಯುಮ್ನ ಸಂಕರುಷಣ, ವಾಸುದೇವ ಎಂಬ ನಾಲ್ಕು ರೂಪಗಳಿಂದ ಚತುರ್ವ್ಯೂಹಾತ್ಮಕನು ಎನಿಸಿದ್ದಾನೆ. ಅವನಲ್ಲಿ ಸತ್ವ, ರಜಸ್ಸು, ತಮಸ್ಸು ಎಂಬ ಪ್ರಾಕೃತ ಗುಣಗಳು ಇರುವುದಿಲ್ಲ. ಆದುದರಿಂದ ಅವನು ನಿರ್ಗುಣ. ಅವನು ನಿರ್ಗುಣನಾದರೂ ಸರ್ವಗುಣ ಪರಿಪೂರ್ಣ. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನೂ ಜಗತ್ತಿಗೆಲ್ಲ ಆಧಾರಭೂತನೂ, ಎಲ್ಲ ಸೂಕ್ಷ್ಮವಸ್ತುಗಳಿಗಿಂತ ಅತ್ಯಂತ ಸೂಕ್ಷ್ಮನೂ ಸರ್ವಾಂತ ರ್ಯಾಮಿಯೂ ಆದ ಆ ಅಚ್ಯುತ ರೂಪಿ ಪುರುಷೋತ್ತಮನನ್ನು ನಮಸ್ಕರಿಸುತ್ತೇನೆ.

ಹೀಗೆ ಒಂದು ಅರ್ಥದಲ್ಲಿ ನಿರ್ಗುಣನೂ, ಇನ್ನೊಂದು ಅರ್ಥದಲ್ಲಿ ಸಗುಣನೂ ಆದ ಆ ಪರಬ್ರಹ್ಮ ಸ್ವರೂಪನಾದ ನಾರಾಯಣನು ನಾಲ್ಕು ವಿಭಾಗದಿಂದ ಶೋಭಿಸುವನು. ಮೊದಲನೆ ಭಾಗವು ಶುಕ್ಲವರ್ಣ ವಿಶಿಷ್ಟವಾಗಿದೆ. ಅದು ಪರಿಶುದ್ಧ ವರ್ಣನಾತೀತ. ಅದಕ್ಕೆ ವಾಸುದೇವಮೂರ್ತಿ ಎಂದು ಕರೆಯುವರು. ಮಮಕಾರ ರಹಿತವಾದ ಆ ಮೂರ್ತಿಯ ಅಂಗಾಂಗಗಳೆಲ್ಲವು ಜ್ವಾಲಾಮೂಲೆಗಳಿಂದ ಪರಿಮಂಡಿತ.

ಎರಡನೇ ಭಾಗವೇ ಶೇಷಾತ್ಮಕ. ಅದಕ್ಕೆ ಸಂಕರ್ಷಣ ಎಂದು ಕರೆಯುತ್ತಾರೆ. ಹದಿನಾಲ್ಕು ಲೋಕಗಳನ್ನೆಲ್ಲ ಹೆಡೆಯಮೇಲೆ ಹೊತ್ತುನಿಂತ ಆ ಭಾಗಕ್ಕೆ ತಾಮಸಿ ಎಂದು ಹೆಸರಿರುವುದು. ಅದು ತಿರ್ಯಗ್ಗ ಜಾತಿಗೆ ಸೇರಿದ್ದು.

ಮೂರನೆ ಭಾಗವು ಸತ್ವಗುಣ ಪ್ರಧಾನವಾಗಿ ಪ್ರಜೆಗಳನ್ನು ರಕ್ಷಿಸುವುದರಲ್ಲಿ ಆಸಕ್ತ ವಾಗಿರುವುದು. ಲೋಕದಲ್ಲಿ ಧರ್ಮಪ್ರಚಾರವಾಗುವುದು ಪ್ರದ್ಯುಮ್ನನಾಮಕವಾದ ಈ ತೃತೀಯ ಭಾಗದಿಂದಲೆ. ನಾಲ್ಕನೆಯ ಭಾಗವು ರಜೋಗುಣ ಪ್ರಧಾನವಾಗಿದ್ದು, ಜಲಮಧ್ಯದಲ್ಲಿ ಆದಿಶೇಷನನ್ನು ಹಾಸಿಗೆಯನ್ನಾಗಿ ಮಾಡಿಕೊಂಡು ಪವಡಿಸಿರುವುದು.

ಚತುರ್ಮೂರ್ತ್ಯಾತ್ಮಕನಾದ ಮಹಾವಿಷ್ಣುವು ಧರ್ಮವನ್ನು ಧ್ವಂಸಮಾಡುವ ದುಷ್ಟ ರಾಕ್ಷಸರನ್ನೆಲ್ಲ ದಮನ ಮಾಡುವನು. ಧರ್ಮಧ್ವಜವನ್ನು ಎತ್ತಿ ಹಿಡಿದು ದೇವತೆಗಳನ್ನೂ, ಗಂಧರ್ವರನ್ನೂ, ಋಷಿಮುನಿಗಳನ್ನೂ, ಕರುಣೆಯಿಂದ ಕಾಪಾಡುವನು. ಧರ್ಮಕ್ಕೆ ಅಪಾ ಯವು ಒದಗಿದಾಗ ಆ ಭಗವಂತನಾದ ಮಹಾವಿಷ್ಣುವು ಧರ್ಮವನ್ನು ಉದ್ಧಾರ ಮಾಡಲು ಅನೇಕ ಅವತಾರಗಳನ್ನು ಎತ್ತಿ, ದುಷ್ಟ ಶಿಕ್ಷಣವನ್ನೂ, ಶಿಷ್ಟ ರಕ್ಷಣವನ್ನೂ ಮಾಡುವನು.

ಹಿಂದೆ ನೀರಿನಲ್ಲಿ ಸಮುದ್ರದ ಆಳದಲ್ಲಿ ಮುಳುಗಿದ ಭೂಮಿಯನ್ನು, ವರಾಹ ಅವತಾರವನ್ನು ಮಾಡಿ, ತನ್ನ ಒಂದೇ ದಾಡೆಯಿಂದ ಕನ್ನೈದಿಲೆಯ ಪುಷ್ಪದಂತೆ ಮೇಲಕ್ಕೆ ಎತ್ತಿ ಉದ್ಧಾರ ಮಾಡಿದನು.

ಅರ್ಧ ಮಾನವ, ಅರ್ಧ ಸಿಂಹಗಳ ರೂಪವುಳ್ಳ ನರಸಿಂಹ ಎಂಬ ವಿಚಿತ್ರ ಆಕಾರವನ್ನು ಧರಿಸಿ, ಹಿರಣ್ಯಕಶಿಪುವನ್ನೂ, ವಿಪ್ರಚಿತ್ತಿ ಮೊದಲಾದ ದಾನವರನ್ನೂ ಸಂಹರಿಸಿದ. ವಾಮನ ಅವತಾರ ತಾಳಿ ಬಲಿಚಕ್ರವರ್ತಿಯಿಂದ ಭೂಮಿದಾನ ಪಡೆದು ಮೂರುಲೋಕಗಳನ್ನು ಆಕ್ರಮಿಸಿದನು. ಭೃಗುವಂಶದಲ್ಲಿ ಜಮದಗ್ನಿ ಮುನಿಯ ಹೊಟ್ಟೆಯಿಂದ ಪರಶುರಾಮ ಎಂಬ ಹೆಸರಿನಿಂದ ಅವತರಿಸಿ ಕ್ಷತ್ರಿಯರನ್ನೆಲ್ಲ ಕೊಂದನು. ತನ್ನ ತಂದೆಯನ್ನು ಸಂಹರಿಸಿದ ಕಾರ್ತಿಕೇಯ ಮೊದಲಾದ ಕ್ಷತ್ರಿಯಕುಲದ ರಾಜ ಮಹಾರಾಜರನ್ನೆಲ್ಲ ವಧಿಸಿ, ಪಿತೃವಧಕ್ಕೆ ಪ್ರತೀಕಾರವನ್ನು ಮಾಡಿದನು. ಅತ್ರಿಋಷಿಯ ಮಗನಾಗಿ ದತ್ತಾತ್ರೇಯ ಎಂಬ ಅವತಾರ ಮಾಡಿದನು. ಅಲರ್ಕ ಎಂಬ ಋಷಿಗೆ ಅಷ್ಟಾಂಗ ಯೋಗವನ್ನು ಉಪದೇಶಿಸಿದನು. ದಶರಥನ ಹೊಟ್ಟೆಯಿಂದ ರಾಮನಾಗಿ ಹುಟ್ಟಿ, ಲೋಕಭಯಂಕರನಾದ ರಾವಣನನ್ನು ಸಂಗ್ರಾಮದಲ್ಲಿ ಸಂಹರಿಸಿದನು.

ಇಂಥ ಆ ಪುರುಷೋತ್ತಮನು ಪ್ರಳಯಕಾಲದಲ್ಲಿ ಪ್ರಪಂಚವೆಲ್ಲವು ಜಲಮಯ ವಾಗಿದ್ದಾಗ, ಶೇಷಶಾಯಿಯಾಗಿ ಒಂದು ಸಾವಿರ ವರುಷ ಸಮುದ್ರದಲ್ಲಿ ಶಯನ ಮಾಡುವನು. ಸ್ಥಾವರಜಂಗಮಾತ್ಮಕವಾದ ಚರಾಚರ ಪ್ರಪಂಚವನ್ನೆಲ್ಲ ತನ್ನ ಉದರದಲ್ಲಿ ಅಡಗಿಸಿ ಇಟ್ಟುಕೊಂಡು ಯೋಗನಿದ್ರೆಯನ್ನು ಮಾಡುತ್ತ ತನ್ನ ಮಹಿಮಾತಿಯದಿಂದ ಮೆರೆಯುವನು. ಸಮುದ್ರಶಾಯಿಯಾದ ಆ ಮಹಾವಿಷ್ಣುವಿನ ಹೊಕ್ಕಳದಿಂದ ಒಂದು ಹೊಂದಾವರೆ ಹುಟ್ಟಿತು. ಆ ಪದ್ಮವು ಬ್ರಹ್ಮನಿಗೆ ಮನೆಯಾಯಿತು. ಆ ಕಮಲದಲ್ಲಿ ಬ್ರಹ್ಮನು ಉತ್ಪನ್ನನಾದ ಸಮಯದಲ್ಲಿಯೇ ವಿಷ್ಣುವಿನ ಕಿವಿಯ ಕೊಳೆಯಿಂದ ಮಧು, ಕೈಟಭ ಎಂಬ ಬಲಿಷ್ಠರಾದ ರಾಕ್ಷಸರು ಉತ್ಪನ್ನರಾದರು. ಅವರಿಬ್ಬರು ಬ್ರಹ್ಮನನ್ನು ಕೊಲ್ಲಲು ಹೊರಟಾಗ ವಿಷ್ಣುವು ಸಮುದ್ರದಿಂದ ಎದ್ದು ಅವರಿಬ್ಬರನ್ನು ಸಂಹರಿಸಿದನು. ಆದರಿಂದ ಅವನಿಗೆ ಮಧುಸೂದನ, ಕೈಟಭಾರಿ ಎಂಬ ಹೆಸರುಗಳು ಬಂದವು.

ಇವೇ ಮೊದಲಾದ ಅಸಂಖ್ಯ ಅವತಾರಗಳನ್ನು ಎತ್ತಿ ಪ್ರಜಾಪಾಲನೆಯನ್ನು, ಧರ್ಮ ರಕ್ಷಣೆಯನ್ನೂ ಮಾಡುವ ಮೂಲರೂಪಿ ವಾಸುದೇವನೇ ಈಗ ಮಧುರೆಯಲ್ಲಿ ಯಾದವ ವಂಶದಲ್ಲಿ ಶ್ರೀಕೃಷ್ಣನಾಗಿ ಅವತಾರ ಮಾಡಿದ್ದಾನೆ. ಆ ವಿಷ್ಣುವನ್ನು ಶ್ರದ್ಧೆಯಿಂದ ಪೂಜಿಸಿದರೆ ಅವನು ಇಷ್ಟಾರ್ಥಗಳನ್ನೆಲ್ಲ ಪೂರೈಸುವನು. "ಋಷಿಗಳೇ, ನಾನು ಈ ರೀತಿಯಾಗಿ ನಿಮಗೆ ಮಹಾಪ್ರಭುವಾದ ಮಹಾವಿಷ್ಣುವಿನ ಲೋಕ ಕ್ಷೇಮಕರವಾದ ಹಿಂದಿನ ಅನೇಕ ಅವತಾರಗಳ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸಿದೆನು. ಆ ಜಗದೀಶ್ವರನು ಹಿಂದೆ ದೇವಯೋನಿಯಲ್ಲಿಯೂ, ತಿರ್ಯಗ್‌ಯೋನಿ ಯಲ್ಲಿಯೂ ಬ್ರಾಹ್ಮಣ ಜಾತಿಯಲ್ಲಿಯೂ ಕ್ಷತ್ರಿಯ ಕುಲದಲ್ಲಿಯೂ, ಹುಟ್ಟಿ ಲೋಕ ಕ್ಷೇಮವನ್ನು ಉಂಟುಮಾಡಿದ್ದಾನೆ. ಅದೇ ವಾಸುದೇವ ರೂಪಿಯಾದ ಶ್ರೀಹರಿಯು ಈಗ ಮಾನವನಾಗಿ ಯಾದವ ಕುಲದಲ್ಲಿ ಹುಟ್ಟಿ ಲೋಕೋದ್ಧಾರವನ್ನು ಮಾಡುತ್ತಿದ್ದಾನೆ. ಆ ವಿಷಯವನ್ನು ಹೇಳುತ್ತೇನೆ ಕೇಳಿ."

## ಹರಿಯ ಅಂಶಾವತಾರ

ಮುನಿವರ್ಯರೆ, ಪೂರ್ವಕಾಲದಲ್ಲಿ, ದುಷ್ಟರಾಜರ ಹಾಗೂ ದಾನವರ ಭಾರದಿಂದ ಜರ್ಜರಿತಳಾದ ಭೂದೇವಿಯು ಆ ಭಾರವನ್ನು ತಾಳಲಾರದೆ, ದೇವತೆಗಳ ಸಭೆಯಲ್ಲಿ ಅಧ್ಯಕ್ಷನಾಗಿ ಕುಳಿತುಕೊಂಡ ಬ್ರಹ್ಮದೇವನಲ್ಲಿ ಮೊರೆಯಿಟ್ಟಳು. ಮತ್ತು ದೀನಳಾಗಿ ಪ್ರಾರ್ಥಿಸಿಕೊಂಡಳು. "ಸುವರ್ಣಕ್ಕೆ ಅಗ್ನಿಯು ಗುರು, ಕಿರಣಗಳಿಗೆ ಸೂರ್ಯನು ಗುರು, ಅವರೆಲ್ಲರಿಗೂ ಮೂರು ಲೋಕಕ್ಕೂ ನಾರಾಯಣನೇ ಗುರು. ಹಿಂದೆ ಕಾಲನೇಮಿಯೇ ಮೊದಲಾದ ದೈತ್ಯರೆಲ್ಲರೂ ಮರ್ತ್ಯಲೋಕದಲ್ಲಿ ಹುಟ್ಟಿ, ಹಗಲಿರುಳು ಪ್ರಜೆಗಳನ್ನು ಬಾಧಿಸುತ್ತಿದ್ದರು. ಆಗ ಮಹಾವಿಷ್ಣುವು ಕಾಲನೇಮಿಯನ್ನು ಸುದರ್ಶನ ಚಕ್ರದಿಂದ ಸಂಹರಿಸಿದನು. ಅದೇ ಕಾಲನೇಮಿಯು ಈಗ ಮತ್ತೆ ಉಗ್ರಸೇನ ಎಂಬ ಯಾದವನ ಹೊಟ್ಟೆಯಿಂದ ಹುಟ್ಟಿ ಪ್ರಜೆಗಳನ್ನೆಲ್ಲ ಕಾಡುತ್ತಿದ್ದಾನೆ. ಕಂಸ ಎಂಬ ಹೆಸರಿನಿಂದ ಲೋಕಕಂಟಕನಾಗಿ ಪ್ರಜಾಪೀಡೆಯ ಕಾಲನೇಮಿಯ ಕಾರ್ಯವನ್ನು ಮುಂದುವರೆಸಿದ್ದಾನೆ. ಆ ಕಂಸಾಸುರನ ಪರಿವಾರ ಚಿಕ್ಕದಿಲ್ಲ. ಅವನ ಬೆನ್ನುಕಟ್ಟಿ ಪ್ರಜೆಗಳನ್ನೆಲ್ಲ ಮಣ್ಣು ಮುಕ್ಕಿಸುವ ರಕ್ಕಸರು ಅನೇಕ ಜನರು ಇರುತ್ತಾರೆ. ಅವರಲ್ಲಿ ಅರಿಷ್ಟ, ಧೇನುಕ, ಕೇಶಿ, ಪ್ರಲಂಬ, ನರಕ, ಶಕಟ, ವತ್ಸ, ತೃಣಾವರ್ತ, ಚಾಣೂರ, ಹಂಸ, ಡಿಭಿಕ, ಬಾಣ, ಮೊದಲಾದ ದುರುಳ ದೈತ್ಯರು ಮಾನವ ಕುಲಕ್ಕೆ ಮೃತ್ಯುಪ್ರಾಯರಾಗಿದ್ದಾರೆ. ಮಹಾಬಲಶಾಲಿಗಳಾದ ಆ ರಾಕ್ಷಸರು ಮದಾಂಧರಾಗಿ ಅನೇಕ ಅಕ್ಷೋಹಿಣೀ ಸೈನ್ಯದಿಂದ ಕೂಡಿ ವಿಧವಿಧವಾದ ಅನೇಕ ಆಕಾರ ವಿಕಾರಗಳನ್ನು ಧರಿಸಿ ನನಗೆ ಭಾರಭೂತರಾಗಿ ನನ್ನನ್ನು ಪೀಡಿಸುತ್ತಾ ಇರುವರು. ಈ ಎಲ್ಲ ದೈತ್ಯಾಧಮರ ಭಾರವನ್ನು ನಾನು ತಾಳಲಾರೆ, ದಯಮಾಡಿ ನೀವೆಲ್ಲ ದೇವತೆಗಳು ಬಂದು ಭೂಮಿಯನ್ನು ಮಿಂದು ನನ್ನ ಭಾರವನ್ನು ಕಡಿಮೆಮಾಡಿರಿ."

ಭೂದೇವಿಯ ಈ ದೀನ ಪ್ರಾರ್ಥನೆಯನ್ನು ಕೇಳಿ ಈ ಭೂಭಾರ ಹರಣರೂಪವಾದ ಕಾರ್ಯವು ಆ ಮಹಾವಿಷ್ಣುವಿನ ಹೊರತು ಬೇರೆಯವರಿಂದ ಸಾಧ್ಯವಿಲ್ಲ. ನಾವು ಎಲ್ಲರೂ ಕ್ಷೀರ ಸಮುದ್ರದ ತೀರಕ್ಕೆ ಹೋಗೋಣ. ಆ ಶ್ರೀಹರಿಯಲ್ಲಿ ಮೊರೆ ಇಡೋಣ. ಭೂದೇವಿ ಹೇಳಿದ ಮಾತುಗಳನ್ನೆಲ್ಲ ಅವನಿಗೆ ತಿಳಿಸಿ ಭೂಭಾರ ಹರಣಕ್ಕಾಗಿ ಭೂಮಿಯಲ್ಲಿ ಅವತಾರ ಮಾಡು ಎಂದು ಅವನಲ್ಲಿ ವಿಜ್ಞಾಪಿಸಿಕೊಳ್ಳೋಣ ಎಂದು ಹೇಳಿ ಎಲ್ಲ ಸುರ ಸಂಘೋಗ ಕೂಡಿ ಹಾಲಿನ ಹೆಗ್ಗಡಲ ತೀರಕ್ಕೆ ಬಂದರು. ಅಲ್ಲಿ ದೇವದೇವೋತ್ತಮನಾದ ಆ ಶ್ರೀಹರಿಯನ್ನು ಭಕ್ತಿಯಿಂದ ಪ್ರಾರ್ಥನೆ ಮಾಡಿದರು.

ಏಷಾಮಹೀದೇವ ಮಹೀಪ್ರಸೂತ್ಯೈ ।
ಮಹಾಸುರ್ರೈಃ ಪೀಡಿತ ಶೈಲಬಂಧಾ ॥
ಪರಾಯ ಗತ್ವಾಂ ಜಗತಾಮುಪೈತಿ ।
ಭಾರಾವತಾರಾರ್ಥಮಪಾರ ಪಾರಂ ॥

ದೇವನೆ, ಈ ಭೂದೇವಿಯು ತನ್ನಲ್ಲಿಯೆ ಹುಟ್ಟಿದ ದುಷ್ಟ ಅಸುರರಿಂದ ಪೀಡಿತಳಾಗಿದ್ದಾಳೆ. ಒಬ್ಬೊಬ್ಬ ಅಸುರನೂ ಒಂದೊಂದು ದೊಡ್ಡ ಗುಡ್ಡದಂತೆ ಭಾರ ಭೂತನಾಗಿದ್ದಾನೆ. ನೀನು ಜಗದಾಧಾರ. ಮುಳುಗಿದವರನ್ನು ಎತ್ತಿ ಹಿಡಿಯುವ ದಯಾಸಾಗರ. ಆದುದರಿಂದ ಈ ತನ್ನ ಮೇಲಿನ ಭಾರವನ್ನು ಇಳಿಸಿ ಕಾಪಾಡು ಎಂದು ನಿನಗೆ

ಶರಣು ಬಂದಿದ್ದಾಳೆ. ಇಂದ್ರ, ಅಶ್ವಿನೀ ದೇವತೆಗಳು, ವರುಣ, ಹನ್ನೊಂದು ಜನ ರುದ್ರರು, ಎಂಟು ವಸುಗಳು, ಹನ್ನೆರಡು ಆದಿತ್ಯರು, ಮೊದಲಾದ ನಾವೆಲ್ಲ ದೇವತೆಗಳೂ ನಿನ್ನ ಸೇವೆಗೆ ಸಿದ್ಧರಾಗಿದ್ದೇವೆ. ಅಪ್ಪಣೆಯನ್ನು ಕೊಡು. ನಿನ್ನ ಆಜ್ಞೆಯನ್ನು ನೆರವೇರಿಸಿ ದೋಷದೂರರಾಗುವೆವು.

ಈ ರೀತಿಯಾಗಿ ದೇವತೆಗಳು ಸ್ತೋತ್ರ ಮಾಡಲು ಆ ಮಹಾವಿಷ್ಣುವು ತನ್ನ ಕಪ್ಪು ಹಾಗೂ ಬಿಳಿಬಣ್ಣದ ಎರಡು ಕೂದಲುಗಳನ್ನು ಕಿತ್ತಿಕೊಟ್ಟನು ಮತ್ತು ದೇವತೆಗಳನ್ನು ಕುರಿತು ಹೇಳಿದನು. ''ಸುರಾಧೀಶರೆ ನನ್ನ ಈ ಎರಡು ಕೂದಲಿನ ಎಸಳುಗಳು ಭೂಲೋಕದಲ್ಲಿ ಬಲರಾಮ ಕೃಷ್ಣ ರೂಪದಿಂದ ಅವತರಿಸಿ ಭೂಮಿಯ ಭಾರವನ್ನು ಇಳಿಸುತ್ತವೆ. ಜನರ ಕ್ಲೇಶವನ್ನು ಕಳೆಯುತ್ತವೆ. ಆದುದರಿಂದ ನೀವೆಲ್ಲ ದೇವತೆಗಳು ನಿಮ್ಮ ನಿಮ್ಮ ಅಂಶದಿಂದ ಭೂಮಿಯಲ್ಲಿ ಹುಟ್ಟಿರಿ. ನಿಮಗಿಂತ ಮೊದಲೇ ಮಹೀಮಂಡಲದಲ್ಲಿ ಜನಿಸಿದ ಮದೋನ್ಮತ್ತರಾದ ದೈತ್ಯರ ಜೊತೆಗೆ ಹೋರಾಡಿರಿ. ಅದರಿಂದ ಧರಾತಲದಲ್ಲಿರುವ ದೈತ್ಯದಾನವರೆಲ್ಲರು ನಿಶ್ಶೇಷವಾಗಿ ನಾಶಹೊಂದುತ್ತಾರೆ. ನಿಮ್ಮ ಘೋರವಾದ ಆಯುಧಗಳಿಂದ ಹೊಡೆತ ತಿಂದು ಚೂರು ಚೂರಾಗಿ ಭಿನ್ನ ವಿಭಿನ್ನರಾಗಿ ನಾಶ ಹೊಂದುವರು. ಇದರಲ್ಲಿ ಸಂಶಯವೇ ಇಲ್ಲ. ಭೂಲೋಕದಲ್ಲಿ ವಸುದೇವ ಎಂಬ ಯಾದವನು ಇರುತ್ತಾನೆ. ಆತನ ಮಡದಿ ದೇವಕಿ, ಅವಳೊಬ್ಬ ದೇವತಾ ಸ್ತ್ರೀ ಇದ್ದಂತೆ ಇರುವಳು. ಅವಳ ಎಂಟನೇ ಗರ್ಭದಲ್ಲಿ ಈ ನನ್ನ ಕರಿಕೇಶವು ಹರಿ ರೂಪದಿಂದ ಹುಟ್ಟಿ ಕೃಷ್ಣ ಎಂದು ಹೆಸರಾಗುವುದು. ಅದೇ ಕೃಷ್ಣ ಕೇಶವನೇ ಕಾಲನೇಮಿಯಿಂದ ಉದ್ಭೂತನಾದ ಕಂಸನನ್ನು ಸಂಹರಿಸುವನು ಎಂದು ಹೇಳಿ ಆ ಭಗವಂತನು ಅದೃಶ್ಯನಾದನು.

ಆಗ ದೇವತೆಗಳ ಮನಸ್ಸಿಗೆ ನೆಮ್ಮದಿ ಉಂಟಾಯಿತು. ಅವರೆಲ್ಲರೂ ಆ ನಾರಾಯಣನನ್ನು ನಮಸ್ಕರಿಸಿ ಭೂಮಿಯಲ್ಲಿ ಅವತರಿಸಿ ಬರಬೇಕೆಂದು ಮೇರು ಪರ್ವತದಿಂದ ಹೊರಟರು.

## ದೇವತೆಗಳ ಗುಟ್ಟು ನಾರದರಿಂದ ರಟ್ಟು

ಒಂದು ದಿನ ದೇವಮುನಿಯಾದ ನಾರದ ಕಂಸನ ಬಳಿಗೆ ಬಂದ. ಅವನಿಗೆ ಗುಟ್ಟಾಗಿ ಹೇಳಿದ. ''ಕಂಸ, ನಿನ್ನ ತಂಗಿ ದೇವಕಿ ಇರುವಳಲ್ಲವೆ? ಅವಳ ಹೊಟ್ಟೆಯಿಂದ ಹುಟ್ಟುವ ಎಂಟನೇ ಮಗು ನಿನಗೆ ಗಂಟಲಗಾಣ. ಆ ವಸುದೇವ, ದೇವಕಿ ದಂಪತಿಗಳ ಅಷ್ಟಮ ಗರ್ಭದಿಂದ ನಿನಗೆ ಮೃತ್ಯು ನಿಶ್ಚಿತ.''

ಈ ಸಮಾಚಾರ ಕೇಳಿ ಕಿಡಿಕಿಡಿಯಾದ ಕೋಪದಿಂದ ಆ ಕಂಸ. ಕೂಡಲೇ ಕ್ರಮ ಕೈಕೊಂಡ. ವಸುದೇವ ದೇವಕಿಯರನ್ನು ಕರೆಸಿ ಕೈಕಾಲುಗಳಿಗೆ ಬೇಡಿ ಜಡಿದು ತನ್ನ ಕಾರಾಗ್ರಹದ ಕತ್ತಲೆ ಕೋಣೆಯಲ್ಲಿ ಬಂಧಿಸಿ ಇಟ್ಟ. ಮತ್ತು ಆ ವಸುದೇವನಿಗೆ ''ಹುಟ್ಟಿದ ಮಕ್ಕಳನ್ನೆಲ್ಲ ನನಗೆ ತಂದು ಒಪ್ಪಿಸು. ಇಲ್ಲದಿದ್ದರೆ ಈಗಲೆ ನಿನ್ನ ಮಡದಿಯನ್ನು ಕಡಿದು ಹಾಕುತ್ತೇನೆ'' ಎಂದು ಗದ್ದರಿಸಿದ.

ಆ ದುರಾತ್ಮನ ಈ ದುಶಾಸನವನ್ನು ಕೇಳಿ ಹೆದರಿಹೋದ ವಸುದೇವ. ಹೇಗಾದರೂ ಮಾಡಿ ಹೆಂಡತಿ ಬದುಕಲಿ ಎಂದು ಹುಟ್ಟಿದ ಕಂದಗಳನ್ನೆಲ್ಲ ಅವನ ಕೈಯಲ್ಲಿ ತಂದು ಕೊಡಲು ನಿರ್ಧರಿಸಿದ.

ಇದರ ಹಿಂದೆ ಒಂದು ಕಥಾಸಂದರ್ಭ ಹೀಗಿದೆ. ಹಿರಣ್ಯಕಶ್ಯಪುವಿಗೆ ಷಡ್ಗರ್ಭರು ಎಂದು ಪ್ರಖ್ಯಾತರಾದ ಪುತ್ರರು ಇದ್ದರು. ವಿಷ್ಣು ತನ್ನ ಯೋಗಮಾಯಾ ಎಂಬ ತನ್ನ ಇಚ್ಛಾ ರೂಪವಾದ ವೈಷ್ಣವೀ ಮಾಯೆಯನ್ನು ಕರೆದು ಅಪ್ಪಣೆ ಮಾಡಿದ. "ಯೋಗಮಾಯೆ, ನನ್ನ ಆಜ್ಞೆಯಿಂದ ನೀನು ಪಾತಾಳ ಲೋಕಕ್ಕೆ ಹೋಗು. ಅಲ್ಲಿ ಹಿರಣ್ಯಕಶ್ಯಪುವಿಗೆ ಷಡ್ಗರ್ಭರೆಂಬ ಆರು ಮಕ್ಕಳು ಇರುವರು. ಅವರನ್ನೆಲ್ಲ ನೀನು ಒಂದೊಂದಾಗಿ ತಂದು ದೇವಕಿಯ ಹೊಟ್ಟೆಯಲ್ಲಿ ಇರಿಸು. ಅವುಗಳನ್ನು ಒಂದೊಂದಾಗಿ ಕಂಸನು ಕೊಂದಂತೆ ನೀನು ಮತ್ತೊಂದನ್ನು ಅವಳ ಗರ್ಭದಲ್ಲಿ ಸ್ಥಾಪಿಸು. ಹೀಗೆ ಆರು ಜನ ಷಡ್ಗರ್ಭರನ್ನು ಕಂಸನು ಕೊಂದ ಬಳಿಕ ದೇವಕಿಯ ಏಳನೆ ಗರ್ಭದಲ್ಲಿ ಆದಿಶೇಷನ ಅಂಶದಿಂದ, ನನ್ನ ಆವೇಶದಿಂದ ಬಲಿಷ್ಠನಾದ ಒಬ್ಬ ಪುತ್ರನು ಸನ್ನಿಹಿತನಾಗುವನು. ಆ ಏಳನೆಯ ಗರ್ಭಪಿಂಡವನ್ನು ನೀನು ಗೋಕುಲದಲ್ಲಿ ಇರುವ ವಸುದೇವನ ಮತ್ತೊಬ್ಬ ಹೆಂಡತಿ ರೋಹಿಣಿಯ ಗರ್ಭದಲ್ಲಿ ಸ್ಥಾಪಿಸು. ಇದರಿಂದ ದೇವಕಿಯ ಏಳನೆ ಗರ್ಭವು ಕಂಸನ ಭಯದಿಂದ ಹೊಟ್ಟೆಬಿದ್ದು, ಗರ್ಭಸ್ರಾವವಾಗಿ ನಾಶವಾಯಿತು ಎಂದು ಸುದ್ದಿಯು ಹಬ್ಬುವುದು. ಈ ಗರ್ಭದಲ್ಲಿ ನೀನು ದೇವಕಿಯ ಹೊಟ್ಟೆಯಿಂದ ಸೆಳೆದು ರೋಹಿಣಿಯ ಗರ್ಭಕ್ಕೆ ಸ್ಥಳಾಂತರಿಸಿದ್ದರಿಂದ ಅದಕ್ಕೆ ಸಂಕರ್ಷಣ ಎಂದು ಹೆಸರು ಬರುವುದು. ಅವನಿಗೆ ಬಲರಾಮ ಎಂದು ಹೆಸರಾಗಿ ಲೋಕದಲ್ಲಿ ಪ್ರಖ್ಯಾತನಾಗುವನು. ಆ ವೀರಪುರುಷನು ಬಿಳಿಬೆಟ್ಟದ ಶಿಖರದಂತೆ ಮಹೋನ್ನತನಾಗಿ ಬೆಳಗುವನು. ಅನಂತರ ನಾನು ದೇವಕೀ ಗರ್ಭದಿಂದ ಎಂಟನೆ ಮಗುವಾಗಿ ಅವತರಿಸುವೆನು. ನೀನು ಕೂಡ ಯಶೋದೆಯ ಮಗಳಾಗಿ ಹುಟ್ಟು. ವರ್ಷ ಋತುವಿನ ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮಿ ದಿನದ ಮಧ್ಯರಾತ್ರಿಯಲ್ಲಿ ನಾನು ಕಂಸನ ಕಾರಾಗೃಹದಲ್ಲಿ ಅವತರಿಸುವೆನು. ನೀನು ಗೋಕುಲದಲ್ಲಿ ಯಶೋಧೆಯ ಹೊಟ್ಟೆಯಿಂದ ನವಮಿ ದಿನ ಹೆಣ್ಣು ಮಗುವಾಗಿ ಹುಟ್ಟು.

ನನ್ನಿಂದ ಪ್ರೇರಿತನಾದ ವಸುದೇವನು ನನ್ನನ್ನು ಹಾಗೂ ನಿನ್ನನ್ನು ಅದಲಿ ಬದಲಿ ಮಾಡುವನು. ದೇವಕಿಯಲ್ಲಿ ಹುಟ್ಟಿದ ನನ್ನನ್ನು ಆ ಮಧ್ಯರಾತ್ರಿಯಲ್ಲಿಯೆ ಎತ್ತಿಕೊಂಡು ಗೋಕುಲಕ್ಕೆ ಹೋಗಿ ಯಶೋಧೆಯ ಪಕ್ಕದಲ್ಲಿ ಮಲಗಿಸಿ, ಆ ಯಶೋದೆಯ ಮಗಳನ್ನು ಎತ್ತಿಕೊಂಡು ಕಂಸನ ಕಾರಾಗೃಹಕ್ಕೆ ತರುವನು. ಹೀಗೆ ಗುಟ್ಟಾಗಿ ವಸುದೇವನ ಕೈ ಚೆಳಕದಿಂದ ಬಂದೀಖಾನೆಗೆ ತಂದ ನಿನ್ನನ್ನು ತಕ್ಷಣ ಕೊಂದು ಹಾಕಲು ಒಂದು ದೊಡ್ಡದಾದ ಕಲ್ಲು ಬಂಡೆಯ ಮೇಲೆ ಕಂಸನು ಅಪ್ಪಳಿಸುವನು. ಆಗ ನೀನು ಅಂತರಿಕ್ಷಕ್ಕೆ ಹಾರಿ ಸುರಾಸುರರಿಂದ ಪೂಜಿತಳಾಗುವೆ. ಇಂದ್ರನು ಬಂದು ಭಕ್ತಿಯಿಂದ ನಿನಗೆ ಬಾಗಿ ನಮಸ್ಕರಿಸುವನು. ಒಂದುಬಾರಿ ಅಲ್ಲ ನೂರುಬಾರಿ ನಮಿಸುವನು. ನಿನ್ನನ್ನು ತನ್ನ ಒಡಹುಟ್ಟಿದ ತಂಗಿಯೆಂದು ಗೌರವದಿಂದ ಬರಮಾಡಿ ಕೊಂಡು ಆದರದಿಂದ ರಕ್ಷಿಸುವನು. ನೀನು ಮುಂದೆ ಶುಂಭ ನಿಶುಂಭ ಮೊದಲಾದ ಸಾವಿರಾರು ದುಷ್ಟ ದೈತ್ಯರನ್ನು ಸಂಹರಿಸಿ ಭೂಲೋಕದ ಬಹುಭಾಗಗಳಲ್ಲಿ ಪ್ರಸಿದ್ಧಿಯನ್ನು ಪಡೆಯುವೆ. ನೀನು ಐಶ್ವರ್ಯ ಸ್ವರೂಪಳು, ವಿನಯ ರೂಪಿಣಿ, ಕೀರ್ತಿಯ ಮೂರ್ತಿ, ಪೃಥವಿಯ ಪ್ರತಿರೂಪ, ಧೈರ್ಯದ ಸಾಕಾರ, ಹ್ರೀ, ಶ್ರೀ, ಕಾಂತಿ, ಶಾಂತಿ, ತುಷ್ಟಿ, ಪುಷ್ಟಿ, ಎಲ್ಲವು ನೀನೇ ಆಗಿ ಈ ಜಗದಂಡ ಮಂಡಲವನ್ನೆಲ್ಲ ಬೆಳಗುವೆ. ಯಾರು ನಿನ್ನನ್ನು ಆರ್ಯಾ ದುರ್ಗಾ ವೇದಗರ್ಭಾ, ಅಂಬಿಕಾ, ಭದ್ರಾ, ಭದ್ರಕಾಳೀ ಕ್ಷೇಮ್ಯಾ, ಕ್ಷೇಮಂಕರೀ ಎಂಬ ಮುಂತಾದ ನಾಮಗಳಿಂದ ಭಜನೆ

ಮಾಡಿ ಸ್ತೋತ್ರಮಾಡಿ ಪ್ರಾತಃಕಾಲ ಸಾಯಂಕಾಲಗಳಲ್ಲಿ ನೆನೆಯುವರೋ ಮತ್ತು ಭಕ್ತಿಯಿಂದ ಪೂಜಿಸುವರೊ, ಅವರಿಗೆ ನನ್ನ ಅನುಗ್ರಹದಿಂದ ಇಷ್ಟಾರ್ಥಗಳೆಲ್ಲವೂ ಕೈಗೂಡುವುವು. ಕಷ್ಟ ನಷ್ಟಗಳೆಲ್ಲವು ಸ್ವಯಂ ಪರಿಹಾರ ಕಾಣುವವು. ನಿನ್ನನ್ನು ಭಜಿಸುವವರು ಪೂಜಿಸುವವರು ಮತ್ತು ಭಕ್ತಿಯಿಂದ ಸೇವೆಮಾಡುವವರು ನನ್ನ ಭಕ್ತರೆಂದೇ ಪೂಜಿಸುವವರು ಮತ್ತು ಭಕ್ತಿಯಿಂದ ಸೇವೆ ಮಾಡುವವರು ನನ್ನ ಭಕ್ತರೆಂದೇ ಪರಿಗಣಿಸಿ ನಾನು ಅವರೆಲ್ಲರಿಗೂ ಫಲಪ್ರದನಾಗಿ ಅನುಗ್ರಹ ಗೈದು ಇಷ್ಟಾರ್ಥಗಳನ್ನು ಇತ್ತು ಕೃತಾರ್ಥರನ್ನಾಗಿ ಮಾಡುತ್ತೇನೆ. ಈ ವಿಷಯದಲ್ಲಿ ಸಂದೇಹವಿಲ್ಲ. ಆದುದರಿಂದ ದೇವಿ, ನೀನು ಇಲ್ಲಿಂದ ಈಗ ತೆರಳು- ನಾನು ಹೇಳಿದಂತೆ ಮಾಡು.

## ಶ್ರೀಕೃಷ್ಣನ ಉತ್ಪತ್ತಿ

**ವೇದವ್ಯಾಸ:-** ಜಗದೀಶ್ವರನ ಆದೇಶದಂತೆ, ಜಗಜನನಿಯಾದ, ಯೋಗ ಮಾಯೆಯು, ಪಾತಾಳದಲ್ಲಿದ್ದ ಹಿರಣ್ಯಕಶಿಪುವಿನ ಪುತ್ರರಾದ ಷಡ್ಗರ್ಭರನ್ನು ಒಂದೊಂದಾಗಿ ದೇವಕಿಯ ಗರ್ಭದಲ್ಲಿ ತಂದು ಇರಿಸಿದಳು. ಬಂದೀ ಮನೆಯಲ್ಲಿ ಅವು ದೇವಕಿಯಿಂದ ಹುಟ್ಟಿದ ಕೂಡಲೆ ಕಂಸನು ಕೊಂದು ಹಾಕಿದನು. ಹೀಗೆ ದೇವಕಿಯ ಆರು ಮಕ್ಕಳು ಕಂಸನ ಕಾರಾಗೃಹದಲ್ಲಿಯೇ ಹುಟ್ಟಿ ಒಂದೊಂದಾಗಿ ತಮ್ಮ ಸೋದರಮಾವ ನಿಂದಲೇ ವಧಿಸಲ್ಪಟ್ಟವು ಬಳಿಕ ಏಳನೆಯ ಗರ್ಭವು ದೇವಕಿಯ ಗರ್ಭದಿಂದ ಸೆಳೆದು ಭಗವಂತನ ಆದೇಶದಂತೆ ಯೋಗಮಾಯೆಯಿಂದ ರೋಹಿಣಿಯ ಗರ್ಭಕ್ಕೆ ವರ್ಗಾಯಿಸ ಲ್ಪಟ್ಟಿತು. ಅನಂತರ ಮೂರು ಲೋಕಗಳಿಗೂ ಉಪಕಾರ ಮಾಡಲಿಕ್ಕಾಗಿ ಸಾಕ್ಷಾತ್ ಶ್ರೀಹರಿಯು ಎಂಟನೆ ಗರ್ಭನಾಗಿ ದೇವಕಿಯ ಹೊಟ್ಟೆಯನ್ನು ಪ್ರವೇಶಿಸಿದನು. ಅದೇ ದಿನ ಯೋಗ ಮಾಯೆಯು ಗೋಕುಲದಲ್ಲಿ ಯಶೋದೆಯ ಉದರದಿಂದ ಜನಿಸಿ ಬಂದಳು.

ಅಂದು ಮುಗಿಲಿನಲ್ಲಿ ಗ್ರಹ ನಕ್ಷತ್ರಗಳೆಲ್ಲವು ಯಥಾಸ್ಥಾನದಲ್ಲಿ ಶುಭಕರವಾಗಿ ಬೆಳಗಿದವು. ಆ ಕಾಲದಲ್ಲಿ ದೇವಕಿಯ ಮುಖವನ್ನು ನೋಡಬೇಕು ಅವಳ ಮುಖದಿಂದ ವಿಲಕ್ಷಣ ಕಾಂತಿಯು ಹೊರಸೂಸುತ್ತಿತ್ತು. ಸ್ತ್ರೀ,ಪುರುಷ ಯಾರಿಗೂ ನೆಟ್ಟ ದೃಷ್ಟಿಯಿಂದ ಅವಳನ್ನು ನೋಡಲಿಕ್ಕೆ ಆಗುತ್ತಿರಲಿಲ್ಲ. ಅಂಥ ಕಳೆಕಾಂತಿ ಕುಣಿಯುತ್ತಿತ್ತು ಅವಳ ದೇಹದಲ್ಲಿ. ಅವಳ ಅಂಗಾಂಗಗಳಿಂದ ವಿಲಕ್ಷಣವಾಗಿ ದೇದೀಪ್ಯಮಾನವಾದ ತೇಜಸ್ಸು ತೂರಿ ಬರುತ್ತಿತ್ತು. ಬ್ರಹ್ಮಾದಿ ದೇವತೆಗಳೆಲ್ಲರೂ ಗರ್ಭದಲ್ಲಿ ಮಹಾವಿಷ್ಣುವನ್ನು ಇವಳು ಧರಿಸಿದ್ದಾಳೆಂದು ಆ ದೇವಕಿಯನ್ನು ಹೊಗಳಿ ಹಾಡಿದರು.

ಅನಂತರ ಈ ಪ್ರಪಂಚವೆಂಬ ಪದ್ಮವನ್ನು ಅರಳಿಸುವ ಸೂರ್ಯನಾಗಿ ಸಾಕ್ಷಾತ್ ಶ್ರೀಹರಿಯು ಮಧ್ಯರಾತ್ರಿಯ ಸಮಯದಲ್ಲಿ ದೇವಕಿಯ ಗರ್ಭದಿಂದ ಆವಿರ್ಭೂತನಾದನು. ಜಗದಾಧಾರನಾದ ಜನಾರ್ದನನು ಭೂಮಿಯಲ್ಲಿ ಶ್ರಾವಣ ಕೃಷ್ಣ ಪಕ್ಷದ ಸರಿರಾತ್ರಿಯಲ್ಲಿ ಅವತಾರ ಮಾಡಿದಾಗ, ಮೋಡಗಳು ಮಂದಮಂದವಾಗಿ ಮಂದ್ರನಾದ ಮಾಡಿದವು. ದೇವತೆಗಳು ಪುಷ್ಪವೃಷ್ಟಿ ಮಾಡಿದರು. ಆ ಗರ್ಭಾಗಾರದಲ್ಲಿ ಪ್ರಾದುರ್ಭೂತನಾದ ಆ ಪರಮಾತ್ಮನು ಸಾಕ್ಷಾತ್ ಶ್ರೀಮನ್ ನಾರಾಯಣನೇ ಆಗಿದ್ದ. ಬಿರಿದ ತಾವರೆಯಂತೆ ಅರಳಿದ ಕಣ್ಣು, ನಾಲ್ಕು ಬಾಹುಗಳು, ವಕ್ಷಸ್ಥಳದಲ್ಲಿ ಶ್ರೀವತ್ಸ ಚಿಹ್ನೆ, ಸಾಕ್ಷಾತ್ ಶ್ರೀಹರಿಯ ಸರ್ವ ಲಕ್ಷಣ ಸಂಪನ್ನನಾಗ್ಗಿದ್ದ ಆ ಕಂದ ಅದೀಗ ಜನಿಸಿ ಬಂದ ಆ

ಭಗವಂತ ಸ್ವಸ್ವರೂಪದಿಂದ ಅವನನ್ನು ನೋಡಿ ಆನಂದ ಭರಿತನಾದ ಅವನ ತಂದೆ ಆನಕ ದುಂದುಭಿ ಬಗೆಬಗೆಯ ಮಾತುಗಳಿಂದ ಅವನನ್ನು ಸ್ತೋತ್ರ ಮಾಡಿದನು. ವಸುದೇವನಿಗೆ ಇಂಥ ಲೋಕೋತ್ತರನಾದ ಪುತ್ರನು ಉತ್ಪನ್ನನಾದದ್ದರಿಂದ ಅಮಿತಾನಂದ ಉಂಟಾಗಿದ್ದರೂ, ಕಂಸನ ಭಯ ಮಾತ್ರ ಮರೆತಿದ್ದಿಲ್ಲ. ಹಿಂದಿನ ಎಲ್ಲ ತನ್ನ ಮಕ್ಕಳಂತೆ ಈ ದಿವ್ಯಪುತ್ರನನ್ನು ಆ ಪಾಪಿಯು ಹಿಂಸಿಸುವನು ಎಂದು ಅವನಿಗೆ ಹೆದರಿಕೆ. ಆದುದರಿಂದ ಕೈ ಮುಗಿದು ಕೇಳಿಕೊಂಡ ವಸುದೇವ ''ಭಗವನ್, ಶಂಖ ಚಕ್ರ ಗಧಾಧಾರಿಯಾದ, ನೀನು, ಯಾರು ಎನ್ನುವುದು ನನಗೆ ತಿಳಿದಿದೆ. ನೀನು ದೇವತೆಗಳಿಗೂ ದೇವತೆ. ಸರ್ವೇಶ, ದೇವೇಶ. ಈ ನಿನ್ನ ದಿವ್ಯರೂಪ ಅತ್ಯದ್ಭುತವಾಗಿದೆ. ಈ ನಿನ್ನ ದಿವ್ಯರೂಪವನ್ನು ಬೇಗನೆ ಉಪಸಂಹಾರ ಮಾಡು. ಯಾಕೆಂದರೆ, ಈ ಬಂದೀ ಮನೆಯಲ್ಲಿ ನನಗೆ ಪುತ್ರ ಜನನ ಆಯಿತು ಎಂದು ಸುದ್ದಿ ತಿಳಿದ ಕ್ಷಣ ಕಂಸನು ಧಾವಿಸಿ ಬರುವನು. ನಿನ್ನನ್ನು ಕೊಲ್ಲಲು ಹವಣಿಸುವನು ನನಗೆ ಯಾತನೆಯನ್ನು ನೀಡುವನು.'' ಅನಂತರ ಆ ಜಗದೀಶ್ವರನಿಗೆ ಜನ್ಮವಿತ್ತ ದೇವಕಿಯು ತನ್ನ ಪುತ್ರ ರೂಪದಿಂದ ಭೂಲೋಕಕ್ಕೆ ಇಳಿದು ಬಂದ ಆ ದಿವ್ಯರೂಪವನ್ನು ಕುರಿತು ಹೇಳಿದಳು. ''ಭಗವನ್, ನೀನು ಅನಂತರೂಪ, ವಿಶ್ವರೂಪ, ನೀನೇ ನಿನ್ನ ಗರ್ಭದಲ್ಲಿ ಹದಿನಾಲ್ಕು ಲೋಕಗಳನ್ನು ಧರಿಸಿರುವೆ. ಅಂಥ ದೇವ ದೇವೋತ್ತಮನಾದ ನೀನು ನಿನ್ನ ಮಾಯೆಯಿಂದ ಮಗುವಾಗಿ ನನ್ನಿಂದ ಅವತರಿಸಿ ಬಂದಿರುವೆ. ನನ್ನ ಮೇಲೆ ಪ್ರಸನ್ನನಾಗು. ನೀನು ನಾಲ್ಕು ತೋಳು, ಕೊರಳಲ್ಲಿ ವನಮಾಲೆ, ಶಂಖ, ಚಕ್ರಾದಿ ಲಾಂಛನಗಳು, ಶ್ರೀವತ್ಸ ಚಿಹ್ನೆ ದಿವ್ಯಕಾಂತಿ ಇವುಗಳಿಂದ ಪರಮಪುರುಷನಾಗಿ ಕಂಗೊಳಿಸಿದೆ. ಆದರೆ ಇದನ್ನೆಲ್ಲ ಈಗ ನೀನು ಉಪಸಂಹರಿಸು. ನೀನು ಅವತಾರ ಮಾಡಿ ಬಂದಿರುವೆ ಎಂಬ ಗುಟ್ಟು ಕಂಸನಿಗೆ ಗೊತ್ತಾಗಕೂಡದು'' ಎಂದು ಪ್ರಾರ್ಥಿಸಿ ಕೊಂಡಳು.

ದೇವಕಿಯ ಮಾತನ್ನು ಕೇಳಿ ಆ ಪರಮಾತ್ಮನು ''ತಾಯಿ ದೇವಕಿ, ನೀನು ಹಿಂದೆ ನನ್ನನ್ನು ಪುತ್ರನಾಗಿ ಹುಟ್ಟು ಎಂದು ತಪಸ್ಸು ಮಾಡಿ ಕೇಳಿಕೊಂಡಿದ್ದೆ. ನಿನ್ನ ಪ್ರಾರ್ಥನೆಯಂತೆ ನಿನ್ನ ಉದರದಿಂದ ನಾನು ಆವಿರ್ಭವಿಸಿದ್ದೇನೆ. ಈ ನಿನ್ನ ಪ್ರಾರ್ಥನೆಯು ಸಫಲವಾಗಿದೆ. ಮತ್ತು ಈ ಕ್ಷಣದಲ್ಲಿಯೆ ನಿನ್ನ ಅಪೇಕ್ಷೆಯಂತೆ ನನ್ನ ಅಪರೂಪವಾದ ಈ ದಿವ್ಯರೂಪವನ್ನು ಉಪಸಂಹರಿಸುವೆ.'' ಎಂದು ಹೇಳಿ ಶಂಖಚಕ್ರಾದಿ ಲಾಂಛಿತವಾದ ತನ್ನ ಆ ಭಗವದ್ ರೂಪವನ್ನು ಉಪಸಂಹರಿಸಿ ಚಿಕ್ಕ ಮಗುವಾಗಿ ಅವಳ ಪಕ್ಕದಲ್ಲಿ ಪವಡಿಸಿದನು.

ಭಗವಂತನ ಅಪ್ಪಣೆಯಂತೆ ವಸುದೇವನು ಆ ಮಗುವನ್ನು ಎತ್ತಿಕೊಂಡು ಆ ರಾತ್ರಿಯಲ್ಲಿಯೇ ಗೋಕುಲಕ್ಕೆ ಹೊರಟನು. ವಿಷ್ಣುವಿನ ಮಾಯೆಯಿಂದ ಕಾರಾಗೃಹದ ರಕ್ಷಕರು, ಮಧುರಾ ಪಟ್ಟಣದ ದ್ವಾರಪಾಲಕರು ಗಾಢ ನಿದ್ದೆಯಲ್ಲಿದ್ದರು. ವಸುದೇವನು ಆ ಸರಿರಾತ್ರಿಯಲ್ಲಿಯೇ ಗೋಕುಲದೆಡೆಗೆ ಪ್ರಯಾಣಿಸುವಾಗ ಶ್ರಾವಣಮಾಸವಾದುದರಿಂದ ಧಾರಾಕಾರವಾಗಿ ಮಳೆ ಸುರಿಯ ಹತ್ತಿತ್ತು. ಆಗ ಆದಿಶೇಷನು ತನ್ನ ಏಳು ಹೆಡೆಗಳನ್ನು ಕೊಡೆಯಂತೆ ಬಿಡಿಸಿ ಹಿಡಿದು ಮಳೆಯ ಹನಿ ತಟ್ಟದಂತೆ ಮಗುವಿನ ಮೈ ನೆನೆಯದಂತೆ ಮಾಡಿದನು. ಶ್ರಾವಣಮಾಸವಲ್ಲವೆ ಆ ಸಮಯ! ತುಂಬಿ ಹರಿಯುತ್ತಿತ್ತು ಯಮುನೆ, ಆದರೆ ವಿಷ್ಣುವಿನ ಪ್ರಭಾವದಿಂದ ಆ ಮಹಾ ಪ್ರವಾಹವೆಲ್ಲವು ತಕ್ಷಣದಲ್ಲಿಯೆ ಕುಗ್ಗಿ ತಿಳುವಾಗಿ, ಅಡಿ ಮುಳುವಷ್ಟು ನೀರಿನಿಂದ ಜುಳು ಜುಳು ಹರಿಯ ತೊಡಗಿತು. ವಸುದೇವನು ತಲೆಯ ಮೇಲೆ ಆ ಭಗವನ್ಮೂರ್ತಿಯನ್ನು ಹೊತ್ತು ಸುಲಭವಾಗಿ ಯಮುನೆಯನ್ನು ದಾಟಿದನು, ಗೋಕುಲಕ್ಕೆ ಹೋದನು.

ಅದೇ ಸಮಯದಲ್ಲಿ ನಂದಗೋಪನ ಮನೆಯಲ್ಲಿ ಅವನ ಸುಂದರಿಯಾದ ಯಶೋಧೆಯು ಒಂದು ಹೆಣ್ಣು ಮಗುವನ್ನು ಹೆತ್ತು ಬಳಲಿಕೆಯಿಂದ ನಿದ್ದೆ ಹತ್ತಿ ಮಲಗಿದ್ದಳು. ಸೂಲಗಿತ್ತಿ ಹಾಗೂ ಮನೆಯ ಜನರೆಲ್ಲರೂ ವಿಷ್ಣುವಿನ ಪ್ರಭಾವದಿಂದ ನಿದ್ರಾಮುದ್ರಿತ ಲೋಚನರಾಗಿದ್ದರು. ವಸುದೇವನು ನೇರವಾಗಿ ಬಾಣಂತಿಯ ಕೋಣೆಯನ್ನು ಪ್ರವೇಶಿಸಿದನು ತಾನು ತಂದ ತನ್ನಕಂದನನ್ನು ಯಶೋದೆಯ ಪಕ್ಕದಲ್ಲಿ ಮಲಗಿಸಿದ ಆ ಯಶೋದೆಯ ಮಗಳನ್ನ ತಾನು ಹಗುರಾಗಿ ಎತ್ತಿಕೊಂಡು ತಲೆಯ ಮೇಲೆ ಹೊತ್ತುಕೊಂಡ. ಜಾಗೃತಿಯಾಗಿ ಹೊರಬಿದ್ದ ಮಥುರಾ ಪಟ್ಟಣದ ದಾರಿ ಹಿಡಿದ. ಅವನು ದೂರಸಾಗಿ ಹೋದ ಬಳಿಕ ಯಶೋದೆಗೆ ಎಚ್ಚರ ವಾಯಿತು. ಆ ಬಳಿಕ ಅವಳು ತನ್ನ ಪಕ್ಕದಲ್ಲಿ ಮಲಗಿದ ಮಗುವಿನೆಡೆಗೆ ನೋಡಿದಳು ಅದು ಸುಂದರವಾದ ಗಂಡು ಮಗುವೆ ಆಗಿದ್ದಿತು. ಹುಟ್ಟಿದ ಕ್ಷಣದಲ್ಲಿ ತಾನು ನೆಟ್ಟಗೆ ನೋಡದೆ ಹೆಣ್ಣು ಮಗು ಎಂದು ತಿಳಿದಿದ್ದೆ. ಆದರೆ ಹುಟ್ಟಿದ್ದು ಗಂಡು ಮಗು. ನನ್ನ ಸುದೈವ ಎಂದು ಎಲ್ಲರನ್ನು ಎಬ್ಬಿಸಿ ಗಂಡನನ್ನು ಎಚ್ಚರಿಸಿ ತನಗೆ ಹುಟ್ಟಿದ್ದು ಹೆಣ್ಣು ಅಲ್ಲ, ಗಂಡು ಮಗು ಎಂದು ಸಾರಿದಳು. ಎಲ್ಲರಿಗೂ ಆನಂದವಾಯಿತು. ಊರ ಜನರೆಲ್ಲರು ಬಂದು ಯಶೋದೆಯ ಆ ಕಂದನನ್ನು ನೋಡಿ ಆನಂದಿಸಿದರು. ಕಪ್ಪು ಬಣ್ಣದ ಕನ್ನೈದಿಲೆಯಂತೆ ಕರಿ ಕಾಂತಿಯಿಂದ ಶಾಮಲ ಕೋಮಲವಾಗಿ ಆ ಮಗು ಮಿಂಚುತ್ತಿತ್ತು. ನಂದ ಗೋಪನಿಗೆ ಆನಂದವೋ ಆನಂದ. ಯಶೋದೆಗಂತೂ ಪರಮಾನಂದ ಪರಿವಾರದವರೆಲ್ಲರೂ ಯಶೋದೆಗೆ ಮುತ್ತಿನಂಥ ಮಗು ಜನಿಸಿದ್ದಕ್ಕಾಗಿ ನಲಿದು ಒಲಿದು ಸಂತಸ ಪಟ್ಟರು.

ಇತ್ತ ವಸುದೇವನು ತನ್ನ ಗಂಡು ಮಗುವನ್ನು ಇತ್ತು ಯಶೋದೆಯ ಹೆಣ್ಣು ಕೂಸನ್ನು ಹೊತ್ತು ತಂದು ದೇವಕಿಯ ಪಕ್ಕದಲ್ಲಿ ಮಲಗಿಸಿದ. ಮಗು ಅತ್ತಿತು. ಕಾವಲಗಾರರು ಎಚ್ಚೆತ್ತರು, ಓಡುತ್ತ ಹೋಗಿ ಕಂಸನಿಗೆ ಸುದ್ದಿ ಮುಟ್ಟಿಸಿದರು. ತಕ್ಷಣದಲ್ಲಿ ಕಂಸ ಎದ್ದು ಅರೆಚಣದಲ್ಲಿ ಕಾರಾಗೃಹದಲ್ಲಿ ಇದ್ದ. ದೇವಕಿಯ ತೊಡೆಯಲ್ಲಿ ಮಲಗಿದ ಆ ಶಿಶುವನ್ನು ಎತ್ತಿದ. ದೇವಕಿಯು ದೀನಳಾಗಿ "ಬೇಡ ಅಣ್ಣ, ಮಗುವನ್ನು ಕೊಲ್ಲಬೇಡ. ಇದು ಗಂಡು ಮಗು ಅಲ್ಲ, ಹೆಣ್ಣು ಕೂಸು, ಗಂಡಾದರೆ ಮಾತ್ರ ನಿನಗೆ ಗಂಡಾಂತರ. ಹೆಣ್ಣಿನಿಂದ ಏನು ಹೆದರಿಕೆ? ನಿನ್ನ ತಂಗಿಗೆ ಒಂದು ಹೆಣ್ಣು ಮಗುವನ್ನಾದರೂ ಕರುಣಿಸು, ನನ್ನ ಆ ಮಕ್ಕಳನ್ನು ಕಳೆದುಕೊಂಡ ನಾನು ಈ ಒಂದು ಹೆಣ್ಣು ಮಗುವಿನಿಂದಾದರೂ ನನ್ನ ಈ ಹೆತ್ತ ಕರಳಿನ ಸಂಕಟವನ್ನು ಶಾಂತಗೊಳಿಸುತ್ತೇನೆ" ಎಂದು ಅಳುತ್ತ ಕೇಳಿಕೊಂಡಳು.

ಆದರೆ ಭಯಾವಿಷ್ಟನೂ ಭೂತಾವಿಷ್ಟನೂ ಆದ ಆ ಕಂಸನಿಗೆ ಎಲ್ಲಿ ದಯೆ, ಮಾಯೆ! ಕರುಳಿನ ಕೂಗಿಗೆ ಅವನು ಕಿವುಡನಾಗಿದ್ದ. ತಂಗಿಯ ಕರುಣಾಕ್ರಂದನ ಅವನಿಗೆ ಕೇಳಲೇ ಇಲ್ಲ. ಕ್ರೂರನಾಗಿ ಅವಳ ಕೈಯಿಂದ ಆ ಕೂಸನ್ನು ಕಸಿದುಕೊಂಡ. ತನ್ನ ಹೆಬ್ಬಾವಿನಂತಿದ್ದ ರಕ್ಕಸಕೈಯಿಂದ ಗಕ್ಕನೆ ಕಿತ್ತುಕೊಂಡ. ಅದನ್ನು ಹೊಡೆದು ಕೊಲ್ಲಲು ಕಲ್ಲು ಬಂಡೆಗೆ ಅಪ್ಪಳಿಸಲು ಅದರ ಬಳಿಗೆ ಬಂದ, ಅದನ್ನು ಕೈಯಲ್ಲಿ ಹಿಡಿದು ಮೇಲಕ್ಕೆ ಎತ್ತಿ ಹೆಬ್ಬಂಡೆಗೆ ಸ್ಫೋಟಿಸಬೇಕು ಎಂದು ಮೇಲೆತ್ತಿ ಹಿಡಿದಾಗ ಆ ಕೂಸು ಅವನ ಕೈಯಿಂದ ಕೊಸರಿಕೊಂಡು ಅಂತರಿಕ್ಷಕ್ಕೆ ನೆಗೆಯಿತು. ಅಲ್ಲಿ ಒಮ್ಮೆಲೆ ಆ ಮಗುವಿಗೆ ದೇವೀರೂಪವು ಬಂದಿತು. ಎಂಟು ಕೈಗಳು, ಎಲ್ಲ ಕೈಗಳಲ್ಲಿಯೂ ಒಂದೊಂದು ಘೋರ ಆಯುಧ, ಉಗ್ರರೂಪ, ದುರ್ಗಾಸ್ವರೂಪ ಅಟ್ಟ ಹಾಸ ಮಾಡುತ್ತ ಅವಳು ದುಷ್ಟ ಕಂಸನನ್ನು ಕುರಿತು

ನುಡಿದಳು. "ಪಾಪಿ ಕಂಸ, ನನ್ನನ್ನು ಕೊಲ್ಲುವುದರಿಂದ ನಿನಗೇನು ಲಾಭ? ನಿನ್ನಂಥ ದುರುಳರ ಕೈಗೆ ನಾನು ಸಿಕ್ಕುತ್ತೇನೆಯೇ? ದೇವತೆಗಳ ಸರ್ವಸ್ವಭೂತನಾದ ಆ ಪರಮಾತ್ಮನು ನಿನ್ನನ್ನು ಕೊಲ್ಲಲಿಕ್ಕಾಗಿಯೆ ಅವತಾರ ಮಾಡಿದ್ದಾನೆ. ನಿನ್ನನ್ನು ಕೊಲ್ಲುವುದಕ್ಕಾಗಿಯೇ ಅವನು ಸುರಕ್ಷಿತವಾಗಿ ಬೆಳೆಯುತ್ತಿದ್ದಾನೆ. ಕಳೆದ ಜನ್ಮದಲ್ಲಿ ನಿನ್ನನ್ನು ಸಂಹರಿಸಿದವನು ಅವನೇ, ಈಗಲೂ ನಿನಗೆ ಮರಣವು ಅವನಿಂದಲೆ, ಹೀಗೆ ಹೇಳಿ ದಿವ್ಯಹಾರಗಳಿಂದ ಭೂಷಿತಳಾದ ಆ ಮಹಾಮಾಯೆಯು ಕಂಸನು ನೋಡುತ್ತಿರುವಂತೆಯೇ ಅಂತರಿಕ್ಷದಲ್ಲಿ ಅಂತರ್ಧಾನ ಹೊಂದಿದಳು. ಸಿದ್ಧರೂ ಮುನಿಗಳೂ, ವಿಷ್ಣು ಭಗಿನಿಯಾದ ಆ ದೇವಿಯನ್ನು ಸ್ತೋತ್ರ ಮಾಡುತ್ತಲೇ ಇದ್ದರು.

## ಕಂಸವಿಚಾರ ಕಥನ

**ವೇದವ್ಯಾಸ:-** ದುರ್ಗಾದೇವಿಯ ಮಾತಿನಿಂದ ಕಂಸನ ಚಿತ್ತ ಉದ್ವಿಗ್ನವಾಯಿತು. ಕೂಡಲೇ ಅವನು ತನ್ನ ಹಿತಚಿಂತಕರಾದ ದೈತ್ಯಕುಲ ಧುರೀಣರನ್ನೆಲ್ಲ ಬರಮಾಡಿಕೊಂಡ. ಪ್ರಬಲ, ಕೇಶಿ, ಪೂತನಾ, ಅರಿಷ್ಟ, ಧೇನುಕ, ಮೊದಲಾದವರು ಕಂಸನ ಆಪ್ತ ಪರಿವಾರದಲ್ಲಿ ಪ್ರಮುಖರು. ತನ್ನ ವಿಶ್ವಾಸಿಕ ಆಪ್ತ ಪರಿವಾರದವರು ಎಂದು ನಂಬಿದ ಅವರನ್ನು ಕುರಿತು ಕಂಸ ಹೇಳಿದ. "ವೀರರೆ ಕೇಳಿದಿರಾ ಆ ದುರ್ಗೆಯ ಮಾತುಗಳನ್ನು? ಇದೆಲ್ಲವೂ ನನ್ನನ್ನು ಕೊಲ್ಲಲು ಹೊಂಚುಹಾಕಿದ ದೇವತೆಗಳ ಒಳಸಂಚು. ಹೇಗಾದರೂ ಮಾಡಿ ನನ್ನನ್ನು ಕೊಲ್ಲಬೇಕೆಂದು ಅವರ ಪ್ರಯತ್ನ ನಡೆದಿದೆ. ನನ್ನ ಪರಾಕ್ರಮದಿಂದ ಅವರು ಈಗಾಗಲೆ ಸಾಕಷ್ಟು ತಾಡಿತರೂ ಪರಿಹರಿಯಿಂದ ಪೀಡಿತರೂ ಆಗಿದ್ದಾರೆ. ನನ್ನನ್ನು ಮುಗಿಸಿಬಿಡುವ ಹುನ್ನಾರದಲ್ಲಿ ಸುರಗಣದವರೆಲ್ಲರೂ ತೊಡಗಿದ್ದಾರೆ. ಆದರೆ ಈ ದೇವತೆಗಳು ನನ್ನ ಮುಂದೆ ಏನು ಮಹಾ! ನಾನು ಎಂದೂ ಅವರನ್ನು ಲೆಕ್ಕಿಸುವುದಿಲ್ಲ. ಆದರೆ ನಾನು ಕೊಲ್ಲ ಹೊರಟ ವಸುದೇವನ ಆ ಹೆಣ್ಣು ಮಗು ಹೇಳಿದ ಮಾತನ್ನು ಹೇಳಿ ಆಶ್ಚರ್ಯವಾಗಿದೆ. ದೇವತೆಗಳು ನನ್ನನ್ನು ಕೊಲ್ಲಲು ಯತ್ನಿಸುತ್ತಿದ್ದಾರೆ ಎಂಬ ಮಾತೇ ಅಪಹಾಸ್ಯಕರ. ಆದರೂ ಆ ದುಷ್ಟರ ವಿಷಯದಲ್ಲಿ ನಾನು ಜಾಗರೂಕನಾಗಿರುವುದೇ ಒಳ್ಳೆಯದು. ಈಗ ದುಷ್ಟರಾದ ಆ ದೇವತೆಗಳಿಗೆ ಏನಾದರೂ ಅಪಕಾರವನ್ನು ಮಾಡಬೇಕು. ಆ ಸುರ ಸಂದೋಹಕ್ಕೆ ತಾಪ ತೊಂದರೆಗಳನ್ನು ನೀಡಲು ನೀವು ಯತ್ನಿಸಿರಿ. ದೇವಕಿಯ ಆ ಹೆಣ್ಣು ಮಗು ನನ್ನ ಕೈಯಿಂದ ಮೇಲಕ್ಕೆ ಹಾರಿ ಮುಗಿಲಿನ ಹೆಗಲ ಮೇಲೆ ಏರಿ ಹೇಳಿದ್ದು ನಿಮಗೆ ನೆನಪಿದೆಯಷ್ಟೆ! ಯಾವನೋ ಪರಮಾತ್ಮ ಹುಟ್ಟಿದ್ದಾನಂತೆ ಅವನು ಭೂತ, ಭವಿಷ್ಯ, ವರ್ತಮಾನಗಳಿಗೆಲ್ಲ ಪ್ರಭುವಂತೆ. ಅವನೇ ನನಗೆ ಮೃತ್ಯುವಾಗಿ ಬರುವನಂತೆ. ದೇವಕಿಯ ಆ ಹಸುಳೆ ಏನುಏನನ್ನೋ ಹೇಳಿತಷ್ಟೆ? ಇದೆಲ್ಲವೂ ಸುಳ್ಳು. ನನ್ನನ್ನು ಕೊಲ್ಲುವುದು ಯಾರಿಂದಲೂ ಸಾಧ್ಯವಿಲ್ಲ. ಆದರೂ ಆ ದೇವಕಿಯ ಹೆಣ್ಣು ಕೂಸು ನನ್ನ ಮೃತ್ಯು. ಅವನು ಎಲ್ಲಿಯೋ ಬಾಲಕನಾಗಿ ಬೆಳೆಯುತ್ತಿದ್ದಾನೆ ಎಂದು ಹೇಳಿದ್ದಷ್ಟೆ ಬಾನುಲಿ! ಆದುದರಿಂದ ನೀವು ಈಗ ಒಂದು ಕೆಲಸ ಮಾಡಿರಿ. ಈ ಜಗತ್ತಿನಲ್ಲಿರುವ ಎಲ್ಲ ಬಾಲಕರನ್ನು ಕೊಂದು ಹಾಕಿರಿ. ಹುಟ್ಟಿದ ಹಸುಗೂಸುಗಳನ್ನೆಲ್ಲ ಹಿಸುಕಿ ಹಾಕಿದರೆ ನನ್ನ ಮೃತ್ಯುವನ್ನೇ ಹೊಸಕಿ ಹಾಕಿದಂತಾಗುವುದು. ದುರ್ಗಾ ರೂಪವನ್ನು ಧರಿಸಿ, ಮುಗಿಲಿಗೆ ಜಿಗಿದು ಹೋದ ಆ ಹೆಣ್ಣು ಹಸುಳೆಯ ಮಾತು ಹುಸಿಯಾಗಿ ಹೋಗುವುದು."

ಹೀಗೆ ದುಷ್ಟಾತ್ಮನಾದ ಕಂಸನು ಆ ದುರುಳ ದಾನವರಿಗೆ ಅಪ್ಪಣೆ ಇತ್ತ. ಲೋಕದಲ್ಲಿಯ ಸಣ್ಣ ಸಣ್ಣ ಶಿಶುಗಳನ್ನೆಲ್ಲ ಕೊಂದು ಹಾಕಲು ಆದೇಶ ನೀಡಿ ಕಾರಾಗೃಹಕ್ಕೆ ಬಂದನು. ಅಲ್ಲಿ ದೇವಕೀ ವಸುದೇವರನ್ನು ಕಂಡನು, ವಿನಯದಿಂದ ಹೇಳಿದನು.

"ನಾನು ನಿಮ್ಮ ಆರು ಮಕ್ಕಳನ್ನು ನಾಶಮಾಡಿದೆನು. ಅನ್ಯಾಯವಾಗಿ ಹೋಯಿತು. ಈ ಎಳನೆಯ ಮಗುವನ್ನು ಮುಗಿಸಬೇಕೆಂದು ಹೊರಟಿದ್ದೆ. ಅದು ನನ್ನ ಕೈಯಿಂದ ಪಾರಾಗಿ ಹೋಯಿತು. ನನ್ನ ಮೃತ್ಯು ಬೇರೆ ಕಡೆಗೆ ಬೆಳೆಯುತ್ತಿದೆಯಂತೆ. ಸುಮ್ಮ ಸುಮ್ಮನೆ ನಿಮ್ಮ ಸತ್ಪುತ್ರರನ್ನು ನಾನು ವೃಥಾ ಸಾಯಿಸಿದಂತಾಯಿತು. ಆದದ್ದಾಯಿತು. ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? ನೀವು ಬದುಕಿ ಇರುವವರೆಗೂ ನಿಮ್ಮ ತಂಟೆಗೆ ಬರುವುದಿಲ್ಲ. ಇನ್ನು ಮುಂದೆ ಹುಟ್ಟುವ ನಿಮ್ಮ ಯಾವ ಮಗುವನ್ನು ನಾನು ಕೊಲ್ಲುವುದಿಲ್ಲ. ಇನ್ನು ಮೇಲೆ ನೀವು ಬೇಕಾದಷ್ಟು ಮಕ್ಕಳನ್ನು ಹಡೆಯಿರಿ. ಪುತ್ರ ಸೌಖ್ಯವನ್ನು ಪಡೆಯಿರಿ. ನಾನು ನಿಮ್ಮ ಮುಂದಿನ ಯಾವ ಮಕ್ಕಳನ್ನು ಮುಟ್ಟುವುದಿಲ್ಲ, ನಿಶ್ಚಿಂತೆಯಿಂದ ಇರಿ." ಹೀಗೆ ಕಂಸನು ದೇವಕೀ ವಸುದೇವರನ್ನು ಸಮಾಧಾನ ಪಡಿಸಿದ. ತನ್ನ ಮನೆಯಲ್ಲಿ ತನ್ನ ಮುಂದಿನ ಗತಿ, ಸ್ಥಿತಿ, ಹಾಗೂ ಮೃತಿಗಳ ಬಗ್ಗೆ ಚಿಂತಿಸುತ್ತ ಕುಳಿತುಕೊಂಡ.

## ವೃಂದಾವನ ಪ್ರವೇಶ ವರ್ಣನ

**ವೇದವ್ಯಾಸ:-** ವಸುದೇವನು ಕಂಸನಿಂದ ಬಿಡುಗಡೆಹೊಂದಿ ನಂದನಿದ್ದಲ್ಲಿಗೆ ಹೋಗಿ ಹೇಳಿದ "ನಂದಗೋಪ, ನಿನಗೆ ಪುತ್ರೋತ್ಸವವಾದದ್ದು ನನಗೆ ಪರಮ ಸಂತೋಷ. ನನಗೇ ಗಂಡು ಮಗು ಹುಟ್ಟಿದಷ್ಟೇ ಆನಂದವಾಯಿತು. ಈ ಇಳಿವಯಸ್ಸಿನಲ್ಲಿ ಪುತ್ರ ಜನನ ವಾದದ್ದರಿಂದ ನೀನು ನಿಜವಾಗಿಯೂ ಭಾಗ್ಯವಂತ, ನಿನ್ನ ಅದೃಷ್ಟವು ಉಜ್ವಲವಾಗಿದೆ. "ನಂದ, ನೀನು ಕಂಸನಿಗೆ ಕೊಡಬೇಕಾದ ಕಪ್ಪ ಕಾಣಿಕೆಗಳನ್ನೆಲ್ಲ ಕೊಟ್ಟಿರುವೆ. ನೀನು ಬಂದು ಕೆಲಸ ಆಯಿತು. ಇನ್ನು ಮೇಲೆ ಈ ಮಥುರೆಯಲ್ಲಿ ನೀನು ಏಕೆ ಇರುವೆ? ನೀವೆಲ್ಲರೂ ಆದಷ್ಟು ಬೇಗ ಗೋಕುಲಕ್ಕೆ ಹೋಗಿರಿ. ಆ ಗೋಕುಲದಲ್ಲಿ, ನನ್ನ ಇನ್ನೊಬ್ಬ ಮಡದಿ ರೋಹಿಣಿಯಿಂದ ನನಗೆ ರಾಮನೆಂಬ ಇನ್ನೊಬ್ಬ ಮಗನು ಜನಿಸಿದ್ದಾನೆ. ಆ ಕಂದನನ್ನು ನಿನ್ನ ಪುತ್ರನೆಂದೇ ಭಾವಿಸಿ ಕರುಣೆಯಿಂದ ಕಾಪಾಡು." ಎಂದು ಹೇಳಿದನು.

ವಸುದೇವನ ಮಾತನ್ನು ಕೇಳಿ ನಂದಗೋಪನು ಹಾಗೇ ಆಗಲಿ ಎಂದು ಹೇಳಿದ. ಕಂಸನಿಗೆ ಕಪ್ಪುಕಾಣಿಕೆ ಒಪ್ಪಿಸಬೇಕೆಂದು ನಂದಾದಿ ಗೋಪರು ಹಾಲು, ಮೊಸರು. ಬೆಣ್ಣೆ, ಜೇನುತುಪ್ಪ ಮೊದಲಾದವುಗಳನ್ನು ತಂದಿದ್ದರು. ತುಂಬಿದ ದೊಡ್ಡದೊಡ್ಡ ಪಾತ್ರೆಗಳನ್ನೆಲ್ಲ ಅರಮನೆಯಲ್ಲಿ ಅರ್ಪಿಸಿ ಸುರುವಿ ಖಾಲಿಯಾದ ಪಾತ್ರೆಗಳನ್ನೆಲ್ಲ ತಮ್ಮ ಬಂಡಿಗಳಲ್ಲಿ ಹಾಕಿಕೊಂಡು ಗೋಕುಲಕ್ಕೆ ನಡೆದರು.

ನಂದಗೋಪನ ಕುಟುಂಬವು ಗೋಕುಲದಲ್ಲಿ ಸಂತೋಷದಿಂದ ವಾಸಿಸುವಾಗ ಒಂದು ದುರ್ಘಟನೆ ನಡೆಯಿತು. ರಾತ್ರಿ ಸಮಯ ಮಕ್ಕಳನ್ನು ತಿಂದು ಮುಕ್ಕುವ ಪೂತನಾ ಎಂಬ ರಕ್ಕಸಿಯು ಗೋಕುಲಕ್ಕೆ ಬಂದಳು. ಮಲಗಿದ ಕೃಷ್ಣನನ್ನು ಎತ್ತಿಕೊಂಡಳು. ತೊಡೆಯ ಮೇಲೆ ಮಲಗಿಸಿ ಅವನಿಗೆ ವಿಷ ಹತ್ತಿದ ತನ್ನ ಮೊಲೆಯನ್ನು ಕುಡಿಯಲು ಬಾಯಲ್ಲಿ ಇಟ್ಟಳು.

ಕೃಷ್ಣ ತನ್ನ ಎರಡು ಕೈಗಳಿಂದ ಅವಳ ಮೊಲೆಯನ್ನು ಒತ್ತಿ ಹಿಸುಕಿದ. ಮತ್ತು ಸಿಟ್ಟಿನಿಂದ ಅವಳ ಹಾಲನ್ನು ಕುಡಿದು ಬಿಟ್ಟ. ಅವಳ ಹಾಲಿನ ನೆಪದಿಂದ ಅವಳ ಪಂಚ

ಪ್ರಾಣವನ್ನೆ ಹೀರಿದ. ಒಮ್ಮೆಲೆ ಆ ರಾಕ್ಷಸಿಯು ಮರಣ ಸಂಕಟಕ್ಕೆ ಗಟ್ಟಿಯಾಗಿ ಕಿರುಚಿದಳು. ಅವಳ ದೇಹದ ಎಲುಬಿನ ಕೀಲು ಸಂಧಿಗಳೆಲ್ಲವು ಲಿಕಿಲಿಕಿಯಾಗಿ ಮುರಿದು ಮುದ್ದೆಯಾದವು. ಸ್ಪುರದ್ರೂಪವತಿಯಾದ ಹೆಣ್ಣಿನ ವೇಷ ತೊಟ್ಟು ಬಂದ ಅವಳಿಗೆ ಸಾಯುವ ಸಮಯದಲ್ಲಿ ನಿಜರೂಪ ಪ್ರಕಟವಾಯಿತು. ಘೋರವಾದ ವಿಕಾರ ರೂಪದಿಂದ ಭಯಂಕರ ಧ್ವನಿಯಿಂದ ಚೀರುತ್ತ ಅವಳು ನೆಲದ ಮೇಲೆ ಉರುಳಿದಳು. ಭೂಮಿ ಬಿರಿಯುವಷ್ಟು ಭೀಕರವಾಗಿದ್ದಿತ್ತು ಆ ಸದ್ದು. ಅದನ್ನು ಕೇಳಿ ಊರಿನವರೆಲ್ಲರು ಎಚ್ಚತ್ತು ಬೆಚ್ಚಿ ಬಿದ್ದರು. ಓಡಿ ಬಂದು ನೋಡುತ್ತಾರೆ. ಭಯಂಕರ ರಾಕ್ಷಸಿ ಅಕರಾಳ ವಿಕರಾಳ ದೇಹದಿಂದ ಸತ್ತು ಬಿದ್ದಿದ್ದಾಳೆ. ಅವಳ ತೊಡೆಯ ಮೇಲೆ ಆಡುವ ಕೃಷ್ಣ ನಗುತ್ತಿದ್ದಾನೆ.

ಓಡಿ ಬಂದಳು ಯಶೋದೆ, ಪೂತನಿಯ ಎದೆಯ ಮೇಲಾಡುವ ಕೃಷ್ಣನನ್ನು ಎತ್ತಿಕೊಂಡಳು. ಕೊಟ್ಟಿಗೆಗೆ ಕರೆದುಕೊಂಡು ಹೋಗಿ ತನ್ನ ಕಂದನಿಗೆ ಹಸುವಿನ ಬಾಲವನ್ನು ನಿವಾಳಿಸಿ ದೃಷ್ಟಿ ದೋಷವನ್ನು ತೆಗೆದಳು. ನಂದಗೋಪನು ಗೋಮಯವನ್ನು ತಂದು ಮಗುವಿನ ತಲೆಗೆ ಅದನ್ನು ಲೇಪಿಸಿ 'ಸರ್ವತೊ ಭದ್ರ' ರಕ್ಷೆಯನ್ನು ಮಾಡಿದನು. ''ತನ್ನ ಮಗುವಿನ ರಕ್ಷಣೆಯನ್ನು ಎಲ್ಲ ದೇವತೆಗಳು ಮಾಡಲಿ ಅವನ ಅಂಗಾಂಗಗಳನ್ನು ಭಗವಂತನ ಬಗೆ ಬಗೆಯ ರೂಪಗಳು ರಕ್ಷಿಸಲಿ'' ಎಂದು ಬೇಡಿಕೊಂಡನು.

## ನಂದಗೋಪನ ರಕ್ಷಾಮಂತ್ರ

**ರಕ್ಷತುತ್ವಾಂ ಮಹೇಶಾನಃ ಭೂತಾನಾಂ ಪ್ರಭವೋಹರಿಃ ।**
**ಯಸ್ಯ ನಾಭಿಸಮುದ್ಭೂತಾತ್ ಪಂಕಜಾದಭವಜ್ಜಗತ್ ॥**

ಎಲ್ಲ ಪ್ರಾಣಿಗಳಿಗೂ ಸೃಷ್ಟಿಕಾರನಾದ ಶ್ರೀಹರಿಯು ನಿನ್ನನ್ನು ರಕ್ಷಿಸಲಿ. ಆ ಭಗವಂತನ ನಾಭಿಕಮಲದಿಂದ ಹುಟ್ಟಿದ ಬ್ರಹ್ಮನು ಈ ಜಗತ್ತನ್ನು ನಿರ್ಮಾಣ ಮಾಡಿದ್ದು ಆ ನಾರಾಯಣನ ಪ್ರೇರಣೆಯಿಂದಲೆ ಆದುದರಿಂದ ಜಗತ್ತಿನ ನಿಜವಾದ ಸೃಷ್ಟಿಕರ್ತ ಆ ನಾರಾಯಣನೇ. ಅವನೇ ರಕ್ಷಕ. ಅವನೇ ಶಿಕ್ಷಕ. ವರಾಹ ರೂಪದಿಂದ ತನ್ನ ಕೋರೆದಾಡೆಯ ಮೇಲೆ ನೀರಿನಲ್ಲಿ ಮುಳುಗಿದ ಭೂಮಿಯನ್ನು ಎತ್ತಿ ತಂದು ಉದ್ಧಾರ ಮಾಡಿದ ಕೇಶವನು ನಿನ್ನನ್ನು ರಕ್ಷಿಸಲಿ. ನಿನ್ನ ಗುಹ್ಯಸ್ಥಾನವನ್ನು ವಿಷ್ಣುವು, ಜಠರವನ್ನು ಜನಾರ್ದನನು, ಮೊಣಕಾಲನ್ನು ಮಧುಸೂದನನು, ಪಾದಗಳನ್ನು ಪುರುಷೋತ್ತಮನು ರಕ್ಷಿಸಲಿ. ನಿನ್ನನ್ನು ಸದಾ ಸರ್ವದಾ ವಾಮನ ಮೂರ್ತಿಯು ಅಕ್ಷತವಾಗಿ ರಕ್ಷಿಸಲಿ. ತ್ರಿವಿಕ್ರಮ ರೂಪದಿಂದ ಮೂರು ಲೋಕಗಳನ್ನು ಆಕ್ರಮಿಸಿದ ಗೋವಿಂದನು ನಿನ್ನ ಮಸ್ತಕವನ್ನು ರಕ್ಷಿಸಲಿ. ನಿನ್ನ ಮುಖ ಕೈಕಾಲು ಎಲ್ಲ ಇಂದ್ರಿಯಗಳು ಹಾಗೂ ಮನಸ್ಸು ಎಲ್ಲವನ್ನು ನಾಶರಹಿತನಾದ ಅಪ್ರತಿಹತ ಐಶ್ವರ್ಯ ಸಂಪನ್ನನಾದ ನಾರಾಯಣನು ರಕ್ಷಿಸಲಿ.

ದಶದಿಕ್ಕುಗಳಲ್ಲಿ ವೈಕುಂಠನು, ಉಪದಿಕ್ಕುಗಳಲ್ಲಿ ಮಧುಸೂಧನನು, ಆಕಾಶದಲ್ಲಿ ಹೃಷೀಕೇಶನು, ಭೂಮಿಯಲ್ಲಿ ಶ್ರೀಧರನು ನಿನ್ನನ್ನು ಕಾಪಾಡಲಿ.

ಹೀಗೆ ನಂದಗೋಪನು ಕೃಷ್ಣನಿಗೆ ಸ್ವಸ್ತಿವಾಚನ ಪೂರ್ವಕವಾಗಿ ಮಂತ್ರ ರಕ್ಷಣೆಯನ್ನು ಮಾಡಿ ಒಂದು ಚಕ್ಕಡಿಯ ಬುಡದಲ್ಲಿ ಹಾಸಿಗೆಯ ಮೇಲೆ ಮಲಗಿಸಿದ್ದನ್ನು, ಗೋಪಾಲಕರೆಲ್ಲರು ಸತ್ತುಬಿದ್ದ ಪೂತನಿಯ ಭೀಕರ ಆಕಾರದ ಶವವನ್ನು ನೋಡಿ

ಭಯವನ್ನು, ಆಶ್ಚರ್ಯವನ್ನು ಹೊಂದಿದರು. ಇಂಥ ಮೃತ್ಯು ಸಂಕಟಗಳಿಂದ ಪರಮಾತ್ಮನೇ ತಮ್ಮನ್ನು ಕರುಣೆಯಿಂದ ಕಾಪಾಡಲಿ ಎಂದು ಕೇಳಿಕೊಂಡರು.

ಮುಂದೆ ಒಂದು ದಿನ ನಂದಗೋಪನ ಮಡದಿಯಾದ ಯಶೋದೆಯು ತನ್ನ ಮಗುವನ್ನು ಎರೆದು ಚಕ್ಕಡಿಯ ಕೆಳಗೆ ಮಲಗಿಸಿದ್ದಳು. ಮಗುವಿಗೆ ಹಸಿವೆ ಆಗಿದ್ದಿತು. ತಾಯಿಯ ಹಾಲನ್ನು ಬಯಸಿ ರೋದಿಸತೊಡಗಿತು. ಎರಡೂ ಕಾಲನ್ನು ಮೇಲೆ ಎತ್ತಿ ರೋದನ ಕಾಲದಲ್ಲಿ ಮಗು ಸ್ವಾಭಾವಿಕವಾಗಿ ಕಾಲು ಆಡಿಸುತ್ತಲಿರುವಾಗ ಅದು ಚಕ್ಕಡಿಗೆ ತಾಗಿತು. ಕೂಸಿನ ಕಾಲಿನ ಏಟಗಳಿಂದ ಹಾಲು, ಮೊಸರಿನ ಕುಡಿಕೆ ಮಡಿಕೆಗಳಿಂದ ತುಂಬಿದ ಬಂಡಿಯು ಒಮ್ಮೆಲೆ ಉರುಳಿ ಬಿದ್ದಿತು. ಕುಡಿಕೆ ಮಡಿಕೆಗಳೆಲ್ಲವೂ ಹೊರಳಿ, ಹಾಲು ಮೊಸರು ಉರುಳಿ ಬಂಡಿಯು ಕೂಡ ತಿರುಗಿ ಬಿದ್ದಿತು. ಆಗ ಗೋಪ ಗೋಪಿಯರೆಲ್ಲರೂ ಹಾಹಾಕಾರ ಮಾಡುತ್ತ ಅಲ್ಲಿಗೆ ಓಡಿ ಬಂದರು. ಕೃಷ್ಣನನ್ನು ನೋಡಿದರು. ಅವನು ಮುಖ ಮೇಲೆ ಮಾಡಿಕೊಂಡು ಸುಖವಾಗಿ ಮಲಗಿದ್ದ.

"ಈ ಬಂಡಿಯನ್ನು ಉಳಿಸಿದವರು ಯಾರು?" ಎಂದು ಗವಳಿಗರು ಸನಿಹದಲ್ಲಿದ್ದವರಿಗೆ ಕೇಳಿದರು. ಬಳಿಯಲ್ಲಿಯೇ ನಿಂತು ಈ ಘಟನೆಯನ್ನು ಗಾಡಿ ಬುಡಮೇಲಾದುದನ್ನು ಪ್ರತ್ಯಕ್ಷ ನೋಡಿದ ಹುಡುಗರು. "ಈ ಮಗುವೇ, ಈ ಬಂಡಿಯನ್ನು ಒದ್ದು ಕೆಡವಿತು. ಆಗ ಈ ಕೂಸು ಅಳುತ್ತಿತ್ತು. ಅಳುವಾಗ ಅದರ ಕಾಲುಗಳು ಚಕ್ಕಡಿಗೆ ತಾಕಿದವು. ಅದರಿಂದ ಈ ಗಾಡಿಯು ಹೊರಳಿ ಬಿದ್ದಿತು. ಇದನ್ನು ನಾವು ಸ್ವತಃ ನಮ್ಮ ಕಣ್ಣಿನಿಂದಲೇ ನೋಡಿದ್ದೇವೆ, ಈ ಹೆಬ್ಬಂಡಿಯನ್ನು ಉರುಳಿಸಲು ಬೇರೆ ಯಾರೂ ಇಲ್ಲಿಗೆ ಬಂದಿಲ್ಲ." ಎಂದು ಹೇಳಿದರು.

ಇದನ್ನು ಕೇಳಿ ಜನರಿಗೆಲ್ಲ ಆಶ್ಚರ್ಯವೋ ಆಶ್ಚರ್ಯ. ನಂದಗೋಪನಿಗೆ ಅತ್ಯಂತ ವಿಸ್ಮಯ. ಯಶೋದೆಗೆ ಆಶ್ಚರ್ಯ, ಆನಂದ, ಗಾಬರಿ, ದುಃಖ, ಚಿಂತ ಎಲ್ಲವೂ ಏಕಕಾಲಕ್ಕೆ ಆದವು. ಗಡಿಗೆ ಮಡಿಕೆಗಳೆಲ್ಲವು ಒಡೆದು ಹೋದುದರಿಂದ ಆ ಗಾಡಿಯನ್ನು ಮೊಸರು ಹೂ ಹಣ್ಣು ಅಕ್ಷತೆಗಳಿಂದ ಪೂಜೆಗೈದರು.

## ನಾರಾಯಣನಿಗೆ ನಾಮಕರಣ

ಮುಂದೆ ಒಂದು ದಿನ ಗೋಪಾಲಕನ ಗುರುಗಳಾದ ಗರ್ಗಾಚಾರ್ಯರು ಗೋಕುಲಕ್ಕೆ ಬಂದರು. ವಸುದೇವನು ಮಧುರೆಯಿಂದ ಅವರನ್ನು ಗೋಕುಲಕ್ಕೆ ಕಳುಹಿಸಿಕೊಟ್ಟಿದ್ದ. ಎರಡು ಮಕ್ಕಳಿಗೂ ನಾಮಕರಣ ಮಾಡಬೇಕೆಂದು ವಿಜ್ಞಾಪಿಸಿಕೊಂಡಿದ್ದ. ಅದರಂತೆ ಅವರು ಗೋಕುಲಕ್ಕೆ ಬಂದು ನಂದಗೋಪನನ್ನು ಕಂಡು ಯಶೋದೆಯ ಮಗನಿಗೂ ರೋಹಿಣಿಯ ಮಗನಿಗೂ ಜಾತಕರ್ಮ ನಾಮಕರಣಾದಿ ಸಂಸ್ಕರಣವನ್ನು ಮಾಡಿದರು. ಮಹಾಜ್ಞಾನಿಗಳು ಆ ಗರ್ಗರು. ನೋಡಿದ ಕೂಡಲೆ ತಿಳಿದುಕೊಂಡುಬಿಟ್ಟರು ಈ ಎರಡು ಮಕ್ಕಳು ಯಾರು ಎಂಬುದನು. ಅವರಿಬ್ಬರ ನಿಜ ಸ್ವರೂಪವು ಅವರ ಜ್ಞಾನದೃಷ್ಟಿಗೆ ಕಂಡ ತಕ್ಷಣದಲ್ಲಿಯೆ ಗೋಚರಿಸಿ ಬಿದ್ದಿತು. ಆದುದರಿಂದ ಅವರು ಹಿರಿಯನಿಗೆ ಬಲರಾಮನೆಂದೂ, ಕಿರಿಯನಿಗೆ ಕೃಷ್ಣನೆಂದೂ ಹೆಸರು ಇಟ್ಟರು.

ಕೆಲವೇ ದಿನಗಳಲ್ಲಿ ಆ ರಾಮ, ಕೃಷ್ಣರು ಬಲಿಷ್ಠರೆಂಬುದು ತಿಳಿದು ಬಂದಿತು. ತಮ್ಮ ಕೈಕಾಲುಗಳನ್ನು ಸವರುತ್ತ ತೆವಳುತ್ತ ಮನೆತುಂಬ ಹರಿದಾಡ ಹತ್ತಿದರು. ಮುಂದೆ ಮನೆಯ

ಹೊಸ್ತಿಲುದಾಟಿ ಅಂಗಳಕ್ಕೆ ಇಳಿದರು. ಅಂಗಳದಲ್ಲಿ ಉರುಳಾಡಿದರು. ಓಣಿಯಲ್ಲಿ ಈಡಾಡಿದರು. ಮೈತುಂಬ ಧೂಳಿ, ಧೂಸರ, ಕಸರು, ಕೆಸರು, ಸೆಗಣಿ ಮೆತ್ತಿ ವ್ರಜ ಭೂಮಿಯನ್ನೆಲ್ಲ ಸುತ್ತ ತೊಡಗಿದರು. ಅವರನ್ನು ಹಿಡಿಯುವುದೇ ಕಷ್ಟವಾಯಿತು ತಾಯಿ ಯಶೋಧೆಗೆ ದನಗಳ ಕೊಟ್ಟಿಗೆಗಳಿಗೆ ನುಗ್ಗುತ್ತಿದ್ದರು. ಕರು ಕಟ್ಟದಲ್ಲಿ ಆಡುತ್ತಿದ್ದರು. ಕರುಗಳ ಬಾಲವನ್ನು ಕೈಯಿಂದ ಹಿಡಿದು ಜಗ್ಗುತ್ತಿದ್ದರು. ಅವರು ಒಂದು ಕಡೆ ನಿಲ್ಲುತ್ತಿದ್ದಿಲ್ಲ. ಇಬ್ಬರೂ ಕೂಡಿ ಊರು ತುಂಬ ಓಡಾಡುತ್ತಿದ್ದರು. ಓಣಿಯಲ್ಲಿ ಆಟವಾಡುತ್ತಿದ್ದರು. ಯಾರಿಗೂ ಹಿಡಿಯಲು ಆಗುತ್ತಿರಲಿಲ್ಲ. ಅದರಲ್ಲಿಯು ಕೃಷ್ಣನ ಉಲಕೊಚಿತನವನ್ನು ಆ ತಾಯಿಗೆ ತಾಳುವುದೇ ಆಗಲಿಲ್ಲ. ಅವನ ಹುಡುಗಾಟ, ಹರಿದಾಟ, ಅಲೆದಾಟ ತಡೆಯಲಿಕ್ಕೆ ಆಗದೆ ಬೇಸತ್ತಳು. ಕೊನೆಗೆ ಒಂದು ದಿನ ಹಗ್ಗ ತೆಗೆದುಕೊಂಡು ಕೃಷ್ಣನನ್ನು ಸಿಟ್ಟಿನಿಂದ ಒರಳಿಗೆ ಬಿಗಿದು ಕಟ್ಟಿದಳು ಮತ್ತು ಆ ಬಾಲ ಕೃಷ್ಣನಿಗೆ ಗದರಿಸಿ ಹೇಳಿದಳು. ''ಎಲೈ, ತುಂಟ ಕೃಷ್ಣನೆ, ನಿನ್ನ ಈ ಚಂಚಲ ಚೇಷ್ಟೆಗಳಿಂದ ನನಗೆ ಸಾಕಾಗಿ ಹೋಗಿದೆ. ಅದಕ್ಕಾಗಿ ನಿನ್ನನ್ನು ಈ ಒರಳಿಗೆ ಬಿಗಿದಿದ್ದೇನೆ. ನಿನಗೆ ಶಕ್ತಿಯಿದ್ದರೆ ಬಿಡಿಸಿಕೊಂಡು ಹೋಗು ನೋಡೋಣ.'' ಹೀಗೆ ಹೇಳಿ ಆ ಯಶೋದೆಯು ತನ್ನ ಕೃತ್ಯದಲ್ಲಿ ಆಸಕ್ತಳಾದಳು. ತನ್ನ ತಾಯಿ ಮನೆಗೆಲಸಗಳಲ್ಲಿ ತೊಡಗಿದ ಬಳಿಕ ಕೃಷ್ಣನು ತನ್ನನ್ನು ಕಟ್ಟಿದ ಒರಳನ್ನೇ ಎಳೆದು ಕೊಂಡು ಹೊರಟ. ಅಂಬೆಗಾಲು ಇಡುತ್ತ ಓಣಿಯಲ್ಲಿ ನಡೆದ. ಅವನ ಹೊಟ್ಟೆಗೆ ಕಟ್ಟಿದ ಹಗ್ಗವನ್ನು ಜಗ್ಗುತ್ತ ಅವನು ಓಣಿಯಲ್ಲಿ ಮುಂದುವರಿದಾಗ ಆ ಹಗ್ಗಕ್ಕೆ ಬಿಗಿದ ಕಲ್ಲಿನ ಒರಳು ಕೂಡ ಬೀದಿಯಲ್ಲಿ ಉರುಳುತ್ತ, ಹೊರಳುತ್ತ ಅವನ ಬೆನ್ನ ಹಿಂದೆ ಬರತೊಡಗಿತು. ಕೃಷ್ಣನು ಆ ಒರಳನ್ನು ಎಳೆಯುತ್ತಲೆ ಓಣಿ ದಾಟಿದ. ಊರ ಹೊರಗೆ ಬಂದ.

ಆ ನಂದಗೋಕುಲ ಗ್ರಾಮದ ಹೊರವಲಯದಲ್ಲಿ ಎರಡು ಅವಳಿ ಹೆಮ್ಮರಗಳು ತಲೆಯೆತ್ತಿ ನಿಂತಿದ್ದವು. ಕೃಷ್ಣನು ಆಡುತ್ತ, ಓಡುತ್ತ ಒರಳನ್ನು ಜಗ್ಗುತ್ತ ಜೋಡಾಗಿ ಬೆಳೆದ ಅರ್ಜುನ ವೃಕ್ಷಗಳ ನಡುವೆ ಹಾಯ್ದು ಹೊರಗೆ ಬಂದ. ಆ ಒರಳು ಮಾತ್ರ ಆ ಜೋಡು ವೃಕ್ಷಗಳ ಸಂದಿಯಲ್ಲಿ ಹೋಗಲಾರದೆ, ಗಿಡದ ಬಡ್ಡೆಗೆ ಅಡ್ಡ ತಟ್ಟಿ ನಿಂತುಕೊಂಡಿತು. ವೃಕ್ಷಗಳ ಸಂದಿಯಲ್ಲಿ ತೂರಿ ಆಚೆಗೆ ಹೋದ ಕೃಷ್ಣನು ಆ ಒರಳನ್ನು ಜೋರಿನಿಂದ ಜಗ್ಗಿದ. ಆಗ ಗಗನ ಚುಂಬಿಯಾದ ಆ ಅವಳಿ ಮರಗಳು ಭಯಂಕರವಾದ ಕಟಕಟ ಶಬ್ದವನ್ನು ಮಾಡುತ್ತ ಮುರಿದು ಬಿದ್ದವು. ಬ್ರಹ್ಮಾಂಡ ಭೇದಿಯಾದ ಆ ಭೀಕರ ಸದ್ದನ್ನು ಕೇಳಿ ಹೆದರಿ ಹೋದ ಗೋಪಾಲಕರು ಓಡಿ ಬಂದರು. ದೂರನಿಂತು ನೋಡಿದರು. ಎರಡೂ ಹೆಮ್ಮರಗಳು ಮುರಿದು ಬಿದ್ದಿದ್ದವು. ಟೊಂಗೆಗಳು ಭಂಗವಾಗಿದ್ದವು ಬೊಡ್ಡೆಯು ಮುರಿದು ಹೋಗಿದ್ದಿತು ಬೇರುಗಳು ಬುಡದಿಂದ ಕಿತ್ತಿ ಮೇಲಕ್ಕೆ ಬಂದಿದ್ದವು. ಕೊಂಬೆಗಳು ಲಟ ಲಟ ಮುರಿದು ತುಂಡು ತುಂಡಾಗಿ ಅತ್ತಿತ್ತ ಬಿದ್ದಿದ್ದವು. ಅವುಗಳ ಮಧ್ಯದಲ್ಲಿ ತನ್ನ ಚಿಕ್ಕ ಚಿಕ್ಕ ಹಲ್ಲುಗಳನ್ನು ತೋರಿಸುತ್ತ ಕೃಷ್ಣನು ನಗುತ್ತಿದ್ದ. ಅವನ ತಾಯಿಯು ಹೊಟ್ಟೆಗೆ ಬಿಗಿದ ಹಗ್ಗವು ಇನ್ನೂ ಕಾಣುತ್ತಲಿತ್ತು. ಹಗ್ಗದ ಬಾರುಗಳು ಇನ್ನು ಹೊಟ್ಟೆಯ ನಡುವೆ ಕಲೆಯಾಗಿ ಕಚ್ಚಾಗಿ ನಿರಂತರ ಮೂಡಿ ಬಿಟ್ಟಿದ್ದರಿಂದ ಅವನಿಗೆ ದಾಮೋದರ ಎಂದು ಹೆಸರಾಯಿತು. ಇದಾದ ಬಳಿಕ ಗೋಪಾಲಕರೆಲ್ಲರು ಒಂದೆಡೆ ಕೂಡಿದರು. ಆಲೋಚನೆ ಮಾಡಿದರು.

''ನಾವು ಇನ್ನು ಈ ಸ್ಥಳದಲ್ಲಿ ಇದ್ದು ಉಪಯೋಗವಿಲ್ಲ. ಇಲ್ಲಿ ಘಾತ ಪಾತಗಳು ಬಹಳಷ್ಟು ಆಗುತ್ತಲಿವೆ. ಮಕ್ಕಳನ್ನು ಕೊಲ್ಲುವ ಪೂತನಿ ಎಂಬ ರಕ್ಕಸಿ ಇಲ್ಲಿಗೆ ಬಂದು ತಾನೆ

ಸತ್ತು ಹೋದಳು. ಗಾಳಿ, ಘೂಳಿ ಯಾವುದೂ ಇಲ್ಲದೆ ಹೆಬ್ಬಂಡೆಯು ಒಗ್ಗಾಲಾಗಿ ಮುರಿದು ಬಿದ್ದಿತು. ಯಾವ ಬಿರುಗಾಳಿ ಬೀಸದೆ ಮಳೆಗಾಳಿ ತಟ್ಟದೆ ಮರಗಳು ಮುರಿದು ಬಿದ್ದವು. ಆದುದರಿಂದ ನಾವು ಈ ಸ್ಥಳವನ್ನು ಬಿಟ್ಟು ಬಿಡೋಣ. ಈ ಸ್ಥಳವನ್ನು ಬಿಟ್ಟು ವೃಂದಾವನಕ್ಕೆ ಹೋಗೋಣ. ಅಲ್ಲಿ ಹಸುಗಳಿಗೆ ಮೇಯಲು ರಸಮಯವಾದ ಹೊಸ ಹುಲ್ಲುಗಾವಲು ಇದೆ. ಪಕ್ಕದಲ್ಲಿಯೇ ಕಾಲಿಂದೀ ನದಿಯು ಹರಿಯುತ್ತಿದೆ. ಆದುದರಿಂದ ನಾವು ಎಲ್ಲರೂ ಈಗಲೇ ನಮ್ಮ ವಸತಿಯನ್ನು ಸ್ಥಳಾಂತರಿಸೋಣ.

ಹೀಗೆ ಆಲೋಚಿಸಿ ಆ ಗೋಪಾಲಕರೆಲ್ಲರು ತಮ್ಮ ಮಡದಿ ಮಕ್ಕಳು ಹಸು, ಕರು, ಪಾತ್ರೆ, ಪರಡೆ, ಆವು ಗೋವುಗಳೊಂದಿಗೆ ಗೋಕುಲವನ್ನು ತ್ಯಜಿಸಿ ವೃಂದಾವನದ ಸುತ್ತಲೂ ನಿಲ್ಲಿಸಿದರು. ಸುಂದರವಾದ ಆ ವೃಂದಾವನದ ಭೂಮಿಯಲ್ಲಿ ಬಲರಾಮ, ಕೃಷ್ಣರು ಆನಂದದಿಂದ ಕ್ರೀಡಿಸತೊಡಗಿದರು. ಅಲ್ಲಿ ಈರ್ವರು ಬಾಲಕರು ಬಾಲಲೀಲೆಗಳನ್ನು ಆಡುತ್ತ ಗೋಪಾಲಕರೊಡನೆ ಓಡಾಡಿದರು. ಕಿವಿಗಳಲ್ಲಿ ಚಿಗುರುಗಳು, ಕೊರಳಲ್ಲಿ ಕುಸುಮ ಮಾಲೆ, ತಲೆಯ ಮೇಲೆ ನವಿಲುಗರಿ. ಬಾಯಲ್ಲಿ ಹಾಡುಗಳುಳ್ಳ ಗೆಳೆಯರೊಂದಿಗೆ ಗೋಪಾಲ ವೇಷದಿಂದ ಈ ರಾಮಕೃಷ್ಣರು ಹಾಡುತ್ತ ಪಾಡುತ್ತ ಆಟವಾಡುತ್ತಿದ್ದರು. ಕೊಳಲುಗಳನ್ನು ಊದಿ ಅವುಗಳ ಮಧುರ ಸಂಗೀತ ಧ್ವನಿಯಿಂದ ಹಸು ಮತ್ತು ಕರುಗಳನ್ನು ಕರೆಯುತ್ತಿದ್ದರು. ದನಗಾಹಿ ಗೆಳೆಯರೊಡನೆ ನಗುತ್ತ ಕುಣಿಯುತ್ತ ಕೇಕೆ ಹಾಕುತ್ತ ಆಟವಾಡಿ, ತಾವು ಓಡಿ ಕರುಗಳನ್ನು ಓಡಾಡಿಸುತ್ತ ಕ್ರೀಡಿಸುತ್ತಿದ್ದರು.

ಹೀಗೆ ಅನೇಕ ವರುಷಗಳು ಕಳೆದು ರಾಮ-ಕೃಷ್ಣರಿಗೆ ಏಳು ವರುಷ ವಯಸ್ಸಾಯಿತು. ಮಳೆಗಾಲ ಪ್ರಾರಂಭವಾಯಿತು. ಮುಗಿಲಿನ ತುಂಬಮೋಡಗಳ ಗುಡುಗಾಟ. ಆಗಾಗ ಮಿಂಚಿನ ಗೊಂಚಲಗಳ ಥಳಕು ಸೆಳಕುಗಳು. ಧಾರಾಕಾರವಾಗಿ ಮಳೆ. ನೋಡ ನೋಡಿದಲ್ಲೆಲ್ಲ ಹಚ್ಚು ಹಸಿರು. ಪರಿಸರ ಪ್ರದೇಶದಲ್ಲೆಲ್ಲ ಪಚ್ಚೆ ಪಯರಿನ ಹುಲುಸಾದ ಬೆಳೆ. ತರು ಲತೆಗಳಲ್ಲಿ ಕುಂಜ ನಿಕುಂಜಗಳಲ್ಲಿ ಹೂವಿನ ಸುಗ್ಗಿ. ನಿರಂತರ ಮಳೆಯಿಂದ ನದಿಗೆ ನೆರೆಬಂದು, ನೊರೆತೂರಿ, ನೀರುತೀರದಲ್ಲಿ ನುಗ್ಗಿಹರಿಯತೊಡಗಿತು. ಇಂತಹ ರಮಣೀಯ ವಾದ ವರ್ಷ ಸಮಯದಲ್ಲಿ ರಾಮಕೃಷ್ಣರು ಹರ್ಷಭರಿತರಾಗಿ ಗೋಪಾಲ ಬಾಲಕರೊಡನೆ ಸ್ವೇಚ್ಛೆಯಿಂದ ಸ್ವಚ್ಛಂದವಾಗಿ ಆಟವಾಡುತ್ತ ದೇವತೆಗಳಂತೆ ಶೋಭಿಸಿದರು.

## ಕಾಲಿಯ ಮರ್ದನ

**ವ್ಯಾಸ:-** ಒಂದಾನೊಂದು ದಿನ ಶ್ರೀಕೃಷ್ಣನು ದನಗಾಹಿ ಮಿತ್ರರೊಡನೆ ಯಮನೆಯ ತೀರದ ವನಕ್ಕೆ ಹೋದನು. ಅಂದು ತನ್ನ ಅಣ್ಣ ಬಲರಾಮನನ್ನು ಬಿಟ್ಟೇ ಕಾಡಿಗೆ ನಡೆದ. ಅನಂತರ ಅಲ್ಲಿಯ ವನೋಪವನಗಳಲ್ಲಿ ಆಟವಾಡುತ್ತ ತಿಳಿನೀರಿನ ತೊರೆಯಾದ ಯಮುನೆಯ ತೀರಕ್ಕೆ ಬಂದರು. ಕಲಿಂದ ಪರ್ವತದಿಂದ ಅದು ಹರಿದಿದ್ದರಿಂದ ಅದಕ್ಕೆ ಕಾಲಿಂದೀ ಎಂದು ಹೆಸರಿದ್ದಿತು. ಆ ಕಾಲಿಂದಿಯ ನೀರಿನ ನಟ್ಟ ನಡುವೆ ಒಂದು ಮಡುವು. ಆ ಮಡುವಿನಲ್ಲಿ ಭೀಕರ ಆಕಾರದ ಒಂದು ಹೆಬ್ಬಾವು. ಅದರ ವಿಷ ಕಾಲಕೂಟಕ್ಕಿಂತಲೂ ಭಯಂಕರ. ಆ ವಿಷದ ತೀಕ್ಷ್ಣತೆಯಿಂದ ಆ ನದಿಯ ನಡು ನೀರಿನಲ್ಲಿರುವ ಮಡುವಿನ ಜಲವೆಲ್ಲವು ವಿಷವಾಗಿ ಕೊತ ಕೊತನೆ ಕುದಿಯುತ್ತಿತ್ತು. ಅದರಮೇಲೆ ಹಾಯ್ದುಬಂದ ಗಾಳಿಗೆ ದಡದ ಮೇಲಿರುವ ಗಿಡಗಳೆಲ್ಲ ಸುಟ್ಟು ಬೂದಿಯಾಗಿದ್ದವು. ಮರದ ಮೇಲಿರುವ

ಹಕ್ಕಿ ಪಕ್ಕಿಗಳೆಲ್ಲವು ಆ ವಿಷಾಗ್ನಿಯಿಂದ ಉರಿದು ಹೋಗುತ್ತಿದ್ದವು. ಇದರಿಂದಾಗಿ ಆ ಯಮುನೆಯ ನೀರು ಯಾರಿಗೂ ಕುಡಿಯಲು ಬಾರದಂತಾಗಿತ್ತು. ಅಮೃತ ವಾಹಿನಿಯಾದ ಯಮುನೆಯು ಈಗ ವಿಷವಾಹಿನಿಯಾಗಿದ್ದಳು.

ಆ ಕ್ಷಣದಲ್ಲಿಯೆ ಕೃಷ್ಣನು ಆ ದುಷ್ಟ ದಂದಶೂಕವನ್ನು ದಮನ ಮಾಡಬೇಕೆಂದು ನಿರ್ಧರಿಸಿದ. ಸಮೀಪದಲ್ಲಿಯ ಬಾನೆತ್ತರ ಬೆಳೆದು ನಿಂತ ಒಂದು (ಕದಂಬ) ಕಡಹದ ಮರವಿತ್ತು. ಕೃಷ್ಣನು ಹೊದ್ದ ಬಟ್ಟೆಯನ್ನು ಸೊಂಟಕ್ಕೆ ಬಿಗಿದು ಕಟ್ಟಿದ. ಆ ಕದಂಬ ಮರವನ್ನು ಸರಸರ ಏರಿದ. ಅದರ ತುತ್ತ ತುದಿಯಿಂದ ಮಡುವಿನ ನಡುವೆ ಧುಮುಕಿದ. ಅವನ ಆ ಧುಮುಕುವಿಕೆಯಿಂದ ಮಡುವಿನ ನೀರು ಅಲ್ಲೋಲ ಕಲ್ಲೋಲವಾಯಿತು. ಎತ್ತರದಿಂದ ಹಾರಿಬಿದ್ದ ರಭಸಕ್ಕೆ ನೀರಿನ ಹನಿಗಳು ಬಹು ದೂರ ಹಾರಿದವು. ತೀರದಲ್ಲಿರುವ ತರುಗಳನ್ನೆಲ್ಲ ತೋಯದಿಂದ ತೋಯಿಸಿದವು.

ಕೃಷ್ಣನು ತನ್ನ ಕೈಗಳಿಂದ ಮಡುವನು ಕಲುಕಿ ತರಂಗ ತಾಡನವನ್ನು ಮಾಡಿದನು. ಆ ಸದ್ದನ್ನು ಕೇಳಿ ನಾಗರಾಜನಾದ ಕಾಲಿಯು ಎದ್ದು ಬಂದ. ಕೋಪದಿಂದ ಕಣ್ಣು ಕೆಂಜಗ ವಾಗಿದ್ದವು. ಹೆಡೆಗಳಿಂದ ವಿಷದಿಂದ ಉರಿಯುವ ಜ್ವಾಲಾಮಾಲೆಗಳು ಹೊಮ್ಮುತ್ತಿದ್ದವು. ಕಾಲಿಯನೊಡನೆ ಅವನ ಅನೇಕ ನಾಗಪತ್ನಿಯರು ಹಾಗೂ ಉಳಿದೆಲ್ಲ ಅವನ ದಾಸದಾಸಿಯರಾದ ದೊಡ್ಡ ಸಣ್ಣ ಸರ್ಪಗಳು ಅಲ್ಲಿಗೆ ಬಂದವು. ಅವೆಲ್ಲವು ಒಮ್ಮೆಲೆ ಕೃಷ್ಣನ ಮೇಲೆ ಮುಗಿ ಬಿದ್ದು ಹಲ್ಲು ಹಚ್ಚಿ ಕಚ್ಚ ತೊಡಗಿದವು. ಕೃಷ್ಣನು ಒಬ್ಬ. ಸರ್ಪಗಳು ಸಾವಿರಾರು ಅವೆಲ್ಲವು ಕೃಷ್ಣನನ್ನು ಮುತ್ತಿ, ಮೈಮೇಲೆ ಹತ್ತಿ ಕಚ್ಚುತ್ತಿರುವುದನ್ನು ಕಂಡು ದಂಡೆಯಲ್ಲಿರುವ ಗೋಪಾಲ ಬಾಲಕರು ಗಾಬರಿಯಾದರು. ಓಡಿಹೋದರು ವೃಂದಾವನಕ್ಕೆ. ''ಬೇಗ ಬನ್ನಿರಿ, ಕೃಷ್ಣ ಸಾಯುತ್ತಿದ್ದಾನೆ. ಹಾವಿನ ಬಾಯಿಗೆ ಬಿದ್ದಿದ್ದಾನೆ. ಬೇಗ ಬೇಗ ಓಡಿರಿ. ಸಾಯುವ ಮುನ್ನ ಅವನನ್ನು ನೋಡಿರಿ'' ಎಂದು ಅಳುತ್ತ ಹೇಳಿದರು. ಅದನ್ನು ಕೇಳಿದ ಕೂಡಲೆ ನಂದಗೋಪ, ಬಲರಾಮ, ಯಶೋದೆ ಉಳಿದೆಲ್ಲ ಗೋಪ ಗೋಪಿಯರೂ ದೊಡ್ಡ ಧ್ವನಿಯಿಂದ ಅಳುತ್ತ ಕಾಲಿಂದಿಗೆ ಬಂದರು. ಆ ಮಡುವಿನಲ್ಲಿ ನೀರಿನ ನಟ್ಟನಡುವೆ ಆ ಕೆಟ್ಟ ಹಾವು ತನ್ನ ಪರಿವಾರದೊಂದಿಗೆ ಕೃಷ್ಣನನ್ನು ಪೂರ್ಣವಾಗಿ ಸುತ್ತಿ ಬಿಟ್ಟಿತ್ತು. ಉಳಿದ ಹಲವಾರು ಹಾವುಗಳು ಕೃಷ್ಣನನ್ನು ಹೆಡೆಯಿಂದ ಹೊಡೆದು, ಮೇಲೆ ಕೆಳಗೆ ಕಚ್ಚಿ, ಹಲ್ಲು ಚುಚ್ಚಿ ಗಾಯ ಮಾಡುತ್ತಿದ್ದವು. ಅದನ್ನು ನೋಡಿ ನಂದನಿಗೆ ಎದೆ ಒಡೆಯಿತು. ಯಶೋದೆಯಂತೂ ಹಾವಿನ ಬಾಯಿಯಲ್ಲಿ ಬಿದ್ದ ಕೃಷ್ಣ ಸಾವಿನ ಬಾಯಿಯಲ್ಲಿಯೇ ಬಿದ್ದಿದ್ದಾನೆ ಎಂದು ತಿಳಿದು ದುಃಖೋದ್ರೇಕದಿಂದ ಎಚ್ಚರ ತಪ್ಪಿದಳು. ಗೋಪಿಕಾ ಸ್ತ್ರೀಯರಂತೂ ಎದೆ ಎದೆ ಬಡಿದುಕೊಂಡು ಅಳತೊಡಗಿದರು.

ಆಗ ಬಲರಾಮನು ದುಃಖಿಸುವ ಗೋಪಿಯರನ್ನು ಹಾಗೂ ತನ್ನ ತಂದೆತಾಯಿಯಾದ ನಂದಗೋಪ, ಯಶೋದೆಯರನ್ನು ಸಂತೈಸುತ್ತ ಕೃಷ್ಣನನ್ನು ಕುರಿತು ದೊಡ್ಡ ದನಿತೆಗೆದು ಗದರಿ ಹೇಳಿದ. ''ದೇವದೇವ, ಇದೇನು ಹುಡುಗಾಟ! ನೀನು ಮಾನವರಂತೆ ನಟಿಸುತ್ತಿರುವೆಯಲ್ಲ! ವೇದ ಪ್ರತಿಪಾದ್ಯನಾದ ನೀನು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣ ಎಂಬುದನ್ನು ಮರೆತುಬಿಟ್ಟೆಯಾ! ಇಲ್ಲಿ ನೋಡು. ನಿನ್ನ ಬಂಧುಗಳೂ, ಯಶೋದಾ ನಂದಗೋಪರೂ ಗೋಳಿಡುತ್ತಿದ್ದಾರೆ. ಕೂಡಲೆ ಈ ಹಾವಿನ ಜೊತೆಗೆ ಹುಡುಗಾಟ ನಿಲ್ಲಿಸು. ಬೇಗ ಆ ಹಾವನ್ನು ಮಣಿಸು, ನಮ್ಮೆಲ್ಲರನ್ನು ತಣಿಸು.''

ಅಣ್ಣ ಬಲರಾಮನ ಮಾತನ್ನು ಕೇಳಿ ಕೃಷ್ಣನು ಮುಗುಳುನಗೆ ನಗುತ್ತ ತನ್ನನ್ನು ಸುತ್ತುವರೆದ ಹಾವಿನ ಹೆಡೆಯಿಂದ ಬಿಡಿಸಿಕೊಂಡನು. ತನ್ನ ಎರಡು ಕೈಗಳಿಂದ ಕಾಳಿಯ ನಾಗದ ನಡುವಿನ ಹೆಡೆಯನ್ನು ಅಮುಕಿದನು. ಅದು ಮಣಿಯಿತು. ಅದರ ಮೇಲೆ ಕೃಷ್ಣ ಹತ್ತಿ ನಿಂತ. ಕುಗ್ಗಿ ತಗ್ಗಿ ಬಗ್ಗಿದ ಕಾಳಿಂಗನ ಫಣಾಮಂಡಲದ ಮೇಲೆ ಥೈ, ಥೈ ಕುಣಿಯ ತೊಡಗಿದ.

ಕುಣಿಯುವಾಗ ಕೃಷ್ಣನ ಕಾಲಿನ ತೊತ್ತುಳಿದಾಟದಿಂದ ಕಾಲಿಯನ ಹೆಡೆಗಳೆಲ್ಲವು ಹೊಡೆತ ತಿಂದು ನರಳಿ ನಿತ್ರಾಣವಾದವು. ಒಂದು ಹೆಡೆಯನ್ನು ಕೃಷ್ಣನು ತುಳಿದು ಬಗ್ಗಿಸಿದಾಗ ಕಾಲಿಯ ಮತ್ತೊಂದು ಹೆಡೆಯನ್ನು ಎತ್ತಿ ಹೊಡೆಯ ಬರುತ್ತಿದ್ದನು. ಆಗ ಕೃಷ್ಣನು ಟಣ್ಣನೆ ಹಾರಿ ಎತ್ತಿದ ಆ ಹೆಡೆಯ ಮೇಲೆ ತನ್ನ ಹೆಜ್ಜೆಯನ್ನು ಊರಿ ತಕಥೈ ಥಕಥಕ ತಕಥೈ ಎಂದು ನರ್ತನ ಮಾಡುತ್ತಿದ್ದನು. ಅವನ ಲಾಸ್ಯ ಲೀಲೆಗೆ ಕಾಲಿಯನ ಎಲ್ಲ ಮುಖಗಳಿಂದಲೂ ನೆತ್ತರ ಕೋಡಿಯಿಟ್ಟು ಹರಿಯ ತೊಡಗಿತು. ಯಮುನೆಯ ಮಡುವೆಲ್ಲವು ರಕ್ತದಿಂದ ಕೆಂಪು ಕೆಂಪಾಯಿತು. ತರುಗಾಹಿ ತರಳನಾದ ಕೃಷ್ಣನ ಆ ಅಕಾಂಡ ತಾಂಡವದ ರಭಸವನ್ನು ತಾಳಲಾರದೆ ಕಾಳಿಂಗನ ಹೆಡೆಗಳು ಮಡಚಿದವು. ತಲೆಗಳು ಮುರಿದವು. ಹೆಡೆಗಳು ಮಣಿದವು ರಕ್ತ ಪ್ರವಾಹವೇ ಸುರಿಯಿತು. ಇದನ್ನು ನೋಡಿ ಆ ಹಾವಿನ ಹೆಂಡಂದಿರು ಹುಚ್ಚೆದ್ದರು. ಹೌಹಾರಿದರು. ಕೃಷ್ಣನ ಹತ್ತಿರ ಬಂದರು. ಬಾಗಿ ನಿಂದರು. ಶರಣು ಎಂದರು. ಪಾಹಿ, ಪಾಹಿ, ತ್ರಾಹಿ, ತ್ರಾಹಿ, ಎಂದರು. ''ಕೃಷ್ಣ ನೀನು ಜಗತ್ತಿಗೆ ಸ್ವಾಮಿ, ಸರ್ವರ ಅಂತರ್ಯಾಮಿ ನಮ್ಮನ್ನು ನಿನ್ನ ಕರುಣೆಯ ಕಟಾಕ್ಷದಿಂದ ನೋಡು. ನಮಗೆ ಪತಿಭಿಕ್ಷೆಯನ್ನು ನೀಡು'' ಎಂದು ಬೇಡಿಕೊಂಡರು. ''ನಾವು ನಿನ್ನನ್ನು ಮೊರೆ ಹೊಕ್ಕಿದ್ದೇವೆ'' ಎಂದು ಬಗೆ ಬಗೆಯಾಗಿ ಬಿನ್ನವಿಸಿ ''ರಕ್ಷಿಸು, ಕಾಪಾಡು. ನಮ್ಮ ಸೌಭಾಗ್ಯವನ್ನು ಉಳಿಸು'' ಎಂದು ಅಂಗಲಾಚಿದರು.

ಆಗ ಕಾಳಿಂಗನಿಗೂ ಬುದ್ಧಿ ಬಂದಿತು ನೆತ್ತರಿನೊಡನೆ ಮದವು ಕೂಡ ಇಳಿದು ಬಸಿದು ಹೋಗಿತ್ತು. ಅವನು ಕೃಷ್ಣನ ನೃತ್ಯದ ತೊತ್ತುಳಿದಾಟಕ್ಕೆ ಸಿಕ್ಕು ಜರ್ಜರಿತನಾಗಿದ್ದರೂ ಹೇಗೊ ಸಾವರಿಸಿಕೊಂಡು ಕಷ್ಟದಿಂದ ನುಡಿದ. ''ದೇವದೇವ, ಶರಣು ಶರಣು! ನಿನ್ನ ಚರಣಗಳನ್ನು ಮೊರೆ ಹೊಕ್ಕಿದ್ದೇನೆ. ದೇವದೇವನೇ, ಕರುಣೆಯಿಂದ ನನ್ನನ್ನು ಕಾಪಾಡು. ಅಷ್ಟಗುಣೈಶ್ವರ್ಯ ಸಂಪನ್ನನಾದ ನಿನ್ನನ್ನು ಹೀನ ಜಾತಿಯ ಹಾವು ಆದ ನಾನೆಂತು ಸ್ತುತಿಸಬಲ್ಲೆನು! ನಿನಗಿಂತ ಮಿಗಿಲಾದವರು ಈ ಪ್ರಪಂಚದಲ್ಲಿ ಯಾರೂ ಇಲ್ಲ. ನೀನು ಪರ, ಪರಾತ್ಪರ. ಪರಂಜ್ಯೋತಿ, ಪರಮೇಶ್ವರ ಪುರುಷೋತ್ತಮ, ನಿನ್ನನ್ನು ನಾನೆಂತು ಸ್ತುತಿಸಬಲ್ಲೆನು! ಈ ಪ್ರಪಂಚವನ್ನೆಲ್ಲ ಸೃಷ್ಟಿಸಿದವನು ನೀನು. ಅಂದ ಬಳಿಕ ನನ್ನನ್ನು ಸೃಷ್ಟಿಸಿದವನು ನೀನೇ ಅಲ್ಲವೆ? ಭಿನ್ನ ಭಿನ್ನ ಜಾತಿಯ ಜೀವ ಜಂತುಗಳಿಗೆಲ್ಲ ಬೇರೆ ಬೇರೆ ಸ್ವಭಾವವನ್ನು ಪ್ರವೃತ್ತಿಯನ್ನು ಹಾಕಿ ಕೊಟ್ಟವನು ನಿಯತಪಡಿಸಿದವನೂ ನೀನು ತಾನೆ? ಅದರಂತೆ ನೀನು ನನ್ನನ್ನು ಹಾವನ್ನಾಗಿ ಹುಟ್ಟಿಸಿದೆ. ಆ ಜಾತಿಗೆ ತಕ್ಕ ಸ್ವಭಾವವನ್ನು ನೀನೆ ನನ್ನಲ್ಲಿ ಇಟ್ಟೆ. ಹೆಡೆಯಿಂದ ಹೊಡೆಯುವುದೆ ಹಾವಿನ ಧರ್ಮ. ಕಂಡದ್ದನ್ನೆಲ್ಲ ಕಚ್ಚಿ ಕೊಲ್ಲುವುದೆ ಅದರ ಜೀವನ ಮರ್ಮ. ಅದರ ಕೈಗೆ ಸಿಕ್ಕು ಸಾಯುವುದೇ ಬಡಜೀವಿಗಳ ಕರ್ಮ. ಇದೆಲ್ಲವು ನೀನು ಮಾಡಿದ್ದೆ. ನನ್ನ ಸರ್ಪಜಾತಿಗೆ ಸಹಜವಾದ ಕಚ್ಚಾಟ ಹುಚ್ಚಾಟಗಳಿಗೆಲ್ಲ ನಿನ್ನ ಪ್ರೇರಣೆಯ ಕಾರಣ. ನೀನು ನಮ್ಮ ಹಾವಿನ ಜಾತಿಗೆ ಹಾಕಿಕೊಟ್ಟ ನಿಯಮದಂತೆಯೆ ನಾನು ನಡೆದಿದ್ದೇನೆ. ನಿನ್ನ ಸೃಷ್ಟಿಗೆ ವಿರುದ್ಧವಾಗಿ ನಾನೇನೂ ನಡೆದಿಲ್ಲ. ನಿನ್ನ ಅಲಿಖಿತ ಆದೇಶಕ್ಕೆ ಅನುಗುಣವಾಗಿಯೆ ನಡೆಯುವ ನನ್ನನ್ನು

ನೀನು ಏಕೆ ಶಿಕ್ಷಿಸುವೆ? ನಿನ್ನ ಕುಣಿದಾಟ, ಹುಡುಗಾಟದಿಂದ ನಾನು ಕ್ಷೀಣನಾದೆ. ನಿತ್ರಾಣನಾದೆ. ನನ್ನ ಶಕ್ತಿಯಲ್ಲ ಉಡುಗಿ ಹೋಗಿದೆ. ವಿಷವೆಲ್ಲ ಬಸಿದು ಹೋಗಿದೆ. ನನ್ನ ದೌಷ್ಟ್ಯ ಯಮುನೆಯ ಜಲದಲ್ಲಿ ತೊಳೆದು ಹೋಗಿದೆ. ನನಗೆ ಪ್ರಾಣದಾನ ಮಾಡು. ನನ್ನ ಮಡದಿಯರ ಮಾಂಗಲ್ಯವನ್ನು ಉಳಿಸು. ನಾನು ನಿನ್ನ ಆಜ್ಞೆಯಂತೆ ನಡೆಯುತ್ತೇನೆ'' ಎಂದು ಹೇಳಿ ಮತ್ತೆ ಮತ್ತೆ ಅಂಗಲಾಚಿದನು.

ಆಗ ಕೃಷ್ಣನಿಗೆ ಅವನ ಮೇಲೆ ಕರುಣೆ ಮೂಡಿತು. ತನ್ನ ತಾಂಡವ ಲೀಲೆಯನ್ನು ತಕ್ಷಣ ನಿಲ್ಲಿಸಿದ. ಆ ಸರ್ಪರಾಜನಿಗೆ ನಿರ್ದಾಕ್ಷಿಣ್ಯವಾಗಿ ಆಜ್ಞೆ ಇತ್ತ. ''ಕಾಳಿಂಗ, ನೀನು ಈ ಯಮುನೆಯ ಜಲವನ್ನು ಬಿಟ್ಟು ಹೋಗು, ಮುಂದೆ ಎಂದೂ ಇತ್ತ ಕಡೆ ಹಣಿಕೆ ಹಾಕಬೇಡ. ಭಾರ್ಯಾ ಭೃತ್ಯ ಪರಿವಾರ ಸಮೇತನಾಗಿ ಇಲ್ಲಿಂದ ಸ್ಥಳ ಕಿತ್ತು ಸಮುದ್ರಕ್ಕೆ ಹೋಗು. ಅಲ್ಲಿಯೆ ನೆಲಸು. ಹೊರಬಿದ್ದು ಬಂದರೆ ಗರುಡನ ಹೆದರಿಕೆ ಎಂದು ನೆಪ ಹೇಳಬೇಡ. ನಾನು ನಿನ್ನ ಹೆಡಗಳ ಮೇಲೆ ಅಡಿ ಇಟ್ಟು ಕುಣಿದಿರುವೆನಲ್ಲವೆ? ಶಂಖ, ಚಕ್ರ, ಪದ್ಮ, ಲಾಂಛಿತವಾದ ನನ್ನ ಪಾದಚಿಹ್ನೆಯ ಗುರುತುಗಳನ್ನು ನಿನ್ನ ಹೆಡೆಯ ಮೇಲೆ ಸ್ಪಷ್ಟವಾಗಿ ಮೂಡಿದ್ದನ್ನು ಕಂಡು ಗರುಡನು ನಿನಗೆ ಏನೂ ಮಾಡುವುದಿಲ್ಲ. ಹೆಡೆಗಳ ಮೇಲೆ ನನ್ನ ಅಡಿದಾವರೆಗಳ ಸ್ಪಷ್ಟ ಗುರುತಿನ ಚಿಹ್ನೆಗಳನ್ನು ಧರಿಸಿರುವ ನಿನಗೆ ಜಗತ್ತಿನಲ್ಲಿ ಯಾರ ಭಯವೂ ಇಲ್ಲ. ನಿರ್ಭಯನಾಗಿ ನೀನು ಈ ಯಮುನೆಯ ಮಡುವಿನಿಂದ ಹೊರಬಿದ್ದು ಸಮುದ್ರವನ್ನು ಸೇರು.''

ಕೃಷ್ಣನ ಆದೇಶವನ್ನು ನುಡಿಯನ್ನು ಕೇಳಿ ಕಾಲಿಯ ನಾಗನು 'ಹಾಗೇ ಆಗಲಿ' ಎಂದು ಅಂದು ಕೃಷ್ಣನಿಗೆ ವಂದಿಸಿದನು. ತನ್ನ ಮಡದಿ ಮಕ್ಕಳು, ಮಿತ್ರ ಪರಿವಾರದೊಂದಿಗೆ ಆ ಕಾಲಿಂದಿನಿಯನ್ನು ಬಿಟ್ಟು ಕೃಷ್ಣನನ್ನು ನೆನೆಯುತ್ತ ಸಾಗರದ ಗರ್ಭವನ್ನು ಸೇರಿದನು.

ಅನಂತರ ಕೃಷ್ಣನು ಆ ಯಮುನೆಯ ಮಡುವಿನಿಂದ ಹೊರಬಿದ್ದು ಮೇಲೆ ಎದ್ದು ತೀರಕ್ಕೆ ಬಂದನು. ಸರ್ಪಗಳ ಬಾಯಿಂದ ಸಾಯದೇ ಸುರಕ್ಷಿತವಾಗಿ ತೀರಕ್ಕೆ ಬಂದ ಕೃಷ್ಣನನ್ನು ಕಂಡು ಗೋಪ ಗೋಪಿಯರೂ ನಂದ ಯಶೋದೆಯರೂ ಆನಂದ ಪರವಶರಾಗಿ ಅವನನ್ನು ಅಪ್ಪಿಕೊಂಡರು. ತಮ್ಮ ಹರ್ಷಾಶ್ರುಗಳಿಂದ ಅವನ ತಲೆಯನ್ನು ಬೆನ್ನನ್ನು ತೋಯಿಸಿದರು. ಗೋಪಿಯರು ಕೃಷ್ಣನನ್ನು ವಂದಿಸಿ, ಅಭಿನಂದಿಸಿ, ಆನಂದಿಸಿ, ಮಂಜುಳ ಸ್ವರದಿಂದ ಮಂಗಳ ಗೀತೆಗಳನ್ನು ಹಾಡತೊಡಗಿದರು. ಗೋಪಾಲಕರು ಕೃಷ್ಣನನ್ನು ಕೊಂಡಾಡಿದರು. ಎಲ್ಲರೊಡನೆ ಶ್ರೀಕೃಷ್ಣನು ಗೋಕುಲಕ್ಕೆ ತೆರಳಿದನು.

## ಧೇನುಕಾಸುರ ವಧೆ

**ವೇದವ್ಯಾಸ:-** ಬಲರಾಮ ಕೃಷ್ಣರು ಪ್ರತಿದಿನವು ಹಸುಗಳನ್ನು ಮೇಯಿಸುವದಕ್ಕಾಗಿ ಯಮುನಾ ತೀರದ ಹುಲ್ಲುಗಾವಲುಗಳಿಗೆ ಹೋಗುತ್ತಿದ್ದರು. ಗೋವರ್ಧನ ಗಿರಿಯ ಪಾದ ಪ್ರತ್ಯಂತ ದೇಶದಲ್ಲಿರುವ ಹಚ್ಚು ಹಸುರಿನ ಶಾಮಲ ಶಾದ್ವಲ ಹುಲ್ಲಿನ ಹಾಸುಗಳು ಅವರನ್ನು ಕೈಬೀಸಿ ಕರೆಯುತ್ತಿದ್ದವು. ಹಸುಗಳು ಹಸುರು ಹುಲ್ಲಿನ ರಸಗವಗಳನ್ನು ತಿಂದು ಆನಂದಭರಿತವಾಗಿ ಆ ವನಾಂತ ಪ್ರಾಂತದಲ್ಲಿ ಎಲ್ಲ ಕಡೆ ಹಾರಾಡುತ್ತಿದ್ದವು.

ಒಂದು ದಿನ ರಾಮಕೃಷ್ಣರು ತಮ್ಮ ಗೋಪ ಗೆಳೆಯರೊಂದಿಗೆ ದಟ್ಟಕಾಡಿನ ಗೂಡಿನ ಒಳನಾಡಿಗೆ ಹೋಗಿದ್ದರು. ಅಲ್ಲಿ ಒಂದು ತಾಳೆವನದಲ್ಲಿ ಗುಂಪು ಗುಂಪಾದ ತಾಳೆ

ಮರಗಳು ಕಳಿತು ಹಣ್ಣಾದ ಫಲ ಭಾರದಿಂದ ಬಾಗಿ ನಿಂತಿದ್ದವು. ಅವುಗಳ ಸುಗಂಧ ವಾಸನೆ ಗೋಪಾಲಕರ ಬಾಯಲ್ಲಿ ನೀರು ಬರಿಸಿತು. ಅವುಗಳನ್ನು ಕಿತ್ತಿ ತಿಂದುಬಿಡಬೇಕೆಂಬ ಒತ್ತಾಸೆ ಆ ಗೋಪ ಬಾಲರಲ್ಲಿ ಬಲವತ್ತರವಾಗಿತ್ತು. ಆದರೆ ಆ ತಾಳೆ ಮರಗಳು ಧೇನುಕ ಎಂಬ ದುಷ್ಟ ದೈತ್ಯನ ಒಡೆತನಕ್ಕೆ ಸೇರಿದ್ದವು. ತಾಳೆಯ ಹಣ್ಣುಗಳನ್ನು ತಿನ್ನಬೇಕೆಂದು ಆಸೆಯಿಂದ ಯಾರಾದರೂ ಬಂದರೆ ಆ ರಕ್ಕಸನು ತಾನೆ ಅವರನ್ನು ಕೊಂದು ತಿನ್ನುತ್ತಿದ್ದ. ಆದುದರಿಂದ ಆ ಹಣ್ಣಿನ ತೋಟದ ಸಮೀಪಕ್ಕೂ ಕೂಡ ಸುಳಿದಾಡಲು ಜನರು ಹೆದರುತ್ತಿದ್ದರು. ಇದೆಲ್ಲವು ಆ ಗೋಪಕುಮಾರರಿಗೆ ಗೊತ್ತೇ ಇತ್ತು. ಆದರೆ ಅಷ್ಟೇ ಆಸೆಯೂ ರಸ ಭರಿತವಾದ ಆ ಹಣ್ಣಿನ ಮೇಲೆಯೂ ಇತ್ತು. ಅದಕ್ಕಾಗಿ ಅವರು ಕೃಷ್ಣನಿಗೆ ಬೆನ್ನು ಬಿದ್ದರು.

''ರಾಮ ಕೃಷ್ಣರೆ, ಈ ತಾಳೆಯ ಮರದ ಹಣ್ಣುಗಳ ಘಮ ಘಮ ವಾಸನೆ ನಮ್ಮ ಬಾಯಲ್ಲಿ ನೀರು ಸುರಿಸಿದೆ. ಅವುಗಳನ್ನು ತಿಂದುಬಿಡಬೇಕೆಂದು ಆಸೆ ಆಗಿದೆ. ಆದರೆ ಈ ಹಣ್ಣಿನ ತೋಟವು ಧೇನುಕನೆಂಬ ರಾಕ್ಷಸನಿಗೆ ಸೇರಿದ್ದು. ಅವನ ಹೆದರಿಕೆಯಿಂದ ಒಂದು ಹಣನ್ನೂ ಕೀಳಲಾರೆವು. ಆದರೆ ಅದರಂತೆ ಅದರ ಹಸಿವೆಯನ್ನೂ ಆಸೆಯನ್ನೂ ತಾಳಲಾರೆವು. ನಿಮಗೆ ಶಕ್ಯವಾದರೆ ಆ ಹಣ್ಣುಗಳನ್ನು ಉದುರಿಸಿರಿ. ಯಥೇಷ್ಟವಾಗಿ ಆ ಹಣ್ಣುಗಳನ್ನು ಭಕ್ಷಣ ಮಾಡುವೆವು.''

ಬಾಲಕರ ಈ ಬಯಕೆಯನ್ನು ಕೇಳಿಧ ಬಲರಾಮ ಕೃಷ್ಣರು ತಕ್ಷಣದಲ್ಲಿ ಮರ ಹತ್ತಿದರು. ಆ ತಾಳೆಮರಗಳನ್ನು ಬಲವಾಗಿ ಅಲುಗಾಡಿಸಿದರು. ಕೂಡಲೆ ಸಾವಿರಾರು ಹಣ್ಣುಗಳು ಪಟಪಟನೆ ಕೆಳಗೆ ಬಿದ್ದವು. ಆ ಪಟ ಪಟ ಶಬ್ದವನ್ನು ಕೇಳಿ ಕತ್ತೆಯ ರೂಪದಲ್ಲಿದ್ದ ಧೇನುಕ ಓಡಿ ಬಂದ. ಹಣ್ಣುಗಳನ್ನು ಉದುರಿಸಿ ರಾಮಕೃಷ್ಣರು ಕೆಳಗೆ ಬಂದು ಆ ಗಿಡಗಳ ಬಳಿಯಲ್ಲಿಯೇ ನಿಂತು ಕೊಂಡರು.

ಓಡಿಬಂದ ಕತ್ತೆಯ ರೂಪದ ಧೇನುಕ ತನ್ನ ಎರಡು ಹಿಂಗಾಲುಗಳನ್ನು ಎತ್ತಿ ರಾಮಕೃಷ್ಣರನ್ನು ಒದೆಯಬೇಕೆಂದು ಪ್ರಯತ್ನಿಸಿದ. ಆಗ ರಾಮಕೃಷ್ಣರು ಅವನ ಎರಡು ಹಿಂಗಾಲುಗಳನ್ನು ಬಿಗಿಯಾಗಿ ಹಿಡಿದರು. ಗಿರಿಗಿರ ತಿರುಗಿಸಿದರು. ಹುಲ್ಲಿನ ಮೆದೆಯನ್ನು ಎಸೆಯುವಂತೆ ಮೇಲಕ್ಕೆ ಮುಗಿಲಿನಲ್ಲಿ ತೂರಿಬಿಟ್ಟರು. ಆಕಾಶದಲ್ಲಿಯೆ ಸತ್ತುಹೋದ ಆ ದಷ್ಟ ಧೇನುಕ. ಆ ತಾಳೆಗಿಡಗಳ ಜಾಡಿನ ಮೇಲೆಯೆ ರಾಕ್ಷಸನ ಪರ್ವತಾಕಾರವಾದ ಶವ ಬಂದು ಬಿದ್ದಿತು. ಆದರಿಂದ ಆ ಗಿಡಗಳ ಜಾಡಿನಲ್ಲಿರುವ ಎಲ್ಲ ಹಣ್ಣುಗು ಪಳಪಳನೆ ಉದುರಿ ಕೆಳಗೆ ಬಿದ್ದು ಬಿಟ್ಟವು.

ಮುಂದೆ ತುಸು ಹೊತ್ತಿನಲ್ಲಿ ಆ ಧೇನುಕಾಸುರನ ಅನುಯಾಯಿಗಳಾದ ಕತ್ತೆಗಳೆಲ್ಲವು ಒಟ್ಟಾದವು, ಅವೆಲ್ಲವು ಕೂಡಿ ಕೃಷ್ಣರಾಮರನ್ನು ಕಚ್ಚಿ ಕೊಲ್ಲಬೇಕು, ಒದ್ದು ಕೆಡವಬೇಕು ಎಂದು ಹುಚ್ಚು ಸಾಹಸದಿಂದ ಏರಿ ಬಂದವು. ಆಗ ರಾಮಕೃಷ್ಣರು ಆ ಕೆಟ್ಟ ಖೊಟ್ಟ, ದುಷ್ಟ ಕತ್ತೆ ಕುಟುಂಬದ ೱಸಭಗಳನ್ನೆಲ್ಲ ಬಾಲದೊಂದಿಗೆ ಕಾಲಲ್ಲಿ ಹಿಡಿದು ತೂರಿ ಹಾರಿಸಿ ಮರಗಳ ಮೇಲೆ ಎಸೆದರು. ಎಲ್ಲ ಗರ್ಧಭಗಳು ಎಸೆತದ ವೇಗದಿಂದ ತಾಳೆಮರಕ್ಕೆ ಬಡಿದು ಹೆಣವಾಗಿ ಹಣ್ಣುಗಳೊಂದಿಗೆ ನೆಲದ ಮೇಲೆ ಉರುಳಿ ಬಿದ್ದವು. ಇದರಿಂದ ಆ ವನ ಭೂಮಿಯಲ್ಲವು ಕೆಳಗೆ ಬಿದ್ದ ತಾಳೆಹಣ್ಣುಗಳಿಂದ ಅಲಂಕಾರ ಮಾಡಿದಂತೆ ಶೋಭಿಸಿತು. ಅನಂತರ ಗೋಪಾಲ ಬಾಲಕರು ರಾಮಕೃಷ್ಣರನ್ನು ಸ್ಮರಿಸುತ್ತ ಹಾಡುತ್ತ ಹರಿಹಸಾದ

ಎಂದು ಆ ಹೊಸ ಹೆಣ್ಣಿನ ರಸಗವಳಗಳನ್ನು ತಿಂದು ಆನಂದಿಸಿದರು. ಹಸುಗಳೆಲ್ಲವು ನಿರಾತಂಕವಾಗಿ ಎಳೆ ಹುಲ್ಲು ಗರಿಕೆಗಳನ್ನು ತಿಂದು ಆನಂದ ಪಟ್ಟು ಕೃಷ್ಣನೆಡೆಗೆ ಕೃತಜ್ಞತೆಯಿಂದ ನೋಡಿದವು.

## ಗೋವರ್ಧನ ಪರ್ವತ ಪೂಜೆ

**ವ್ಯಾಸ:-** ಕತ್ತೆಯ ರೂಪ ಧರಿಸಿದ ಧೇನುಕಾಸುರನು ಸಕುಟುಂಬ ಸಹಪರಿವಾರವಾಗಿ ಸಂಹರಿಸಲ್ಪಟ್ಟ ಬಳಿಕ ಗೋಪಾಲ ಬಾಲಕರೂ ಗೋಪಿಕಾ ಸ್ತ್ರೀಯರೂ ನಿರ್ಭಯವಾಗಿ ಅಲ್ಲಿ ಸಂಚರಿಸತೊಡಗಿದರು ಆ ತಾಳವನದಲ್ಲಿ. ನಿಬಿಡನಾಗಿ ಬಾನುದ್ದ ಬೆಳೆದ ತಾಳಮರಗಳ ಗುಂಪಿನಿಂದ ತಂಪಿನ ತಾಣವಾದ ಆ ತಾಳವನವು ನಯನ ಮನೋಹರವಾಗಿದ್ದಿತು. ಕೃಷ್ಣನು ಬಲರಾಮನು ಗೋಪಾಲಬಾಲಕರಿಗೆಲ್ಲ ಮುಂದಾಳು ಗಳಾಗಿ, ಗೂಳಿಗಳಂತೆ ಆನಂದದಿಂದ ಸಂಚರಿಸುತ್ತಿದ್ದರು. ಕೃಷ್ಣನು ಪೀತಾಂಬರವನ್ನೂ ಬಲರಾಮನು ನೀಲಾಂಬರವನ್ನೂ ಉಟ್ಟು ಇಂದ್ರಾಯುಧದಂತೆ ಪ್ರಕಾಶಿಸುತ್ತಿದ್ದರು. ಸರ್ವಲೋಕ ರಕ್ಷಕರಾಗಿದ್ದರೂ ಆ ರಾಮಕೃಷ್ಣರು ಈ ಮೇದಿನೀ ತಳದಲ್ಲಿ ಮನುಜರಾಗಿ ಹುಟ್ಟಿ, ದನಗಾಹಿಗಳ ರೂಪಧರಿಸಿ ಆ ಗೋಪಾಲ ಬಾಲಕರೊಡನೆ ಆ ದೇಶಕಾಲಗಳಲ್ಲಿ ಪ್ರಚುರ ಪ್ರಚಾರದಲ್ಲಿರುವ ಆಟಪಾಟಗಳನ್ನು ಆಡುತ್ತಿದ್ದರು. ಕುಸ್ತಿ, ಕುಂಟಾಟ, ಚಿಣಿಕೋಲು, ಫಣಿದಾಂಡು, ಕಣ್ಣು ಮುಚ್ಚಾಲೆ, ಮುಟ್ಟಾಟ, ಸ್ಪರ್ಧೆಯ ಓಡಾಟ, ಉದ್ದಜಿಗಿತ, ಅಡ್ಡ ಜಿಗಿತ, ಈಸಾಟ, ಮರ ಜೋಕಾಲಿ ಆಟ ಮುಂತಾದ ಬಗೆ ಬಗೆಯ ಆಟಗಳನ್ನು ಆಡುತ್ತಿದ್ದರು.

ಒಂದು ದಿನ ರಾಮಕೃಷ್ಣರು ಆ ತುರುಗಾಹಿ ತರುಣರೊಡನೆ ಲೀಲಾಲೋಲರಾಗಿ ಇರುವಾಗ ಪ್ರಲಂಬ ಎಂಬ ರಾಕ್ಷಸನು ಅಲ್ಲಿಗೆ ಬಂದ. ತನ್ನ ಗುರುತು ಅವರಿಗೆ ಆಗಬಾರದೆಂದು ಗೊಲ್ಲರ ವೇಷ ಧರಿಸಿದ್ದ ಧೂರ್ತನಾದ ಆ ದೈತ್ಯ. ರಾಮಕೃಷ್ಣರಿಬ್ಬರನ್ನು ಕೊಲ್ಲುವ ಹಂಚಿಕೆ ಅವನದಿತ್ತು.

ಗೋಪ ಬಾಲಕರು ಎಲ್ಲರೂ ಜಿಂಕೆಯ ಆಟ ಎಂಬ ಆಟವನ್ನು ಆಡುತ್ತಿದ್ದರು ಅದರಲ್ಲಿ ಇಬ್ಬಿಬ್ಬರು ಸೇರಿ ಕುಪ್ಪಳಿಸುತ್ತ ಓಡುತ್ತಿದ್ದರು. ಕೆಲವರು ಕಪ್ಪೆಯಂತೆ, ಹಲವರು ಚಿಗರೆಗಳಂತೆ, ಜಿಗಿಯುತ್ತ ಕುಣಿದು ಕುಪ್ಪಳಿಸುತ್ತ ನಿರ್ದಿಷ್ಟ ಪಾದಗಟ್ಟೆಯನ್ನು ಮುಟ್ಟಿ ಬರುತ್ತಿದ್ದರು. ಶ್ರೀಕೃಷ್ಣನು ಶ್ರೀರಾಮನೆಂಬ ಗೋಪ ಕುಮಾರನೊಡನೆ ಬಲರಾಮನು ಪ್ರಲಂಬಾಸುರನೊಡನೆ ಕೂಡಿಕೊಂಡು ಈ ಜಿಂಕೆಯ ಆಟದಲ್ಲಿ ಭಾಗವಹಿಸಿದರು. ಮೊದಲು ಶ್ರೀಕೃಷ್ಣನು, ಶ್ರೀರಾಮನನ್ನು, ಬಲರಾಮನು ಪ್ರಲಂಬಾಸುರನನ್ನು ಸೋಲಿಸಿದರು. ಮತ್ತು ಕೃಷ್ಣನ ಕಡೆಗೆ ಸೇರಿದ ಹುಡ್ದುರಿಗಳೆಲ್ಲರು ತಮ್ಮ ವಿರುದ್ಧ ಪಕ್ಷದ ಗೋಪಕುಮಾರರನ್ನು ಸೋಲಿಸಿದರು. ಸೋತವರೆಲ್ಲರು ಗೆದ್ದವರನ್ನು ನೀರಿನ ಕೊಡಗಳನ್ನು ಹೊರುವಂತೆ ಹೆಗಲ ಮೇಲೆ ಹೊತ್ತು, ಸೋತ ಸ್ಥಳದಿಂದ ಆಟ ಆಡುವ ಸ್ಥಳದವರೆಗೆ ಬರಬೇಕು. ಇವು ಆಟದ ನಿಯಮ.

ಈಗ ಸೋತ ಶ್ರೀರಾಮನು ಕೃಷ್ಣನನ್ನೂ, ಗೋಪ ವೇಷದಲ್ಲಿದ್ದ ಪ್ರಲಂಬನು ಬಲರಾಮನನ್ನೂ ಹೊತ್ತು, ಹೆಗಲ ಮೇಲೆ ಕೂಡಿಸಿಕೊಂಡು ಆಟ ಆಡುವ ಸ್ಥಳಕ್ಕೆ ಬಂದು ತಲುಪಬೇಕಾಗಿತ್ತು. ಆದರೆ ದುರ್ಬುದ್ಧಿಯ ಆ ದುಷ್ಟ ದೈತ್ಯನು ಹಾಗೆ ಮಾಡದೆ ಬಲರಾಮನನ್ನು ಹೆಗಲ ಮೇಲೆ ಹೊತ್ತು ಅವನನ್ನು ಕೊಲ್ಲಬೇಕೆಂದು ಓಡತೊಡಗಿದ.

ಆದರೆ ಭಾರಭೂತನಾದ ಆ ಬಲರಾಮನನ್ನು ಅವನಿಗೆ ಹೊರಲು ಸಾಧ್ಯವಾಗಲಿಲ್ಲ. ಅದಕ್ಕಾಗಿ ಅವನು ಮಳೆಗಾಲದಲ್ಲಿ ಮೋಡಗಳು ಬೆಳೆಯುವಂತೆ ದೊಡ್ಡದಾಗಿ ಬೆಳೆದ. ದೊಡ್ಡ ಬೆಟ್ಟದಂತೆ ಬೆಳೆದು ಭೀಕರ ಆಕಾರನಾಗಿ ಕಾಣುವ ಆ ದೈತ್ಯನ ಕುತ್ತಿಗೆಯಲ್ಲಿ ಅನೇಕ ಮುತ್ತಿನ ಹಾರಗಳು ಅಲುಗಾಡುತ್ತಿದ್ದವು. ಅವನು ನೆಲದ ಮೇಲೆ ಹೆಜ್ಜೆ ಇಟ್ಟಾಗ ಭೂಮಿಯು ನಡುಗಿತು. ಬಂಡಿಯ ಗಾಲಿಯಂತೆ ದೊಡ್ಡ ದೊಡ್ಡ ಕಣ್ಣುಗಳುಳ್ಳ ಆ ದೈತ್ಯನು ಬಲರಾಮನನ್ನು ಹೊತ್ತು ಎತ್ತೆತ್ತೋ ಓಡತೊಡಗಿದಾಗ ಆ ಕೃಷ್ಣಾಗ್ರಜನು ಹೆದರಿ ಹೌಹಾರಿ ಕೃಷ್ಣನಲ್ಲಿ ಮೊರೆ ಇಟ್ಟನು. "ಕೃಷ್ಣ, ನಾನು ಈಗ ಏನು ಮಾಡಲಿ? ಆಟದ ಮೊದಲು ನಮ್ಮ ಗವಳಿಗರ ಗುಂಪಿನಲ್ಲಿ ಸೇರಿದ ಪ್ರಲಂಬ ಗೋಪಾಲಕನಲ್ಲ. ಯಾವುದೋ ದುಷ್ಟ ಅಸುರ. ನನ್ನನ್ನು ಕತ್ತಿನಮೇಲೆ ಹೊತ್ತು ಎತ್ತೋ ನಡೆದಿದ್ದಾನೆ. ನನಗಂತೂ ಏನೂ ಗೊತ್ತೇ ಆಗಲೊಲ್ಲದು. ಈಗ ನಾನು ಏನು ಮಾಡಲಿ? ನಾನು ಈ ಸಂಕಟದಿಂದ ಪಾರಾಗಿ ಬದುಕುವ ಬಗೆ ಏನು? ಎಂದು ಗಟ್ಟಿಯಾಗಿ ಚೀರಿ ಕೇಳಿದನು.

ಅವನ ಮಾತನ್ನು ಕೇಳಿ ಶ್ರೀಕೃಷ್ಣನು ನಿಂತಲ್ಲಿಯೇ ಸೋದರನಿಗೆ ಮಾರ್ಗದರ್ಶನ ಮಾಡಿಸಿದನು. "ಅಣ್ಣ, ನೀನೇಕೆ ಇಷ್ಟು ಗಾಬರಿಯಾಗಿರುವೆ? ಈಗ ನೀನು ನಿನ್ನ ಮೂಲ ಸ್ವರೂಪವನ್ನು ಸ್ಮರಣೆ ಮಾಡಿಕೊ" ಎಂದು ಹೇಳಿ ಆ ರಾಕ್ಷಸನನ್ನು ಕೊಲ್ಲುವ ಉಪಾಯವನ್ನು ಹೇಳಿಕೊಟ್ಟನು. ಆಗ ಬಲರಾಮನಿಗೆ ತನ್ನ ಆದಿಶೇಷನ ಸ್ವರೂಪವು ಜ್ಞಾಪಕಕ್ಕೆ ಬಂದಿತು. ಆಗ ಅವನು (ಬಲರಾಮನ) ಮೂಲರೂಪದ ಸ್ಮರಣೆಯನ್ನು ಮಾಡಿಕೊಂಡನು. ಅದರಿಂದ ಅವನಿಗೆ ಸ್ವಾಭಾವಿಕವಾದ ಬಲ ಬಂದಿತು. ಆಗ ಅವನು ವಿಕಟವಕ್ರತೆಯಿಂದ ನಗುತ್ತ ನಿಂತ ಪ್ರಲಂಬಾಸುರನ ನಡುನೆತ್ತಿಯ ಮೇಲೆ ಮುಷ್ಟಿಯಿಂದ ಕುಟ್ಟಿದನು. ಬಲರಾಮನ ಮುಷ್ಟಿಪ್ರಹಾರದಿಂದ ಆ ಧೇನುಕನ ಕಣ್ಣುಗುಡ್ಡೆಗಳು ಹೊರಬಿದ್ದವು. ತಲೆ ಬುರುಡೆ ಒಡೆದು ಮೆದುಳು ಹೊರಬಂದಿತ್ತು. ಬಾಯಿಂದ ನೆತ್ತರು ಧಾರಾಕಾರವಾಗಿ ಸುರಿಯಿತು. ಪ್ರಲಂಬನು ಕೆಳಗೆ ಉರುಳಿ ಪ್ರಾಣ ಬಿಟ್ಟ.

ಅದನ್ನು ನೋಡಿದ ಗೋಪಾಲ ಬಾಲಕರು "ಭಲಾ ರಾಮ! ಭಲಾಕೃಷ್ಣ! ಎಂದರು. ಶ್ರೀಕೃಷ್ಣನೊಡನೆ ಗೋಕುಲಕ್ಕೆ ಆನಂದದಿಂದ ಹಾಡು ಹಾಡುತ್ತ ಕೊಳ್ಗಲು ಊದುತ್ತ ಬೀದಿಗುಂಟ, ಜಿಗಿಯುತ್ತ ಕುಣಿಯುತ್ತ ನಡೆದರು. ವೃಂದಾವನಕ್ಕೆ ಮರಳಿ ಬಂದರು.

ವರ್ಷಾಕಾಲವು ಕಳೆಯಿತು. ಶರತ್ಕಾಲವು ಪ್ರಾಪ್ತವಾಯಿತು. ಕಮಲಗಳು ಅರಳಿದವು. ಮುಗಿಲಿನಲ್ಲಿಯ ಮೋಡಗಳೆಲ್ಲವು ನೀರನ್ನು ಹನಿಸಿ ಹಗುರಾಗಿ ಆಕಾಶದಲ್ಲಿ ಧವಲಕಾಂತಿ ಯಿಂದ ತೇಲಾಡಿದವು. ಭೂಮಿಯಲ್ಲಿ ಹೂಗಳು ಅಂತರಿಕ್ಷದಲ್ಲಿ ನಕ್ಷತ್ರಗಳಂತೆ ಬೆಳಗಿದವು. ಇಂಥ ನಿಸರ್ಗ ಸುಂದರವಾದ ವಾತಾವರಣದಲ್ಲಿ ಗವಳಿಗರೆಲ್ಲರು ಪ್ರತಿವರುಷದಂತೆ ಇಂದ್ರೋತ್ಸವವನ್ನು ಮಾಡಲು ಸಿದ್ಧತೆಯನ್ನು ನಡೆಸಿದರು. ಗೋಪ ಗೋಪಿಯರು ಕಾಲದ ಸಂಭ್ರಮದ ಸಡಗರವನ್ನು ನೋಡಿ ಕೃಷ್ಣನಿಗೆ ಆಶ್ಚರ್ಯವಾಗಿ ಕೆಲವು ಗೋಪ ವೃದ್ಧರ ಬಳಿಗೆ ಹೋಗಿ ಕಳೆದ. "ಇಂದ್ರೋತ್ಸವ ಎಂದರೆ ಏನು? ಅದು ಯಾವ ದೊಡ್ಡ ಉತ್ಸವ? ಅದಕ್ಕಾಗಿ ನಾವು ಏಕೆ ಹಬ್ಬ ಮಾಡಿ ಹರುಷವನ್ನು ಹೊಂದಬೇಕು" ಎಂದನು.

ಆಗ ನಂದಗೋಪನು ಕೃಷ್ಣನನ್ನು ಸಂತೈಸುವ ಧ್ವನಿಯಲ್ಲಿ ನುಡಿದ. "ವತ್ಸ, ಇಂದ್ರನು ತ್ರಿಲೋಕದ ಅಧಿಪತಿ, ನಮ್ಮೆಲ್ಲರಿಗೂ ಹಾಗು ನಿನಗೂ ಅವನೇ ಒಡೆಯ. ಈ ಮೊದಲು

ಅವನು ಮಾಡಿದ ಅಶ್ವಮೇಧ ಯಾಗಗಳು ಒಂದು ಎರಡು ಅಲ್ಲ; ನೂರು ಅಶ್ವಮೇಧಗಳನ್ನು ನೆರವೇರಿಸಿದ ಪುಣ್ಯಾತ್ಮ ಆ ಪುರಂದರ. ಅವನ ಪ್ರೇರಣೆಯಿಂದಲೇ ಮೋಡಗಳು ನೀರನ್ನು ಸುರಿಸುತ್ತವೆ. ಆ ಮಳೆಯಿಂದ ಬೆಳೆದ ಸಸ್ಯಗಳನ್ನು ನಾವೆಲ್ಲರೂ ತಿಂದು ಜೀವಿಸುತ್ತೇವೆ. ದೇವತೆಗಳನ್ನು ಪೂಜಿಸಿ ಸಂತೋಷಪಡಿಸುತ್ತೇವೆ. ಮಳೆಯಿಂದ ಬಂದ ಬೆಳೆಗಳನ್ನು ತಿಂದು ಹಸುಗಳು ಪುಷ್ಟವಾಗುವವು ಹೆಚ್ಚು ಹಾಲನ್ನು ಕೊಡುವವು. ಮೋಡಗಳು ಮಳೆಗರೆದ ಸ್ಥಳದಲ್ಲೆಲ್ಲ ಹಸಿರು ಸುರೊಡೆದು ಹುಲ್ಲುಗಾವಲುಗಳು ಸಸ್ಯ ಸಂಪತ್ತಿನಿಂದ ಬೆಳಗುವವು. ಅವುಗಳನ್ನು ತಿಂದು ಹಸುಗಳು ಪುಷ್ಟವಾಗುವವು ಮತ್ತು ತುಷ್ಟವಾಗುವವು. ಬೇಡಿದಷ್ಟು ಹಾಲನ್ನು ಕೊಡುವವು.

ಮಾನವರಿಗೆ ಭೂಮಿಯೆಲ್ಲವೂ ಸುಜಲ, ಸುಫಲವಾಗಿ ಹಚ್ಚು ಹಸರಿನ ಪಚ್ಚ ಪಯರಿನಿಂದ ಧನಧಾನ್ಯ ಸಮೃದ್ಧವಾಗಿ ಬೆಳೆದು ಬೆಳಗಬೇಕಾದರೆ, ಸಕಾಲಕ್ಕೆ ಮಳೆಯು ಅತ್ಯವಶ್ಯಕ. ಆ ಮಳೆಯನ್ನು ಮುಖ್ಯತಃ ನೀಡುವವ ಇಂದ್ರ, ಅದಕ್ಕಾಗಿ ಆ ಇಂದ್ರನ ಪೂಜೆಯನ್ನು ಕೃತಜ್ಞತಾ ಪೂರ್ವಕವಾಗಿ ಸಲ್ಲಿಸುತ್ತಲಿದ್ದೇನೆ'' ಎಂದು ಹೇಳಿದನು.

ತಂದೆಯ ಮಾತಿಗೆ ಪ್ರತಿಯಾಗಿ ಶ್ರೀಕೃಷ್ಣನು ನುಡಿದ. ''ನಾವು, ಕೃಷಿ ಮಾಡುವ ರೈತರಲ್ಲ, ವ್ಯಾಪಾರ ಉದ್ಯೋಗ ಮಾಡಿ ಜೀವಿಸುವವರೂ ಅಲ್ಲ. ಭೂಮಿಯ ಮೇಲೆ ಬದುಕುವ ರೈತರಿಗೆ ಇಂದ್ರ ಬೇಕು. ವ್ಯಾಪಾರ ಉದ್ಯೋಗ ಮಾಡುವವರಿಗೂ ಇಂದ್ರ ಬೇಕು. ಅವನೇ ಅವರಿಗೆ ದೇವರು. ಆದರೆ ನಮಗೆ ಮಾತ್ರ ದನಕರುಗಳೇ ದೇವರು ನಾವು ಕಾಡಿನಲ್ಲಿ ಸಂಚರಿಸುವವರು. ಕೃಷಿ, ವಾಣಿಜ್ಯ, ಅನ್ವೀಕ್ಷಕಿ, ದಂಡನೀತಿ ಎಂದು ನಾಲ್ಕು ವಿಧವಾದ ವಿದ್ಯೆಗಳು ಇವೆ. ಅವುಗಳಲ್ಲಿ ಕೃಷಿ, ವಾಣಿಜ್ಯದ ಜೊತೆಗೆ ಪಶುಪಾಲನೆಯೂ ಒಂದು ಶ್ರೇಷ್ಠ ವಿದ್ಯೆ.

ಉಳುವವರಿಗೆ ಕೃಷಿ ವೃತ್ತಿ ನಿಯತ. ಅಂಗಡಿ ಇಟ್ಟು ಉದ್ಯೋಗದಿಂದ ಜೀವಿಸುವವರಿಗೆ ವ್ಯಾಪಾರ ನಿಯತ. ಅದರಂತೆ ನಮಗೆ ಪಶುಪಾಲನೆಯು ನಿಯತ ಆ ಪಶುಗಳಿಗೆ ಹುಲ್ಲು ನೀರು ದೊರೆಯುವದು ಸಮೀಪದ ಗೋವರ್ಧನ ಪರ್ವತದಿಂದ. ಆದುದರಿಂದ ನೀವೆಲ್ಲರು ಆ ಗೋವರ್ಧನ ಗಿರಿಯನ್ನೇ ಅರ್ಚಿಸಿರಿ. ಅದೇ ನಮಗೆ ಗತಿ. ಪರ್ವತ ಪೂಜೆಯನ್ನು ಗೋಪೂಜೆಯನ್ನು ಪ್ರತಿ ವರ್ಷದಂತೆ ಆಚರಿಸಿರಿ. ಇಂದ್ರನಿಂದ ನಮಗೆ ಏನು ಆಗಬೇಕಾಗಿದೆ! ಪರ್ವತ ಹಸುಗಳೆ ನಮ್ಮ ದೇವತೆಗಳು. ಬ್ರಾಹ್ಮಣರು ಮಂತ್ರಗಳನ್ನು ಪೂಜಿಸಬೇಕು. ರೈತರು ನೇಗಿಲವನ್ನು ಪೂಜಿಸಬೇಕು. ಪರ್ವತ ವನ ಇವುಗಳ ಆಶ್ರಯದಲ್ಲಿರುವ ನಾವು ಪರ್ವತಗಳನ್ನೂ, ಹುಸುಗಳನ್ನೂ ಪೂಜಿಸಬೇಕು.''

## ಇಂದ್ರಪೂಜೆ ಬಿಡಿಸಿದ ಉಪೇಂದ್ರ

ನಾವೆಲ್ಲರು ಮೊದಲು ಗೋವರ್ಧನ ಪರ್ವತಕ್ಕೆ ಹೋಗೋಣ. ವಿವಿಧ ಪೂಜಾ ಸಾಮಗ್ರಿಗಳಿಂದ ಅದನ್ನು ಪೂಜಿಸೋಣ. ಪವಿತ್ರವಾದ ಪಶು ಬಲಿಯನ್ನು ಕೊಟ್ಟು ಅರ್ಚಿಸೋಣ. ಗೋವರ್ಧನ ಪರ್ವತವನ್ನು ಪೂಜಿಸಿ ನಂತರ ಹೋಮ ಹವನವನ್ನು ನೆರವೇರಿಸಿ, ಬ್ರಾಹ್ಮಣರನ್ನು ಸಂತೋಷ ಪಡಿಸೋಣ. ಅನಂತರ ಪೂಜಿಸೋಣ ಗೋವುಗಳನ್ನು ಅಲಂಕರಿಸಿ. ಇಂದ್ರೋತ್ಸವದ ಬದಲು ಪರ್ವತೋತ್ಸವವನ್ನು ಆಚರಿಸಿರಿ.'' ಕೃಷ್ಣ ಹೇಳಿದ ಈ ಮಾತು ಗೋಪಾಲಕರಿಗೆಲ್ಲ ಮನಸ್ಸಿಗೆ ಹಿಡಿಯಿತು. ಆಗ ಅವರೆಲ್ಲರು ಹಾಗೆ ಆಗಲಿ ಎಂದು ಪರ್ವತದ ಪೂಜೆಗೆ ಹೊರಟರು.

ಎಲ್ಲರೂ ಗೋಪ ಗೋಪಿಯರು, ಗೋಪಾಲ ಬಾಲಕೆಯರು ಕೂಡಿ ಗೋವರ್ಧನ ಬೆಟ್ಟದ ಬಳಿಗೆ ಹೋದರು. ಮೊಸರು, ಹಾಲು, ಪಾಯಸ, ಮಾಂಸ ಮುಂತಾದ ಪೂಜಾ ಸಾಮಗ್ರಿಗಳಿಂದ ಪರ್ವತಕ್ಕೆ ಪೂಜೆಯನ್ನು ಭಕ್ತಿಯಿಂದ ಮಾಡಿದರು. ಸಾವಿರಾರು ಜನ ಬ್ರಾಹ್ಮಣರಿಗೂ ಅನಂತರ ಉಳಿದ ಎಲ್ಲ ಜಾತಿ ಜನಾಂಗ ಜನರಿಗೂ ಯಥೇಷ್ಟ ಭೋಜನವನ್ನು ಮಾಡಿಸಿದರು. ಮುಖ್ಯವಾಗಿ ಎಲ್ಲರನ್ನೂ ಸಂತೋಷಪಡಿಸಿದರು. ಹಸುಗಳನ್ನು ಪೂಜಿಸಿ ಅಲಂಕರಿಸಿ ಪರ್ವತ ಪ್ರದಕ್ಷಿಣೆಯನ್ನು ಮಾಡಿಸಿದರು. ಕೃಷ್ಣನು ಪರ್ವತದ ಮೇಲ್ಭಾಗದಲ್ಲಿ ನಿಂತು ಗೋಪವೃಂದದವರು ಸಲ್ಲಿಸಿದ ಸೇವೆಯನ್ನು ಪೂಜೆಯನ್ನು ಆನಂದದಿಂದ ಸ್ವೀಕರಿಸಿದನು. ಬ್ರಾಹ್ಮಣರೆಲ್ಲರೂ ಸಂತುಷ್ಟರಾದ ಬಳಿಕ ಕೃಷ್ಣನು ಗೋಪರೊಡನೆ ಪರ್ವತದ ಮೇಲೆ ಏರಿ ಹೋಗಿ ಅದರ ತುತ್ತ ತುದಿಯಲ್ಲಿ ನಿಂತು ಗೋಪಾಲ ಬಾಲರೊಡನೆ ಭಗವಂತನ ಶೈಲಸ್ವರೂಪವನ್ನು ಸ್ವಯಂ ಶ್ರೀಕೃಷ್ಣನೇ ಪೂಜೆಮಾಡಿದನು. ಅನಂತರ ಆ ಶರೀರವು ಅಂತರ್ಧಾನ ಹೊಂದಲು ಗೋಪಾಲಕರೆಲ್ಲರು ಕೃತಕೃತರಾಗಿ ತಮ್ಮ ತಮ್ಮ ತಾಣಗಳಿಗೆ ತಿರುಗಿ ಬಂದರು.

## ಕಿರಿಬೆಟ್ಟನ ಮೇಲೆ ಹಿರಿಬೆಟ್ಟ

**ವೇದವ್ಯಾಸ:-** ಗೋವರ್ಧನ ಪರ್ವತದ ಪೂಜೆಯು ಸಾಂಗವಾಗಿ ನೆರವೇರಿತು. ಗೋಪಾಲಕರು ಪ್ರತಿವರ್ಷ ಮಾಡುವ ಇಂದ್ರನ ಪೂಜೆ ನಿಂತುಹೋಯಿತು. ಅವನಿಗೆ ಬ್ರಹ್ಮಾಂಡ ಕೋಪ. ಸಂವರ್ತಕ ಎಂಬ ಪ್ರಳಯ ಮೋಡಗಳ ಪಡೆ ಅವನ ಕೈಯಲ್ಲಿಯೇ ಇದ್ದಿತಲ್ಲವೆ? ಅವುಗಳನ್ನು ಕರೆದು ಆಜ್ಞಾಪಿಸುವ ಧಾಟಿಯಲ್ಲಿ ಹೇಳಿದ.

''ಎಲೈ ಮೇಘ ಮಂಡಲಗಳೇ, ನಾನು ಹೇಳುವ ಮಾತನ್ನು ಕೇಳಿರಿ. ನನ್ನ ಅಪ್ಪಣೆ ಯನ್ನು ಕೂಡಲೆ ಕಾರ್ಯರೂಪಕ್ಕೆ ಇಳಿಸಿರಿ. ಅದರಲ್ಲಿ ಯಾಕೆ ಏನು ಎಂದು ವಿಚಾರ ಬೇಡ. ಭೂಮಂಡಲದಲ್ಲಿ ಗೋಕುಲದಲ್ಲಿ ನಂದಗೋಪ ಇರುವನಷ್ಟೇ! ಅವನಿಗೆ ಬುದ್ಧಿ ಕೆಟ್ಟಿದೆ. ಅವನಿಗೆ ಈಗ ಬಹಳ ಗರ್ವ ಬಂದಿದೆ. ಅದಕ್ಕೆ ಆ ಕೃಷ್ಣನ ಆಶ್ರಯವೇ ಕಾರಣ. ಉಳಿದ ಗೋಪಾಲಕರು ಅವನಿಗೆ ಸಹಾಯಕರಾಗಿದ್ದಾರೆ. ಅವರೆಲ್ಲರೂ ಕೂಡಿ ಪ್ರತಿವರ್ಷವೂ ನನ್ನನ್ನು ಉದ್ದೇಶಿಸಿ ಮಾಡುವ ಇಂದ್ರಪೂಜೆಯನ್ನು ಕೈ ಬಿಟ್ಟಿದ್ದಾರೆ. ಆ ದನಕಾಯುವವರಿಗೆಲ್ಲ ಗೋವುಗಳೆಂದರೆ ಪ್ರಾಣ. ಆ ಗೋವುಗಳೇ ಅವರ ಉಪಜೀವನ ಸಾಧನ. ಆ ಗೋವುಗಳ ಅಭಿವೃದ್ಧಿಯಿಂದಲೇ ಅವರು ಹಣ ಗಳಿಸಿ ಸಂಪನ್ನರಾಗಿ ಕೊಬ್ಬಿದ್ದಾರೆ. ಈಗ ನೀವೆಲ್ಲರೂ ಹೋಗಿ ಆ ಗೋಕುಲದ ಮೇಲೆ ಧಾರಾಕಾರವಾಗಿ ಮಳೆಸುರಿಸಿರಿ. ಅತಿವೃಷ್ಟಿಯಿಂದ ಆ ಗೋವರ್ಧನವೆಲ್ಲವೂ ನಷ್ಟವಾಗುವಂತೆ ಮಾಡಿರಿ. ನಾನು ಕೂಡ ಗಿರಿಶಿಖರದಂತಿರುವ ಐರಾವತವನ್ನು ಏರಿ ಬಂದು ನಿಮಗೆ ಸಹಾಯ ಮಾಡುತ್ತೇನೆ. ನೀವು ಗೋಕುಲದಲ್ಲಿ ಮಾಡಲಿರುವ ಮಳೆಯ ದಾಳಿಗೆ ಗಾಳಿ ಕೂಡ ಸೇರಿಕೊಂಡು ಸಹಕರಿಸಲಿದೆ.''

ಸುರೇಂದ್ರನಾಥ ಶಚೀಪತಿಯು ಹೀಗೆ ಆಜ್ಞೆ ಮಾಡುವುದೊಂದೆ ತಡ. ಮೋಡ ಪಡೆಗಳು ಮುಗಿಲಿನಿಂದ ಹೊರಟವು. ಗಾಳಿಯು ಜೋರಾಗಿ ಬೀಸಿತು. ಅದರಿಂದ ಒಮ್ಮೆಲೆ ಮುಸಲಧಾರೆಯಾಗಿ ಮಳೆ ಸುರಿಯತೊಡಗಿತು. ಬಿರುಗಾಳಿ ಮರ ಮಳೆಯ ಈ ಆಕಸ್ಮಿಕ ದಾಳಿಯಿಂದ ಗೋಪಾಲಕರು ತತ್ತರಿಸಿ ಹೋದರು. ಹಸುಗಳೆಲ್ಲ ಹೆದರಿ ಕಂಗೆಟ್ಟವು.

ಆಗಸದ ತುದಿಯಿಂದ ಧಾರಾಕಾರವಾಗಿ ಎಡೆಬಿಡದೆ ಸುರಿಯುತ್ತಿರುವ ಮಳೆಯಿಂದ ಭೂಮಿ, ದಿಕ್ಕು ಆಕಾಶ ಯಾವುದೂ ಕಾಣದಂತಾಗಿ ಏಕಾಕಾರವಾದವು. ಅತಿವೃಷ್ಟಿಯ ನಿರಂತರ ಪ್ರಹಾರದಿಂದ ಎಷ್ಟೋ ಹಸುಗಳು ಪ್ರಾಣಬಿಟ್ಟವು. ಅನೇಕ ಕರುಗಳು ನೀರಿನ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋದವು. ಮಳೆಯ ಗಾಳಿ ನೀರಿನ ಪ್ರವಾಹಗಳಲ್ಲಿ ಸಿಕ್ಕು ತೇಲಿಕೊಂಡು ಹೋಗುತ್ತಲಿರುವ ದನಕರುಗಳ ದೀನಧ್ವನಿ ಹಾಗೂ ಗೋಕುಲದಲ್ಲಿ ದಿಕ್ಕೆಟ್ಟು ಹರಿದಾಡುತ್ತಿರುವ ಗೋಪ ಗೋಪಿಯರ ಹಾಹಾಕಾರವನ್ನು ಕೇಳಿ ಕೃಷ್ಣನು ಈಗ ಏನು ಮಾಡಬೇಕು ಎಂದು ಯೋಚಿಸಿದ.

''ತನ್ನ ಪೂಜೆ ತಪ್ಪಿದೆಯೆಂದು ಅವನಿಗೆ (ಇಂದ್ರನಿಗೆ) ಕೋಪ ಬಂದಿದೆ. ಅದಕ್ಕಾಗಿ ಗೋವುಗಳನ್ನೂ ಗೋಪಾಲಕರನ್ನೂ ನಾಶಮಾಡಬೇಕೆಂದು ಈ ಅತಿವೃಷ್ಟಿಯನ್ನು ಮೋಡಗಳಿಂದ ಸುರಿಸುತ್ತಲಿದ್ದಾನೆ ಹೇಗಾದರೂ ಮಾಡಿ ನಾನು ಈಗ ಇವರನ್ನು ಕಾಪಾಡಬೇಕು'' ಎಂದು ವಿಚಾರಿಸಿ ಗೋವರ್ಧನ ಪರ್ವತದ ಬಳಿಗೆ ಹೋದನು ಆ ಕೃಷ್ಣ. ಆ ಇಡೀ ಬೆಟ್ಟವನ್ನೇ ಕೊಡೆಯಂತೆ ಕೈಯಲ್ಲಿ ಎತ್ತಿ ಹಿಡಿದನು.

ಅನಂತರ ಗೋಪಾಲಕರನ್ನೆಲ್ಲ ಕರೆದು ''ಇಲ್ಲಿ ಬನ್ನಿರಿ. ನಾನು ಎತ್ತಿ ಹಿಡಿದ ಈ ಬೆಟ್ಟದ ಬುಡದಲ್ಲಿ ಮಳೆಯೇ ಇಲ್ಲ. ಎಲ್ಲರು ಧೈರ್ಯವಾಗಿ ಬಂದು ಇಲ್ಲಿ ನಿಂತು ಕೊಳ್ಳಿರಿ. ನಾನು ನನ್ನ ಕಿರಿಬಟ್ಟಿನ ಮೇಲೆ ಈ ಬೆಟ್ಟವನ್ನು ಎತ್ತಿ ಗಟ್ಟಿಯಾಗಿ ಹಿಡಿದಿದ್ದೇನೆ. ಅದು ಎಂದೂ ಬೀಳುವುದಿಲ್ಲ, ಕುಸಿಯುವದಿಲ್ಲ. ನೀವೆಲ್ಲರೂ ನಿಮ್ಮ ದನಕರುಗಳೊಂದಿಗೆ ಹಾಗೂ ನಿಮ್ಮ ಸಾಮಾನು ಸರಂಜಾಮಿನೊಂದಿಗೆ ಇಲ್ಲಿ ನಿರ್ಭಯವಾಗಿ ಬಂದು ನಿಲ್ಲಿರಿ'' ಎಂದು ಹೇಳಿದನು.

ಕೃಷ್ಣನ ಮಾತನ್ನು ಕೇಳಿ ಎಲ್ಲ ಗೋಪಾಲಕರೂ ಗೋಪಿಕಾ ಸ್ತ್ರೀಯರೂ ತಮ್ಮ ದನಕರುಗಳೊಂದಿಗೆ ಕೃಷ್ಣನು ನಿಂತುಕೊಂಡ ಗೋವರ್ಧನ ಪವರ್ತದ ಕೆಳಗೆ ಬಂದು ನಿಂತುಕೊಂಡರು. ಅಲ್ಲಿ ಒಂದು ಹನಿಕೂಡ ಮಳೆಯಿಲ್ಲ. ಬೆಚ್ಚಗಿನ ವಾತಾವರಣ, ಸುತ್ತಲೂ ಮಳೆ ಸುರಿಯುತ್ತಲಿದ್ದರೂ ಪರ್ವತದ ಮೂಲದಲ್ಲಿ ಸುರಕ್ಷಿತವಾಗಿ ನಿಂತುಕೊಂಡ ಅವರು ಕೃಷ್ಣನನ್ನು ನೋಡುತ್ತ ಆನಂದದಿಂದ ಉಳಿದುಕೊಂಡರು. ದೊಡ್ಡ ದೊಡ್ಡ ಮೋಡಗಳು ಒನಕೆಗಡತರವಾದ ಮಳೆನೀರಿನ ಹನಿಗಳನ್ನು ಒಂದೇ ಸಮನೆ ಸುರಿಯುತ್ತಲೇ ಇದ್ದವು. ಹೀಗೆ ಏಳುದಿನ ಮೋಡಗಳು ಹಗಲು ಇರುಳು ಅವಿರತವಾಗಿ ನೀರನ್ನು ಸುರಿದೇ ಸುರಿದವು. ಕೃಷ್ಣನು ತನ್ನ ಕಿರುಬೆರಳಿನ ಮೇಲೆ ಆ ಹಿರಿದಾದ ಗಿರಿಯನ್ನು ನಿಶ್ಚಲವಾಗಿ ಎತ್ತಿ ಹಿಡಿದು ಆ ಅತಿವೃಷ್ಟಿಯ ಕುತ್ತಿನಿಂದ ಗೋಪಾಲಕರನ್ನು ಪಾರು ಮಾಡಿದನು. ಹೀಗೆ ಅತಿವೃಷ್ಟಿಯ ಅತಿಕಷ್ಟದಿಂದ ಶ್ರೀಕೃಷ್ಣನು ಗೋಗಣವನ್ನೂ ಗೋಪಾಲ ಕುಲವನ್ನೂ ಅಕ್ಷತವಾಗಿ ರಕ್ಷಣೆಮಾಡಿದ್ದನ್ನು ಕಂಡು ಇಂದ್ರನ ಮದ ಇಳಿಯಿತು. ಅವನು ನಿರುಪಾಯನಾಗಿ ಪ್ರಳಯ ಕಾಲೀನ ಮೇಘ ವೃಂದವನ್ನೆಲ್ಲ ಹಿಂದಕ್ಕೆ ಕರೆಯಿಸಿಕೊಂಡನು. ಮೋಡಗಳೆಲ್ಲವೂ ಮುಗಿಲನ್ನು ಖಾಲಿ ಮಾಡಿದ ಬಳಿಕ ಆಕಾಶವೂ ಸ್ವಚ್ಛವಾಯಿತು. ದೇವೇಂದ್ರನ ಉಪಾಯ ವ್ಯರ್ಥವಾಯಿತು. ವ್ರಜವಾಸಿಗಳೆಲ್ಲರೂ ಅಲ್ಲಿಂದ ಹೊರಟು ತಮ್ಮ ತಮ್ಮ ಸ್ಥಾನಗಳಿಗೆ ಹೋಗಿ ಸೇರಿದರು.

ಅನಂತರ ಕೃಷ್ಣ ಆ ಗೋವರ್ಧನ ಪರ್ವತವನ್ನು ಅದು ಮೊದಲು ಇದ್ದಲ್ಲಿಯೆ ಇಟ್ಟುಬಿಟ್ಟ. ಅದರಿಂದ ಇಂದ್ರನ ಗರ್ವಭಂಗವಾಗಿ ಅವನಿಗೆ ವಿವೇಕವುಂಟಾಯಿತು. ಶ್ರೀಕೃಷ್ಣನ ದರುಶನ ಮಾಡಿಕೊಳ್ಳಬೇಕೆಂಬ ಕುತೂಹಲವೂ ಉಂಟಾಯಿತು.

ಅದಕ್ಕಾಗಿ ಅವನು ಐರಾವತವನ್ನು ಏರಿಕೊಂಡು ಗೋಕುಲಕ್ಕೆ ಬಂದ. ಕೃಷ್ಣನು ಗೋಪವೇಷದಿಂದ ಗೋವರ್ಧನ ಪರ್ವತದಲ್ಲಿ ಹಸುಗಳನ್ನು ಮೇಯಿಸುತ್ತ ಆಟವಾಡುತ್ತಿದ್ದ ಗರುಡನು ಕೃಷ್ಣನ ತಲೆಗೆ ಬಿಸಿಲು ಹತ್ತಬಾರದೆಂದು ತನ್ನ ವಿಶಾಲವಾದ ರೆಕ್ಕೆಗಳನ್ನು ಬಿಡಿಸಿ ಗಗನ ಮಂಡಲದಲ್ಲಿ ನಿಂತುಕೊಂಡಿದ್ದ. ಇಂದ್ರನನ್ನು ನೋಡಿದ ಕೂಡಲೆ ಗರುಡನು ಅದೃಶ್ಯನಾದ. ಇಂದ್ರನು ಕೃಷ್ಣನ ಸಮೀಪದಲ್ಲಿ ಬಂದು ಕೈಮುಗಿದು ಹೇಳಿದನು. ''ಕೃಷ್ಣ ನೀನು ಸಾಕ್ಷಾತ್ ಪರಮೇಶ್ವರನೆ ಇದ್ದು ಭೂಭಾರ ಹರಣಕ್ಕಾಗಿ ಪೃಥವಿಯಲ್ಲಿ ಅವತಾರ ಮಾಡಿರುವೆ. ನನ್ನ ಉತ್ಸವವನ್ನು ನೀನು ನಿಲ್ಲಿಸಿದ್ದರಿಂದ ನನಗೆ ಕೋಪ ಬಂದಿತು. ಅದಕ್ಕಾಗಿ ನಾನು ಪ್ರಳಯ ಕಾಲದ ಮೋಡದ ತಡೆ ದಿಟ್ಟ ಪಡೆಗೆ ಆಜ್ಞೆ ಮಾಡಿದೆ. ಗೋ ಗೋಪ ಸಹಿತವಾದ ಗೋಕುಲವನ್ನೆಲ್ಲ ನೀರಿನಲ್ಲಿ ಮುಳುಗಿಸಿದೆ. ವ್ರಜಭೂಮಿಯ ಪರಿಸರದಲ್ಲಿ ಪ್ರಳಯವನ್ನೇ ಉಂಟುಮಾಡಿರೆಂದು ಮೇಘಗಳಿಗೆ ಹೇಳಿದೆ. ಅದರಂತೆ ಆ ಮೋಡಗಳು ಘೋರಾಕಾರದ ಮಳೆಯನ್ನು ವೃಷ್ಟಿಗೈದು ಧಾರಾಕಾರವಾಗಿ ಸುರಿದ ನೀರಿನಿಂದ ಜಲಪ್ರಳಯವನ್ನೇ ಉಂಟು ಮಾಡಿದವು. ಆದರೆ ಅವತಾರಿ ಪುರುಷನಾದ ನೀನು ಆ ಬೃಹದಾಕಾರದ ಬೆಟ್ಟವನ್ನು ಲೀಲೆಯಿಂದ ಬೆರಳ ಮೇಲೆ ಎತ್ತಿ ಹಿಡಿದು ಎಲ್ಲರನ್ನು ಕುತ್ತಿನಿಂದ ಪಾರುಮಾಡಿದೆ. ನಿನ್ನ ಈ ಅತ್ಯದ್ಭುತವಾದ ಕೃತ್ಯದಿಂದ ನಾನು ನಿಜವಾಗಿಯೂ ಸಂತುಷ್ಟನಾಗಿದ್ದೇನೆ. ನನ್ನ ತಪ್ಪನ್ನು ಮನ್ನಿಸು ನನ್ನ ಮೇಲೆ ಅನ್ಯಥಾ ಭಾವನೆಯನ್ನು ಮಾಡಬೇಡ ನೀನು ಜಗದಾಧಾರನಾದ ಮಹಾಪ್ರಭು, ನೀನು ಆವು ಗೋವುಗಳನ್ನು ಅತಿವೃಷ್ಟಿಯ ಅನಾಹುತದಿಂದ ಸುರಕ್ಷಿತವಾಗಿ ಪಾರುಮಾಡಿದ್ದರಿಂದ ಸ್ವರ್ಗ ಸೀಮೆಯ ಕಾಮಧೇನು ಮೊದಲಾದ ಗೋವುಗಳೆಲ್ಲವು ನಿನ್ನ ಮೇಲೆ ಭಕ್ತಿ ಭಾವ ಭರಿತವಾಗಿವೆ. ನಿನಗೆ ತಮ್ಮ ಹಾಲಿನಿಂದ ಕ್ಷೀರಾಭಿಷೇಕ ಮಾಡಬೇಕೆಂದು ಅಪೇಕ್ಷೆಪಟ್ಟಿವೆ. ಆ ಗೋವುಗಳ ಅಭಿಪ್ರಾಯದಂತೆ ಗೋಗಳನ್ನು ರಕ್ಷಿಸುವ ನಿನ್ನನ್ನು ಗೋವಿಂದ ಎಂದು ಕರೆದು ಪಟ್ಟಾಭಿಷೇಕ ಮಾಡುತ್ತೇನೆ'' ಎಂದು ವಿಜ್ಞಾಪಿಸಿಕೊಂಡ. ಹೀಗೆ ಹೇಳಿ ಐರಾವತದಿಂದ ಇಳಿದು ಬಂದು ಒಂದು ಗಂಟೆಯನ್ನು ಹಿಡಿದು ಒಂದು ಕೈಯಿಂದ ಬಾರಿಸುತ್ತ ಇನ್ನೊಂದು ಕೈಯಿಂದ ಜಲತುಂಬಿದ ಕಲಶ ಹಿಡಿದು ಕೃಷ್ಣನಿಗೆ ಅಭಿಷೇಕ ಮಾಡಿದ. ಮುಗಿಲಿನಲ್ಲಿದ್ದ ಗೋವುಗಳೆಲ್ಲವೂ ತಮ್ಮ ಕೆಚ್ಚಲಿನಿಂದ ಕ್ಷೀರಧಾರೆಯನ್ನು ಸುರಿಸಿದವು. ನೆಲದಲ್ಲಿ ಕೃಷ್ಣನ ಸುತ್ತಲು ನಿಂತ ಗೋವುಗಳು ಕೂಡ ತಮ್ಮ ಹಾಲನ್ನು ಸುರಿಸಿ ಅಲ್ಲಿ ಹಾಲಿನ ಹೊಳೆಯೇ ಹರಿಯುವಂತೆ ಮಾಡಿದವು.

ಹೀಗೆ ಕೃಷ್ಣ ಭಗವಂತನಿಗೆ ದೇವೇಂದ್ರನು ''ಗೋವಿಂದ'' ಎಂದು ಹೆಸರಿಟ್ಟು ಪಟ್ಟಾಭಿಷೇಕವನ್ನು ಮಾಡಿ ಭಗವಂತನನ್ನು ಕುರಿತು ಕೈ ಮುಗಿದು ಹೇಳಿದ. ''ಮಹಾ ಮಹಿಮನಾದ ಶ್ರೀಕೃಷ್ಣ, ನಾನು ಗೋವುಗಳ ಅಭಿಪ್ರಾಯದಂತೆ, ಅವುಗಳ ಪ್ರೇರಣೆಯಿಂದ ನಿನಗೆ ಅಭಿಷೇಕ ಮಾಡಿದೆ. ನೀನು ಮುಂದೆ ನನ್ನ ಒಂದು ಕೆಲಸವನ್ನು ಮಾಡಬೇಕು. ಭೂಲೋಕದಲ್ಲಿ ನನ್ನ ಅಂಶದಿಂದ ಅರ್ಜುನ ಎಂಬ ಪುರುಷಶ್ರೇಷ್ಠನು ಹುಟ್ಟಿರುವನು. ಅವನು ನನ್ನ ಪುತ್ರ, ನೀನು ಅವನ ಮಿತ್ರನಾಗಿ ಅವನನ್ನು ಸುರಕ್ಷಿತವಾಗಿ ಕಾಪಾಡಬೇಕು. ಅವನು ನಿನಗೆ ನಿನ್ನ ಭೂಭಾರಹರಣ ರೂಪವಾದ ಕಾರ್ಯದಲ್ಲಿ ನೆರವು ನೀಡುವನು' ಎಂದು ಬೇಡಿಕೊಂಡನು.

ಆಗ ಕೃಷ್ಣನು ''ಹಾಗೆಯೆ ಆಗಲಿ'' ಈ ಮಹೀಮಂಡಲದಲ್ಲಿ ನಿನ್ನ ಅಂಶದಿಂದ ಹುಟ್ಟಿದ ಪಾರ್ಥನನ್ನು ನಾನು ಸರ್ವರೀತಿಯಿಂದಲೂ ರಕ್ಷಿಸುವೆನು. ನಾನು ಭೂಮಿಯಲ್ಲಿ ಇರುವವರೆಗೆ ಯಾರೂ ಅವನನ್ನು ಸೋಲಿಸಲಾರರು. ಕಂಸ, ಅರಿಷ್ಟ, ಕೇಶಿ, ಕುವಲಯಾಪೀಡ, ನರಕಾಸುರ, ಮುಂತಾದ ದೈತ್ಯಾಧಮರನ್ನೆಲ್ಲ ನಾನು ಸಂಹರಿಸಿದ ಬಳಿಕ ಆ ಮಹಾಭಾರತ ಯುದ್ಧವು ಪ್ರಾರಂಭವಾಗುವುದು. ಅದರಲ್ಲಿ ನಿನ್ನ ಮಗ ಅರ್ಜುನನದೇ ಪ್ರಧಾನ ಪಾತ್ರ. ನಾನು ಅವನಿಗೆ ರಕ್ಷಕನಾಗಿ ನಿಂತುಕೊಂಡು ಪಾಂಡವರ ಮುಖಾಂತರ ಭೂಭಾರ ಹರಣ ಕಾರ್ಯವನ್ನು ಪೂರ್ತಿಗೊಳಿಸುವೆ. ನೀನು ಇನ್ನು ಹೊರಡು ಅರ್ಜುನನ ಬಗ್ಗೆ ನಿನಗೆ ಚಿಂತೆ ಬೇಡ'' ಎಂದು ಹೇಳಿ ಇಂದ್ರನನ್ನು ಬೀಳ್ಕೊಂಡನು. ಇತ್ತ ಶ್ರೀಕೃಷ್ಣನು ಗೋವುಗಳು ಹಾಗೂ ಗೋಪಾಲಕರೊಂದಿಗೆ ಗೋಕುಲಕ್ಕೆ ಮರಳಿದನು.

## ರಾಸಲೀಲೆ

**ವ್ಯಾಸ:-** ಇಂದ್ರನು ಐರಾವತವನ್ನು ಏರಿ ಸ್ವರ್ಗಲೋಕಕ್ಕೆ ತೆರಳಿದ ಬಳಿಕ ಗೋಪಾಲಕರೆಲ್ಲರಿಗೂ ಆ ಅದ್ಭುತ ದೃಶ್ಯವನ್ನು ನೋಡಿ ಆಶ್ಚರ್ಯವಾಯಿತು.

ದೇವಲೋಕದ ಸಾರ್ವಭೌಮನಾದ ದೇವೇಂದ್ರನು ಗೋಕುಲದಲ್ಲಿರುವ ಗೋಪಾಲಕನಾದ ಕೃಷ್ಣನ ಬಳಿಗೆ ಬರುವದೆಂದರೆ ಏನು? ಆ ಸುರಪುರದ ಸಮ್ರಾಟನು ಒಬ್ಬ ಸಾಮಾನ್ಯ ದನಗಾಹಿಗೆ ಸೋತು ಶರಣಾಗಿ ಪಟ್ಟಾಭಿಷೇಕ ಮಾಡಬೇಕಾದರೆ ಶ್ರೀಕೃಷ್ಣನು ನಾವು ತಿಳಿದಂತೆ ಸಾಮಾನ್ಯ ಮಾನವನಲ್ಲ. ಇವನು ಯಾವನೊ ಒಬ್ಬ ಮಹಾಮಹಿಮನಾದ ಶ್ರೇಷ್ಠ ದೇವತೆಯೇ ಇರಬೇಕು. ಆದುದರಿಂದ ನಾವು ಅವನನ್ನೆ ಕೇಳೋಣ ''ನೀನು ಯಾರು'' ಎಂದು. ಹೀಗೆ ತಮ್ಮ ತಮ್ಮಲ್ಲಿ ಆಲೋಚಿಸಿದರು ಮತ್ತು ಕೃಷ್ಣನ ಬಳಿಗೆ ಬಂದು ಕೇಳಿದರು.

''ಕೃಷ್ಣ ನೀನು ಹುಟ್ಟಿದ್ದು ಜುಗುಪ್ಸೆಯನ್ನುಂಟುಮಾಡುವ ಗವಳಿಗರ ಕುಲದಲ್ಲಿ. ಮಾಡಿದ್ದು ದೇವತೆಗಳಿಗೂ ಅಶಕ್ಯವಾದ ಅದ್ಭುತ ಕರ್ಮಗಳು. ಮಗುವಿದ್ದಾಗಲೆ ಪೂತನಿಯ ಪ್ರಾಣ ಹಿಂಡಿದೆ. ಪ್ರಲಂಬಾಸುರನನ್ನು ನಾಶಮಾಡಿದೆ. ತೃಣಾವರ್ತನನ್ನು ಸಂಹರಿಸಿದೆ. ಯಮುನಾ ನದಿಯಲ್ಲಿ ಅಡಗಿದ ಕಾಳಿಂಗನನ್ನು ಮೆಟ್ಟಿ ನಿಗ್ರಹಿಸಿದೆ. ಗೋವರ್ಧನದಂತಹ ಬೃಹದಾಕಾರದ ಬೆಟ್ಟವನ್ನು ಕಿರುಬೆಟ್ಟಿನ ಮೇಲೆಯೆ ಗಟ್ಟಿಯಾಗಿ ಒತ್ತಿ ಹಿಡಿದೆ. ಇಂದ್ರನು ಬಂದು ತನ್ನ ತಪ್ಪನ್ನು ಒಪ್ಪಿ ನಿನಗೆ ತನ್ನ ಕಪ್ಪು ಕಾಣಿಕೆಯನ್ನು ಒಪ್ಪಿಸಿಹೋದ. ಇದೆಲ್ಲವನ್ನು ನೋಡಿದರೆ, ನಮ್ಮ ಮನಸ್ಸಿಗೆ ಏನೋ ಅನುಮಾನ. ನೀನು ನಮ್ಮಂತೆ ಸಾಮಾನ್ಯ ಮನುಷ್ಯ ಆಗಿರಲಿಕ್ಕಿಲ್ಲ. ಆದುದರಿಂದ ನೀನು ನಿಜ ಹೇಳು. ನೀನು ದಾನವನೋ? ಮಾನವನೋ? ದೇವನೋ? ಯಕ್ಷನೋ? ಗಂಧರ್ವನೋ? ಯಾರು ನೀನು?''

ಅವರ ಮಾತನ್ನು ಕೇಳಿ ಕೃಷ್ಣನು ತುಸು ಕೋಪಬಂದವನಂತೆ ನಟಿಸಿ ಅವರಿಗೆ ಹೇಳಿದ. ''ನಾನು ದೇವನಲ್ಲ, ಗಂಧರ್ವನೂ ಅಲ್ಲ. ನಾನೊಬ್ಬ ನಿಮ್ಮ ಆಪ್ತ ಬಂಧು, ಉಳಿದೆಲ್ಲ ವಿಚಾರ ಕಟ್ಟಿಕೊಂಡು ನಿಮಗೆ ಏನು ಆಗಬೇಕಾಗಿದೆ'' ಎಂದು ನುಡಿದನು.

ಕೃಷ್ಣನ ಈ ಮಾತನ್ನು ಕೇಳಿ ಗೋಪಾಲಕರೆಲ್ಲರು ಸುಮ್ಮನಾದರು. ಮತ್ತೊಮ್ಮೆ ಅವರು ಈ ವಿಚಾರವನ್ನು ಎತ್ತಲಿಲ್ಲ. ಮುಂದೆ ಕೆಲದಿನಗಳು ಕಳೆದ ಬಳಿಕ ಶರತ್ಕಾಲವು

ಪ್ರಾಪ್ತವಾಯಿತು. ತಿಳಿನೀರಿನ ಕೊಳಗಳಲ್ಲಿ ಮಧುರ ರಾತ್ರಿಗಳಲ್ಲಿ ಕನ್ನೈದಿಲೆಗಳು ಅರಳಿ ನಿಂತವು. ಮುಗಿಲಿನಲ್ಲಿ ಚಂದ್ರನ ಬೆಳದಿಂಗಳು ಹರಡಿ ಸೊಸಿತು. ವನೋಪವನಗಳಲ್ಲಿ ಅಲೆದ ಮಂದ ಮಾರುತ ಪುಷ್ಪರಾಶಿಗಳ ಸೌಗಂಧವನ್ನು ಎಲ್ಲೆಡೆಯೂ ಬೀರುತ್ತಿದ್ದ. ಹೂಗಳ ಹೂಜಿಗಳಿಂದ ಜೇನನ್ನು ಈಂಟಿ ದುಂಬಿಗಳು ಝೇಂಕಾರ ಮಾಡುತ್ತಿದ್ದವು. ಆಗ ಶ್ರೀಕೃಷ್ಣನು ಬಲರಾಮನೊಡನೆ ಕೂಡಿ ಮಧುರಗಾನ ಮಾಡಿದನು. ಅವನ ಗೀತಗಾರುಡಿಗೆ ಮುಗ್ಧರಾಗಿ ಗೋಪಿಕಾಸ್ತ್ರೀಯರು ತಮ್ಮ ಮನೆಗೆಲಸವನ್ನು ಬಿಟ್ಟು ಕೃಷ್ಣನಿರುವಲ್ಲಿಗೆ ಓಟ್ಟಾಗಿ ಬಂದು ನಿಂತರು. ಆಗ ಶ್ರೀಕೃಷ್ಣನು ಆ ಗೋಪಿಕಾ ಸ್ತ್ರೀಯರೊಂದಿಗೆ ರಾಸಕ್ರೀಡೆಯನ್ನು ಆರಂಭಿಸಿದನು. ಯಮುನಾನದಿಯ ಸುಂದರವಾದ ತೀರ, ಸಕ್ಕರೆಯ ಪುಡಿಯನ್ನೆ ಬೆರಸಿಟ್ಟಂತಿರುವ ಪುಲಿನರಾಶಿ, ಹಿಟ್ಟು ಚೆಲ್ಲಿದಂತಿದ್ದ ಬೆಳಂದಿಗಳು ಸುಗಂಧ ಬೀರುವ ಮಂದಮಾರುತ ಶರತ್ಕಾಲದ ಹುಣ್ಣಿಮೆಯ ಮಧ್ಯರಾತ್ರಿ. ಇಂಥ, ರಮಣೀಯವಾದ ರಸರಾತ್ರಿಯಲ್ಲಿ ರಸಿಕನಾದ ಕೃಷ್ಣನು ಆ ಬಲ್ಲವ ಬಾಲೆಯ ರೊಡನೆ ಬಗೆಬಗೆಯಾಗಿ ರಾಸಲೀಲೆಯನ್ನು ಆಡಿದ. ಮಧುರ ಸುಂದರವಾಗಿ ಗಾನ ಮಾಡಿದ.

ಗವಳಿಗರ ಕುಲದ ಆ ಬಾಲೆಯರೆಲ್ಲರು ಗುಂಪಾಗಿ ಕೂಡಿ ಕೃಷ್ಣನನ್ನು ಅನುಕರಿಸಿ ಹಾಡು ಹಾಡಿದರು. ಕೃಷ್ಣನು ತಮ್ಮ ಕಣ್ಣುತಪ್ಪಿಸಿ ಹೋದಾಗ ಅವನನ್ನು ಹಿಡಿಯಲು ಹೋಗಿ ವೃಂದಾವನದ ತುಂಬ ಓಡಾಡುತ್ತಿದ್ದರು. ಅವನು ಕಾಣದಾದಾಗ ಅವನ ಕಾಲ ಹೆಜ್ಜೆಯ ಚಿಹ್ನೆಗಳನ್ನು ಗುರುತು ಹಿಡಿದು ಓಡಿ ಅವನನ್ನು ಹಿಡಿಯುತ್ತಿದ್ದರು. ಅವರಲ್ಲಿ ಒಬ್ಬಳು ಕೃಷ್ಣನನ್ನು ಕಾಣುತ್ತಲೆ ಅತ್ಯಂತ ಸಂತೋಷದಿಂದ ಕೃಷ್ಣ ಬಂದ ಕೃಷ್ಣ ಬಂದ ಎಂದು ಕಣ್ಣು ಅರಳಿಸಿ ಕೂಗತೊಡಗಿದಳು. ಮತ್ತೊಬ್ಬಳು ಹುಬ್ಬುಗಂಟು ಹಾಕಿ ತನ್ನ ಮುಖವನ್ನು ಮೇಲಕ್ಕೆ ಎತ್ತಿ ಓರೆನೋಟದಿಂದ ಕೃಷ್ಣನನ್ನು ನೋಡಿ ತೃಪ್ತಿಯಾಗದೆ ಅರಳುಗಣ್ಣಿನಿಂದ ಮತ್ತೆ ಕೃಷ್ಣನನ್ನು ನೋಡಿ ಇಚ್ಚಿಸಿ ಆನಂದ ಪಟ್ಟಳು. ಮತ್ತೊಬ್ಬ ಹದಿ ಹರೆಯದ ಹೆಣ್ಣು ಕೃಷ್ಣನನ್ನು ಒಮ್ಮೆ ಅಡಿಯಿಂದ ಮುಡಿವರೆಗೆ ನೋಡಿ ಅವನ ರೂಪವನ್ನು ತನ್ನ ಕಣ್ಣಲ್ಲಿ ತುಂಬಿಸಿಕೊಂಡು ಹೃದಯದಲ್ಲಿ ಬಿಂಬಿಸಿಕೊಂಡು ಕಣ್ಣು ಮುಚ್ಚಿದಳು. ಹೊರಗೆ ನಿಂತ ಕೃಷ್ಣ ಅದೇ ರೂಪದಿಂದ ಅವಳ ಹೃತ್ಪಟಲದಲ್ಲಿ ಮೂಡಿ ಬಿಟ್ಟಿದ್ದ. ತನ್ನ ಧ್ಯಾನಗೋಚರನಾದ ಕೃಷ್ಣನನ್ನು ಕಂಡು ಸಂತಸಪಟ್ಟು ಅವನನ್ನು ನೆನೆಯುತ್ತ ಕುಳಿತುಕೊಂಡಳು. ಆಗ ಅವಳು ಕೃಷ್ಣನನ್ನು ಸಾಕ್ಷಾತ್ಕಾರ ಮಾಡಿಕೊಂಡ ಯೋಗಿನಿಯಂತೆ ಕಾಣುತ್ತಿದ್ದಳು. ಕೃಷ್ಣನು ಅವರೆಲ್ಲರನ್ನು ತನ್ನ ಕಡೆನೋಟ, ಕುಡಿನೋಟ, ಒಳ್ಳೆಯ ಮಾತು, ಸ್ಪರ್ಶನ, ದರ್ಶನ ಮಧುರಾಲಾಪದಿಂದ ಸಂತೋಷಪಡಿಸಿದನು. ಅವರೆಲ್ಲರನ್ನು ಆನಂದಪಡಿಸಿ ಬಗೆಬಗೆಯ ರಾಸಲೀಲೆಗಳಿಂದ ಅವರನ್ನು ತಣಿಸಿದನು.

ಆ ರಾಸಲೀಲೆಯಲ್ಲಿ ಪ್ರತಿಯೊಬ್ಬ ಗೋಪಾಂಗನೆಯ ಅಕ್ಕಪಕ್ಕದಲ್ಲಿ ಕೃಷ್ಣನು ನಿಂತು, ಅವರ ಕೈಯಲ್ಲಿ ತನ್ನ ಕೈಯನ್ನು ಇರಿಸಿ, ಕುಂಡಲಾಕಾರವಾಗಿ ಸುತ್ತುತ್ತಿದ್ದನು. ಪ್ರತಿಯೊಬ್ಬ ಗೋಪಿಗೂ ''ಕೃಷ್ಣನು ತನ್ನ ಪಕ್ಕದಲ್ಲಿಯೇ ಇರಬೇಕು, ತನ್ನ ಕೈಯನ್ನೆ ಹಿಡಿಯಬೇಕು ತನ್ನ ಜೊತೆಗೇ ನಡೆಯಬೇಕು, ತನ್ನೊಡನೆಯೆ ಕುಣಿಯಬೇಕು, ತನ್ನ ಜೊತೆಗೇ ಹಾಡಬೇಕು. ತನ್ನನ್ನು ಹಿಡಿದುಕೊಂಡೇ ಆ ರಾಸವಿಲಾಸದ ನಾಟ್ಯಲೀಲೆಯಲ್ಲಿ ದುಂಡು ಸುತ್ತಬೇಕು' ಎಂದು ಅಪೇಕ್ಷೆ ಪಡುತ್ತಿದ್ದರು. ಕೃಷ್ಣನು ವಿಶ್ವರೂಪಿಯಾಗಿ ಅವರೆಲ್ಲರ ಅಪೇಕ್ಷೆಯನ್ನು ಪೂರ್ಣಮಾಡಿದನು. ಪ್ರತಿಯೊಂದು ಗೋಪಿಯ ಅಕ್ಕಪಕ್ಕದಲ್ಲಿ ತಾನೇ ನಿಂತುಕೊಂಡು,

ಅವರ ಕೈಹಿಡಿದು ಕೊಂಡು, ಕಾಲುಕುಣಿಸುತ್ತ, ಹೆಜ್ಜೆಹಾಕುತ್ತ, ಹುಬ್ಬುಕುಣಿಸುತ್ತ, ಹಾಡು ಹಾಡುತ್ತ, ಕೊಳಲು ಊದುತ್ತ ತಾನು ಸುತ್ತುತ್ತ ಅವರೆಲ್ಲರನ್ನು ಮಂಡಲಾಕಾರವಾಗಿ ಸುತ್ತಾಡಿಸುತ್ತಿದ್ದನು.

ಆ ಗೋಪಿಕೆಯರು ಕೃಷ್ಣನ ಕರಸ್ಪರ್ಶ ಮಾತ್ರದಿಂದ ಆನಂದ ಪರವಶರಾಗಿ ಅರೆಗಣ್ಣು ತೆಗೆದು ತೇಲುಗಣ್ಣಿನಿಂದ ನಿಮೀಲಿತನೇತ್ರೆಯರು ಆಗುತ್ತಿದ್ದರು. ರೋಮಾಂಚಿತ ಗಾತ್ರೆಯರೂ ಆಗುತ್ತಿದ್ದರು. ಕೃಷ್ಣನ ಮಧುರಗಾನಕ್ಕೆ ಅವರ ಪಾದದ ಗೆಜ್ಜೆಯ ಧ್ವನಿಗಳು ತಾಳ ಹಾಕುತ್ತಿದ್ದವು. ಕೈಗಳಲ್ಲಿಯ ಕಂಕಣದ ಕಿಂಕಿಣಿನಾದ ಕೃಷ್ಣನ ಮುರಳೀನಾದಕ್ಕೆ ಮೃದಂಗಮಧುರ ಧ್ವನಿಯನ್ನು ಕೂಡಿಸುತ್ತಿದ್ದವು. ಆ ಕಾಲದಲ್ಲಿ ಕೃಷ್ಣನು ಆ ರಸರಾತ್ರಿಯಲ್ಲಿ ತಿಂಗಳ ಬೆಳಕನ್ನು ತೂರುವ ಶರಚ್ಚಂದ್ರ, ಮಂದಾನಿಲ, ಕನ್ನೈದಿಲೆ, ಕಾಮಕ್ರೀಡೆಗಳನ್ನು ಕುರಿತು ಶೃಂಗಾರ ರಸ ತರಂಗಿತವಾದ ಹಾಡುಗಳನ್ನು ಹಾಡುತ್ತಿದ್ದನು. ಅದನ್ನು ಕೇಳಿ ಗೋಪಿಯರು ಮಧ್ಯಮಧ್ಯ ದಲ್ಲಿ ಪ್ರೇಮ ಪರವಶರಾಗಿ ಕೃಷ್ಣಾ! ಕೃಷ್ಣಾ! ಎಂದು ಪ್ರೇಮೋದ್ಗಾರ ತೆಗೆಯುತ್ತಿದ್ದರು.

ಹೀಗೆ ಹೆಂಗಳೆಯರ ಹಿಂಡಿನೊಂದಿಗೆ ಸುಕುಮಾರ ಸುಂದರನಾದ ಬಾಲಗೋಪಾಲನು, ಒಮ್ಮೆ ಮಂಡಲಾಕಾರವಾಗಿಯೂ, ಕುಂಡಲಾಕಾರವಾಗಿಯೂ ಸುತ್ತುತ್ತಿರುವಾಗ ಹಲವು ಗೋಪಿಕೆಯರು ರಾಸಲೀಲೆಯಲ್ಲಿ ಬಳಲಿರುವಂತೆ, ನಟಿಸಿ ದಣಿದವರಂತೆ ಕೃಷ್ಣನ ಹೆಗಲಮೇಲೆ ತನ್ನ ಗೋಣನ್ನು ಚೆಲ್ಲುತ್ತಿದ್ದರು. ಮತ್ತೆ ಹಲವರು ಹಾಡು ಹೇಳುವ ನೆಪದಿಂದ ಕೃಷ್ಣನನ್ನು ತಮ್ಮ ಕೈಗಳಿಂದ ತಮ್ಮ ಕಡೆಗೆ ಎಳೆದುಕೊಂಡು ಆಲಿಂಗಿಸಿ ಚುಂಬಿಸುತ್ತಿದ್ದರು. ಗೋಪಿಯರ ಕಪೋಲಗಳು ಶ್ರೀಕೃಷ್ಣನ ಅಂಗಾಂಗಕ್ಕೆ ತಗುಲಿದಾಗ ಅವರೆಲ್ಲರಿಗೂ ಹರುಷದಿಂದ ರೋಮಾಂಚನವುಂಟಾಗುತ್ತಿತ್ತು. ಶ್ರೀಕೃಷ್ಣನು ಹಾಡು ಹಾಡುವಾಗ ಎಲ್ಲ ಗೋಪಿಯರು ಅವನ ಗೀತವನ್ನು ಕೇಳಿ ''ಸಾಧು ಕೃಷ್ಣ, ಸಾಧು, ನಿನ್ನ ಗಾನ ಬಹಳ ಕಿವಿಗೆ ಇಂಪು, ಹೃದಯಕ್ಕೆ ತಂಪು, ನೀನು ಹಾಡುತ್ತಲೆ ಇರು'' ಎಂದು ಕಿವಿ ತೆರೆದು ಕೇಳುತ್ತಿದ್ದರು, ಬಾಯ್ತೆರೆದು ಹೊಗಳುತ್ತಿದ್ದರು. ಅದನ್ನು ಅನುಕರಿಸಿ ತಾವೂ ಹಾಡುತ್ತಿದ್ದರು. ಅವನಂತೆ ಹಾಡಲು ಬಾರದೆ ತಾವು ಸುಮ್ಮನಾಗಿ ಅವನಿಗೆ ನೀನೇ ಹಾಡು ಎಂದು ಹೇಳುತ್ತಿದ್ದರು ಅನಂತರ ಅವನು ಹಾಡತೊಡಗಿದಾಗ ತಾವು ಅವನ ಹಾಡಿಗೆ ದನಿಗೂಡಿಸುತ್ತಿದ್ದರು. ಕೃಷ್ಣನು ಮುಂದೆ ಹೊರಟರೆ ಗೋಪಿಯರೆಲ್ಲರು ಅವನನ್ನು ಹಿಂಬಾಲಿಸುತ್ತಿದ್ದರು. ಅವನು ಹಿಂದುರುಗಿ ಬರಲು ಅವನ ಎದುರು ತಾವು ಬಂದು ರಾಸಲೀಲೆಯನ್ನು ಮತ್ತೆ ಮುಂದುವರೆಸು ಎಂದು ಒತ್ತಾಯಿಸುತ್ತಿದ್ದರು. ಆ ರಾಸವಿಲಾಸದಲ್ಲಿ ಪ್ರತಿಯೊಬ್ಬ ಗೋಪಿಯರ ಹಿಂದೆ, ಮುಂದೆ, ಎಡಕ್ಕೆ ಬಲಕ್ಕೆ, ಕೃಷ್ಣನೆ ಒಂದೊಂದು ರೂಪದಿಂದ ನಿಂತು ಹಾಡು ಹಾಡಿ ಕುಣಿದ. ಮಣಿದು ಲೀಲಾಲಾಸ್ಯವನ್ನು ಮಾಡಿದಾಗ ಅವರೆಲ್ಲರು ಆನಂದಪರವಶರಾಗಿ ಕೃಷ್ಣ ಮಯರಾಗುತ್ತಿದ್ದರು. ಆ ಸಮಯ ಅತಿರಮ್ಯ. ಆ ರಾತ್ರಿ ರಸರಾತ್ರಿ. ಆ ಗಳಿಗೆ ಅಮೃತ ಗಳಿಗೆ. ಈ ಒಂದೊಂದು ಕ್ಷಣವೂ ಅವರಿಗೆ ರಸನಿಮಿಷ ''ಈ ಕಾಲಮುಗಿಯದಂತೆ ಇರಲಿ. ಈ ಸೌಖ್ಯ ಚಿರಂತನವಾಗಲಿ' ಎಂದು ಅವರೆಲ್ಲರ ಜೀವ ತವಕಿಸುತ್ತಿತ್ತು.

ಹೀಗೆ ಶರತ್ಕಾಲದ ಇರುಳುಗಳನ್ನೆಲ್ಲ ಆ ಗೋಪಾಂಗನೆಯರು ಕೃಷ್ಣನೊಡನೆ ರಾಸ ಕ್ರೀಡೆಗಳನ್ನು ಆಡುತ್ತ ಕಳೆಯುತ್ತಿದ್ದರು ಅವರ ತಾಯಿ, ತಂದೆಗಳು, ಅಣ್ಣ-ತಮ್ಮಂದಿರು,

ಪತಿಪುತ್ರರು ಕೃಷ್ಣನೆಡೆಗೆ ಹೋಗಬೇಡಿರಿ ಎಂದು ಹೇಳಿದರೂ ಕೇಳುತ್ತಿದ್ದಿಲ್ಲ. ರಾತ್ರಿಯಾದಕೂಡಲೆ ಕೃಷ್ಣನಕೊಳಲಿನ ಧ್ವನಿ ಕೇಳಿದಕೂಡಲೆ ಅವನೊಡನೆ ಕ್ರೀಡಿಸಬೇಕೆಂಬ ಒತ್ತಾಸೆಯಿಂದ ಕೃಷ್ಣನಿದ್ದಲ್ಲಿಗೆ ಓಡುತ್ತಿದ್ದರು. ಇಡೀರಾತ್ರಿ ಅವನೊಡನೆ ರಾಸಲೀಲೆಯಲ್ಲಿ ಕ್ರೀಡಿಸುತ್ತಿದ್ದರು. ಇಷ್ಟೆಲ್ಲ ರಾಸಕ್ರೀಡೆಯನ್ನು ಕೃಷ್ಣನು ಗೋಪಿಯರೊಡನೆ ಆಡುವಾಗ ಅವನಿಗೆ ವಯಸ್ಸು ಎಷ್ಟು? ಚಿಕ್ಕವಯಸ್ಸು. ಇನ್ನು ಕಿಶೋರ ಅವಸ್ಥೆ. ಆಗಲೆ ಕಾಮ, ಪ್ರೇಮಗಳ ಹೃದಯದಲ್ಲಿ ಇನ್ನು ಹೊಳವು ಹಾಕುವ ಮುನ್ನವೇ ಕೃಷ್ಣನು ಕೈಶೋರ ಭಾವದಿಂದ ಆ ಗೋಪಿ ಕಿಶೋರಿಯೊಂದಿಗೆ ನಿಶ್ಕಲ್ಮಷ ಪ್ರೇಮದಿಂದ ರಾಸ ಲೀಲೆಗಳನ್ನು ಆಡಿದನು.

ಆ ಶ್ರೀಹರಿಯು ಸರ್ವಸ್ವಾಮಿ, ಸರ್ವಾಂತರ್ಯಾಮಿ. ಆ ಗೋಪಿಯರಲ್ಲಿಯೂ ಗೋಪಿಯರ ಪತಿಯರಲ್ಲಿಯೂ ಪ್ರಪಂಚದ ಎಲ್ಲ ಪ್ರಾಣಿಗಳಲ್ಲಿಯೂ ಪತಿಯಾಗಿ ಆತ್ಮರೂಪದಿಂದ ಇರುವ ಮಹಾಪ್ರಭು ಅವನೆ.

## ಅರಿಷ್ಟ ನಿವಾರಣೆ

ಒಂದು ಸಲ ಆ ಶ್ರೀಕೃಷ್ಣನು ಬೆಳದಿಂಗಳ ರಾತ್ರಿಯಲ್ಲಿ ರಾಸಕ್ರೀಡೆಯನ್ನು ಆಡುತ್ತಿದ್ದನು. ಆಗ ಅರಿಷ್ಟ ಎಂಬ ದೈತ್ಯನು ಮದಾಂಧನಾಗಿ ಅವರನ್ನೆಲ್ಲ ಹೆದರಿಸುತ್ತ ಅಲ್ಲಿಗೆ ಬಂದನು.

ಕೊಬ್ಬಿದ ಗೂಳಿಯ ರೂಪದಿಂದ ಬಂದ ಆ ದೈತ್ಯನ ಇರುವುಗೋಡುಗಳು ಬಹಳ ಚೂಪಾಗಿದ್ದವು. ಕೆಂಡದ ಉಂಡೆಗಳಂತೆ ಕಂಗಳು ಕಿಡಿಕಾರುತ್ತಿದ್ದವು. ಅವನು ಬರುವ ವೇಗದಲ್ಲಿ ಅದರ ಗೊರಸುಗಳ ಬಲವಾದ ಹೊಡೆತದಿಂದ ಬಿರುಸು ನೆಲವೆಲ್ಲವು ಸೀಳಿ ಪುಡಿಯಾಗುತ್ತಿತ್ತು. ನಾಲಿಗೆಯಿಂದ ತುಟಿಗಳನ್ನು ನೆಕ್ಕಿಕೊಳ್ಳುತ್ತ ಗರ್ವಾಂಧನಾದ ಆ ಅರಿಷ್ಟಾಸುರನು ತನ್ನ ಬಾಲವನ್ನು ಮೇಲಕ್ಕೆ ಎತ್ತಿ ಭಯಂಕರವಾಗಿ ಗುಟುರು ಹಾಕುತ್ತಿದ್ದನು. ಅವನ ಹೆಗಲಮೇಲಿನ ಇಣಿಯು ಬಹಳ ಎತ್ತರವಾಗಿ ಪ್ರಮಾಣಮೀರಿ ಬೆಳೆದಿದ್ದಿತು. ಮಲ ಮೂತ್ರದಿಂದ ಅದರ ಅಂಗಾಂಗಗಳು ತೊಯ್ದು ಹೋಗಿದ್ದವು. ಅದರ ಭೀಕರ ಧ್ವನಿಯನ್ನು ಕೇಳಿದಾಗ ಆವು ಗೋವುಗಳಿಗೆಲ್ಲ ಗರ್ಭ ನಿರ್ಭೇದವಾಯಿತು. ತುರುಕರುಗಳೆಲ್ಲವು ಅದರ ಗುಟುರು ಧ್ವನಿಗೆ ಹೆದರಿ ಕಂಗಾಲಾಗಿ ಅಂಬಾರವದಿಂದ ಗೋಳಿಟ್ಟವು. ದಾರಿಯಲ್ಲಿ ಸಿಕ್ಕಿದ ಅಕ್ಕಪಕ್ಕದ ಮರಗಳನ್ನೆಲ್ಲ ಆ ದುಷ್ಟನು ತಿವಿದು ಕೆಡವಿ ಬಿಟ್ಟಿದ್ದನು. ನೆಲದ ಬೊಡ್ಡೆಗೆ ತಿಕ್ಕಿದ ಗುರುತು ಹಣೆಯ ಮೇಲೆ ಕಾಣುತ್ತಿತ್ತು.

ಅವನನ್ನು ನೋಡಿ ಹೆದರಿ ಹೌಹಾರಿ ಹೋದ ಗೋಪಾಲಕರೆಲ್ಲರು 'ಕೃಷ್ಣಾ' 'ಕೃಷ್ಣಾ' ಎಂದು ಕೂಗಿಕೊಂಡರು. ಅವರ ಧ್ವನಿಯನ್ನು ಕೇಳಿ ದೀನದಯಾಳು ಆದ ಕೃಷ್ಣನು ಸಿಂಹನಾದ ಮಾಡಿದ. ನಿಂತಲ್ಲಿಯೆ ಪೆಟ್ ಪೆಟ್ ಎಂದು ಚಪ್ಪಾಳೆ ತಟ್ಟಿದ. ಆ ಶಬ್ದವನ್ನು ಕೇಳಿ ಅರಿಷ್ಟಾಸುರನು ಕೃಷ್ಣನ ಕಡೆಗೆ ತಿರುಗಿದ. ಕೃಷ್ಣನ ಹೊಟ್ಟೆಯನ್ನು ಇರಿಯಬೇಕೆಂದು ತನ್ನ ಚೂಪುಗೋಡುಗಳನ್ನು ಮುಂದೆ ಮಾಡಿಕೊಂಡು ಗುರಿಯಿಟ್ಟು ನುಗ್ಗಿ ಬಂದ.

ಆಗ ಕೃಷ್ಣನು ತಾನು ನಿಂತ ಸ್ಥಳದಿಂದ ಒಂದು ಅಂಗುಲ ಕೂಡ ಆಚೆ ಕದಲದೆ ಸ್ಥಿರವಾಗಿ ನಿಂತು ಆ ದುಷ್ಟರಾಕ್ಷಸನ ಇರಿವ ಗೋಡುಗಳನ್ನು ಮೊಸಳೆಯಂತೆ ಬಿಗಿಯಾಗಿ ಹಿಡಿದ. ಎರಡು ಕೊಂಬುಗಳನ್ನು ಬಿಗಿಯಾಗಿ ಹಿಡಿದು ತನ್ನ ಮಂಡೆಯಿಂದ ಆ ಪಾಪಿಯ ಹೊಟ್ಟೆಗೆ

ಒದ್ದುಬಿಟ್ಟ. ಅವನ ಎರಡು ಕೊಂಬುಗಳನ್ನು ತಿರುಚಿ ಅವನ ಕತ್ತನ್ನು ಬಟ್ಟೆಹಿಂಡುವಂತೆ ಹಿಂಡಿದ. ಅವನ ಒಂದು ಕೊಂಬನ್ನು ಕೈಯಿಂದ ಕಿತ್ತಿ ಅದರಿಂದಲೇ ಅವನ ಮೈತುಂಬ ಇರಿದ. ಬೆನ್ನು, ಬಾಯಿ, ನೆತ್ತಿ ಎಲ್ಲಿಬೇಕಲ್ಲಿ ಅವನ ಕೊಂಬಿನಿಂದಲೆ ಏಟುಗಳನ್ನು ಹಾಕಿದ. ಆ ಕೃಷ್ಣನ ಬಲವತ್ತರವಾದ ಪ್ರಹಾರಗಳನ್ನು ತಾಳದೆ ಆ ರಕ್ಕಸ ಬಾಯಿಂದ ನೆತ್ತರು ಕಾರಿ ಸತ್ತು ಬಿದ್ದನು. ಅದನ್ನು ನೋಡಿ ಗೋಪಾಲಕರೆಲ್ಲರು ಆನಂದದಿಂದ ಸುತ್ತಿಸಿದರು.

## ವಸುದೇವನ ಹಂಚಿಕೆ, ಕಂಸನ ವಂಚನೆ

**ವ್ಯಾಸ:-** ಒಂದು ದಿನ ದೇವ ಮುನಿಗಳಾದ ನಾರದರು ಮಥುರಾ ಪಟ್ಟಣಕ್ಕೆ ಆಗಮಿಸಿದರು. ಅದರ ದೊರೆ ಕಂಸನನ್ನು ಕಂಡರು. ಅವನಿಗೆ ಗೋಕುಲ ವೃಂದಾ ವನದಲ್ಲಿ ನಡೆದ ಘಟನೆಗಳನ್ನೆಲ್ಲ ವಿವರವಾಗಿ ತಿಳಿಸಿದರು. "ಕಂಸಮಹಾರಾಜ, ಯಮುನೆಯ ದಡದಲ್ಲಿರುವ ಆ ಗೊಲ್ಲರ ಹಳ್ಳಿಗಳಲ್ಲಿ ನಡೆದ ದುರಂತ ಘಟನೆಗಳನ್ನು ಕೇಳಿದೆಯಷ್ಟೆ. ಎತ್ತಿನ ರೂಪದಿಂದ ಹೋದ ಅರಿಷ್ಟಾಸುರನು ನಷ್ಟವಾಗಿ ಹೋದ. ರೌಡು ಕತ್ತೆಯ ರೂಪದಿಂದ ಜನರನ್ನೆಲ್ಲ ಕೊಲ್ಲುತ್ತಿದ್ದ ಧೇನುಕಾಸುರ ಅಲ್ಲಿಯೆ ಪ್ರಾಣಬಿಟ್ಟ. ಪ್ರಲಂಬಾಸುರ ಸತ್ತದ್ದು ಅಲ್ಲಿಯೆ. ಕಾಲಿಯ ಎಂಬ ಹೆಬ್ಬಾವಿನ ಮರ್ದನ ಆಗಿ ಹೋಯಿತು. ಗಗನ ಚುಂಬಿಯಾಗಿ ಬೆಳೆದ ಎರಡು ಹೆಮ್ಮರಗಳು ಮುರಿದು ಮುಟಿಗೆಯಾದವು. ಘೋರ ರೂಪಿಣಿಯಾದ ಪೂತನಿಯ ಪ್ರಾಣಾಹರಣ ಆದದ್ದು ಅಲ್ಲಿಯೇ. ಬಂಡಿಯ ರೂಪದಲ್ಲಿದ್ದ ಶಕಟಾಸುರ ತುಂಡು ತುಂಡಾಗಿ ಅದೇ ಸ್ಥಳದಲ್ಲಿ ಮುರಿದು ಮಣ್ಣುಗೂಡಿದ.

ಈ ಎಲ್ಲ ಘೋರ ಕೃತ್ಯವನ್ನು ಮಾಡಿದವ ಯಾರು ಬಲ್ಲೆಯಾ? ವಸುದೇವನ ಮಕ್ಕಳಾದ ಬಲರಾಮ ಕೃಷ್ಣರೆ ಈ ಅದ್ಭುತ ಸಾಹಸ ಕೃತ್ಯಗಳನ್ನು ಮಾಡಿದವರು. ಕಿಶೋರ ಆಕೃತಿಯ ಆ ಕೃಷ್ಣ ಅತಿದೊಡ್ಡದಾದ ಆ ಗೋವರ್ಧನ ಗುಡ್ಡವನ್ನು ಎತ್ತಿನಿಂತ. ದೇವತೆಗಳಿಂದಲೂ, ದೈತ್ಯರಿಂದಲೂ ದುಸ್ಸಾಧ್ಯವಾದ ಅದ್ಭುತ ಕಾರ್ಯಗಳನ್ನು ಮಾಡಿದ ಆ ಕೃಷ್ಣ ನಿನ್ನ ತಂಗಿ ದೇವಕಿಯ ಹೊಟ್ಟೆಯಿಂದ ಹುಟ್ಟಿದ ಸಾಕ್ಷಾತ್ ಪುತ್ರನೇ ಸರಿ.

ದೇವಕಿಯು ಈ ಕೃಷ್ಣನನ್ನು ಹೆತ್ತಕೂಡಲೆ ವಸುದೇವನು ಆ ಮಗುವನ್ನು ಎತ್ತಿಕೊಂಡು ಗೋಕುಲಕ್ಕೆ ಒಯ್ದ. ಅದೇ ಕಾಲದಲ್ಲಿ ಗೋಕುಲದಲ್ಲಿ ಯಶೋದೆಯು ಹೆಣ್ಣು ಮಗುವನ್ನು ಹೆತ್ತಿದ್ದಳು. ನಿನ್ನ ಭಾವನಾದ ವಸುದೇವನು ತನ್ನ ಮಗನಾದ ಬಾಲ ಕೃಷ್ಣನನ್ನು ಗುಟ್ಟಾಗಿ ಹೊತ್ತುಕೊಂಡು ಒಯ್ದು ನಂದಗೋಪನ ಮಡದಿಯಾದ ಯಶೋದೆಯ ಮಡಿಲಲ್ಲಿ ಮಲಗಿಸಿದನು. ಅವಳು ಅದೇ ಹಡೆದ ಹೆಣ್ಣು ಮಗುವನ್ನು ತಾನು ಎತ್ತಿ ತಂದು ತನ್ನ ಎಂಟನೆಯ ಮಗುವೆಂದು ನಿನ್ನ ಕೈಯಲ್ಲಿ ಇರಿಸಿದ. ಮಕ್ಕಳ ಈ ಅದಲು ಬದಲಾವಣೆ ನಿನಗೆ ತಿಳಿಯದಂತೆ ವಸುದೇವನಿಂದ ಆ ಅರ್ಧರಾತ್ರಿಯಲ್ಲಿ ಗುಟ್ಟಾಗಿಯೆ ನಡೆಯಿತು. ದೇವಕಿಯ ಎಂಟನೆಯ ಮಗು ಈಗ ಆಕಾಶವಾಣಿ ನುಡಿದಂತೆ ನಿನ್ನ ಮೃತ್ಯುವಾಗಿ ಗೋಕುಲದಲ್ಲಿ ಬೆಳೆಯುತ್ತಿದೆ."

ನಾರದರ ಬಾಯಿಂದ ಕಂಸನಿಗೆ ಇತ್ಥಂಭೂತ ಸಂಗತಿಯೆಲ್ಲವು ತಿಳಿದುಹೋಯಿತು. ತನಗೆ ಮೋಸ ಮಾಡಿ ತನ್ನ ಎಂಟನೆಯ ಮಗುವನ್ನು ಪಾರುಮಾಡಿದ ವಸುದೇವನ ಮೇಲೆ

ಕೋಪ ಉಕ್ಕಿತು. ಅವನು ತುಂಬಿದ ಯಾದವರ ಸಭೆಯಲ್ಲಿ ಹೀನಾಮಾನವಾಗಿ ನಿಂದಿಸಿದ. ಆ ವಸುದೇವನನ್ನು ಎಲ್ಲ ಯಾದವರನ್ನು ವಂಚಕರು ಎಂದು ಹಳಿದು ಹೀಗಳೆದ. ಮತ್ತು ತನ್ನ ಮನಸ್ಸಿನಲ್ಲಿ ದೀರ್ಘವಾಗಿ ವಿಚಾರಿಸಿ ಒಂದು ನಿರ್ಣಯಕ್ಕೆ ಬಂದ. ಈ ಬಲರಾಮ ಕೃಷ್ಣರು ಎಳೆಮೈಯಲ್ಲಿಯೇ ಇಂಥ ದೇವದಾನವರಿಂದ ಅಸಾಧ್ಯವಾದ ಕಾರ್ಯಗಳನ್ನು ಮಾಡುತ್ತಿದ್ದಾರೆ. ದುರ್ದಮರಾದ ಕೊಬ್ಬಿದ ಮಹಾಬಲಿಷ್ಠರಾದ ಬಳಿಕ ಬಲ್ಕಿರಾಗಿ ದುಸ್ಸಹ ವೀರ್ಯರಾಗುತ್ತಾರೆ.

## ಕಂಸನ ಆದೇಶ, ಅಕ್ರೂರನಿಗೆ ಸಂತೋಷ

ಅವರನ್ನು ಯಾರಿಗೂ ಮಣಿಸಲಿಕ್ಕೆ ಆಗುವುದಿಲ್ಲ. ನಾನು ಏನಾದರೂ ಮಾಡಿ ಅವರನ್ನು ಈಗಲೇ ನಾಶಪಡಿಸಬೇಕು. ಹೇಗಾದರೂ ಮಾಡಿ ಬೇಗನೆ ಅವರಿಬ್ಬರನ್ನು ಮುಗಿಸಿ ಬಿಡಬೇಕು'' ಎಂದು ಮನಸ್ಸಿನಲ್ಲಿ ನಿಶ್ಚಯಮಾಡಿ ತನ್ನ ಹಿತೈಷಿಯಾದ ಅಕ್ರೂರರನ್ನು ಕರೆದನು. ಏಕಾಂತದಲ್ಲಿ ಅವನಿಗೆ ಹೇಳಿದನು. ''ಅಕ್ರೂರ, ನೀನು ನನ್ನ ಒಂದು ಕೆಲಸವನ್ನು ಮಾಡು. ನೀನು ರಥಾರೂಢನಾಗಿ ಮೊದಲು ನಂದಗೋಕುಲಕ್ಕೆ ಹೋಗು. ಅಲ್ಲಿ ಬಲರಾಮ, ಕೃಷ್ಣ ಎಂಬ ಇಬ್ಬರು ಮಕ್ಕಳು ಬೆಳೆಯುತ್ತಿದ್ದಾರೆ. ಅವರಿಬ್ಬರು ಮಹಾವಿಷ್ಣುವಿನ ಅಂಶದಿಂದಲೆ ಹುಟ್ಟಿದವರು. ಅವರು ನನ್ನನ್ನು ನಾಶಮಾಡಲಿಕ್ಕಾಗಿಯೆ ಜನಿಸಿಬಂದಿದ್ದಾರೆ ಎಂದು ಹೇಳುತ್ತಾರೆ. ನಾಳಿನ ಚತುರ್ದಶಿಯ ದಿನದಂದು ಈ ಮಥುರಾನಗರಿಯಲ್ಲಿ ನಾನು ಒಂದು ಬಿಲ್ಲಿನ ಹಬ್ಬವನ್ನು ಏರ್ಪಡಿಸಿದ್ದೇನೆ. ಅದರಲ್ಲಿ ವಿಶ್ವವಿಖ್ಯಾತರಾದ ಚಾಣೂರ, ಮುಷ್ಟಿಕ, ಮೊದಲಾದ ಜಗಜಟ್ಟಿಗಳು ಮಲ್ಲ ಯುದ್ಧವನ್ನು ಮಾಡುತ್ತಾರೆ. ಅದನ್ನು ಆ ರಾಮಕೃಷ್ಣರು ನೋಡಲಿ. ಅದಕ್ಕಾಗಿ ನೀನು ಹೋಗಿ ಆ ರಾಮಕೃಷ್ಣರನ್ನು ಕರೆದುಕೊಂಡು ಬಾ ಮತ್ತು ಗೋಕುಲದಲ್ಲಿರುವ ನಂದಗೋಪ ಮೊದಲಾದ ಗೊಲ್ಲರಿಗೆಲ್ಲ ಕಪ್ಪುಕಾಣಿಕೆಗಳನ್ನು, ಎಮ್ಮೆಯ ಮೊಸರು, ಆಕಳ ಹಾಲು, ತಾಜಾ ಬೆಣ್ಣೆ, ತುಪ್ಪ ಮೊದಲಾದ ರೂಪದಿಂದ ತಂದು ಒಪ್ಪಿಸಲು ಹೇಳು.''

ಕಂಸನ ಆಜ್ಞೆಯನ್ನು ಕೇಳಿದ ಕೂಡಲೆ ಅಕ್ರೂರನಿಗೆ ಪರಮಾನಂದವಾಯಿತು. ಅವನು ಮಹಾಭಗವದ್ಭಕ್ತ ಈ ನೆವದಿಂದ ನಾನು ನಾಳೆಯ ಕೃಷ್ಣನನ್ನು ಕಾಣುವೆನಲ್ಲ' ಎಂದು ಹಿಗ್ಗಿದ. ಕಂಸನ ಆಣತಿಯನ್ನು ಸಂತೋಷದಿಂದ ತಲೆಯಲ್ಲಿ ಹೊತ್ತು ರಥವನ್ನು ಏರಿ ಮಥುರಾ ನಗರದಿಂದ ಹೊರಟ.

ಇತ್ತ ವೃಂದಾವನದಲ್ಲಿ ಅಕ್ರೂರನು ಬರುವ ಮೊದಲು ಒಂದು ದುರಂತ ಘಟನೆ ನಡೆದು ಹೋಯಿತು. ಕಂಸ ಈ ಮೊದಲೇ ಕೇಶಿ ಎಂಬ ದೈತ್ಯನನ್ನು ಕೃಷ್ಣನನ್ನು ಕೊಲ್ಲಲು ವೃಂದಾವನಕ್ಕೆ ಅಟ್ಟಿದ್ದ. ಮಹಾದುಷ್ಟನಾದ ಆ ಕೇಶಿಯು ಕುದುರೆಯ ವೇಷವನ್ನು ತಳೆದು ಗೋಪಾಲಕರ ಬಳಿಗೆ ಬಂದ. ಆ ಕುದುರೆಯ ಗೊರಸಿನ ಏಟಿನಿಂದ ನೆಲ ಬಿರಿಯುತ್ತಿತ್ತು. ಅದರ ಕತ್ತಿನಲ್ಲಿ ಹಾರಾಡುವ ಕೂದಲು ಮಿಂಚಿನ ಎಳೆಯಂತೆ ಹೊಳೆಯುತ್ತಿದ್ದವು. ಅವನ ಕೂದಲದಿಂದ ಎಷ್ಟೋ ಮುಗಿಲಲ್ಲಿಯ ಮೋಡಗಳು ಚದುರಿ ಹೋದೆವು. ಅವನ ಕೆನೆಯುವ ಶಬ್ದದಿಂದ ಗೋಪಿಕಾ ಸ್ತ್ರೀಯರು ಗೋಪಾಲಕರು ಗಾಬರಿಯಾದರು. 'ಗೋವಿಂದನೆ ರಕ್ಷಿಸು ಗೋಪಾಲನೆ, ಕಾಪಾಡು' ಎಂದು ಎಲ್ಲ ಗೋಪ ಗೋಪಿಯರು ಶ್ರೀಕೃಷ್ಣನಿಗೆ ಶರಣು ಹೋದರು. ಅವರ ದೀನ ಧ್ವನಿಯನ್ನು ಕೇಳಿ ಮೇಘಗಂಭೀರ

ಧ್ವನಿಯಿಂದ ಅವರನ್ನು ಸಂತೈಸುತ್ತ ಕೃಷ್ಣನು ನುಡಿದ. "ಗೋಪಾಲಕರೆ, ಏಕೆ ಹೆದರುವಿರಿ? ನೀವೆಲ್ಲರು ಚಿಂತೆಯನ್ನು ಬಿಡಿರಿ ಈ ಕೇಶಿಯನ್ನು ನಾನು ನೋಡಿಕೊಳ್ಳುತ್ತೇನೆ. ಕ್ರೂರ ಧ್ವನಿಯಿಂದ ಕೆನೆಯುತ್ತ ಖುರಪುಟಗಳಿಂದ ನೆಲವನ್ನು ಕೆದರುತ್ತಲಿರುವ ಈ ತುಂಟಕುದುರೆ ನಮಗೆ ಏನು ತಾನೆ ಮಾಡಬಲ್ಲದು? ಅದರಲ್ಲಿ ಈಗ ದೈತ್ಯದ ಆವೇಶವಾಗಿದೆ. ಆ ಕೇಶಿಯ ಆವೇಶ ಬಲದಿಂದ ಈ ಕೆಟ್ಟಕುದುರೆಯು ಇಷ್ಟುಕೊಬ್ಬಿ ಹೇಷಾರವವನ್ನು ಮಾಡುತ್ತಲಿದೆ. ನೀವು ತುಸು ತಡೆಯಿರಿ. ಈ ಕ್ರೂರ ಕುದುರೆಯ ಕತೆಯನ್ನೆ ಮುಗಿಸಿ ಬಿಡುತ್ತೇನೆ" ಎಂದು ಹೇಳಿ ಕೃಷ್ಣನು ಆ ಕೇಶಿಯನ್ನು ಆಹ್ವಾನಿಸಿದ. "ಎಲೈ, ದುಷ್ಟನಾದ ದೈತ್ಯಾಧಮನೆ, ನೀನು ಇತ್ತಬಾ, ಅತ್ತಿತ್ತ ಏನು ನೋಡುವೆ? ನಾನೇ ನಿನ್ನ ಕಾಲಾಂತಕನಾದ ಕೃಷ್ಣ. ಹಿಂದೆ ಮಹಾದೇವನು ಪೂಷನ ಹಲ್ಲುಗಳನ್ನು ಉದುರಿಸಿದಂತೆ ನಾನು ನಿನ್ನ ಎಲ್ಲ ಹಲ್ಲುಗಳನ್ನು ಉದುರಿಸಿ ಬಿಡುತ್ತೇನೆ" ಎಂದು ಹೇಳಿ ಕೃಷ್ಣನು ಕೇಶಿಯ ಎದುರಿಗೆ ಹೋದ. ಆ ದೈತ್ಯನು ಕೂಡ ಬಾಯಿ ತೆರೆದುಕೊಂಡು ಕೃಷ್ಣನೆಡೆಗೆ ನುಗ್ಗಿ ಬಂದ.

ಕೃಷ್ಣನು ಅತ್ಯಂತ ಚತುರಮತಿ. ಆ ಕುದುರೆಯ ರೂಪದ ರಕ್ಕಸನಿಗೆ ಯಾವುದೇ ಕುಟಿಲಕಾರ್ಯವನ್ನು ಮಾಡಲು ಅವಕಾಶವಾಗದಂತೆ ಬಾಯಿತೆರೆದು ಬಂದ ಅವನ ಮೋರೆಯಲ್ಲಿ ತನ್ನ ನಿಡಿದೋಳನ್ನು ತುರುಕಿ ಬಿಟ್ಟ. ಕೃಷ್ಣನ ಉದ್ದವಾದ ತೋಳು ಆ ದೈತ್ಯನ ಬಾಯಿತುಂಬ ತುಂಬಿಬಿಟ್ಟಿತು. ಮತ್ತು ಅವನ ಬಾಯಲ್ಲಿ ತೋಳನ್ನು ತುರುಕುವ ರಭಸಕ್ಕೆ ಅವನ ಎಲ್ಲ ಹಲ್ಲುಗಳು ಪಟಪಟ ಉದುರಿ ಬಿದ್ದವು. ಉಪೇಕ್ಷಮಾಡಿ ಬಿಟ್ಟವರ ದೇಹದಲ್ಲಿ ರೋಗವು ಬಲಿಯುವುದಿಲ್ಲವೇ? ಅದರಂತೆ ಕೇಶಿಯ ಮುಖದಲ್ಲಿ ಇಟ್ಟ ಕೃಷ್ಣನ ಆ ನಿಡಿದೋಳು ಮತ್ತಿಷ್ಟು ಬೆಳೆಯತೊಡಗಿತು. ಆಗ ಆ ಕುದುರೆಯ ತುಟಿಗಳು ಹರಿದುಹೋದವು. ಕಟಬಾಯಿ ಸಿಡಿದು ಹೋಯಿತು. ಕಟಬಾಯಿಂದ ನೊರೆ ನೊರೆಯಾಗಿ ನೆತ್ತರವು ಸುರಿಯತೊಡಗಿತು ದವಡೆಗಳು ಕೂಡಿರುವ ಸಂಧಿಬಂಧವು ಬಿಟ್ಟು ಹೋಗಿ ಸ್ವಾಟಗಳೆಲ್ಲವು ಹರಿದು ಬಾಯಿ ಗರಿಯಂತೆ ತೆರೆಯಿತು.

ಆಗ ನಿಶ್ಚೇಷ್ಟಾದ ಆ ದೈತ್ಯಕುದುರೆಯು ಕೈಕಾಲು ಸೆಟಸಿ ನೆಲದ ಮೇಲೆ ಬಿದ್ದಿತು. ಮಲ ಮೂತ್ರಗಳು ಸಿಡಿದವು. ಮೈಯಲ್ಲ ಬೆವರಿನಿಂದ ಒದ್ದೆಯಾಯಿತು. ನೆತ್ತರುಸುರಿದು ಮಡುಗಟ್ಟಿತು. ಅದಕ್ಕೆ ಆಚೀಚೆ ಅಲುಗಾಡಲು ಆಗಲಿಲ್ಲ. ಬಾಯ್ದೆರೆದುಕೊಂಡು ಭಯಂಕಾಕಾರನಾಗಿ ಬಂದ ಆ ಕೇಶಿದೈತ್ಯನು ಸಿಡಿಲುಬಡೆದ ಹೆಮ್ಮರದಂತೆ ಕೃಷ್ಣನ ಬಾಹುವಿನಿಂದ ಎರಡು ತುಂಡಾಗಿ ನೆಲದ ಮೇಲೆ ಬಿದ್ದು ಸತ್ತು ಹೋದ. ಕೆಳಗೆ ಬಿದ್ದ ಕೇಶಿಯ ತುಂಡು ತುಂಡಾದ ದೇಹದ ಭಾಗಗಳು ಮುರಿದ ಕಾಲು, ಬಿರಿದ ಬೆನ್ನು ಹರಿದ ಬಾಲ ಕಿತ್ತಿದ ಕಿವಿ ಒಡೆದ ಕಣ್ಣುಗುಡ್ಡೆ, ಸಿಡಿದ ಮೂಗು ಎಲ್ಲವು ವಿಕಾರ ಆಕಾರವಾಗಿ ನೋಡುವವರಿಗೆ ಜಿಗುಪ್ಸೆ ತಂದವು. ಕೇಶಿಯನ್ನು ಕೊಂದಕೂಡಲೆ ಗೋಪಾಲಕ ರೆಲ್ಲರು ಕೃಷ್ಣನನ್ನು ಸಂತೋಷದಿಂದ ಮುತ್ತಿಕೊಂಡರು. ಗೋಪಾಂಗನೆಯರು ಗೋಪಾಲ ಬಾಲಕರು ಆ ಭಗವಂತನನ್ನು ಪ್ರೀತಿಯಿಂದ ಗದ್ಗದ ಕಂಠದಿಂದ ಸ್ತೋತ್ರ ಮಾಡಿದರು.

ಕೃಷ್ಣನು ಆ ಕರಾಳ ದೈತ್ಯನನ್ನು ಲೀಲಾಜಾಲವಾಗಿ ಕೊಲ್ಲುತ್ತಿರುವ ಮಹಾಕಾರ್ಯ ವನ್ನು ನಾರದ ಮಹರ್ಷಿಯು ಮುಗಿಲಿನಲ್ಲಿಯೆ ಎರಡು ಮೋಡಗಳನಡುವೆ ನಿಂತು ನೋಡುತ್ತಲಿದ್ದ. ಕೇಶಿಯು ಹತಪತಿತತನಾಗಿ ನೆಲದಮೇಲೆ ಬಿದ್ದಕೂಡಲೆ ನಾರದ

ಮುನಿಯು ಮುಗಿಲಿನ ಬಗಲಲ್ಲಿ ನಿಂತೆ ಪ್ರಶಂಸಿಸಿ ನುಡಿದ. ''ಸಾಧು ಕೃಷ್ಣ, ಸಾಧು, ನೀನು ನಾಶರಹಿತನಾದ ಜಗದೊಡೆಯನೆ ಸರಿ. ದೇವತೆಗಳೆಲ್ಲರಿಗೂ ಕ್ಲೇಶವನ್ನು ಕೊಡುತ್ತಲಿದ್ದ ಆ ಕೇಶಿಯನ್ನು ಲೀಲಾ ಮಾತ್ರದಿಂದಲೆ ಕೊಂದು ಕೆಡಹಿದೆಯಲ್ಲವೆ? ಭಾಪು ಭಾಪು ನೀನು ಈ ಕೃಷ್ಣ ಅವತಾರದಲ್ಲಿ ಮಾಡಿದ ಅನೇಕ ಲೀಲೆಗಳನ್ನು ನೋಡಿ ಕೌತುಕ ಪಟ್ಟಿದ್ದೇನೆ. ಅವೆಲ್ಲದಕ್ಕೂ ಕಳಸವಿಟ್ಟಂತಾಗಿದೆ ಈ ಕೇಶಿ ವಿನಾಶ ಇದರಿಂದ ನನಗೆ ಅತ್ಯಂತ ಸಂತೋಷವಾಗಿದೆ. ಈ ಕುದುರೆಯು ಮುಗಿಲ ಕಡೆ ಮುಖ ಮಾಡಿ ತನ್ನ ಕೇಸರ ಕೇಶಗಳನ್ನು ಕೊಡುವುತ್ತ ಒಂದು ಸಲ ಕೆನೆದರೆ ಸಾಕು ಸುರಪುರದ ನಾಗರಿಕರೆಲ್ಲರು ಭಯಭ್ರಾಂತರಾಗಿ ತತ್ತರಿಸಿ ಹೋಗುತ್ತಿದ್ದರು. ಅಂಥ ಪರಮದುಷ್ಟನಾದ ಅತ್ಯಂತ ಬಲಿಷ್ಠನಾದ ಈ ದುರುಳ ಕೇಶಿಯನ್ನು ನೀನು ಕ್ಷಣಾರ್ಧದಲ್ಲಿ ಕೊಂದಯಲ್ಲವೆ? ಅದಕ್ಕಾಗಿ ನಿನಗೆ ಕೇಶವ ಎಂದು ಜಗತ್ತಿನಲ್ಲಿಯ ಜನರು ಕೀರ್ತನ ಮಾಡುವರು.

ಹೇ ಕೇಶಿನಿಷದನ, ನಿನಗೆ ಮಂಗಳವಾಗಲಿ ಎಂದು ಹೇಳಿ, ನಾರದರು ಮುಗಿಲ ಮಂಟಪದಲ್ಲಿ ಅದೃಶ್ಯರಾದರು. ಕೃಷ್ಣನು ಇಂಥ ಕಾರ್ಯವನ್ನು ಮಾಡಿದರೂ ಹೆಮ್ಮೆ ಹಮ್ಮುಗಳಿಂದ ಬೀಗದೆ ಹರ್ಷಭರಿತರಾದ ಗೋಪಾಲಕರೊಡನೆ ಗೋಕುಲವನ್ನು ಪ್ರವೇಶಿಸಿದ. ಆ ಗೋಪಾಂಗನೆಯರು ತಮ್ಮ ಹಸಿದಕಣ್ಣುಗಳಿಂದ ಕೃಷ್ಣನನ್ನು ಹೀರುತ್ತಿದ್ದರು. ಅವನ ಸ್ತೋತ್ರ ಮಾಡುತ್ತಿದ್ದರು. ಹರ್ಷ ಪುಳಕಿತರೂ ಆಗುತ್ತಿದ್ದರು.

## ಅಕ್ರೂರನ ರಾಮಕೃಷ್ಣಸ್ತೋತ್ರ

**ವ್ಯಾಸ:-** ಇತ್ತ ಕೃಷ್ಣನನ್ನು ಕಾಣಬೇಕೆಂಬ ಹೆಬ್ಬಯಕೆಯಿಂದ ಮಥುರೆಯಿಂದ ಹೊರಟ ಅಕ್ರೂರನು ತನ್ನ ರಥವನ್ನು ವೇಗದಿಂದ ಓಡಿಸಿದ. ಆ ಕೃಷ್ಣನನ್ನು ಯಾವಾಗ ಕಾಣುವೆನೊ? ಎಂದು ಅವನಿಗೆ ಅತ್ಯಂತ ಕುತೂಹಲ. ದಾರಿಯಲ್ಲಿ ಹೋಗುವಾಗ ಅವನು ತನ್ನ ಮನಸ್ಸಿನಲ್ಲಿ ಈ ರೀತಿಯಾಗಿ ಧ್ಯಾನಿಸುತ್ತಿದ್ದನು. ''ಇಂದು ನಾನು ಸಾಕ್ಷಾತ್ ಮೂಲರೂಪಿ ಆ ವಾಸುದೇವನ ಅಂಶದಿಂದ ಅವತರಿಸಿ ಬಂದ ಈ ವಾಸುದೇವನನ್ನು ನೋಡುತ್ತೇನೆ. ಚಂದ್ರಮಂಡಲದಂತಿರುವ ಅವನ ಸುಂದರ ಮುಖಮುಂಡಲವನ್ನು ಕಾಣುತ್ತೇನೆ. ಈ ಜಗತ್ತಿನಲ್ಲಿ ನನಗಿಂತ ಧನ್ಯರು ಯಾರು ಇರುವರು? ಇಂದು ನಾನು ಹುಟ್ಟಿದ್ದು ಸಾರ್ಥಕ. ನನ್ನ ಬದುಕು ಸಫಲವಾಯಿತು. ಇಂದಿನ ದಿನವೇ ಸುದಿನ. ನಿನ್ನಿನ ರಾತ್ರಿಯೆ ಸುಖರಾತ್ರಿ. ನಾಲ್ಕು ವೇದಗಳು, ಆರು ವೇದಾಂಗಗಳು, ಎಲ್ಲ ಉಪನಿಷತ್ತುಗಳು ಯಾವನನ್ನು ಹೊಗಳಿ ಹಾಡುವವೋ ಅಂಥ ಪರಬ್ರಹ್ಮನ ಮುಖ ಕಮಲವನ್ನು ನಾನು ಇಂದು ನೋಡುತ್ತೇನೆ. ಇಂದ್ರನು ಸುರಲೋಕದ ಅಧಿಪತಿಯಾಗಿ ಮೆರೆದದ್ದು, ಈ ಭಗವಂತನನ್ನು ನೂರು ಯಜ್ಞಮಾಡಿ ಆರಾಧಿಸಿದ್ದರ ಪುಣ್ಯ ಫಲವೆ. ಇವನ ನಿಜವಾದ ರೂಪವನ್ನು (ಸಾಕಲ್ಯನ) ಬ್ರಹ್ಮ, ಇಂದ್ರ, ರುದ್ರ, ಅಶ್ವಿನೀ ದೇವತೆಗಳು ಯಾರೂ ಅರಿಯಲಾರರು. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ಮೊದಲಾದ ಹತ್ತು ಅವತಾರ ಎತ್ತಿ ಜಗದೋದ್ಧಾರ ಮಾಡಿದ ಮಹಾಪ್ರಭು ಈ ಕೃಷ್ಣನೇ. ಅಂಥ ಭಗವಂತನನ್ನು ನಾನು ಇಂದು ಈ ನನ್ನ ಚರ್ಮಚಕ್ಷುಸ್ಸಿನಿಂದ ಕಾಣುವೆನು. ಕರುಣಾಶಾಲಿಯಾದ ಆ ಪರಮೇಶ್ವರನು ನನ್ನ ಶಿರಸ್ಸಿನಲ್ಲಿ ತನ್ನ ವರದ ಹಸ್ತವನು ಇಟ್ಟು ಹರಸುವನು. ಇಂಥ ಯಜ್ಞಪುರುಷ, ವಾಸುದೇವ, ಮಹಾವಿಷ್ಣು, ಎಂದು ವೇದ ವೇದಾಂತಗಳಲ್ಲಿ

ಖ್ಯಾತಾಭಿಗೀತನಾದ ಪುರುಷೋತ್ತಮನ ಪಾದಗಳನ್ನು ಸ್ಮರಿಸುವೆನು. ಆ ಪರಮ ಪುರುಷನನ್ನೇ ನಾನು ಇಂದು ಮೊರೆಹೋಗುವೆನು'' ಎಂದು ಮುಂತಾಗಿ ಅಕ್ರೂರನು ಭಕ್ತಿ ಭಾವ ಭರಿತನಾಗಿ ತುಂಬಿದ ಹೃದಯದಿಂದ ಶ್ರೀಕೃಷ್ಣನನ್ನು ನೆನೆಯುತ್ತ ಸೂರ್ಯನು ಮುಳುಗುವ ಮೊದಲೆ ಸಂಧ್ಯಾಕಾಲದಲ್ಲಿ ಗೋಕುಲಕ್ಕೆ ಬಂದು ತಲುಪಿದ.

ಅಕ್ರೂರನು ಬಂದಾಗ ಶ್ರೀಕೃಷ್ಣನು ಕರುಗಳ ನಡುವೆ ನಿಂತು ಹಸುಗಳ ಹಾಲು ಕರೆಯುತ್ತಿದ್ದ. ಕನ್ನೈದಿಲೆಯಂತೆ ಕಪ್ಪು ಕಪ್ಪಾದ ಶಾಮಲ ಕಾಂತಿಯಿಂದ ಒಪ್ಪುತ್ತಿದ್ದ. ಅವನ ಕಣ್ಣುಗಳು ಅರಳಿದ ತಾವರೆಯಂತೆ ಹೊಂಬೆಳಗನ್ನು ಸೂಸುತ್ತಿದ್ದವು. ಎದೆಯ ಮೇಲೆ ಶ್ರೀವತ್ಸ ಎಂಬ ಮಚ್ಚೆಯು ಶೋಭಿಸುತ್ತಿತ್ತು. ನಿಡಿದಾದ ತೋಳು, ಹರವಾದ ಎದೆ, ಎತ್ತರವಾದ ಎಸಳು ಮೂಗು ಅರವಿಂದದಂತೆ ಸುಂದರವಾದ ಮುಖ. ಅದರಲ್ಲಿ ಕಮಲದ ಎಸಳು ಬಿಡಿಸಿದಂತೆ ಎಸೆಯುವ ನಸುನಗು. ಪೀತಾಂಬರವನ್ನು ಉಟ್ಟ ಆ ಪುಟ್ಟ ಕೃಷ್ಣನು ಕಾಡು ಕುಸುಮಗಳಿಂದ ತನ್ನನ್ನು ಶೃಂಗರಿಸಿ ಬಿಡಿದಾವರೆಯನ್ನು ಅಲಂಕಾರವಾಗಿ ಧರಿಸಿ ನಿಂತುಕೊಂಡಿದ್ದ.

ಅವನ ಪಕ್ಕದಲ್ಲಿಯೇ ತನ್ನ ಶುಭ್ರ ವರ್ಣದಿಂದ ಅರಸಂಚೆಗಳನ್ನೂ, ಚಾರುಚಂದ್ರನನ್ನೂ, ಬಿಡಿ ಮಲ್ಲಿಗೆಯ ಹೂಗಳನ್ನು ಹೋಲುತ್ತಲಿದ್ದ ಬಲರಾಮನು ನೀಲವಸ್ತ್ರ ಉಟ್ಟುಕೊಂಡು ನಿಂತುಕೊಂಡಿದ್ದ. ಕೃಷ್ಣನಂತೆ ಈ ಬಲಭದ್ರನೂ ಪರಮ ಸುಂದರ. ಅವನ ಬಾಹುಗಳು ಪರಿಪುಷ್ಟವಾಗಿಯೂ ನೀಳವಾಗಿಯೂ ಇದ್ದವು. ಮುಖವಂತೂ ತುಂಬು ತಾವರೆ ಸೊಬಗಿನಿಂದ ಸೊಗಸುತ್ತಿತ್ತು. ಅವನನ್ನು ನೋಡಿದರೆ ಮೇಘಮಾಲೆಗಳು ಮುಚ್ಚಿದ ಹಿಮಗಿರಿಯನ್ನು ಕಂಡಂತೆ ಆಗುತ್ತಿತ್ತು.

ಅವರಿಬ್ಬರನ್ನು ನೋಡುತ್ತಲೆ ಅಕ್ರೂರನ ಮುಖವು ಕಂಗಳು ಸಂತೋಷದಿಂದ ಅರಳಿದವು. ಮೈಯಲ್ಲಿಯ ರೋಮಗಳು ನಿಮಿರಿ ನಿಂತವು. ಆಗ ಅಕ್ರೂರನ ಮನಸ್ಸಿನಲ್ಲಿ ಭಕ್ತಿಭಾವ ಉದ್ರಿಕ್ತವಾಗಿ ಅವನು ಪರಬ್ರಹ್ಮ ಸ್ವರೂಪಿಗಳಾಗಿ ಆ ಇಬ್ಬರು ಸೋದರರನ್ನು ಅತಿ ಆದರದಿಂದ ನಲಿಸಿ, ಸ್ತುತಿಸಿ ಹೊಗಳಿ ಹಾಡಿದನು.

## ರಾಮಕೃಷ್ಣರ ಪ್ರಯಾಣ, ಗೋಪಿಯರ ಗೋಳಾಟ

**ವ್ಯಾಸ:-** ಹೀಗೆಲ್ಲ ವಿಚಾರಮಾಡಿ ಅಕ್ರೂರನು ಮನಸ್ಸಿನಲ್ಲಿ ಭಾವಿಸುತ್ತ ಶ್ರೀಕೃಷ್ಣನ ಬಳಿಗೆ ಬಂದ. ''ಶ್ರೀಕೃಷ್ಣ, ನಾನು ಅಕ್ರೂರ, ಮಥುರಾ ಪಟ್ಟಣದಿಂದ ಬರುತ್ತಿದ್ದೇನೆ'' ಎಂದು ಹೇಳಿ ಅವನ ಪಾದ ಮುಟ್ಟಿ ನಮಸ್ಕಾರ ಮಾಡಿದ. ಆಗ ಕೃಷ್ಣನು ಧ್ವಜ, ವಜ್ರ, ಮೊದಲಾದ ಶುಭಲಕ್ಷಣಗಳಿಂದ ಒಡಗೂಡಿದ ತನ್ನ ಕೈಯಿಂದ ತಡವಿ ಮೇಲಕ್ಕೆ ಸೆಳೆದು ಕೊಂಡು ಅಕ್ರೂರನನ್ನು ಭರದಿಂದ ಬಿಗಿದಪ್ಪಿದ. ಅವನನ್ನು ಕರೆದುಕೊಂಡು ಪ್ರೀತಿಯಿಂದ ಕೈಹಿಡಿದು ರಾಮಕೃಷ್ಣರು ತಮ್ಮ ಮನೆಗೆ ನಡೆದರು. ಮನೆಯಲ್ಲಿ ಅವರಿಬ್ಬರು ಅಕ್ರೂರನಿಗೆ ಪ್ರೀತಿಭೋಜನ ಮಾಡಿಸಿ ಸಂತೋಷಪಡಿಸಿದರು. ಅವರ ಅತಿಥ್ಯದಿಂದ ತೃಪ್ತನೂ ತುಷ್ಟನೂ ಆದ ಅಕ್ರೂರ ನೀತಿಯ ಮೇರೆಯನ್ನು ಮೀರದೆ ನ್ಯಾಯ ಮಾರ್ಗವನ್ನು ಅತಿಕ್ರಮಿಸದೆ ಈ ರೀತಿ ಹೇಳಿದ. ''ಕೃಷ್ಣ, ಕಂಸ ಸ್ವಭಾವತಃ ದುಷ್ಟ. ಅವನು ನಿನ್ನ ತಂದೆ ವಸುದೇವನನ್ನು ತಾಯಿ ದೇವಕಿಯನ್ನು ಅತಿಯಾಗಿ ನಿಂದಿಸಿದ ಅಲ್ಲದೆ ತನ್ನ ತಂದೆಯಾದ

ಉಗ್ರ ಸೇನನ ವಿಷಯದಲ್ಲಿಯೂ ಇದೇರೀತಿ ಇದೆ ಅವನ ದುರ್ವರ್ತನೆ. ತನ್ನ ತಂದೆಯನ್ನು ಅತ್ಯಂತ ಕಚ್ಛಿತ ಭಾವನೆಯಿಂದಲೂ ತಾತ್ಸಾರತೆಯಿಂದಲೂ ಕಾಣುತ್ತಾನೆ. ಹೀಗೆ ಎಲ್ಲರನ್ನು ಒಂದಿಲ್ಲ ಒಂದು ರೀತಿಯಿಂದ ಹಿಂಸಿಸುತ್ತಲೇ ಇರುತ್ತಾನೆ. ಈಗ ನಿನ್ನನ್ನು ಕೂಡ ಹಿಂಸಿಸುವ ದುರುದ್ದೇಶದಿಂದ ನಿಮ್ಮನ್ನು ಕರೆಯಲು ನನ್ನನು ಕಳಿಸಿಕೊಟ್ಟಿದ್ದಾನೆ. ಬಿಲ್ಲಿನ ಹಬ್ಬ ನೆಪ ಮಾತ್ರ. ನಿಮ್ಮನ್ನು ಕೊಲ್ಲುವುದೇ ಅವನ ಪ್ರಧಾನ ಉದ್ದೇಶ."

ಹೀಗೆ ಅಕ್ರೂರನು ರಾಮಕೃಷ್ಣರಿಗೆ ಕಂಸನ ದುರುದ್ದೇಶವನ್ನೆಲ್ಲ ವಿವರಿಸಿ ಹೇಳಿದ ಬಳಿಕ ಕೃಷ್ಣನು ನಸುನಗುತ್ತ ನುಡಿದ.

"ಅಕ್ರೂರ, ಇದೆಲ್ಲವು ನನಗೆ ತಿಳಿದೇ ಇದೆ. ಈ ವಿಷಯದಲ್ಲಿ ಏನು ಮಾಡಬೇಕೋ ಅದನ್ನು ಮಾಡುತ್ತೇನೆ. ಕಂಸನ ಕಥೆ ಮುಗಿಯಿತೆಂದೇ ತಿಳಿ. ನಾಳೆಯ ದಿನ ನಾನು ಬಲರಾಮನು ನಿನ್ನಜೊತೆಗೆ ಮಥುರೆಗೆ ಬರುತ್ತೇವೆ. ಗೋಕುಲದ ಹಿರಿಯರು ಕಪ್ಪಕಾಣಿಕೆಯನ್ನು ತೆಗೆದುಕೊಂಡು ಅಲ್ಲಿಗೆ ಬರಲಿ. ಇಂದು ನೀನು ನಿಶ್ಚಿಂತೆಯಿಂದ ಮಲಗಿ ನಿದ್ರೆಮಾಡು. ಇನ್ನು ಮೂರು ದಿನಗಳಲ್ಲಿ ನಾನು ಕಂಸನನ್ನು ಕೊಂದು ಹಾಕುತ್ತೇನೆ. ಅವನ ಅನುಯಾಯಿಗಳಲ್ಲಿ ಯಾರನ್ನೂ ಉಳಿಸುವುದಿಲ್ಲ."

ಮಾರನೆಯ ದಿನ ಬೆಳಗ್ಗೆ ರಾಮಕೃಷ್ಣರು ಅಕ್ರೂರನೊಡನೆ ಮಥುರಾ ಪಟ್ಟಣಕ್ಕೆ ಹೊರಟರು. ಅದನ್ನು ನೋಡುತ್ತಲೇ ಗೋಪಿಕಾ ಸ್ತ್ರೀಯರಿಗೆ ದುಃಖ ಉಕ್ಕೇರಿತು. ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಹರಿಯತೊಡಗಿತು. ಕೃಷ್ಣನು ತಮ್ಮನ್ನು ಬಿಟ್ಟು ಹೋಗುತ್ತಾನೆ ಎಂದು ಅವರು ಬಿಕ್ಕಿಬಿಕ್ಕಿ ಅತ್ತರು. ಕೈಗಳಲ್ಲಿ ಇದ್ದ ಬಳೆಗಳು ಸಡಿಲವಾಗಿ ಜಾರಿ ಬಿದ್ದವು. ಅದರ ಮುಖದಿಂದ ನಿಟ್ಟುಸಿರು ಹೊರಸೂಸುತ್ತಿತ್ತು. ಅವರು ತಮ್ಮ ತಮ್ಮಲ್ಲಿಯೇ ಮಾತನಾಡತೊಡಗಿದರು. "ಈ ಕೃಷ್ಣನು ನಮ್ಮನ್ನು ಬಿಟ್ಟು ಮಥುರೆಯಂತಹ ಪಟ್ಟಣಕ್ಕೆ ಹೋದ ಬಳಿಕ ಹೇಗೆ ತಾನೆ ಹಿಂದಿರುಗುವನು? ಆ ನಗರದ ಸೊಬಗುಗಾತಿಯರ ತಂಪಿಂಪಾದ ನುಡಿಗಳನ್ನು ಮಧುರವಾದ ಧ್ವನಿಯನ್ನು ಕಿವಿಯಿಂದ ಕೇಳುವನು. ಆ ಪಟ್ಟಣದ ಬೆಡಗಿಯರ ಮಧುರ ಮಾತುಗಳು ಕೃಷ್ಣನನ್ನು ಮರುಳು ಮಾಡದೆ ಇರುವವೆ? ಅವರ ಮಧುರಾಲಾಪಕ್ಕೆ ಮನಸೋತ ಕೃಷ್ಣನು ನಮ್ಮಂತಹ ಹಳ್ಳಿಗಾಡ ಹೆಣ್ಣುಮಕ್ಕಳ ಕಡೆಗೆ ಏಕೆ ಒಲಿಯುವನು? ಈ ಗೋಕುಲಕ್ಕೆ, ಮತ್ತು ಈ ಗೋಪಾಲಕುಲಕ್ಕೆ ಸಾರಭೂತ ಶ್ರೀಕೃಷ್ಣ ನಮಗಂತೂ ಅವನೇ ಸರ್ವಸ್ವ ದಯಾಶೂನ್ಯವಾದ ದುರ್ವಿಧಿ ಕೃಷ್ಣನನ್ನು ನಮ್ಮಿಂದ ಬೇರ್ಪಡಿಸಿ ಈ ಬಡ ಗೊಲ್ಲತಿಯರ ಮೇಲೆ ಸಿಡಿಲನ್ನೆ ಬೀಸಿದೆ. ಈ ದುಷ್ಟ ಅಕ್ರೂರನು ತನ್ನ ಬೆಡಗಿನ ನುಡಿಗಳಿಂದ ಈ ರಾಮಕೃಷ್ಣರನ್ನು ಮರುಳು ಮಾಡಿದ್ದಾನೆ.

ಇದೋ ನೋಡಿರಿ. ಈ ಕೇಶಿಸೂದನನು ರಥಾರೋಹಣ ಮಾಡಿ ಮಥುರೆಗೆ ಹೊರಟಿದ್ದಾನೆ. ಶ್ರೀಕೃಷ್ಣನನ್ನು ಇನ್ನು ಮುಂದೆ ನಿತ್ಯ ನಿರಂತರವೂ ನೋಡಿ ನಲಿಯುವ ಆ ಮಥುರೆಯ ಮಾನಿನಿನಿಯರೇ ಪುಣ್ಯವಂತರು. ಈ ನಂದಗೋಪ ಮೊದಲಾದ ಗೋಪಾಲಕರಿಗೆ ಸ್ವಲ್ಪವಾದರೂ ಬುದ್ಧಿ ಬೇಡವೆ? ಆ ಕೃಷ್ಣನನ್ನು, ರಾಮನನ್ನು ಮಥುರಾಪಟ್ಟಣಕ್ಕೆ ಬಿಟ್ಟುಬರಲು ಹೊರಟಿರುವರು. ಈ ಅಕ್ರೂರನಂತೂ ನಿಜವಾಗಿ ಮಹಾಕ್ರೂರ. ಎಷ್ಟು ಬೇಗಬೇಗ ಕುದುರೆಗಳನ್ನು ಓಡಿಸುತ್ತಿದ್ದಾನೆ! ನೋಡಿರಿ ಅತ್ತು ಗೋಗರೆದು ಗೋಳಾಡುತ್ತಿರುವ ಈ ಹೆಂಗೆಗಳೆಯರನ್ನು ಕಂಡು ಅವನಿಗೆ ತುಸುವಾದರೂ

ಮರುಕವುಂಟಾಗುತ್ತಿದೆಯೇ? ನಿಜವಾಗಿಯೂ ಅವನು ಕ್ರೂರ. ಅಯ್ಯೋ! ಆ ಕೃಷ್ಣ ಕುಳಿತ ತೇರಿನ ಗಾಲಿಗಳಿಂದ ಎದ್ದ ಧೂಳನ್ನಾದರೂ ನೋಡಿರಿ! ಆ ಧೂಳಿಯಲ್ಲಿ ಕೃಷ್ಣನು ಕಾಣದಂತಾಗಿದ್ದಾನೆ. ಅಯ್ಯೋ ಕೃಷ್ಣನನ್ನು ಮರೆಮಾಡಿದ ಆ ಧೂಳು ಕೂಡ ಕಣ್ಣಿಗೆ ಕಾಣುವುದಿಲ್ಲವೆ?''

ಈ ರೀತಿಯಾಗಿ ಆ ಗೋಪಿಕಾ ಸ್ತ್ರೀಯರು ಪ್ರೇಮ ವಿಹ್ವಲರಾಗಿ ಬಲರಾಮ ಕೃಷ್ಣರು ಹೋದ ದಾರಿಯನ್ನು ದಿಟ್ಟಿಸುತ್ತ ನಿಂತುಕೊಂಡಾಗಲೆ ರಾಮಕೃಷ್ಣರ ರಥವು ಗೋಕುಲದ ಎಲ್ಲೆಯನ್ನು ದಾಟಿತು. ಬಲರಾಮ, ಕೃಷ್ಣ, ಅಕ್ರೂರರು ವೇಗವಾಗಿ ಓಡುತ್ತಿರುವ ಆ ರಥದಲ್ಲಿ ಕುಳಿತು ಮಧ್ಯಾಹ್ನದ ವೇಳೆಗೆ ಯಮುನಾನದಿ ತೀರ ತಲುಪಿದರು. ಆಗ ಅಕ್ರೂರನು ರಾಮಕೃಷ್ಣರಿಗೆ ''ನೀವು ಇಲ್ಲಿಯೇ ರಥದಲ್ಲಿ ಕುಳಿತುಕೊಳ್ಳಿರಿ. ನಾನು ಇಳಿದು ಯಮುನಾ ನದಿಯಲ್ಲಿ ಸ್ನಾನ ಮಾಡುವೆನು, ನನ್ನ ನಿತ್ಯಾಹ್ನಿಕವವನ್ನು ಪೂರೈಸುವೆನು'' ಎಂದು ಹೇಳಿ ರಥದಿಂದ ಇಳಿದ. ಹರಿಯುವ ತೊರೆಗೆ ಇಳಿದ ಅಲ್ಲಿ ಮುಳುಗಿದ ಸ್ನಾನ ಮಾಡಿದ. ಅನಂತರ ಆಚಮನ ಮಾಡಿ ಸಂಧ್ಯಾವಂದನೆ ಮುಗಿಸಿ ಕಣ್ಣು ಮುಚ್ಚಿ ಪರಮಾತ್ಮನ ಧ್ಯಾನ ಮಾಡತೊಡಗಿದ.

## ಅಕ್ರೂರ ಕಂಡ ಕೌತುಕ

ಆಗ ಅವನ ಧ್ಯಾನ ದೃಷ್ಟಿಗೆ ನೀರಿನಲ್ಲಿ, ಯಮುನೆಯ ಆಳದಲ್ಲಿ ಒಂದು ವಿಚಿತ್ರವಾದ ದೃಶ್ಯವು ಕಂಡು ಬಂದಿತು. ಬಲರಾಮನು ಆದಿಶೇಷನಾಗಿ, ಯಮುನೆಯ ಮಡುವಿನಲ್ಲಿ ಮುದುಡೆಯಾಗಿ ಮಲಗಿದ್ದ ಆ ಹಾವಿನ ಹಾಸಿಗೆಯ ಮೇಲೆ ಶ್ರೀಕೃಷ್ಣನು ಪೀತಾಂಬರ ಧಾರಿಯಾಗಿ ಮಿಂಚಿನ ಮೂರ್ತಿಯಂತೆ ಪವಡಿಸಿದ್ದ. ಶಂಖ, ಚಕ್ರ, ಗದಾ, ಪದ್ಮ, ಶ್ರೀವತ್ಸರತ್ನ ಕಿರೀಟಗಳು ಅವನ ದೇಹದಲ್ಲಿ ಯಥಾ ಸ್ಥಾನದಲ್ಲಿ ಶೋಭಿಸುತ್ತಿದ್ದವು.

ಆಗ ಅಕ್ರೂರನಿಗೆ ಬಲರಾಮ ಕೃಷ್ಣ ಇಬ್ಬರ ಗುರುತಾಗಿ ''ಇವರಿಬ್ಬರು ಇಷ್ಟು ಬೇಗ ರಥ ಬಿಟ್ಟು ಕೆಳಗಿಳಿದು ಯುಮನೆಯ ಒಡಲಲ್ಲಿ, ಮಡುವಿನ ಮಡಿಲಲ್ಲಿ ಹೇಗೆ ಬಂದು ಮಲಗಿದ್ದಾರೆ'' ಎಂದು ಚಿಂತಿಸತೊಡಗಿದ. ಆಗ ಅವನು ಏನೋ ಹೇಳಬೇಕೆಂದು ಬಾಯಿ ತೆರೆದಿದ್ದ. ಆಗ ಭಗವಂತ ಅವನು ಮಾತು ಆಡದಂತೆ ತಡೆದ. ಅನಂತರ ಅಕ್ರೂರನು ನೀರಿನಿಂದ ಮೇಲೆ ಎದ್ದು ರಥದ ಬಳಿಗೆ ಬಂದ. ಬಲರಾಮನೂ ಕೃಷ್ಣನೂ ಇದ್ದಲ್ಲಿಯೆ ಇದ್ದು ಮನುಷ್ಯ ದೇಹಧಾರಿಗಳಾಗಿ ರಥದ ಮಧ್ಯದಲ್ಲಿಯೇ ಕುಳಿತಿದ್ದರು. ಆಗ ಅಕ್ರೂರನು ಅವರು ರಥದಲ್ಲಿ ಗಟ್ಟಿಯಾಗಿ ಕುಳಿತಿದ್ದನ್ನು ಮುಟ್ಟಿನೋಡಿ ಖಚಿತಪಡಿಸಿಕೊಂಡು ಮತ್ತೆ ಯಮುನಾ ನದಿಗೆ ಹೋದ. ಅಲ್ಲಿ ನೀರಿನಲ್ಲಿ ಮುಳುಗಿದ ದಿವ್ಯ ದೃಷ್ಟಿಯನ್ನು ತೆರೆದ. ಅಲ್ಲಿ ಯಥಾಪ್ರಕಾರ ಶೇಷರೂಪಿಯಾದ ಬಲರಾಮನು ಹಾವಿನ ಹಾಸಿಗೆಯ ಮೇಲೆ ವಾಸುದೇವನ ರೂಪಿಯಾದ ಶ್ರೀಕೃಷ್ಣನ ಸುಖಶಯನ. ಅವರೀರ್ವರನ್ನು ದೇವತೆಗಳು ಸಿದ್ಧರೂ, ಗಂಧರ್ವರೂ ದೇವತೆಗಳೂ ಸ್ತೋತ್ರ ಮಾಡುತ್ತ ಇದ್ದಾರೆ. ಆ ದೃಶ್ಯವನ್ನು ಪರಿಕಿಸಿ ನೋಡಿದ, ಮತ್ತೊಮ್ಮೆ ನಿರುಕಿಸಿ ನೋಡಿದ. ರಥದಲ್ಲಿ ಕುಳಿತ ರಾಮಕೃಷ್ಣರೇ ಇಲ್ಲಿ ಬಂದು ಯಮುನಾನದಿಯ ನಡುನೀರಿನಲ್ಲಿ ಶೋಭಿಸುತ್ತಿದ್ದಾರೆ. ಅದನ್ನು ನೋಡಿದ ದಾನ ಪತಿಯಾದ ಅಕ್ರೂರನು ನಿಜಾಂಶವನ್ನು ತಿಳಿದ. ಅವರಿಬ್ಬರೂ ಸಾಕ್ಷಾತ್ ಭಗವದವತಾರಿಗಳೆಂಬ ರಹಸ್ಯ ತತ್ವನ್ನು ಚೆನ್ನಾಗಿ ಅರಿತ. ಅಲ್ಲಿಯೇ ಕೈಮುಗಿದ, ಬಾಯ್ತೆರೆದ. ಭಕ್ತಿಯಿಂದ ಸ್ತೋತ್ರ ಮಾಡಿದ.

**ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ।**
**ಪ್ರದ್ಯುಮ್ನಾಯ ನಮಸ್ತುಭ್ಯಂ ಅನಿರುದ್ಧಾಯ ತೇ ನಮಃ॥**

ವಾಸುದೇವ, ಸಂಕರುಷಣ, ಅನಿರುದ್ಧ ರೂಪಿಯಾದ ಶ್ರೀಕೃಷ್ಣನೆ ನಿನಗೆ ನನ್ನ ನಮೋ ನಮಃ ಹೀಗೆ ನುಡಿದು ಅಕ್ರೂರನು ನೀರಿನ ನಡುವೆ ನಿಂತು ಶ್ರೀಕೃಷ್ಣನನ್ನು ಸ್ತೋತ್ರ ಮಾಡಿ ಧೂಪ, ದೀಪ, ಪುಷ್ಪ ನೈವೇದ್ಯ ಆರತಿ, ಅಕ್ಷತೆಗಳಿಂದ ಆ ಭಗವಂತನ ಮಾನಸ ಪೂಜೆ ನೆರವೇರಿಸಿದ. ಅನಂತರ ಬಹಿರ್ಮುಖನಾಗಿ ತಾನು ಕೃತಕೃತ್ಯನಾದೆನೆಂದು ಬಗೆದು ಯಮುನಾ ನದಿಯ ನೀರಿನಿಂದ ಎದ್ದು ರಾಮಕೃಷ್ಣರು ಕುಳಿತ ರಥದ ಬಳಿಗೆ ಬಂದ. ಬಲರಾಮ ಕೃಷ್ಣರು ಯಥಾಪ್ರಕಾರ ರಥದಲ್ಲಿ ಕುಳಿತಿದ್ದರು. ಅದನ್ನು ಕಂಡು ಅಕ್ರೂರನಿಗೆ ಅತ್ಯಾಶ್ಚರ್ಯ ವಾಯಿತು. ಅವನ ಕೌತುಕ ವಿಸ್ಫುರಿತವಾದ ನೇತ್ರಗಳನ್ನು ಕಂಡು ಶ್ರೀಕೃಷ್ಣನು ಅವನಿಗೆ ನುಡಿದ. "ಅಕ್ರೂರ, ನಿನ್ನ ಕಣ್ಣುಗಳು ಆಶ್ಚರ್ಯದಿಂದ ತುಂಬು ತಾವರೆಯಂತೆ ಅರಳಿ ನಿಂತಿವೆ. ಇದನ್ನು ನೋಡಿದರೆ ನೀನು ಯಮುನಾ ನದಿಯ ನಡು ನೀರಿನಲ್ಲಿ ಯಾವುದೋ ಒಂದು ಅದ್ಭುತವಾದ ದೃಶ್ಯವನ್ನು ಕಂಡಂತಿದೆ. ಅದು ಯಾವ ದೃಶ್ಯ? ನೀನು ನೋಡಿದ್ದು."

ಆಗ ಅಕ್ರೂರನು ಶ್ರೀಕೃಷ್ಣನನ್ನು ಕುರಿತು ನುಡಿದ. "ಜಗದೊಡೆಯನಾದ ಶ್ರೀಕೃಷ್ಣ, ಯಮುನಾ ನದಿಯ ನೀರಿನ ಆಳದಲ್ಲಿ ಮಡುವಿನ ಅಂತರಾಳದಲ್ಲಿ ನಾನು ಒಂದು ಆಶ್ಚರ್ಯಕರವಾದ ದೃಶ್ಯವನ್ನು ಕಂಡೆ. ಅದರಲ್ಲಿ ನಾನು ಕಂಡ ಅತ್ಯಾಶ್ಚರ್ಯವಾಗಿ ನೋಡಿದ ವಸ್ತುವೆ ಈಗ ನನ್ನ ಕಣ್ಣೆದುರು ರಥದಲ್ಲಿ ಕುಳಿತಿದೆ. ನಮ್ಮ ಕಣ್ಣಿಗೆ ಕಾಣುವ ಈ ಜಗತ್ತೆಲ್ಲವು ಯಾವ ಮಹಾಮಹಿಮನ ಅದ್ಭುತಗೈಮೆ ಆಗಿರುವುದೋ ಅಂತಹ ಆಶ್ಚರ್ಯಕರವಾದ ಲೀಲಾವಿಭೂತಿ ಎಂದರೆ ನೀನೇ. ಇಂಥ ನಿನ್ನ ಸಂಪರ್ಕ ಸಹವಾಸವನ್ನು ಸಾಧಿಸಿದ ನಾನು ಕೂಡ ಧನ್ಯನೆ. ಕೃಷ್ಣ, ನಿನ್ನ ನಿಜರೂಪವು ನನಗೆ ಎಲ್ಲ ತಿಳಿದಿದೆ. ಬೇರೆ ಮಾತು ಏಕೆ! ಈಗ ನಡೆ ಮಧುರೆಗೆ ಹೋಗೋಣ. ಆ ಕಂಸನ ಭಯದಿಂದ ನನಗೆ ಹೆದರಿಕೆ ಆಗುತ್ತಿದೆ. ಮತ್ತೊಬ್ಬರು ನೀಡುವ ಕೂಳಿಗೆ ಕಾದುಕೊಂಡು ಬಾಳುವ ಮಾನವರ ಜನ್ಮಕ್ಕೆ ಧಿಕ್ಕಾರ ಧಿಕ್ಕಾರ". ಹೀಗೆ ನುಡಿದು ಅಕ್ರೂರನು ರಥಾರೋಹಣ ಮಾಡಿ ಕುದುರೆಗಳನ್ನು ಗಾಳಿ ವೇಗದಿಂದ ಓಡಿಸಿದ. ಸಂಜೆಯ ಹೊತ್ತಿಗೆ ಮಥುರಾಪಟ್ಟಣಕ್ಕೆ ಬಂದು ಸೇರಿದರು. ಆಗ ಅಕ್ರೂರನು ರಾಮಕೃಷ್ಣರಿಗೆ "ಶೂರವೀರರೇ, ನೀವಿಬ್ಬರು ಇಲ್ಲಿಂದ ಮುಂದೆ ಕಾಲಿನಿಂದಲೆ ನಡೆಯುತ್ತ ಹೋಗಿರಿ. ಈ ಪಟ್ಟಣದಲ್ಲಿ ನಾನೊಬ್ಬನೆ ರಥದಲ್ಲಿ ಹೋಗುತ್ತೇನೆ. ಆದರೆ ನೀವು ವಸುದೇವನ ಮನೆಗೆ ಮಾತ್ರ ಹೋಗಬೇಡಿರಿ. ಏಕೆಂದರೆ ನೀವು ಅವನ ಮನೆಯನ್ನು ಹೊಕ್ಕದ್ದು ತಿಳಿದರೆ ಆ ರಕ್ಕಸ ಕಂಸನು ಬಡಪಾಯಿಯಾದ ಆ ವಸುದೇವನಿಗೆ ಇಲ್ಲದ ಉಪದ್ರವ ಕೊಡುವನು."

ಹೀಗೆ ಹೇಳಿ ಅಕ್ರೂರನು ಮಥುರಾ ನಗರವನ್ನು ಪ್ರವೇಶಿಸಿದನು. ರಾಮಕೃಷ್ಣರಿಬ್ಬರು ಮದ ತುಂಬಿದ ಸಲಗಗಳಂತೆ ಮಥುರೆಯ ರಾಜ ಬೀದಿಗಳಲ್ಲಿ ಅಲೆದರು. ಅವರನ್ನು ನೋಡಿದ ಅಬಲೆಯರು ಹರ್ಷಭರಿತರೂ ಕೌತುಕಾನ್ವಿತರೂ ಆದರು. ಆ ಪಟ್ಟಣದ ಪುರಂಧ್ರಿಯರೆಲ್ಲರೂ ಕಣ್ಣಿನ ಎಮೆ ಪಿಳುಕಿಸದೆ ನೆಟ್ಟದೃಷ್ಟಿಯಿಂದ ನೋಡುತ್ತಿದರು. ಆ ರಾಮ ಕೃಷ್ಣರನ್ನು. ದಾರಿಯಲ್ಲಿ "ಕಂಸನ ಮನೆಯ ಅಗಸ ರಾಜಭವನದ ಬಟ್ಟೆಗಳನ್ನು ಮೊಟ್ಟೆಗಳನ್ನು ಅರಮನೆಗೆ ಹೊತ್ತು ಕೊಂಡು ನಡೆದಿದ್ದ. ರಾಮಕೃಷ್ಣರು ಅವನಿಗೆ ತಮಗೆ

ಒಪ್ಪುವ ಸುಂದರವಾದ ಬಟ್ಟೆಗಳನ್ನು ಕೊಡುವಂತೆ ಕೇಳಿದರು.

ಆ ಅಗಸನು ಅರಮನೆಯ ಅಗಸ. ಮಹಾ ಮದಾಂಧ. ಕಂಸ ಮಹಾರಾಜನ ಕೃಪೆಯ ಕೊಡೆ ತನ್ನ ಮೇಲೆ ಇದೆ ಎಂಬ ಗರ್ವದಿಂದ ಕೊಬ್ಬಿಹೋಗಿದ್ದ. ರಾಮಕೃಷ್ಣರು ಬಟ್ಟೆ ಬೇಡಿದ ಕೂಡಲೇ ಅವನ ಸಿಟ್ಟು ನೆತ್ತಿಗೇರಿತು. ಅವನು ಬಾಯಿಗೆ ಬಂದಂತೆ ಅವರಿಬ್ಬರನ್ನು ಬಯ್ಯುಕೊಡಗಿದ. ಅವನ ನಿಂದಾಕ್ಷರವನ್ನು ಕೇಳಿ ಆ ನಂದ ಕುಮಾರನಿಗೂ ಕೋಪ ಕೆರಳಿತು. ಆಗ ಕೃಷ್ಣನ್ನು ಮುಷ್ಟಿಯನ್ನು ಬಿಗಿದ. ಆ ದುಷ್ಟನ ನಡು ನೆತ್ತಿಗೆ ಒಂದೇ ಒಂದು ಮುಷ್ಟಿ ಪ್ರಹಾರವನ್ನು ಮಾಡಿದ ತಕ್ಷಣದಲ್ಲಿ ಆ ಮಡಿವಾಳ ನೆಲದ ಮೇಲೆ ಮಡುಗಿ ಬಿದ್ದ. ಹೀಗೆ ಅಗಸನನ್ನು ಕ್ಷಣಾರ್ಧದಲ್ಲಿ ಸಂಹರಿಸಿ ರಾಮಕೃಷ್ಣರು ಮಥುರೆಯ ಬೀದಿಯಲ್ಲಿ ಆ ಬಟ್ಟೆಗಳ ಮೊಟ್ಟೆಯಿಂದ ಕೃಷ್ಣನು ಒಂದು ಮಡಿಮಾಡಿದ ಪೀತಾಂಬರ ವನ್ನು ತೆಗೆದು ಉಟ್ಟುಕೊಂಡ. ಬಲರಾಮನು ನೀಲಾಂಬರವನ್ನು ತೆಗೆದು ಧರಿಸಿದ. ಮತ್ತೆ ಅವರಿಬ್ಬರು ಮಥುರಾ ಪಟ್ಟಣದ ರಾಜ ಬೀದಿಯಲ್ಲಿ ಮುಂದುವರೆದರು. ದಾರಿಯಲ್ಲಿಯೆ ಹೂವಾಡಿಗನ ಮನೆಯನ್ನು ಪ್ರವೇಶಿಸಿದರು. ಮತ್ತು ಅವನಿಗೆ ತಮಗೆ ಸುಗಂಧಿ ಹೂವಿನ ಮಾಲೆಯನ್ನು ಕೊಡುವಂತೆ ಕೇಳಿಕೊಂಡರು. ಆಗ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ ಆ ಮಾಲಾಕಾರ. "ಪ್ರಭು, ನಾನು ಇಂದು ಧನ್ಯನಾದೆ, ನೀವು ನನ್ನ ಮೇಲೆ ಅನುಗ್ರಹ ಮಾಡಿ. ಈ ಬಡವನ ಮನೆಗೆ ದಯಮಾಡಿಸಿದಿರಿ. ಅದರಿಂದ ನಾನು ನಿಮ್ಮನ್ನು ಪೂಜೆ ಮಾಡುತ್ತೇನೆ. ಇಲ್ಲಿ ಹೂವಿನ ಬುಟ್ಟಗಳನ್ನು ಇಟ್ಟಿದ್ದೇನೆ. ಒಳ್ಳೆ ಪರಿಮಳ ಯುಕ್ತವಾದ ಸುಗಂಧಿ ಹೂಗಳನ್ನು ತಂದು ಇಟ್ಟಿದ್ದೇನೆ. ನಿಮಗೆ ಬೇಕಾದ ಹೂಗಳನ್ನು ತೆಗೆದುಕೊಳ್ಳಿರಿ. ಈ ಹೂಗಳು ಸುಗಂಧವಿದ್ದಷ್ಟೇ ಸುಂದರವೂ ಆಗಿರುತ್ತವೆ. ನಿಮಗೆ ಬೇಕಾದ ಹೂಗಳನ್ನು ಬೇಕಾದಷ್ಟು ತೆಗೆದುಕೊಳ್ಳಿರಿ. ಕೃಷ್ಣಾರ್ಪಣ" ಎಂದು ಹೇಳುತ್ತ ಆ ಮಾಲಾಕಾರನು ತಾನು ತಂದ ಎಲ್ಲ ಹೂಗಳನ್ನು ಭಗವಂತನಿಗೆ ಅರ್ಪಿಸಿದ. ಆ ರಾಮಕೃಷ್ಣರಿಗೆ ನಮಸ್ಕರಿಸಿದ. ಆಗ ಶ್ರೀಕೃಷ್ಣನಿಗೆ ಆ ಹೂವಾಡಿಗನ ಮೇಲೆ ಪ್ರೀತಿ ಉಂಟಾಯಿತು. ಆಗ ಶ್ರೀಕೃಷ್ಣನು ಅವನಿಗೆ ಅನುಗ್ರಹ ಪೂರ್ವಕವಾಗಿ ನುಡಿದ. "ಮಾಲಾಕಾರ, ನೀನು ಮಾಡಿದ ಈ ಪುಷ್ಪಾರ್ಚನೆಯಿಂದ ನಾನು ಪ್ರೀತನಾಗಿದ್ದೇನೆ. ನಿನಗೆ ನಾನು ಎರಡು ವರಗಳನ್ನು ಕೊಡುತ್ತೇನೆ.

ಶುಭಾಂಗನೆ, ನನ್ನನ್ನು ಆಶ್ರಯಿಸಿದ ಮಹಾಲಕ್ಷ್ಮಿಯು ನಿನ್ನನ್ನು ಎಂದೂ ತ್ಯಜಿಸುವುದಿಲ್ಲ. ಸೂರ್ಯಚಂದ್ರರು ಇರುವವರೆಗೂ ನೀನು, ನಿನ್ನಮಕ್ಕಳು ಮೊಮ್ಮಕ್ಕಳೊಂದಿಗೆ ಚಿರಂಜೀವಿಯಾಗಿ ಈ ಭೂಮಿಯಲ್ಲಿ ಬಾಳುವೆ. ನನ್ನ ದಯೆಯಿಂದ ಭೂಮಂಡಲದಲ್ಲಿ ಬಗೆ ಬಗೆಯ ಭೋಗೋಪಭೋಗಗಳನ್ನೆಲ್ಲ ಅನುಭವಿಸಿ ಕೊನೆಯಲ್ಲಿ ನನ್ನನ್ನು ಸ್ಮರಿಸುತ್ತ ನನ್ನ ವೈಕುಂಠ ಲೋಕಕ್ಕೆ ಬರುವೆ. ನಿನಗೆ ಮಾತ್ರವಲ್ಲ ನಿನ್ನ ವಂಶದಲ್ಲಿ ಹುಟ್ಟಿದವರೆಲ್ಲರೂ ನನ್ನ ಅನುಗ್ರಹದಿಂದ ದೀರ್ಘಾಯುಗಳಾಗುತ್ತಾರೆ. ಅವರಿಗೆ ಸದಾ ಕಾಲವು ನಿನ್ನಂತೆ ಧರ್ಮದಲ್ಲಿ ಆಸಕ್ತಿ, ನನ್ನಲ್ಲಿ ಅನುರಕ್ತಿ, ವಿಷಯ ಸುಖದಲ್ಲಿ ವಿರಕ್ತಿ, ಮೂರೂ ಚಿರಕಾಲ ಉಳಿಯುತ್ತವೆ. ನಿನ್ನ ವಂಶದವರಾರಿಗೂ ರೋಗಾದಿಗಳು ತಟ್ಟುವುದಿಲ್ಲ. ಪಾಪದೋಷಗಳು ಬರುವುದಿಲ್ಲ. ಸೂರ್ಯನು ಇರುವವರೆಗೂ ನಿನ್ನ ವಂಶದಲ್ಲಿ ಹುಟ್ಟಿದ ಯಾರಿಗೂ ಪಾಪಲೇಪ, ದುಃಖ ಸಂಪರ್ಕಗಳು ಆಗುವುದಿಲ್ಲ" ಹೀಗೆ ಹೇಳಿ ಶ್ರೀಕೃಷ್ಣ ಪರಮಾತ್ಮನು ಆ ಹೂವಾಡಿಗನನ್ನು ಅನುಗ್ರಹಿಸಿ, ಅವನ ಪೂಜೆಯನ್ನು ಸ್ವೀಕರಿಸಿ ಬಲರಾಮನೊಡನೆ ಅವನ ಮನೆಯಿಂದ ಹೊರಬಿದ್ದು ಮುಂದೆ ನಡೆದ.

## ಶ್ರೀಕೃಷ್ಣ ಬಾಲಚರಿತ್ರೆಯಲ್ಲಿ ಕಂಸವಧ ನಿರೂಪಣ

**ವ್ಯಾಸ:-** ಶ್ರೀಕೃಷ್ಣನು ಮಥುರಾ ಪಟ್ಟಣದ ರಾಜ ಬೀದಿಯಲ್ಲಿ ಮದಾಂಧನಾದ ಕಂಸನ ಅಗಸನನ್ನು ಹೊಡೆದು ಹಾಕಿ, ಹೂವಾಡಿಗನನ್ನು ಅನುಗ್ರಹಿಸಿ, ಅವನು ಭಕ್ತಿಯಿಂದ ಇತ್ತ ಹೂವಿನ ಮಾಲೆಯನ್ನು ಸ್ವೀಕರಿಸಿ, ಕೊರಳಲ್ಲಿ ಧರಿಸಿ ಮುಂದೆ ನಡೆದನು. ಆ ರಾಜ ಬೀದಿಯಲ್ಲಿ ಕೈಯಲ್ಲಿ ಶ್ರೀಗಂಧ ಬಟ್ಟಲನ್ನು ಹಿಡಿದು ಒಬ್ಬ ಕುಬ್ಜೆಯು ಬರುತ್ತಿದ್ದಳು. ಅವಳನ್ನು ತಡೆದು ಕೃಷ್ಣನು ಕೇಳಿದ. "ತಾವರೆಗಣ್ಣಿನ ತರುಣಿಯೆ, ಯಾರಿಗಾಗಿ ನೀನು ಈ ಅನುಲೇಪನ ಗಂಧವನ್ನು ತೆಗೆದುಕೊಂಡು ಹೋಗುತ್ತಿರುವೆ? ಎಂದು ಲೀಲಾ ಲಾತ್ಯರದಿಂದ ಕೇಳಿದ. ಅವನ ಮಾತಿನಲ್ಲಿ ಅನುರಾಗ ಹೊಮ್ಮತ್ತಿತ್ತು. ಆ ಕುಬ್ಜೆಯು ಅಷ್ಟೆ ಒಲುವಿನಿಂದ ಕೃಷ್ಣನೆಡೆಗೆ ಕುಡಿನೋಟವನ್ನು ಬೀರಿದಳು. ಜೋಡಿಯಾಗಿ ನಿಂತ ಕೃಷ್ಣ ಬಲರಾಮರಲ್ಲಿ ಆ ಕುಬ್ಜೆಯ ಕಡೆ ನೋಟ ಕೃಷ್ಣನಲ್ಲಿಯೇ ಇದ್ದಿತು. ಅವಳು ಮಧುರವಾಗಿಯೆ ನುಡಿದಳು. "ಕಾಂತನೇ, ನೀನು ನನ್ನನ್ನು ಹೇಗೆ ಅರಿತಿರುವುದಿಲ್ಲ! ಮೈಯೆಲ್ಲವು ಸೊಟ್ಟ ಸೊಟ್ಟಾಗಿ ಅನೇಕ ಕಡೆ ಮಣಿದಿದ್ದು ಕಾಣುವುದಿಲ್ಲವೆ ಈ ನನ್ನ ಮೈಯ ಮಣಿತ, ಬೆನ್ನಿನ ಬಾಗು, ಮಧ್ಯದಲ್ಲಿಯ ಗೂನು ಇವೆಲ್ಲವುಗಳಿಂದ ನಾನು ನೈಕ ವಕ್ರಾ ಎಂದು ಹೆಸರಾಗಿರುವೆನು ಕಂಸನು ಗಂಧವನ್ನು ತೇಯಲು ನನ್ನನ್ನು ನಿಯಮಿಸಿದ್ದಾನೆ. ಬೇರೆಯವರು ತೆಯ್ದ ತಂದ ಗಂಧವನ್ನು ಮಹಾರಾಜರು ಮುಟ್ಟುವುದಿಲ್ಲ. ಅದಕ್ಕಾಗಿ ರಾಜರು ನನಗೆ ಬೇಕಾದ ಸಂಪತ್ತನ್ನು ಕೊಟ್ಟಿರುವರು ಈ ಸೌಗಂಧ ಸೇವೆಗಾಗಿ, ಅವರಿಗಾಗಿ ಈ ಗಂಧ ವೈಯುತ್ತಿದ್ದೇನೆ. ಅದನ್ನು ಕೇಳಿ ಕೃಷ್ಣ ಕೇಳಿದ. ರುಚಿರಾಂಗಿಯೆ, ನೀನು ತೇಯ್ದು ತಂದ ಈ ಗಂಧವನ್ನು ರಾಜನಿಗೆ ಲೇಪಿಸಿಕೊಳ್ಳಲಿಕ್ಕಾಗಿ ತಂದಿದ್ದೇನೆ ಎಂದು ಹೇಳಿದೆಯಲ್ಲವೆ? ಅಂಥ ಉತ್ತಮವಾದ ಶ್ರೀಗಂಧವನ್ನು ನಾವು ಮೈಗೆ ತೊಡೆದು ಕೊಳ್ಳುತ್ತೇವೆ. ನಮಗೆ ಅದನ್ನು ನೀಡು ನಮ್ಮ ದೇಹಕ್ಕೆ ಅದು ಒಪ್ಪುತ್ತದೆ" ಎಂದ. ಕೃಷ್ಣ ಹೇಳಿದ ಮಾತುಗಳನ್ನು ಕೇಳಿದ ಕೂಡಲೆ ಆ ಕುಬ್ಜೆಯು "ದಯವಿಟ್ಟು ತೆಗೆದು ಕೊಳ್ಳಿರಿ ಈ ಗಂಧವನ್ನು" ಎಂದು ಹೇಳಿ ರಾಮ ಕೃಷ್ಣರಿಬ್ಬರ ಅಂಗಾಂಗ ಲೇಪನಕ್ಕೆ ಉಚಿತವಾದ ಆ ಶ್ರೀಗಂಧವನ್ನು ನೀಡಿದಳು. ಸುಂದರ ಪುರುಷರಾದ ಆ ಸೋದರರು ಆ ಸಿರಿಗಂಧದ ಅನುಲೇಪದಿಂದ ಮತ್ತಿಷ್ಟು ಚಂದಾಗಿ ಕಂಡರು. ಕಾಮನ ಬಿಲ್ಲಿನ ಸಂಪರ್ಕ ದಿಂದ ಶೋಭಿಸುವ ಎರಡು ನೀರು ತುಂಬಿದ ಮೋಡಗಳಂತೆ ಇದ್ದಿತು ಅದರ ಕಾಂತಿ.

ಅನಂತರ ಶ್ರೀಕೃಷ್ಣನು ತನ್ನ ಎರಡು ತುದಿ ಬೆರಳುಗಳಿಂದ ಆ ಬಹುವಕ್ರೆಯ ಗದ್ದ ಹಿಡಿದು, ತನ್ನ ಕಾಲುಗಳನ್ನು ಅವಳ ಪಾದದ ಮೇಲೆ ಇಟ್ಟು, ಮೆಟ್ಟಿ ಹಿಡಿದು, ಗದ್ದ ಎತ್ತಿ ಮೇಲಕ್ಕೆ ಎಳೆದು ಸರಿಯಾಗಿ ನಿಲ್ಲಿಸಿದ. ಆ ಕುಬ್ಜೆಯ ವಕ್ರತೆಯೆಲ್ಲವೂ ಹೋಗಿ ಬಾಳೆಯ ಬಳ್ಳಿಯಂತೆ ಅವಳು ನೆಟ್ಟಗೆ ಲಲಿತಾಂಗಿ ಆಗಿ ನಿಂತುಕೊಂಡಳು.

ಕೃಷ್ಣನ ಕರ ಸ್ಪರ್ಶದಿಂದ ಆ ಕುರೂಪಿ ಹೆಣ್ಣಿನಲ್ಲಿ ಸೌಂದರ್ಯ ಸಹಸ್ರಾರವೇ ಅರಳಿ ನಿಂತಂತೆ ಆಗಿತ್ತು. ಅವಳೊಬ್ಬ ಚೆಲುವು ನಲಿವು ತುಂಬಿದ ಲಲನೆಯಾಗಿ ಕಂಗೊಳಿಸಿದಳು. ಆಗ ಅವಳು ವಿಲಾಸದಿಂದ ಬಳಕುತ್ತ ಪ್ರೇಮಲಸಳಾಗಿ ಆ ಗೋವಿಂದನ ಸೆರಗನ್ನು ಹಿಡಿದು ಮೆಲ್ಲ ಮೆಲ್ಲನೆ 'ನನ್ನ ಮನೆಗೆ ಬಾ' ಎಂದು ಕರೆದಳು. ಆಗ ಕೇಶವನು "ಈಗ ಬೇಡ. ಮುಂದೆ ಒಂದು ದಿನ ನಾನು ನಿನ್ನ ಮನೆಗೆ ಬರುತ್ತೇನೆ" ಎಂದು ಹೇಳಿ ಅವಳನ್ನು

ಬೀಳ್ಕೊಟ್ಟ. ಅಣ್ಣ ಬಲರಾಮನ ಮುಖವನ್ನು ನೋಡಿ ಗಟ್ಟಿಯಾಗಿ ನಕ್ಕ. ಅಣ್ಣ ತಮ್ಮ ಇಬ್ಬರು ಅನಂತರ ಕುಬ್ಜೆಯು ಕೊಟ್ಟ ಗಂಧವನ್ನು ಬಗೆ ಬಗೆಯಾಗಿ ತಮ್ಮ ದೇಹಕ್ಕೆ ಒಪ್ಪುವಂತೆ ಬಳಿದು ಕೊಂಡರು. ಇಬ್ಬರೂ ಸುಗಂಧಿ ಪುಷ್ಪಗಳಿಂದ ರಚಿತವಾದ ಮಾಲೆಯನ್ನು ಧರಿಸಿ ಕಂಸನ ಬಿಲ್ಲು ಶಾಲೆಗೆ ಬಂದರು.

ಆ ಧನು ಶಾಲೆಯಲ್ಲಿ ಕಾವಲು ಮಾಡುವ ಸೇವಕನನ್ನು "ಶ್ರೇಷ್ಠವಾದ ಆ ಬಿಲ್ಲು ಎಲ್ಲಿ ಇದೆ." ಎಂದು ಕೇಳಿದರು. ಕಾವಲುಗಾರನು "ಇದೋ ಇಲ್ಲಿ ಇದೆ ನೋಡಿ" ಎಂದು ಬೆಟ್ಟದಂಥ ಬಿಲ್ಲನ್ನು ತೋರಿಸಿದ. ಕೂಡಲೆ ಕೃಷ್ಣನು ಆ ಧನುಸ್ಸಿಗೆ ಕೈ ಹಾಕಿ ಸೆಳೆದುಕೊಂಡು ಅದರ ಹೆದೆ ಏರಿಸಿದ. ಬೃಹದಾಕಾರದ ಆ ಬಿಲ್ಲನ್ನು ತನ್ನ ಬಲದಿಂದ ಬಾಗಿಸಿ ಆ ಧನುಸ್ಸಿನ ಹೆದೆಯನ್ನು ಏರಿಸುತ್ತಿರುವಾಗ ಆ ಬಿಲ್ಲು ಮುರಿದು ಹೋಯಿತು. ಆಗ ಭಯಂಕರವಾದ ಸದ್ದು. ಬ್ರಹ್ಮಾಂಡವೇ ಬಿರಿದು ಹೋಗುವಷ್ಟು ಭೀಕರವಾದ ಶಬ್ದ. ಸಮಗ್ರ ಮಥುರಾ ಪಟ್ಟಣವೆ ಬೆಚ್ಚಿ ಬೆದರಿ ಹೋಯಿತು ಆ ಸದ್ದಿನಿಂದ. ಧನುಸ್ಸು ಭಗ್ನವಾದ ಕೂಡಲೆ ಕಾವಲಕ್ಕಾಗಿ ನಿಂತ ರಕ್ಷಾ ಪುರುಷರೆಲ್ಲರು ಒಮ್ಮೆಲೆ ರಾಮಕೃಷ್ಣರ ಮೇಲೆ ಏರಿಬಂದರು. ಹೋರಾಡ ತೊಡಗಿದರು. ಕ್ಷಣಾರ್ಧದಲ್ಲಿ ಆ ಇಬ್ಬರು ಸೋದರರು ಕಂಸನ ಆ ರಕ್ಷಾ ಪಡೆಯನ್ನೆಲ್ಲ ಹೊಡೆದು ಕಡಿದು ಕೊಂದು ಹಾಕಿ ಆ ಧನುಶ್ಶಾಲೆಯಿಂದ ಹೊರಬಿದ್ದರು. ಇತ್ತ ಅಕ್ರೂರನು ಕಂಸನ ಅರಮನೆಗೆ ಹೋದಾಗಲೆ ಅವನಿಗೆ ಈ ಧನುರ್ಭಂಗದ ಸದ್ದು ಸುದ್ದಿ ತಲುಪಿತು. ಆಗ ಅವನು ಚಾಣೂರ, ಮುಷ್ಟಿಕ ಎಂಬ ತನ್ನ ಆಸ್ಥಾನಪ್ರಸಿದ್ಧ ಮಲ್ಲರನ್ನು ಮನೆಗೆ ಕರೆಸಿದ. ಅವರಿಗೆ ಕಠೋರವಾಗಿ ಆಜ್ಞೆಗೈದ.

"ನನ್ನ ಮೆಚ್ಚಿನ ಮಲ್ಲರೆ, ನಿಜವಾಗಿಯೂ ನೀವು ದ್ವಂದ್ವ ಯುದ್ಧದಲ್ಲಿ ಅಪ್ರತಿಮರು, ಈಗ ಈ ಮಥುರಾ ಪಟ್ಟಣಕ್ಕೆ ದನಕಾಯುವ ಇಬ್ಬರು ಹುಡುಗರು ಬಂದಿದ್ದಾರೆ. ಅವರು ನನ್ನ ಪ್ರಾಣವನ್ನು ತೆಗೆಯಲು ನಿಂತಿದ್ದಾರೆ. ನೀವು ಅವರನ್ನು ನನ್ನ ಮುಂದೆ ಕೊಂದು ಕೆಡುವಬೇಕು. ಮಲ್ಲ ಯುದ್ಧದಲ್ಲಿ ಅವರಿಬ್ಬರನ್ನು ಕೊಲ್ಲಲು ನೀವೇ ಸಮರ್ಥರು. ಅವರಿಬ್ಬರೂ ಕುಸ್ತಿಯ ರಂಗದಲ್ಲಿ ನಿಮ್ಮಿಂದ ಪರಾಜಿತರಾಗಿ ಕ್ಷತವಿಕ್ಷತಗಾತ್ರರಾಗಿ ನೆಲದ ಮೇಲೆ ಮಣ್ಣು ಮುಕ್ಕುತ್ತ ಬಿದ್ದ ಬಳಿಕ ನಾನು ನಿಮಗೆ ಸುಪ್ರೀತನಾಗಿ ನೀವು ಕೇಳಿದ್ದನ್ನು ಕೊಡುತ್ತೇನೆ. ಬಯಸಿದ್ದನ್ನು ನೀಡುತ್ತೇನೆ. ಇದು ಸಟೆಯಲ್ಲ ಅವರಿಬ್ಬರು ಗೋಪಾಲ ಬಾಲಕರು ನನ್ನ ವೈರಿಗಳು. ನೀವು ನ್ಯಾಯದಿಂದಲೆ ಆಗಲಿ ಅನ್ಯಾಯದಿಂದಲೆ ಆಗಲಿ ಅವರನ್ನು ಸಂಹರಿಸಲೇಬೇಕು. ನೀವು ಒಮ್ಮೆ ಅವರನ್ನು ಕೊಂದು ಬಿಟ್ಟರೆ ಗೆದ್ದಿರಿ. ಕಂಸನ ಈ ವಿಶಾಲವಾದ ಸಾಮ್ರಾಜ್ಯದಲ್ಲಿ ಅರ್ಧರಾಜ್ಯ ನಿಮ್ಮದು. ಇನ್ನು ಅರ್ಧರಾಜ್ಯ ನನ್ನದು ಏನಾದರೂ ಮಾಡಿರಿ. ಹೇಗಾದರು ಮಾಡಿರಿ. ಆ ತುರುಗಾಹಿಗಳನ್ನು ಸಂಹಾರ ಮಾಡಿರಿ."

ಕಂಸನು ತನ್ನ ಆಸ್ಥಾನದಲ್ಲಿಯ ಜಗಜಟ್ಟಿಗಳಾದ ಚಾಣೂರ, ಮುಷ್ಟಿಕರಿಗೆ ಹೀಗೆ ಆಜ್ಞೆ ಮಾಡಿ ಅನಂತರ ತನ್ನ ವಿಶ್ವಾಸಿಕನಾದ ಮಾವಟಿಕನನ್ನು ಕರೆದು ಹೇಳಿದ. "ಎಲೈ ಮಾವುಟಿಗ, ಇಂದು ದನಗಾಹಿ ಬಾಲಕರು ಮಲ್ಲಯುದ್ಧ ಕ್ಕೋಸ್ಕರ ನಾನು ಏರ್ಪಡಿಸಿದ ಯುದ್ಧರಂಗಕ್ಕೆ ಬರುವರು. ಅವರು ರಂಗಭೂಮಿ ಪ್ರವೇಶ ದ್ವಾರದ ಬಳಿ ಬರುವಕ್ಕಿಂತ ಮುನ್ನ ನೀನು ಕುವಲೆಯಾ ಪೀಡ ಎಂಬ ಆನೆಯನ್ನು ನಿಲ್ಲಿಸಿಕೊಂಡು ಕಾಯ್ದುಕೊಂಡು ನಿಲ್ಲು. ಆ ಬಂಧುಗಳಿಬ್ಬರು ಅಲ್ಲಿ ಬಂದಕೂಡಲೆ ಕುವಲೆಯಾ ಪೀಡ ಎಂಬ ಆ ನಮ್ಮ

ಮದ್ದಾನೆಯನ್ನು ಅವರಿಬ್ಬರ ಮೇಲೆ ಏರಿಬಿಡು ಆನೆಗೆ ಸಂಕೇತಗೈದು ಅವರಿಬ್ಬರ ಮೇಲೆ ಏರಿಬಿಟ್ಟು ಅದು ಅವರಿಬ್ಬರನ್ನು ಸೊಂಡಿಯಿಂದ ಎತ್ತಿಕೊಂಡು ನೆಲಕ್ಕೆ ಅಪ್ಪಳಿಸುವಂತೆ ಅಥವಾ ಕಾಲಲ್ಲಿ ಹಾಕಿ ತುಳಿಯುವಂತೆ ಏರ್ಪಡಿಸು. ಅವರಿಬ್ಬರು ಮದ ತುಂಬಿದ ಉನ್ಮತ್ತವಾದ ಆ ಮದ್ದಾನೆಯ ತೀಕ್ಷ್ಣವಾದ ಕೋರೆಯಿಂದ ತಿವಿಯಲ್ಪಟ್ಟು ಘಾಸಿಗೊಂಡು ಅದರ ಕಾಲಡಿಯಲ್ಲಿ ಜಜ್ಜಿಹೋಗುವಂತೆ ಮಾಡು'' ಹೀಗೆ ಮಾವುಟನಿಗೆ ಅಪ್ಪಣೆಯನ್ನು ಕೊಟ್ಟು ಕಳುಹಿಸಿದನು.

ಅಂದಿನ ರಾತ್ರಿಯನ್ನು ಕಂಸನು ಉದ್ವೇಗದಿಂದಲೇ ಕಳೆದ, ಬೆಳಗಾಯಿತು. ಮಥುರಾ ನಗರದ ಜನರೆಲ್ಲರು ರಂಗ ಮಂಟಪದಲ್ಲಿ ತುಂಬತೊಡಗಿದರು. ಆ ಅದ್ಭುತವಾದ ವಿಶಾಲ ರಂಗ ಮಂಟಪದಲ್ಲಿ ರಾಜ ಮಹಾರಾಜರು ಕುಳಿತುಕೊಳ್ಳುವುದಕ್ಕೆ ಒಂದು ವಿಶಾಲವಾದ ವೇದಿಕೆಯನ್ನು ಸಿದ್ಧಪಡಿಸಿದರು. ಅದರ ಮೇಲೆ ನೂರಾರು ಮಿದುವಾದ ಆಸನಗಳನ್ನು ಹಾಕಿದ್ದರು. ರಾಜ ಮಹಾರಾಜರೆಲ್ಲರು ತಮ್ಮ ಸಾಮಂತರಲ್ಲಿ ಬಂದು ತಮ್ಮ ತಮ್ಮ ಯೋಗ್ಯತೆಯಂತೆ ಉಚಿತವಾದ ಆಸನದಲ್ಲಿ ಬಂದು ಕುಳಿತರು. ಮಲ್ಲ ಯುದ್ಧದ ಸೋಲು ಗೆಲವುಗಳನ್ನು ನಿರ್ಣಯಿಸುವ ಮಧ್ಯಸ್ಥ ಗುಂಪು ಆ ರಂಗ ಮಂಟಪದ ಮಧ್ಯಭಾಗದಲ್ಲಿ ಬಂದು ನಿಂತಿತು. ಕಂಸನು ಅತಿ ಎತ್ತರವಾದ ಸಿಂಹಾಸನದಲ್ಲಿ ಮಂಡಿಸಿದನು.

ಆ ರಂಗಶಾಲೆಯಲ್ಲಿ ಮಹಿಳೆಯರಿಗಾಗಿ ಕೂಡಲು ಒಂದು ಕಡೆ ಆಸನಗಳನ್ನು ಏರ್ಪಡಿಸಿದ್ದರು. ಅದರಲ್ಲಿಯೂ ಎರಡು ಭಾಗ ಮಾಡಿ ಒಂದು ಕಡೆ ಪಾರಾಂಗಣೆಯರು ಇನ್ನೊಂದೆಡೆ ವಾರಾಂಗನೆಯರು ಕೂಡಲು ಏರ್ಪಾಡನ್ನು ಮಾಡಲಾಗಿತ್ತು. ರಾಜಾಂಗನೆಯರಿಗೆ ಪ್ರತ್ಯೇಕವಾಗಿ ಆಸನದ ವ್ಯವಸ್ಥೆ ಇದ್ದಿತು. ಮಥುರಾ ಪಟ್ಟಣದ ಗಣ್ಯ ನಾಗರಿಕರಿಗೂ ಶ್ರೀಸಾಮಾನ್ಯರಿಗೂ ಉಳಿದೆಲ್ಲ ಪ್ರೇಕ್ಷಕರಿಗೂ ಬೇರೆ ಬೇರೆ ಕುಳಿತು ನೋಡಲು ಅನುಕೂಲವಾಗುವಂತೆ, ಮಲ್ಲಯುದ್ಧದ ದೃಶ್ಯ ಎಲ್ಲರಿಗೂ ಕುಳಿತಲ್ಲಿಯೆ ಕಾಣುವಂತೆ ವ್ಯವಸ್ಥೆಯನ್ನು ಮಾಡಲಾಗಿತ್ತು.

ನಂದ ಗೋಪ ಮೊದಲಾದ ಗೋಕುಲದ ಗೊಲ್ಲರೆಲ್ಲರು ಒಂದು ಕಡೆ ಆಸನಗಳಲ್ಲಿ ಆಸೀನರಾಗಿದ್ದರು. ಇನ್ನೊಂದು ಕಡೆ ಅಕ್ರೂರ ವಸುದೇವರು ಒಂದು ಮಂಚವನ್ನು ಏರಿ ಆಸನಸ್ಥರಾಗಿದ್ದರು. ಕೃಷ್ಣನ ಹಡೆದ ತಾಯಿಯಾದ ದೇವಕಿಯು ಕೂಡ ತನ್ನ ಕಂದನಾದ ಕೃಷ್ಣನನ್ನು ಕಾಣಲು ಕಾತರಿಸಿ ನಗರ ಸ್ತ್ರೀಯರ ನಟ್ಟನಡುವೆ ಬಂದು ಕುಳಿತಿದ್ದಳು. ತಾನು ಹಡೆದು ಹನ್ನೊಂದು ವರುಷವಾದರೂ ತನ್ನ ಮೆಚ್ಚಿನ ಮಗನನ್ನು ಒಮ್ಮೆಯಾದರೂ ಕಾಣುವ ಭಾಗ್ಯ ಅವಳಿಗೆ ಒದಗಿರಲಿಲ್ಲ. ಈಗಂತೂ ಕಂಸ ಅವನನ್ನು ಕೊಲ್ಲಲಿಕ್ಕೆಂದೇ ಇಲ್ಲಿಗೆ ಕರೆಸಿದ್ದಾನೆ. ಚಾಣೂರ ಮುಷ್ಟಿಕರಂಥ ಜಗಜಟ್ಟಿಗಳ ಕೈಯಲ್ಲಿ ಸಿಕ್ಕು ಎಲ್ಲಿ ಆ ತನ್ನ ಕೂಸು ನುಜ್ಜು ಗುಜ್ಜಾಗಿ ಸತ್ತು ಹೋಗುವುದೋ ಏನೋ ಎಂಬ ಭಯ ಅವಳನ್ನು ಕಂಗೆಡಿಸಿತ್ತು. ಏನೇ ಆಗಲಿ ಸಾಯುವ ಮುನ್ನ ತನ್ನ ಮಗನ ಕೊನೆಯ ದರ್ಶನವನ್ನು ತೆಗೆದುಕೊಳ್ಳಬೇಕೆಂದು ಕಾತರಿಸಿ ಆ ದೇವಕಿಯು ನಗರನಾರಿಯರ ನಟ್ಟನಡುವೆ ಕಣ್ಣೀರು ತೆಗೆಯುತ್ತ ಚಿಂತಾಕ್ರಾಂತಳಾಗಿ ಕುಳಿತಿದ್ದಳು.

ಆಗ ರಣವಾದ್ಯಗಳು ಭೋರ್ಗರೆಯತೊಡಗಿದವು. ಚಾಣೂರನು ಗರ್ವದಿಂದ ಬಂದ. ಮುಷ್ಟಿಕನು ರಂಗಶಾಲೆಯ ಮಧ್ಯದಲ್ಲಿ ಬಂದು ಮದೋನ್ಮತ್ತನಾಗಿ ಎಲ್ಲ ಕಡೆಗೂ

ನೋಡಿದ. ಅವರಿಬ್ಬರೂ ಮಹಾ ಬಲಿಷ್ಠರಾದ ಮಲ್ಲರು ತಮ್ಮತಮ್ಮ ತೋಳುಗಳನ್ನು ತಟ್ಟಿಕೊಳ್ಳುತ್ತ ರಂಗಮಧ್ಯದಲ್ಲಿ ನಿಂತುಕೊಂಡರು. ರಂಗಶಾಲೆಯ ಹೊರಗಡೆ ಕಂಸನ ಕುವಲಯಾಪೀಡ ಎಂಬ ಮದ್ದಾನೆ ನಿಂತಿತ್ತು. ಕಳ್ಳು ಕುಡಿದು ಮಸ್ತಿ ಏರಿದ ಆ ಮದ್ದಾನೆಯನ್ನು ಹೊಡೆದು ಉರುಳಿಸಿದ ರಾಮಕೃಷ್ಣರು ಆ ಕುವಲೆಯಾಪೀಡದ ದಂತವನ್ನು ಆಯುಧವಾಗಿ ಹಿಡಿದುಕೊಂಡು ರಂಗಪ್ರವೇಶ ಮಾಡಿದರು. ಅದೇ ತಾನೆ ಕೊಂದುಹಾಕಿದ ಕುವಲೆಯಾಪೀಡದ ರಕ್ತದಿಂದ ಸಿಕ್ತವಾಗಿದ್ದಿತು ಅವರ ಬಟ್ಟೆ. ಅದರ ಮದೋದಕದಿಂದ ಅವರಿಬ್ಬರ ದೇಹಗಳು ತೊಯ್ದುಹೋಗಿದ್ದವು. ಅವರಿಬ್ಬರು ಗಂಭೀರ ನಡಿಗೆಯಿಂದ ನೆರೆದ ಜನರನ್ನು ನಿರೀಕ್ಷಿಸುತ್ತ ಮೆಲ್ಲಮೆಲ್ಲನೆ ರಂಗಶಾಲೆಗೆ ನಡೆದುಬಂದರು. ಮೃಗಗಳ ನಡುವೆ ಸಿಂಹವು ಗಂಭೀರವಾಗಿ ಬರುವುದಿಲ್ಲವೊ ಹಾಗೆ ಬಂದರು.

ರಾಮಕೃಷ್ಣರನ್ನು ರಂಗಶಾಲೆಯಲ್ಲಿ ಕಂಡಕೂಡಲೆ ಜನ ಕೂಗಿಕೊಂಡರು. ''ರಾಮ ಬಂದ. ಕೃಷ್ಣ ಬಂದ. ಮೋಡದಂತೆ ಕಪ್ಪಗಿರುವನಲ್ಲವೆ! ಅವನೆ ಶ್ರೀಕೃಷ್ಣ. ಬೆಳ್ಳಿಯಂತೆ ಬೆಳ್ಳಗಿರುವನಲ್ಲವೆ! ಅವನೆ ಬಲರಾಮ. ''ಈ ಕೃಷ್ಣನೇನು ಸಾಮಾನ್ಯನೆ? ಹಾಲುಗಲ್ಲದ ಹಸುಳೆ ಇದ್ದಾಗಲೆ ಪೂತನಾ ಎಂಬ ರಕ್ಕಸಿಯನ್ನು ಹೊಸಕಿಹಾಕಿದ, ಶಕಟಾಸುರನನ್ನು ಕಾಲಿನಿಂದ ಒದ್ದು ದೂರ ಎಸೆದುಬಿಟ್ಟ. ವ್ರಜಭೂಮಿಯಲ್ಲಿ ಬೆಳೆದ ಜೋಡಿಬಿಳಿಮತ್ತಿ ಮರಗಳನ್ನು ಲೀಲಾಮಾತ್ರದಿಂದ ಮುರಿದು ಉರುಳಿಸಿದ. ಕಾಳಿಂಗ ಸರ್ಪವನ್ನು ತನ್ನ ಪುಟ್ಟ ಕಾಲಿನಿಂದ ಮೆಟ್ಟಿ ಮಡುವಿನಿಂದ ಹೊರಗೆ ಅಟ್ಟಿದ. ಇನ್ನೊಂದು ಕೃಷ್ಣನ ಅದ್ಭುತ ಕಾರ್ಯವನ್ನು ಕೇಳಿದ್ದೀರಾ?! ಇವನು ಏಳು ವರುಷದವನಿದ್ದಾಗ ತನ್ನ ಕಿರಿಬೆರಳಿನ ತುದಿಯಲ್ಲಿ ಗೋವರ್ಧನ ಗಿರಿಯನ್ನೇ ಎತ್ತಿ ಕೊಡೆಮಾಡಿ ಹಿಡಿದ. ಅರಿಷ್ಟಾಸುರನನ್ನು ಅರೆಗಳಿಗೆಯಲ್ಲಿ ಹುರಿದುಮುಕ್ಕಿದ. ಧೇನುಕಾ ಸುರನನ್ನು ಲೀಲೆಯಿಂದಲೇ ಕೊಂದುಕೆಡವಿದ. ಅಂಥ ಕೃಷ್ಣನನ್ನು ನಾವು ಇಂದು ಕಣ್ಣಿನಿಂದ ಕಾಣುತ್ತಿದ್ದೇವೆ ಇದು ನಮ್ಮ ಭಾಗ್ಯ. ''ಅವನ ಮುಂದೆ ನಡೆದು ಬರುತ್ತಿದ್ದಾನಲ್ಲವೆ? ಅವನೇ ಬಲರಾಮ. ಕೃಷ್ಣನ ಅಣ್ಣ. ಈ ಇಬ್ಬರು ಸೋದರರನ್ನು ಆದರದಿಂದ ನೋಡುವ ಈ ನಗರದ ನರನಾರಿಯರೆಲ್ಲರ ಕಣ್ಣಿಗೆ ಇದೊಂದು ದೊಡ್ಡ ಹಬ್ಬ. ವೇದಶಾಸ್ತ್ರಗಳನ್ನು ಬಲ್ಲ ಪಂಡಿತರು ಸರ್ವಾಂತ ರ್ಯಾಮಿಯಾದ ಸರ್ವೋತ್ತಮನಾದ ಮಹಾವಿಷ್ಣುವೇ ಈ ಕೃಷ್ಣರೂಪದಿಂದ ಭೂಭಾರ ಹರಣ ಮಾಡಿ ಯಾದವ ವಂಶ ಉದ್ಧರಿಸಲು ಅವತರಿಸಿ ಬಂದಿದ್ದಾನೆ ಎಂದು ಹೇಳುವರು.''

ಹೀಗೆ ಮಧುರಾ ಪುರಿಯ ಜನರೆಲ್ಲರು ರಾಮಕೃಷ್ಣರನ್ನು ತಮ್ಮ ತಮ್ಮಲ್ಲಿ ಹೊಗಳುತ್ತ ಇರುವಾಗ ಅವರ ಈ ಮಾತುಗಳನ್ನು ಕೇಳಿ ದೇವಕಿಗೆ ಹರ್ಷ ಉಕ್ಕಿ ಬಂದರೂ ''ಇಂಥ ಮಗ ಇನ್ನು ಕೆಲವೇಕ್ಷಣದಲ್ಲಿ ಯಮದೂತನಂತಿದ್ದ ಕಂಸನ ಭಟರಿಂದ ನಿಧನ ಹೊಂದುವನಲ್ಲ'' ಎಂದು ದುಃಖವೂ ಉಕ್ಕಿಬರತೊಡಗಿತು. ಹೃದಯವು ಕಳವಳ ಗೊಂಡಿತು. ಆ ಮಗನ ಮೇಲಿನ ಮಮತೆಯಿಂದ ಆ ಮಾತೆಯ ಎರಡೂ ಮೊಲೆಗಳಿಂದ ಹಾಲು ಉಕ್ಕಿ ಸುರಿಯಲಾರಂಭಿಸಿತು. ನಂದಗೋಪನೊಡನೆ ಆ ರಂಗಮಂಟದಲ್ಲಿ ಒಂದೆಡೆ ಕೂತ ವಸುದೇವನಿಗೆ ತನ್ನ ಇಬ್ಬರು ಮಕ್ಕಳನ್ನು ನೋಡಿ ಆನಂದದಿಂದ ಮುದಿತನ ಹೋಗಿ ಹೊಸ ಹರೆ ಬಂದಂತೆ ಆಗಿತ್ತು. ಗೋಕುಲ, ವೃಂದಾವನಗಳಲ್ಲಿ ಅನೇಕ ರಕ್ಕಸರನ್ನು ಮಣ್ಣು ಮುಕ್ಕಿಸಿದ ತನ್ನ ಈ ಇಬ್ಬರು ಮಕ್ಕಳು ಕುವಲೆಯಾಪೀಡವನ್ನು ಕೊಂದು ಹಾಕಿದಂತೆ ಈ

ಜಟ್ಟಿಗಳನ್ನೂ ಕಂಸನನ್ನೂ ಧ್ವಂಸಗೈಯುವರು ಎಂಬ ಭರವಸೆ ಮೂಡಿತ್ತು. ತಮ್ಮ ಮಕ್ಕಳ ಪರಾಕ್ರಮವನ್ನು ಕಣ್ಣಾರೆ ಕಾಣಬೇಕೆಂದು ಕೌತುಕದ ಕೊನೆಯೇರಿ ನಿಂತುಕೊಂಡಿದ್ದನು. ಮಥುರಾ ಪಟ್ಟಣದ ಮಹಿಳಾ ಮಣಿಗಳೆಲ್ಲರೂ ಚೆಲುವಿನ ಚಂದ್ರಮನಂತಿದ್ದ ಆ ಕೃಷ್ಣನನ್ನು ನೋಡಿ 'ಇಂದು ನಮ್ಮ ಕಣ್ಣುಗಳು ಸಾರ್ಥಕವಾದವು. ನಮ್ಮ ಜನ್ಮ ಧನ್ಯವಾಯಿತು. ಆದರೆ ಇದು ಏನು ಅನ್ಯಾಯ! ಈಗ ತಾನೆ ಬಾಲ್ಯ ಕಳೆದು ಯೌವ್ವನದ ಹೊಸಲಿನಲ್ಲಿ ಕಾಲಿರಿಸಿರುವ ಚಿಕ್ಕ ಮಕ್ಕಳಾದ ರಾಮಕೃಷ್ಣರೆಲ್ಲಿ? ಬೆಟ್ಟದಂತೆ ಬೃಹದಾಕಾರದ ದೇಹವುಳ್ಳ ಈ ಚಾಣೂರ ಮುಷ್ಟಿಕರೆಲ್ಲಿ? ಇದು ನಿಜವಾಗಿಯೂ ಅಸಮಯುದ್ಧ. ಇವರು ಕುಸುಮ ಕೋಮಲರು, ಸುಕುಮಾರ ಶರೀರರು. ನೋಡಲು ಇನ್ನೂ ಚಿಕ್ಕ ಮಕ್ಕಳಂತೆ ತೋರುವವರು. ಅವರೋ ಮಹಾರಕ್ಕಸರು. ವಜ್ರದಂತೆ ಕಠೋರ ಕಾಯರು. ಇವರಿಬ್ಬರ ನಡುವೆ ಮಲ್ಲಯುದ್ಧವನ್ನು ಏರ್ಪಡಿಸಿದ ಮಧ್ಯಸ್ಥರಿಗಾದರು ತಿಳಿಯಲಿಲ್ಲವೆ? ಇದು ಅನ್ಯಾಯ.''

ಈ ರೀತಿಯಾಗಿ ಅಲ್ಲಿ ನೆರೆದ ಎಲ್ಲ ಪೌರನಾರಿಯರು, ಮಥುರೆಯ ನಾಗರಿಕರು ಮಾತನಾಡುತ್ತಿರುವಾಗ ರಾಮಕೃಷ್ಣರು ಆ ಜಟ್ಟಿಗಳ ಆಹ್ವಾನವನ್ನು ಸ್ವೀಕರಿಸಿ ಚಾಣೂರ, ಮುಷ್ಟಿಕರನ್ನು ಎದುರಿಸಿ ನಿಂತರು. ಕೃಷ್ಣ ಚಾಣೂರರಿಗೂ, ಬಲರಾಮ ಮುಷ್ಟಿಕರಿಗೂ ಭಯಂಕರ ಮಲ್ಲಯುದ್ಧ ಪ್ರಾರಂಭವಾಯಿತು. ಈ ಯುದ್ಧದಲ್ಲಿ ಯಾರೂ ಆಯುಧಗಳನ್ನು ಉಪಯೋಗಿಸದಿದ್ದರೂ ಅವರ ಮುಷ್ಟಿಗಳೇ ವಜ್ರಾಯುಧಕ್ಕಿಂತ ಕಠೋರವಾಗಿದ್ದವು. ಮತ್ತು ವೈರಿಭಯಂಕರವಾಗಿದ್ದವು. ಬೆಟ್ಟದಂತೆ ಬೆಳೆದು ನಿಂತ ಚಾಣೂರನನ್ನು ಪುಟ್ಟ ಬಾಲಕನಾದ ಕೃಷ್ಣನು ಹೋರಾಡಿ ದಣಿಸಿಬಿಟ್ಟನು. ಮುಷ್ಟಿಯನ್ನು ಮುಚ್ಚಿ ಅವನ ನಡುನೆತ್ತಿಗೆ ಒಮ್ಮೊಮ್ಮೆ ಕುಟ್ಟುತ್ತಿದ್ದನು. ಒಂದೊಂದು ಸಲ ಅವನನ್ನು ಜೋರಾಗಿ ನೂಕಿ ನೆಲದ ಮೇಲೆ ಬೀಳಿಸುತ್ತಿದ್ದ, ಮತ್ತೊಮ್ಮೆ ಚಂಡಿನಂತೆ ಮೇಲಕ್ಕೆ ಎಸೆಯುತ್ತಿದ್ದನು. ಕಾಲಿನಿಂದ ಒದೆಯುತ್ತಿದ್ದನು. ಅಂಗೈಯನ್ನು ಅಪ್ಪಳಿಸಿ ಹೊಟ್ಟೆ, ಬೆನ್ನು, ಕಪಾಳ, ಎದೆ, ಎಲ್ಲಿ ಬೇಕಲ್ಲಿ ಹೊಡೆಯುತ್ತಿದ್ದನು. ಚಾಣೂರನೇನೋ ಮಹಾ ಬಲಿಷ್ಠ. ತನ್ನ ಬಲವನ್ನೆಲ್ಲ ಉಪಯೋಗಿಸಿ ಆ ಹರಿಯ ಜೊತೆ ಹೋರಾಡಿದ. ಶಕ್ತಿಯಿಂದ ಹೋರಾಡಿದಷ್ಟು ಅವನ ಶಕ್ತಿಯು ಕುಂದುತ್ತ ಬಂದಿತು.

ಮೇಲೆ ದೂರದಲ್ಲಿ ಕುಳಿತ ಕಂಸ ಕೃಷ್ಣನ ಕೈಯಲ್ಲಿ ಘಾಸಿಕೊಳ್ಳುತ್ತಿರುವ ಚಾಣೂರನನ್ನು ನೋಡಿ ಸಂಕಟಪಟ್ಟ. ಚಾಣೂರನ ಬಲ ಕುಗ್ಗುತ್ತಿರುವುದು ಕೃಷ್ಣನ ಕೈಯಲ್ಲಿ ಅವನ ದೇಹ ಕುಸಿಯುತ್ತಿರುವುದು ಅವನ ಗಮನಕ್ಕೆ ಬಂದಿತು. ರೊಚ್ಚು ರೋಷಗಳಿಂದ ಕಿಚ್ಚು ಕೆದರಿದಂತಾಯಿತು. ಹುಚ್ಚೆದ್ದು ಓಲಗದವರ ಮೇಲೆ ಹರಿದಾಡಿದ. ಬಾಜೆ ಬಜಂತ್ರಿಗಳನ್ನು ಕೂಡಲೆ ನಿಲ್ಲಿಸಲು ಕೂಗಿದ. ಕಂಸನ ಅಪ್ಪಣೆಯಿಂದ ಮೃದಂಗ ಮೊದಲಾದ ವಾದ್ಯಗಳು ನಿಲ್ಲಿಸಲ್ಪಟ್ಟ ಕೂಡಲೆ ದೇವತೆಗಳು ಆಕಾಶದಲ್ಲಿ ವಾದ್ಯಗಳನ್ನು ಬಾರಿಸತೊಡಗಿದರು. ಆ ವಾದ್ಯದ ಧ್ವನಿಯು ಶ್ರೀಕೃಷ್ಣನ ಜಯಘೋಷವನ್ನು ಮಾಡುವಂತೆ ತೋರುತ್ತಿತ್ತು. ದೇವತೆಗಳೆಲ್ಲರೂ ಸ್ತೋತ್ರ ಮಾಡಿ ಹುರಿದುಂಬಿಸಿದರು. ಆಗ ಆ ಕೇಶವಮೂರ್ತಿಯು ಚಾಣೂರನ ಕೈಕಾಲು ಕುತ್ತಿಗೆಯನ್ನು ಹಿಡಿದು ಮೇಲೆ ಎತ್ತಿ ಆಕಾಶದಲ್ಲಿಯೆ ಗರಗರ ತಿರುಗಿಸಿ ಬಿಟ್ಟನು. ಅವನ ಪರ್ವತಪ್ರಾಯವಾದ ಸ್ಥೂಲ ಶರೀರವನ್ನು ಲೀಲೆಯಿಂದ ಎತ್ತಿ ಮುಗಿಲಿನಲ್ಲಿ ಭರದಿಂದ ತಿರುಗಿಸುವಾಗಲೆ ಆ ದೈತ್ಯನ ಪ್ರಾಣ ಹೋಯಿತು. ಅನಂತರ ಅವನನ್ನು ಕೃಷ್ಣನು ನೆಲದ ಮೇಲೆ ಅಪ್ಪಳಿಸಿದನು.

ಚಾಣೂರನ ದೇಹಾಂಗಗಳು ನೂರಾರು ತುಂಡುಗಳಾಗಿ ನೆಲದ ಮೇಲೆ ಸಿಡಿದವು. ಅವನ ಆ ದೈತ್ಯಕಾಯದಿಂದ ಹೊಮ್ಮಿ ಚಿಮ್ಮಿ ಬಂದ ನೆತ್ತರದಿಂದ ನೆಲವೆಲ್ಲವು ಕೆಸರಾಗಿ ಹೋಯಿತು.

ಇದರಂತೆ ಬಲರಾಮನು ಮುಷ್ಟಿಕನನ್ನು ತಲೆಯ ಮೇಲೆ ಮುಷ್ಟಿಯಿಂದ ಗುದ್ದಿ ಎದೆಯ ಮೇಲೆ ಮಂಡಿಯಿಂದ ಹೊಡೆತ ಹಾಕಿ ಬಲವಾಗಿ ಅಪ್ಪಳಿಸಿದ. ಮತ್ತು ನೆಲದ ಮೇಲೆ ಕೆಡವಿ ಬಿಟ್ಟನು. ಬಳಿಕ ಅವನನ್ನು ಚೆನ್ನಾಗಿ ಹಿಸುಕಿ ಮುದ್ದೆ ಮಾಡಿ ಸಾಯ ಹೊಡೆದನು. ಇದನ್ನು ಕಂಡು ತೋಶಲಕ ಎಂಬ ಪ್ರಬಲ ಜಟ್ಟಿಯು ಕೃಷ್ಣನ ಮೇಲೆ ಏರಿಬಂದ. ಆಗ ಕೃಷ್ಣನು ತನ್ನ ಎಡಗೈ ಮುಷ್ಟಿಯ ಒಂದೇ ಏಟದಿಂದ ತೋಲಕನು ನೆಲಕಚ್ಚಿದ. ಹೀಗೆ ರಾಮ ಕೃಷ್ಣರಿಂದ, ಚಾಣೂರ, ಮುಷ್ಟಿಕ, ತೋಶಲಕ, ಶಲ ಮುಂತಾದ ದೈತ್ಯ ಧುರೀಣರೆಲ್ಲರು ವಧಿಸಲ್ಪಟ್ಟು ರಂಗಶಾಲೆಯಲ್ಲಿ ಮೃತರಾಗಿ ಬಿದ್ದದ್ದನ್ನು ನೋಡಿ ಕಂಸನ ಮಲ್ಲರೆಲ್ಲರು ಭಯಭ್ರಾಂತರಾಗಿ ಓಡಿಹೋದರು. ಅನಂತರ ರಾಮಕೃಷ್ಣರು ಅತ್ಯಂತ ಸಂತೋಷದಿಂದ ತಮ್ಮ ಗೆಳೆಯರಾದ ಗೊಲ್ಲರನ್ನೆಲ್ಲ ರಂಗಶಾಲೆಯ ಮೇಲೆ ಎಳೆದುಕೊಂಡು ಬಂದು ಅವರೊಡನೆ ಆ ಯುದ್ಧಭೂಮಿಯ ಮೇಲೆ ಸ್ವಚ್ಛಂದದಿಂದ ಓಡಾಡ ತೊಡಗಿದರು.

ಕಂಸನಿಗೆ ಅದನ್ನು ನೋಡಿ ಭುಗಿಲೆದ್ದಿತು. ಕಣ್ಣು ಕೆಂಡದಂತೆ ಕೆಂಪಡರಿದವು. ಆಗ ಅವನು ತನ್ನ ಆಳುಗಳನ್ನು ಕರೆದು ಈ ರೀತಿ ಅಪ್ಪಣೆಮಾಡಿದ. ''ಎಲ್ಲೈ, ಅಲ್ಲಿ ಯಾರಿರುವಿರಿ? ಉದ್ಧಟರಾದ ಈ ಇಬ್ಬರೂ ಗೊಲ್ಲರನ್ನು ಈ ಗುಂಪಿನಿಂದ ಹೊರಗೆ ತಳ್ಳಿ ಬಿಡಿರಿ ಪಾಪಿಷ್ಠನಾದ ನಂದನನ್ನು ಹಿಡಿಯಿರಿ. ದುಷ್ಟನಾದ ವಸುದೇವನನ್ನು ಹೊಡೆಯಿರಿ. ಅವರ ಜೊತೆಗೆ ಬಂದ ದನಗಾಹಿಗಳನ್ನೆಲ್ಲ ಹಣೆಯಿರಿ. ವಸುದೇವ ನಂದಗೋಪರಿಗೆ ಕೈಗೆ ಕೋಳ ತೊಡಿಸಿರಿ. ಬಂದೀಮನೆಯಲ್ಲಿ ಬಂಧಿಸಿ ಇಡಿರಿ. ಅವರು ಎಲ್ಲಿಗೂ ಬಿಡಿಸಿಕೊಂಡು ಹೋಗದಂತೆ ಕಾವಲುಗಾರರನ್ನು ನೇಮಿಸಿರಿ. ಅಲ್ಲದೆ ಈ ಕೃಷ್ಣನ ಜೊತೆಗೆ ಬಂದು ಯಾವ ಗೊಲ್ಲರು ಅಹಂಕಾರದಿಂದ ಮೆರೆಯುತ್ತಿರುವರೋ ಆ ಎಲ್ಲ ಗೊಲ್ಲರ ಬಳಿಯಿರುವ ಹಸುಗಳನ್ನೆಲ್ಲ ಹೊಡೆದುಕೊಂಡು ಬನ್ನಿರಿ. ಅವರ ಬಳಿ ಅಲ್ಪಸ್ವಲ್ಪ ಹಣವಿದ್ದರೂ ಕಿತ್ತುಕೊಂಡು ಬನ್ನಿರಿ'' ಎಂದು ಅಪ್ಪಣೆ ಮಾಡಿದನು.

## ಕಂಸನ ಮರ್ದನಗೈದ ಜನಾರ್ದನ

ಹೀಗೆ ಉನ್ಮತ್ತ ಪ್ರಲಾಪ ಮಾಡುತ್ತ ಕಂಸನು ಕಿಂಕರರಿಗೆ ಆಜ್ಞಾಪಿಸುವುದನ್ನು ನೋಡಿ ಕೃಷ್ಣನು ಗಟ್ಟಿಯಾಗಿ ನಕ್ಕ. ಒಂದೇ ಜಿಗಿತಕ್ಕೆ ಕಂಸನ ಬಳಿ ಹಾರಿಬಂದ. ಮತ್ತು ಅವನು ಕುಳಿತಿದ್ದ ಉಚ್ಚಾಸನವನ್ನು ತಟ್ಟನೆ ಹತ್ತಿ ಆ ಕಂಸನನ್ನು ಹಿಡಿದು ಕೊಂಡ. ಅವನ ಜುಟ್ಟಿಗೆ ಕೈ ಹಾಕಿ ಕೆಳಕ್ಕೆ ಜಗ್ಗಿದ. ಆ ಗಡಿಬಿಡಿಯಲ್ಲಿ ಕಂಸನ ತಲೆಯ ಮೇಲಿನ ರತ್ನಖಚಿತವಾದ ಕಿರೀಟವು ಜಾರಿಬಿದ್ದಿವು. ಕಂಸನು ಆಸನದಿಂದ ಕೆಳಕ್ಕೆ ಉರುಳಿದ. ಕೃಷ್ಣನು ಅವನ ಮೇಲೆ ಬಿದ್ದ. ವಿಶ್ವಂಭರನಾಗಿ ಹದಿನಾಲ್ಕು ಲೋಕಗಳನ್ನು ಹೊತ್ತುನಿಂತ ಆ ಕೃಷ್ಣನು ಮೈಮೇಲೆ ಬಿದ್ದ ಕೂಡಲೆ ಆ ಹರಿಯ ಹಿರಿಯ ಹೊರೆಯನ್ನು ತಾಳಲಾರದೆ ಕಂಸ ಪ್ರಾಣ ಬಿಟ್ಟ.

ಕೃಷ್ಣನು ಆ ಕಂಸನ ಕೂದಲಿಗೆ ಕೈ ಹಾಕಿ ಹಿಡಿದು ಆ ದೇಹವನ್ನು ರಂಗಸ್ಥಳದ ತುಂಬ ಎಳೆದಾಡಿದ. ಹೀಗೆ ಮಹಾಭಾರವುಳ್ಳ ಕೃಷ್ಣನು ಮಹಾ ವೇಗದಿಂದ ಮೈಮೇಲೆ ಬಿದ್ದುದರಿಂದಲೂ ರಂಗಸ್ಥಳದಲ್ಲಿ ಕಂಡಕಂಡಂತೆ ಎಳೆದಾಡಿದ್ದರಿಂದಲೂ ಅವನ ದೇಹವು ಕಿತ್ತಿ ಕಿತ್ತಿ ಹೋಯಿತು. ಹೀಗೆ ಮಹಾ ಬಲಿಷ್ಠನಾದ ಕಂಸನು ಕೃಷ್ಣನ ಕೈಯಿಂದ ಹತನಾಗಿ

ರಂಗಶಾಲೆಯಲ್ಲಿ ಬಿದ್ದುದನ್ನು ನೋಡಿ ಸುನಾಮಾ ಎಂಬ ಹೆಸರಿನ ಅವನ ತಮ್ಮ ಕಾದಾಟಕ್ಕೆ ಅಣಿಯಾಗಿ ಬಂದನು. ಬಲರಾಮನು ಆ ದುರಾತ್ಮನಾದ ಸುನಾಮನನ್ನು ಲೀಲೆಯಿಂದಲೆ ಕೊಂದು ಹಾಕಿದ.

ಆ ರಂಗಮಂಟಪದಲ್ಲಿ ನೆರೆದ ನರನಾರಿಯರೆಲ್ಲರೂ ಶ್ರೀಕೃಷ್ಣನು ಕಂಸವಧ ಮಾಡಿದ್ದನ್ನು ಕಂಡು ಆನಂದದಿಂದ ಜಯಘೋಷ ಮಾಡಿದರು. ಇತ್ತ ಕೃಷ್ಣನು ತನ್ನ ಅಣ್ಣ ಬಲರಾಮನೊಂದಿಗೆ ದೇವಕೀ ವಸುದೇವರಿದ್ದಲ್ಲಿಗೆ ಬಂದು ಅವರ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿದನು. ಆಗ ವಸುದೇವ ದೇವಕಿಯರು ತಮ್ಮ ಅಡಿದಾವರೆಗಳಿಗೆ ಮುಡಿತಾಕಿಸಿ, ನಡುಬಾಗಿಸಿ ಪೊರುಮಾಡುವ ಆ ಮುದ್ದು ಮಕ್ಕಳನ್ನು ಎತ್ತಿ ಹಿಡಿದು ಮೇಲಕ್ಕೆ ಎಬ್ಬಿಸಿದರು. ಪ್ರೀತಿಯಂದ ಭರದಿಂದ ಬಿಗಿದಪ್ಪಿದರು. ಕೃಷ್ಣನು ಹುಟ್ಟಿದ ಕೂಡಲೆ ಹೇಳಿದ ಮಾತುಗಳನ್ನು ನೆನೆದು ಅವನಿಗೆ ನಮಸ್ಕಾರ ಮಾಡಿ ಸ್ತೋತ್ರ ಮಾಡಿದರು.

**ಪ್ರಸೀದ ದೇವ ದೇವೇಶ, ದೇವಾನಾಂ ಪ್ರವರಪ್ರಭೋ।**
**ತಥಾವಯೋ ಪ್ರಸಾದೇನ ಕೃತಾಬ್ಯುದ್ಧಾರ ಕೇಶವ॥**

ಕೃಷ್ಣ ನೀನು ದೇವತೆಗಳಲ್ಲಿ ಶ್ರೇಷ್ಠನೆನಿಸಿರುವೆ. ಅದಕ್ಕಾಗಿ ನಿನಗೆ ದೇವದೇವೇಶ ಎಂದು ಕರೆಯುವರು. ನಮ್ಮ ಮೇಲೆ ಪ್ರಸನ್ನನಾಗು. ನಮ್ಮಿಬ್ಬರನ್ನು ಉದ್ಧರಿಸು. ನೀನು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದಕ್ಕಾಗಿ ನಮ್ಮ ಮನೆಯಲ್ಲಿ ಅವತರಿಸಿ ಬಂದದ್ದರಿಂದ ನಮ್ಮ ಕುಲವೇ ಪವಿತ್ರವಾಯಿತು. ನಾವಿಬ್ಬರು ಹಿಂದಿನ ಜನ್ಮದಲ್ಲಿ ನಿನ್ನನ್ನು ಏನು ತಪಸ್ಸು ಮಾಡಿ ಆರಾಧಿಸಿದ್ದೇವೋ? ಅದು ನಿನಗೇ ಗೊತ್ತು. ನೀನು ಸರ್ವಾಂತರ್ಯಾಮಿ, ಸರ್ವಸ್ವಾಮಿ. ನೀನು ಗೋವುಗಳಿಗೆ, ಗೋಪಾಲಕರಿಗೂ ಮಾತ್ರ ಸ್ವಾಮಿಯಲ್ಲ ಭಯ ಭ್ರಾಂತನಾದ ನನಗೂ ಸ್ವಾಮಿಯಾಗಿರುವೆ. ನಿನ್ನ ಮಾಯೆಯಿಂದಲೆ ನಾನು ಕೂಡ ಮೋಹಿತನಾಗಿ ಮತಿಗೆಟ್ಟು ನಿನ್ನನ್ನು ನನ್ನ ಮಗ ಎಂದೇ ಭಾವಿಸಿದೆ. ಕಂಸನಿಗೆ ಹೆದರಿ ಹುಟ್ಟಿದ ಕೂಡಲೆ ನಿನ್ನನ್ನು ಗೋಕುಲಕ್ಕೆ ಹೋಗಿ ಬಿಟ್ಟು ಬಂದೆ. ನೀನು ಯಶೋದಾ ನಂದಗೋಪರ ಮಗನಾಗಿ ಅಲ್ಲಿಯೆ ಬೆಳೆದು ಅವರ ಭಯಾಪಾಯಗಳನ್ನೆಲ್ಲ ಕಳೆದು ಆದಾಗ ಅಲ್ಲಿಗೆ ಒಕ್ಕರಿಸಿದ ದುಷ್ಟ ರಕ್ಕಸರನ್ನೆಲ್ಲ ನೆತ್ತರ ಕಕ್ಕಿಸಿದೆ, ಮಣ್ಣು ಮುಕ್ಕಿಸಿದೆ. ಇಂದ್ರಾದಿ ದೇವತೆಗಳಿಂದ ಸಾಧ್ಯ ಇಲ್ಲದ ಅನೇಕ ಕಾರ್ಯಗಳನ್ನು ಸರ್ವವ್ಯಾಪಿಯಾದ ಮಹಾವಿಷ್ಣು ಎನಿಸಿದ ನೀನು ಜಗದೋದ್ಧಾರಕ್ಕಾಗಿ ಹಾಗೂ ಲೋಕೋಪಕಾರಕ್ಕಾಗಿ ಮಾಡಿರುವೆ. ನಮ್ಮ ಮನಸ್ಸಿಗೆ ಕವಿರಿದ್ದ ಮಹಾಮೋಹವು ಅಥವ ಬಾರಿ ಅಜ್ಞಾನವು ಇಂದಿಗೆ ನಿವೃತ್ತವಾಯಿತು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತನೆಯ ಅಧ್ಯಾಯ ಮುಗಿದುದು*

—o—

## ತಂದೆತಾಯ್ಗಳ ಬಂಧಮೋಚನ

**ವ್ಯಾಸ:-** ಭಗವಂತನ ಅತ್ಯದ್ಭುತವಾದ ಲೋಕ ವಿಲಕ್ಷಣ ಅನೇಕ ಕಾರ್ಯಗಳನ್ನು ಕಂಡು ಕೇಳಿ ವಸುದೇವ ದೇವಕಿಯರಿಗೆ ಕೃಷ್ಣನ ವಿಷಯದಲ್ಲಿ ಯಥಾರ್ಥವಾದ ದಿವ್ಯ ಜ್ಞಾನವುಂಟಾಗಿತ್ತು. ಅದರಿಂದಾಗಿ ಅವರು ಶ್ರೀಕೃಷ್ಣನ ಪರಬ್ರಹ್ಮ ಸ್ವರೂಪವನ್ನು ಗುರುತಿಸಿ ಚೆನ್ನಾಗಿ ಅರಿತು ಭಗವತ್ತತ್ವವನ್ನು ಮನದಟ್ಟು ಮಾಡಿಕೊಂಡು ಪ್ರಮೇಯ ಗರ್ಭಿತವಾದ ಸ್ತೋತ್ರವನ್ನು ಮಾಡಿದರು. ಇದರಂತೆ ಯಾದವರೆಲ್ಲರಿಗೂ ಶ್ರೀಕೃಷ್ಣನ ಸಮ್ಯಗ್‌ದರ್ಶನ ಆಗಿತ್ತು ಹೀಗಾದರೆ ಮುಂದೆ ತನ್ನ ಅವತಾರಲೀಲೆಗಳನ್ನು ಮುಂದುವರಿಸಲು ತೊಂದರೆಯಾಗಬಹುದೆಂದು ಅನಿಸಿತು ಆ ಭಗವಂತನಿಗೆ. ಕೂಡಲೆ ಅವನು ಮೋಹಕವಾದ ಮಧುರ ಮಂದಹಾಸ ಮಾಡಿದ. ತನ್ನ ವಿಷ್ಣು ಮಾಯೆಯನ್ನು ಬೀಸಿದ ಮತ್ತು ಭಕ್ತಿಯಿಂದ ತನ್ನ ನೈಜ ಪಿತೃಗಳಿಗೆ ಪೊರೆಮಟ್ಟು ಕೈಜೋಡಿಸಿ ನುಡಿದ.

''ನನ್ನ ನಿಜವಾದ ತಾಯಿತಂದೆಯರೆ, ಬಹುದಿನಗಳಿಂದ ನಾವಿಬ್ಬರು ನಿಮ್ಮನ್ನು ನೋಡಲು ಹಾತೊರೆಯುತ್ತಿದ್ದೆವು. ಆದರೆ ಕಂಸನ ಹೆದರಿಕೆ ಇದ್ದಿತಲ್ಲ! ಮತ್ತು ದುಷ್ಟ ಕಂಸನು ಆಗಾಗ ಅಲ್ಲಿಗೆ ಕಳಿಸುತ್ತಿದ್ದ ಘೋರ ದೈತ್ಯರ ಕತೆಯನ್ನು ನಾನು ಅಲ್ಲಿಯೆ ನಿಂತು ಮುಗಿಸ ಬೇಕಾಗಿತ್ತು. ಅಲ್ಲಿಗೆ ಬಂದ ದುರುಳ ದುರಾತ್ಮರನ್ನೆಲ್ಲ ಕೊಂದು ಯಮಪುರಿಗೆ ಕಳಿಸುವವರೆಗೆ ನಾನು ಗೋಕುಲ ಬಿಟ್ಟುಬರುವಂತೆ ಇರಲಿಲ್ಲ. ಈಗ ಬಂದೆವು. ನಿಮ್ಮನ್ನು ನೋಡಿದೆವು. ಮನಸ್ಸಿಗೆ ಆನಂದವಾಯಿತು. ಆದರೆ ಇಷ್ಟುದಿನ ಬಾರದೆ, ನಿಮಗೆ ಮುಖವನ್ನು ತೋರದೆ ಇದ್ದ ನಮ್ಮ ಅಪರಾಧವನ್ನು ಕ್ಷಮಿಸಿರಿ. ತಾಯಿ, ತಂದೆ, ಗುರು, ದೇವ ಬ್ರಾಹ್ಮಣ ಮೊದಲಾದವರ ರಕ್ಷಣೆ, ಸೇವನೆ, ಆರಾಧನೆ ಮಾಡದ ಮನುಷ್ಯನ ಜನ್ಮ ವ್ಯರ್ಥವೆ ಸರಿ.'' ಹೀಗೆ ಹೇಳಿ ತಮ್ಮ ತಂದೆತಾಯಿಗಳನ್ನು ಸಂತೈಸಿ ಬಂಧುಭಾಂದವರನ್ನೆಲ್ಲ ತಕ್ಕೈಸಿ ರಾಮಕೃಷ್ಣರು ರಂಗಶಾಲೆಗೆ ಬಂದರು. ಅಲ್ಲಿ ಪಿಡಿದು ಒಡೆದು ಛಿನ್ನ ವಿಚ್ಛಿನ್ನವಾಗಿ ಬಿದ್ದ ಕಂಸನ ಶವದ ಸುತ್ತಲು ಅವನ ಮಡದಿಯರು, ತಾಯಿಯು, ಪರಿವಾರದವರು ಕುಳಿತು ಎದೆಎದೆ ಬಡಿದುಕೊಂಡು ಗಟ್ಟಿಯಾಗಿ ಅಳುತ್ತಿದ್ದರು. ಅವರೆಲ್ಲರನ್ನು ಕೃಷ್ಣನು ಸಮಯೋಚಿತ ಮಾತುಗಳಿಂದ ಸಾಂತ್ವನಗೊಳಿಸಿದನು. ಅನಂತರ ಆ ಮಧುಸೂದನನು ಕಂಸನು ಕಾರಾಗೃಹದಲ್ಲಿಟ್ಟ ಅವನ ತಂದೆ ಉಗ್ರಸೇನನ ಬಳಿಗೆ ಬಂದನು! ತಕ್ಷಣದಲ್ಲಿ ಅವನ ಕೈಕಾಲುಗಳಿಗೆ ಜಡಿದ ಬೇಡಿಗಳನ್ನು ಕಡಿದು ಬಂದೀ ಮನೆಯಿಂದ ಬಂಧ ಮುಕ್ತನನ್ನಾಗಿ ಮಾಡಿದನು ಹಾಗೂ ಕಂಸನ ಸಾಮ್ರಾಜ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿ ಸ್ವಯಂ ನಿಂತು ಪಟ್ಟಾಭಿಷೇಕ ಮಾಡಿಸಿದನು. ರಾಜ್ಯಾಭಿಷಿಕ್ತ ನಾದ ಉಗ್ರಸೇನ ಮಹಾರಾಜನು ಕಂಸನೆ ಮೊದಲಾದ ಯುದ್ಧದಲ್ಲಿ ಮಡಿದ ಬಂಧು ಬಾಂಧವರಿಗೆಲ್ಲ ಔರ್ಧ್ವದೈಹಿಕ ಕೃತ್ಯಗಳನ್ನು ವಿಧಿಪೂರ್ವಕವಾಗಿ ನೆರವೇರಿಸಿದನು.

ಈ ರೀತಿಯಾಗಿ ಕಂಸನ ತಂದೆಯಾದ ಉಗ್ರಸೇನನು ಶಾಸನ ಬದ್ಧನಾಗಿ ರಾಜ್ಯಾರೂಢ ನಾದ ಬಳಿಕ ಶ್ರೀಕೃಷ್ಣನು ವಾಯುವನನ್ನು ಕರೆದು ಅಧಿಕಾರವಾಣಿಯಿಂದ ಆಜ್ಞಾಪಿಸಿದನು. ವಾಯುವಿನ ಮುಖಾಂತರ ಇಂದ್ರದೇವನಿಗೆ ಸಂದೇಶವನ್ನು ಆದೇಶರೂಪವಾಗಿ ಕಳುಹಿಸಿಕೊಟ್ಟನು.

"ದೇವೇಂದ್ರ, ಈಗ ನಿನ್ನ ಅಮರಾವತಿಯ ಒಡ್ಡೋಲಗದಲ್ಲಿರುವ ಸುಧರ್ಮ ಸಭೆಯನ್ನು, ಮಥುರಾಪಟ್ಟಣದಲ್ಲಿರುವ ಉಗ್ರಸೇನ ಮಹಾರಾಜನಿಗೆ ಕಳುಹಿಸಿಕೊಡು. ಸುಧರ್ಮ ಎಂಬ ಆ ಸಭಾರತ್ನವು ಯದುವಂಶದ ರಾಜರು ಮಂಡಿಸಲು ಅರ್ಹವಾಗಿದೆ. ಈ ವಿಷಯದಲ್ಲಿ ಗರ್ವವನ್ನು ಪಡಬೇಡ ಬೇಗ ಕಳುಹಿಸಿಕೊಡು."

ಕೃಷ್ಣನ ಸಂದೇಶವನ್ನು ಮಹೇಂದ್ರನು ಮನ್ನಿಸಿ ಮರಮಾತಾಡದೇ ಮಾರುತ ನೊಡನೆ ಆ ಸುಧರ್ಮ ಸಭೆಯನ್ನು ಮಧುರೆಗೆ ಕೊಟ್ಟು ಕಳುಹಿಸಿದನು. ವಾಯುದೇವನು ಅದನ್ನು ತಂದು ಯಾದವರ ರಾಜಧಾನಿಯಲ್ಲಿ ಇರಿಸಿದ ಬಳಿಕ ಉಗ್ರಸೇನನೆ ಮೊದಲಾದ ಯದುವೀರ ರೆಲ್ಲರು ಮಣಿ, ಮುತ್ತು, ರತ್ನಗಳಿಂದ ಕೆತ್ತಲ್ಪಟ್ಟ ಆ ದಿವ್ಯ ಸಭೆಯಲ್ಲಿ ಕುಳಿತು ರಾರಾಜಿಸಿದರು.

## ಸಾಂದೀಪನಿಯಲ್ಲಿ ಶಸ್ತ್ರಶಾಸ್ತ್ರಗಳ ಅಧ್ಯಯನ

ಹೀಗೆ ಉಗ್ರಸೇನನ ಸಾಮ್ರಾಜ್ಯವನ್ನು ಸಮೃದ್ಧಿಗೊಳಿಸಿ ನಿರಾತಂಕವನ್ನಾಗಿ ಮಾಡಿ, ಬಲರಾಮ ಕೃಷ್ಣರಿಬ್ಬರು ವಿದ್ಯಾಧ್ಯಯನಕ್ಕಾಗಿ ಯೋಗ್ಯ ಗುರುವನ್ನು ಹುಡುಕ ಹೊರಟರು. ಅವಂತೀಪುರದಲ್ಲಿ ಆ ಕಾಲದಲ್ಲಿ ಸಾಂದೀಪನಿ ಎಂಬ ವಿಪ್ರೋತ್ತಮನು ಇರುತ್ತಿದ್ದ. ಅವನು ಪ್ರತಿಭಾಪರ್ವತ, ಅರಿವಿನ ಆಗರ. ಜ್ಞಾನದ ಸಾಗರ. ರಾಮಕೃಷ್ಣರಿಬ್ಬರು ಅವರಲ್ಲಿ ಶಿಷ್ಯವೃತ್ತಿಯನ್ನು ಕೈಕೊಂಡರು. ಶಸ್ತ್ರವಿದ್ಯೆ, ಶಾಸ್ತ್ರವಿದ್ಯೆ ಕಲಿಸಿಕೊಡಬೇಕೆಂದು ಕೇಳಿಕೊಂಡರು. ರಾಮಕೃಷ್ಣರು ಸಾಂದೀಪನಿಯಲ್ಲಿ ಇದ್ದದ್ದು ಎರಡು ತಿಂಗಳು ಮಾತ್ರ. ಅಷ್ಟು ಅಲ್ಪಾವಧಿಯಲ್ಲಿ ಕಲಿತದ್ದು ಆಯುರ್ವೇದ, ಧನುರ್ವೇದ, ಚತುರ್ವೇದ, ಮೊದಲಾದ ಅರವತ್ನಾಲ್ಕು ವಿದ್ಯೆಗಳನ್ನು ಕಲಿತರು. ಸರ್ವ ಶಸ್ತ್ರಾಸ್ತ್ರಗಳ ರಹಸ್ಯ ಪ್ರಯೋಗ, ಉಪಸಂಹಾರ, ಬ್ರಹ್ಮವಿದ್ಯೆಯ ಗೂಢಪ್ರಮೇಯ. ಎಲ್ಲವು ಅವರಿಗೆ ಅರವತ್ನಾಲ್ಕು ದಿನಗಳಲ್ಲಿ ಕರತಲಾಮಲಕವಾಯಿತು. ಗುರುಗಳಾದ ಸಾಂದೀಪನಿ ಮುನಿಗೆ ಅತ್ಯಾಶ್ಚರ್ಯ. ಅರವತ್ನಾಲ್ಕು ದಿನಗಳಲ್ಲಿ ಅರವತ್ನಾಲ್ಕು ವಿದ್ಯೆಗಳನ್ನು ಅರಿತು ತಮಗೂ ಕೂಡ ತಿಳಿಯದ ಬೇರೆ ಯಾರಿಗೂ ಹೊಳೆಯದ ಆ ಎಲ್ಲ ವಿದ್ಯೆಗಳ ರಹಸ್ಯಾರ್ಥಗಳನ್ನು ಕೂಡ ತಿಳಿದುಕೊಂಡ ರಾಮಕೃಷ್ಣರ ಮೇಧಾ ಶಕ್ತಿಯನ್ನು ನೋಡಿ 'ಇವರು ಸಾಮಾನ್ಯ ಮಾನವರಲ್ಲ ಅತಿಮಾನವರು, ದೇವಗಣದಲ್ಲಿಯ ಸೂರ್ಯ ಚಂದ್ರರೊ, ಅಶ್ವಿನೀ ದೇವತೆಗಳೋ, ಶಿವಕೇಶವರೊ, ಯಾರೋ ಮನುಷ್ಯ ರೂಪದಿಂದ ಅವತರಿಸಿ ಬಂದಿದ್ದಾರೆ ಎಂಬುದು ನಿಶ್ಚಯವಾಯಿತು."

ಅಧ್ಯಯನ ಮುಗಿಸಿ ಮಥುರೆಗೆ ಮರುಳುವ ಮುನ್ನ ಆ ಯದು ಬಂಧುಗಳು ಸಾಂದೀಪನಿ ಮುನಿಗೆ ವಂದಿಸಿಕೇಳಿದರು. "ಗುರುಗಳೇ, ಇಂಥ ಅಪೂರ್ವಜ್ಞಾನ ಭಂಡಾರವನ್ನೆ, ನೀಡಿದ ತಮಗೆ ನಾವು ಗುರುದಕ್ಷಿಣೆಯನ್ನು ಏನು ಕೊಡಬೇಕು. ಆಜ್ಞಾಪಿಸಿರಿ."

ಆಗ ಸಾಂದೀಪನಿ ಮಹಾಮುನಿಗಳು ರಾಮಕೃಷ್ಣರ ಮಹಾಮಹಿಮೆಯನ್ನು ದೇವೀ ಶಕ್ತಿಯನ್ನು ಮನಗಂಡು ನುಡಿದರು. "ಮಹಾನುಭಾವರೇ, ನಿಮ್ಮ ಶಕ್ತಿ ಅತ್ಯದ್ಭುತ. ನಿಮ್ಮ ಕರ್ಮ ಅಗಾಧ. ಇಂದ್ರಿಯಗಳಿಗೆ ಗೋಚರವಾಗದಂತಹ ಅದ್ಭುತ ಕಾರ್ಯಗಳನ್ನು ನೀವು ಲೀಲಾಜಾಲವಾಗಿ ಮಾಡಬಲ್ಲಿರಿ. ಪ್ರಭಾಸ ತೀರ್ಥದಲ್ಲಿ ಸಮುದ್ರ ಸ್ನಾನಕ್ಕೆ ಹೋದಾಗ ನನ್ನ ಮಗ ನೀರಲ್ಲಿ ಮುಳುಗಿ ಮರಣ ಹೊಂದಿದ, ಅವನನ್ನು ಮರಳಿ ತಂದು ಕೊಡಿರಿ."

ಆಗ ರಾಮಕೃಷ್ಣರು ಶಸ್ತ್ರಾಸ್ತ್ರಗಳನ್ನು ಧರಿಸಿ ಉಪ್ಪಿನ ಕಡಲಿಗೆ ಹೋಗಿ ಸಮುದ್ರ ರಾಜನಿಗೆ ತಮ್ಮ ಗುರುಪುತ್ರನನ್ನು ತಂದು ಒಪ್ಪಿಸು ಎಂದು ಕೇಳಿದರು. ಅದಕ್ಕೆ ಆ

ಸಮುದ್ರರಾಜನು ಕೃಷ್ಣನಿಗೆ ಕೈ ಮುಗಿದು "ನಿಮ್ಮ ಗುರುಪುತ್ರನನ್ನು ಅಪಹರಿಸಿದವನು ನಾನಲ್ಲ. ಪಂಚಜನ ಎಂಹ ದೈತ್ಯನು ನಿಮ್ಮ ಗುರುಸುತನನ್ನು ಕೊಂಡೊಯ್ದಿದ್ದಾನೆ. ಅವನು ನನ್ನ ಅಂತರ್ಜನದಲ್ಲಿಯೆ ಅಡಗಿದ್ದಾನೆ ಎಂದು ಹೇಳಿದ.

ಲವಣ ಸಮುದ್ರದ ಈ ಮಾತನ್ನು ಕೇಳಿ ಕೃಷ್ಣನು ಕೂಡಲೆ ನೀರಿನ ಆಳಕ್ಕೆ ಇಳಿದನು. ಸಾಗರಗರ್ಭದಲ್ಲಿ ಅಡಗಿದ ಪಂಚಜನ ದೈತ್ಯನನ್ನು ಸಂಹರಿಸಿದನು. ಅವನ ಮೂಳೆಗಳಿಂದ ಮೈದಾಳಿದ ಪಾಂಚಜನ್ಯ ಎಂಬ ಶ್ರೇಷ್ಠ ಶಂಖವನ್ನು ತೆಗೆದುಕೊಂಡು ಬಂದನು. ಆ ಶಂಖವನ್ನು ಊದುತ್ತ ಅಣ್ಣನೊಡನೆ ಯಮಪಟ್ಟಣಕ್ಕೆ ಹೋದನು, ಯಮನನ್ನು ಕೇಳಿದನು. "ಎಲ್ಲಿ ಇರುತ್ತಾನೆ ಸಾಂದೀಪನಿ ಕುಮಾರ ಬೇಗ ತಂದುಕೊಡು" ಎಂದು ಯುದ್ಧಮಾಡಿ ಅವನನ್ನು ಗೆದ್ದು ಸಾಂದಿಪನಿ ಕುಮಾರನನ್ನು ಯಮನ ಸೆರೆಯಿಂದ ಬಿಡಿಸಿ ಅವನ ತಂದೆಗೆ ಒಪ್ಪಿಸಿದರು. ಆದರಿಂದ ಆನಂದ ಹೊಂದಿದ ಸಾಂದಿಪನೀ ದಂಪತಿಗಳು ಭಗವಂತನಿಗೆ ಕೃತಜ್ಞರಾಗಿ ವಂದಿಸಿದರು. ಗುರುದಕ್ಷಿಣೆ ಸಂದಿತೆಂದು ಸಂತಸದಿಂದ ಅವರಿಬ್ಬರನ್ನು ಮಥುರಾ ಪಟ್ಟಣಕ್ಕೆ ಬೀಳ್ಕೊಟ್ಟರು.

ಅನಂತರ ಬಲರಾಮ ಶ್ರೀಕೃಷ್ಣರು ಉಗ್ರಸೇನ ಮಹಾರಾಜನಿಂದ ಪರಿಪಾಲಿತವಾದ ಯಾದವರ ರಾಜಧಾನಿಗೆ ಬಂದು ತಮ್ಮ ಬಂಧು ಬಾಂಧವರೊಂದಿಗೆ ಆನಂದದಿಂದ ನೆಲಸಿದರು.

## ಜರಾಸಂಧನ ಪಲಾಯನ

**ವ್ಯಾಸ:-** ಕಂಸನಿಗೆ ಇಬ್ಬರು ಮಡದಿಯರು ಆಸ್ತಿ, ಪ್ರಾಸ್ತಿ ಎಂದು ಅವರಿಬ್ಬರೂ ಜರಾಸಂಧನ ಪುತ್ರಿಯರು. ತನ್ನ ಇಬ್ಬರು ಹೆಣ್ಣು ಮಕ್ಕಳ ಗಂಡನನ್ನು ಶ್ರೀಕೃಷ್ಣನು ವಧಿಸಿದ ಎಂದು ತಿಳಿದು ಮಗಧಾಧಿಪತಿಯಾದ ಜರಾಸಂಧ ಕೋಪದಿಂದ ಕೆರಳಿ ಕೆಂಡವಾದ. ಆ ಜರಾಸಂಧ ಮಹಾ ಬಲಾಢ್ಯ, ಧನಾಢ್ಯ ಮತ್ತು ಗರ್ವ್ಯಾಢ್ಯನೂ ಆಗಿದ್ದ. ತನ್ನ ಪುತ್ರಿಯರ ವೈಧವ್ಯಕ್ಕೆ ಕಾರಣನಾದ ಕೃಷ್ಣನನ್ನು ಯಾದವರನ್ನು ಸಂಹರಿಸಿ ಬಿಡಬೇಕೆಂದು ಸಂಕಲ್ಪ ಮಾಡಿದ ಪ್ರಚಂಡ ಸೇನೆಯನ್ನು ಕೂಡಿಸಿದ. ಮಥುರಾ ಪಟ್ಟಣದ ಮೇಲೆ ದಂಡೆತ್ತಿ ಬಂದ. ತನ್ನ ಇಪ್ಪತ್ತುಮೂರು ಅಕ್ಷೋಹಿಣೀ ಸೈನ್ಯದಿಂದ ಮಥುರೆಗೆ ಬಲವಾದ ಮುತ್ತಿಗೆ ಹಾಕಿದ. ಆಗ ಬಲರಾಮ ಕೃಷ್ಣರು ಯಾದವ ವೀರರೊಡನೆ ಕೂಡಿಕೊಂಡು ಜರಾಸಂಧನ ಅಪರಂಪಾರವಾದ ಆ ಸೇನಾಸಾಗರವನ್ನು ಧೈರ್ಯದಿಂದ ಎದುರಿಸಿದರು. ಯಾದವರ ಸೈನ್ಯವು ಸಂಖ್ಯೆಯಲ್ಲಿ ಅತ್ಯಲ್ಪವಾದರೂ ಬಲರಾಮ ಕೃಷ್ಣರಂಥ ಸಮರ್ಥ ನಾಯಕರ ನೇತೃತ್ವವು ಇದ್ದುದರಿಂದ ಅದು ಜರಾಸಂಧನ ಪ್ರಚಂಡ ಸೇನಾ ಸನ್ನಾಹಕ್ಕೆ, ಯಮಗಂಡ ಪ್ರಾಯವಾಗಿತ್ತು. ರಾಮ ಕೃಷ್ಣರು ನೆನೆದ ಕೂಡಲೆ ಅಂತರಿಕ್ಷದಿಂದ ಅವರ ಆಯುಧಗಳಾದ ಸುದರ್ಶನ ಚಕ್ರ, ಶಾರಂಗ ಧನುಸ್ಸು, ಅಕ್ಷಯ ಬತ್ತಳಿಕೆ, ಕೌಮೋದಕೀ ಗದೆ, ಶ್ರೀಕೃಷ್ಣನ ಕೈಗೆ ಬಂದು ಕೂತವು. ಬಲರಾಮನಿಗೆ ಪ್ರಿಯವಾದ ಸುನಂದ ಎಂಬ ನೇಗಿಲವೂ (ಒನಕೆ) ಮುಸಲಾಯುಧವೂ ಅವನ ಕೈಯನ್ನು ಬಂದು ಅಲಂಕರಿಸಿದವು. ಹೀಗೆ ಅಮೋಘವಾದ ದಿವ್ಯಾಸ್ತ್ರಗಳಿಂದ ಸಿದ್ಧರಾಗಿ ರಾಮಕೃಷ್ಣರು ಕಲಿತನದಿಂದ ಕಾದಿ ಜರಾಸಂಧನ ಸೈನ್ಯವನ್ನೆಲ್ಲ ಮುರಿದೊಟ್ಟಿದರು ಜರಾಸಂಧನ ಸೈನ್ಯವೆಲ್ಲವೂ ಪರಾಜಿತವಾಗಿ ಪಲಾಯನ ಸೂಕ್ತ್ರವನ್ನು ಪಠಿಸಿತು. ಧೈರ್ಯದಿಂದ ಸಮರಾಂಗಣದಲ್ಲಿ ನಿಂತರು ಹತಪತಿತರಾಗಿ ಧಾರಾತೀರ್ಥದಲ್ಲಿ

ಬಿದ್ದು ಧರಾಶಾಯಿಯಾದರು. ಆದರೆ ಜರಾಸಂಧನು ಮಾತ್ರ ಸೋತರೂ, ರಣರಂಗದಿಂದ ಪಾರಾಗಿ ಓಡಿಹೋಗಿ ತಲೆಮರೆಸಿಕೊಂಡ. ಮುಖ್ಯ ವೈರಿಯಾದ ಜರಾಸಂಧನು ಯುದ್ಧದಲ್ಲಿ ಸಾಯದೆ ಬದುಕಿ ಉಳಿದಿದ್ದರಿಂದ ಅವನು ಪೂರ್ಣ ಸೋತಂತೆ ಆಗಲಿಲ್ಲ ಎಂದು ಕೃಷ್ಣ ಭಾವಿಸಿದನು.

ಜರಾಸಂಧ ಕೆಲವು ದಿನಗಳ ಬಳಿಕ ಸೇಡುಗುದುರೆಯ ಸವಾರಿಯಾಗಿ ಮತ್ತೆ ಮಥುರೆಯ ಮೇಲೆ ಎರಗಿದ. ಈ ಸಲವೂ ರಾಮಕೃಷ್ಣರಿಂದ ಅವನ ಸೇನೆಯಲ್ಲವೂ ಸಾವನ್ನು ಅಪ್ಪಿ ವೀರಸ್ವರ್ಗವನ್ನು ಹೊಂದಿತು. ಆದರೆ ಜರಾಸಂಧನು ಮಾತ್ರ ಸೋಲುವ ಸಮಯ ಬಂದಾಗ ಸಾವಿಗೆ ಹೆದರಿ ಯುದ್ಧದಲ್ಲಿ ಬೆನ್ನು ತೋರಿಸಿ ಓಡಿಹೋಗಿ ಮತ್ತೂ ಬದುಕಿ ಉಳಿದ. ಹೀಗೆ ಮತ್ತೆ ಯುದ್ಧ, ಮತ್ತೆ ಸೋಲು. ಅಸಂಖ್ಯ ಸೈನಿಕರ ಸಾವು, ಜರಾಸಂಧನ ಸೋಲು. ಹೀಗೆ ಈ ಘಟನೆಯ ಪುನರಾವರ್ತಿ ಆಗುತ್ತಲೇ ಹೋಯಿತು. ಹೀಗೆ ಜರಾಸಂಧ ಹದಿನೆಂಟು ಸಲ ಮಥುರೆಯ ಮೇಲೆ ಏರಿ ಬಂದ. ಹೊಸ ಸೈನ್ಯ ಕೂಡಿಸಿ ಯಾದವರೊಡನೆ ಹೋರಾಡಿದ. ತಾನು ಕೂಡಿಸಿಕೊಂಡು ಬಂದ ಸೈನಿಕರನ್ನೆಲ್ಲ ಮೃತ್ಯು ಮುಖದಲ್ಲಿ ದೂಡಿ ತಾನು ಮಾತ್ರ ಓಡಿಹೋಗಿ ತಲೆ ಮರೆಸಿಕೊಂಡು ಜೀವ ಉಳಿಸಿಕೊಂಡು ಮತ್ತೆ ಯುದ್ಧಕ್ಕೆ ಸನ್ನದ್ಧನಾಗುತ್ತಿದ್ದ ಬೇರೆ ಸೈನಿಕವೀರ ತಂಡದೊಡನೆ.

ಹೀಗೆ ಅತ್ಯಲ್ಪವಾದ ಯಾದವ ಸೈನ್ಯವು ಶ್ರೀಕೃಷ್ಣನಿಂದ ಯಾವದೇ ಆಪತ್ತು. ಕುತ್ತು, ಮೃತ್ಯು ಇಲ್ಲದೆ ಅಕ್ಷತವಾಗಿ ರಕ್ಷಿಸಲ್ಪಟ್ಟಿತು. ಮೃತ್ಯುವಿಗೂ ನಿಯಾಮಕನಾದ ಅಂತಕಾಂತಕ ನಾದ ಶ್ರೀಕೃಷ್ಣನ ವಿಷಯದಲ್ಲಿ ಇದೇನು ಕೌತುಕವಲ್ಲ. ಇಚ್ಛಾಮಾತ್ರ ದಿಂದಲೇ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರ ಮಾಡುವ ಆ ಪರಮೇಶ್ವರನಿಗೆ ಜರಾಸಂಧನಂಥ ಕ್ಷುದ್ರನ ಸೇನಾ ಬಲವನ್ನು ನಾಶಮಾಡಲಿಕ್ಕೆ ಏನು ಪ್ರಯತ್ನ ಮಾಡಬೇಕಾಗುವುದು. ಆ ಕೃಷ್ಣನು ವೈರಿ ಸೈನ್ಯವನ್ನು ಸಂಹರಿಸಲಿಕ್ಕೆ ಶಸ್ತ್ರಾಸ್ತ್ರ ಪ್ರಯೋಗ ಮಾಡಿದ್ದು ಕೂಡ ಲೋಕ ವಿಡಂಬನೆಯೇ ಸರಿ. ಅವನ ಇಚ್ಛಾಮಾತ್ರದಿಂದಲೆ ಸರ್ವಲೋಕ ಸಂಹಾರವಾಗುವಾಗ ಇದೇನು ಮಹಾ! ಆದರೂ ಅವನು ಮಾನವನಾಗಿ ಹುಟ್ಟಿಲ್ಲವೆ? ಆದುದರಿಂದ ಮನುಷ್ಯಜನ್ಮಕ್ಕೆ ಉಚಿತವಾಗಿ ನಡೆಯುವುದು, ನುಡಿಯುವುದು ನ್ಯಾಯಪ್ರಾಪ್ತವಾಗಿದೆ. ಆದುದರಿಂದಲೆ ಅವನು ಮಾನವರ ರೀತಿಯನ್ನು ಅವಲಂಬಿಸಿ ತನಗಿಂತ ಅತ್ಯಂತ ಹೀನ ಬಲರಾದವರ ಜೊತೆಗೂ ಕೂಡ ಯುದ್ಧಮಾಡಿದಂತೆ, ಒಮ್ಮೊಮ್ಮೆ ಸಂಧಿ ಮಾಡಿದಂತೆ, ಪ್ರಸಂಗ ಬಂದಾಗ ಹೆದರಿ ಓಡಿದಂತೆ ಮತ್ತು ವೈರಿ ವೃಂದದ ಮೇಲೆ ಸಾಮ, ದಾನ, ಭೇದ, ದಂಡ ಎಂಬ ಚತುರ್ವಿಧ ಉಪಾಯಗಳನ್ನು ಪ್ರಯೋಗಿಸಿದಂತೆ ಮಾಡಿ ಆಡಿ ತೋರಿಸುತ್ತಾನೆ. ಇದೆಲ್ಲವು ಅವನಿಗೊಂದು ಲೀಲೆ. ಅವನ ಇಚ್ಛೆಯಿಂದ ಈ ಜಗಚ್ಚಕ್ರಮ ಪ್ರವರ್ತಿತವಾಗುತ್ತದೆ.

## ಮುಚಕುಂದ ಉದ್ಧಾರ

**ವೇದವ್ಯಾಸ:-** ಹಿಂದೆ ಒಂದು ಸಲ ದ್ವಾರಕಾ ಪಟ್ಟಣದಲ್ಲಿ ಒಂದು ದುರಂತ ಘಟನೆ ಆಗಿ ಹೋಯಿತು. ಗರ್ಗವಂಶದಲ್ಲಿ ಹುಟ್ಟಿದ ಒಬ್ಬ ಬ್ರಾಹ್ಮಣ ಇದ್ದು ಗಾರ್ಗ್ಯಯೆಂದು ಅವನ ಹೆಸರು. ಅವನನ್ನು ಅವನ ಭಾವ ಮೈದನನೆ ಷಂಢ ಎಂದು ನಿಂದಿಸಿದ. ಆಗ ಅಲ್ಲಿ ನೆರೆದ ಯಾದವ ಕುಮಾರರೆಲ್ಲರೂ ಬಡ ಬ್ರಾಹ್ಮಣನಾದ ಗಾರ್ಗ್ಯನನ್ನು ಉಪಹಾಸ

ಗೈದರು. ಅದರಿಂದ ಆ ಗಾರ್ಗ್ಯನಿಗೆ ಕಡುಕೋಪ ಬಂದಿತು. ಆದರೂ ಅವನು ಅವರಿಗೆ ಶಾಪಕೊಡದೆ ರುದ್ರದೇವರನ್ನುಕುರಿತು ತಪಸ್ಸು ಮಾಡಿದ. ಆ ತಪೋನುಷ್ಠಾನ ಪ್ರಸಂಗದಲ್ಲಿ ಅವನು ಆಹಾರವನ್ನು ಪರಿತ್ಯಜಿಸಿದ. ಬರಿ ಉಕ್ಕಿನ ಪುಡಿಯನ್ನು ಮುಕ್ಕಿ ಕಠಿಣ ನಿಯಮದಿಂದ ಹನ್ನೆರಡು ವರ್ಷ ತಪಸ್ಸುಮಾಡಿದ. ಮಹಾದೇವರು ಪ್ರಸನ್ನರಾದರು. ಅವನಿಗೆ ಅಭೀಷ್ಟವಾದ ವರವನ್ನು ನೀಡಿದರು. ಪರಮೇಶ್ವರನಿಂದ ವರಪಡೆದ ಬಳಿಕ ಆ ಗಾರ್ಗ್ಯನು ತೀರ್ಥಯಾತ್ರಾರ್ಥವಾಗಿ ಯವನ ದೇಶಕ್ಕೆ ಬಂದ. ಅದರ ಅಧಿಪತಿಯಾದ ಯವನೇಶ್ವರನು ಗಾರ್ಗ್ಯಮುನಿಯನ್ನು ಆದರದಿಂದ ಸ್ವಾಗತಿಸಿದ. ಅವನಿಗೆ ವಿಶಿಷ್ಟ ಮಾನ ಮರ್ಯಾದೆಯನ್ನು ಸಲ್ಲಿಸಿದ. ಆ ಯವನ ರಾಜನಿಗೆ ಸಂತಾನ ಇರಲಿಲ್ಲ. ಅಲ್ಲಿದ್ದಾಗ ತರುಣ ಗಾರ್ಗ್ಯನಿಗೆ ಯವನ ರಾಜನ ಅಂತಃಪುರದಲ್ಲಿ ಪ್ರವೇಶ ದೊರಕಿತು. ಆ ಅರಸನ ಪಟ್ಟದರಸಿಯೊಂದಿಗೆ ಆಕಸ್ಮಿಕವಾಗಿ ಗಾರ್ಗ್ಯನಿಗೆ ಸಂಪರ್ಕವು ಉಂಟಾಯಿತು. ಅದರಿಂದ ಅವರಿಗೆ ಕಪ್ಪು ಬಣ್ಣದ ಒಬ್ಬ ಪುತ್ರ ಉತ್ಪನ್ನನಾದ. ಅವನಿಗೆ ಕಾಲಯವನ ಎಂದು ಹೆಸರಾಯಿತು. ಕಾಲಯವನನ ಅಂಗಾಂಗಗಳೆಲ್ಲವು ಕಬ್ಬಿಣದಂತೆ ಕಠಿಣ. ಅವನ ಎದೆಯು ವಜ್ರಾಯುಧದಂತೆ ಕಠೋರ. ಅವನ ವಿಲಕ್ಷಣವಾದ ಶಕ್ತಿ, ಸಾಮರ್ಥ್ಯ, ಅದಟು ಆವೇಶಗಳನ್ನು ಕಂಡು ಯವನ ದೇಶದ ರಾಜನು ತನ್ನ ಸಿಂಹಾಸನದ ಮೇಲೆ ಕಾಲಯವನನ್ನು ಕೂಡಿಸಿ ರಾಜ್ಯದಲ್ಲಿ ಪಟ್ಟಕಟ್ಟಿ ತಾನು ಕಾಡಿಗೆ ಹೋದ. ಕಾಲಯವನನು ಮಹಾ ಬಲಿಷ್ಠ ಅಷ್ಟೇ ಉನ್ಮತ್ತ. ತನ್ನ ಪ್ರಾಯ ಸಹಜವಾದ ಪ್ರತಾಪ ದಿಂದ ಉಬ್ಬಿಕೊಬ್ಬಿ ಒಂದು ಸಲ ನಾರದರನ್ನು ತಡೆದು ಕೇಳಿದ. ''ನಾರದರೆ, ಈ ಭೂಮಂಡಲದಲ್ಲಿ ನನ್ನ ಜೊತೆಗೆ ಯುದ್ಧ ಮಾಡಬಲ್ಲ ಬಲಾಢ್ಯರಾದ ವೀರರು ಯಾರಾದರೂ ಇರುವರೆ?'' ಎಂದು ಪ್ರಶ್ನೆ ಮಾಡಿದ. ಅದಕ್ಕೆ ನಾರದರು ''ಮಥುರೆಯ ಯಾದವರೆ ನಿನ್ನೊಡನೆ ಹೋರಾಡಲು ಸಮರ್ಥರಾದ ವೀರರಾಜರು'' ಎಂದು ಹೇಳಿದರು.

ಆಗ ಕಾಲಯವನನು ಆನೆ, ಕುದುರೆ, ರಥ, ಕಾಲಾಳುಗಳಿಂದ ಕೂಡಿ ಸಜ್ಜಾಗಿದ್ದ ಹತ್ತು ಲಕ್ಷ ಯವನ ಸೇನೆಯಿಂದ ಒಡಗೂಡಿ ಯಾದವರ ಮೇಲೆ ದಂಡೆತ್ತಿ ಬರಲು ಉಜ್ಜುಗಿಸಿದ. ದಿನ ದಿನಕ್ಕೆ ಅವನಿಗೆ ಯಾದವರ ಮೇಲೆ ಸಿಟ್ಟು ಹುಚ್ಚೆದ್ದು ಹರಿಯುತ್ತಿತ್ತು. ಅವನು ತನ್ನ ಚತುರಂಗ ಸೈನ್ಯದೊಂದಿಗೆ ಪ್ರಯಾಣ ಹೊರಟು ಮಧ್ಯಾಹ್ನ ಆದ ಕಡೆಗೆ ಬೀಡು ಬಿಟ್ಟು ಶ್ರಮ ಪರಿಹರಿಸಿಕೊಂಡು ಮತ್ತು ಮಥುರಾ ಪಟ್ಟಣ ಕಡೆ ಬರುತ್ತಾ ಇದ್ದ.

ಅಷ್ಟರಲ್ಲಿ ಕೃಷ್ಣನು ಸಮುದ್ರರಾಜನನ್ನು ಕೇಳಿ ಹನ್ನೆರಡು ಯೋಜನ ವಿಸ್ತಾರವಾದ ಪ್ರದೇಶವನ್ನು ಇಸಿದುಕೊಂಡು ಅಲ್ಲಿ ದ್ವಾರಕಾ ಎಂಬ ಪಟ್ಟಣವನ್ನು ನಿರ್ಮಿಸಿದ. ಆ ದ್ವಾರಕೆಯಲ್ಲಿ ಉದ್ಯಾನಗಳು ಅನೇಕ ಕೋಟೆಗಳು, ಅಸಂಖ್ಯ ಜಲಾಶಯಗಳು ನೂರಾರು ಮುಗಿಲು ಕಟ್ಟಡಗಳು ಸಾವಿರಾರು ಅಸಂಖ್ಯ ಎಂದರೂ ಅತಿಶಯೋಕ್ತಿ ಅಲ್ಲ. ಕಾಲಯವನನ ಸೈನ್ಯವು ಮಥುರೆಯ ಕಡೆಗೆ ಹೊರಟಿದೆ ಎಂಬ ಸಮಾಚಾರ ಕೇಳಿದ ಕೂಡಲೆ ಯಾದವರೆಲ್ಲರೂ ಸಮುದ್ರದ ಮಧ್ಯದಲ್ಲಿ ಶ್ರೀಕೃಷ್ಣ ಕಟ್ಟಿಸಿಟ್ಟ ಮಹಾ ಪಟ್ಟಣಕ್ಕೆ ಸ್ಥಳಾಂತರಿಸಲ್ಪಟ್ಟರು. ಎಲ್ಲ ತನ್ನ ಬಂಧು ಬಾಂಧವರನ್ನು ದ್ವಾರಕೆಯಲ್ಲಿ ಸುರಕ್ಷಿತವಾಗಿ ಹೊಸಹೊಸ ಸುಂದರ ಮಂದಿರಗಳಲ್ಲಿ ವ್ಯವಸ್ಥಿತವಾಗಿ ಇಟ್ಟು ಕೃಷ್ಣನು ಮಥುರಾ ಪಟ್ಟಣದ ಅಗಸಿ ಬಾಗಿಲದ ಮುಂದೆ ಬಂದು ನಿಂತನು.

ಕಾಲಯವನನ ಸೈನ್ಯವು ಮಥುರಾ ಪಟ್ಟಣಕ್ಕೆ ಬಲವಾದ ಮುತ್ತಿಗೆ ಹಾಕಿ ನಿಂತಿತು. ಕಾಲಯವನನ ಈ ಅಪರಿಮಿತ ಸೇನೆಯನ್ನು ನೋಡಿ ಕೃಷ್ಣನು ಮುಂದೆ ಓಡ ತೊಡಗಿದನು. ತನಗೆ ಹೆದರಿ ಓಡುವನೆಂದು ತಿಳಿದು ಕಾಲಯವನನು ಅವನ ಬೆನ್ನಟ್ಟಿ ತಾನು ಓಡಿದನು. ಮುಂದೆ ಮುಂದೆ ಕೃಷ್ಣ, ಹಿಂದೆ ಹಿಂದೆ ಕಾಲಯವನ ಕೃಷ್ಣನು ಒಮ್ಮೆ ವೇಗದಿಂದ ಇನ್ನೊಮ್ಮೆ ಮೆಲ್ಲಮೆಲ್ಲನೆ ಓಡುತ್ತ ಅವನೊಡನೆ ಆಡುತ್ತ ಗಿರಗರ್ಭನಲ್ಲಿರುವ ಒಂದು ಗುಹೆಯನ್ನು ಹೊಕ್ಕನು. ಆ ಗುಹೆಯಲ್ಲಿ ವೀರಾಗ್ರಣಿಯಾದ ಮುಚ್ಚುಕುಂದ ಎಂಬ ರಾಜರ್ಷಿಯು ಮಲಗಿ ನಿದ್ದೆ ಮಾಡುತ್ತಿದ್ದ. ಕೃಷ್ಣನನ್ನು ಬೆನ್ನಟ್ಟಿ ಬರುವ ಕಾಲಯವನನು ಕೂಡ ತಾನೂ ಗುಹೆಯಲ್ಲಿ ಪ್ರವೇಶಿಸಿದ. ಅಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದ ಮುಚ್ಚುಕುಂದ ಮುನಿಯನ್ನು ನೋಡಿ ಕೃಷ್ಣನೆ ಮಲಗಿದ್ದಾನೆ ಎಂದು ತಿಳಿದು ಅವನಿಗೆ ಕಾಲಿನಿಂದ ಒದ್ದು ಬಿಟ್ಟ. ಕಾಲಯವನನಿಂದ ತಾಡಿತ ಪೀಡಿತನಾದ ಮುಚುಕುಂದ ಮಹಾರಾಜನಿಗೆ ಕಾಲಯವನನ ಒದೆತದಿಂದ ಎಚ್ಚರವಾಯಿತು. ಕೋಪದಿಂದ ಕೆರಳಿ ಕೆಂಡವಾದ ಮುಚಕುಂದ ಮಹಾರಾಜನು ಕಣ್ಣು ಬಿಟ್ಟು ನೋಡಲು ಆ ಕ್ಷಣದಲ್ಲಿಯೇ ಆ ಕೋಪಾಗ್ನಿಯಿಂದ ಸುಟ್ಟು ಉರಿದು ಅರೆ ನಿಮಿಷದಲ್ಲಿ ಬೂದಿಯಾಗಿ ಬಿದ್ದ ಆ ಕಾಲಯವನ. ಆ ಮುಚಕುಂದ ಮಹಾರಾಜನು ಹಿಂದೆ ದೇವತೆಗಳಿಗೂ ದೈತ್ಯರಿಗೂ ಯುದ್ಧ ನಡೆದಾಗ ದೇವತೆಗಳ ಸಹಾಯಕ್ಕೆ ಹೋಗಿದ್ದ. ದೈತ್ಯರನ್ನೆಲ್ಲ ಸೋಲಿಸಿದ್ದ, ದೇವತೆಗಳಿಗೆ ವಿಜಯವನ್ನೆಲ್ಲ ತಂದುಕೊಟ್ಟಿದ್ದ ಯುದ್ಧ ಮಾಡಿ ದಣಿದಿದ್ದ. ದೇವತೆಗಳು ಅವನಿಗೆ ಬೇಕಾದ ವರ ಬೇಡು ಎಂದಾಗ ನಿರಂತರ ನಿದ್ದೆಯನ್ನು ನನಗೆ ನೀಡಿರಿ. ನನ್ನ ನಿದ್ರಾ ಭಂಗವನ್ನು ಯಾವನಾದರೂ ಮಾಡಿದರೆ ಅವನು ಆ ಕ್ಷಣದಲ್ಲಿ ಸುಟ್ಟು ಭಸ್ಮವಾಗಿ ಹೋಗಲಿ ಎಂದು ವರವನ್ನು ಬೇಡಿದ್ದ. ತಥಾಸ್ತು ಎಂದು ಸಂತೋಷದಿಂದ ಹೇಳಿದರು ದೇವತೆಗಳು.

ಇದೆಲ್ಲವು ಗೊತ್ತು ಸರ್ವಜ್ಞ ಚೂಡಾಮಣಿಯಾದ ಶ್ರೀಕೃಷ್ಣನಿಗೆ. ಆದುದರಿಂದ ಅವನು ಕಾಲಯವನನಿಗೆ ಹೆದರಿದಂತೆ ನಟಿಸಿ ಗುಡ್ಡದ ಕಡೆಗೆ ಓಡಿದ, ಗುಹೆಯ ಕಡೆಗೆ ಧಾವಿಸಿದ. ಕಾಲಯವನನ್ನು ಆ ಗುಹೆಗೆ ಸೆಳೆದೊಯ್ದ. ಇವನೇ ಕೃಷ್ಣ ಎಂದು ಭ್ರಮಿಸಿ ಆ ಕಾಲಯವನ ತನ್ನ ಕಾಲಿನಿಂದಲೆ ಮಹಾರಾಜನಿಗೆ ಲತ್ತಾ ಪ್ರಹಾರ ಮಾಡಿದ. ಆ ಕ್ಷಣದಲ್ಲಿಯೆ ಮುಚುಕುಂದ ಮಹಾರಾಜನ ಕೋಪ ಭುಗಿಲೆದ್ದಿತು. ಕಣ್ಣಿನ ಕಿಡಿ ಕಿಚ್ಚಾಗಿ ಕಾಲಯವನನನ್ನು ಸುಟ್ಟು ಹಾಕಿತು. ಆಚೆಯ ಬದಿ ನಗುತ್ತ ನಿಂತುಕೊಂಡಿದ್ದ ಸುಂದರನಾದ ಕೃಷ್ಣಮೂರ್ತಿ. ಅದನ್ನು ನೋಡಿದ ಮುಚುಕುಂದ ಮಹಾರಾಜ 'ನೀನು ಯಾರು' ಎಂದು ಕೇಳಿದ. ಆಗ ಕೃಷ್ಣನು ಚಂದ್ರವಂಶದ ಯಮವಂಶದ ವಸುದೇವನ ಮಗ ಎಂದು ಹೇಳಿದ. ಅದನ್ನು ಕೇಳಿದ ಕೂಡಲೆ ವೃದ್ಧನಾದ ಗಾರ್ಗ್ಯಮುನಿ ಹೇಳಿದ ಮಾತು ನೆನಪಿಗೆ ಬಂತು. ಅನಂತರ ಆ ಮುಚುಕುಂದ ಮಹಾರಾಜನು ಸರ್ವೇಶ್ವರನಾದ ಶ್ರೀಕೃಷ್ಣನನ್ನು ನಮಸ್ಕರಿಸಿ ಕೈಜೋಡಿಸಿ ಮಾತನಾಡಿದ ''ಪರಮ ಪುರುಷ, ನೀನು ಸಾಕ್ಷಾತ್ ಪರಮಾತ್ಮ ಇಪ್ಪತ್ತೆಂಟನೆ ದ್ವಾಪರ ಯುಗದಲ್ಲಿ ಶ್ರೀಕೃಷ್ಣನು ಯದುಕುಲದಲ್ಲಿ ಹುಟ್ಟುವನು ಎಂದು ಬಹಳ ಕಾಲದ ಹಿಂದೆ ಗಾರ್ಗ್ಯಮಹರ್ಷಿಯು ನನಗೆ ಹೇಳಿದ್ದ. ಅವನ ಮಾತಿನಂತೆ ನೀನು ಭೂಲೋಕದ ಮಾನವರನ್ನು ಕಾಪಾಡಲಿಕ್ಕಾಗಿ ಪರಮಾತ್ಮನ ಅಭಿನ್ನಾಂಶದಿಂದ ಹುಟ್ಟಿ ಬಂದಿರುವೆ. ಇದರಲ್ಲಿ ಸಂದೇಹವೇ ಇಲ್ಲ ಎಂದು ಹೇಳಿದ. ಪೂರ್ವಕಾಲದಲ್ಲಿ ದೇವಾಸುರರಲ್ಲಿ ನಡೆದ ಘನಘೋರ ಸಂಗ್ರಾಮದಲ್ಲಿ ಮಹಾಬಲರಾದ ದೈತ್ಯವೀರರು ನಿನ್ನ ಮಹತ್ತರವಾದ ತೇಜಃಪ್ರಕರ್ಷದಿಂದ

ಧರ್ಷಿತರಾದರು. ಆಗ ನಾನು ನಿಮಿತ್ತಮಾತ್ರನಾಗಿ ಆ ದೈತ್ಯರೊಡನೆ ಹೋರಾಡಿದೆ. ಅವರನ್ನೆಲ್ಲ ನೀನೇ ನನ್ನಲ್ಲಿ ನಿಂತು ಸಂಹಾರ ಮಾಡಿ ನನಗೆ ಕೀರ್ತಿಯನ್ನು ತಂದುಕೊಟ್ಟೆ. ಯುದ್ಧದಲ್ಲಿ ದಣಿದ ನಾನು ದೇವತೆಗಳಿಂದ ದೀರ್ಘನಿದ್ರೆಯ ವರ ಪಡೆದು ಇಲ್ಲಿ ಪವಡಿಸಿದ್ದೆ. ಕಾಲಯವನನು ಬಂದು ನನಗೆ ಪಾದ ಪ್ರಹಾರ ಮಾಡಿದಾಗ ನಾನು ಸಿಟ್ಟಿನಿಂದ ನೋಡಿದೆ. ಉರಿದು ಬೂದಿಯಾದ. ನನಗೆ ಈಗ ನಿನ್ನ ಸಾಕ್ಷಾತ್ ದರ್ಶನವಾಯಿತು. ನಾನು ಪುನೀತನಾದೆ, ನನ್ನ ಜನ್ಮ ಸಾರ್ಥಕವಾಯಿತು. ಸಂಸಾರದಲ್ಲಿ ಬಿದ್ದು ಬಗೆ ಬಗೆ ಬವಣೆಗಳಿಗೆ ಸಿಲುಕಿ ತೊಳಲಾಡುತ್ತಿರುವ ಜೀವಿಗೆ ನೀನೇ ಗತಿಪ್ರದ, ನಿನ್ನನ್ನೆ ನಾನು ಶರಣು ಹೊಕ್ಕಿದ್ದೇನೆ. ನೀನು ಸರ್ವಾಂತರ್ಯಾಮಿ ಸರ್ವಸ್ವಾಮಿ ಈ ಜಗತ್ತಿನಲ್ಲಿರುವ ಗಿರಿ, ಝರಿ, ತೊರೆ, ಕಾಡು, ನಾಡು, ಭೂಮಿ, ಆಕಾಶ, ಬೆಂಕಿ, ನೀರು ಎಲ್ಲದರಲ್ಲಿಯೂ ನೀನು ಇದ್ದು ಅವೆಲ್ಲವುಗಳನ್ನು ಕಾರ್ಯೋನ್ಮುಖವಾಗುವಂತೆ ಮಾಡುವವನು ನೀನೆ. ದೇವತೆಗಳು, ಪಿತೃಗಳು, ಯಕ್ಷ ರಾಕ್ಷಸರು, ಗಂಧರ್ವರು, ಸಿದ್ಧರೂ, ಅಪ್ಸರೆಯರೂ, ಮನುಷ್ಯರೂ, ಹಾವು, ಮೃಗ, ಖಗ, ಪಶು, ಪಕ್ಷಿ, ವೃಕ್ಷ ಹೆಚ್ಚೇನು ಚರಾಚರಾತ್ಮಕವಾದ ಪ್ರಪಂಚ ಸೃಷ್ಟವಾಗುವುದು ನಿನ್ನಿಂದಲೇ, ನಷ್ಟವಾಗುವುದು ನಿನ್ನಿಂದಲೇ, ಪರಿಪುಷ್ಟವಾಗುವುದೂ ನಿನ್ನಿಂದಲೇ. ನಿನ್ನ ಮಹಾ ಮಹಿಮೆಯನ್ನು ತಿಳಿಯಲಿಕ್ಕಾಗದೆ ನಾನು ಸಂಸಾರದ ಚಕ್ರದಲ್ಲಿ ಸಿಲುಕಿ ಬಹು ದಿನಗಳಿಂದ ತೊಳಲಿ ಬಳಲುತ್ತಿದ್ದೇನೆ. ಅಧ್ಯಾತ್ಮಿಕ, ಆದಿದೈವಿಕ ಆದಿಭೌತಿಕ ತಾಪತ್ರಯಗಳಿಂದ ಪೀಡಿತನಾಗಿದ್ದೇನೆ. ನಾನು ವಿಷಯ ಸುಖಗಳಲ್ಲಿ ಲೋಲುಪನಾಗಿ ನಿನ್ನ ಮಾಯೆಯಿಂದ ಮೋಹಿತನಾಗಿ ಮಮತೆಯ ಸುಳಿಯಲ್ಲಿ ಸಿಕ್ಕು ತೊಳಲುತ್ತಿದ್ದೇನೆ. ಪರಾತ್ಪರ ಪರಂಜ್ಯೋತಿ ಸ್ವರೂಪಿಯಾದ ಪರಮಾತ್ಮನೆ, ನಾನು ನಿನ್ನನ್ನು ಮೊರೆಹೊಕ್ಕಿದ್ದೇನೆ. ನನಗೆ ಸದ್ಗತಿಯನ್ನು ನೀಡು'' ಎಂದು ಪ್ರಾರ್ಥಿಸಿದನು.

**ವೇದವ್ಯಾಸ:-** ಜ್ಞಾನಿಯಾದ ಮುಚಕುಂದ ಮಹಾರಾಜನು ಈ ರೀತಿಯಾಗಿ ಸ್ತೋತ್ರ ಮಾಡಿದ ಬಳಿಕ ಹುಟ್ಟು ಸಾವು ಇಲ್ಲದ ಸರ್ವಪ್ರಾಣಿಗಳಿಗೂ ಅಧೀಶ್ವರನಾದ ಆ ಕೃಷ್ಣನು ಹೀಗೆ ನುಡಿದನು. ''ಮುಚಕುಂದ, ನಿನಗೆ ಅಪೇಕ್ಷಿತವಾದ ದಿವ್ಯ ರೂಪಗಳನ್ನು ನೀನು ಹೊಂದು. ನನ್ನ ಪೂರ್ಣಾನುಗ್ರಹ ನಿನ್ನಮೇಲೆ ಇದೆ. ಸುರಲೋಕದ ಸಿರಿ ಸಂಪದಗಳನ್ನೂ ಸೌಖ್ಯ ಸೌಭಾಗ್ಯವನ್ನೂ ನೀನು ಚಿರಕಾಲ ಅನುಭವಿಸು. ಅನಂತರ ಒಂದು ಶ್ರೇಷ್ಠ ಕುಲದಲ್ಲಿ ಹುಟ್ಟಿಬರುವೆ. ಆಗ ಜನ್ಮಾಂತರದ ಸ್ಮರಣೆ ನಿನಗೆ ಜಾಗರೂಕವಾಗಿಯೆ ಇರುವುದು. ಆ ಜನ್ಮದಲ್ಲಿ ಅವಿಚ್ಛಿನ್ನ ಭಕ್ತಿಯಿಂದ ಭಗವದಾರಾಧನೆಯನ್ನು ಆಚರಿಸಿದ ಬಳಿಕ ಅದೇ ನಿನಗೆ ಕೊನೆಯ ಶರೀರ ಆಗುವುದು. ಅನಂತರ ಮೋಕ್ಷವನ್ನು ಪಡೆಯುವೆ.''

ಈ ರೀತಿಯಾಗಿ ಮುಚಕುಂದ ಮಹಾರಾಜನು ಮುಕುಂದನ ಮಾತುಗಳನ್ನು ಕೇಳಿ ಪರಮ ಪ್ರೀತನಾಗಿ ಅವನಿಗೆ ನಮಸ್ಕಾರ ಮಾಡಿ ಗುಹೆಯಿಂದ ಹೊರಬಿದ್ದ. ತ್ರೇತಾಯುಗದ ಆ ಅರಸನಿಗೆ ದ್ವಾಪರಯುಗದ ಮಾನವರೆಲ್ಲರು ಅಲ್ಪಪ್ರಮಾಣದ ಕುಳ್ಳ ಪ್ರಾಣಿಗಳೆಂದು ಕಂಡುಬಂದರು. ಅಲ್ಲಿ ಸಂಚರಿಸುವ ಗಿಡ್ಡ ಗಿಡ್ಡ ನರ, ನಾರಿಯರನ್ನು ಕಂಡು ದ್ವಾಪರವು ಹೋಗಿ ಕಲಿಯುಗವೇ ಬಂದಿತೆಂದು ಅವನು ಭಾವಿಸಿದ. ಅನಂತರ ಅವನು ತಾನು ನಿದ್ದೆ ಮಾಡಿ ಎದ್ದ ಆ ಗುಹೆಯಿಂದ ನೇರವಾಗಿ ಗಂಧಮಾದನ ಗಿರಿಗೆ ನಡೆದ. ಅಲ್ಲಿಯೆ ಉಗ್ರವಾದ ತಪಸ್ಸಿಗೆ ತೊಡಗಿದ.

ಇತ್ತ ಶ್ರೀಕೃಷ್ಣನು ಉಪಾಯವಾಗಿ ಕಾಲಯವನನನ್ನು ಕೊಲ್ಲಿಸಿ ಮಧುರೆಗೆ ಬಂದ. ಕಾಲಯವನನ ಆನೆ, ಕುದುರೆ, ರಥ, ಮುಂತಾದ ಸಮರಕ್ಕೆ ಸಜ್ಜಾಗಿ ನಿಂತ ಸೇನೆಯೆಲ್ಲವನ್ನೂ ಸೋಲಿಸಿ ತನ್ನ ವಶಪಡಿಸಿಕೊಂಡ. ಅನಂತರ ಆ ಚತುರಂಗ ಸೇನೆಯೊಡನೆ ದ್ವಾರಕಾ ಪಟ್ಟಣಕ್ಕೆ ಬಂದು ತನ್ನ ಪ್ರಭುವಾದ ಉಗ್ರಸೇನ ಮಹಾರಾಜರಿಗೆ ಅದನ್ನೆಲ್ಲ ಒಪ್ಪಿಸಿಬಿಟ್ಟ. ಅಂದಿನಿಂದ ಯಾದವರಿಗೆ ಶತ್ರುಗಳ ಭಯವೆಂಬುದೇ ಇಲ್ಲದಂತಾಯಿತು. ಅವರು ಯುದ್ಧದ ಉದ್ಯಮವನ್ನೆ ಮರೆತು ನಿಶ್ಚಿಂತರಾಗಿ ನಿರ್ಭಯವಾಗಿ, ನೆಮ್ಮದಿಯಿಂದ ಅಮರಾವತಿಯಂತಿದ್ದ ದ್ವಾರಕಾಪುರದಲ್ಲಿ ನಕ್ಕು ನಲಿದು ಸುಖದಿಂದ ವಾಸಮಾಡಿದರು.

## ಬಲರಾಮನ ಗೋಕುಲ ಪ್ರತ್ಯಾಗಮನ

ಬಳಿಕ ಬಲರಾಮನು ತನ್ನ ಜ್ಞಾತಿ ಬಾಂಧವರನ್ನು ನೋಡಿಕೊಂಡು ಬರಬೇಕೆಂಬ ಕುತೂಹಲದಿಂದ ನಂದನ ನಿವಾಸವಾದ ಗೋಕುಲಕ್ಕೆ ತೆರಳಿದನು. ಆಗ ಗೋಪಾಲಕರು, ಗೋಪಾಂಗನೆಯರು ಹಿಂದಿನ ಗೆಳೆಯಂದಿರು ಮೊದಲಿನಂತೆ ಇವನನ್ನು ನೋಡಲು ಬಂದು ಕಿಕ್ಕಿರಿದು ನಿಂತರು. ಆಗ ಆ ಬಲಭದ್ರನು ಪ್ರೀತಿಯಿಂದ ಹಿರಿಯರನ್ನು ವಂದಿಸಿದನು, ಗೆಳೆಯರನ್ನು ಆಲಂಗಿಸಿದನು. ಬಂಧು ಬಾಂಧವರನ್ನೆಲ್ಲ ಮಂದಹಾಸದಿಂದ ಕ್ಷೇಮಸಮಾಚಾರವನ್ನು ವಿಚಾರಿಸಿ ಒಲುಮೆಯಿಂದ ಸಂಭಾಷಿಸಿದನು. ಹಲವಾರು ಗೋಪಗೋಪಿಯರ ಜೊತೆಗೆ ಚೇಷ್ಟೆ ವಿನೋದಗಳನ್ನು ಮಾಡಿದನು. ಅಲ್ಲಿ ನೆರೆದ ಗೋಪರಲ್ಲಿ ಎಲ್ಲರೂ ಬಲರಾಮನ ಜೊತೆಗೆ ಸ್ನೇಹದಿಂದ ನಲುಮೆ ತುಂಬಿದ ಮಾತುಗಳನ್ನು ಆಡಿದರು. ಗೋಪಿಕಾ ಸ್ತ್ರೀಯರು ತಮ್ಮ ಪ್ರಣಯಕೋಪವನ್ನು ಪ್ರದರ್ಶಿಸುತ್ತ ಕೃಷ್ಣನ ವಿಷಯವಾಗಿ ಅನೇಕ ಪ್ರಶ್ನೆ ಕೇಳಿದರು.

"ಬಲದೇವ ಆ ಕಳ್ಳ ಕೃಷ್ಣ ಕ್ಷೇಮದಿಂದ ಇರುವನೆ? ಅವನು ಬಾಲ್ಯದಲ್ಲಿ ನಮ್ಮ ಹಾಲು ಮೊಸರುಗಳನ್ನು ಕದ್ದ, ಬೆಣ್ಣೆ ಕೆನೆಗಳನ್ನು ಮೆದ್ದ, ಅನಂತರ ನಮ್ಮ ಹೃದಯಗಳನ್ನೆ ಕದ್ದ. ಈಗ ಪುನಃ ಇಲ್ಲಿಗೆ ಮರಳಿ ಬಾರದೆ ನಮ್ಮ ಪ್ರಾಣಗಳನ್ನು ಕದ್ದೊಯ್ಯಲು ಪ್ರಾರಂಭಿಸಿದ್ದಾನೆ. ನಾವು ಅವನ ಮಧುರ ಮುರುಳೀ ನಿನಾದದಿಂದ ಮೋಹಿತರಾಗಿ ಮನೆ ಮಕ್ಕಳು ಎಲ್ಲ ಮರೆತು ಅವನನ್ನು ಬೆಂಬತ್ತಿ ಹೋಗುತ್ತಿರುವುದನ್ನು ಇಷ್ಟು ಬೇಗ ಮರೆತುಬಿಟ್ಟನೆ? ಅವನಿಗಾಗಿ ಸರ್ವಸ್ವ ತ್ಯಾಗ ಮಾಡಿ ಅವನೊಡನೆ ರಾಸಕ್ರೀಡೆಗೆ ಓಡಿ ಬಂದು, ಯಮುನಾ ತೀರದಲ್ಲಿ ನಿಂದು ಅಲ್ಲಿಯ ಕುಂಜ ನಿಕುಂಜಗಳಲ್ಲಿ ಪುಲೀನ ಪ್ರದೇಶಗಳಲ್ಲಿ ರಾಸಲೀಲೆ ಆಡಿದ್ದನ್ನು ಒಮ್ಮೆಯಾದರೂ ನೆನೆಯುವನೆ? ನಮ್ಮನ್ನೆಲ್ಲ ಹೀಗೆ ನಡುನೀರಿನಲ್ಲಿ ಕೈಬಿಟ್ಟು ಮಧುರೆಯ ಪೌರನಾರಿಯರ ಬೆಡಗು ಬಿನ್ನಾಣಗಳಿಗೆ ಮನಸೋತ ಆ ಕೃಷ್ಣನು ಕೃತಘ್ನನೇ ಅಲ್ಲವೆ? ಪುನಃ ವೃಂದಾವನಕ್ಕೆ ಬರುತ್ತೇನೆ ಎಂದು ನಿನ್ನ ಕಡೆಯಿಂದ ಸಂದೇಶವನ್ನಾದರೂ ಕಳಿಸಿದ್ದಾನೆಯೆ? ನಗರ ನಾರಿಯರ ನಯನಾಜೂಕಿನ ನುಡಿಗಳಿಂದ ನಾನಾ ಬಗೆಯ ವಿಲಾಸ ವಿಭ್ರಮಗಳಿಂದ ಕೃಷ್ಣನು ಮುಗ್ಧನಾಗಿ ಅವರಲ್ಲಿಯೆ ಮನಸ್ಸನ್ನು ನೆಟ್ಟು ನಮ್ಮಲ್ಲಿಯ ಪ್ರೀತಿಯನ್ನು ತೊರೆದು ಬಿಟ್ಟಿರುವವನು. ಅದಕ್ಕಾಗಿಯೆ ನಿರ್ದಯನಾದ ಅವನು ತಾನು ಬಾರದೇ ನಿನ್ನನ್ನು ಕಳಿಸಿರುವವನು. ಅವನು ನಮ್ಮೊಡನೆ ಆಡಿದ ಪ್ರೇಮಾಲಾಪಗಳನ್ನು ಕಾಮಕೇಲೀ ವಿಲಾಸಗಳನ್ನು ಅವನು ಪೂರ್ಣ ಮರೆತರೂ ನಾವು ಹೇಗೆ ಮರೆಯಬಲ್ಲೆವು? ಅವನೊಡನೆ

ಕಳೆದ ರಸರಾತ್ರಿಗಳ ರಸನಿಮಿಷಗಳೇ ನಮಗೆ ನೆನಪಿನ ಪುಷ್ಟಿ. ಅದನ್ನು ನೆನೆನೆನೆದು ಪ್ರತಿದಿನವೂ ಆ ಕೃಷ್ಣನ ಮೂರ್ತಿಯನ್ನು ಹೃದಯದಲ್ಲಿ ಭಜಿಸಿ, ಪೂಜಿಸಿ, ಧ್ಯಾನಿಸಿ, ಅವನ ಸ್ಮರಣೆಯಲ್ಲಿಯೇ ಮೈಮರೆಯುವೆವು. ಅವನು ಬಾರದಿದ್ದರೂ ನಮ್ಮ ಕರೆಗೆ ಓಗೊಡದಿದ್ದರೂ ಕೃಷ್ಣಾ ಎಂದು ಕೂಗಿದರೆ ನಮಗೆ ಒಂದು ತೃಪ್ತಿ. ಮುಕುಂದ ಎಂದು ಕರೆದರೆ ಮನಸ್ಸಿಗೆ ಹಿಗ್ಗು, ಗೋವಿಂದ, ಮಾಧವ, ಮುರಳೀಧರ, ನಂದಕುಮಾರ ಎಂದು ಅಂದಾಗೆಲ್ಲ ಆನಂದ, ನೆನ್ದಾಗೆಲ್ಲ ರೋಮಾಂಚನ. ಕೃಷ್ಣ ನೀನು ಎಂದು ಬರುವೆ? ಮತ್ತೆ ಎಂದು ತರುವೆ ನಮಗೆ ಆ ಆನಂದವನ್ನು? ಮತ್ತೆ ಎಂದು ಬರುವುದು ನಮಗೆ ನಿನ್ನೊಡನೆ ಮಿಲನ ಮುಹೂರ್ತ!'' ಎಂದು ಮುಂತಾಗಿ ಪ್ರೇಮೋನ್ಮಾದದಿಂದ ನುಡಿಯುತ್ತ ಕೃಷ್ಣನ ಲೀಲೆಗಳನ್ನು ನೆನೆಯುತ್ತ ಆ ಗೋಪ ಲಲನೆಯರು ಮೈಮರೆತರು.

ಬಲರಾಮನಿಗೆ ಗೋಪಿಕೆಯರ ಈ ಕೃಷ್ಣಭಕ್ತಿಯನ್ನು ನೋಡಿ ಕೌತುಕವಾಯಿತು. ಆಗ ಅವನು ಅವರೆಲ್ಲರನ್ನೂ ಪ್ರೀತಿಯಿಂದ ತನ್ನ ಸಮೀಪಕ್ಕೆ ಕರೆದು ಕೃಷ್ಣನು ಹೇಳಿದ ಸಂದೇಶದ ನುಡಿಗಳನ್ನು ಬಿತ್ತರಿಸಿದ. ಆ ಮುಕುಂದ ಸಾಕ್ಷಾತ್ತಾಗಿ ಹೇಳಿ ಕಳಿಸಿದ ಸುಂದರವಾದ ಸಂದೇಶದ ಪ್ರೇಮಪೂರ್ಣವಾದ ನಲ್ಮಾತುಗಳನ್ನು ಕೇಳಿ ಗೋಪಿಯರಿಗೆ ಪರಮಾನಂದವಾಯಿತು. ಹೃದಯವು ಸಂತಸದಿಂದ ಬಿರಿಯಿತು. ಹೀಗೆ ಬಲರಾಮನು ಕೃಷ್ಣನು ಹೇಳಿಕಳಿಸಿದ ಸಾಂತ್ವನಪರ ನುಡಿಗಳಿಂದ ಆ ಗೊಲ್ಲ ಭಾಮಿನಿಯರನ್ನೆಲ್ಲ ಸಂತೈಸಿ ಸಮಾಧಾನ ಪಡಿಸಿ ಅನಂತರ ಗೋಪಾಲಕರೊಡನೆ ಮೊದಲಿನಂತೆಯೇ ಕೂಡಿಕೊಂಡು ಪರಿಹಾಸದ ನುಡಿಗಳನ್ನು ಆಡಿದ. ಹಿಂದಿನಂತೆಯೇ ತಾನು ತುರುಗಾಹಿ ತರುಣನಾಗಿ ಆ ಗೋಪಾಲಕರ ಗುಂಪಿನಲ್ಲಿ ಬೆರೆತು ಒಂದಾಗಿ ಸೇರಿ ವಿವಿಧ ವಿನೋದ ವಾರ್ತಾಲಾಪಗಳನ್ನು ಆಡಿ ಅವರೆಲ್ಲನರನ್ನು ಸಂತೋಷ ಪಡಿಸಿದ.

## ಬಲರಾಮನ ಕ್ರೀಡಾ ವರ್ಣನ

**ವೇದವ್ಯಾಸ:-** ಮಹಾತ್ಮನಾದ ಬಲರಾಮನು ಗೋಪಾಲಕರೊಡನೆ ಸ್ವಚ್ಛಂದವಾಗಿ ಎಂದಿನಂತೆ ವೃಂದಾವನದ ವನೋಪವನಗಳಲ್ಲಿ ಸ್ವಚ್ಛಂದವಾಗಿ ವಿಹರಿಸಿದ. ಆ ಬಲಭದ್ರನು ಸಾಮಾನ್ಯ ಮಾನವನಲ್ಲ. ತಿರೆಯ ಭಾರದ ಹೊರೆಯನ್ನು ಹಗುರ ಗೊಳಿಸಲಿಕ್ಕಾಗಿ ನರರೂಪದಲ್ಲಿ ಅವತರಿಸಿದ ನಾರಾಯಣಾಂಶನಾದ ಆದಿಶೇಷನೇ ಈ ಬಲರಾಮ. ಹದಿನಾಲ್ಕು ಲೋಕಗಳನ್ನು ಹೂವಿನ ಹಾರದಂತೆ ಹಗುರಾಗಿ ಹೊತ್ತು ಹೆಡೆಯಮೇಲೆ ಎತ್ತಿಹಿಡಿದು ನಿಂತ ಪುಣ್ಯಾತ್ಮ ಈ ಸಂಕರ್ಷಣ. ಈಗಾಗಲೆ ಅವನು ಭೂಭಾರ ಹರಣಕ್ಕಾಗಿ ಅನೇಕ ಕಾರ್ಯಗಳನ್ನು ನೆರವೇರಿಸಿದ್ದ. ಅವನನ್ನು ಸಂತೋಷಪಡಿಸಲಿಕ್ಕಾಗಿ ವರುಣದೇವನು ತನ್ನ ಮಗಳಾದ ವಾರುಣಿಗೆ ಹೇಳಿದ. ''ನನ್ನ ಮಗಳಾದ ವಾರುಣಿ, ನೀನು ಮದ್ಯಕ್ಕೆ ಅಭಿಮಾನಿನಿ. ಮಗಳೆ, ನೀನು ನಿಜವಾಗಿಯೂ ಇಷ್ಟಳಾಗಿರುವೆ, ಪ್ರೇಷ್ಠಳೂ ಆಗಿರುವೆ. ನಿನ್ನಿಂದ ಅವನು ಪರಿತುಷ್ಟನಾಗುವನು. ಆದುದರಿಂದ ನೀನು ಅನಂತ ಸ್ವರೂಪನಾದ ಅವನ ಉಪಭೋಗಕ್ಕಾಗಿ ವೃಂದಾವನಕ್ಕೆ ಹೋಗು. ಅವನನ್ನು ಸಂತೋಷಪಡಿಸು'' ಎಂದು ಹೇಳಿದನು. ವರುಣನಿಂದ ಆಜ್ಞಪ್ತಳಾದ ವಾರುಣಿಯು ವೃಂದಾವನದ ನದೀತೀರದಲ್ಲಿರುವ ಕದಂಬ ಮರದ ಪೊಟರೆಯೊಂದರಲ್ಲಿ ಸನ್ನಿಹಿತಳಾದಳು.

ವೃಂದಾವನದಲ್ಲಿ ಸ್ವಚ್ಛಂದವಾಗಿ ಸಂಚರಿಸುತ್ತಿರುವ ಬಲರಾಮನಿಗೆ ಸುಗಂಧವಾದ ಮದಿರೆಯ ವಾಸನೆ ಮೂಗಿಗೆ ತಟ್ಟಿತು. ಆ ಮದಿರೆಯನ್ನು ಪಾನಮಾಡಬೇಕೆಂದು ಅವನಿಗೆ ಉತ್ಸಾಹ ಬಂದಿತು. ಹೀಗೆ ಮದಿರಾಪಾನದ ಉತ್ಕಟ ಪಿಪಾಸೆ ಅವನ ಮನಸ್ಸಿನಲ್ಲಿ ಮೂಡಿದ ಕೂಡಲೆ ಆ ಕದಂಬ ವೃಕ್ಷದಿಂದ ಮದ್ಯವೇ ಧಾರೆಧಾರೆಯಾಗಿ ಹರಿಯತೊಡಗಿತು. ಅದನ್ನು ನೋಡಿ ಬಲರಾಮನಿಗೆ ಹಿಗ್ಗೋ ಹಿಗ್ಗು. ಆಗ ಆ ಬಲಭದ್ರನು ಗೋಪಗೋಪಿಯರಿಂದ ಕೂಡಿಕೊಂಡು ಆ ಮದಿರಾಪಾನ ಮಹೋತ್ಸವವನ್ನು ಆನಂದದಿಂದ ಪ್ರಾರಂಭಿಸಿದನು. ಗೋಪ ಗೋಪಿಯರು ವೀಣಾ, ವೇಣು, ಮೃದಂಗ ವಾದ್ಯಗಳನ್ನು ನುಡಿಸುತ್ತ ಮಧುರವಾದ ಶೃಂಗಾರ ಗೀತೆಗಳನ್ನು ಹಾಡುತ್ತ, ಬಲರಾಮನನ್ನು ಹೊಗಳಿ ಹಾಡಿದರು. ಆಗ ಆ ಸಂಕರ್ಷಣನು ತನ್ನ ಹಿಂದಿನ ಮಿತ್ರರಾದ ಗೋಪಾಲಕರಿಂದ ಕೂಡಿಕೊಂಡು ಯಥೇಚ್ಛವಾಗಿ ಮದ್ಯಪಾನ ಮಾಡಿದನು. ಅದರಿಂದ ಅವನಲ್ಲಿ ಮದತುಂಬಿ, ಮೋದಹೊಂದಿ ಯಮುನೆಯೊಡನೆ ವಿಹರಿಸ ಬೇಕೆಂದು ಅಪೇಕ್ಷೆಯಾಯಿತು. ಆಗ ಅವನು ಪ್ರೇಮಾತ್ಮ ನಾದದಿಂದ ಮತ್ತನಾಗಿ ಕಾಲಿಂದಿ ಯನ್ನು ತನ್ನೊಡನೆ ಕ್ರೀಡೆ ಮಾಡು ಬಾ ಎಂದು ಕರೆದನು.

ಕುಡಿದ ಮತ್ತಿನಲ್ಲಿರುವ ಆ ಬಲರಾಮನ ಪ್ರೇಮದ ಕರೆಯನ್ನು ಕಾಲಿಂದಿಯು ಮನ್ನಿಸಲಿಲ್ಲ. ಅವನೊಡನೆ ಕೇಳೀ ವಿಲಾಸಕ್ಕೂ ಇಳಿಯಲಿಲ್ಲ. ಆಗ ಅವನಿಗೆ ಕೋಪ ಬಂದು ತನ್ನ ನೇಗಿಲ ಆಯುಧವನ್ನು ಕೈಯಲ್ಲಿ ತೆಗೆದುಕೊಂಡನು. ಮತ್ತು ಆ ಯಮುನೆಯನ್ನು ಕುರಿತು ''ಪಾಪಿಷ್ಠಳೆ, ನಾನು ಕರೆದಾಗ ಬರುವುದಿಲ್ಲವೇ! ಹಾಗಾದರೆ ನೋಡು, ನೀನು ಮತ್ತೊಂದು ಕಡೆ ಹರಿಯಬೇಕಾಗುವುದು'' ಎಂದು ಹೇಳುತ್ತ ಆ ನದಿಯನ್ನು ಬಲಾತ್ಕಾರ ವಾಗಿ ಎಳೆದು ಹಾಕಿದನು. ಇದರಿಂದ ಯಮುನೆಯ ಪ್ರವಾಹದ ಗತಿಯೆ ಬದಲಾಯಿತು. ಅವಳು ತಾನು ಹರಿಯುತ್ತಿದ್ದ ಪಾತ್ರವನ್ನು ಬಿಟ್ಟು ಬಲರಾಮನು ಇದ್ದ ನಿಟ್ಟಿನಲ್ಲಿಯೆ ತುಂಬಿ ಹರಿಯತೊಡಗಿದಳು. ಅನಂತರ ಆ ಯಮುನೆಯು ಒಂದು ಮನುಷ್ಯ ಹೆಣ್ಣಿನ ರೂಪಧರಿಸಿ ಹೆದರಿಕೆಯಿಂದ ಬಾಗಿ ದೀನಳಾಗಿ ಬಲರಾಮನನ್ನು ಪ್ರಾರ್ಥಿಸಿಕೊಂಡಳು. ''ಮುಸಲಾಯುಧ ನನ್ನ ಮೇಲೆ ಪ್ರಸನ್ನನಾಗು ನನ್ನನ್ನು ಬಿಟ್ಟುಬಿಡು'' ಎಂದು ಬೇಡಿಕೊಂಡಳು. ಆಗ ಬಲರಾಮನು ''ಯಮುನೆಯೆ, ನನ್ನ ಶೌರ್ಯ ಪರಾಕ್ರಮಗಳನ್ನು ತಿರಸ್ಕರಿಸಿ ನುಡಿಯುವಿಯಾ? ಹೀಗೆ ನೀನು ನನ್ನ ಮಾತನ್ನು ಧಿಕ್ಕರಿಸಿದರೆ ಇದರಂತೆಯೇ ನಿನ್ನನ್ನು ಕಂಡ ಕಂಡೆಲ್ಲೆಲ್ಲ ತುಂಡರಿಸಿ, ಸಾವಿರಾರು ಹೋಳು ಮಾಡಿ, ಸಿಕ್ಕ ಸಿಕ್ಕ ಕಡೆಗಳಲ್ಲಿ ದಿಕ್ಕುಗೆಟ್ಟು ಹರಿದಾಡುವಂತೆ ಮಾಡುವೆನು. ನನ್ನ ಹಲಾಯುಧದಿಂದ ನೀನು ಸಾವಿರಾರು ಸೀಳುಗಳಾಗಿ ತುಂಡು ತುಂಡು ಸರಳುಗಳಾಗಿ ಛಿನ್ನ ವಿಚ್ಛಿನ್ನಳಾಗಿ ಮುರಿದು ಹರಿದು ಅನೇಕ ಝರಿಯಾಗಿ, ಹರಿಯಾಗಿ, ತೀರ ಚಿಕ್ಕ ಚಿಕ್ಕ ತೊರೆಯಾಗಿ ಎಲ್ಲಿಯೋ ಮರೆಯಾಗಿ ಹೋಗಿಬಿಡುವಂತೆ ಮಾಡುತ್ತೇನೆ'' ಎಂದು ಹೇಳಿದನು.

ಆಗ ಯಮುನಾ ನದಿಯು ಬಹಳ ಹೆದರಿ ಆ ಬಲರಾಮನನ್ನು ದೀನಳಾಗಿ ಪ್ರಾರ್ಥಿಸಿ ಪ್ರಸನ್ನನಾಗುವಂತೆ ಪರಿಪರಿಯಿಂದ ಬೇಡಿಕೊಂಡಳು. ಆಗ ಬಲಭದ್ರನು ಈಗ ತಾನು ಹಾಕಿಕೊಟ್ಟ ಹರಿಯಲ್ಲಿಯೆ, ಹಲಾಯುಧವು ತೋಡಿದ ಪರಿಯಲ್ಲಿಯೆ ಹರಿದು ಹೋಗಬೇಕೆಂದು ಹೇಳಿ ಅವಳನ್ನು ಬಿಟ್ಟು ಕೊಟ್ಟನು. ಅನಂತರ ಬಲರಾಮನು ಆ ಕಾಲಿಂದಿ ಯಲ್ಲಿ ಸ್ನಾನಮಾಡಿದನು. ಆಗ ವರುಣನ ಬಳಿಯಿಂದ ಕಾಂತಿ ಎಂಬ ಮತ್ತೊಬ್ಬ ಬಲರಾಮನ ಕಾಂತೆಯು ಅವನ ಉಪಭೋಗಕ್ಕಾಗಿ ಒಲಿದು ಬಂದಳು. ಅವನಿಗೆ ಕೊರಳಲ್ಲಿ

ಹಾಕಿಕೊಳ್ಳಲು ಸುಂದರವಾದ ಉತ್ಪಲ ಮಾಲೆಯನ್ನೂ ದಿವ್ಯವಾದ ಕಿವಿಯಆಭರಣವನ್ನೂ, ಎಂದೂ ಬಾಡದಿರುವ ತಾವರೆ ಹೂವಿನ ಹಾರವನ್ನೂ ಎರಡು ನೀಲ ವಸ್ತ್ರಗಳನ್ನೂ ತಂದು ಕೊಟ್ಟಳು. ಆಗ ಬಲರಾಮನು ಅವುಗಳನ್ನೆಲ್ಲ ಧರಿಸಿ ಕಾಂತಿಯೊಡನೆ ಮರೆದನು. ಮದ್ಯಸೇವನೆಯಿಂದ ಉಂಟಾದ ಮನೋಮಾಲಿನ್ಯವು ದೂರಾಗಿ ಉಜ್ವಲ ಕಾಂತಿಯಿಂದ ಅವನ ಶರೀರವು ಸೊಗಯಿಸಿತು. ಹೀಗೆ ಬಲರಾಮನು ಅಲಂಕೃತನಾದ ಬಳಿಕ ಅರವತ್ತು ದಿವಸ ವಿಹಾರ ಮಾಡಿ ಮತ್ತೆ ಮಧುರಾಪುರಿಗೆ ಬಂದನು. ಕೆಲವು ಕಾಲ ಕಳೆದ ಬಳಿಕ ರೈವತ ಎಂಬ ಅರಸನು ತನ್ನ ಮಗಳಾದ ರೇವತಿಯನ್ನು ಕೊಟ್ಟು ಬಲರಾಮನಿಗೆ ಮದುವೆಮಾಡಿದನು. ಆ ರೇವತಿಯೆಂಬ ರಮಣಿಯಲ್ಲಿ ನಿಶಠ, ಉಲ್ಮುಖ ಎಂಬ ಇಬ್ಬರು ಮಕ್ಕಳು ಹುಟ್ಟಿದರು ಆ ಬಲರಾಮನಿಗೆ.

## ರುಕ್ಮಿಣೀ ವಿವಾಹ

**ವೇದವ್ಯಾಸ:-** ವಿದರ್ಭ ದೇಶದಲ್ಲಿ ಕುಂಡಿನ ಎಂಬ ಪಟ್ಟಣ. ಅದರ ಅರಸು ಭೀಷ್ಮಕ. ಅವನಿಗೆ ಇಬ್ಬರು ಮಕ್ಕಳು. ರುಕ್ಮಿ ಎಂಬ ಒಬ್ಬ ಗಂಡು ಮಗು, ರುಕ್ಮಿಣಿ ಎಂಬ ಹೆಣ್ಣು ಮಗಳು.

ರುಕ್ಮಿಣಿಯ ರೂಪ ಸೌಂದರ್ಯ ಗುಣ ಶೀಲಗಳಿಗೆ ಒಲಿದು ಕೃಷ್ಣನು ಅವಳನ್ನು ಕಾಮಿಸಿದ. ಕೃಷ್ಣನ ಸದ್ಗುಣ ಸೌಂದರ್ಯ, ಧೈರ್ಯ, ಶೌರ್ಯ, ಪರೋಪಕಾರ, ಲೋಕೋದ್ಧಾರ ಮುಂತಾದ ಗುಣಗಳನ್ನು ಅವನ ಚಿತ್ರ ವಿಚಿತ್ರವಾದ ಚಾರು ಚರಿತ್ರೆಗಳನ್ನು ಕೇಳಿದ ರುಕ್ಮಿಣಿಯು ಅವನನ್ನು ಮನಸಾ ಪ್ರೇಮಿಸಿದ್ದಳು. ಅವರಿಬ್ಬರು ಪರಸ್ಪರ ಪ್ರೇಮದಿಂದ ಮದುವೆ ಆಗಬೇಕೆಂದು ಬಯಸಿದ್ದರು. ಆದರೆ ರುಕ್ಮಿಣಿಯ ಅಣ್ಣನಾದ ರುಕ್ಮಿಗೆ ಮಾತ್ರ ಕೃಷ್ಣನಲ್ಲಿ ಮಹಾದ್ವೇಷ. ಕೃಷ್ಣನು ತಾನಾಗಿ ಅವಳನ್ನು ಕೇಳಿದರೂ ಅವನು ರುಕ್ಮಿಣಿಯನ್ನುಕೊಡಲು ಒಪ್ಪಲಿಲ್ಲ.

ಮಗಧರಾಜನಾದ ಸಮ್ರಾಟ ಜರಾಸಂಧನು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡುವಂತೆ ಒತ್ತಾಯ ಪಡಿಸಿದ. ರುಕ್ಮಿಯು ಕೂಡ ಅದಕ್ಕೆ ಒಪ್ಪಿ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಬೇಕೆಂದು ಆಗ್ರಹಪಡಿಸಿದ. ಚೈದ್ಯನ ಒತ್ತಾಯ ಮತ್ತು ರುಕ್ಮಿಯ ಆಗ್ರಹಕ್ಕೆ ಮಣಿದು ಭೀಷ್ಮಕ ರಾಜನು ಶಿಶುಪಾಲನಿಗೆ ತನ್ನ ಮಗಳನ್ನು ಕೊಡುವುದಾಗಿ ವಾಗ್ದಾನಮಾಡಿದ. ವಿವಾಹ ಸಮಾರಂಭಕ್ಕಾಗಿ ಜರಾಸಂಧ ಮೊದಲಾದ ರಾಜರೂ ವರನಾದ ಚೈದ್ಯ ದೇಶಾಧಿಪತಿ ಶಿಶುಪಾಲನೂ ಭೀಷ್ಮಕನ ರಾಜಧಾನಿಯಾದ ಕುಂಡಿನ ಪಟ್ಟಣಕ್ಕೆ ಬಂದರು. ಆಗ ಕೃಷ್ಣನು ಕೂಡ ಬಲರಾಮ ಮೊದಲಾದ ಯಾದವ ವೀರರೊಂದಿಗೆ ಕೂಡಿಕೊಂಡು ಶಿಶುಪಾಲನು ರುಕ್ಮಿಣಿಯನ್ನು ಅವಳ ಸಮ್ಮತಿ ಇಲ್ಲದೆ ಹೇಗೆ ವಿವಾಹ ಆಗುತ್ತಾನೆ? ಅದನ್ನು ತಡೆಯಬೇಕೆಂದು ಬಂದರು.

''ನಾಳೆ ಮದುವೆ. ಶಿಶುಪಾಲನಿಗೆ ಭೀಷ್ಮಕ ರಾಜನಿಂದ ಕನ್ಯಾದಾನ ನಡೆಯುವುದೆಂದು'' ನಿಶ್ಚಯವಾಯಿತು. ಆಗ ಕೃಷ್ಣನು ಬಲರಾಮ ಮೊದಲಾದ ತನ್ನ ಹಿತೈಷಿಗಳೊಡನೆ ಅವಸರದ ಸಭೆ ಕರೆದು ವಿಚಾರ ವಿಮರ್ಶೆ ಮಾಡಿದನು. ಕೂಡಲೇ ತನ್ನ ಬಂಧು ಮಿತ್ರರೊಡನೆ ಕೂಡಿ ಚೈದ್ಯ, ರುಕ್ಮಿ, ಜರಾಸಂಧ, ದುರ್ಯೋಧನಾದಿಗಳು ನೆರೆದ ವಿವಾಹ ಮಂಟಪಕ್ಕೆ ಹೋಗಿ ಯುದ್ಧಮಾಡಿ ಅವರೆಲ್ಲರನ್ನು ಸೋಲಿಸಿದನು. ಪೌಂಡ್ರಕ, ದಂತವಕ್ರ, ವಿದೂರಥ, ಶಿಶುಪಾಲ, ಜರಾಸಂಧ, ಶಾಲ್ವ, ರುಕ್ಮಿ ಎಲ್ಲರೂ ಕನ್ಯೆಯನ್ನು ಕದ್ದೊಯ್ಯಲು ಬಂದು ಎರಗಿದ ಕೃಷ್ಣನೊಡನೆ ಕಲಿತನದಿಂದ ಕಾದಾಡಿದರು. ಹೇವ ತೊಟ್ಟು ಹಣಾಹಣಿ

ಹೋರಾಡಿದರು. ಈ ನೆವದಿಂದ ಬಲಾರಮ ಕೃಷ್ಣ ಯಾದವರನ್ನೆಲ್ಲ ಸಂಹರಿಸಿ ಬಿಡಬೇಕೆಂದು ಸಾಮೂಹಿಕವಾಗಿ ಯಾದವರ ಮೇಲೆ ಮುಗಿಬಿದ್ದರು. ಘೋರಾಯುಧಗಳಿಂದ ಯದುವೀರರೊಂದಿಗೆ ನಿಖರದ ಸಮರ ನಡೆಸಿದರು.

ಆದರೆ ವೀರ ವರೇಣ್ಯರಾದ ರಾಮಕೃಷ್ಣರು, ಆ ವೈರಿ ವೀರರನ್ನೆಲ್ಲ ಲೀಲಾ ಜಾಲವಾಗಿ ಸೋಲಿಸಿ ಗಾಯಗೊಳಿಸಿದರು. ಅವರೆಲ್ಲರು ನೋಡನೋಡುತ್ತಿರುವಂತೆಯೆ ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿದ ಎಲ್ಲರ ಸಮಕ್ಷಮದಲ್ಲಿ ಆ ಕೋಮಲಾಂಗಿಯನ್ನು ಕರೆದು ಕೈಹಿಡಿದು ಕೃಷ್ಣ ತನ್ನ ತೇರಿನಲ್ಲಿ ಕೂಡಿಸಿಕೊಂಡನು. ಎದುರು ಬಂದವರನ್ನೆಲ್ಲ ಹೊಡೆದು ಹಾಕಿ, ಅಡ್ಡ ಬಂದವರನ್ನೆಲ್ಲ ತುಂಡರಿಸಿ, ರುಕ್ಮಿಣಿಯೊಂದಿಗೆ ರಥಾರೂಢನಾಗಿ ಶ್ರೀಕೃಷ್ಣನು ಗಾಂಭೀರ್ಯದಿಂದ ವೈರಿಗಳ ಹಿಂಡಿನ ಮಧ್ಯದಲ್ಲಿಯೆ ಹಾದಿ ಮಾಡಿಕೊಂಡು ಮುಂದೆ ನಡೆದ.

ಅದನ್ನು ಕಂಡು ಕಸಿವಿಸಿಕೊಂಡ ರುಕ್ಮಿಯು ಕೃಷ್ಣನನ್ನು ಬೆನ್ನಟ್ಟಿದ. "ಕೃಷ್ಣನನ್ನು ಕೊಲ್ಲದೆ ನಾನು ಕುಂಡಿನ ನಗರಕ್ಕೆ ಹಿಂದಿರುಗುವುದಿಲ್ಲ ಎಂದು ಆಣೆಯಿಟ್ಟು, ಕೃಷ್ಣನ ಮೇಲೆ ಏರಿ ಹೋದ. ತನ್ನ ಚತುರಂಗ ಸೈನ್ಯದೊಂದಿಗೆ, ತಂಗಿಯನ್ನು ಕರೆದುಕೊಂಡು ಹೊರಟ ಕೃಷ್ಣನೊಡನೆ ಭಯಂಕರ ಯುದ್ಧಮಾಡಿದ. ಆದರೆ ಲೀಲಾಮಾನುಷ ವಿಗ್ರಹನಾದ ಆ ಶ್ರೀಕೃಷ್ಣ ರುಕ್ಮಿಯ ರಥ, ಆನೆ, ಕುದುರೆ, ಕಾಲಾಳು ಎಂಬ ಚತುರಂಗ ಸೇನೆಯನ್ನೆಲ್ಲ ಸಂಹರಿಸಿ, ರುಕ್ಮಿಯನ್ನು ಸೋಲಿಸಿ ನೆಲದ ಮೇಲೆ ಕೆಡವಿ ಅವನು ಮಣ್ಣು ಮುಕ್ಕುವಂತೆ ಮಾಡಿದ. ಹೀಗೆ ರುಕ್ಮಿಯನ್ನೂ, ಅವನ ಬೆಂಬಲಿಗರಾದ ಶಿಶುಪಾಲ, ಜರಾಸಂಧ, ದಂತವಕ್ರಾದಿಗಳನ್ನೂ ಸೋಲಿಸಿ ಅವರೆಲ್ಲರ ಸಮಕ್ಷಮದಲ್ಲಿಯೆ ರುಕ್ಮಿಣಿಯನ್ನು ರಾಕ್ಷಸ ವಿಧಾನದಿಂದಲೆ ಕದ್ದೊಯ್ದು ವಿಜಯಶಾಲಿಯಾಗಿ ಶ್ರೀಕೃಷ್ಣನು ಆ ನವವಧುವಿನೊಂದಿಗೆ ದ್ವಾರಕಾಪುರ ಪ್ರವೇಶ ಮಾಡಿದನು. ಯಾದವರೆಲ್ಲರಿಗೂ ಎರಡು ರೀತಿಯ ಆನಂದೋದ್ರೇಕ ಉಂಟಾಯಿತು. ಮೊದಲನೆಯದು ಮಹಾಪ್ರಬಲವಾದ ವೈರಿ ವೃಂದವನ್ನೆಲ್ಲ ಗೆದ್ದು ಬಂದದ್ದು. ವಿದರ್ಭರಾಜ ಕುವರಿಯಾದ ರುಕ್ಮಿಣಿಯನ್ನು ದ್ವಾರಕೆಗೆ ಕರೆತಂದದ್ದು ಎರಡನೇದ್ದು ಅದರಿಂದ ಯಾದವ ವೀರರೆಲ್ಲರು ಅತ್ಯಾನಂದದಿಂದ ಅವರಿಬ್ಬರನ್ನು ಮೆರವಣಿಗೆಯಿಂದ ಬರಮಾಡಿಕೊಂಡು ಉತ್ಸಾಹ ಅತಿಶಯದಿಂದ ಕೃಷ್ಣ ರುಕ್ಮಿಣಿಯರ ಮದುವೆ ಸಿದ್ಧತೆಯನ್ನು ನಡೆಸಿದರು.

ಲಕ್ಷ್ಮೀನಾರಾಯಣ ಸ್ವರೂಪರಾದ ರುಕ್ಮಿಣಿ-ಶ್ರೀಕೃಷ್ಣರ ವಿವಾಹ ಮಹೋತ್ಸವವು ಅತ್ಯಂತ ವೈಭವದಿಂದ ಸುರ, ನರ, ಮುನಿ, ಮಹರ್ಷಿ, ಬಂಧು, ಬಾಂಧವರ ಸಮಕ್ಷಮ ಅದ್ದೂರಿಯಿಂದ ನಡೆಯಿತು. ವೈರಿಗಳನ್ನು ಗೆದ್ದು, ರಾಕ್ಷಸ ವಿಧಿಯಿಂದ ಕದ್ದು ತಂದ ರುಕ್ಮಿಣಿಯನ್ನು ಶ್ರೀಕೃಷ್ಣನು ಶಾಸ್ತ್ರೋಕ್ತ ವಿಧಿಯಿಂದ ವೈದಿಕ ಪದ್ಧತಿಯಿಂದ ಸಂತಸದುಂಬಿ, ಸಸಂಭ್ರಮ ಸಮಾರಂಭದ ವಿಜೃಂಭಣ ಪೂರ್ವಕವಾಗಿ ಮದುವೆಯಾದನು.

ಆ ರುಕ್ಮಿಣಿಯಲ್ಲಿ ಶ್ರೀಕೃಷ್ಣನಿಂದ ಕಾಮನ ಅಂಶಸಂಭೂತನಾದ ಮಹಾಪರಾಕ್ರಮ ಶಾಲಿಯಾದ ಪ್ರದ್ಯುಮ್ನನು ಜನಿಸಿದನು. ಅವನನ್ನು ಶಂಬರಾಸುರನು ಹಸುಗೂಸಾಗಿದ್ದಾಗಲೆ ಅಪಹರಿಸಿಬಿಟ್ಟನು. ಮುಂದೆ ಪ್ರದ್ಯುಮ್ನನು ದೊಡ್ಡವನಾದ ಬಳಿಕ ಆ ಶಂಬರಾಸುರನನ್ನು ಸಂಹಾರಮಾಡಿ ಮಾಯಾವತಿ ಎಂಬ ತನ್ನ ಮಡದಿಯೊಂದಿಗೆ ದ್ವಾರಕೆಗೆ ಮರಳಿ ಬಂದನು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತೊಂದನೆಯ ಅಧ್ಯಾಯ ಮುಗಿದುದು*

## ಶಂಬರಾಸುರ ವಧೆ ಪ್ರದ್ಯುಮ್ನನ ಪುನರಾಗಮನ ವರ್ಣನ | ಅಧ್ಯಾಯ - ೪೨

ವೇದವ್ಯಾಸರ ಮುಖದಿಂದ ಪುರಾಣ ಶ್ರವಣ ಮಾಡುತ್ತ ಕುಳಿತ ಋಷಿಗಳು ವ್ಯಾಸರಿಗೆ ಕೇಳಿದರು. ''ಶಂಬರಾಸುರನು ಕೂಸಿದ್ದಾಗ ಪ್ರದ್ಯುಮ್ನನನ್ನು ಅಪಹರಿಸಿದ್ದು ಹೇಗೆ? ಶಂಬರಾಸುರನು ಮಹಾ ಪರಾಕ್ರಮಿಯಲ್ಲವೆ? ಅವನನ್ನು ಹುಡುಗ ಪ್ರದ್ಯುಮ್ನ ಹೇಗೆ ಹೊಡೆದುಹಾಕಿದ? ಇದನ್ನೆಲ್ಲ ನಮಗೆ ವಿವರಿಸಿರಿ.''

**ವೇದವ್ಯಾಸ:-** ದ್ವಿಜೋತ್ತಮರೆ, ಪ್ರದ್ಯುಮ್ನನು ರುಕ್ಮಿಣಿಯ ಹೊಟ್ಟೆಯಿಂದ ಹುಟ್ಟಿದ ಕೂಡಲೆ ನಾರದರ ಮುಖದಿಂದ ಶಂಬರಾಸುರನಿಗೆ ಸಮಾಚಾರ ತಿಳಿದು ಹೋಯಿತು. ಆ ನಾರದರು ಈ ರುಕ್ಮಿಣಿಯ ಮಗನು ನಿನ್ನನ್ನು ಕೊಲ್ಲಲಿಕ್ಕಾಗಿಯೇ ಹುಟ್ಟಿ ಬಂದಿದ್ದಾನೆ ಎಂಬ ದೇವರಹಸ್ಯವನ್ನು ಅವನಿಗೆ ತಿಳಿಸಿಬಿಟ್ಟನು. ಆಗ ಮಹಾ ಮಾಯಾವಿಯಾದ ಶಂಬರಾಸುರನು ಹೆರಿಗೆಯ ಮನೆಯಿಂದಲೇ ಆ ಶಿಶುವನ್ನು ತನ್ನ ಮಾಯೆಯಿಂದ ಅಪಹರಿಸಿ ಬಿಟ್ಟ. ''ನನ್ನ ಹಂತಕನನ್ನು ಹಸುಗೂಸು ಇದ್ದಾಗಲೆ ಕೊಂದು ಹಾಕಿದರೆ ನಾನು ಚಿರಂಜೀವಿ'' ಎಂದು ಭ್ರಮೆ ಆ ಶಂಬರನಿಗೆ. ಆದುದರಿಂದಲೆ ಅವನು ಅದೇ ಹುಟ್ಟಿದ ಕೃಷ್ಣಕುಮಾರನನ್ನು ಗರ್ಭಾಗಾರದಿಂದ ಕಣ್ಕಟ್ಟು ಮಾಡಿ ಅವನನ್ನು ಅಪಹರಿಸಿಬಿಟ್ಟ. ಆ ಹುಡುಗನನ್ನು ಕೊಲ್ಲಬೇಕೆಂದು ಆಕಾಶಮಾರ್ಗದಿಂದ ತೆಗೆದುಕೊಂಡು ಬರುವಾಗ ಕೆಳಗಡೆ ಘೋರ ಸಾಗರವು ತನ್ನ ಪೆರ್ದೆರೆಗಳಿಂದ ಅಲ್ಲೋಲ ಕಲ್ಲೋಲವಾಗಿ ಘೂರ್ಮಿಸುತ್ತಿತ್ತು. ಆ ಕಡಲಿನ ಒಡಲಿನ ತುಂಬ ಮೊಸಳೆಗಳು ತುಂಬಿದ್ದವು. ಮೀನುಗಳು ಮುಕುರಿದ್ದವು. ಈ ಸಮುದ್ರದ ಮಧ್ಯದಲ್ಲಿ ಒಗೆದು ಬಿಟ್ಟರೆ ಈ ಕೂಸು ತಾನೆ ಸತ್ತು ಹೋಗುವುದೆಂದು ಬಗೆದು ಶಂಬರನು ಸಮುದ್ರದಲ್ಲಿ ಒಗೆದು ಬಿಟ್ಟ.

ಶಂಬರನಿಂದ ಬಿಸಾಡಲ್ಪಟ್ಟ ಆ ಮಗುವನ್ನು ಅಲ್ಲಿ ಬಾಯ್ದೆರೆದು ನಿಂತ ಒಂದು ಮೀನವು ನುಂಗಿ ಬಿಟ್ಟಿತು. ಘೋರ ರಾಕ್ಷಸನು ಆ ಸಮುದ್ರದ ಮಧ್ಯದಲ್ಲಿ ತೂರಿ ಒಗೆದಾಗಲೂ, ಅವನ ಕೈಯಿಂದ ಜಾರಿ ಬಿದ್ದಾಗಲೂ ಮೀನವೊಂದು ಅದನ್ನು ಹಾಕಿ ಹಿಡಿದಾಗಲೂ, ನುಂಗಿದಾಗಲೂ, ಮೀನದ ಉದರದಲ್ಲಿ ತಂಗಿದಾಗಲೂ, ಆ ಮಗುವಿಗೆ ಏನೂ ಆಗಲಿಲ್ಲ. ಆಯುಷ್ಯದ ದಾರ ಗಟ್ಟಿ ಇದ್ದಾಗ ಎಷ್ಟೇ ಎಡರು ತೊಡರು ವಿಘ್ನವಿದ್ದರೂ ದಾವು ನೋವು ಸಂಕಟಗಳು ಒದಗಿದರೂ ಜೀವ ಸುರಕ್ಷಿತವಾಗಿ ಉಳಿಯುವುದು. ರುಕ್ಮಿಣಿಯ ಮಗುವನ್ನು ನುಂಗಿದ ಮೀನ ಬೆಸ್ತರ ಬಲೆಯಲ್ಲಿ ಬಿದ್ದಿತು. ಅದನ್ನು ಎಳೆದು ಮನೆಗೆ ತಂದ ಬೆಸ್ತರು ಮಹಾರಾಜನಾದ ಶಂಬರಾಸುರನಿಗೆ ತಮ್ಮ ತಾಜಾ ಕಾಣಿಕೆಯಾಗಿ ಆ ಮೀನವನ್ನು ಒಯ್ದು ಒಪ್ಪಿಸಿದರು. ಶಂಬರಾಸುರನಿಗೆ ಮಾಯಾವತೀ ಎಂಬ ಮಡದಿ ಇದ್ದಳು. ಅಂತಃಪುರದಲ್ಲಿ ಅವಳೇ ಸರ್ವಾಧಿಕಾರಿಣಿ. ಅವಳು ಅಂದಿನ ಅಡಿಗೆಗಾಗಿ ಮೀನವನ್ನು ಹೆಚ್ಚಿದಳು. ಸೀಳಿದ ಅದರ ಉದರದಿಂದ ಒಂದು ಮಗು ಹೊರಟದ್ದರಿಂದ ಬೆಚ್ಚಿದಳು. ಆ ಮಗು ಮಹಾದೇವರ ಮೂರನೆಯ ಕಣ್ಣಿನಿಂದ ಸುಟ್ಟುಹೋದ ಕಾಮನೆ ಮತ್ತೆ ಹುಟ್ಟಿಬಂದಂತೆ ಕಾಣುತ್ತಿತ್ತು. ಆ ಮಗುವಿನ ಅಂಗಕಾಂತಿಯನ್ನು ಮಿಂಚು ಮೈಯನ್ನು ಮೆಚ್ಚಿದಳು. ಶೃಂಗಾರರಸದ ಸಾಕಾರ ರೂಪದಂತಿರುವ ಆ ಮೋಹನಾಂಗನ ಮನೋಹರವಾದ ಕಾಯ ಕಾಂತಿಯನ್ನು ಕಂಡು ಅವಳಿಗೆ ಕುತೂಹಲವಾಯಿತು. ಇದು ಯಾರ ಮಗು? ಇಂಥ ಮೋಹನಾಂಗ ಮೀನದ ಹೊಟ್ಟೆಯಿಂದ ಬರಲು ಕಾರಣವೇನು? ಇಂಥ

ಅಪೂರ್ವ ಸೌಂದರ್ಯವು ಈ ಹುಡಗನ ಮೈಯಲ್ಲಿ ಹೇಗೆ ಮಿಂಚುತ್ತಿರುವುದು? ಹೀಗೆ ಪ್ರಶ್ನೆ ಪರಂಪರೆಗಳು ಅವಳ ಮನಸ್ಸಿನಲ್ಲಿ ಉತ್ಸುಕತೆಯನ್ನು ಕೆರಳಿಸಿದವು. ಅಷ್ಟರಲ್ಲಿ ಅಲ್ಲಿಗೆ ನಾರದರು ಬಂದರು. ಅವರು ಅವಳ ಮುಖದ ಮೇಲೆಯೇ ಅವಳ ಮನಸ್ಸಿನಲ್ಲಿರುವ ಪ್ರಶ್ನೆಗಳನ್ನು ಓದಿಕೊಂಡು ಉತ್ತರ ಹೇಳಿದರು.

''ಸುಂದರಿ, ಇವನು ಸಾಕ್ಷಾತ್ ಶ್ರೀಕೃಷ್ಣನ ವರಪುತ್ರ, ಜನ್ಮಾಂತರದಲ್ಲಿ ಇವನೇ ಮನ್ಮಥ. ಇವನಿಂದ ತನಗೆ ಮುಂದೆ ಮರಣ ಸಂಭವಿಸುವುದು ಎಂಬ ಸಮಾಚಾರ ತಿಳಿದು ಶಂಬರಾಸುರ ತನ್ನ ಮಾಯೆಯಿಂದ ಮಗುವನ್ನು ಹುಟ್ಟಿದ ಮನೆಯಿಂದ ಹಾರಿಸಿಕೊಂಡು ತಂದು ಸಮುದ್ರದಲ್ಲಿ ಎಸೆದ. ಮಗುವ ಮೀನದ ಬಾಯಲ್ಲಿ ಬಿದ್ದಿತು. ತಾಜಾ ಮೀನುಗಳನ್ನೆಲ್ಲ ತಂದು ಒಪ್ಪಿಸಬೇಕು ಎಂಬ ರಾಜನ ಆದೇಶಕ್ಕೆ ತಲೆಬಾಗಿ ಅದನ್ನು ಬೆಸ್ತರು ತಂದು ಶಂಬರಾಸುರನಿಗೆ ಒಪ್ಪಿಸಿದರು. ಶಂಬರಾಸುರನ ಪಾಕಶಾಲೆಗೆ ನೀನೇ ಅಧಿಕಾರಿಣಿ. ಅವನ ಪತ್ನಿ. ಈಗ ಈ ಮಗು ನಿನ್ನ ಕೈಯಲ್ಲಿ ಸಿಕ್ಕಿದೆ. ಇವನು ನಿನಗೆ ಜನ್ಮಾಂತರದ ಪತಿ. ನೀನು ಕಾಮನ ಸತಿ ಸಾಕ್ಷಾದ್ ರತಿದೈವ ನಿನ್ನ (ಪತಿ) ಮಗುವನ್ನು ನಿನ್ನ ಕೈಯಲ್ಲಿ ತಂದು ಇರಿಸಿದೆ. ಇವನನ್ನು ಎಚ್ಚರಿಕೆಯಿಂದ ಕಾಪಾಡು.''

ನಾರದರ ಮಾತನ್ನು ಕೇಳಿದ ಕೂಡಲೆ ಆ ಮಗುವಿನ ಮೇಲೆ ಅವಳಿಗೆ ಪ್ರೇಮದ ಜೊತೆಗೆ ಕಾಮವೂ ಮೂಡಿತು. ಅದರ ರೂಪ ಸೌಂದರ್ಯಕ್ಕೆ ಮಾರು ಹೋದಳು. ಅತ್ಯಂತ ಅನುರಾಗದಿಂದ ಆ ಮಗುವನ್ನು ಸಾಕಿದಳು. ಆ ಬಾಲಕನು ತರುಣನಾದ. ತುಂಬ ತಾರುಣ್ಯದ ಲಾವಣ್ಯ ಅವನ ಅಂಗಾಂಗಗಳಲ್ಲಿ ಸೂಸ ತೊಡಗಿತು. ಆ ಪ್ರದ್ಯುಮ್ನನಿಗೆ ಎಲ್ಲ ವಿಧವಾದ ಮಾಯೆಗಳನ್ನು ಕಲಿಸಿಕೊಟ್ಟಳು. ದಾಸಿಯಾಗಿ, ತಾಯಿಯಾಗಿ, ಗುರುವಾಗಿ ಅವನಿಗೆ ಲಾಲನೆ, ಪಾಲನೆ, ಪೋಷಣೆ ವಿದ್ಯಾಧ್ಯಯನ ಎಲ್ಲವನ್ನು ಮಾಡಿಸಿದಳು.

ಮುಂದೆ ಪ್ರಾಯದ ಕಾಂತಿಯಿಂದ ಹರೆಯ ಸಿರಿ ಅವನಲ್ಲಿ ಉಕ್ಕತೊಡಗಿದಾಗ ಅವನಲ್ಲಿ ಪ್ರೇಮವನ್ನು ತಳೆದಳು. ಅವನ ಮೇಲೆ ಕಾಮಾಲಸವಾದ ಕಟಾಕ್ಷವನ್ನು ಬೀರಿದಳು. ಕಡೆಗಣ್ಣು ಕುಡಿಗಣ್ಣಿನ ನೋಟದಿಂದ ತನ್ನ ಶೃಂಗಾರ ಭಾವವನ್ನು ತೋರ್ಪಡಿಸಿದಳು. ಆಗ ತರುಣನಾದ ಪ್ರದ್ಯುಮ್ನನಿಗೆ ಅತ್ಯಾಶ್ಚರ್ಯವಾಯಿತು. ಇಷ್ಟು ದಿನ ತಾಯಿಯಂತೆ ಇದ್ದಳು ಈಗ ಪ್ರೇಯಸಿಯಂತೆ ತನ್ನೊಡನೆ ಚಲ್ಲಾಟವಾಡುತ್ತಿರುವಳಲ್ಲ! ಇದು ಏನು ವಿಷಯ? ಎಂದು ಕೇಳಿಯೆ ಬಿಟ್ಟ. ಆಗ ಮಾಯಾವತಿಯು ನಸುನಾಚಿ ಬಳಕುತ್ತ ನುಡಿದಳು. ''ಪ್ರೀತಿಯ ಪ್ರದ್ಯುಮ್ನ, ನೀನು ನನ್ನ ಮಗನಲ್ಲ. ನೀನು ಶ್ರೀಕೃಷ್ಣನ ಸಾಕ್ಷಾತ್ ಪುತ್ರ. ನಿನ್ನನ್ನು ಶಂಬರಾಸುರನು ಗರ್ಭಾಗಾರರಿಂದ ಕದ್ದು ತಂದು ಕಡಲಿನ ನಡುನೀರಿನಲ್ಲಿ ತೂರಿ ಒಗೆದ. ನೀನು ಮೀನದ ಬಾಯಲ್ಲಿ ಹಾರಿ ಬಿದ್ದ. ನಿನ್ನನ್ನು ನುಂಗಿದ ಮೀನವನ್ನು ಬೆಸ್ತರು ಶಂಬರಾಸುರನಿಗೆ ತಂದುಕೊಟ್ಟರು. ಮೀನದ ಹೊಟ್ಟೆಯಿಂದ ನೀನು ನನಗೆ ದೊರೆತೆ. ನಿನ್ನ ತಾಯಿಯಾದ ರುಕ್ಮಿಣಿ ದೇವಿಯು ನಿನ್ನನ್ನು ನೆನೆದು ಈಗಲೂ ಕಣ್ಣೀರಿಡುತ್ತಿದ್ದಾರೆ. ''ನಾನು ನಿನ್ನ ಜನ್ಮಾಂತರದ ಮಡದಿ. ನೀನು ಕಾಮ ನಾನು ರತಿ. ಈ ಜನ್ಮದಲ್ಲಿ ನೀನು ಪ್ರದ್ಯುಮ್ನ ನಾನು ನಿನ್ನ ಪೂರ್ವಪತ್ನಿ ಮಾಯಾವತಿ'' ಹೀಗೆ ಕೇಳಿದ ಕೂಡಲೆ ಪ್ರದ್ಯುಮ್ನನಿಗೆ ಕೋಪವು ಉಕ್ಕೇರಿತು. ಅವನು ಸಿಡಿದೆದ್ದು ಶಂಬರಾಸುರನೊಡನೆ ಯುದ್ಧ ಮಾಡಿದ.

ಶಂಬರಾಸುರನ ಸೈನ್ಯವನ್ನೆಲ್ಲ ಶೌರ್ಯದಿಂದ ಸೋಲಿಸಿದ, ಎದುರಿಸಿದವರೆಲ್ಲರನ್ನು ಕೊಂದು ಹಾಕಿದ. ಶಂಬರಾಸುರನು ತನ್ನ ಮೇಲೆ ಪ್ರಯೋಗಿಸಿದ ಏಳು ಮಾಯೆಗಳನ್ನು

ತರಿದೊಟ್ಟಿದ. ಎಂಟನೆಯದಾಗಿ ತಾನೆ ಒಂದು ಮಾಯೆಯನ್ನು ನಿರ್ಮಿಸಿ ಶಂಬರಾಸರನ ಮೇಲೆ ಬೀಸಿದ. ಅಷ್ಟಮ ಮಾಯೆಯಿಂದ ಶಂಬರಾಸುರ ಸತ್ತು ನೆಲದ ಮೇಲೆ ಕುಸಿದು ಬಿದ್ದ. ಅನಂತರ ಪ್ರದ್ಯುಮ್ನ ಮಡದಿ ಮಾಯಾವತಿಯೊಂದಿಗೆ ದ್ವಾರಕಾ ಪಟ್ಟಣಕ್ಕೆ ಹಾರಿ ಬಂದ. ಹೀಗೆ ಮಾಯಾವತಿಯೊಂದಿಗೆ ಶ್ರೀಕೃಷ್ಣನ ಅಂತಃಪುರಕ್ಕೆ ಬಂದು ಇಳಿದ. ಪ್ರದ್ಯುಮ್ನನನ್ನು ಕಂಡು ಶ್ರೀಕೃಷ್ಣನ ಪರಿವಾರಕ್ಕೆಲ್ಲ ಆನಂದ ಆಶ್ಚರ್ಯ. ಉಲ್ಲಾಸ, ಮೂರೂ ಆದವು. ರುಕ್ಮಿಣಿಯು ಪುತ್ರವಾತ್ಸಲ್ಯದಿಂದ ಹದಿನಾರು ವರುಷದ ತರುಣನಾಗಿ ಬಂದು ನಿಂತುಕೊಂಡ ಪ್ರದ್ಯುಮ್ನನನ್ನು ನೋಡಿ ಗುರುತಾಗದೆ ಕೌತುಕದಿಂದ ಕೇಳಿದಳು. ''ಮಗು, ನೀನು ಯಾರು? ಇದೀಗ ಯೌವ್ವನದಲ್ಲಿ ಪಾದಾರ್ಪಣ ಮಾಡುತ್ತಲಿರುವೆ? ನಿನ್ನನ್ನು ಹಡೆದ ತಾಯಿ ಯಾರು ಪಡೆದ ತಂದೆ ಯಾರು? ಮನ್ಮಥನಂಥ ಇಂಥ ಮಗನನ್ನು ಪಡೆದ ಆ ತಾಯಿ ತಂದೆಗಳು ನಿಜವಾಗಿಯೂ ಧನ್ಯರು. ನನ್ನ ಮಗನಾದ ಪ್ರದ್ಯುಮ್ನ ಬದುಕಿದ್ದರೆ ಇದೇ ವಯಸ್ಸಿನವನೆ ಇರುತ್ತಿದ್ದ. ನನಗೆ ಏಕೋ ನಿನ್ನನ್ನು ಕಂಡ ಕೂಡಲೆ ನಿನ್ನ ಮೇಲೆ ಪ್ರೀತಿಯ ಝುರಿಯೆ ಹರಿಯುತ್ತಿದೆ ನಿನ್ನ ಈ ಮುಖಚರ್ಯೆ ಈ ಮೋಹಕ ಶರೀರ, ನಡೆ, ನುಡಿಯುವ ರೀತಿಗಳನ್ನು ಗಮನಿಸಿದರೆ ನೀನು ಖಂಡಿತವಾಗಿಯೂ ಶ್ರೀಕೃಷ್ಣ ಪ್ರಭುವಿನ ಮಗನೇ ಆಗಿರಬೇಕು ಎಂದು ಎನಿಸುವುದು'' ಎಂದು ವಾತ್ಸಲ್ಯ ತುಂಬಿ ನುಡಿದಳು.

ಅಷ್ಟರಲ್ಲಿ ನಾರದರು ಶ್ರೀಕೃಷ್ಣನೊಂದಿಗೆ ಅಲ್ಲಿಗೆ ಬಂದರು. ಅವರು ರುಕ್ಮಿಣಿಯನ್ನು ಕುರಿತು ''ತಾಯಿ, ಇವನು ಬೇರೆ ಯಾರೂ ಅಲ್ಲ. ನಿನ್ನ ಮಗನಾದ ಪ್ರದ್ಯುಮ್ನನೇ. ಹುಟ್ಟಿದ ಕೂಡಲೆ ಆ ಹಸುಗೂಸನ್ನು ಶಂಬರಾಸುರನು ಕದ್ದು ಒಯ್ಯಲಿಲ್ಲವೇ? ಇದೇ ಆ ನಿನ್ನ ಕೂಸು. ಅಪ್ಪನಂತೆಯೇ ಶೂರ ವೀರನಾದ ಈ ನಿನ್ನ ಕುಮಾರನು ಶಂಬರಾಸುರನನ್ನು ಸಂಹರಿಸಿ ಈಗ ನಿನ್ನ ಬಳಿಗೆ ಬಂದಿದ್ದಾನೆ. ಈ ಮಾಯಾವತಿಯು ನಿನ್ನ ಸೊಸೆ. ಪ್ರದ್ಯುಮ್ನನ ಪತ್ನಿ. ಇವಳು ಶಂಬರಾಸುರನ ಮಡದಿಯಂತೆ ನಟಿಸಿ ಅವನ ಮನೆಯಲ್ಲಿದ್ದರೂ ಅವನನ್ನು ಎಂದೂ ಮುಟ್ಟಲಿಲ್ಲ. ತನ್ನ ಮಾಯೆಯಿಂದ ಬೇರೊಂದು ತನ್ನಂತೆ ಇರುವ ಪ್ರತಿರೂಪವನ್ನು ನಿರ್ಮಿಸಿ ಆ ಮಾಯಾಂಗನೆಯನ್ನೇ ಶಂಬರಾಸುರನ ಬಳಿಗೆ ಕಳುಹಿಸಿ ತನ್ನ ನಿಜರೂಪದಿಂದ ಪರಮ ಪತಿವ್ರತಿಯಾಗಿಯೇ ಉಳಿದಳು. ನಿನ್ನ ಹೊಟ್ಟೆಯಿಂದ ಅವಳ ಪೂರ್ವ ಜನ್ಮದ ಪತಿಯು ಹುಟ್ಟಿ ಪ್ರದ್ಯುಮ್ನನಾಗಿ ಅವತರಿಸಿದ. ಕಾಕತಾಳೀಯ ನ್ಯಾಯದಿಂದ ಮೀನದ ಹೊಟ್ಟೆಯಲ್ಲಿ ಬಿದ್ದು ಮಗುವಾಗಿದ್ದಾಗಲೆ ಅವಳಿಗೆ ಅವಳ ಪತಿ ದೊರಕಿದ (ನನ್ನ) ನಾರದರ ಮಾತಿನಿಂದ ಈ ಮಗು ತನ್ನ ಪತಿಯೆಂದು ಅರಿತು ಜಾಗರೂಕತೆಯಿಂದ ರಕ್ಷಿಸಿ, ಅವನಿಗೆ ವಿದ್ಯೆ ಕಲಿಸಿ, ದೊಡ್ಡವನನ್ನಾಗಿ ಮಾಡಿದಳು. ಅವನು ಬಳಿಕ ತನ್ನ ಶೌರ್ಯದಿಂದ ಶಂಬರಾಸುರನನ್ನು ಸೋಲಿಸಿ ಸಾಯಿಸಿ ಮಡದಿಯೊಡನೆ ಮರಳಿ ತನ್ನ ಮಾತೆಯ ಬಳಿಗೆ ಬಂದಿದ್ದಾನೆ. ಇವನೇ ನಿನ್ನ ಮಗನಾದ ಪ್ರದ್ಯುಮ್ನ, ಮನ್ಮಥನ ಅವತಾರ. ಈ ಮಾಯಾವತಿಯು ಮನ್ಮಥನ ಮಡದಿಯಾದ ರತಿ. ನಿನ್ನ ಹೊಸ ಸೊಸೆ. ಈ ವಿಷಯದಲ್ಲಿ ಒಂದು ಮಾತ್ರವೂ ಸಂದೇಹವಿಲ್ಲ. ಈ ಮಂಗಳಾಂಗಿಯು ನಿನ್ನ ಮುದ್ದು ಸೊಸೆ ಎಂದು ಹೇಳಿದರಲ್ಲಿ ಸಂಶಯವೇ ಬೇಡ.

ನಾರದರ ಈ ಮಾತಿನಿಂದ ರುಕ್ಮಿಣಿಗೆ ಪರಮಸಂತೋಷವಾಯಿತು. ಸರ್ವಜ್ಞನಾದ ಕೃಷ್ಣನು ಕೂಡ ಮಗ ಸೊಸೆಯರ ಪುನರಾಗಮನದಿಂದ ಹರ್ಷಪಟ್ಟ. ದ್ವಾರಕಾನಗರದ ನರ ನಾರಿಯರೆಲ್ಲರು ಈ ಕೌತುಕದ ಸಮಾಚಾರ ಕೇಳಿ ಆನಂದದಿಂದ ಕುಣಿದಾಡಿದರು.

## ಅನಿರುದ್ಧ ವಿವಾಹ

**ವೇದವ್ಯಾಸ:-** ಶ್ರೀಕೃಷ್ಣನಿಗೆ ಅವನ ಪಟ್ಟದರಸಿ ರುಕ್ಮಿಣಿ ದೇವಿಯಿಂದ ಚಾರುದೇಷ್ಣ, ಸುದೇಷ್ಣ, ಚಾರುದೇಶ, ಸುಕ್ಷೀಣ, ಚಾರುಗುಪ್ತ, ಭದ್ರಚಾರು, ಚಾರುವಿಂದ, ಸುಚಾರು, ಷಾರು ಪ್ರದ್ಯುಮ್ನ ಎಂಬ ಹತ್ತು ಗಂಡು ಮಕ್ಕಳೂ ಚಾರುಮತಿ ಎಂಬ ಒಬ್ಬ ಹೆಣ್ಣು ಮಗಳೂ ಜನಿಸಿದರು. ಶ್ರೀಕೃಷ್ಣನಿಗೆ ರುಕ್ಮಿಣೀ ದೇವಿ ಅಲ್ಲದೆ ಸತ್ಯಭಾಮಾ, ಕಾಲಿಂದಿ, ಮಿತ್ರವಿಧಾ ನಾಗ್ನಜತೀ, ಜಾಂಬುವತೀ, ರೋಹಿಣೀ, ಸುಶೀಲಾ ಎಂಬ ಏಳು ಜನ ಪತ್ನಿಯರು ಇಧ್ದರು. ಇದಲ್ಲದೆ ಶ್ರೀಕೃಷ್ಣನಿಗೆ ಹದಿನಾರು ಸಾವಿರ ಜನ ಮಡದಿಯರು ಅನಂತರ ಮದುವೆ ಮಾಡಿಕೊಂಡು ಬಂದರು.

ಕೃಷ್ಣನ ಕುಮಾರರಲ್ಲಿ ಪ್ರದ್ಯುಮ್ನ ಮಹಾಬಲಿಷ್ಠ. ಅಷ್ಟೇ ಸುಂದರ ಅವನು ರುಕ್ಮಿಯ ಮಗಳ ಸ್ವಯಂವರಕ್ಕೆ ಹೋಗಿದ್ದ. ಕನ್ನೆಯು ಅನ್ಯ ರಾಜಕುಮಾರರನ್ನೆಲ್ಲ ಬಿಟ್ಟು ಪ್ರದ್ಯುಮ್ನನ ಚಲುವು, ನಿಲುವು ಬಲನೋಡಿ ಮೆಚ್ಚಿ ಅವನನ್ನೆ ವರಿಸಿದಳು. ಪ್ರದ್ಯುಮ್ನನಿಗೆ ಆ ರುಕ್ಮಿಯ ಮಗಳಲ್ಲಿ ಅನಿರುದ್ಧ ಎಂಬ ಗಂಡು ಮಗನು ಹುಟ್ಟಿದನು. ಅನಿರುದ್ಧನು ದೊಡ್ಡವನಾದ ಬಳಿಕ ಅವನಿಗೆ ರುಕ್ಮಿಯ ಮಗನ ಮಗಳನ್ನು ಕೊಡುವಂತೆ ಕೃಷ್ಣನು ಕೇಳಿದನು. ರುಕ್ಮಿಯು ಕೃಷ್ಣನನ್ನು ದ್ವೇಷಿಸುತ್ತಿದ್ದರೂ ಅವನ ಮೊಮ್ಮಗನಿಗೆ ತನ್ನ ಮೊಮ್ಮಗಳನ್ನು ಕೊಟ್ಟು ಮದುವೆ ಮಾಡಿದನು.

ಮದುವೆಯ ಸಂದರ್ಭದಲ್ಲಿ ಕೃಷ್ಣ, ಬಲರಾಮ, ಸಾತ್ಯಕಿ, ವಸುದೇವ, ದೇವಕಿ, ಅಕ್ರೂರ, ಉದ್ಧವ ಮೊದಲಾದ ಯಾದವರೆಲ್ಲರೂ ಬಂದಿದ್ದರು. ಮದುವೆಯ ಸಂದರ್ಭ ಮುಗಿಯಿತು. ಆಗ ಒಂದು ದುರಂತ ಘಟನೆಯ ನಡೆಯಿತು.

ರುಕ್ಮಿಯ ಗೆಳೆಯನಾದ ಕಳಿಂಗರಾಜನ ಪ್ರೇರಣೆಯಿಂದ ರುಕ್ಮಿಯು ಬಲರಾಮನನ್ನು ದ್ಯೂತ ಕ್ರೀಡೆಗೆ ಆಹ್ವಾನಿಸಿದನು. ಕುಟಿಲ ನೀತಿಯ ಕಳಿಂಗನು ಬಲರಾಮನು ಪಣಕ್ಕೆ ಒಡ್ಡಿದ ಸಾವಿರ ವರಹಗಳನ್ನು ಗೆದ್ದುಬಿಟ್ಟನು. ಅನಂತರ ಬಲರಾಮನು ಹತ್ತುಸಾವಿರ ವರಹಗಳನ್ನು ಒಂದೇ ಪೆಟ್ಟಿಗೆ ಹಚ್ಚಿದನು. ಅವುಗಳನ್ನೆಲ್ಲ ದ್ಯೂತ ವಿದ್ಯೆಯಲ್ಲಿ ನಿಪುಣನಾದ ರುಕ್ಮಿಯು ಗೆದ್ದುಕೊಂಡನು. ಬಲರಾಮನು ಸೋತನು. ಆಗ ಕಳಿಂಗನು ಹಲ್ಲುಕಿರಿದು ಬಲರಾಮನಿಗೆ ಸರಿ ಆಟ ಆಡಲು ಬಾರದು ಎಂದು ನುಡಿದು ನಕ್ಕನು. ಅದರಂತೆ ರುಕ್ಮಿಯು ಕೂಡ ಬಲರಾಮನನ್ನು ಉಪಹಾಸ ಮಾಡುತ್ತ ''ಈ ಬಲಭದ್ರನಿಗೆ ದ್ಯೂತವಿದ್ಯೆಯಲ್ಲಿ ಬುದ್ಧಿಯಿಲ್ಲ, ಗತಿಯಿಲ್ಲ, ಅದರಿಂದಲೆ ಅವನು ಮೇಲಿಂದ ಮೇಲೆ ಸೋಲುತ್ತಿದ್ದಾನೆ ಹೀಗಿದ್ದರೂ ತಾನು ಈ ಅಕ್ಷ ವಿದ್ಯೆಯಲ್ಲಿ ಬಹಳ ಕುಶಲನೆಂಬ ಒಣ ಜಂಭ ಮಾತ್ರ ಇದೆ. ಈದೀಗ ನಾನು ಕ್ಷಣಾರ್ಧದಲ್ಲಿ ಸೋಲಿಸಿಬಿಟ್ಟೆ'' ಎಂದು ಅಟ್ಟಹಾಸದಿಂದ ನುಡಿದನು.

ಇದರಿಂದ ಬಲದೇವನಿಗೆ ಕೋಪ ಬಂದು ಒಂದು ಕೋಟಿ ವರಹಗಳನ್ನು ಒಮ್ಮೆಲೆ ಪಣಕ್ಕೆ ಇಟ್ಟನು. ಮತ್ತು ಬಹಳ ಚತುರತೆಯಿಂದ ದಾಳಗಳನ್ನು ಉರುಳಿಸಿ ರುಕ್ಮಿಯನ್ನು ಗೆದ್ದು ಬಿಟ್ಟನು. ಆಗ ರುಕ್ಮಿಯು ತಾನು ಸೋತಿದ್ದರೂ ಸುಳ್ಳೆ ಸುಳ್ಳೇ ತಾನೆ ಗೆದ್ದೆ ಎಂದು ಕೂಗಿದನು. ಬಲರಾಮನು ವಾಸ್ತವಿಕವಾಗಿ ಈ ಸಲ ತಾನು ಗೆದ್ದದ್ದು ನಿಜ ಎಂದು ಕೂಗಿ ಹೇಳಿದನು. ಆದರೆ ಬಹುಸಂಖ್ಯೆಯಲ್ಲಿದ್ದ ಕಳಿಂಗ ಮೊದಲಾದವರು ರುಕ್ಮಿಯೆ ಗೆದ್ದ ಎಂದು ರೇಗಿ ಕೂಗಿ ಗಲಾಟೆ ಮಾಡಿದರು. ಅಷ್ಟರಲ್ಲಿ ಆಕಾಶವಾಣಿ ಗಂಭೀರವಾಗಿ ಮೊಳಗಿತು. ''ಬಲರಾಮನು ಗೆದ್ದದ್ದು ನಿಜ ರುಕ್ಮಿಯು ಸುಳ್ಳು ಹೇಳುತ್ತಿದ್ದಾನೆ ಅವನು ಸೋತಿದ್ದಾನೆ.''

ಇಷ್ಟಾದರೂ ರುಕ್ಮಿಯ ಪಕ್ಷದವರು ಬಲರಾಮನನ್ನು ಮೂಢ, ಅಕ್ಷವಿದ್ಯೆಯ ಮರ್ಮವನ್ನು ಅರಿಯದ ಮಂದ ಎಂದು ಉಪಹಾಸ ಮಾಡಿದರು. ಅಟ್ಟಹಾಸ ಮಾಡುತ್ತಲೇ ಇದ್ದರು. ಅದನ್ನು ನೋಡಿ ಬಲರಾಮನು ಕೋಪದಿಂದ ಕೆಂಡಮಂಡಲವಾಗಿ ಆಟ ಆಡುವ ಪಗಡೆಯಿಂದಲೇ ರುಕ್ಮಿಗೆ ಬಲವಾಗಿ ಹೊಡೆದನು. ಮತ್ತು ತನ್ನನ್ನು ಉಪಹಾಸಗೈಯುತ್ತಲಿರುವ ಕಳಿಂಗರಾಜನ ಹಲ್ಲುಗಳನ್ನೆಲ್ಲ ಹೊಡೆದು ಉದುರಿಸಿದನು. ಆ ಸಭೆಯಲ್ಲಿ ಒಂದು ಚಿನ್ನದ ದೊಡ್ಡ ಕಂಬವನ್ನು ಎಳೆದು ರುಕ್ಮಿ ಮತ್ತು ಅವರ ಪರಿವಾರದವರನ್ನು ಹೊಡೆದು ಕೊಂದುಬಿಟ್ಟನು. ಬಲರಾಮನ ಆ ಕೋಪಾಕೋಪವನ್ನು ಕಂಡು ನೆರೆದ ರಾಜರೆಲ್ಲರು ತತ್ತರಿಸಿ ಭಯದಿಂದ ದಿಕ್ಪಾಪಾಲಾಗಿ ಓಡಿಹೋದರು. ಕೊನೆಗೆ ಕೃಷ್ಣನಿಗೆ ಈ ಸಮಾಚಾರ ತಿಳಿಯಿತು. ತಾನು ಏನಾದರೂ ಅಂದರೆ ಬಲರಾಮನಿಗಾಗಲಿ ರುಕ್ಮಿಣಿಗಾಗಲಿ ಮನನೋಯಬಹುದೆಂದು ಮೌನಿಯಾಗಿಯೇ ಎಲ್ಲ ಯಾದವರನ್ನು ಕರೆದುಕೊಂಡು ಮದಮಗನೊಂದಿಗೆ ದ್ವಾರಕಾ ಪಟ್ಟಣಕ್ಕೆ ಮರಳಿದ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿನಲವತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಕೃಷ್ಣಚರಿತ್ರೆಯಲ್ಲಿ ನರಕಾಸುರ ವಧ

**ಅಧ್ಯಾಯ - ೪೩**

**ವೇದವ್ಯಾಸ:**-ಒಂದು ದಿನ ಶ್ರೀಕೃಷ್ಣನು ದ್ವಾರಕಾ ಪಟ್ಟಣದಲ್ಲಿದ್ದಾಗ ದೇವೇಂದ್ರನು ಐರಾವತವನ್ನು ಏರಿಕೊಂಡು ಅಲ್ಲಿಗೆ ಬಂದನು. ಕೃಷ್ಣನನ್ನು ಬಿನ್ನವಿಸಿ ಕೊಂಡನು.

''ಶ್ರೀಕೃಷ್ಣ, ಪ್ರಾಗ್ಜ್ಯೋತಿಷ ನಗರದ ಒಡೆಯನಾದ ನರಕಾಸುರನು ಅನೇಕ ದೈತ್ಯ ದಾನವ ಸಿದ್ಧರನ್ನು ಸಮರದಲ್ಲಿ ಸೋಲಿಸಿದ್ದಾನೆ. ಅವರೆಲ್ಲರ ಹದಿನಾರುಸಾವಿರ ಕನ್ಯಾಮಣಿಗಳನ್ನು ಅಪಹರಿಸಿ ತನ್ನ ಅಂತಃಪುರದಲ್ಲಿ ಇಟ್ಟಿದ್ದಾನೆ. ವರುಣನ ಶ್ವೇತಛತ್ರವನ್ನೂ, ಮಣಿಪರ್ವತ ಎಂಬ ಮಂದರಗಿರಿಯ ಶಿಖರವನ್ನು ಕದ್ದು ಒಯ್ದಿದ್ದಾನೆ. ಹಾಗು ತಾಯಿಯಾದ ಅದಿತಿದೇವಿಯ ಅಮೃತ ಕುಂಡಲ ಎಂಬ ಹೆಸರಿನ ವಾಲೆಗಳನ್ನು ಬಲತ್ಕಾರದಿಂದ ತೆಗೆದುಕೊಂಡು ಹೋಗಿದ್ದಾನೆ. ಅವನನ್ನು ಮರ್ಧಿಸಿ ಆ ವಸ್ತುಗಳನ್ನು ಮರಳಿ ತೆಗೆದುಕೊಂಡು ಬಾ.''

ಇಂದ್ರನ ಮಾತನ್ನು ಕೇಳಿ ಉಪೇಂದ್ರನಾದ ಶ್ರೀಕೃಷ್ಣನು ಸತ್ಯಭಾಮೆಯೊಂದಿಗೆ ಗರುಡನನ್ನು ಆರೋಹಣ ಮಾಡಿಕೊಂಡು ಪ್ರಾಗ್ಜ್ಯೋತಿಷ ಪಟ್ಟಣಕ್ಕೆ ತೆರಳಿದ. ಅಲ್ಲಿ ನರಕಾಸುರನಿಂದ ಪ್ರೇರಿತನಾದ ಮುರಾಸುರನು ಆ ಪಟ್ಟಣದ ರಕ್ಷಣೆಗಾಗಿ ಆ ಪ್ರಾಗ್ಜ್ಯೋತಿಷ ಪಟ್ಟಣದ ಸುತ್ತಲು ನೂರು ಯೋಜನ ಪ್ರದೇಶಗಳಲ್ಲಿ ಯಾರೂ ಪ್ರವೇಶ ಮಾಡದಂತೆ ಭಯಂಕರವಾದ ಪಾಶಗಳನ್ನು ನಿರ್ಮಿಸಿ ಅದನ್ನು ರಕ್ಷಿಸುತ್ತಿದ್ದ. ಮುರನ ಏಳು ಸಾವಿರ ಜನ ಮಕ್ಕಳು ಆ ಪಾಶಗಳನ್ನೂ, ಪಟ್ಟಣಗಳನ್ನೂ ತಂದೆಯೊಂದಿಗೆ ರಕ್ಷಿಸುತ್ತಿದ್ದರು.

ಅವರೆಲ್ಲರನ್ನು ಶ್ರೀಕೃಷ್ಣನು ನಿಖರದ ಸಮರದಲ್ಲಿ ಸುದರ್ಶನ ಚಕ್ರದಿಂದ ಅತ್ಯಲ್ಪ ಸಮಯದಲ್ಲಿಯೆ ಸಂಹರಿಸಿದ. ಅಂದಿನಿಂದ ಅವನಿಗೆ ಮುರಾರಿ ಎಂಬ ಹೆಸರು ಬಂದಿತು. ಅನಂತರ ತನ್ನ ಮೇಲೆ ಏರಿಬಂದ ಹಯಗ್ರೀವ, ಪಂಚಜನ, ಎಂಬ ರಾಕ್ಷಸ ವೀರರನ್ನು ಸಂಹರಿಸಿ ಪ್ರಾಗ್ಜ್ಯೋತಿಷ ನಗರಕ್ಕೆ ನುಗ್ಗಿ ನರಕಾಸುರನನ್ನು ಧೈರ್ಯದಿಂದ ಎದುರಿಸಿದ.

ನರಕಾಸುರನು ತನ್ನ ಪ್ರಚಂಡ ಸೇನೆಯೊಂದಿಗೆ ಕೃಷ್ಣನ ಮೇಲೆ ಮುಗಿಬಿದ್ದು ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದ. ಆದರೆ ಶ್ರೀಕೃಷ್ಣನು ತನ್ನ ಅಮೋಘವಾದ ಸುದರ್ಶನ ಆಯುಧವನ್ನು ಬಿಟ್ಟು ಕ್ಷಣಾರ್ಧದಲ್ಲಿ ನರಕಾಸುರನ ಸೇನೆಯನ್ನೂ ಸ್ವಯಂ ನರಕಾಸುರನನ್ನೂ ಸೀಳಿ ಎರಡು ಹೋಳು ಮಾಡಿ ವಧಿಸಿದ.

ಅನಂತರ ಭೂದೇವಿಯು ಅದಿತಿ ದೇವಿಯ ಅಮೃತ ಕುಂಡಲಗಳನ್ನು ತಂದು ಶ್ರೀಕೃಷ್ಣನಿಗೆ ಒಪ್ಪಿಸಿ ''ನಾಥ, ಸಮುದ್ರದಲ್ಲಿ ಮುಳುಗಿದ ನನ್ನನ್ನು ನೀನು ವರಾಹ ರೂಪ ಧರಿಸಿ ಮೇಲೆ ತಂದು ಉದ್ಧಾರ ಮಾಡಿದೆಯಲ್ಲವೆ? ಆ ಸಮಯದಲ್ಲಿ ನನಗೆ ಆದ ನಿನ್ನ ಪ್ರೀತಿಪೂರ್ವಕವಾದ ಸ್ಪರ್ಶದಿಂದ ಈ ನರಕಾಸುರನು ಜನಿಸಿದ್ದ. ತನ್ನ ದುರ್ಬುದ್ಧಿ ಹಾಗು ದುಷ್ಕೃತ್ಯಗಳ ಪರಿಣಾಮವಾಗಿ ನಿನ್ನಿಂದ ಸಂಹರಿಸಲ್ಪಟ್ಟ ಅವನ ಅಪರಾಧವನ್ನು ಮನ್ನಿಸಿ ನೀನು ಅವನ ಸಂತಾನವನ್ನು ಕಾಪಾಡು ಎಂದುಬೇಡಿಕೊಂಡಳು.

ಅವಳ ಮಾತನ್ನು ಮನ್ನಿಸಿ ನರಕಾಸುರನ ಮಗನನ್ನು ಅವನ ಸಿಂಹಾಸನದಲ್ಲಿ ಕೂಡಿಸಿ ಅವನಿಗೆ ಪಟ್ಟಾಭಿಷೇಕ ಮಾಡಿದ. ಅನಂತರ ಅವನ ಪ್ರಾರ್ಥನೆಯಂತೆ ವರುಣನ ಶ್ವೇತಛತ್ರ ಹಾಗೂ ಮಣಿ ಪರ್ವತಗಳನ್ನೂ ನಾಲ್ಕು ಕೋಡುಗಳುಳ್ಳ ಆರು ಸಾವಿರ ಆನೆಗಳನ್ನೂ ಕಾಂಭೋಜ ದೇಶದಲ್ಲಿ ಹುಟ್ಟಿದ ಇಪ್ಪತ್ತೊಂದು ಸಾವಿರ ಶ್ರೇಷ್ಠ ಕುದುರೆಗಳನ್ನೂ ದ್ವಾರಕಾಪಟ್ಟಣಕ್ಕೆ ಕಳಿಸಿಕೊಟ್ಟ ನರಕಾಸುರನು ತನ್ನ ಅಂತಃಪುರದಲ್ಲಿ ಸೆರೆಇಟ್ಟ ಹದಿನಾರು ಸಾವಿರ ಕನ್ಯೆಯರನ್ನು ಕಾರಾಗೃಹದಿಂದ ಮುಕ್ತರನ್ನಾಗಿ ಮಾಡಿದ. ಅವರೆಲ್ಲರನ್ನು ಒಳ್ಳೊಳ್ಳೆ ರಾಜನಿಗೆ ಕೊಟ್ಟು ಮದುವೆ ಮಾಡಿ ಕೊಡುತ್ತೇನೆ ಎಂದು ಹೇಳಿದ. ಅದಕ್ಕೆ ಅವರು ಒಪ್ಪದೇ ''ಕೃಷ್ಣನೇ ಪತಿಯಾಗಬೇಕೆಂದು ನಾವು ತಪಸ್ಸು ಮಾಡಿದ್ದೇವೆ. ಬೇರೆಯವರ ಪಾಣಿಗ್ರಹಣವನ್ನು ನಾವು ಎಂದೂ ಮಾಡುವುದಿಲ್ಲ. ನೀನೇ ನಮ್ಮನ್ನು ಪತ್ನಿಯರನ್ನಾಗಿ ಸ್ವೀಕರಿಸು'' ಎಂದು ಬೇಡಿಕೊಂಡರು. ಹೀಗೆ ಪಟ್ಟು ಹಿಡಿದ ಆ ಹದಿನಾರು ಸಾವಿರ ಹದಿಹರೆಯದ ಕನ್ಯೆಯರನ್ನೆಲ್ಲ ಕೃಷ್ಣನು ದ್ವಾರಕಾಪುರಿಗೆ ಕಳಿಸಿಕೊಟ್ಟನು. ಮತ್ತು ಅದಿತಿದೇವಿಯ ಅಮೃತ ಕುಂಡಲವನ್ನು ಅವಳಿಗೆ ಕೊಟ್ಟು ಬರಲಿಕ್ಕಾಗಿ ಸ್ವರ್ಗದ ರಾಜಧಾನಿ ಅಮರಾವತಿಗೆ ಸತ್ಯಭಾಮೆ ಜೊತೆಗೆ ಗರುಡಾರೂಢನಾಗಿ ತೆರಳಿದನು.

## ಇಂದ್ರ ಕೃಷ್ಣರ ಯುದ್ಧ

**ವೇದವ್ಯಾಸ:-** ಶ್ರೀಕೃಷ್ಣನು ಸತ್ಯಭಾಮಾ ದೇವಿಯೊಂದಿಗೆ ಗರುಡನ ಹೆಗಲ ಮೇಲೆ ಕುಳಿತು ಸ್ವರ್ಗಲೋಕದ ಬಳಿಗೆ ಬಂದು ತನ್ನ ಪಾಂಚಜನ್ಯ ಶಂಖವನ್ನು ಊದಿದ. ಇಂದ್ರಾದಿ ದೇವತೆಗಳು ಅವರನ್ನು ಸ್ವಾಗತಿಸಿ ಪೂಜಿಸಿದರು. ಅದಿತಿದೇವಿಯ ಮನೆಗೆ ಹೋಗಿ ಅವಳಿಗೆ ನರಕಾಸುರನಿಂದ ಅಪಹೃತವಾದ ಅಮೃತ ಕುಂಡಲಗಳನ್ನು ಕೊಟ್ಟು ನಮಸ್ಕಾರ ಮಾಡಿದ. ಆಗ ಆ ದೇವಮಾತೆಯು ಸಂತೋಷಭರಿತಳಾಗಿ ಕೃಷ್ಣನನ್ನು ಈ ಕೃತ್ಯಕ್ಕಾಗಿ ಹಾಡಿ ಹೊಗಳಿದಳು. ಸತ್ಯಭಾಮಾ ದೇವಿಯು ಶಚೀದೇವಿಯೊಂದಿಗೆ ಆ ದೇವಜನನಿಗೆ ನಮಸ್ಕರಿಸಿದಳು. ಬಳಿಕ ದೇವರಾಜನಾದ ಇಂದ್ರನು ಅದಿತಿದೇವಿಯ ಸಮ್ಮತಿಯಿಂದ ಆ ಉಪೇಂದ್ರ ದಂಪತಿಗಳನ್ನು ವಿಧಿಪೂರ್ವಕವಾಗಿ ಪೂಜಿಸಿದನು. ಅನಂತರ ಶ್ರೀಕೃಷ್ಣನು ಸ್ವರ್ಗಲೋಕದ ಪ್ರೇಕ್ಷಣೀಯವಾದ ಪದಾರ್ಥಗಳನ್ನು ನೋಡುತ್ತ ನಂದನವನಕ್ಕೆ ಬಂದನು. ಅಲ್ಲಿ ಇರುವ ಪಾರಿಜಾತ ವೃಕ್ಷದ ಸೌಗಂಧ, ಸೌಂದರ್ಯ, ತಂಪು ಇಂಪು,

ಕಂಪುಗಳನ್ನು ಕಂಡು ಕೇಳಿ ಮೂಸಿ ಸತ್ಯಭಾಮಾದೇವಿಗೆ ಅದರ ಆಸೆಯಾಯಿತು. ಅದನ್ನು ದ್ವಾರಕಾ ಪಟ್ಟಣಕ್ಕೆ ತೆಗೆದುಕೊಂಡು ಹೋಗೋಣ ಎಂದು ಶ್ರೀಕೃಷ್ಣನಿಗೆ ಆಗ್ರಹ ಮಾಡಿದಳು. ಆ ಕೃಷ್ಣನು ನಗುತ್ತ ''ಇದರ ಆಸೆ ಬಿಡು. ಇದು ಶಚೀದೇವಿಯ ಸರ್ವಸ್ವ. ಇಂದ್ರನಿಗೂ ಪರಮ ಪ್ರೀತ್ಯಾಸ್ಪದ. ಶಚಿಗೆ ಅಲಂಕಾರಗಳನ್ನು ಒದಗಿಸುವುದಕ್ಕಾಗಿಯೆ ದೇವೇಂದ್ರ ಇದನ್ನು ಅಮೃತ ಮಂಥನ ಸಮಯದಲ್ಲಿ ಇದನ್ನು ಅಮರಾವತಿಗೆ ತಂದಿದ್ದಾನೆ. ಇದನ್ನು ಮುಟ್ಟಿದರೆ ದೇವತೆಗಳೆಲ್ಲರು ಸಿಟ್ಟಾಗಿ ನಮ್ಮ ಮೇಲೆ ಯುದ್ಧ ಸಾರುವರು.'' ಎಂದು ಪರಿಪರಿಯಾಗಿ ತಿಳಿಸಿ ಹೇಳಿದ.

ಆಗ ಚತುರಮತಿಯಾದ ಸತ್ಯಭಾಮೆಯು ''ಇದು ಅಮೃತಮಂಥನ ಕಾಲದಲ್ಲಿ ಹುಟ್ಟಿದ ಬಳಿಕ ಇಂದ್ರನಿಗೇ ಸೇರಬೇಕು ಎಂದು ಏನು ನಿಯಮ? ಸಮುದ್ರದಿಂದ ಹುಟ್ಟಿದ ವಸ್ತುಗಳ ಮೇಲೆ ಸರ್ವರಿಗೂ ಅಧಿಕಾರ. ಅದೇ ಸಮುದ್ರದಲ್ಲಿ ಜನಿಸಿದ ಲಕ್ಷ್ಮಿ, ಚಂದ್ರ, ಮದ್ಯ, ಮೊದಲಾದವುಗಳ ಮೇಲೆ ಇಂದ್ರನೊಬ್ಬನಿಗೆ ಮಾತ್ರ ಅಧಿಕಾರವುಂಟೆ? ಸಮುದ್ರದಲ್ಲಿ ಹುಟ್ಟಿದ ವಸ್ತುಗಳನ್ನೆಲ್ಲ ಇಂದ್ರನೇ ಸ್ವೀಕರಿಸಬೇಕು ಎಂದಿದ್ದರೆ, ಕಾಲಕೂಟ ವಿಷವನ್ನು ಏಕೆ ಸ್ವೀಕರಿಸಲಿಲ್ಲ? ಕ್ಷೀರ ಸಮುದ್ರದಿಂದ ಹುಟ್ಟಿದ ಮದ್ಯವನ್ನು ಯಾರು ಬೇಕಾದವರು ಸ್ವೀಕರಿಸಲಿಲ್ಲವೊ ಅದರಂತೆ ಪಾರಿಜಾತವನ್ನು ನಾನು ಈಗ ದ್ವಾರಕಾ ಪಟ್ಟಣಕ್ಕೆ ಒಯ್ಯುತ್ತೇನೆ'' ಎಂದು ಹೇಳಿ ಅಲ್ಲಿ ನಿಂತ ಕಾವಲುಗಾರರಿಗೂ ಕೂಡ ಗದರಿಸಿ ಹೇಳಿದಳು. ''ರಕ್ಷಕರೇ, ನೀನು ಈಗಲೇ ಓಡಿ ಹೋಗಿ ಶಚಿದೇವಿಗೆ ತಿಳಿಸಿರಿ. ಶ್ರೀಕೃಷ್ಣನ ಮಡದಿಯಾದ ನಾನು (ಸತ್ಯಭಾಮೆ) ಈ ಪಾರಿಜಾತವನ್ನು ದ್ವಾರಕೆಗೆ ತೆಗೆದುಕೊಂಡು ಹೋಗುತ್ತೇನೆ. ನೀನು ನಿನ್ನ ಗಂಡನಿಗೆ ಅಚ್ಚುಮೆಚ್ಚಿನ ಪತ್ನಿಯಾದದ್ದು ನಿಜವಿದ್ದ ಪಕ್ಷದಲ್ಲಿ ನನ್ನ ಪತಿಯ ಪಾರಿಜಾತ ಅಪಹರಣವನ್ನು ತಡೆಯಲಿಕ್ಕೆ ಹೇಳು. ನಿನ್ನ ಗಂಡನು ದೇವತೆಗಳಿಗೆ ಒಡೆಯನೆಂಬುದನ್ನು ಬಲ್ಲೆ. ನಾವೋ ಮನುಷ್ಯಮಾತ್ರರು. ಆದರೂ ಆ ದೇವವೃಕ್ಷವನ್ನು ಮಣ್ಣಿನ ನೆಲಕ್ಕೆ ಎಳೆದುಕೊಂಡು ಹೋಗುತ್ತೇವೆ ಶಕ್ತಿಇದ್ದರೆ ನಮ್ಮನ್ನು ತಡೆಯಿರಿ'' ಎಂದು ಹೇಳಿದಳು.

ಸೇವಕರು ದೇವೇಂದ್ರ ದಂಪತಿಗಳಿಗೆ ಸತ್ಯಭಾಮೆಯ ಮಾತುಗಳನ್ನೆಲ್ಲ ಬಂದು ಹೇಳಿದರು. ಆ ಶಚಿದೇವಿಯು ಇಂದ್ರನನ್ನು ಪ್ರೋತ್ಸಾಹಿಸಿದಳು. ''ನಿಮಗೆ ನನ್ನ ಮೇಲೆ ನಿಜವಾದ ಪ್ರೀತಿ ಇದ್ದರೆ ನನ್ನ ಮೆಚ್ಚಿನ ಪಾರಿಜಾತವನ್ನು ಸತ್ಯಭಾಮೆ ಒಯ್ಯದಂತೆ ತಡೆಯಿರಿ. ಅವರಿಬ್ಬರನ್ನು ಹಿಡಿಯಿರಿ ಹೊಡೆಯಿರಿ ಹೋರಾಡಿರಿ ಹೇಗಾದರು ಮಾಡಿರಿ. ಆ ಪಾರಿಜಾತ ವೃಕ್ಷವನ್ನು ಅಮರಾವತಿಯಲ್ಲಿಯೆ ಉಳಿಸಿರಿ'' ಎಂದು ಪ್ರೋತ್ಸಾಹಿಸಿದಳು.

ಆಗ ದೇವೇಂದ್ರನು ತನ್ನ ಎಲ್ಲ ದೇವಸೇನೆಯೊಂದಿಗೆ ವಜ್ರಹಸ್ತನಾಗಿ ಕೃಷ್ಣನನ್ನು ಎದುರಿಸಿದ. ಆ ಇಂದ್ರ ಉಪೇಂದ್ರರಲ್ಲಿ ಘನಘೋರ ಯುದ್ಧವಾಯಿತು. ಇಂದ್ರನು ಕೃಷ್ಣನ ಮೇಲೆ ತನ್ನ ವಜ್ರಾಯುಧವನ್ನು ಬಲವಾಗಿ ತೂರಿ ಒಗೆದ. ಆದರೆ ಏನು? ಶ್ರೀಕೃಷ್ಣನಿಗೆ ವಜ್ರಾಯುಧವು ಏನು ಮಾಡೀತು! ಅವನು ನಸುನಗುತ್ತ ಅದನ್ನು ತನ್ನ ಎಡಗೈಯಲ್ಲಿ ಹಿಡಿದುಬಿಟ್ಟ. ಆದರೆ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದಂತೆ ಕೃಷ್ಣನು ಮಾತ್ರ ತನ್ನ ಚಕ್ರಾಯುಧವನ್ನು ಇಂದ್ರನ ಮೇಲೆ ಬೀಸಲಿಲ್ಲ. ಬೀಸಿದ್ದರೆ ಇಂದ್ರನ ಕತೆಯೇ ಮುಗಿಯುತ್ತಿತ್ತು. ಎಷ್ಟೆಂದರೂ ದಯಾಸಾಗರನಲ್ಲವೆ ಆ ಭಗವಂತ! ಇತ್ತ ಗರುಡನ

ಪ್ರಹಾರದಿಂದ ಐರಾವತವೂ ಗಾಯಗೊಂಡು ಓಡತೊಡಗಿತು. ತನ್ನ ವಜ್ರಾಯುಧವು ವ್ಯರ್ಥವಾಯಿತು. ಕೃಷ್ಣನು ಸುದರ್ಶನ ಚಕ್ರವನ್ನು ಎತ್ತಿ ಹಿಡಿದಿದ್ದ. ಅದನ್ನು ತನ್ನ ಮೇಲೆ ಬಿಟ್ಟರೆ ತಾನು ಬದುಕಿ ಉಳಿಯಲಾರೆ. ಎಂದು ಹೆದರಿ ಇಂದ್ರನು ಓಡತೊಡಗಿದ.

ಆಗ ಸತ್ಯಭಾಮೆಯು ಓಡುವ ಇಂದ್ರನನ್ನು ಕೂಗಿ ಕರೆದು ಹೇಳಿದಳು. ''ಶಚೀಪತಿಯೇ ಹೀಗೆ ನೀನು ಓಡಿ ಹೋಗುವುದು ನಿನಗೆ ಭೂಷಣವಲ್ಲ. ನಿನ್ನ ನೆಚ್ಚಿನ ಮಡದಿಯಾದ ಶಚಿಯು ನಿನ್ನಿಂದಲೆ ಪಾರಿಜಾತ ಹೂವನ್ನು ಮುಡಿಸಿಕೊಳ್ಳಲು ಕಾದುಕೊಂಡು ನಿಂತಿದ್ದಾಳೆ. ನೀನು ಅವಳಿಗೆ ಮುಖವನ್ನು ಹೇಗೆ ತೋರಿಸುವೆ? ಪಾರಿಜಾತ ವೃಕ್ಷವನ್ನು ಬಿಟ್ಟು, ನಮಗೆ ಕೊಟ್ಟು ನಿನ್ನ ಮಡದಿಯ ಬಳಿಗೆ ಹೇಗೆ ಹೋಗುವೆ? ನಾಚಿಕೆಯಾಗುವುದಿಲ್ಲವೆ? ಪಾಪ, ನಿನ್ನ ಈ ಪಲಾಯನವನ್ನು ನಾನು ನೋಡಲಾರೆ. ಹೆಂಡತಿಗೆ ಮುಖವನ್ನು ಹೇಗೆ ತೋರಿಸಲಿ ಎಂಬ ನಿನ್ನ ಸಂಕಟ ನನಗೆ ಅರ್ಥವಾಗಿದೆ. ನೀನು ನಾಚಿಕೆ ಪಡಬೇಡ. ನಾನು ಕಿತ್ತಿ ಎತ್ತಿ ಹಿಡಿದ ಈ ಪಾರಿಜಾತ ವೃಕ್ಷವನ್ನು ನಿನಗೆ ಕೊಟ್ಟು ಬಿಡುತ್ತೇನೆ. ಇದನ್ನು ತೆಗೆದುಕೊಂಡು ಹೋಗಿ ಇದರ ಹೂವನ್ನು ನಿನ್ನ ಮಡದಿಯ ಮುಡಿಗೆ ಮುಡಿಸು. ಅವಳನ್ನು ಸಂತೋಷಪಡಿಸು. ನೀವಿಬ್ಬರು ದಂಪತಿಗಳು ಅನ್ಯೋನ್ಯವಾಗಿದ್ದರೆ ನನಗೆ ಅದೇ ಸಂತೋಷ. ನಾನು ಮನೆಗೆ ಬಂದಾಗ ನಿನ್ನ ಹೆಂಡತಿಯಾದ ಶಚಿಯು ತಾನು ಅಮರರ ಅರಸರ ಪಟ್ಟದರಸಿ ಎಂಬ ಅಹಂಕಾರದಿಂದ ನನ್ನನ್ನು ಸರಿಯಾಗಿ ಗೌರವಿಸಲಿಲ್ಲ, ಆದರೋಪಚಾರ ಮಾಡಲಿಲ್ಲ. ಆದರಿಂದ ನಾನು ಈ ಉಗ್ರಕ್ರಮ ಕೈಕೊಳ್ಳಬೇಕಾಯಿತು ಎಷ್ಟಾದರೂ ನಾನು ಕೂಡ ಹೆಂಗಸಲ್ಲವೇ? ನನ್ನ ಪತಿಯೆ ಬಲಿಷ್ಠ ಶ್ರೇಷ್ಠ ಎಂದು ನಿನಗೂ ನಿನ್ನ ಹೆಂಡತಿಗೂ ಮನಗಾಣಿಸಿಕೊಡಲಿಕ್ಕಾಗಿ ಈ ಸಾಹಸಕ್ಕೆ ಕೈಹಾಕಿದ್ದೆ. ಅದು ಈ ಯುದ್ಧದಿಂದ ಸಿದ್ಧವಾದಂತಾಯಿತು. ಇನ್ನು ಮೇಲೆ ಈ ಪಾರಿಜಾತ ಮರವನ್ನು ನೀನೇ ತೆಗೆದುಕೊಂಡು ಹೋಗು. ಪರಧನವಾದ ಈ ಪಾರಿಜಾತ ವೃಕ್ಷವನ್ನು ಅಪಹರಿಸಿ ನನಗೆ ಏನು ಆಗಬೇಕಾಗಿದೆ?'' ಸತ್ಯಭಾಮೆಯು ಹೀಗೆ ತನ್ನ ತರ್ಜನೆಯೊಂದಿಗೆ ಘರ್ಜನೆ ಮಾಡುವುದನ್ನು ನೋಡಿ ಇಂದ್ರನು ಮರಳಿ ಬಂದ. ಕೈ ಜೋಡಿಸಿ ವಿನಯದಿಂದ ನುಡಿದ ''ದೇವಿ, ನಿನ್ನ ಗಂಡನಾದ ಶ್ರೀಕೃಷ್ಣ ಜಗಜನ್ಮಾದಿ ಕಾರಣ. ಪ್ರಪಂಚದ ಸೃಷ್ಟಿಕರ್ತ, ಪಾಲನಕರ್ತ, ಸಂಹಾರಕರ್ತ, ವಿಶ್ವರೂಪಿ, ಪರಮಪುರುಷ, ಪುರುಷೋತ್ತಮ ಅವನು ನನ್ನನ್ನು ಸೋಲಿಸಿದರೆ ನನಗೇಕೆ ನಾಚಿಕೆ? ಜನನ ಮರಣಾದಿ ರಹಿತನಾದ ಪುರಾಣ ಪುರುಷನೂ ಆದ ಆ ಮಹಾಪ್ರಭುವನ್ನು ಯಾವನು ತಾನೆ ಗೆಲ್ಲಬಲ್ಲನು?

**ವೇದವ್ಯಾಸ:-** ದ್ವಿಜೋತ್ತಮರೆ, ದೇವೇಂದ್ರನು ತನ್ನನ್ನು ಹೊಗಳಿ ಮಾತನಾಡಲು ಶ್ರೀಕೃಷ್ಣನು ನಸುನಕ್ಕು ನುಡಿದ ''ದೇವರಾಜ, ನೀನು ಎಷ್ಟಾದರೂ ದೇವತೆಗಳ ಒಡೆಯ. ನಾವು ಮನುಷ್ಯರು. ನಾವು ಮಾಡಿದ ತಪ್ಪನ್ನು ಮನ್ನಿಸು. ನಾನು ಸತ್ಯಭಾಮೆಯ ಮಾತಿನಿಂದ ಈ ಪಾರಿಜಾತ ವೃಕ್ಷವನ್ನು ತೆಗೆದುಕೊಂಡು ಹೊರಟಿದ್ದೆ. ನೀನು ತೆಗೆದು ಅದನ್ನು ಯಥಾ ಸ್ಥಾನದಲ್ಲಿ ನಿಲ್ಲಿಸು. ನೀನು ನನ್ನ ಮೇಲೆ ಪ್ರಯೋಗಿಸಿದ ಈ ವಜ್ರಾಯುಧವು ಇಲ್ಲಿಯೆ ಇದೆ. ಅದನ್ನು ತೆಗೆದುಕೊಂಡು ಹೋಗು. ಈ ವಜ್ರಾಯುಧವು ವೈರಿಗಳಾದ ದೈತ್ಯರ ಮೇಲೆ ಪ್ರಯೋಗಿಸಲಿಕ್ಕಾಗಿ ಇದು ಕೊಡಲ್ಪಟ್ಟಿದೆ. ನನ್ನ ಮೇಲೆ ತೂರಿ ಒಗೆಯಲು ಅಲ್ಲ. ಇದನ್ನು ತಿಳಿದುಕೊ.''

ಈ ಕೃಷ್ಣನ ನುಡಿಯನ್ನು ಕೇಳಿ ಇಂದ್ರನು ಲಜ್ಜಿತನೂ ಆದ ಪಶ್ಚಾತ್ತಾಪದ ಉದಧಿಯಲ್ಲಿ ಮಜ್ಜಿತನೂ ಆದ. ಶ್ರೀಕೃಷ್ಣನ ಬಳಿಗೆ ಓಡಿ ಬಂದು ಕೈ ಮುಗಿದು ಹೇಳಿದ ''ಮಹಾಪ್ರಭು, ನೀನೇ ದೇವದೇವೋತ್ತಮ. 'ನಾನು ಮನುಷ್ಯ ಮಾತ್ರ' ಎಂದು ಹೇಳಿ ನನ್ನನ್ನು ಕೂಡ ಮರಳುಗೊಳಿಸುವೆ. ನಿನ್ನ ಸಚ್ಚಿದಾನಂದ ಸ್ವರೂಪವನ್ನು ಕಂಡು ಕೇಳಿ ಚೆನ್ನಾಗಿ ತಿಳಿದ ನಾವು ನಿಶ್ಚಿತವಾಗಿಯೂ ಬಲ್ಲೆವು ನೀನು ಯಾರು ಎನ್ನುವುದನ್ನು. ನೀನು ಜಗದೊಡೆಯ ದುಷ್ಟಶಿಕ್ಷಕ, ಶಿಷ್ಟರಕ್ಷಕ. ಈ ಪಾರಿಜಾತ ವೃಕ್ಷವನ್ನು ನೀನು ದ್ವಾರಕೆಗೆ ತೆಗೆದುಕೊಂಡು ಹೋಗು.''

ದೇವೇಂದ್ರನು ಸ್ವಯಂ ಬಂದು ಆನಂದದಿಂದ ಕೊಡಮಾಡಿದ ಆ ಪಾರಿಜಾತ ವೃಕ್ಷವನ್ನು ಸ್ವೀಕರಿಸಿದ. ಗರುಡನ ಮೇಲೆ ಅದನ್ನು ಇಟ್ಟುಕೊಂಡು ಭೂಲೋಕಕ್ಕೆ ಬಂದ. ದ್ವಾರಕೆಯ ಮೇಲೆ ಬಂದು ನಿಂತು ತನ್ನ ಪಾಂಚ ಜನ್ಯವನ್ನು ಊದಿದ. ಕೃಷ್ಣನ ಪಾಂಚಜನ್ಯ ನೀನಾದವನ್ನು ಕೇಳಿದ ಕೂಡಲೆ ದ್ವಾರಕಾ ನಿವಾಸಿಗಳು ಹರ್ಷ ನಿರ್ಭರರಾದರು. ಕೃಷ್ಣನು ಆ ಪಾರಿಜಾತ ವೃಕ್ಷವನ್ನು ಸತ್ಯಭಾಮೆಯ ಮನೆಯ ಉದ್ಯಾನವನದಲ್ಲಿ ಇಟ್ಟನು ಮತ್ತೆ ನೆಟ್ಟನು. ಅದರ ಹೂಗಳ ಸುವಾಸನೆಯಿಂದ ಸುತ್ತುಮುತ್ತಲಿನ ಹತ್ತು ಹರಿದಾರಿ ನೆಲವೆಲ್ಲವು ಘಮ ಘಮಿಸುತ್ತಿತ್ತು. ಒಂದು ಶುಭ ಮುಹೂರ್ತದಲ್ಲಿ ಶ್ರೀಕೃಷ್ಣನು ನರಕಾಸುರನಿಂದ ಬಿಡಿಸಿಕೊಂಡು ಬಂದ ಹದಿನಾರು ಸಾವಿರ ಕನ್ನೆಯರನ್ನು ಹದಿನಾರು ಸಾವಿರು ಕೃಷ್ಣರೂಪವನ್ನು ತೆಗೆದು ಕೊಂಡು ಏಕಕಾಲದಲ್ಲಿ ಮದುವೆ ಮಾಡಿಕೊಂಡ. ನಿಖರವಾಗಿ ಹೇಳಬೇಕೆಂದರೆ ಆ ಕನ್ಯೆಯರು ಹದಿನಾರು ಸಾವಿರದ ಒಂದು ನೂರು ಜನರು ಇದ್ದರು. ಕೃಷ್ಣನು ಕೂಡ ಅಷ್ಟೇ ರೂಪವನ್ನು ಧರಿಸಿ ಪ್ರತಿಯೊಬ್ಬರ ವಿವಾಹ ಮಂಟಪದಲ್ಲಿ ಹಸೆಯ ಮೇಲೆ ನಸುನುಗತ್ತ ಕುಳಿತುಕೊಂಡು ವಿವಾಹವಾದ. ಅದರಿಂದ ಪ್ರತಿಯೊಬ್ಬ ಕನ್ಯೆಗೂ ಕೃಷ್ಣನು ತನ್ನನ್ನೆ ಮದುವೆಯಾಗಿ ತನ್ನೊಂದಿಗೆ ಇರುತ್ತಾನೆ ಎಂದು ಹರ್ಷೋದ್ರೇಕವಾಯಿತು. ಶ್ರೀಕೃಷ್ಣನು ಪ್ರತಿದಿನವೂ ಹದಿನಾರುಸಾವಿರದ ಒಂದುನೂರಾಎಂಟುರೂಪಗಳನ್ನು ಸ್ವೀಕರಿಸಿ ಆ ಎಲ್ಲಸ್ತ್ರೀಯರ ಅಂತಃಪುರಗಳಲ್ಲಿಯೂ ನಕ್ಕು ನಲಿದು, ಉಲಿದು, ಒಲಿದು ಇದ್ದು ಅವರನ್ನು ಸಂತೋಷಪಡಿಸಿ ರಸರಾತ್ರಿಗಳನ್ನು ಅವರವರ ಮನೆಯಲ್ಲಿ ಕಳೆಯುತ್ತಿದ್ದ. ಅನಂತರೂಪಿಯಾದ ಅವನಿಗೆ ಇದು ಏನು ಅಸಾಧ್ಯ? ಇದು ಏನು ಆಶ್ಚರ್ಯ? ಅವನಿಗೆ ಯಾವುದು ತಾನೆ ಅಸಾಧ್ಯ?

## ಉಷಾಕುಮಾರಿಯ ಸ್ವಪ್ನ ದರ್ಶನ

**ವೇದವ್ಯಾಸ:-** ಬ್ರಾಹ್ಮಣರೇ, ಈ ಮೊದಲು ನಾನು ನಿಮಗೆ ಶ್ರೀಕೃಷ್ಣನಿಂದ ರುಕ್ಮಿಣೀದೇವಿಯಿಂದ ಪ್ರದ್ಯುಮ್ನನೆ ಮೊದಲಾದ ಹನ್ನೊಂದು ಜನ ಮಕ್ಕಳು ಹುಟ್ಟಿದ್ದನ್ನು ತಿಳಿಸಿದ. ಸತ್ಯಭಾಮೆಯಲ್ಲಿ ಭಾನು ಮೊದಲಾದ ಮಕ್ಕಳು ರೋಹಿಣಿಯಲ್ಲಿ ಪ್ರಪಕ್ಷ ಮೊದಲಾದವರು. ಜಾಂಬುವತಿಯಲ್ಲಿ ಸಾಂಬ ಮೊದಲಾದವರು. ನಾಗ್ನಜಿತಿಯಲ್ಲಿ ಭದ್ರವಿಂದ ಮೊದಲಾದವರು, ಮದ್ರ ರಾಜಕುಮಾರಿಯಾದ ಸುಶೀಲೆಯಲ್ಲಿ ವೃತ ಮುಂತಾದ ವರು, ಲಕ್ಷಣೆಯಲ್ಲಿ ಗಾತ್ರಂಥ ಮೊದಲಾದ ತನಯರು, ಕಾಳಿಂದಿಯಲ್ಲಿ ಶ್ರುತ ಮುಂತಾದ ಸತ್ಪುತ್ರರು ಹುಟ್ಟಿದರು. ಉಳಿದ ಪತ್ನಿಯರಲ್ಲಿ ಶ್ರೀಕೃಷ್ಣನಿಗೆ ಎಂಬತ್ತೆಂಟು ಸಾವಿರದ ಎಂಟುನೂರು ಜನ ಮಕ್ಕಳು ಹುಟ್ಟಿದರು. ಇವರಲ್ಲಿ ರುಕ್ಮಿಣಿಯ ಮಗನಾದ ಪ್ರದ್ಯುಮ್ನನೇ ಪ್ರಮುಖ. ಪ್ರದ್ಯುಮ್ನನಿಗೆ ಅನಿರುದ್ಧ ಅನಿರುದ್ಧನಿಗೆ ವಜ್ರ ಎಂಬ ಮಗನೂ ಜನಿಸಿದನು.

ಬಾಣಾಸುರನಿಗೆ ಉಷಾ ಎಂಬ ಒಬ್ಬ ಮಗಳು ಇದ್ದಳು. ಅವಳು ಪಾರ್ವತಿಯು ಪರಮೇಶ್ವರನೊಡನೆ ವಿಹರಿಸುವಂತೆ ತಾನು ತನ್ನ ಪತಿಯೊಂದಿಗೆ ವಿಹರಿಸಬೇಕೆಂದು ಆಶೆಪಟ್ಟಳು. ಆಗ ಆ ಜಗದಂಬೆಯು ''ವೈಶಾಖ ಶುದ್ಧ ದ್ವಾದಶಿ ರಾತ್ರಿ ನಿನ್ನ ಸ್ವಪ್ನದಲ್ಲಿ ಕಂಡ ಪುರುಷನನ್ನೇ ನೀನು ಕೈ ಹಿಡಿದು ನನ್ನಂತೆಯೆ ಆ ಪತಿಯೊಡನೆ ವಿಹರಿಸುವೆ'' ಎಂದು ಹೇಳಿದಳು. ಅವಳು ಹೇಳಿದಂತೆ ವೈಶಾಖ ಶುದ್ಧ ದ್ವಾದಶಿ ರಾತ್ರಿಯಲ್ಲಿ ಅವಳಿಗೆ ಸ್ವಪ್ನದಲ್ಲಿ ಒಬ್ಬ ತರುಣನ ಸಂದರ್ಶನ, ಸಹವಾಸ, ಸಂಭೋಗ ಎಲ್ಲವು ಪ್ರಾಪ್ತವಾದವು. ಎಚ್ಚರವಾದ ಬಳಿಕ ಆ ಸ್ವಪ್ನ ಪುರುಷನನ್ನು ಕಾಣದೇ ಅವಳು ಚಡಪಡಿಸಿದಳು. ''ಸ್ವಪ್ನದಲ್ಲಿ ನಾನು ಕಂಡ ಆ ಗಂಡನೊಡನೆ ನನಗೆ ಸಂಗಮವಾಗುವಂತೆ ಮಾಡು'' ಎಂದು ಜೀವದ ಗೆಳತಿಯಾದ ಚಿತ್ರಲೇಖೆಗೆ ದುಂಬಾಲುಬಿದ್ದಳು. ಕನಸಿನಲ್ಲಿ ಆ ರಾಜಕುಮಾರ ತನ್ನ ಹೆಸರು ಹೇಳಲಿಲ್ಲ. ಇವಳೂ ಕೇಳಲಿಲ್ಲ ಈಗ ಅವನನ್ನು ಕಂಡು ಹಿಡಿಯುವುದು ಹೇಗೆ! ಸ್ವಪ್ನಪುರುಷನ ಸಮಾಗಮವನ್ನು ಸತ್ಯಸೃಷ್ಟಿಯಲ್ಲಿ ಸಾಕಾರಗೊಳಿಸುವುದು ಹೇಗೆ! ಮಹಾಚತುರೆ ಆ ಚಿತ್ರರೇಖೆ. ಅದಕ್ಕೂ ಒಂದು ಹಂಚಿಕೆ ಹೂಡಿದಳು. ಯುಕ್ತಿ ಮಾಡಿದಳು. ಆ ಕಾಲದಲ್ಲಿ ಬದುಕಿ ಇದ್ದ ಎಲ್ಲ ರಾಜಕುಮಾರರ ಚಿತ್ರ ಬರೆದು ಉಷೆಯ ಮುಂದೆ ಹಿಡಿದಳು. ಅವೆಲ್ಲವನ್ನು ನಿಷೇಧ ಮಾಡಿ ಕೊನೆಗೆ ಅವಳು ಮನುಷ್ಯರ ಕಡೆ ಅದರಲ್ಲಿಯೂ ಯಾದವ ತರುಣರ ಚಿತ್ರಗಳನ್ನು ಬಿಡಿಸಿದಾಗ ಅವಳು ತನ್ನ ದೃಷ್ಟಿಯನ್ನು ಅಲ್ಲಿ ನೆಲೆಸಿದಳು. ಅನಂತರ ಕೃಷ್ಣ ಬಲರಾಮರ ಚಿತ್ರಗಳನ್ನು ನೋಡಿದಾಗ ಲಜ್ಜೆಗೊಂಡಳು. ಪ್ರದ್ಯುಮ್ನನ ಚಿತ್ರ ನೋಡಿದಾಗಂತಲೂ ತನ್ನ ಕಡೆ ನೋಟ, ಕುಡಿನೋಟ ಅತ್ತ ಚಾಚಿದಳು. ಕೊನೆಗೆ ಅನಿರುದ್ಧನ ಚಾರುಚಿತ್ರ ಕಂಡಾಗ ಅವಳ ಲಜ್ಜೆ ಎಲ್ಲಿಯೊ ಹೋಯಿತು. ಆ ಚಾರುಚಿತ್ರವನ್ನು ಕೈಯಲ್ಲಿ ಎತ್ತಿಕೊಂಡು ಇವನೇ ನನ್ನ ಪ್ರಿಯಕರ ಎಂದು ಹೇಳಿದಳು. ಆಗ ಅವಳ ಸಖಿಯಾದ ಚಿತ್ರಲೇಖೆಯು ನಾನು ಈ ಕೆಲಸ ಮಾಡಿಕೊಂಡು ಬರುತ್ತೇನೆ ಎದು ಉಷೆಯನ್ನು ಸಮಾಧಾನಪಡಿಸಿ ತನ್ನ ಯೋಗಬಲದಿಂದ ದ್ವಾರಕಾ ಪಟ್ಟಣಕ್ಕೆ ತೆರಳಿದಳು.

## ಬಾಣಾಸುರ ಯುದ್ಧ ವರ್ಣನ

**ವೇದವ್ಯಾಸ:-** ಮುನಿವರ್ಯರೆ, ಬಾಣಾಸುರನು ಪರಮ ಶಿವಭಕ್ತ. ಅವನಿಗೆ ಸಾವಿರ ತೋಳುಗಳು ಇದ್ದವು. ಅನಾವಶ್ಯಕವಾದ ಆ ಬಾಹುಗಳ ಭಾರದಿಂದ ಅವನು ಬಳಲಿ ಬೇಸತ್ತು ಹೋಗಿದ್ದ. ತನ್ನ ನೆಚ್ಚಿನ ದೇವನಾದ ಮಹಾದೇವನನ್ನು ಕೇಳಿದ. ''ಸ್ವಾಮಿ, ಈ ನನ್ನ ತೋಳುಗಳನ್ನು ಸಫಲ ಮಾಡಲು ಯುದ್ಧವು ಎಂದು ಆಗುವುದು? ಸಂಗ್ರಾಮವಿಲ್ಲದೆ ಅನುಪಯುಕ್ತವಾದ ಈ ಬಾಹುಗಳನ್ನು ಹೊತ್ತು ನಾನು ವ್ಯರ್ಥವಾಗಿ ತಿರುಗಬೇಕಾಗಿದೆ. ನನ್ನ ಈ ಬಾಹು ಭಾರಕ್ಕೆ ಸಾರ್ಥಕ್ಯ ತಂದುಕೊಡುವ ಸಮರವು ಎಂದಾದರೂ ಸಂಭವಿಸಲಿಕ್ಕುಂಟೆ?''

ಆಗ ಶಿವನು ಮುಗುಳು ನಗೆ ನಕ್ಕು ''ಭಕ್ತ ನಿನ್ನ ಮಯೂರಲಾಂಛನವಾದ ಧ್ವಜವು ಎಂದು ಮುರಿದು ಬೀಳುವದೋ ಅಂದು ನಿನಗೆ ತೋಳ ತೀಟೆಯನ್ನು ತೀರಿಸುವ ತುಮುಲಯುದ್ಧ ಲಭಿಸುವುದು'' ಎಂದು ಉತ್ತರ ಕೊಟ್ಟಿದ್ದನು. ಆ ಕಾಲ ಈಗ ಒದಗಿ ಬಂದಂತೆ ಆಯಿತು. ಮಗಳು ಉಷಾದೇವಿಯ ನಿಮಿತ್ತವಾಗಿ ಅವನಿಗೆ ಅಂಥ ಸಮರ ಸಂದರ್ಭ ತಾನಾಗಿ ಪ್ರಾಪ್ತವಾಯಿತು.

ಉಷಾಕುಮಾರಿಯ ಜೀವದ ಗೆಳತಿಯಾದ ಚಿತ್ರಲೇಖೆಯು ದ್ವಾರಕೆಗೆ ಬಂದು ತನ್ನ ಯೋಗ ವಿದ್ಯೆಯ ಪ್ರಭಾವದಿಂದ ಅನಿರುದ್ಧನನ್ನು ಗುಟ್ಟಾಗಿ ಉಷೆಯ ಅಂತಃಪುರಕ್ಕೆ ಕರೆತಂದಳು. ಅವರು ಅಲ್ಲಿಯೆ ಗಾಂಧರ್ವ ವಿಧಿಯಿಂದ ಮದುವೆ ಮಾಡಿಕೊಂಡು ಸ್ವಚ್ಛಂದವಾಗಿ ಆದರೂ ರಹಸ್ಯವಾಗಿ ವಿಹರಿಸುತ್ತಿದ್ದರು. ಅದು ಕಾವಲುಕಾರರ ಕಣ್ಣಿಗೆ ಬಿದ್ದಿತು. ಉಷೆಯ ಗುಪ್ತವಾದ ಪ್ರೇಮ ವ್ಯಾಪಾರ ಬಾಣಾಸುರನಿಗೆ ತಿಳಿಯಿತು. ಆಗ ಬಾಣಾಸುರನು ಧಾವಿಸಿ ಬಂದು ತನ್ನ ಸೇನೆಗೆ ಮಣಿಯದ ಶೂರ ಅನಿರುದ್ಧನನ್ನು ಮಾಯಾ ಯುದ್ಧ ಮಾಡಿ ಸರ್ಪಾಸ್ತ್ರದಿಂದ ಬಂಧಿಸಿ ಬಂದೀ ಮನೆಯಲ್ಲಿ ಇರಿಸಿದ. ಈ ಸಮಾಚಾರ ನಾರದ ಮುನಿಯಿಂದ ದ್ವಾರಕಾಪುರದಲ್ಲಿ ಯಾದವರಿಗೆ ತಿಳಿಯಿತು. ಕೂಡಲೆ ಶ್ರೀಕೃಷ್ಣನು ಗರುಡಾರೂಢನಾಗಿ ಪ್ರಾಗ್ಜ್ಯೋತಿಷ ಪುರಕ್ಕೆ ಬಂದನು. ಬಾಣನ ರಕ್ಷಣೆಗಾಗಿ ನಿಯಮಿಸಲ್ಪಟ್ಟ ಮಾಹೇಶ್ವರ ಎಂಬ ಜ್ವರವು ಕೃಷ್ಣನನ್ನು ಕೆಣಕಿತು. ಕೂಡಲೆ ಕೃಷ್ಣನು ತನ್ನ ದೇಹದಿಂದ ವೈಷ್ಣವ ಜ್ವರವನ್ನು ಪ್ರಯೋಗಿಸಿ ಆ ಮಾಹೇಶ್ವರ ಜ್ವರವನ್ನು ಅಡಗಿಸಿದ. ಅನಂತರ ಸ್ವಯಂ ಬಾಣಾಸುರನು ನೇರವಾಗಿ ಶ್ರೀಕೃಷ್ಣನೊಡನೆ ಯುದ್ಧಕ್ಕೆ ಇಳಿದ. ಭಕ್ತನ ಸಹಾಯಕ್ಕೆ ಸಾಕ್ಷಾತ್ ಶಂಕರ ಧಾವಿಸಿದ. ಷಣ್ಮುಖನು ಅವನನ್ನು ಬೆಂಬಲಿಸಿ ಹೋರಾಡ ಹತ್ತಿದ.

ಭಯಂಕರವಾದ ನಿಖರದ ಯುದ್ಧ ನಡೆಯಿತು. ಆಗ ಕೃಷ್ಣನು ಮಹಾದೇವನನ್ನು ತನ್ನ ಜ್ರಂಭಣಾಸ್ತ್ರದಿಂದ ಕಟ್ಟಿಹಾಕಿದ. ಶ್ರೀಹರಿಯ ಎದುರು ಸೋತುಹೋದ ಶಿವ ಹೋರಾಡಲಾರದೆ ತನ್ನ ರಥದಲ್ಲಿ ಸ್ತಬ್ಧನಾಗಿ ಕುಳಿತುಬಿಟ್ಟ. ಸ್ಕಂದನು ಪ್ರಯೋಗಿಸಿದ ಅಮೋಘವಾದ ಶಕ್ತ್ಯಾಯುಧವನ್ನು ಶ್ರೀಹರಿ ಹೂಂಕಾರ ಮಾತ್ರದಿಂದ ನೆಲದ ಮೇಲೆ ಬೀಳಿಸಿದ. ಅದರಿಂದ ಪರಿಕುಪಿತನಾದ ಬಾಣಾಸುರ ಕೃಷ್ಣನ ಮೇಲೆ ಏರಿ ಬಂದ. ಅವರಿಬ್ಬರ ನಡುವೆ ಘನಘೋರ ಯುದ್ಧ ನಡೆಯಿತು. ಅವನನ್ನು ಮುಗಿಸಿ ಬಿಡಬೇಕೆಂದು ಕೃಷ್ಣ ಸುದರ್ಶನ ಚಕ್ರವನ್ನು ಎತ್ತಿದ.

ಆಗ ಬಾಣಾಸುರನ ತಾಯಿಯಾದ ಕೊಟರೆಯು ಮಗನ ಮೇಲಿನ ಮೋಹದಿಂದ ಅವನನ್ನು ಉಳಿಸಲಿಕ್ಕಾಗಿ ನಾಚಿಕೆ ಬಿಟ್ಟು ಕೃಷ್ಣನ ಎದುರು ನಗ್ನಳಾಗಿ ಬಂದು ನಿಂತಳು. ಆಗ ಕೃಷ್ಣನು ಗಟ್ಟಿಯಾಗಿ ಕಣ್ಣು ಮುಚ್ಚಿ "ಬಾಣನ ಪ್ರಾಣತೆಗಿಯದೆ ಅವನ ತೋಳುಗಳನ್ನು ಮಾತ್ರ ಕತ್ತರಿಸು" ಎಂದು ಅಪ್ಪಣೆ ನೀಡಿ ಸುದರ್ಶನ ಚಕ್ರವನ್ನು ಬೀಸಿದ. ಅದು ಅರೆಚಣದಲ್ಲಿ ಬಾಣಾಸುರನ ಸಾವಿರ ತೋಳುಗಳನ್ನೆಲ್ಲ ಸವರಿ ಕೊಚ್ಚಿ ಕೆಡವಿಹಾಕಿ ಮತ್ತೆ ಕೃಷ್ಣನ ಕೈಯಲ್ಲಿ ಬಂದು ಕುಳಿತು ಕೊಂಡಿತು. ಆಗ ರುದ್ರದೇವರು ಧಾವಿಸಿ ಬಂದು ಭಗವಂತನಿಗೆ ಬೇಡಿಕೊಂಡರು.

॥ರುದ್ರ ಉವಾಚ॥

ಕೃಷ್ಣ ಕೃಷ್ಣ ಜಗನ್ನಾಥ ಜಾನೇತ್ವಾಂ ಪುರುಷೋತ್ತಮಂ ।
ಪರೇಶಂ ಪರಮಾತ್ಮಾನಮನಾದಿನಿಧನಂ ಪರಂ ॥

ಶ್ರೀಕೃಷ್ಣ ನೀನು ಸರ್ವೋತ್ತಮನಾದ ಪುರಷೋತ್ತಮ. ಹುಟ್ಟು, ಸಾವು, ಇಲ್ಲದ ಪರಮಾತ್ಮನು ನೀನೇ. ಜಗತ್ತಿನಲ್ಲಿ ಶ್ರೇಷ್ಠ ಎನಿಸಿಕೊಂಡ ಇಂದ್ರ, ಚಂದ್ರ, ರುದ್ರ, ಬ್ರಹ್ಮ ಎಲ್ಲರಿಗೂ ನೀನೇ ಸ್ವಾಮಿ. ನೀನೇ ನಿಯಾಮಕ ಈ ಮಾನವರಲ್ಲಿ ನೀನು ಹುಟ್ಟಿ ಬಂದದ್ದು ನಿನ್ನ ಲೀಲಾವತಾರ. ಪ್ರಸನ್ನನಾಗು.

ಈ ಬಾಣಾಸುರನು ನನ್ನ ಭಕ್ತ. ದಯಮಾಡಿ ಅವನನ್ನು ಸಂಹರಿಸಬೇಡ. ನಾನು ಅವನಿಗೆ ಅಭಯದಾನ ಮಾಡಿದ್ದೇನೆ. ನನ್ನ ಮಾತನ್ನು ಸುಳ್ಳು ಮಾಡಬೇಡ. ಅವನು ಮಾಡಿದ ಅಪರಾಧಕ್ಕಾಗಿ ಅವನ ಪರವಾಗಿ ನಾ ನಿನ್ನ ಕ್ಷಮೆ ಕೇಳುತ್ತೇನೆ'' ಪರಮೇಶ್ವರನ ಈ ಮಾತನ್ನು ಕೇಳಿ ಪರಮಾತ್ಮನಾದ ಶ್ರೀಕೃಷ್ಣನು ನುಡಿದ. ''ಶಂಕರ ನಿನ್ನ ಮಾತಿನಂತೆ ಈ ಬಾಣಾಸುರನನ್ನು ಕೊಲ್ಲದೆ ಬಿಟ್ಟಿದ್ದೇನೆ. ನೀನು ಅವನಿಗೆ ಅಭಯ ಕೊಟ್ಟ ಬಳಿಕ ನಾನೂ ಕೊಟ್ಟಂತೆಯೆ. ನೀನು ಬೇರೆಯಲ್ಲ ನಾನು ಬೇರೆಯಲ್ಲ. ನಮ್ಮಿಬ್ಬರಲ್ಲಿ ಎಂದೂ ಭೇದ ಭಾವವಿಲ್ಲ'' ಎಂದು ಹೇಳಿ ಶಿವನನ್ನು ಆ ಕೃಷ್ಣ ಸಂತೋಷಪಡಿಸಿದನು. ಅನಂತರ ಆ ಹರಿಯು ಗರುಡನ ಹೆಗಲ ಮೇಲೆ ಹತ್ತಿಕೊಂಡು ಅನಿರುದ್ಧನ ಬಳಿಗೆ ಹೋದ. ಗರುಡನ ರೆಕ್ಕೆಯ ಗಾಳಿಯಿಂದಲೆ ಅನಿರುದ್ಧನನ್ನು ಬಂಧಿಸಿದ ಸರ್ಪಾಸ್ತ್ರ ಕಳಚಿ ಹೋಯಿತು. ಅನಂತರ ಶ್ರೀಕೃಷ್ಣನು ಉಷಾ-ಅನಿರುದ್ಧರನ್ನು ಕರೆದುಕೊಂಡು ತನ್ನೊಡನೆ ಗರುಡನ ಮೇಲೆ ಕೂಡಿಸಿಕೊಂಡು ಸುಖದಿಂದ ದ್ವಾರಕಾಪಟ್ಟಣಕ್ಕೆ ಮರಳಿ ಬಂದನು.

## ಪೌಂಡ್ರಕ ವಾಸುದೇವ ವಧ

**ಋಷಿಗಳು:-** ಭಗವನ್, ಶ್ರೀವೇದವ್ಯಾಸರೆ, ಭಗವಂತನ ಕಾರ್ಯ ಅತ್ಯದ್ಭುತ. ಅವನು ಮಾನವ ದೇಹವನ್ನು ಧರಿಸಿ ''ಜಿಗಾಯ ಶಕ್ರಂ ಶರ್ವಂಚ ಸರ್ವ ದೇವಾಂಶ್ಚ ಲೀಲಯಾ'' ಇಂದ್ರನನ್ನು ಗೆದ್ದ ಶಿವನನ್ನು ಸೋಲಿಸಿದ. ಎಲ್ಲ ದೇವತೆಗಳನ್ನು ಲೀಲೆಯಿಂದಲೆ ಪರಾಭವಗೊಳಿಸಿದ. ಆ ಭಗವಂತನು ಮತ್ತೆ ಯಾವ ದೈವೀ ಲೀಲೆಗಳನ್ನು ಮಾಡಿ ತೋರಿಸಿದ. ಎನ್ನುವುದನ್ನು ನಮಗೆ ತಿಳಿಸಿರಿ ಎಂದು ಕೇಳಿದರು.

**ವ್ಯಾಸಮಹರ್ಷಿ:-** ಕಾಶೀ ಕ್ಷೇತ್ರದಲ್ಲಿ ಪೌಂಡ್ರಕ ವಾಸುದೇವ ಎಂಬ ಅಹಂಕಾರಿ ರಾಜನು ಇದ್ದ. ಅವನು ನಾನೇ ನಿಜವಾದ ವಾಸುದೇವ. ನಾನೇ ಮಹಾವಿಷ್ಣು ಎಂದು ಎಲ್ಲರೆದರು ಜಂಭ ಕೊಚ್ಚಿಕೊಳ್ಳುತ್ತಿದ್ದ. ವಿಷ್ಣುವಿನ ಚಿಹ್ನೆಗಳಾದ ಶಂಖ ಚಕ್ರಾದಿಗಳನ್ನು ಕೃತ್ರಿಮವಾಗಿ ಮಾಡಿಸಿ ಅವುಗಳನ್ನು ಧರಿಸಿ ತಾನೇ ಸಾಕ್ಷಾತ್ ಶ್ರೀಹರಿ ಎಂದು ಮೆರೆಯುತ್ತಿದ್ದ. ಇಷ್ಟು ಮಾತ್ರವಲ್ಲದೆ ದರ್ಪೋದ್ಧತನಾದ ಅವನು ಕೃಷ್ಣನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದ. ''ಕೃಷ್ಣಾ, ಶಂಖ, ಚಕ್ರಾದಿಗಳು ನನ್ನ ಚಿಹ್ನ. ಅವುಗಳನ್ನು ನೀನು ಧರಿಸಬೇಡ. ವಾಸುದೇವ ಎಂಬ ಹೆಸರು ಕೂಡ ನನ್ನದೇ. ಅದನ್ನು ನೀನು ಇಟ್ಟುಕೊಳ್ಳ ಬೇಡ. ನಿನಗೆ ಬದುಕುವ ಇಚ್ಛೆ ಇದ್ದರೆ ನನಗೆ ಶರಣು ಬಾ.''

ಕೃಷ್ಣನು ಆ ದರ್ಪೋದ್ಧತನ ಮಾತಿಗೆ ತಕ್ಕ ಉತ್ತರಕೊಟ್ಟು ತಾನೇ ಖುದ್ದಾಗಿ ಗರುಡನನ್ನು ಏರಿಕೊಂಡು ಕಾಶೀಪಟ್ಟಣಕ್ಕೆ ಬಂದ. ಪೌಂಡ್ರಕ ವಾಸುದೇವನು ತನ್ನ ಕೈಗಳಲ್ಲಿ ಕೃತಕ ಶಂಖ ಚಕ್ರಗಳನ್ನು ಧರಿಸಿದ್ದ. ಕೊರಳಲ್ಲಿ ವನಮಾಲೆ, ಕೈಯಲ್ಲಿ ಶಾರ್ಙ್ಗಧನುಸ್ಸು, ಎದೆಯ ಮೇಲೆ ಶ್ರೀವತ್ಸದಂತೆ ತೋರುವ ಒಂದು ಕಪ್ಪು ಕಲೆ, ಉಟ್ಟಿದ್ದು ಪೀತಾಂಬರ. ತಲೆಯ ಮೇಲೆ ಇಟ್ಟದ್ದು ರತ್ನಖಚಿತ ಕಿರೀಟ. ಪೌಂಡ್ರಕನ ಈ ಅವತಾರವನ್ನು ನೋಡಿ ಕೃಷ್ಣ ನಕ್ಕುಬಿಟ್ಟ. ಇಬ್ಬರಿಗೂ ಸುರುವಾಯಿತು ಘೋರ ಸಮರ. ಆಗ ಶ್ರೀಕೃಷ್ಣನು ಆ ನಕಲಿ ವಾಸುದೇವನಾದ ಪೌಂಡ್ರಕನಿಗೆ ಮಾರ್ಮಿಕವಾಗಿ ನುಡಿದ. ''ಪೌಂಡ್ರಕ ನೀನು ನಿನ್ನ ದೂತನ ಮುಖಾಂತರ ನನಗೆ ಸುದರ್ಶನ ಚಕ್ರವನ್ನು ಬಿಟ್ಟು ಬಿಡು ಎಂದು ಹೇಳಿ ಕಳಿಸಿದ್ದೆಯಲ್ಲವೆ? ನಿನ್ನ ಮಾತಿನಂತೆ ಇದೋ ನೋಡು ಈ ಸುದರ್ಶನ

ಚಕ್ರವನ್ನು ಬಿಟ್ಟಿದ್ದೇನೆ'' ಎಂದು ಹೇಳಿ ಅವನ ಮೇಲೆ ಸುದರ್ಶನ ಚಕ್ರವನ್ನು ಬಿಟ್ಟನು. ಅದು ಉರಿಯುತ್ತ ಬಂದು ಪೌಂಡ್ರಕ ವಾಸುದೇವನ ದೇಹವನ್ನು ಎರಡು ಹೋಳಾಗಿ ಕತ್ತರಿಸಿ ಹಾಕಿತು. ಗರುಡನು ಪೌಂಡ್ರಕನ ಕೃತಕ ಗರುಡನನ್ನು ಸೀಳಿಹಾಕಿದನು. ಆಗ ಪೌಂಡ್ರಕನ ಬಂಧು, ಬಳಗ, ಮಿತ್ರ ಪರಿವಾರದವರೆಲ್ಲರೂ ಕೃಷ್ಣನ ಮೇಲೆ ಏರಿಬಂದರು. ಆಗ ಆ ಭಗವಂತನು ತನ್ನ ಶಾರ್ಙ್ಗ ಎಂಬ ಧನುಸ್ಸಿನಿಂದ ಬಾಣ ಬಿಟ್ಟು ಎಲ್ಲರ ಪ್ರಾಣಗಳನ್ನು ಆ ಕ್ಷಣದಲ್ಲಿ ತೆಗೆದುಬಿಟ್ಟನು.

ಕಾಶೀರಾಜನ ಪುತ್ರನು ತನ್ನ ತಂದೆಯು ಕೃಷ್ಣನಿಂದ ಹತನಾದುದ್ದನ್ನು ಕೇಳಿ ಕಾಶೀವಾಸಿಯಾದ ವಿಶ್ವನಾಥನಿಗೆ ಶರಣು ಹೊಕ್ಕನು. ಅವನನ್ನು ಅರ್ಚಿಸಿ ಪ್ರಸನ್ನನಾದ ಆ ವಿಶ್ವನಾಥನಿಂದ ಕೃಷ್ಣನನ್ನು ಕೊಲ್ಲುವ ಕೃತ್ಯಾ ಒಂದನ್ನು ನಿರ್ಮಾಣಮಾಡಿಸಿದನು. ಆ ಕೃತ್ಯೆಯು ಬೆಂಕಿಯ ಜ್ವಾಲೆಗಳನ್ನು ಉಗುಳುತ್ತ ಕೃಷ್ಣನನ್ನು ಕೊಲ್ಲಬೇಕೆಂದು ದ್ವಾರಕೆಯ ಕಡೆ ಹೊರಟಿತು. ಆಗ ಕೃಷ್ಣನು ತನ್ನ ಮಡದಿಯರೊಡನೆ ಪಗಡೆ ಆಟದಲ್ಲಿ ತೊಡಗಿದ್ದನು. ತನ್ನನ್ನು ಸುಡಲಿಕ್ಕಾಗಿ ಬೆಂಕಿಯ ಬೊಂಬೆರೂಪದಿಂದ ಮಹಾಕೃತ್ಯಾ ಒಂದು ದ್ವಾರಕೆಯ ಕಡೆ ಬರುತ್ತಲಿದೆ ಎಂಬ ಸುದ್ದಿಯನ್ನು ಕೇಳಿ ಕುಳಿತಲ್ಲಿಯೆ ಸುದರ್ಶನ ಚಕ್ರವನ್ನು ಅದರ ಮೇಲೆ ಬಿಟ್ಟನು. ಆಗ ಆ ಸುದರ್ಶನ ಚಕ್ರವು ಬೆಂಕಿಯವಂಕಿಗಳನ್ನೇ ಉಗುಳುತ್ತ, ಜ್ವಾಲಾಮಾಲೆಗಳನ್ನು ಹೊಮ್ಮುತ್ತ, ಭಯಂಕರ ವೇಗದಿಂದ ಕೃತ್ಯವನ್ನು ಬೆನ್ನಟ್ಟಿತು. ಆಗ ಮಹೇಶ್ವರನಿಂದ ನಿರ್ಮಿತವಾದ ಆ ಕೃತ್ಯೆಯು ಚಕ್ರದಿಂದ ಛಿನ್ನವಿಛಿನ್ನವಾಗುತ್ತ ಓಡತೊಡಗಿತು. ಸುದರ್ಶನಚಕ್ರವು ಅದನ್ನು ಅಟ್ಟಿಸಿಕೊಂಡು ಕಾಶೀಪಟ್ಟಣವನ್ನು ಹೊಕ್ಕಿತು. ಅದನ್ನು ಕಾಶಿ ರಾಜಕುಮಾರನ ಸೇನೆಯೂ ಮಹಾದೇವರ ಪ್ರಮಥಗಣಗಳ ಸೇನೆಯೂ ಸಕಲ ವಿಧವಾದ ಶಸ್ತ್ರಾಸ್ತ್ರಗಳೊಂದಿಗೆ ಸನ್ನದ್ಧವಾಗಿ ಆ ಸುದರ್ಶನ ಚಕ್ರವನ್ನು ಎದುರಿಸಿದರು. ಆಗ ಆ ವೈಷ್ಣವ ಚಕ್ರವು ಕಾಶಿರಾಜಕುಮಾರನ ಸೇನೆಯ ಶಸ್ತ್ರಗಳನ್ನು ಪ್ರಮಥಗಣಗಳ ಅಸ್ತ್ರಗಳನ್ನೂ ಸದೆಬಡಿದು ಸುಟ್ಟು ಬೂದಿ ಮಾಡಿತು. ಸೈನಿಕರನ್ನೆಲ್ಲ ಸಂಹಾರಮಾಡಿತು. ಇಷ್ಟೇ ಅಲ್ಲ, ಆ ಕಾಶೀಪಟ್ಟಣವನ್ನೆಲ್ಲ ಕ್ಷೇಮ ರಹಿತವನ್ನಾಗಿ ಮಾಡಿತು.

ಹೀಗೆ ಸುದರ್ಶನ ಚಕ್ರದಿಂದ ಮಹೇಶ್ವರನ ಮಹಾ ಕೃತ್ಯೆಯು ಅವನ ಪ್ರಮಥಗಣವೂ ನಾಶವಾದದ್ದು ಮಾತ್ರವಲ್ಲದೇ ಅನೇಕ ಸೇವಕರಿಂದಲೂ ನಾಗರಿಕರಿಂದಲೂ ಆನೆ ಕುದುರೆಗಳಿಂದಲೂ ತುಂಬಿ ತುಳುಕುತ್ತಿರುವ ಕಾಶಿಪಟ್ಟಣವೆಲ್ಲವು ಸುದರ್ಶನ ಬೆಂಕಿಯ ಜ್ವಾಲೆಗಳಿಂದ ಸುಟ್ಟು ನಾಶವಾಯಿತು. ಅಲ್ಲಿಯ ಎಲ್ಲಮನೆಗಳು ಕೋಟೆ ಕೊತ್ತಲಗಳು ಅರಮನೆ, ಗುರುಮನೆ, ಮಠ, ಮಂದಿರ, ಎಲ್ಲವೂ ದಗ್ಧವಾಗಿ ಇಡೀ ಕಾಶಿ ಕ್ಷೇತ್ರವೇ ಒಂದು ಮಸಣ ಗಟ್ಟಿಯಾಯಿತು. ಹೀಗೆ ಮಹೇಶ್ವರ ಕೃತ್ಯೆಯ ದುರ್ವ್ಯಾಪಾರವನ್ನು ದಮನ ಮಾಡುವ ನಿಮಿತ್ತದಿಂದ ಕಾಶೀ ಪಟ್ಟಣವನ್ನು ಪ್ರವೇಶ ಮಾಡಿದ ವಿಷ್ಣು ಚಕ್ರವು ಆ ವಿಶ್ವನಾಥನ ಆವಾಸ ಸ್ಥಳವನ್ನೆಲ್ಲ ನಾಶಮಾಡಿ ಮರಳಿ ಕೃಷ್ಣನ ಕೈಯನ್ನು ಸೇರಿತು.

## ಬಲದೇವ ಮಹಾತ್ಮ್ಯ ನಿರೂಪಣ

**ಮುನಿಗಳು:-** ಪರಮಪೂಜ್ಯರಾದ ದ್ವೈಯಪಾನರೆ, ತಾವು ಹಿಂದೆ ಬಲರಾಮನ ಶೌರ್ಯವನ್ನು ಹೇಳಿದಿರಿ. ಅದನ್ನು ಮತ್ತೂ ಕೇಳಬೇಕು ಎಂಬ ಕುತೂಹಲ ನಮಗೆ. ಆ ಬಲಭದ್ರನ ಬಲ, ಛಲ, ಪರಾಕ್ರಮಗಳ ಬಗ್ಗೆ ಹೇಳಿರಿ.

**ವ್ಯಾಸ:-** ದುರ್ಯೋಧನನಿಗೆ ಲಕ್ಷಣಾ ಎಂಬ ಒಳ್ಳೆ ಚಲುವಿನ ಚಿತ್ತಾರದಂತಿದ್ದ ಒಬ್ಬ ಕನ್ಯೆಯು ಇದ್ದಳು. ಅವಳ ಸ್ವಯಂವರಕ್ಕೆ ಜಾಂಬವತಿಯ ಮಗನಾದ ಸಾಂಬ ಹೋಗಿದ್ದ. ಸ್ವಯಂವರದಲ್ಲಿ ಕನ್ಯೆಯ ರೂಪಶ್ರೀಯನ್ನು ಕಂಡು ಸಾಂಬ ಅವಳನ್ನು ಅಪಹರಿಸಿದ. ಆಗ ಭೀಷ್ಮ, ದ್ರೋಣ, ದುರ್ಯೋಧನ, ಕರ್ಣ ಮೊದಲಾದ ಕೌರವ ವೀರರು ಕೋಪದಿಂದ ಏಕಾಕಿಯಾದ ಸಾಂಬನ ಮೇಲೆ ಏರಿ ಹೋದರು. ಅವನನ್ನು ಯುದ್ಧದಲ್ಲಿ ಸೋಲಿಸಿದರು. ಸೆರೆಮನೆಯಲ್ಲಿ ಕೊಳೆ ಹಾಕಿದರು. ಈ ಸಮಾಚಾರವನ್ನು ತಿಳಿದ ಯಾದವ ವೀರರೆಲ್ಲರು ಕೌರವರ ಮೇಲೆ ದಂಡೆತ್ತಿ ಹೋಗುವ ಸನ್ನಾಹ ಮಾಡಿದರು.

ಆಗ ಬಲರಾಮನು ಅವರೆಲ್ಲರನ್ನು ತಡೆದು ''ನೀವು ಯಾರೂ ಕೌರವರ ಮೇಲೆ ಏರಿ ಹೋಗುವುದು ಬೇಡ. ದುರ್ಯೋಧನ ನನ್ನ ಶಿಷ್ಯ ಭಕ್ತ, ಮಿತ್ರ, ಬಂಧು, ನಾನು ಒಂದು ಮಾತು ಹೇಳಿದರೆ ಸಾಕು. ಸಾಂಬನನ್ನು ಬಿಟ್ಟು ಬಿಡುವನು. ಕನ್ಯೆಯನ್ನು ಕೊಟ್ಟು ಬಿಡುವನು. ನೀವು ಇಲ್ಲಿಯೆ ಸುಮ್ಮನೆ ಇದ್ದು ಬಿಡಿರಿ'' ಎಂದು ಹೇಳಿ ಬಲರಾಮನು ಹಸ್ತಿನಾವತಿಗೆ ತೆರಳಿದ.

ಮತ್ತು ಭೀಷ್ಮ, ದ್ರೋಣಾದಿ, ಕೌರವರಿಗೂ, ದುರ್ಯೋಧನನಿಗೂ, ''ನಮ್ಮ ದೊರೆ ಉಗ್ರಸೇನನ ಆಜ್ಞೆ ಆಗಿದೆ ಸಾಂಬನನ್ನು ಬಿಟ್ಟುಬಿಡಿರಿ'' ಎಂದು ಆಜ್ಞೆ ಮಾಡಿದ ಆ ಬಲರಾಮ. ಅದನ್ನು ಕೇಳಿ ಭೀಷ್ಮ, ದ್ರೋಣ, ಕರ್ಣ, ದುರ್ಯೋಧನ ಮೊದಲಾದ ಕೌರವ ವೀರರು ಕೋಪಗೊಂಡರು. ಮತ್ತು ಕಣ್ಣು ಕೆಂಪಗೆ ಮಾಡಿ ಬಲರಾಮನಿಗೆ ಹೇಳಿದರು. ''ಬಲರಾಮ, ಇದೇನು ನೀನು ಹೇಳುತ್ತಲಿರುವೆ? ಯಾದವರು ಕೌರವರಾಜನಿಗೆ ಅಪ್ಪಣೆಯನ್ನು ಕೊಡುತ್ತಿರುವರೆ? ನಿಮ್ಮ ರಾಜನಾದ ಉಗ್ರಸೇನನಿಗೆ ನಮಗೆ ಅಪ್ಪಣೆಯನ್ನು ನೀಡುವ ಅಧಿಕಾರವಿಲ್ಲ. ನಮಗೆ ನೀವು ಯಾದವರೆಲ್ಲರೂ ಹಿಂದಿನಿಂದ ನಮಸ್ಕಾರ ಮಾಡುತ್ತಲೆ ಬಂದಿದ್ದೀರಿ. ನೀವು ಸೇವಕರು. ನಾವು ಪ್ರಭುಗಳು. ಪ್ರಭುವಿಗೆ ಸೇವಕನು ಅಪ್ಪಣೆ ಮಾಡುವುದು ಎಂದರೆ ಏನು? ಇದು ನಮ್ಮದೆ ತಪ್ಪು. ನಾವು ಪ್ರೀತಿಯಿಂದ ನಿಮ್ಮನ್ನು ನಮ್ಮ ಸಮಾನ ಆಸನದ ಮೇಲೆ ಕುಳ್ಳಿಸಿ ಕೊಳ್ಳುತ್ತಿದ್ದೆವು. ಸಲಿಗೆಯಿಂದ ಸಮಾನ ಸ್ಕಂದರೆಂದು ನಡೆಸಿಕೊಳ್ಳುತ್ತಿದ್ದೆವು. ಅದರಿಂದ ಅಹಂಕಾರ ನಿಮ್ಮ ತಲೆಗೆ ಏರಿದೆ. ಅದಕ್ಕಾಗಿ ನಮ್ಮ ಮೇಲೆ ಅಪ್ಪಣೆ ಮಾಡಲು ಬಂದಿದ್ದೀರಿ. ಕನ್ಯೆಯ ಕಳ್ಳನಾದ ಸಾಂಬನನ್ನು ಎಂದೂ ಬಿಡುವುದಿಲ್ಲ. ಕೌರವ ಕುಲದ ಕನ್ಯೆಯನ್ನು ಅಪೇಕ್ಷಿಸಿ ಅವನು ಮಹಾ ಅಪರಾಧವನ್ನು ಮಾಡಿದ್ದಾನೆ. ಅದಕ್ಕಾಗಿ ಅವನನ್ನು ಕಾರಾಗೃಹದಲ್ಲಿ ಕೊಳೆ ಹಾಕಿದ್ದೇನೆ'' ಎಂದು ನುಡಿದರು.

ಅದನ್ನು ಕೇಳಿ ಬಲರಾಮನಿಗೆ ಬ್ರಹ್ಮಾಂಡ ಕೋಪ ಬಂದಿತು. ಅವನು ಕೌರವರಿಗೆಲ್ಲ ತಕ್ಕಶಾಸ್ತಿ ಮಾಡಬೇಕೆಂದು ತನ್ನ ಆಯುಧವಾದ ನೇಗಿಲವನ್ನು ಎತ್ತಿದನು. ''ಕೌರವರ ರಾಜಧಾನಿಯಾದ ಹಸ್ತಿನಾವತಿ ಪಟ್ಟಣವನ್ನು ಎಲ್ಲ ಕುರುಕುಲದ ಸಂತಾನದೊಂದಿಗೆ ಗಂಗೆಯಲ್ಲಿ ಮುಳುಗಿಸಿ ಬಿಡುತ್ತೇನೆ'' ಎಂದು ಹೇಳಿ ಹಸ್ತಿನಾವತಿಯ ಕೋಟೆಯ ಮೂಲಕ್ಕೆ ತನ್ನ ನೇಗಿಲವನ್ನು ಕೆಳಮುಖವಾಗಿ ಬೀಸಿ ಎಳೆದು ಸೆಳೆಯತೊಡಗಿದನು. ವಿಶ್ವ ವಿಶಾಲವಾದ ಆ ಹಸ್ತಿನಾವತಿ ಪಟ್ಟಣವು ಭಯಂಕರ ಭೂಕಂಪವಾದಂತೆ ಅಲ್ಲಾಡತೊಡಗಿತು. ಕೂಡಲೆ ಕೌರವರೆಲ್ಲರೂ ಹೆದರಿ, ಹೌಹಾರಿ, ಚಿಂತೋದ್ಭುತರಾಗಿ ಭಯಾಕ್ರಾಂತರಾಗಿ ಕೆಟ್ಟ ದನಿಯಿಂದ ಗಟ್ಟಿಯಾಗಿ ಕಿರುಚಿಕೊಂಡರು.

"ಓ ಬಲರಾಮ, ಕ್ಷಮಿಸು, ಕ್ಷಮಿಸು, ಮುಸಲಾಯುಧ, ಪ್ರಸನ್ನನಾಗು. ನಿನ್ನ ಕೋಪವನ್ನು ಶಾಂತಗೊಳಿಸು ಬಲಭದ್ರ, ಈ ಸಾಂಬನನ್ನು ಅವನ ನವವಧುವಿನೊಂದಿಗೆ ನಿನಗೆ ತಂದು ಒಪ್ಪಿಸುತ್ತೇವೆ. ನಿನ್ನ ಬಲ ಪರಾಕ್ರಮಗಳನ್ನು ಅರಿಯದೆ ಮಾಡಿದ ನಮ್ಮ ಮಹಾಪರಾಧವನ್ನು ಕ್ಷಮಿಸು" ಎಂದು ಬಿದ್ದು ಬೇಡಿಕೊಂಡರು, ಅತ್ತು ಕೇಳಿಕೊಂಡರು. ಕಂಗಾಲಾಗಿ ಪ್ರಾರ್ಥಿಸಿದರು. ಮತ್ತು ಆ ಕ್ಷಣದಲ್ಲಿಯೆ ಸಾಂಬನನ್ನು ಅವನ ಲಕ್ಷಣಾ ಎಂಬ ಪತ್ನಿಯೊಂದಿಗೆ ಕರೆತಂದು ಬಲರಾಮನಿಗೆ ಒಪ್ಪಿಸಿದರು. ಭೀಷ್ಮ ದ್ರೋಣಾದಿಗಳ ಆ ದೈನ್ಯ ಪ್ರಾರ್ಥನೆಯನ್ನು ಕೇಳಿ ಬಲರಾಮನ ಎದೆ ಕರಗಿತು. "ನಿಮ್ಮ ತಪ್ಪನ್ನು ಮನ್ನಿಸಿದೆವು" ಎಂದು ಕೌರವರಿಗೆ ಹೇಳಿದನು. ಹಾಗೂ ತನ್ನ ಮುಸಲಾಯುಧದಿಂದ ಅರ್ಧ ಎಳೆದ ಹಸ್ತಿನಾವತಿ ಪಟ್ಟಣವನ್ನು ಹಾಗೇ ಬಿಟ್ಟು ಬಿಟ್ಟನು. ಈಗಲೂ ಸಹ ಹಸ್ತಿನಾವತಿ ಪಟ್ಟಣವು ಬಲರಾಮ ದೇವರ ಮುಸಲ ಹಾಕಿ ಎಳೆದಿದ್ದರ ಪ್ರಭಾವದಿಂದಾಗಿ ಒಂದು ಕಡೆ ವಾಲಿ ಸೊಟ್ಟಾಗಿ ನಿಂತುಕೊಂಡಿದೆ. ಅನಂತರ ಕೌರವರು ಬಲರಾಮನೊಂದಿಗೆ ಸಾಂಬನನ್ನು ಸತ್ಕರಿಸಿ ಮದುವೆಯ ಉಡುಗೊರೆಯನ್ನು ಅವಳ ಪರಿಣೀತಳಾದ ಪ್ರೀತಿಯ ಲಕ್ಷಣಾ ಎಂಬ ಪತ್ನಿಯನ್ನು ಅವನ ಜೊತೆಗೆ ಕಳಿಸಿದರು.

## ದ್ವಿವಿದ ರಾಕ್ಷಸನ ಸಂಹಾರ

**ವೇದವ್ಯಾಸ:-** ನರಕಾಸುರನಿಗೆ ದ್ವಿವಿದ ಎಂಬ ವಾನರನು ಮಿತ್ರನಾಗಿದ್ದ. ಕೃಷ್ಣನು ನರಕಾಸುರನ ಸಂಹಾರ ಮಾಡಿದ್ದರಿಂದ ಅವನಿಗೆ ಕೋಪ ಬಂದಿತು. ಇದಕ್ಕೆ ತಕ್ಕ ಪ್ರತಿಕಾರ ಮಾಡಿ ಆ ಸೇಡನ್ನು ತೀರಿಸಿ ಕೊಳ್ಳಬೇಕೆಂದು ಸಂಕಲ್ಪಿಸಿದ. ಆ ಮೂರ್ಖ ಮರ್ಕಟನು ಅಜ್ಞಾನದಿಂದ ಮೋಹಿತನಾಗಿ ಯಜ್ಞಗಳನ್ನು ಧ್ವಂಸ ಮಾಡುತ್ತ ನಿರಪರಾಧಿಗಳನ್ನು ಕೊಲ್ಲುತ್ತ ಹಳ್ಳಿ ಹಳ್ಳಿಗಳಲ್ಲಿರುವ ಜನರನ್ನೆಲ್ಲ ನಾಶ ಮಾಡುತ್ತ ದೇಶಕ್ಕೇ ಬೆಂಕಿ ಹಚ್ಚುತ್ತಲಿದ್ದ. ಪರೋಪದ್ರವಕಾರಿಯಾದ ಆ ವಾನರಾಧಮನು ಬೃಹದಾಕಾರವನ್ನು ತಾಳಿ ಹೊಲ ಗದ್ದೆಗಳಲ್ಲಿ ಹೊರಳಾಡಿ ಅಲ್ಲಿಯ ಪೈರುಗಳನ್ನೆಲ್ಲ ತನ್ನ ಉರುಳಾಟದ ಜೋರಿನಿಂದ ಅಳಿದು ಪುಡಿಪುಡಿ ಮಾಡಿದ. ಅದರಿಂದಾಗ ದೇಶದಲ್ಲಿ ಧರ್ಮಕರ್ಮಗಳೆಲ್ಲವು ನಿಂತು ಹೋದವು. ಹೀಗೆ ದ್ವಿವಿದನು ಒಂದು ಪ್ರದೇಶದಲ್ಲಿ ತನ್ನ ಉರಿದಾಟ ನಡೆಸಿದಾಗ ಒಂದಾನೊಂದು ಸಲ ಬಲರಾಮನು ಅಲ್ಲಿಗೆ ಬಂದು ರೇವತಿಯೊಡನೆ ಮಧುಪಾನ ಮಾಡಿ ಆನಂದದಿಂದ ವಿಹರಿಸಿದ.

ಆದರೆ ಈ ದ್ವಿವಿದ ಎಂಬ ವಾನರನು ಬಲರಾಮನ ಆಯುಧವಾದ ಒನಕೆಯನ್ನು ನೇಗಿಲವನ್ನು ಹಿಡಿದು ಅವರಿಗೆ ಅಣಕಿಸಿದ. ಅವನ ಪ್ರೇಯಸಿಯರ ಎದುರು ಗಟ್ಟಿಯಾಗಿ ನಕ್ಕು ಅಟ್ಟಹಾಸ ಮಾಡಿ ಉಪಹಾಸಗೈದ. ಅವನ ಎದುರು ಇರಿಸಿದ ಮಧ್ಯತುಂಬಿದ ಪಾನ ಪಾತ್ರೆಗಳನ್ನೆಲ್ಲ ಕುಕ್ಕಿ ಒಡೆದು ಪುಡಿ ಪುಡಿ ಮಾಡಿದ. ಇದನ್ನು ನೋಡಿ ಬಲರಾಮನು ಕೋಪಾಟೋಪದಿಂದ ಆ ಕೋತಿಯು ಇದ್ದಲ್ಲಿ ಬಂದು ಮುಷ್ಟಿಯಿಂದ ದ್ವಿವಿದನ ತಲೆಯ ಮೇಲೆ ಕುಟ್ಟಿದ. ಬಲರಾಮನ ಏಟನ್ನು ತಾಳಲಾರದೆ ದ್ವಿವಿದನು ರಕ್ತಕಾರುತ್ತ ನೆಲದ ಮೇಲೆ ಬಿದ್ದು ಪ್ರಾಣಬಿಟ್ಟ. ಆಗ ದೇವತೆಗಳು ಬಲರಾಮನ ಮೇಲೆ ಪುಷ್ಪವೃಷ್ಟಿಯನ್ನು ಕರೆದರು ಮತ್ತು ಬಲರಾಮನ ಈ ಕೃತ್ಯವನ್ನು ಪ್ರಶಂಸಿದರು.

## ಶ್ರೀಕೃಷ್ಣನ ಪರಂದಾಮ ಪ್ರಯಾಣ

**ವ್ಯಾಸ:-** ಶ್ರೀಕೃಷ್ಣನು ಬಲರಾಮನೊಂದಿಗೆ ದುಷ್ಟರಾದ ದೈತ್ಯ ದಾನವರನ್ನೆಲ್ಲ

ಹೊಡೆದು ಹಾಕಿದ. ಅರ್ಜುನ ಮೊದಲಾದ ಪಾಂಡವರೊಂದಿಗೆ ಕೂಡಿ ಹದಿನೆಂಟು ಅಕ್ಷೋಹಿಣೀ ಸೈನ್ಯವನ್ನೆಲ್ಲ ನಾಶಮಾಡಿಸಿ ಭೂಭಾರವನ್ನು ಇಳಿಸಿದನು. ಮತ್ತು ಕೊನೆಗೆ ಬ್ರಾಹ್ಮಣರ ಶಾಪದ ನೆವದಿಂದ ತನ್ನ ವಂಶದವರನ್ನೆಲ್ಲ ಕೊನೆಗಾಣಿಸಿದನು. ಅದರ ಕತೆ ಹೇಳುತ್ತೇನೆ ಕೇಳಿರಿ.

ಪಿಂಡಾರಕ ಎಂಬ ಪುಣ್ಯ ತೀರ್ಥದಲ್ಲಿ ಯಾದವ ಕುಮಾರರು ವಿಶ್ವಾಮಿತ್ರ, ನಾರದ, ಕಣ್ವ ಎಂಬ ಮೂವರು ಮುನಿಗಳನ್ನು ಕಂಡರು. ಆ ಯಾದವ ತರುಣರಿಗೆಲ್ಲ ಕೃಷ್ಣನ ಅನುಗ್ರಹದಿಂದ ಸಕಲ ವಿಧವಾದ ಸುಖ ಸೌಭಾಗ್ಯಗಳು ಅಪ್ರಯತ್ನದಿಂದ ಅಯಾಚಿತವಾಗಿ ಬರುತ್ತಲಿದ್ದುದರಿಂದ ಅವರು ತಿಂದು, ಉಂಡು, ಸುಖೋದ್ರೇಕದಿಂದ ಮಸ್ತಿಗೆ ಬಂದಿದ್ದರು. ''ವಿನಾಶಕಾಲೇ ವಿಪರೀತ ಬುದ್ಧಿಃ'' ಎಂಬಂತೆ ಆ ಮೂವರು ಮಹರ್ಷಿಗಳನ್ನು ಅಪಹಾಸ ಮಾಡಬೇಕೆಂದು ದುರ್ಬುದ್ಧಿ ಅವರಲ್ಲಿ ಹುಟ್ಟಿತು. ಯದುಕುಮಾರರಲ್ಲಿ ಅತ್ಯಂತ ಚೆಲುವನಾದ ಸಾಂಬನಿಗೆ ಸ್ತ್ರೀ ವೇಷ ತೊಡಿಸಿದರು. ಅಬಲಾ ಜನರ ಅಲಂಕಾರಗಳನ್ನೆಲ್ಲ ತೊಡಿಸಿದರು. ಆ ಮೂವರು ಮಹರ್ಷಿಗಳ ಮುಂದೆ ಹೋಗಿ ನಮಸ್ಕಾರ ಮಾಡಿ ಈ ರೀತಿ ಕೇಳಿದರು. ''ಪೂಜ್ಯರೇ, ತುಂಬು ಗರ್ಭಿಣಿಯಾದ ಈ ಹೆಣ್ಣು ಮಗಳು ಗಂಡು ಹಡೆಯುವಳೊ ಹೆಣ್ಣು ಹಡೆಯುವಳೋ ಹೇಳಿರಿ.''

ದಿವ್ಯಜ್ಞಾನಿಗಳಾದ ಆ ಮುನಿಗಳಿಗೆ ಈ ಯದುಕುಮಾರರ ಕಪಟ ತಂತ್ರವೆಲ್ಲವು ತಿಳಿದುಹೋಗಿತ್ತು. ಆದುದರಿಂದ ಅವರು ಕುಪಿತರಾಗಿ ''ಈ ಕುಮಾರಿಯು ಒಂದು ಒನಕೆಯನ್ನು ಹೆರುವಳು. ಅದರಿಂದಲೇ ನಿಮ್ಮ ಯಾದವರ ಸಂತತಿಯೆಲ್ಲವು ನಾಶ ಹೊಂದುವದು'' ಎಂದು ಹೇಳಿದರು. ಮಹರ್ಷಿಗಳ ಅವಮಾನ ಮಾಡಿದ ಯಾದವರ ತರುಣ ತಂಡಕ್ಕೆ ಈಗ ಬುದ್ಧಿ ಭೆಟ್ಟಿಯಾಯಿತು. ಅವರು ಪಶ್ಚಾತ್ತಾಪದಿಂದ ಕೂಡಿಕೊಂಡು ಉಗ್ರಸೇನ ಮಹಾರಾಜನಿಗೆ ಈ ಸುದ್ದಿಯನ್ನು ತಿಳಿಸಿದರು. ಆ ಉಗ್ರಸೇನ ರಾಜನು ಸಾಂಬನ ಹೊಟ್ಟೆಯ ಮುಂದೆ ಹಿಡಿದು ಕಟ್ಟಿದ ಒನಕೆಯನ್ನು ತರಿಸಿ ಅದನ್ನು ಕುಟ್ಟಿ ಪುಡಿ ಮಾಡಿ ಸಮುದ್ರದಲ್ಲಿ ಎಸೆದುಬಿಟ್ಟನು. ಪುಡಿ ಮಾಡಲು ಬಾರದ ಆ ಒನಕೆಯ ತೋಮರದಂತಿದ್ದ ತುಂಡನ್ನು ಚೂರ್ಣ ಮಾಡಲಿಕ್ಕೆ ಆಗಲಿಲ್ಲ. ಕೊನೆಗೆ ಉಳಿದ ಆ ಒನಕೆಯ ತುಂಡನ್ನು ಬಲರಾಮನ ಆಜ್ಞೆಯ ಪ್ರಕಾರ ಸಮುದ್ರದಲ್ಲಿ ಎಸೆದು ಬಿಟ್ಟರು. ಅದನ್ನು ಒಂದು ಮೀನು ನುಂಗಿತು. ಆ ಮೀನವನ್ನು ಬೆಸ್ತರು ಬಲಿಹಾಕಿ ಹಿಡಿದು ಅದರ ಹೊಟ್ಟೆಯನ್ನು ಕೊಯ್ಯುವಾಗ ಆ ಉಕ್ಕಿನ ತುಂಡು ಅವರಿಗೆ ಸಿಕ್ಕಿತು. ಆ ಬೆಸ್ತರಿಂದ ಆ ಒನಕೆಯ ತುಂಡು ಜರಾ ಎಂಬ ಬೇಡನ ಕೈಗೆ ಸೇರಿತು.

ಇದೇ ಸಮಯದಲ್ಲಿ ದೇವತೆಗಳು ಕೃಷ್ಣನ ಬಳಿಗೆ ಒಬ್ಬ ದೂತನನ್ನು ಕಳಿಸಿದರು. ಅವನ ಮುಖಾಂತರ ಭಗವಂತನಿಗೆ ವಿಜ್ಞಾಪನೆ ಮಾಡಿಕೊಂಡರು. ''ಪ್ರಭು, ಭೂಭಾರವನ್ನು ಇಳಿಸಲಿಕ್ಕಾಗಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ನೀನು ಭೂಮಿಗೆ ಬಂದು ಒಂದು ನೂರು ವರ್ಷಗಳ ಮೇಲಾಯಿತು. ದುಷ್ಟರಾಜ ದೈತ್ಯರು ನಿನ್ನಿಂದ ಸಂಹರಿಸಲ್ಪಟ್ಟಿದ್ದಾರೆ. ಭೂಮಿಯ ಭಾರವೂ ನಿನ್ನಿಂದ ಇಳಿಸಲ್ಪಟ್ಟಿದೆ. ನೀನು ಹಾಕಿದ ಗಡುವು ಈಗ ಮೀರಿದೆ. ನಿನಗೆ ಅಪೇಕ್ಷೆ ಇದ್ದರೆ ನಿನ್ನ ಇಲ್ಲಿಯ ಕಾರ್ಯವೆಲ್ಲ ಮುಗಿದಿದ್ದರೆ ಸ್ವರ್ಗಕ್ಕೆ ನೀನು ಹೊರಡಬಹುದು'' ಎಂದು ವಿಜ್ಞಾಪಿಸಿ ಕೊಂಡರು. ಆಗ ಶ್ರೀಕೃಷ್ಣನು ಆ ದೂತನ

ಮುಖಾಂತರ ದೇವತೆಗಳಿಗೆ ಹೇಳಿ ಕಳುಸಿದ. ''ದೇವತೆಗಳೇ, ನೀವು ವಿಜ್ಞಾಪಿಸಿಕೊಂಡಂತೆ ನಮ್ಮ ಅವತಾರ ಕಾರ್ಯವೆಲ್ಲವು ಸಮಾಪ್ತ ಆದಂತೆ ಆಗಿದೆ. ಕಂಸ, ಶಿಶುಪಾಲ, ದಂತವಕ್ರ, ಜರಾಸಂಧ ಮೊದಲಾದ ದುಷ್ಟ ರಾಜರನ್ನೆಲ್ಲ ನಾಶಪಡಿಸಿದ್ದೇನೆ. ಈಗ ಪ್ರಚಂಡ ಪ್ರಮಾಣದಲ್ಲಿ ಬೆಳೆದು ನಿಂತ ಯಾದವರೇ ಭೂಮಿಗೆ ಭಾರವಾಗಿದ್ದಾರೆ. ಅವರನ್ನು ಕೂಡ ನಾಶಪಡಿಸಿ ಭೂಮಿಯ ಭಾರವನ್ನು ಪೂರ್ಣವಾಗಿ ಇಳಿಸಿ ಅನಂತರ ನಾನು ನಿಮ್ಮ ದೇವಲೋಕವನ್ನು ಪಾಲಿಸಲು ಬರುತ್ತೇನೆ'' ಎಂದನು.

ಮುಂದೆ ಕೆಲದಿನಗಳ ಬಳಿಕ ದ್ವಾರಕಾ ಪಟ್ಟಣದಲ್ಲಿ ಭಯಂಕರ ಉತ್ಪಾತಗಳು ಅಪಶಕುನಗಳೂ ಆಗತೊಡಗಿದವು. ಆ ಉತ್ಪಾತ ಶಮನದ ನೆಪ ಮಾಡಿಕೊಂಡು ಕೃಷ್ಣನು ಎಲ್ಲ ಯಾದವರನ್ನು ಕರೆದುಕೊಂಡು ಪ್ರಭಾಸ ತೀರ್ಥಕ್ಕೆ ಬಂದನು. ಆಗ ಉದ್ಧವನು ಏಕಾಂತದಲ್ಲಿ ಕೃಷ್ಣನ ಬಳಿಗೆ ಬಂದು ''ಕೃಷ್ಣ, ನಾನು ಈಗ ಏನು ಮಾಡಬೇಕು? ಯದುವಂಶದ ವಿನಾಶವನ್ನು ಸೂಚಿಸಿದ ಈ ಅಪಶಕುನಗಳನ್ನು ನೋಡಿ ನನಗೆ ಭಯವಾಗುತ್ತಿದೆ. ನೀನೇ ನನಗೆ ದಾರಿ ತೋರು, ಅಪ್ಪಣೆ ಮಾಡು' ಎಂದು ಬೇಡಿಕೊಂಡನು. ಆಗ ಶ್ರೀಹರಿಯು ಉದ್ಧವನಿಗೆ ''ನೀನು ಅಂತರಿಕ್ಷ ಮಾರ್ಗದಿಂದ ಗಂಧಮಾದನ ಪರ್ವತದಲ್ಲಿರುವ ಬದರಿಕಾಶ್ರಮಕ್ಕೆ ಹೋಗು. ಅದು ಪರಮಪವಿತ್ರ ನಾರಾಯಣರ ನಿವಾಸಸ್ಥಾನ. ಅಲ್ಲಿ ನಿಂತು ತಪಸ್ಸನ್ನು ಮಾಡು'' ಎಂದು ಹೇಳಿದ. ಕೃಷ್ಣನ ಅಪ್ಪಣೆಯಂತೆ ಉದ್ಧವನು ಬದರಿಕಾಶ್ರಮಕ್ಕೆ ತೆರಳಿದನು.

ಯಾದವರೆಲ್ಲರು ಬಲರಾಮ ಕೃಷ್ಣನೊಡನೆ ಪ್ರಭಾಸ ತೀರ್ಥಕ್ಕೆ ಬಂದರು ಅಲ್ಲಿ ಯಥೇಚ್ಛ ಭೋಜನ ಮಾಡಿದರು. ಅನಂತರ ಪಾನಗೋಷ್ಠಿ ಪ್ರಾರಂಭವಾಯಿತು. ಎಲ್ಲರೂ ಬಾಯ್ತುಂಬ ಸುರೆಯನ್ನು ಸುರಿದುಕೊಂಡರು. ಮಿತಿಮೀರಿ ಮದ್ಯವನ್ನು ಪಾನ ಮಾಡಿದರು. ಸೆರೆ ತನ್ನ ಕೆಲಸ ಮಾಡಿತು. ಎಲ್ಲರ ಬುದ್ಧಿ ಭ್ರಂಶವಾಯಿತು. ಒಬ್ಬರಿಗೊಬ್ಬರಲ್ಲಿ ವಾದ ಪ್ರತಿವಾದ ಬೆಳೆದು ಕಲಹಾಗ್ನಿ ಹೆಚ್ಚಾಗಿ ಹೊಡೆದಾಟ ಬಡೆದಾಟ ಪ್ರಾರಂಭವಾಯಿತು. ಮೊದಲು ಆಯುಧದಿಂದ ಹೋರಾಟ ಸುರುವಾಯಿತು. ಆಯುಧಗಳೆಲ್ಲ ಮೊಂಡಾಗಿ ಮುರಿದು ಬಿದ್ದಾಗ ನದಿಯ ತೀರದಲ್ಲಿ ಬೆಳೆದ (ಜೊಂಡನ್ನು) ಏರಕಾ ಎಂಬ ಹುಲ್ಲನ್ನು ಕಿತ್ತಿ ಹೊಡೆದಾಡತೊಡಗಿದರು. ಆ ಏರಕೆ ಎಂಬ ಜೇಕಿನ ಮೆದೆಗಳು ಕೈಯಲ್ಲಿ ಬಂದ ಕೂಡಲೆ ಅವುಗಳಲ್ಲಿ ವಜ್ರಾಯುಧದ ಬಲ ಬಂದಿತು. ಪ್ರದ್ಯುಮ್ನ, ಸಾಂಬ, ಕೃತವರ್ಮ, ಸಾತ್ಯಕಿ, ಅನಿರುದ್ಧ, ಪೃಥು, ಚಾರುವರ್ಮ, ಸುಚಾರು, ಅಕ್ರೂರ ಮೊದಲಾದ ಯಾದವರೆಲ್ಲರೂ ಆ ಏರಕೆ ಎಂಬ ಹುಲ್ಲಿನ ಗರಿಕೆಯಿಂದ ಪರಸ್ಪರ ಕಾದಾಡಿದರು. ವಜ್ರಾಯುಧದಂತಿದ್ದ ಆ ಹುಲ್ಲ ಪಾಚಿಯ ಗರಿಕೆಯಿಂದ ಒಬ್ಬರಿಗೊಬ್ಬರು ಹೊಡೆದು ಬಡಿದು, ಕಡಿದು ಜಡಿದು ಎಲ್ಲ ಯಾದವರು ಪ್ರಭಾಸ ತೀರ್ಥದಲ್ಲಿ ಮರಣವನ್ನು ಅಪ್ಪಿದರು.

ಇತ್ತ ಕೃಷ್ಣನ ಚೈತ್ರರಥ ಮತ್ತು ಅದಕ್ಕೆ ಕಟ್ಟಿದ ಕುದುರೆಗಳು ಕೃಷ್ಣನ ಸಾರಥಿಯಾದ ದಾರುಕನು ನೋಡ ನೋಡುತ್ತಿರುವಂತೆಯೆ ಸಮುದ್ರದ ಮಧ್ಯ ಭಾಗಕ್ಕೆ ಸಾಗಿಹೋಗಿ ಮುಳುಗಿ ಬಿಟ್ಟವು. ಹಾಗು ಅವನ ಚಕ್ರ, ಶಂಖ, ಗದೆ, ಶಾರ್ಙ್ಗ ಎಂಬ ಧನಸ್ಸು, ಖಡ್ಗ, ಬಾಣ, ಬತ್ತಳಿಕೆ, ಕೃಷ್ಣನಿಗೆ ಪ್ರದಕ್ಷಿಣೆ ಹಾಕಿ ನಮಸ್ಕರಿಸಿ ಸೂರ್ಯ ಮಾರ್ಗದಲ್ಲಿ ಹೊರಟುಹೋದವು. ಅನಂತರ ಕೃಷ್ಣನ ಸಲಹೆಯಂತೆ ಬಲರಾಮನು ದೊಡ್ಡ ಸರ್ಪದ

ರೂಪ ತೆಗೆದುಕೊಂಡು ಸಾಗರವನ್ನು ಪ್ರವೇಶಿಸಿದನು. ಅನಂತರ ಶ್ರೀಕೃಷ್ಣನು ತನ್ನ ಸಾರಥಿಯಾದ ದಾರುಕನಿಗೆ "ದಾರುಕ, ನೀನು ದ್ವಾರಕಾಕ್ಕೆ ಹೋಗಿ ನನ್ನ ತಂದೆ ವಸುದೇವ ಮತ್ತು ಉಗ್ರಸೇನನಿಗೆ ಯಾದವರ ಮರಣದ ಸುದ್ದಿಯನ್ನೂ ಬಲರಾಮನು ನಿರ್ಯಾಣ ಹೊಂದಿದ್ದನ್ನೂ ತಿಳಿಸು. ನಾನು ಕೂಡ ಯೋಗ ಮಾರ್ಗದಿಂದ ಈ ದೇಹವನ್ನು ತ್ಯಜಿಸಿ ನನ್ನ ಪರಂಧಾಮವನ್ನು ಕುರಿತು ಪ್ರಯಾಣ ಮಾಡುತ್ತೇನೆ. ದ್ವಾರಕೆಯ ನಿವಾಸಿಗಳಾದ ಎಲ್ಲ ಜನರಿಗೂ ಆಹುಕನಿಗೂ ಒಂದು ವಿಶೇಷ ಸಮಾಚಾರವನ್ನು ಹೇಳು. "ನಾನು ನಿರ್ಯಾಣ ಹೊಂದಿದ ಕೆಲವೇ ದಿನಗಳಲ್ಲಿ ಈ ದ್ವಾರಕಾಪಟ್ಟಣವು ಸಮುದ್ರದಲ್ಲಿ ಮುಳುಗಿ ಹೋಗುವುದು. ನೀವೆಲ್ಲರು ಅರ್ಜುನನ ದಾರಿ ಕಾಯುತ್ತ ಇರಿ. ಅವನು ಬಂದ ಬಳಿಕ ಅವನ ಜೊತೆಗೆ ಎಲ್ಲರೂ ಹಸ್ತಿನಾವತಿಗೆ ಹೋಗಿರಿ" ಎಂದು ಹೇಳಿ ಅರ್ಜುನನಿಗೂ ದಾರುಕನ ಮುಖಾಂತರವಾಗಿ ಒಂದು ಸಂದೇಶವನ್ನು ತಿಳಿಸಿದ. "ಅರ್ಜುನ, ನಾನು ಬಲರಾಮ ಸಹಿತ ನಿರ್ಯಾಣ ಹೊಂದುತ್ತಿದ್ದೇನೆ. ನನ್ನನ್ನು ಆಶ್ರಯಿಸಿದ ಜನರು ಅನಾಥರಾಗುವ ಪ್ರಸಂಗ ಬಂದಿದೆ. ನೀನು ನನ್ನನ್ನು ಆಶ್ರಯಿಸಿದ ಜನರೆಲ್ಲರನ್ನು ನಿನ್ನ ಊರಿಗೆ ಕರೆದುಕೊಂಡು ಹೋಗಿ ಅವರನ್ನು ಕಾಪಾಡು. ನಮ್ಮ ವಂಶದ ವಜ್ರನು ಅಳಿದುಳಿದ ಯದುಕುಲದವರಿಗೆ ಅರಸನಾಗಲಿ." ಹೀಗೆ ದಾರುಕನಿಗೆ ವಸುದೇವ ಆಹುಕ ಮೊದಲಾದ ಯಾದವರಿಗೂ ಅರ್ಜುನನಿಗೂ ತಿಳಿಸಲು ಸಂದೇಶವನ್ನು ಹೇಳಿ ದಾರುಕನಿಗೂ ಕೊನೆಯ ಅಪ್ಪಣೆಯನ್ನು ಕೊಟ್ಟನು. "ದಾರುಕ, ನೀನು ಅರ್ಜುನನೊಡನೆ ದ್ವಾರಕಾ ಪಟ್ಟಣಕ್ಕೆ ಬಂದು ಅಲ್ಲಿಯ ಜನರನ್ನೆಲ್ಲ ಕರೆದುಕೊಂಡು ಅರ್ಜುನನಿದ್ದಲ್ಲಿಗೆ ಹೋಗು" ಎಂದು ಅನುಗ್ರಹಿಸಿದನು.

## ಬೇಡನ ಬಾಣ, ಭಗವಂತನ ಪರಂಧಾಮ ಪ್ರಯಾಣ

**ವೇದವ್ಯಾಸ:-** ಮುನಿಗಳೆ, ಈ ರೀತಿ ಕೃಷ್ಣ ಹೇಳಿದ ಮಾತನ್ನು ಕೇಳಿ ದಾರುಕನು ಅವನ ಅಪ್ಪಣೆಯಂತೆ ಅರ್ಜುನನ್ನು ಕರೆತಂದು ವಜ್ರ ಎಂಬ ಅನಿರುದ್ಧ ಕುಮಾರನನ್ನು ಯದುರಾಜನನ್ನಾಗಿ ಮಾಡಿದನು. ಶ್ರೀಕೃಷ್ಣನು ತನ್ನ ಮಂಡಿಯ ಮೇಲೆ ಕಾಲನ್ನು ಇಟ್ಟು ಯೋಗ ಮುದ್ರಾಲೀನನಾದನು.

ಸಾಂಬನು ಋಷಿಗಳನ್ನು ಉಪಹಾಸ ಮಾಡಿ ಹೆತ್ತ ಒನಕೆಯ ಕಬ್ಬಿಣದ ಅಣಸನ್ನು ತಿಕ್ಕಿ ತಿಕ್ಕಿ ಚಿಕ್ಕದನ್ನಾಗಿ ಮಾಡಿ ಸಮುದ್ರದಲ್ಲಿ ಎಸೆದಿದ್ದರಷ್ಟೆ? ಅದನ್ನು ಒಂದು ಮೀನವು ನುಂಗಿದಾಗ ಅದರ ಹೊಟ್ಟೆಯಲ್ಲಿಂದ ಜರಾ ಎಂಬ ಬೇಡನಿಗೆ ಅದು ದೊರಕಿತು. ಅದನ್ನು ತನ್ನ ಬಾಣದ ತುದಿಯಲ್ಲಿ ಅಳವಡಿಸಿ ಆ ಬೇಡನು ಕೃಷ್ಣ ಕುಳಿತ ಸ್ಥಳಕ್ಕೆ ಬಂದನು. ಯೋಗಾಸನದಲ್ಲಿ ಆಸೀನನಾದ ಮುರವೈರಿಯ ಪಾದವು ಚಿಗರೆಯ ಕಾಲಿನಂತೆ ಹೊಳೆಯುತ್ತಿದ್ದಿತು. ಅದನ್ನು ದೂರದಿಂದ ಯಾವುದೋ ಒಂದು ಚಿಗರೆಯ ಕಾಲು ಎಂದು ಭಾವಿಸಿ ಆ ಜರಾ ಬೇಡನು ತನ್ನ ಬಾಣ ಬೀಸಿ ಹೊಡೆದನು ಬಳಿಗೆ ಹೋಗಿ ನೋಡಿದ. ಚತುರ್ಬಾಹುಗಳಿಂದ ದೇದಿಪ್ಯಮಾನನಾದ ಸಾಕ್ಷಾತ್‌ಪುರುಷೋತ್ತಮ.

ಕೂಡಲೆ ತನ್ನ ತಪ್ಪಿನ ಅರಿವಾಯಿತು ಆ ಬೇಡನಿಗೆ. ಪಾದದ ಮೇಲೆ ಬಿದ್ದು "ತಪ್ಪಾಯಿತು ತಂದೆ, ತಪ್ಪಾಯಿತು, ಕ್ಷಮಿಸು ಮನ್ನಿಸು, ಹಿಂದೆ ನಾನು ಮಾಡಿದ ಪಾಪ ದಿಂದಲೇ ಬೆಂದು ಹೋಗಿದ್ದೇನೆ. ಮತ್ತೆ ನನ್ನನ್ನು ಸುಡಬೇಡ" ಎಂದು ಬೇಡಿಕೊಂಡನು.

ಆಗ ಕೃಷ್ಣನು ಶಾಂತಸ್ವರದಿಂದ ಅವನನ್ನು ಸಂತೈಸುತ್ತ ನುಡಿದ. "ಬೇಡ! ನೀನು ವ್ಯಥಾ ದುಃಖ ಮಾಡಬೇಡ. ಹೋದ ಜನ್ಮದಲ್ಲಿ ನೀನು ದುರ್ವಾಸನಾಗಿದ್ದೆ. ವೈಕುಂಠ ಲೋಕಕ್ಕೆ ನಾನು ಇದ್ದಲ್ಲಿಗೆ ಬಂದು ನೀನು ನನ್ನನ್ನು ಒದ್ದೆ. ಆದರೂ ನಾನು ನಿನ್ನ ಪಾದ ತೊಳೆದು ಉಪಚರಿಸಿದೆ. ಈಗ ಮತ್ತೆ ಬೇಡನಾಗಿ ಹುಟ್ಟಿ ನನಗೆ ಬಾಣ ಬಿಟ್ಟೆ. ಆದರೂ ನನಗೆ ಪ್ರಾಣಾಪಾಯವಿಲ್ಲ. ನಾನು ಅಮರೇಶ್ವರ, ನಿತ್ಯಸತ್ಯ ಶಾಶ್ವತ. ಇದೆಲ್ಲವೂ ನನ್ನ ಪ್ರೇರಣೆ ಹಾಗು ನನ್ನ ಇಚ್ಛೆಯಂತೆಯೇ ನಡೆದದ್ದು. ಆದುದರಿಂದ ನಿನಗೆ ಏನೂ ಭಯವಿಲ್ಲ. ನನ್ನ ಅನುಗ್ರಹದಿಂದ ನೀನು ಸ್ವರ್ಗಲೋಕವನ್ನು ಸೇರುವೆ" ಎಂದು ಸಂತೈಸಿದ. ಕೃಷ್ಣನು ಈ ರೀತಿ ಮಾತು ಮುಗಿಸುವಷ್ಟರಲ್ಲಿ ತಟ್ಟನೆ ಅಲ್ಲಿಗೆ ದೇವಲೋಕದ ವಿಮಾನವು ಬಂದಿತು ಅದನ್ನು ಆರೋಹಣ ಮಾಡಿ ಆ ಜರಾ ವ್ಯಾಧನು ಕೃಷ್ಣನ ಕೃಪೆಯಿಂದ ನಾಕಕೋಲಕ್ಕೆ ಏರಿದನು.

ಅನಂತರ ಪರಬ್ರಹ್ಮರೂಪಿಯಾದ ಆ ಶ್ರೀಕೃಷ್ಣನು ಈ ಮಾನವ ದೇಹದಂತೆ ಜನರಿಗೆ ತೋರುವ ಒಂದು ದೇಹವನ್ನು ಅರ್ಜುನನಿಗೆ ಅಗ್ನಿಸಂಸ್ಕಾರಕ್ಕೆಂದು ಇಟ್ಟು ತಾನು ತನ್ನ ದಿವ್ಯ ಸಚ್ಚಿದಾನಂದ ರೂಪದಿಂದ ಪರಂಧಾಮವನ್ನು ಕುರಿತು ಪ್ರಯಾಣ ಮಾಡಿದನು.

## ಕೃಷ್ಣಾವತಾರ ಸಮಾಪ್ತಿ

**ವ್ಯಾಸ:-** ಮುನಿಗಳೆ, ಕೃಷ್ಣನ ಆದೇಶದಂತೆ ದಾರುಕನಿಂದ ಕರೆತರಲ್ಪಟ್ಟ ಅರ್ಜುನನು ಶ್ರೀಕೃಷ್ಣನು ಬಿಟ್ಟು ಹೋದ ಅವನ ಪಾರ್ಥಿವ ಶರೀರಕ್ಕೂ ಮತ್ತು ಬಲರಾಮನ ಶರೀರಕ್ಕೂ ಅಗ್ನಿ ಸಂಸ್ಕಾರ ಮಾಡಿದನು. ಅದರಂತೆ ಕ್ರಮವಾಗಿ ಇತರ ಎಲ್ಲ ಮೃತರಾದ ಯಾದವರಿಗೂ ಶವ ಸಂಸ್ಕಾರವನ್ನು ವಿಧಿಪೂರ್ವಕವಾಗಿ ನೆರವೇರಿಸಿದನು. ರುಕ್ಮಿಣೀ, ಸತ್ಯಭಾಮಾ ಮೊದಲಾದ ಕೃಷ್ಣನ ಅಷ್ಟಮಹಿಷಿಯರು ಕೃಷ್ಣನ ದೇಹವನ್ನು ಹಿಡಿದುಕೊಂಡು ಚಿತೆಯಲ್ಲಿ ಸತಿ ಹೋಗಿ ಆತ್ಮಾರ್ಪಣೆಯನ್ನು ಮಾಡಿದರು. ಬಲರಾಮನ ಮಡದಿಯಾದ ರೇವತಿಯು ಕೂಡ ತನ್ನ ಪತಿಯ ಶರೀರವನ್ನು ಅಪ್ಪಿಕೊಂಡು ಬೆಂಕಿಯಲ್ಲಿ ತನ್ನ ದೇಹವನ್ನು ಈಡಾಡಿದಳು.

ಈ ವಾರ್ತೆಯನ್ನು ಕೇಳಿ ಉಗ್ರಸೇನ, ವಸುದೇವ, ದೇವಕೀ ರೋಹಿಣೀ ಎಲ್ಲರೂ ಬೆಂಕಿಯಲ್ಲಿ ಹಾರಿಕೊಂಡರು. ಅನಂತರ ಅರ್ಜುನನು ಅವರೆಲ್ಲರಿಗೂ ಔರ್ಧ್ವದೈಹಿಕ ಕೃತ್ಯಗಳನ್ನು ವಿಧಿಪೂರ್ವಕವಾಗಿ ನೆರವೇರಿಸಿದನು. ದ್ವಾರಾವತಿಯಲ್ಲಿದ್ದ ಕೃಷ್ಣನ ಹೆಂಡಂದಿರನ್ನು, ಅನಿರುದ್ಧ ಕುಮಾರನಾದ ವಜ್ರನನ್ನು ಹಸ್ತಿನಾವತಿಗೆ ಕರೆದುಕೊಂಡು ಹೊರಟನು. ಹಿಂದೆ ಕೃಷ್ಣನು ಭೂಲೋಕಕ್ಕೆ ತಂದಿದ್ದ ಸುಧರ್ಮ ಎಂಬ ದೇವ ಸಭೆಯೂ ಪಾರಿಜಾತ ವೃಕ್ಷವೂ ಮತ್ತೆ ಮರಳಿ ದೇವಲೋಕಕ್ಕೆ ತೆರಳಿದವು. ಕೃಷ್ಣನು ತನ್ನ ದೇಹ ಬಿಟ್ಟು ಸ್ವಸ್ಥಾನವನ್ನು ತೆರಳಿದ ದಿನವೇ ಕರೀ ಕಪ್ಪಾದ ಶರೀರವುಳ್ಳ ಕಲಿಯು ಈ ಭೂಲೋಕಕ್ಕೆ ಕಾಲಿಟ್ಟನು.

ಯಾದವರು ಹೊಡೆದಾಡಿ ಸತ್ತರು. ಶ್ರೀಕೃಷ್ಣ ಬಲರಾಮರು ತಮ್ಮ ಮೂಲ ರೂಪದಲ್ಲಿ ಸೇರಿದರು. ಉಳಿದುಳಿದವರನ್ನೆಲ್ಲ ಅರ್ಜುನನು ಕರೆದುಕೊಂಡು ಹೋದ. ದ್ವಾರಕೆ ಬರಿದಾಯಿತು. ಸರ್ವಶೂನ್ಯವಾದ ಆ ವಿಶಾಲ ದ್ವಾರಕಾ ನಗರಿಯನ್ನು ಸಮುದ್ರವು ಮುಳಗಿಸಿಬಿಟ್ಟಿತು. ಆದರೆ ಶ್ರೀಕೃಷ್ಣನ ಅರಮನೆಯನ್ನು ಮಾತ್ರ ಅದು ಮುಳಗಿಸಲಿಲ್ಲ. ಅದೇ ಈಗ ಪ್ರಸಿದ್ಧವಾದ ದ್ವಾರಕಾ ಕ್ಷೇತ್ರವಾಗಿದೆ. ಆ ದ್ವಾರಕೆಯು ಪರಮ ಪುಣ್ಯತಮ ಕ್ಷೇತ್ರ. ಅದರ ದರ್ಶನದಿಂದಲೆ ಸರ್ವಪಾಪ ಪರಿಹಾರ. ಅದರ ಸ್ಪರ್ಶನದಿಂದ ಸಕಲ

ದುಃಖದುರಿತ ನಿವಾರಣ. ಅನಂತರ ಅರ್ಜುನನು ಧನಧಾನ್ಯಗಳಿಂದ ಸಮೃದ್ಧವಾದ ಪಂಚನದ (ಪಂಜಾಬ) ಪ್ರದೇಶದಲ್ಲಿ ದ್ವಾರಕೆಯ ನಿರ್ವಾಸಿತರಿಗೆಲ್ಲ ನಿವಾಸಗಳನ್ನು ಏರ್ಪಡಿಸಿದನು. ಆದರೆ ಕೃಷ್ಣನ ಹದಿನಾರು ಸಾವಿರ ಹೆಂಡಂದಿರನ್ನು ಮಾತ್ರ ಹಸ್ತಿನಾವತಿಗೆ ಕರೆದುಕೊಂಡು ಹೊರಟನು. ದಾರಿಯಲ್ಲಿ ಮಹಾಕ್ರೂರವಾದ ದರೋಡೆಕೋರರಾದ ದಸ್ಯುಗಳು ಅವರ ಮೇಲೆ ಎರಗಿದರು. ಅರ್ಜುನನು ಅವರ ಜೊತೆಗೆ ಹೋರಾಡಿ ಸೋತು ಹೋದನು. ಅವನಿಗೆ ತನ್ನ ಗಾಂಡೀವ ಧನಸ್ಸನ್ನು ಹೆದೆ ಏರಿಸುವುದೂ ಕೂಡ ಕಷ್ಟವಾಯಿತು. ಪ್ರಯತ್ನಪಟ್ಟು ಬಿಲ್ಲಿಗೆ ಹೆದೆ ಏರಿಸಿ ಬಾಣ ಬಿಡಬೇಕೆನ್ನುವಷ್ಟರಲ್ಲಿ ಆ ಬಿಲ್ಲಿನ ದಾರವು ಸಡಿಲು ಬಿದ್ದಿತು. ಅವನಿಗೆ ಎಷ್ಟು ನೆನಸಿಕೊಂಡರೂ ದಿವ್ಯಾಸ್ತ್ರಗಳು ಸ್ಮರಣಕ್ಕೆ ಬರಲಿಲ್ಲ. ಅವನ ಬತ್ತಳಿಕೆ ಬರಿದಾಗಿ ಹೋಯಿತು. ಅರ್ಜುನನು ನೋಡುತ್ತಿರುವಂತೆಯೆ ಕಳ್ಳರಾದ ಆ ಬಿಲ್ಲರು ಹಲವಾರು ಮಂದಿ ಕೃಷ್ಣ ಕಾಂತೆಯರನ್ನು ಎಳೆದೊಯ್ದರು. ಅರ್ಜುನನ ಬಾಣಗಳೆಲ್ಲ ಮುಗಿದು ಹೋದದ್ದರಿಂದ ಅವನು ತನ್ನ ಬಿಲ್ಲಿನ ತುದಿಯಿಂದಲೆ ಆ ಕಳ್ಳರನ್ನು ಹೊಡೆದನು. ಅವನ ಪ್ರಹಾರವನ್ನು ಲೆಕ್ಕಿಸದೇ ಆ ದಸ್ಯುಗಳು ಅಪಹಾಸಮಾಡಿ ನಕ್ಕು ವೃಷ್ಣಿ ಹಾಗೂ ಅಂಧಕ ವಂಶದ ಅಂಗನೆಯರನ್ನೆಲ್ಲ ಸೆಳೆದುಕೊಂಡು ಹೋದರು. ಅದನ್ನು ನೋಡಿ ಅರ್ಜುನನಿಗೆ ತನ್ನ ಬಗ್ಗೆ ಜಿಗುಪ್ಸೆ ಹುಟ್ಟಿ ತನ್ನ ಜೀವನಕ್ಕೆ ಧಿಕ್ಕಾರ ಎನಿಸಿತು. "ಕೃಷ್ಣನು ಹೋದ ಬಳಿಕ ಅವನ ಜೊತೆಗೆ ನನ್ನ ಶಕ್ತಿ, ಪರಾಕ್ರಮ, ಚೈತನ್ಯ ಎಲ್ಲವು ಹೊರಟು ಹೋದಂತಾಗಿದೆ. ನನಗೆ ಜಿಷ್ಣು ಎಂದು (ಜಯಶೀಲ) ಎಂಬ ಹೆಸರು ಇದೆ. ಆದರೆ ನಾನು ಯಾರನ್ನೂ ಗೆಲ್ಲಲಾರೆ. ಅದೇ ನಾನು ಅರ್ಜುನ. ಈಗ ಎಲ್ಲವು ನಿಸ್ಸಾರ. ನಿಸ್ಸತ್ವ," ಹೀಗೆ ದುಃಖ ಪಡುತ್ತ ಅರ್ಜುನನು ಇಂದ್ರಪ್ರಸ್ಥ ನಗರಕ್ಕೆ ಹೋಗಿ ಅಲ್ಲಿ ವಜ್ರನಿಗೆ ಪಟ್ಟಾಭಿಷೇಕ ಮಾಡಿ ಯದುವಂಶದ ರಾಜನೆಂದು ಅಲ್ಲಿ ಇರಿಸಿದನು.

ಅನಂತರ ಅರ್ಜುನನು ಕಾಡಿನಲ್ಲಿದ್ದ ವೇದವ್ಯಾಸ ದೇವರ ಬಳಿಗೆ ಹೋದನು. ಅರ್ಥಾತ್ ನನ್ನ ಬಳಿಗೆ ಬಂದನು ನಾನು ಅವನಿಗೆ ಎಲ್ಲದಕ್ಕೂ ಕಾಲವೇ ಕಾರಣ. ಶ್ರೀಕೃಷ್ಣನು ಭೂಲೋಕಕ್ಕೆ ಬಂದು ಮಾಡಬೇಕಾದ ಅವತಾರ ಕಾರ್ಯ ಮುಗಿಯಿತು. ಆದರಿಂದ ಅವನು ವೈಕುಂಠಕ್ಕೆ ತೆರಳಿದ್ದಾನೆ. ಜಗತ್ತಿನಲ್ಲಿ ಎಲ್ಲ ಪ್ರಾಣಿಗಳನ್ನು ಹುಟ್ಟಿಸಿದ ಆ ಪರಮಾತ್ಮನೆ ಎಲ್ಲರನ್ನು ಪರಿಪಾಲಿಸಿ ಕೊನೆಗೆ ಎಲ್ಲರನ್ನು ಸಂಹರಿಸುವನು. ಅರ್ಜುನ, ನೀನು ಕಾಪಾಡಬೇಕೆಂದು ಕರೆದುಕೊಂಡು ಬಂದ ಶ್ರೀಕೃಷ್ಣನ ಕಾಮಿನಿಯರನ್ನು ದಸ್ಯುಗಳು ಅಪಹರಿಸಿದ್ದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು.

ಇದು ಬಹಳ ವರ್ಷಗಳ ಹಿಂದಿನ ಘಟನೆ. ಅಷ್ಟಾವಕ್ರ ಎಂಬ ಹೆಸರಿನ ಒಬ್ಬ ಮುನಿಯು ಬಹುಕಾಲ ಪರ್ಯಂತ ನೀರಿನಲ್ಲಿ ನಿಂತು ಪರಮಾತ್ಮನನ್ನು ಧ್ಯಾನ ಮಾಡುತ್ತಿದ್ದ. ಅದೇ ಸಮಯದಲ್ಲಿ ದೇವತೆಗಳು ದೈತ್ಯ ದಾನವರನ್ನೆಲ್ಲ ಗೆದ್ದದ್ದಕ್ಕಾಗಿ ಮೇರು ಪರ್ವತದಲ್ಲಿ ಒಂದು ಮಹೋತ್ಸವವು ಜರಗುತ್ತಲಿತ್ತು. ಅದಕ್ಕಾಗಿ ರಂಭಾ, ಊರ್ವಶಿ, ಮೇನಕಾ, ತಿಲೋತ್ತಮಾ, ಮೊದಲಾದ ಅಪ್ಸರಾ ಸ್ತ್ರೀಯರು ಮೇರುಗಿರಿಯ ಕಡೆಗೆ ಹೊರಟಿದ್ದರು. ದಾರಿಯಲ್ಲಿ ಒಂದು ನದೀ ನೀರಿನಲ್ಲಿ ಆಕಂಠಪರ್ಯಂತರ ಮುಳುಗಿ ತಪಸ್ಸನ್ನು ಮಾಡುತ್ತಿದ್ದ ಅಷ್ಟಾವಕ್ರ ಮುನಿಯು ಅವರ ಕಣ್ಣಿಗೆ ಬಿದ್ದ. ಜಟಾಭಾರದಿಂದ ಅವನ ಶಿರಸ್ಸು ಶೋಭಿಸುತ್ತಿತ್ತು. ಕಣ್ಣುಗಳು ಮಿಂಚಿನ ಕಾಂತಿಯಿಂದ ಬೆಳಗುತ್ತಿದ್ದವು. ಅವನ ಮುಖದಲ್ಲಿ ಬ್ರಹ್ಮವರ್ಚಸ್ಸು ಉಕ್ಕುತ್ತಿತ್ತು. ಅದನ್ನು ಕಂಡು ಆ

ದೇವಾಂಗನೆಯರೆಲ್ಲರು ಅವನಿಗೆ ದೂರದಿಂದಲೆ ನಮಸ್ಕಾರ ಮಾಡಿ ಸ್ತೋತ್ರ ಮಾಡಿದರು. ಅವರು ಹೆಚ್ಚು ಸಂತೋಷ ಹೊಂದಿ ಪ್ರಸನ್ನನಾಗಿ ಬೇಕಾದ ವರಗಳನ್ನು ಬೇಡಿರಿ. ಅವು ದುರ್ಲಭವಾದರೂ ನಾನು ನಿಮಗೆ ನೀಡುತ್ತೇನೆ'' ಎಂದು ಹೇಳಿದನು.

ಆಗ ಸ್ವರ್ಗ ಸೀಮೆಯ ಆ ಎಲ್ಲ ಬೆಲೆವೆಣ್ಣುಗಳು ಆ ಮಹರ್ಷಿಯನ್ನು ಕುರಿತು ಭಕ್ತಿಯಿಂದ ಬಾಗಿ ಕೈಮುಗಿದು ಮುನೀಂದ್ರ, ನೀವು ನಮಗೆ ಒಲಿದು ನಾವು ಬಯಸಿದ ವರವನ್ನು ನಿಜವಾಗಿಯೂ ನೀಡುವುದಾದರೆ ಪುರಷೋತ್ತಮನಾದ ಶ್ರೀಹರಿಯು ನಮ್ಮ ಕೈಹಿಡಿಯುವಂತೆ ಅನುಗ್ರಹಿಸಿರಿ. ಲೀಲಾವತಾರಿಯಾದ ಆ ಪರಮಾತ್ಮನು ಕೃಷ್ಣಾವತಾರ ಮಾಡಿ ಭೂಲೋಕದಲ್ಲಿ ದ್ವಾರಕಾ ಪಟ್ಟಣದಲ್ಲಿ ನೆಲಸಿದಾಗ ಅವನು ನಮ್ಮನ್ನು ಪಾಣಿಗ್ರಹಣ ಮಾಡಿಕೊಂಡು ತನ್ನ ಪತ್ನಿಯರನ್ನಾಗಿ ಮನ್ನಿಸುವಂತೆ ವರವನ್ನು ನೀಡಿರಿ. ಶ್ರೀಕೃಷ್ಣನ ಪತ್ನಿಯರಾಗಬೇಕೆಂಬುದೇ ನಮ್ಮ ಬಯಕೆ ಆಗಿದೆ'' ಎಂದು ಕೇಳಿಕೊಂಡರು.

ಅಷ್ಟಾವಕ್ರ ಮುನಿಯು ಆ ಸುರಲೋಕದ ಬಾಲೆಯರಿಗೆಲ್ಲ ''ನಿಮ್ಮ ಇಷ್ಟದಂತೆಯೇ ಆಗುವುದು'' ಎಂದು ವರವನ್ನು ನೀಡಿದನು. ಅನಂತರ ಆ ಮುನಿಯು ನೀರನ್ನು ಬಿಟ್ಟು ಮೇಲೆ ಎದ್ದು ಬಂದನು. ಅವನ ದೇಹ ಎಂಟುಕಡೆಗೆ ಮಣಿದು ಸೊಟ್ಟಸೊಟ್ಟಾಗಿ ವಿಕಾರವಾಗಿದ್ದಿತು. ಅದನ್ನು ನೋಡಿ ಸುರುಪುರದ ಆ ವಾರಾಂಗನೆಯರೆಲ್ಲ ಬಿದ್ದುಬಿದ್ದು ನಕ್ಕರು. ಅಷ್ಟಾವಕ್ರನ ಆ ವಿಕಾರ ಶರೀರವನ್ನು ನೋಡಿದಾಗ ಅವರಿಗೆ ನಗೆಯನ್ನು ತಡೆಯಲಿಕ್ಕೇ ಆಗಲಿಲ್ಲ. ಅದನ್ನು ನೋಡಿ ಅಷ್ಟಾವಕ್ರಮುನಿಗೆ ಬಹಳ ಅಪಮಾನವಾಯಿತು. ಕೋಪವೂ ಬಂದಿತು. ತಕ್ಷಣದಲ್ಲಿ ಅವನು ಶಾಪ ಕೊಟ್ಟ. 'ನನ್ನ ವರದ ಬಲದಿಂದ ನೀವು ಆ ಶ್ರೀಹರಿಯನ್ನು ಪತಿಯನ್ನಾಗಿ ಏನೋ ಪಡೆಯುವಿರಿ. ಶ್ರೀಕೃಷ್ಣನ ಧರ್ಮಪತ್ನಿಯರೆಂದು ಅವನು ಇರುವವರೆಗೆ ಅವನ ಪ್ರೇಮಪಾತ್ರರಾಗಿ ಸುಖದಿಂದ ಇರುವಿರಿ ಆದರೆ ಆ ಪುರುಷೋತ್ತಮನು ತನ ಪಾಂಚಭೌತಿಕ ಶರೀರದಂತೆ ತೋರುವ ಶರೀರವನ್ನು ತ್ಯಾಗ ಮಾಡಿದ ಬಳಿಕ ನೀವೆಲ್ಲರು ಕಳ್ಳ ದಸ್ಯುಗಳ ಕೈಗೆ ಸಿಕ್ಕಿ ಬೀಳುವಿರಿ.'' ಎಂದು ಶಪಿಸಿದನು ಆಗ ಆ ದೇವಾಂಗನೆಯರು ಅಷ್ಟಾವಕ್ರನ ಪಾದಗಳಿಗೆ ಮತ್ತೆ ಮತ್ತೆ ಎರಗಿ ತಮ್ಮ ತಪ್ಪನ್ನು ಕ್ಷಮಿಸಿರಿ ಎಂದು ಬೇಡಿಕೊಂಡು ಬಹುವಿಧವಾಗಿ ಪ್ರಾರ್ಥನೆ ಮಾಡಿಕೊಂಡಾಗ ಆ ಮುನಿಯು ಅವರಿಗೆ ವಿಶಾಪವನ್ನು ಇತ್ತ. ''ದಸ್ಯುಗಳು ನಿಮ್ಮ ಮೈಮೇಲಿರುವ ಮುತ್ತು ರತ್ನಗಳ ಆಸೆಯಿಂದ ನಿಮ್ಮನ್ನು ಅಪಹರಿಸಿದರೂ ನಿಮ್ಮ ಮೇಲೆ ಬಲಾತ್ಕಾರ ಮಾಡುವುದಿಲ್ಲ. ನೀವು ಪರಿಶುದ್ಧರಾಗಿ ಉಳಿಯುವಿರಿ. ಕೊನೆಗೆ ನಿಮ್ಮ ಸ್ವಸ್ಥಾನವಾದ ಸ್ವರ್ಗಲೋಕವನ್ನು ಹೊಂದುವರಿ'' ಎಂದು ಕರುಣೆ ತೋರಿ ವಿಶಾಪವಿತ್ತು ಅವರನ್ನು ಸಂತೈಸಿದನು.

ಅರ್ಜುನ, ಅಷ್ಟಾವಕ್ರ ಮುನಿಯ ಶಾಪದ ಪರಿಣಾಮವಾಗಿ ಆ ದೇವಲೋಕದ ಲಲನೆಯರು ಶ್ರೀಕೃಷ್ಣನನ್ನು ಪತಿಯಾಗಿ ಪಡೆದರೂ ಕೊನೆಗೆ ಕಳ್ಳರ ಕೈಯಲ್ಲಿ ಸಿಕ್ಕು ಬಿದ್ದರು. ಈ ವಿಷಯದಲ್ಲಿ ನೀನು ಶೋಕ ಪಡಬೇಡ. ಇದೆಲ್ಲವು ಆ ಶ್ರೀಹರಿಯ ಇಚ್ಛೆಯಂತೇ ನಡೆದಿದೆ. ನಿಮಗೂ ಈಗ ಕೊನೆಯ ಕಾಲ ಸಮೀಪಿಸುತ್ತಿದೆ. ಆದುದರಿಂದ ಹರಿ ನಿಮ್ಮ ತೇಜಸ್ಸು, ವೀರ್ಯ, ಮಹಾತ್ಮೆ, ಪ್ರಭಾವ, ಪರಾಕ್ರಮ ಎಲ್ಲವನ್ನು ಉಪಸಂಹರಿಸಿಬಿಟ್ಟಿದ್ದಾನೆ. ಹುಟ್ಟಿದವನಿಗೆ ಸಾವು ಕಟ್ಟಿಟ್ಟದ್ದು. ಮೇಲೆ ಏರಿದವರು ಕೆಳಗೆ ಬೀಳಬೇಕು. ಸಂಯೋಗಕ್ಕೆ ಒಂದಿಲ್ಲ ಒಂದು ದಿನ ವಿಯೋಗದಲ್ಲಿಯೇ, ಕೂಡಿಟ್ಟ ಧನಕ್ಕೆ ಕೊನೆಗೆ ವ್ಯಯದಲ್ಲಿಯೇ

ಪರ್ಯವಸಾನವನ್ನು ಹೊಂದುತ್ತದೆ. ಇದೆಲ್ಲವನ್ನು ಅರಿತು ಜ್ಞಾನಿಯಾದವನು ಹರ್ಷ ಬಂದಾಗ ಹಿಗ್ಗಬಾರದು. ದುಃಖ ಬಂದಾಗ ಕುಗ್ಗಬಾರದು ಇದೇ ನಿಜವಾದ ತತ್ವಜ್ಞಾನ. ಅರ್ಜುನ, ಇನ್ನು ಮೇಲೆ ನೀವೆಲ್ಲರೂ ಪಂಚಪಾಂಡವರು ದ್ರೌಪದಿ ದೇವಿಯೊಂದಿಗೆ ರಾಜ್ಯ, ಕೋಶ, ಮನೆ, ಮಾರು ಎಲ್ಲವನ್ನು ತೊರೆದು ತಪಸ್ಸಿಗಾಗಿ ಅರಣ್ಯಕ್ಕೆ ತೆರಳಿರಿ. ಧರ್ಮರಾಜನಿಗೂ ಈ ನನ್ನ ಆಜ್ಞೆಯನು ತಿಳಿಸು.'' ಎಂದು ಹೇಳಿದರು ಬಾದರಾಯಮರು.

ಮುನಿಗಳೇ ನಾನು ಈಗ ಹೇಳಿದಂತೆಯೇ ಅರ್ಜುನನು ಹಸ್ತಿನಾವತಿಗೆ ಹೋಗಿ ತನ್ನ ಸೋದರರಿಗೆಲ್ಲ ನನ್ನ ಸಂದೇಹವನ್ನು ತಿಳಿಸಿದನು. ಆ ಪಾಂಡವರು ಪರಿಕ್ಷೀತ ರಾಜನಿಗೆ ಪಟ್ಟಕಟ್ಟಿ. ಕೌರವ ಸಿಂಹಾಸನದ ಮೇಲೆ ಅವನನ್ನು ಕೂಡಿಸಿ ತಾವು ಅರಣ್ಯಕ್ಕೆ ತಪಸ್ಸಿಗಾಗಿ ಹೊರಟು ಹೋದರು.

## ಹರಿಯ ಹತ್ತು ಅವತಾರಗಳು

**ಮುನಿಗಳು:-** ಪೂಜ್ಯರಾದ ವ್ಯಾಸ ಮಹರ್ಷಿಗಳೆ, ನೀವು ಈ ವರೆಗೂ ಶ್ರೀಕೃಷ್ಣ ಹಾಗು ಬಲರಾಮರ ಚಾರು ಚರಿತ್ರೆಯನ್ನು ರಸಭರಿತವಾಗಿ ನಿರೂಪಿಸಿದಿರಿ. ಭಗವಂತನ ಆ ಲೀಲಾವತಾರ ಕಥೆಗಳನ್ನು ಎಷ್ಟು ಕೇಳಿದರೂ ನಮಗೆ ತೃಪ್ತಿಯೆ ಇಲ್ಲ. ಆ ಮಹಾ ವಿಷ್ಣುವಿನ ವರಾಹ ಅವತಾರದ ಚರಿತ್ರೆಯನ್ನು ಕೇಳಬೇಕೆಂಬ ಬಯಕೆ ನಮ್ಮಲ್ಲಿ ಮೂಡಿದೆ. ದಯವಿಟ್ಟು ಹೇಳಿರಿ.

**ವೇದವ್ಯಾಸ:-** ವಿಪ್ರೋತ್ತಮರೇ, ವೇದದಲ್ಲಿ ಆ ವಿಷ್ಣುವಿನ ಮಹಾಮಹಿಮೆ ವರ್ಣಿತವಾಗಿದೆ. ಅವನಿಗೆ ಸಹಸ್ರ ಮುಖಗಳು, ಸಹಸ್ರ ನೇತ್ರ, ಸಹಸ್ರಪಾದ, ಸಹಸ್ರ ಶಿರಸ್ಸುಗಳು, ಸಹಸ್ರಹಸ್ತ, ಸಾವಿರನಾಲಿಗೆಗಳು, ಸಾವಿರ ಕಿರೀಟಗಳು. ಅವನೇ ಯಜ್ಞ ಪುರುಷ. ಅವನು ಯಜ್ಞದಲ್ಲಿ ಹೋತಾರ. ಹೋಮದ್ರವ್ಯವೂ ಅವನೇ, ಯಜ್ಞಪಾತ್ರೆಗಳೂ ಅವನೇ ಯಜ್ಞದ ವೇದಿ, ದೀಕ್ಷೆ, ಸಮಿಧೆ, ಸ್ರುವ ಸ್ರುಚ, ಯಜ್ಞ ಭೂಮಿ ಎಲ್ಲವೂ ಆ ಪರಮ ಪುರುಷನೇ. ಎಲ್ಲವೂ ಅವನ ಅಧೀನವೇ-ಎಲ್ಲವೂ ತನ್ಮಯವೇ.

ವೇದ ವಿದ್ವಾಂಸರಿಂದ ಯಜ್ಞಮಯವೆಂದು ಹೊಗಳಲ್ಪಟ್ಟ ಆ ವಿಷ್ಣುವಿನ ಅನಂತ ಅವತಾರಗಳು ಹಿಂದೆ ಆಗಿವೆ, ಮುಂದೆ ನಡೆಯಲಿವೆ. ಅವನ ಅನೇಕ ಅವತಾರಗಳಲ್ಲಿ ಕೆಲವನ್ನು ನಿಮಗೆ ಹೇಳುತ್ತೇನೆ. ದೇವ ದೇವನಾದ ಆ ಜಗದೀಶ್ವರನು ಪ್ರಳಯ ಕಾಲದಲ್ಲಿ ಒಂದು ಸಾವಿರ ಯುಗಗಳಷ್ಟು ಸಮಯ ಯೋಗ ನಿದ್ರೆಯಲ್ಲಿ ಪವಡಿಸುವನು. ಅದರ ಅನಂತರ ವರದ ಬಲದಿಂದ ಗರ್ವಿತರಾದ ಮಧು, ಕೈಟಭ ಎಂಬ ರಾಕ್ಷಸರನ್ನು ಸಂಹರಿಸಿದನು. ಆ ಪದ್ಮನಾಭನು ಸಮುದ್ರ ನೀರಿನಲ್ಲಿ ಶಯನ ಮಾಡಿದಾಗ ಪುಷ್ಕರ ಎಂಬ ಪ್ರದೇಶದಲ್ಲಿ ದೇವತೆಗಳೂ ಋಷಿಗಳೂ ಆವಿರ್ಭವಿಸಿದರು. ಇದು ಪೌಷ್ಕರಕ ಎಂಬ ಪರಮಾತ್ಮನ ಒಂದು ಅವತಾರ. ಅನಂತರ ಆ ಭಗವಂತನು ವರಾಹ ಎಂಬ ಅವತಾರವನ್ನು ತಾಳಿದನು. ಆ ಯಜ್ಞವರಾಹಕ್ಕೆ ವೇದಗಳೇ ನಾಲ್ಕು ಕಂಬಗಳು. ಯೂಪಸ್ತಂಬವೇ ದಾಡೆಗಳು. ಯಜ್ಞದ ಚಿತಿಯೇ ಮುಖ. ಅಗ್ನಿಯೇ ನಾಲಿಗೆ ದರ್ಭೆಗಳೇ ರೋಮಗಳು. ಬ್ರಹ್ಮನೆ ಅದರ ಕಲೆ. ಹೀಗೆ ಆ ವರಾಹನು ಯಜ್ಞಮಯನಾಗಿ ಯಜ್ಞಪುರುಷ ಎನಿಕೊಂಡನು. ಅದೇ ಯಜ್ಞವರಾಹ ರೂಪದಿಂದ ಸರ್ವಭೂತಗಳ ಹಿತಕ್ಕಾಗಿ ಸಾಗರ ನಿಮಗ್ನವಾದ ಭೂದೇವಿಯನ್ನು ಉದ್ಧಾರ ಮಾಡಿದನು.

ಅನಂತರ ನರಸಿಂಹ ಅವತಾರ ಮಾಡಿ ಹಿರಣ್ಯಕಶಪುವನ್ನು ಸಂಹಾರ ಮಾಡಿದನು. ಹಿರಣ್ಯಕಶಪುವು ಬ್ರಹ್ಮನು ತನಗೆ ಕೊಟ್ಟ ದುರ್ಲಭವಾದ ವರಗಳಿಂದ ಉಬ್ಬಿ ಕೊಬ್ಬಿ ಜನರನ್ನೆಲ್ಲ ಹಿಂಸಿಸತೊಡಗಿದನು. ದೇವಲೋಕವನ್ನು ಕೂಡ ಆಕ್ರಮಿಸಿದ. ದೇವತೆಗಳನ್ನೆಲ್ಲ ಅಲ್ಲಿಂದ ಹೊಡೆದಟ್ಟಿದ, ಲೋಕಕಂಟಕನಾದ. ಆಗ ದೇವತೆಗಳು ಭಗವಂತನಲ್ಲಿ ಮೊರೆಯಿಟ್ಟರು. ಅವರ ಪ್ರಾರ್ಥನೆಯನ್ನು ಮನ್ನಿಸಿ ಪರಮಾತ್ಮನು ನರಸಿಂಹರೂಪದಿಂದ ಬಂದು ಹಿರಣ್ಯಕಶಿಪುವನ್ನು ಕೊಂದನು. ಪ್ರಲ್ಹಾದನನ್ನು ಕಾಪಾಡಿದನು. ಲೋಕಕ್ಕೆಲ್ಲ ಕ್ಷೇಮವನ್ನು ಉಂಟುಮಾಡಿದನು.

ಆ ಬಳಿಕ ವಾಮನಾವತಾರ ಮಾಡಿ ಬಲಿ ಚಕ್ರವರ್ತಿಯ ನಿಗ್ರಹವನ್ನು ಮಾಡಿದನು. ತ್ರಿವಿಕ್ರಮ ರೂಪದಿಂದ ತನ್ನ ಎರಡು ಪಾದಗಳಿಂದ ಭೂಲೋಕ, ಸ್ವರ್ಗಲೋಕ, ಪಾತಾಳಲೋಕ ಎಲ್ಲವನ್ನು ಅಳೆದು ಬೆಳೆದು ಆಕ್ರಮಿಸಿದನು.

ಸ್ಥಾನಭ್ರಷ್ಟರಾದ ದೇವತೆಗಳನ್ನು ಮತ್ತೆ ಸ್ವಸ್ಥಾನದಲ್ಲಿ ಪ್ರಸ್ಥಾಪಿಸಿದನು. ಮತ್ತೆ ಆ ಮಹಾವಿಷ್ಣುವು ದತ್ತಾತ್ರೇಯ ಮುನಿಯಾಗಿ ಜಗತ್ತಿಗೆಲ್ಲ ಬಹಳ ಉಪಕಾರ ಮಾಡಿದನು. ನಷ್ಟವಾದ ವೇದಗಳನ್ನೆಲ್ಲ ಉದ್ಧರಿಸಿದನು. ಮರೆತು ಹೋದ ಶಾಸ್ತ್ರೀಯ ಪ್ರಕ್ರಿಯೆಗಳನ್ನೆಲ್ಲ ಪುನರ್ಜೀವನಗೊಳಿಸಿದನು. ಧರ್ಮ ಸಂಸ್ಥೆಯನ್ನು ಅಭಿವೃದ್ಧಿಗೊಳಿಸಿದನು ಹೈಹಯ ದೇಶದ ರಾಜನಾದ ಕಾರ್ತವೀರ್ಯನಿಗೆ ಅಮೋಘವಾದ ವರಗಳನ್ನಿತ್ತು ಅವನಿಗೆ ಸಾವಿರ ಬಾಹುಗಳನ್ನು ಒಮ್ಮೆಲೆ ಚಿಗಿತು ನಿಲ್ಲುವಂತೆ ಮಾಡಿದನು. ದತ್ತಾತ್ರೇಯನ ವರದ ಬಲದಿಂದ ಕಾರ್ತವೀರ್ಯನು ಅಖಂಡ ಭೂಮಂಡಲಕ್ಕೆಲ್ಲ ಪಾಲಕನಾದನು. ಮುಂದೆ ಬಲದರ್ಪಿತನಾದ ಆ ಕಾರ್ತವೀರ್ಯಾರ್ಜುನನಿಂದ ಬ್ರಹ್ಮಜ್ಞಾನಿಗಳಾದ ಜಮದಗ್ನಿ ಮುನಿಗಳಿಗೆ ಅಪಾಯ ಒದಗಿದಾಗ ಆ ಮಹಾವಿಷ್ಣುವು ಪರಶುರಾಮನಾಗಿ ಅವತರಿಸಿ ಕಾರ್ತಿವೀರ್ಯಾರ್ಜುನನನ್ನು ಸಂಹರಿಸಿದನು. ಕ್ಷತ್ರಿಯರು ಮದೋನ್ಮತ್ತರಾಗಿ ತನ್ನ ತಂದೆ ಜಮದಗ್ನಿಯನ್ನು ಕೊಂದುಹಾಕಿದ್ದಕ್ಕಾಗಿ ನೊಂದು ಆ ಪರಶುರಾಮನು ಪ್ರತೀಕಾರ ಕ್ರಮವನ್ನು ಕೈಕೊಂಡನು. ಇಪ್ಪತ್ತೊಂದು ಸಲ ಭೂಮಂಡಲವನ್ನು ಸುತ್ತಿ ದುಷ್ಟ ಕ್ಷತ್ರಿಯರಾರೂ ಉಳಿಯದಂತೆ ಎಲ್ಲರನ್ನು ಕೊಚ್ಚಿ ಹಾಕಿದನು. ಭೃಗುವಂಶದಲ್ಲಿ ಹುಟ್ಟಿದ ಆ ಪರಶುರಾಮನು ಕ್ಷತ್ರಿಯರನ್ನೆಲ್ಲ ಸಂಹರಿಸಿ ಸಕಲ ಪೃಥ್ವೀಮಂಡಲವನ್ನೆಲ್ಲ ಗೆದ್ದು ತನ್ನ ಕೈಯಲ್ಲಿಯಿರಿಸಿಕೊಂಡನು. ಕ್ಷತ್ರಿಯ ಕುಲಕ್ಕೆ ಕುಲವನ್ನೆ ಕಡಿದು ಹಾಕಿದ ಮಹಾಪಾಪದ ಪರಿಹಾರಕ್ಕಾಗಿ ಅಶ್ವಮೇಧ ಯಜ್ಞವನ್ನು ಮಾಡಿದನು. ಆ ಯಾಗದಲ್ಲಿ ತಾನು ಗೆದ್ದ ವಿಶಾಲವಾದ ವಸುಧಾ ಮಂಡಲವನ್ನೆಲ್ಲ ಮರೀಚಿ ಪುತ್ರರಾದ ಕಶ್ಯಪ ಪುತ್ರರಿಗೆ ದಕ್ಷಿಣೆಯಾಗಿ ಕೊಟ್ಟನು. ಆ ಅಶ್ವಮೇಧಯಾಗದಲ್ಲಿ ಪರಶುರಾಮನು ಕೊಟ್ಟ ಆನೆ, ಕುದುರೆಗಳಿಗೆ ಲೆಕ್ಕವಿಲ್ಲ, ರಥಗಳಿಗೆ ಎಣಿಕೆ ಇಲ್ಲ, ಬಂಗಾರಕ್ಕೆ ಮಿತಿಯಿಲ್ಲ. ಹಾಗೂ ಹಸುಗಳಿಗಂತೂ ಸಂಖ್ಯೆಯೇ ಇಲ್ಲ. ಆ ಮಹಾಮಹಿಮನಾದ ಪರಶುರಾಮನು ಈಗಲೂ ಮಹೇಂದ್ರ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಲಿದ್ದಾನೆ.

ಅದೇ ಮಹಾಪ್ರಭು ವಿಷ್ಣುವು ಇಪ್ಪತ್ನಾಲ್ಕನೇ ತ್ರೇತಾಯುಗದಲ್ಲಿ ದಶರಥ ಪುತ್ರನಾಗಿ ಅವತಾರ ಮಾಡಿದನು. ಶ್ರೀರಾಮ ಎಂಬ ಹೆಸರಿನಿಂದ ಆ ಭಗವಂತನು ಲಕ್ಷ್ಮಣ, ಭರತ, ಶತ್ರುಘ್ನರಲ್ಲಿ ಕೂಡ ಒಂದು ರೂಪದಿಂದ ನೆಲಿಸಿ ಹದಿನಾಲ್ಕು ವರುಷ ವನವಾಸವನ್ನು

ಮಾಡಿ ಪೂರೈಸಿದನು. ತನ್ನ ಮಡದಿ ಸೀತೆಯನ್ನು ಅಪಹರಿಸಿದ ಕ್ರೂರನಾದ ರಾವಣನನ್ನು ಲೀಲಾಜಾಲವಾಗಿ ಸಂಹರಿಸಿದನು. ಸುಗ್ರೀವನಿಗಾಗಿ ವಾಲಿಯನ್ನು ಕೊಂದು ಕಿಷ್ಕಿಂಧಾ ರಾಜ್ಯದಲ್ಲಿ ತನ್ನ ಸಖನಾದ ಸುಗ್ರೀವನನ್ನು ಪಟ್ಟಾಭಿಷೇಕ ಮಾಡಿದನು. ಆ ಶ್ರೀರಾಮನಿಂದ ವಿಣಧ, ಕಬಂಧ, ಕುಂಭಕರ್ಣ, ಖರ, ದೂಷಣ ಮೊದಲಾದ ಅಸಂಖ್ಯಾತ ರಾಕ್ಷಸರು ಸಂಹರಿಸಲ್ಪಟ್ಟರು. ರಾಮರಾಜ್ಯದಲ್ಲಿ ಸನಾತನಧರ್ಮವು, ಬ್ರಾಹ್ಮಣಾದಿ ಚತುರ್ವಣಗಳು, ಅತ್ಯಂತ ಉತ್ಕರ್ಷವನ್ನು ಹೊಂದಿದ್ದವು. ಸ್ತ್ರೀಯರು ಯಾರೂ ವ್ಯಭಿಚಾರಕ್ಕೆ ಇಳಿಯುತ್ತಿದ್ದಿಲ್ಲ. ಕಳ್ಳಕಾಕರ ಹೆಸರೇ ಆಗ ಇರಲಿಲ್ಲ. ಎಲ್ಲರೂ ತಮ್ಮ ಕರ್ಮಗಳನ್ನು ತಪ್ಪದೇ ಪರಿಪಾಲಿಸುತ್ತಿದ್ದರು. ರೋಗ ರುಜಿನಗಳು ಎಲ್ಲಿಯೂ ಇರಲಿಲ್ಲ. ಹೀಗೆ ಶ್ರೀರಾಮನು ಮುಂದಿನ ರಾಜರಿಗೆಲ್ಲ ಆದರ್ಶವಾಗುವಂತೆ ಅನೇಕ ಯಾಗಾದಿ ಗಳನ್ನು ಮಾಡಿ, ಪ್ರಜೆಗಳನ್ನೆಲ್ಲ ತನ್ನ ಪುತ್ರರಂತೆ ಸಂರಕ್ಷಿಸಿ, ಬಹುಕಾಲ ಧರ್ಮದಿಂದ ರಾಜ್ಯ ಶಾಸನವನ್ನು ನಡೆಸಿ, ತನ್ನ ಭಕ್ತರನ್ನೆಲ್ಲ ವೈಕುಂಠ ಲೋಕಕ್ಕೆ ಕರೆದುಕೊಂಡು ಹೋದನು.

ಶ್ರೀಹರಿಯು ಸಕಲ ಲೋಕಹಿತಕ್ಕಾಗಿ ಮಾಥುರ ಕಲ್ಪದಲ್ಲಿ ಶ್ರೀಕೃಷ್ಣನಾಗಿ ಅವತರಿಸಿದನು. ಪರಾಕ್ರಮಶಾಲಿಯಾದ ಆ ಶ್ರೀಹರಿಯು ಸಾಲ್ವ, ಶಿಶುಪಾಲ, ಕಂಸ, ದ್ವಿವಿದ, ಅರಿಷ್ಟ, ಕೇಶಿ, ಪೂತನಾ, ಕುವಲಯಾ ಪೀಡ, ಚಾಣೂರ, ಮುಷ್ಟಿಕ, ಶಕಟಾಸುರ, ತೃಣಾವರ್ತ, ದಂತವಕ್ರ, ವಿದೂರಥ ಮೊದಲಾದ ರಾಜರೂಪಿಗಳಾದ ರಾಕ್ಷಸರನ್ನೆಲ್ಲ ಕೊಂದು ನರಕಾಸುರ, ಕಾಲಯಮನಾದಿ ದುಷ್ಟದಾನವರನ್ನೆಲ್ಲ ಸಂಹಾರ ಮಾಡಿದನು. ಮುಂದೆ ಇದೇ ಶ್ರೀಕೃಷ್ಣನು ಶಂಭಲ ಎಂಬ ಗ್ರಾಮದಲ್ಲಿ ವಿಷ್ಣುಯಶಸ್ ಎಂಬ ಹೆಸರಿನಿಂದ ಅವತರಿಸಿ ಕುದುರೆ ಏರಿ ದುಷ್ಟರನ್ನೆಲ್ಲ ನಾಶಮಾಡುವುದರಿಂದ ಕಲ್ಕಿ ಎಂದು ಪ್ರಸಿದ್ಧ ನಾಗುವನು. ಮೇಲೆ ಹೇಳಿದ ಅವತಾರಗಳಲ್ಲದೆ ಆ ಮಹಾವಿಷ್ಣುವು ಇನ್ನೂ ಅನಂತ ಅವತಾರ ಎತ್ತಿ ಲೋಕೋದ್ಧಾರ ಮಾಡಿದ್ದಾನೆ. ಅವೆಲ್ಲವುಗಳನ್ನು ವಿವರಿಸಲು ದೇವತೆಗಳಿಗೂ ಕೂಡ ಶಕ್ಯವಿಲ್ಲ. ಈ ಅವತಾರಗಳ ವಿಷಯದಲ್ಲಿ ವೇದ ಉಪನಿಷತ್ತುಗಳ ಸಂವಾದಿಗಳಾದ ಪುರಾಣಗಳೇ ಮುಖ್ಯ ಪ್ರಮಾಣಗಳಾಗಿರುತ್ತವೆ. ನೀವು ಅಪೇಕ್ಷಿಸಿದ್ದರಿಂದ ಆ ಶ್ರೀಮನ್ ನಾರಾಯಣನ ನಾನಾವತಾರದ ಸಂಕ್ಷಿಪ್ತವಾದ ಚರಿತ್ರೆಯನ್ನು ನಿಮಗೆ ಹೇಳಿದ್ದೇನೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತಮೂರನೆಯ ಅಧ್ಯಾಯ ಮುಗಿದುದು*

—o—

## ಯಮಲೋಕದ ಮಾರ್ಗಸ್ವರೂಪ

ಅಧ್ಯಾಯ - ೪೪

**ಶೌನಕಾದಿ ಮಹಾಋಷಿಗಳು:-** ಗುರುಗಳೇ, ನಿಮ್ಮ ಮುಖದಿಂದ ಹೊರಸೂಸುವ ಧರ್ಮಾಮೃತವನ್ನು ಎಷ್ಟು ಸವಿದರೂ ನಮಗೆ ತೃಪ್ತಿಯೇ ಉಂಟಾಗುವುದಿಲ್ಲ. ಕೇಳಿದಷ್ಟು ನಿಮ್ಮ ಬಾಯಿಂದ ಹೊಸ ಹೊಸ ವಿಷಯಗಳನ್ನು ಕೇಳಬೇಕೆಂದು ಕುತೂಹಲ ಹೆಚ್ಚುತ್ತದೆ. ಸಕಲ ಭೂತಗಳಿಗೆ ಉತ್ಪತ್ತಿಯನ್ನು ವಿನಾಶವನ್ನು ಮಾಡಿದ ಕರ್ಮಗಳ ಫಲವನ್ನು ತಾವು ಚೆನ್ನಾಗಿ ತಿಳಿದಿರುವಿರಿ. ಯಮಲೋಕದ ಮಾರ್ಗವು ಅತಿ ಗಹನ ಮತ್ತು ದುಃಖದಾಯಕ ಹಾಗೂ ಎಲ್ಲ ಪ್ರಾಣಿಗಳಿಗೂ ಭಯಂಕರ ಎಂದು ತಿಳಿದಿದ್ದೇವೆ, ಕೇಳಿದ್ದೇವೆ. ಆ ಮಾರ್ಗದಿಂದ ಯಾವ ಮನುಷ್ಯರು ಯಮಲೋಕಕ್ಕೆ ಹೋಗುವರು? ಅದರ ಪ್ರಮಾಣ ಎಷ್ಟು? ಅದನ್ನು ತಪ್ಪಿಸುವ ಬಗೆ ಯಾವುದು ಎಲ್ಲವನ್ನು ನಮಗೆ ತಿಳಿಸಿರಿ.

**ವೇದವ್ಯಾಸ:-** ವಿಪ್ರರೇ, ಯಮಲೋಕಕ್ಕೂ ಮನುಷ್ಯ ಲೋಕಕ್ಕೂ ನಡುವೆ ೮೬೦೦೦ ಗಾವುಗಳಷ್ಟು ದೂರದ ಅಂತರವಿರುವದು. ಆ ದಾರಿಯು ಕೆಂಡದಲ್ಲಿ ಕಾಯಿಸಿದ ತಾಮ್ರದಂತೆ ಕೆಂಪಗಿದ್ದು ಸುಡುತ್ತಿರುವದು. ಎಲ್ಲ ಜೀವರೂ ಕಡ್ಡಾಯವಾಗಿ ಆ ದಾರಿಯಲ್ಲಿ ನಡೆಯಲೇಬೇಕು. ಅಂತ ಘೋರ ನರಕಗಳು ಯಮನ ರಾಜ್ಯದಲ್ಲಿ ೨೨ ಇರುವುವು. ಅವುಗಳಲ್ಲಿ ಪಾಪಮಾಡಿದ ಜೀವರು ಬೇರೆ ಬೇರೆಯಾಗಿ ತಮ್ಮ ತಮ್ಮ ಕರ್ಮ ಫಲಗಳನ್ನು ಅನುಭವಿಸುವರು. ಆ ನರಕಗಳ ಹೆಸರು ಇಂತಿವೆ.

ರೌರವ, ಸೂಕರ, ಕಾಲ, ಕುಂಭೀಪಾಕ, ಶಾಲಲ, ವಿಮೋಹನ, ಕೀಟಾದ, ಕ್ರಿಮಿಭಕ್ಷ, ಲಾಲಾಭಕ್ಷ, ಭ್ರಮ, ಪೂಯವಾಹಿಕನಿ, ರುಧಿಪ, ಅಗ್ನಿಜ್ವಾಲಾ, ಸಂದಂಶ, ಶ್ವಾನಭೋಜನ, ವೈತರಣಿ, ಅಸಿಪತ್ರವನ ಎಂದು ಮುಂತಾಗಿ ಇಪ್ಪತ್ತೆರಡು ಘೋರಕ ನರಕಗಳು ಮಾನವರಿಗೆ ಅನುಭವಿಸ ಹಚ್ಚುವವು. ಆ ಯಮ ಪಟ್ಟಣದ ದಾರಿಯಲ್ಲಿ ನೆರಳಿನ ಮರಗಳಿಲ್ಲ ನೀರಿನ ಕೆರೆಗಳಿಲ್ಲ. ಕಮಲದ ಕೊಳಗಳಿಲ್ಲ. ಸೇದುವ ಬಾವಿಗಳಿಲ್ಲ, ಈಸುವ ಜಲಾಶಯಗಳಿಲ್ಲ ನೀರು ಹನಿಸುವ ಅರವಟ್ಟಿಗೆಗಳು ಇಲ್ಲ, ವಿಶ್ರಮಿಸಲು ಮಂಟಪ ಮನೆ ಯಾವುದೂ ಇಲ್ಲ. ಇಂತಹ ಈ ಘೋರ ದಾರಿಯಲ್ಲಿ ಕಾಲ ಒದಗಿ ಬಂದಾಗ ಈ ಜೀವ ಎಂಬ ಪ್ರಾಣಿಯು ತನ್ನ ಸ್ನೇಹಿತರನ್ನು, ಬಂಧುಗಳನ್ನು ಮನೆಮಾರು ಹಣಕಾಸುಗಳನ್ನು ಬಿಟ್ಟು ತೆರಳಬೇಕು. ಈ ಘೋರ ಯಮದಾರಿಯ ಹುಡಿಯಲ್ಲಿ ಹೊರಳಬೇಕು. ಮರಣ ಒದಗಿಬಂದ ಜೀವನು ನೀರು, ಬೆಂಕಿ, ವಿಷ, ಶಸ್ತ್ರ, ರೋಗ, ಹಸಿವೆ, ಯಾವುದಾದರೂ ಒಂದು ಕಾರಣದಿಂದ ತನ್ನ ಪ್ರಾಣಗಳನ್ನು ಬಿಡುವನು. ತನ್ನ ಪಾಂಚಭೌತಿಕ ಶರೀರವನ್ನು ಬಹು ದುಃಖದಿಂದ ಬಿಟ್ಟು ತಾನು ಮಾಡಿದ ಪಾಪಪುಣ್ಯಗಳ ಫಲವನ್ನು ಅನುಭವಿಸಲು ಬೇರೊಂದು ಯಾತನಾ ದೇಹವನ್ನು ಹೊಂದುವನು. ಆ ಯಾತನಾ ದೇಹವು ಘೋರ ದುಃಖವನ್ನು ಅನುಭವಿಸಲು ಬಹಳ ಗಟ್ಟಿಯಾಗಿರುವದು.

ಯಮಲೋಕಕ್ಕೆ ಒಯ್ಯಲ್ಪಟ್ಟ ಜೀವನು ಪಾಪಾತ್ಮನಾದರೆ ನಾನಾ ಬಗೆಯ ನರಕದ ದುಃಖಗಳನ್ನೂ ಅನುಭವಿಸಬೇಕಾಗುವದು. ಧರ್ಮಾತ್ಮನಾದರೆ ಸಂತೋಷದಿಂದ ಸುಖಗಳನ್ನು ಅನುಭವಿಸುವನು.

## ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ

ಅವನ ಆಯುಷ್ಯದ ಮಿತಿಯು ಮುಗಿದಾಗ ಅವನ ಶರೀರವನ್ನು ಪಂಚಮಹಾ ಭೂತಗಳು ಬಿಡಲು ಆರಂಭಿಸುವವು. ಪ್ರಾಣವಾಯು ಕುತ್ತಿಗೆಯನ್ನು ದಾಟುವದು. ಬಹುಕಾಲ ಮಮತೆಯಿಂದ ಇದ್ದ ಶರೀರದಿಂದ ಬಿಡಲ್ಪಟ್ಟ ಜೀವನು ಷಟ್ ದರ್ಭ ಪ್ರಮಾಣವಾದ ಬೇರೊಂದು ಸೂಕ್ಷ್ಮ ಶರೀರದಲ್ಲಿ ವಾಯು ರೂಪದಿಂದ ಪ್ರವೇಶಿಸುವನು. ಆ ಶರೀರಕ್ಕೆ ಯಾತನಾ ಶರೀರ ಎನ್ನುವರು. ಯಮದೂತರು ಆ ಯಾತನಾ ದೇಹದ ಕೈಕಾಲುಗಳಿಗೆ ಕಬ್ಬಿಣದ ಬೇಡಿಗಳನ್ನು ಜಡಿದು ಕಂಡ ಕಂಡಂತೆ ಹೊಡೆಯುತ್ತಾ ಬಡಿಯುತ್ತಾ ಎಳೆದೊಯ್ಯುವರು. ಹೆಜ್ಜೆ ಹೆಜ್ಜೆಗೆ ಮುಗ್ಗರಿಸುವನು. ಮತ್ತೊಮ್ಮೆ ಅಳುವನು ಇನ್ನೊಮ್ಮೆ ಅಯ್ಯೋ, ಅಮ್ಮಾ, ಅಪ್ಪಾ ಎಂದು ವರಲುವನು. ಖಡ್ಗ, ಬರ್ಚಿ, ಶೂಲಗಳಿಂದ ಚುಚ್ಚಿ ಹೆಚ್ಚಿ, ಚುಚ್ಚಿ ಕೊಚ್ಚಿ ವಜ್ರಮಯವಾದ ದಂಡಗಳಿಂದ ಹೊಡೆಯುವರು. ಆ ದಾರಿಯ ಸುತ್ತಲೂ ಕಲ್ಲು, ಮುಳ್ಳು, ಕಾದ ಮರಳು, ವನ್ಯಕೀಟಗಳು ಅವನನ್ನು ದಾರಿಗುಂಟ ಕಾಡಿಸಿ ಪೀಡಿಸುತ್ತಲೇ ಇರುವವು.

ಹೀಗೆ ನಿರ್ದಯದಿಂದ ಆ ಜೀವನನ್ನು ಒಯ್ಯುವಾಗ ದಾರಿಯಲ್ಲಿ ಒಣಮರಕ್ಕೆ ಕಟ್ಟಿ ಕಣ್ಣು ಚುಚ್ಚಿ ಕಿವಿ ಮೂಗುಗಳನ್ನು ಕೊಯ್ದು ಹಾಕುವರು. ಗಾಯವಾದ ಸ್ಥಳಕ್ಕೆ ಭೀಕರವಾದ, ಗೃಧ್ರಗಳಿಂದ ಕಡಿಸುವರು. ನರಿಗಳು, ನಾಯಿಗಳು ಕುಕ್ಕಿ, ಕಚ್ಚಿ, ಕಡಿದು ಎಳೆದಾಡುವವು. ತೊಗಲು ಕಿತ್ತಿ ದೇಹವೆಲ್ಲಾ ರಕ್ತ ಬೊಂಬಾಳವಾಗಿ ಪ್ರಾಣಾಂತಿಕ ನೋವಿನಿಂದ ಕೆಟ್ಟ ಧ್ವನಿಯಿಂದ ಜೀವರು ಕಿರಿಚಿಕೊಳ್ಳುವರು. ಹಾದಿಗುಂಟ ಪಾಪಿಗಳನ್ನು ಕಲ್ಲು, ಮುಳ್ಳು, ಮರಳು, ತಗ್ಗು ದಿನ್ನೆಗಳ ಮೇಲೆ ಎಳೆಯುತ್ತಾ ಯಮದೂತರು ಆ ಯಾತನಾ ಶರೀರವನ್ನು ಕಬ್ಬಿಣದಿಂದ ನಿರ್ಮಿತವಾದ ಯಮಪಟ್ಟಣಕ್ಕೆ ಕರೆದುಕೊಂಡು ಹೋಗುವರು. ಒಂದು ಲಕ್ಷ ಯೋಜನದಷ್ಟು ವಿಸ್ತಾರವಾಗಿದೆ ಆ ಯಮನೂರು. ಅದಕ್ಕೆ ನಾಲ್ಕು ಹೆಬ್ಬಾಗಿಲುಗಳು ಇರುತ್ತವೆ. ಅದಕ್ಕೆ ಸಂಯಮನಿಪುರ ಎಂದು ಹೆಸರು. ಆ ಪಟ್ಟಣದ ಗೋಡೆಗಳು ಚಿನ್ನದಿಂದ ಮಾಡಲ್ಪಟ್ಟದ್ದು ಪ್ರತಿಯೊಂದು ಗೋಡೆಯು ಹತ್ತು ಸಾವಿರ ಯೋಜನದಷ್ಟು ಎತ್ತರವಾಗಿರುವವು.

ಆ ಯಮಪುರಿಯ ಮುತ್ತು ರತ್ನಾದಿಗಳಿಂದ ಅಲಂಕೃತವಾದ ಹೆಬ್ಬಾಗಿಲಿನಿಂದ ದೇವತೆಗಳು, ಋಷಿಗಳು, ಯೋಗಿಗಳು, ಗಂಧರ್ವರು ಮೊದಲಾದ ಪುಣ್ಯಜೀವಿಗಳು ಪ್ರವೇಶ ಮಾಡುವರು. ರತ್ನಾಲಂಕೃತವಾದ ಉತ್ತರ ದ್ವಾರವು ವೀಣಾ, ವೇಣು, ಮೃದಂಗ, ಸಂಗೀತ ಮುಂತಾದವುಗಳ ಮಂಜುಳ ಸ್ವರದಿಂದಲೂ, ಋಕ್, ಯಜುಸ್, ಸಾಮ ಎಂಬ ಮೂರು ವೇದಗಳ ಮಂತ್ರಘೋಷದಿಂದಲೂ ತುಂಬಿರುವದು. ತಮ್ಮತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮಾನುಷ್ಠಾನ ಮಾಡಿದ ಧರ್ಮಿಷ್ಠರು ಈ ಉತ್ತರ ದ್ವಾರದಿಂದ ಹೋಗುವರು.

ಆ ಯಮನಗರದ ಪಶ್ಚಿಮ ದಿಕ್ಕಿನ ಹೆಬ್ಬಾಗಿಲು ಬಗೆಬಗೆಯ ರತ್ನಾಲಂಕಾರಗಳಿಂದ ಶೃಂಗರಿಸಲ್ಪಟ್ಟಿರುವದು. ಧರ್ಮಾತ್ಮರಾದ ಪುಣ್ಯಜೀವಿಗಳು, ತಪಸ್ವಿಗಳು, ತೀರ್ಥಯಾತ್ರಿಗಳು ಯುದ್ಧದಲ್ಲಿ ಮಡಿದುಹೋದವರು ಈ ಪಶ್ಚಿಮ ಮಾರ್ಗದಿಂದ ಯಮಪುರಿಯನ್ನು ಪ್ರವೇಶಿಸುವರು. ನಾಲ್ಕನೆಯ ದ್ವಾರವು ಮಾತ್ರ ಬಹಳ ಘೋರವಾಗಿದೆ. ಅಲ್ಲಿ ಯಾವಾಗಲೂ ಹಾಹಾಕಾರವು ತುಂಬಿರುತ್ತದೆ. ಆ ಬಾಗಿಲಲ್ಲಿ ಸುತ್ತುಮುತ್ತಲೂ ಬರೇ ಕತ್ತಲೂ, ಅಲ್ಲದೇ ಅಲ್ಲಿ ಅಸಂಖ್ಯೆ ಮುಳ್ಳುಗಳು ಚೇಳು, ಹಾವು, ವಜ್ರಕೀಟ, ತೋಳ, ಹುಲಿ, ಕರಡಿ, ಸಿಂಹ, ನರಿ, ನಾಯಿ, ಕಾಡು ಬೆಕ್ಕು, ಮೊದಲಾದ ಕ್ರೂರ ಶ್ವಾಪದಗಳೂ ಮುಗಿಲಿನ ಹದ್ದುಗಳೂ ಮುತ್ತಿ ಪಾಪಿಜೀವವನ್ನು ಹೊಡೆದು, ಕೊಂದು, ತಿಂದುಬಿಡುವವು. ಈ ದಕ್ಷಿಣ ದ್ವಾರದಿಂದ ಯಮಪಟ್ಟಣಕ್ಕೆ ಬರುವವರು ಯಾರು ಎಂಬುದನ್ನು ಹೇಳುತ್ತೇನೆ ಕೇಳು. ಬ್ರಹ್ಮದ್ವೇಷಿಗಳು, ಗೋಘಾತಕಿಗಳು, ಶಿಶುಹತ್ಯಗೈಯ್ಯುವವರು ನಂಬಿದ ಬಂಧು- ಮಿತ್ರ, ಮಡದಿಯರನ್ನು ಕೊಲ್ಲುವವರು, ಅಗಮ್ಯಾಗಮನ ಮಾಡುವವರು, ಪರದ್ರವ್ಯವನ್ನು ಅಪಹರಿಸುವವರು, ವಿಷಕುಡಿಸುವವರು, ಉರಿಹಚ್ಚುವವರು, ಕನ್ನೆಯರನ್ನು ಮಾರುವವರು, ನಿಷಿದ್ಧ ಭಕ್ಷಣ ಮಾಡುವವರು ಎಲ್ಲರೂ ಈ ದಕ್ಷಿಣ ದ್ವಾರದಿಂದ ನರಕಲೋಕವನ್ನು ಪ್ರವೇಶಿಸುವರು.

## ನರಕಯಾತನಾ ನಿರೂಪಣೆ

**ಮುನಿಗಳು:-** ಮಹಾನುಭಾವರೇ, ಪಾಪಿಗಳು ದಕ್ಷಿಣ ಮಾರ್ಗದಿಂದ ಯಮಪು ಯನ್ನು ಹೇಗೆ ಪ್ರವೇಶಿಸುವರು ತಿಳಿಸಿರಿ.

**ವೇದವ್ಯಾಸ:-** ಮುನಿಗಳೇ, ದ್ವಾರ ಅತಿಘೋರ ಮಹಾಭಯಂಕರ. ಇದನ್ನು ನೋಡಿದ ಕೂಡಲೇ ಜೀವಿಗಳು ತಟ್ಟನೇ ಮೂರ್ಛೆ ಹೋಗುವರು. ಆಗ ಅವರನ್ನು ಯಮದೂತರು ಹಗ್ಗ ಸರಪಣಿಯಿಂದ ಬಿಗಿದುಕಟ್ಟಿ ನೆಲದಮೇಲೆ ಎಳೆದುಕೊಂಡು ತಮ್ಮ ಕೈಯಲ್ಲಿರುವ ದೊಣ್ಣೆಗಳಿಂದ ಬಡಿಯುತ್ತಾ ಸೆಳೆದೊಯ್ಯುವರು. ಮೂರ್ಛೆಯಿಂದ ಎಚ್ಚತ್ತ ಪ್ರಾಣಿಗಳು ಮೈ ಕೈ ತಿರುಚಿ, ನೆತ್ತರ ಬಸಿದು, ಚರ್ಮ ಕಿತ್ತಿ, ಹೆಜ್ಜೆ ಹೆಜ್ಜೆಗೂ ಮುಗ್ಗರಿಸುತ್ತ ದಕ್ಷಿಣ ಬಾಗಿಲಿಂದ ಒಳಗೆ ಬರುವರು. ಆ ದಾರಿಯಲ್ಲಿ ಭಯಂಕರವಾದ ಸಿಂಹ, ಹುಲಿ, ತೋಳ, ಹೆಬ್ಬಾವು, ಸಲಗ, ಕಾಡುಕೋಣ, ಮೊದಲಾದ ಶ್ವಾಪದಗಳು ಇರಿದು, ತುಳಿದು, ಕಡಿದು, ಪ್ರಾಣಾಂತಿಕ ವೇದನೆಯನ್ನು ನೀಡುವವು. ಒಮ್ಮೊಮ್ಮೆ ಭಾರೀ ಭಾರೀ ಕಲ್ಲುಗಳ ಮಳೆ, ಮತ್ತೊಮ್ಮೆ ಸಿಡಿಲು ಬಡಿದು ಮೈಯಲ್ಲಾ ಸೀಳಿಹೋಗುವದು.

ಈ ರೀತಿಯಾಗಿ ಯಮಭಟ್ಟರು ದಾರಿಯಲ್ಲಿ ಹಿಂಸಿಸಿದ ನಂತರ ಯಮಧರ್ಮನು ಇದ್ದಲ್ಲಿಗೆ ಅವನನ್ನು ಕರೆದುಕೊಂಡು ಹೋಗುವರು. ಅವನ ಎದುರಿಗೆ ನಿಲ್ಲಿಸುವರು. ಆ ಯಮನ ರೂಪವಂತೂ ಅತ್ಯಂತ ಘೋರ ಭಯಂಕರ. ಭೀಷಣ. ಅವನ ಆ ಭೀಕರ ಮುಖ, ಉರಿಯುವ ಕಣ್ಣು, ನಿಗರಿದ ಕೂದಲು, ನಡಗುವ ತುಟಿ, ಕಾಡಿಗೆಯ ಬಣ್ಣ. ಹದಿನೆಂಟು ತೋಳುಗಳಲ್ಲಿ ಹಿಡಿದ ಘೋರ ಆಯುಧಗಳು, ಇದರ ಜೊತೆಗೆ ಭಯಂಕರ ವಾದ ಯಮದಂಡ ನೋಡಿದರೇ ನಡುಕ ಹುಟ್ಟುವಂಥ ಕರಾಳ ಆ ಯಮನ ರೂಪ. ಹೀಗೆ ಅವನ ಭೀಕರ ಸ್ವರೂಪವನ್ನು ನೋಡಿದರೇ ಸಾಕು ಎದೆ ಗದಗುಟ್ಟಿ ನಡುಗಿ ಹೋಗುವದು. ಆ ಯಮಧರ್ಮನ ಅಕ್ಕಪಕ್ಕದಲ್ಲಿ ಮೃತ್ಯು, ಕೃತಾಂತ, ಮಾರಿ, ಹೆಮ್ಮಾರಿ, ಕಾಲರಾತ್ರಿ ಈ ಪಂಚ ಘೋರ ವ್ಯಕ್ತಿಗಳು ನಿಂತಿರುವರು. ಯಮಧರ್ಮನು ಪಾಪಿಗಳನ್ನು ಭರ್ತನೆ ಮಾಡುವನು. ಮತ್ತು ಮಾನವರು ಮಾಡಿದ ಪಾಪದ ಕೆಲಸಗಳನ್ನು ಚಿತ್ರಗುಪ್ತರು ಒಪ್ಪಿಸಿದ ವರದಿಯಿಂದ ತಿಳಿದುಕೊಂಡು ಆ ಪಾಪಿಗಳಿಗೆಲ್ಲಾ ಮಾಡಿದ ದುಷ್ಪಕೃತ್ಯಗಳಿಗಾಗಿ ಶಾಸನ ಮಾಡುವಂತೆ ಹೇಳುವನು. ಅವರವರ ಪಾಪಕೃತ್ಯಗಳಿಗೆ ಅನುಗುಣವಾಗಿ ನಾನಾ ವಿಧವಾದ ನರಕಗಳಲ್ಲಿ ನೂಕುವರು. ಪಾಪಿಗಳು ಅನುಭವಿಸಬೇಕಾದ ನರಕಗಳ ಭಯಂಕರ ಸ್ವರೂಪವನ್ನು, ಹೆಸರುಗಳನ್ನು ಪ್ರಮಾಣವನ್ನು ಮನುಷ್ಯರು ಯಾವಯಾವ ಪಾಪಗಳಿಗಾಗಿ ಹೋಗುವರು ಎಂಬುದನ್ನು ವಿವರಿಸುವೆನು.

ಗೋಹತ್ಯೆ ಮಾಡಿದವರು ಮಹಾವೀಚಿ ಎಂಬ ನರಕದಲ್ಲಿ ಬಿದ್ದು ಒದ್ದಾಡುವರು. ಇದು ಹತ್ತುಸಾವಿರ ಯೋಜನ ವಿಸ್ತಾರವಾಗಿದೆ. ಇಲ್ಲಿ ಬಿದ್ದವನು ನೆತ್ತರಿನ ನದಿಯಲ್ಲಿ ಮುಳುಮುಳುಗಿ ಎದ್ದು ಮುಳ್ಳು, ಕಲ್ಲು, ಶಸ್ತ್ರ, ಅಸ್ತ್ರಗಳ ಆಘಾತಕ್ಕೆ ಒಳಗಾಗಿ ಶರೀರವೆಲ್ಲವೂ ಛಿದ್ರ ಛಿದ್ರವಾಗಿ ಭಯಂಕರ ಪೀಡೆಯನ್ನು ಒಂದು ಲಕ್ಷ ವರ್ಷಕಾಲ ಗೋಳಾಡುವನು.

ಬ್ರಹ್ಮಹತ್ಯ ಮಾಡಿದವನು, ಭೂಮಿಯನ್ನು ಅಪಹರಿಸಿದವನು, ಅಡವಿಟ್ಟ ವಸ್ತುಗಳನ್ನು ನುಂಗಿ ನೀರು ಕುಡಿದವನು ಕುಂಭೀಪಾಕ ಎಂಬ ನರಕದಲ್ಲಿ ಎಸೆಯಲ್ಪಟ್ಟು ಪ್ರಳಯಕಾಲದವರೆಗೂ ದಹಿಸಲ್ಪಡುತ್ತಾರೆ. ಅಲ್ಲಿ ಉಸುಕಿನ ಕಣಗಳಂತೆಯಿರುವ ಬೆಂಕಿಯ ತುಣುಕುಗಳಿಂದ ತುಂಬಿರುವ ತಾಮ್ರದ ಕುಂಭಗಳು ಇರುವವು. ಆ ಬೆಂಕಿಯಿಂದ ಪಾಪಿಗಳಿಗೆ ಅಭಿಷೇಕ ಮಾಡಿ ಅಗ್ನಿ ಸ್ನಾನವನ್ನು ಮಾಡಿಸುವರು. ಆದುದರಿಂದ ಅದಕ್ಕೆ 'ಕುಂಭೀಪಾಕ'' ಎಂಬ ಹೆಸರು.

ರೌರವ ಎಂಬ ನರಕವು ಉರಿಗಳನ್ನು ಉಗುಳುತ್ತಿರುವ ಉರಿಯುತ್ತಿರುವ ವಜ್ರಮಯವಾದ ಬಾಣಗಳಿಂದ ಆವರಿಸಲ್ಪಟ್ಟಿದೆ. ಅದು ಅರವತ್ತು ಯೋಜನ ಉದ್ದಗಲದ ಆಳತೆ ಉಳ್ಳದ್ದು. ಸುಳ್ಳು ಸಾಕ್ಷಿ ಹೇಳಿದ ಪಾಪಿಗಳು ಅಲ್ಲಿ ಗಾಣಕ್ಕೆ ಸಿಕ್ಕು ಹಿಂಡಲ್ಪಡುವರು. ವಿಷಲೇಪಿಸಿದ ಉರಿಬಾಣಗಳಿಂದ ಚುಚ್ಚಲ್ಪಡುವರು. ಮಂಜೂಷಾ ಎಂಬ ನರಕವು ಕಾದ ಕಬ್ಬಿಣದ ಪೆಟ್ಟಿಗೆಯಂತೆ ಇದ್ದು ಅದರ ಕೆಳಗೆ ಸುತ್ತುಮುತ್ತ ಕಿಚ್ಚು ಕೆದರಿಸಿದ ಅಗ್ಗಿಷ್ಟಿಗೆಗಳು ಉರಿಯುತ್ತಿರುವವು. ಕಾರಣವಿಲ್ಲದೆ ಜನರನ್ನು ಕೈದು ಮಾಡಿ ಸೆರಮನೆಯಲ್ಲಿ ಇಟ್ಟು ಹಿಂಸೆ ಕೊಡುವವರು ಈ ಮಂಜೂಷ ನರಕದಲ್ಲಿ ಬೇಯುವರು.

ಅಪ್ರತಿಷ್ಠ ಎಂಬ ಒಂದು ನರಕದಲ್ಲಿ ಕೀವು, ಮಲ, ಮೂತ್ರಗಳೇ ತುಂಬಿದ್ದು ಬ್ರಾಹ್ಮಣರನ್ನು ಹಿಂಸೆ ಮಾಡಿದವರನ್ನು ಕೆಳಮುಖಮಾಡಿ ಇದರಲ್ಲಿ ಬೀಳಿಸುವರು. ಸೆರೆಗುಡುಕರನ್ನು ವಿಲೇಪಕ ಎಂಬ ನರಕದಲ್ಲಿ ಉರಿಯುವ ಅರಗಿನ ಬೆಂಕಿಯಲಿ ಸುಟ್ಟು ತೆಗೆಯುವರು. ಮಹಾಪ್ರಭಾ ಎಂಬ ಮತ್ತೊಂದು ನರಕವಿದೆ. ಅದರಲ್ಲಿ ಗಂಡ ಹೆಂಡಿರನ್ನು ಅಗಲಿಸುವ ಪಾಪಿಗಳನ್ನು ಉರಿಯುವ ಶೂಲಗಳಿಂದ ಇರಿಯುವರು. ಪರಸ್ತ್ರೀ ಸಂಭೋಗ ಮಾಡಿದ ಪುರುಷನನ್ನು ಅತಿಘೋರ ನರಕದಲ್ಲಿ ಹಾಕಿ ಕಬ್ಬಿಣದ ಬೀಡೆ ಹಾಗೂ ಶಿಲಾ ಫಲಕಗಳಿಂದ ಜಜ್ಜುವರು. ಪರಪುರುಷರ ಸಮಾಗಮ ಮಾಡಿದ ನಾರಿಯನ್ನು ಶಾಲ್ಮಲಿ ಎಂಬ ನರಕದಲ್ಲಿ ಬೀಳಿಸಿ ಅಲ್ಲಿ ಬೆಂಕಿಯಲ್ಲಿ ಕಾಯ್ದುಸುಡುತ್ತಿರುವ ಮೊಳೆಗಳನ್ನು ಮೈ ತುಂಬ ಜಡಿದು, ಬಡೆದು ಗೋಳಾಡಿಸುವರು. ಯಾವಾಗಲೂ ಪರರ ಮರ್ಮಕ್ಕೆ ಗಾಯ ಮಾಡುವ ಕೆಲಸದಲ್ಲಿ ತೊಡಗಿ ಅಸತ್ಯವನ್ನೇ ನುಡಿಯುವವರ ನಾಲಿಗೆಯನ್ನು ಯಮಕಿಂಕರರು ಸೀಳಿ ಹಾಕುವರು.

ಪರಸ್ತ್ರೀಯರನ್ನು ಕಾಮಕ ದೃಷ್ಟಿಯಿಂದ ನೋಡುವವನ ಕಣ್ಣುಗುಡ್ಡೆಗಳನ್ನು ಯಮಕಿಂಕರರು ಬಾಣಗಳಿಂದ ಕಿತ್ತಿ ಹಾಕುವರು. ತಾಯಿ, ಅಕ್ಕ, ತಂಗಿ, ಮಗಳು, ಸೊಸೆ, ಮುಂತಾದವರ ಜೊತೆ ಬೆರೆಯುವವರನ್ನೂ, ಶಿಶುಹತ್ಯೆ, ವೃದ್ಧಹತ್ಯೆ, ಸ್ತ್ರೀಹತ್ಯೆ ಮಾಡುವವರನ್ನೂ ಮಹಾರೌರವ ಎಂಬ ನರಕದಲ್ಲಿ ದೂಡುತ್ತಾರೆ. ಹದಿನಾಲ್ಕು ಇಂದ್ರರ ಆಳಿಕೆಯಷ್ಟು ಕಾಲ ಅವರು ಬೆಂಕಿಯ ಜ್ವಾಲೆಗಳನ್ನು ಉಗುಳುತ್ತಲಿರುವ ಅಗ್ನಿಕುಂಡಗಳಲ್ಲಿ ಬೇಯುತ್ತಾರೆ. ಇದಕ್ಕೆ ಮಹಾರೌರವ ಎಂದು ಕರೆಯುತ್ತಾರೆ. ಇದು ಹದಿನಾಲ್ಕುಸಾವಿರ ಯೋಜನ ವಿಶಾಲವಾಗಿದೆ. ಯಾರು ಊರುಗಳಿಗೂ, ಹೊಲಗದ್ದೆಗಳಿಗೂ, ಮನೆಗಳಿಗೂ ಬೆಂಕಿ ಹಚ್ಚಿಸುಡುವರೋ ಅಂಥ ದುಷ್ಟ ಭ್ರಷ್ಟರಾದ ಪಾಪಿಷ್ಠ ಪುರುಷರನ್ನು ಮಹಾರೌರವ ಎಂಬ ಭಯಂಕರ ನರಕದಲ್ಲಿ ಹಾಕಿ ಪ್ರಳಯಕಾಲದವರೆಗೂ ಸುಡುತ್ತಲಿರುವರು. ಯಾರು ಕಳ್ಳತನ, ದರೋಡೆ, ಲೂಟಿ ಮಾಡುವರೋ ಅವರನ್ನು ತಾಮಿಸ್ರ ಎಂಬ ಘೋರ ನರಕದಲ್ಲಿ ಚಿರಕಾಲ ಬೀಳಿಸುವರು. ಶೂಲ, ಶಕ್ತಿ, ಖಡ್ಗಗಳಿಂದ ಹೊಡೆಯುತ್ತಾ ಬಡೆಯುತ್ತಾ ಮುನ್ನೂರು ಪ್ರಳಯಕಾಲಗಳು ಮರುಳುವವರೆಗೆ ಹಿಂಸಿಸುತ್ತಾ ಹೊಡೆಯುವರು. ತಾಯಿ ತಂದೆಗಳನ್ನು ಕೊಂದವನೂ ನಂಬಿದ ಮಿತ್ರನನ್ನು ಕೊಂದವನೂ ಆದ ಪಾಪಜೀವಿಯು ತಾಮಿಸ ನರಕದ ಎರಡುಪಟ್ಟು ಆದ ಮಹಾತಾಮಿಸ್ರ ಎಂಬ ನರಕದಲ್ಲಿ ಕೊಳೆಯುವನು. ಅಲ್ಲಿ ಬೆಳಕಿನ ಸುದ್ದಿಯೇ ಇಲ್ಲ. ಅದು ನಿರಂತರ ತಮೋಮಯ. ಅದರಲ್ಲಿ ಜಿಗಣೆಗಳು, ಹಾವುಗಳು ತುಂಬಿ ಮೈತುಂಬ ಕಚ್ಚಿ ಚುಚ್ಚುತ್ತಲಿರುತ್ತವೆ.

ವಿಶ್ವಾಸಪಾತ್ರನಾದ ಮಿತ್ರನನ್ನು ಕೊಂದ ಪಾಪಿಯು ಹತ್ತುಸಾವಿರ ಯೋಜನ ವಿಸ್ತಾರವಾದ ಅಸಿಪತ್ರವನ ಎಂಬ ನರಕಧಲ್ಲಿ ಬಿದ್ದು ಬೇಯುವನು. ಕಾಡುಗಿಚ್ಚನ್ನು ಉಗುಳುವ ಖಡ್ಗಗಳು ಅಸಿಪತ್ರವನದಲ್ಲಿ ಬೇಯುವ, ಸಾಯುವ ಪಾಪಿಯನ್ನು ನೂರಾರು ಹೋಳುಗಳಾಗಿ ಸೀಳಿ ಚೂರುಚೂರಾಗಿ ಮಾಡುತ್ತವೆ. ಇಲ್ಲದ ಸಲ್ಲದ ಸುಳ್ಳು ಉಪಾಯಗಳಿಂದ, ದೂರು ದುಮ್ಮಾನಗಳಿಂದ ಜನರನ್ನು ಜೀವಂತವಾಗಿ ಸುಡುವ ಪಾಪಿಗಳನ್ನು "ಕರಂಭವಾಲುಕ ಎಂಬ ಹತ್ತುಸಾವಿರ ಯೋಜನ ವಿಸ್ತಾರವಾದ ನರಕದಲ್ಲಿ ಸಿಲುಕಿಸಿ ಅವನನ್ನು ಖಂಡತುಂಡು ತುಣುಕಾಗಿ ಕಡಿದು ಕತ್ತರಿಸಿ ಹಾಕುವರು. ಕರಂಭವಾಲಿಕಾ ಎಂಬ ನರಕದಲ್ಲಿ ಮರಳಿನ ಕಣಗಳಂತೆ ಇರುವ ಬೆಂಕಿಯ ಕಣಗಳಿಂದ ಸುಡುವ ಆ ನರಕ ಅದೊಂದು ಉರಿಯ ಊರೇ ಎಂಬುವಂತೆ ತೋರುತ್ತದೆ. ಸುಳ್ಳು ಸೊಟ್ಟು ಹೇಳಿ ಜನರ ಬದುಕನ್ನೆ ದಗ್ಧವಾಗಿ ಮಾಡಿದ ದುಷ್ಟ ಜನರು ಈ ಕರಂಭ ವಾಲುಕಾ ನರಕದಲ್ಲಿ ಒಂದುಲಕ್ಷ ಹತ್ತುಸಾವಿರ ಮುನ್ನೂರ ವರ್ಷಗಳ ಕಾಲ ಸಾಯದೇ ಬೇಯುವರು. ಮನೆಯಲ್ಲಿ ಮಾಡಿದ ಮೃಷ್ಟಾನ್ನವನ್ನು ಯಾರಿಗೂ ಹಾಕದೇ ತಾನೊಬ್ಬನೇ ಯಾವನು ತಿನ್ನುವನೋ ಅವನು ಕಾಕೋರ ಎಂಬ ನರಕದಲ್ಲಿ ಬೀಳುವನು. ಈ ನರಕವು ಮಲದಿಂದಲೂ, ಮೂತ್ರದಿಂದಲೂ ತುಂಬಿರುವದು. ಅನೇಕ ಕೆಟ್ಟ ಕ್ರಿಮಿಗಳೂ ಕೂಡ ಗುಸುಗುಡುತ್ತ ಕಚ್ಚಿ ಕಡಿದು ಹಾಕುತ್ತವೆ.

'ಕುಟ್ಪಲ' ಎಂಬ ಘೋರ ನರಕವೊಂದಿದೆ. ಅದರಲ್ಲಿ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಅತಿಥಿಯಜ್ಞ, ಭೂತಯಜ್ಞ ಎಂಬ ಪಂಚಮಹಾಯಜ್ಞಗಳನ್ನು ಮಾಡದ ಮನುಷ್ಯರನ್ನು ನೂಕಿಬಿಡುವರು. ಈ ನರಕವು, ರಕ್ತ, ಮಾಂಸ, ಕೀವುಗಳಿಂದ ತುಂಬಿ ದುರ್ವಾಸನೆಯಿಂದ ತುಂಬಿ ಹೊಲಸು ನಾರುತ್ತಿರುವದು. ಅಭಕ್ಷ್ಯಭಕ್ಷಣ ಮಾಡುವ ನರಾಧಮರು ಕ್ರಿಮಿ, ಕೀಟ ಹೆಣಗಳು ತುಂಬಿದ ಮಹಾಭಟ ಎಂಬ ನರಕದಲ್ಲಿ ಬಿದ್ದು ಗೋಳಿಡುವರು. ಕನ್ಯೆಯರನ್ನು ಮಾರಾಟ ಮಾಡಿದ ಪಾಪಿಗೆ ತಿಲಪಾಕ ಎಂಬ ನರಕ. ಅದರಲ್ಲಿ ಕೆಳಮುಖವಾಗಿ ಗಾಣದಲ್ಲಿ ಪಾಪಿಯ ತಲೆಯನ್ನು ತುರಿಕಿ ಗಾಣ ತಿರುಗಿಸುತ್ತಾರೆ. ಆ ಗಾಣಕ್ಕೆ ಸಿಕ್ಕು ಅವನ ಮೈಯಲ್ಲಾ ರಕ್ತ ಬಸಿದು ದೇಹವೆಲ್ಲಾ ನುಜ್ಜುಗುಜ್ಜಾಗಿ ಹೋದರೂ ಅವನ ಪ್ರಾಣ ಮಾತ್ರ ಹೋಗುವದಿಲ್ಲ ಮುಂದೆ ಇನ್ನೂ ಚಿರಕಾಲ ಅವನು ತಿಲಪಾಕ ನರಕದಲ್ಲಿ ಪೀಡಿಸಲ್ಪಡಬೇಕಷ್ಟೇ? ಮಿತ್ರನನ್ನೂ, ಮೊರೆಹೊಕ್ಕವನನ್ನೂ ತೈಲಪಾಕ ಎಂಬ ನರಕದಲ್ಲಿ ಕುದಿಸುವರು. ಇದರಲ್ಲಿ ದೊಡ್ಡದೊಡ್ಡ ಕಡಾಯಿಗಳಲ್ಲಿ ಎಣ್ಣೆಯು ಕಥಕಥ ಕುದಿಯುತ್ತಿರುತ್ತದೆ. ಮಿತ್ರದ್ರೋಹಿಗಳನ್ನು ಇದರಲ್ಲಿ ಎದ್ದಿ, ಕರಿದು ತೆಗೆಯವರು. ಹಸುವಿನ ಹಾಲನ್ನು ಮಾರಾಟ ಮಾಡುವವರು ವಜ್ರ ಚುಚ್ಚುವ ಸರಪಣಿಗಳಿಂದ ಬಿಗಿದು ಉಸಿರುಗಟ್ಟುವಂತೆ ಮಾಡುವ ವಜ್ರಕಪಾಟ ಎಂಬ ನರಕದಲ್ಲಿ ದುಃಖಪಡುವರು. ಬ್ರಾಹ್ಮಣರಿಗೆ ಕೊಡುವ ದಾನಕ್ಕೆ ಕಲ್ಲು ಹಾಕಿದವರು ಗಾಳಿಯ ಗಂಧವೇ ಇಲ್ಲದೆ ಇರುವ "ನಿರುಚ್ಛ್ವಾಸ" ಎಂಬ ನರಕದಲ್ಲಿ ನವೆದು ಸವೆಯುವರು.

ಬ್ರಾಹ್ಮಣರಿಗೆ ಕೊಡುತ್ತೇನೆಂದು ಹೇಳಿಕೊಡದೇ ವಚನಭ್ರಷ್ಟರಾದವರನ್ನು ಅಂಗಾರೋಪಚಯ ಎಂಬ ಹೆಸರಿನ ಬೆಂಕಿಯ ಬಣವೆಯಂತಿರುವ ಘೋರ ನರಕದಲ್ಲಿ ಹಾಕಿ ದಹನ ಕ್ರಿಯೆಯನ್ನು ನಡೆಸುವರು. ಜನ್ಮದಲ್ಲಿ ಸದಾಸರ್ವದಾ ಸುಳ್ಳು ಮಾತನ್ನೇ ಆಡುತ್ತಾ ಹೆರವರಿಗೆ ಪೀಡೆಯನ್ನು ಮಾಡುತ್ತಾಯಿರುವರೋ ಅವರನ್ನು ಮಹಾಪಾಯಿ ಎಂಬ ಘೋರ

ನರಕದಲ್ಲಿ ಬೀಳಿಸುವರು. ಪಾಪಕಾರ್ಯಗಳನ್ನು ಯಾರು ತಿಳಿದೂ ಆಚರಿಸುವರೋ ಅವರನ್ನು ಮಹಾಜ್ವಾಲ ಎಂಬ ಅಗ್ನಿಜ್ವಾಲೆಗಳಿಂದ ತುಂಬಿದ ನರಕದಲ್ಲಿ ಹಾಕುವರು. ಅಗಮ್ಯಾಗಮನ ಮಾಡುವ ಕಾಮಾಚಾರಿಗಳನ್ನು, ವಾಮಾಚಾರಿಗಳನ್ನು 'ಕ್ರಕಚ ಎಂಬ ನರಕದಲ್ಲಿ ಬೀಳಿಸುವರು. ಅಲ್ಲಿ ವಜ್ರದಂತೆ ತೀಕ್ಷ್ಣವಾದ ಅಲಗುಗಳುಳ್ಳ ಗರಗಸಗಳಿಂದ ಕೊಯ್ದು ಹಾಕುವರು. 'ವರ್ಣಸಾಂಕರ್ಯ'' ಮಾಡಿದ ಪಾಪಿಗಳು ಗುಡಪಾಕ ಎಂಬ ನರಕವನ್ನು ಹೊಂದುವರು. ಕ್ಷುರಧಾರ ಎಂಬ ನರಕದಲ್ಲಿ ಅತ್ಯಂತ ಚೂಪಾದ ಅಲಗುಗಳುಳ್ಳ ಖಡ್ಗಗಳೇ ತುಂಬಿರುವವು. ಅದರಲ್ಲಿ ಬ್ರಾಹ್ಮಣರ ಭೂಮಿಯನ್ನು ಅನ್ಯಾಯದಿಂದ ಕಿತ್ತಿಕೊಂಡವರು ಈ ನರಕವನ್ನು ಐಯ್ದು ಕಲ್ಪದ ಪರ್ಯಂತರ ಬಿದ್ದಿರುವರು.

ಅಂಬರೀಷ ಎಂಬ ನರಕವು ಪ್ರಳಯಾಗ್ನಿಯಿಂದ ಕಾಯ್ದು ಕೆಂಡವಾಗಿದೆ. ಅದರಲ್ಲಿ ಚಿನ್ನವನ್ನು ಕದ್ದ ಪಾಪಿಯು ಸಾಯದೇ ಬೇಯುವನು, ಮರಗಳನ್ನು ಕಡಿಯುವವರ ವಜ್ರ ಕುಠಾರ ಎಂಬ ನರಕದಲ್ಲಿ ಬಿದ್ದು ಚೂರುಚೂರಾಗಿ ಕತ್ತರಿಸಲ್ಪಡುವರು. ಪರಿತಾಪ ಎಂಬ ಇನ್ನೂ ಒಂದು ನರಕವಿದೆ. ಅದರಲ್ಲಿ ವಿಷಕೊಟ್ಟವರು, ಮದ್ಯ ಕುಡಿಯುವವರು ಸಾಯಲಾರದೇ ಬಿದ್ದು ಬೇಯುವರು. ಯಾರು ಮತ್ತೊಬ್ಬರ ಹೊಲದಲ್ಲಿ ಬೆಳೆದ ಪೈರನ್ನು ಕೊಯ್ದುಕೊಂಡು ಓಡಿ ಹೋಗುವರೋ ಅವರು ಈ ವಜ್ರ (ಕಾಲ) ಸೂತ್ರಕ್ಕೆ ಸಿಲುಕಿ ಛಿನ್ನ ಛಿನ್ನರಾಗುವರು. ಮಾಂಸಭಕ್ಷಣ ಮಾಡಿದ ಮಾನವನು ಕಶ್ಮಲವೆಂಬ ಶ್ಲೇಷ್ಮದಿಂದಲೂ, ಸಿಂಬಳದಿಂದಲೂ ತುಂಬಿರುವ ನರಕದಲ್ಲಿ ಬೀಳುವನು.

ಯಾರು ಪಿತೃಗಳಿಗೆ ಶ್ರಾದ್ಧಾದಿಗಳನ್ನು ಮಾಡದೇ, ಪಿಂಡವನ್ನು ಕೂಡ ಕೊಡುವುದಿಲ್ಲವೋ ಅವರು ಈ ಘೋರ ನರಕದಲ್ಲಿ ಬಿದ್ದು ಬೇಯುವರು. ಲಂಚವನ್ನು ತಿನ್ನುವ ಪಾಪಿಗಳು ''ದುರ್ಧರ'' ಎಂಬ ನರಕದಲ್ಲಿ ಹತ್ತುಸಾವಿರ ವರ್ಷ ಬಿದ್ದು ಒದ್ದಾಡುವನು. ವಜ್ರಮಹಾಪೀಡವೆಂಬ ವಜ್ರನಿರ್ಮಿತವಾದ ಒಂದು ಘೋರ ನರಕವಿದೆ. ಯಾರು ಪರದ್ರವ್ಯವನ್ನೂ ಹೆರವರ ಚಿನ್ನವನ್ನೂ ಅಪಹರಿಸುವರೋ ಅವರನ್ನು ಈ ವಜ್ರ ಮಹಾಪೀಡ ನರಕದಲ್ಲಿ ಹೊಗಿಸಿ ಮುಗಿಸಿ ಹಾಕುವರು. ಅನಂತರ ಯಮದೂತರು ಹಣದ ಕಳ್ಳರನ್ನು ತಮ್ಮ ಕೈಯಲ್ಲಿಯ ಖಡ್ಗದಿಂದ ಕತ್ತರಿಸಿ ಹಾಕುವರು. ಯಾರು ಪ್ರಾಣಿಗಳನ್ನು ಕೊಂದು ಕಾಗೆ, ಹದ್ದುಗಳಂತೆ ತಿನ್ನುತ್ತಾರೋ ಅವರಿಗೆ ಯಮದೂತರು ಈ ಕಲ್ಪಕಾಲವು ಕೊನೆಗೊಳ್ಳುವವರಗೆ ಅವರ ದೇಹವನ್ನೇ ಕತ್ತರಿಸಿ ಅವರಿಗೆ ಅವರವರ ಮಾಂಸವನ್ನೇ ತಿನ್ನಿಸುವರು. ಯಾರು ಇನ್ನೊಬ್ಬರ ಕುಳಿತುಕೊಳ್ಳುವ ಆಸನವನ್ನು, ಮಲಗಿಕೊಳ್ಳುವ ಹಾಸಿಗೆಯನ್ನು, ಉಟ್ಟುಕೊಳ್ಳುವ ಬಟ್ಟೆಯನ್ನು ಕದಿಯುವರೋ ಅವರನ್ನು ಯಮದೂತರು ತಮ್ಮ ಶಕ್ತಿಗಳಿಂದಲೂ, ತೋಮರಗಳಿಂದಲೂ ಇರಿಯುವರು. ಇತರರ ಫಲಪುಷ್ಪಗಳನ್ನು ಅಪಹರಿಸುವವರನ್ನು ಯಮದೂತರು ಮೈಗೆಲ್ಲ ಒಣಹುಲ್ಲನ್ನು ಸುತ್ತಿ ಬೆಂಕಿ ಹಚ್ಚಿ ಸುಟ್ಟು ಹಾಕುವರು.

ಪರಸ್ತ್ರೀ, ಪರದ್ರವ್ಯದಲ್ಲಿ ಆಸೆ ತೋರಿಸಿದ ದುರ್ಬುದ್ಧಿಯನ್ನು ಯಮದೂತರು ಮೈಗೆಲ್ಲಾ ಹುಲ್ಲು ಸುತ್ತಿ ಬೆಂಕಿ ಹಚ್ಚುವರು. ಕಾದ ಕೆಂಪಗಾದ ಶೂಲವನ್ನು ಅವನ ಎದೆಯಲ್ಲಿ ಚುಚ್ಚುವರು. ಯಾವ ಯಾವ ಮನುಷ್ಯನು ಧರ್ಮದಲ್ಲಿ ಅಸಡ್ಡೆಯನ್ನು ತೋರುವನೋ ಅವನು ಯಮಲೋಕದಲ್ಲಿ ನಾನಾಯಾತ್ರೆಗಳನ್ನು ಅನುಭವಿಸುವನು.

ಈ ರೀತಿಯಾಗಿ ನೂರಾರು ಸಾವಿರಾರು ಲಕ್ಷಗಟ್ಟಲೇ ನರಕಗಳನ್ನು ಪಾಪ ಕಾರ್ಯದಲ್ಲಿ ಆಸಕ್ತಿತೋರಿದ ಮಾನವರು ಅನುಭವಿಸುವರು. ಈ ಲೋಕದಲ್ಲಿ ಅತಿಸ್ವಲ್ಪ ಕೆಟ್ಟಕೆಲಸ ಮಾಡಿದರೂ ಮಾನವನು ಯಮ ಲೋಕದಲ್ಲಿ ಅತಿ ಘೋರ ನರಕ ಯಾತನೆಯನ್ನು ಅನುಭವಿಸಬೇಕಾಗುವದು. ಬುದ್ಧಿಗೇಡಿಯಾದ ಮನುಷ್ಯರು ಧರ್ಮಶಾಸ್ತ್ರ ವಚನದಲ್ಲಿ ಹೇಳಿದ ಹಿತವಾದ ಮಾತುಗಳನ್ನು ಕೇಳುವದಿಲ್ಲ. ಇದನ್ನೆಲ್ಲಾ ಯಾರು ಕಣ್ಣಾರೆ ಕಂಡಿರುವರು? ಎಂದು ಧಿಕ್ಕರಿಸಿ ನುಡಿಯುವರು, ಅಂತಹ ಧರ್ಮಶಾಸ್ತ್ರ ನಿಂದಕರು ನರಕಭಾಜನರಾಗುವರು. ಧರ್ಮಾಚರಣೆಯನ್ನು ಮಾಡದೇ ಯಾರು ಅಹಿತ ಸುಖೋಪಭೋಗಗಳಲ್ಲಿಯೇ ಆಸಕ್ತರಾಗಿರುವರೋ ಅಂತಹ ಜನರು ದಾರುಣವಾದ ನರಕಗಳಲ್ಲಿ ಬಿದ್ದು ದುಃಖಗಳನ್ನು ಅನುಭವಿಸುವರು. ಶುದ್ಧ ಸಾತ್ವಿಕರು, ವೇದೋಕ್ತ ಕರ್ಮಗಳನ್ನು ಮಾಡುವವರು ಸ್ವರ್ಗದಲ್ಲಿ ಸುಖವನ್ನು ಅನುಭವಿಸುವರು. ಈ ರೀತಿಯಾಗಿ ಜನರು ತಾವು ಮಾಡಿದ ಶುಭಾಶುಭ ಕರ್ಮಗಳಿಗೆ ತಕ್ಕ ಫಲವನ್ನು ಅನುಭವಿಸುವರು.

## ಪುಣ್ಯಪುರುಷರ ಸುಖಪ್ರಯಾಣ

**ಶೌನಕಾದಿ ಋಷಿಗಳು:-** ನೀವು ಹೇಳಿದ ಯಮಲೋಕದ ಮಾರ್ಗವೂ ಆ ನರಕವೂ ಆ ಮೃತ್ಯುಪುರಿಯ ದಕ್ಷಿಣ ದ್ವಾರವೂ ಅತಿ ಘೋರ, ಅಷ್ಟೇ ಭೀಕರ.

ಅತಿ ಭಯಂಕರವಾದ ಆ ಯಮಮಾರ್ಗದಲ್ಲಿ ಮನುಷ್ಯರು ಸುಖವಾಗಿ ಪಯಣವನ್ನು ಬೆಳೆಸಿ ಆ ನಗರವನ್ನು ಸೇರಲು ಯಾವುದಾದರೂ ಉಪಾಯ ಇರುವದೇ?

**ವೇದವ್ಯಾಸ:-** ದ್ವಿಜೋತ್ತಮರೇ, ಈ ಲೋಕದಲ್ಲಿ ಧರ್ಮಕಾರ್ಯ ಮಾಡುವವರೂ ಅಹಿಂಸೆಯ ವ್ರತವನ್ನು ಪಾಲಿಸುವವರು, ದೇವ ಬ್ರಾಹ್ಮಣ ಪೂಜೆ ಮಾಡುವವರೂ ಗುರು ಸೇವೆ ಮಾಡುವವರೂ ತಮ್ಮ ಮಡದಿ ಮಕ್ಕಳೊಡನೆ ಸುವರ್ಣಧ್ವಜಗಳಿಂದ ಅಲಂಕೃತವಾದ ದಿವ್ಯ ವಿಮಾನಗಳನ್ನು ಏರಿ ಧರ್ಮರಾಜನ ಪಟ್ಟಣಕ್ಕೆ ತೆರಳುವರು. ಬ್ರಾಹ್ಮಣರಿಗೆ ಅದರಲ್ಲಿಯೂ ಶ್ರೋತ್ರಿಯರಿಗೆ ಭಕ್ತಿಯಿಂದ ಪಕ್ವಾನ್ನಗಳನ್ನು ಉಣಬಡಿಸುವವರು ಆ ದಾರಿಯಲ್ಲಿ ಲಾವಣ್ಯವತಿಯರಾದ ಲಲನೆಯರಿಂದ ಸೇವಿಸಲ್ಪಡುತ್ತಾರೆ.

ಶ್ರೀಹರಿಯು ಪ್ರೀತನಾಗಲಿ ಎಂದು ಸತ್ಪಾತ್ರರಲ್ಲಿ ಗೋದಾನ, ಶಯನದಾನ, ಕ್ಷತ್ರಿಯಾಸನ ಪೀಠ, ವಸ್ತುಗಳನ್ನು ದಾನ ಮಾಡುವವರೋ, ಯಾರು ಹಾಲು, ಮೊಸರು, ತುಪ್ಪ, ಬೆಣ್ಣೆ, ಹಣ್ಣು, ಹಂಪಲು, ತೀಂದೇನು, ಘೃತದೇನು ಮುಂತಾದವುಗಳನ್ನು ದಾನ ನೀಡುವರೋ ಅವರೆಲ್ಲರೂ ಚಿನ್ನದ ಪಲ್ಲಕ್ಕಿ ದಿವ್ಯವಿಮಾನ, ಸುಂದರ ತೇರು, ಎತ್ತರದ ಕುದುರೆಗಳ ಮೇಲೆ ಕುಳಿತು ಯಮಪಟ್ಟಣವನ್ನು ಪ್ರವೇಶಿಸುತ್ತಾರೆ. ವಾಪಿ, ಕೂಪ, ಸರೋವರಗಳನ್ನು ನಿರ್ಮಿಸುವವರು, ದೇವಾಲಯಗಳನ್ನು ಕಟ್ಟಿಸುವವರು, ಜಲದಾನ, ಅನ್ನದಾನ, ಸುವರ್ಣದಾನ ಪೀಠದಾನಗಳನ್ನು ಮಾಡುವವರೂ ಬಗೆಬಗೆಯ ಬೇರೆ ಬೇರೆ ವಾಹನಗಳ ಮೇಲೆ ಕುಳಿತು ಯಮಪುರಿಗೆ ತೆರಳುವರು.

ಯಾರು ಒಪ್ಪತ್ತು ಊಟ ಮಾಡಿ ದೇವರ ಸೇವೆಗೈಯುವರೋ ಮತ್ತು ಮೂರು ದಿನ, ನಾಲ್ಕು ದಿನ, ಆರು ದಿನ, ಹದಿನೈದು ದಿನ ಅಥವಾ ಒಂದು ತಿಂಗಳ ಪೂರ್ತಿ ಉಪವಾಸವಿದ್ದು ಭಗವದಾರಾಧನೆ ಮಾಡುವರೊ ಅವರ ರಥಗಳನ್ನು ಹುಲಿ ಆನೆಗಳು

ಎಳೆದುಕೊಂಡು ಹೋಗುವವು. ಯಾವನು ಬೇರೆಯವರು ಕದ್ದುಕೊಂಡು ಹೋದ ಸ್ತ್ರೀಯರನ್ನು, ಹಸುಗಳನ್ನು, ಬಿಡಿಸಿ ತರುವನೋ ಅದಕ್ಕಾಗಿ ಪ್ರಸಂಗ ಬಂದರೆ ಪ್ರಾಣಗಳನ್ನು ಕೂಡ ತೊರೆಯುವನೋ ಅವನು ಸೂರ್ಯನಂತೆ ಪ್ರಕಾಶಿಸುವ ವಿಮಾನದಲ್ಲಿ ಕುಳಿತು ದೇವಕನ್ಯೆಯರಿಂದ ಸೇವಿಸಲ್ಪಡುತ್ತಾ ಯಮಪುರಿಗೆ ಹೋಗುವನು. ಸತ್ಯಶೌಚಗಳಲ್ಲಿ ನಿರತರಾಗಿರುವರೋ ಮಾಂಸ ಮದ್ಯಾದಿಗಳನ್ನು ವರ್ಜಿಸಿರುವರೋ ಅವರೆಲ್ಲರೂ ಸುಖವಾಗಿ ಯಮಪಟ್ಟಣಕ್ಕೆ ತೆರಳುವರು.

ಭಕ್ಷ್ಯ ಭೋಜ್ಯಗಳಲ್ಲಿ ಮಾಂಸವು ಕೆಲವರಿಗೆ ಇಷ್ಟವಾಗಬಹುದು. ಆದರೆ ಅದು ಶಾಸ್ತ್ರ ನಿಷಿದ್ಧ. ಅದನ್ನು ಸರ್ವಥಾ ತಿನ್ನಕೂಡದು ಕೇವಲ ರುಚಿ ಹತ್ತಿದ ಮಾತ್ರಕ್ಕೆ ನಿಷಿದ್ಧ ಅದನ್ನು ಪದಾರ್ಥವನ್ನು ತಿಂದರೆ ಶಾಸ್ತ್ರದಲ್ಲಿ ಬಹಳ ಅನರ್ಥವಾಗುವದೆಂದು ಹೇಳಿದ್ದಾರೆ.

ಈ ವಿಷಯದಲ್ಲಿ ಹಿಂದೆ ಒಂದು ಬೋಧಪ್ರದವಾದ ಘಟನೆ ನಡೆಯಿತು. ಹಿಂದೆ ಒಂದು ಸಲ ಗೋದಾನಗಳನ್ನು ಮಾಡಿದವನೂ ಎಂದೂ ಮಾಂಸವನ್ನು ತಿನ್ನದವನೂ ಒಂದೆಡೆ ಸೇರಿದ್ದರು. ಅವರಿಬ್ಬರಲ್ಲಿ ಯಾರು ಶ್ರೇಷ್ಠ ಎಂದು ಚರ್ಚೆನಡೆಯಿತು. ಆಗ ಬ್ರಹ್ಮದೇವರು ತಮ್ಮ ತೀರ್ಪನ್ನು ಇಟ್ಟರು. ''ಎಲ್ಲ ತೀರ್ಥಕ್ಷೇತ್ರಗಳ ಯಾತ್ರೆ ಮಾಡಿದರೆ ಎಲ್ಲ ವಿಧ ಯಜ್ಞಗಳನ್ನು ಮಾಡಿ ಪೂರೈಸಿದರೆ ಬಗೆಬಗೆಯ ದಾನ, ಗೋದಾನಾದಿಗಳನ್ನು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಮಾಡಿದರೆ ಬರುವ ಪುಣ್ಯವು ಮಾಂಸಾಹಾರವನ್ನು ಸರ್ವಥಾ ವರ್ಜಿಸುವದರಿಂದ ಬರುವ ಪುಣ್ಯಕ್ಕೆ ಸಮಾನವಾಗಿದೆ. ಮಾಂಸ ಮುಟ್ಟದವರನ್ನು ಸ್ವಯಂ ಯಮಧರ್ಮನೇ ಸ್ವಾಗತಿಸಿ, ಆಸನ ನೀಡಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಆದರೋಪಾಚಾರಗಳಿಂದ ಸಿಹಿ ನುಡಿಗಳನ್ನಾಡಿ ಗೌರವಿಸುವನು.'' ಮಾನವರು ಮೋಕ್ಷ ಸುಖವನ್ನು ಕೊಡುವ ಧರ್ಮವನ್ನು ಮಾತ್ರ ಆಚರಿಸಬೇಕು. ಆ ಧರ್ಮದಿಂದಲೇ ಅರ್ಥ, ಕಾಮ, ಮೋಕ್ಷ ಮೂರೂ ದೊರೆಯುವವು. ಯಾವ ಮಾನವರು ನರಕಾಸುರನ ಸಂಹಾರ ಮಾಡಿದ ವಾಸುದೇವನನ್ನೇ ನಂಬಿ ನೆಚ್ಚಿ ನೇಮನಿಷ್ಠರಾಗಿ ಭಕ್ತಿಯಿಂದ ಭಗವಂತನನ್ನು ಸೇವಿಸುವರೋ ಅವರು ಸ್ವಪ್ನದಲ್ಲಿಯೂ ಯಮನನ್ನು ಕಾಣಲಾರರು. ಕಾಯಾ, ವಾಚಾ, ಮನಸಾ, ಅಚ್ಯುತನನ್ನೇ ಶರಣು ಹೋಗಿರುವವರೋ ಅಂಥವರನ್ನು ಮುಟ್ಟಲಿಕ್ಕೂ ಕೂಡ ಯಮನು ಹೆದರುತ್ತಾನೆ. ಸಕಲ ಲೋಕಕ್ಕೆಲ್ಲಾ ಒಡೆಯನಾದ ನಾರಾಯಣನನ್ನು ಪ್ರತಿನಿತ್ಯ ನಮಸ್ಕಾರ ಮಾಡುವವರು ವೈಕುಂಠ ಲೋಕ ಬಿಟ್ಟು ಬೇರೆ ಕಡೆ ಹೋಗಲಾರರು. ಬುದ್ಧಿಗೆಟ್ಟು ಯೌವನದಲ್ಲಿ ಅನೇಕ ಪಾಪಕೃತ್ಯಗಳನ್ನು ಮಾಡಿದವರೂ ಕೂಡ ಹರಿನಾಮ ಸ್ಮರಣವನ್ನು ಮಾಡಿ ಆ ಭಗವಂತನಿಗೆ ನಮಸ್ಕಾರ ಮಾಡಿದರೆ ಎಂದೂ ನರಕಕ್ಕೆ ಹೋಗುವುದಿಲ್ಲ. ಯಾವ ಮನುಷ್ಯನು ದ್ವೇಷದಿಂದಾಗಲಿ, ಪ್ರೇಮದಿಂದಾಗಲಿ ಪ್ರತಿನಿತ್ಯ ವಿಷ್ಣು ಸ್ಮರಣ ಮಾಡುವರೋ ಅವರು ತಮ್ಮ ಶರೀರವನ್ನು ತೊರೆದು ವಿಷ್ಣುಲೋಕವನ್ನು ಕುರಿತು ಪ್ರಯಾಣ ಮಾಡುವರು.

## ಪುಣ್ಯಪಾಪಫಲ ನಿರೂಪಣ

**ಮುನಿಗಳು:-** ಪೂಜ್ಯರೇ, ನೀವು ಸರ್ವಶಾಸ್ತ್ರಗಳಲ್ಲಿಯೂ ವಿಶಾರದರು ಧರ್ಮದ ಮರ್ಮವನ್ನು ಅರಿತವರು. ಮನುಷ್ಯನ ಸಂಬಂಧಿಗಳು ಹಲವಾರು ಜನ ಇರುವರು. ತಾಯಿ, ತಂದೆ, ಮಗ, ಮಡದಿ, ಗುರು, ಮಿತ್ರರು, ಜಾತಿಗಳು, ಇನ್ನೂ ಯಾರು ಯಾರೋ ಇರುವರು.

ಆದರೆ ಮಾನವನು ತನ್ನ ಈ ದೇಹವನ್ನು ಬಿಟ್ಟು ಹೊರಟಾಗ ಅವನಿಗೆ ಪರಲೋಕದಲ್ಲಿ ಸಂಗಾತಿಯಾಗಿ ಯಾರು ಅನುಸರಿಸಿ ಹೋಗುವರೋ ಅದನ್ನು ನಮಗೆ ತಿಳಿಸಿರಿ.

**ವೇದವ್ಯಾಸ:-** ಮಾನವನು ಈ ಭೂಲೋಕಕ್ಕೆ ಏಕಾಕಿಯಾಗಿ ಒಬ್ಬನೇ ಬರುವನು. ಹೋಗುವಾಗಲೂ ಒಬ್ಬನೇ ಹೋಗುವನು. ಯಾರೂ ಪರಲೋಕದಲ್ಲಿ ಅವನನ್ನು ಬೆಂಬಲಿಸಿ ಹೋಗುವದಿಲ್ಲ. ಇಲ್ಲಿ ನೂರುಜನ ಇದ್ದರೂ ಅಲ್ಲಿ ಮಾತ್ರ ಏಕಾಕಿ. ಅಸಹಾಯ ಈ ಜೀವ. ತಾಯಿ, ತಂದೆ, ಅಣ್ಣ, ತಮ್ಮ, ಪುತ್ರ, ಮಿತ್ರ ಎಲ್ಲರೂ ಸ್ಮಶಾನದಲ್ಲಿ ಮೃತನಾದ ಮನುಷ್ಯನನ್ನು ಕಟ್ಟಿಗೆ, ಇಟ್ಟಿಗೆ ಸಿಗದಂತೆ ಅಲ್ಲಿಯೇ ಒಗೆದು ಒಂದು ನಿಮಿಷ ಅತ್ತಂತೆ ಮಾಡಿ ತಿರುಗಿ ಮನೆಗೆ ಹೋಗುತ್ತಾರೆ. ಮನುಷ್ಯನನ್ನು ಈ ಶರೀರ ಬಿಟ್ಟು ದೇಹಾಂತರ ಲೋಕಾಂತರ ಹೊಂದಿದರೂ ಅವನನ್ನು ಹಿಂಬಾಲಿಸುವದು ಧರ್ಮ ಮಾತ್ರ. ಆದುದರಿಂದ ಮಾನವನು ಭೂಲೋಕದಲ್ಲಿ ಇರುವವರೆಗೆ ಧರ್ಮವನ್ನು ಆಚರಿಸಬೇಕು. ಶಾಸ್ತ್ರೋಕ್ತ ಕರ್ಮಗಳನ್ನು ಮಾಡಬೇಕು. ಇಲ್ಲಿ ಧರ್ಮಕರ್ಮಗಳನ್ನು ಮಾಡಿದವನು ದಿವ್ಯವಾದ ಸ್ವರ್ಗಗತಿಯನ್ನು ಹೊಂದುತ್ತಾನೆ. ಧರ್ಮಮಾಡಿದವನು ಸ್ವರ್ಗ ಸೇರುತ್ತಾನೆ. ಅಧರ್ಮಮಾಡಿದವನು ನರಕದಲ್ಲಿ ಬೀಳುತ್ತಾನೆ. ಆದುದರಿಂದ ಮಾನವನು ತನ್ನ ಜೊತೆಗೆ ತಾನು ಹೋದಲ್ಲೆಲ್ಲಾ ಅನುಸರಿಸಿ ಬರುವ ಧರ್ಮವನ್ನೇ ಶಾಸ್ತ್ರೋಕ್ತವಾಗಿ ಆಚರಿಸಬೇಕು.

**ಮುನಿಗಳು:-** ಸತ್ತ ಮನುಷ್ಯನ ಶರೀರವು ಭೂತಸೂಕ್ಷ್ಮದಲ್ಲಿ ಸೇರಿ ಹೋಗುತ್ತದೆ. ಕಣ್ಣಿಗೆ ಕಾಣುವದಿಲ್ಲ. ಆ ಜೀವ ಎಲ್ಲಿಗೆ ಹೋಗುವದು, ಎಲ್ಲಿ ಇರುವದು ಯಾರಿಗೆ ಗೊತ್ತು! ಧರ್ಮಕ್ಕೆ ಅವನು ಮಾಡಿದ ಪುಣ್ಯ ಪಾಪಗಳಾಗಲಿ ಅವನು ಹೋದ ಸ್ಥಳವಾಗಲಿ ಹೇಗೆ ಗೊತ್ತಾಗುವದು?

**ವೇದವ್ಯಾಸ:-** ಮನುಷ್ಯನು ಇಲ್ಲಿ ಮಾಡುವ ಕ್ರಿಯೆಗಳನ್ನೆಲ್ಲಾ ಪೃಥ್ವಿ, ವಾಯು, ಆಕಾಶ, ನೀರು, ಜ್ಯೋತಿ, ಮನಸ್ಸು, ಬುದ್ಧಿ, ಆತ್ಮ ಇವೆಲ್ಲವೂ ನೋಡುತ್ತವೆ. ಈ ಎಲ್ಲ ವಸ್ತುಗಳ ತತ್ವಾಭಿಮಾನ ದೇವತೆಗಳು ನರನು ಮಾಡುವ ಸತ್ಕರ್ಮ ದುಷ್ಕರ್ಮಗಳಿಗೆ ಸಾಕ್ಷೀಭೂತರಾಗಿ ಇರುತ್ತಾರೆ. ಅವರು ಪ್ರತ್ಯಕ್ಷವಾಗಿ ತಾವು ಕಂಡ ಮಾನವನ ಕರ್ಮಕ್ಕೆ ಅನುಸಾರವಾಗಿ ಧರ್ಮವು ಅವನನ್ನು ಹಿಂಬಾಲಿಸಲು ಪ್ರೇರಕರಾಗಿ ಇರುತ್ತಾರೆ. ತನ್ನ ಕರ್ಮ ಧರ್ಮಗಳಿಗೆ ಅನುಸಾರವಾಗಿ ಮನುಷ್ಯನು ಬೇರೆ ಬೇರೆ ಯೋನಿಗಳಲ್ಲಿ ಹುಟ್ಟುತ್ತಾನೆ.

**ಮುನಿಗಳು:-** ಯೋನಿಯಿಂದ ಜೀವನು ಜನಿಸಲು ರೇತಸ್ಸೇ ಕಾರಣವಷ್ಟೇ! ಆ ರೇತಸ್ಸು ಹೇಗೆ ಉತ್ಪನ್ನವಾಗುತ್ತದೆ, ಎಲ್ಲಿ ಉತ್ಪನ್ನವಾಗುತ್ತದೆ. ಇದನ್ನು ತಿಳಿಸಿರಿ.

**ವ್ಯಾಸ:-** ಪ್ರಾಣಿಯು ಅನ್ನವನ್ನು ಉಣ್ಣುತ್ತದೆ. ಆ ಅನ್ನವು ಪುರುಷನ ದೇಹದಲ್ಲಿ ರಕ್ತವಾಗಿ, ರಕ್ತವು ರೇತಸ್ಸಾಗಿ ಪರಿಣಮಿಸಿ ಸ್ತ್ರೀಯೋನಿಯಲ್ಲಿ ಬಿದ್ದು ಭ್ರೂಣವಾಗುತ್ತದೆ. ಹೀಗೆ ಸ್ತ್ರೀಪುರುಷ ಸಂಯೋಗದಿಂದ ರೇತಸ್ಸು ಉಂಟಾಗಿ ಆ ರೇತಸ್ಸಿನ ಕಣ ಗರ್ಭಾಕಾರವಾಗಿ ಪರಿಣಮಿಸಿ ಮಾನವನಾಗಿ ಮೂಡಿ ಬರುತ್ತಾನೆ. ಪೃಥ್ವಿ, ಜಲ, ವಾಯು, ಆಕಾಶ, ತೇಜಸ್ಸು ಈ ಪಂಚ ಮಹಾಭೂತಗಳೆಂಬ ಯಲಬು, ಚರ್ಮ, ಮಾಂಸ, ರಕ್ತ, ಮಜ್ಜೆ ನಾಡಿಗಳಿಂದ ಕೂಡಿದ ಭೌತಿಕ ಶರೀರವು ಉತ್ಪನ್ನವಾಗುತ್ತದೆ. ಹೀಗೆ ಪಾಂಚಭೌತಿಕ ಶರೀರದ ಮುಖಾಂತರ ಸಂಸಾರ ಚಕ್ರದಲ್ಲಿ ಬಿದ್ದ ಮನುಷ್ಯನು ತನ್ನ ಜನ್ಮಾಂತರದ ಧರ್ಮಾಧರ್ಮಗಳಿಗೆ ಅನುಸರಿಸಿ, ಸುಖದುಃಖಗಳನ್ನು ಹೊಂದುತ್ತಾನೆ. ಹುಟ್ಟಿದಂದಿನಿಂದ

ಸತ್ಕರ್ಮಗಳನ್ನೇ ಮಾಡುವ ಮನುಷ್ಯನು ಈ ಜನ್ಮದಲ್ಲಿಯೂ ಮುಂದಿನ ಜನ್ಮದಲ್ಲಿಯೂ, ಸುಖವನ್ನೇ ಹೊಂದುತ್ತಾನೆ. ನಡನಡುವೆ ಒಮ್ಮೆ ಧರ್ಮ, ಒಮ್ಮೆ ಅಧರ್ಮ ಮಾಡುತ್ತಾ ಹೋದರೆ ಮುಂದೆ ಸುಖಾನಂತರ ದುಃಖ, ದುಃಖಾನಂತರ ಸುಖ ಅನುಭವಿಸುತ್ತಾ ಹೋಗುತ್ತಾನೆ. ಅಧರ್ಮವನ್ನೇ ಮಾಡುವ ಮನುಷ್ಯನು ಕೇವಲ ದುಃಖವನ್ನು ಹೊಂದಿ ಮುಂದೆ ನರಕದಲ್ಲಿ ಬಿದ್ದು ಬಗೆಬಗೆಯ ಯಾತನೆಗಳನ್ನು ಅನುಭವಿಸಿ ಅನಂತರ ಪಶುಪಕ್ಷಿ ಕ್ರಿಮಿಕೀಟಾದಿ ಯೋನಿಗಳಲ್ಲಿ ಜನಿಸುತ್ತಾನೆ.

ಯಾವ ಯಾವ ಕರ್ಮಗಳಿಂದ ಯಾವ ಯಾವ ಯೋನಿಯಲ್ಲಿ ನರನು ಜನಿಸುತ್ತಾನೆ ಎನ್ನುವದನ್ನು ಹೇಳುತ್ತೇನೆ ಕೇಳಿ.

ನಾಲ್ಕು ವೇದಗಳನ್ನು ಓದಿ ಪಂಡಿತನಾದರೂ ಮೋಹದಿಂದ ಆಸೆಗೆ ಬಿದ್ದು ಪತಿತರೂ, ಭ್ರಷ್ಟರೂ, ಪಾಪಿಗಳೂ ಆದ ಜನರಿಂದ ದಾನವನ್ನು ಸ್ವೀಕರಿಸಿದರೆ ಕತ್ತೆಯಾಗಿ ಹುಟ್ಟುತ್ತಾನೆ. ಹತ್ತು ವರ್ಷ ಕತ್ತೆಯಾಗಿ ಜೀವಿಸಿ ಮತ್ತೆ ಏಳು ವರ್ಷ ಎತ್ತಾಗಿ ಹುಟ್ಟುತ್ತಾನೆ. ಆ ಎತ್ತು ಸತ್ತು ಬ್ರಹ್ಮ ರಾಕ್ಷಸನಾಗುತ್ತಾನೆ. ಮೂರು ತಿಂಗಳು ಬ್ರಹ್ಮರಾಕ್ಷಸ ಜನ್ಮದಲ್ಲಿ ದುಃಖ ಅನುಭವಿಸುವನು. ಅನಂತರ ಆ ಜನ್ಮ ನೀಗಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಅಲ್ಲಿ ಸತ್ಕಾರ್ಯಗಳನ್ನು ಮಾಡಿ ತನ್ನ ವರ್ಣಾಶ್ರಮಕ್ಕೆ ಉಚಿತವಾಗಿ ಧರ್ಮಾಕರ್ಮಾನುಷ್ಠಾನವನ್ನು ಮಾಡಿ ಭಗವಂತನನ್ನು ಭಕ್ತಿಯಿಂದ ಆರಾಧಿಸಿದರೆ ಶ್ರೇಷ್ಠವಾದ ಸದ್ಗತಿಯನ್ನು ಹೊಂದುತ್ತಾನೆ. ಪಂಚಮಹಾಪಾತಕಗಳನ್ನು ಮಾಡಿ ಪತಿತನಾದ ಮನುಷ್ಯನ ಕಡೆಯಿಂದ ದಕ್ಷಿಣೆಯ ಆಸೆಗಾಗಿ ವೇದೋಕ್ತವಾದ ಯಜ್ಞಯಾಗಾದಿಗಳನ್ನು ಮಾಡಿಸಿದರೆ ಹುಳ ಹುಪ್ಪಡಿಯಾಗಿ ಹುಟ್ಟುತ್ತಾನೆ. ಅಲ್ಲಿ ಅನೇಕ ವರ್ಷ ಇದ್ದು ಐದು ವರ್ಷ ಕತ್ತೆ, ಐದು ವರ್ಷ ಹಂದಿ, ಐದು ವರ್ಷ ಕೋಳಿ, ಐದು ವರ್ಷ ನರಿ, ಒಂದು ವರ್ಷ ನಾಯಿಯಾಗಿ ಹುಟ್ಟುತ್ತಾನೆ. ಬಗೆಬಗೆಯ ಕಷ್ಟಗಳನ್ನು ಹೊಂದುತ್ತಾನೆ. ಹೊಟ್ಟೆಕಿಚ್ಚು ಪಡುವ ಮನುಷ್ಯನು ಚಿಗರೆಯಾಗಿ ಬೇಡರ ಬಾಣಕ್ಕೆ ಗುರಿಯಾಗಿ ಪ್ರಾಣಬಿಡುತ್ತಾನೆ. ನಂಬಿದವರಿಗೆ ವಿಶ್ವಾಸಘಾತ ಮಾಡಿದ ದುರ್ಬುದ್ಧಿಯು ಎಂಟು ವರ್ಷ ಮೀನನಾಗಿ, ನಾಲ್ಕುತಿಂಗಳು ಚಿಗರೆಯಾಗಿ, ಅನಂತರ ಹುಲಿಯಾಗಿ ಒಂದು ವರ್ಷ ಇದ್ದು ಮೃತನಾಗಿ ಬಳಿಕ ಕೀಟವಾಗಿ ಕೊನೆಗೆ ಮಾನವ ಜನ್ಮ ಪಡೆಯುತ್ತಾನೆ. ಧಾನ್ಯ, ಬೇಳೆಕಾಳು, ಎಳ್ಳು, ಉದ್ದು, ಗೋಧಿ, ಅಕ್ಕಿ, ಮುಂತಾದ ಕಾಳು ಕಡಿ ಕದ್ದವನೂ ಹೊಲದಲ್ಲಿಯ ಬೆಳೆಯನ್ನೇ ಚಂಡಿಯಾಡಿ ಅಪಹರಿಸಿದವನೂ ಇಲಿಯಾಗಿ ಹುಟ್ಟುತ್ತಾನೆ. ಇಲಿ ಸತ್ತು ಹಂದಿಯಾಗುತ್ತಾನೆ. ಹಂದಿಯಾದಾಗ ಹುಟ್ಟಿದ ಕೂಡಲೇ ರೋಗದಿಂದ ಸತ್ತು ನಾಯಿಯಾಗಿ, ಅನಂತರ ಮೂಕ ಮಾನವನಾಗಿ ಕೊನೆಗೆ ಮಾತಾಡುವ ಮಾನವನಾಗಿ ಜನಿಸುತ್ತಾನೆ. ಬಹಳ ಪಾಪ ಮಾಡಿದ್ದರೆ ಐದು ವರ್ಷ ನಾಯಿಯಾಗಿ ಕೊನೆಗೆ ಮಾನವ ಜನ್ಮಕ್ಕೆ ಬಾರದೇ ಮತ್ತೆ ಪಾಪ ಯೋನಿಗಳಲ್ಲಿ ಜನಿಸುತ್ತಾ ಹೋಗುತ್ತಾನೆ.

ಪರಸ್ತ್ರೀಯರನ್ನು ಸಂಭೋಗ ಮಾಡಿದ ಲಂಪಟನು ಮೊದಲು ತೋಳ, ಅನಂತರ ನಾಯಿ, ಆಮೇಲೆ ನರಿ, ಬಳಿಕ ಹದ್ದು, ಹಾವು, ಬಕ ಮುಂತಾದ ದುರ್ಯೋನಿಗಳಲ್ಲಿ ಹುಟ್ಟಿ ಕಷ್ಟಪಡುವನು. ಅಣ್ಣ ತಮ್ಮಂದಿರ ಮಡದಿಯರನ್ನು ಭೋಗಿಸಿದರೆ ಗಂಡು ಕೋಗಿಲವಾಗಿ ಕೂಗುತ್ತಾ ಒಂದು ವರ್ಷ ಕಷ್ಟಪಡುವನು. ಗೆಳೆಯನ ಮಡದಿ, ಗುರುವಿನ ಹೆಂಡತಿ ಅರಸನ ಅರಸಿ ಇವರೊಡನೆ ಬೆರೆತರೆ ಆ ಕಾಮುಕನು ಐದು ವರ್ಷ ಹಂದಿ, ಹತ್ತಿ ವರ್ಷ ಬಕಪಕ್ಷಿ, ಮೂರು ತಿಂಗಳ ಇರುವೆ, ಒಂದು ತಿಂಗಳ ಹುಳ ಆಗಿ ಗೋಳಾಡುವನು. ಮಗಳನ್ನು

ಹಡೆದು ಕನ್ಯೆಯನ್ನು ಒಬ್ಬನಿಗೆ ವಾಗ್ದಾನ ಮಾಡಿ ಅವನಲ್ಲಿ ಯಾವ ದೋಷವಿಲ್ಲದೆ ಬೇರೆಯವನಿಗೆ ಮದುವೆ ಮಾಡಿಕೊಟ್ಟರೆ ಮತ್ತು ಗುರುದ್ರೋಹವನ್ನು ಮಾಡಿದರೆ ಮೊದಲು ನಾಯಿ ಅನಂತರ ರಾಕ್ಷಸ, ನಂತರ ಕತ್ತೆಯಾಗಿ ಜನಿಸುವನು. ಗುರುವಿನ ಮಡದಿಯನ್ನು ಮನಸ್ಸಿನಿಂದಾದರೂ ಕಾಮಿಸಿದರೆ ಅವನು ಮೂರು ವರ್ಷ ನಾಯಿಯಾಗಿ, ಒಂದು ವರ್ಷ ಕ್ರಿಮಿಯಾಗಿ ಅನಂತರ ಪುಣ್ಯವಿದ್ದರೆ ಬ್ರಾಹ್ಮಣನಾಗಿ ಹುಟ್ಟುವನು.

ತಾಯಿ ತಂದೆಗಳನ್ನು ಅವಮಾನ ಮಾಡುವ ಮಗನು ಅವನು ಕತ್ತೆಯಾಗಿ ಹತ್ತು ವರ್ಷ ಬದುಕಿ ಅನಂತರ ಮೊಸಳೆಯಾಗಿ ದುರ್ದೆಸೆಗೆ ಈಡಾಗುವನು. ತಾಯಿ-ತಂದೆಗಳನ್ನು ಸಿಟ್ಟಿಗೆಬ್ಬಿಸಿದವನು, ಗುರುದ್ರೋಹ ಮಾಡಿದವನು ಹತ್ತು ತಿಂಗಳ ಕತ್ತೆಯಾಗಿ, ಹದಿನಾಲ್ಕು ತಿಂಗಳು ಬೆಕ್ಕಾಗಿ ಕೊನೆಗೆ ಮಾನವನಾಗಿ ಹುಟ್ಟುವನು. ತಾಯಿತಂದೆಗಳನ್ನು ಹಿಂಸೆಪಡಿಸಿದವನು ಮೂವತ್ತು ವರ್ಷ ಆಮೆಯಾಗಿ, ಆರು ತಿಂಗಳ ಹುಲಿ ಅಥವಾ ಹಾವಾಗಿ ಕೊನೆಗೆ ಮಾನವ ದೇಹಕ್ಕೆ ಮರಳಿ ಬರುವನು. ಅಡುವು ಇಟ್ಟಿದ್ದನ್ನು ಅಪಹರಿಸಿದರೆ ನೂರುವರ್ಷ ಕ್ರಿಮಿಯೋನಿಯಲ್ಲಿ ತೊಳಲಾಡುತ್ತಾನೆ. ದೇವಪೂಜೆ, ಶ್ರಾದ್ಧ ತರ್ಪಣ ಮಾಡಿದಿದ್ದರೆ ನೂರು ವರ್ಷ ಕಾಗೆ, ಕೆಲವರ್ಷ ಕೋಳಿ, ಕೊನೆಗೆ ಚಿರತೆಯಾಗಿ ದುಃಖಿಸುತ್ತಾನೆ. ತಂದೆಗೆ ಸಮಾನನಾದ ಹಿರಿಯ ಅಣ್ಣನಿಗೆ ಅವಮಾನ ಮಾಡಿದರೆ ಸತ್ತ ಬಳಿಕ ಹತ್ತು ವರ್ಷ ಕ್ರೌಂಚ ಪಕ್ಷಿಯಾಗಿ ಜೀವಿಸುವನು. ಶೂದ್ರನು ಬ್ರಾಹ್ಮಣ ಸ್ತ್ರೀಯನ್ನು ಗಮನ ಮಾಡಿದರೆ ಸತ್ತ ಬಳಿಕ ಹಂದಿ, ನಾಯಿಯಾಗಿ ಹುಟ್ಟುವನು. ಮಾಡಿದ್ದನ್ನು ನೆನೆಯದ ಕೃತಘ್ನನು ಯಮಪುರಿಯಲ್ಲಿ ಅಸಿಪತ್ರವನ ಎಂಬ ಘೋರನರಕದಲ್ಲಿ ಬಿದ್ದು ಒದ್ದಾಡುವನು. ಮೊಸರನ್ನು ಕದ್ದರೆ ಬಕನಾಗಿ ಹುಟ್ಟುತ್ತಾನೆ. ಮೀನ ತಿಂದರೆ ಮಂಗನಾಗುತ್ತಾನೆ. ಜೇನು ತುಪ್ಪವನ್ನು ಕದ್ದರೆ ನೊಣನಾಗುತ್ತಾನೆ. ಹಣ್ಣು, ಕಾಯಿ ಕಳ್ಳತನ ಮಾಡಿದವನು ಇರುವೆಯಾಗುತ್ತಾನೆ. ಪಾಯಸಕದ್ದವನ್ನು ತಿತ್ತಿರಿ ಪಕ್ಷಿಯಾಗುತ್ತಾನೆ. ಹಿಟ್ಟಿನ ಪದಾರ್ಥವನ್ನು ಕದ್ದರೆ ಗೂಗೆ, ನೀರು ಕದ್ದರೆ ಕಾಗೆ, ಕಂಚಿನ ಪಾತ್ರೆ ಕದ್ದರೆ ಹಾರೀತ ಪಕ್ಷಿ, ಬೆಳ್ಳಿ ಪಾತ್ರೆ ಹೊತ್ತರೆ ಪಾರಿವಾಳ, ಬಂಗಾರದ ಪಾತ್ರೆಯನ್ನು ತುಡುಗು ಮಾಡಿದರೆ ಹುಳು ಹುಪ್ಪಡಿ, ಬಟ್ಟೆಯನ್ನು ಕದ್ದರೆ ಗಿಳಿ ರೇಷ್ಮೇ ಬಟ್ಟೆ ಕದ್ದರೆ ಹಂಸ, ಉಣ್ಣೆ ಬಟ್ಟೆ ಕದ್ದರೆ ಕುರರ ಪಕ್ಷಿ, ಹತ್ತಿಯ ಬಟ್ಟೆ ಕದ್ದರೆ ಗಿಳಿ, ಸುಣ್ಣ ಕದ್ದರೆ ನವಿಲು, ಕೆಂಪು ಬಟ್ಟೆ ಕದ್ದರೆ 'ಜಾತಕ' ಹಾಲು ಕದ್ದರೆ ಬಲಾಕಾಪಕ್ಷಿ, ಎಣ್ಣೆಕದ್ದರೆ ಎಣ್ಣೆ ಉಡಿಯುವ ಜಂತು, ಶಸ್ತ್ರವಿಲ್ಲದವನನ್ನು ಶಸ್ತ್ರದಿಂದ ಹೊಡೆದರೆ ಕತ್ತೆ, ಕೊಳಲು ತಂಬೂರಿ ಮುಂತಾದ ವಾದ್ಯಗಳನ್ನು ಕದ್ದರೆ ಉಣ್ಣೆಯ ಕುರಿ, ತುಪ್ಪ ಕದ್ದರೆ ಕಾಗೆ, ಅಡುವಿಟ್ಟದ್ದನ್ನು ಅಪಹರಿಸಿದರೆ ಮೀನನಾಗಿ ಹುಟ್ಟುತ್ತಾನೆ.

ಮನುಷ್ಯನಿಗೆ ಕರ್ತವ್ಯ, ಅಕರ್ತವ್ಯಗಳನ್ನು ನಿರ್ಣಯಿಸಿ ಕೊಡುವದೇ ಧರ್ಮವು. ಆ ಧರ್ಮವನ್ನು ಆ ಅಧರ್ಮದ ಪ್ರಾಯಶ್ಚಿತ್ತವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಅಧರ್ಮವನ್ನು ಮಾಡಿ ಪ್ರಾಯಶ್ಚಿತ್ತವನ್ನು ಅದಕ್ಕೆ ತಕ್ಕಂತೆ ಮಾಡಿಕೊಳ್ಳುವ ಮನುಷ್ಯನು ಈ ಜನ್ಮದಲ್ಲಿ ರೋಗಗ್ರಸ್ತನಾದರೂ ಒಮ್ಮೆ ಸುಖವನ್ನು ಒಮ್ಮೆ ದುಃಖವನ್ನು ಅನುಭವಿಸುವರು. ಲೋಭ ಮೋಹಗಳಿಂದ ಕೂಡಿಕೊಂಡು ಪಾಪಕೃತ್ಯ ಮಾಡುವ ಮನುಷ್ಯರು ಮ್ಲೇಂಛರು ಆಗಿ ಹುಟ್ಟಿ ಧರ್ಮಾಚಾರ ಬಾಹಿರರಾಗುತ್ತಾರೆ. ಹುಟ್ಟಿದಂದಿನಿಂದ ಯಾರು ಪಾಪ ಕರ್ಮಗಳನ್ನು ಬಿಟ್ಟು ಪುಣ್ಯಕರ್ಮಗಳನ್ನು

ಮಾಡುತ್ತಿರುವರೋ ಅಂಥವರು ಯಾವದೇ ರೋಗ ರುಜಿನಗಳಿಲ್ಲದೆ ಆರೋಗ್ಯವಂತರಾಗಿ ಒಳ್ಳೆಯ ಅಂದ ಚಂದದ ಸುಂದರ ಮನುಷ್ಯರಾಗಿ, ಶ್ರೀಮಂತರಾಗಿ ಸುಖದ ಜೀವನವನ್ನು ನಡೆಸುವರು. ಇದೇ ರೀತಿಯಾಗಿ ಸ್ತ್ರೀಯರಾದರೂ ಕೂಡ ಅಲ್ಲದ ಸಲ್ಲದ ಶಾಸ್ತ್ರ ನಿಷಿದ್ಧವಾದ ಕಾರ್ಯಗಳನ್ನು ಮಾಡಿದರೆ, ನೀತಿಗೆಟ್ಟು ನಡೆದರೆ ಪಾಪವನ್ನು ಹೊಂದುತ್ತಾರೆ. ಮೇಲೆ ಹೇಳಿದ ಮಹಾಪಾತಕಿಗಳಾದ ದುಷ್ಟಭ್ರಷ್ಟರ ಮಡದಿಯರಾಗಿ ಹುಟ್ಟುತ್ತಾರೆ. ಸುಳ್ಳು ಹೇಳುವದು, ಕಳ್ಳತನ ಮಾಡುವದು, ಕಪಟ, ವ್ಯಭಿಚಾರ, ಪರದ್ರೋಹ, ಪರಾಪಕಾರ, ಪತಿದ್ರೋಹ, ಶ್ವಶ್ರೂಶ್ವಶುರ ನಿಂದೆ, ದೇವತಾನಿಂದೆ, ಧರ್ಮದ್ವೇಷ ಮುಂತಾದ ಪಾಪಕಾರ್ಯಗಳನ್ನು ಮಾಡಿದರೆ ಗಂಡಸರಿಗೆ ಹೇಳಿದ ಶಿಕ್ಷೆ, ದಂಡ, ನರಕವಾಸ, ದುಃಖ ದುರವಸ್ಥೆಗಳು ಹೆಂಗಸರಿಗೂ ಪ್ರಾಪ್ತವಾಗುತ್ತವೆ. ಇದನ್ನೆಲ್ಲಾ ನಾನು ನಿಮಗೆ ಬ್ರಹ್ಮದೇವರು ದೇವರ್ಷಿಗಳಿಗೆ ಹೇಳುವಾಗ ಕೇಳಿದ್ದೇನೆ. ಅವರು ಹೇಳಿದ್ದರಲ್ಲಿ, ಕಿಂಚಿತಾಂಶ ಮಾತ್ರ ನಿಮಗೆ ಬಿತ್ತರಿಸಿದ್ದೇನೆ. ಮತ್ತೆ ಸಮಯ ಸಂದರ್ಭ ಬಂದಾಗ ನಿಮಗೆ ವಿಶೇಷವಾಗಿ ವಿವರಿಸುತ್ತೇನೆ. ನಾನು ಈಗ ಹೇಳಿದ್ದನ್ನೆಲ್ಲ ಕೇಳಿ ಧರ್ಮಾಚರಣೆಯಲ್ಲಿ ಮನಸ್ಸನ್ನು ಮಾಡಿರಿ. ಅಧರ್ಮವನ್ನು ಮಾಡುವದಿಲ್ಲ, ಧರ್ಮವನ್ನು ಬಿಡುವದಿಲ್ಲ, ಎಂದು ದೃಢ ಸಂಕಲ್ಪ ಮಾಡಿರಿ.

## ಅನ್ನದಾನದ ಪ್ರಶಂಸೆ

**ಶೌನಕಾದಿ:-** ಪರಬ್ರಹ್ಮ ಸ್ವರೂಪಿಗಳಾದ ವೇದವ್ಯಾಸರೇ ತಮ್ಮ ಬಾಯಿಂದ ನಾವು ಅಧರ್ಮದಿಂದ ಆಗುವ ದುರ್ಗತಿಯನ್ನು ಕೇಳಿದೆವು. ಈಗ ಧರ್ಮದಿಂದ ಆಗುವ ಸದ್ಗತಿ ಯಾವುದು ಅದನ್ನು ಹೇಳಿರಿ. ಶುಭಾಶುಭ ಕರ್ಮಗಳಿಂದ ಮಾನವರಿಗೆ ಆಗುವ ಸದ್ಗತಿ ದುರ್ಗತಿ ವಿವರಣಗಳನ್ನು ಮಾಡಿರಿ.

**ವೇದವ್ಯಾಸ:-** ದುರ್ಬುದ್ಧಿಯಿಂದ ಪಾಪ ಕರ್ಮಗಳನ್ನು ಮಾಡಿದ ಮನುಷ್ಯನು ನರಕ ದುಃಖವನ್ನು ಹೊಂದುತ್ತಾನೆ. ತಿಳಿದಾಗಲಿ, ತಿಳಿಯದೆ ಆಗಲಿ, ಮೋಹದಿಂದಾಗಲಿ, ಲೋಭದಿಂದಾಗಲಿ ಒಮ್ಮೆ ಅಧರ್ಮ ಮಾಡಿ ಪಶ್ಚಾತ್ತಾಪವಾದರೆ ಅನಂತರ ಎಂದೂ ಅಂತಹ ಪಾಪಕೃತ್ಯವನ್ನು ಪುನಃ ಮಾಡದಿದ್ದರೆ ಅಂತಹ ಅನ್ಯಾಯದ ಕಾರ್ಯವನ್ನು ಮನಃಪೂರ್ವಕವಾಗಿ ಹಳಿದು ಅಂತಹ ದುಷ್ಕೃತ್ಯಮಾಡಿದ್ದಕ್ಕಾಗಿ ಮನಸ್ಸಿನಲ್ಲಿಯೇ ಮತ್ತೆ ಮತ್ತೆ ಅನುತಾಪ, ಪರಿತಾಪ ಪಶ್ಚಾತ್ತಾಪಗಳಿಂದ ಅವನಿಗೆ ತಗುಲಿದ ಪಾಪವೆಲ್ಲವೂ ಲೋಪವಾಗಿ ಹೋಗುವದು. ತಾನು ಮಾಡಿದ ಅಧರ್ಮದ ಕಾರ್ಯವನ್ನು ಧರ್ಮದ ಮರ್ಮವನ್ನು ಬಲ್ಲ ಬ್ರಾಹ್ಮಣರ ಎದುರು ಬಂದು ಹೇಳಿಕೊಳ್ಳಬೇಕು. ದೊಡ್ಡವರ ಮುಂದೆ ತನ್ನ ಅಕಾರ್ಯವನ್ನು ನಿಜವಾಗಿಯೂ ಪಶ್ಚಾತ್ತಾಪಪಟ್ಟು ಹೇಳಿಕೊಂಡರೆ ಹಾವು ತನ್ನ ಪರಿಯನ್ನು ಬಿಟ್ಟಂತೆ ಪಾಪಮುಕ್ತನೂ ಆಗುತ್ತಾನೆ. ಬ್ರಾಹ್ಮಣರಿಗೆ ಬಗೆ ಬಗೆಯ ದಾನವನ್ನು, ಧರ್ಮಗಳನ್ನು ನೀಡಿ ದಕ್ಷಿಣೆಯನ್ನು ಕೊಟ್ಟರೆ ಅವನಿಗೆ ಸ್ವರ್ಗ ರೂಪವಾದ ದಿವ್ಯಗತಿಯು ಪ್ರಾಪ್ತವಾಗುತ್ತದೆ. ಅಧರ್ಮ ಮಾಡಿದ ಮನುಷ್ಯನು ಆ ಪಾಪಕರ್ಮಗಳಿಂದ ಮುಕ್ತನಾಗಬೇಕಾದರೆ ದಾನಧರ್ಮಗಳನ್ನು ಮಾಡಬೇಕೆಂದು ಹೇಳಿದನಷ್ಟೆ! ಆ ದಾನಗಳ ವಿವರಣೆಯನ್ನು ಕೊಡುತ್ತೇನೆ ಕೇಳಿರಿ. ಎಲ್ಲ ದಾನಗಳಲ್ಲಿ ಅನ್ನದಾನವು ಅತ್ಯಂತ ಶ್ರೇಷ್ಠ. ಧರ್ಮದ ಸರಳಮಾರ್ಗ ಅನ್ನದಾನ, ಮನುಷ್ಯನು ಹುಟ್ಟುವದು ಅನ್ನದಿಂದ ಅಲ್ಲವೆ! ಆದುದರಿಂದ

ಅನ್ನವು ಮನುಷ್ಯನಿಗೆ ಪ್ರಾಣವಿದ್ದಂತೆ. ಈ ಪ್ರಪಂಚವೆಲ್ಲವೂ ಹುಟ್ಟಿದ್ದು ಅನ್ನದಿಂದ, ಬಾಳುವದು, ಬದುಕುವದು ಅನ್ನದಿಂದ. ಆದುದರಿಂದ ದೇವತೆಗಳೂ, ಋಷಿಗಳು, ಮಾನವರು, ಪಿತೃಗಳು ಅನ್ನವನ್ನೇ ಪ್ರಶಂಸಿಸುತ್ತಾರೆ. ಈ ಅನ್ನದಾನದಲ್ಲಿ ಒಂದು ಎಚ್ಚರ ಮಾತ್ರ ಅವಶ್ಯಕ. ನ್ಯಾಯಮಾರ್ಗದಿಂದ ಗಳಿಸಿದ ಅನ್ನವನ್ನು ಮಾತ್ರ ಬ್ರಾಹ್ಮಣರಿಗೆ ದಾನ ಮಾಡಬೇಕು. ಆ ಅನ್ನದಾನವು ಒಳ್ಳೆ ಪಾತ್ರದಲ್ಲಿ ಆಗಬೇಕು. ಒಳ್ಳೆ ಪಾತ್ರವೆಂದರೆ ಸ್ವಾಧ್ಯಾಯ ಸದಾಚಾರವುಳ್ಳ ಯೋಗ್ಯ ವಿಪ್ರರು. ಇಂಥ ಜ್ಞಾನೀ, ಧರ್ಮಿಷ್ಠ ಹತ್ತು ಜನ ಬ್ರಾಹ್ಮಣರನ್ನು ಒಂದು ಸಲ ಅನ್ನವಿತ್ತು ಸಂತೋಷವಾಗುವಂತೆ ಸಂತುಷ್ಟ ಮನಸ್ಸಿನಿಂದ ಭೋಜನ ಮಾಡಿಸಿದರೆ ಆ ಮನುಷ್ಯನು ಪಶುಪಕ್ಷ್ಯಾದಿ ತಿರ್ಯಕ್ ಜಾತಿಯಲ್ಲಿ ಎಂದೂ ಹುಟ್ಟುವದಿಲ್ಲ.

ಬಗೆ ಬಗೆಯ ಪಾಪಕೃತ್ಯಗಳಲ್ಲಿ ಸದಾ ಆಸಕ್ತರಾದ ಪಾಪಿ ಮನುಷ್ಯನು ಯೋಗ್ಯರಾದ ಹತ್ತು ಜನ ಬ್ರಾಹ್ಮಣರಿಗೆ ಮಾತ್ರ ಭೋಜನ ಮಾಡಿಸಿದರೆ ಸಾಲದು. ಸಾವಿರಕ್ಕಿಂತ ಮಿಕ್ಕ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಅದರಿಂದ ಅವನ ಪಾಪವೆಲ್ಲವೂ ತೊಡೆದು ಹೋಗುವದು. ಬ್ರಾಹ್ಮಣನು ಸ್ವಯಂ ದರಿದ್ರನಾಗಿದ್ದರೆ ಭಿಕ್ಷೆ ಬೇಡಿಕೊಂಡು ಅನ್ನವನ್ನು ತಂದಾದರೂ ಸ್ವಾಧ್ಯಾಯ ನಿರತನಾದ ಬ್ರಾಹ್ಮಣನಿಗೆ ನೀಡಿದರೆ ಸ್ವರ್ಗಸುಖವನ್ನು ಹೊಂದುತ್ತಾನೆ.

ಕ್ಷತ್ರಿಯರು, ಜ್ಞಾನಿಗಳ ಧನವನ್ನು ಅಪಹರಿಸದೆ ಪ್ರಜೆಗಳನ್ನು ಧರ್ಮದಿಂದ ಪರಿಪಾಲನವನ್ನು ಮಾಡುತ್ತಾ ವೇದಧ್ಯಾಯಿಗಳಿಗೆ ಅನ್ನದಾನ ಮಾಡಿದರೆ ತಾನು ಮಾಡಿದ ಪಾಪದಿಂದ ಪರಿಶುದ್ಧನಾಗುತ್ತಾನೆ. ಇದರಂತೆ ವೈಶ್ಯನು ತಾನು ವ್ಯಾಪಾರ, ಉದ್ಯೋಗ, ಒಕ್ಕಲುತನ ಮುಂತಾದ ವೃತ್ತಿಯಿಂದ ಗಳಿಸಿದ ದ್ರವ್ಯವನ್ನು ಜ್ಞಾನಿಗಳಿಗೆ ಕೊಟ್ಟರೆ ತಾನು ಪಾಪವನ್ನೆಲ್ಲಾ ತೊಳೆದು ಕೊಳ್ಳುತ್ತಾನೆ. ಬಹಳ ಕಷ್ಟಪಟ್ಟು ತನ್ನ ಪ್ರಾಣವನ್ನೇ ಪಣಕ್ಕೆ ಒಡ್ಡಿ ಶೂದ್ರನು ದ್ರವ್ಯವನ್ನು ಸಂಪಾದಿಸಿದ್ದರೆ ಅಂತಹ ಕಷ್ಟಾರ್ಜಿತವಾದ ಧನವನ್ನು ಬಲ್ಲವರಿಗೆ ದಾನ ನೀಡಿದರೆ ಅವನ ಸರ್ವಪಾಪಗಳೂ ಪರಿಹಾರವಾಗುವವು. ಹೀಗೆ ನ್ಯಾಯಮಾರ್ಗದಿಂದ ಅನ್ನವನ್ನು ಸಂಪಾದಿಸಿ ಸತ್ಪಾತ್ರದಲ್ಲಿ ಅದನ್ನು ದಾನ ನೀಡಿದರೆ ಪಾಪಮುಕ್ತನಾಗುವದು ಅಷ್ಟೇ ಅಲ್ಲದೆ ದಿವ್ಯವಾದ ಸದ್ಗತಿಯನ್ನು ಹೊಂದುತ್ತಾನೆ. ಸ್ವರ್ಗದಲ್ಲಿಯೂ ಕೂಡ ಸಕಲ ವಿಧವಾದ ಸುಖೋಪಭೋಗಗಳನ್ನು ಅನುಭವಿಸುತ್ತಾನೆ. ಬ್ರಾಹ್ಮಣನಾದವನು ಮೊದಲು ಜ್ಞಾನಿಗಳ ಭೋಜನವನ್ನು ಮಾಡಿಸಿ ಅನಂತರ ತಾನು ಕೂಡ ಪಂಚಪ್ರಾಣಾಹುತಿಗಳನ್ನು ತನ್ನ ಅನ್ನಸ್ಥನಾದ ವೈಶ್ವಾನರ ಅಗ್ನಿಗೆ ಕೊಟ್ಟು ಊಟವನ್ನು ಮಾಡಬೇಕು. ಮತ್ತು ನಿತ್ಯವೂ ನೂರುಜನ ವೇದವಿದ್ವಾಂಸರಿಗೆ ಭೋಜನವನ್ನು ಮಾಡಿಸಬೇಕು. ಅಂದರೆ ಅಂಥ ಮನುಷ್ಯನಿಗೆ ನರಕವನ್ನು ನೋಡುವ ಪ್ರಸಂಗ ಬರುವದೇ ಇಲ್ಲ. ಇಷ್ಟೇ ಅಲ್ಲದೆ ಆ ಮನುಷ್ಯನು ಪುನಃ ಈ ಸಂಸಾರಕ್ಕೆ ಬರುವದಿಲ್ಲ. ಇಚ್ಛಾಮಾತ್ರದಿಂದಲೇ ಸ್ವರ್ಗದಲ್ಲಿ ಅವನ ಅಪೇಕ್ಷೆಗಳೆಲ್ಲವೂ ಪೂರ್ಣವಾಗುವವು. ಈ ಲೋಕದಲ್ಲಿಯಾದರೂ ಸಕಲ ವಿಧವಾದ ಸುಖಸಂಪದಗಳನ್ನು ಹೊಂದಿ ಯಾವ ರೋಗರುಜಿನಗಳಿಲ್ಲದೆ ಹಣವಂತನಾಗಿ, ಗುಣವಂತನಾಗಿ, ರೂಪವಂತನಾಗಿ ಕೀರ್ತಿವಂತನೂ ಆಗಿ ಸಂತಸದ ಜೀವನವನ್ನು ನಡೆಸುತ್ತಾನೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತನಾಲ್ಕನೆಯ ಅಧ್ಯಾಯ ಮುಗಿದುದು*

—○—

**ಮುನಿಗಳು:-** ಗುರುಗಳೇ, ಮಾನವರು ಮೃತರಾಗಿ ತಮ್ಮ ತಮ್ಮ ಕರ್ಮಾನು ಗುಣವಾಗಿ ಬೇರೆ ಬೇರೆ ಯೋನಿ, ಸ್ಥಾನ, ಅವಸ್ಥೆಗಳಲ್ಲಿರುವರಷ್ಟೇ! ಅವರಿಗೆ ಮಕ್ಕಳಾಗಲಿ ಅನ್ಯ ಬಾಂಧವರಾಗಲಿ ಶ್ರಾದ್ಧವನ್ನು ಹೇಗೆ ಮಾಡಬೇಕು ಅದನ್ನು ತಿಳಿಸಿರಿ.

**ವೇದವ್ಯಾಸ:-** ವಿಪ್ರರೆ, ನಾನು ಶ್ರಾದ್ಧಕಲ್ಪವನ್ನು ಹೇಳುತ್ತೇನೆ. ಜಗನ್ನಾಥನಾದ ವರಾಹ ಸ್ವಾಮಿಯನ್ನು ನಮಸ್ಕರಿಸಿ ನೀವು ಅದನ್ನು ಕೇಳಿರಿ. ಪೂರ್ವಕಾಲದಲ್ಲಿ ಕೋಕಾಮುಖ ತೀರ್ಥದಲ್ಲಿ ಪಿತೃಗಳು ಮುಳುಗಿಹೋಗಿದ್ದರು. ಅವರನ್ನು ಶ್ರಾದ್ಧ ಮಾಡಿ ಭಗವಂತನು ಉದ್ಧಾರ ಮಾಡಿದನು.

**ಮುನಿಗಳು:-** ಪೂಜ್ಯರೇ ಪಿತೃಗಳು ಕೋಕಾಮುಖ ತೀರ್ಥದಲ್ಲಿ ಏಕೆ ಮುಳುಗಿದ್ದರು. ಅವರನ್ನು ವರಾಹರೂಪಿಯಾದ ಭಗವಂತನು ಹೇಗೆ ಉದ್ಧಾರ ಮಾಡಿದನು ಅದನ್ನು ಹೇಳಿರಿ.

**ವೇದವ್ಯಾಸ:-** ಪಿತೃಗಳು ಎಂದರೆ ದೇವಲೋಕದ ಮಾನವರು. ಅವರು ತ್ರೇತಾಯುಗ, ದ್ವಾಪರಯುಗಗಳ ಸಂಧಿಕಾಲದಲ್ಲಿ ಮೇರು ಶಿಖರದ ಮೇಲಿನ ಬಿತ್ತರದ ಭೂಮಿಯಲ್ಲಿ ವಿಶ್ವೇದೇವತೆಗಳೊಂದಿಗೆ ಕುಳಿತುಕೊಂಡಿದ್ದರು. ಆ ಸ್ಥಳಕ್ಕೆ ಚಂದ್ರನ ಅನುಗ್ರಹದಿಂದ ಹುಟ್ಟಿದ ಊರ್ಜಾ ಎನ್ನುವವಳು ಬಂದಳು. ದಿವ್ಯವಾದ ಕಾಂತಿ ಅವಳ ಅಂಗಾಂಗಗಳಲ್ಲಿ ಹೊಮ್ಮುತ್ತಿತ್ತು. ಅವಳು ಆ ಪಿತೃದೇವತೆಗಳ ಎದುರು ಕೈಮುಗಿದು ಕೊಂಡು ನಿಂತಳು. ಆ ಪಿತೃದೇವತೆಗಳು ಅವಳನ್ನು ಕೇಳಿದರು.

''ಶುಭಾಂಗಿಯೇ, ನೀನು ಯಾರು? ನಿನ್ನ ಒಡೆಯನು ಯಾರು? ಎಂದು. ಆಗ ಅವಳು ಕೈಮುಗಿದು ಪಿತೃಗಳಿಗೆ ಮತ್ತು ದೇವತೆಗಳಿಗೆ ವಿಜ್ಞಾಪಿಸಿದಳು. ಪೂಜ್ಯರೇ, ನಾನು ಚಂದ್ರನ ಒಂದು ಕಲೆ. ಊರ್ಜಾ ಎಂದು ಹೆಸರು, ಸ್ವಧಾ ಎಂತಲೂ ನನ್ನನ್ನು ಕರೆಯುತ್ತಾರೆ. ಈಗ ನೀವು ಕೋಕಾ ಎಂದು ಹೊಸ ಹೆಸರನ್ನು ಕೊಟ್ಟಿದ್ದೀರಿ. ಇನ್ನು ನಿನಗೆ ಒಡೆಯನು ಯಾರು ಎಂದು ಕೇಳಿದಿರಷ್ಟೇ! ನೀವೇ ನನ್ನ ಕೈ ಹಿಡಿದು ಒಡೆಯರಾಗಬೇಕೆಂದು ನನ್ನ ಅಪೇಕ್ಷೆಯಿದೆ, ನಾನು ನಿಮ್ಮನ್ನೇ ಅರಸಿ ಬಂದಿದ್ದೇನೆ. ವರಸಿ ನಿಂದಿದ್ದೇನೆ.''

ಆಗ ಪಿತೃಗಳು ಅವಳ ಕಾಂತಿಯನ್ನು ಸೂಸುವ ಮುಖವನ್ನು ನೋಡುತ್ತಾ ನಿಂತು ಕೊಂಡರು. ಚೆಲುವು ತುಂಬಿದ ಆ ಮೊಗದ ಸೊಬಗನ್ನು ಎಷ್ಟು ನೋಡಿದರೂ ಅವರಿಗೆ ತೃಪ್ತಿಯಾಗಲಿಲ್ಲ. ಅವರು ಆ ಊರ್ಜೆಯ ಚಂದ್ರಮಂಡಲದಂತಿದ್ದ ಮುಖಮಂಡಲವನ್ನು ನೆಟ್ಟ ದೃಷ್ಟಿಯಿಂದ ದಿಟ್ಟಿಸುತ್ತಾ ಕುಳಿತುಕೊಂಡರು. ಇದು ಅಲ್ಲಿಯೇ ಕುಳಿತ ವಿಶ್ವೇ ದೇವತೆಗಳಿಗೆ ಸರಿ ಬರಲಿಲ್ಲ. ಕನ್ಯೆಯನ್ನು ಕಂಡಕೂಡಲೇ ದೃಷ್ಟಿಕೀಳದೇ ಅವಳನ್ನೇ ನಿರುಕ್ಷಿಸುತ್ತಾ ಕುಳಿತ ಪಿತೃಗಳು ಯೋಗಭ್ರಷ್ಟರಾಗಿದ್ದಾರೆ ಎಂದು ತಿಳಿದು ಅವರನ್ನು ಅಲ್ಲಿಯೇ ಬಿಟ್ಟು ಸ್ವರ್ಗಕ್ಕೆ ತೆರಳಿದರು.

ಚಂದ್ರನು ಕೂಡ ಮನೆಯಲ್ಲಿ ಮಗಳನ್ನು ಕಾಣದೆ ಚಿಂತಾಕ್ರಾಂತನಾದನು. ಅನಂತರ ಅವನಿಗೆ ಗೊತ್ತಾಯಿತು. ತನ್ನ ಮಗಳು ಪಿತೃಗಳ ಬಳಿಗೆ ಹೋಗಿದ್ದಾಳೆ ಎಂದು. ಚಂದ್ರನು ತನ್ನ ದಿವ್ಯದೃಷ್ಟಿಯಿಂದಲೇ ಇದನ್ನೆಲ್ಲಾ ನೋಡಿದ. ಪಿತೃಗಳು ತನ್ನ ಕನ್ಯೆಯನ್ನು ತಾನು ಕೊಡದಿದ್ದರೂ ತಮ್ಮ ತಪೋಬಲದಿಂದ ಪರಿಗ್ರಹಿಸಿದ್ದಾರೆ ಎಂದು ತಿಳಿದು ಬಂದಿತು.

ಅವನಿಗೆ ಕೋಪವೂ ಬಂದಿತು. ಅವನು ಶಾಪವನ್ನು ಕೊಟ್ಟುಬಿಟ್ಟ.

"ಪಿತೃಗಳೇ, ನಾನು ಕನ್ಯಾದಾನ ಮಾಡಿ ಕೊಡದೇ ನೀವಾಗಿಯೇ ನನ್ನ ಮಗಳನ್ನು ಸ್ವೀಕರಿಸಿ ಬಿಟ್ಟಿರಿ. ಆದುದರಿಂದ ಮೂರ್ಖರಾದ ನೀವು ಯೋಗಭ್ರಷ್ಟರಾಗಿ ಭೂಮಿಯಲ್ಲಿ ಪತಿತರಾಗಿರಿ. ಈ ನನ್ನ ಮಗಳಾದ ಊರ್ಜೆಯು ಕೂಡ ತನ್ನ ತಂದೆಯಾದ ನಾನು ಇಲ್ಲಿಯೇ ಇದ್ದರೂ ನನ್ನನ್ನು ಕೇಳದೇ ಸ್ವತಂತ್ರಳಾಗಿ ನಿಮ್ಮನ್ನು ಪತಿ ಎಂದು ವರಿಸಿ ಬಿಟ್ಟಿದ್ದಾಳೆ. ಅವಳ ಬದುಕು ಧರ್ಮಬಿಟ್ಟು ಇಳುಕಲಿಗೆ ಬಿದ್ದಿದೆ. ಆದುದರಿಂದ ಅವಳು ಈ ಪರ್ವತದಿಂದ ಕೋಕಾ ಎಂಬ ನದಿಯಾಗಿ ಹರಿಯಲಿ" ಎಂದು. ಹೀಗೆ ಚಂದ್ರನಿಂದ ಪಿತೃಗಳು ಶಪಿತರಾಗಿ ಯೋಗ ಭ್ರಷ್ಟರಾಗಿ ಹಿಮಗಿರಿಯ ಪ್ರತ್ಯಂತ ಪ್ರದೇಶದಲ್ಲಿ ಬಿದ್ದುಬಿಟ್ಟರು. ಊರ್ಜಾ ಎಂಬ ಚಂದ್ರ ಕನ್ಯೆಯು ಕೂಡ ಅದೇ ಹಿಮಾಲಯದ ವಿಸ್ತ್ರತವಾದ ಪ್ರಸ್ತ ಪ್ರದೇಶದಲ್ಲಿ ಬಿದ್ದಳು. ಆ ಹಿಮಾಚಲದಲ್ಲಿ ಸಪ್ತ ಸಾಮುದ್ರ ಎಂಬ ಪುಣ್ಯಕರವಾದ ಕ್ಷೇತ್ರವು ಇರುತ್ತದೆ. ಚಂದ್ರಪುತ್ರಿಯಾದ ಊರ್ಜೆಯು ತಂದೆಯ ಶಾಪದಿಂದ ಅಲ್ಲಿಬಿದ್ದು ಅಲ್ಲಿಂದ ನದಿಯಾಗಿ ವೇಗದಿಂದ ಹರಿದಳು. ಆ ಉತ್ತುಂಗವಾದ ಗಿರಿಶೃಂಗವನ್ನು ನೀರಿನಿಂದ ತೋಯಿಸಿ ಹರಿಯುವ ಆ ಕೋಕಾ ನದಿಯದಂಡೆಯ ಮೇಲೆ ನೂರಾರು ತೀರ್ಥಗಳು ಉಂಟಾಗಿರುತ್ತವೆ. ಯೋಗಭ್ರಷ್ಟರಾದ ಪಿತೃಗಳು ಆ ನದಿಯನ್ನೇ ನೋಡಿದರು. ಆದರೆ ಅವಳು ತಾವು ಪ್ರೇಮಿಸಿದ ಊರ್ಜಾ ಕನ್ಯೆಯೇ ಎಂದು ಅವರಿಗೆ ತಿಳಿಯಲಿಲ್ಲ. ಪಿತೃಗಳಿಗೆ ಬಹಳ ಹಸಿವೆಯಾಗಿದ್ದಿತು. ಹಿಮಗಿರಿಗೆ ಪಿತೃಗಳ ಈ ಕ್ಷುಧಾ ಸಂಕಟವು ತಿಳಿಯಿತು. ಅವನು ಕೂಡಲೇ ಜೇನಿನಂತೆ ರುಚಿಯಾದ ಹಾಲನ್ನು ಹಿಂಡುವ ಒಂದುಹಸುವನ್ನೂ ಮತ್ತು ಒಂದು ಬೋರೆ ಹಣ್ಣನ್ನೂ ಪಿತೃಗಳ ಬಳಿಗೆ ಕಳಿಸಿಕೊಟ್ಟನು. ಆ ಹಸು ಹಾಲನ್ನು ಮಾತ್ರವಲ್ಲದೆ ಜೇನು ತುಪ್ಪವನ್ನೂ ಕೂಡ ಕರೆಯುತ್ತಿತ್ತು. ಹಸಿವೆಯಿಂದ ಕಸಿವಿಸಿ ಪಡುವ ಪಿತೃಗಳು ತಾವು ಕೊಡಮಾಡಿದ ಹಸುವಿನ ಹಾಲು, ಜೇನುತುಪ್ಪ, ಬದರಿ ಫಲ, ಕೋಕಾನದಿಯ ನೀರು ನಾಲ್ಕನ್ನು ಸ್ವೀಕರಿಸಿ ಹಸಿವೆಯನ್ನು ಹಿಂಗಿಸಿ ಕೊಳ್ಳಲಿ ಎಂದು ಹಿಮಾಚಲನು ಹಾರೈಸಿದನು. ಪಿತೃಗಳು ಚಂದ್ರನ ಆಸೆ ಆಶಯಗಳನ್ನು ಅನುಸರಿಸಿ, ಅವರು ಕೊಟ್ಟ ಹಸುವಿನ ಹಾಲು ಕುಡಿದು, ಜೇನುತುಪ್ಪವನ್ನು ಸ್ವೀಕರಿಸಿ, ಬದರೀಹಣ್ಣನ್ನು ತಿಂದು, ಕೋಕಾನದಿಯ ನೀರನ್ನು ಕುಡಿದು ಆ ಬೆಟ್ಟದ ಮೇಲೆ ಹತ್ತು ಸಾವಿರ ವರ್ಷ ವಾಸ ಮಾಡಿದರು.

ಹೀಗೆ ಲೋಕದಲ್ಲಿ ಪಿತೃಗಳೂ ಸ್ವಧಾದೇವಿಯೂ ಇಲ್ಲದಂತಾದಾಗ ದೈತ್ಯರು ಪ್ರಬಲರಾದರು. ಅವರು ಪಿತೃಗಳು ಕುಳಿತ ಸ್ಥಳವನ್ನು ಗುರುತಿಸಿಕೊಂಡು ಕೋಕಾನದೀ ತೀರಕ್ಕೆ ಧಾವಿಸಿ ಬಂದರು. ಅದನ್ನು ಕಂಡು ಪಿತೃಗಳು ಸಿಟ್ಟಿನಿಂದ ಆ ಗುಡ್ಡಕ್ಕೆ ಅಡ್ಡವಾಗಿ ಇಟ್ಟ ದೊಡ್ಡ ಹೆಬ್ಬಂಡೆಯನ್ನು ಕಿತ್ತಿ ಎತ್ತಿ ಹಿಡಿದರು. ಕೋಕಾನದಿಯ ಪ್ರವಾಹವನ್ನು ತಡೆದು ಹಿಡಿದ ಆ ಬಂಡೆಯನ್ನು ಎತ್ತಿದ ಕೂಡಲೇ ಆ ನದಿ ಪ್ರವಾಹವೆಲ್ಲವೂ ಆ ಪಿತೃಗಳ ಮೇಲೆಯೇ ನುಗ್ಗಿ ಅವರೆಲ್ಲರನ್ನೂ ಮರೆಮಾಡಿ ಬಿಟ್ಟಿತು.

ಹೀಗೆ ಪಿತೃಗಳು ಕಣ್ಣಿಗೆ ಕಾಣದಂತಾದ ಕೂಡಲೇ ದೈತ್ಯರೆಲ್ಲರೂ ಅಲ್ಲಿಂದ ಹೊರಟುಹೋದರು. ನೀರಿನಲ್ಲಿ ಮುಳುಗಿ ಹೋದ ಪಿತೃಗಳು ಅಲ್ಲಿ ಬೇರೆ ಏನೂ ಆಹಾರ ದೊರಯದೇ ಹಸಿವೆಯಿಂದ ತೊಳಲಿ ಬಳಲಿ, ನೀರಿನಲ್ಲಿಯೇ ಮುಳುಗಿ ನಾರಾಯಣನಿಗೆ ಶರಣುಹೋಗಿ ಭಕ್ತಿಯಿಂದ ಭಗವಂತನನ್ನು ಸ್ತೋತ್ರ ಮಾಡಿದರು.

## ಪಿತೃಗಳು ಅಂದದ್ದು

**ಜಯಸ್ವ ಗೋವಿಂದ ಜಗನ್ನಿವಾಸ ಜನಾರ್ದನಾಸ್ಮಾನ್ ಸಲಿಲಾಂತರಸ್ಥಾನ್ ।**
**ಉದ್ಧರ್ತುಮರ್ಹಸ್ಯನಘಪ್ರಭಾವ ಜಯೋಽಸ್ತು ನಃ ಕೇಶವ ತೇ ಪ್ರಸಾದಾತ್ ॥**

''ಜಗದಾಧಾರನಾದ ಗೋವಿಂದನೇ, ನಿನಗೆ ಜಯವಾಗಲಿ. ಕೇಶವ, ನಿನ್ನ ಪ್ರಸಾದಿಂದ ನಮಗೂ ಜಯವಾಗಲಿ. ನಾವು ಈಗ ಕೋಕಾನದಿಯ ನೀರಿನಲ್ಲಿ ಮುಳುಗಿ ಹೋಗಿದ್ದೇವೆ ನಮ್ಮನ್ನು ಇಲ್ಲಿಂದ ಉದ್ಧಾರ ಮಾಡು. ಮಹಾಪ್ರಭಾವಶಾಲಿಯಲ್ಲವೇ ನೀನು! ಘೋರಾ ಕಾರರಾದ ಈ ದೈತ್ಯರನ್ನು ನೋಡಿ ನಾವು ಹೆದರಿ ಹೋಗಿದ್ದೇವೆ. ಅದಕ್ಕಾಗಿಯೆ ನಿನ್ನ ಪಾದ ಕಮಲಗಳಿಗೆ ಶರಣು ಹೋಗಿದ್ದೇವೆ. ನೀನೇ ನಮಗೆ ತಂದೆ ಈ ಜಗತ್ತಿಗೂ ತಂದೆ. ನೀನೇ ಈ ರಾಕ್ಷಸರಿಂದ ನಮ್ಮನ್ನು ರಕ್ಷಿಸು ನಿನ್ನನ್ನು ಯಾವ ದೈತ್ಯಾಧಮನೂ ಕಾಡಲಾರ, ನೋಡಲಾರ ನಿನ್ನ ನಾಮಸಂಕೀರ್ತನೆಯಿಂದಲೇ ಭೂತಗಳು ಓಡಿಹೋಗುತ್ತವೆ.

**ವೇದವ್ಯಾಸ:-** ಜಲಮಗ್ನರಾದ ಪಿತೃಗಳ ಈ ದೀನ ಪ್ರಾರ್ಥನೆಯಿಂದ ಪರಮಾತ್ಮನು ಸಂತುಷ್ಟನಾದ. ಸೂಕರ ಆಕಾರವನ್ನು ತಾಳಿ ಪಿತೃಗಳ ಉದ್ಧಾರಕ್ಕಾಗಿ ಟೊಂಕ ಕಟ್ಟಿದ. ಕೋಕಾನದಿಯ ನೀರಿನ ನಟ್ಟನಡುವೆ ಮುಳುಗಿ ಪಿತೃಗಳು ದೊಡ್ಡದಾದ ಆ ಗಂಡಶಿಲೆಯನ್ನು ಎತ್ತಿ ಹಿಡಿದು ನಿಂತುಕೊಂಡಿದ್ದರು. ಅದನ್ನು ಕಂಡು ಭಗವಂತನ ಎದೆ ಕರಗಿ ಅವರನ್ನು ಈ ಸಂಕಟದಿಂದ ಉದ್ಧಾರ ಮಾಡಬೇಕೆಂದು ನಿರ್ಧರಿಸಿದನು. ವರಾಹರೂಪತಾಳಿದ ಆ ಮಹಾವಿಷ್ಣು ತನ್ನ ಕೋರೆದಾಡೆಯಿಂದ ಆ ಬಂಡೆಯನ್ನು ಒಡೆದು ಎತ್ತಿ ಆಚೆಗೆ ಒಗೆದು ಪಿತೃಗಳನ್ನು ನದೀಪ್ರವಾಹದಿಂದಲೂ, ಶಿಲಾಭಾರದಿಂದಲೂ ಪಾರು ಮಾಡಿದ. ಈ ಸಂದರ್ಭದಲ್ಲಿ ಪಿತೃಗಳು ವರಾಹದೇವರ ದೇಹಕ್ಕೆ ತಾಗಿ ನಿಂತು ಬಂಗಾರ ಬಣ್ಣದಿಂದ ಶೋಭಿಸಿದರು. ಆ ತೀರ್ಥವು ವಿಷ್ಣುತೀರ್ಥ ಎಂದು ಹೆಸರಾಯಿತು.

ಅನಂತರ ಆ ವರಾಹದೇವರ ಕೂದಲುಗಳಿಂದ ದರ್ಭೆಗಳು, ಬೆವರಿನಿಂದ ಎಳ್ಳುಗಳೂ ಮತ್ತು ಹೋಮಾಗ್ನಿಯೂ ಉತ್ಪನ್ನವಾದವು. ವರಾಹರೂಪಿಯಾದ ಶ್ರೀಹರಿಯು ಪ್ರಸನ್ನ ಮನಸ್ಸಿನಿಂದ ತನ್ನ ಕೂದಲುಗಳಂದ ಉತ್ಪನ್ನವಾದ ದರ್ಭೆಗಳನ್ನೂ ಬೆವರನಿಂದ ಉಂಟಾದ ಎಳ್ಳ ಕಾಳುಗಳನ್ನೂ ಶ್ರಾದ್ಧಕ್ಕಾಗಿ ಸ್ವೀಕರಿಸಿದ. ಸೂರ್ಯನಂತೆ ಹೊಳೆಯುವ ಒಂದು ಜ್ಯೋತಿಯನ್ನು ಉಲ್ಕು ಎಂದರೆ ಸುಟ್ಟ ದರ್ಭೆದ ತುದಿಯನ್ನಾಗಿ ಮಾಡಿಕೊಂಡ. ಆ ಕೋಕಾಮುಖದ ತೀರ್ಥವನ್ನೇ ಅರ್ಚನೆ ಪಾತ್ರವನ್ನಾಗಿ ಹೊಂದಿಸಿ ಕೊಂಡ. ಪರ್ವತದ ತುದಿಯಲ್ಲಿದ್ದ, ಪಿತೃ ಯಜ್ಞಕ್ಕೆ ಬೇಕಾಗುವ ಔಷಧಿ ರಸಗಳನ್ನೂ ಹಾಲು, ತುಪ್ಪ ಜೇನುತುಪ್ಪ ಹೂ, ಗಂಧ, ಧೂಪ, ಅನುಲೇಪ ಮೊದಲಾದವುಗಳನ್ನೂ ತೆಗೆದುಕೊಂಡ. ಸರೋವರದಿಂದ ಗೋವನ್ನು, ಸಮುದ್ರದಿಂದ ರತ್ನವನ್ನು ಶುದ್ಧವಾದ ತನ್ನ ಗಂಗೆಯ ನೀರನ್ನು ಸ್ವೀಕರಿಸಿ ಒಂದು ವಟವೃಕ್ಷದ ಕೆಳಗೆ ಕುಳಿತುಕೊಂಡ.

ತನ್ನ ಕೋರೆ ದಾಡಿಯಿಂದ ಭೂಮಿಯನ್ನು ಉಲ್ಲೇಖಿಸಿ ಗೆರೆ ಹಾಕಿದ ಅನಂತರ ನೀರಿನಿಂದ ಸಿಂಪಡಿಸಿದ. ಅನಂತರ ಮತ್ತು ಒಮ್ಮೆ ಆ ಭೂಮಿಯನ್ನು ತನ್ನ ಕೂದಲು ಗಳಿಂದ ಹುಟ್ಟಿದ ದರ್ಭೆಗಳಿಂದ ಉಲ್ಲೇಖಿಸಿದ ಮತ್ತು ಉರಿಯುವ ದರ್ಭೆಯ ತುದಿಯಿಂದ ಅದನ್ನು ಸುತ್ತು ಹಾಕಿ ಮತ್ತೆ ಮತ್ತೆ ನೀರಿನಿಂದ ಪ್ರೋಕ್ಷಣ ಮಾಡಿ ಪೂರ್ವಾಭಿಮುಖವಾಗಿ

ದರ್ಭೆಗಳನ್ನು ಹಾಸಿದ. ಅಲ್ಲಿಯೇ ಇದ್ದ ಪಿತೃಗಳನ್ನು ಅನುಮತಿ ಕೇಳಿದ "ಕರಿಷ್ಯೆ ಪಿತೃತರ್ಪಣಂ" "ತರ್ಪಣ ಮಾಡುತ್ತೇನೆ. ಅಪ್ಪಣೆಯನ್ನು ಕೊಡಿರಿ" ಎಂದು ಕೇಳಿಕೊಂಡ. ಆಗ ಪಿತೃಗಳು "ಕುರುಷ್ವ" (ಮಾಡು) ಎಂದು ಹೇಳಿದ ಬಳಿಕ ವರಾಹ ದೇವರು ವಿಶ್ವೇ ದೇವತೆಗಳನ್ನು ಆವಾಹನೆ ಮಾಡಿದ. ಆವಾಹಿತರಾದ ಪಿತೃಗಳಿಗೆ ಮಂತ್ರೋಚ್ಚಾರಣ ಪೂರ್ವಕ ಆಸನಗಳನ್ನು ನೀಡಿದ. ವೇದೋಕ್ತ ವಿಧಿಯಿಂದ ವಿಶ್ವೇದೇವತೆಗಳನ್ನು ಆಹ್ವಾನ ಮಾಡಿದ ಬಳಿಕ ಶ್ರೀಹರಿಯು ಅಕ್ಷತೆಗಳಿಂದ ದೇವತಾ ರಕ್ಷಣೆಯನ್ನು ಮಾಡಿದ.

**ಅಕ್ಷತಾಸ್ತು ಯಔಷಧ್ಯಃ ಸರ್ವದೇವಾಂಶ ಸಂಭವಾಃ**
**ರಕ್ಷಂತಿ ಸರ್ವತ್ರ ದಿಶೋ ರಕ್ಷಾರ್ಥಂ ನಿರ್ಮಿತಾ ಹಿತೇ ॥**

ಜವಗೋಧಿ, ಔಷಧಿ, ಅಕ್ಷತೆಗಳನ್ನು ಇವೆಲ್ಲವುಗಳು ಸರ್ವದೇವ ಮಯನಾದ ಶ್ರೀವಿಷ್ಣುವಿನಿಂದಲೇ ನಿರ್ಮಿತವಾಗಿರುತ್ತವೆ. ಆದುದರಿಂದ ಅವು ಸರ್ವದಿಗ್ದೇಶಗಳನ್ನು ರಕ್ಷಿಸುತ್ತವೆ.

**ದೇವದಾನವದೈತ್ಯೇಷು ಯಕ್ಷರಕ್ಷಸ್ಸು ಚೈವಹಿ ।**
**ನ ಹಿ ಕಶ್ಚಿತ್ ಕ್ಷಯಂ ತೇಷಾಂ ಕರ್ತುಂ ಶಕ್ತಃ ಚರಾಚರೇ ॥**

ದೇವ, ದಾನವ, ದೈತ್ಯ, ಯಕ್ಷ, ರಾಕ್ಷಸರಲ್ಲಿ ಯಾವನೂ ಅಕ್ಷತೆ ಹಾಕಿದವರನ್ನು ನಾಶಮಾಡಲು ಸಮರ್ಥವಾಗಲಾರರು.

**ನ ಕೇನಚಿತ್ ಕ್ಷತಾಯಸ್ಮಾತ್ ಶ್ರೀಹ್ಯಕ್ಷತಾಃ ಕೃತಾಃ ।**
**ದೇವಾನಾಂ ತೇ ರಕ್ಷಾರ್ಥಂ ನಿಯುಕ್ತಾ ವಿಷ್ಣುನಾ ಪುರಾ ॥**

ಆ ಅಕ್ಷತೆಗಳನ್ನು ಯಾರ ಮೇಲೆ ಹಾಕಿರುವದೋ ಅವರಿಗೆ ಯಾರಿಂದಲೂ ನಾಶವಾಗುವದು ಇಲ್ಲ. ಆದುದರಿಂದ ಅವುಗಳಿಗೆ ಅಕ್ಷತಾ ಎಂದು ಪೂರ್ವಕಾಲದಲ್ಲಿ ಅಧೋಕ್ಷಜನು ನಿರ್ಮಿಸಿದ್ದಾನೆ.

ವರಾಹರೂಪಿಯಾದ ಪರಮಾತ್ಮನು ಕುಶ, ಗಂಧ, ಅಕ್ಕಿಕಾಳು ಹೂಗಳಿಂದ ವಿಶ್ವೇದೇವತೆಗಳನ್ನು ಪೂಜೆಮಾಡಿ. "ಪಿತೃನ್ ಆವಾಹಯಿಷ್ಯಾಮಿ ಯೇ ದಿವ್ಯಾ ಯೇಚ ಮಾನುಷಾಃ" ಭೂಲೋಕ ದಲ್ಲಿಯೇ ಇರಲಿ ಸ್ವರ್ಗಲೋಕದಲ್ಲಿಯೇ ಇರಲಿ ಪಿತೃಗಳನ್ನು ಆವಾಹನ ಮಾಡುತ್ತೇನೆ. ನೀವು ಅಪ್ಪಣೆ ನೀಡಿರಿ ಎಂದು ಕೇಳಿಕೊಂಡನು. ಆಗ ವಿಶ್ವೇದೇವತೆಗಳು "ಆವಾಹಯಸ್ವ" "ಆವಾಹನ ಮಾಡು" ಎಂದು ಹೇಳುವರು. ಅನಂತರ ಭಗವಂತನು ಪಿತೃಗಳನ್ನು ಎಡಗಾಲ ಮೇಲೆ ಮಡಿಚಿದ ಬಲಮಂಡೆಯ ಮೇಲೆ ಎಡಗೈಯಲ್ಲಿ ಎಳ್ಳು ದರ್ಭೆಗಳನ್ನು ಹಿಡಿದು ಅದರ ಮೇಲೆ ಬಲಗೈಯನ್ನು ಮುಚ್ಚಿ ಪಿತೃಗಳನ್ನು ಆವಾಹನ ಮಾಡಿದನು. ನಂತರ "ಅಪಹತಾ ಅಸುರಾ ರಕ್ಷಾಂಸಿ ಪಿಶಾಚಾಃ ಯೇಕ್ಷ ಯಂತಿ ಪೃಥಿವೀ ಮನು" ಎಂಬ ಮಂತ್ರವನ್ನು ಹೇಳಿ ನೈರುತ್ಯ ದಿಕ್ಕಿನಿಂದ ಆರಂಭಿಸಿ ಅಷ್ಟ ದಿಕ್‌ಗಳಿಗೆ ಅಪಸವ್ಯದಿಂದ ತಿಲಗಳನ್ನು (ಎಳ್ಳು) ಹಾಕಿದನು. ಅನಂತರ ಪಿತೃಗಳ ನಾಮ ಗೋತ್ರ ಉಚ್ಚರಿಸಿ ಆವಾಹಿಸಿದನು. ಅನಂತರ "ಅಪ್ಯಾಯಯಂತು ಸಂವತ್ಸರೈಃ" ಎಂಬ ಮಂತ್ರ ಹೇಳಿ ಆ ಪಿತೃ ಗಳಿಗೆ ಅರ್ಘ್ಯವನ್ನು ಕೊಟ್ಟನು. "ಯಾಸ್ಮಿಷ್ಪೆಂತ್ಯ ಮೃತಾವಾಚೋಯನ್ನೇತಿಚ ಪಿತುಃ ಪಿತುಃ॥ ಯಸ್ಮೀ ಪಿತಾಮಹೇತ್ಯೇವಂ ದದಾ ವರ್ಷ್ಯಂ

ಪಿತಾಮಹೇ। ಯಸ್ಮೀ ಪ್ರಪಿತಾಮಹೇತಿ ದದೌಚ ಪ್ರಪಿತಾಮಹೆ ಕುಶಗಂಧ ತಿಲೋ ಮ್ಮಿಶ್ರಂ ಸ್ವಪುಷ್ಪ ಮಪಸವ್ಯತಃ''

ವರಾಹನು 'ಯಾಸ್ತ್ವಷ್ಪಂತ್ಯಾಮೃತಾವಾಚಾ'' ಎಂಬ ಮಂತ್ರದಿಂದ ತನ್ನ ಪಿತಾ, ಪಿತಾಮಹಾ, ಪ್ರಪಿತಾಮಹಾರಿಗೆ ಕುಶ, ಗಂಧ, ಎಳ್ಳು, ಹಾಲು, ಮೊಸರು, ತುಪ್ಪಗಳಿಂದ ನೀರಿನಲ್ಲಿ ಮಿಶ್ರಮಾಡಿ ಅಪಸವ್ಯನಾಗಿ ಉಚ್ಚಾರಮಾಡಿ ಸವ್ಯನಾಗಿ ಅರ್ಘ್ಯವನ್ನು ನೀಡಿದನು. ಅದರಂತೆ ತಾಯಿಯ ತಂದೆ, ತಾತ, ಮುತ್ತಾತರಿಗೂ ಅರ್ಘ್ಯವನ್ನು ನೀಡಿದ ಬಳಿಕ ಅವರಿಗೆ ಗಂಧ ಧೂಪ ದೀಪಗಳನ್ನು ನೀಡಿ ''ಆದಿತ್ಯಾ ವಸವೋ ರುದ್ರಾ..'' ಎಂಬ ಮಂತ್ರಗಳಿಂದ ಭಕ್ತಿಯಿಂದ ಪೂಜೆ ಮಾಡಿದನು.

ಅನಂತರ ತುಪ್ಪ ಎಳ್ಳು ದರ್ಭೆಗಳನ್ನು ಹಾಕಿ ಕಲಿಸಿದ ಅನ್ನವನ್ನು ತೆಗೆದುಕೊಂಡು ''ಅಗ್ನೌ ಕರಿಷ್ಯೆ'' ಎಂದು ಮುನಿಗಳನ್ನು ಕೇಳಿಕೊಂಡ. ಅವರು ''ಕುರುಷ್ವ'' ಎಂದು ಹೇಳಿದ ಬಳಿಕ ಸೋಮ, ಅಗ್ನಿ, ಯಮ ಮೂವರಿಗೆ ಆಹುತಿಗಳನ್ನು ನೀಡಿದ ''ಯಮಾಮಕೇತಿ'' ಎಂಬ ಯಜುರ್ವೇದದ ಮಂತ್ರಗಳನ್ನು ಜಪ ಮಾಡಿದ. ಹೀಗೆ ''ಸೋಮಾಯ ನಮಃ ಯಮಾಯ ನಮಃ ಅಗ್ನಿಯೇ ನಮಃ'' ಎಂದು ಮೂರು ಆಹುತಿ ಕೊಟ್ಟ ಬಳಿಕ ಹೋಮ ಮಾಡಿ ಉಳಿದ ಅನ್ನವನ್ನು ಹೆಸರು ಗೋತ್ರ ಉಚ್ಚಾರಣ ಪೂರ್ವಕವಾಗಿ ತಂದೆ ತಾತ ಮುತ್ತಾತರವರಿಗೆ ಮೂರು ಮೂರು ಆಹುತಿಗಳನ್ನು ನೀಡಿದ. ಅದರಂದ ಉಳಿದ ಅನ್ನವನ್ನು ಪಿಂಡ ಪಾತ್ರೆಯಲ್ಲಿಯೇ ಇರಿಸಿದ. ಅನಂತರ ದೇವ ಪಾತ್ರ ಮತ್ತು ಪಿತೃಗಳಿಗೆ ಒಳ್ಳೆಯ ಮಧುರವಾದ, ಸರಸವಾದ, ರುಚಿಕರವಾದ ಭಕ್ಷ ಭೋಜ್ಯ ಅಡಿಗೆಗಳನ್ನು ಬಡಿಸಬೇಕು. ಬಡಿಸಿದ. ಶ್ರಾದ್ಧಕ್ಕಾಗಿ ಸಿದ್ದ ಪಡಿಸಿದ ಪಾಕವು ತಾಜಾ ಇರಬೇಕು ತಂಗಳಾಗಬಾರದು. ಷಡ್ರಸಗಳಿಂದ ಒಡಗೂಡಿರಬೇಕು. ತರಕಾರಿ ಹಣ್ಣುಗಳಿಂದ ಕೂಡಿ ಇರಬೇಕು. ಇಂತಹ ಭಕ್ಷ್ಯ ಭೋಜ್ಯ ಅಡಿಗೆಯನ್ನು ದೇವ ಪಾತ್ರದಲ್ಲಿಯೂ ಪಿತೃ ಪಾತ್ರದಲ್ಲಿಯೂ ಬಡಿಸಿ ಅದರ ಮೇಲೆ ಜೇನುತುಪ್ಪವನ್ನು ಹಾಕಿ ಮೇಲೆ ''ಪೃಥ್ವೀ ತೇ ಪಾತ್ರಂ'' ಎಂಬ ಮಂತ್ರವನ್ನು ಪಠಿಸಬೇಕು. ಆಮೇಲೆ ಮಧುವಾತಾ ಎಂಬ ಮಂತ್ರದಿಂದ ಜೇನು ತುಪ್ಪವನ್ನು ಹಾಕಬೇಕು. ಹೀಗೆ ದೇವಸ್ಥಾನ ಪಿತೃಸ್ಥಾನ ಬ್ರಾಹ್ಮಣರೂ ಊಟಮಾಡುವಾಗ ತ್ರಿಸುಪರ್ಣ, ತ್ರಿಮಧ, ಬೃಹದಾರಣ್ಯಕೋಪನಿಷತ್ತಿನ ಭಾಗ ಸೌದಸೂಕ್ತ, ಪುರುಷಸೂಕ್ತ ಎಂಬ ಐದು ಮಂತ್ರಗಳನ್ನು ಹೇಳಿ ''ನಿಧಾನವಾಗಿ ಭೋಜನವಾಗಲಿ'' ಎಂದು ಕೈಮುಗಿದು ಬಿನ್ನವಿಸಬೇಕು. ಬ್ರಾಹ್ಮಣರ ಭೋಜನ ಸಮಾಪ್ತಿ ಕಾಲದಲ್ಲಿ ''ತೃಪ್ತಾಸ್ಥ ತೃಪ್ತರಾಗಿರಿ'' ಎಂದು ಅವರನ್ನು ಕೇಳಬೇಕು. ''ತೃಪ್ತಾಸ್ಮಃ'' ನಾವು ತೃಪ್ತರಾಗಿದ್ದೇವೆ ಎಂದ ಅವರು ಹೇಳಬೇಕು. ಅನಂತರ ಅರ್ಚನ ಪಾತ್ರೆಯಲ್ಲಿಯ ನೀರನ್ನು ಪಾಣಾಹೋಮ ಅನ್ನವನ್ನು ತೆಗೆದುಕೊಂಡು ಸವ್ಯದಿಂದ ದೇವಪಾತ್ರೆಯ ಮುಂದೆ ಅಪಸವ್ಯದಿಂದ ಪಿತೃಪಾತ್ರೆಯ ಮುಂದೆ ಬಿಟ್ಟನು.

ನಂತರ ಪಿಂಡಪ್ರದಾನಕ್ಕಾಗಿ ದರ್ಭೆಯಿಂದ ಭೂಮಿಯನ್ನು ಕೊರೆದು ಆಚ್ಛಾದನ ಮಾಡಿದನು. ದಕ್ಷಿಗಾಗ್ರವಾಗಿ ದರ್ಭೆಗಳನ್ನು ಹಾಸಿ ತುದಿ ಮೊದಲು ಕತ್ತರಿಸದಿರುವ ಸಾಗ್ರ ಸಮಗ್ರವಾದ ದರ್ಭೆಗಳ ಮೇಲೆ ಆಸನವನ್ನು ಕಲ್ಪಿಸಿದನು. ಅದರ ಮೇಲೆ ಗಂಧ ಏರಿಸಿ, ಹೂಗಳನ್ನು ಅರ್ಪಿಸಿದನು. ಬಳಿಕ ''ಪ್ರಥ್ವೀದಧಿ'' ಎಂಬ ಮಂತ್ರದಿಂದ ತಂದೆ ತಾತ

ಮುತ್ತಾತರಿಗೆ ಕ್ರಮವಾಗಿ ಪಿಂಡವನ್ನು ಇರಿಸಿದನು. ಇದರಂತೆ ತಾಯಿಯ ತಂದೆ ತಾತ ಮುತ್ತಾತರಿಗೂ ಉಚ್ಚಾರಮಾಡಿ ಪಿಂಡಗಳನ್ನು ಇಟ್ಟನು. ಪಿಂಡವನ್ನು ಇರಿಸಿ ಉಳಿದ ಅನ್ನವನ್ನು ಲೇಪ ಭೋಜಿಗಳಿಗಾಗಿ ನೀಡಿದನು. ''ಏತದ್ವಃ ಪಿತರೋ'' ಎಂಬ ಮಂತ್ರ ಹೇಳಿ ಶುಭ್ರವಾದ ಸ್ವಚ್ಛವಾದ ವಸ್ತ್ರಗಳನ್ನು ಅರ್ಪಿಸಿದನು. ಗಂಧ ಪುಷ್ಪಾಕ್ಷತೆಗಳನ್ನು ಕೊಟ್ಟು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದನು. ಅನಂತರ ತಾನು ಆಚಮನ ಮಾಡಿ ಬಳಿಕ ಮೊದಲು ಪಿತೃಪಾತ್ರಸ್ಥರಾದ ಬ್ರಾಹ್ಮಣರಿಗೂ ನಂತರ ದೇವಪಾತ್ರಸ್ಥರಾದ ಬ್ರಾಹ್ಮಣರಿಗೂ ಆಚಮನ ನೀಡಿದನು. ಬಳಿಕ ಆ ಭೂಮಿಯನ್ನು ಸಂಪ್ರೋಕ್ಷಿಸಿ ಇಟ್ಟಂಥ ಪಿಂಡಗಳಿಗೆ ಗಂಧಪುಷ್ಪ ಅಕ್ಷತಾದಿಗಳನ್ನು ಕೊಟ್ಟು ಪಾರ್ವಣ ಪೂಜೆಯನ್ನು ಮಾಡಿದನು.

ಪೂಜೆಯಾದ ಬಳಿಕ ''ಊರ್ಜಂ ವಹಂತಿ'' ಎಂಬ ಮಂತ್ರವನ್ನೂ ಜಪಿಸಿ ಒಂದು ಎಲೆಯಲ್ಲಿ ಹಾಲು, ಜೇನುತುಪ್ಪ, ಎಳ್ಳು ಇವುಗಳನ್ನು ಹಾಕಿ, ಪಿಂಡದ ಮೇಲೆ ಆಚ್ಛಾದನ ಮಾಡಿ, ಸೂರ್ಯನನ್ನು ನೋಡಿ ಆ ಎಲೆಯನ್ನು ತೆಗೆದನು. ಅನಂತರ ಕೈ ತೊಳೆಯಲು ಕೋಕಾ ತೀರ್ಥದ ನೀರನ್ನು ಕೊಟ್ಟು ಅವರು 'ಸ್ವಸ್ತಿ' ಎಂದು ಹೇಳಿದ ಬಳಿಕ ಬೆಳ್ಳಿಯ ದಕ್ಷಿಣೆಯನ್ನು ಆ ಗದಾಧರನಾದ ಶ್ರೀಹರಿಯು ಕೊಟ್ಟನು.

''ಕಚ್ಚಿತ್ ಸಂಪನ್ನಂ'' ಎಂದು ''ಎಲ್ಲವೂ ಸಾಂಗವಾಗಿ ಸುಸಂಪನ್ನವಾಗಿ ಜರುಗಿತಷ್ಟೇ!'' ಎಂದು ಆ ಬ್ರಾಹ್ಮಣರನ್ನೂ ಕೇಳಿದನು. ಅವರು ''ಸುಸಂಪನ್ನಂ ಸುಸಂಪನ್ನಂ'' ಚೆನ್ನಾಗಿ ಆಯಿತು ಎಂದು ಹೇಳಿದರು. ಬಳಿಕ ''ಅಭಿರಮ್ಯತಾಂ ವಿಶ್ರಾಂತಿ ತೆಗೆದುಕೊಳ್ಳಿರಿ'' ಎಂದು ಕೇಳಿಕೊಂಡನು. ''ಅಭಿರತಾಸ್ಮಂ'' ನಾವು ಸಂತೋಷ ಪಟ್ಟಿದ್ದೇವೆ ಎಂದು ಹೇಳಿದರು ಆ ವಿಪ್ರರು.

''ಅನ್ನಶೇಷೈಃ ಕಿಂ ಕ್ರಿಯತಾಂ'' ''ಉಳಿದ ಅನ್ನದಿಂದ ಏನು ಮಾಡಲಿ'' ಎಂದು ಕೇಳಿದನು. ''ಇಷ್ಟೈಃ ಸಹ ಭುಜ್ಯತಾಂ'' ''ನಿಮ್ಮ ಆಪ್ತೇಷ್ಟರುಗಳಿಂದ ಕೂಡಿ ಭೋಜನ ಮಾಡು'' ಎಂದು ಆಜ್ಞೆ ಕೊಟ್ಟರು. ಅನಂತರ ಆ ಬ್ರಾಹ್ಮಣರಿಗೆ ಕೈಕೊಟ್ಟು ಅವರನ್ನು ಕರೆದುಕೊಂಡು ''ವಾಜೆ ವಾಜೆ'' ಮಂತ್ರವನ್ನು ಹೇಳುತ್ತ ಆವಾಹನ ಮಾಡಿದ ಬ್ರಾಹ್ಮಣರನ್ನು ವಿಸರ್ಜಿಸಿದನು. ಬ್ರಾಹ್ಮಣರನ್ನು ವಿಸರ್ಜನ ಮಾಡುವ ಮುನ್ನ ಪಿಂಡಗಳನ್ನು ''ಪಿಂಡಾನ್ ಉದ್ವಾಸಯಿಷ್ಯೆ'' ''ಪಿಂಡಗಳನ್ನು ವಿಸರ್ಜಿಸುತ್ತೇನೆ'' ಎಂದು ಕೇಳಿಕೊಂಡನು. ''ಉದ್ವಾಸಯ'' ಎಂದು ಹೇಳಿದರು. ಅನಂತರ ಮಧ್ಯಪಿಂಡ (ಪಿತಾಮಹ)ವನ್ನು ತೆಗೆದು ಬೇರೆ ಇಟ್ಟು ಉಳಿದ ಪಿಂಡಗಳನ್ನು ಉದ್ವಾಸನ ಮಾಡಿದನು. ಅನಂತರ ಬ್ರಾಹ್ಮಣರಿಂದ ''ಸ್ವಾದುಷಂ ಸದಃ ಪಿತರೋ'' ಎಂಬ ಮಂತ್ರದಿಂದ ಅವರ ಆಶೀರ್ವಾದವನ್ನು ಪಡೆದುಕೊಂಡನು.

ಛಾಯಾಮಯಳಾದ ಭೂದೇವಿಯೇ ಆ ಭೂವರಾಹನ ಪತ್ನಿ. ಅವಳಿಗೆ ವರಾಹನು ಪಿತೃಗಳ ಪ್ರಸಾದವನ್ನು ಕೊಟ್ಟನು. ಅವಳು ಅದನ್ನು ಹಿಡಿದುಕೊಂಡು ''ಆಧತ್ತ ಪಿತರೋ ಗರ್ಭಂ'' ಎಂದು ಬ್ರಾಹ್ಮಣರಿಗೆ ನಮಸ್ಕಾರವನ್ನು ಮಾಡಿದಳು ಆಗ ಪ್ರತ್ಯಕ್ಷ ಪಿತೃಗಳನ್ನಾಗಿ ವಿಸರ್ಜನ ಮಾಡಲು ವರಾಹ ರೂಪಿಯಾದ ಶ್ರೀಹರಿಯು ಪ್ರಾರಂಭಿಸಿದನು. ಆಗ ಪಿತೃಗಳೂ ಕೋಕಾದೇವಿಯೂ ಕೈ ಮುಗಿದು ಭಗವಂತನನ್ನು ಕೇಳಿಕೊಂಡರು. ''ಸ್ವಾಮಿ ನೀನು ಸರ್ವ ದೇವೋತ್ತಮ. ವಿಧಿ ನಿಷೇಧಗಳಿಂದ ಅತೀತ. ನೀನೇ ಜಗತ್ತಿನ ತಂದೆ ತಾಯಿ. ನಿನಗೆ ಬೇರೆ

ಯಾರೂ ತಾಯಿ ತಂದೆ ಇಲ್ಲ. ನೀನು ಯಾರನ್ನೂ ಕುರಿತು ಶ್ರಾದ್ಧ ಮಾಡುವ ಅವಶ್ಯಕತೆ ಇಲ್ಲ. ಆದರೂ ಪ್ರಪಂಚದಲ್ಲಿಯ ಜನರು ಪಿತೃಗಳನ್ನು ಕುರಿತು ಈ ವಿಧಾನದಲ್ಲಿಯೇ ಶ್ರಾದ್ಧ ಮಾಡಲಿ ಎಂದು ತಿಳಿಸುವದಕ್ಕೋಸ್ಕರ ನೀನೇ ಶ್ರಾದ್ಧ ಮಾಡಿದೆ. ನಿನ್ನ ಭೃತ್ಯರಾದ ನಮಗೆ ಪಿಂಡ ನೀಡಿ ನಮಸ್ಕಾರ ಮಾಡಿದಂತೆ ಮಾಡಿ ಜನರಿಗೆಲ್ಲ ದಾರಿ ತೋರಿಸಿ ಕೊಟ್ಟೆ. ಇದರಿಂದ ನಾವು ಉಧೃತರಾದೆವು. ನಮ್ಮ ಮೇಲೆ ಇದೊಂದು ಪರಮಾನುಗ್ರಹ ಎಂದೇ ತಿಳಿದಿದ್ದೇವೆ.

ಸ್ವಾಮಿ ವರಾಹದೇವನೆ, ನಾವು ಹಿಂದೆ ಸ್ವರ್ಗದಲ್ಲಿದ್ದಾಗ ಚಂದ್ರನ ಮಗಳಾದ ಕೋಕಾದೇವಿಯನ್ನು ಬಯಸಿದಕ್ಕಾಗಿ ಶಪಿಸಲ್ಪಟ್ಟೆವು. ಚಂದ್ರನು ''ಯೋಗ ಭ್ರಷ್ಟರಾಗಿರಿ'' ಎಂದು ಶಾಪ ಕೊಟ್ಟಿದ್ದರಿಂದ ಸ್ವರ್ಗದಿಂದ ನಾವು ಚ್ಯುತರಾಗಿ ಅಧಃಪಾತವನ್ನು ಹೊಂದಿದ್ದೆವು. ಯೋಗ ಭ್ರಷ್ಟರಾಗಿ ರಸಾತಲಕ್ಕೆ ಇಳಿಯ ಹೊರಟ ನಮ್ಮನ್ನು ವಿಶ್ವೇದೇವತೆಗಳೂ ತೊರೆದುಬಿಟ್ಟಿದ್ದರು. ಇಂತಹ ನಮ್ಮನ್ನು ನೀನು ಬಂದು ರಕ್ಷಣೆ ಮಾಡಿದೆ. ನಿನ್ನ ಪ್ರಸಾದದಿಂದ ನಾವು ಸ್ವರ್ಗವನ್ನು ಕುರಿತು ಪ್ರಯಾಣಿಸುತ್ತೇವೆ. ವಿಶ್ವೇದೇವತೆಗಳು ಅಲ್ಲಿ ನಮ್ಮನ್ನು ರಕ್ಷಣೆಮಾಡಲಿ. ಚಂದ್ರನು ನಮ್ಮ ಮೇಲೆ ಅಧಿದೇವನಾಗಿ ಇರಲಿ. ಭೂಮಿ ಅಂತರಿಕ್ಷ ಸ್ವರ್ಗ ಮೂರು ಲೋಕಗಳಲ್ಲಿಯೂ ನಮಗೆ ಸ್ವಚ್ಛಂದ ವಾಸವು ಇರಲಿ. ಊರ್ಜಾ ಮತ್ತು ಸ್ವಧಾ ಎಂಬ ಹೆಸರಿನ ಈ ಕೋಕಾ ದೇವಿಯು ನಮಗೆ ಪತ್ನಿಯಾಗಿ ಯೋಗ ಮಾತೆಯಾಗಿ ಯೋಗ ಶಕ್ತಿಯಿಂದ ಆಕಾಶದಲ್ಲಿ ಸಂಚರಿಸಲಿ'' ಎಂದು ಕೇಳಿಕೊಂಡರು. ಹೀಗೆ ಪಿತೃಗಳ ಪ್ರಾರ್ಥನೆಯನ್ನು ಕೇಳಿ ಭೂವರಾಹದೇವನು ಆ ಪಿತೃಗಳನ್ನೂ ಕೋಕಾ ನದಿಯನ್ನು ಕುರಿತು ಹೇಳಿದನು.

ನೀವು ಹೇಳಿದಂತೆ ಆಗಲಿ. ಯಮಧರ್ಮನು ನಿಮಗೆ ಸ್ವಾಮಿಯು. ಅಗ್ನಿ, ವಾಯು ಸೂರ್ಯ ಲೋಕಗಳಲ್ಲಿ ನೀವು ವಾಸಮಾಡಿರಿ. ಬ್ರಹ್ಮ ವಿಷ್ಣು ಮಹೇಶ್ವರರೂ ನಿಮಗೆ ನಿಯಾಮಕರೂ ಉಪಾಸ್ಯರು ಆದ ದೇವತೆಗಳು, ಆದಿತ್ಯಾ ವಸುರುದ್ರ ರೂಪಗಳಿಂದ ನೀವು ಯೋಗ ದೇಹವುಳ್ಳವರಾಗಿ ಯೋಗಿಗಳಾಗಿ ವ್ರತಬದ್ಧರಾಗಿರಿ. ನಿಮ್ಮ ಅಪೇಕ್ಷೆಯಂತೆ ಎಲ್ಲಿ ಬೇಕೋ ಅಲ್ಲಿ ಸಂಚರಿಸಿರಿ. ಎಲ್ಲ ಪ್ರಾಣಿಗಳಿಗೂ ಫಲಪ್ರದರಾಗಿರಿ. ಶ್ರಾದ್ಧ ಮಾಡಿದ ಮನುಷ್ಯರ ಪಿತೃಗಳು ಸ್ವರ್ಗದಲ್ಲಿಯೇ ಇರಲಿ, ನರಕದಲ್ಲಿಯೇ ಇರಲಿ ಎಲ್ಲದಕ್ಕೂ ನೀವು ಅವರಿಗೆ ಶ್ರಾದ್ಧ ಫಲವನ್ನು ನೀಡಿ ಸಂತೋಷವನ್ನು ಉಂಟು ಮಾಡಿರಿ. ನಿಮ್ಮ ಯೋಗ ಸಾಮರ್ಥ್ಯದಿಂದ ಚರಾಚರ ಪ್ರಾಣಿಗಳನ್ನು ಸಂತೋಷಪಡಿಸಿರಿ.

ಈ ಊರ್ಜಾ ಎಂಬ ಸ್ವಧಾ ಎಂಬ ದಕ್ಷನ ಮಗಳು ನಿಮ್ಮ ಮಡದಿಯಾಗಿ ಈಗ ಕೋಕಾನದಿಯಾಗಿ ಈ ಪರ್ವತ ರಾಜನನ್ನು ಆಶ್ರಯಿಸಿದ್ದಾಳೆ. ಮೂರು ಕೋಟಿ ತೀರ್ಥ ಗಳು ಇಲ್ಲಿ ಸನ್ನಿಹಿತವಾಗಿವೆ. ವರಾಹ ರೂಪಧಾರಿಯಾದ ನಾನು ಇಂದಿನಿಂದ ಈ ಕೋಕಾ ತೀರ್ಥದಲ್ಲಿ ನೆಲೆಸುತ್ತೇನೆ. ವರಾಹನ ದರ್ಶನ, ಕೋಕಾತೀರ್ಥ ಸ್ನಾನ, ವಾಸ ಈ ತೀರದಲ್ಲಿ ಮಾಡಿದ ದಾನ ಎಲ್ಲವೂ ಸ್ವರ್ಗಾದಿ ಪುಣ್ಯಫಲ ಪ್ರದವಾಗಿರುತ್ತವೆ. ಮಾಘಮಾಸ ಕೃಷ್ಣಪಕ್ಷವೇ ಈ ತೀರ್ಥಕ್ಕೆ ಬಂದು ಐದು ದಿವಸ ಇದ್ದು ಶ್ರಾದ್ಧ ಮಾಡಿದವರಿಗೆ ಸ್ವರ್ಗಾದಿ ಜೀವಲೋಕ ಪ್ರಾಪ್ತಿಯಾಗುವದು. ಹೀಗೆ ಹೇಳಿ ವರಾಹ ಸ್ವಾಮಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ವರಾಹದೇವರು ಹೋದಬಳಿಕ ಪಿತೃಗಳು ಕೋಕಾದೇವಿಯನ್ನು ಕೇಳಿಕೊಂಡು ಅಲ್ಲಿಂದ ಪ್ರಯಾಣ ಮಾಡಿದರು.

ಕೋಕಾದೇವಿಯು ಎಲ್ಲ ತೀರ್ಥಸಹಿತಳಾಗಿ ಆ ಬೆಟ್ಟದಲ್ಲಿಯೇ ನೆಲೆ ನಿಂತಳು. ವರಾಹ ಪತ್ನಿಯಾದ ಭೂದೇವಿಯು ಪಿತೃಗಳ ಪಿಂಡಪ್ರಸಾದ ಭಕ್ಷಣ ಮಾಡಿದ್ದರ ಫಲವಾಗಿ ವರಾಹ ದೇವರಿಂದ ಗರ್ಭಿಣಿಯಾದಳು. ಆ ಭೂದೇವಿಯ ಮಗನೇ "ನರಕಾಸುರ" ಅವನಿಗೆ ಶ್ರೀಹರಿಯು ಪ್ರಾಗ್ಜ್ಯೋತಿಷ ನಗರವನ್ನು ರಾಜಧಾನಿಯಾಗಿ ನೀಡಿದನು.

## ಸದಾಚಾರ ನಿರೂಪಣೆ

**ವೇದವ್ಯಾಸ:-** "ನಾನು ಹಿಂದೆ ಹೇಳಿದ ರೀತಿಯಲ್ಲಿ ಗೃಹಸ್ಥಾಶ್ರಮಿಯು ಹವ್ಯದಿಂದ ದೇವತೆಗಳನ್ನು ಕವ್ಯದಿಂದ ಪಿತೃಗಳನ್ನೂ, ಅನ್ನದಿಂದ ಅತಿಥಿಗಳನ್ನು ತೃಪ್ತಿಪಡಿಸಬೇಕು. ಇದರಂತೆ ಮನಗೆ ಬಂದು ಯಾಚನೆ ಮಾಡುವ ದಾರಿಕಾರರಿಗೂ, ಭಿಕ್ಷುಗಳಿಗೂ ಗೃಹಸ್ಥಾಶ್ರಮಿಯು ಅನ್ನವನ್ನು ನೀಡಬೇಕು. ತನ್ನ ಭೃತ್ಯರನ್ನು ಬಾಂಧವರನ್ನು ಸಂತೋಷಪಡಿಸಬೇಕು. ಯಥಾ ಯೋಗ್ಯವಾದ ಆಹಾರವನ್ನು ಕೊಟ್ಟು ಇರುವೆಗಳಿಗೂ ಕೂಡ ಅವು ಓಡಾಡುವಲ್ಲಿ ಸಕ್ಕರೆ ಉದುರಿಸಿ ತೃಪ್ತಿಪಡಿಸಬೇಕು. ಯಾರಿಗೂ ಅನ್ನವನ್ನು ಕೊಡದೆ, ದಾನವನ್ನು ಕೊಡದೆ ಗೃಹಸ್ಥಾಶ್ರಮಿಯು ತಾನೊಬ್ಬನೇ ಊಟವನ್ನು ಮಾಡಿದರೆ ಅವನು ಪಾಪವನ್ನೇ ಉಣ್ಣುತ್ತಾನೆ.

**ಮುನಿಗಳು:-** ಪೂಜ್ಯರೇ, ತಾವು ನಮಗೆ ನಿತ್ಯ, ನೈಮಿತ್ತಿಕ, ಕಾಮ್ಯ ಮುಂತಾದ ಮೂರು ವಿಧವಾದ ಕಾರ್ಯಗಳ ಬಗೆಗೆ ತಿಳಿಸಿ ಹೇಳಿದಿರಿ. ಈಗ ತಮ್ಮ ಮುಖದಿಂದ ಸದಾಚಾರದ ಬಗ್ಗೆ ಕೇಳಬೇಕೆಂದು ನಾವು ಅಪೇಕ್ಷಿಸುತ್ತೇವೆ. ದಯಮಾಡಿ ತಿಳಿಸಿರಿ. ಯಾವ ಸದಾಚಾರ ಸತ್ಕರ್ಮಗಳನ್ನು ಆಚರಿಸಿದರೆ ಮನುಷ್ಯನಿಗೆ ಈ ಲೋಕದಲ್ಲಿ ಸೌಭಾಗ್ಯ, ಪರಲೋಕದಲ್ಲಿ ಸೌಖ್ಯ ಎರಡೂ ಪ್ರಾಪ್ತವಾಗುವವು? ಅಂಥ ಸದಾಚಾರದ ವಿಷಯವಾಗಿ ನಿರೂಪಣೆ ಮಾಡಿರಿ.

**ವೇದವ್ಯಾಸ:-** ಮುನಿಗಳೇ, ಮನುಷ್ಯನಿಗೆ ಆಚಾರವೇ ಮುಖ್ಯ. ಆಚಾರ ಎಂದರೆ ಸದಾಚಾರ ಎಂದೇ ಅರ್ಥ. ಆಚಾರ ಹೀನನಾದವರಿಗೆ ಇಲ್ಲಿ ಸುಖ ಇಲ್ಲ. ಪರತ್ರ ಸದ್ಗತಿ ಇಲ್ಲ. ಸದಾಚಾರವನ್ನು ಬಿಟ್ಟು ಸ್ವೈರ, ಸ್ವಚ್ಛಂದ ಆಚಾರ ವಿಚಾರ ಆಹಾರಗಳನ್ನು ಸೇವಿಸುವ ಮಾನವನು ಎಷ್ಟು ಯಜ್ಞ ಎಂಥ ದಾನ ಮಾಡಿದರೂ, ಎಷ್ಟೇ ತಪಸ್ಸನ್ನು ಆಚರಿಸಿದರೂ ಎಲ್ಲವೂ ವ್ಯರ್ಥವೇ. ಸದಾಚಾರಿಯಾದ ಮನುಷ್ಯನು ಆಯುಷ್ಯವನ್ನು ಹೊಂದುತ್ತಾನೆ. ಆರೋಗ್ಯವನ್ನು ಪಡೆಯುತ್ತಾನೆ, ಸದಾಚಾರವೇ ಧರ್ಮದ ರಕ್ಷಣೆಗೆ ಮೂಲ ಕಾರಣ.

ಸದಾಚಾರ ಎಂದರೆ ಒಳ್ಳೆಯ ಶಾಸ್ತ್ರಸಿದ್ಧ ಆಚರಣ. ಗೃಹಸ್ಥನಾದ ಮನುಷ್ಯನು ಧರ್ಮ, ಅರ್ಥ, ಕಾಮ ಎಂಬ ಮೂರು ವಿಧವಾದ ಪುರುಷಾರ್ಥಗಳನ್ನು ಸಾಧಿಸಲು ಪ್ರಯತ್ನವನ್ನು ಮಾಡಬೇಕು. ಮನುಷ್ಯನು ತಾನು ಸಂಪಾದನೆಮಾಡಿದ ದ್ರವ್ಯದಲ್ಲಿ ನಾಲ್ಕುಭಾಗ ಮಾಡಬೇಕು. ಅದರಲ್ಲಿ ಒಂದು ಕಾಲುಭಾಗದಿಂದ ಪರಲೋಕ ಸಾಧನವಾದ ದಾನ ಧರ್ಮಾದಿಗಳನ್ನು ಮಾಡಬೇಕು. ತಾನು ಗಳಿಸಿದ ದ್ರವ್ಯದ ಅರ್ಧಭಾಗದಿಂದ ಶಾಸ್ತ್ರೋಕ್ತವಾಗಿ ಹೇಳಿದ ನಿತ್ಯ ನೈಮಿತ್ತಿಕ ಕಾರ್ಯಕಲಾಪಗಳನ್ನು ಮಾಡಿ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕು. ಉಳಿದ ಕಾಲುಭಾಗ ಹಣವನ್ನು ಮತ್ತೆ ಅದು ಮುಂದೆ ಎರಡು ಮೂರು ಪಟ್ಟು ಹೆಚ್ಚಾಗುವಂತೆ ವ್ಯಾಪಾರವೋ, ಉದ್ಯೋಗವೋ, ಬೇಸಾಯವೋ, ಯಾವುದಾದರೊಂದನ್ನು ಮಾಡಬೇಕು. ಹೀಗೆ ತಾನು ಸಂಪಾದನೆ

ಮಾಡಿದ ದ್ರವ್ಯವನ್ನು ನಾಲ್ಕು ಭಾಗ ಮಾಡಿ ಆ ನಾಲ್ಕೂ ಭಾಗಗಳಿಂದಲೂ ಧರ್ಮಾರ್ಥ ಕಾಮರೂಪವಾದ ತ್ರಿವರ್ಗ ಸಾಧನವನ್ನು ಮಾಡಿ ಕೊಂಡರೆ ಅವನು ಸಂಪಾದನೆ ಮಾಡಿದ ದ್ರವ್ಯವು ಸಾರ್ಥಕವಾಗುತ್ತದೆ. ''ಮನುಜನು ಮಾಡುವ ಸರ್ವಕರ್ಮಗಳೂ ತ್ರಿವರ್ಗ ಸಾಧನವಾಗಬೇಕು. ಹಾಗಾದರೆ ಮಾತ್ರ ದ್ರವ್ಯಕ್ಕೆ ಸಾಫಲ್ಯ ಸದಾಚಾರದ ಬಗ್ಗೆ ನಾನು ನಿಮಗೆ ಕೆಲವು ಮಾತುಗಳನ್ನು ಹೇಳುತ್ತೇನೆ ಲಕ್ಷ್ಯಗೊಟ್ಟು ಕೇಳಿರಿ. ''ಮನುಷ್ಯನು ಪ್ರತಿದಿನವೂ, ಧರ್ಮಾರ್ಥಗಳ ಸಾಧನೆ ಉದ್ದೇಶದಿಂದ ತಪ್ಪದೇ ಬ್ರಾಹ್ಮಮುಹೂರ್ತ ಎನಿಸಿದ ಪಂಚಪಂಚ ಉಷಃಕಾಲದಲ್ಲಿ ಏಳಬೇಕು. ದೇವರನ್ನು ಧ್ಯಾನ ಮಾಡಬೇಕು. ದೇಹಬಾಧೆಯನ್ನು ತೀರಿಸಿಕೊಂಡು ಆಚಮನ ಮಾಡಿ ಸ್ನಾನ ಮಾಡಬೇಕು. ಶುಚಿರ್ಭೂತನಾಗಿ ಮಡಿಬಟ್ಟೆ ಉಟ್ಟುಕೊಂಡು ಪ್ರಾತಃ ಸಂಧ್ಯಾವಂದನೆ ಯನ್ನು ಮಾಡಬೇಕು. ಸೂರ್ಯ ಉದಯ ಹೊಂದುವದಕ್ಕಿಂತ ಮೊದಲೇ ಸೂರ್ಯನಿಗೆ ಅರ್ಘ್ಯಪ್ರಧಾನವನ್ನು ಮಾಡಬೇಕು. ಪ್ರಾತಃ ಸಂಧ್ಯಾವಂದನೆಯನ್ನು ಮುಗಿಲಿನಲ್ಲಿ ಚಿಕ್ಕೆಗಳು ಮಿನುಗುವಾಗಲೇ ಮಾಡಬೇಕು. ಸಾಯಂಕಾಲ ಸಂಧ್ಯಾವಂದನೆಯನ್ನು ಸೂರ್ಯನು ಅಸ್ತಮಿಸುವದಕ್ಕಿಂತ ಮೊದಲೇ ಮಾಡಬೇಕು. ಯಾವ ಕಾಲಕ್ಕೂ ಸಂಧ್ಯಾವಂದನೆಯನ್ನು ತಪ್ಪಿಸತಕ್ಕದಲ್ಲ. ಆಪತ್ಕಾಲದಲ್ಲಿ ಮಾತ್ರ ಈ ಸಂಧ್ಯಾವಂದನೆಗೆ ಲೋಪಬಂದರೂ ಆಪತ್ಕಾಲವೂ ಇಲ್ಲದೇ ಇದ್ದಾಗ ಎಂದೂ ಸಂಧ್ಯಾವಂದನೆ ಮಾಡದೇ ಇರಬಾರದು. ಪ್ರತಿದಿನವೂ ದೇವಪೂಜೆ, ನೈವೇದ್ಯ, ವೈಶ್ವದೇವಗಳನ್ನು ಶುಚಿರ್ಭೂತನಾಗಿ ಮಾಡಬೇಕು. ಸುಳ್ಳುಮಾತುಗಳನ್ನು ಆಡಬಾರದು. ಬಿರುಸು ಮಾತುಗಳನ್ನು ಆಡಬಾರದು. ಕೆಟ್ಟ ಗ್ರಂಥಗಳನ್ನು ಓದಬಾರದು. ದೇವರಿಲ್ಲ, ಧರ್ಮವಿಲ್ಲ ಎಂಬ ಅಸದ್ವಾದವನ್ನು ಮಾಡಬಾರದು. ದುಷ್ಟ ಜನರನ್ನು ಸೇವಿಸಬಾರದು. ಉದಯವನ್ನು ಅಥವಾ ಅಸ್ತವನ್ನು ಹೊಂದುವ ಸೂರ್ಯನನ್ನು ನೋಡಬಾರದು. ಪ್ರತಿದಿನವೂ, ದೇವತಾ ತರ್ಪಣವನ್ನೂ, ತಂದೆ ತಾಯಿ ತೀರಿಕೊಂಡಿದ್ದರೆ ಪಿತೃ ತರ್ಪಣವನ್ನೂ, ಅವಶ್ಯವಾಗಿ ಮಾಡಬೇಕು. ಊರಿನ ನಡುವೆ, ತೀರ್ಥಗಳ ಹತ್ತಿರ, ಕ್ಷೇತ್ರಗಳ ಸಮೀಪದಲ್ಲಿ, ಹರಗಿದ ಭೂಮಿಯಲ್ಲಿ, ಆಕಳ ಕಟ್ಟುವ ಸ್ಥಳದಲ್ಲಿ ಮಲಮೂತ್ರ ವಿಸರ್ಜನೆ ಮಾಡಕೂಡದು.

ಬಟ್ಟೆ ಇಲ್ಲದ ಪರಸ್ತ್ರೀಯರನ್ನು ನೋಡಬಾರದು. ಮುದ್ದಾದ ಹೆಣ್ಣು ಮಕ್ಕಳೊಡನೆ ಭಾಷಣ ಮಾಡಬಾರದು. ನೀರಿನಲ್ಲಿ ಮೂತ್ರವಿಸರ್ಜನೆ, ಮಲವಿಸರ್ಜನೆ ಮೈಥುನ ಮೊದಲಾದವುಗಳನ್ನು ಮಾಡಬಾರದು. ಪ್ರತಿದಿನವೂ ಗೃಹಸ್ಥನಾದವನು ದೇವರ ಪೂಜೆ, ಪಿತೃತರ್ಪಣ, ವೈಶ್ಯದೇವ, ಅತಿಥಿಪೂಜೆ, ಪ್ರಾಣಿಗಳಿಗೆ ಆಹಾರದಾನಗಳನ್ನು ಮಾಡದೇ ಊಟ ಮಾಡಬಾರದು.

ಊಟಕ್ಕೆ ಪೂರ್ವ ಅಥವಾ ಉತ್ತರಕ್ಕೆ ಮುಖ ಮಾಡಿಕೊಂಡು ಕೂಡಬೇಕು. ಮಾಡಿದ ಅಡಿಗೆಯನ್ನು ನಿಂದಿಸಬಾರದು. ಉಪ್ಪನ್ನು ಪ್ರತ್ಯಕ್ಷವಾಗಿ ಅಡಿಗೆಯಲ್ಲಿ ಹಾಕದಿರುವದನ್ನು ತಿನ್ನಬಾರದು. ಬರಿಗಣ್ಣಿನಿಂದ ಸೂರ್ಯ ಚಂದ್ರ ಚಿಕ್ಕೆಗಳನ್ನು ನೋಡಕೂಡದು. ಒಡೆದ ಪಾತ್ರೆಯಲ್ಲಿಯ ಅನ್ನ ಉಣ್ಣಬಾರದು. ಹರಕ ಹಾಸಿಗೆಯ ಮೇಲೆ ಮಲಗಬಾರದು.

ಮೊಳಕಾಲು ಮಡಿಚಿ ಶುಚಿರ್ಭೂತನಾಗಿ ಕುಳಿತುಕೊಂಡು ಭೋಜನ ಮಾಡಬೇಕು. ನಡೆದಾಡುತ್ತಾಗಲೀ, ನಿಂತಾಗಲೀ ಮಲಮೂತ್ರ ವಿಸರ್ಜನೆ ಮಾಡಬಾರದು. ಎಂಜಲವನ್ನು

ತಿನ್ನಬಾರದು. ಊಟಕ್ಕೆ ಕುಳಿತಾಗ ಬೇರೆ ಹರಟೆ ಹೊಡೆಯಬಾರದು. ಕೈ ಬಾಯಿ ಎಂಜಲವಾದಾಗ ವೇದಾಧ್ಯಯನವನ್ನು ಮಾಡಕೂಡದು. ಇನ್ನೊಬ್ಬರು ಉಟ್ಟ ಬಟ್ಟೆಯನ್ನು, ಉಂಡ ಪಾತ್ರವನ್ನೂ ಬಳಸಬಾರದು. ಮುರುಕ ಮಣೆಯ ಮೇಲೆ ಕುಳಿತುಕೊಳ್ಳಬಾರದು. ಗುರುಹಿರಿಯರು ಬಂದರೆ ಅವರಿಗೆ ಸ್ವಾಗತ ಮಾಡಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಆಸನವನ್ನು ಇಟ್ಟು ಸತ್ಕರಿಸಬೇಕು. ಅವರಿಗೆ ಅನುಕೂಲವಾಗುವಂತೆ ಮಾತನಾಡಬೇಕು. ಊಟಮಾಡುವಾಗ ಅಥವಾ ದೇವರ ಪೂಜೆಯನ್ನು ಮಾಡುವಾಗ ಒಂಟಿಬಟ್ಟೆಯನ್ನು ಧರಿಸಬಾರದು. ಜೋಡು ಬಟ್ಟೆಯನ್ನು ತೊಟ್ಟುಕೊಂಡೇ ಪುಣ್ಯಕಾರ್ಯಗಳನ್ನು ಮಾಡಬೇಕು. ಬೆತ್ತಲೆಯಾಗಿ ಸ್ನಾನ ಮಾಡಬಾರದು. ಬಟ್ಟೆ ಬಿಟ್ಟು ಶಯನ ಮಾಡಬಾರದು. ಎರಡೂ ಕೈಗಳಿಂದ ತಲೆ ತುರಿಸಬಾರದು. ಕಾರಣವಿಲ್ಲದೇ ಮೇಲಿಂದ ಮೇಲೆ ತಲೆಯ ಮೇಲೆ ಸ್ನಾನ ಮಾಡಬಾರದು. ಸ್ನಾನ ಮಾಡಿದ ಬಳಿಕ ಮೈಗೆ ಎಣ್ಣೆಯನ್ನು ಹಚ್ಚಿಕೊಳ್ಳ ಬಾರದು. ಅನಾಧ್ಯಾಯ ದಿನಗಳಲ್ಲಿ ಅಧ್ಯಯನ ಮಾಡಕೂಡದು. ಬ್ರಾಹ್ಮಣ, ಅಗ್ನಿ, ಹಸು ಸೂರ್ಯ, ದೇವರು, ಧರ್ಮ, ಸಜ್ಜನರು, ಹಿರಿಯರು ಇವರನ್ನು ಅವಮಾನಿಸಕೂಡದು. ಹಗಲು ಹೊತ್ತು ಮಲಮೂತ್ರಗಳನ್ನು ಉತ್ತರಾಭಿಮುಖವಾಗಿ ವಿಸರ್ಜಿಸಬೇಕು. ರಾತ್ರಿ ಕಾಲದಲ್ಲಿ ದಕ್ಷಿಣಾಭಿಮುಖವಾಗಿ ವಿಸರ್ಜಿಸಬೇಕು. ಏನಾದರೂ ಬೇನೆ ಬಾಧಕ ಇದ್ದರೆ ಹೇಗಾದರೂ ಮಾಡಬಹುದು. ಗುರುಗಳು ಮಾಡಿದ ಪಾಪಕೃತ್ಯಗಳನ್ನು ತನ್ನ ಬಾಯಿಂದ ಹೇಳಬಾರದು. ಗುರುಹಿರಿಯರು ಸಿಟ್ಟಿಗೆದ್ದಿದ್ದರೆ ಅವರನ್ನು ಸಂತೈಸಬೇಕು. ಇನ್ನೊಬ್ಬರು ಮಾಡಿದ ಮತ್ತೊಬ್ಬರ ನಿಂದೆಯನ್ನು ಕೇಳಬಾರದು. ದಾರಿಯಲ್ಲಿ ಹೋಗುವಾಗ ಬ್ರಾಹ್ಮಣರಿಗೆ ಹಾದಿ ಬಿಡಬೇಕು. ಅದರಂತೆ ರಾಜರಿಗೂ, ದುಃಖಾರ್ತರಾದವರಿಗೂ, ಪಂಡಿತರಿಗೂ, ಗರ್ಭಿಣೀ ಸ್ತ್ರೀಯರಿಗೂ, ರೋಗಿಷ್ಠರಿಗೂ, ಮೂಕ, ಕಿವುಡ, ಮದೋನ್ಮತ್ತ ಇಂಥವರಿಗೂ ಮನುಷ್ಯರು ತಾವಾಗಿಯೇ ದಾರಿ ಬಿಡಬೇಕು. ದೇವಾಲಯ, ಅಶ್ವತ್ಥವೃಕ್ಷ ಗುರು ಇವರನ್ನು ಭಕ್ತಿಯಿಂದ ಪ್ರದಕ್ಷಿಣೆ ಹಾಕಬೇಕು. ಪಾದರಕ್ಷೆ, ಬಟ್ಟೆ, ಮಾಲೆ ಇವುಗಳನ್ನು ಮತ್ತೊಬ್ಬರು ಧರಿಸಿದ್ದನ್ನು ಧರಿಸಬಾರದು.

ಅಷ್ಟಮಿ, ಚತುರ್ದಶಿ, ಹುಣ್ಣಿಮೆ ಮತ್ತು ಪರ್ವಕಾಲ ಪುಣ್ಯಕಾಲಗಳಲ್ಲಿ ಎಣ್ಣೆಯಿಂದ ಅಭ್ಯಂಜನ ಮತ್ತು ಸ್ತ್ರೀಯರ ಭೋಗ ಎರಡನ್ನೂ ವರ್ಜಿಸಬೇಕು. ಹಾದಿಗೆಟ್ಟ ಹೆಣ್ಣು, ಕೆಲಸಮಾಡಿಕೊಂಡು ಬಂದ ಬಾಲಕ ಹಾಗೂ ಪತಿತ ಇವರ ಮರ್ಮಕ್ಕೆ ತಾಗುವಂತೆ ಮಾತನಾಡಬಾರದು. ಗರ್ವ, ದುರಭಿಮಾನ, ಬಿರುನುಡಿಗಳನ್ನು ಆಡುವದನ್ನು ವಿವೇಕಿಗಳಾದವರು ಎಂದೂ ಮಾಡಬಾರದು. ಇನ್ನೊಬ್ಬರನ್ನು ಎಂದೂ ಕೈಮುಟ್ಟಿ ಹೊಡೆಯಕೂಡದು. ಶಿಷ್ಯ ಮತ್ತು ಮಗ ಇವರಿಬ್ಬರಿಗೂ ಏನಾದರೂ ಕಲಿಸಬೇಕೆಂದಾಗ ಸೌಮ್ಯವಾಗಿ ಪೆಟ್ಟು ಕೊಟ್ಟರೂ ಪ್ರತ್ಯವಾಯವಿಲ್ಲ. ಕೃಷ್ಣಾಜಿನ ಚಾಪೆ ಮೊದಲಾದವುಗಳನ್ನು ಕಾಲಿನಿಂದ ಎಳೆದುಕೊಂಡು ಅದರ ಮೇಲೆ ಕೂಡಬಾರದು.

ಗೃಹಸ್ಥನಾದವನು ಅತಿಥಿ ಪೂಜೆಮಾಡಿ ಹಗಲು ರಾತ್ರಿ ಎರಡೂ ಹೊತ್ತು ಊಟ ಮಾಡಬೇಕು. ಪೂರ್ವ ಅಥವಾ ಉತ್ತರಾಭಿಮುಖನಾಗಿ ಹಲ್ಲುಗಳನ್ನು ಉಜ್ಜಿಕೊಳ್ಳಬೇಕು. ಉತ್ತರದಿಕ್ಕಿಗೆ ತಲೆಮಾಡಿ ಎಂದೂ ಮಲಗಬಾರದು. ಪಶ್ಚಿಮಕ್ಕೂ ತಲೆಮಾಡಬಾರದು.

ದಕ್ಷಿಣದಿಕ್ಕಿಗೆ ತಲೆಮಾಡಿ ಮಲಗಿಕೊಳ್ಳಬೇಕು. ಮಲೆತು ನಾರುತ್ತಿರುವ ಜಲಾಶಯಗಳಲ್ಲಿ ಸ್ನಾನಮಾಡಬಾರದು. ಅಂಗಹೀನರನ್ನೂ ದರಿದ್ರರನ್ನೂ, ಹುಚ್ಚರನ್ನೂ, ಮೂರ್ಖರನ್ನೂ ಉನ್ಮತ್ತರನ್ನೂ ನೋಡಿ ಉಪಹಾಸಮಾಡಿ ನಗುವದನ್ನಾಗಲಿ ನಿಂದಿಸುವದನ್ನಾಗಲಿ ಮಾಡಬಾರದು. ಕೂದಲಗಳನ್ನು ಕಟ್ಟದೇ ಹಾಗೇ ಹರವಿಕೊಂಡು ಸ್ನಾನಮಾಡಬಾರದು. ಸ್ನಾನ ಮಾಡದೇ ನಾಮ ಗಂಧಗಳನ್ನು ಹಚ್ಚಿಕೊಳ್ಳಬಾರದು. ಸ್ನಾನ ಮಾಡದೇ ಎಂದೂ ಗಂಧ ಚಂದನ ಅಕ್ಷತಾದಿಗಳನ್ನು ಧರಿಸಬಾರದು. ಕೆಂಪು ಬಟ್ಟೆಯನ್ನು ತೊಟ್ಟುಕೊಳ್ಳಬಾರದು. ವಸ್ತ್ರಗಳನ್ನು ಅದಲು ಬದಲು ಮಾಡಬಾರದು. ಸೆರಗು ಅಂಚು ಇಲ್ಲದಿದ್ದ ವಸ್ತ್ರಗಳನ್ನು ಧರಿಸಬಾರದು. ಮತ್ತು ಹರಕು ಬಟ್ಟೆಗಳನ್ನೂ, ನಾಯಿ ಮುಟ್ಟಿದ್ದನ್ನೂ, ಪರದೇಶದ ಬಟ್ಟೆಗಳನ್ನೂ ಅವು ಮಿದು ಇವೆ ಎಂದ ಮಾತ್ರಕ್ಕೆ ಸ್ವೀಕರಿಸಬಾರದು. ಉಟ್ಟುಕೊಳ್ಳುವ ಬಟ್ಟೆಗಳಿಗೆ ಅಂಚು ಸೆರಗು ಇರಲೇಬೇಕು. ''ಹರಿದ ಬಟ್ಟೆಗಳನ್ನಾಗಲೀ ಸುಟ್ಟ ಬಟ್ಟೆಗಳನ್ನಾಗಲೀ, ನಾಯಿ ಇಲಿ ಕಚ್ಚಿದ ಬಟ್ಟೆಗಳನ್ನಾಗಲೀ, ಧರಿಸಬಾರದು. ಬರಿ ಬಾಯಿಯಿಂದ ಉಪ್ಪನ್ನು ಯಾವದರಲ್ಲಿಯೂ ಮಿಶ್ರ ಮಾಡದೇ ತಿನ್ನಬಾರದು. ತಂಗಳನ್ನವನ್ನು ಉಣ್ಣಬಾರದು. ಹಿಟ್ಟು, ತರಕಾರಿ, ಕಬ್ಬು ಹಾಗೂ ಹಾಲಿನಿಂದ ಮಾಡಿದ ಪದಾರ್ಥಗಳು ತಂಗಳವಾಗಿದ್ದರೂ ಸ್ವೀಕರಿಸಬಹುದು.

ಸೂರ್ಯೋದಯ ಮತ್ತು ಸೂರ್ಯಾಸ್ತ ಕಾಲದಲ್ಲಿ ಮಲಗಿಕೊಳ್ಳಬಾರದು. ನೌಕರ ಜನರಿಗೂ, ಇತರ ಬಾಂಧವರಿಗೂ, ಮಿತ್ರರಿಗೂ, ಕೊಡದೇ ತಾನೊಬ್ಬನೇ ಏನನ್ನೂ ತಿನ್ನಕೂಡದು. ಪರಸ್ತ್ರೀ ಸಹವಾಸವನ್ನು ಮಾಡಕೂಡದು. ಪರಸ್ತ್ರೀ ಗಮನವು ಮನುಷ್ಯನ ಪುಣ್ಯವನ್ನು ಆಯುಷ್ಯವನ್ನು ಭವಿಷ್ಯವನ್ನು ನಾಶಮಾಡುತ್ತದೆ. ದೇವತಾ ಕಾರ್ಯವನ್ನು ಪಿತೃ ಕಾರ್ಯವನ್ನು, ಗುರುಪೂಜೆಯನ್ನು ಹಾಗೂ ಭೋಜನಾದಿ ಪುಣ್ಯ ಕಾರ್ಯಗಳನ್ನು ಮಾಡುವಾಗ ಸ್ನಾನ ಮಾಡಿ ಶುಚಿರ್ಭೂತನಾಗಿ ಆಚಮನ ಮಾಡಿ ಮಾಡಬೇಕು. ಆಚಮನದ ನೀರಿನಲ್ಲಿ ಬುರುಗು ದುರ್ಗಂಧ ಇರಬಾರದು. ಆಚಮನವನ್ನು ಪೂರ್ವಕ್ಕೆ ಮುಖಮಾಡಿ ಅಥವಾ ಉತ್ತರಕ್ಕೆ ಮುಖ ಮಾಡಿ ಮಾಡಬೇಕು. ದೇವತಾ ಕಾರ್ಯವನ್ನು ಮಾಡಲು ಮೃತ್ತಿಕಾಶೌಚಕವನ್ನು ಮಾಡಿಕೊಳ್ಳಬೇಕು. ಶುದ್ಧವಾದ ಸ್ಥಳದಿಂದ ಮಣ್ಣನ್ನು ಎತ್ತಿಕೊಂಡು ಕೈ ಕಾಲುಗಳನ್ನು ಆ ಮಣ್ಣಿನಿಂದ ತಿಕ್ಕಿ ತೊಳೆದು ಕೊಳ್ಳಬೇಕು. ಸ್ನಾನ ಮಾಡುವಾಗ ನೀರಿನಲ್ಲಿ ನಿಂತು ಮೃತ್ತಿಕಾ ಸ್ನಾನವನ್ನು ಮಾಡಬೇಕು. ಮೃತ್ತಿಕಾ ಸ್ನಾನಕ್ಕೆ ನೀರೊಳಗಿನ ಮಣ್ಣನ್ನಾಗಲೀ, ಕಟ್ಟಡದಲ್ಲಿಯ ಮಣ್ಣನ್ನಾಗಲೀ, ಹುತ್ತಿದಲ್ಲಿಯ ಮಣ್ಣನ್ನಾಗಲೀ, ಇಲಿ ಕೆದರಿದ ಮಣ್ಣನ್ನಾಗಲೀ, ಶೌಚ ಸ್ಥಳದ ಮಣ್ಣನ್ನಾಗಲಿ ಉಪಯೋಗಿಸಬಾರದು. ''ಸ್ನಾನ ಮಾಡುವಾಗ ನದೀ ಅಥವಾ ಸರೋವರದಲ್ಲಿ ಸೊಂಟಮಟ್ಟ ನೀರಿನಲ್ಲಿ ನಿಂತು ಮೂರು ಸಲ ಆಚಮನ ಮಾಡಿ ಮೂರು ಸಲ ಮುಳುಗು ಹಾಕಿ ಸಂಕಲ್ಪಪೂರ್ವಕವಾಗಿ ಮಾರ್ಜನ ಮಾಡಿಕೊಂಡು ಮೃತ್ತಿಕಾ ಸ್ನಾನ ಮಾಡಿ ಅಘಮರ್ಷಣ ಮಂತ್ರ ಪಠಣಪೂರ್ವಕವಾಗಿ ಮುಳುಗು ಹಾಕಿ ಸ್ನಾನಮಾಡಬೇಕು. ಸ್ನಾನಾನಂತರ ಶ್ರೀಹರಿಗೂ, ಸೂರ್ಯನಿಗೂ, ಗಂಗಾದಿ ತೀರ್ಥಗಳಿಗೂ, ಅರ್ಘ್ಯಕೊಟ್ಟು, ದೇವತರ್ಪಣ ಋಷಿತರ್ಪಣ, ಪಿತೃತರ್ಪಣ, ಮಾಡಿ, ಸ್ನಾನಾಂಗ ತೀರ್ಥವನ್ನು ತೆಗೆದುಕೊಂಡು, ಅನಂತರ ಆರ್ದ್ರ ವಸ್ತ್ರದಿಂದ ಮೈ ಒರಸಿಕೊಂಡು ನಾಮಧಾರಣ ಸಂಧ್ಯಾವಂದನ ಪ್ರಾತರಾಹ್ನಿಕ ದೇವ ಪೂಜಾದಿಗಳನ್ನು ತಪ್ಪದೇ ಮಾಡಬೇಕು.

ಏನನ್ನಾದರೂ ಭಕ್ಷಣ ಮಾಡಿದಾಗ, ಅಪಾನವಾಯು ಬಿಟ್ಟಾಗ, ಸೀನಿದಾಗ ಉಗುಳಿದಾಗೆಲ್ಲಾ ಆಚಮನ ಮಾಡಬೇಕು. ಅಸ್ಪೃಶ್ಯರನ್ನು ಮುಟ್ಟಿದಾಗಲೂ ಆಚಮನವು ವಿಹಿತವಾಗಿದೆ. ಆಚಮನಕ್ಕೆ ಅನುಕೂಲವಿಲ್ಲದಾಗ ಸೂರ್ಯನನ್ನು ನೋಡಬೇಕು. ಮೋಡ ಹಾಕಿದ್ದರೆ ಅಥವಾ ಸೂರ್ಯಾಸ್ತವಾಗಿದ್ದರೆ ಅಂಥ ಪ್ರಸಂಗದಲ್ಲಿ ಬಲಗಿವಿಯನ್ನಾದರೂ ಮುಟ್ಟಿಕೊಳ್ಳಬೇಕು. ಸುಮ್ಮಸುಮ್ಮನೇ ಹಲ್ಲುಕಟಿಯಬಾರದು. ತನ್ನದೇಹಕ್ಕೆ ತಾನೇ ತಾಡನೆ ಮಾಡಿಕೊಳ್ಳಬಾರದು. ಮಲಗಿದಾಗ, ಜಪ ಮಾಡುವಾಗ, ಊಟಮಾಡುವಾಗ, ಅಧ್ಯಯನ ಮಾಡಬಾರದು. ಪಿತೃ ಕಾರ್ಯವನ್ನು ಅಪರಾಹ್ನ ಕಾಲದಲ್ಲಿ ಮಾಡಬೇಕು. ದೇವತಾ ಕಾರ್ಯ, ಪಿತೃಕಾರ್ಯ ಮಾಡುವಾಗ ತಲೆಯ ಮೇಲೆ ಸ್ನಾನ ಮಾಡಬೇಕು.

ಅವ್ಯಂಗಳಾದ ಕನ್ಯೆಯನ್ನು ಮದುವೆಯಾಗಬೇಕು. ಆರೋಗ್ಯ ಸಂಪನ್ನಳಾದ, ಒಳ್ಳೆ ಕುಲದಲ್ಲಿ ಹುಟ್ಟಿದ ಕನ್ಯೆಯನ್ನು ವಿವಾಹವಾಗಬೇಕು. ಮದುವೆಯಾದ ಮಡದಿಯನ್ನು ಚೆನ್ನಾಗಿ ರಕ್ಷಣೆ ಮಾಡಬೇಕು. ಅವಳ ಬಗ್ಗೆ ಕೋಪ, ಮತ್ಸರ, ದ್ವೇಷ, ಅಸಹನೆಯನ್ನು, ತಿರಸ್ಕಾರಗಳನ್ನು ಎಂದೂ ಮಾಡಕೂಡದು. ಹಗಲುಹೊತ್ತು ನಿದ್ರೆಯನ್ನಾಗಲೀ, ಸ್ತ್ರೀ ಸಹವಾಸವನ್ನಾಗಲೀ ವರ್ಜಿಸಬೇಕು. ಎಲ್ಲ ಜಾತಿಯವರೂ ಮುಟ್ಟಾದ ಮಡದಿಯೊಡನೆ ನಾಲ್ಕು ರಾತ್ರಿ ಸಹವಾಸವನ್ನು ಮಾಡಕೂಡದು. ತನಗೆ ಸ್ತ್ರೀ ಜನ್ಮ ಬರಬಾರದು ಎಂದು ಇದ್ದರೆ ಐದನೆಯದಿನ ಕೂಡ ಸ್ತ್ರೀಸಂಗವನ್ನು ವರ್ಜಿಸಬೇಕು. ಮುಟ್ಟಾದ ಆರನೆಯ ದಿನದ ರಾತ್ರಿಯು ಸ್ತ್ರೀ ಸಂಗಕ್ಕೆ ಪ್ರಶಸ್ತವಾಗಿದೆ. ಪರ್ವಕಾಲದಲ್ಲಿಯೂ, ಸಂಧ್ಯಾಕಾಲ ದಲ್ಲಿಯೂ ರಿಕ್ತ ತಿಥಿಯಲ್ಲಿಯೂ, ಕ್ಷೌರಕರ್ಮವನ್ನು ಮಾಡಿಸಬಾರದು. ಕ್ಷೌರವನ್ನು ಮಾಡಿಸಿ ಕೊಂಡ ಬಳಿಕ ಸಚೈಲ ಸ್ನಾನ ಮಾಡಬೇಕು. ಸ್ತ್ರೀ ಭೋಗವನ್ನು ಮಾಡಿದರೂ, ವಾಂತಿಮಾಡಿಕೊಂಡರೂ, ನಾಯಿ, ಹಂದಿ, ವರ್ಣಬಾಹ್ಯ,ಪಾಖಂಡಿ ಮುಂತಾದವರನ್ನು ಮುಟ್ಟಿದರೂ ಸ್ನಾನಮಾಡಬೇಕು. ರಿಕ್ತಾ ತಿಥಿಯಂದು ಕ್ಷೌರ ಮಾಡಿಸಬಾರದು.

ಶೀಲಭ್ರಷ್ಟರೂ, ಉನ್ಮತ್ತರೂ, ಮುರ್ಖರೂ, ವೈರಿಗಳು, ದುಂದುಗಾರರೂ, ಜಾತಿ ಭ್ರಷ್ಟರೂ, ವೇಶ್ಯಾಗಾಮಿಗಳೂ, ಅಷ್ಟದರಿದ್ರರೂ, ಅಧಮರೂ ಆದ ಜನರೊಡನೆ ಮೈತ್ರಿ ಸ್ನೇಹ ಸಂಬಂಧವನ್ನು ಮಾಡಬಾರದು. ಯಾವಾಗಲು ಶುಭ ವಸ್ತ್ರ, ಗಂಧ ಮಾಲ್ಯ, ಮಂಗಳ ವೇಷಗಳಿಂದ ಅಲಂಕೃತನಾಗಿರಬೇಕು. ಮಿತ್ರರೂ, ದೀಕ್ಷಿತರೂ, ರಾಜರೂ, ಪಂಡಿತರೂ, ತಂದೆ, ಮಾವ, ಗುರು-ಹಿರಿಯರೂ ಮನೆಗೆ ಬಂದರೆ ಎದ್ದು ನಿಂತು ಅವರಿಗೆ ಸ್ವಾಗತ ಮಾಡಿ ಆಸನವಿತ್ತು ಯಥಾಶಕ್ತಿ ಕಾಣಿಕೆಯನ್ನಿತ್ತು ತನ್ನ ಶಕ್ತಿಗೆ ಅನುಗುಣವಾಗಿ ಪೂಜಿಸಬೇಕು. ಪ್ರತಿದಿನವೂ ದೇವರಪೂಜೆ ಆದ ಬಳಿಕ ವೈಶ್ವದೇವವನ್ನು, ಅನಂತರ ಬಲಿಹರಣವನ್ನು, ಪಿತೃ ತರ್ಪಣವನ್ನು ಮಾಡಬೇಕು. ದೇವ ತರ್ಪಣವನ್ನು ಬ್ರಾಹ್ಮ ತೀರ್ಥದಿಂದ ನೀಡಬೇಕು. ಬ್ರಾಹ್ಮ ತೀರ್ಥ ಎಂದರೆ ಐದೂ ಬೆರಳುಗಳನ್ನು ಅಧೋಮುಖವಾಗಿ ಮಾಡಿ ಬೆರಳಿನ ತುದಿಯಿಂದ ನೀರನ್ನು ಬಿಟ್ಟರೆ ಅದು ಬ್ರಾಹ್ಮತೀರ್ಥ ಎನಿಸುವದು. ಇದು ಬೆರಳುಗಳನ್ನು ಸಂಪುಟಾಕಾರವಾಗಿ ಮಡಚಿ ಅಂಗೈಯಲ್ಲಿ ನಿಲ್ಲುವ ನೀರಿನಿಂದ ಆಚಮನವನ್ನು ಮಾಡಬೇಕು. ತೋರು ಬೆರಳು ಮತ್ತು ಹೆಬ್ಬಟ್ಟುಗಳನ್ನು ಅಧೋಮುಖವಾಗಿ ಹಿಡಿದು ಎರಡೂ ಬೆರಳುಗಳ ಸಂದಿಯಿಂದ ನೀರನ್ನು ಬಿಟ್ಟರೆ ಅದು ಪಿತೃತೀರ್ಥ ಎನಿಸುವದು. ನಾಂದೀಮುಖದ ಹೊರತು ಪಿತೃ ಕಾರ್ಯ ಗಳಲ್ಲೆಲ್ಲಾ ಈ ಪಿತೃತರ್ಪಣ ಕೊಡಬೇಕು. ಕಿರು ಬೆರಳಿನ ತುದಿಯಿಂದ ನೀಡಿದ ತೀರ್ಥವು ಪ್ರಜಾಪತಿ ತೀರ್ಥ ಎನಿಸುತ್ತದೆ. ಬ್ರಾಹ್ಮ

ತೀರ್ಥದಿಂದ ಆಚಮನ, ಪಿತೃ ತೀರ್ಥದಿಂದ ತರ್ಪಣ, ನಾಂದೀಮುಖ ಶ್ರಾದ್ಧದಲ್ಲಿ ಪ್ರಜಾಪತಿ ತೀರ್ಥದಿಂದ ತರ್ಪಣವನ್ನು ಕೊಡಬೇಕು.

ಬೆಂಕಿ, ನೀರು, ಎರಡನ್ನೂ ಕೂಡಿ ಕೈಯಲ್ಲಿ ಒಯ್ಯಬಾರದು. ಗುರುಗಳು, ದೇವತೆಗಳೂ, ತಂದೆ ತಾಯಿಗಳು, ಬ್ರಾಹ್ಮಣರು ಇದ್ದ ನಿಟ್ಟಿಗೆ ಕಾಲುಚಾಚಬಾರದು. ಆಕಳವನ್ನು ಹಿಂಡುವಾಗ ಬೇರೆಯವರೊಡನೆ ಮಾತನಾಡಬಾರದು. ಹಿಂಡುವವನನ್ನು ಮಾತನಾಡಿಸಬಾರದು. ಬೊಗಸೆಯಿಂದ ನೀರು ಕುಡಿಯಬಾರದು. ಗುರುಹಿರಿಯರ ಜೊತೆಗೆ ಮಾತನಾಡುವಾಗ ತನ್ನ ಉಸಿರಿನ ಗಾಳಿ ಅವರಿಗೆ ತಟ್ಟದಂತೆ ಮುಖದ ಎದುರು ಕೈ ಅಡ್ಡ ಹಿಡಿದು ಮಾತನಾಡಬೇಕು. ವೈದ್ಯ, ಶ್ರೋತ್ರಿಯ ಬ್ರಾಹ್ಮಣ, ಸಾಲನೀಡುವ ಸಾಹುಕಾರ, ತುಂಬಿ ಹರಿಯುವ ನದಿ, ಸಹಾಯಮಾಡುವ ಮಿತ್ರ ಈ ನಾಲ್ಕು ಇಲ್ಲದಿದ್ದಲ್ಲಿ ವಾಸಮಾಡಬಾರದು. ವೈರಿಗಳನ್ನು ಗೆದ್ದು ಬಲಿಷ್ಠನಾಗಿ ಧರ್ಮಾತ್ಮನಾಗಿ ಮಕ್ಕಳನ್ನು ತಂದೆಯಂತೆ ಪ್ರಜೆಗಳನ್ನು ರಕ್ಷಿಸುವ ರಾಜನು ಇರುವ ರಾಜ್ಯದಲ್ಲಿ ವಾಸ ಮಾಡಬೇಕು. ಯಾವ ಪಟ್ಟಣದಲ್ಲಿ ನಾಗರಿಕರು ಒಕ್ಕಟ್ಟಿನಿಂದ ಇದ್ದು ನ್ಯಾಯಮಾರ್ಗದಲ್ಲಿ ನಡೆಯುವವರಾಗಿ ಮಾತ್ಸರ್ಯ ವಿಲ್ಲದೇ ಶಾಂತ ಸ್ವಭಾವವಾಗಿ ಪರಸ್ಪರ ಸ್ನೇಹ ಸಹಕಾರದಿಂದ ನೆಲಿಸಿರುವರೋ ಅಂಥ ಊರಿನಲ್ಲಿ ನೆಲೆನಿಲ್ಲಬೇಕು. ಯಾವ ರಾಷ್ಟ್ರದಲ್ಲಿ ರೈತರು ಬೆವರು ಹರಿಸಿ ದುಡಿಯುವರೋ ಮತ್ತು ಎಲ್ಲಿ ಸಕಲವಿಧವಾದ ಧಾನ್ಯಗಳು ಸಮೃದ್ಧವಾಗಿ ಬೆಳೆಯುವವೋ ಮತ್ತು ಎಲ್ಲ ಜನರು ದುರಭಿಮಾನಿಗಳಾಗದೇ ಸೌಜನ್ಯದಿಂದ ವರ್ತಿಸುವರೋ ಅಂಥ ಗ್ರಾಮದಲ್ಲಿ ವಾಸಮಾಡಬೇಕು.

ಯಾವ ಊರಿನಲ್ಲಿ ಜನರು ಸರ್ವದಾ ಯುದ್ಧದಲ್ಲಿ ಉತ್ಸಾಹಿಗಳಾಗಿರುವರೋ, ಕುನಸಿನ ಸ್ವಭಾವದವರು ಆಗಿ ಅಪಕಾರವನ್ನು ಮರೆಯದೇ ಸೇಡು ತೀರಿಸಿಕೊಳ್ಳುವ ಪ್ರವೃತ್ತಿಯವರಾಗಿರುವರೋ ಮತ್ತು ಎಲ್ಲಿ ಜನರು ನಿರಂತರವೂ ಜಾತ್ರೆ, ಹಬ್ಬ ಹರಿದಿನಗಳಲ್ಲಿ ದುಂದುವೆಚ್ಚ ಆಚರಿಸುತ್ತಿರುವರೋ, ಅಲ್ಲಿ ಮನುಷ್ಯರು ವಾಸ ಮಾಡಬಾರದು. ಸ್ನೇಹಶೀಲರಾದ ಮಿತ್ರರಿದ್ದಲ್ಲಿ ವಾಸಮಾಡಬೇಕು. ಬಲಿಷ್ಠನಾದ ಧಾರಾಳಿಯಾದ ರಾಜನಿದ್ದಲ್ಲಿ ವಾಸಮಾಡಬೇಕು. ಒಳ್ಳೆ ಮಳೆ ಬೆಳೆಗಳಿಂದ ಭೂಮಿಯು ಸಮೃದ್ಧವಾಗಿ ಸುಜಲಾ ಸುಫಲಾ ಆಗಿರುವದೋ ಅಂಥಲ್ಲಿ ವಾಸಮಾಡಬೇಕು.

ಬ್ರಾಹ್ಮಣರೇ, ಈ ವರೆಗೆ ನಾನು ನಿಮಗೆ ಹಿತೋಪದೇಶವನ್ನು ಮಾಡಿದೆನು. ಈಗ ಭಕ್ಷಭೋಜ್ಯ ವಿಧಿವಿಧಾನಗಳನ್ನು ಹೇಳುತ್ತೇನೆ ಕೇಳಿ. ತಂಗಳ ಅನ್ನವನ್ನು ಊಟ ಮಾಡಬಾರದು. ಎಣ್ಣೆಹಾಕಿ ವಗ್ಗರಣೆಕೊಟ್ಟು ಕಲಿಸಿ ಇಟ್ಟ ಚಿತ್ರಾನ್ನವನ್ನು ಮೂರು ಗಂಟೆಯವರೆಗೆ ಇಟ್ಟರೂ ತಿನ್ನಬಹುದು. ಗೋಧಿ, ಜೋಳ, ಅಕ್ಕಿ ಇವುಗಳನ್ನು ಎಂದಾದರೂ ತಿನ್ನಬಹುದು. ಮಾಂಸ ಭಕ್ಷಣವನ್ನು ಉಚ್ಚಕುಲದವರು ವೃಥಾ ಎಂದೂ ಮಾಡಕೂಡದು. ಕ್ಷತ್ರಿಯಾದಿಗಳು ಮಾಂಸಭಕ್ಷಕರು ಮೊಲ, ಮೀನ, ಏಡಿ, ಆಮೆ ಮೊದಲಾದವುಗಳ ಮಾಂಸ ತಿನ್ನಬಹುದು. ಕೋಳಿ, ನಾಯಿ, ಹಂದಿ, ಮಾಂಸವನ್ನು ಮಾತ್ರ ವರ್ಜ್ಯಮಾಡಬೇಕು. ಪೂರ್ವಕಲ್ಪದಲ್ಲಿ ಶ್ರಾದ್ಧದಲ್ಲಿ ಪ್ರೋಕ್ಷಿತವಾದ ಮಾಂಸವನ್ನು, ಔಷಧಕ್ಕಾಗಿ ಶುದ್ಧೀಕೃತವಾದ ಮಾಂಸವನ್ನು ತಿಂದರೆ ಯಾವ ದೋಷವೂ ಇರಲಿಲ್ಲ. (ಯಾವುದೇ ಬಗೆಯ ಮದ್ಯಮಾಂಸಗಳು ಕಲಿಯುಗದಲ್ಲಿ ನಿಷಿದ್ಧ ಎಂದು ಸ್ಮೃತಿಗ್ರಂಥದಲ್ಲಿ ಹೇಳಿದ್ದಾರೆ). ಈಗ ಮಾತ್ರ ಅವೆಲ್ಲವೂ ವರ್ಜನೀಯ.

ಶಂಖ, ಕಲ್ಲು, ಬಂಗಾರ, ಬೆಳ್ಳಿ, ಹಗ್ಗ, ಬಟ್ಟೆ ತರಕಾರಿ ಕಂದ ಮೂಲ, ಹಣ್ಣು ರತ್ನ, ವಸ್ತ್ರ, ಹವಳ, ಮುತ್ತು, ಪಾತ್ರೆ, ಯಜ್ಞ ಪದಾರ್ಥ, ಪೂಜಾ ಸಲಕರಣೆ ಮುಂತಾದವುಗಳಿಗೆ ನೀರಿನಲ್ಲಿ ತೊಳೆದಿಟ್ಟರೆ ಶುದ್ಧಿಯಾಗುತ್ತದೆ. ಎಣ್ಣೆ, ತುಪ್ಪ ತಗಲಿ ಜಿಡ್ಡುಗಟ್ಟಿದ ಪಾತ್ರೆಗಳಿಗೆ ಬಿಸಿ ನೀರಿನಿಂದ ತೊಳೆದರೆ ಶುದ್ಧಿ. ಮರ, ಕೃಷಾಜಿನ, ಒನಕೆ, ಒರಳು, ಒಗೆದ ಬಟ್ಟೆಗಳನ್ನು ನೀರಿನಲ್ಲಿ ಮತ್ತೆ ತೊಯಿಸಬೇಕೆಂಬ ನೇಮವಿಲ್ಲ. ದೂರಿನಿಂದ ನೀರಿನಲ್ಲಿ ಪ್ರೋಕ್ಷಣ ಮಾಡಿದರೆ ಸಾಕು ಶುದ್ಧಿಯಾಗುತ್ತದೆ. ಅರಳೆಯ ಬಟ್ಟೆಗಳಿಗೆ ನೀರಿನಿಂದಲೂ, ಭಸ್ಮದಿಂದಲೂ ಶುದ್ಧಿ ಆಗುವದು. ಕಟ್ಟಿಗೆ ಆನೆಯ ಕೋರೆ ಮತ್ತು ಕೋಡುಗಳಿಗೆ ಉಚಗೊಡ್ಡು ಹೊಡೆದು ಕಿತ್ತುವದರಿಂದ ಶುದ್ಧಿಯು, ಮಣ್ಣಿನ ಪಾತ್ರೆಗಳಲ್ಲಿ ಒಮ್ಮೆ ಅಡಿಗೆ ಮಾಡಿದ ಬಳಿಕ ಅವುಗಳನ್ನು ಮತ್ತೆ ಉಪಯೋಗಿಸ ಬಾರದು. ಭಿಕ್ಷೆ ಬೇಡಿ ತಂದದ್ದು, ಬಡಿಗನು ಕೈಆಡಿಸಿದ್ದು, ಹಣಕೊಟ್ಟು ಕೊಂಡದ್ದುನ್ನು ಸ್ತ್ರೀಯರ ಮುಖ ಶುದ್ಧವೆಂದು ತಿಳಿಯಬೇಕು. ಯಜ್ಞಾದಿ ಕರ್ಮಭೂಮಿ, ಮನೆ, ಶಾಲೆ, ಸ್ತ್ರೀಯರ ಕುಚದ್ವಂದ್ವ, ಹರಿಯುವ ನೀರು ಇವೆಲ್ಲವೂ ಪವಿತ್ರ. ಇದಕ್ಕೆ ಬೇರೆ ಶುದ್ಧಿ ಬೇಡ.

ಭೂಮಿಯು ಪುಣ್ಯ ಕಾರ್ಯಕ್ರಮದಿಂದ ಮತ್ತು ಬೆಂಕಿಯಿಂದ ಸುಡುವದರಿಂದ, ಗೋಮಯದಿಂದ, ಸಾರಿಸುವದರಿಂದ, ಹಸುಗಳನ್ನು ತಂದು ನಿಲ್ಲಿಸುವದರಿಂದ, ಗುಡಿಸುವದರಿಂದ, ಕೆದರುವದರಿಂದ, ಗೋಮಯದ ಜಲವನ್ನು ಸಿಂಪಡಿಸುವದರಿಂದ ಶುದ್ಧವಾಗುತ್ತದೆ. ಮನೆಯು ಸಾರಣೆ ಕಾರಣೆಗಳಿಂದಲೂ, ಗುಡಿಸುವದರಿಂದಲೂ ಶುದ್ಧವಾಗುವದು.

ಮಾಡಿಟ್ಟ ಅನ್ನದ ದೊಡ್ಡಪಾತ್ರೆಯಲ್ಲಿ ಕೂದಲು ಬಿದ್ದಿದ್ದರೆ, ಕ್ರಿಮಿ ಕೀಟ ಬಿದ್ದಿದ್ದರೆ, ಹಸು ಬಂದು ಮೂಸಿದ್ದರೆ, ನೊಣ ಕುಳಿತಿದ್ದರೆ, ಅಂಥ ಅನ್ನದ ಶುದ್ಧಿಗಾಗಿ ನೀರನ್ನೂ, ಮಣ್ಣನ್ನೂ, ಭಸ್ಮವನ್ನೂ ಅನ್ನದಲ್ಲಿ ಹಾಕಬೇಕು. ತಾಮ್ರದ ಪಾತ್ರೆಗಳು ಹುಣಸೆ ಹಣ್ಣಿನಿಂದ, ತವರು ಸೀಸುಗಳು ನೀರಿನಿಂದ, ಕಂಚಿನ ಪಾತ್ರೆಗಳು ಬೂದಿ ನೀರುಗಳಿಂದ ಶುದ್ಧ. ಮಲದಲ್ಲಿ ಬಿದ್ದ ವಸ್ತುವಿಗೆ ಮಣ್ಣು ನೀರು ಹಾಕಿ ದುರ್ಗಂಧವನ್ನು ಹೋಗಲಾಡಿಸಿದ ಬಳಿಕ ಶುದ್ಧಿ. ದಾರಿಯಲ್ಲಿ ಬಿದ್ದ ನೀರು, ಎಣ್ಣೆ ಮತ್ತು ಹಸುವಿನ ಹಾಲು ಶುದ್ಧ ಎಂದು ತಿಳಿಯಬೇಕು. ಕೆಟ್ಟ ವಸ್ತುವಿನ ಸಹವಾಸದಿಂದ ಧೂಳಿ, ಅಗ್ನಿ, ಕುದುರೆ, ಹಸು, ನೆರಳು, ಕಿರಣಗಳು, ಗಾಳಿ, ಭೂಮಿ, ನೊಣಗಳು ಇವೆಲ್ಲವೂ ದೋಷಯುಕ್ತವಾಗುವದಿಲ್ಲ. ಕುರಿ ಮತ್ತು ಕುದುರೆಗಳು ಶುದ್ಧ ಆದರೆ ಗೋವಿನ ಕರುವಿನ ಮುಖ ಮಾತ್ರ ಪವಿತ್ರವಲ್ಲ. ತಾಯಿಯ ಎದೆಯ ಹಾಲು ಪವಿತ್ರ. ಹಕ್ಕಿ ಕುಕ್ಕಿ ಬೀಳಿಸಿದ ಹಣ್ಣು ಪವಿತ್ರ. ಆಸನ, ಹಾಸಿಗೆ, ವಾಹನ ನದಿಯ ಎರಡು ತೀರಗಳು, ದಂಡೆಯ ಮೇಲಿನ ಹುಲ್ಲು ಇವೆಲ್ಲವೂ ಸೂರ್ಯನ ಬೆಳಕಿನಿಂದಲೂ, ಚಂದ್ರನ ಬೆಳದಿಂಗಳಿಂದಲೂ ಮತ್ತು ಗಾಳಿಯಿಂದಲೂ ಶುದ್ಧವಾಗುತ್ತವೆ. ಸ್ನಾನಮಾಡಿದಾಗ ಬೀದಿಯಲ್ಲಿ ತಿರುಗಿಬಂದಾಗ, ಕುಡಿಯುವಾಗ, ತಿನ್ನುವಾಗ ಕಾರ್ಯಮಾಡುವಾಗಲೂ, ಶಾಸ್ತ್ರೋಕ್ತವಾಗಿ ಆಚಮನ ಮಾಡಬೇಕು. ಬೀದಿಯಲ್ಲಿ ತಿರುಗಾಡಿಬಂದಾಗ ಸ್ನಾನಮಾಡಿದ ಬಳಿಕ, ಭೋಜನ ಪಾನಾದಿಗಳನ್ನು ಮಾಡಿದ ನಂತರ ಆಚಮನ ಮಾಡಬೇಕು. ಬಟ್ಟೆಯನ್ನು ಉಟ್ಟುಕೊಂಡಾಗಲೂ, ಆಚಮನ ಮಾಡಬೇಕು ಬೀದಿಯ ಬದಿಯ ಕೆಸರನ್ನು ತೆಗೆದು ಕೊಂಡು ಮಾಡಿದ, ಬೆಂಕಿಯಲ್ಲಿ ಸುಟ್ಟ ಇಟ್ಟಿಗೆಗಳಿಗೆ ಗಾಳಿ ಬೀಸುವದರಿಂದಲೇ ಪಾವಿತ್ರ್ಯ. ಬಹಳಷ್ಟು ಅನ್ನವು ಮೈಲಿಗೆಯಾಗಿದ್ದರೆ ಮೇಲಿನ ಭಾಗವನ್ನು ಮಾತ್ರ ದೂರಸರಿಸಿ ಉಳಿದ ಅನ್ನಕ್ಕೆ ಪ್ರೋಕ್ಷಣ ಮಾಡಿ ಆಚಮನ ಮಾಡಿ

ಶುದ್ಧೀಕರಿಸಬೇಕು. ದುಷ್ಟರ ಅನ್ನವನ್ನು ಉಂಡರೆ ಮೂರು ರಾತ್ರಿ ಉಪವಾಸ ಮಾಡಬೇಕು. ಮುಟ್ಟಾದ ಹೆಣ್ಣುಮಗಳು, ಸೂತಕ ಬಂದವರು, ಪಾಖಂಡಿಗಳು ಇವರನ್ನೆಲ್ಲ ನೋಡಿದ ಕೂಡಲೇ ಆತ್ಮಶುದ್ಧಿಗಾಗಿ ಸ್ನಾನ ಮಾಡಬೇಕು. ಶವವನ್ನು ಹೊತ್ತವರು ಮನೆಗೆ ಬಂದು ಸಚೈಲ ಸ್ನಾನ ಮಾಡಬೇಕು. ಮನುಷ್ಯರ ಮೂಳೆಯನ್ನು ಮುಟ್ಟಿದರೆ ಸ್ನಾನ ಮಾಡಿದ ನಂತರ ಶುದ್ಧಿಯಾಗುವದು. ಅಥವಾ ಅಚಮನ ಮಾಡಿದರೆ, ಹಸುವನ್ನು ಮುಟ್ಟಿದರೆ, ಸೂರ್ಯನನ್ನು ನೋಡಿದರೆ ಪವಿತ್ರನಾಗುವನು.

ಸ್ನಾನ ಮಾಡಿದ, ಉಗುಳಿದ ಭೂಮಿಯನ್ನು ದಾಟಿ ಹೋಗಬಾರದು. ಮನೆಯಲ್ಲಿ ಇರುವ ತಂಗಳ ಅನ್ನ, ಮಲ, ಮೂತ್ರ ಮೊದಲಾದವುಗಳನ್ನೆಲ್ಲಾ ಮನೆಯಿಂದ ಹೊರಗೆ ಹಾಕಿ ನೀರಿನಿಂದ ಆ ಸ್ಥಳವನ್ನೆಲ್ಲಾ ಶುದ್ಧೀಕರಿಸಬೇಕು. ದೇವನದಿಗಳಾದ ಗಂಗಾನದಿ, ತೀರ್ಥಗಳಲ್ಲಿಯೂ, ದೈವ ನಿರ್ಮಿತವಾದ ನೈಸರ್ಗಿಕ ಜಲಾಶಯಗಳಲ್ಲಿಯೂ ಮತ್ತು ನದಿಗಳಲ್ಲಿಯೂ ಮನುಷ್ಯನು ಸ್ನಾನಮಾಡಬೇಕು. ದ್ವೇಷಮಾಡುವ ಜನರಜೊತೆಗೆ ಸಂಭಾಷಣೆಯನ್ನು ಮಾಡಬಾರದು. ಗಂಡನಿಲ್ಲದ ಹೆಣ್ಣುಮಕ್ಕಳೊಂದಿಗೂ ಮಾತನಾಡಬಾರದು. ದೇವತೆಗಳೂ, ಪಿತೃಗಳೂ, ವೇದಾಂತಪಂಡಿತರು, ಯಜ್ಞ, ತೀರ್ಥಂಕು, ಸನ್ಯಾಸಿಗಳು ಇವರನ್ನೆಲ್ಲಾ ನಿಂದೆ ಮಾಡುವವರನ್ನು ನೋಡಿದರೂ ಮುಟ್ಟಿದರೂ ಮಹಾಪಾಪ. ಯಾವುದೇ ಮಾಡಿದ ಪಾಪಕ್ಕೆ ಪಶ್ಚಾತ್ತಾಪವಾಗಿ ಮತ್ತೆ ಅವರು ಸೂರ್ಯನನ್ನು ನೋಡಿದರೆ ಶುದ್ಧರಾಗುತ್ತಾರೆ.

ಇದರಂತೆ ಮುಟ್ಟಾದವಳನ್ನು, ಪತಿತರನ್ನೂ ಹೆಣವನ್ನು, ಬೇರೆಧರ್ಮದ ಸೂಲಗಿತ್ತಿಯರನ್ನು, ಷಂಡರನ್ನು, ಬೆತ್ತಲೆಯಾದವರನ್ನು, ಹೆಣ ಹೊರುವವರನ್ನು, ವರ್ಣಬಾಹ್ಯರನ್ನೂ ಮುಟ್ಟಿದಾಗ ಸರೋವರದಲ್ಲಿ ಸಚೈಲಸ್ನಾನ ಮಾಡಿ ಸೂರ್ಯನನ್ನು ನೋಡಬೇಕು. ಪಾಖಂಡಿ, ವ್ಯಭಿಚಾರಿ, ಭಿಕ್ಷುಕ, ಬೆಕ್ಕು, ಕತ್ತೆ, ನಾಯಿ, ಪತಿತ, ಶವವಾಹಕರನ್ನು ಮುಟ್ಟಿದರೆ ಸ್ನಾನವನ್ನು ಮಾಡಿ ಶುದ್ಧರಾಗಬೇಕು. ಸೂತಕದಲ್ಲಿದ್ದವರನ್ನೂ, ನಾಸ್ತಿಕರನ್ನು ಮುಟ್ಟಿದರೆ ಅವರು ಕೂಡಾ ಕೂಡಲೇ ಸ್ನಾನಮಾಡಿ ಬರಬೇಕು. ಬ್ರಾಹ್ಮಣನಿಂದ ಪರಿತ್ಯಕ್ತನಾಗಿ ನಿಷಿದ್ಧ ಭಕ್ಷಣ ಮಾಡುವವನು ನರಾಧಮನೆನಿಸುವನು. ನಿತ್ಯ ಕರ್ಮಗಳನ್ನು ಅನುಷ್ಠಾನ ಮಾಡುವದಕ್ಕೆ ವ್ಯತ್ಯಾಸವನ್ನು ಎಂದೂ ಮಾಡತಕ್ಕದ್ದಲ್ಲ. ಧರ್ಮಶ್ರದ್ಧೆ ಇದ್ದ ಮಾನವನು ಎಂದೂ ಕರ್ಮ ಲೋಪವನ್ನು ಮಾಡಬಾರದು. ತನ್ನ ವರ್ಣಾಶ್ರಮ ಉಚಿತವಾದ ಕಾರ್ಯಗಳನ್ನು ಬಿಟ್ಟು ಅಭಕ್ಷ್ಯಭಕ್ಷಣವನ್ನು ಮಾಡುವವನು ನರಾಧಮನೆನಿಸುವನು. ನಿತ್ಯ ಕರ್ಮಗಳಾದ ನೈವೇದ್ಯ, ವೈಶ್ವದೇವ, ದೇವಪೂಜಾದಿಗಳನ್ನು ಎಂದೂ ಬಿಡಬಾರದು. ಪ್ರತಿನಿತ್ಯವೂ ತಪ್ಪದೇ ಮಾಡಬೇಕು.

ವೃದ್ಧಿ ಸೂತಕ ಬಂದಾಗ ಶಾಸ್ತ್ರೋಕ್ತವಾದ ನಿತ್ಯಕರ್ಮಗಳನ್ನು ಮಾಡಬಾರದು. ಬ್ರಾಹ್ಮಣನಿಗೆ ಬಂಧುಗಳು ಮೃತರಾದರೆ ಹತ್ತುದಿನ ಆಶೌಚ ಆದೆ. ದಾನ, ಹೋಮ; ದೇವರಪೂಜೆ ಮುಂತಾದವುಗಳನ್ನು ಆಗ ಮಾಡಬಾರದು. ಕ್ಷತ್ರಿಯರಿಗೆ ಹನ್ನೆರಡು ದಿನಕ್ಕೂ, ವೈಶ್ಯರಿಗೆ ಹದಿನೈದು ದಿನಕ್ಕೂ ಶುದ್ಧಿಯಾಗಿ ಅವರಿಗೆ ಕರ್ಮಾಧಿಕಾರ ಬರುವದು. ಶೂದ್ರನಿಗೆ ಆಶೌಚವು ಒಂದು ತಿಂಗಳವರೆಗೆ ಇರುವದು. ಜನನಶೌಚ, ಮರಣಶೌಚ ಯಾವದು ಒಂದಾದರೂ ಇದ್ದಾಗ ಶಾಸ್ತ್ರೋಕ್ತವಾದ ನಿತ್ಯಕರ್ಮವನ್ನು ಅನುಷ್ಠಾನ

ಮಾಡಬಾರದು. ಅನಂತರ ಮಾತ್ರ ಎಲ್ಲರೂ ತಮ್ಮ ತಮ್ಮ ವರ್ಣಾಶ್ರಮ ಉಚಿತವಾದ ಧರ್ಮಕರ್ಮಗಳನ್ನು ಯಥಾಯೋಗ್ಯವಾಗಿ ಮಾಡಬೇಕು. ಯಾವನಾದರೂ ಸತ್ತರೆ ಪ್ರೇತನಾದ ಅವನಿಗೆ ಅವನ ಗೋತ್ರದವರೆಲ್ಲರೂ ಹೊರಗೆ ಜಲಾಂಜಲಿಯನ್ನು ಕೊಡಬೇಕು. ಮನುಷ್ಯನು ಸತ್ತ ಬಳಿಕ ನಾಲ್ಕನೆಯ ದಿನ ಅಥವಾ ಏಳು, ಒಂಭತ್ತನೆಯ ದಿನ ಅಥವಾ ಹತ್ತನೆಯ ದಿನ ಕರ್ಮಭೂಮಿಗೆ ಹೋಗಿ ಪ್ರೇತಕ್ಕೆ ತನ್ನ ಗೋತ್ರದವರೊಂದಿಗೆ ನೀರನ್ನು ಕೊಡಬೇಕು. ಸತ್ತ ಬಳಿಕ ಮೊದ್ಲಲನೆಯ ದಿನ ಅಥವಾ ನಾಲ್ಕು ಏಳು, ಒಂಭತ್ತನೆಯ ದಿನದಲ್ಲಿ ಅಸ್ಥಿ ಸಂಚಯವನ್ನು ಮಾಡಬೇಕು. ಅಸ್ಥಿ ಸಂಚಯ ಮಾಡಿದ ಬಳಿಕ ಅವನ ಗೋತ್ರದವರು ಮೂಳೆಗಳನ್ನು ಆಯ್ದುಕೊಂಡು ಬಂದವನ ಅಂಗ ಸ್ಪರ್ಶವನ್ನು ಮಾಡಿ ಸ್ನಾನಮಾಡಬೇಕು. ಅವನ ಊರ್ಧ್ವ ದೇಹಿಕ ಕಾರ್ಯಗಳನ್ನೆಲ್ಲ ಅಸ್ಥಿಸಂಚಯದ ನಂತರವೇ ಸುರುಮಾಡಬೇಕು. ಸಣ್ಣ ಮಗು ದೇಶಾಂತರದಲ್ಲಿ ಮೃತವಾದರೆ, ಸನ್ಯಾಸಿ ಮೃತನಾಗಿದ್ದರೆ ಸಂಬಂಧ ಸ್ನಾನ ಮಾಡಿದ ಕೂಡಲೇ ಶುದ್ಧನಾಗುತ್ತಾನೆ. ಆದರೆ ಕರ್ಮಾಧಿಕಾರ ಪ್ರತಿಬಂಧಕವಾದ ಆಶೌಚವು ಮೂರು ದಿನ ಮಾತ್ರ ಇರುವದು. ಎಲ್ಲ ವರ್ಣದವರೂ ಅರ್ಥಾತ್ ವೈಶ್ಯ, ಕ್ಷತ್ರಿಯ ಶೂದ್ರರೂ ಅನುಕ್ರಮವಾಗಿ ಹತ್ತು, ಹನ್ನೆರಡು, ಹದಿನೈದು ದಿನ, ಒಂದುತಿಂಗಳ ಪರ್ಯಂತವೂ ತಮ್ಮ ಆಶೌಚವನ್ನು ಆಚರಿಸಬೇಕು. ಬಳಿಕ ತಮ್ಮತಮ್ಮ ಕರ್ಮಾನುಷ್ಠಾನವನ್ನು ಮಾಡಬೇಕು. ಪ್ರೇತವನ್ನು ಉದ್ದೇಶ ಮಾಡಿಕೊಂಡು ಏಕೋದ್ದಿಷ್ಟ ವಿಧಿಯಿಂದ ಶ್ರಾದ್ಧವನ್ನು ಮಾಡಬೇಕು. ಬ್ರಾಹ್ಮಣರಿಗೂ, ಪಂಡಿತರಿಗೂ ದಾನವನ್ನು ಕೊಡಬೇಕು. ಸತ್ತ ತನ್ನ ತಂದೆ ತಾಯಿ ಅಥವಾ ಬಂಧುಗಳಿಗೆ ಬದುಕಿ ಇದ್ದಾಗ ಯಾವುದು ಇಷ್ಟವಾಗಿತ್ತೋ ಅದನ್ನು ಸದ್ಗುಣಿಯೂ ಸಚ್ಚೀಲನೂ ಆದ ಮನುಷ್ಯನಿಗೆ ದಾನವಾಗಿ ನೀಡಬೇಕು. ಆಶೌಚ ದಿನಗಳು ಕಳೆದ ಬಳಿಕ ಸ್ನಾನಮಾಡಿ ಪ್ರೇತನಾದವನಿಗೆ ನೀರು ಪಿಂಡ ಎಲ್ಲವನ್ನು ಕೊಟ್ಟರೆ ಎಲ್ಲ ವರ್ಣರು ಪವಿತ್ರರಾಗುವರು. ಮತ್ತು ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಸೌಖ್ಯ ದೊರಕಬೇಕೆಂದು ಅಪೇಕ್ಷಿಸುವವರೂ ಪ್ರತಿನಿತ್ಯವೂ ಅಧ್ಯಯನವನ್ನು ಮಾಡಬೇಕು. ನ್ಯಾಯಮಾರ್ಗದಿಂದ ದ್ರವ್ಯವನ್ನು ಸಂಪಾದಿಸಬೇಕು. ಪ್ರಯತ್ನಮಾಡಿ ಯಜ್ಞ, ಯಾಗ, ದೇವತಾರಾಧನೆಗಳನ್ನು ಮಾಡಬೇಕು. ಜನರಿಗೆ ಹೇಳಲಿಕ್ಕೆ ಬಾರದಂಥ ಪಾಪಕೃತ್ಯವನ್ನು ಗುಟ್ಟಾಗಿ ಮಾಡಬಾರದು. ಧರ್ಮ, ಅರ್ಥ, ಕಾಮವನ್ನು ಯಥೋಚಿತವಾಗಿ ಅನುಸರಿಸಿದರೆ ಇಲ್ಲಿ ಬದುಕಿರುವವರಿಗೆ ಭೋಗ ಭಾಗ್ಯಗಳನ್ನು ಅನುಭವಿಸಿ ಪರಲೋಕದಲ್ಲಿಯೂ ಸೌಖ್ಯವನ್ನು ಅನುಭವಿಸುತ್ತಾನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಲ್ಲ ಜಾತಿಯವರೂ ಸ್ವರ್ಗಸಾಧನವೂ ಪುಣ್ಯಫಲಕವೂ ಆದ ಕಾರ್ಯವನ್ನು ಮಾಡಿ ಶ್ರೇಯಸ್ಸನ್ನು ಹೊಂದಬೇಕು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತೈದನೆಯ ಅಧ್ಯಾಯ ಮುಗಿದುದು*

**ಶೌನಕಾದಿ ಋಷಿ:-** ಋಷಿವರ್ಯರೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಧರ್ಮಗಳು ಯಾವುವು? ಮತ್ತು ಬ್ರಹ್ಮಚರ್ಯ, ಗ್ರಹಸ್ಥಾಶ್ರಮ, ವಾನಪ್ರಸ್ಥಾಶ್ರಮ, ಸಂನ್ಯಾಸಾಶ್ರಮ ಎಂಬ ನಾಲ್ಕು ಆಶ್ರಮ ಧರ್ಮಗಳು ಯಾವುವು ಇವನ್ನೆಲ್ಲಾ ತಿಳಿಸಿರಿ.

**ವೇದವ್ಯಾಸ:-** ಮುನಿಗಳೇ, ನಾಲ್ಕು ವರ್ಣಗಳ ಹಾಗೂ ನಾಲ್ಕು ಆಶ್ರಮಗಳ ಧರ್ಮಗಳನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳಿರಿ. ಬ್ರಾಹ್ಮಣನಾದವನಿಗೆ ಮುಖ್ಯವಾಗಿ ದಯೆ, ದಾನ, ತಪಸ್ಸು, ಶ್ರೀಹರಿಯನ್ನು ಉದ್ದೇಶಿಸಿ ಕಡ್ಡಾಯವಾದ ಧರ್ಮಕರ್ಮಗಳು. ಇವನ್ನು ಮಾಡಬೇಕಾಗುತ್ತದೆ. ಬ್ರಾಹ್ಮಣನು ಉಪಜೀವನಕ್ಕಾಗಿ ಬೇರೆಯವರಿಂದ ಯಜ್ಞಗಳನ್ನು ಮಾಡಿಸಬೇಕು. ಮತ್ತು ಮೂರು ವರ್ಣದವರಿಗೆ ಅಧ್ಯಾಪನ ಕಾರ್ಯವನ್ನು ಕೈಗೊಂಡು ಅವರಿಗೆಲ್ಲಶಸ್ತ್ರಶಾಸ್ತ್ರ ವಿದ್ಯೆಯನ್ನು ಕಲಿಸಿಕೊಡಬೇಕು. ಅವರು ಯಜ್ಞದಲ್ಲಿ ಯಜಮಾನನು ಸಂತೋಷದಿಂದ ಎಷ್ಟೇದಕ್ಷಿಣೆ ಕೊಟ್ಟರೂ ಅಷ್ಟರಿಂದಲೇ ತೃಪ್ತಿಯಾಗಬೇಕು. ಶಸ್ತ್ರ ಶಾಸ್ತ್ರಾಭ್ಯಾಸ ಮಾಡಿದ ವಿದ್ಯಾರ್ಥಿಗಳು ಭಕ್ತಿಯಿಂದ ನೀಡಿದ ಗುರುದಕ್ಷಿಣೆಯನ್ನು ಸ್ವೀಕರಿಸಬೇಕು. ಕೊಟ್ಟಷ್ಟರಿಂದಲೇ ತೃಪ್ತಿಯಾಗಬೇಕು. ಎಲ್ಲಾ ಜಾತಿಯ ಜನರಿಗೆ ಲೇಸನ್ನೇ ಬಯಸಬೇಕು. ಹಿತವನ್ನೇ ಮಾಡಬೇಕು. ಎಲ್ಲ ಪ್ರಾಣಿಗಳ ಮೇಲೆ ದಯೆಯನ್ನು ತೋರಿಸಬೇಕು. ಎಲ್ಲರೊಡನೆಯು ಪ್ರೀತಿಯಿಂದ ಇರಬೇಕು. ಲೋಕಮೈತ್ರಿಯೇ ಬ್ರಾಹ್ಮಣನಿಗೆ ಮುಖ್ಯವಾದ ಧನ. ಋತುಕಾಲದಲ್ಲಿ ತನ್ನ ಮದುವೆಯಾದ ಮಡದಿಯೊಡನೆ ಸಂಗಮವು ಪ್ರಶಸ್ತ ಶಾಸ್ತ್ರದಲ್ಲಿ ಎಂದು ಹೇಳಿದೆ. ಉಳಿದ ನಿಷಿದ್ಧವಾಗದ ದಿನಗಳಲ್ಲಿ ಸ್ವ ಸ್ತ್ರೀಸಂಗ ಮಾಡಿದರೂ ದೋಷವಿಲ್ಲ. ಇವು ಇಷ್ಟು ಬ್ರಾಹ್ಮಣರು ಪರಿಪಾಲಿಸಬೇಕಾದ ನಿಯಮಗಳು.

ಕ್ಷತ್ರಿಯನಾದವನು ತನ್ನ ಇಚ್ಛೆಯಿಂದ ದಾನಧರ್ಮಗಳನ್ನು ನೀಡಬೇಕು. ತಾನು ಬಗೆಬಗೆಯ ಯಜ್ಞಗಳನ್ನು ಮಾಡಬೇಕು ಮತ್ತು ವಿದ್ವಾಂಸರು ಇದ್ದಲ್ಲಿ ಹೋಗಿ ಶಸ್ತ್ರ ಶಾಸ್ತ್ರಾದಿಗಳನ್ನೂ ವಿದ್ಯೆಗಳನ್ನು ಅಧ್ಯಯನ ಮಾಡಬೇಕು. ಶಸ್ತ್ರದಿಂದಲೇ ಉಪಜೀವನವನ್ನು ಮಾಡಬೇಕು. ಪೃಥ್ವಿಯ ಪರಿಪಾಲನೆಯು ರಾಜರಾದವರ ಮುಖ್ಯ ಕರ್ತವ್ಯವಾಗಿರುತ್ತದೆ. ಬ್ರಾಹ್ಮಣರು ಮಾಡುವ ಯಜ್ಞಯಾಗಾದಿ ಕಾರ್ಯಗಳನ್ನು ರಕ್ಷಿಸಬೇಕು. ದುಷ್ಟರನ್ನು ಶಿಕ್ಷಿಸಬೇಕು. ಶಿಷ್ಟರನ್ನು ರಕ್ಷಿಸಬೇಕು. ಎಲ್ಲ ಜಾತಿಯ ಜನರು ವರ್ಣಾಶ್ರಮಗಳಿಗೆ ಉಚಿತವಾದ ಕಾರ್ಯಗಳನ್ನು ಅನುಷ್ಠಾನ ಮಾಡುವ ಕಾರ್ಯಕ್ಕೆ ಸರ್ವವಿಧವಾದ ಸೌಲಭ್ಯವನ್ನೂ ಸೌವಿಧ್ಯವನ್ನೂ ಕಲ್ಪಿಸಿಕೊಡಬೇಕು.

ವೈಶ್ಯರಾದವರು ಪಶುಪಾಲನ, ವ್ಯಾಪಾರ, ಬೇಸಾಯ, ಉದ್ಯೋಗ ಮೊದಲಾದವುಗಳನ್ನು ಮಾಡಿ ದೇಶದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸಬೇಕು. ಬ್ರಾಹ್ಮಣ, ಕ್ಷತ್ರಿಯರಿಗೆ ಇದ್ದಂತೆ ವೈಶ್ಯರಿಗೂ ಕೂಡ ಅಧ್ಯಯನ, ಯಜ್ಞ, ದಾನ, ಧರ್ಮಗಳಲ್ಲಿ ಅಧಿಕಾರ ಇರುತ್ತದೆ. ವೈಶ್ಯನಾದವನು ದ್ವಿಜರಿಗೆಲ್ಲ ಹೇಳಿದ ನಿತ್ಯಕರ್ಮಗಳನ್ನು, ನೈಮಿತ್ತಿಕ ಕರ್ಮಗಳನ್ನು ತಪ್ಪದೇ ಆಚರಿಸಬೇಕು. ಪದಾರ್ಥಗಳನ್ನು ಕೊಳ್ಳುವದು, ಮಾರುವದು, ಬಡಿಗತನ, ಕಟ್ಟಿಗೆ, ಕಬ್ಬಿಣ, ಹಿತ್ತಾಳೆ, ಬೆಳ್ಳಿ ಮುಂತಾದ

ಜನರಿಗೆ ಉಪಯುಕ್ತವಾದ ಪದಾರ್ಥಗಳನ್ನು ನಿರ್ಮಾಣ ಮಾಡುವದು, ಮಾರಾಟ ಮಾಡುವದು ಕೊಳ್ಳುವದು ಮತ್ತು ಬೇರೆ ಬೇರೆ ಉಪಾಯಗಳಿಂದ ಧನವನ್ನು ಸಂಪಾದಿಸುವದು ಶೂದ್ರನ ಕರ್ತವ್ಯವಾಗಿದೆ. ಶೂದ್ರನಾದವನು ದಾನ, ಯಜ್ಞಗಳನ್ನು ಪಿತೃಯಜ್ಞವಾದ ಶ್ರಾದ್ಧಾದಿಗಳನ್ನು ದಾನಧರ್ಮಾದಿಗಳನ್ನು ಮಾಡತಕ್ಕದ್ದು. ಇವಿಷ್ಟು ಶೂದ್ರನಿಗೆ ವಿಹಿತವಾದ ಧರ್ಮಗಳು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ನಾಲ್ಕು ವರ್ಣದವರಿಗೂ ಮತ್ತು ಎಲ್ಲ ಆಶ್ರಮದವರಿಗೂ ಕೆಲವೊಂದು ಸಾಮಾನ್ಯ ಧರ್ಮಗಳೂ ಇರುತ್ತವೆ. ಋತುಕಾಲದಲ್ಲಿ ತನ್ನ ಮಡದಿಯನ್ನು ಕೂಡುವದು, ಎಲ್ಲ ಪ್ರಾಣಿಗಳಲ್ಲಿ ದಯೆ, ತಾಳ್ಮೆ, ಸತ್ಯ, ಸ್ನಾನ ಪ್ರಿಯವಚನ ಸುಹೃದ್ಭಾವ, ಔದಾರ್ಯ, ಅತಿ ಆಶೆ ಮಾಡದಿರುವದು, ಹೊಟ್ಟೆಕಿಚ್ಚು ಪಡದಿರುವದು ಇವು ಸರ್ವಸಾಮಾನ್ಯವಾದ ಧರ್ಮಗಳು ಆಗಿರುತ್ತವೆ. ಎಲ್ಲರೂ ತಮ್ಮ ತಮಗೆ ವಿಹಿತವಾದ ಧರ್ಮಗಳನ್ನೇ ಆಚರಿಸಬೇಕು. ಬ್ರಾಹ್ಮಣನಾದವನು ಆಪತ್ಕಾಲದಲ್ಲಿ ಕ್ಷತ್ರಿಯರಿಗೆ ವಿಹಿತವಾದ ಯುದ್ಧವನ್ನು ಮಾಡುವದು. ಪೃಥ್ವೀ ರಕ್ಷಣೆಯನ್ನು ಮಾಡುವದು, ಅಥವಾ ವೈಶ್ಯರಂತೆ ವ್ಯಾಪಾರ, ಉದ್ಯೋಗ, ಬೇಸಾಯ, ಕ್ರಯವಿಕ್ರಯಾದಿಗಳನ್ನು ಕೈಗೊಳ್ಳುವದು ಉಚಿತ. ಕ್ಷತ್ರಿಯನಾದವನು ವೈಶ್ಯರಿಗೂ, ಶೂದ್ರರಿಗೂ ಹೇಳಿದ ಕಾರ್ಯಗಳನ್ನು ಆಪತ್ಕಾಲದಲ್ಲಿ ಮಾಡಬೇಕು. ಎಲ್ಲ ವರ್ಣದವರೂ, ಸಾಮರ್ಥ್ಯವಿದ್ದಾಗ ತಮ್ಮ ತಮ್ಮ ಧರ್ಮಗಳನ್ನು ಬಿಡಬಾರದು. ಧರ್ಮ ಸಂಕರವನ್ನು ಮಾಡಬಾರದು ಅನಿವಾರ್ಯವಾದಾಗ, ಆಪತ್ಕಾಲ ಬಂದಾಗ ಮಾತ್ರ ತಮ್ಮ ವರ್ಣಾಶ್ರಮಕ್ಕೆ ವಿಹಿತವಾದ ಕರ್ಮವನ್ನು ಬಿಟ್ಟು ಬೇರೆಯವರ ಕರ್ಮಗಳಿಂದ ಬದುಕಬಹುದು.

ಇನ್ನು ಆಶ್ರಮ ಧರ್ಮಗಳನ್ನು ಹೇಳುತ್ತೇನೆ ಕೇಳು. ಬ್ರಹ್ಮಚಾರಿಯಾದವನು ಎಂಟು ವರ್ಷದವನಿದ್ದಾಗ ಉಪನಯನವನ್ನು ಮಾಡಿಕೊಳ್ಳಬೇಕು. ಗುರುಗಳ ಮನೆಯಲ್ಲಿ ಇದ್ದು ವೇದಶಾಸ್ತ್ರಗಳ ಅಧ್ಯಯನ ಮಾಡಬೇಕು. ಸಕಾಲದಲ್ಲಿ ಸ್ನಾನಮಾಡಬೇಕು. ಗುರುಗಳ ಸೇವೆ ಎರಡುಹೊತ್ತು ಸಂಧ್ಯಾವಂದನ, ಸೂರ್ಯನಿಗೆ ಅರ್ಘ್ಯಪ್ರಧಾನ, ಗುರುಗಳ ವಂದನ, ವ್ರತಾನುಷ್ಠಾನ ಮುಂತಾದವುಗಳನ್ನು ತಪ್ಪದೇ ಮಾಡಬೇಕು. ಗುರುಗಳು ನಿಂತಾಗ ನಿಲ್ಲಬೇಕು. ಹೋಗುವಾಗ ಹಿಂಬಾಲಿಸಬೇಕು. ಗುರುಗಳು ಕುಳಿತುಕೊಂಡಾಗ ಅವರಿಗಿಂತ ಕೆಳಗಿನ ಆಸನದಲ್ಲಿ ಕುಳಿತುಕೊಳ್ಳಬೇಕು. ಅವರಿಗೆ ಪ್ರತಿಕೂಲವನ್ನು ಎಂದೂ ಆಚರಿಸ ಬಾರದು. ಭಿಕ್ಷೆ ಬೇಡಿಕೊಂಡು ಬಂದು ಗುರುಗಳ ಅಪ್ಪಣೆಪಡೆದು ಅದನ್ನು ಉಣ್ಣಬೇಕು. ಗುರುಗಳು ಸ್ನಾನ ಮಾಡುವದಕ್ಕಿಂತ ಮೊದಲು ಸ್ನಾನ ಮಾಡಿ ಮಡಿಯಿಂದ ಅವರಿಗೆ ಬೇಕಾದ ನೀರು, ಹೂ, ತುಳಸಿ, ಸಮಿಧೆ ಮುಂತಾದವುಗಳನ್ನು ಪೂಜೆಗೆ ಒದಗಿಸಿ ಕೊಡಬೇಕು. ಹೀಗೆ ಗುರುಕುಲದಲ್ಲಿ ಇದ್ದು ಗುರುಗಳಿಂದ ಎಲ್ಲ ವಿದ್ಯೆಯನ್ನು ಕಲಿತುಕೊಂಡು ಪಂಡಿತನಾಗಿ ಅವರ ಅಪ್ಪಣೆಯನ್ನು ಪಡೆದುಕೊಂಡು ಗುರುದಕ್ಷಿಣೆಯನ್ನು ಕೊಟ್ಟು ತನ್ನ ಮನೆಗೆ ಬರಬೇಕು.

ವಿಧಿಪೂರ್ವಕವಾಗಿ ಮದುವೆ ಮಾಡಿಕೊಂಡು ಗೃಹಸ್ಥಾಶ್ರಮವನ್ನು ಪ್ರವೇಶಿಸಬೇಕು. ನ್ಯಾಯಮಾರ್ಗದಿಂದ ಧನವನ್ನು ಸಂಪಾದಿಸಬೇಕು. ಪ್ರತಿದಿನವೂ ನೀರಿನಿಂದ ತರ್ಪಣ ಬಿಟ್ಟು ಪಿತೃಗಳನ್ನು, ಯಜ್ಞಯಾಗಗಳಿಂದ ದೇವತೆಗಳನ್ನು, ಅನ್ನದಾನದಿಂದ ಅತಿಥಿಗಳನ್ನು

ಸ್ವಾಧ್ಯಾಯಗಳಿಂದ ಋಷಿಗಳನ್ನು, ಸಂತಾನದಿಂದ ಬ್ರಹ್ಮದೇವರನ್ನು, ವೈಶ್ವದೇವ ಬಲಿಹರಣಗಳಿಂದ ಎಲ್ಲ ಪ್ರಾಣಿಗಳನ್ನು, ಸಿಹಿಯಾದ ಸತ್ಯವಾದ ಮಾತಿನಿಂದ ಜಗತ್ತನ್ನು ಸಂತೋಷಪಡಿಸಬೇಕು. ಭಿಕ್ಷೆಯಿಂದಲೇ ಕೆಲವರು ಉಪಜೀವಿಸುತ್ತಾರೆ. ಅವರಿಗೆಲ್ಲ ಗ್ರಹಸ್ಥಾಶ್ರಮಿಯೇ ಆಶ್ರಯವಾಗಬೇಕು. ಸನ್ಯಾಸಿಗಳು, ಬ್ರಹ್ಮಚಾರಿಗಳೂ, ತೀರ್ಥಯಾತ್ರೆಗೈಯ್ಯುವವರು ಅಧ್ಯಯನ, ಲೋಕೋದ್ಧಾರ, ತೀರ್ಥಸ್ನಾನ, ಪುಣ್ಯಕ್ಷೇತ್ರಯಾತ್ರೆ ಮುಂತಾದ ಉದ್ದೇಶ ಗಳಿಗಾಗಿ ಸಂಚಾರ ಕೈಗೊಂಡಿರುತ್ತಾರೆ. ಅವರಿಗೆ ಅನ್ನಪಾನಾದಿಗಳನ್ನು ಒದಗಿಸುವದು ಗ್ರಹಸ್ಥಾಶ್ರಮಿಯ ಮುಖ್ಯ ಕರ್ತವ್ಯವಾಗಿರುತ್ತದೆ.

ಮನೆಬಿಟ್ಟು ಪ್ರವಾಸಮಾಡುವವರಿಗೂ, ಅನ್ನವಿಲ್ಲದವರಿಗೂ, ತಾವಾಗಿಯೇ ಮನೆಗೆ ಬಂದಿರುವವರಿಗೂ ಗೃಹಸ್ಥನೂ ಸ್ವಾಗತ ಮಾಡಬೇಕು. ಅವರಿಗೆ ಪ್ರಿಯವಾರ್ತೆಗಳನ್ನು ನುಡಿದು ಮನೆಗೆ ಕರೆದುಕೊಂಡು ಬಂದ ಊಟ ಉಪಚಾರಗಳನ್ನು ಸಲ್ಲಿಸಬೇಕು. ಬಂದ ಅತಿಥಿಗಳಿಗೆ ಆಸನ, ಭೋಜನ, ಶಯನಗಳ ಏರ್ಪಾಟನ್ನು ಗ್ರಹಸ್ಥನು ಅವಶ್ಯವಾಗಿ ಮಾಡಲೇಬೇಕು. ಯಾವನ ಮನೆಯಿಂದ ಅತಿಥಿಯು ನಿರಾಶನಾಗಿ ಅನ್ನಪಾನಾದಿಗಳಿಲ್ಲದೆ ಮನೆಯಿಂದ ಹೊರಟು ಹೋಗುತ್ತಾನೋ ಅವನು ತನ್ನ ಪಾಪಗಳನ್ನು ಯಜಮಾನನಿಗೆ ಕೊಟ್ಟು ಅವನ ಪುಣ್ಯವನ್ನು ತಾನು ತೆಗದುಕೊಂಡು ಹೋಗುತ್ತಾನೆ. ಗ್ರಹಸ್ಥಾಶ್ರಮಿಯಾದವನು ಯಾರನ್ನೂ ಅವಮಾನ ಪಡಿಸಬಾರದು, ಅಹಂಕಾರಿಯಾಗಬಾರದು, ಪರದ್ರೋಹವನ್ನು ಮಾಡಬಾರದು, ಚಾಡಿಯನ್ನು ಹೇಳಬಾರದು. ಯಾರೊಡನೆಯೂ ಒರಟಾಗಿ ನಡೆದುಕೊಳ್ಳಬಾರದು. ಈ ರೀತಿಯಾಗಿ ಗ್ರಹಸ್ಥಾಶ್ರಮ ಧರ್ಮವನ್ನು ಸರಿಯಾಗಿ ಪಾಲನ ಮಾಡಿದವನು ಸಂಸಾರ ಬಂಧನದಿಂದ ಮುಕ್ತನಾಗಿ ಪರತ್ರ ಉತ್ತಮ ಲೋಕಗಳನ್ನು ಹೊಂದುತ್ತಾನೆ.

ಇನ್ನು ವಾನಪ್ರಸ್ಥಾಶ್ರಮದ ಧರ್ಮ ವಿಶೇಷಗಳನ್ನು ಹೇಳುತ್ತೇನೆ ಕೇಳು. ವಯಸ್ಸಾದ ಬಳಿಕ ಗ್ರಹಸ್ಥಾಶ್ರಮಿಯು ತಾನು ಮಾಡಬೇಕಾದ ಮಡದಿ ಮಕ್ಕಳ ಪೋಷಣೆ, ಹೆಣ್ಣು ಮಕ್ಕಳ ಮದುವೆ, ಗಂಡುಮಕ್ಕಳ ಉಪನಯನ, ವಿವಾಹ ವೃತ್ತಿ ಕಲ್ಪನೆ ಮುಂತಾದವುಗಳನ್ನು ಮಾಡಿ ಮಕ್ಕಳಿಗೆ ಮನೆಯ ಭಾರವನ್ನು ವಹಿಸಿಕೊಟ್ಟು ಅರಣ್ಯಕ್ಕೆ ತಪಸ್ಸಿಗೆ ತೆರಳಬೇಕು. ಹೆಂಡತಿಯು ಸಂತೋಷದಿಂದ ಬಂದರೆ ಅವಳನ್ನು ತಪೋವನಕ್ಕೆ ಕರೆದುಕೊಂಡು ಹೋಗಬೇಕು. ಅವಳಿಗೆ ಬೇಡವಾದರೆ ಅವಳ ರಕ್ಷಣೆಯ ಭಾರವನ್ನು ಪ್ರಬುದ್ಧರಾದ ಮಕ್ಕಳಿಗೆ ಒಪ್ಪಿಸಿ ತಾನೊಬ್ಬನೆ ಕಾಡಿಗೆ ಹೋಗಬೇಕು. ವಾನಪ್ರಸ್ಥಾಶ್ರಮ ಧರ್ಮವನ್ನು ಸ್ವೀಕರಿಸಬೇಕು.

ಅರಣ್ಯದಲ್ಲಿ ಆಶ್ರಮ ಕಟ್ಟಿಕೊಂಡು ಕಂದ ಮೂಲ ಫಲವನ್ನು ತಿಂದು ಇರಬೇಕು. ಕ್ಷೌರ ಮಾಡಿಸದೆ ಗಡ್ಡ, ಮೀಸೆ, ಕೂದಲುಗಳನ್ನು ತೆಗೆಸದೇ ಜಟಾಧರನಾಗಿ ಜಪತಪೋನುಷ್ಠಾನವನ್ನು ಮಾಡುತ್ತಾ ವನವಾಸಿಯಾಗಬೇಕು. ನೆಲದಮೇಲೆ ಮಲಗಬೇಕು. ಹುಲ್ಲು, ದರ್ಭೆ ಅಥವಾ ಚರ್ಮಗಳಿಂದ ಮಾಡಿದ ಬಟ್ಟೆ, ಆಸನ, ಪಾದರಕ್ಷೆ, ಹಾಸಿಗೆ, ಹೊದಿಕೆ, ಮುಂತಾದವುಗಳನ್ನು ಉಪಯೋಗಿಸಬೇಕು. ಸಾಧ್ಯವಾದರೆ ಮೂರು ಹೊತ್ತು ಇಲ್ಲದಿದ್ದರೆ ಎರಡು ಹೊತ್ತು ಸ್ನಾನವನ್ನು ಮಾಡಬೇಕು. ದೇವತಾಪೂಜೆ, ಹೋಮ, ಬಂದ ಅತಿಥಿಅಭ್ಯಾಗತರಿಗೆ ಸ್ವಾಗತ ಸತ್ಕಾರ, ಅನ್ನದಾನ, ವನದಲ್ಲಿ ಬೆಳೆದ ಬಳ್ಳಿ ಕಾಯಿಗಳಿಂದ ತೆಗೆದ ಎಣ್ಣೆಯಿಂದ ಅಭ್ಯಂಗ ಸ್ನಾನ, ಜಪತಪ, ಚಳಿ, ಮಳೆ, ಗಾಳಿಗಳ

ಕಷ್ಟವನ್ನು ಸಹಿಸುವದು ಮುಂತಾದ ವಿಧಿನಿಯಮಗಳು ವಾನಪ್ರಸ್ಥಾಶ್ರಮಿಗೆ ವಿಹಿತವಾಗಿರುತ್ತವೆ. ಇಂಥ ವಾನಪ್ರಸ್ಥಾಶ್ರಮಿಯು ಅಗ್ನಿಯಂತೆ ತನ್ನ ಹಿಂದಿನ ಎಲ್ಲ ದುರಿತಗಳನ್ನು ಸುಟ್ಟು ಶಾಶ್ವತವಾದ ದಿವ್ಯಗತಿಯನ್ನು ಹೊಂದುತ್ತಾನೆ.

ಇನ್ನು ನಾಲ್ಕನೆಯದಾದ ಸನ್ಯಾಸಾಶ್ರಮದ ಧರ್ಮಗಳನ್ನು ಹೇಳುತ್ತೇನೆ ಕೇಳಿರಿ. ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥ ಎಂಬ ಮೂರು ಆಶ್ರಮಗಳನ್ನು ಪರಿಪಾಲಿಸಿದ ಮನುಷ್ಯನು ಸನ್ಯಾಸಾಶ್ರಮವನ್ನು ಸ್ವೀಕರಿಸಬಹುದು. ಅತ್ಯುತ್ಕಟವಾದ ವೈರಾಗ್ಯವು ಪ್ರಾಯದಲ್ಲಿಯೇ ಮೂಡಿ ಬಂದಿದ್ದರೆ ಬ್ರಹ್ಮಚರ್ಯ ಆಶ್ರಮವನ್ನೇ ಸ್ವೀಕರಿಸಬಹುದು. ಸನ್ಯಾಸಾಶ್ರಮದಲ್ಲಿ ಮುಖ್ಯವಾದ ಧರ್ಮವೆಂದು ಸರ್ವಜೀವರಲ್ಲಿ ಮೈತ್ರೀಭಾವ, ಎಲ್ಲ ಪ್ರಾಣಿಗಳಲ್ಲಿ ದಯ, ಮನುಷ್ಯ, ಪಶು, ಪಕ್ಷಿ, ಕ್ರಿಮಿ, ಕೀಟ ಮೊದಲಾದ ಯಾವ ಪ್ರಾಣಿಗೂ ಕೇಡನ್ನು ಬಯಸಬಾರದು ಬಾಯಿಂದ ಬಿರುಸಾಗಿ ನುಡಿಯಬಾರದು. ಸರ್ವಸಂಗವನ್ನು ಪರಿತ್ಯಜಿಸಬೇಕು. ಮಡದಿ, ಮಕ್ಕಳು, ಮನೆ, ಹೊಲ, ನೆಲ, ಭೂಮಿ ದ್ರವ್ಯ ಮೊದಲಾದ ಯಾವುದರ ಮೋಹವನ್ನು ಹಚ್ಚಿಕೊಳ್ಳಬಾರದು. ಒಂದು ಊರಿಲ್ಲಿ ಒಂದುದಿನ ಮಾತ್ರ ಇರಬೇಕು. ಹಳ್ಳಿಯಲ್ಲಿ ಒಂದು ರಾತ್ರಿ, ಪಟ್ಟಣದಲ್ಲಿ ಐದು ರಾತ್ರಿ ಮಾತ್ರ ಇರಬೇಕು. ತನ್ನ ಜೀವನ ನಿರ್ವಾಹಕ್ಕಾಗಿ ಕಾಡಿನಲ್ಲಿ ಇದ್ದಾಗ ಬೆಂಕಿಯಲ್ಲಿ ಬೆಯಿಸದ, ನೀರಿನಲ್ಲಿ ಕುದಿಸದ ಆಹಾರವನ್ನು ತಿನ್ನಬೇಕು. ನಾಡಿನಲ್ಲಿದ್ದಾಗ ಯೋಗ್ಯರ ಮನೆಯಲ್ಲಿ ಭಿಕ್ಷೆಬೇಡಿ ತಿನ್ನಬೇಕು. ಭಿಕ್ಷೆ ದೊರೆತಾಗ ಹಿಗ್ಗಬಾರದು. ದೊರೆಯದಿದ್ದಾಗ ದುಃಖಪಡಬಾರದು. ಯಾರಾದರೂ ಏನಾದರೂ ಕೊಟ್ಟರೆ ಜೀವಧಾರಣಕ್ಕೆ ಬೇಕಾಗುವಷ್ಟನ್ನು ಮಾತ್ರ ತೆಗೆದುಕೊಳ್ಳಬೇಕು. ಜನರು ಭಕ್ತಿಯಿಂದ ಹೆಚ್ಚಿಗೆ ಏನಾದರೂ ತಂದು ಕೊಟ್ಟರೆ ಅದನ್ನು ಸ್ವೀಕರಿಸಬಾರದು. ಪೂಜ್ಯತಾ ಭಕ್ತಿಯಿಂದ ಭಕ್ತರು ಕೊಟ್ಟಿದ್ದನ್ನೆಲ್ಲಾ ಸ್ವೀಕರಿಸಿದರೆ ಸನ್ಯಾಸಿಯ ಮುಕ್ತನಾಗಿದ್ದರೂ ಮತ್ತೇ ಬಂಧನವನ್ನು ಹೊಂದುತ್ತಾನೆ. ಕಾಮ, ಕ್ರೋಧ, ದರ್ಪ, ಮೋಹ, ಮದ ಮೊದಲಾದವುಗಳನ್ನು ಸನ್ಯಾಸಿಯು ಸಂಪೂರ್ಣವಾಗಿ ತ್ಯಜಿಸಿ ಬಿಡಬೇಕು. ಎಲ್ಲ ಪ್ರಾಣಿಗಳಿಗೂ ಅಭಯವನ್ನು ಕೊಡಬೇಕು. ಗೃಹಸ್ಥಾಶ್ರಮಿಗಳಿಗೆ ವಿಹಿತವಾದ ಯಜ್ಞ ಅಗ್ನಿಹೋತ್ರಗಳನ್ನು ಸನ್ಯಾಸಿಯು ಮಾಡಬಾರದು. ಆ ಅಗ್ನಿಯನ್ನು ತನ್ನ ಶರೀರದಲ್ಲಿಯೇ ಸ್ಥಾಪಿಸಿಕೊಂಡು ಆ ಶಾರೀರಾಗ್ನಿಯಲ್ಲಿ ತನ್ನ ಭಿಕ್ಷೆಯಿಂದ ಬಂದ ಅನ್ನವನ್ನೇ ಹವಿಸ್ಸಾಗಿ ಆಹುತಿ ಕೊಡಬೇಕು. ಈ ರೀತಿಯಾಗಿ ಸನ್ಯಾಸಿಯು ಪರಿಶುದ್ಧವಾದ ಆಶ್ರಮ ಧರ್ಮವನ್ನು ಪಾಲಿಸಿಕೊಂಡು ಬಂದರೆ ಬ್ರಹ್ಮಲೋಕವನ್ನು ಹೊಂದುತ್ತಾನೆ. ಈ ಸನ್ಯಾಸಾಶ್ರಮಕ್ಕೆ ಮೋಕ್ಷಾಶ್ರಮ ಎಂದೂ ಕರೆಯುತ್ತಾರೆ.

## ಜಾತಿಲಕ್ಷಣ ವರ್ಣನೆ

**ಶೌನಕಾದಿ:-** ಪೂಜ್ಯರಾದ ವೇದವ್ಯಾಸರೇ, ತಾವು ನಿಜವಾಗಿಯೂ ಸರ್ವಜ್ಞರು ತ್ರಿಕಾಲ ಜ್ಞಾನಿಗಳು, ನಿಮಗೆ ತಿಳಿಯದೇ ಇದ್ದುದು ಯಾವುದೂ ಇಲ್ಲ. ಆದುದರಿಂದ ಯಾವ ಕರ್ಮದಿಂದ ಮಾನವರಿಗೆ ಅಧಮಗತಿಯಾಗುವದು, ಯಾವ ಕರ್ಮದಿಂದ ಉತ್ತಮಗತಿಯಾಗುವದು ಇದನ್ನು ಹೇಳಿರಿ. ಯಾವ ಕರ್ಮಗಳನ್ನು ಮಾಡಿದರೆ ಬ್ರಾಹ್ಮಣನು ಶೂದ್ರನಾಗುತ್ತಾನೆ? ಮತ್ತು ಯಾವ ಕರ್ಮಗಳನ್ನು ಮಾಡುವದರಿಂದ ಶೂದ್ರನು ಮುಂದೆ ಬ್ರಾಹ್ಮಣನಾಗುತ್ತಾನೆ ಇದನ್ನು ಹೇಳಿರಿ.

**ವೇದವ್ಯಾಸ:-** ಶೌನಕರೇ, ಹಿಂದೆ ಒಂದಾನೊಂದು ಕಾಲದಲ್ಲಿ ರಮಣೀಯವಾದ ಹಿಮಗಿರಿಯ ಶಿಖರದಲ್ಲಿ ಬಗೆಬಗೆಯ ಮರಬಳ್ಳಿಗಳಿಂದ ಸಂದಟಿತವಾಗಿ, ಸುಂದರವಾಗಿ ಕಾಣುವ ಒಂದು ತಂಪಿನ ತಾಣದಲ್ಲಿ ಮಹಾದೇವರು ಕುಳಿತುಕೊಂಡಿದ್ದರು. ಶೈಲನಂದಿನಿಯಾದ ಪಾರ್ವತಿದೇವಿಯು ಅಲ್ಲಿಗೆ ಬಂದಳು. ಪರಮೇಶ್ವರನಿಗೆ ನಮಸ್ಕಾರ ಮಾಡಿ ನೀವು ಕೇಳಿದ ಪ್ರಶ್ನೆಯನ್ನೇ ಮಾಡಿದಳು.

**ಪಾರ್ವತಿ:-** ಪೂಜ್ಯರಾದ ಮಹಾದೇವ, ನೀನು ದಕ್ಷಪ್ರಜಾಪತಿಯ ಯಜ್ಞದಲ್ಲಿ ಭಗನ ಕಣ್ಣನ್ನು ಕಿತ್ತಿದೆ. ಪೂಪಣನ ಹಲ್ಲುಗಳನ್ನು ಮುರಿದೆ. ದಕ್ಷನ ಯಜ್ಞವನ್ನು ಧ್ವಂಸ ಪಡಿಸಿದೆ. ಇಷ್ಟಾದರೂ ನೀನು ಕ್ರೂರನಲ್ಲ. ದಯಾಮಯ. ಅಪರಾಧ ಮಾಡಿದವರಿಗೆ ಶಾಸನ ಮಾಡುವದು ನಿನ್ನ ಕರ್ತವ್ಯ. ನಿರಪರಾಧಿಗಳಿಗೆ ದಂಡನವನ್ನು ಎಂದೂ ಮಾಡಿಲ್ಲ. ಭಕ್ತಿಯಿಂದ ಬಂದವರಿಗೆ ಬೇಡಿದನ್ನು ಕೊಡುವೆ. ಕೇಳಿದ್ದನ್ನು ಹೇಳುವೆ. ಆದುದರಿಂದ ನಾನು ನಿನ್ನ ಬಳಿಗೆ ಭಕ್ತಿಯಿಂದ ಬಂದಿದ್ದೇನೆ. ಜಿಜ್ಞಾಸೆಯಿಂದ ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ದಯವಿಟ್ಟು ಉತ್ತರವನ್ನು ಹೇಳಿರಿ. ಯಾವ ಕರ್ಮವಿಪಾಕದಿಂದ ವೈಶ್ಯನು ಶೂದ್ರನಾಗುತ್ತಾನೆ? ಕ್ಷತ್ರಿಯನು ವೈಶ್ಯನಾಗುತ್ತಾನೆ? ಬ್ರಾಹ್ಮಣನು ಕ್ಷತ್ರಿಯನಾಗುತ್ತಾನೆ? ಹೀಗೆ ಉಚ್ಚವರ್ಣದವರು ಯಾವ ಕರ್ಮಾನುಷ್ಠಾನದಿಂದ ಅಧಮ ಜಾತಿಯವರಾಗಿ ಮಾರ್ಪಡುತ್ತಾರೆ? ಇವರೆಲ್ಲರೂ ಯಾವ ಕರ್ಮದಿಂದ ಶೂದ್ರಜಾತಿಯಲ್ಲಿ ಹುಟ್ಟುತ್ತಾರೆ? ಮತ್ತು ಶೂದ್ರ. ವೈಶ್ಯ ಕ್ಷತ್ರಿಯ ಈ ಮೂರು ಜಾತಿಯವರು ಯಾವ ಕರ್ಮಗಳಿಂದ ಬ್ರಾಹ್ಮಣರಾಗಿ ಜನಿಸುತ್ತಾರೆ? ಕೆಳಗಿನ ವರ್ಣದವರಿಗೆ ಬ್ರಾಹ್ಮಣ್ಯವನ್ನು ಜನ್ಮಾಂತರದಲ್ಲಿ ತಂದು ಕೊಡುವ ಕರ್ಮ ಯಾವುದು? ಇದನ್ನೆಲ್ಲಾ ತಿಳಿಸಿ.

**ಪರಮೇಶ್ವರ:-** ದೇವಿ, ಬಾಹ್ಮಣ್ಯವು ಬಹಳ ದುರ್ಲಭ, ನೈಸರ್ಗಿಕವಾಗಿ ಬ್ರಾಹ್ಮಣರು ಒಳ್ಳೆಯವರು. ಅದರಂತೆ ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ನೈಸರ್ಗಿಕವಾಗಿ ಒಳ್ಳೆಯವರೇ. ಸರ್ವರೂ ಶ್ರೇಷ್ಠರೇ. ಆದರೆ ಬ್ರಾಹ್ಮಣನಾದವನು ದುಷ್ಕಾರ್ಯಗಳನ್ನು ಮಾಡಿದರೆ ತನ್ನ ಬ್ರಾಹ್ಮಣ್ಯದಿಂದ ಭ್ರಷ್ಟನಾಗುತ್ತಾನೆ. ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಬ್ರಾಹ್ಮಣರ ಧರ್ಮವನ್ನು ಅನುಸರಿಸಿ ಬ್ರಾಹ್ಮೀ ವೃತ್ತಿಯನ್ನು ಉಪಯೋಗಿಸಿ ಸದಾಚಾರ ಸಂಪನ್ನನಾಗಿದ್ದರೆ ಬ್ರಹ್ಮಲೋಕವನ್ನು ಹೊಂದುತ್ತಾನೆ. ಬ್ರಾಹ್ಮಣನಾದವನು ತನ್ನ ಬ್ರಾಹ್ಮಣೋಚಿತವಾದ ಕರ್ಮವನ್ನು ಬಿಟ್ಟು ರಾಜ್ಯದ ಅಧಿಕಾರದ ಹಾಗೂ ಐಶ್ವರ್ಯದ ಲೋಭದಿಂದ ಕ್ಷಾತ್ರವೃತ್ತಿಯನ್ನು ಅಂಗೀಕರಿಸಿದರೆ ಅವನು ಬ್ರಾಹ್ಮಣೋತ್ತಮ ಧರ್ಮದಿಂದ ಭ್ರಷ್ಟನಾಗಿ ಕ್ಷತ್ರಿಯ ಜಾತಿಯಲ್ಲಿ ಹುಟ್ಟುತ್ತಾನೆ ಸಿರಿಸಂಪದಗಳ ಆಸೆಯಿಂದ ವ್ಯಾಪಾರ, ಬೇಸಾಯ, ಕ್ರಯ ವಿಕ್ರಯಾದಿಗಳನ್ನು ಬ್ರಾಹ್ಮಣರು ಮಾಡಿದರೆ ಅವನು ಜನ್ಮಾಂತರದಲ್ಲಿ ವೈಶ್ಯನಾಗುತ್ತಾನೆ. ವೈಶ್ಯನು ಸಧರ್ಮದಿಂದ ಭ್ರಷ್ಟನಾದರೆ ಶೂದ್ರನಾಗುತ್ತಾನೆ. ಶೂದ್ರನು ಓದಿಕೊಂಡು ಜ್ಞಾನಿಯಾಗಿ ಸ್ವಧರ್ಮ ಅನುಷ್ಠಾನ ತತ್ಪರನಾದರೆ ಅವನಿಗೆ ಆ ಧರ್ಮವನ್ನು ಮಾಡಿದ ಪುಣ್ಯಫಲವು ತಾನಾಗಿಯೇ ದೊರಕುತ್ತದೆ.

ಪಾರ್ವತಿ, ದುಷ್ಟಾನ್ನದಿಂದ ಎಂಥ ಬ್ರಾಹ್ಮಣನೂ ಕೆಟ್ಟುಹೋಗುತ್ತಾನೆ. ಜನರೆಲ್ಲರೂ ಪಟ್ಟಿ ಹಾಕಿ ಹಣವನ್ನು ಒಟ್ಟು ಮಾಡಿ ಸಾಮೂಹಿಕ ಭೋಜನವನ್ನು ಏರ್ಪಡಿಸಿದರೆ ಅದು ಗಣಾನ್ನ ಎನಿಸುತ್ತದೆ. ಅದು ನಿಷಿದ್ಧ. ಶ್ರಾದ್ಧದ ಅನ್ನ, ಸೂತಕದ ಅನ್ನ, ಶೂದ್ರಾನ್ನ

ಇವುಗಳನ್ನು ಬ್ರಾಹ್ಮಣನು ಉಣ್ಣಬಾರದು ದುಷ್ಟ, ಅನ್ನವನ್ನು ಉಂಡ ಬ್ರಾಹ್ಮಣನು ಅಗ್ನಿಹೋತ್ರವನ್ನು ಇಟ್ಟು, ಯಜ್ಞದೀಕ್ಷಿತನಾಗಿದ್ದರೂ, ಶೂದ್ರಗತಿಯನ್ನು ಹೊಂದುತ್ತಾನೆ. ಬ್ರಾಹ್ಮಣನಾದವನು ಯಾರ ಅನ್ನವನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಸಾಯುವನೋ ಅವನು ಆ ಜಾತಿಯವನೇ ಆಗಿ ಹುಟ್ಟುತ್ತಾನೆ. ಸೆರೆಗುಡುಕ, ತಲೆಗಡಕ, ಕಳ್ಳ, ಸ್ವಾಧ್ಯಾಯ ಮಾಡದಿದ್ದವ ಶೂದ್ರ ಸ್ತ್ರೀಯನ್ನು ಇಟ್ಟುಕೊಂಡವ, ನೀಚ ಜನರ ಸೇವೆಗೈಯುವವ, ಗುರು ಪತ್ನೀಗಮನ ಮಾಡಿದವ, ಗುರುದ್ರೋಹಿ, ಬ್ರಹ್ಮದ್ವೇಷಿಯಾದ ಮನುಷ್ಯನು ಬ್ರಾಹ್ಮಣ ನಾಗಿದ್ದರೂ ತನ್ನ ದಿವ್ಯವಾದ ಬ್ರಾಹ್ಮಣ ಜಾತಿಯಿಂದ ಭ್ರಷ್ಟನಾಗಿ ಪತಿತನಾಗುತ್ತಾನೆ.

ಶೂದ್ರನು ಸನ್ಮಾರ್ಗದಲ್ಲಿ ಇದ್ದು ಬಂದವರಿಗೆಲ್ಲ ಆತಿಥ್ಯ, ಋತುಕಾಲದಲ್ಲಿ ಸ್ವಪತ್ನೀ ಗಮನ, ಶೇಷಾನ್ನಭೋಜನ, ಶ್ರೇಷ್ಠವರ್ಣದವರ ಪರಿಚರ್ಯೆ, ದೇವಬ್ರಾಹ್ಮಣರ ಆರಾಧನೆ, ಮಧ್ಯಮಾಂಸಾದಿ ವರ್ಜನೆಗಳನ್ನು ಮಾಡಿ ಸದಾಚಾರ ಸಂಪನ್ನನಾಗಿದ್ದರೆ ವೈಶ್ಯನಾಗುತ್ತಾನೆ. ವೈಶ್ಯನು ಗರ್ವವಿಲ್ಲದೆ ಸತ್ಯವನ್ನು ಮಾತನಾಡುತ್ತಾ, ಯಜ್ಞಯಾಗಾದಿಗಳನ್ನು ಮಾಡುತ್ತಾ, ಸ್ವಾಧ್ಯಾಯ ಅಧ್ಯಯನವನ್ನು ಮಾಡಿ, ಇಂದ್ರಿಯಗಳನ್ನು ನಿಗ್ರಹಿಸಿ, ಎರಡು ಹೊತ್ತು ಊಟ ಮಾಡುತ್ತಾ, ಯಥಾರೀತಿ ಯಜ್ಞಯಾಗಾದಿಗಳನ್ನು ಗೈಯುತ್ತಾ ಇದ್ದರೆ ವೈಶ್ಯನು ಕ್ಷತ್ರಿಯನಾಗುತ್ತಾನೆ. ಕ್ಷತ್ರಿಯನಾದವನು ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸಿ, ಋತುಕಾಲದಲ್ಲಿ ಸ್ವಪತ್ನೀ ಸಮಾಸಕ್ತನಾಗಿ, ಪಿತೃಗಳ, ದೇವತೆಗಳ, ಅತಿಥಿಗಳ ಸೇವೆಯನ್ನು ಸರಿಯಾಗಿ ಮಾಡಿ ಎರಡೇ ಹೊತ್ತು ಊಟ, ಅಗ್ನಿಹೋತ್ರವನ್ನು ಆಚರಿಸಿ, ಗೋಬ್ರಾಹ್ಮಣರ ಹಿತಕ್ಕಾಗಿ ರಣಾಂಗಣದಲ್ಲಿ ಮಡಿದರೆ ಅವನು ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಸತ್ಕರ್ಮಾನುಷ್ಠಾನದಿಂದ ವೈಶ್ಯನು ಮುಂದಿನ ಜನ್ಮದಲ್ಲಿ ಜ್ಞಾನವಿಜ್ಞಾನ ಪಾರಂಗತನಾದ ಕ್ಷತ್ರಿಯನಾಗಿ ಹುಟ್ಟುತ್ತಾನೆ. ಶೂದ್ರನು ಕೂಡ ಸತ್ಕರ್ಮಾನುಷ್ಠಾನದಿಂದ ಮುಂದಿನ ಜನ್ಮದಲ್ಲಿ ವೇದವಿದ್ವಾಂಸ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಬ್ರಾಹ್ಮಣನಾದವನೂ ದುರಾಚಾರಿಯಾಗಿದ್ದರೆ, ದುಷ್ಟಾನ್ನ ಭಕ್ಷಣ, ದುಷ್ಟಜನರ ಸಂಪರ್ಕದಿಂದ ಭ್ರಷ್ಟನಾಗಿ ಜನ್ಮಾಂತರದಲ್ಲಿ ಶೂದ್ರನಾಗಿ ಹುಟ್ಟುತ್ತಾನೆ.

ಪರಿಶುದ್ಧವಾದ, ಸಾತ್ವಿಕ ಕರ್ಮಗಳನ್ನು ಮಾಡುತ್ತಲಿದ್ದ ಜಿತೇಂದ್ರಿಯನಾದ ಶೂದ್ರನನ್ನು ಬ್ರಾಹ್ಮಣರಂತೆ ಸೇವಿಸಬೇಕೆಂದು ಸ್ವಯಂ ಬ್ರಹ್ಮದೇವನೇ ಹೇಳಿದ್ದಾನೆ. ಒಳ್ಳೇ ನಿರ್ಮಲವಾದ ಆಚರಣೆ, ಸಾತ್ವಿಕ ಸ್ವಭಾವ, ಶೌಚಾಚಾರ, ಶುದ್ಧಿ, ಧರ್ಮ ಬುದ್ಧಿವುಳ್ಳ ಶೂದ್ರನನ್ನು ಬ್ರಾಹ್ಮಣನಿಗಿಂತ ಶ್ರೇಷ್ಠ ಎಂದು ತಿಳಿಯಬೇಕು. ಸದ್ಬ್ರಾಹ್ಮಣನಂತೆ ಸಚ್ಛೂದ್ರನ ಸೇವೆಯನ್ನು ಕೂಡ ಮಾಡಬೇಕು. ಬ್ರಾಹ್ಮಣ್ಯಕ್ಕೆ ಜನ್ಮವಾಗಲಿ, ಸಂಸ್ಕಾರವಾಗಲಿ, ಜ್ಞಾನವಾಗಲಿ ಕಾರಣವಲ್ಲ. ಒಳ್ಳೆಯ ನಡತೆ, ಸದಾಚಾರಗಳೇ ಬ್ರಾಹ್ಮಣತ್ವದ ಕಾರಣಗಳು. ಒಳ್ಳೇ ನಡತೆಯುಳ್ಳ ಸದಾಚಾರಿಯಾದ ಶೂದ್ರನು ಕೂಡ ಬ್ರಾಹ್ಮಣತ್ವವನ್ನು ಹೊಂದುತ್ತಾನೆ.

ಬ್ರಾಹ್ಮಣನಾದವನು ಸಂಹಿತಾಧ್ಯಯನ ಮಾಡಬೇಕು. ನಿತ್ಯವೂ ಪಾಠ ಪ್ರವಚನವನ್ನು ಮಾಡುತ್ತಿರಬೇಕು, ಯಜನ, ಯಾಜನ, ಅಧ್ಯಯನ ಅಧ್ಯಾಪನಗಳಿಂದಲೇ ಜೀವಿಸಬೇಕು. ಅಗ್ನಿಹೋತ್ರವನ್ನು ಇಟ್ಟಿರಬೇಕು. ಯದೃಚ್ಛಾಲಾಭದಿಂದ ಸಂತುಷ್ಟನಾಗಬೇಕು. ವೇದಶಾಸ್ತ್ರೋಕ್ತ ಮಾರ್ಗವನ್ನು ಎಂದೂ ಅತಿಕ್ರಮಿಸಬಾರದು. ಬ್ರಾಹ್ಮಣನಾಗಿ ಹುಟ್ಟುವ

ದಕ್ಕಿಂತಲೂ ಆ ಬ್ರಾಹ್ಮಣ್ಯವನ್ನು ತನ್ನ ಸಚ್ಛೀಲ, ಸತ್‌ಸ್ವಭಾವ, ಸದಾಚಾರಗಳಿಂದ ರಕ್ಷಣೆ ಮಾಡಿಕೊಳ್ಳುವದು ಮುಖ್ಯ.

## ಧರ್ಮಾಧರ್ಮ ನಿರೂಪಣ

**ಮಹಾದೇವಿ:-** ಮನುಷ್ಯರು ಸ್ವರ್ಗವನ್ನು ಯಾವ ಕರ್ಮಗಳಿಂದ ಹೊಂದುತ್ತಾರೆ? ಸರ್ಗೇಚ್ಛುಗಳ ಶೀಲ, ಆಚರಣೆ ಹೇಗೆ ಇರಬೇಕು? ಯಾವ ತರಹದ ದಾನ ಧರ್ಮಗಳನ್ನು ಮಾಡಬೇಕು? ಅದನ್ನು ಹೇಳಿರಿ.

**ಮಹಾದೇವ:-** ಬ್ರಹ್ಮಜ್ಞಾನಿಗಳಿಗೆ ದಾನ ನೀಡುವವನು ಮತ್ತು ದೀನರೂ ದರಿದ್ರರೂ ದುಃಖಿತರೂ, ರೋಗಿಷ್ಟರೂ, ಆರ್ತರೂ ಮೊದಲಾದವರಿಗೆ ಅನ್ನಪಾನ; ವಸನ, ಭಕ್ಷ್ಯ, ಭೋಜ್ಯಗಳನ್ನೇ ಕೊಟ್ಟು ಸತ್ಕರಿಸುವವರು ಸದ್ಗತಿಯನ್ನು ಹೊಂದುತ್ತಾರೆ. ಅಲ್ಲಲ್ಲಿ ನೀರಿನ ಅರುವಟ್ಟಗೆಗಳನ್ನು ಇರಿಸಬೇಕು. ಕೆರೆ ಕಾಲುವೆಗಳನ್ನು ತೋಡಿಸಬೇಕು. ಸಭಾ ಮಂದಿರಗಳನ್ನು ಕಟ್ಟಿಸಬೇಕು. ನಿತ್ಯ, ನೈಮಿತ್ತಿಕ ಧರ್ಮ ಕರ್ಮಗಳನ್ನು ತಪ್ಪದೇ ಮಾಡಬೇಕು. ಶುಚಿರ್ಭೂತನಾಗಿ ಇರಬೇಕು. ಸತ್ಪಾತ್ರದಲ್ಲಿ ಆಸನ, ಹಾಸಿಗೆ, ವಾಹನ, ಮನೆ, ದ್ರವ್ಯ, ಧಾನ್ಯ, ಹೊಲ ಮುಂತಾದವುಗಳನ್ನು ನಿರಹಂಕಾರ ಬುದ್ಧಿಯಿಂದ ದಾನವನ್ನು ಮಾಡಬೇಕು. ಇಂಥ ದಾನಿಯು ಸ್ವರ್ಗಲೋಕಕ್ಕೆ ಹೋಗುತ್ತಾನೆ. ಅಲ್ಲಿ ಬಹುಕಾಲ ಇದ್ದು ಅಲ್ಲಿಯ ನಂದನಾದಿವನಗಳಲ್ಲಿ ಅಪ್ಸರೆಯರಿಂದ ಕೂಡಿಕೊಂಡು ಆನಂದದಿಂದ ಭೋಗಗಳನ್ನು ಅನುಭವಿಸುತ್ತಾನೆ. ಪುಣ್ಯವು ಕ್ಷೀಣವಾದ ಬಳಿಕ ಸ್ವರ್ಗದಿಂದ ಉರುಳಿ ಭೂಲೋಕದಲ್ಲಿ ದೊಡ್ಡ ಮನೆತನದಲ್ಲಿ ಹುಟ್ಟಿ ಧನಧಾನ್ಯ, ಭವ್ಯಭೋಗದಿಂದ ಸಮೃದ್ಧವಾದ ಜೀವನವನ್ನು ನಡೆಸುತ್ತಾನೆ. ಅವನ ಕಾಮನೆಗಳೆಲ್ಲವೂ ಪೂರ್ಣವಾಗಿ ಭೂಮಂಡದಲದಲ್ಲಿ ಲೋಕೋಪಯುಕ್ತವಾದ ಅನೇಕ ಮಹಾ ಕಾರ್ಯಗಳನ್ನು ಮಾಡುತ್ತಾ ಮಹಾಭೋಗಿ, ಮಹಾತ್ಯಾಗಿ, ಜನಾನುರಾಗಿ ಆಗಿ ಎಲ್ಲರಿಂದಲೂ ಮನ್ನಿಸಲ್ಪಡುತ್ತಾನೆ. ಸತ್ಪಾತ್ರದಲ್ಲಿ ದಾನ ಮಾಡುವವರಿಗೆ ಇಷ್ಟು ಫಲಪ್ರಯೋಜನಗಳು ಉಂಟಾಗುವದೆಂದು ಪೂರ್ವಕಾಲದಲ್ಲಿ ಬ್ರಹ್ಮದೇವರೇ ಹೇಳಿದ್ದಾರೆ.

ಇದಕ್ಕೆ ವಿಪರೀತವಾಗಿ ಯಾರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ, ಉಚ್ಚಜಾತೀಯಗಳಲ್ಲಿ ಜನಿಸಿದ್ದರೂ ಲೋಭದಿಂದ ದಾನ ನೀಡುವದಿಲ್ಲವೋ, ಮನೆಯಲ್ಲಿ ಧನಧಾನ್ಯ ಸಮೃದ್ಧಿ ಇದ್ದರೂ ಹೀನರಿಗೂ, ಕುರುಡರಿಗೂ, ಭಿಕ್ಷುಕರಿಗೂ, ಅತಿಥಿಗಳಿಗೂ ಏನನ್ನೂ ನೀಡದೇ ತಿರುಗಿ ಕಳಿಸುವವರೋ ಮತ್ತು ಯಾರು ತನ್ನಮನೆಯಲ್ಲಿ ತನಗೆ ಸಾಕಾಗಿ ತನಗೆ ಮಿಕ್ಕುವಷ್ಟಿದ್ದರೂ ಯಾರಿಗೂ ಧನವನ್ನಾಗಲೀ, ಬಟ್ಟೆಯನ್ನಾಗಲೀ, ಬಂಗಾರವನ್ನಾಗಲೀ, ಹಸುವನ್ನಾಗಲೀ, ಅನ್ನವನ್ನಾಗಲೀ ಕೊಡುವದಿಲ್ಲವೋ ಮತ್ತು ಯಾರು ದೇವರು ಇಲ್ಲ, ಧರ್ಮ ಇಲ್ಲ ಎಂದು ಪರಮಲೋಭಿಗಳಾಗಿ ದಾನವನ್ನೇ ಮಾಡುವುದಿಲ್ಲವೋ ಇಂಥ ಪಾಪಿಗಳು ನರಕಕ್ಕೆ ಹೋಗುತ್ತಾರೆ. ಇಂಥವರು ಕಡುಲೋಭಿಗಳೂ ನಾಸ್ತಿಕರು ಆದ ಮಾನವರು ನರಕದಲ್ಲಿ ಬಹು ಕಾಲ ದುಃಖಯಾತನೆಗಳನ್ನು ಅನುಭವಿಸುವರು. ಕೆಲವುಕಾಲದ ಬಳಿಕ ದರಿದ್ರರ ಕುಲದಲ್ಲಿ ದುರ್ಬುದ್ಧಿಗಳಾಗಿಯೇ ಹುಟ್ಟುತ್ತಾರೆ. ಹಸಿವೆ, ಬಾಯಾರಿಕೆ, ಬೇನೆ, ಬಸವಣಿಕೆಗಳು ಅವರ ಬೆನ್ನು ಬಿಡುವದೇ ಇಲ್ಲ. ಎಲ್ಲ ಜನರ ತಿರದಲ್ಲಿ ಬಹಿಷ್ಕಾರಗಳಿಗೆ ಗುರಿಯಾಗುತ್ತಾರೆ. ಯಾವ ವಿಧವಾದ ಭೋಗಭಾಗ್ಯಗಳೂ ದೊರಕದೇ

ನಿರಾಶರಾಗಿ ಅಧರ್ಮ ಜೀವನವನ್ನು ನಡೆಸುತ್ತಾರೆ. ಇನ್ನು ಕೆಲವರು ಮಹಾಗರ್ವಿಷ್ಠರಾಗಿ ಜ್ಞಾನಿಗಳು ಗುರುಹಿರಿಯರು, ಬಂದಾಗ ಅವರಿಗೆ ಆಸನಗಳನ್ನು ನೀಡುವದಿಲ್ಲವೋ, ಪೂಜ್ಯರನ್ನು ಪೂಜಿಸುವದಿಲ್ಲವೋ ಮನೆಗೆ ಬಂದವರಿಗೆ ಅರ್ಘ್ಯಪಾದ್ಯ ಆಚಮನಾದಿಗಳನ್ನು ಇಟ್ಟು ಗುರು ಹಿರಿಯರನ್ನು ಪೂಜಿಸುವದಿಲ್ಲವೋ, ಲೋಭದಿಂದ ಯಾರಿಗೂ ಏನನ್ನೂ ದಾನವನ್ನು ನೀಡುವದಿಲ್ಲವೋ ಅಂಥ ಜನರು ನರಕಕ್ಕೆ ಹೋಗುತ್ತಾರೆ. ಎಷ್ಟೋವರ್ಷಗಳ ಪರ್ಯಂತ ನರಕಗಳಲ್ಲಿ ನಾನಾವಿಧವಾದ ದುಃಖ ದುರವಸ್ಥೆಗಳನ್ನು ಅನುಭವಿಸಿ ಅನಂತರ ಭೂಲೋಕದಲ್ಲಿ ಹಂದಿ, ನಾಯಿ, ಕೊಂದು ಬೇಯಿಸಿ ತಿನ್ನುವ ಅತ್ಯಂತ ಕೀಳು ಜಾತಿಯ ಜನರಲ್ಲಿ ಹುಟ್ಟುತ್ತಾರೆ. ಯಾರ ಮೇಲೆಯೂ ದ್ವೇಷ ಮಾಡದೇ, ಯೋಗ್ಯರನ್ನು ಕಂಡಾಗ ಅವರಿಗೆ ನಮಸ್ಕಾರ ಪುರಸ್ಕಾರಗಳನ್ನು ಮಾಡುತ್ತ, ಸರ್ವ ಪ್ರಾಣಿಗಳಿಗೆ ಹಿತವನ್ನೂ ಮಾಡುವವನೂ, ಯಾರನ್ನೂ ದ್ವೇಷಿಸದೇ ಪ್ರಸನ್ನ ಮುಖದಿಂದ ಮಧುರ ಮಾತುಗಳನ್ನಾಡುತ್ತ ಎಲ್ಲರಿಗೂ ಸುಸ್ವಾಗತವನ್ನು ಮಾಡಿ ಗೌರವಿಸುವನು ಎಂದೂ ಹಿಂಸೆಯನ್ನು ಮಾಡದಿರುವವನೂ, ಅತಿಥಿ ಅಭ್ಯಾಗತರಿಗೆ ಆದರೋಪಚಾರವನ್ನು ಮಾಡಿ ಆತಿಥ್ಯವನ್ನು ಮಾಡುವವನೂ ಆದ ಮನುಷ್ಯನು ದಿವ್ಯವಾದ ಸ್ವರ್ಗಲೋಕವನ್ನು ಹೊಂದುತ್ತಾನೆ. ಅಲ್ಲಿ ಕೆಲವು ದಿನ ಸುಖದಿಂದ ಇದ್ದು ಪುನಃ ಮನುಷ್ಯನಾಗಿ ಭೂಲೋಕದಲ್ಲಿ ಹುಟ್ಟಿದಾಗಲೂ ದೊಡ್ಡ ಕುಲದಲ್ಲಿಯೇ ಜನಿಸಿ ಭೋಗಭಾಗ್ಯಗಳನ್ನು ಪಡೆಯುತ್ತಾನೆ.

ಆದುದರಿಂದ ಮಾನವನು ಸತ್ಪಾತ್ರರಲ್ಲಿ ದಾನಮಾಡಬೇಕು, ಯೋಗ್ಯರನ್ನು ಸತ್ಕರಿಸಬೇಕು. ಧರ್ಮನಿಷ್ಠನಾಗಿ ಸದಾಚಾರ ಸಂಪನ್ನನಾಗಿರಬೇಕು. ಇಂಥವನಿಗೆ ಎಲ್ಲರೂ ನಮಸ್ಕರಿಸುತ್ತಾರೆ. ಇಂಥ ಜ್ಞಾನಿಯು ದಾನಿಯು, ಪಂಡಿತ ಮಾನಿಯೂ ಆದ ಮನುಷ್ಯನು ತಾನು ಮಾಡಿದ ಸತ್ಕರ್ಮಗಳಿಂದ ಸದ್ಗತಿಯನ್ನು ಹೊಂದಿ ಈ ಲೋಕ ದಲ್ಲಿಯೂ, ಪರಲೋಕದಲ್ಲಿಯೂ ಸುಖಸೌಖ್ಯವನ್ನು ಹೊಂದುತ್ತಾನೆ. ಎಂದೂ ಅಂಥ ಪುಣ್ಯಾತ್ಮರ ಮನೆಯಲ್ಲಿ ಧನ, ಧಾನ್ಯ, ಮುತ್ತು, ರತ್ನ, ಭೋಗ, ಭಾಗ್ಯ ಎಲ್ಲವೂ ಸಮೃದ್ಧವಾಗಿಯೇ ಇರುತ್ತದೆ. ದೇವಿ ಕೆಲವರು ಸ್ವಭಾವದಿಂದಲೇ ಕ್ರೂರರಿರುತ್ತಾರೆ. ಅವರು ಪ್ರಾಣಿಗಳನ್ನು, ಪ್ರಸಂಗ ಬಂದಾಗ ಮಾನವರನ್ನು ಕೂಡ ಕೈಯಿಂದ ಹೊಡೆಯುತ್ತಾರೆ. ಕಾಲಿನಿಂದ ಒದೆಯುತ್ತಾರೆ. ಹಗ್ಗದಿಂದ ಬಿಗಿಯುತ್ತಾರೆ, ಬಡಿಗೆಯಿಂದ ಹೊಡೆಯುತ್ತಾರೆ. ಕಲ್ಲುಬೀಸುತ್ತಾರೆ. ಕಂಭವನ್ನು ಕೂಡಾ ಉರುಳಿಸಿ ಹಿಂಸೆ ಮಾಡುತ್ತಾರೆ. ಇನ್ನು ಹಲವರು ತಾನು ಹಿಂಸೆ ಮಾಡದಿದ್ದರೂ ಹಿಂಸೆ ಮಾಡುವವರಿಗೆ ಪ್ರೇರಕರಾಗಿ ಪಾಪಕೃತ್ಯಗಳಿಗೆ ಪ್ರೇರಕರಾಗಿ ಪ್ರಾಣಿಗಳಿಗೆ ಭಯವನ್ನು ಉಂಟುಮಾಡುತ್ತಾರೆ, ಅಪಾಯವನ್ನು ತಂದು ಒಡ್ಡುತ್ತಾರೆ. ಇಂಥ ಕ್ರೂರ ಕಠೋರ ಕುಚ್ಚಿತ ಸ್ವಭಾವದ ಪಾಪಿಗಳು ನರಕವನ್ನು ಹೊಂದುತ್ತಾರೆ. ಅನಂತರ ನರಕ ಯಾತನೆಗಳನ್ನು ಅನುಭವಿಸಿ ಭೂಲೋಕದಲ್ಲಿ ಅಧ ಮಾಧಮರ ಕೀಳು ಕುಲದಲ್ಲಿ ಹುಟ್ಟಿ ಪಡಬಾರದ ದುಃಖಗಳನ್ನೆಲ್ಲಾ ಪಡುತ್ತಾರೆ. ದೇವಿ ಮನುಷ್ಯ ಜಾತಿಯೇ ವಿಚಿತ್ರವಾಗಿದೆ. ಕೆಲವರು ಸ್ವಭಾವತಃ ಕ್ರೂರರಾಗಿದ್ದರೆ ಕೆಲವರು ಸ್ವಭಾವತಃ ಸಜ್ಜನರಾಗಿರುತ್ತಾರೆ. ಎಲ್ಲ ಪ್ರಾಣಿಗಳ ಮೇಲೆ ದಯೆಯನ್ನು ಮಾಡುತ್ತಾರೆ. ಎಲ್ಲರನ್ನೂ ಮೈತ್ರೀ ದೃಷ್ಟಿಯಿಂದ ನೋಡುತ್ತಾರೆ. ಯಾರ ಮೇಲೆಯೂ ದ್ವೇಷ, ಅಸೂಯೆ, ದುರ್ಭಾವನೆಗಳನ್ನು ಮಾಡುವದಿಲ್ಲ. ಇಂದ್ರಿಯಗಳನ್ನೆಲ್ಲ ತಮ್ಮ ಕೈಯಲ್ಲಿ ಇಟ್ಟುಕೊಂಡಿರುತ್ತಾರೆ. ಯಾರ ಮನಸ್ಸನ್ನೂ

ನೋಯಿಸುವದಿಲ್ಲ. ಯಾರನ್ನೂ ಹೊಡೆಯುವದಿಲ್ಲ. ಕೈಯಿಂದಾಗಲೀ, ಹಗ್ಗದಿಂದಾಗಲೀ, ಬಡಿಗೆಯಿಂದಾಗಲೀ ಕಲ್ಲಿನಿಂದಾಗಲೀ ಇನ್ನೊಬ್ಬರನ್ನು ಹಿಂಸೆ ಪಡಿಸುವದಿಲ್ಲ. ಇಂತ ದಯಾಪರನೂ ಶೀಲಸದಾಚಾರ ಸಂಪನ್ನನೂ ಆದ ಮನುಷ್ಯನು ಸ್ವರ್ಗಕ್ಕೆ ಹೋಗುತ್ತಾನೆ. ಅಲ್ಲಿಯೂ ದಿವ್ಯಭವ್ಯವಾದ ಮಂದಿರದಲ್ಲಿ ದೇವತೆಗಳಂತೆ ಸುಖವಾಗಿರುತ್ತಾನೆ. ಅಲ್ಲಿ ಪುಣ್ಯವು ಕ್ಷೀಣವಾದ ಬಳಿಕ ಮನುಷ್ಯ ಲೋಕಕ್ಕೆ ಬಂದರೂ ಇಲ್ಲಿ ಸತ್ಕುಲದಲ್ಲಿ ಹುಟ್ಟಿ ಯಾವ ಚಿಂತೆ, ಸಂತಾಪ ಉದ್ವೇಗ ಇಲ್ಲದೇ ಸುಖವಾಗಿ ಇರುತ್ತಾನೆ.

**ಉಮಾದೇವಿ:-** ಈ ಲೋಕದಲ್ಲಿ ಕೆಲವರು ಜ್ಞಾನ ವಿಜ್ಞಾನ ಸಂಪನ್ನರೂ ಮಹಾ ಉತ್ಸಾಹಿಗಳೂ, ಸರ್ವವಿಷಯಗಳಲ್ಲಿ ಕೋವಿದರೂ ಆಗಿರುತ್ತಾರೆ. ಇನ್ನು ಕೆಲವರಿಗೆ ಜ್ಞಾನವೂ ಇಲ್ಲ, ವಿಜ್ಞಾನವೂ ಇಲ್ಲ, ದುರ್ಬುದ್ಧಿ ದುರಾಚಾರಗಳಿಂದ ಬವಣೆ ಬಡುತ್ತಾರೆ. ಈ ವೈಲಕ್ಷಣ್ಯಕ್ಕೆ ಕಾರಣವೇನು? ಪತಿ ಪರಮೇಶ್ವರ, ಕೆಲವರು ಈ ಜಗತ್ತಿನಲ್ಲಿ ಹುಟ್ಟು ಕುರುಡರು ಮತ್ತೇ ಕೆಲವರು ತಾವರೆಗಣ್ಣಿನ ವಿಶಾಲಾಕ್ಷರು, ಸೂಕ್ಷ್ಮದರ್ಶಕರು, ಕೆಲವರು ರೋಗಿಷ್ಠರು, ಹಲವರು ಬಲಿಷ್ಠರು, ಕೆಲವರು ಷಂಢರು, ಹಲವರು ಗಂಡುಗಲಿಗಳು, ಈ ಎಲ್ಲ ವೈಪರೀತ್ಯ ವೈಸಾದೃಶ್ಯ ಇವುಗಳಿಗೆ ಕಾರಣವೇನು? ಹೇಳಿರಿ.

**ಮಹೇಶ್ವರ:-** ವೇದ ವಿದ್ವಾಂಸರಾದ ಧರ್ಮಜ್ಞರನ್ನು ಮತ್ತು ಶುದ್ಧ ಪುರುಷರನ್ನು ಧರ್ಮಾಧರ್ಮಗಳನ್ನು ಕೇಳಿ ಅಶುಭ ಕರ್ಮಗಳನ್ನು ತೊರೆದು ಸತ್ಕರ್ಮ ಪುಣ್ಯಕರ್ಮಗಳನ್ನು ಆಚರಿಸುವವರು ಸ್ವರ್ಗವನ್ನು ಸಾರುತ್ತಾರೆ. ಸುಖವನ್ನು ಅನುಭವಿಸುತ್ತಾರೆ. ಈ ಭೂಲೋಕದಲ್ಲಿ ಒಳ್ಳೇ ಬುದ್ಧಿವಂತರಾಗಿ ಬಾಳುತ್ತಾರೆ. ಈ ಲೋಕದಲ್ಲಿ ಯಾವನು ಯಜ್ಞ ಯಾಗಗಳನ್ನು, ದೇವರ ಪೂಜೆ ಪುನಸ್ಕಾರಗಳನ್ನು ಮಾಡುವನೋ ಅವನಿಗೆ ಪರಲೋಕದಲ್ಲಿ ಸುಖವಾಗುತ್ತದೆ. ಪರಸ್ತ್ರೀಯರನ್ನು ಕಾಮುಕ ದೃಷ್ಟಿಯಿಂದ ನೋಡುವವರೂ, ಮುಂದಿನ ಜನ್ಮದಲ್ಲಿಯೂ ಹುಟ್ಟುಗುರುಡರಾಗಿಯೂ ಹುಟ್ಟುತ್ತಾರೆ. ಹೆರವರ ಹೆಣ್ಣನ್ನು ಬಟ್ಟೆ, ಬಿಟ್ಟಾಗ ನಗ್ನಾವಸ್ಥೆಯಲ್ಲಿ ನೋಡಿದಾಗ ಈ ಜನ್ಮದಲ್ಲಿ ರೋಗಿಷ್ಠನಾಗುತ್ತಾನೆ. ಹೆರವರ ಹೆಂಡಂದಿರ ಜೊತೆಗೆ ಜನ್ಮಾಂತರದಲ್ಲಿ ರತಿ ಕ್ರೀಡೆಯನ್ನು ಮಾಡಿದವರು ಈ ಜನ್ಮದಲ್ಲಿ ಷಂಢರಾಗಿ ಜನಿಸುತ್ತಾರೆ. ಆದರಂತೆ ಗುರುಸ್ತ್ರೀ ಗಮನ ಮಾಡಿದವರು, ಕಂಡಕಂಡಲ್ಲಿ ಕಾಮ ಕ್ರೀಡೆಯನ್ನು ಆಚರಿಸುವವರು ಜನ್ಮಾಂತರದಲ್ಲಿ ಷಂಢರಾಗುತ್ತಾರೆ.

**ಪಾರ್ವತಿ:-** ಪೂಜ್ಯ, ಪತಿ ದೇವಾ, ಯಾವದು ಸತ್ಕರ್ಮ? ಯಾವದು ದುಷ್ಕರ್ಮ? ಯಾವದನ್ನು ಮಾಡಿದರೆ ಮನುಷ್ಯನಿಗೆ ಸದ್ಗತಿ? ಯಾವುದನ್ನು ಮಾಡಿದರೆ ಮನುಷ್ಯನಿಗೆ ದುರ್ಗತಿ? ಇದನ್ನು ಸಂಕ್ಷೇಪಿಸಿ ಹೇಳಿರಿ.

**ಮಹೇಶ್ವರ:-** ತನಗೆ ಶ್ರೇಯಸ್ಸು ಉಂಟಾಗಬೇಕು. ಎಂದು ಬಯಸುವ ಯಾವ ಮನುಷ್ಯನು ವೇದ ಓದಿದ ಸತ್ಪುರುಷರನ್ನು ವಿಚಾರಿಸಿ, ಅವರು ಹೇಳಿದಂತೆ ಶಾಸ್ತ್ರೋಕ್ತ ಮಾರ್ಗದಲ್ಲಿ ನಡೆಯುವನೋ ಮತ್ತು ಇಂದ್ರಿಯಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುವನೋ, ಎಲ್ಲ ಜನರಹಿತಕ್ಕಾಗಿ ಕಲ್ಯಾಣಕಾರ್ಯಗಳನ್ನು, ಪರೋಪಕಾರ ಕಾರ್ಯವನ್ನು, ಪುಣ್ಯಕಾರವನ್ನು ಮಾಡುತ್ತ ಇರುವನೋ ಅವನು ಇಹದಲ್ಲಿ ಶ್ರೇಯಸ್ಸನ್ನು ಪರದಲ್ಲಿ ಶ್ರೇಯಸ್ಸನ್ನೂ ಎರಡನ್ನೂ ಹೊಂದುತ್ತಾನೆ.

**ಪಾರ್ವತಿ:-** ಈ ಪ್ರಪಂಚದಲ್ಲಿ ಕೆಲವರು ಧರ್ಮದ್ವೇಷಿಗಳೂ, ಬ್ರಹ್ಮದ್ವೇಷಿಗಳೂ, ವೇದ ವಿರೋಧಿಗಳೂ ಶೀಲಭ್ರಷ್ಟರೂ ಆಗಿರುತ್ತಾರೆ. ಇನ್ನು ಹಲವರು ವೇದಶಾಸ್ತ್ರಗಳಲ್ಲಿ ಧರ್ಮಕರ್ಮಗಳಲ್ಲಿ ಶ್ರದ್ಧಾಳುಗಳು ಆಗಿರುತ್ತಾರೆ. ಕೆಲವರು ವ್ರತನಿಷ್ಠರು, ಕೆಲವರು ವ್ರತಭ್ರಷ್ಟರು. ಕೆಲವರು ಶೀಲವಂತರು ಕೆಲವರು ದುಃಶೀಲರು. ಕೆಲವರು ದೇವೋಪಮರು. ಕೆಲವರು ರಾಕ್ಷಸರು ಕೆಲವರು ಯಾಜ್ಞಿಕರು ಹಲವರು ಯಾಜ್ಞಿಕ ದ್ವೇಷಿಕರು. ಹೀಗೆಲ್ಲಾ ಆಗಲಿಕ್ಕೆ ಯಾವ ಕರ್ಮ ವಿಪಾಕ ಕಾರಣ? ಈ ತರಹದ ವೈಷಮ್ಯಕ್ಕೆ ಕಾರಣವೇನು? ಹೇಳಿರಿ.

**ಮಹೇಶ್ವರ:-** ದೇವಿ, ಜನರ ಶುಭಾಶುಭಗತಿ ಫಲಗಳೆಲ್ಲವೂ ಅವರವರ ಕರ್ಮಾನುಸಾರವಾಗಿಯೇ ಬರುತ್ತವೆ. ವೇದ ಶಾಸ್ತ್ರೋಕ್ತ ನೀತಿನಿಯಮಗಳು ಆಚಾರವಿಚಾರಗಳು ಮನ್ವಾದಿ ಪೂರ್ವಾಚಾರ್ಯರಿಂದಲೂ, ವೇದ ದೃಷ್ಟಾರರಿಂದಲೂ ಕಂಡುಹಿಡಿಯಲ್ಪಟ್ಟು ಶಿಷ್ಟೋಪದಿಷ್ಟವಾಗಿರುತ್ತವೆ. ಅವುಗಳನ್ನು ಪ್ರಮಾಣವೆಂದು ಮನ್ನಿಸಿ ಅದರಲ್ಲಿ ಹೇಳಿದಂತೆ ಪ್ರಾಮಾಣಿಕವಾಗಿ ನಡೆಯುವವರು ಮುಂದಿನ ಜನ್ಮದಲ್ಲಿ ಶಮದಮಾದಿ ಸಂಪನ್ನರೂ, ಶೀಲವಂತರೂ, ಧರ್ಮವಂತರೂ, ವ್ರತನಿಷ್ಠರೂ ಆಚಾರ ಸಂಪನ್ನರೂ ಆಗುತ್ತಾರೆ. ಯಾರು ಇಂದ್ರಿಯ ಸುಖವನ್ನೇ ಮುಖ್ಯ ಎಂದು ತಿಳಿದುಕೊಂಡು ಧರ್ಮವನ್ನು ಅಧರ್ಮವೆಂದು ಹೇಳುತ್ತ, ಅಧರ್ಮವನ್ನು ಧರ್ಮ ಎಂದುಹೇಳುತ್ತ ಸ್ನಾನ ಸಂಧ್ಯಾಧಿಗಳನ್ನು ಮಾಡದೇ, ವ್ರತನಿಯಮ, ಉಪವಾಸಾದಿಗಳನ್ನು ಮಾಡದೆ ಇರುವರೋ ಅವರು ಮುಂದಿನ ಜನ್ಮದಲ್ಲಿ ಬ್ರಹ್ಮರಾಕ್ಷಸರಾಗಿ ಹುಟ್ಟುತ್ತಾರೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತಾರನೆಯ ಅಧ್ಯಾಯ ಮುಗಿದುದು*

—o—

## ವಾಸುದೇವ ಮಹಿಮಾ ನಿರೂಪಣೆ

**ಅಧ್ಯಾಯ - ೪೭**

**ವೇದವ್ಯಾಸ:-** ಜಗನ್ಮಾತೆಯಾದ ಪಾರ್ವತಿ ದೇವಿಯು ತನ್ನ ಪತಿ ಪರಮೇಶ್ವರನು ಹೇಳಿದ ಮಾತುಗಳನ್ನೆಲ್ಲಾ ಕೇಳಿ ಮಾನವನ ಸುಖ ದುಃಖಗಳನ್ನು ಹಾಗೂ ಸೌಭಾಗ್ಯ ದೌರ್ಭಾಗ್ಯವನ್ನು ಅರಿತು ಮೂಲ ಕಾರಣವನ್ನು ತಿಳಿದು ಸಂಪ್ರೀತಳೂ ವಿಸ್ಮಿತಳೂ ಆದಳು. ಅದೇ ವೇಳೆಯಲ್ಲಿ ಅನೇಕ ಮುನಿ ಮಾನೀಯ ಮಹರ್ಷಿಗಳು ತೀರ್ಥಯಾತ್ರೆಯನ್ನು ಮಾಡುತ್ತ ಅಲ್ಲಿಗೆ ಬಂದರು. ಅವರೆಲ್ಲರೂ ಪರಮೇಶ್ವರನನ್ನು ಪೂಜೆ ಮಾಡಿ ಭಕ್ತಿಯಿಂದ ನಮಸ್ಕರಿಸಿದರು, ಮತ್ತು ಲೋಕಕಲ್ಯಾಣಕ್ಕಾಗಿ ತಮ್ಮ ಸಂಶಯವನ್ನು ಪರಿಹಾರ ಮಾಡಬೇಕು ಎಂದು ಜಿಜ್ಞಾಸೆಯಿಂದ ಕೈ ಮುಗಿದು ಕೇಳಿದರು.

**ಋಷಿಗಳು:-** ದಕ್ಷ ಪ್ರಜಾಪತಿಯ ಯಜ್ಞವನ್ನು ಧ್ವಂಸಮಾಡಿದ ಮುಕ್ಕಣ್ಣನೇ, ನಿನಗೆ ನಮಸ್ಕಾರ. ನೀನು ಜಗದೊಡೆಯನಲ್ಲವೇ? ನಮ್ಮ ಮನಸ್ಸಿನಲ್ಲಿ ಕೆಲವು ಸಂಶಯಗಳು ಉಳಿದುಕೊಂಡಿವೆ. ಅವುಗಳ ಪರಿಹಾರಕ್ಕಾಗಿ ಕೆಲವು ಪ್ರಶ್ನೆ ಕೇಳುತ್ತೇವೆ. ದಯವಿಟ್ಟು ನಮ್ಮ ಸಂಶಯಗಳನ್ನು ಪರಿಹರಿಸು. ಈ ಸಂಸಾರವು ಅತ್ಯಂತ ಘೋರ ಮತ್ತು ಭೀಕರ, ಅಲ್ಪಬುದ್ಧಿಯ ಮಾನವರು ಕಾಲಪಾಶವಶರಾಗಿ ಈ ಸಂಸಾರಚಕ್ರದಲ್ಲಿ ನಿರಂತರವೂ ತಿರುಗುತ್ತಿದ್ದಾರೆ. ಯಾವ ಉಪಾಯದಿಂದ ಮಾನವರು ಈ ಜನ್ಮ ಸಂಸಾರ ಬಂಧನದಿಂದ ಪಾರಾಗುವರೋ ಅದನ್ನು ತಿಳಿದುಕೊಳ್ಳಬೇಕೆಂದು ನಮಗೆ ಕುತೂಹಲ ಉಂಟಾಗಿದೆ. ದಯವಿಟ್ಟು ತಿಳಿಸಿ ಕೊಡಿರಿ.

**ಪರಮೇಶ್ವರ:-** ಕರ್ಮಪಾಶದಿಂದ ಬದ್ಧರಾದ, ಸಂಸಾರಚಕ್ರದಲ್ಲಿ ಸಿಕ್ಕು ಗೋಳಾಡುವ ಮಾನವನಿಗೆ ''ನಾನ್ಯೋಪಾಯಂ ಪ್ರಪಶ್ಯಾಮಿ ವಾಸುದೇವಾತ ಪರದ್ವಿಜಾಃ'' ವಾಸುದೇವನಾದ ಶ್ರೀಹರಿಯ ಆರಾಧನೆಯ ಹೊರತು ಎಲೈ ಬ್ರಾಹ್ಮಣರೆ, ಬೇರೆ ಉಪಾಯವೇ ಇಲ್ಲ. ಶಂಖ, ಚಕ್ರ, ಗದಾ ಧಾರಿಯಾದ ಆ ಶ್ರೀಹರಿಯನ್ನು ಕಾಯಾ ವಾಚಾ ಮನಸಾ ಆರಾಧಿಸಿ ಅವನ ಪ್ರೇರಣೆಯಿಂದ ಸತ್ಕರ್ಮಾನುಷ್ಠಾನವನ್ನು ಮಾಡುವರೋ ಅವರು ಪರಮಾತ್ಮನ ಪರಮಪದವನ್ನು ಹೊಂದುವರು. ಜಗದಂತರ್ಯಾಮಿಯೂ ಜಗತ್ಸ್ವಾಮಿಯೂ ಆದ ಆ ವಾಸುದೇವನಲ್ಲಿ ಯಾರು ಮನಸ್ಸನ್ನಿಟ್ಟು ಅವನನ್ನು ಆರಾಧಿಸುವದಿಲ್ಲವೋ ಅಂತ ಪಶುಪ್ರಾಯರಾದ ಜನರು ಬದುಕಿ ಪ್ರಯೋಜನವೇನು?

**ವ್ಯಾಸ:-** ಹಿಮಗಿರಿ ಶಿಖರದಲ್ಲಿ ಪಾರ್ವತೀ ಪರಮೇಶ್ವರರು ಧರ್ಮಾಧರ್ಮದ ಫಲಾಫಲಗಳನ್ನು ಸಂವಾದ ರೂಪದಿಂದ ವ್ಯಕ್ತಮಾಡುತ್ತಿರುವಾಗ ಅಲ್ಲಿಗೆ ತೀರ್ಥಯಾತ್ರೆಯ ಪ್ರಸಂಗದಿಂದ ಅನೇಕ ಮುನಿಗಳು ಬಂದಿದ್ದರು. ಅವರೆಲ್ಲರೂ ಮಹಾದೇವರನ್ನು ನಮಸ್ಕರಿಸಿ, ಪೂಜೆಮಾಡಿ ಲೋಕಹಿತದ ಆಕಾಂಕ್ಷೆಯಿಂದ ಪ್ರಶ್ನೆ ಮಾಡಿದರು.

**ಋಷಿಗಳು:-** ಮನುಷ್ಯನು ಹುಟ್ಟು ಸಾವು ನೋವುನಲಿವುಗಳಿಂದ ಕೂಡಿದ ಸಂಸಾರದ ಬಂಧನದಿಂದ ಯಾವ ಉಪಾಯದಿಂದ ಮುಕ್ತನಾಗುತ್ತಾನೆ ಅದನ್ನು ಹೇಳಿರಿ. ಮತ್ತು ವಾಸುದೇವನ ಮಹಿಮೆಯನ್ನು ಮತ್ತೂ ಮತ್ತೂ ನಿರೂಪಿರಿ.

**ಮಹೇಶ್ವರ:-** ಋಷಿಗಳೇ, ಕರ್ಮದೋಷದಿಂದ ಬಿಗಿಯಲ್ಪಟ್ಟು ಭೂಮಿಯಲ್ಲಿ ಬಗೆಬಗೆಯ ಭಿನ್ನ ಭವಣೆಗಳನ್ನು ಅನುಭವಿಸುವ ಮಾನವರಿಗೆ ಬಿಡುಗಡೆಯ ಉಪಾಯವೆಂದರೆ ಸಾಕ್ಷಾತ್ ವಾಸುದೇವನೊಬ್ಬನೆ. ಶಂಖ, ಚಕ್ರ ಗದಾಧಾರಿಯಾದ ಆ ನಾರಾಯಣನನ್ನು ಮನಸ್ಸು ಮಾತು ಮತ್ತು ಕರ್ಮಗಳಿಂದ ಯಾರು ತ್ರಿಕರಣ ಶುದ್ಧಿ ಪೂರ್ವಕವಾಗಿ ಪೂಜಿಸುತ್ತಾರೋ ಅವರು ದಿವ್ಯಗತಿಯನ್ನು ಹೊಂದುತ್ತಾರೆ. ಇದನ್ನು ನಾನು ನಿಮಗೆ ಈ ಮೊದಲೇ ತಿಳಿಸಿದ್ದೇನೆ. ಇನ್ನೂ ಹೆಚ್ಚು ಆ ಭಗವನ್ಮಹಿಮೆಯನ್ನು ಹೇಳುತ್ತೇನೆ ಕೇಳಿರಿ. ಆ ಭಗವಾನ್ ಶ್ರೀಕೃಷ್ಣನು ಪಿತಾಮಹಾನಾದ ಬ್ರಹ್ಮನಿಗಿಂತ ಶ್ರೇಷ್ಠನು. ಬ್ರಹ್ಮನು ಆ ಮಹಾವಿಷ್ಣುವಿನ ಉದರದಿಂದ ಜನಿಸಿದರೆ ನಾನು ತಲೆಯಿಂದ ಹುಟ್ಟಿದ್ದೇನೆ. ಅವನ ತಲೆಕೂದಲುಗಳಿಂದ ದೇವದಾನವರೂ, ಅವನ ದೇಹದಿಂದ ಹದಿನಾಲ್ಕು ಲೋಕಗಳೂ ಉತ್ಪನ್ನವಾಗಿರುತ್ತವೆ. ಈ ಹಧಿನಾಲ್ಕು ಲೋಕಗಳ ಸೃಷ್ಟಿಕರ್ತನೂ, ಪಾಲಕರ್ತಾರನೂ ಸಂಹಾರಕರ್ತಾರನೂ ಅವನೇ ಆಗಿದ್ದಾನೆ. ಅವನು ಸರ್ವಜ್ಞ. ಅವನಿಗಿಂತ ಶ್ರೇಷ್ಠವಾದ ಯಾವ ವಸ್ತುವೂ ಜಗತ್ತಿನಲ್ಲಿ ಇರುವದಿಲ್ಲ. ಅವನೇ ಪರಾತ್ಪರ ಅವನಿಗೆ 'ಗೋವಿಂದ' ಎಂದು ಎನ್ನುವರು. ಮುಂದೆ ದ್ವಾಪರಯುಗದ ಅಂತಿಮಭಾಗದಲ್ಲಿ ದೇವತೆಗಳ ಕಾರ್ಯವನ್ನು ಸಾಧಿಸುವದಕ್ಕಾಗಿ ಆ ಗೋವಿಂದ ಮಾನವ ದೇಹವನ್ನು ತಾಳಿ ಮೇದಿನೀತಳದಲ್ಲಿ ಹುಟ್ಟಿ ಬರುವನು. ಅವನು ಹುಟ್ಟುವ ಮೊದಲು ಆ ವಂಶದಲ್ಲಿ ಜನ್ಮವನ್ನು ತಾಳಲಿರುವ ಶ್ರೀಕೃಷ್ಣನ ಪೂರ್ವಜರ ಸಂಕ್ಷಿಪ್ತವಾದ ಜನನ ವೃತ್ತಾಂತವನ್ನು ಹೇಳುತ್ತೇನೆ ಕೇಳಿ.

ವೈವಸ್ವತ ಮುನುವಿಗೆ ಅಂಶ ಎಂಬ ಹೆಸರಿನ ಗಂಡು ಮಗ ಹುಟ್ಟುವನು. ಅವನಿಗೆ ಅಂತರ್ಧಾಮ ಎಂಬುವ ಪುತ್ರನು ಜನಿಸುವನು. ಅಂತರ್ಧಾಮನಿಂದ ಹರಿರ್ಧಾಮ ಎಂಬ ತನಯನ ಉತ್ಪತ್ತಿಯಾಗುವದು. ಅವನಿಗೆ ಪ್ರಾಚೀನಬರ್ಹಿ ಎಂಬ ಸತ್ಪುತ್ರನು ಉತ್ಪನ್ನ

ನಾಗುವನು. ಆ ಪ್ರಾಚೀನ ಬರ್ಹಿಗೆ ಪ್ರಚೇತಸರು ಎಂಬ ಹತ್ತು ಜನ ಮಕ್ಕಳು ಉಂಟಾಗುವರು. ಆ ಪ್ರಚೇತಸರಿಂದ ದಕ್ಷ ಪ್ರಜಾಪತಿಯು ಜನಿಸುವನು. ಅವನಿಗೆ ದಾಕ್ಷಾಯಣಿ ಎಂಬ ಹೆಸರಿನ ಅರವತ್ತು ಜನ ಕನ್ಯೆಯರು ಜನಿಸುವರು, ದಕ್ಷ ಪ್ರಜಾಪತಿಯ ಮೊದಲಾದ ಆದಿತ್ಯನು, ಆದಿತ್ಯನಿಂದ ಮನು, ಮನುವಿನಿಂದ ಸುದ್ಯುಮ್ನ, ಸುದ್ಯುಮ್ನನಿಂದ ಬುಧ, ಬುಧನಿಂದ ಪುರೂರವ, ಪುರುರವನಿಂದ ಆಯು, ಆಯುವಿನಿಂದ ನಹುಷ, ನಹುಷನಿಂದ ಯಯಾತಿ, ಯಯಾತಿಯಿಂದ ಯದು, ಯದುವಿನಿಂದ ಕ್ರೋಷ್ಟ, ಕ್ರೋಷ್ಟುವಿನಿಂದ ವೃಜನೀವಾನ್, ವೃಜನಿವಂತನಿಂದ ಉಶಂಗು, ಉಪಶಂಗನಿಂದ ಚಿತ್ರರಥ, ಚಿತ್ರರಥನಿಂದ ಶೂರ, ಆ ಶೂರನಿಂದ ವಸುದೇವನು ಪುತ್ರನಾಗಿ ಜನಿಸುವನು.

ಆ ವಸುದೇವನ ಪುತ್ರನಾಗಿ ಭಗವಾನ್ ವಾಸುದೇವನು ಶಂಖ, ಚಕ್ರ, ಗದಾಪದ್ಮ ಧಾರಿಯಾಗಿ ವಸುದೇವನ ಮಡದಿ ದೇವಕಿಯ ಗರ್ಭದಲ್ಲಿ ಪ್ರಾದುರ್ಭೂತನಾಗುವನು. ಅವನು ಜರಾಸಂಧನೆ ಮೊದಲಾದ ದುಷ್ಟರಾಜರನ್ನು ಗೆದ್ದು, ನರಕಾಸುರನನ್ನು ಸಂಹರಿಸಿ, ಅವನು ಕಾರಾಗೃಹದಲ್ಲಿ ಬಂಧಿಸಿಟ್ಟ ಎಲ್ಲ ರಾಜರನ್ನು ಬಿಡಿಸುವನು. ಆ ಗೋವಿಂದನು ತನ್ನ ಕಾರ್ಯ ಪರಾಕ್ರಮಗಳಿಂದ ಸರ್ವರಾಜರಿಗೂ ರಾಜನಾಗಿ, ಪರಮಪ್ರತಾಪಶಾಲಿ ಪುರುಷೋತ್ತಮನಾಗಿ ಭೂಲೋಕದಲ್ಲಿ ಪ್ರಸಿದ್ಧನಾಗುವನು. ಆ ಶ್ರೀಕೃಷ್ಣನು ದ್ವಾರಕಾ ಪಟ್ಟಣದಲ್ಲಿ ವಾಸಮಾಡಿ ಭೂಮಿಗೆ ಭಾರಭೂತರಾದ ದುಷ್ಟರನ್ನು ದಮನಮಾಡಿ ಮಹೀಮಂಡಲವನ್ನು ಧರ್ಮಮಾರ್ಗದಿಂದ ಪಾಲನಮಾಡುವನು. ಬ್ರಾಹ್ಮಣರೇ, ನೀವೆಲ್ಲರೂ ಆ ವಾಸುದೇವನನ್ನು ಅಲ್ಲಿಗೇ ಹೋಗಿ ಅವನೇ ಸಾಕ್ಷಾತ್ ಪರಬ್ರಹ್ಮನೆಂದು ಪೂಜೆ ಮಾಡಿರಿ. ಅವನೇ ಬ್ರಹ್ಮ, ಅವನೇ ರುದ್ರ, ಅವನೇ ವಿಷ್ಣು ಎಂದು ತಿಳಿಯಿರಿ. ಆ ವಾಸುದೇವನನ್ನು ಆಶ್ರಯಿಸಿದವರು ಕೀರ್ತಿವಂತರಾಗುತ್ತಾರೆ. ಸ್ವರ್ಗಮೋಕ್ಷಾದಿಗಳು ಲಭಿಸುವದು ಆ ಶ್ರೀಕೃಷ್ಣನ ಇಚ್ಛೆಯಿಂದಲೇ. ಅವನನ್ನು ಪೂಜಿಸಿದರೆ ರುದ್ರನಾದ ನನ್ನ ಪೂಜಿಸಿದಂತೆಯೇ. ಸರ್ವಲೋಕ ಪಿತಾಮಹಾನಾದ ಬ್ರಹ್ಮನನ್ನೂ ಪೂಜಿಸಿದಂತೆಯೇ ಅಷ್ಟೇಏಕೆ? ಆ ವಾಸುದೇವನ ಪೂಜೆಯಿಂದ ಸರ್ವದೇವತೆಗಳನ್ನು ಪೂಜಿಸಿದ ಪುಣ್ಯ ಫಲವು ಪ್ರಾಪ್ತವಾಗುತ್ತದೆ.

**ಮಹಾವರಾಹಂ ತಂ ದೇವಂ ಸರ್ವಲೋಕಪಿತಾಮಹಂ**
**ಅಹಂ ಚೈವ ನಮಸ್ಯಾಮಿ ನಿತ್ಯಮೇವ ಜಗತ್ಪತಿಂ ॥**

ಸರ್ವಲೋಕಗಳನ್ನು ಹುಟ್ಟಿಸಿದ ಬ್ರಹ್ಮನಿಗೂ ಆ ಭಗವಂತನೂ ತಂದೆಯಾಗಿದ್ದಾನೆ. ಆದುದರಿಂದ ಅವನು ಪ್ರಪಂಚದ ಅಜ್ಜ ಅವನೇ ಜಗದ ಒಡೆಯ. ಅವನಿಗೆ ಮಹಾ ವರಾಹ ಎನ್ನುವರು. ಅಂಥ ಆ ವಿಷ್ಣುವನ್ನು ನಾನು ನಿತ್ಯವೂ ನಮಸ್ಕಾರ ಮಾಡುತ್ತೇನೆ.

ಅವನ ಅಣ್ಣನು ಒಬ್ಬನು ಇರುತ್ತಾನೆ. ಅವನು ತನ್ನ ದೇಹದ ಬಿಳಿಯ ಬಣ್ಣದಿಂದ ಬೆಳ್ಳಿಯ ಗುಡ್ಡದಂತೆ ತೋರುತ್ತಾನೆ. ಅವನು ಕೈಯಲ್ಲಿ ಒನಕೆಯನ್ನೇ ಆಯುಧವಾಗಿ ಹಿಡಿದದ್ದರಿಂದ ಹಲೀ ಎಂದೂ, ಬಹಳ ಬಲಿಷ್ಠನಾದುದರಿಂದ ಬಲ ಎಂದೂ ಕರೆಯಲ್ಪಡುತ್ತಾನೆ. ಕಶ್ಯಪರ ಮಗನಾದ ಗರುಡನು ಆ ಭಗವಂತನ ಮಹಿಮೆಗಳ ಅಂತವನ್ನು ಕಾಣಲು ಶಕ್ತನಾಗಲಿಲ್ಲ. ಆದುದರಿಂದ ಅವನಿಗೆ ಅನಂತ ಎಂತಲೂ ಹೆಸರೂ ಬಂದಿರುತ್ತದೆ. ಬಲರಾಮ, ಹಲಿ, ಅನಂತ ಎಂದೂ ಅನೇಕ ಹೆಸರುವುಳ್ಳ ಆ ಬಲಭದ್ರನು

ಆದಿಶೇಷನ ಅವತಾರಭೂತನಾಗಿದ್ದೂ ಇಡೀ ಭೂಮಂಡಲವನ್ನೆಲ್ಲಾ ಹೊತ್ತು ಎತ್ತಿ ಹಿಡಿದಿರುತ್ತಾನೆ. ಈ ಬಲರಾಮ ಮತ್ತು ಕೃಷ್ಣ ಇವರಿಬ್ಬರೂ ಮಹಾವಿಷ್ಣುವಿನ ಅಭಿನ್ನಾಂಶರಾಗಿ, ಸರ್ವಾಜಗಧಾಧಾರರಾಗಿ ಭೂಲೋಕವನ್ನು ಮುಂದೆ ಉದ್ಧಾರಮಾಡಲಿರುವವರು ಆ ಚಕ್ರಧರ ಮತ್ತು ಹಲಧರರನ್ನು ಪುಣ್ಯಪುರುಷರಾದ ತಪೋಧನರೇ ನೀವೆಲ್ಲರೂ ಕಣ್ಣಿಂದ ನೋಡಿ, ಕೈಯಿಂದ ಪೂಜಿಸಿ ಧನ್ಯರಾಗಿರಿ.

## ವೈಷ್ಣವರ ಗತಿನಿರೂಪಣ

**ಋಷಿಗಳು:-** ಮುನೀಶ್ವರರೇ, ಶ್ರೀಕೃಷ್ಣನ ಮಹಿಮೆ ಸರ್ವಪಾಪಗಳಿಗೂ ಪರಿಹಾರಕ, ಪುಣ್ಯಪ್ರದ, ಸಂಸಾರನಾಶಕ. ಅಂಥ ಶ್ರೀಕೃಷ್ಣನ ಮಹಾಮಹಿಮೆಯನ್ನು ನಿಮ್ಮ ಮುಖದಿಂದ ಕೇಳಿ ಧನ್ಯರಾದೆವು. ಈಗ ಭಕ್ತಿಪೂರ್ವಕವಾಗಿ ಆ ವಾಸುದೇವನನ್ನು ಶ್ರದ್ಧೆಯಿಂದ ಆರಾಧನೆ ಮಾಡಿ, ಅರ್ಚಿಸಿ ಮೆಚ್ಚಿಸಿದರೆ ಅವರಿಗೆ ದೊರಕುವ ಫಲ ಏನು? ಸ್ವರ್ಗವೆ? ಮೋಕ್ಷವೇ? ಅಥವಾ ಸ್ವರ್ಗಮೋಕ್ಷ ಎರಡೂ ಪ್ರಾಪ್ತವಾಗುವವೇ? ವಾಸುದೇವ ಪರಾಯಣರಾದ ಭಕ್ತರಿಗೆ ಬರುವ ಫಲವೇನು? ಸಿಗುವ ಗತಿಯೇನು? ಈ ನಮ್ಮ ಸಂಶಯವನ್ನು ಹೋಗಲಾಡಿಸಿರಿ.

**ವೇದವ್ಯಾಸ:-** ಮುನಿವರ್ಯರೇ, ನೀವು ಒಳ್ಳೆಯ ಪ್ರಶ್ನೆಯನ್ನು ಮಾಡಿದಿರಿ. ನಾನು ಪರಮವೈಷ್ಣವರಾದ ವಿಷ್ಣುಉಪಾಸಕರಿಗೆ ಯಾವ ಗತಿಯಾಗುವದು ಎನ್ನುವುದನ್ನು ಹೇಳುತ್ತೇನೆ ಕೇಳಿ.

ವಿಷ್ಣುಭಕ್ತಿಯ ದೀಕ್ಷೆಯನ್ನು ಗ್ರಹಣ ಮಾಡಿದರೂ ಸಾಕು. ಅವರು ಮೋಕ್ಷದ ಮಾರ್ಗದಲ್ಲಿ ಮುಂದುವರೆಯುವರು. ಯಾವ ಮಾನವರು ಭಕ್ತಿಯಿಂದ ಅಚ್ಯುತನನ್ನು ಪೂಜಿಸುವರೋ ಅವರಿಗೆ ಸ್ವರ್ಗವು ದುರ್ಲಭವಲ್ಲ. ಮೋಕ್ಷವೂ ಅಲಭ್ಯವಲ್ಲ. ಮಹಾವಿಷ್ಣುವನ್ನು ಭಕ್ತಿಯಿಂದ ಭಜಿಸುವವರು, ಶ್ರದ್ಧೆಯಿಂದ ಪೂಜಿಸುವವರು, ಯಾವ ಯಾವ ಫಲಗಳನ್ನು ಬಯಸುವರೋ ಅದೆಲ್ಲವನ್ನೂ ಸುಲಭವಾಗಿ ಹೊಂದುತ್ತಾರೆ. ರತ್ನದ ಪರ್ವತವನ್ನು ಹತ್ತಿ ನಿಂತವನು ತನಗೆ ಬೇಕಾದ ರತ್ನವನ್ನು ಸುಲಭವಾಗಿ ತೆಗೆದುಕೊಳ್ಳಬಹುದಷ್ಟೆ. ಅದರಂತೆ ಶ್ರೀಕೃಷ್ಣನನ್ನು ಸೇವಿಸುವವರು ತಮ್ಮ ಎಲ್ಲ ಮನೋರಥಗಳನ್ನು ಪೂರ್ಣಮಾಡಿಕೊಳ್ಳುವರು. ಕಲ್ಪವೃಕ್ಷದ ಕೆಳಗೆ ಕುಳಿತವನು ತನ್ನ ಮನೋಭೀಷ್ಟಗಳನ್ನೆಲ್ಲಾ ಆ ವೃಕ್ಷದ ಮಹಿಮೆಯಿಂದ ಪಡೆಯುವಂತೆ ಶ್ರೀಹರಿಯನ್ನು ಅನುಗಾಲವೂ ಉಪಾಸಿಸಿದವನೂ ತನ್ನ ಮನೋರಥಗಳನ್ನೆಲ್ಲಾ ಅನಾಯಾಸವಾಗಿ ಪಡೆಯುವನು. ಜಗದ್ಗುರು ಆ ವಾಸುದೇವ. ಅವನನ್ನು ಶ್ರದ್ಧೆಯಿಂದ ಆರಾಧಿಸಿದವರು ತಮ್ಮ ಪೂಜೆಯ ಫಲವಾಗಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಚತುರ್ವಿಧ ಪುರುಷಾರ್ಥಗಳನ್ನು ಹೊಂದುವರು. ಶುದ್ಧಾಂತಃಕರುಣವಾಗಿ ಆ ಜಗನ್ನಾಥನನ್ನು ಆರಾಧಿಸಿದರೆ ಮಾನವರಿಗೆ ದೇವತೆಗಳಿಗೂ ಕೂಡ ದುರ್ಲಭವಾದ ದಿವ್ಯಫಲ ಪ್ರಯೋಜನಗಳು ತಾವಾಗಿಯೇ ದೊರಕುವವು. ಬ್ರಾಹ್ಮಣರಾಗಲಿ, ಕ್ಷತ್ರಿಯರಾಗಲಿ, ವೈಶ್ಯರಾಗಲಿ, ಶೂದ್ರರಾಗಲಿ, ಸ್ತ್ರೀಯರಾಗಲಿ, ಅಥವಾ ಅಂತ್ಯಜರಾದರೂ ಕೂಡ ಆ ಶ್ರೀಕೃಷ್ಣ ಪೂಜೆಯನ್ನು ಏಕಾಗ್ರಮನಸ್ಸಿನಿಂದ ಮಾಡಿ ಅತ್ಯಂತ ಭಕ್ತಿಯಿಂದ ಆ ಪರಮಾತ್ಮನ ಭಜನೆ, ಆರಾಧನೆ, ಸ್ಮರಣೆ, ಆರ್ಚನೆ, ವಂದನೆ, ಉಪಾಸನೆಗಳನ್ನು ಮಾಡಿದರೆ ಅತ್ಯಂತ ಶ್ರೇಷ್ಠವಾದ ಸದ್ಗತಿಗಳನ್ನು ಹೊಂದುತ್ತಾರೆ. ಅಂಥ ಮಹಾತ್ಮರೂ, ಧರ್ಮಾತ್ಮರೂ, ಪುಣ್ಯಾತ್ಮರೂ ಆದ ಭಗವದ್ಭಕ್ತರಿಗೆ ಆಗುವ ಗತಿ, ದೊರಕುವ ಫಲಗಳನ್ನು ಹೇಳುತ್ತೇನೆ ಕೇಳಿ.

ಈ ಮನುಷ್ಯ ದೇಹವು ರಕ್ತ, ಮಾಂಸ, ಮೂಳೆ, ಮಜ್ಜೆ, ಕೀವು, ಮೊದಲಾದ ಮಲಗಳಿಂದ ತುಂಬಿ ತುಳುಕುತ್ತದೆ. ವಿಷಾಮಾತ್ರಾದಿಗಳಿಂದ ದುರ್ಗಂಧ ಹೊಮ್ಮಿ ನಾರುತ್ತದೆ. ಸ್ನಾಯು, ಚರ್ಮ, ನಾಡಿ, ಎಲುಬುಗಳಿಂದ ಬಿಗಿಯಲ್ಪಟ್ಟ ಈ ಪಾಂಚಭೂತಿಕ ಶರೀರಕ್ಕೆ ಮುಪ್ಪು ತಪ್ಪಿದ್ದಲ್ಲ, ಸಾವು ಬಿಟ್ಟಿದ್ದಲ್ಲ. ಮೇಲಾಗಿ ಇಂಥ ಅಮೇಧ್ಯ ಪದಾರ್ಥಗಳಿಂದ ದುರ್ವಾಸನೆಯಿಟ್ಟು ನಾರುವ ಈ ಮಾನವ ಶರೀರ ಸ್ಥಿರವೂ ಅಲ್ಲ. ನೀರ ಮೇಲಿನ ಗುಳ್ಳೆಯಂತೆ ಟಳ್ಳೆಂದು ಬೇಗ ಒಡೆದು, ಸಿಡಿದು ಹಾಳಾಗಿ ಹೋಗುವದು. ವಿಷ್ಣುಭಕ್ತರಾದವರೂ ಇಂಥ ಹೇಯವಾದ ಪಾಂಚಭೂತಿಕ ಶರೀರವನ್ನು ಬಿಟ್ಟು ಮನಬಂದಲ್ಲಿ ಹೋಗಬಲ್ಲ ದೇವಲೋಕದ ವಿಮಾನವನ್ನು ಮರಣಾನಂತರ ಸಂತೋಷದಿಂದ ಏರುವರು. ಸುತ್ತಲೂ ತೂಗುಬಿಟ್ಟ ಕಿರು ಗಂಟೆಗಳ ಕಿಂಕಿಣಿ ನಾದದಿಂದ ಮೊಳಗುವ ಆ ದಿವ್ಯ ವಿಮಾನ ಸೂರ್ಯಮಂಡಲದಂತೆ ಕಂಗೊಳಿಸುತ್ತಿರುತ್ತದೆ. ಆ ವಿಮಾನದಲ್ಲಿ ಗಂಧರ್ವರೂ ಅವರನ್ನು ಹೊಗಳುತ್ತಾರೆ. ಅಪ್ಸರೆಯರೂ ಹಾಡುತ್ತಾರೆ. ಇಂಥ ಸ್ವರ್ಗಲೋಕದ ವಿಮಾನದಲ್ಲಿ ಕುಳಿತು ವಿಷ್ಣುಭಕ್ತರು ಎಲ್ಲ ಲೋಕಪಾಲಕರ ಬೇರೆ ಬೇರೆ ಮನೆಗಳಿಗೆಹೋಗಿ ಅಲ್ಲಿ ಒಂದೊಂದು ಮನ್ವಂತರ ಕಾಲ ಇದ್ದು ಸಕಲವಿಧವಾದ ಭೋಗಭಾಗ್ಯಗಳನ್ನು ಅನುಭವಿಸುವರು. ಅನಂತರ ಅವರು ಅಂತರಿಕ್ಷ ಲೋಕಕ್ಕೆ ಬರುವರು. ಅದು ಸರ್ವವಿಧ ಸುಖಪ್ರದ. ಅಲ್ಲಿ ಹತ್ತು ಮನ್ವಂತರ ಕಾಲ ಇದ್ದು ಸ್ಪೃಹಣೀಯವಾದ ಬಗೆಬಗೆಯ ಭೋಗೋಪಭೋಗಗಳನ್ನು ಅನುಭವಿಸುವರು. ಅನಂತರ ಆ ಪುಣ್ಯ ನಂತರ ಗಂಧರ್ವ ಲೋಕಕ್ಕೆ ಹೋಗಿ ಇಪ್ಪತ್ತು ಮನ್ವಂತರಗಳ ಕಾಲ ದಿವ್ಯಭೋಗಗಳನ್ನು ಭೋಗಿಸುವರು. ಅನಂತರ ಆ ವಿಷ್ಣುಭಕ್ತರು ತಾವು ಮಾಡಿದ ಶ್ರೀಹರಿಯ ಪೂಜಾ ಆರಾಧನಾ ಫಲವಾಗಿ ಆದಿತ್ಯಲೋಕಕ್ಕೆ ಹೋಗಿ ಅಲ್ಲಿ ಮೂವತ್ತು ಮನ್ವಂತರ ಕಾಲ ಭೋಗಗಳನ್ನು ಅನುಭವಿಸುವರು. ಅನಂತರ ನಲವತ್ತು ಮನ್ವಂತರ ಕಾಲ ಚಂದ್ರಲೋಕದಲ್ಲಿ, ಬಳಿಕ ಐವತ್ತು ಮನ್ವಂತರಗಳ ಕಾಲ ನಕ್ಷತ್ರಲೋಕದಲ್ಲಿ, ಅದಾದ ಬಳಿಕ ಅರವತ್ತು ಮನ್ವಂತರಗಳ ಕಾಲ ದೇವಲೋಕದಲ್ಲಿ ಇದ್ದು ಅಷ್ಟಸಿದ್ಧಿಗಳನ್ನು ಪಡೆದು ನಾನಾವಿಧವಾದ ಸುಖೋಪಭೋಗಗಳನ್ನು ಅನುಭವಿಸುವರು. ಅನಂತರ ಆ ವೈಷ್ಣವರೂ ಇಂದ್ರಲೋಕಕ್ಕೆ ಹೋಗಿ ಅಲ್ಲಿ ದೇವತೆಗಳಿಂದ ಪೂಜಿತರಾಗಿ ಎಪ್ಪತ್ತು ಮನ್ವಂತರ ಕಾಲ ದೇವಲೋಕಕ್ಕೆ ಲಭ್ಯವಾದ ಸಕಲ ವಿಧವಾದ ಸುಖಸೌಕರ್ಯಗಳನ್ನು, ವಿವಿಧ ಭೋಗೋಪಭೋಗಗಳನ್ನು ಎಪ್ಪತ್ತು ಮನ್ವಂತರ ಕಾಲ ಅನುಭವಿಸುವರು. ಅಲ್ಲಿಂದ ಅವರ ಪ್ರಯಾಣ ಪ್ರಜಾಪತಿ ಲೋಕಕ್ಕೆ. ಅಲ್ಲಿ ಎಂಭತ್ತು ಮನ್ವಂತರ ಕಾಲ ಅವರ ಸುಖವಸತಿ. ಅಲ್ಲಿ ಅವರಿಗೆ ಇಚ್ಛಿಸಿದ ಎಲ್ಲ ಭೋಗಗಳೂ, ಸಂಕಲ್ಪಿಸಿದ ಎಲ್ಲಸುಖಗಳು ಲಭಿಸುವವು. ಅನಂತರ ಆ ವೈಷ್ಣವರು ಬ್ರಹ್ಮದೇವರ ಸತ್ಯಲೋಕವನ್ನು ಕುರಿತು ಪ್ರಯಾಣ ಮಾಡಿ ಅಲ್ಲಿ ತೊಂಬತ್ತುಮನ್ವಂತರ ಕಾಲ ಸುಖವಿಹಾರಗಳನ್ನು ಮಾಡಿ ಅನಂತರ ಶ್ರೇಷ್ಠವಾದ ಬ್ರಹ್ಮಜ್ಞಾನಿಗಳ ವಂಶದಲ್ಲಿ ಯೋಗಿಗಳಾಗಿ ಹುಟ್ಟಿ ವೇದಶಾಸ್ತ್ರಗಳಲ್ಲಿ ಪಾರಂಗತರಾಗುವರು. ವೇದ ವೇದಾಂತಗಳ ಮರ್ಮವನ್ನು ಅರಿತು ಶ್ರೀಹರಿಯಲ್ಲಿ ಅತಿಶಯ ಭಕ್ತಿಯ್ನನು ಮಾಡಿ ಅವನ ನಿತ್ಯಂತರ ಸೇವೆಯಲ್ಲಿಯೇ ದೇಹವನ್ನು ಸವೆಸುವರು. ಬ್ರಾಹ್ಮಣರಾಗಿ ಹುಟ್ಟಿದಾಗ ಅವರು ಈ ಕೋಕಾಮುಖ ಕ್ಷೇತ್ರಕ್ಕೆ ಬರುವರು. ಇಲ್ಲಿ ಹುಟ್ಟಿ ಮತ್ತೆ ಶ್ರೀಹರಿಯ ಆರಾಧನವನ್ನು ಮಾಡುವರು. ಆ ಶ್ರೀಹರಿಯ ನಿರಂತರ

ಸೇವೋಪಾಸನೆಯಲ್ಲಿಯೇ ದೇಹಪಾತವಾಗಿ ಅವರು ಮತ್ತೆ ಕೋಕಾ ಎಂಬ ಹರಿಯ ದಿವ್ಯಸ್ಥಾನವನ್ನು ಹೊಂದುವರು. ಅಲ್ಲಿಗೆ ಬಂದಾಗ ಅವರಿಗೆ ಒಂದುನೂರು ಮನ್ವಂತರಗಳ ಕಾಲ ಅಕ್ಷಯ ಭೋಗಗಳು ಶ್ರೀಹರಿಯ ಅನುಗ್ರಹದಿಂದ ಲಭಿಸುವವು. ಬಳಿಕ ಆ ಪುಣ್ಯ ಜೀವಿಗಳು ವರಹಾಸ್ಥಾನವನ್ನು ಕುರಿತು ಪ್ರಯಾಣ ಬೆಳೆಸುವರು. ವರಾಹಲೋಕಕ್ಕೆ ಹೋದಾಗ ವಿಷ್ಣುಭಕ್ತರಿಗೆಲ್ಲಾ ಭಗವಂತನ ಸಾರೂಪ್ಯ ಪ್ರಾಪ್ತವಾಗಿರುತ್ತದೆ. ನಾಲ್ಕು ಬಾಹುಗಳು, ದಿವ್ಯದೇಹ, ಮಹಾಬಲ, ಮಹಾಕಾಯ, ಕುಂಡಲಾದಿ ಅಲಂಕಾರ, ಸ್ವಚ್ಛಂದ ವಿಹಾರ, ಸಾನಂದಜೀವನ. ಅಲ್ಲಿ ಅವರು ಹತ್ತು ಸಾವಿರ ಕೋಟಿ ವರ್ಷಗಳ ಕಾಲ ನೆಲೆಸುವರು. ದೇವತೆಗಳು ಕೂಡ ಅಲ್ಲಿ ವಿಷ್ಣುಭಕ್ತರನ್ನು ಪೂಜಿಸುವರು. ಬಳಿಕ ನರಸಿಂಹದೇವರ ಲೋಕಕ್ಕೆ ಪ್ರಯಾಣ. ಅಲ್ಲಿಯೂ ಹತ್ತುಸಾವಿರ ಕೋಟಿ ಅವರ ಸ್ವೈರಕ್ರೀಡೆಗಳು, ಸುಖಾನುಭವಗಳು ನಡೆಯುವವು. ಅದರ ನಂತರ ವಿಷ್ಣುಲೋಕ. ಬಳಿಕ ನಾರಾಯಣಪುರ, ಅದರನಂತರ ಅನಿರುದ್ಧಪುರ, ಅದರನಂತರ ಪ್ರದ್ಯುಮ್ನಪುರ. ಅಲ್ಲಿಂದ ಸಂಕರ್ಷಣಪುರ, ಕೊನೆಗೆ ವಾಸುದೇವಪುರ. ಆ ವಾಸುದೇವಪುರಕ್ಕೆ ಹೋದ ಜೀವಿಗಳು ಮುಕ್ತರಾಗಿಬಿಡುವರು. ಅದೇ ಮುಕ್ತಸ್ಥಾನ. ಅಲ್ಲಿ ಭೋಗಿಸುವ ಭೋಗಗಳಿಗೆ ಲೆಕ್ಕವಿಲ್ಲ. ಇರುವಕಾಲಕ್ಕೆ ಮಿತಿಯಿಲ್ಲ. ಪಡುವಸುಖಕ್ಕೆ ಅಂತವಿಲ್ಲ. ಅಲ್ಲಿ ಇರುವ ಜೀವಿಗಳಿಗೆ ಕೊನೆಯಿಲ್ಲ. ಅನಂತ ಕಾಲದವರೆಗೆ ಅನಂತ ಸುಖೋಪಭೋಗಗಳನ್ನು ಭೋಗಿಸುವರು. ಅನಂತ ದೇಹದಿಂದ ಆ ಅನಂತನ ಅನುಗ್ರಹದಿಂದ ಇಲ್ಲಿ ವಿಷ್ಣುವಿನ ಅನಂತ ಆರಾಧನೆ ಮಾಡಿದವರು ಇದನ್ನು ಪಡೆಯುತ್ತಾರೆ. ಇದಕ್ಕೆ ಮುಕ್ತಿ ಎನ್ನುವರು. ಶ್ರೀಹರಿಯನ್ನು ಅಚ್ಛಿನ್ನ ಭಕ್ತಿಯಿಂದ ಇಲ್ಲಿ ಆರಾಧಿಸಿದ ವೈಷ್ಣವರು ಮಾತ್ರ ಇಂಥ ದೇವದುರ್ಲಭವಾದ ಮೋಕ್ಷವನ್ನು ಹೊಂದುವರು.

## ಚಂಡಾಲನ ಜಾಗರಸಂಗೀತದ ಪುಣ್ಯದಿಂದ ಬ್ರಹ್ಮರಾಕ್ಷಸನ ಉದ್ಧಾರ

**ವೇದವ್ಯಾಸ:-** ವೈಷ್ಣವರೂ, ಮುಖ್ಯವಾಗಿ ಆಚರಿಸಬೇಕಾದ ಮುಖ್ಯವಾದ ವ್ರತವೆಂದರೆ ಏಕಾದಶೀವ್ರತ. ಆಸ್ತಿಕರಾದವರೂ ಪ್ರತಿತಿಂಗಳಲ್ಲಿ ಶುಕ್ಲಪಕ್ಷದ ಏಕಾದಶಿ, ಕೃಷ್ಣಪಕ್ಷದ ಏಕಾದಶಿ ಎರಡು ದಿನಗಳಲ್ಲಿ ಉಪವಾಸ ಮಾಡಬೇಕು. ವಿಧಿಪೂರ್ವಕವಾಗಿ ಸ್ನಾನಮಾಡಬೇಕು. ಮಡಿಬಟ್ಟೆಯನ್ನು ಉಟ್ಟುಕೊಂಡು ಶಾಸ್ತ್ರೋಕ್ತ ಪದ್ಧತಿಯಿಂದ ಶ್ರೀಹರಿಯನ್ನು ಪೂಜೆ ಮಾಡಬೇಕು. ಹೂ, ಗಂಧ, ತುಳಸೀ, ಧೂಪ, ದೀಪ, ನೈವೇದ್ಯ ಮುಂತಾದವುಗಳಿಂದ ವಿಷ್ಣುವನ್ನು ಅರ್ಚಿಸಬೇಕು. ವೇದಶಾಸ್ತ್ರಗಳಲ್ಲಿ ಹೇಳಿದ ದಿವ್ಯವಾದ ಮಂತ್ರಗಳನ್ನು ಸ್ತೋತ್ರಗಳನ್ನು ಹೇಳಬೇಕು. ಭಗವಂತನ ಮಹಿಮೆಯನ್ನು ಬಣ್ಣಿಸುವ ಹಾಡುಗಳನ್ನು ಹಾಡಬೇಕು. ವಾದ್ಯಗಳನ್ನು ನುಡಿಸಬೇಕು. ಜೈ ಜೈಕಾರಗಳಿಂದ ಜಯಘೋಷ ಮಾಡಬೇಕು. ದಂಡಾಕಾರವಾಗಿ ಅಡ್ಡಬಿದ್ದು ದೀರ್ಘ ದಂಡ ನಮಸ್ಕಾರವನ್ನು ಹಾಕಬೇಕು. ಹೀಗೆ ವಿಧಿಪೂರ್ವಕವಾಗಿ ಪೂಜೆ ಮಾಡಿ ರಾತ್ರಿಕಾಲದಲ್ಲಿ ಜಾಗರ ಮಾಡಬೇಕು. ಆ ಜಾಗರದಲ್ಲಿ ಧ್ವನಿ ಹೇಗೆ ಇದ್ದರೂ ಹಾಡಬೇಕು. ಪಕ್ಕವಾದ್ಯ, ಸಲಕರಣೆಗಳು ಯಾವುದು ಇಲ್ಲದ್ದಿದರೂ ಉಚ್ಚ ಸ್ವರದಿಂದ ಭಗವಂತನ ಗುಣವರ್ಣನ ಪರವಾದ ಹಾಡುಗಳನ್ನು ಹಾಡುತ್ತಾ ಗಾಯನಮಾಡಬೇಕು. ಇದರಿಂದ ಮನುಷ್ಯರು ವಿಷ್ಣುವಿನ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾರೆ. ಏಕಾದಶಿಯ ದಿನ ಜಾಗರ ಕಾಲದಲ್ಲಿ ಹಾಡು ಹಾಡಿದರೆ ಬರುವ ಫಲ ಎಂಥದ್ದು ಎಂಬುದನ್ನು ಒಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತೇನೆ ಕೇಳಿರಿ.

ಅವಂತೀ ಎಂಬ ಒಂದು ಪ್ರಸಿದ್ಧವಾದ ಪಟ್ಟಣವಿರುತ್ತದೆ. ಅಲ್ಲಿ ಶಂಖ ಚಕ್ರ ಗದಾ ಪದ್ಮಧಾರಿಯಾದ ಶ್ರೀವಿಷ್ಣುವಿನ ಒಂದು ಮೂರ್ತಿಯು ಸುಪ್ರತಿಷ್ಠಿತವಾಗಿರುತ್ತದೆ. ಆ ಅವಂತಿಯ ಪಟ್ಟಣದ ಹೊರಭಾಗದಲ್ಲಿ ಓರ್ವ ಚಂಡಾಲನು ಇರುತ್ತಾನೆ. ಅವನು ಪರಮ ವಿಷ್ಣುಭಕ್ತ. ಗಾನಕಲೆಯಲ್ಲಿಯೂ ಕುಶಲ. ಅವನು ಪ್ರತಿ ಏಕಾದಶಿ ದಿನದಂದು ಸಂಪೂರ್ಣ ಉಪವಾಸ ಮಾಡುತ್ತಾನೆ. ರಾತ್ರಿ ಕಾಲದಲ್ಲಿ ದೇವಸ್ಥಾನದ ಬಳಿಗೆ ಬಂದು ಮಹಾವಿಷ್ಣುವಿನ ನಾಮಗಳಿಂದ ಅಂಕಿತವಾದ, ಅವನ ಅವತಾರದ ಲೀಲೆಗಳೆನ್ನು ಹೇಳುವ ಹಾಡುಗಳನ್ನು ಹಾಡುತ್ತಾನೆ. ಅವನು ಹಾಡುವ ಗೀತೆಗಳೆಲ್ಲವೂ ಗಾಂಧಾರ ಋಷಭ, ನೈಷಾದ, ಪಂಚಮ, ಧೈವತ ಮುಂತಾದ ರಾಗಗಳ ಸ್ವರಸಂಯೋಜನೆಯಿಂದ ಕೇಳಲು ಇಂಪಾಗಿರುತ್ತದೆ. ಅವನು ಹಾಡುವ ಪ್ರತಿ ಹಾಡಿನಲ್ಲಿಯೂ ಭಕ್ತಿರಸವು ಓತಪ್ರೋತವಾಗಿದ್ದು ಪ್ರತಿಯೊಂದು ಪದ್ಯದಿಂದ ಭಗವನ್ ಮಹಿಮೆಯು ಹೊರಹೊಮ್ಮುತ್ತಲಿತ್ತು. ಜಾಗರದಲ್ಲಿ ಅವನು ಹಾಡುವ ಹಾಡುಗಳಲ್ಲಿ ಅವನ ಬಂಧು ಬಳಗದವರು ಭಾಗವಹಿಸುತ್ತಿದ್ದರು. ಹೀಗೆ ಅವನು ಬೆಳಗಾಗುವರೆಗೂ ಭಕ್ತಿಯಿಂದ ಭಗವಂತನನ್ನು ಹಾಡುಪಾಡುಗಳಿಂದ ಕೊಂಡಾಡಿ ಆ ಶ್ರೀಹರಿಗೆ ತನ್ನ ಭಕ್ತಿಯುಕ್ತವಾದ ಸ್ವರಸೇವೆಯನ್ನು ಸಲ್ಲಿಸುತ್ತಿದ್ದನು. ಹೀಗೆ ಏಕಾದಶೀದಿನ ಇಡೀರಾತ್ರಿ ಜಾಗರಮಾಡಿ ದ್ವಾದಶಿ ಬೆಳಗು ಮುಂಜಾನೆ ಆ ಭಗವಂತನನ್ನು ವಂದಿಸಿ ಅವನ ಪಾದಾರವಿಂದಗಳಲ್ಲಿ ಭಕ್ತಿಯನ್ನು ಸಮರ್ಪಿಸಿ ಮನೆಗೆ ಬಂದು ತನ್ನ ಅಳಿಯಂದಿರು, ಅಕ್ಕ ತಂಗಿಯರ ಮಕ್ಕಳು ತನ್ನ ಹೆಣ್ಣು ಮಕ್ಕಳು, ಮಡದಿ, ಪುತ್ರ, ಪರಿವಾರ ದೊಂದಿಗೆ ಭೋಜನವನ್ನು ಮಾಡುತ್ತಿದ್ದನು. ಹೀಗೆ ಏಕಾದಶೀ ವ್ರತವನ್ನು ಮಾಡುತ್ತಾ ರಾತ್ರಿಕಾಲದಲ್ಲಿ ಜಾಗರದಲ್ಲಿ ಹಾಡುಹಾಡುತ್ತಾ ಅವನ ಆಯುಷ್ಯದ ಬಹುಭಾಗವು ಕಳೆಯಿತು. ಜಾತಿಯಿಂದ ಚಂಡಾಲನಾದರೂ ಒಂದು ಚೈತ್ರಮಾಸ ಕೃಷ್ಣಪಕ್ಷದ ಏಕಾದಶಿಯ ದಿವಸದಲ್ಲಿ ವಿಷ್ಣುವಿನ ವಿಶೇಷವಾದ ಪೂಜೆ ಮಾಡಬೇಕೆಂದು ಅವನಿಗೆ ಬಲವತ್ತರವಾದ ಅಪೇಕ್ಷೆ ಆಯಿತು. ಅಂದು ಅವನು ವಿಷ್ಣುಪೂಜೆಗಾಗಿ ಕಾಡಿನಲ್ಲಿ ಬೆಳೆದ ಕುಸುಮಗಳನ್ನು ತೆಗೆದುಕೊಂಡು ಬರಬೇಕೆಂದು ವಿಷ್ಣುವಿನ ಮೇಲಿನ ವಿಶೇಷ ಭಕ್ತಿಯಿಂದ ಪ್ರೇರಿತನಾಗಿ ಅರಣ್ಯಕ್ಕೆ ಹೋದನು. ಕ್ಷಿಪ್ರಾನದಿಯ ತೀರದಲ್ಲಿ ಒಂದು ಸಮೃದ್ಧವಾದ ಪುಷ್ಪವನ ಇದ್ದಿತು. ಅಲ್ಲಿ ವಿಭೀತಕ ಎಂಬ ಒಂದು ದೊಡ್ಡ ಹೆಮ್ಮರ. (ತಾರೀಗಿಡ) ಆ ಮರದಲ್ಲಿ ಒಂದು ಭೀಕರವಾದ ಬ್ರಹ್ಮರಾಕ್ಷಸವು ವಾಸವಾಗಿದ್ದಿತು. ಚಂಡಾಲನು ಅಲ್ಲಿ ಬಂದಕೂಡಲೇ ಬ್ರಹ್ಮರಾಕ್ಷಸವು ಅವನನ್ನು ಹಿಡಿದುಬಿಟ್ಟಿತು. ಅವನನ್ನು ಮುರಿದು ತಿನ್ನಲು ಹೊರಟಿತು.

ಆಗ ಆ ಚಂಡಾಲನು ಆ ಬ್ರಹ್ಮರಾಕ್ಷಸನನ್ನು ಬಾಗಿ ಬೇಡಿಕೊಂಡ.

**ಚಂಡಾಲ:-** ಸುಸ್ವಭಾವಿಯಾದ ರಾಕ್ಷಸನೇ, ನನ್ನನ್ನು ಇವತ್ತು ಹಿಡಿಯಬೇಡ, ಕಡಿಯಬೇಡ. ಕೊಲ್ಲಬೇಡ, ತಿನ್ನಬೇಡ, ನಾಳೆ ಬೆಳಿಗ್ಗೆ ನಾನು ತಪ್ಪದೇ ಬರುತ್ತೇನೆ. ನನ್ನನ್ನು ಯಥೇಚ್ಛವಾಗಿ ತಿನ್ನು. ಇಂದು ಏಕಾದಶಿ ನಾನು ಉಪವಾಸ ಮಾಡಿದ್ದೇನೆ. ವಿಷ್ಣುವಿನ ಪೂಜೆಗಾಗಿ ಹೂಗಳನ್ನು ಹರಿದುಕೊಂಡು ಹೋಗಲು ಈ ಬನಕ್ಕೆ ಬಂದಿದ್ದೇನೆ. ಇಂದು ಹಗಲು ಉಪವಾಸಮಾಡಿ ರಾತ್ರಿ ಜಾಗರ ಮಾಡುತ್ತೇನೆ. ಆ ಜಾಗರದಲ್ಲಿ ನಾನು ವಿಷ್ಣುವಿನ ಮಹಿಮೆಯನ್ನು ಹಾಡುತ್ತೇನೆ. ಅವನ ಚಾರು ಚರಿತ್ರದ ಲೀಲಾವಿಲಾಸಗಳನ್ನು ಪಾಡುತ್ತೇನೆ. ನನ್ನ ಪಾಲಿಗೆ ಆ ಜಾಗರವೂ, ಆ ಜಾಗರದಲ್ಲಿ ಮಾಡುವ ಗಾಯನವೂ ನನ್ನ ಜೀವನ ವ್ರತ.

ನನಗೆ ತಿಳುವಳಿಕೆ ಬಂದ ದಿನದಿಂದ ನಾನು ಏಕಾದಶಿ ಉಪವಾಸ ಮತ್ತು ರಾತ್ರಿ ಜಾಗರವನ್ನು ತಪ್ಪಿಸಿಲ್ಲ. ಇದೊಂದು ದೊಡ್ಡ ವಿಷ್ಣುವ್ರತ. ಈ ಮಹಾವ್ರತಕ್ಕೆ ನೀನು ದಯಮಾಡಿ ಅಡ್ಡಿ ಮಾಡಬೇಡ. ನಾನು ಜಾಗರ ಮುಗಿಸಿಕೊಂಡು ನಾಳೆ ಬೆಳಿಗ್ಗೆ ನಿನ್ನ ಬಳಿಗೆ ನಿಶ್ಚಿತವಾಗಿಯೂ ಬರುತ್ತೇನೆ. ಆವಾಗ ನೀನು ನನ್ನನ್ನು ಯಥೇಚ್ಛವಾಗಿ ಭಕ್ಷಣವನ್ನು ಮಾಡು.

**ರಾಕ್ಷಸ:-** ಚಂಡಾಲ, ನನಗೆ ಹತ್ತು ದಿನಗಳಿಂದ ಊಟವಿಲ್ಲ. ಈ ನವರಾತ್ರಿ ಉಪೋಷಣದ ಪಾರಣೆ ಇಂದುಇದೆ. ಆದುದರಿಂದ ನಾನು ನಿನ್ನನ್ನು ಬಿಡಲಾರೆ. ಹಸಿವೆಯಿಂದ ನಾನು ಕಕ್ರಾಂತನಾದಾಗ ಅನಾಯಾಸವಾಗಿ ನೀನು ನನ್ನ ಪಾರಣೆಗೆ ಒದಗಿರುವೆ. ಈಗ ನಿನ್ನನ್ನು ಬಿಟ್ಟರೆ ನನಗೆ ಮತ್ತೆ ಒಂದು ದಿನ ಉಪವಾಸವಾಗುವದು. ಅದರಿಂದ ನಾನು ನಿನ್ನನ್ನು ಬಿಡಲಾರೆ ಇಲ್ಲಿಂದ ಹೋಗಗೊಡಲಾರೆ.

**ಗಾಯಕ:-** ಬ್ರಹ್ಮರಾಕ್ಷಸ, ನಾನು ಸತ್ಯವಾಗಿಯೂ ಬರುತ್ತೇನೆ. ನನ್ನ ಮಾತಿನ ಮೇಲೆ ವಿಶ್ವಾಸವಿಡು ಸತ್ಯವೇ ಈ ಜಗತ್ತಿಗೆ ಮೂಲ. ನಾನು ಆಣೆಯಿಟ್ಟು ಹೇಳುತ್ತೇನೆ. ಸತ್ಯವನ್ನೇ ನುಡಿಯುತ್ತೇನೆ. ಮನುಷ್ಯನ ನಡೆನುಡಿಗಳಿಗೆ ಮತ್ತು ಎಲ್ಲ ವಿಧವಾದ ವ್ಯಾಪಾರಗಳಿಗೆ ಸೂರ್ಯ, ಚಂದ್ರ, ವಹ್ನಿ, ವಾಯು, ನೆಲ, ನೀರು, ಮುಗಿಲು, ಹಗಲು, ಇರುಳು, ಯಮಧರ್ಮ, ಇವರೆಲ್ಲರೂ ಸಾಕ್ಷಿಯಾಗಿದ್ದಾರೆ. ಜಗತ್ಸಾಕ್ಷಿಗಳಾದ ಎಲ್ಲ ದೇವರ ಹೆಸರಿನಿಂದ ಶಪಥ ಮಾಡಿ ಹೇಳುತ್ತೇನೆ. ನಾನು ನಿಶ್ಚಿತವಾಗಿಯೂ ನಾಳೆ ಬೆಳಿಗ್ಗೆ ತಪ್ಪದೆ ನಿನ್ನ ಬಳಿಗೆ ಬರುತ್ತೇನೆ. ನನ್ನ ಏಕಾದಶೀ ವ್ರತಕ್ಕೆ ಮಾತ್ರ ದಯಮಾಡಿ ವಿಘ್ನ ಮಾಡಬೇಡ. ನನ್ನನ್ನು ಈಗ ಬಿಟ್ಟುಬಿಡು.

ನಾನು ಬಾರದೆಇದ್ದರೆ ನನಗೆ ಬ್ರಹ್ಮಹತ್ಯೆ, ಪರಸ್ತ್ರೀ ಸಂಭೋಗ, ಸುರಾಪಾನ, ಮಾಂಸಭಕ್ಷಣ, ಮಿತ್ರದ್ರೋಹ, ಮೀನಭಕ್ಷಣ, ಆಮೆಯ ಮಾಂಸಭಕ್ಷಣ ಮತ್ತು ಅಮವಾಸ್ಯೆ, ಅಷ್ಟಮಿ, ಚತುರ್ದಶಿ ಷಷ್ಠಿ ದಿನಗಳಂದು ಸ್ತ್ರೀಸಂಗ, ರಜಸ್ವಲಾ ಸಂಗಮ, ಮಿತ್ರನ ಮಡದಿಯ ಜೊತೆಗೆ ಸಂಗಮ, ಸ್ತ್ರೀಹತ್ಯೆ, ಮಿತ್ರಹತ್ಯೆ, ಗುರುದ್ರೋಹ, ಮನೆಸುಡುವದು, ಗೋಹತ್ಯೆ, ಬಾಲಹತ್ಯೆ ಮುಂತಾದ ಘೋರ ಕೃತ್ಯಗಳಿಂದ ಬರುವ ಪಾಪವು ಬರಲಿ, ನಾನು ನಿಶ್ಚಿತವಾಗಿಯೂ ಬರುತ್ತೇನೆ. ಏಕಾದಶೀ ವ್ರತದ ಪಾಲನೆಗಾಗಿ ನನ್ನನ್ನು ತಾತ್ಪೂರ್ತಿಕವಾಗಿ ಇಂದು ಒಂದು ಹಗಲು ರಾತ್ರಿಗಾಗಿ ದಯಮಾಡಿ ಬಿಡು. ಕನ್ಯೆಯ ಮಾರಾಟ, ಸುಳ್ಳುಸಾಕ್ಷಿ, ಬ್ರಹ್ಮಚಾರಿಯ ವ್ಯಭಿಚಾರಾದಿಗಳಿಂದ ಬರುವಪಾಪವು ನಾನು ನಿನ್ನಬಳಿಗೆ ನಾಳೆ ಬಾರದಿದ್ದರೆ ನನಗೆ ಪ್ರಾಪ್ತವಾಗಲಿ ಎಂದು ಆ ಚಾಂಡಾಲನು ಗೋಗರೆದು ಬ್ರಹ್ಮರಾಕ್ಷಸನಿಗೆ ಬೇಡಿಕೊಂಡ.

ಚಂಡಾಲನ ಈ ಮಾತನ್ನು ಕೇಳಿ ರಾಕ್ಷಸನಿಗೆ ಆಶ್ಚರ್ಯವಾಯಿತು. ಇಷ್ಟು ಶಪಥವಿಟ್ಟು ಮಾತನಾಡುವ ಈ ಮನುಷ್ಯ ಪ್ರಾಮಾಣಿಕ. ಇವನು ಹೇಳುವ ಮಾತು ಸತ್ಯ ಎಂದು ಎನಿಸಿತು. ಆಗ ಬ್ರಹ್ಮರಾಕ್ಷಸನು "ಗಾಯಕನೇ, ನೀನು ಹೋಗು ನಿನ್ನ ಕರ್ತವ್ಯವನ್ನು ಮಾಡು. ನಿನ್ನ ಮಾತಿಗೆ ತಪ್ಪದೇ ನಾಳಿಗೆ ಇಲ್ಲಿ ಬಂದು ನಿನ್ನ ವಚನವನ್ನು ಸತ್ಯವನ್ನಾಗಿ ಮಾಡು" ಎಂದು ಹೇಳಿದನು. ಆಗ ಆ ಅಂತ್ಯಜನು ಸಂತೋಷದಿಂದ ಹೂಗಳನ್ನು ತೆಗೆದುಕೊಂಡು ವಿಷ್ಣುವಿನ ದೇವಾಲಯಕ್ಕೆ ಹೋದನು. ಅವನು ಕಾಡಿನಲ್ಲಿ ನುಗ್ಗಿ ಪೂಜೆಗೆಂದು ಸುಗಂಧಿ ಹೂವುಗಳನ್ನು ಹರಿದು, ತರಿದು, ತಂದು ದೇವಾಲಯದ ಅರ್ಚಕನ ಮುಂದೆ ಇರಿಸಿದನು. ಇವುಗಳನ್ನು

ನೀವು ಭಗವಂತನ ವಿಗ್ರಹಕ್ಕೆ ಏರಿಸಿ ಪೂಜೆ ಮಾಡಿರಿ'' ಎಂದು ಪ್ರಾರ್ಥಿಸಿದನು. ಅವನ ಬಿನ್ನಹದಂತೆ ಆ ಅರ್ಚಕನು ಸ್ನಾನ ಮಾಡಿ ತನ್ನ ಕುಂಭದಲ್ಲಿ ತುಂಬಿ ತಂದ ನೀರಿನಿಂದ ಆ ವಿಷ್ಣುಮೂರ್ತಿಗೆ ಅಭಿಷೇಕ ಮಾಡಿದನು. ಅನಂತರ ಆ ಚಂಡಾಲನು ತಂದುಕೊಟ್ಟ ಹೂವುಗಳನ್ನು ವಿಷ್ಣುಮೂರ್ತಿಗೆ ಏರಿಸಿದನು. ವಿಧಿಪೂರ್ವಕವಾಗಿ ಭಗವತ್ಪೂಜೆಯನ್ನು ಮಾಡಿದನು. ಅದನ್ನು ಹೊರಗೇ ನಿಂತುಕೊಂಡು ನೋಡಿ ನಮಸ್ಕಾರ ಮಾಡಿ ಆ ಗಾಯಕನು ತನ್ನ ಮನೆಗೆ ಹೋದನು. ಹಗಲು ಹೊತ್ತು ಉಪವಾಸ ಮಾಡಿದನು. ರಾತ್ರಿ ಮತ್ತೆ ದೇವಾಲಯಕ್ಕೆ ಬಂದನು. ರಾತ್ರಿಯಾದ ಬಳಿಕ ದೇವಸ್ಥಾನದ ಪ್ರಾಕಾರದ ಹೊರಗಡೆ ಕುಳಿತು ಹಾಡುಹಾಡುತ್ತಾ ಭಗವಂತನ ಅವತಾರದ ಲೀಲೆಗಳನ್ನು ಉಚ್ಚ ಕಂಠದಿಂದ ಗಾನ ಮಾಡುತ್ತಾ ಜಾಗರ ಮಾಡಿದನು. ಪುನಃ ಪುನಃ ಪ್ರಾಕಾರ ಪ್ರದಕ್ಷಿಣೆ ನೂರೆಂಟು ನಮಸ್ಕಾರ ಹಾಕಿದನು. ಬೆಳಗಾದ ಬಳಿಕ ಮತ್ತೆಮತ್ತೆ ದೇವರ ಸ್ತೋತ್ರಗಳನ್ನು ಹೇಳಿ ನಮಸ್ಕಾರ ಮಾಡಿ ತನ್ನ ಮಾತನ್ನು ಸತ್ಯ ಮಾಡುವದಕ್ಕಾಗಿ ರಾಕ್ಷಸನ ಕಡೆ ಹೊರಟನು. ದಾರಿಯಲ್ಲಿ ಜನರು ಅವನಿಗೆ ''ಪುಣ್ಯವಂತನೆ, ನೀನು ಈ ಮುಂಜಾವಿನ ಸಮಯದಲ್ಲಿ ಎಲ್ಲಿಗೆ ಹೊರಟೆ'' ಎಂದು ಕೇಳಿದರು. ಆಗ ಆ ಗಾಯಕನು ತನ್ನ ಸತ್ಯವಚನಕ್ಕಾಗಿ ಬ್ರಹ್ಮರಾಕ್ಷಸನಿಗೆ ಬಲಿಯಾಗುವ ಪ್ರಸಂಗವನ್ನು ಸಾದ್ಯಂತವಾಗಿ ವಿವರಿಸಿದನು.

ಅದನ್ನು ಕೇಳಿ ದಾರಿಯಲ್ಲಿ ಅವನಿಗೆ ಭೇಟಿಯಾದ ಪಥಿಕನು ಗಾಯಕನಿಗೆ ತಿಳಿಹೇಳುತ್ತಾ ನುಡಿದನು. ''ಚಂಡಾಲ, ನೀನು ಆ ಬ್ರಹ್ಮರಾಕ್ಷಸನಿಗೆ ನಿನ್ನ ಮಾತನ್ನು ಮುಟ್ಟಿಸುವದಕ್ಕಾಗಿ ಹೋಗಬೇಡ. ಪ್ರಾಣಾಂತಿಕ ಪ್ರಸಂಗದಲ್ಲಿ ಸುಳ್ಳುಹೇಳಿದರೆ ದೋಷವಿಲ್ಲ. ರಾಕ್ಷಸನಿಗೆ ಸತ್ಯಹೇಳುವದರಲ್ಲಿ ಅರ್ಥವಿಲ್ಲ. ಒಂದು ಸತ್ಯಕ್ಕಾಗಿ ಬ್ರಹ್ಮರಾಕ್ಷಸನ ಬಾಯಲ್ಲಿ ಬೀಳುವದರಲ್ಲಿ ಏನು ಪುರುಷಾರ್ಥವಿದೆ? ಈ ಮನುಷ್ಯ ಶರೀರ ಸಾಧನ ಶರೀರ. ಈ ಶರೀರದಿಂದ ಮಾನವನು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಪಡೆಯಬಹುದು. ಸತ್ತರೆ ಏನು ಬರುವದು? ಬದುಕಿ ಉಳಿದರೆ ಇಲ್ಲಿ ಇದ್ದಾಗ ಧರ್ಮವನ್ನು, ಪುಣ್ಯವನ್ನು ಗಳಿಸಿ ಮರಣಾನಂತರ ಮೋಕ್ಷವನ್ನು ಕೂಡ ಹೊಂದಬಹುದು. ಆದುದರಿಂದ ನೀನು ಈ ದೇಹವನ್ನು ರಕ್ಷಿಸಿಕೋ. ರಾಕ್ಷಸನ ಬಳಿಗೆ ಹೋಗಬೇಡ, ಮೃತ್ಯುವಿನ ಮುಖದಲ್ಲಿ ಬೀಳಬೇಡ.

**ಚಂಡಾಲ:-** ಪಥಿಕನೇ, ನಾನು ಸತ್ಯಕ್ಕಾಗಿ ಸಾಯಲು ಹೊರಟಿದ್ದೇನೆ ದೇವರ ಮೇಲೆ ಆಣೆ ಇಟ್ಟು ಬರುತ್ತೇನೆಂದು ಹೇಳಿದ್ದೇನೆ. ಶಪಥ ಮಾಡಿ ಬರುತ್ತೇನೆ ಎಂದು ಹೇಳಿ ಈಗ ಅದನ್ನು ಹೇಗೆ ತಪ್ಪಿಸಲಿ? ಸತ್ಯ ಭ್ರಷ್ಟನಾಗಲೇ?

**ಪಥಿಕ:-** ಚಂಡಾಲ, ನೀನು ಮೂರ್ಖನಿರುವೆ. ಮನುಸ್ಮೃತಿಯಲ್ಲಿ ಹೇಳಿದ್ದನ್ನು ಕೇಳಿಲ್ಲವೆ.

**ಗೋ ಸ್ತ್ರೀ ದ್ವಿಜಾನಾಂ ಪರಿರಕ್ಷಣಾರ್ಥಂ ವಿವಾಹಕಾಲೇ ಸುಹೃದಾಂ ಪ್ರಸಂಗೇ ॥**
**ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾಮೃತಾನ್ಯಾಹುರಪಾತಕಾನಿ ॥**

ಐದು ಸುಳ್ಳುಗಳನ್ನು ಹೇಳಿದರೆ ಪಾಪವಿಲ್ಲ. ಹಸು, ಹೆಣ್ಣು, ಬ್ರಾಹ್ಮಣ ಇವರ ರಕ್ಷಣೆಗಾಗಿ ಸುಳ್ಳು ಹೇಳಿದರೆ ಪಾಪವಿಲ್ಲ. ಮದುವೆಯ ಸಂದರ್ಭದಲ್ಲಿ ಒಬ್ಬನಿಗೆ ಕಲ್ಯಾಣ ಕಟ್ಟಲು ಸುಳ್ಳಾಡಿದರೆ ದೋಷವಿಲ್ಲ. ಸಜ್ಜನರ ಉಪಕಾರಕ್ಕಾಗಿ ಸುಳ್ಳು ಹೇಳಿದರೆ ಪಾಪವಿಲ್ಲ. ತನ್ನ ಪ್ರಾಣಕ್ಕೆ ಸಂಚಕಾರ ಬಂದಾಗ ಸುಳ್ಳು ಹೇಳಿದರೆ, ತನ್ನ ಬಳಿಯಲ್ಲಿದ್ದ ಧನವನ್ನು

ಯಾರಾದರೂ ಕದಿಯಲು ಬಂದರೆ ಆಗ ಸುಳ್ಳು ಹೇಳಿದರೆ ಪಾಪವಿಲ್ಲ. ಅದರಂತೆ ಸ್ತ್ರೀಯರಲ್ಲಿಯೂ, ವಿವಾಹ ಸಂದರ್ಭದಲ್ಲಿಯೂ, ವೈರಿಗಳ ವಿಷಯದಲ್ಲಿಯೂ, ತನಗೆ ಯಾರಾದರೂ ವಂಚನೆ ಮಾಡಿದಾಗಲೂ, ತನ್ನ ಪ್ರಾಣಕ್ಕೆ ಅಪಾಯವದಗಿದಾಗಲೂ, ತನ್ನ ಸರ್ವಸ್ವವೂ ಹಾಳಾಗುವ ಪ್ರಸಂಗದಲ್ಲಿಯೂ ಆಡಿದ ಸುಳ್ಳು, ಮಿಥ್ಯಾಭಾಷಣ ಪಾಪವಲ್ಲ. ಅದಕ್ಕೆ ಪ್ರತ್ಯವಾಯವಿಲ್ಲ ಎಂದು ಮನುಸ್ಮೃತಿಕಾರನು ಸ್ಪಷ್ಟವಾಗಿ ಹೇಳಿದ್ದಾನೆ. ನಿನಗೆ ಈಗ ಜೀವದ ಮೇಲೆಯೇ ಗಂಡಾಂತರ ಬಂದಿದೆ. ಆದುದರಿಂದ ಸುಳ್ಳು ಹೇಳಿ ಸಾವನ್ನು ತಪ್ಪಿಸಿ ಬದುಕಿ ಉಳಿದು ಧರ್ಮ ಮಾಡು. ಪುಣ್ಯಕಾರ್ಯ ಮಾಡು, ಪುರುಷಾರ್ಥವನ್ನು ಸಾಧಿಸು. ಸುಮ್ಮನೆ ಸತ್ಯದ ಹೆಸರಿನಿಂದ ಆ ಬ್ರಹ್ಮರಾಕ್ಷಸನ ಬಳಿಗೆ ಹೋಗಿ ಮೃತ್ಯು ಮುಖದಲ್ಲಿ ಬಿದ್ದು ಸತ್ಯದ ಹೆಸರಿನಿಂದ ಸಾಯಬೇಡ. ಎಂದು ಹೇಳಿದನು.

**ಚಂಡಾಲ:-** ''ದಾರಿಕಾರನೇ, ಹೀಗೆ ನುಡಿಯಬೇಡ. ಸತ್ಯವನ್ನು ಬಿಡು ಎಂದು ನನಗೆ ಹೇಳಬೇಡ, ಸತ್ಯದಿಂದ ಈ ಜಗತ್ತಿನಲ್ಲಿ ಮನುಷ್ಯನು ನಿಜವಾಗಿಯೂ ಸೌಖ್ಯವನ್ನು ಹೊಂದುತ್ತಾನೆ. ಸೂರ್ಯನು ಬೆಳಗುವದು, ಸತ್ಯದಿಂದ ಚಂದ್ರನು ತೊಳಗುವದು ಸತ್ಯದಿಂದ, ಬೆಂಕಿ ಜ್ವಲಿಸುವದು ಸತ್ಯದಿಂದ, ಗಾಳಿ ಬೀಸುವದು ಸತ್ಯದಿಂದ, ನೀನು ಹೇಳಿದ ನಾಲ್ಕು ಬಗೆಯ ಪುರುಷಾರ್ಥಗಳು ಸತ್ಯದಿಂದಲೇ ದೊರಕುವವು. ನರನ ಹುಟ್ಟು ಅಳಿವು ಉಳಿವು ಎಲ್ಲವೂ ಸತ್ಯವನ್ನೇ ಅವಲಂಬಿಸಿದೆ. ಸತ್ಯವೇ ಪರಬ್ರಹ್ಮ ಎಲ್ಲ ಯಜ್ಞಗಳಿಗಿಂತ ಸತ್ಯವೇ ಶ್ರೇಷ್ಠ. ಆದುದರಿಂದ ಸತ್ಯವನ್ನು ಮಾನವನು ಎಂಥ ಪ್ರಸಂಗದಲ್ಲಿಯೂ ಬಿಡಕೂಡದು'' ಎಂದು ಹೇಳಿ ಆ ಚಂಡಾಲನು. ಆ ಪಥಿಕನ ಮಾತನ್ನು ಕೇಳದೇ ಬ್ರಹ್ಮ ರಾಕ್ಷಸನು ಇದ್ದಲ್ಲಿಗೆ ತೆರಳಿದನು. ಸತ್ಯವಾಗಿಯೂ ತನ್ನ ಮಾತಿನಂತೆ ಸತ್ಯನಿಷ್ಠನಾಗಿ ಆ ಚಂಡಾಲನು ಬಂದದ್ದನ್ನು ನೋಡಿ ಬ್ರಹ್ಮರಾಕ್ಷಸನಿಗೆ ಅತ್ಯಾಶ್ಚರ್ಯವಾಯಿತು. ಕಣ್ಣನ್ನು ಅರಳಿಸಿ ಅವನನ್ನು ನೋಡಿ ಆ ಮಾತಂಗನ ಸತ್ಯ ನಿಷ್ಠೆಗೆ ತಲೆದೂಗಿ ರಾಕ್ಷಸನು ಹೇಳಿದನು.

**ಬ್ರಹ್ಮರಾಕ್ಷಸ:-** ಚಂಡಾಲ, ಸಾಧು ಸಾಧು! ನೀನು ನಿಜವಾಗಿಯೂ ಸತ್ಯಪಾಲಕ. ನಿನ್ನಂಥ ಸತ್ಯನಿಷ್ಠನನ್ನು ನಾನು ಎಲ್ಲಿಯೂ ನೋಡಲಿಲ್ಲ. ನೀನೇನೋ ನಾನು ಚಂಡಾಲ ಎಂದು ಹೇಳಿಕೊಳ್ಳುವೆ. ಜಾತಿಯಿಂದ ನೀನು ಅಸ್ಪೃಶ್ಯನಾದರೂ, ನ್ಯಾಯದಿಂದ, ಸತ್ಯದಿಂದ ನೀನು ಬ್ರಾಹ್ಮಣನೇ ಆಗಿರುವೆ. ಇಂಥ ಸತ್ಯಪರಿಪಾಲನೆಯಿಂದ ನೀನು ಶುಚಿರ್ಭೂತನಾದ ಶ್ರೇಷ್ಠ ವಿಪ್ರೋತ್ತಮ ಎನಿಸುವೆ. ನೀನು ಇಲ್ಲಿಂದ ಹೋದ ಬಳಿಕ ವಿಷ್ಣುದೇವಾಲಯದಲ್ಲಿ ಏನು ಮಾಡಿದೆ, ಯಾವ ಪುಣ್ಯಕಾರ್ಯವನ್ನು ಆಚರಿಸಿದೆ. ಇದನ್ನೆಲ್ಲಾ ಹೇಳು.

**ಚಂಡಾಲ:-** ಬ್ರಹ್ಮರಾಕ್ಷಸ, ನಾನು ಇಲ್ಲಿಂದ ಹೋದ ಬಳಿಕ ಅಡವಿಯಲ್ಲಿ ಹೋಗಿ ಹೂವುಗಳನ್ನು ಕೊಯ್ದು ದೇವಸ್ಥಾನದ ಅರ್ಚಕರಿಗೆ ಕೊಟ್ಟೆ. ಅವನು ವಿಷ್ಣುವಿನ ಮೂರ್ತಿಗೆ ಅವುಗಳಿಂದ ಪುಷ್ಪಾರ್ಚನೆ ಮಾಡಿದ. ಅನಂತರ ಮನೆಗೆ ಹೋದೆ. ಅಂದಿನ (ನಿನ್ನಿನ) ಹಗಲು ನಿಶ್ಚಕ್ರ ನಿರಾಹಾರ ಮಾಡಿದೆ. ರಾತ್ರಿ ವಿಷ್ಣುದೇವಾಲಯಕ್ಕೆ ಹೋದೆ ದೇವಸ್ಥಾನದ ಪ್ರಾಕಾರದ ಹೊರಗಿನ ಅಂಗಳದಲ್ಲಿ ಕುಳಿತುಕೊಂಡೆ. ಭಕ್ತಿಯಿಂದ ಭಗವನ್ ಮಹಿಮಾಪರವಾದ ಹಾಡುಗಳನ್ನು ಹಾಡಿದೆ. ಬೆಳಗಾಗುವವರೆಗೂ ಸಂಗೀತಸೇವೆ ಮಾಡಿದೆ. ಇಡೀರಾತ್ರಿ ನಿದ್ದೆಗಟ್ಟಿ ನಾರಾಯಣನನ್ನೇ ಹಾಡಿನ ಮುಖಾಂತರವಾಗಿ ಹಾಡಿಪಾಡಿ ಕೊಂಡಾಡುತ್ತಾ ಜಾಗರ ಮಾಡಿದೆ. ಉಷಾಕಾಲದಲ್ಲಿ ನಾನು ಮಾಡಿದ ಜಾಗರದ ಸಂಗೀತ ಸೇವೆಯನ್ನು ಆ ಶ್ರೀಹರಿಗೆ ಸಮರ್ಪಿಸಿ ನಮಸ್ಕರಿಸಿ ನೇರ ನಿನ್ನ ಬಳಿಗೆ ಎದ್ದು ಬಂದೆ.

**ಬ್ರಹ್ಮರಾಕ್ಷಸ:-** ಮಾತಂಗ, ವಿಷ್ಣು ಜಾಗರದಲ್ಲಿ ಸಂಗೀತ ಸೇವೆಯನ್ನು ನೀನು ಎಷ್ಟು ವರ್ಷಗಳ ಕಾಲ ಮಾಡಿರುವೆ?

**ಮಾತಂಗ:-** ರಾಕ್ಷಸ, ನಿಜ ಹೇಳುತ್ತೇನೆ ಕೇಳು. ನಾನು ಈಗ ಇಪ್ಪತ್ತು ವರ್ಷದಿಂದ ಪ್ರತಿ ಏಕಾದಶಿಯ ದಿನ ಹಗಲು ಉಪವಾಸ ಮಾಡಿ ರಾತ್ರಿ ಕಾಲದಲ್ಲಿ ವಿಷ್ಣುದೇವಾಲಯದ ಎದುರು ಕೆಳಗಡೆ ನಮ್ರನಾಗಿ ಕುಳಿತು ಹಾಡುಹಾಡುತ್ತಾ ಜಾಗರವನ್ನು ಮಾಡುತ್ತಾ ಬಂದಿದ್ದೇನೆ. ಎರಡು ದಶಕಗಳ ಕಾಲ ಆ ಸ್ವಾಮಿಯು ನನ್ನಿಂದ ಈ ಜಾಗರ ಸೇವೆಯನ್ನು ಸ್ವೀಕರಿಸಿದ್ದಾನೆ. ಇದೇ ನನ್ನ ಧನ್ಯತೆ. ಇದೇ ನನ್ನ ಜನ್ಮದ ಅಹೋಭಾಗ್ಯ, ಏಕಾದಶಿ ಉಪವಾಸ ಮಾಡಿ ಇಂದು ನಿನ್ನ ಹಸಿವೆ ಹಿಂಗಿಸಲು ನಾನು ಬಂದಿದ್ದೇನೆ. ಕಳೆದ ಒಂಬತ್ತು ದಿನ ಉಪವಾಸ ಮಾಡಿ, ನಿನ್ನಿನ ಏಕಾದಶಿಯೂ ಉಪವಾಸವಿದ್ದ ನಿನ್ನ ಪಾರಣೆಗೆ ಒದಗಿ ಧನ್ಯನಾದೆ.

**ಬ್ರಹ್ಮರಾಕ್ಷಸ:-** ಮಹನೀಯ, ಇವತ್ತು ನಾನು ನಿನ್ನಲ್ಲಿ ಒಂದು ಪ್ರಾರ್ಥನೆಯನ್ನು ಮಾಡುತ್ತೇನೆ. ನನ್ನ ಮಾತನ್ನು ನಡೆಸು. ನೀನುಮಾಡಿದ ಒಂದು ದಿನದ ಏಕಾದಶಿ ರಾತ್ರಿ ಜಾಗರಣ ಮಾಡಿದ ಪುಣ್ಯವನ್ನು ನನಗೆ ಕೊಟ್ಟುಬಿಡು, ಅದರಿಂದ ನಾನು ಉದ್ಧಾರ ಆಗುವೆನು. ನಿನ್ನನ್ನು ಈಗ ಬಿಟ್ಟು ಬಿಡುವೆನು. ನೀನು ಬದುಕಿ ಉಳಿ ನನ್ನನ್ನು ಉಳಿಸು.

**ಮಾತಂಗ:-** ನಿಶಾಚರನೇ, ನಾನು ನಿನ್ನೆಮಾಡಿದ ಜಾಗರದ ವಾರ್ತೆಯನ್ನು ನಾನು ಹೇಳಿದೆ. ಈಗ ಬೇರೆ ಮಾತು ಏಕೆ? ಬದಲಿ ವಿಚಾರವೇಕೆ? ನೀನು ಬಾ ಎಂದು ಹೇಳಿದ್ದೆ, ಬಂದೆ. ತಿನ್ನುತ್ತೇನೆ ಎಂದುಹೇಳಿದ್ದೆ, ತಿಂದು ಬಿಡು. ಜಾಗರದ ಪುಣ್ಯಕೊಡುವ ಮಾತನ್ನು ಹೇಳಬೇಡ. ನನ್ನನ್ನು ತಡಮಾಡದೇ ಯಥೇಚ್ಛವಾಗಿ ಭಕ್ಷಿಸಿಬಿಡು.

**ಬ್ರಹ್ಮರಾಕ್ಷಸ:-** ಪುಣ್ಯಾತ್ಮ, ನಿನ್ನಿನ ಒಂದು ರಾತ್ರಿ ಕಾಲದಲ್ಲಿ ನೀನು ಮೂರು ಪ್ರಹರಗಳ ಕಾಲ ಸಂಗೀತ ಸೇವೆ ಮಾಡಿರುವೆ. ಮೂರು ಪ್ರಹರದಲ್ಲಿ ಮಾಡಿದ ಸಂಗೀತದ ಪೂರ್ತಿಪುಣ್ಯವನ್ನು ನನಗೆ ಕೊಡುವ ಇಚ್ಛೆ ನಿನಗೆ ಇಲ್ಲದಿದ್ದರೆ ಎರಡು ಯಾಮಗಳಲ್ಲಿ ಮಾಡಿದ ಸಂಗೀತ ಸೇವೆಯ ಪುಣ್ಯವನ್ನಾದರೂ ನೀಡು.

**ಮಾತಂಗ:-** ಹೀಗೇಕೆ ಅಸಂಬದ್ಧವಾಗಿ ಮಾತನಾಡುತ್ತಿರುವೆ? ನಿನ್ನೆ ನೀನುಹೇಳಿದ್ದು ಒಂದು ಈಗ ಬೇಡುವದು ಮತ್ತೊಂದು ಏನಾದರೂ ನಾನು ಜಾಗರದಪುಣ್ಯವನ್ನು ಪ್ರಧಾನ ಮಾಡಲಾರೆ ಬೇಗನೇ ನನ್ನನ್ನು ತಿಂದುಬಿಡು, ಕೊಂದುಬಿಡು.

**ಬ್ರಹ್ಮರಾಕ್ಷಸ:-** ಮಹಾತ್ಮಾ, ನಿನ್ನನ್ನು ಯಾವನು ತಿನ್ನಬಲ್ಲ! ಯಾವನು ತಾನೇ ಕೊಲ್ಲಬಲ್ಲ! ಧರ್ಮವು ನಿನ್ನನ್ನು ರಕ್ಷಿಸುತ್ತಿದೆ. ಏಕಾದಶಿಯ ವ್ರತವು ನಿನಗೆ ಬೆಂಗಾವಲಾಗಿ ನಿಂತುಕೊಂಡಿದೆ. ನನಗೆ ನಿನ್ನನ್ನು ಪೀಡಿಸುವದಕ್ಕೂ ಕೂಡ ಶಕ್ತಿಯಿಲ್ಲ. ಸಾಧುಗಳು ದೀನರಾದ ಪಾಪಿಗಳ ಮೇಲೆ ದಯೆತೋರುವರು. ಆರ್ತರಾದವರನ್ನು ರಕ್ಷಿಸುವದೇ ಸಜ್ಜನರ ಮುಖ್ಯ ಲಕ್ಷಣ. ನೀನು ಕೂಡ ನನ್ನ ಮೇಲೆ ಕೃಪೆಮಾಡು. ಕನಿಷ್ಠಪಕ್ಷ ಒಂದು ಪ್ರಹರದ ಸಂಗೀತ ಸೇವೆಯ ಪುಣ್ಯವನ್ನಾದರೂ ಕೊಟ್ಟು ಕಾಪಾಡು.

**ಚಂಡಾಲ:-** ನಾನು ಪುಣ್ಯವನ್ನೂ ಕೊಡುವದಿಲ್ಲ, ಬದುಕಿ ಮನೆಗೂ ಹೋಗುವದಿಲ್ಲ. ನಿನ್ನ ಕಾರ್ಯವನ್ನು ನೀನು ಪೂರೈಸು.

**ಬ್ರಹ್ಮರಾಕ್ಷಸ:-** ಸತ್ಯ ಸಂಧನಾದ ಮಾತಂಗನೇ, ಏಕಾದಶಿ ಜಾಗರದ ಪುಣ್ಯದ ಮೇಲೆ ಅಷ್ಟು ನಿನಗೆ ಲೋಭವಿದ್ದರೆ ಕೊನೆಯ ಪಕ್ಷ ನೀನು ಏಕಾದಶಿ ರಾತ್ರಿ ಕಾಲದ ಜಾಗರದ

ಕೊನೆಯಲ್ಲಿ ಹೇಳಿದ ಒಂದು ಹಾಡಿನ ಪುಣ್ಯವನ್ನಾದರೂ ನನಗೆ ಧಾರೆಯೆರೆದು ಕೊಡು. ನನ್ನನ್ನು ಉದ್ಧಾರ ಮಾಡು.

ಬ್ರಹ್ಮರಾಕ್ಷಸನ ಈ ದೀನ ನುಡಿಯನ್ನು ಕೇಳಿ ಚಂಡಾಲನ ಮನಸ್ಸಿನಲ್ಲಿ ಕರುಣೆಯು ತುಸು ಸೆಲೆಯೊಡಿಯಿತು. ಆಗ ಅವನು ಕಾತುರದಿಂದ ಕೇಳಿದ. ''ರಾಕ್ಷಸ, ನೀನು ಹಿಂದೆ ಯಾವ ಘೋರ ಕೃತ್ಯವನ್ನು ಮಾಡಿದ್ದೆ? ಇಂಥ ಬ್ರಹ್ಮರಾಕ್ಷಸ ಜನ್ಮ ನಿನಗೆ ಯಾವ ಭಯಂಕರವಾದ ದುಷ್ಕರ್ಮದಿಂದ ಪ್ರಾಪ್ತವಾಗಿದೆ? ಅದನ್ನು ಹೇಳು.

ಇದನ್ನು ಕೇಳಿ ತನ್ನ ಹಿಂದಿನ ಪಾಪಕೃತ್ಯದ ನೆನಪಾಗಿ ಅದರ ಮೈ ನಡುಗಿತು, ಭಯಂಕರ ದುಃಖವಾಯಿತು. ಅದರಿಂದ ಸಂತಪ್ತವಾಗಿ ಆ ರಾಕ್ಷಸವು ಹೇಳಿತು.

**ಬ್ರಹ್ಮರಾಕ್ಷಸ:-** ನಾನು ಹಿಂದೆ ಒಬ್ಬ ಬ್ರಾಹ್ಮಣ. ಸೋಮಶರ್ಮ ಎಂದು ನನ್ನ ಹೆಸರು. ನನ್ನ ತಂದೆ ಮಹಾಯಾಜ್ಞಿಕ. ಅಧ್ಯಯನಶೀಲ. ನನಗೆ ಮಾತ್ರ ಯಾವ ಯಜ್ಞಕಾರ್ಯವೂ ಗೊತ್ತಿರಲಿಲ್ಲ. ಮಂತ್ರಗಳು ಬರುತ್ತಿರಲಿಲ್ಲ. ಒಬ್ಬ ರಾಜನು ನನ್ನ ಬಳಿಗೆ ಬಂದು ಆಗ್ನೀಧ್ರ ಯಜ್ಞ ಮಾಡಿಸಬೇಕೆಂದು ಕೇಳಿಕೊಂಡ. ದಕ್ಷಿಣೆಯ ಆಸೆಗಾಗಿ ಆ ಯಜ್ಞವನ್ನು ಮಾಡಿಸಿದೆ. ಅನಂತರ ಮತ್ತೊಬ್ಬ ರಾಜನ ಬಯಕೆಯ ಮೇರೆಗೆ ಹನ್ನೆರಡು ಜನ ಮಾಡುವ ದ್ವಾದಶಾಹ ಮಹಾಕ್ರತುವನ್ನೂ ಲೋಭದಿಂದ ಮಾಡಿಸಲು ಸುರು ಮಾಡಿದೆ. ನನಗೆ ಆ ಯಜ್ಞದ ವಿಧಿಗೊತ್ತಿರಲಿಲ್ಲ, ಮಂತ್ರ ಬರುತ್ತಿರಲಿಲ್ಲ. ಯಜ್ಞದಲ್ಲಿ ಅವಶ್ಯವಾಗಿ ಮಾಡಬೇಕಾದ ಆಚಾರ ಅನುಷ್ಠಾನಗಳ ಪರಿಚಯವಂತೂ ಸುತರಾಂ ಇರಲಿಲ್ಲ. ಆದರೂ ಮಂತ್ರ ಹೇಳದೇ, ಸೂತ್ರಗಳನ್ನು ಉಚ್ಚರಿಸದೇ ಯಜ್ಞವಿದ್ಯೆಯನ್ನು ತಿಳಿಯದೇ, ಮನಬಂದಂತೆ ವಿಕೃತ ಸ್ವರ ದಿಂದ ಯಾವ ಯಾವದೋ ಮಂತ್ರಹೇಳಿ, ತಂತ್ರಮಾಡಿ ಆ ಯಜ್ಞವನ್ನು ಮಾಡಿಸಿದೆ. ಹತ್ತನೆಯ ದಿನದ ಯಜ್ಞಕರ್ಮವು ಇನ್ನೂ ಮುಗಿದಿರಲಿಲ್ಲ. ಆ ಯಜ್ಞದಲ್ಲಿ ಮಹಾದೇವರಿಗೆ ಆಹುತಿಯನ್ನು ಕೊಡುವ ಸಂದರ್ಭದಲ್ಲಿ ರಾಕ್ಷಸ ಮುಹೂರ್ತ ಇದ್ದುದರಿಂದ ನಾನು ತಕ್ಷಣ ದಲ್ಲಿ ಮೃತನಾದೆ. ಯಜ್ಞಯಾಗ ಪ್ರಕ್ರಿಯೆ ಗೊತ್ತಿಲ್ಲದೇ ಅಪದ್ಧ ಮಂತ್ರಗಳನ್ನು ಉಚ್ಚರಿಸಿ ಯದ್ವಾ ತದ್ವಾ ಮನಬಂದ ವಿಧಿಗಳಿಂದ ಯಜ್ಞಮಾಡಿಸಿದ ಘೋರಪಾಪದ ಫಲವಾಗಿ ಸತ್ತಬಳಿಕ ಬ್ರಹ್ಮರಾಕ್ಷಸವಾದೆನು. ಅದರಿಂದ ಈಗ ದುಃಖ ಸಂತೃಪ್ತನಾಗಿ ಈ ಘೋರವಾದ ಜೀವನದಲ್ಲಿ ಬನ್ನ ಬಡುತ್ತಿದ್ದೇನೆ. ಬದುಕಿ ಬೇಯುತ್ತಿದ್ದೇನೆ. ಇಂಥ ನನ್ನನ್ನು ಉದ್ಧಾರ ಮಾಡು. ಪಾಪದ ಸಮುದ್ರದಲ್ಲಿಯೇ ನಾನು ಮುಳುಗಿಹೋಗಿದ್ದೇನೆ. ನೀನು ಜಾಗರಕಾಲ ದಲ್ಲಿ ಹಾಡಿದ ಕೊನೆಯ ಒಂದುಹಾಡಿನ ಪುಣ್ಯವನ್ನಾದರೂ ಕೊಟ್ಟರೆ ನನ್ನ ಈ ಬ್ರಹ್ಮರಾಕ್ಷಸ ಜನ್ಮ ಕೊನೆಗಾಣುತ್ತದೆ. ನನ್ನ ಉದ್ಧಾರದ ಕಾಲ ಒದಗಿ ಬರುತ್ತದೆ. ಅಷ್ಟು ಉದ್ಧಾರಮಾಡು.

**ಚಂಡಾಲ:-** ನೀನು ಇನ್ನು ಮುಂದೆ ಪ್ರಾಣಿವಧದಿಂದ ನಿವೃತ್ತನಾಗುತ್ತಿದ್ದರೆ ನಿನಗೆ ನನ್ನ ಜಾಗರದ ಒಂದು ಹಾಡಿನ ಪುಣ್ಯವನ್ನು ಕೊಡುತ್ತೇನೆ. ಅದರಿಂದ ನೀನು ಉದ್ಧೃತನಾಗು.

ಆದಕ್ಕೆ ಬ್ರಹ್ಮರಾಕ್ಷಸನು ಒಪ್ಪಿಕೊಂಡ. ಬಳಿಕ ಚಂಡಾಲನು ಅವನು ಬಿನ್ನವಿಸಿ ಕೊಂಡಂತೆ ಬ್ರಹ್ಮರಾಕ್ಷಸನಿಗೆ ಒಂದು ಹಾಡಿನ ಪುಣ್ಯವನ್ನು ಕೊಟ್ಟನು. ಆ ಜಾಗರಗೀತದ ಫಲವನ್ನು ಮಾತಂಗನು ಕೊಟ್ಟ ಕೂಡಲೇ ಬ್ರಹ್ಮ ರಾಕ್ಷಸನು ಕೃತಕೃತ್ಯನಾಗಿ ಆ ಪುಣ್ಯವನ್ನು ಸ್ವೀಕರಿಸಿದ. ಆ ಮಾತಂಗನಿಗೆ ನಮಸ್ಕರಿಸಿದ. ಅಲ್ಲಿಂದ ಹೊರಟು ಪೃಥೋದಕ ಎಂಬ

ಶ್ರೇಷ್ಠವಾದ ತೀರ್ಥಕ್ಕೆ ಹೋದನು. ಅಲ್ಲಿ ಸ್ನಾನಮಾಡಿ, ದೇವರ ಧ್ಯಾನ ಮಾಡಿ ಪ್ರಾಯೋಪವೇಶನಕ್ಕೆ ಕುಳಿತು ನಿರಾಹಾರನಾಗಿ ನಾರಾಯಣನ ನಾಮ ಸ್ಮರಣೆಯನ್ನು ಮಾಡುತ್ತಾ ಪ್ರಾಣತ್ಯಾಗ ಮಾಡಿದನು. ಪೃಥೋದಕ ಕ್ಷೇತ್ರದ ಪ್ರಭಾವ ದಿಂದಲೂ, ಏಕಾದಶಿ ಜಾಗರ ಪುಣ್ಯದ ಮಹಿಮೆಯಿಂದಲೂ ನಾರಾಯಣ ಧ್ಯಾನದ ಮಹಿಮೆ ಯಿಂದಲೂ ಆ ಬ್ರಹ್ಮರಾಕ್ಷಸನು ತನ್ನ ದುರ್ಯೋನಿಯಿಂದ ಮುಕ್ತನಾಗಿ ಬ್ರಹ್ಮ ಲೋಕಕ್ಕೆ ಹೋದನು. ಅಲ್ಲಿ ಹತ್ತು ಸಾವಿರ ವರ್ಷ ಇದ್ದು ಅನಂತರ ಬ್ರಾಹ್ಮಣನಾಗಿ ಜನಿಸಿದನು, ಇಂದ್ರಿಯಗಳನ್ನು ನಿಗ್ರಹಿಸಿದನು, ಭಗವಂತನನ್ನು ಪೂಜಿಸಿದನು. ಅವನಿಗೆ ಜನ್ಮಾಂತರದ ಸ್ಮರಣೆಯು ಅಚ್ಚಳಿಯದೇ ಉಳಿದಿತ್ತು. ಅವನ ಚರಿತ್ರವನ್ನು ಮತ್ತೆ ಹೇಳುತ್ತೇನೆ. ಈಗ ಭಗವಂತನಿಗೆ ಪ್ರತಿ ಏಕಾದಶಿ ಜಾಗರ, ಗಾಯನಸೇವೆ ಸಲ್ಲಿಸುವ ಮಾತಂಗ ನಾಮಕನಾದ ಚಂಡಾಲನ ಅವಶಿಷ್ಟವಾದ ಕಥೆಯನ್ನು ಹೇಳುತ್ತೇನೆ ಕೇಳಿರಿ. ತನ್ನನ್ನು ಕೊಂದು ತಿನ್ನುತ್ತೇನೆ ಎಂದು ಬಂದ ಬ್ರಹ್ಮರಾಕ್ಷಸನು ತನ್ನಿಂದಲೇ ಉದ್ಧೃತನಾಗಿ ಪಾಪಮುಕ್ತನಾಗಿ ಹೋದದ್ದನ್ನು ನೋಡಿ ಚಂಡಾಲನಿಗೆ ವೈರಾಗ್ಯವು ಹುಟ್ಟಿತು. ಸಂಸಾರವೇ ಸಾಕು ಎನಿಸಿತು. ಮಕ್ಕಳಿಗೆ ಮಡದಿಯನ್ನು ಒಪ್ಪಿಸಿದ. ಭೂಮಿಯ ಪ್ರದಕ್ಷಿಣೆ ಮಾಡಲು ಹೊರಟ. ಕೋಕಾಮುಖದಿಂದ ಆರಂಭಿಸಿ ಸ್ಕಂದಸ್ವಾಮಿಯ ದರ್ಶನದವರೆಗೆ ಎಲ್ಲ ತೀರ್ಥಯಾತ್ರೆಯನ್ನು ಮಾಡಿ ಮುಗಿಸಿದ. ಧಾರಾಚಕ್ರದಲ್ಲಿ ನೆಲೆನಿಂತ ಷಣ್ಮುಖನಿಗೆ ಪ್ರದಕ್ಷಿಣೆ ಹಾಕಿದ. ನಮಸ್ಕಾರ ಮಾಡಿದ. ಅನಂತರ ಉನ್ನತೋನ್ನತವಾದ ವಿಂಧ್ಯಗಿರಿಗೆ ಬಂದ ಅಲ್ಲಿಯ ಪಾಪವಿಮೋಚನಾ ತೀರ್ಥದಲ್ಲಿ ಸ್ನಾನ ಮಾಡಿದ ಆ ತೀರ್ಥ ಸ್ನಾನದಿಂದ ಅವನ ಪಾಪವೆಲ್ಲವೂ ಪರಿಹಾರವಾಯಿತು. ಹಿಂದೆ ಮಾಡಿದ ಪಾಪವೆಲ್ಲವೂ ಆ ಪಾಪ ಪ್ರಮೋಚನೆ ತೀರ್ಥದಲ್ಲಿ ಮಿಂದ ಮಾತ್ರಕ್ಕೆ ತೊಳೆದು ಹೋಯಿತು. ಪಾಪವೆಲ್ಲ ಕಳೆದು ಹೋದಬಳಿಕ ಅವನಿಗೆ ಹಿಂದಿನ ಅನೇಕಜಾತಿಗಳ ಸ್ಮರಣೆ ಉಂಟಾಯಿತು. ಈ ಬ್ರಹ್ಮರಾಕ್ಷಸ ಹಿಂದಿನ ಜನ್ಮದಲ್ಲಿ ಸನ್ಯಾಸಿಯು ಆಗಿದ್ದ. ಅವನಿಗೆ ಆಗ ಬುದ್ಧಿ ಇದ್ದಿತು. ವೇದವಿದ್ವತ್ತೇ ಇದ್ದಿತು. ವೇದಾಂಗಪಾಂಡಿತ್ಯ ಇದ್ದಿತು. ಇಂದ್ರಿಯನಿಗ್ರಹ ಇದ್ದಿತು. ಮನಸ್ಸಿನ ಸಂಯಮವೂ ಇದ್ದಿತು. ಒಂದು ದಿನ ಇವನು ಇದ್ದ ಊರಿನಲ್ಲಿಯ ಹಸುಗಳನ್ನು ಕಳ್ಳರು ಹೊಡೆದುಕೊಂಡು ಹೋಗುತ್ತಿದ್ದರು. ಆಗ ಆ ಗೋವುಗಳ ಕಾಲಿನಿಂದ ಎದ್ದ ಧೂಳಿಯು ಈ ಸನ್ಯಾಸಿಯು ಆಹಾರದ ಮೇಲೆ ಬಿದ್ದಿತು. ಗೋಧೂಳಿಯ ಸ್ಪರ್ಶದಿಂದ ತನ್ನ ಆಹಾರವೆಲ್ಲವೂ ಅಪವಿತ್ರವಾಯಿತೆಂದು ಅದನ್ನು ಬಿಟ್ಟುಬಿಟ್ಟ. ಆ ದೋಷದಿಂದ ಅವನು ಮರುಜನ್ಮದಲ್ಲಿ ಅಂತ್ಯಜ ಯೋನಿಯಲ್ಲಿ ಹುಟ್ಟ ಬರಬೇಕಾಯಿತು. ಅನಂತರ ಅವನು ನರ್ಮದಾ ತೀರದಲ್ಲಿರುವ ಪಾಪಪ್ರಮೋಚನಾ ತೀರ್ಥದಲ್ಲಿ ಸ್ನಾನಮಾಡಿದ. ಆ ಪುಣ್ಯದ ಫಲವಾಗಿ ಮುಂದೆ ಅವನು ಕಾಶಿಯಲ್ಲಿ ಒಬ್ಬ ಮೂರ್ಖ ಬ್ರಾಹ್ಮಣನಾಗಿ ಜನಿಸಿದ. ಅಲ್ಲಿ ಮೂವತ್ತು ವರ್ಷ ವಾರಣಾಸಿಯಲ್ಲಿ ವಾಸ್ತವ್ಯಗೈದ.

ಒಂದುದಿನ ಅಲ್ಲಿಗೆ ಕಾಡುರೂಪವುಳ್ಳ ಒಬ್ಬ ಸಿದ್ಧಪುರುಷನು ಸಂಚಾರ ಕ್ರಮದಿಂದ ಅಲ್ಲಿಗೆ ಬಂದನು. ಅವನಲ್ಲಿ ವಿಚಿತ್ರವಾದ ಯೋಗಶಕ್ತಿಯಿತ್ತು. ಈ ಮೂರ್ಖ ಬ್ರಾಹ್ಮಣನು ಆ ಸಿದ್ಧಪುರುಷನನ್ನು ನೋಡಿ ಉಪಹಾಸಗರ್ಭಿತವಾಗಿ ನಕ್ಕು ನಮಸ್ಕಾರದ ನಟನೆ ಮಾಡುತ್ತಾ ಕೇಳಿದನು. ''ಸಿದ್ಧಪುರುಷನೇ, ನಿನಗೆ ಕ್ಷೇಮವಷ್ಟೆ? ಎಲ್ಲಿಂದಾಗಿದೆ ತಮ್ಮ ಆಗಮನ'' ಎಂದು. ಆ ಸಿದ್ಧಪುರುಷನಿಗೆ ಇವನ ಪ್ರಶ್ನೆಯ ಮೇಲೆಯೇ ಇವನು

ನನ್ನನ್ನು ಚೆನ್ನಾಗಿ ಅರಿತಿದ್ದಾನೆ. ಆದರೂ ಉಪಹಾಸಕ್ಕಾಗಿ ನನ್ನನ್ನು ಪ್ರಶ್ನೆಕೇಳುತ್ತಾನೆ ಎಂದು ಎನಿಸಿತು. "ಸ್ವರ್ಗದಿಂದ ಬಂದಿದ್ದೇನೆ" ಎಂದು ಚುಟುಕಾಗಿ ಅವನ ಚೇಷ್ಟಾಪ್ರಶ್ನೆಗೆ ಉತ್ತರಿಸಿದ. ಆಗ ಆ ಮೂರ್ಖ ಬ್ರಾಹ್ಮಣನು ಆ ಸಿದ್ಧಪುರುಷನಿಗೆ ಪ್ರಶ್ನೆ ಮಾಡಿದ "ಸಿದ್ಧ ಪುರುಷನೇ, ನೀನು ಸ್ವರ್ಗದಿಂದ ಬಂದೆ ಎಂದು ಹೇಳಿದೆಯಲ್ಲವೇ! ಸ್ವರ್ಗದಲ್ಲಿ ಊರ್ವಶಿ ಎಂಬ ಅಪ್ಸರೆ ಇರುತ್ತಾಳೆ. ಅವಳು ಸಾಕ್ಷಾತ್ ಶ್ರೀಮನ್ ನಾರಾಯಣನ ತೊಡೆಯಿಂದ ಹುಟ್ಟಿದವಳು. ಅವಳನ್ನು ನೋಡಿದಿಯಾ?"

**ಸಿದ್ಧಪುರುಷ:-** ನೋಡದೇ ಏನು! ಆ ಊರ್ವಶಿಯು ಸ್ವರ್ಗಲೋಕಕ್ಕೆ ಒಂದು ಮುಖ್ಯಆಭರಣ ಇದ್ದಂತೆ. ಮೇಲಾಗಿ ಅವಳು ಹರಿಯ ತೊಡೆಯಿಂದ ಹುಟ್ಟಿಬಂದಳು. ಅವಳು ಇಂದ್ರನಿಗೆ ಚಾಮರ ಸೇವೆಯನ್ನು ಸಲ್ಲಿಸುತ್ತಾ ಇರುತ್ತಾಳೆ.

**ಬ್ರಾಹ್ಮಣ:-** "ಮಿತ್ರ, ನನಗಾಗಿ ನೀನು ಒಂದು ಕೆಲಸ ಮಾಡು. ನೀನು ಇನ್ನೊಮ್ಮೆ ಸ್ವರ್ಗಕ್ಕೆ ಹೋದಾಗ ಆ ಊರ್ವಶಿಗೆ ನನ್ನ ವಿಷಯವಾಗಿ ಹೇಳು. ಆದರದಿಂದ ಅವಳ ಎದುರು ನನ್ನ ಪ್ರಸ್ತಾಪಮಾಡು, ಅದಕ್ಕೆ ಅವಳು ಏನುಎಂದಳು ಅನ್ನುವದನ್ನೂ ಕೂಡ ನನಗೆ ಬಂದು ತಿಳಿಸು" ಎಂದನು.

ಈ ಮೂರ್ಖನ ಮಾತಿಗೆ 'ಹಾಗೆ ಆಗಲಿ' ಎಂದು ನುಡಿದ ಆ ಸಿದ್ಧ. ಅನಂತರ ಅವನು ಸ್ವರ್ಗಲೋಕಕ್ಕೆ ಹೋದನು. ಅಲ್ಲಿ ಊರ್ವಶಿಯನ್ನು ಭೇಟಿ ಮಾಡಿದನು. "ಭೂಮಿ ಯಲ್ಲಿಯ ಕಾಶಿಯ ಒಬ್ಬ ಮೂರ್ಖಬ್ರಾಹ್ಮಣನು ತನ್ನ ವಿಷಯವನ್ನು ನಿನ್ನೆದುರಿಗೆ ಪ್ರಸ್ತಾಪಿಸಲು ಹೇಳಿದ್ದಾನೆ" ಎಂದು ತಿಳಿಸಿದನು.

**ಊರ್ವಶಿ:-** ಸಿದ್ಧಾ, ನಾನು ಕಾಶಿಯಲ್ಲಿರುವ ಯಾವ ಬ್ರಾಹ್ಮಣನನ್ನೂ ಅರಿಯೆನು. ಅಲ್ಲಿ ನನಗೆ ಯಾವ ಬ್ರಾಹ್ಮಣನ ಗುರುತೂ ಇಲ್ಲ" ಎಂದು ಮಾತು ಮುಗಿಸಿ ಮೌನಗೌರಿ ಆದಳು.

ಅನಂತರ ಬಹುಕಾಲದ ಮೇಲೆ ಆ ಸಿದ್ಧನು ಕಾಶಿಗೆ ಹೋದನು. ಅಲ್ಲಿ ಆ ಸಿದ್ಧನ ದಾರಿಯನ್ನೇ ನೋಡುತ್ತಾ ಕುಳಿತಿದ್ದ ಆ ಬ್ರಾಹ್ಮಣ. ಸಿದ್ಧನನ್ನು ಕಂಡಕೂಡಲೇ ಅತುರನಾಗಿ ಬಂದು ಕಾತರತೆಯಿಂದ ಕೇಳಿದ. "ಸಿದ್ಧಾ, ಊರ್ವಶಿ ಸಿಕ್ಕಿದ್ದಳೇ? ನಾನು ಹೇಳಿದ್ದನ್ನು ಅವಳ ಎದುರು ಪ್ರಸ್ತಾಪ ಮಾಡಿದ್ದೀಯಾ?" ಎಂದು.

**ಸಿದ್ಧಪುರುಷ:-** ನಾನು ಸ್ವರ್ಗಕ್ಕೆ ಹೋಗಿದ್ದೆ ಊರ್ವಶಿಯನ್ನು ಭೇಟಿಯಾಗಿದ್ದೆ. ನಿನ್ನ ವಿಷಯವಾಗಿ ಮಾತನ್ನೂ ಆಡಿದೆ. ಆದರೆ ಅವಳು "ಕಾಶೀ ಬ್ರಾಹ್ಮಣನಾದ ನಿನ್ನನ್ನು ನಾನು ಸುತಾರಾಂ ಅರಿಯೆನು, ಅವನ ಗುರುತು ನನಗೆ ಇಲ್ಲ" ಎಂದು ಹೇಳಿದಳು.

**ಬ್ರಾಹ್ಮಣ:-** ಹಾಗಾದರೆ ಸಿದ್ಧಪುರುಷನೇ, ನೀನು ಅವಳನ್ನು ಕೇಳು, ಹೇಗಾದರೆ ನೀನು ಅವನನ್ನು ತಿಳಿಯುವೆ? ಏನು ಮಾಡಿದರೆ ನೀನು ಆ ಕಾಶೀ ಬ್ರಾಹ್ಮಣನನ್ನು ಗುರುತಿಸುವೆ? ಎಂಬುದನ್ನು ಸ್ಪಷ್ಟವಾಗಿ ಕೇಳಿಕೊಂಡು ಬಾ" ಎಂದು ಹೇಳಿದನು.

"ಯಾರು ಬೇಡ ಎನ್ನುವರು! ಅಗತ್ಯವಾಗಿ ಆಗಲಿ. ನಾನು ಊರ್ವಶಿಯನ್ನು ಕೇಳಿಕೊಂಡೇ ಬರುತ್ತೇನೆ" ಎಂದು ವಚನ ಕೊಟ್ಟು ಆ ಸಿದ್ಧನು ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದ. ಅಮರಾವತಿಯಲ್ಲಿ ಇಂದ್ರನ ಅರಮನೆಯ ಬಾಗಿಲಲ್ಲಿ ಹೋಗಿ ನಿಂತುಕೊಂಡ. ಆ ಇಂದ್ರ ಭವನದಿಂದ ಊರ್ವಶಿಯೂ ಹೊರ ಬರುತ್ತಿದ್ದಳು. ಆಗ ಆ ಸಿದ್ಧಪುರುಷನು ಅವಳ

ಬಳಿಗೆ ಹೋಗಿ ಕೇಳಿದ. ''ದೇವಸುಂದರಿ, ಆ ಭೂಲೋಕದ ಬ್ರಾಹ್ಮಣ ನನಗೆ ಗಂಟೇ ಬಿದ್ದಿದ್ದಾನೆ. ನೀನು ಏನು ಮಾಡಿದರೆ ಆ ಬ್ರಾಹ್ಮಣನನ್ನು ಅರಿಯುವೆ? ಅದನ್ನು ಹೇಳು. ನಿನಗೆ ತನ್ನ ಜ್ಞಾನವನ್ನು ಮಾಡಿಕೊಡಲು ಬ್ರಾಹ್ಮಣನು ಏನ್ನಾದರೂ ಮಾಡಲು ಸಿದ್ಧನಿದ್ದಾನೆ.''

**ಊರ್ವಶಿ:-** ಆ ಬ್ರಾಹ್ಮಣನು ಯಾವುದಾದರೊಂದು ಒಂದು ನಿಯಮವನ್ನು ಮಾಡಿಕೊಳ್ಳಲಿ. ಅದರಿಂದ ನಾನು ಅವಳನ್ನು ತಿಳಿದುಕೊಳ್ಳಲು ಅನುಕೂಲವಾಗುವದು'' ಎಂದು ಹೇಳಿದಳು.

ಅನಂತರ ಆ ಸಿದ್ಧಪುರುಷನು ಮತ್ತೆ ಮರಲಿ ವಾರಣಾಸಿಗೆ ಬಂದನು. ಊರ್ವಶಿಯ ನಿರ್ಣಯವನ್ನು ತಿಳಿಸಿದನು ಆ ಮುಗ್ಧ ಬ್ರಾಹ್ಮಣನಿಗೆ. ಆಗ ಆ ಮೂರ್ಖಬ್ರಾಹ್ಮಣನು ಆ ಸಿದ್ಧಪುರುಷನ ಎದುರು ದೃಢ ನಿಶ್ಚಯದಿಂದ ತನ್ನ ನಿಯಮವನ್ನು ತಿಳಿಸಿದ. ''ಸಿದ್ಧಪುರುಷ, ಇಂದಿನಿಂದ ನಾನು ಊಟವನ್ನೇ ಮಾಡುವದಿಲ್ಲ. ಇದು ಸತ್ಯ. ಊರ್ವಶಿಯ ದರ್ಶನವಾಗುವವರೆಗೆ ನಾನು ಏನನ್ನೂ ತಿನ್ನುವುದಿಲ್ಲ. ನಿನ್ನ ಎದುರಿಗೆ ಶಪಥಪೂರ್ವಕವಾಗಿ ಈ ನಿಯಮವನ್ನು ಮಾಡಿದ್ದೇನೆ.''

ಕಾಶೀ ಬ್ರಾಹ್ಮಣನು ಹೀಗೆ ಹೇಳಿದ ಬಳಿಕ ಆ ಸಿದ್ಧನು ಮತ್ತೆ ಸ್ವರ್ಗವನ್ನು ಸಾರಿದ, ಊರ್ವಶಿಯನ್ನು ನೋಡಿದ. ''ನಿನಗಾಗಿ ಆ ಬ್ರಾಹ್ಮಣನು ಉಪವಾಸ ಬಿದ್ದಿದ್ದಾನೆ.'' ಎಂದು ಹೇಳಿದ. ಆಗ ಅದನ್ನು ಕೇಳಿ ಊರ್ವಶಿಯು ''ಇಂಥ ನೇಮವನ್ನು ಹಿಡಿದ ಬಳಿಕ ಅವನು ಮೂರ್ಖನೇ ಇರಬೇಕು'' ಎಂದು ನಕ್ಕು ತನ್ನ ಮನೆಗೆ ಹೋದಳು. ಸಿದ್ಧಪುರುಷನು ಕೂಡ ಭೂಮಿಗೆ ಬಂದು ದೇಶಸಂಚಾರ ಮಾಡಿದ. ಇತ್ತ ಊರ್ವಶಿಯು ಕಾಶಿಗೆ ಹೋಗಿ ಅಲ್ಲಿ ಮತ್ಸ್ಯೋದರಿ ತೀರ್ಥದಲ್ಲಿ ಸ್ನಾನ ಮಾಡಿದಳು. ಈ ಮೂರ್ಖ ಬ್ರಾಹ್ಮಣನು ಕೂಡ ಅದೇನದಿಗೆ ಸ್ನಾನಕ್ಕೆ ಹೋಗಿದ್ದ. ಆ ತೀರ್ಥೋದಕದಲ್ಲಿ ಮೀಯುತ್ತಲಿರುವ ಊರ್ವಶಿಯನ್ನು ನೋಡಿದನು. ಆ ಸುರ ಸುಂದರಿಯನ್ನು ನೋಡಿದ ಕೂಡಲೇ ಅವಳ ನಿತ್ಯತಾರುಣ್ಯ ಹಾಗೂ ದಿವ್ಯಲಾವಣ್ಯಗಳನ್ನು ಕಂಡು ಈ ಬ್ರಾಹ್ಮಣನು ಕಾಮಪೀಡಿತನಾದ. ಊರ್ವಶಿಯ ವಿಷಯಕವಾದ ಅವನ ಅನುರಾಗವೂ ಬೆಳೆದು ಅತ್ಯಧಿಕವಾಗಿ ಮನದಲ್ಲಿ ಮೂಡಿತು. ಕಾಮಾಂಧನಾಗಿ ಬಗೆಬಗೆಯ ಶೃಂಗಾರ ಚೇಷ್ಟೆಗಳನ್ನು ಮಾಡಹತ್ತಿದ. ಸಿದ್ಧ ಹೇಳಿದ ಮೂರ್ಖ ಬ್ರಾಹ್ಮಣ ಇವನೇ ಎಂದು ತಿಳಿದು ಹೋಯಿತು ಊರ್ವಶಿಗೆ. ಆಗ ಅವಳು ಮುಗುಳ ನಗೆ ನಕ್ಕು ಅವನಿಗೆ ಹೇಳಿದಳು.

**ಊರ್ವಶಿ:-**ಮಹಾನುಭಾವನೇ, ನಿನ್ನ ಇಚ್ಛೆ ಏನಿದೆ? ನನ್ನಿಂದ ನೀನು ಏನನ್ನು ಅಪೇಕ್ಷಿಸುವೆ? ಬೇಗ ಹೇಳು. ಅದನ್ನು ಕೇಳಿಕೊಂಡು ನಾನು ನೀನು ಮಾಡಬೇಕಾದುದನ್ನು ತಿಳಿಸುತ್ತೇನೆ.

**ಮೂರ್ಖಬ್ರಾಹ್ಮಣ:-** ಊರ್ವಶಿ, ನನಗೆ ನಿನ್ನನ್ನೇ ಕೊಟ್ಟುಬಿಡು. ನಿನ್ನ ಮೇಲೆಯೇ ನನಗೆ ಮೋಹವಾಗಿದೆ. ನೀನು ದೊರಕದೇ ಇದ್ದರೆ ನಾನು ಪ್ರಾಣ ಬಿಡುತ್ತೇನೆ.

**ಊರ್ವಶಿ:-** ಬ್ರಾಹ್ಮಣ, ನಾನು ಈಗ ಒಂದು ನಿಮಯ ಹಿಡಿದಿದ್ದೇನೆ. ನಾನು ನನ್ನ ಆ ನಿಯಮವನ್ನು ಮುಗಿಸಿಕೊಂಡು ಬರುವವರೆಗೆ ನೀನು ಇಲ್ಲಿಯೇ ನನ್ನನ್ನು ಕಾಯುತ್ತಾ ಕುಳಿತುಕೋ.

**ಬ್ರಾಹ್ಮಣ:-** ''ಇಗೋ ನೋಡು ನೀನು ಹೇಳಿದಂತೆ ನಾನು ಕುಳಿತು ಕೊಂಡಿದ್ದೇನೆ'' ಎಂದು ಹೇಳಿ ಬದ್ಧ ಪದ್ಮಾಸನನಾಗಿ ನೆಲದ ಮೇಲೆ ಧರಣೇ ಕುಳಿತುಬಿಟ್ಟ.

ಅನಂತರ ಊರ್ವಶಿಯು ಅಂತರೀಕ್ಷ ಮಾರ್ಗವಾಗಿ ಸ್ವರ್ಗಲೋಕಕ್ಕೆ ಹೋದಳು. ಒಂದುತಿಂಗಳು ಆದ ಬಳಿಕ ಅವಳು ಕಾಶಿಗೆ ಪುನಃ ಆಗಮಿಸಿದಳು. ಆ ಮೂರ್ಖ ಬ್ರಾಹ್ಮಣನನ್ನು ನೋಡಿದಳು. ಅವನು ಅವಳ ಮುಂದೆ ಹೇಳಿದಂತೆ ಇಡೀ ಒಂದು ತಿಂಗಳ ಅದೇ ನದೀ ತೀರದಲ್ಲಿ ನಿರಾಹಾರನಾಗಿ ಕುಳಿತುಕೊಂಡಿದ್ದ. ಅವನನ್ನು ನೋಡಿ ಊರ್ವಶಿಯು ಓರ್ವ ಮುದುಕಿಯ ರೂಪವನ್ನು ತೆಗೆದುಕೊಂಡಳು. ಆ ವೃದ್ಧ ನಾರಿಯು ನದೀ ತೀರದಲ್ಲಿ ಒಂದು ಚಕ್ಕಡಿಯಲ್ಲಿ ಸಕ್ಕರೆಯ ಮೂಟೆಯನ್ನೂ, ತುಪ್ಪದ ಕೊಡವನ್ನೂ, ಜೇನುತುಪ್ಪದ ಹೂಚೆಯನ್ನೂ ಇರಿಸಿದಳು. ಮತ್ತೊಂದರೀ ತೀರ್ಥಕ್ಕೆ ಹೋದಳು. ಅಲ್ಲಿ ಸ್ನಾನ ಮಾಡಿದಳು ಆ ಮೂರ್ಖ ಬ್ರಾಹ್ಮಣನನ್ನು ಕುರಿತು ಹೇಳಿದಳು.

**ವೃದ್ಧನಾರಿ:-** ಬ್ರಾಹ್ಮಣ, ನಾನು ಅಖಂಡ ಸೌಭಾಗ್ಯ ಪ್ರಾಪ್ತಿಗಾಗಿ ತೀವ್ರತರವಾದ ಒಂದು ವ್ರತವನ್ನು ಮಾಡಿದ್ದೇನೆ. ವ್ರತದ ಕೊನೆಗೆ ಪ್ರಾಯಶ್ಚಿತ್ತರೂಪ ನಿನಗೆ ಈ ಸಕ್ಕರೆಯ ಬಂಡೆ, ತುಪ್ಪದ ಹಂಡೆ, ಜೇನಿನ ಗುಂಡಿ ಮೂರನ್ನು ದಾನ ಕೊಡುತ್ತೇನೆ ಸ್ವೀಕರಿಸು.

**ಮೂರ್ಖಬ್ರಾಹ್ಮಣ:-** ಶುಭಾಂಗಿ, ನೀನು ಸಕ್ಕರೆ ತುಂಬಿದ ಏನನ್ನು ನನಗೆ ದಾನ ಕೊಡುತ್ತಿ? ನಾನು ಒಂದು ತಿಂಗಳಿಂದ ಉಪವಾಸವಿದ್ದೇನೆ. ನೀನು ಏನು ಕೊಟ್ಟರೂ ನಾನು ತಿನ್ನುವದಿಲ್ಲ.

**ವೃದ್ಧನಾರಿ:-** ವಿಪ್ರೋತ್ತಮ, ಇದು ಸಕ್ಕರೆಹಿಟ್ಟು, ತುಂಬಿದ ಬಂಡೆ. ಇದರಲ್ಲಿ ತುಪ್ಪ, ಜೇನುತುಪ್ಪಗಳನ್ನು ಇರಿಸಿದೆ. ಇದನ್ನೆಲ್ಲಾ ತಿಂದು ಹಸಿದ ನಿನ್ನ ಹೊಟ್ಟೆಯನ್ನು ತುಂಬು, ನಿನ್ನ ಪ್ರಾಣ ಸಂತರ್ಪಣವನ್ನು ಮಾಡು.

**ಬ್ರಾಹ್ಮಣ:-** ಭದ್ರೆ, ನಾನು ಹಸಿವೆಯಿಂದ ಎಷ್ಟೇ ಬಳಲಿದ್ದರೂ ಕೂಡ ಇದರಲ್ಲಿ ಯಾವುದನ್ನೂ ತಿನ್ನಲಾರೆ, ಸಿದ್ಧಪುರುಷನ ಎದುರು ಕಣ್ಣೆದುರಿಗೆ ಇದ್ದ ಯಾವ ಪದಾರ್ಥವನ್ನೂ ತಿನ್ನುವದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೇನೆ. ಊರ್ವಶಿಗೆ ನನ್ನ ಪರಿಜ್ಞಾನ ಆಗಬೇಕು ಎನ್ನುವದೇ ಇದರ ಉದ್ದೇಶ. ಆದುದರಿಂದ ಇದನ್ನೆಲ್ಲಾ ಬೇರೆ ಯಾರಿಗಾದರೂ ಕೊಡು.

**ವೃದ್ಧನಾರಿ:-** ಬ್ರಾಹ್ಮಣ, ನೀನು ಹಸಿವೆಯಿಂದ ಕಸವಿಸಿ ಪಡುತಾ ಇರುವೆ. ನಿನ್ನ ಎದುರಿಗೆ ಇದ್ದುದು ಕಟ್ಟಿಗೆಯ ಬಂಡೆಯಲ್ಲ ಸಕ್ಕರೆಯ ಬಂಡೆ. ಅದರಲ್ಲಿ ಇರುವದು ಹಿಟ್ಟು, ತುಪ್ಪ, ಜೇನುತುಪ್ಪವೂ ಇರುವದು. ನೀನು ಇದನ್ನು ಯಥೇಚ್ಛವಾಗಿ ತಿನ್ನು.

**ಮೂರ್ಖ ಬ್ರಾಹ್ಮಣ:-** ನಾನು ಕಠಿಣತರವಾದ ಪ್ರತಿಜ್ಞೆಯಾದ ಪ್ರತಿಜ್ಞೆಯನ್ನು ಮಾಡಿದ್ದೇನೆ. ಮಣ್ಣಿನ ಬಂಡೆಯಿರಲಿ, ಕಟ್ಟಿಗೆಯ ಬಂಡೆಯಿರಲಿ, ಸಕ್ಕರೆಯ ಬಂಡೆಯಿರಲಿ, ಅದರಲ್ಲಿ ತುಪ್ಪ, ಜೇನುತುಪ್ಪಗಳಿರಲಿ, ನಾನು ಮುಟ್ಟುವದಿಲ್ಲ.

**ವೃದ್ಧನಾರಿ:-** ನೀನು ಈ ಸಕ್ಕರೆಯ ಬಂಡೆಯನ್ನಾಗಲಿ ಅದರಲ್ಲಿಯ ವಸ್ತುಗಳನ್ನು ಮುಟ್ಟುವದಿಲ್ಲ. ತಿನ್ನುವದಿಲ್ಲ ಎಂದರೆ ಇದನ್ನು ನಿನ್ನ ಮನೆಗೆ ಒಯ್ದುಬಿಡು.ನಿನ್ನ ಕುಟುಂಬದವರು ಯಥೇಚ್ಛವಾಗಿ ತಿನ್ನುತ್ತಾರೆ ಸಕ್ಕರೆಯ ಬಂಡೆಯನ್ನು, ಯಥೇಚ್ಛವಾಗಿ ಕುಡಿಯುತ್ತಾರೆ, ಅದರಲ್ಲಿರುವ ತುಪ್ಪ ಜೇನುತುಪ್ಪಗಳನ್ನು ಸಂತೋಷದಿಂದ ತಿನ್ನುತ್ತಾರೆ ಈ ಸಕ್ಕರೆಯ ಹಿಟ್ಟು, ಬಂಡೆ, ತುಪ್ಪ, ಜೇನುತುಪ್ಪ ಪದಾರ್ಥಗಳನ್ನು ನಿನ್ನ ಕುಟುಂಬದವರು ಕುಡಿಯುತ್ತಾರೆ ನೆಕ್ಕುತ್ತಾರೆ ಮುಕ್ಕುತ್ತಾರೆ ತಿನ್ನುತ್ತಾರೆ.

ಆ ವೃದ್ಧನಾರಿಯ ಒತ್ತಾಯಕ್ಕೆ ಮಣಿಯದೇ ಮುಗ್ಧಬ್ರಾಹ್ಮಣ ನುಡಿದ. ''ಶುಭಾಂಗಿಯೆ, ನಾನು ಊರ್ವಶಿಯು ಬರುವವರೆಗೂ ಹಿಂದಿನ ನನ್ನ ಮನೆಗೆ

ಹೋಗುವದಿಲ್ಲ ಇಲ್ಲಿಯೇ ಇರುವೆ. ಅವಳು ಇಲ್ಲಿ ನನ್ನ ಬಳಿಗೆ ಬಂದಿದ್ದಳು. ಸುರಲೋಕ ಸುಂದರಿಯಾದ ಆ ದೇವತಾ ವಿಲಾಸಿನಿಯನ್ನು ಕಂಡು ನಾನು ಕಾಮಾರ್ತನಾಗಿ ಅವಳನ್ನು ಪ್ರಾರ್ಥಿಸಿದೆ ನನ್ನ ಬಿನ್ನಹವನ್ನು ಮನ್ನಿಸಿ ''ಒಂದು ಕ್ಷಣ ಹೊತ್ತು ನನಗಾಗಿ ಕಾಯುತ್ತ ಇಲ್ಲಿ ನಿಂತುಕೊ'' ಎಂದು ಹೇಳಿ ಅವಳು ಹೋಗಿದ್ದಾಳೆ. ಅವಳ ಮಾತಿಗೆ ನಾನು ''ನಿನ್ನ ಮಾತಿನಂತೆ ನಾನಿಲ್ಲಿಯೇ ಕಾಯುತ್ತ ಇರುವೆನೆಂದೂ ಹೇಳಿದ್ದೇನೆ.'' ಅವಳಿಗಾಗಿ ಕಾಯುತ್ತ ಇಲ್ಲಿ ನಿಂತು ಒಂದುತಿಂಗಳು ಕಳಿಯಿತು. ಕ್ಷಣಮಾತ್ರದಲ್ಲಿ ಮರುಳುವೆನೆಂದು ಹೇಳಿದವಳು ಒಂದು ತಿಂಗಳಾದರೂ ಬರಲಿಲ್ಲ. ಅವಳು ಬರುವವರೆಗೆ ನಾನು ನೀನುಕೊಟ್ಟ ಸಕ್ಕರೆ, ಜೇನುತುಪ್ಪ, ತುಪ್ಪ ಯಾವುದನ್ನೂ ತಿನ್ನುವುದಿಲ್ಲ. ನನ್ನ ಮನೆಗೂ ತಿರುಗಿಹೋಗುವುದಿಲ್ಲ. ಊರ್ವಶಿಯನ್ನು ಕಾಯುತ್ತ ನಿದ್ದೆಬಿಟ್ಟು, ಆಹಾರತೊರೆದು, ಅವಳಿಗಾಗಿ ಕಾದು ನಿಂತುಕೊಳ್ಳುತ್ತೇನೆ. ಅವಳ ಸಂಗಮಕ್ಕಾಗಿ ನಾನು ಇದೊಂದು ವ್ರತವನ್ನೇ ಹಿಡಿದಿದ್ದೇನೆ.''

ಆ ಮುಗ್ಧ ಬ್ರಾಹ್ಮಣನ ಉತ್ಕಟವಾದ ಪ್ರೇಮಾನುರಾಗ ಹಾಗೂ ವಿಶ್ವಾಸವನ್ನು ಕಂಡು ಊರ್ವಶಿಯು ತನ್ನ ನಿಜರೂಪವನ್ನು ಪ್ರಕಟಪಡಿಸಿದಳು. ತ್ರಿಲೋಕಸುಂದರವಾದ ತನ್ನ ಮೋಹನ ಸ್ವರೂಪವನ್ನು ತೋರುತ್ತ ಮಂದಹಾಸ ಮಾಡಿ ಬ್ರಾಹ್ಮಣನನ್ನು ಕುರಿತು ನುಡಿದಳು.

**ಊರ್ವಶಿ:-** ವಿಪ್ರೋತ್ತಮ, ಸಾಧು, ಸಾಧು. ನನಗಾಗಿ ನೀನು ಒಂದು ವ್ರತವನ್ನೇ ಅನುಷ್ಠಾನ ಮಾಡಿದೆ. ನಾನೇ ನಿನ್ನ ಕನಸಿನ ಕಾಮಿನಿಯಾದ ಊರ್ವಶಿ. ನಿನ್ನ ಪ್ರೇಮವನ್ನು ಪರೀಕ್ಷಿಸಬೇಕೆಂದು ನಿನ್ನನ್ನು ಇಷ್ಟೆಲ್ಲ ಆಟವಾಡಿಸಿದೆ. ನೀನು ನಿಜವಾಗಿಯೂ ನನ್ನ ಪ್ರೇಮಿಯಾಗಿರುವೆ. ನಾನು ದೇವಲೋಕದ ಸುಂದರಿ, ಮನುಷ್ಯ ಮಾತ್ರರಿಗೆ ದುರ್ಲಭಳು. ನನ್ನನ್ನು ಪಡೆಯಬೇಕೆಂಬ ಉತ್ಕಟಹಂಬಲ ನಿನಗೆ ಇದ್ದುದಾದರೆ ಸೂಕರ ಕ್ಷೇತ್ರಕ್ಕೆ ಹೋಗು. ಅಲ್ಲಿರುವ ರೂಪತೀರ್ಥದಲ್ಲಿ ಭಗವದಾರಾಧನೆ ಮಾಡು. ನಿನಗೆ ಸಿದ್ಧಿಪ್ರಾಪ್ತವಾಗುವದು. ಆ ಬಳಿಕ ನನ್ನನ್ನು ನೀನು ಪಡೆಯುವೆ.

ಹೀಗೆ ಹೇಳಿ ಮುಗಿಲು ಮಂಟಪಕ್ಕೇರಿದಳು ಊರ್ವಶಿ. ಸತ್ಯ ತಪನಾದ ಆ ಬ್ರಾಹ್ಮಣ ರೂಪ ತೀರ್ಥಕ್ಕೆ ಹೋದ. ಅಲ್ಲಿ ಹೋಗಿ ಶುಚಿರ್ಭೂತನಾಗಿ ಸ್ನಾನ ಮಾಡಿ ನಿಯಮ ಬದ್ಧನಾಗಿ ಭಗವದಾರಾಧನೆ ಮಾಡಿದ. ಅಲ್ಲಿ ತಪೋನುಷ್ಠಾನ ತತ್ಪರನಾಗಿರುವಾಗಲೇ ಅವನ ದೇಹಪಾತವಾಯ್ತು ಆ ಪುಣ್ಯದಿಂದ ಅವನು ಗಂಧರ್ವ ಲೋಕಕ್ಕೆ ಹೋದ. ಅಲ್ಲಿ ಮನ್ವಂತರ ಕಾಲ ಪರ್ಯಂತ ದಿವ್ಯ ಭೋಗಗಳನ್ನು ಅನುಭವಿಸಿದ. ಅನಂತರ ಒಳ್ಳೆ ಸತ್ಕುಲದಲ್ಲಿ ಮಹಾರಾಜನಾಗಿ ಜನಿಸಿದ. ಅವನು ರಾಜನಾಗಿದ್ದಾಗ ಪ್ರಜಾಜನರನ್ನು ರಕ್ಷಣ, ರಂಜನ, ಪೋಷಣ-ತೋಷಣಗಳಲ್ಲಿಯೇ ಆಸಕ್ತನಾಗಿ ಆದರ್ಶ ರಾಜನೆನಿಸಿದ. ಆನೇಕ ಯಜ್ಞಗಳನ್ನು ಮಾಡಿದ. ಪ್ರತೀ ಯಜ್ಞದಲ್ಲಿಯೂ ಅಪರಿಮಿತ ಸುವರ್ಣ ದಾನ ದಕ್ಷಿಣೆಗಳನ್ನು ನೀಡಿದ. ವೃದ್ಧನಾದ ಬಳಿಕ ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ ಮತ್ತೆ ಸೂಕರ ತೀರ್ಥಕ್ಕೆ ಬಂದ. ಅಲ್ಲಿಯ ರೂಪತೀರ್ಥದಲ್ಲಿ ನಿಂತು ತಪಸ್ಸನ್ನು ಮಾಡಿ ಮರಣ ಹೊಂದಿದ. ಬಳಿಕ ಸ್ವರ್ಗಲೋಕವನ್ನು ಸಾರಿದ. ಅಲ್ಲಿಯೂ ಮನ್ವಂತರ ಕಾಲ ಸುರಲೋಕದ ಸುಖೋಪಭೋಗಗಳನ್ನು ಅನುಭವಿಸಿ ಸ್ವರ್ಗದಿಂದ ಚ್ಯುತನಾದ. ಭೂಲೋಕದಲ್ಲಿ ತ್ರಿವೇಣೀ ಸಂಗಮದ ಹೃದಯಂಗಮಸ್ಥಾನದಲ್ಲಿ ಪ್ರತಿಷ್ಠಾನ ಎಂಬ ಪಟ್ಟಣದಲ್ಲಿ ಬುಧನ ಮಗನಾಗಿ ಜನಿಸಿದ. ಆ ಬುಧಕುಮಾರನಿಗೆ ಪುರೂರವ ಎಂದು ಪ್ರಸಿದ್ಧಿ ಆಯಿತು. ಅವನು ಪುರೂರವನಾಗಿ ಜನಿಸಿದಾಗ ಊರ್ವಶಿಯು ಅವನಿಗಾಗಿ

ಅಮರಾವತಿಯನ್ನು ತೊರೆದು ಮಹೀಮಂಡಲಕ್ಕೆ ಇಳಿದುಬಂದಳು ಪುರೂರವನ ಅಂತಃಪುರದ ಅರಸಿಯಾಗಿ ಕೆಲಕಾಲ ಇದ್ದು ಅವನಿಗೆ ನೆಲದಲ್ಲಿಯೇ ನಾಕಲೋಕದ ಸುಖ ಸೌಭಾಗ್ಯಗಳನ್ನು ತಂದುಕೊಟ್ಟಳು. ಹೀಗೆ ಪೂರ್ವ ಕಾಲದಲ್ಲಿ ಸತ್ಯತಪ ಎಂಬ ಬ್ರಾಹ್ಮಣನು ಸುಪ್ರಸಿದ್ಧವಾದ ಈ ರೂಪ ತೀರ್ಥದಲ್ಲಿಮಿಂದು ವಿಷ್ಣುವಿನ ಆರಾಧನೆ ಮಾಡಿದ್ದರಿಂದ ಜನ್ಮಾಂತರದಲ್ಲಿಯೂ ವಿಷ್ಣುವಿನ ಉಪಾಸನೆಯನ್ನು ಮಾಡಿದ್ದರಿಂದ ಭೂಲೋಕದಲ್ಲಿಯೂ ನಾಕದಲ್ಲಿಯೂ ಊರ್ವಶೀ ಸಂಗ ಸುಖ ಹೊಂದಿ ಆನಂದದಿಂದ ವಿಹಾರಗೈದು ಕೊನೆಗೆ ಮುಕ್ತಿ ಹೊಂದಿದ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿದುದು*

—o—

## ವಿಷ್ಣುಮಾಯೆಯ ಎರಡು ದೃಷ್ಟಾಂತಗಳು — ಅಧ್ಯಾಯ - ೪೮

**ಮುನಿಗಳು:-** ಪೂಜ್ಯರೇ, ಏಕಾದಶಿಯ ದಿನ ರಾತ್ರಿ ಜಾಗರದಲ್ಲಿ ಕೃಷ್ಣನ ಕಥೆಯನ್ನು ಗಾಯನ ರೂಪದಿಂದ ಹಾಡುವದರಿಂದ ಚಾಂಡಾಲನು ದಿವ್ಯಗತಿಯನ್ನು ಹೊಂದಿದ ಸಮಾಚಾರವನ್ನು ನಿಮ್ಮ ಮುಖದಿಂದ ನಾವು ಕೇಳಿದೆವು. ಆದರೆ ವಿಷ್ಣುವಿನಲ್ಲಿ ಭಕ್ತಿಯು ಯಾವ ಪುಣ್ಯ, ತಪಸ್ಸು ಕರ್ಮಗಳಿಂದುಂಟಾಗುವದೋ ಈಗ ಅದನ್ನು ತಮ್ಮ ಮುಖದಿಂದ ಕೇಳಲು ಬಯಸಿದ್ದೇವೆ.

**ವೇದವ್ಯಾಸ:-** ಮುನಿಶ್ರೇಷ್ಠರೆ, ಶ್ರೀಕೃಷ್ಣನಲ್ಲಿ ಮಾಡುವ ಭಕ್ತಿಯು ಪುರುಷರಿಗೆ ಮಹಾ ಫಲಪ್ರದ. ಈ ಘೋರತರವಾದ ಸಂಸಾರವು ಮಾನವರಿಗೆ ಅಸಂಖ್ಯ ದುಃಖಗಳ ತವರು. ಜೀವಿಯು ಅನೇಕ ಸಹಸ್ರಜನ್ಮಗಳಲ್ಲಿ ಪಶು, ಪಕ್ಷಿ, ಖಗ, ಮೃಗ, ಕ್ರಿಮಿಕೀಟನಾಗಿ ಜನಿಸಿ ಸಾವಿರಾರು ಜನ್ಮಗಳ ಅನಂತರ ಪುಣ್ಯದಿಂದ ಮನುಷ್ಯ ಜನ್ಮವನ್ನು ಹೊಂದುತ್ತಾನೆ. ಅನೇಕಾನೇಕ ಮಾನವಜನ್ಮಗಳ ಅನಂತರ ಬ್ರಾಹ್ಮಣತ್ವವನ್ನು ಹೊಂದುತ್ತಾನೆ. ಅದರಲ್ಲಿಯೂ ಅವನಿಗೆ ಸುಕೃತ ವಿಶೇಷವು ಇದ್ದರೆ ಮಾತ್ರ ಧರ್ಮಬುದ್ಧಿಯು ಹುಟ್ಟುತ್ತದೆ. ಜನ್ಮಜನ್ಮಾಂತರಗಳಲ್ಲಿ ಅವನು ಮಾಡಿದ ಸಂಚಿತ ಪಾಪರಾಶಿ ಕ್ಷೀಣವಾಗುವ ವರೆಗೆ ವಿಶ್ವವ್ಯಾಪಿಯಾದ ಹಾಗು ಸರ್ವಾಂತರ್ಯಾಮಿಯಾದ ವಾಸುದೇವನಲ್ಲಿ ಭಕ್ತಿಯು ಹುಟ್ಟುವದಿಲ್ಲ. ಮನುಷ್ಯನು ಕಾಯಾ-ವಾಚಾ-ಮನಸಾ ದೇವತಾರಾಧನೆ ಮಾಡಿದರೆ ಯಜ್ಞ ಯಾಗಾದಿಗಳನ್ನು ಆಚರಿಸಿದರೆ, ಅಗ್ನಿಯಲ್ಲಿ ಭಕ್ತಿಯು ಹುಟ್ಟುವುದು. ಅಗ್ನಿದೇವನು ಪ್ರೀತನಾದರೆ ಅವನ ದಯೆಯಿಂದ ಸೂರ್ಯನಲ್ಲಿ ಭಕ್ತಿಭಾವವು ಸ್ಫುರಿಸುವದು. ಸೂರ್ಯನ ನಿರಂತರ ಸೇವೆಯಿಂದ ಅವನು ಪ್ರಸನ್ನನಾಗಿ ಶಂಕರನಲ್ಲಿ ಭಕ್ತಿಭಾವವನ್ನು ದಯಪಾಲಿಸುವನು. ವಿಧಿಪೂರ್ವಕವಾಗಿ ಶಂಕರನ ಆರಾಧನೆಯನ್ನು ಭಕ್ತಿಯಿಂದ ಮಾಡಿದರೆ ಆ ಪಾರ್ವತೀಪತಿಯ ಪರಿತುಷ್ಟನಾಗಿ ದೇವೋತ್ತಮನಾದ ಶ್ರೀಹರಿಯಲ್ಲಿ ಭಕ್ತಿಭಾಗ್ಯವನ್ನು ದಯಪಾಲಿಸುವನು. ಸರ್ವಲೋಕಗಳ ಒಡೆಯನೂ ದೇವತಾ ಸಾರ್ವಭೌಮನೂ ಆದ ಆ ವಾಸುದೇವನನ್ನು ಮನುಷ್ಯನು ಪರಾತ್ಪರ ಪರಂಜ್ಯೋತಿ ರೂಪನಾದ ಸಾಕ್ಷಾತ್ ಪರಮಾತ್ಮ ಎಂಬ ಬುದ್ಧಿಯಿಂದ ಆರಾಧನೆಮಾಡಿದರೆ ಆಗ ಶ್ರೀಹರಿಯು ಆ ಮನುಷ್ಯನಿಗೆ ಈ ಲೋಕದಲ್ಲಿರುವವರೆಗೆ ಸಕಲ ವಿಧವಾದ ಭೋಗ ಭಾಗ್ಯವನ್ನು ಕರುಣಿಸಿ ಕೊನೆಗೆ ಮೋಕ್ಷವನ್ನು ಕೂಡ ದಯಪಾಲಿಸುವನು.

**ಋಷಿಗಳು:-** ಪೂಜ್ಯರಾದ ವೇದವ್ಯಾಸರೆ, ವಿಷ್ಣುಭಕ್ತರಾಗದೇ ಇದ್ದ ಜನರು ಶ್ರೀಹರಿಯನ್ನು ಏಕೆ ಪೂಜೆ ಮಾಡುವದಿಲ್ಲ? ಅದರ ಕಾರಣವೇನು? ಹೇಳಿರಿ.

**ವೇದವ್ಯಾಸ:-** ಮುನಿಗಳೇ, ಈ ಜಗತ್ತಿನಲ್ಲಿ ದೈವೀಪ್ರಕೃತಿಯವರು ಆಸುರೀ ಪ್ರಕೃತಿಯವರು ಎಂದು ಎರಡು ಸ್ವಭಾವದ ಜನರು ಇರುತ್ತಾರೆ. ದೈವೀ ಪ್ರಕೃತಿಯ ಸುಸ್ವಭಾವಿಗಳಾದ ಜನರು ಶ್ರೀಹರಿಯನ್ನು ತಪ್ಪದೇ ಪೂಜಿಸುತ್ತಾರೆ. ಆದರೆ ಆಸುರೀ ಪ್ರಕೃತಿಯ ಜನರು ಅಜ್ಞಾನದಿಂದ ಬುದ್ಧಿಭಾವ ಶೂನ್ಯರಾಗಿ ಹರಿಯಲ್ಲಿ ಭಕ್ತಿ ಮಾಡದೇ ವಿಷ್ಣುವನ್ನು ದ್ವೇಷಿಸುತ್ತಾರೆ. ಅವರು ಎಂದೂ ಆ ಭಗವಂತನನ್ನು ಹೊಂದುವದಿಲ್ಲ. ಅವರು ಅಧೋಗತಿಯನ್ನು ಹೊಂದಿ ಹರಿದ್ವೇಷಿಗಳು ಅಂಧತಮಸ್ಸಿನಲ್ಲಿ ಕೊಳೆಯುತ್ತಾರೆ.

ಮುನೀಶ್ವರರೇ, ಆ ಭಗವನ್ಮಾಯೆಯು ದೇವದಾನವರಿಂದ ತಿಳಿಯಲು ಅಶಕ್ಯವಾಗಿದೆ. ಪುಣ್ಯ ಮಾಡದೇ ಇರುವ ಪಾಪಿಗಳು ವಿಷ್ಣು ಮಾಯೆಯಿಂದಲೇ ಮೋಹಿತರಾಗುತ್ತಾರೆ.

**ಮುನಿಗಳು:-** ಪೂಜ್ಯರೆ, ಆ ಭಗವನ್ಮಾಯೆಯು ಹೇಗಿದೆ? ಅದನ್ನು ತಿಳಿಯಲಿಕ್ಕೂ ಅದನ್ನು ದಾಟಲಿಕ್ಕೂ ಮಾನವರಿಗೆ ಏಕೆ ಶಕ್ಯವಾಗುತ್ತಿಲ್ಲ?

**ವೇದವ್ಯಾಸ:-** ವಿಪ್ರೋತ್ತಮರೆ, ಆ ಹರಿಯ ಮಾಯೆಯು ನಿಜವಾಗಿಯೂ ದುಸ್ತರ. ಮತ್ತು ಅವನದಯೆ ಇಲ್ಲದೆ ಅದನ್ನು ಯಾರೂದಾಟಲಾರರು, ಅರಿಯಲಾರರು. ಈ ವಿಷಯದಲ್ಲಿ ನಾರದರಂಥ ಮಹಾಜ್ಞಾನಿಗಳೂ ಕೂಡ ವಿಡಂಬಿತರಾಗಿದ್ದಾರೆ. ಆ ಸಮಾಚಾರವನ್ನು ನಿಮಗೆ ಹೇಳುವೆನು ಕೇಳಿರಿ.

ಪೂರ್ವಕಾಲದಲ್ಲಿ ಆಗ್ನೀಧ್ರ ಎಂಬ ಸುಪ್ರಸಿದ್ಧನಾದ ಮಹಾರಾಜನು ಇದ್ದನು. ಅವನಿಗೆ ಕಾಮದಮನ ಎಂಬ ಹೆಸರಿನ ಧರ್ಮಿಷ್ಠನಾದ ಶ್ರೇಷ್ಠ ಪುತ್ರನು ಇದ್ದನು. ಕ್ಷಮೆಯೇ ಅವನ ಶೀಲ. ತಾಯಿ ತಂದೆಗಳ ಸೇವೆಯೇ ಅವನ ಜೀವನದ ಮುಖ್ಯಗುರಿ. ಪ್ರಜೆಗಳನ್ನು ಪುತ್ರರಂತೆ ರಕ್ಷಿಸುವದೇ ಅವನ ಜೀವನದ ಮುಖ್ಯ ಉದ್ದೇಶ. ಸತ್ಕಾರ್ಯಗಳನ್ನು ಅನುಷ್ಠಾನ ಮಾಡುವದರಲ್ಲಿ ಅವನು ದಕ್ಷ. ಪ್ರಜಾಹಿತದಲ್ಲಿ ಬದ್ಧದೀಕ್ಷ. ಅವನಿಗೆ ವೇದದಲ್ಲಿ ವೈದುಷ್ಯ ಶಾಸ್ತ್ರದಲ್ಲಿ ಅಗಾಧ ಪಾಂಡಿತ್ಯ. ತಂದೆ ಆಗ್ನೀಧ್ರನು ಪ್ರಾಯಕ್ಕೆ ಬಂದ ಆ ಪುತ್ರನಿಗೆ ಮದುವೆ ಮಾಡಬೇಕೆಂದು ಹವಣಿಸಿದ. ಆದರೆ ಆ ಕಾಮದಮನನಿಗೆ ಮದುವೆ ಎಂದರೇ ತಲೆಬೇನೆ. ತಂದೆಯು ವಿವಾಹದ ಸೂಚನೆಯನ್ನು ಮುಂದಿಟ್ಟಾಗಲೆಲ್ಲ ಅವನು ಏನಾದರೂ ನೆಪ ಹೇಳಿ ಆ ವಿವಾಹ ಸಂದರ್ಭವನ್ನು ತಪ್ಪಿಸಿಬಿಡುತ್ತಿದ್ದ. ಕೊನೆಗೆ ಒಂದು ದಿನ ತಂದೆಯು ಅವನನ್ನು ಗಟ್ಟಿಯಾಗಿ ಹಿಡಿದು ಕೇಳಿದ ''ಪುತ್ರ, ನೀನು ಪ್ರಬುದ್ಧನಾಗಿರುವೆ. ಈಗ ನೀನು ವಿವಾಹಕ್ಕೆ ಯೋಗ್ಯನಾಗಿರುವೆ. ಮದುವೆಯನ್ನು ಏಕೆ ಒಲ್ಲೆ ಎನ್ನುತ್ತಿರುವೆ? ನಾನು ನಿನ್ನ ಹಡೆದ ತಂದೆಯಷ್ಟೇ! ಪಿತೃವಾಕ್ಯವನ್ನು ಪರಿಪಾಲಿಸುವದು ಪುತ್ರನ ಮುಖ್ಯಕರ್ತವ್ಯ. ನೀನು ಮದುವೆಯಾಗದಿದ್ದರೆ ನಮ್ಮ ಪಿತೃಗಳು ನರಕದಲ್ಲಿ ಬೀಳಬೇಕಾಗುವದು ಆದುದರಿಂದ ನೀನು ಈಗ ನನ್ನ ವಚನವನ್ನು ನಡೆಸು, ಮದುವೆ ಮಾಡಿಕೋ. ಮಕ್ಕಳನ್ನು ಪಡೆ, ಪಿತೃಪರಂಪರೆಯನ್ನು ಉದ್ಧರಿಸು.

**ಕಾಮದಮನ:-** ಪೂಜ್ಯನಾದ ತಂದೆಯೇ, ನಾನು ವಿಷ್ಣು ಭಕ್ತಿಯನ್ನು ನನ್ನ ಜೀವನದ ವ್ರತ ಎಂದು ಅಂಗೀಕರಿಸಿದ್ದೇನೆ. ನೀವು ನನಗೆ ಕಾಮದಮನ ಎಂದು ಹೆಸರನ್ನು ಇಟ್ಟಿರುವಿರಲ್ಲವೆ! ಕಾಮನನ್ನು ಗೆದ್ದವ ಎಂದು ಆದರ ಅರ್ಥ. ನನ್ನ ಹೆಸರಿಗೆ ತಕ್ಕಂತೆ

ಭಗವಂತನ ನಾಮಭಕ್ತಿಯನ್ನು ಹಿಡಿದಿದ್ದೇನೆ. ತಂದೆಯೆ, ನಾನು ಈ ಮೊದಲು ಸಾವಿರಾರು ಜನ್ಮಗಳನ್ನು ಎತ್ತಿದ್ದೇನೆ. ಸಹಸ್ರಾರು ಮುಪ್ಪು ಮರಣಗಳನ್ನು, ಮಡದಿ ಮಕ್ಕಳ ಸಂಯೋಗ ವಿಯೋಗಗಳನ್ನೂ ಅನುಭವಿಸಿದ್ದೇನೆ. ನಾನು ಹಿಂದೆ ಹಾವು ಖಗ, ಮೃಗ, ಪಶು, ಪಕ್ಷಿ, ಗಂಧರ್ವ, ಕಿನ್ನರ, ಯಕ್ಷರಾಕ್ಷಸಾದಿ ಯೋನಿಗಳಲ್ಲಿ ಜನಿಸಿ, ಅನೇಕಾನೇಕ ಜನ್ಮಗಳಲ್ಲಿ ಹುಟ್ಟಿ ಸಾವುನೋವು ನಲಿವುಗಳನ್ನು ಕಂಡು ಉಂಡು ಬಂದಿದ್ದೇನೆ. ನನಗೆ ಈಜನ್ಮದ ಹಿಂದೆ ಮೂರನೇ ಜನ್ಮದಲ್ಲಿ ಸಂಭವಿಸಿದ ಒಂದು ಘಟನೆಯನ್ನು ಹೇಳುತ್ತೇನೆ ಕೇಳಿರಿ.

ನಾನು ಮೊದಲು ಗಂಧರ್ವ, ಕಿನ್ನರ, ವಿದ್ಯಾಧರ, ಉರಗ, ಖೇಚರ ಮುಂತಾದ ನಾನಾ ಯೋನಿಗಳಲ್ಲಿ ಜನಿಸಿ, ಮರಣಿಸಿ, ಕೊನೆಗೆ ಮಾನವ ವಂಶದಲ್ಲಿ ''ಸುತಪಾ'' ಎಂಬ ಮಹರ್ಷಿಯಾಗಿ ಜನಿಸಿದೆನು. ಆ ಜನ್ಮದಲ್ಲಿ ಸುದೈವದಿಂದ ನನಗೆ ತ್ರಿಲೋಕಪತಿಯಾದ ಮಧುಸೂದನನಲ್ಲಿ ನಿಶ್ಚಲವಾದ ಭಕ್ತಿಯು ಉಂಟಾಯಿತು. ಬಗೆಬಗೆಯ ವ್ರತ ಉಪವಾಸ-ಆರಾಧನೆ-ಉಪಾಸನೆಗಳಿಂದ ಆ ಭಗವಂತನನ್ನು ಭಕ್ತಿಭರದಿಂದ ನಾನು ಸಂತೋಷಗೊಳಿಸಿದೆ. ನನ್ನ ಅತ್ಯರ್ಥ ಭಕ್ತಿಯಿಂದ ಪರಿತುಷ್ಟನಾದ ಆ ಪರಮಾತ್ಮನು ಶಂಖ, ಚಕ್ರ ಗದಾಧಾರಿಯಾಗಿ ಗರುಡನನ್ನೇರಿಕೊಂಡು ನಾನಿದ್ದಲ್ಲಿಗೇ ಬಂದ. ''ವರವನ್ನು ಬೇಡಿಕೋ, ನೀನು ಬೇಡಿದ್ದನ್ನು ನೀಡುತ್ತೇನೆ'' ಎಂದು ಹೇಳಿದ.

ಆಗ ನಾನು ಕೈಮುಗಿದೆ. ಪ್ರಣತನಾಗಿ ಧೈರ್ಯದಿಂದ ಕೇಳಿಕೊಂಡೆ ''ದೇವೇಶನಾದ ಕೇಶವ ನೀನು ನನ್ನ ಮೇಲೆ ಸುಪ್ರಸನ್ನನಾಗಿದ್ದರೆ ನಿನ್ನ ಶ್ರೇಷ್ಠವಾದ ಮಾಯೆಯನ್ನು ನನಗೆ ತೋರಿಸು. ವಿಷ್ಣುವಿನ ಮಾಯಾ ಶಕ್ತಿಯನ್ನು ನೋಡಬೇಕೆಂದು ನನಗೆ ಬಯಕೆಯಾಗಿದೆ.

**ಶ್ರೀಹರಿ:-** ಭಕ್ತಬ್ರಾಹ್ಮಣ ಆ ನನ್ನ ಮಾಯೆಯನ್ನು ತೆಗೆದುಕೊಂಡು ಏನು ಮಾಡುವೆ! ತಿಳಿದುಕೊಂಡರೂ ಏನು ಪ್ರಯೋಜನ ಧರ್ಮ ಅರ್ಥಕಾಮಗಳಲ್ಲಿ ಒಂದನ್ನು ಕೇಳಿಕೋ ಅಥವಾ ಆರೋಗ್ಯ ಭಾಗ್ಯವನ್ನು ಬೇಡಿಕೋ ನೀನು ಬೇಡಿದ್ದನ್ನು ನೀಡುತ್ತೇನೆ. ಕೇಳಿದ್ದನ್ನು ಕೊಡುತ್ತೇನೆ.

ಈ ಮಾತನ್ನು ಕೇಳಿ ನಾನು ಮತ್ತೆ ಒತ್ತಾಯ ಪೂರ್ವಕವಾಗಿ ''ಸ್ವಾಮಿ ನನಗೆ ಮತ್ತೆ ಏನೂ ಬೇಡ. ನಿನ್ನ ಆ ಈಶ್ವರೀ ಮಾಯೆಯನ್ನು ದಯವಿಟ್ಟು ತೋರಿಸು'' ಎಂದು ಬೇಡಿಕೊಂಡೆ.

**ವಿಷ್ಣು:-** ವತ್ಸ, ನನ್ನ ಈ ಮಾಯೆಯನ್ನು ಯಾರೂ ತಿಳಿಯಲಾರರು. ಹಿಂದೆ ಒಮ್ಮೆ ದೇವರ್ಷಿಯಾದ ನಾರದನು ತನ್ನ ಭಕ್ತಿಭರಿತವಾದ ಆರಾಧನೆಯಿಂದ ನನ್ನನ್ನು ಒಲಿಸಿಕೊಂಡ. ಬೇಕಾದ ವರಬೇಡು ಎಂದು ನಾನು ನುಡಿದಾಗ ನಿನ್ನಂತೆ ಅವನಾದರೂ ನನ್ನ ಈಶ್ವರೀ ಮಾಯೆಯನ್ನು ಅರಿಯುವಂತೆ ಮಾಡು ಎಂದು ಆಗ್ರಹಪೂರ್ವಕವಾಗಿ ಬೇಡಿಕೊಂಡ. ಭಗವನ್ಮಾಯಾದರ್ಶನರೂಪವಾದ ವರವನ್ನು ಕೊಡು ಎಂದು ಬಾಯ್ದೆರೆದು ದೀನನಾಗಿ ಕೇಳಿಕೊಂಡ ಆಗ ನಾನು ನಾರದನಿಗೆ ತಥಾಸ್ತು ಎಂದು ಹೇಳಿ ''ಇಲ್ಲಿಯೇ ಮುಂದೆ ಇರುವ ಜಲಾಶಯದಲ್ಲಿ ಮುಳುಗುಹಾಕು'' ಎಂದು ಹೇಳಿದೆ.

ನನ್ನ ಆದೇಶದಂತೆ ನಾರದನು ಜಲಾಶಯದಲ್ಲಿ ಸ್ನಾನ ಮಾಡಿದಕೂಡಲೆ ಅವನು ಕನ್ಯೆಯಾಗಿ ಮಾರ್ಪಟ್ಟ ಕಾಶಿರಾಜ ಅವಳನ್ನು ತನ್ನ ಮಗಳೆಂದು ಸ್ವೀಕರಿಸಿದ. ಸುಶೀಲಾ ಎಂದು ಹೆಸರಿಟ್ಟ. ಸುಶೀಲೆ ಉಪವರಳಾದಳು. ಹರೆಯದ ಚಲುವು ಅವಳ ಅಂಗಾಂಗ ಗಳಲ್ಲಿ ಸೌಂದರ್ಯದ ಮುದ್ರೆಯನ್ನು ಒತ್ತಿತು. ಆಗ ಕಾಶಿರಾಜನು ಆ ತನ್ನ ಸುಶೀಲಾ

ಎಂಬ ಮಗಳನ್ನು ವಿದರ್ಭರಾಜನ ಪುತ್ರನಾದ ಸುಧರ್ಮನಿಗೆ ಮದುವೆಮಾಡಿಕೊಟ್ಟನು. ಸುಧರ್ಮ-ಸುಶೀಲಾದಂಪತಿಗಳ ಕಾಮಕೇಲಿಯ ಪ್ರೇಮಲೀಲಾ ವಿಲಾಸಗಳು ಸರಸ ಸುಂದರವಾಗಿ ನಡೆದವು. ವಿದರ್ಭರಾಜ ಮರಣ ಹೊಂದಿದ. ಸ್ವಯಂ ಸಾರ್ವಭೌಮನಾದ ಸುಧರ್ಮನು ತನ್ನ ಶೌರ್ಯಪರಾಕ್ರಮದಿಂದ ತನ್ನ ಸಮಗ್ರಸಾಮ್ರಾಜ್ಯವನ್ನು ಸಮರ್ಥ ರೀತಿಯಿಂದ ಆಳತೊಡಗಿದ. ಮುಂದೆ ಒಂದು ಸಮಯ. ಸುಶೀಲೆಯ ತಂದೆಯಾದ ಕಾಶೀರಾಜನಿಗೂ ಮತ್ತು ಸುಧರ್ಮನಿಗೂ ಯಾವುದೋ ಒಂದು ಕಾರಣಕ್ಕಾಗಿ ವೈರಸ್ಯ ಬೆಳೆಯಿತು. ವಿರಸ ವಿಕೋಪಕ್ಕೆ ಹೋಯಿತು. ಯುದ್ಧದಲ್ಲಿ ಪರ್ಯವಸಾನವಾಯಿತು. ಆ ಘೋರವಾದ ಸಮರದಲ್ಲಿ ವಿದರ್ಭರಾಜನಾದ ಸುಧರ್ಮನೂ ಅದರಂತೆ ಕಾಶೀಪತಿಯೂ ಇಬ್ಬರೂ ಮಡಿದುಹೋದರು. ಅವರ ಮಕ್ಕಳೂ, ಮೊಮ್ಮಕ್ಕಳೂ, ಮಿತ್ರರೂ ಎಲ್ಲರೂ ಧಾರಾತೀರ್ಥದಲ್ಲಿ ದೇಹವಿಟ್ಟರು. ಪರಮ ಪತಿವ್ರತೆಯಾದ ಸುಶೀಲೆಯು ತಂದೆಯನ್ನೂ ಪುತ್ರನನ್ನೂ, ಪತಿಯನ್ನೂ, ಸೋದರನನ್ನು ಎಲ್ಲ ಬಂಧುಬಾಂಧವರನ್ನು ಏಕ ಕಾಲದಲ್ಲಿ ಸಂಗ್ರಾಮದಲ್ಲಿ ಕಳೆದುಕೊಂಡು ಅತ್ಯಂತ ದುಃಖಾರ್ತಳಾದಳು. ತನ್ನ ತವರು ಮನೆ ಹಾಗೂ ಅತ್ತೆಮನೆಯ ಎರಡೂ ಕುಟುಂಬಗಳಲ್ಲಿ ನಡೆದ ಕರಾಳಮೃತ್ಯುವಿನ ದುರಂತತಾಂಡವ ವನ್ನು ಕಂಡು ಅವಳ ಎದೆ ಒಡೆದುಹೋಯಿತು. ಜೀವನದಲ್ಲಿಯೇ ಜಿಗುಪ್ಸೆ ಹುಟ್ಟಿತು. ಅವಳು ಸ್ಮಶಾನದಲ್ಲಿ ದೊಡ್ಡದಾದ ಚಿತೆಯನ್ನು ಹೊತ್ತಿಸಿ ಉರಿಯುತ್ತಿರುವ ಆ ಚಿತಾಗ್ನಿಯಲ್ಲಿ ತನ್ನ ತಂದೆ ಹಾಗೂ ಪತಿಯ ಶವಗಳನ್ನು ತೊಡೆಯಮೇಲೆ ಇಟ್ಟುಕೊಂಡು ಅಗ್ನಿಪ್ರವೇಶ ಮಾಡಿದಳು. ಧಗಧಗಿಸುವ ಚಿತೆಯ ಪ್ರಜ್ವಲಿತವಾದ ವಹ್ನಿಯು ಮೂವರನ್ನೂ ಕಬಳಿಸಿ ಸಂದಗ್ಧರನ್ನಾಗಿ ಮಾಡಿತು.

ಆ ಚಿತಾಗ್ನಿಯು ಆ ಮೂವರ ದೇಹಗಳನ್ನು ಸುಡುತ್ತಲಿರುವಾಗಲೇ ಒಂದು ಚಮತ್ಕಾರ ನಡೆಯಿತು. ದಂದಹಿಸಿ ಉರಿಯುತ್ತಿರುವ ಸ್ಮಶಾನದ ಆ ಚಿತೆಯ ಅಗ್ನಿಯು ಒಮ್ಮೆಲೆ ಒಂದು ತಿಳಿನೀರಿನ ಸರೋವರವಾಗಿ ಮಾರ್ಪಟ್ಟಿತು. ಅದರಲ್ಲಿಯ ಬೆಂಕಿಯು ಸ್ಫಟಿಕದಂತೆ ನಿರ್ಮಲವಾಗಿ ಹೊಳೆಯತೊಡಗಿತು. ಅಗ್ನಿದಗ್ಧವಾದಂತೆ ತೋರುತ್ತಿರುವ ಸುಶೀಲೆಯ ಶರೀರವು ಅಕ್ಷತವಾಗಿ ಸುರಕ್ಷಿತವಾಗಿದ್ದು ಸುಡದೆ ಸುವರ್ಣಕಾಂತಿಯಿಂದ ಬೆಳಗತೊಡಗಿತು. ಸುಶೀಲೆಯು ಆ ಅಗ್ನಿ ಸರೋವರದಿಂದ ಹೊರ ಬಂದಕೂಡಲೆ ಅವಳ ಸುಶೀಲಾ ದೇಹವು ಹೋಗಿ ಅವಳ ಮೊದಲಿನ ತನ್ನ ನಿಜವಾದ ನಾರದರ ದೇಹವು ಬಂದಿತು. ಹೊರಬಿದ್ದು ನಾರದರು ತಮ್ಮ ನಿಜರೂಪದಿಂದ ಎದ್ದುಬಂದರು, ಯಥಾಪೂರ್ವವಾಗಿ ನಿಜನಾರದ ಸ್ವರೂಪವನ್ನು ಪಡೆದ ಅವನ ಎದುರು ಸಾಕ್ಷಾತ್ ಶ್ರೀಮನ್ನಾರಾಯಣನು ಶಂಖ, ಚಕ್ರ ಗದಾಧಾರಿಯಾಗಿ ನಗುತ್ತ ನಿಂತುಕೊಂಡ ಮತ್ತು ಮಂದಹಾಸದಿಂದ ಸುಂದರವಾದ ಮುಖದಿಂದ ನಾರದರನ್ನು ಕುರಿತು ಹೇಳಿದ.

**ವಿಷ್ಣು**:- ''ನಾರದ, ನಿನ್ನ ಮಗನು ಯಾರು? ಗಂಡ ಯಾರು? ಯಾರು ಸತ್ತರು ಎಂದು ಶೋಕಮಾಡುತ್ತಿರುವೆ? ಎಲ್ಲಿಯ ಮಗ? ಎಲ್ಲಿಯ ಗಂಡ? ಎಲ್ಲಿ ಇದ್ದಿತು ಆ ನಿನ್ನ ಪರಿವಾರ, ಈಗ ಎಲ್ಲಿ ಹೋಯಿತು? ಅದು ಎಲ್ಲಿಯಾದರೂ ಹೋಗಲಿ, ನಿನ್ನ ಬುದ್ಧಿಯು ಎಲ್ಲಿ ಹೋಯಿತು. ಮೊದಲು ನೋಡಿಕೋ'' ಎಂದು ಹೇಳಿದನು.

ನಾಚಿಕೆಯಿಂದ ನಾರದ ಅವನತಮುಖನಾದನು. ಆಗ ನಾನು ಮತ್ತೆ ಅವನಿಗೆ ತಿಳಿಸಿ ಹೇಳಿದೆ ''ವತ್ಸ. ನೀನೇಕೆ! ನಿನ್ನ ಅಪ್ಪ ಬ್ರಹ್ಮ, ಅವನ ಮಗ ರುದ್ರ, ಅಥವಾ ಇಂದ್ರ, ಚಂದ್ರ, ಯಮ ಯಾವದೇವತೆಗಳೂ ನನ್ನ ಮಾಯೆಯನ್ನು ತಿಳಿಯಲಾರರು. ನೀನೆಂತು ತಿಳಿಯಬಲ್ಲೆ''!

**ನಾರದ:-** ಭಗವನ್, ನಿನಗೆ ನಮೋನಮಃ ನಿನ್ನ ದುರ್ಜ್ಞೇಯವಾದ ಮಾಯೆಗೆ ನಮಸ್ಕಾರ. ನನಗೆ ನಿನ್ನಲ್ಲಿ ಅವಿಚ್ಛಿನ್ನವಾದ ಭಕ್ತಿ ಕೊಡು. ಮತ್ತು ನಿನ್ನ ನಿರಂತರ ನಾಮ ಸ್ಮರಣೆಯು ನನ್ನ ನಾಲಿಗೆಯ ಮೇಲೆ ಇರಲಿ. ನಾನು ಬಯಸಿದಾಗಲೆಲ್ಲ ನಿನ್ನ ದಿವ್ಯದರ್ಶನ ವನ್ನು ನನಗೆ ಕರುಣಿಸು. ಮಹಾಪ್ರಭುವೆ ನಾನು ಕಾಶಿರಾಜಕುಮಾರಿಯಾಗಿ ವಿದರ್ಭರಾಜನ ಮಡದಿಯಾಗಿ ಇದ್ದಾಗ ಪತಿ, ಪಿತ, ಪುತ್ರರ ಶೋಕದಿಂದ ವ್ಯಥೆಗೊಂಡು ವಿಹ್ವಲಳಾಗಿ ಯಾವ ಸ್ಥಳದಲ್ಲಿ ಚಿತೆಯನ್ನು ಏರಿದೆನೋ ಆ ಸ್ಥಳವು ದಿವ್ಯ ತೀರ್ಥವಾಗಲಿ. ಅಲ್ಲಿ ಬ್ರಹ್ಮ ರುದ್ರರೂ ಸನ್ನಿಹಿತರಾಗಲಿ.''

ನಾರದನ ಈ ಬೇಡಿಕೆಯನ್ನು ಭಗವಂತನು ಕೂಡಲೇ ಮನ್ನಿಸಿ ಹೇಳಿದ ''ನಾರದ ನಿನ್ನ ಅಪೇಕ್ಷೆಯಂತೇ ಆಗಲಿ. ನೀನು ಚಿತಾರೋಹಣ ಮಾಡಿದ ಸ್ಥಳದಲ್ಲಿ ನಾನು ನೆಲಸುತ್ತೇನೆ. ಆದರ ಉತ್ತರಭಾಗದಲ್ಲಿ ಮಹೇಶ್ವರ ನೆಲಸುವ, ಮುಂದೆ ಮಹಾದೇವನು ಬ್ರಹ್ಮನ ಐದನೇ ತಲೆಯನ್ನು ಕತ್ತರಿಸಿದಾಗ ಆ ತಲೆಯು ಶಿವನ ಕೈಗೆ ಅಂಟಿಕೊಳ್ಳುವದು. ಎಲ್ಲಿ ಹೋದರೂ ಅವನ ಕರವನ್ನು ಆ ಕಪಾಲವು ಬಿಡುವದಿಲ್ಲ. ಕೊನೆಗೆ ಇಲ್ಲಿ ಬಂದು ಮಹೇಶ್ವರನು ಸ್ನಾನ ಮಾಡಿದಾಗ ಅವನ ಕೈಗೆ ಅಂಟಿಕೊಂಡ ಬ್ರಹ್ಮಕಪಾಲವು ನೆಲದ ಮೇಲೆ ಬಿದ್ದುಹೋಗುವದು. ಅಂದಿನಿಂದ ಅದಕ್ಕೆ ಕಪಾಲಮೋಚನ ತೀರ್ಥ ಎಂದು ಹೆಸರು ಬರುವದು. ಹರಿಹರರಿಬ್ಬರೂ ನೆಲೆನಿಂತ ಈ ಕಪಾಲ ಮೋಚನ ತೀರ್ಥದಲ್ಲಿ ಸ್ನಾನಮಾಡಿದವರು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತರಾಗುತ್ತಾರೆ. ಈ ತೀರ್ಥದಲ್ಲಿ ನಿಂತು ಯಾವಜ್ಜನ್ಮ ತಪಂಗೈದು ಇದರತೀರದಲ್ಲಿ ದೇಹತ್ಯಾಗ ಮಾಡುವವರಿಗೆ ಕೊನೆಗಾಲದಲ್ಲಿ ಮರಣಸಮಯ ಸನ್ನಿಹಿತವಾದಾಗ ಮಹಾದೇವರು ಬಂದು ತಾರಕ ಮಂತ್ರವನ್ನು ಉಪದೇಶಿಸುತ್ತಾರೆ.'' ಹೀಗೆ ತನ್ನ ಮಾಯೆಯನ್ನು ತಿಳಿಯಬಯಸಿದ ಕಾಮದಮನನಿಗೆ ಭಗವಂತನು ನಾರದನ ಕೌತುಕದ ವೃತ್ತಾಂತವನ್ನು ಹೇಳಿ ''ನಿನಗೂ ನಾರದನಂತೆ ನನ್ನ ಮಾಯೆಯನ್ನು ನೋಡಬೇಕೆಂಬ ಆಸೆ ಇದ್ದರೆ ಈ ನೀರಿನಲ್ಲಿ ಅವಗಾಹನ ಸ್ನಾನ ಮಾಡು'' ಎಂದು ಹೇಳಿದ. ಆ ಕಾಮದಮನ ಬ್ರಾಹ್ಮಣನಿಗೆ ಹರಿಯ ಮಾಯೆಯನ್ನು ಏನಾದರೂ ನೋಡಲೇ ಬೇಕೆಂಬ ಉತ್ಕಟಇಚ್ಛೆ ಇದ್ದಿತು. ಅದರಿಂದ ಅವನು ಆ ನೀರಿನಲ್ಲಿ ಮುಳುಗಿ ಸ್ನಾನ ಮಾಡಿದನು. ಇದರಿಂದ ಅವನೂ ಕನ್ಯಾಭಾವವನ್ನು ಹೊಂದಿದ. ಅವನು ಮೊದಲು ಇದ್ದದ್ದು ಶ್ರೇಷ್ಠ ಸದ್ಬ್ರಾಹ್ಮಣ. ಈಗ ಕನ್ಯೆಯಾಗಿ ಹುಟ್ಟಿದ್ದು ಒಬ್ಬ ಚಂಡಾಲನ ಮನೆಯಲ್ಲಿ. ಜಾತಿಯಿಂದ ಚಾಂಡಾಲಳಾದರೂ ಚಲುವು ಅವಳ ಅಂಗಾಂಗಗಳಲ್ಲಿ ಸ್ಥಾಯೀ ಭಾವವಾಗಿತ್ತು. ಅವಳ ಚಿರಚಾರುತೆಯೊಂದಿಗೆ ಶೀಲಗುಣಗಳೂ ಸದಾಸಂವಲಿತವಾಗಿ ಇದ್ದುದರಿಂದ ಅವಳು ಜಗತ್ತಿನಲ್ಲಿಯೇ ಶೀಲವತಿ, ಗುಣವತಿ, ರೂಪವತಿ ಎಂದು ಪ್ರಸಿದ್ಧಳಾದಳು. ಪ್ರಾಯದ ವಸಂತವೈಭವವು ಅವಳ ಅಂಗಾಂಗಗಳ ಅಂಗಳದಲ್ಲಿ ಅರಳಿದಾಗ ಚಲುವು ಚಿರಂತನವಾಗಿ ಅವಳಲ್ಲಿ ತನ್ನ ಚಾರಿಮೆಯನ್ನು ಮೆರೆದಿತ್ತು. ಅವಳನ್ನು ಸುಬಾಹು ಎಂಬ ಚಾಂಡಾಲಪುತ್ರ ಮದುವೆಯಾದ. ಆದರೆ ಅವನು ರೂಪದಿಂದ ಅಷ್ಟಾವಕ್ರ, ಇವಳು ಸುರೂಪಿ. ಇವಳು ಅವನನ್ನು ಸೇರುತ್ತಿದ್ದಿಲ್ಲ ಅವನೋ ಇವಳನ್ನು ಕಂಡರೆ ಅಸಹ್ಯ ಪಟ್ಟು ಕೊಳ್ಳುತ್ತಿದ್ದ. ಅವರಿಬ್ಬರಲ್ಲಿ ಎಂದಿಗೂ ಹೊಂದಿಕೆ ಆಗಲಿಲ್ಲ. ಆದರೂ ಆ ಚಂಡಾಲ ದಂಪತಿಗಳಿಗೆ ಎರಡು ಗಂಡು, ಒಂದು ಹೆಣ್ಣು ಹುಟ್ಟಿದವು. ದುರ್ದೈವಕ್ಕೆ ಎರಡೂ ಗಂಡುಗಳು

ಹುಟ್ಟುಗುರುಡ. ಕನ್ಯೆಯು ಕೆಪ್ಪ, ಮೂಕ ಆದರಿಂದ ಅವಳು ಪ್ರತಿದಿನವೂ ಈ ಕೋಕಾನದಿಯ ತೀರಕ್ಕೆ ಬಂದು ತನ್ನ ದುರ್ದೈವಕ್ಕಾಗಿ ಅಳುತ್ತಿದ್ದಳು. ಚಂಡಾಲಗಂಡ, ಮಹಾಚಂಡ, ಮೊಂಡಭಂಡ ಗಂಡುಮಕ್ಕಳಿಬ್ಬರೂ ಅಂಧರು, ಮಂದರು. ಇದ್ದ ಒಬ್ಬ ಹೆಣ್ಣುಮಗಳು ಮೂಕಿ ಮತ್ತು ಕಿವುಡಿ. ಗಂಡುಮಕ್ಕಳಿಗೆ ಕಣ್ಣು ಕಾಣುವದಿಲ್ಲ. ಹೆಣ್ಣುಮಗಳಿಗೆ ಕಿವಿ ಕೇಳುವದಿಲ್ಲ. ಕಾಡುರೂಪದ ಪತಿಯು ಕಾಡು ಕಿರಾತನಂತಿದ್ದು ಯಾವಾಗಲೂ ಕಾಡುತ್ತಾನೆ. ಕಣ್ಣು ಕಿವಿ ಇಲ್ಲದ ಈ ಮಕ್ಕಳು ನನ್ನನ್ನು ಯಾವಾಗಲೂ ಪೀಡಿಸುತ್ತಾರೆ. ಇದು ಏನು ನನ್ನ ದುರ್ದೈವ ಎಂದು ತನ್ನ ಅಳಲನ್ನು ತೋಡಿಕೊಂಡು ಆ ಚಂಡಾಲಿನಿಯು ನದೀ ತೀರದಲ್ಲಿ ರೋದಿಸುತ್ತಿದ್ದಳು. ಆ ಮಕ್ಕಳೂ ಕೂಡ ಒಂದು ದಿನ ಅವಳು ನೀರು ತರಲೆಂದು ಬಿಂದಿಗೆಯನ್ನು ತೆಗೆದುಕೊಂಡು ನದಿಗೆ ಬಂದಳು, ನೀರಿನಲ್ಲಿ ಇಳಿದಳು, ಬಂದು ಮುಳುಗು ಹಾಕಿದಳು.

ಆ ಕೋಕಾತೀರ್ಥದಲ್ಲಿ ಅವಗಾಹನಸ್ನಾನ ಮಾಡಿದ ತಕ್ಷಣದಲ್ಲಿ ಅವಳಿಗೆ ತನ್ನ ಮೊದಲಿನ ಪುರುಷ-ರೂಪವು ಬಂದು ಬಿಟ್ಟಿತು. ಚಾಂಡಾಲ ಸ್ತ್ರೀಯ ಯೋನಿಯಿಂದ ಮುಕ್ತಳಾಗಿ ತನ್ನ ಸ್ನಾನಸಂಧ್ಯಾಧಿ ಕ್ರಿಯಾ ಕಲಾಪಗಳನ್ನು ಮಾಡುತ್ತ ಸುಶೀಲನಾಗಿ ಇರತೊಡಗಿದನು. ಇತ್ತ ಅವಳ ಪೂರ್ವಜನ್ಮದ ಚಂಡಾಲ ಗಂಡನು ನದಿಗೆ ಹೋದ. ಮಡದಿ ಬಹಳ ಹೊತ್ತಾದರೂ ಮನೆಗೆ ಮರಳಿ ಬರಲಿಲ್ಲವೆಂದು ಅವಳನ್ನು ನೋಡಲು ಕೋಕಾ ನದಿಗೆ ಹೋದನು. ನದಿ ತೀರದಲ್ಲಿ ಅವನ ಹೆಂಡತಿ ಇಲ್ಲ. ಅವರು ನೀರು ತರಲು ಎಂದು ಹಿಡಿದುಕೊಂಡ ಬಂದ ಬಿಂದಿಗೆಯು ಅಲ್ಲಿಯೇ ದಂಡೆಯ ಮೇಲೆಯೇ ಇದ್ದಿತು. ಬಿಂದಿಗೆ ಇದೆ. ಬಿಂದಿಗೆ ತಂದ ಭಾರ್ಯೆಯೇ ಇಲ್ಲ ಅಂದ ಬಳಿಕ ಅವಳು ನೀರಿನಲ್ಲಿಯೇ ಮುಳುಗಿ ಸತ್ತಿರಬಹುದು ಎಂದು ಅವನು ದೊಡ್ಡ ಧ್ವನಿ ತೆಗೆದು ಅಳತೊಡಗಿದನು. ಅನಂತರ ಅಲ್ಲಿಗೆ ಕುರುಡು ಮಕ್ಕಳು, ಕಿವುಡ ಮಗಳು ತಾಯಿಯನ್ನು ನೋಡಬೇಕೆಂದು ಓಡುತ್ತ ಬಂದರು. ತಾಯಿ ಇಲ್ಲ, ತಂದೆಯು ಹೆಂಡತಿಯನ್ನು ಕಳೆದುಕೊಂಡು ದುಃಖ ಪಡುತ್ತಿದ್ದಾನೆ. ಅದನ್ನು ನೋಡಿ ಆ ಮಕ್ಕಳಿಗೂ ಬಹಳ ದುಃಖವಾಯಿತು. ಬಹಳ ದುಃಖವಾಗಿ ಎದೆ ಎದೆ ಬಡೆದುಕೊಂಡು ಅಳತೊಡಗಿದವು. ಆಗ ಆ ಚಂಡಾಲನು "ನದೀ ತೀರದಲ್ಲಿ ಇದ್ದ ಬ್ರಾಹ್ಮಣನನ್ನು ಕೇಳಿದನು. "ಪೂಜ್ಯರೇ ಇಲ್ಲಿಗೆ ನೀರು ತರಬೇಕೆಂದು ಕೊಡಹಿಡಿದುಕೊಂಡು ಬಂದ ಒಬ್ಬ ಹೆಣ್ಣು ಮಗಳನ್ನು ನೋಡಿರುವಿರಾ? ಅವಳು ಹೊತ್ತುತಂದ ಕೊಡ ಈ ನದಿಯ ದಡದಲ್ಲಿಯೇ ಇದೆ. ಅವಳು ಮಾತ್ರ ಕಾಣುವದಿಲ್ಲ. ಅವಳು ಏನಾದಳು? ಎಲ್ಲಿ ಹೋದಳು? ನೀವು ನೋಡಿರುವಿರಾ ದಯವಿಟ್ಟು ತಿಳಿಸಿರಿ" ಎಂದು ಆರ್ತನಾಗಿ ಮತ್ತೆ ಮತ್ತೆ ಕೇಳಿದನು. ಆಗ ದಂಡೆಯಲ್ಲಿ ಕುಳಿತ ಆ ಬ್ರಾಹ್ಮಣರು ಹೇಳಿದರು. "ಇದೀಗ ಒಬ್ಬ ಹೆಣ್ಣು ಮಗಳು ಬಿಂದಿಗೆ ತೆಗೆದುಕೊಂಡು ಈ ನದೀ ತೀರಕ್ಕೆ ಬಂದಳು. ಅವಳು ಬಂದು ನದಿಯ ದಡದ ಮೇಲೆ ಕೊಡವನ್ನು ಇಟ್ಟು ನದಿಯಲ್ಲಿ ಪ್ರವೇಶ ಮಾಡಿದಳು. ಸ್ನಾನ ಮಾಡಿದಳು ಈ ಕೋಕಾ ನದಿಯ ನೀರಿನಲ್ಲಿ ಮುಳುಗು ಹಾಕಿದಳು. ನದಿಯಲ್ಲಿ ಮುಳುಗು ಹಾಕಿದವಳು ಮೇಲೆ ಏಳಲೇ ಇಲ್ಲ. ಇದಿಷ್ಟನ್ನು ನಾವು ಕಣ್ಣಿನಿಂದ ಸಾಕ್ಷಾತ್ತಾಗಿ ನೋಡಿದ್ದೇವೆ."

ಬ್ರಾಹ್ಮಣರ ಈ ಘೋರತರವಾದ ಮಾತನ್ನು ಕೇಳಿ ಆ ಚಂಡಾಲನು ಭಯಂಕರ ದುಃಖಾಕ್ರಾಂತನಾಗಿ ಆ ನದೀತೀರದಲ್ಲಿ ದೀನದೀನನಾಗಿ ಅಳತೊಡಗಿದನು. ಅವನ

ಮಕ್ಕಳು ರೋದಿಸತೊಡಗಿದವು. ಅದನ್ನು ನೋಡಿದಾಗ ಬ್ರಾಹ್ಮಣನಾಗಿ ಮಾರ್ಪಟ್ಟು ನಿಂತ ನನಗೆ ಕಾಮದಮನನಿಗೆ ಹಿಂದಿನ ಚಂಡಾಲಸ್ತ್ರೀ ಜನ್ಮದ ಸ್ಮರಣೆ ಬಂದು ದುಃಖವಾಯಿತು. ಹಿಂದಿನ ಜನ್ಮದಲ್ಲಿ ಅವನ ಹೆಂಡತಿಯಾಗಿದ್ದು ಈಗ ನಿಜರೂಪದ ವಿಪ್ರನಾಗಿ ನಿಂತುಕೊಂಡು ನಾನು ನನ್ನ ಜನ್ಮಾಂತರ ಪತಿಯಾದ ಚಾಂಡಾಲನನ್ನು ಸಂತೈಸತೊಡಗಿದೆ. ''ವ್ಯರ್ಥವಾಗಿ ಏಕೆ ರೋದನ ಮಾಡುವೆ? ನೀನು ಎಷ್ಟು ಅತ್ತರೂ ನಿನ್ನ ಆ ಸತ್ತು ಹೋದ ಮಡದಿಯು ಮರಳಿ ಬರಲಾರಳು. ಮೂರ್ಖತನದಿಂದ ವ್ಯರ್ಥವಾಗಿ ಅತ್ತರೆ ಏನು ಫಲ? ಏಕೆ ಶೋಕಿಸುವೆ?'' ಎಂದು ಕೇಳಿದೆ.

ನನ್ನ ರೂಪಾಂತರ ಹೊಂದಿದ ಈ ಜನ್ಮಾಂತರವನ್ನು ತಿಳಿಯದೇ ಇದ್ದ ಆ ಚಂಡಾಲನು ನನ್ನನ್ನು ಕುರಿತು ಮಾತನಾಡಿದ ''ಪುಣ್ಯಾತ್ಮಾ, ಇವು ಎರಡು ಕುರುಡು ಮಕ್ಕಳು, ಇವಳೊಬ್ಬಳು ಮೂಕ ಕನ್ಯೆಯು, ಇವರನ್ನು ನಾನು ಹೇಗೆ ರಕ್ಷಿಸಲಿ? ಎಂದು ತನ್ನ ಅಳಲನ್ನು ತೋಡಿಕೊಂಡ. ಸತ್ತ ಹೆಂಡತಿಯ ಸದ್ಗುಣ ನೆನಪಾಯಿತು. ಈಗ ಬುದ್ಧಿ ಬಂದಿತ್ತು. ಮತ್ತೆ ಅವನು ಮಡಿದ ಮಡದಿಯ ಗುಣಗಳನ್ನು ನೆನೆದು ಗೋಳಾಡತೊಡಗಿದ. ''ಸತ್ತ ನನ್ನ ಸತಿ ರೂಪದಿಂದಲೂ ಗುಣದಿಂದಲೂ ನಿಜವಾಗಿ ಸತಿಯೇ ಆಗಿದ್ದಳು ಅವಳನ್ನು ಇರುವವರೆಗೆ ಕಾಡಿ ಉರಿಸಿ ನದಿ ಬೀಳುವಂತೆ ಮಾಡಿದ ನಾನು ಮಾತ್ರ ಹುಟ್ಟಿನಿಂದಲೂ ಜಾತಿಯಿಂದಲೂ ದುಷ್ಟಸ್ವಭಾವದಿಂದಲೂ ಚಾಂಡಲನೇ ಆಗಿದ್ದೆ. ಆ ಮುತ್ತಿನಂಥ ಭಾರ್ಯೆಯನ್ನು ಕಳೆದುಕೊಂಡು ನಾನು ಬದುಕಿದ್ದರೂ ಫಲವೇನು? ಈ ಕುರುಡ, ಮೂಕ, ಕೆಟ್ಟಮಕ್ಕಳನ್ನು ಅವಳಿಲ್ಲದೇ ನಾನು ಹೇಗೆ ರಕ್ಷಣೆ ಮಾಡಬಲ್ಲೆನು? ಈ ಕುರುಡ ಮೂಕ ಮಕ್ಕಳನ್ನು ನಾನು ಹೇಗೆ ಬೆಳಸಲಿ? ಇಂಥ ದಾರುಣವಾದ ಬಾಳಿನ ದುಃಖಾಗ್ನಿಯಲ್ಲಿ ಬೇಯುವದಕ್ಕಿಂತ ಸಾಯುವದೇ ಸಾವಿರಪಾಲು ಮೇಲು'' ಎಂದು ಎನ್ನುತ್ತ ಅವನು ತನ್ನ ಮೂರು ಮಕ್ಕಳೊಂದಿಗೆ ಕೋಕಾ ಮುಖ ತೀರ್ಥದಲ್ಲಿ ಮುಳುಗಿ ಜನ್ಮ ನೀಗಿದನು. ಆ ಚಂಡಾಲನು ಆಕೋಕಾಮುಖ ತೀರ್ಥದಲ್ಲಿ ಮುಳುಗಲು ನೀರಿನಲ್ಲಿ ಇಳಿದ ಕೂಡಲೇ ಆ ತೀರ್ಥದ ಪ್ರಭಾವದಿಂದ ಅವನ ಪಾಪವೆಲ್ಲಾ ಹೋಯಿತು. ಚಂಡಾಲ ರೂಪವೂ ಹೋಯಿತು, ಎಲ್ಲ ಪಾಪಗಳು ಪರಿಹಾರವಾದವು. ಆ ಕೋಕಾಮುಖ ತೀರ್ಥದ ಪುಣ್ಯದ ಪ್ರಭಾವದಿಂದ ಅವನು ಮರಣ ಹೊಂದಿದ ಮರುಕ್ಷಣದಲ್ಲಿ ತೀರ್ಥಸ್ನಾನದ ಪರಿಣಾಮವಾಗಿ ದಿವ್ಯದೇಹ ಬಂದಿತು. ಆ ದೈವೀದೇಹದಿಂದ ದಿವ್ಯವಾದ ವಿಮಾನವನ್ನು ಆರೋಹಣ ಮಾಡಿ ಸ್ವರ್ಗಕ್ಕೆ ನಡೆದನು. ಆ ವಿಮಾನವು ಚಂದ್ರ ಮಂಡಲದಂತೆ ಶೋಭಿಸುತ್ತಿತ್ತು.

ಅದನ್ನೆಲ್ಲಾ ನೋಡುತ್ತಲೇ ನಿಂತ ಕಾಮದಮನನಿಗೆ ಕೋಕಾಮುಖ ತೀರ್ಥದ ಮಹಿಮೆ ಮನದಟ್ಟಾಯಿತು. ಅಲ್ಲಿ ಸ್ನಾನ ಮಾಡಿದ ಮಾತ್ರದಿಂದ ಚಂಡಾಲನು ತನ್ನ ಕಣ್ಣೆದುರೇ ವಿಮಾನವನ್ನು ಏರಿ ಸ್ವರ್ಗಕ್ಕೆ ನಡೆದದ್ದನ್ನು ನೋಡಿ ತಾನೂ ಕೂಡ ಆ ಕೋಕಾ ಮುಖ ತೀರ್ಥದಲ್ಲಿ ಮುಳುಗಿ ಜನ್ಮ ನೀಗಿದನು. ಅಲ್ಲಿಂದ ಅವನು ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ಕೆಲವು ದಿನ ಭೋಗಗಳನ್ನು ಅನುಭವಿಸಿ ಭೂಲೋಕದಲ್ಲಿ ಓರ್ವ ವೈಶ್ಯನ ಮನೆಯಲ್ಲಿ ಪುತ್ರನಾಗಿ ಜನಿಸಿದನು ಆ ವೈಶ್ಯ ಆಗರ್ಭ ಶ್ರೀಮಂತ, ಬೇಕಾದಷ್ಟು ಧನ, ಧಾನ್ಯ, ಮನೆಮಾರು, ವಿಪುಲ ಸಂಪತ್ತು, ಪ್ರೀತಿಯ ಬಂಧುಬಳಗದವರು ಇದ್ದರು. ಆದರೆ ಅವನಿಗೆ ಜನ್ಮಾಂತರದಲ್ಲಿ ಕೋಕಾಮುಖ ತೀರ್ಥದಲ್ಲಿ ಸ್ನಾನ ಮಾಡಿದ ಪರಿಣಾಮವಾಗಿ

ಜನ್ಮಾಂತರದ ಸ್ಮರಣೆಯು ನಿಚ್ಚಳವಾಗಿಯೇ ಇದ್ದಿತು. ಅವನು ಮನೆಮಾರು ತೊರೆದ, ಸಂಪತ್ತು, ಸೌಭಾಗ್ಯ, ಬಂಧು ಬಾಂಧವರನ್ನೆಲ್ಲಾ ಬಿಟ್ಟು ನೇರವಾಗಿ ಕೋಕಾಮುಖ ತೀರ್ಥಕ್ಕೆ ನಡೆದ. ಆ ನದೀನೀರಿನಲ್ಲಿ ಪುನಃ ದೇಹತ್ಯಾಗ ಮಾಡಿದ, ಸ್ವರ್ಗಕ್ಕೆ ಪ್ರಯಾಣಿಸಿದ. ಅನಂತರದಲ್ಲಿ ಪುಣ್ಯವೆಲ್ಲಾ ಕ್ಷೀಣಿಸಿದ ಬಳಿಕ ಮತ್ತೆ ಪುನಃ ಭೂಮಿಗೆ ಬಂದನು. ಅಗ್ನೀಧ್ರಮಹಾರಾಜನ ಅರಮನೆಯಲ್ಲಿ ಅವನ ಪ್ರೀತಿಯ ಮಗನಾಗಿ ಜನಿಸಿದನು. ಅವನ ತಂದೆಯು ಮದುವೆಮಾಡಿಕೊಂಡು ಸಂಸಾರಮಾಡು ಎಂದಾಗ ಅವನು ಜನ್ಮಾಂತರದ ಕಥೆಯನ್ನೆಲ್ಲಾ ಹೇಳಿ "ನಾನು ಈ ಜನ್ಮದಿಂದ ಹಿಂದೆ ಮೂರನೇ ಜನ್ಮದಲ್ಲಿ ಸುತಪ ಎಂಬ ಋಷಿಯಾಗಿದ್ದೆ. ಅನಂತರ ನಾರದರಂತೆ ಶ್ರೀಹರಿಯ ಮಾಯೆಯನ್ನು ನೋಡುವ ಹಂಬಲದಿಂದ ಅವನ ಆದೇಶದಂತೆ ತೀರ್ಥದಲ್ಲಿ ಸ್ನಾನ ಮಾಡಿ ಚಂಡಾಲ ಕನ್ನಿಕೆಯಾದೆ.

ಆಗ ಓರ್ವ ಚಂಡಾಲಪುರುಷನನ್ನು ಮದುವೆಯಾಗಿ ಕುರುಡ, ಮೂಕ ಮಕ್ಕಳನ್ನು ಪಡೆದು ಈ ಕೋಕಾಮುಖ ತೀರ್ಥದಲ್ಲಿ ಸ್ನಾನಮಾಡಿ ಮತ್ತೆ ಪುರುಷನಾಗಿ ನಿಂತುಕೊಂಡೆ. ಆಗ ನನ್ನ ಜನ್ಮಾಂತರದ ಪತಿಯಾದ ಚಂಡಾಲನು ದುಃಖದಿಂದ ಕೋಕಾಮುಖದಲ್ಲಿ ಧುಮುಕಿ ಸ್ವರ್ಗ ಸೇರಿದ್ದನ್ನು ಕಣ್ಣಿಂದ ನೋಡಿ ನಾನು ಕೂಡ ಆ ಕೋಕಾಮುಖದಲ್ಲಿ ಮುಳುಗು ಹಾಕಿದೆ. ಅಲ್ಲಿಂದ ವೈಶ್ಯಕುಲದಲ್ಲಿ ಹುಟ್ಟಿ ಇದೇ ಕೋಕಾಮುಖದಲ್ಲಿ ಆ ಜನ್ಮವನ್ನು ಕೂಡ ನೀಗಿ ಈಗ ನಿನ್ನ ಹೊಟ್ಟೆಯಿಂದ ಕಾಮದಮನನೆಂಬ ರಾಜಕುಮಾರನಾಗಿ ಹುಟ್ಟಿದ್ದೇನೆ. ಈ ತೀರ್ಥಸ್ನಾನದ ಪುಣ್ಯದಿಂದ ನನಗೆ ಜನ್ಮಾಂತರದ ಪುಣ್ಯಸ್ಮರಣವೆಲ್ಲವೂ ಹಸಿರಾಗಿಯೇ ಇರುತ್ತದೆ. ನೀನೇನೋ ತಂದೆಯ ಧರ್ಮಕ್ಕೆ ಅನುಗುಣವಾಗಿ "ಮದುವೆ ಮಾಡಿಕೊಂಡು ಮಕ್ಕಳನ್ನು ಪಡೆದು ಸಂಸಾರ ಮಾಡಿಕೊಂಡು ಇರು" ಎಂದು ಆಗ್ರಹಪಡಿಸುತ್ತಿರುವೆ. ಆದರೆ ನನಗೆ ಜನ್ಮಾಂತರದ ನೆನಪು ಹಸಿಹಸಿಯಾಗಿಯೇ ಹೃದಯದಲ್ಲಿ ಇರುವದರಿಂದ ಈ ಮಡದಿ, ಮಕ್ಕಳು, ಸಂಸಾರದ ಬಗ್ಗೆ ಜಿಗುಪ್ಸೆ ಹುಟ್ಟಿದೆ. ಆದುದರಿಂದ ನಾನು ಮದುವೆ ಮಾಡಿಕೊಳ್ಳುವದಿಲ್ಲ. ಸಂಸಾರವನ್ನು ಮಾಡುವದಿಲ್ಲ. ನಾನು ಶ್ರೀಹರಿಯ ಆರಾಧನೆಯನ್ನು ಮಾಡುತ್ತೇನೆ, ಕ್ಷಮಿಸು ಎಂದು ಹೇಳಿ ಆ ಕಾಮದಮನನು ಅದೇ ಕೋಕಾಮುಖ ತೀರ್ಥದಲ್ಲಿ ವರಾಹರೂಪಿಯಾದ ಶ್ರೀಹರಿಯ ನಿರಂತರ ಆರಾಧನೆಯನ್ನು ಮಾಡಿದನು. ಕೊನೆಗೆ ಆತ ಕೋಕಾಮುಖ ತೀರ್ಥದಲ್ಲಿಯೇ ತನ್ನ ಪಂಚಭೌತಿಕ ಶರೀರವನ್ನು ಪರಿತ್ಯಾಗ ಮಾಡಿದನು. ಅನಂತರ ಅವನನ್ನು ಕರೆಯಲು ಸ್ವರ್ಗಲೋಕದಿಂದ ಸೂರ್ಯನಂತೆ ಹೊಳೆಯುವ ಅನೇಕ ವಿಮಾನಗಳು ಬಂದವು ಕಾಮದಮನನನ್ನು ಕರೆದುಕೊಂಡು ಅವೆಲ್ಲವೂ ಸ್ವರ್ಗಲೋಕವನ್ನು ತಲುಪಿದವು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತೆಂಟನೆಯ ಅಧ್ಯಾಯ ಮುಗಿದುದು*

—o—

**ಮುನಿಗಳು:-** ಪೂಜ್ಯರೇ, ತಾವು ನಮ್ಮ ಅಪೇಕ್ಷೆಯ ಮೇರೆಗೆ ಮಹಾವಿಷ್ಣುವಿನ ಮಾಯಾ ಮಹಿಮೆಯ ವೈಭವವನ್ನು ಹೇಳಿದಿರಿ. ಆದರೆ ನಮಗೆ ತಮ್ಮ ಬಾಯಿಂದ ಪ್ರಾಕೃತ ನೈಮಿತ್ತಿಕಾದಿ ಪ್ರಳಯದ ವಿಷಯವನ್ನು ಕೇಳಬೇಕೆಂದು ನಮ್ಮಲ್ಲಿ ಕುತೂಹಲ ಜನಿಸಿದೆ. ದಯವಿಟ್ಟು ತಿಳಿಸಬೇಕು.

**ವ್ಯಾಸ:-** ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳು ಇರುತ್ತವೆ. ಇವು ನಾಲ್ಕು ಒಂದುಸಲ ತಿರುಗಿದರೆ ಒಂದು ಮಹಾಯುಗ ಎನಿಸುವದು. ಇದನ್ನು ಚತುರ್ಯುಗ ಎಂದೂ ಕರೆಯುವರು. ದೇವಮಾನದಿಂದ ಇಂಥ ಸಾವಿರ ವರ್ಷಗಳು ಸವೆದು ಹೋದರೆ ಬ್ರಹ್ಮದೇವರ ಒಂದು ಹಗಲು, ಅಷ್ಟೇ ರಾತ್ರಿ, ಅದೇ ಪ್ರಳಯ ಕಾಲ. ಆಗ ಶ್ರೀಹರಿಯು ಯೋಗ ನಿದ್ರಾರೂಢನಾಗಿ ಪಯೋದಧಿಯಲ್ಲಿ ಪವಡಿಸಿರುತ್ತಾನೆ. ಅನಂತರ ಮತ್ತೆ ಹೊಸಸೃಷ್ಟಿ ಪ್ರಾರಂಭ. ಮೊದಲು ಕೃತಯುಗ, ಕೊನೆಯದು ಕಲಿಯುಗ ಕೃತಯುಗದ ಪ್ರಾರಂಭದಲ್ಲಿ ಬ್ರಹ್ಮದೇವರು ಪರಬ್ರಹ್ಮನ ಆದೇಶದಂತೆ ಸೃಷ್ಟಿ ಕಾರ್ಯವನ್ನು ಪ್ರಾರಂಭಿಸುತ್ತಾರೆ. ಅನಂತರ ತ್ರೇತಾಯುಗ ದ್ವಾಪರ ಯುಗಗಳ ಅನಂತರ ಕಲಿಯುಗ ಬರುವದು. ಕಲಿಯುಗದ ಕೊನೆಯಲ್ಲಿ ಪರಮಾತ್ಮನು ರುದ್ರಾಂತರ್ಗತ ಸಂಕರ್ಷಣ ರೂಪದಿಂದ ತನ್ನಿಂದ ಸೃಷ್ಟವಾದ ಪ್ರಪಂಚವನ್ನೆಲ್ಲ ಸಂಹಾರ ಮಾಡುವನು.

**ಮುನಿಗಳು:-** ಪೂಜ್ಯರೇ ಕಲಿಯುಗದ ಸ್ವರೂಪವೇನು? ನಾಲ್ಕು ಕಾಲುಗಳಿಂದ ಕೂಡಿದ ಧರ್ಮವು ಮೂರು ಕಾಲುಗಳನ್ನು ಕಳೆದುಕೊಂಡು ಒಂಟಿಗಾಲಿನಿಂದ ಕುಂಟುತ್ತಿರುವದೆಂದು ಕೇಳಿದ್ದೇವೆ. ಆ ಕಲಿಯ ಸ್ವರೂಪವನ್ನು ಹೇಳಿರಿ.

**ವೇದವ್ಯಾಸ:-** ಕಲಿಯುಗದಲ್ಲಿ ವರ್ಣಧರ್ಮಗಳನ್ನು ಆಶ್ರಮ ಧರ್ಮಗಳನ್ನು ಜನರು ಪಾಲಿಸುವದಿಲ್ಲ. ವೇದೋಕ್ತವಾದ ಧರ್ಮಕರ್ಮಾನುಷ್ಠಾನಗಳಲ್ಲಿ ಜನರಿಗೆ ಶ್ರದ್ಧೆ ಕಡಿಮೆ ಆಗುತ್ತದೆ. ವಿವಾಹಗಳು ಕಲಿಯುಗದಲ್ಲಿ ಶಾಸ್ತ್ರೋಕ್ತ ಪದ್ಧತಿಯಿಂದ ನೆರವೇರುವದಿಲ್ಲ. ಮನಬಂದಂತೆ ಮದುವೆ ಮಾಡಿಕೊಳ್ಳುತ್ತಾರೆ. ಯಜ್ಞಯಾಗಾದಿ ವೈದಿಕ ಕರ್ಮಕಲಾಪ ಗಳೆಲ್ಲವೂ ಪ್ರಾಯಃಲೋಪವಾಗಿ ಬಿಡುತ್ತವೆ. ಬಲಿಷ್ಠನಾದವನೇ ಸರ್ವಾಧಿಕಾರಿ. ಧರ್ಮಶಾಸ್ತ್ರದಲ್ಲಿ ಹೇಳಿದಂತೆ ಯಾರೂ ಮದುವೆಯನ್ನೇ ಮಾಡಿಕೊಳ್ಳುವದಿಲ್ಲ. ಸ್ವೈರಆಚಾರ, ಸ್ವಚ್ಛಂದ ವಿಹಾರಗಳಲ್ಲಿ ಮಾನವರೆಲ್ಲರೂ ನಿತ್ಯಾಸಕ್ತರು. ಬೇಕಾದ ಜಾತಿಯವರಿಗೆ ತಮ್ಮ ಹೆಣ್ಣುಮಕ್ಕಳನ್ನು ಮಾರಾಟಮಾಡಿ ಜನರು ಕನ್ಯೋಪಜೀವಿಗಳಾಗುತ್ತಾರೆ. ತಮ್ಮ ಮನ ಬಂದದ್ದನ್ನು ಮಾಡಿ ಅದೇ ಶಾಸ್ತ್ರ ಎಂದು ಸಾಧಿಸುವರು. ಮನಬಂದ ಕ್ಷುದ್ರ ವ್ಯಕ್ತಿಗಳನ್ನೇ ದೇವರೆಂದು ಮಾನವರು ಪೂಜಿಸುತ್ತಾರೆ.

ಗಂಡಸರಿಗೆ ತುಸು ಹಣವು ಬಂದರೆ ಸಾಕು. ಮದೋನ್ಮತ್ತರಾಗಿ ಬಿಡುತ್ತಾರೆ. ಸ್ತ್ರೀಯರಿಗೆ ತುಸು ಕೂದಲು ಉದ್ದಇದ್ದರೆ, ಬಣ್ಣ ಕೆಂಪುಇದ್ದರೆ ತಾನು ಮಹಾಸುಂದರಿ ಎಂದು ಮೆರೆಯುತ್ತಾರೆ. ಬಂಗಾರ ಮುತ್ತು ರತ್ನಾದಿ ಆಭರಣಗಳು ಜಗತ್ತಿನಲ್ಲಿ ಕಡಿಮೆ ಆಗಿ ಚಂದಾಚಂದ ರೀತಿಯಿಂದ ಕೂದಲುಗಳನ್ನು ಕತ್ತರಿಸಿ ತರತರಹದ ಕೇಶ ವಿನ್ಯಾಶಗಳಿಂದಲೇ ಸ್ತ್ರೀಯರು ಪುರುಷರ ಮನಸ್ಸನ್ನು ಮೋಹಗೊಳಿಸುತ್ತಾರೆ. ಹಣವಿಲ್ಲದ ಗಂಡನನ್ನು ಬಿಟ್ಟು ಹಣವಂತನನ್ನೇ ಪತಿ ಎಂದು ಅಂಗೀಕರಿಸುತ್ತಾರೆ. ಕಲಿಯುಗದಲ್ಲಿ

ದುಡಿದ್ದವನೇ ದೊಡ್ಡಪ್ಪ. ಶ್ರೀಮಂತನೆ ಎಲ್ಲರಿಗೂ ಸ್ವಾಮಿ ಯಜಮಾನ. ತನ್ನ ಮನೆಗಾಗಿಯೇ ತನಗಾಗಿಯೇ ಎಲ್ಲ ದ್ರವ್ಯದ ಉಪಯೋಗ. ದ್ರವ್ಯ ಸಂಪಾದನೆಗಾಗಿಯೇ ಬುದ್ಧಿಯ ಉಪಯೋಗ. ಭೋಗೋಪಭೋಗಕ್ಕಾಗಿಯೇ ಸರ್ವಸಂಪತ್ತಿನ ಉಪಯೋಗ. ವರ್ಷದಲ್ಲಿ ಅತಿವೃಷ್ಟಿ, ಅನಾವೃಷ್ಟಿಗಳೇ ಹೆಚ್ಚು. ಮಳೆ ಇಲ್ಲದೆ ರೈತರು ಮುಗಿಲುಮೋರೆ ನೋಡುತ್ತ ಕಂಗಾಲಾಗಿ ಕುಳಿತಿರುತ್ತಾರೆ. ಕ್ಷಾಮಡಾಮರಗಳ ಭಯ ಭೂಲೋಕದಲ್ಲಿ ಮೇಲಿಂದ ಮೇಲೆ ತಲೆದೋರುತ್ತದೆ. ಕಲಿಯುಗ ಮುಂದುವರಿದಂತೆ ಜನರೆಲ್ಲ ಸ್ನಾನವಿಲ್ಲದೆ ಭೋಜನ ಮಾಡುವರು. ದೇವರ ಪೂಜೆ, ಯಜ್ಞಯಾಗ, ಅತಿಥಿಗಳಿಗೆ ಅನ್ನದಾನ, ಶ್ರಾದ್ಧ, ದಾನ, ಧರ್ಮ, ಪರೋಪಕಾರ ಎಲ್ಲವೂ ನಿಂತು ಹೋಗುವವು. ಹೆಣ್ಣುಮಕ್ಕಳು ಎರಡೂ ಕೈಗಳಿಂದ ತಲೆಯನ್ನು ಕೆರೆಯುತ್ತ ಬಿರುಸು ಮಾತನಾಡುತ್ತ, ಗಂಡಸರನ್ನು ಬೆದರಿಸುತ್ತ, ಶೀಲಭ್ರಷ್ಟರಾಗಿ, ಸ್ವೈರಿಣಿಯರೂ, ಜಾರಿಣಿಯರೂ ಆಗಿ ದುರ್ಜನರ ಸಂಸರ್ಗದಲ್ಲಿಯೇ ಸುಖಲೋಲುಪರಾಗಿ ಇರುವರು.

ರಾಜರು ಪ್ರಜೆಗಳ ರಕ್ಷಣೆಯನ್ನು ಮಾಡದೇ ಕರವನ್ನು ಮಾತ್ರ ಬೇರೆಬೇರೆ ನೆಪಗಳಿಂದ ವಸೂಲು ಮಾಡುತ್ತಾರೆ. ಬಲಿಷ್ಠನಾದವನೇ ರಾಜ. ದುರ್ಬಲರೆಲ್ಲರೂ ದಾಸರು. ಪ್ರಜಾಶೋಷಣೆಯೇ ರಾಜರ ಮುಖ್ಯ ಗುರಿ. ಬ್ರಾಹ್ಮಣರು ಸ್ನಾನ, ಸಂಧ್ಯೆ, ಅಧ್ಯಯನ ಪೂಜಾದಿಗಳನ್ನು ತೊರೆದು ಶೂದ್ರರಾಗುತ್ತಾರೆ. ಶೂದ್ರರು ಸನ್ಯಾಸಿಗಳಾಗಿ ಗುರುದಕ್ಷಿಣಾ ನೆಪದಿಂದ ಧನವನ್ನು ಸಂಪಾದಿಸುತ್ತಾರೆ. ವೇದಮಾರ್ಗದಿಂದ ಎಲ್ಲರೂ ಭ್ರಷ್ಟರಾದಾಗ ಎಲ್ಲರೂ ಪಾಪಂಡಿ ಗಳಾಗುವರು. ಜನರೆಲ್ಲರೂ ಅಲ್ಪಾಯುಷಿಗಳು, ಹತ್ತೆಂಟು ವರ್ಷದವರಿದ್ದಾಗಲೇ ಸ್ತ್ರೀಯರು ಹಡೆಯುವರು. ಹನ್ನೆರಡು ವರ್ಷಗಳಿಗೆ ಜನರ ತಲೆ ಬೆಳ್ಳಗಾಗುವದು. ಜನರ ಆಯುರ್ಮಾನ ಇಪ್ಪತ್ತು ವರ್ಷ ಮಾತ್ರ. ಎಲ್ಲರಿಗೂ ಆ ಕಾಲದಲ್ಲಿಯೇ ಮುಪ್ಪು ಮರಣ ಸಂಭವಿಸುವವು. ಯಾವಾಗ ಬ್ರಾಹ್ಮಣರು ಯಜ್ಞಯಾಗ, ಶ್ರೀಹರಿಯ ಪೂಜೆ, ಶ್ರಾದ್ಧ, ಗುರುಭಕ್ತಿ, ವೇದಶಾಸ್ತ್ರಗಳಲ್ಲಿ ಶ್ರದ್ಧೆ ಮತ್ತು ಧರ್ಮಕರ್ಮಾಚರಣಗಳನ್ನು ಬಿಟ್ಟು ಕೇವಲ ಇಂದ್ರಿಯಸುಖ ಲೋಲುಪರಾಗಿ ಸ್ವಚ್ಛಂದಾಚಾರ ಮಾಡುತ್ತ ಪಾಖಂಡಿಗಳಾಗುವರೋ ಆಗ ಕಲಿಯುಗ ಪ್ರವರ್ಧಮಾನವಾಗಿದೆ ಎಂದು ತಿಳಿಯಬೇಕು.

ದೇವರೇಕೆ? ಧರ್ಮ ಏಕೆ? ವಿಷ್ಣುಪೂಜೆ ಏಕೆ? ಸ್ನಾನ, ಸಂಧ್ಯ ಜಪತಪಗಳು ಏಕೆ? ಮಡಿಮೈಲಿಗೆ ಏಕೆ? ಎಂದು ಮುಂತಾಗಿ ಜನರೆಲ್ಲರೂ ಕುತರ್ಕವಾದ ವಿವಾದ ಮಾಡತೊಡಗಿದರೆ ಅದು ಕಲಿಯುಗವು ಪ್ರಬಲವಾದುದರ ಲಕ್ಷಣ. ಕಲಿಯುಗ ಮುಂದುವರೆದಂತೆ ಗಂಡು ಹೆಣ್ಣು ಎಲ್ಲಾರೂ ಮೊಣಕಾಲಿನ ವರೆಗೆ ಮಾತ್ರ ಬಟ್ಟೆ ಧರಿಸುವರು. ಗಿಡಗಳೆಲ್ಲವು ಬನ್ನಿ ಗಿಡಗಳಂತೆ ಕುಳ್ಳಗಾಗುವವು. ಎಲ್ಲೆಡೆಗೂ ಬ್ರಾಹ್ಮಣ ಕ್ಷತ್ರಿಯಾದಿ ಜಾತಿಗಳು ಹೋಗಿ ಎಲ್ಲರೂ ಶೂದ್ರರೇ ಆಗಿರುವರು. ಅತ್ತೆ ಮಾವಂದಿರೇ ಗುರುಗಳು. ಹೆಂಡತಿಯ ಅಣ್ಣ ತಮ್ಮಂದಿರೆ ಬಂಧು ಬಾಂಧವರು. ಹೆಂಡತಿಯ ಬಳಗವೇ ಬಳಗ. ಎಲ್ಲರೂ ಮಾವಂದಿರ ಆಜ್ಞಾಧಾರಕರು. ಎಲ್ಲೆಲ್ಲಿಯೂ ಸತ್ಯವಿಲ್ಲ. ಶೌಚವಿಲ್ಲ, ಧರ್ಮವಿಲ್ಲ, ದೇವರಿಲ್ಲ. ಆಚಾರವಿಲ್ಲ, ಸದ್ವಿಚಾರವಿಲ್ಲ. ನೋಡಿದಲ್ಲೆಲ್ಲ ಅನಾಚಾರ, ಪಾಪಾಚಾರ, ಹಿಂಸಾಚಾರ, ಅತ್ಯಾಚಾರ, ವ್ಯಭಿಚಾರ. ಹೀಗೆ ಕಲಿಯುಗವು ಪೂರ್ಣ ಪ್ರಬಲವಾದಾಗ ಯಾವನಾದರೂ ಪುಣ್ಯ ಪುರುಷನು ಅಲ್ಪಸ್ವಲ್ಪವಾದರೂ ಧರ್ಮ

ಕರ್ಮಗಳನ್ನು ಮಾಡಿದರೆ, ಪೂಜೆ ಪುರಸ್ಕಾರ ಜಪತಪ ಹರಿಗುರುಗಳ ಆರಾಧನೆಗಳನ್ನು ಕಿಂಚಿತ್ತಾದರೂ ಗೈದರೆ ಕೃತಯುಗದಲ್ಲಿ ಚಿರಂತನ ಜಪ ನಿರಂತರ ತಪಗಳನ್ನು ಆಚರಿಸಿದರೆ ಬರುವಷ್ಟು ಪ್ರಭೂತವಾದ ಪುಣ್ಯರಾಶಿಯೇ ಪ್ರಾಪ್ತವಾಗುತ್ತದೆ. ಕಲಿಯುಗದಲ್ಲಿ ಮಾಡಿದ ಯತ್‌ಕಿಂಚಿತ್ ಧರ್ಮಾಚರಣೆಗೂ, ಅತ್ಯಲ್ಪ ಪುಣ್ಯಕ್ಕೂ ಅಕ್ಷಯ ಫಲ ಬರುವದೆಂದು ಶಾಸ್ತ್ರಕಾರರು ಹೇಳಿದ್ದಾರೆ.

## ಸ್ತ್ರೀಶೂದ್ರರೆ ಧನ್ಯರು

**ಮುನಿಗಳು:-** ಯಾವ ಕಾಲದಲ್ಲಿ ಅತ್ಯಲ್ಪವಾದ ಧರ್ಮಾನುಷ್ಠಾನವೂ ಮಹತ್ ಫಲವನ್ನು ತಂದು ಕೊಡುವದು, ಅದನ್ನು ಹೇಳಿರಿ.

**ವೇದವ್ಯಾಸ:-** ಮುನಿಗಳೇ ಈ ಜಗತ್ತಿನಲ್ಲಿ ಮೂರು ವಸ್ತುಗಳು ಧನ್ಯಧನ್ಯಧನ್ಯ ಎನಿಸುತ್ತವೆ. ಕಲಿಯುಗ, ಶೂದ್ರ, ಮತ್ತು ಸ್ತ್ರೀಯರು ಇವು ಮೂರು ಈ ಬ್ರಹ್ಮ ಸೃಷ್ಟಿಯಲ್ಲಿ ಧನ್ಯ ಆಗಿರುತ್ತವೆ. ಕೃತಯುಗದಲ್ಲಿ ಹತ್ತು ವರ್ಷ ತ್ರೇತಾಯುಗದಲ್ಲಿ ಒಂದು ವರ್ಷ ದ್ವಾಪರ ಯುಗದಲ್ಲಿ ಒಂದು ತಿಂಗಳಕಾಲ ಮಾಡಿದ ಸತ್ಕರ್ಮಗಳಿಂದ ಬರುವಷ್ಟು ಪುಣ್ಯಫಲವು ಕಲಿಯುಗದಲ್ಲಿ ಒಂದು ದಿನ ಮಾಡಿದ ಸತ್ಕರ್ಮದಿಂದ ಅನಾಯಾಸವಾಗಿ ಪ್ರಾಪ್ತವಾಗುವದು. ಕೃತಾ, ತ್ರೇತಾ, ದ್ವಾಪರಾದಿಗಳಲ್ಲಿ ವರ್ಷಾರುತಿಂಗಳು ಮಾಡಿದ ತಪಸ್ಸು, ದಾನ, ಯಜ್ಞಯಾಗ, ಬ್ರಹ್ಮಚರ್ಯ, ಹರಿಪೂಜೆ ಜಪಾನುಷ್ಠಾನಗಳಿಂದ ಲಭ್ಯವಾಗುವದು ಕಲಿಯುಗದಲ್ಲಿ ಒಂದೇ ದಿನದ ಅನುಷ್ಠಾನದಿಂದ ಸಹಜವಾಗಿಯೇ ಲಭ್ಯವಾಗುವದು.

**ಧ್ಯಾಯನ್ ಕೃತೇ ಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್ ।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥**

ಕೃತಿಯುಗದಲ್ಲಿ ಅಖಂಡ ಧ್ಯಾನ, ತ್ರೇತಾಯುಗದಲ್ಲಿ ನಿರಂತರ ಯಜ್ಞ, ದ್ವಾಪರ ಯುಗದಲ್ಲಿ ಸಂತತ ಶೀಹರಿಯ ಅರ್ಚನೆ ಆರಾಧನೆಗಳಿಂದ ಬರುವಷ್ಟು ಪ್ರಭೂತ ಪುಣ್ಯವು ಕಲಿಯುಗದಲ್ಲಿ ಕೇವಲ ಹರಿನಾಮಸ್ಮರಣ ಅಥವಾ ಕೇಶವನ ಸಂಕೀರ್ತನೆ ಎಂದರೆ ಹೊಗಳಿ ಹಾಡಿ ಪಾಡುವ ಮಾತ್ರದಿಂದಲೇ ಲಭ್ಯವಾಗುವದು. ಆದುದರಿಂದ ಅಲ್ಪಾಯಾಸದಿಂದ ಮಹಾಫಲವನ್ನು ತಂದು ಕೊಡುವ ಕಲಿಯುಗವು ಧನ್ಯ, ಶ್ರೇಷ್ಠ ಎಂದು ನನ್ನ ಅಭಿಪ್ರಾಯ.

ಅದರಂತೆ ಶೂದ್ರನು ಧನ್ಯ. ಯಾಕೆಂದರೆ ಬ್ರಾಹ್ಮಣರಿಗೆ ಯಜ್ಞ, ಯಾಗ ಜಪತಪ, ಪೂಜಾಅನುಷ್ಠಾನಗಳನ್ನು ಮಾಡುವದು ಬಹಳ ಕಷ್ಟಸಾಧ್ಯವಾದ ಕಾರ್ಯ. ಮಂತ್ರ ತಂತ್ರಾದಿಗಳಲ್ಲಿ ಏನಾದರೂ ಲೋಪ ಅಥವಾ ಪ್ರಮಾದ ಸಂಘಟಿಸಿದರೆ ಮಹಾಪಾಪ. ಮೇಲೆ ಕರ್ಮ ಮಾಡಲಿಕ್ಕೆ ಪ್ರಾರಂಭ ಮಾಡಿದ ಬಳಿಕ ಅದು ಮುಗಿಯುವ ವರೆಗೆ ಏನನ್ನೂ ತಿನ್ನಕೂಡದು. ನೀರನ್ನೂ ಕೂಡ ಕುಡಿಯಬಾರದು. ಹಸಿವೆ ಬಾಯಾರಿಕೆ ಕಟ್ಟಬೇಕು. ಚಳಿಯಲ್ಲಿ ನಡುಗಬೇಕು, ಮಳೆಯಲ್ಲಿ ತೊಯ್ಯಬೇಕು, ಬಿಸಿಲಲ್ಲಿ ಬೇಯಬೇಕು. ಎಲ್ಲಿಯಾದರೂ ತಪ್ಪಿದರೆ ಫಲ ಸೊನ್ನೆ. ಮೇಲೆ ಪಾಪ; ಪ್ರತ್ಯವಾಯ, ನರಕ. ಇದೆಲ್ಲವೂ ಬ್ರಾಹ್ಮಣನ ಪ್ರಾರಬ್ಧ. ಆದರೆ ಶೂದ್ರನಿಗೆ ಇದಾವ ಜಂಜಾಟವೂ ಇಲ್ಲ. ಭಕ್ಷ್ಯಭೋಜ್ಯಗಳ ನಿಯಮವಿಲ್ಲ. ವಿಧಿನಿಷೇಧಗಳ ನಿರ್ಬಂಧವಿಲ್ಲ ದೇವಬ್ರಾಹ್ಮಣರ ಆರಾಧನೆ ಮಾಡಿದರೆ ಮಾತ್ರ ಸಾಕು. ಬ್ರಾಹ್ಮಣ ಸೇವೆಯಿಂದಲೇ ಅವನಿಗೆ ಯಜ್ಞಮಾಡಿದ ಪುಣ್ಯ ಬರುವದು.

ಯಾವ ಶ್ರಮ, ದೇಹಶೋಷಣೆ, ಸಂಪಾದಿತ ಧನದ ದಾನ ಯಾವದೂ ಶೂದ್ರನಿಗೆ ಕಡ್ಡಾಯವಾಗಿ ಹೇಳಿಲ್ಲ. ಆದುದರಿಂದ ಶೂದ್ರನು ಶ್ರೇಷ್ಠ, ಧನ್ಯ ಎಂದು ನಾನು ಹೇಳಿದೆ.

ಇದರಂತೆ ಸ್ತ್ರೀಯರಾದರೂ ಧನ್ಯರು, ಪುಣ್ಯವಂತರು. ಪುರುಷರು ಏನಾದರೂ ಯಜ್ಞ ಯಾಗ ದಾನ ದಕ್ಷಿಣಾದಿ ಪುಣ್ಯಕಾರ್ಯ ಮಾಡಬೇಕಾದರೆ ಮೊದಲು ದ್ರವ್ಯವನ್ನು ಸಂಪಾದಿಸಬೇಕು. ಆ ದ್ರವ್ಯವನ್ನು ಅನ್ಯಾಯದಿಂದ ಗಳಿಸಬಾರದು. ನ್ಯಾಯಮಾರ್ಗ ದಿಂದಲೇ ಹಣವನ್ನು ಗಳಿಸಿ ಸತ್‌ಪಾತ್ರ ಎಂದರೆ ಎಲ್ಲ ರೀತಿಯಿಂದಲೂ ಯೋಗ್ಯನೂ ನಿರ್ದುಷ್ಟನೂ ಆದ ಬ್ರಾಹ್ಮಣನನ್ನು ಹುಡುಕಿ ಅವನ ನೇತೃತ್ವದಲ್ಲಿ ಪುಣ್ಯಕರ್ಮ ಮಾಡಬೇಕು. ಯೋಗ್ಯ ಪಾತ್ರ ಮತ್ತು ನ್ಯಾಯಮಾರ್ಗದಿಂದ ಬರುವ ಸಂಪತ್ತು ಎರಡೂ ಬಹಳ ಕಷ್ಟಸಾಧ್ಯ. ಅನಂತರ ಮಾಡುವ ಪೂಜಾ, ಹೋಮ, ಹವನ, ತಪಜಪಾದಿ ಕರ್ಮಗಳಲ್ಲಿ ಯಾವ ಲೋಪವೂ ಬರಬಾರದು. ಫಲಾಂಕಾಕ್ಷೆ ಇರಕೂಡದು. ನಾನು ಮಾಡುತ್ತೇನೆ ಎಂಬ ಅಹಂಭಾವ ಕಿಂಚದಪಿ ಮನಸ್ಸಿನಲ್ಲಿ ಅಂಕುರಿಸಕೂಡದು. ನಾಹಂ ಕರ್ತಾ ಹರಿಃ ಕರ್ತಾ ಎಂಬ ಅನುಸಂಧಾನದಿಂದ ವಿಹಿತ ಕರ್ಮವನ್ನು ನಿಷ್ಕಾಮಕರ್ಮ ಮಾಡಿ ಅದರ ಫಲ ಸಮರ್ಪಣವನ್ನು ಶ್ರೀಹರಿಗೆ ಭಕ್ತಿಭಾವದಿಂದ ಸಮರ್ಪಿಸಬೇಕು. ಈ ಮಜಲುಗಳಲ್ಲಿ ಯಾವದಾದರೂ ಒಂದು ಮೆಟ್ಟಿಲು ತಪ್ಪಿದರೆ ಫಲ ಶೂನ್ಯ, ಶ್ರಮ ವ್ಯರ್ಥ, ಪ್ರಯೋಜನ ಸೊನ್ನೆ. ಆದುದರಿಂದ ಬ್ರಾಹ್ಮಣನಾದವನು ಯಾವದೇ ಧರ್ಮ ಕಾರ್ಯ ಅಥವಾ ಪುಣ್ಯಕರ್ಮಗಳನ್ನು ಮಾಡಿದರೆ ಮೈ ತುಂಬ ಕಣ್ಣು ಇಟ್ಟುಕೊಂಡು ಬಹಳೇ ಜಾಗರೂಕತೆಯಿಂದ ಮಾಡಬೇಕು. ಅಂದರೆ ಮಾತ್ರ ಸಿದ್ಧಿಯನ್ನೂ ಫಲಸಮೃದ್ಧಿಯನ್ನೂ ಹೊಂದುತ್ತಾನೆ.

ಆದರೆ ಈ ವಿಷಯದಲ್ಲಿ ಸ್ತ್ರೀಯರು ಧನ್ಯಧನ್ಯರು. ಅವರಿಗೆ ಯಾವ ವಿಧಿ ನಿಬಂಧನೆ ಗಳೂ ಇಲ್ಲ. ಕೇವಲ ಭಕ್ತಿಯಿಂದ ಪತಿಯೇ ಪರದೇವತೆ, ಪರಮಾತ್ಮನ ಪ್ರತೀಕ ಎಂದು ಪ್ರೀತಿ-ವಿಶ್ವಾಸ ಪೂರ್ವಕವಾಗಿ ಸೇವೆಮಾಡಿದರೆ ತೀರಿತು. ತಾವತ್ತೈವ ಅವಳು ಗಂಡಸು ಯಮನಿಯಮ, ಶಮದಮ, ಜ್ಞಾನ ಭಕ್ತಿ, ವೈರಾಗ್ಯ, ನಿರಂತರ ನಿತ್ಯಕರ್ಮಾನುಷ್ಠಾನ, ಜಪತಪಯೋಗ ಸಮಾಧಿಗಳಿಂದ ಪಡೆಯಬಹುದಾದ ಪುಣ್ಯಫಲ, ಪ್ರಯೋಜನ, ಸಿದ್ಧಿ, ಶುದ್ಧಿ, ಪುಣ್ಯ ಲೋಕಾವ್ಯಾಪ್ತಿ, ಭಗವಂತನ ಪೂರ್ಣಾನುಗ್ರಹ ಪ್ರಾಪ್ತಿ ಮುಂತಾದ ಎಲ್ಲ ಇಷ್ಟಾರ್ಥಗಳನ್ನು ಅನಾಯಾಸವಾಗಿ ಪಡೆಯುತ್ತಾಳೆ. ಪತಿಭಕ್ತಿ ಹಾಗೂ ಪತಿ ಶುಶ್ರೂಷೆ ಎರಡೇ ಅವರು ಮಾಡಬೇಕಾದ ಸುಲಭವಾದ ಕಾರ್ಯಗಳು. ಅವುಗಳಿಂದಲೇ ನಾರಿಯರಿಗೆ ಧರ್ಮಾರ್ಥ, ಕಾಮಾರ್ಥ, ಪುರುಷಾರ್ಥ ಎಲ್ಲವೂ ತನ್ನಷ್ಟಕ್ಕೆ ತಾವಾಗಿಯೇ ಪ್ರಾಪ್ತ ವಾಗುವವು. ಆದುದರಿಂದಲೇ ನಾನು ಮೂರನೆಯದಾಗಿ ಸ್ತ್ರೀಯೇ ಧನ್ಯ, ಶ್ರೇಷ್ಠ ಎಂದು ಹೇಳಿದೆ. ಒಟ್ಟಾರೆ ಕಲಿಯುಗ, ಶೂದ್ರರು, ಸ್ತ್ರೀಯರು ಈ ಮೂವರು ಧನ್ಯರು, ಶ್ರೇಷ್ಠರು ಪುರಸ್ಕಾರ್ಯರು, ಗೌರವಾರ್ಹರು ಎಂದು ನನ್ನ ಮತ.

ಬ್ರಾಹ್ಮಣೋತ್ತಮರೆ, ನೀವು ಕೇಳದಿದ್ದರೂ ನಾನು ನಿಮಗೆ ಮೂರು ಧನ್ಯವಾದ ವಸ್ತುಗಳು ಯಾವುದೆಂಬುದನ್ನೂ ಕಲಿಯುಗ ಹಾಗೂ ಸ್ತ್ರೀಶೂದ್ರರ ಮೇಲ್ಮೆಯನ್ನೂ ಹೇಳಿದೆ. ನೀವು ಈಗ ಇಲ್ಲಿಗೆ ಯಾವ ಕಾರಣಕ್ಕಾಗಿ ಬಂದಿದ್ದೀರಿ? ನಿಮಗೆ ಏನನ್ನು ಕೇಳುವದಿದೆ? ಕೇಳಿರಿ ಹೇಳುತ್ತೇನೆ.

## ಕಲಿಯುಗದ ಕರಾಳತೆ

**ಮುನಿಗಳು:-** ಮಹಾನುಭಾವರಾದ ವೇದವ್ಯಾಸರೆ, ಈಗಂತೂ ದ್ವಾಪರ ಮುಗಿದು ಕಲಿಯುಗ ಬಂದಿದೆ. ಈಗ ನಾವು ಕೂಡ ಕಲಿಯುಗವನ್ನೆ ಬಯಸುತ್ತೇವೆ. ಅಲ್ಪ ಧರ್ಮದ ಆಚರಣೆಯನ್ನು ಮಾಡಿ ಪ್ರಕೃಷ್ಟವಾದ ಪುಣ್ಯವನ್ನು ಪಡೆಯಬೇಕೆನ್ನುತ್ತೇವೆ. ಈ ಯುಗಾಂತ ಕಾಲದಲ್ಲಿ ಪ್ರಪಂಚದಲ್ಲಿ ನಡೆಯುವ ಘಟನಾಚಕ್ರಗಳ ಪಾತಾನುಪಾತ ಗಳನ್ನು ತಿಳಿಸಿರಿ. ಮಾನವರಿಗೆ ಅದರಲ್ಲಿ ಧರ್ಮಭೀರುಗಳಿಗೆ ಸಂಭ್ರಾಂತಿಯನ್ನು, ಮಾನಸಿಕ ಉದ್ವೇಗವನ್ನೂ ತಂದೊಡ್ಡುವ ಈ ಕೊನೆಯ ಯುಗದ ಸ್ಥಿತಿಗತಿ ಯುಗಧರ್ಮಾದಿಗಳನ್ನು ನಿರೂಪಿಸಿ. ಈಗ ನಾವು ಏನು ಮಾಡಬೇಕು. ಈ ಕಲಿಯ ಕರಾಳ ಕರಪಂಜರದಿಂದ ಹೇಗೆ ಪಾರಾಗಬೇಕು! ಈ ಕಲಿಯ ಕಪಿಮುಷ್ಟಿಯಲ್ಲಿ ಸಿಕ್ಕವರು ಏನು ಮಾಡಬೇಕು? ಅವರು ಪಾರಾಗುವ ಉಪಾಯವೇನು? ಎಲ್ಲವನ್ನೂ ತಿಳಿಸಿರಿ. ಈ ಕಾಲದಲ್ಲಿ ಧರ್ಮ ನಾಶವಾಗಲು ಕಾರಣವೇನು?

**ವೇದವ್ಯಾಸ:-** ಮುನಿಗಳೇ, ಈ ಕಲಿಯುಗದಲ್ಲಿ ಧರ್ಮನಾಶಕ್ಕೆ ಕಾರಣ ಹೇಳುತ್ತೇನೆ ಕೇಳಿರಿ. ಕ್ಷತ್ರಿಯರಾಗದಿದ್ದ ನೀಚ ಜನರು ತಮ್ಮ ಮುಂಗೈ ಜೋರಿನ ಮೇಲೆ ಹಾಗೂ ದುಷ್ಟ ಜನರ ಗುಂಪುಗೂಡಿಸಿ ರಾಜರಾಗುತ್ತಾರೆ. ಅವರ ಮುಖ್ಯ ಧರ್ಮ ಆತ್ಮರಕ್ಷಣೆ. ಪ್ರಜಾಜನರ ರಕ್ಷಣೆ ಹಿತರಕ್ಷಣೆಯ ಕಡೆಗೆ ಅವರ ಲಕ್ಷ್ಯವೇ ಇರುವದಿಲ್ಲ. ಜನರ ಸಂರಕ್ಷಣೆಯ ಹೊಣೆಗಾರಿಕೆಯನ್ನು ಹೊತ್ತುಕೊಳ್ಳದೆ ಕೇವಲ ಕರವನ್ನುಮಾತ್ರ ಒತ್ತಾಯದಿಂದ ದಂಡದಮನಗಳಿಂದ ಕಿತ್ತುಕೊಂಡು ಸ್ವಾರ್ಥಸಾಧಕರು ಆಗಿರುತ್ತಾರೆ. ಬ್ರಾಹ್ಮಣರು ಶೂದ್ರರನ್ನು ಉಪಜೀವಿಸಿಗೊಂಡು ಅವರ ಸೇವೆಯಲ್ಲಿಯೂ ಅವರನ್ನೂ ಓಲೈಸುವಲ್ಲಿಯೂ ತಮ್ಮ ತನು, ಮನ, ಧನ, ವಾಣಿ ಎಲ್ಲವನ್ನೂ ಉಪಯೋಗಿಸುತ್ತಾರೆ. ಶೂದ್ರರು ಬ್ರಾಹ್ಮಣರ ಆಚಾರ ವಿಚಾರಗಳನ್ನು ಅನುಕರಿಸಿ ಸ್ನಾನ ಸಂಧ್ಯೆ, ವೇದಾಧ್ಯಯನ, ಮೂರ್ತಿಪೂಜೆ, ಶಾಲಿಗ್ರಾಮ ಲಿಂಗ ಪೂಜಾದಿಗಳನ್ನು ವೇದಮಂತ್ರಗಳನ್ನು ಉಚ್ಚರಿಸಿ ಮಾಡುತ್ತಾರೆ. ಬ್ರಾಹ್ಮಣರು ಮಂತ್ರಬಾರದೆ ವೇದ ಓದದೆ ಬಾಯಿಗೆಬಂದ ಸಂಸ್ಕೃತ ಶ್ಲೋಕ, ಗದ್ಯಪದ್ಯ ಹೇಳಿ ಯಜ್ಞಯಾಗ ಮಾಡಿಸುತ್ತಾರೆ.

ದಕ್ಷಿಣೆಯ ಆಶೆಯಿಂದ ಕಲಿಯುಗದಲ್ಲಿ ಬ್ರಾಹ್ಮಣರು ಮಾಡದೆಯಿದ್ದ ಕಾರ್ಯವೇ ಇರುವದಿಲ್ಲ. ಶ್ರೋತ್ರಿಯ ಬ್ರಾಹ್ಮಣರು ಕೂಡ ದಕ್ಷಿಣೆ ಹಾಗೂ ಭಕ್ಷ್ಯ ಭೋಜ್ಯಗಳ ಆಶೆ ಹಾಗೂ ಜಿವ್ಹಾಲೌಲ್ಯಗಳಿಂದ ಪತಿತರ ಹಾಗೂ ಪಂಚಮಹಾಪಾತಕಿಗಳ ಜೊತೆಗೆ ನಿಶ್ಯಂಕವಾಗಿ ಒಂದೇ ಪಂಕ್ತಿಯಲ್ಲಿ ಕುಳಿತು ಊಟ ಮಾಡುತ್ತಾರೆ. ಇದು ಶಿಷ್ಟವಿಶಿಷ್ಟ ಕರ್ಮಠ ಬ್ರಾಹ್ಮಣರ ಹಾಡಾದರೆ ಅಶಿಷ್ಟ ಜನರಂತೂ ಸುರಾಪಾನ ಮಾಡುತ್ತಾರೆ. ಮಾಂಸಾಹಾರವನ್ನೂ ನಿರ್ಲಜ್ಜತನದಿಂದ ಭುಂಜಿಸುತ್ತಾರೆ. ಮಿತ್ರರ ಹೆಂಡಂದಿರ ಜೊತೆಗೆ ಸರಸ, ಕಾಮಕ್ರೀಡೆ ಆಡುತ್ತಾರೆ. ಕಳ್ಳರು ರಾಜರಂತಿರುತ್ತಾರೆ. ರಾಜರು ಚೋರವೃತ್ತಿಗಿಳಿದು ಸಂಬಳ ಕೊಟ್ಟಿಟ್ಟ ಚೋರರಿಂದ ಪ್ರಜೆಗಳ ಹಣವನ್ನು ಕಳವು ದರೋಡೆ ಮಾಡಿಸುತ್ತಾರೆ. ಚೋರರ ಚೌರ್ಯ ಕಾರ್ಯದಲ್ಲಿ ರಾಜರದೂ ಪಾಲು ಇದ್ದುದರಿಂದ ಅವರನ್ನು ಯಾವ ಸರಕಾರೀ ಅಧಿಕಾರಿಯೂ ಬಂಧಿಸಲಾರ. ದೇಶದ ತುಂಬ ಕಳ್ಳಕದೀಮರದೇ ರಾಜ್ಯವಾಗಿ ಜನರ ವಿತ್ತ, ಪ್ರಾಣ, ಬದುಕಿಗೇ ಗಂಡಾಂತರ ಒದಗುತ್ತದೆ.

ಜನರು ಅನ್ನವನ್ನು ಮಾರಿ (ಹೋಟಲುಗಳನ್ನು ಇಟ್ಟು) ಹಣ ಗಳಿಸುತ್ತಾರೆ. ಬ್ರಾಹ್ಮಣರು ಸಂಬಳ ತೆಗೆದುಕೊಂಡು ಕಂಡ ಕಂಡವರಿಗೆ ವೇದಶಾಸ್ತ್ರ ಪಾಠ ಹೇಳಿ ಸರಸ್ವತಿಯ ಮಾರಾಟ ಮಾಡುತ್ತಾರೆ. ಸ್ತ್ರೀಯರು ಕೂದಲುಗಳನ್ನು ಅಂದವಾಗಿ ಕತ್ತರಿಸಿ, ಚಂದವಾಗಿ ಮುಡಿಕಟ್ಟಿ, ಕೇಶರಾಶಿಯ ವಿವಿಧ ವಿನ್ಯಾಸ ವೈಖರಿಯಿಂದ ಜನರ ಕಣ್ಣುಗಳನ್ನು ಎಳೆದು, ಮನಸ್ಸನ್ನು ಸೆಳೆದು ವ್ಯಭಿಚಾರದಿಂದ ದ್ರವ್ಯವನ್ನು ಸಂಪಾದಿಸುತ್ತಾರೆ. ಶೂದ್ರರು ಶಾರ್ಯದಿಂದ ಸನ್ಯಾಸಿಗಳಾಗಿ ಕಾವಿ ಬಟ್ಟೆ ಉಟ್ಟು ಕೊಂಡು ಧರ್ಮೋಪದೇಶವನ್ನು ಮಾಡುತ್ತಾರೆ. ಕಲಿಯ ಕೊನೆಗಾಲವು ಬಂದಂತೆ ಭೂಮಿ ಬರಡಾಗುವದು. ಮಳೆ ಬೆಳೆ ಸರಿಯಾಗಿ ಬೆಳೆಯುವದಿಲ್ಲ. ಜನರೆಲ್ಲರೂ ಕಂಗಾಲಾಗಿ ಭಿಕ್ಷೆ ಬೇಡತೊಡಗುವರು. ಆದರೆ ಧನ ಧಾನ್ಯಗಳ ದಾತಾರನು ಮಾತ್ರ ಯಾವನೂ ಇರುವದಿಲ್ಲ. ಮರಗಳಲ್ಲಿ ಹಣ್ಣು ಕಾಯಿಗಳಿಲ್ಲ. ಹೊಲಗಳಲ್ಲಿ ಬೆಳೆ ಇಲ್ಲ, ನದಿಗಳಲ್ಲಿ ನೀರು ಇಲ್ಲ, ಮಳೆಗಾಲದಲ್ಲಿ ಮಳೆ ಇಲ್ಲ, ಧೂಳಿ ಉಸುಕು ತೂರುವ ಬಿರುಗಾಳಿ ಎಲ್ಲೆಡೆಗೆ ಬೀಸುವದು. ಹಿರಿಯರನ್ನು ಸೇವಿಸದೆ ಏನನ್ನೂ ಓದದೆ ಎಲ್ಲರೂ ತಾವು ಮಹಾಪಂಡಿತರೆಂದು ಬೀಗಿ ಮೆರೆಯುತ್ತಾರೆ. ಎಲ್ಲರೂ ಕವಿಗಳು ಎಲ್ಲರೂ ಪಂಡಿತರು ಶೆರೆಕುಡಿಯುವ ಅನಾಚಾರಿ ಬ್ರಾಹ್ಮಣರು ಕಲಿಯುಗದಲ್ಲಿ ನಿಷಿದ್ಧವಾದ ಅಶ್ವಮೇಧಾದಿ ಯಜ್ಞಗಳನ್ನು ಮಾಡಿಸಿ ದಕ್ಷಿಣೆಯನ್ನು ಸಿರಿವಂತರಿಂದ ಕಿತ್ತುತ್ತಾರೆ. ಗಂಡ ನಿದ್ದೆಹತ್ತಿ ಮಲಗಿದಾಗ ಸ್ತ್ರೀಯರು ಪರಪುರುಷನೊಂದಿಗೆ ಗುಟ್ಟಾಗಿ ವಿಹರಿಸುತ್ತಾರೆ. ಗಂಡನನ್ನು ಕಂಡರೆ ಜುಗುಪ್ಸೆಗೊಳ್ಳುತ್ತಾರೆ.

ಬ್ರಾಹ್ಮಣರು ತಾವು ಮಾಡಿದ ದೇವರ ಪೂಜೆ, ಯಜ್ಞ, ತಪಸ್ಸು ಮುಂತಾದ ಪುಣ್ಯಕರ್ಮಗಳ ಫಲವನ್ನು ಹಣ ತೆಗೆದುಕೊಂಡು ಹೆರವರಿಗೆ ಮಾರಾಟ ಮಾಡುತ್ತಾರೆ. ಕಲಿಯುಗದಲ್ಲಿ ಕೃಪಣರಾದ ಜನರು ಹಿಂದಿನ ಹಿರಿಯರು ದಾನದತ್ತಿಯಾಗಿ ಕೊಟ್ಟ ಆಸ್ತಿಯನ್ನು ಮರಳಿ ಕಸಿದುಕೊಳ್ಳುತ್ತಾರೆ. ದತ್ತಾಪಹಾರವು ಸಾರ್ವತ್ರಿಕವಾಗಿರುತ್ತದೆ. ರೂಪ-ಗುಣಶೀಲವಿಲ್ಲದ ಕಾಡುಕುರೂಪಿ ನಾರಿಯರು ಪುರುಷರ ಮೇಲೆ ಅಧಿಕಾರ ನಡೆಸುತ್ತಾರೆ. ಮರಗಳಿಗೆ ಹಣ್ಣುಗಳಿಲ್ಲ. ಬಳ್ಳಿಗಳಿಗೆ ಹೂಗಳಿಲ್ಲ. ಇದ್ದ ಹಣ್ಣು ಕಾಯಿಗಳಲ್ಲಿ ರುಚಿ ಇಲ್ಲ. ಹೊಲಗಳಲ್ಲಿ ಬೆಳೆ ಇಲ್ಲ. ತರುಣರು ಮುದುಕರಾಗಿರುತ್ತಾರೆ. ಕಲಿಯುಗದಲ್ಲಿ ಸದಾಚಾರಿಗಳಿಗೆ ಸುಖವಿಲ್ಲ. ಶೀಲಗೆಟ್ಟ ದುರಾಚಾರಿಗಳು ಸಿರಿವಂತರಾಗಿ ಸುಖಸುಪತ್ತಿಗೆಯ ಮೇಲೆ ಹೊರಳಾಡುತ್ತಾರೆ. ಕೊಟ್ಟ ಮಾತನ್ನು ಯಾರೂ ಪಾಲಿಸುವದಿಲ್ಲ. ಶಪಥ ಆಣೆಗಳನ್ನು ಗಾಳಿಗೆ ತೂರುತ್ತಾರೆ. ಕೊಟ್ಟ ಸಾಲವನ್ನು ಯಾರೂ ತಿರುಗಿ ಕೊಡುವದಿಲ್ಲ. ಬೇಕಾದಷ್ಟು ಸಂತೋಷಪಡಿಸಿದರೂ ಜನರು ಪ್ರತಿಯಾಗಿ ಏನನ್ನೂ ಕೊಡಲಾರರು. ಎಂಥ ಪ್ರಸಂಗದಲ್ಲಿಯೂ ಕೈಬಿಚ್ಚಲಾರರು. ಹಾಲಿಗಾಗಿ ಕುರಿಗಳನ್ನು ಕಟ್ಟುತ್ತಾರೆ. ರಾಜರೆಲ್ಲರೂ ಕಳ್ಳರು, ಬ್ರಾಹ್ಮಣರೆಲ್ಲರೂ ಕುಡುಕರು, ವೈಶ್ಯರೆಲ್ಲ ಅಪ್ರಾಣಿಕರು, ಶೂದ್ರರು ಉನ್ಮತ್ತರು ಆಗುವರು. ಬ್ರಾಹ್ಮಣರು ಮಾಂಸ ಭಕ್ಷಣಕ್ಕೂ ಹೇಸುವದಿಲ್ಲ. ಸ್ತ್ರೀಯರಲ್ಲಿ ಸೌಂದರ್ಯವಿಲ್ಲ, ಸತೀತ್ವವಿಲ್ಲ. ಮುತ್ತು ರತ್ನ ಬಂಗಾರದ ಆಭರಣಗಳೂ ಸ್ತ್ರೀಯರಿಗೆ ಲಭಿಸುವದಿಲ್ಲ. ಬರೀ ಕೂದಲುಗಳನ್ನು ಬೇಕಾದಂತೆ ಕತ್ತರಿಸಿಗೊಂಡು ಮುತ್ತೈದೆಯರು ಕೂಡ ಕಾರ್ತೀತೆ ಕೇಶ ವಿನ್ಯಾಸದಿಂದಲೇ ತಮ್ಮನ್ನು ಶೃಂಗರಿಸಿಗೊಳ್ಳುತ್ತಾರೆ. ಪುರುಷರು ನಿರ್ವೀಯರು ಹೆಂಗಸರನ್ನು ತೃಪ್ತಿಪಡಿಸಲಾರರು. ಚುಂಬನಾಲಿಂಗನಾದಿ ಬಹಿರಂಗ ಸುರತಕ್ಕೆ ಮಾತ್ರ ಸಮರ್ಥರು. ಆದರೂ ಸ್ತ್ರೀಲೋಲರು.

ತಂದೆ ತಾಯಂದಿರನ್ನು ದೂರಮಾಡಿ ಹೆಂಡತಿಯ ಬಳಗವನ್ನೇ ಅವಳ ಆಜ್ಞೆಯಂತೆ ಪೋಷಿಸುವರು. ಮಕ್ಕಳು ತಂದೆತಾಯಿಗಳನ್ನೇ ಕೆಲಸಕ್ಕೆ ಹಚ್ಚಿ ತಾವು ಕೆಲಸ ಮಾಡದೆ ಸುಖ ವಿಶ್ರಾಂತಿ ಅನುಭವಿಸುವರು. ಸೊಸೆಂದಿರು ಅತ್ತೆಯವರಿಂದಲೇ ಮನೆಗೆಲಸಗಳನ್ನೆಲ್ಲ ಮಾಡಿಸುವರು. ಅತ್ತೆ ನಾದಿನಿಯರನ್ನು ದಾಸಿಯರಂತೆ ನಡೆಸಿಗೊಳ್ಳುವರು. ಪತಿಯು ಕುರೂಪಿಯೂ, ರೋಗಿಷ್ಠನೂ, ದರಿದ್ರನೂ ಇದ್ದರೆ ಮಡದಿಯರು ಅವನನ್ನು ಪರಿತ್ಯಾಗ ಮಾಡಿ ಪರಪುರುಷನನ್ನು ವರಿಸುವರು. ಉಪಕಾರ ಮಾಡಿದವರನ್ನು ನೆನೆಯದೆ ಜನರು ಕೃತಘ್ನರಾಗಿರುವದೆ ಬಹಳ. ಇದೆಲ್ಲವು ಕಲಿಯುಗ ಪ್ರವೃದ್ಧವಾದುದರ ಲಕ್ಷಣ.

**ಮುನಿಗಳು:-** ಪೂಜ್ಯರೆ, ಹೀಗೆ ಯುಗಾಂತ ಕಾಲದಲ್ಲಿ ಧರ್ಮವು ಕ್ಷೀಣವಾದ ಬಳಿಕ ರಾಜರು ಒತ್ತಾಯದಿಂದ ವಿಧಿಸಿದ ಕರಭಾರದಿಂದ ಜರ್ಜರಿತರಾದಾಗ ಏನು ಮಾಡುವರು, ಯಾವ ದೇಶಗಳಿಗೆ ಹೋಗಿ ನೆಲೆಸುವರು? ಅವರ ಆಹಾರವೇನು? ವಿಹಾರವೇನು? ಧರ್ಮ ಏನು? ಸ್ಥಿತಿ ಏನು ಗತಿ ಏನು! ಅವರ ಬಾಳು ಬದುಕು ಎಂತಹುದು? ಅಧರ್ಮವು ಪರಮಾವಧಿಗೆ ಮುಟ್ಟಿದ ಬಳಿಕ ಮತ್ತೆ ಕೃತಯುಗ ಬರುವಬಗೆ ಎಂತು? ಎಲ್ಲವನ್ನೂ ಸವಿಸ್ತಾರವಾಗಿ ನಿರೂಪಿಸಿರಿ. ಮುನಿಮಹರ್ಷಿಗಳ ಈ ಪ್ರಶ್ನೆಗಳನ್ನು ಕೇಳಿ ಶ್ರೀ ಭಗವಾನ್ ವೇದವ್ಯಾಸರು ಸಮಾಹಿತ ಮನಸ್ಕರಾಗಿ ಉತ್ತರಿಸಿದರು.

**ವೇದವ್ಯಾಸರು:-** ಕಲಿಯುಗ ಭೂಮಿಯಲ್ಲಿ ಬೆಳೆದ ಬಲಿತು ನಿಂತಾಗ ಧರ್ಮಹ್ರಾಸ ವಾಗುವದು. ಅಧರ್ಮವು ಅತಿರೇಕಕ್ಕೆ ಹೋಗುವದು. ಎಲ್ಲಿ ನೋಡಿದಲ್ಲೆಲ್ಲ ಅನ್ಯಾಯದ ತಾಂಡವ, ಅನೀತಿಯ ವಿಜೃಂಭಣೆ. ಹೀಗೆ ಧರ್ಮ ಭ್ರಂಶವು ಪರಮಾಧಿಗೆ ಮುಟ್ಟಿದಾಗ ಶೀಲಭ್ರಷ್ಟರೂ, ಧರ್ಮಭ್ರಷ್ಟರೂ ಆದ ಜನ ಬಗೆಬಗೆಯ ಬವಣ, ದುಃಖ, ದುಮ್ಮಾನಗಳನ್ನು ಅನುಭವಿಸುವರು. ಶೀಲ ಭ್ರಂಶವಾದ ಬಳಿಕ ಕ್ರಮೇಣ ಅವರ ಆಯುಷ್ಯವು ಕ್ಷೀಣಿಸತೊಡಗುವದು. ಅದರಿಂದ ಶಕ್ತಿ ಕುಂಠಿತವಾಗುವದು. ಶಕ್ತಿ ಪಾತವಾದ ಬಳಿಕ ಆತ್ಮ ಗ್ಲಾನಿ ಉಂಟಾಗುವದು. ಆತ್ಮಗ್ಲಾನಿಯಾಗುವದರಿಂದ ಮನುಷ್ಯನ ಸತ್ವಸಾರ ಹೊರಟು ಹೋಗುವದು. ನಿಸ್ಸತ್ವನಾದ ನರನ ಮೇಲೆ ಬೇರೆ ಬೇರೆ ಬೇನೆಗಳು ದಾಳಿ ಮಾಡುವವು. ವ್ಯಾಧಿಗ್ರಸ್ತನಾಗಿ ರೋಗದಿಂದ ಬಳಲತೊಡಗಿದನೆಂದರೆ ಮನುಷ್ಯನಿಗೆ ಪಶ್ಚಾತ್ತಾಪವಾಗುವದು. ತನ್ನತನದ ಅರಿವು ಅಥವಾ ಆತ್ಮಜ್ಞಾನ ಉಂಟಾಗುವದು. ಆತ್ಮದ ಅರಿವಿನಿಂದ ಧರ್ಮಬುದ್ಧಿ ಜಾಗೃತವಾಗುವದು. ಧರ್ಮಬುದ್ಧಿಯಿಂದ ಮತ್ತೆ ಧರ್ಮಕರ್ಮಾನುಷ್ಠಾನಗಳು ಪ್ರಾರಂಭವಾಗುವವು. ಈ ಸಾರ್ವತ್ರಿಕವಾದ ಧಾರ್ಮಿಕಪ್ರಜ್ಞೆ ಹಾಗೂ ಧರ್ಮಾಚರಣಗಳಿಂದ ಹೊಸದಾದ ಕೃತಯುಗಕ್ಕೆ ನಾಂದಿಯಾಗುವದು. ಹೀಗೆ ಅಧರ್ಮವು ಪರಮಾವಧಿಗೆ ಏರಿದಾಗ ಜನರಿಗೆ ಬುದ್ಧಿ ಭೆಟ್ಟಿಆಗಿ, ತಲೆಬಡಿದು ನಿಜವಾದ ಧರ್ಮ, ದೇವರು, ದೈವಗಳ ಬಗ್ಗೆ ಜ್ಞಾನೋದಯವಾಗುವದು. ಧರ್ಮಪ್ರಜ್ಞೆ ಹಾಗೂ ದೇವರ ಎಚ್ಚರ ಮಾಡುವದೇ ಕೃತಯುಗದ ಲಕ್ಷಣ. ಅನಾಚಾರ ಪಾಪಾಚಾರಗಳಿಂದ ಕಲಿಕಾಲವು ಪರಿಪಕ್ವವಾದ ಬಳಿಕ ಕೃತಯುಗದ ನವೋದಯವಾಗುವದು.

ಅಲ್ಲಿಯವರೆಗೆ ಕಲಿಕಾಲವೇ ಬಲಿಯುತ್ತಲಿರುವಾಗ ಮತ್ತು ಜಗತ್ತೆಲ್ಲವೂ ಅನ್ಯಾಯ ಅಧರ್ಮಗಳ ಕಡೆಗೆ ರಭಸದಿಂದ ಓಡುತ್ತಲಿರುವಾಗ ಹಲಕೆಲವು ವಿವೇಕಿಗಳು ತಮ್ಮ ಧರ್ಮಬುದ್ಧಿಯನ್ನುಕಾಯ್ದುಕೊಂಡು ಶಾಸ್ತ್ರೋಕ್ತವಾದ ಧರ್ಮಕರ್ಮಾನುಷ್ಠಾನವನ್ನು

ಮಾಡುತ್ತಲೇ ಇರುವರು. ಅವರಿಗೆ ಇದು ಸುವರ್ಣ ಸಂಧಿ. ಇಂತು ಕಲಿ ಬೆಳೆದು ಅತ್ಯಂತ ಪ್ರಬಲವಾಗಿ ಎಲ್ಲೆಡೆಗೂ ಅಧರ್ಮದ ಕಹಳೆ ಮೊಳಗುತ್ತಿರುವಾಗಲೂ ಧರ್ಮವಾಸನೆಯಿಂದ ಅಲ್ಪಾಲ್ಪ ಧರ್ಮಕಾರ್ಯ ಮಾಡಿದರೂ ಅವರಿಗೆ ಪ್ರಭೂತ ಪುಣ್ಯ. ಅಕ್ಷಯಫಲ ಪ್ರಾಪ್ತವಾಗುವದು. ಆದಕ್ಕಾಗಿ ಎಷ್ಟೋ ಮುನಿಮಹರ್ಷಿಗಳು ಕಲಿಯು ತನ್ನ ಕರಾಳ ಸ್ವರೂಪವನ್ನು ಪ್ರವೃದ್ಧಾಕಾರವಾಗಿ ಪ್ರದರ್ಶಿಸುವಾಗ ಭೂತಲದಲ್ಲಿ ಹುಟ್ಟಿ ಧರ್ಮಸಾಧನೆಯನ್ನು ಸತ್ಕರ್ಮಾನುಷ್ಠಾನವನ್ನೂ ಮಾಡಿ ಅನಂತರ ಪುಣ್ಯ ಫಲಕ್ಕೆ ಭಾಗೀದಾರರಾಗುವರು.

ಇಂಥ ಧರ್ಮದೀಕ್ಷೆ ಮತ್ತು ಯಥಾರ್ಥ ಜ್ಞಾನವಿಲ್ಲದವರು ಮಧ್ಯಸ್ಥರಾಗಿ ಉಳಿಯುವರು. ಧರ್ಮವನ್ನೇ ನಂಬಿ ನೆಚ್ಚಿ ಶಾಸ್ತ್ರೋಕ್ತ ಕರ್ಮಾನುಷ್ಠಾನ ಮಾಡುವಷ್ಟು ಆಸ್ತಿಕರಲ್ಲ. ಎಲ್ಲವನ್ನೂ ಬಿಟ್ಟು ಅಧರ್ಮ ಅನ್ಯಾಯ ಅನೀತಿ ಮಾಡುವಷ್ಟು ನಾಸ್ತಿಕರೂ ಅಲ್ಲ. ಇಂಥ ತ್ರಿಶಂಕುಸ್ಥಿತಿಯಲ್ಲಿ ಕೆಲವರು ತೊಳಲಾಡಿದರೆ ಹಲವರು ಯಾವ ಧರ್ಮವಾದರೇನು ಎಂದು ಉದಾಸೀನ ಸ್ವಭಾವದವರು. ಮತ್ತೆ ಕೆಲವರು ಕೇವಲ ಕುತೂಹಲದಿಂದ ಧರ್ಮ ಮಾಡುವರು. ಇನ್ನು ಕೆಲವರು ಪ್ರತ್ಯಕ್ಷಮಾತ್ರ ಪ್ರಮಾಣ ಎನ್ನುವವರು, ಕೆಲವರು ಅನುಮಾನ ಒಂದೇ ಪ್ರಮಾಣ ಎಂದು ಸಾಧಿಸುವರು. ಇನ್ನೂ ಕೆಲವರು ದೇವರೂ ಇಲ್ಲ, ಧರ್ಮವೂ ಇಲ್ಲ, ಎಂದು ವಾದಿಸಿದರೆ ಮತ್ತೆ ಹಲವರು ಪ್ರತ್ಯಕ್ಷ, ಅನುಮಾನ ಆಗಮ ಯಾವದೂ ಪ್ರಮಾಣವೇ ಅಲ್ಲ ಎಂದು ಹಟದಿಂದ ಸಾಧಿಸುವರು. ಇಂಥ ಅಧರ್ಮ ಪ್ರಚುರವಾದ ಪಾಖಂಡಿಗಳ ಅಬ್ಬರದಲ್ಲಿಯೂ ಧರ್ಮನಿಷ್ಠೆಯನ್ನು ಉಳಿಸಿಕೊಂಡು ಸ್ವೋಚಿತ ಧರ್ಮಕರ್ಮಾನುಷ್ಠಾನವನ್ನು ಮಾಡುವವರಿಗೆ ಅಲ್ಪಕಾಲ ದಲ್ಲಿಯೇ ಸಿದ್ಧಿ ಶುದ್ಧಿ ಪುಣ್ಯಸಮೃದ್ಧಿಗಳು ಸುಲಭವಾಗಿ ಸಾಧ್ಯವಾಗುವವು. ವರ್ಣದಿಂದ ನೀಚರಾದವರು ವಿಪ್ರವೃತ್ತಿಯನ್ನು ಅವಲಂಬಿಸಿದರೆ ಕಲಿಕಾಲ ಪ್ರವೃದ್ಧವಾಗಿದೆ ಎಂದು ತಿಳಿಯಬೇಕು.

ಕಲಿಯುಗದಲ್ಲಿ ರಾಕ್ಷಸರೇ ರಾಜರಾಗುವರು. ಅರ್ಥಾತ್ ಆ ಕಾಲದ ರಾಜರೆಲ್ಲರೂ ತಮ್ಮ ದುಷ್ಕೃತ್ಯಗಳಿಂದ ರಾಕ್ಷಸರೇ ಆಗಿರುವರು. ಚಾಡಿ ಕೇಳುವದು, ಸ್ವಾರ್ಥಾಂಧತೆ, ಕ್ಷುದ್ರಬುದ್ಧಿ, ಕ್ಷುಲ್ಲಕ ವಿಚಾರ ಕೇವಲ ವ್ಯಾವಹಾರಿಕ ದೃಷ್ಟಿ, ಮಾಂಸಾಹಾರ, ಪರದ್ರವ್ಯಾಪಹಾರ, ಪರಸ್ತ್ರೀ ಲಂಪಟತೆ, ಕಾಮಾತುರತೆ, ಧರ್ಮಭ್ರಂಶ, ಧಾನ್ಯಾಪಹಾರ, ಹೊಲದಲ್ಲಿ ಬೆಳೆದು ನಿಂತ ಪಯರುಗಳ ಕಳವು, ಅನ್ನಪಾನಾದಿಗಳ ಕಳವು ಮುಂತಾದ ಅನ್ಯಾಯ ಕೃತ್ಯಗಳೇ ಕಲಿಯುಗದ ಮುಖ್ಯ ಲಕ್ಷಣವಾಗಿದೆ. ಒಬ್ಬ ಕಳ್ಳನು ಕಳ್ಳತನದಿಂದ ಪಡೆದದ್ದನ್ನು ಮತ್ತೊಬ್ಬ ಕಳ್ಳನು ಅಪಹರಿಸಿಬಿಡುವನು.

ಕಲಿಯುಗದಲ್ಲಿ ರಾಜರು ಅನ್ನ, ನೀರು, ಬೆಳಕು, ಗಾಳಿ ಎಲ್ಲದರ ಮೇಲೆಯೂ ಕರ ಹೇರುವರು. ಕರಭಾರದಿಂದ ಪೀಡಿತರಾಗಿ ಸಂತ್ರಸ್ತರಾದ ಜನರು ಊರು, ಮನೆಮಾರು ಹಳ್ಳಿ, ನಗರಗಳನ್ನು ತೊರೆದು ಕಾಡಿಗೆ ಓಡಿಹೋಗುವರು. ಹಸಿವೆ ಬಾಯಾರಿಕೆಗಳಿಂದ ಕಂಗೆಟ್ಟ ಜನರೆಲ್ಲರೂ ಕೌಶಿಕೀ ನದಿಯನ್ನು ದಾಟಿ ಅಂಗ, ವಂಗ, ಕಲಿಂಗ, ಕಾಶ್ಮೀರ ಮುಂತಾದ ದೇಶಗಳ ಕಡೆ ಗುಳೆಎದ್ದು ಹೋಗುವರು. ಮತ್ತೆ ಹಲವರು ಕಾಡು ಪಾಲಾಗುವರು. ಗಿರಿ, ದರಿ, ಕೊರಿ, ಗುಹೆಗಳಲ್ಲಿ ವಾಸಿಸುವರು. ಕೆಲವರು ಗುಡ್ಡ ಸೇರಿದರೆ ಹಲವರು ನದೀ ಸಮುದ್ರ ತೀರಗಳಿಗೆ ಧಾವಿಸುವರು. ಆಳಲಿಕ್ಕೆ ಬಾರದವರೇ ಶಾಸಕರಾಗಿ ದೇಶವನ್ನು ಆಳ ತೊಡಗುವರು. ಮೃಗ, ಮೀನ, ಪಕ್ಷಿ, ಹಾವು ಹುಳಹುಪ್ಪಡಿ ಪಶುಗಳನ್ನು

ಹೊಡೆದು ತಿನ್ನುವರು. ಅದೂ ಸಿಕ್ಕದಾಗ ಕಂದ ಮೂಲ ಫಲಗಳೂ ದುರ್ಲಭವಾಗಿ ಒಣಗಿದ ಎಲೆ ತಿಂದು ಹಸಿವೆಯಿಂದ ನೊಂದು ಬೆಂದ ಜನ ಮುನಿಗಳಂತೆ ನಿರಾಹಾರವಾಗಿದ್ದರೂ ವಿವೇಕೋದಯವಾಗದೆ ಇದ್ದಲ್ಲಿಯೆ ಬೇಯುವರು. ಹಸುಗಳನ್ನು ರಕ್ಷಣ ಮಾಡದೆ ಜನರು ಮನೆಯಲ್ಲಿ ಮೇಕೆ, ಒಂಟೆ, ಕತ್ತೆಗಳನ್ನು ಸಾಕುವರು. ನೀರಿಗಾಗಿ ನದೀ ತೀರಗಳಿಗೆ ನುಗ್ಗಿ ನದಿಗಳನ್ನೆಲ್ಲ ಕಲುಷಿತ ಗೊಳಿಸುವರು. ಕಲಿಯುಗದಲ್ಲಿ ಕೆಲವರಿಗೆ ಅತಿ ಸಂತಾನ, ಬಹಳ ಮಕ್ಕಳು ಮತ್ತೆ ಕೆಲವರಿಗೆ ಸಂತಾನವೇ ಇಲ್ಲದಂತಾಗುವದು. ಕುಲ, ಶೀಲ, ಧರ್ಮ, ಸದ್ಭಾವನೆಗಳು ಸಂಪೂರ್ಣ ಲೋಪವಾಗುವವು.

ಧರ್ಮಭ್ರಷ್ಟರೂ, ಶೀಲಚ್ಯುತರೂ ಆದ ಕಲಿಯುಗದ ಜನರ ಆಯುಷ್ಯವು ಮೂವತ್ತಕ್ಕೆ ಪರಿಮಿತ್ತವಾಗುವದು. ಎಲ್ಲರೂ ರೋಗಗ್ರಸ್ತರು, ದುರ್ಬಲರು. ಧರ್ಮಭ್ರಷ್ಟರಾದ ಕಲಿಯುಗದ ಜನರೆಲ್ಲರೂ ಊನರೂ, ಹೀನರೂ, ದೀನರೂ, ದೂನರೂ ಆಗಿರುತ್ತಾರೆ. ನೋವು, ಸಾವು, ಮುಪ್ಪು, ಕಷ್ಟ, ನಷ್ಟಗಳಿಂದ ಬಳಲುವ ಮಾನವರ ಆಯುಷ್ಯ ಕ್ಷೀಣವಾಗುವದು. ಇಂದ್ರಿಯಗಳಲ್ಲಿ ಭೋಗ ಶಕ್ತಿಯೇ ನಷ್ಟವಾಗಿ ಬಿಡುವದು. ಜೀವನ್ಮೃತ ಅವಸ್ಥೆಯಲ್ಲಿ ಸಾಯಲಾರದೆ ಬದುಕುವರು, ಬದುಕಲಾರದೆ ಸಾಯುವರು. ಹೀಗೆ ಜೀವನವೇ ದುಃಖ, ದುಮ್ಮಾನ, ದುಗುಡಗಳಿಂದ ದುರವಸ್ಥೆಗೆ ಈಡಾದಾಗ ಜ್ಞಾನೋದಯವಾಗುವದು. ವಿಮರ್ಶನಬುದ್ಧಿ ಜಾಗೃತವಾಗುವದು. ನಮ್ಮ ಈ ದುರ್ದೆಸೆಗೆ ಕಾರಣವೇನು? ಈ ಅಧಃಪಾತದ ಮೂಲವು ಎಲ್ಲಿದೆ ಎಂದು ವಿಚಾರಿಸಿ ಸನಾತನ ಧರ್ಮ ತ್ಯಾಗವೇ ತಮ್ಮ ಈ ಎಲ್ಲ ಅನರ್ಥ ಪರಂಪರೆಗೆ ಕಾರಣ ಎಂಬ ನಿರ್ಣಯಕ್ಕೆ ಬರುವರು. ಸಜ್ಜನರಿಗೆ ಶರಣು ಬರುವರು. ಅವರ ಸೇವೆ ಮಾಡುವರು. ಅವರ ಉಪದೇಶದಿಂದ ಧರ್ಮವೇ ತಾರಕ ಎಂದು ಮನಗಂಡು ಸತ್ಯ, ಧರ್ಮ, ಅಹಿಂಸಾ, ದಾನ ಪರೋಪಕಾರ ಮುಂತಾದ ಸದ್ಗುಣಗಳನ್ನು ತಮ್ಮಲ್ಲಿ ಬೆಳೆಸಿಕೊಳ್ಳುವರು. ಹೀಗೆ ಎಲ್ಲ ಜನರೂ ನಿಜವಾದ ವೈರಾಗ್ಯ, ಜ್ಞಾನ, ಭಕ್ತಿಗಳನ್ನು ಹೊಂದಿ ಸ್ವವಿಹಿತ ಕರ್ಮಾನುಷ್ಠಾನ ತತ್ಪರರಾಗುವದು. ಆಗಲೇ ಕೃತಯುಗದ ಉದಯವಾಗುವದು. ಗ್ರಹಣ ಮುಕ್ತನಾದ ಚಂದ್ರನಂತೆ ಎಲ್ಲರೂ ಅಧರ್ಮ, ಅನಾಚಾರಗಳಿಂದ ಮುಕ್ತರಾಗಿ ಭಕ್ತಿ, ಜ್ಞಾನ ಯುಕ್ತರಾಗಿ ನವಯುಗದ ನವೋದಯಕ್ಕೆ ನಾಂದಿ ಹಾಡುವರು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

## ಪ್ರಳಯ ನಿರೂಪಣೆ

**ಅಧ್ಯಾಯ - ೫೦**

**ವೇದವ್ಯಾಸ:-** ಎಲ್ಲ ಪ್ರಾಣಿಗಳಿಗೂ, ಮೂರು ವಿಧವಾದ ಪ್ರಳಯವು ಇರುತ್ತದೆ. ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ ಎಂದು ಮೂರು ಬಗೆಯಾಗಿದೆ ಈ ಪ್ರಳಯ. ಅದರಲ್ಲಿ ನೈಮಿತ್ತಿಕ ಪ್ರಳಯಕ್ಕೆ ಬ್ರಹ್ಮದೇವರ ಒಂದು ದಿನ ಕಳೆದ ಬಳಿಕ ಉಂಟಾಗುವದು. ಬ್ರಹ್ಮ ದೇವರ ಒಂದು ದಿನಕ್ಕೆ ಕಲ್ಪ ಎಂದು ಕರೆಯುವರು. ಬ್ರಹ್ಮದೇವರ ಒಂದು ದಿನವಾದ ಕಲ್ಪಾಂತ ಕಾಲದಲ್ಲಿ ಪ್ರಳಯವನ್ನು ನೈಮಿತ್ತಿಕ ಪ್ರಳಯ, ದೈನಂದಿನ ಪ್ರಳಯ ಎಂದು ಕರೆಯುವರು. ಬ್ರಹ್ಮದೇವರ ಆಯುಷ್ಯದ ಅರ್ಧಭಾಗಕ್ಕೆ ಪರಾರ್ಧ. ಉಳಿದ ಅರ್ಧಭಾಗಕ್ಕೆ ದ್ವಿಪರಾರ್ಧ

ಎನ್ನುವರು. ಬ್ರಹ್ಮದೇವರ ಆಯುಷ್ಯದಲ್ಲಿಯ ಐವತ್ತು ವರ್ಷ ಮೊದಲನೆಯ ಪರಾರ್ಧ. ಉಳಿದ ಐವತ್ತು ವರ್ಷ ಎರಡನೆಯ ಪರಾರ್ಧ. ಪ್ರಕೃತಿಯಲ್ಲಿ ವಿಕೃತಿ ಲೀನವಾಗುವದರಿಂದ ಉಂಟಾಗುವ ಈ ಪ್ರಳಯಕ್ಕೆ ಪ್ರಾಕೃತಿಕ ಪ್ರಳಯ ಎನ್ನುವರು. ಆತ್ಯಂತಿಕ ಪ್ರಳಯ ಎಂದರೆ ಜೀವಮುಕ್ತನಾಗಿ ಮೋಕ್ಷ ಹೊಂದುವರು. ಹೀಗೆ ಪ್ರಳಯವು ಮೂರು ವಿಧವಾಗಿರುವದು.

**ಮುನಿಗಳು:-** ಪೂಜ್ಯರೇ, ಪರಾರ್ಧಸಂಖ್ಯೆ ಎಂದರೆ ಎಷ್ಟು? ಎರಡು ಪರಾರ್ಧ ಕೂಡಿದರೆ ಒಂದು ಪ್ರಾಕೃತಿಕ ಪ್ರಳಯ ಎಂದು ಹೇಳಿದಿರಿ. ಆ ಪರಾರ್ಧ ಸಂಖ್ಯೆಯನ್ನು ತಿಳಿಸಿರಿ.

**ವೇದವ್ಯಾಸ:-** ಮನುಷ್ಯರ ಕಣ್ಣಿನ ಎಮೆ ಪಿಳಿಕಿಸುವಷ್ಟು ಕಾಲಕ್ಕೆ ನಿಮಿಷಾ, ಮಾತ್ರಾ ಎನ್ನುವರು. ಹದಿನೈದು ನಿಮಿಷಗಳು ಆದರೆ ಒಂದು ಕಾಷ್ಠಾ ಮೂವತ್ತು ಕಾಷ್ಠಾ ಆದರೆ ಒಂದು ಕಲಾ ಹದಿನೈದು ಕಲೆಗಳು ಆದರೆ ಒಂದು ನಾಡಿಕಾ. ಎರಡು ನಾಡಿಕಾ ಆದರೆ ಮುಹೂರ್ತ. ಹದಿನೈದು ಮುಹೂರ್ತಗಳು ಆದರೆ ಒಂದು ಹಗಲು. ಇನ್ನು ಹದಿನೈದು ಮುಹೂರ್ತಗಳು ಆದರೆ ಒಂದು ರಾತ್ರಿ. ಒಟ್ಟು ಒಂದು ದಿನದಲ್ಲಿ ಮೂವತ್ತು ಮುಹೂರ್ತಗಳು. ಮೂವತ್ತು ದಿನಗಳಾದರೆ ಒಂದು ತಿಂಗಳು ಅಥವಾ ಮಾಸ. ಹನ್ನೆರಡು ತಿಂಗಳುಗಳಾದರೆ ಒಂದು ವರ್ಷ. ಮನುಷ್ಯ ಮಾನದಿಂದ ಇಂಥ ವರ್ಷವೂ ದೇವತಾ ಮಾನದಿಂದ ಒಂದು ದಿವಸ ವಾಗುವದು. ಇಂಥ ದೇವಮಾನದಿಂದ ಮೂರುನೂರಾ ಅರವತ್ತು ದಿನಗಳಾದರೆ ದೈವೀ ಒಂದು ವರ್ಷ. ಈ ದೇವಮಾನದಿಂದ ಹನ್ನೆರಡು ಸಾವಿರ ವರ್ಷಗಳಾದರೆ ಒಂದು ಚತುರ್ಯುಗ ಇಂಥ ಸಾವಿರ ಚತುರ್ಯುಗ ಗಳಾದರೆ ಬ್ರಹ್ಮದೇವರ ಒಂದು ದಿನವಾಗುವದು. ಇಂಥ ಮುನ್ನೂರ ಅರವತ್ತು ದಿನಗಳಾದರೆ ಬ್ರಹ್ಮದೇವರ ಒಂದು ವರ್ಷ. ಬ್ರಹ್ಮದೇವರ ಒಂದು ದಿನಕ್ಕೆ ಕಲ್ಪ ಎನ್ನುತ್ತಾರೆ.

ಬ್ರಹ್ಮದೇವರ ಒಂದು ದಿನವಾದ ಈ ಕಲ್ಪ ಕಾಲದಲ್ಲಿ ಹದಿನಾಲ್ಕು ಮನುಗಳೂ ತಿರುಗುತ್ತಾರೆ. ಅನಂತರ ಅಷ್ಟೇ ಕಾಲ ರಾತ್ರಿ ಇರುತ್ತದೆ. ಆಗ ನೈಮಿತ್ತಿಕ ಪ್ರಳಯವು ಆಗಿರುತ್ತದೆ. ಇದು ಬ್ರಹ್ಮದೇವರ ಕಲ್ಪಕಾಲ ಪರ್ಯಂತವಾದ ದೈನಂದಿನ ಪ್ರಳಯ. ಇದರ ಕ್ರಮವನ್ನು ಹೇಳುತ್ತೇನೆ ಕೇಳಿರಿ. ಒಟ್ಟು ಚತುರ್ಯುಗ ಅಥವಾ ಮಹಾಯುಗದ ಪ್ರಮಾಣ ಹನ್ನೆರಡುಸಾವಿರ ವರ್ಷ ದೇವತಾಮಾನದಿಂದ ಇರುತ್ತದೆ. ತ್ರೇತಾಯುಗವು ಮೂರು ಸಾವಿರವರ್ಷ. ದ್ವಾಪರಯುಗವು ಎರಡುಸಾವಿರ ವರ್ಷ. ಚತುರ್ಯುಗಗಳ ಅವಸ್ಥಾನ. ಈ ನಾಲ್ಕೂ ಯುಗಗಳಿಗೂ ಅದಕ್ಕೆ ಅನುಗುಣವಾದ ಸಂಧ್ಯಾಕಾಲವೂ ಇರುತ್ತದೆ. ಒಂದು ದಿನಕ್ಕೆ ಪೂರ್ವಸಂಧ್ಯೆ ಎಂದರೆ ಪ್ರಾತಃಸಂಧ್ಯೆ. ಅಪರಸಂಧ್ಯೆ ಎಂದರೆ ಸಾಯಸಂಧ್ಯೆ. ಹೀಗೆ ಪ್ರತಿಯೊಂದು ದಿವ್ಯಕ್ಕೆ ಪೂರ್ವಸಂಧ್ಯೆ ಅಪರ ಸಂಧ್ಯೆ ಇರುವಂತೆ ಯುಗಗಳಿಗೂ ಕೂಡ ಆ ಯುಗಗಳ ಸಂಖ್ಯೆಗೆ ಅನುಗುಣವಾಗಿ ಪೂರ್ವಸಂಧ್ಯೆ ಅಪರಸಂಧ್ಯೆ ಇರುತ್ತವೆ.

ಕೃತಯುಗದ ಪ್ರಮಾಣ ನಾಲ್ಕುಸಾವಿರ ವರ್ಷ ಇದ್ದುದರಿಂದ ಅದಕ್ಕೆ ನಾಲ್ಕುನೂರು ವರ್ಷಗಳ ಪೂರ್ವಸಂಧ್ಯೆ ನಾಲ್ಕುನೂರು ವರ್ಷಗಳ ಅಪರಸಂಧ್ಯೆಗಳು ಇರುತ್ತವೆ. ಕೃತಯುಗಕ್ಕೆ ಒಟ್ಟು ದೇವಮಾನದ ಎಂಟುನೂರು ವರ್ಷಗಳಷ್ಟು ಕಾಲ ಪೂರ್ವಾಪರ ಸಂಧ್ಯಾ ಕಾಲವೂ ಇರುತ್ತದೆ.

ತ್ರೇತಾಯುಗದ ಕಾಲವು ದೇವಮಾನದ ಮೂರುಸಾವಿರ ವರ್ಷ. ಅದಕ್ಕೆ ಮೂರು ನೂರು ವರ್ಷದ ಪೂರ್ವಸಂಧ್ಯೆ, ಮೂರುನೂರು ವರ್ಷದ ಅಪರ ಸಂಧ್ಯೆ. ಒಟ್ಟು

ಆರುನೂರು ವರ್ಷದ ಪೂರ್ವಾಪರ ಸಂಧ್ಯಾ ಕಾಲವು ತ್ರೇತಾಯುಗಕ್ಕೆ ಇರುತ್ತದೆ. ದ್ವಾಪರ ಯುಗದ ನಿರ್ದಿಷ್ಟ ಅವಧಿಯು ಎರಡು ಸಾವಿರ ವರ್ಷ. ಅದಕ್ಕೆ ಎರಡುನೂರು ವರ್ಷದ ಪೂರ್ವಸಂಧ್ಯೆ ಎರಡನೂರುವರ್ಷದ ಅಪರಸಂಧ್ಯೆ, ಒಟ್ಟು ದ್ವಾಪರಯುಗಕ್ಕೆ ನಾಲ್ಕುನೂರು ವರ್ಷಗಳ ಪೂರ್ವಾಪರ ಸಂಧ್ಯಾಕಾಲ ನಿಯತವಿರುತ್ತದೆ. ಕಲಿಯುಗದ ಪ್ರಮಾಣವು ದೇವಮಾನದಿಂದ ಒಂದುಸಾವಿರ ವರ್ಷ ಇರುತ್ತದೆ. ಒಂದುನೂರು ವರ್ಷ ಪೂರ್ವಸಂಧ್ಯೆ, ಒಂದುನೂರು ವರ್ಷ ಅಪರಸಂಧ್ಯೆ ಒಟ್ಟು ಕಲಿಯುಗಕ್ಕೆ ಎರಡನೂರು ವರ್ಷಗಳ ಪೂರ್ವಾಪರ ಸಂಧ್ಯಾ ಕಾಲವು ಇರುತ್ತವೆ.

ಹೀಗೆ ಕೃತಯುಗಕ್ಕೆ ಎಂಟುನೂರು ವರ್ಷಗಳ ಸಂಧ್ಯಾಕಾಲ, ತ್ರೇತಾಯುಗಕ್ಕೆ ಆರನೂರು ವರ್ಷಗಳ ಸಂಧ್ಯಾಕಾಲ, ದ್ವಾಪರಯುಗಕ್ಕೆ ನಾಲ್ಕು ನೂರು ವರ್ಷಗಳ ಸಂಧ್ಯಾಕಾಲ, ಕಲಿಯುಗಕ್ಕೆ ಈ ಎರಡುನೂರು ವರ್ಷಗಳ ಸಂಧ್ಯಾಕಾಲ, ಹೀಗೆ ನಾಲ್ಕು ಯುಗಗಳ ಸಂಧ್ಯಾಕಾಲ ಸೇರಿ ಎರಡು ಸಾವಿರ ವರ್ಷವಾಗುತ್ತವೆ. ಕೃತಯುಗ ನಾಲ್ಕುಸಾವಿರ ವರ್ಷ, ತ್ರೇತಾಯುಗ ಮೂರುಸಾವಿರ ವರ್ಷ, ದ್ವಾಪರ ಯುಗ ಎರಡು ಸಾವಿರ ವರ್ಷ ಕಲಿಯುಗ ಒಂದುಸಾವಿರ ವರ್ಷ, ಒಟ್ಟಾರೆ ಹತ್ತುಸಾವಿರ ವರ್ಷ ಚತುರ್ಯುಗಗಳ ಅವಸ್ಥಾನ ಸಮಯವಾದರೆ ಎರಡುಸಾವಿರ ವರ್ಷ ಒಟ್ಟು ಸಂಧ್ಯಾಕಾಲ ಎಲ್ಲ ಸೇರಿಸಿದರೆ ಒಟ್ಟು ಹನ್ನೆರಡುಸಾವಿರ ವರ್ಷ ಆಗುವದು. ಈ ಹನ್ನೆರಡು ಸಾವಿರ ವರ್ಷಗಳ ಕಾಲಕ್ಕೆ ಚತುರ್ಯುಗ ಅಥವಾ ಮಹಾಯುಗ ಎನ್ನುವರು. ಇಂಥ ಸಾವಿರ ಚತುರ್ಯುಗಳು ಹೊರಳಿದರೆ ಅಥವಾ ಉರುಳಿದರೆ ಬ್ರಹ್ಮನ ಒಂದು ದಿನ. ಆಗ ಬ್ರಹ್ಮದೇವರ ಒಂದು ದೈನಂದಿನ ಪ್ರಳಯವಾಗುವದು. ಈ ಚತುರ್ಯುಗಗಳು ಸಾವಿರ ಕಳೆದ ಬಳಿಕ ಮಹೀಮಂಡಲವೆಲ್ಲವೂ ಕ್ಷೀಣ ಪ್ರಾಯ ವಾಗಿರುವದು. ಒಂದ ನೂರು ಮಾನವೀಯ ವರ್ಷ ಅತ್ಯಂತ ಉಗ್ರವಾದ ಅನಾವೃಷ್ಟಿಯಿಂದ ಮಳೆಯೇಇಲ್ಲದೇ ಭಯಂಕರವಾದ ಬರಗಾಲವು ಪ್ರಾಪ್ತವಾಗುವದು. ದುರ್ಬಲ ಪ್ರಾಣಿಗಳೆಲ್ಲವೂ ಹತ್ತು ಹೋಗುವವು. ಆಗ ಭಗವಾನ್ ಶ್ರೀಕೃಷ್ಣನು ರುದ್ರದೇವರ ರೂಪವನ್ನು ಧರಿಸಿ ಜಗತ್ತಿನ ಸರ್ವನಾಶ ಉಜ್ಜುಗಿಸುತ್ತಾನೆ.

ಅದೇ ಭಗವಾನ್ ಶ್ರೀವಿಷ್ಣು ಸೂರ್ಯನ ಏಳುರಶ್ಮಿಗಳಲ್ಲಿ ಜಲ್ವಂತರರೂಪದಿಂದ ಇದ್ದುಕೊಂಡು ಭೂಮಿಯಲ್ಲಿಯ ನೀರನ್ನೆಲ್ಲಾ ಕುಡಿದು ಒಣಗಿಸಿಬಿಡುತ್ತಾನೆ. ನೆಲದಲ್ಲಿದ್ದ ರಸವೆಲ್ಲವೂ ಸೂರ್ಯಕಿರಣಗಳಿಂದ ಶೋಷಿಸಲ್ಪಟ್ಟು ಸಮಗ್ರ ಭೂಮಂಡಲವೇ ಹೀರಲ್ಪಡುತ್ತದೆ. ಕೆರೆ, ಹೊಂಡ, ಸರೋವರ, ನದಿ, ಝರೀ, ಸಮುದ್ರ, ಭೂಮಿ, ಪಾತಾಳ ಮೊದಲಾದ ಎಲ್ಲೆಡೆಗಳಲ್ಲಿ ಇರುವ ನೀರು ನಾಶವಾಗಿ ಹೋಗುವದು. ಜಗತ್ತಿನಲ್ಲಿ ಇರುವ ನೀರನ್ನೆಲ್ಲಾ ನುಂಗಿ ನೀರುಕುಡಿದು, ಸೂರ್ಯನ ಏಳು ಕಿರಣಗಳು ಸಹಸ್ರರಶ್ಮಿಗಳಾಗಿ ಉರಿಯತೊಡಗುತ್ತವೆ. ಮೇಲಿನ ಹಾಗೂ ಕೆಳಗಿನ ಏಳು ಏಳು ಲೋಕಗಳಲ್ಲಿಯೂ ಏಳು ಸೂರ್ಯರು ಬೆಂಕಿಯ ಬಣವೆಗಳಂತೆ ಉರಿದು ಏಳು ಲೋಕಗಳನ್ನೆಲ್ಲಾ ಸುಟ್ಟು ಹಾಕುತ್ತಾರೆ. ಉರಿಯುವ ಬೆಂಕಿಯ ಬೆಟ್ಟಗಳಂತೆ ಇರುವ ಭಾಸ್ಕರನ ಅಗ್ನಿ ಕಿರಣಗಳಿಂದ ಸಪ್ತ ಸಾಗರಗಳು ಸಪ್ತದ್ವೀಪಗಳು, ಸಪ್ತಲೋಕಗಳು ಒಣಗಿ ನೀರಸ, ನಿಸ್ನೇಹ, ನಿರ್ಜಲ ಆಗಿ ಶುಷ್ಕವಾಗಿ ನಿಂತುಕೊಳ್ಳುವವು. ಜಗತ್ತಿನೊಳಗಿನ ಗಿಡ, ಗುಡ್ಡ, ನೆಲ ಜಲ ಎಲ್ಲವೂ ಸುಟ್ಟು ಹೋಗುತ್ತವೆ.

ಅನಂತರ ಕಾಲಾಗ್ನಿರೂಪರಾದ ರುದ್ರದೇವರು ಆದಿ ಶೇಷನ ಶ್ವಾಸೋಚ್ಛ್ವಾಸದ ಉರಿಯಿಂದ ಕೆಳಗಿನ ಪಾತಾಳಾದಿ ಲೋಕಗಳನ್ನು ಸುಟ್ಟು ಹಾಕುತ್ತಾರೆ. ಕೆಳಗಿನ ಏಳು ಲೋಕಗಳನ್ನು ಸುಟ್ಟುಹಾಕಿದ ಆ ಪ್ರಳಯಾಗ್ನಿಯು ಭೂಲೋಕಕ್ಕೆ ಬಂದು ಸಮಗ್ರ

ವಸುಧಾತಳವನ್ನೆಲ್ಲಾ ತನ್ನ ಜ್ವಾಲಾಮಾಲೆಯಿಂದ ನಿರ್ದಗ್ಧವನ್ನಾಗಿ ಮಾಡುತ್ತದೆ. ಹೀಗೆ ಮಹೀಮಂಡಲವನ್ನೆಲ್ಲಾ ಸುಟ್ಟುಹಾಕಿದ ಆ ಭೀಕರ ಪ್ರಳಯಾಗ್ನಿಯು ಸ್ವರ್ಗಲೋಕಕ್ಕೂ ತನ್ನ ಉರಿಯ ಕೆನ್ನಾಲಿಗೆಯನ್ನು ಚಾಚಿ ಆ ಸುರಲೋಕವನ್ನೂ ಕೂಡ ತನ್ನ ಅಕಾಂಡ ತಾಂಡವಕ್ಕೆ ಗುರಿ ಪಡಿಸುತ್ತದೆ. ಆಗ ಅಂತರಿಕ್ಷಲೋಕ, ಸ್ವರ್ಗ ಲೋಕದಲ್ಲಿದ್ದ ಸಿದ್ಧರೂ ದೇವತಾಪುರುಷರು ಆ ಪ್ರಳಯಾಗ್ನಿಯ ದಾಹವನ್ನು ತಾಳಲಾರದೇ, ಮಹೋಲೋಕಕ್ಕೆ ಹೋಗುತ್ತಾರೆ. ಸ್ವರ್ಗಲೋಕದ ಜ್ವಾಲಾಮಾಲೆಗಳು ಮಹೋಲೋಕಕ್ಕೂ ತಮ್ಮ ಉರಿಯುವ ಕೆನ್ನಾಲಿಗೆಗಳನ್ನು ಚಾಚಿದಾಗ ಆ ಸುರಸಿದ್ಧ ಅಮರ ಜನರೆಲ್ಲರೂ ಜನೋಲೋಕಕ್ಕೆ ಹೋಗುತ್ತಾರೆ.

ಹೀಗೆ ಆ ಪ್ರಳಯಕಾಲದಲ್ಲಿ ರುದ್ರಾಂತರ್ಗತನಾದ ಸಂಕರ್ಷಣ ರೂಪಿಯಾದ ಆ ಜನಾರ್ದನನು ಎಲ್ಲ ಜಗತ್ತನ್ನು ಸುಟ್ಟುಹಾಕಿ ತನ್ನ ಶ್ವಾಸೋಚ್ಛ್ವಾಸದಿಂದ ಮೇಘ ಮಂಡಲವನ್ನು ಉಂಟುಮಾಡುತ್ತಾನೆ. ಆನೆಯ ಆಕಾರದ ಅಸಂಖ್ಯ ಮೋಡ ಪಡೆಗಳು ನಿಬಿಡತರವಾದ ಪ್ರಳಯ ಮೇಘಗಳಾಗಿ, ಮಿಂಚು, ಸಿಡಿಲು, ಗುಡುಗುಗಳಿಂದ ಒಡಗೂಡಿ, ಘೋರತರವಾಗಿ ಘರ್ಜನೆ ಮಾಡತೊಡಗುತ್ತವೆ. ಮುಗಿಲು ತುಂಬ ಕಾಡಿಗೆಯ ಗುಡ್ಡ ಗಳಂತೆ, ಕನ್ನೈದಿಲೆಯ ಅರಣ್ಯಗಳಂತೆ, ಧೂಮವರ್ಣದ ಹಲವಾರು ಮೋಡಗಳು ಮುಗಿಲಿ ನಗಲಕ್ಕೂ ದಟ್ಟೈಸಿ ಧಾರಾಕಾರವಾಗಿ ಮಳೆಯನ್ನು ಸುರಿಸುತ್ತವೆ. ಆ ಮೋಡಗಳಲ್ಲಿ ಕೆಲವು ಕಪ್ಪುಬಣ್ಣದವು ಇದ್ದರೆ, ಹಲವು ಬಿಳಿ ಬಣ್ಣ, ಕೆಲವು ಕೆಂಬಣ್ಣ, ಕೆಲವು ನೀಲಿ, ಹಲವು ಹಳದಿ. ಹೀಗೆ ತರತರದ ಬಣ್ಣ, ಆಕಾಶ, ಗರ್ಜನೆ, ಗುಡುಗು, ಮಿಂಚು ಸಿಡಿಲುಗಳಿಂದ ಕೂಡಿದ ಕಲ್ಪಾಂತರ ಕಾಲದ ಮೋಡಗಳು ಮುಗಿಲುತುಂಬ ಒಟ್ಟೈಸಿ ಧಾರಾಕಾರವಾಗಿ ನೀರನ್ನು ಹೊಯ್ಯತೊಡಗುವವು. ಪ್ರಪಂಚದ ತುಂಬ ಹತ್ತಿ ಉರಿಯುತ್ತಿರುವ ದಾರುಣವಾದ ಬೆಂಕಿಯನ್ನೆಲ್ಲಾ ಕುಂಭದ್ರೋಣಿಯಿಂದ ಅಖಂಡವಾಗಿ ಸುರಿಯುತ್ತಿರುವ ಮೋಡಗಳು ಮಳೆಯ ನೀರಿನಿಂದ ಶಾಂತಗೊಳಿಸುವವು. ನೂರುವರ್ಷಗಳ ಕಾಲ ಹತ್ತಿ ಉರಿಯುತ್ತಿರುವ ಅಗ್ನಿ ಪ್ರಕೋಪವೆಲ್ಲವೂ ಶಾಂತವಾಗುವದು. ಅಗ್ನಿಪ್ರಳಯವು ಮುಗಿದು ಜಲಪ್ರಳಯವು ನೂರುವರ್ಷಗಳ ಕಾಲ ಮುನ್ನಡೆಯುವದು. ಮುಗಿಲ ಮಾಡವೇ ಒಡೆದಂತೆ, ಆಕಾಶ ಗಂಗೆಯ ಅಣೆಯ ಕಟ್ಟು ಸಿಡಿದಂತೆ, ಸಪ್ತಸಾಗರಗಳೂ ನೆಲದ ಮೇಲೆ ಮುಗುಚಿಬಿದ್ದಂತೆ ನಿರಂತರ ವೃಷ್ಟಿ ಅವಿರತ ಅಜಸ್ರಜಲ ಧಾರಾಪಾತ ಜಗತ್ತಿನ ತುಂಬ ಸಾವಿರಾರು ತಡಸಲಗಳ ತುಳುಕು. ಪ್ರಪಂಚದ ತುಂಬ ಸೂರ್ಯ, ಚಂದ್ರ, ನಕ್ಷತ್ರಗಳೆಲ್ಲವೂ ಮರೆಯಾಗಿ ಕಗ್ಗತ್ತಲೆಯೇ ನುಗ್ಗಿ ಬರುವದು, ಪ್ರಪಂಚವೆಲ್ಲವೂ ಅಂಧಕಾರಮಯ. ಹೀಗೆ ನೂರು ವರ್ಷ ಪ್ರಳಯಕಾಲದ ಮೋಡಗಳು ತೆರಪಿಲ್ಲದೇ, ಬಿಡುವಿಲ್ಲದೆ, ಒಂದೇ ಸಮನೆ ಧಾರಾಕಾರವಾಗಿ ನೀರನ್ನು ಸುರಿಸುತ್ತಲಿರುವವು.

## ಪ್ರಳಯದ ಪ್ರಕಾರಗಳು

**ವೇದವ್ಯಾಸ:-** ಮುನಿಗಳೇ ಪ್ರಳಯಕಾಲದಲ್ಲಿ ನೀರು ಜಗತ್ತನ್ನೆಲ್ಲಾ ವ್ಯಾಪಿಸಿ ಆಕಾಶದಲ್ಲಿಯ ಸಪ್ತಋಷಿಗಳ ಸ್ಥಾನವನ್ನೆಲ್ಲಾ ಆಕ್ರಮಿಸಿ ಮೊರೆಯುತ್ತಿರಲು ಈ ಭುವನ ಮಂಡಲವೆಲ್ಲವೂ ಏಕಾರ್ಣವ ಸಾಗರವಾಗುತ್ತದೆ. ಅನಂತರ ಮಹಾವಿಷ್ಣುವಿನ ನಿಟ್ಟುಸುರಿ ನಿಂದ ವಾಯುಪ್ರವಾಹಗಳು ಹೊಮ್ಮಿ ಬೀಸತೊಡಗುತ್ತವೆ. ಭಗವಂತನ ಶ್ವಾಸೋಚ್ಛ್ವಾಸದ ಲಹರೀ ಪರಂಪರೆಗಳು ವಿಶ್ವವನ್ನು ವ್ಯಾಪಿಸಿದ ಮೇಘಗಳನ್ನೆಲ್ಲಾ ನಾಶಮಾಡುತ್ತವೆ.

ಭಗವಂತನ ನಿಟ್ಟುಸಿರಿನ ವಾಯುವಿನ ಅಲೆಗಳಿಂದ ಜಗದಂಡ ಮಂಡಲವನ್ನೆಲ್ಲ ವ್ಯಾಪಿಸಿದ ಗುಡ್ಡದಂಥ ದೊಡ್ಡದೊಡ್ಡ ಮೋಡಗಳು ನಶಿಸುವವು. ಜನ ಬೆಟ್ಟದಂತೆ ಕಪ್ಪುಕಪ್ಪಾಗಿರುವ, ಮತ್ತೆ ಕೆಲವು ಕುಂಕುಮದಂತೆ ಹೊಂಬಣ್ಣದಿಂದ ವಿಜೃಂಭಿಸುವ, ಅಲತಿಗೆಯ ರಸದಂತೆ ಕೆಂಪುಕೆಂಪಾಗಿ ಹೊಳೆಯುವ ವೈಢೂರ್ಯ ರತ್ನದಂತೆ ಹಚ್ಚು ಹಸಿರಾಗಿ ಹೊಳೆಯುವ, ಇಂದ್ರನೀಲ ಮಣಿಯಂತೆ ನೀಲಿಮೆಯಿಂದ ಕೂಡಿದ, ಶಂಖ, ಕರ್ಪೂರ, ಮಲ್ಲಿಗೆ ಹೂಗಳಂತೆ ಶುಭ್ರ ವರ್ಣದಿಂದ ಘರ್ಜಿಸುವ ಮುಗಿಲಿನಲ್ಲಿ ಸಂಚರಿಸುವ ನಾನಾಬಗೆಯಾದ, ದೊಡ್ಡದೊಡ್ಡ ಪಟ್ಟಣಗಳಂತಿರುವ, ಘನಘೋರ ಘರ್ಜನೆಯಿಂದ ನೆಲ, ಮುಗಿಲುಗಳನ್ನೆಲ್ಲಾ ಪ್ರತಿಧ್ವನಿಸುವಂತೆ ಮಾಡುವ ಮೋಡದ ಪಡೆಗಳೆಲ್ಲವೂ ನಾಶವಾಗುವವು ಶ್ರೀಹರಿಯ ಶ್ವಾಸೋರ್ಮಿಗಳ ಲಹರಿಗಳಿಂದ.

ಜಗದಂಡ ಮಂಡಲವನ್ನು ತುಂಬಿದ ಮೇಘಮಂಡಲಗಳೆಲ್ಲವೂ ಪುಂಡರೀಕಾಕ್ಷನ ಶ್ವಾಸೋಚ್ಛ್ವಾಸದ ಊರ್ಮಿ ಪರಂಪರೆಗಳಿಂದ ನಾಶವಾದ ಬಳಿಕ ಆ ಭಗವಂತನು ಆ ಬೀಸುವ ಗಾಳಿಗಳನ್ನೂ ಕೂಡ ನುಂಗಿಬಿಡುವನು. ಪ್ರಪಂಚವನ್ನೆಲ್ಲ ತುಂಬಿರುವ ವಾತ ವ್ರಾತವೆಲ್ಲವೂ ಪೀತಾಂಬರನಿಂದ ಪೀತವಾದ ಬಳಿಕ ಮೊದಲಿನ ಅಸಂಖ್ಯಾತವಾದ ಪ್ರಳಯ ಮೋಡಗಳ ರಾಶಿಯು ಸುರಿದ ಜಲಧಾರಾ ಸಹಸ್ರದಿಂದ ವಿಶ್ವವೆಲ್ಲವೂ ಜಲಮಯವಾಗಿ ಪೆರ್ದೆರೆಗಳಿಂದ ಭೋರ್ಗರೆಯುತ್ತ ಇರುತ್ತದೆ. ಆ ಏಕಾರ್ಣದಾಕಾರದ ಸಾಗರದ ಜಲ ಪ್ರಪಂಚದಲ್ಲಿ ಹಾವಿನ ಹಾಸಿಗೆಯ ಮೇಲೆ ಶ್ರೀಹರಿಯು ಶಯನ ಮಾಡುತ್ತಾನೆ. ಪರಬ್ರಹ್ಮ ಸ್ವರೂಪಿಯಾದ ಆ ಶೇಷಶಾಯಿ ಆ ಮಹಾವಿಷ್ಣುವೇ ಪುನಃ ಪ್ರಪಂಚದ ಸೃಷ್ಟಿ ಕರ್ತಾರನಾಗಿದ್ದು "ವಿಶ್ವಯೋನಿ" ಎನಿಸುತ್ತಾನೆ. ವಾಸುದೇವ ಎಂದು ಕರೆಯಿಸಲ್ಪಡುತ್ತಿರುವ ಆ ಭಗವಂತನು ಏಕಾರ್ಣವ ಪ್ರಳಯೋದಕದ ಸಮುದ್ರದ ಮಧ್ಯದಲ್ಲಿ ಆದಿಶೇಷನ ಮೇಲೆ ಮಲಗಿಕೊಂಡು ತನ್ನ ಇಚ್ಛೆಯಿಂದ ಯೋಗ ನಿದ್ರೆಯನ್ನು ಮಾಡುತ್ತಾನೆ. ಈ ಪ್ರಳಯಕ್ಕೆ ನೈಮಿತ್ತಿಕ ಪ್ರಳಯ ಎಂದು ಹೆಸರು. ಪರಬ್ರಹ್ಮ ಸ್ವರೂಪಿಯಾದ ಪರಮಾತ್ಮನು ಪ್ರಳಯ ಕಾಲೀನವಾದ ಉದಧಿಯಲ್ಲಿ ಶೇಷನ ಮೇಲೆ ಶಯನ ಮಾಡುವ ನಿಮಿತ್ತದಿಂದ ಇದಕ್ಕೆ ನೈಮಿತ್ತಿಕ ಪ್ರಳಯ ಎನ್ನುತ್ತಾರೆ.

ಯೋಗನಿದ್ರೆಯಿಂದ ಯೋಗೀಶ್ವರನಾದ ಆ ಪರಮೇಶ್ವರನು ಎದ್ದಕೂಡಲೇ ಈ ಪ್ರಪಂಚಕ್ಕೆಲ್ಲಾ ಹೊಸ ಹುಟ್ಟು ಪ್ರಾರಂಭವಾಗುತ್ತದೆ. ಚತುರ್ಯುಗ ಅಥವಾ ಮಹಾಯುಗ, ಸಾವಿರಯುಗಗಳ ಕಾಲ ಬ್ರಹ್ಮದೇವರ ಒಂದು ಹಗಲಾದರೆ ಅಷ್ಟೇ ರಾತ್ರಿಯು ಇರುತ್ತದೆ. ಹಗಲೆಲ್ಲವೂ ಸೃಷ್ಟಿ, ರಾತ್ರಿ ಕಾಲವೇ ಪ್ರಳಯ. ಹಗಲಿನಷ್ಟೇ ಎಂದರೆ ಸಾವಿರ ಮಹಾಯುಗಗಳು ತಿರುಗುವಷ್ಟು ಕಾಲ ರಾತ್ರಿಕಾಲ ಅದೇ ಪ್ರಳಯ ಕಾಲ. ಆಗಲೇ ಯೋಗೀಶ್ವರನಾದ ಶ್ರೀಹರಿಯು ಸರ್ಪಶಯನನಾಗಿ ಯೋಗನಿದ್ರೆಯನ್ನು ಮಾಡುತ್ತಾ ಇರುತ್ತಾನೆ. ರಾತ್ರಿಕಾಲ ಮುಗಿದ ಬಳಿಕ ಲೋಕ ದೃಷ್ಟಿಯಿಂದ ಪ್ರಸುಪ್ತನಾದ ಪರಮಾತ್ಮನು ಪ್ರಬುದ್ಧನಾಗುತ್ತಾನೆ. ಬ್ರಹ್ಮರೂಪಿಯಾಗಿ ಹೊಸಸೃಷ್ಟಿಗೆ ಹೊಳವು ಹಾಕುತ್ತಾನೆ. ಇದನ್ನೆಲ್ಲ ನಾನು ನಿಮಗೆ ಹಿಂದೆ ತಿಳಿಸಿದ್ದೇನೆ. ಇದಕ್ಕೆ ದೈನಂದಿನ ಪ್ರಳಯ, ಅಂತರ ಪ್ರಳಯ, ನೈಮಿತ್ತಿಕ ಪ್ರಳಯ ಎಂದು ಮುಂತಾಗಿ ನಾನಾ ಬಗೆಯ ಹೆಸರುಗಳಿರುತ್ತವೆ.

## ಪ್ರಾಕೃತಿಕ ಪ್ರಳಯ

ಇನ್ನು ಪ್ರಾಕೃತ ಪ್ರಳಯದ ಸಮಾಚಾರವನ್ನು ತಿಳಿಸುತ್ತೇನೆ ಕೇಳಿರಿ. ಮಹತ್ತತ್ವಾದಿ ವಿಕಾರ ಭೂತವಾದ ಪ್ರಪಂಚವೆಲ್ಲವೂ ಕೃಷ್ಣನ ಇಚ್ಛಾವಿಶೇಷದಿಂದ ಕ್ರಮೇಣ ನಾಶವನ್ನು ಹೊಂದಲು ಪ್ರಾಕೃತಿಕ ಲಯವು ಉಂಟಾಗುತ್ತದೆ. ಈ ಭೂಮಿಯು ಜಲತನ್ಮಾತ್ರೆಯಿಂದ

ಹುಟ್ಟಿದೆ. ಇದರ ಕಾರಣೀಭೂತವಾದ ಆ ಅಪ್ ತತ್ವವು ಭೂಮಿಯ ಜೀವಾಳವಾದ ಗಂಧಾದಿಗುಣವನ್ನು ನುಂಗಿಹಾಕುತ್ತದೆ. ಹೀಗೆ ನೀರಿನಿಂದ ಪೃಥ್ವಿಯ ಗಂಧಗುಣವೆಲ್ಲವೂ ಹೀರಲ್ಪಟ್ಟಕೂಡಲೇ ಭೂಮಿಯು ನಾಶ ಹೊಂದುತ್ತದೆ. ಗಂಧತನ್ಮಾತ್ರೆಯು ನಷ್ಟವಾದ ಕೂಡಲೇ ಮಹೀಮಂಡಲವೆಲ್ಲವೂ ಜಲಾತ್ಮಕವಾಗುವದು. ಆ ಕಾಲದಲ್ಲಿ ಭಯಂಕರವಾದ ಸದ್ದು ಗದ್ದಲವನ್ನು ಮಾಡುತ್ತ ಜಲ ಪ್ರವಾಹಗಳು ತಮ್ಮ ಅಮೋಘವಾದ ಓಘಧಿಂದಲೂ, ಅದ್ಭುತವಾದ ವೇಗದಿಂದಲೂ ಪ್ರಪಂಚವನ್ನೆಲ್ಲ ತುಂಬಿಬಿಡುತ್ತವೆ. ಜಲತತ್ವವು ಜಗತ್ತನ್ನೆಲ್ಲ ಆಕ್ರಮಿಸಿ ದಶದಿಕ್ಕು ಗಳೆಲ್ಲವೂ ಸಲಿಲಮಯವಾಗುತ್ತವೆ. ನೀರಿನ ಗುಣವಾದ ರಸವು ಅಗ್ನಿಯಿಂದ ಹೀರಲ್ಪಡುತ್ತದೆ. ಆಗ ಪೊಡವಿಯ ಮಡಿಲನ್ನೆಲ್ಲ ವ್ಯಾಪಿಸಿದ ಕಡಲಿನಒಡಲೆಲ್ಲವೂ ಅಗ್ನಿಯಿಂದ ಕತಕತ ಕುದಿಯ ತೊಡಗುತ್ತದೆ. ಶುದ್ಧನೀರನ್ನೆಲ್ಲ ಜ್ಯೋತಿತತ್ವವು ಹೀರಿಕೊಳ್ಳುತ್ತದೆ. ಅದರಿಂದ ಏಕಾರ್ಣವಸಾಗರದ ಸಲಿಲವೆಲ್ಲವೂ ಜ್ಯೋತಿತ್ವವನ್ನು ಹೊಂದುತ್ತದೆ. ಹೀಗೆ ಅಪರಂಪಾರವಾದ ಸಲಿಲ ರಾಶಿ ಎಲ್ಲವೂ ಅಗ್ನಿಯ ಅವಸ್ಥೆಗೆ ಬಂದು ತಲುಪಿದಬಳಿಕ ಜಲಪ್ರಪಂಚವೆಲ್ಲವನ್ನೂ ನುಂಗಿ ನೀರುಕುಡಿದ ಅಗ್ನಿ ತನ್ನ ಜ್ವಾಲಾಮಾಲೆಗಳಿಂದ ಜಗದಂಡ ಮಂಡಲವನ್ನೆಲ್ಲ ವ್ಯಾಪಿಸಿ ಬಿಡುತ್ತದೆ. ಮೇಲೆ ಕೆಳಗೆ, ಆಳ, ಅಗಲ, ಎತ್ತರ, ಬಿತ್ತರ ಎಲ್ಲ ಕಡೆಗೂ ಉರಿಯುವ ಅಗ್ನಿಯ ವೀಚಿಮಾಲೆಗಳಿಂದ ಇಡೀ ಪ್ರಪಂಚವೇ ಬೆಂಕಿಯ ಬೆಟ್ಟದಂತೆ ಜ್ವಲಿಸತೊಡಗುತ್ತದೆ. ಅನಂತರ ವಾಯುತತ್ವವು ರೂಪತನ್ಮಾತ್ರವನ್ನು ಹಾಗೂ ವಿಶ್ವವನ್ನೇ ಆಕ್ರಮಿಸಿ ಉರಿಯುತ್ತಿರುವ ಅಗ್ನಿಕಾಂಡವನ್ನು ನುಂಗಿ ಹಾಕುತ್ತದೆ. ಪ್ರಚಂಡವಾದ ಆ ಝುಂಝಾ ವಾತದಲ್ಲಿ ಅಗ್ನಿ ಎಲ್ಲವೂ ನಾಶಹೊಂದಿ ವಾಯುವಿನ ಲೋಲಲಹರಿಗಳು ಎಲ್ಲೆಡೆಗೆ ಬೀಸ ತೊಡಗುತ್ತವೆ. ಸುತ್ತುಮುತ್ತ ಎತ್ತೆತ್ತಲೂ ಕತ್ತಲೆಯೇ ಮುತ್ತಿದ ಆ ಬ್ರಹ್ಮಾಂಡವನ್ನು ಪ್ರಳಯ ವಾಯು ತನ್ನ ವಿಶಿಷ್ಟ ವೇಗದಿಂದ ಆಕ್ರಮಿಸಿ ದಿಕ್ಕುತಪ್ಪಿ ಪ್ರವಹಿಸುತ್ತದೆ.

ಅನಂತರ ಈ ಭೀಕರವಾದ ಬಿರುಗಾಳಿಯ ಗುಣವಾದ ಸ್ಪರ್ಶವನ್ನು ಆಕಾಶವು ನುಂಗಿ ಹಾಕುತ್ತದೆ. ತೆರಪಿಲ್ಲದೇ ತಿರೆಯತುಂಬ, ಮುಗಿಲನಗಲ ಭಯಂಕರವಾಗಿ ಬೀಸಿ ಸೂಸುತ್ತಿರುವ ಆ ಬಿರುಗಾಳಿಯು ಒಮ್ಮಿಂದೊಮ್ಮೆಲೇ ಶಾಂತವಾಗುತ್ತದೆ. ಆಗ ಆಕಾಶವು ಪೂರ್ಣ ಬಯಲಾಗಿ ಬೆತ್ತಲೆಯಾಗಿ ಬಯಲಾಗಿ ನಿಂತು ಕೊಳ್ಳುತ್ತದೆ. ಅದಕ್ಕೆ ರೂಪ ಇಲ್ಲ. ರಸ ಇಲ್ಲ, ಸ್ಪರ್ಶ ಇಲ್ಲ. ಗಂಧವಿಲ್ಲ, ಆಕಾರವಿಲ್ಲ. ಇಂಥ ಪ್ರಾಕೃತಆಕಾಶವು ಶೂನ್ಯದ ಒಡಲನ್ನೆಲ್ಲಾ ತುಂಬಿಕೊಂಡು ತಾನೇತಾನಾಗಿ ಹೊಳೆಯುತ್ತದೆ. ಆಕಾಶದ ಗುಣವಾದ ಶಬ್ದಮಾತ್ರೆಯು ವಿಶಾಲವಾದ ಆಕಾಶದ ಅವಕಾಶವನ್ನೆಲ್ಲ ತುಂಬಿ ವಿಜೃಂಭಿಸುತ್ತದೆ. ಬಳಿಕ ಆ ಆಕಾಶತತ್ವವನ್ನು ಅಹಂಕಾರತತ್ವವು ಕಬಳಿಸುತ್ತದೆ. ಆ ಅಹಂಕಾರವು ಮಹತ್ತತ್ವದಲ್ಲಿ ಲೀನವಾಗುತ್ತದೆ. ಆ ಮಹತ್ತತ್ವವು ಅವ್ಯಕ್ತತತ್ವದಲ್ಲಿ ಲೀನವಾಗುತ್ತದೆ. ಅಥವಾ ಲಯವನ್ನುಹೊಂದುತ್ತದೆ. ಆ ಅವ್ಯಕ್ತ ತತ್ವಕ್ಕೆಪ್ರಕೃತಿ ಎನ್ನುವರು, ಪ್ರಧಾನ ಎನ್ನುವರು. ಆ ಅವ್ಯಕ್ತ ತತ್ವದಿಂದಲೇ ಮಹತ್ತತ್ವ, ಅಹಂಕಾರ ತತ್ವ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಮುಂತಾದ ಏಳು ತತ್ವಗಳು ಉದ್ಭೂತವಾಗಿರುತ್ತವೆ. ಇವೆಲ್ಲವೂ ವ್ಯಕ್ತ ತತ್ವಗಳು.

ಹೀಗೆ ಪ್ರಕೃತಿಯು ವ್ಯಕ್ತ ಅವ್ಯಕ್ತ ಸ್ವರೂಪ ಎಂದು ಎರಡು ವಿಧವಾಗಿದೆ. ಸತ್ವ ರಜಸ್ಸು, ತಮಸ್ಸು ಮೂರೂ ಸೌಮ್ಯ ಅವಸ್ಥೆಯಲ್ಲಿದ್ದಾಗ ಅದೇ ಪ್ರಳಯ ಎನಿಸುವದು. ಗುಣ

ವೈಷಮ್ಯವೇ ಸೃಷ್ಟಿ, ಪ್ರಳಯ ಕಾಲದಲ್ಲಿ ಪೃಥ್ವಿ ಅಪ್, ತೇಜ, ವಾಯು ಆಕಾಶ ಅಹಂಕಾರ ಮಹತತ್ವ ಮೊದಲಾದ ಏಳು ವ್ಯಕ್ತತತ್ವಗಳು ಅವ್ಯಕ್ತದಲ್ಲಿ ಲೀನವಾಗುತ್ತವೆ. ಆ ವ್ಯಕ್ತವೇ ಪ್ರಕೃತಿ ಈ ಪ್ರಕೃತಿಯು ಪರಮಾತ್ಮನ ಅಧೀನ, ಅವನೇ ಪುರುಷ ಎಂದು ಕರೆಯಲ್ಪಡುತ್ತಾನೆ. ಆ ಪರಮಾತ್ಮನಿಂದ ಸ್ವಇಚ್ಛೆಯಿಂದ ಪುರುಷನಾಮಕನಾದ ಬ್ರಹ್ಮದೇವನು ವ್ಯಕ್ತಾ ವ್ಯಕ್ತ ಪ್ರಪಂಚವನ್ನೆಲ್ಲಾ ಸೃಷ್ಟಿಮಾಡುತ್ತಾನೆ. ಪುರುಷ ನಾಮಕನಾದ ಬ್ರಹ್ಮ ಮತ್ತು ಪ್ರಕೃತಿ ಎರಡೂ ಪ್ರಳಯಕಾಲದಲ್ಲಿ ಆ ವಿಷ್ಣುವಿನಲ್ಲಿ ಲಯವನ್ನು ಹೊಂದುತ್ತವೆ. ಆ ಪರಮಾತ್ಮನು ಪ್ರಕೃತಿ, ಪುರುಷರಿಂದ ಭಿನ್ನನಾಗಿ, ಉತ್ತಮನಾಗಿ ಸರ್ವಾಂತರ್ಯಾಮಿಯಾಗಿ ಇರುತ್ತಿದ್ದು ಮಹಾವಿಷ್ಣು ಎಂಬ ಹೆಸರಿನಿಂದ ವೇದಗಳಲ್ಲಿ ಹಾಡಲ್ಪಟ್ಟಿದ್ದಾನೆ. ವೇದಾಂತಗಳಲ್ಲಿ ಹೊಗಳಲ್ಪಟ್ಟಿದ್ದಾನೆ. ಮುನಿಗಳೇ, ಕರ್ಮ ಎರಡು ವಿಧ ಪ್ರವೃತ್ತ ಕರ್ಮ ನಿವೃತ್ತ ಕರ್ಮ ಎಂದು ಪ್ರವೃತ್ತ ಕರ್ಮ ನಿವೃತ್ತಕರ್ಮ ಎರಡರಿಂದಲೂ ಯಜ್ಞಮೂರ್ತಿಯಾದ ಶ್ರೀಮನ್ ನಾರಾಯಣನು ಪೂಜಿಸಲ್ಪಡುತ್ತಾನೆ. ಪ್ರವೃತ್ತಿಮಾರ್ಗವನ್ನು ಹಿಡಿದವರು ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ಹೇಳಿದ ಮಾರ್ಗಗಳಿಂದ ಯಜ್ಞಯಾಗಗಳನ್ನು ಮಾಡಿ ಆ ಭಗವಂತನನ್ನು ಪೂಜಿಸುತ್ತಾರೆ ಆದುದರಿಂದಲೇ ಆ ಭಗವಂತನಿಗೆ ಯಜ್ಞಪುರುಷ, ಯಜ್ಞೇಶ, ಪುರುಷೋತ್ತಮ ಎಂದು ಬೇರೆಬೇರೆ ಹೆಸರುಗಳುಂಟು. ನಿವೃತ್ತಿ ಮಾರ್ಗದಲ್ಲಿ ಪ್ರವೃತ್ತರಾದವರು ಯೋಗಮಾರ್ಗದಿಂದ, ಜ್ಞಾನಯೋಗದಿಂದ ಜ್ಞಾನಮೂರ್ತಿಯಾದ ಆ ಭಗವಂತನನ್ನು ಪೂಜಿಸುತ್ತಾರೆ. ನಿವೃತ್ತಿಮಾರ್ಗ ಹಾಗೂ ಪ್ರವೃತ್ತಿಮಾರ್ಗ ಎರಡಕ್ಕೂ ಫಲಪ್ರದನಾದವನು ಆ ಸಾಕ್ಷಾತ್ ವಿಷ್ಣುವೇ, ಆ ವಿಷ್ಣು ಮನೋವಾಚಾಃ ಆಗೋಚರನಾಗಿದ್ದಾನೆ. ಶ್ರೀಹರಿಯು ನಾಶರಹಿತನಾಗಿದ್ದಾನೆ. ಆದುದರಿಂದ ಅವ್ಯಯ ಎನಿಸಿಕೊಳ್ಳುತ್ತಾನೆ. ಅವನು ವ್ಯಕ್ತನೂ ಆಗಿದ್ದಾನೆ, ಅವ್ಯಕ್ತನೂ ಆಗಿದ್ದಾನೆ. ಎಲ್ಲರ ದೇಹದಲ್ಲಿ ಅಂತರ್ಯಾಮಿ ಯಾಗಿ ಪುರುಷರೂಪದಿಂದ ನೆಲೆಸಿರುವದರಿಂದ ಅವನಿಗೆ ಪುರುಷ ಎಂದು ಹೆಸರು. ಪುರುಷೋತ್ತಮ ಎಂದೂ ಅವನನ್ನೂ ಕರೆಯುವರು. ಪರಮಾತ್ಮನೆಂದರೂ ಅವನೇ. ವ್ಯಕ್ತ ಅವ್ಯಕ್ತರೂಪವಾದ ಪ್ರಕೃತಿಯು ಮತ್ತು ಪುರುಷನು ನಿರ್ವಿಕಾರನಾದ ಆ ಭಗವಂತನಲ್ಲಿ ಲೀನವಾದ ಬಳಿಕ ಶ್ರೀಹರಿಯು ಪ್ರಳಯೋದಧಿಯಲ್ಲಿ ಶಯನ ಮಾಡುತ್ತಾನೆ. ಪರಾರ್ಧ ಪರಮಿತವಾದ ಕಾಲವೇ ಸೃಷ್ಟಿಕಾಲ, ಅದೇ ಭಗವಂತನಿಗೆ ಹಗಲು ಅನಂತರ ಅಷ್ಟೇ ರಾತ್ರಿ ಕಾಲ. ಅದೇ ಯೋಗನಿದ್ರಾ ಸಮಾರೂಢನಾದ ಭಗವಂತನಿಗೆ ಅದೇ ಶಯನಕಾಲ. ಅರ್ಥಾತ್ ರಾತ್ರಿಕಾಲ.

ತಪೋಧನರೇ, ವಾಸ್ತವಿಕವಾಗಿ ವಿಚಾರಮಾಡಿದರೆ ಅವನಿಗೆ ಹಗಲೂಇಲ್ಲ ರಾತ್ರಿಯೂಇಲ್ಲ. ಅವನು ಕಾಲಾತೀತ, ಗುಣಾತೀತ, ನಾಶಾತೀತ. ಇಲ್ಲಿ ಹಗಲು ರಾತ್ರಿ ಎಂದು ಹೇಳಿದ್ದು ಔಪಚಾರಿಕ ಅಖಂಡ ಕಾಲ ಸ್ವರೂಪಿಯೇ ಅವನು ಕಾಲನಿಯಾಮಕ ಕಾಲಾತ್ಮಕ.

ಮುನಿಗಳೇ, ನಾನು ಈಗ ಈವರೆಗೆ ನಿಮಗೆ ನೈಮಿತ್ತಿಕ ಪ್ರಾಕೃರ್ತಲಯಗಳ ಸಮಾಚಾರವನ್ನು ತಿಳಿಸಿದೆನು.

## ಆತ್ಯಂತಿಕ ಪ್ರಳಯ ನಿರೂಪಣೆ

**ವೇದವ್ಯಾಸ:-** ಮುನಿಗಳೇ, ಈಗ ನಾನು ನಿಮಗೆ ಆತ್ಯಂತಿಕ ಲಯ ಎಂದರೆ ಏನು ಎಂಬುದನ್ನು ತಿಳಿಸುತ್ತೇನೆ ಕೇಳಿರಿ.

ಮನುಷ್ಯನಿಗೆ ಮೂರು ವಿಧವಾದ ತಾಪಗಳು ಇರುತ್ತವೆ. ಅವುಗಳಿಗೆ ತಾಪತ್ರಯ ಎನ್ನುವರು. ಆಧ್ಯಾತ್ಮಿಕ ತಾಪ, ಆಧಿಭೌತಿಕ ತಾಪ, ಆಧಿದೈವಿಕ ತಾಪ ಎಂದು ಮೂರು ವಿಧವಾದ ತಾಪಗಳು ಇರುತ್ತವೆ. ಆಧ್ಯಾತ್ಮಿಕ ತಾಪವು ಮತ್ತೆ ಶಾರೀರಿಕ ತಾಪ, ಮಾನಸಿಕ ತಾಪ ಎಂದು ಎರಡು ವಿಧವಾಗಿದೆ. ಶಾರೀರಿಕ ತಾಪವು ನಾನಾ ಬಗೆಯಾಗಿದೆ. ಶಿರೋಬೇನೆ, ಜ್ವರ, ಕಲೆಶೂಲೆ, ಕಿವಿಶೂಲೆ, ಭಗಂದರ, ಹುಣ್ಣು, ಬಾವು, ದಮ್ಮು, ಕುಷ್ಠ, ನೇತ್ರರೋಗ ಅತಿಸಾರ, ಆಮಾಂಶ ಮುಂತಾಗಿ ಅನೇಕರೋಗಗಳು ಶಾರೀರತಾಪ ಎನಿಸಲ್ಪಡುತ್ತವೆ. ಮನುಷ್ಯರ ಶರೀರವನ್ನು ಉಪದ್ರವಗಳಿಂದ ಇವು ಜರ್ಝರಗೊಳಿಸುವವು. ಇದಕ್ಕೆ ಶಾರೀರಿಕ ತಾಪ ಎನ್ನುವರು. ಇದರಂತೆ ಮಾನಸತಾಪವೂ ಕೂಡ ಅನೇಕ ಬಗೆಯಾಗಿದೆ. ಕಾಮ, ಕ್ರೋಧ, ಭಯ, ದ್ವೇಷ, ಲೋಭ, ಮೋಹ, ಅಸೂಯೆ, ಅಪಮಾನ, ಈರ್ಷೆ, ಮಾತ್ಸರ್ಯ, ಸೋಲು, ನೋವು ಮುಂತಾಗಿ ಮಾನಸಿಕ ತಾಪಗಳಲ್ಲಿ ಅನೇಕ ಪ್ರಕಾರದ ವೈವಿಧ್ಯ ಇರುತ್ತದೆ. ಹೀಗೆ ಶಾರೀರಿಕ ಮಾನಸಿಕ ಎಂದು ಎರಡು ವಿಧವಾದ ಆಧ್ಯಾತ್ಮಿಕ ತಾಪವು ಮನುಷ್ಯನಿಗೆ ಮಾತ್ರವಲ್ಲ. ಪಶು, ಪಕ್ಷಿ, ಮೃಗ, ಖಗ, ಪಿಶಾಚ, ರಾಕ್ಷಸ, ಹಾವು, ಚೇಳು, ಕ್ರಿಮಿ, ಕೀಟ ಮುಂತಾದ ಎಲ್ಲ ಪ್ರಾಣಿಗಳಿಗೂ ಈ ಮಾನಸಿಕ ಹಾಗೂ ದೈಹಿಕ ತಾಪ ಇದ್ದದ್ದೇ.

ಇನ್ನು ಆಧಿದೈವಿಕ ತಾಪ ಎಂದರೆ ಏನು ಎಂಬುದನ್ನು ಹೇಳುತ್ತೇನೆ ಕೇಳಿರಿ. ಚಳಿ, ಮಳೆ, ಗಾಳಿ, ಬಿಸಿಲು, ಸಿಡಿಲು, ನೀರು, ಹವೆ, ಶಕೆ, ಅತಿವೃಷ್ಟಿ, ಅನಾವೃಷ್ಟಿ, ಗ್ರಹ, ನಕ್ಷತ್ರ, ಕ್ಷಾಮ, ಡಾಮರ ಮುಂತಾದವುಗಳ ವೈಪರೀತ್ಯ ಅಥವಾ ವೈಷಮ್ಯದಿಂದ ಬರುವ ತಾಪಗಳೆಲ್ಲವೂ ಆದಿ ದೈವಿಕ ತಾಪಗಳೆಂದು ಕರೆಯಲ್ಪಡುತ್ತವೆ.

ಮೂರನೆಯದಾದ ಆಧಿಭೌತಿಕ ತಾಪವು ಹಾವು, ಚೋಳು, ಹುಲಿ, ಕರಡಿ, ಸಿಂಹ, ದೆವ್ವ, ಭೂತ, ಪಿಶಾಚ, ರಾಕ್ಷಸ ಮತ್ತು ಪಾಶವೀ ಸ್ವಭಾವದ ರಾಕ್ಷಸೀ ಸ್ವಭಾವದ ವೈರಿಗಳು ಮುಂತಾದವುಗಳಿಂದ ಬರುವದು. ಈ ತಾಪಕ್ಕೆ ಆಧಿಭೌತಿಕ ತಾಪ ಎನ್ನುವರು. ಈ ಎಲ್ಲ ತಾಪಗಳು ಅಸಂಖ್ಯವಾಗಿ ಅಸಹ್ಯವಾಗಿವೆ. ಹುಟ್ಟು, ಸಾವು, ನೋವು, ಅಜ್ಞಾನ, ಮುಂತಾಗಿ ಬರುವ ದುಃಖಗಳಿಂದ ಈ ತಾಪಗಳು ಸಾವಿರಾರು ಪ್ರಕಾರವುಳ್ಳವುಗಳು ಇರುತ್ತವೆ.

ಪ್ರಾಣಿಯು ತಾಯಿಯ ಗರ್ಭದಲ್ಲಿದ್ದಾಗ ಅನೇಕ ಮಲಗಳಿಂದ ಒಡಗೂಡಿದ ಅವಳ ಉದರದಲ್ಲಿ ಒಂದು ಚರ್ಮದ ಚೀಲದಲ್ಲಿ ಮೈ, ಕೈ, ಬೆನ್ನು, ಕತ್ತು, ಮೂಳೆ, ಎಲ್ಲವನ್ನೂ ಮುದುಡಿಕೊಂಡು ಒಂಭತ್ತು ತಿಂಗಳು ಇರಬೇಕಾಗುತ್ತದೆ. ತಾಯಿಯು ನಾಲಿಗೆಯ ರುಚಿಗೆ ತಿನ್ನುವ ಅತೀ ಖಾರ, ಉಪ್ಪು, ಹುಳಿ, ಬಿಸಿಬಿಸಿ ಪದಾರ್ಥಗಳಿಂದ ಜೀವಗರ್ಭಾಂಕಣದಲ್ಲಿ ಭಯಂಕರ ದುಃಖಪಡುತ್ತಾನೆ. ಕೈಕಾಲುಗಳನ್ನು ಆಚೆಈಚೆ ಅಲುಗಾಡಿಸಲಿಕ್ಕೂ ಅಸಮರ್ಥ. ಮಲಮೂತ್ರ, ರಕ್ತ, ಕೀವುಗಳ ಹೊಲಸಿನಲ್ಲಿಯೇ ಹೊರಳಾಡಬೇಕು. ಅವನಿಗೆ ಉಸಿರಾಟ ಕೂಡ ಕಷ್ಟ. ಆಗ ಅವನಿಗೆ ಹಿಂದಿನ ಜನ್ಮಗಳೆಲ್ಲವೂ ನೆನಪಾಗುವವು. ಪೂರ್ವ ಕರ್ಮಾನುಸಾರವಾಗಿ ಪ್ರಾಣಿಯು ಇಂಥ ದುಃಖವನ್ನು ಅನುಭವಿಸುತ್ತಾನೆ. ಒಂಭತ್ತುತಿಂಗಳು ತುಂಬಿದ ಬಳಿಕ ಪ್ರಜಾಪತ್ಯ ವಾಯುವಿನಿಂದ ಪೀಡಿತನಾಗಿ ಹೊರದಬ್ಬಲ್ಪಡುತ್ತಾನೆ. ಮಲಮೂತ್ರ ನೆತ್ತರಗಳು, ಮೈತುಂಬ ಮೆತ್ತಿರುತ್ತವೆ. ಪ್ರಬಲವಾದ ಪ್ರಸೂತಿ ವೇದನೆಗಳಿಂದ ಬಹಳ ಕಷ್ಟಗಳಿಂದ ತಾಯಿಯ ಹೊಟ್ಟೆಯಿಂದ ಹೊರಬಿದ್ದ ಜಂತು ಮೂರ್ಛೆಹೊಂದಿ ನೆಲದ ಮೇಲೆ ಬೀಳುತ್ತಾನೆ. ಕೂಡಲೇ

ಬಾಹ್ಯವಾಯು ಸಂಪರ್ಕದಿಂದ ಚೇತರಿಸಿಕೊಂಡು ಅಳಲು ಪ್ರಾರಂಭ ಮಾಡುತ್ತಾನೆ. ಜನ್ಮಾಂತರದ ನೆನಪುಗಳೆಲ್ಲವೂ ಅಳಿಸಿ ಹೋಗುತ್ತವೆ. ಬಾಲ್ಯದಲ್ಲಿ ಮುಳ್ಳುಚುಚ್ಚಿದವರಂತೆ, ಕರಗಸದಿಂದ ಕೊಯ್ಯಲ್ಪಟ್ಟವರಂತೆ ದುಃಖಿಸುವನು. ಮೈಹುಣ್ಣನ್ನು ಮೇಯುವ ಅಥವಾ ಮೈಹುಣ್ಣಿನಿಂದ ಉದುರಿದ ಕೀಟದಂತೆ ನೆಲದ ಮೇಲೆ ಬಿದ್ದು ಹೊರಳಾಡುತ್ತಾನೆ. ಭಯಂಕರ ರೋದನೆ ಮಾಡುತ್ತಾನೆ. ತಿಂಡಿಬಿಟ್ಟರೂ ತುರಿಸಿಕೊಳ್ಳಲಾರ, ಹಸಿವೆಯಾದರೂ ಉಣ್ಣಲಾರ, ತಾನಾಗಿಯೇ ತಾಯಿಯ ಮೊಲೆಯನ್ನು ಕುಡಿಯಲಾರ. ಆಚೆ ಈಚೆ ಅಲುಗಾಡಲಾರ. ತಾಯಿ ಕೊಟ್ಟಾಗ ಮಾತ್ರ ಹಾಲು, ನೀರು, ಪಾನ ತಿನಿಸಿದಾಗಲೆ ಅನ್ನಪ್ರಾಶನ. ಮೈ ತೊಳೆದಾಗ ಅಷ್ಟೇ ದೇಹಶುದ್ಧಿ. ಅವಳು ಜಾಡಿಸಿದಾಗ ಮಾತ್ರ ನೊಣ ಹುಳಗಳ ಬಾಧಾ ಪರಿಹಾರ. ಯಾವದೇ ನವೆ, ನೋವು ನರಳಿಕೆ ಬಂದರೂ ತಾನಾಗಿಯೇ ಯಾವದನ್ನೂ ನಿವಾರಿಸಿಕೊಳ್ಳಲಾರ.

ಅಜ್ಞಾನರೂಪ ಆವರಕದಿಂದ ಆವರಿಸಲ್ಪಟ್ಟ ಮೂಢ ಮಾನವನು ಎಲ್ಲಿಂದ ಬಂದೆ? ಏಕೆ ಬಂದೆ? ಹೇಗೆ ಬಂದೆ? ನನ್ನ ಸ್ವರೂಪವೇನು? ಯಾಕೆ ಈ ಬಂಧನದಲ್ಲಿ ಬಿದ್ದಿದ್ದೇನೆ? ನಾನು ಮುಂದೆ ಏನು ಮಾಡಬೇಕು? ಏನನ್ನುಮಾಡಬಾರದು? ಏನು ನುಡಿಯಬಾರದು? ಕರ್ತವ್ಯ ಏನು? ಅಕರ್ತವ್ಯ ಯಾವದು? ಗುಣ ಯಾವದು? ದೋಷ ಯಾವದು? ಯಾವದನ್ನೂ ತಿಳಿಯಲಾರ. ತನಗೆ ಅನಿಸಿದ್ದನ್ನೂ ಹೇಳಲಾರ. ಬಯಸಿದ್ದನ್ನೂ ಬೇಡಲಾರ. ಬೇಡವಾದದ್ದನ್ನು ತಡೆಯಲಾರ. ಹೀಗೆ ಮಾನವನು ಬಾಲ್ಯದಲ್ಲಿ ಮೂರ್ಖನಂತೆ, ತಾರುಣ್ಯದಲ್ಲಿ ಉನ್ಮತ್ತನಂತೆ ಇರುತ್ತಾನೆ. ವಾರ್ಧಕ್ಯದಲ್ಲಿ, ಬಾಲ್ಯ, ಯೌವ್ವನದಲ್ಲಿ ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಡುತ್ತಾನೆ. ಹಸಿವು, ಕಾಮ ಇವೆರಡರ ಒತ್ತಡವನ್ನು ತಾಳಲಾರದೇ ಶಿಶ್ನೋದರಗಳ ತೃಪ್ತಿಗಾಗಿ ಬಹಳ ಕಷ್ಟಪಡುತ್ತಾನೆ. ಅಜ್ಞಾನ, ತಾಮಸ, ಭಾವ, ದುಷ್ಕರ್ಮ ಪ್ರವೃತ್ತಿ ಇವೆಲ್ಲವೂ ಅವನ ಸ್ವಭಾವದಲ್ಲಿಯೇ ಬಂದುಬಿಡುತ್ತವೆ. ಆದರಿಂದ ಕೊನೆಗೆ ನರಕದ ಹಾದಿಯನ್ನೇ ಹಿಡಿಯುತ್ತಾನೆ.

ಮುದುಕನಾದ ಬಳಿಕ ಮುಪ್ಪಿನಿಂದ ದೇಹವೆಲ್ಲವೂ ಜರ್ಜರಿತವಾಗುತ್ತದೆ. ಅಂಗಾಂಗಗಳಲ್ಲಿ ತ್ರಾಣ ಇಲ್ಲದೇ ತಲೆ, ಮೈ ಎಲ್ಲವೂ ಜೋಲಾಡುವದು. ಹಲ್ಲು ಬಿದ್ದು ಹೋಗುವದು. ದೃಷ್ಟಿ ಮಂದವಾಗುವದು. ಮೈತುಂಬ ನರನೀರಿಗೆಗಳು ಎದ್ದುಕಾಣುವವು. ಮೂಗಿನ ಹೊರಲೆಯಲ್ಲಿಯೂ ತೊಂಡು ಗೂದಲು, ದೇಹದಲ್ಲಿ ನಡುಕ, ಬೆನ್ನಿನಲ್ಲಿ ಬಾರು, ಹಸಿವೆ ಮಂದ. ಪಚನಶಕ್ತಿ ಕುಂಠಿತ. ಆದರಿಂದ ಅಲ್ಪ ಆಹಾರ, ಅಲ್ಪ ಚೇಷ್ಟಾ, ಓಡಾಡಲು ಕಷ್ಟ. ಎದ್ದುನಿಲ್ಲಲಿಕ್ಕೂ ಆಗುವದಿಲ್ಲ. ಕಿವಿ ಕೇಳುವದಿಲ್ಲ, ಕಣ್ಣು ಕಾಣುವದಿಲ್ಲ. ಬಾಯಿಂದ ಸುರಿಯುವ ಜೊಲ್ಲು ನಿಲ್ಲುವದಿಲ್ಲ. ಇಂದ್ರಿಯಗಳ ಮೇಲೂ ಇವನಿಗೆ ನಿಯಂತ್ರಣವಿಲ್ಲ. ಸುಖಸಾಧನವಾದ ಎಲ್ಲ ಇಂದ್ರಿಯಗಳು ಹೀಗೆ ದುಃಖಕರವಾಗಿ ಬಗೆಬಗೆಯಾಗಿ ದುಃಖ ತೊಂದರೆಗಳನ್ನು ತಂದುಕೊಡುತ್ತವೆ. ಒಂದು ಮಾತನ್ನು ಉಚ್ಚರಿಸಬೇಕಾದರೂ ಬಹಳ ಶ್ರಮದಿಂದ ಅರ್ಧಮರ್ಧ ಉಚ್ಚರಿಸಬೇಕಾಗುವದು. ಕಫ, ಪಿತ್ತ, ವಾತಗಳ ಉಪದ್ರವದಿಂದ ನಿದ್ರೆಯಿಲ್ಲದೆ ಬೆಳಗಿನವರೆಗೆ ಜಾಗರ ಮಾಡಬೇಕಾಗುವದು. ಏಳಬೇಕೆಂದರೆ ಯಾರಾದರೂ ಬಂದು ಎಬ್ಬಿಸಬೇಕು. ಇನ್ನೊಬ್ಬರು ಇಳಿಸಬೇಕು. ಮಲಮೂತ್ರಗಳನ್ನು ತೊಳಿಸಬೇಕು. ಹಾಸಿಗೆಯ ಮೇಲೆ ಹೊರಳಿಸಬೇಕು. ಆಚೆ ಈಚೆ ಉರುಳಿಸಬೇಕು. ಈ ಎಲ್ಲ ಇವನ ಸೇವೆಗಾಗಿ ಬೇಸತ್ತ ಮಡದಿಮಕ್ಕಳು

ಬಿರುನುಡಿ ಗಳನ್ನಾಡಿ ಅಪಮಾನ ಪಡಿಸುವರು. ಮೈ ಎಲ್ಲ ಹೊಲಸು, ಹಾಸಿಗೆ ಹೊಲಸು, ಮಾತು ಅಸ್ಪಷ್ಟ, ಆದರೂ ತಿನ್ನುವ ಚಪಲ ಹೋಗುವದಿಲ್ಲ. ಎಲ್ಲರಂತೆ ತಾನೂ ಕೂಡ ಆಡಬೇಕು, ತಿನ್ನಬೇಕು, ನೋಡಬೇಕು, ಹಾಡಬೇಕು, ಕುಡಿಯಬೇಕು, ಕುಪ್ಪಳಿಸಬೇಕು ಎಂದು ಪಡಪಡಿಸುವನು. ಅವನ ಈ ಚಾಪಲ್ಯವನ್ನು ನೋಡಿ ಬಂಧು ಬಾಂಧವರೆಲ್ಲರೂ ಅಪಹಾಸ ಮಾಡುವರು. ತನ್ನ ಬಾಲ್ಯ ತಾರುಣ್ಯದಲ್ಲಿ ಮಾಡಿದ ಆಹಾರ ವಿಹಾರಾದಿಗಳನ್ನು ನೆನೆದು ದುಃಖಪಡುವನು. ಹೀಗೆ ಮುಪ್ಪಿನ ಕಾಲ ಎಂದರೆ ಜೀವನ ಮರಣ ಅವಸ್ಥೆಯೇ ಸರಿ. ಸಾಯುವ ಮುನ್ನ ಮಾನವನು ಪಡುವ ಬನ್ನ ಬವಣೆಗಳಿಗೆ ಲೆಕ್ಕವಿಲ್ಲ. ಕೇಳಿದರೆ ದಿಕ್ಕು ತಪ್ಪುವದು. ಹಿಂದಿನದೆಲ್ಲ ನೆನೆನೆನೆದು ನಿಟ್ಟುಸಿರು ಇಡುತ್ತಾನೆ. ತಾನೇ ಸಾಯಲು ಹೊರಟಿದ್ದರೂ ತನ್ನ ಅನಂತರ ಮಡದಿ ಮಕ್ಕಳು ಹೇಗೆ ಬಾಳುವರು ಬದುಕುವರು ಬೆಳೆಯುವರು ಎಂದು ವ್ಯರ್ಥ ಚಿಂತೆಯನ್ನು ಮಾಡುವನು. ಮರಣ ಕಾಲದಲ್ಲಿ ಮಾನವನಿಗೆ ಪ್ರಾಣಾಂತಕ ರೋಗಗಳು ಗಂಟು ಬಿದ್ದಿರುತ್ತವೆ. ಅನೇಕ ರೋಗಗಳಿಂದ ಮೈ ಕೈಗಳನ್ನೆಲ್ಲ ಕಡಿದು ಕತ್ತರಿಸಿದಂತೆ, ಬಾಣ ಹೊಡೆದಂತೆ, ಖಡ್ಗ ಜಡಿದಂತೆ, ಬರ್ಜಿ ಚುಚ್ಚಿದಂತೆ ನೋವಾಗಿ ಆರ್ತನಾಗಿ ಚೀರಿಕೊಳ್ಳುವನು. ಕಣ್ಣು ಗುಡ್ಡೆಗಳು ತಿರುಗಿ ಹೋಗುವವು ನಾಲಿಗೆ ಒಣಗುವದು. ಮೈ ಬಿಸಿಯಾಗುವದು, ತುಟಿ ಹಸಿ ಆಗುವದು, ಕೈ ಕಾಲು ಜೋಲುವವು. ಮೇಲಿಂದ ಮೇಲೆ ಮೂರ್ಛೆ ಮತ್ತೆ ಎಚ್ಚರ, ಎಚ್ಚರವಾದಾಗೆಲ್ಲ "ನಾನು ಸಂಪಾದಿಸಿದ ಹೊಲ, ಮನೆ, ಧನ, ಧಾನ್ಯ, ಬೆಳ್ಳಿ ಬಂಗಾರ, ನಗ ನಾಣ್ಯಗಳನ್ನು ಯಾರು ಅಪಹರಿಸುವರೋ" ಎಂಬ ಚಿಂತೆ. ನಾನು ಸತ್ತು ಹೋದರೆ ಹೆಂಡತಿಯ ಗತಿ ಏನು? ಮಕ್ಕಳ ಸ್ಥಿತಿ ಏನು! ಎಂದು ಗೋಳಾಡುತ್ತಾನೆ. ಭಯಂಕರವಾದ ರೋಗಗಳಿಂದ ಕೈ ಕಾಲುಗಳನ್ನೆಲ್ಲ ಕತ್ತರಿಸಿದಂತಾಗಿ ನಾಲಿಗೆ ಒಣಗಿ, ಕಂಠ ಗುರು ಗುರು ಎನ್ನುತ್ತದೆ. ಉಸಿರು ಕಟ್ಟಿಹೋಗುತ್ತದೆ. ಯಮದೂತರಿಂದ ಸೆಳೆಯಲ್ಪಟ್ಟು ಬಹಳ ಕಷ್ಟದಿಂದ ದೇಹವನ್ನು ಬಿಡುತ್ತಾನೆ.

ಈ ದೇಹದಿಂದ ಹೊರಬಿದ್ದು ಯಾತನಾಮಯ ದೇಹವನ್ನು ಹೊಂದಿ ನರಕಕ್ಕೆ ಹೋಗುತ್ತಾನೆ. ಯಮಲೋಕದಲ್ಲಿ ಯಮಕಿಂಕರರು ಇವನನ್ನು ಯಮಪಾಶದಿಂದ ಎಳೆದಾಡಿ, ಬಡಿಗೆಯಿಂದ ಬಡಿದು, ಕಲ್ಲಿನಿಂದ ಜಜ್ಜಿ, ಕೈಕಾಲುಗಳನ್ನು ಮುರಿದಂತೆ ಮಾಡಿ ವಿಚಿತ್ರ ದುಃಖವನ್ನು ಉಂಟುಮಾಡುವರು. ನರಕ ಲೋಕದಲ್ಲಿ ಕರುಣಾಶೂನ್ಯರಾದ ಅಂತಕನ ದೂತರು ಪಾಪಿ ಜೀವವನ್ನು ಸುಡುವ ಉಸುಕಿನಲ್ಲಿ ನಡೆಸುವರು. ಉರಿಯುವ ಬೆಂಕಿಯಲ್ಲಿ ಹಾಯಿಸುವರು. ಕೊರೆಯುವ ಯಂತ್ರಗಳಿಗೆ ಒಡ್ಡುವರು. ಭೀಕರ ಶಸ್ತ್ರಾಸ್ತ್ರಗಳಿಗೆ ಒಳಪಡಿಸುವರು. ಕರಗಸದಿಂದ ಕೊರೆಯುವರು. ಕಾಯ್ದ ಎಣ್ಣೆಯಲ್ಲಿ ಬೇಯಿಸುವರು. ಖಡ್ಗದಿಂದ ಸೀಳುವರು. ಭೂಮಿಯಲ್ಲಿ ಹುಗಿಯುವರು. ನೇಣುಗಂಬದಲ್ಲಿ ಜೋತಾಡಿಸುವರು. ಹುಲಿಯ ಬಾಯಲ್ಲಿ ಇಡುವರು. ಹದ್ದುಗಳಿಂದ ಸೀಳಿ ತಿನ್ನಿಸುವರು. ಕುದಿಯುವ ಎಣ್ಣೆಯ ಕಡಾವೆಯಲ್ಲಿ ಕರಿದು ತೆಗೆಯುವರು. ಮೇಲೆ ಮೈ ತುಂಬ ಉಪ್ಪನ್ನು ಉದುರಿಸುವರು ಎತ್ತರದಿಂದ ನುಗಿಸುವರು. ಯಂತ್ರದಲ್ಲಿ ತಲೆ ಇರಿಸುವರು. ಇಂಥ ಅಸಂಖ್ಯ ದುಃಖಗಳನ್ನು ಪಾಪಿ ಮನುಷ್ಯರು ನರಕದಲ್ಲಿ ಅನುಭವಿಸಬೇಕಾಗುವದು.

ಬ್ರಾಹ್ಮಣೋತ್ತಮರೇ ನರಕದಲ್ಲಿ ಮಾತ್ರ ಈ ಭಯಾಪಾಯ ಇದೆ ಎಂದಲ್ಲ. ಸ್ವರ್ಗಕ್ಕೆ ಹೋದರೂ ಜೀವಿಗೆ ದುಃಖ ತಪ್ಪಿದ್ದಲ್ಲ. ಪುಣ್ಯ ಸವೆದ ಕೂಡಲೇ ಸ್ವರ್ಗದಿಂದ ಅರ್ಧಚಂದ್ರ ಪ್ರಯೋಗ ಆಗುವದು. ನೆಲಕ್ಕೆ ಬಿದ್ದ ಕೂಡಲೇ ಮತ್ತೆ ಸುರು ಅದೇ ದುಃಖ ವಿಷಚಕ್ರ. "ಪುನರಪಿ ಜನನಂ ಪುನರಪಿ ಮರಣಂ" ಹೀಗೆ ಹುಟ್ಟು ಸಾವುಗಳ ಕಾಲಚಕ್ರದಲ್ಲಿ

ತಿರುಗಿಸಲ್ಪಡುವ ಪ್ರಾಣಿಗೆ ಸುಖವೆಲ್ಲಿ? ಶಾಂತಿ ಎಲ್ಲಿ? ಜನನ ಮರಣಗಳ ಈ ಜಾಲದಿಂದ ಹೊರಗೆ ಬರಲು ಮನುಷ್ಯನಿಗೆ ಒಂದೇ ಒಂದು ಮಾರ್ಗ ಇದೆ. ಅದು ಭಗವತ್ ಪ್ರಾಪ್ತಿ. ಶ್ರೀಹರಿಯ ಪಾದಚ್ಛಾಯೆಯನ್ನು ಆಶ್ರಯಿಸಿದರೆ ಆಧ್ಯಾತ್ಮಿಕ, ಆದಿಭೌತಿಕ, •ಆಧಿದೈವಿಕ ತಾಪತ್ರಯಗಳೆಲ್ಲವೂ ತಾವಾಗಿಯೇ ತೊಳೆದು ಹೋಗುವವು. ಸಂಸಾರ ದುಃಖರೂಪ ಬೇಸಿಗೆಯ ಬಿಸಲಿನಿಂದ ಸಂತಪ್ತರಾದವರಿಗೆ, ನಿರಪಾಯವಾದ ಆಶ್ರಯ ಸ್ಥಾನ ಅಂದರೆ, ತಂಪಿನ ತಾಣ ಎಂದರೆ ಭಗವಂತನ ಕರುಣೆಯ ನೆರಳು ಮಾತ್ರ. ಸರ್ವದುಃಖಗಳ ಉಪಶಮನಕ್ಕೆ ಏಕಮಾತ್ರವಾದ ಉಪಾಯವೆಂದರೆ ಭಗವಂತನ ದಿವ್ಯಧ್ಯಾನ. ಧ್ಯಾನದಿಂದ ಅವನ ದಿವ್ಯಜ್ಞಾನ. ಆ ಜ್ಞಾನದಿಂದ ಭಗವಂತನ ಪ್ರಸಾದ. ಆ ಭಗವತ್ ಪ್ರಸಾದದಿಂದ ಅತ್ಯಂತಿಕ ದುಃಖ ನಿವೃತ್ತಿ. ಇದಕ್ಕೆ ಅತ್ಯಂತಿಕ ಲಯ ಎನ್ನುವರು. ಇಂಥ ಭಗವತ್ ಪಾದಪ್ರಾಪ್ತಿಗಾಗಿಯೇ ಪ್ರಾಣಿಗಳೆಲ್ಲರೂ ಪ್ರಾರ್ಥನೆ ಮಾಡಬೇಕು. ಶ್ರೀಹರಿಯ ಶ್ರವಣ ಮನನಾದಿಗಳನ್ನು ಮಾಡಿ ಭಕ್ತಿಯಿಂದ ಅವನ ಪ್ರಸಾದವನ್ನು ಪಡೆಯಬೇಕು.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಐವತ್ತನೆಯ ಅಧ್ಯಾಯ ಮುಗಿದುದು*

## ಕ್ಷರಾಕ್ಷರ ವಿಚಾರ

## ಅಧ್ಯಾಯ - ೫೧

**ಮುನಿಗಳು:-** ವ್ಯಾಸ ಮಹರ್ಷಿಗಳೇ, ಈ ಪ್ರಪಂಚವೆಲ್ಲವೂ ಕ್ಷರ. ಪರಬ್ರಹ್ಮನೊಬ್ಬನೇ ಅಕ್ಷರ ಎಂದು ಹೇಳಿದಿರಿ. ಈ ವಿಷಯದಲ್ಲಿ ನಮಗೆ ಇನ್ನೂ ಹೆಚ್ಚಿನ ಜ್ಞಾನವನ್ನು ಮಾಡಿಕೊಡಬೇಕು.

**ವೇದವ್ಯಾಸ:-** ಪೂರ್ವ ಕಾಲದಲ್ಲಿ ವಶಿಷ್ಠ ಮತ್ತು ಕರಾಳ ಜನಕರ ಸಂವಾದವು ಇದೇ ವಿಷಯದಲ್ಲಿ ಆಯಿತು. ಈ ಸಮಾಚಾರವನ್ನು ನಿಮಗೆ ತಿಳಿಸುತ್ತೇನೆ ಕೇಳಿರಿ.

ರಾಜಋಷಿ ಎಂದೂ ಅಧ್ಯಾತ್ಮಯೋಗಿ ಎಂದೂ ಪ್ರಸಿದ್ಧನಾದ ಜನಕರಾಜನ ಆಸ್ಥಾನದಲ್ಲಿ ಒಂದು ದಿನ ವಶಿಷ್ಠರು ಕುಳಿತುಕೊಂಡಿದ್ದರು. ಅವರು ದೇದೀಪ್ಯ ಮಾನವಾದ ತಮ್ಮ ಕಾಂತಿಯಿಂದ ಉದಯಸೂರ್ಯನಂತೆ ಹೊಳೆಯುತ್ತಿದ್ದರು. ಆಗ ಅವರಿದ್ದಲ್ಲಿಗೆ ಜನಕರಾಜನು ಕೈಮುಗಿದುಕೊಂಡು ಬಂದು ಭಕ್ತಿಯಿಂದ ವಂದಿಸಿ, ವಿನಯದಿಂದ ಕೇಳಿಕೊಂಡ. ''ಮಿತ್ರಾ ವರುಣರ ಮಕ್ಕಳಾದ ಬ್ರಹ್ಮಜ್ಞಾನಿಗಳಾದ ವಶಿಷ್ಠರೇ, ಪರಬ್ರಹ್ಮ ವಿಷಯವಾಗಿ ನನಗೆ ಉಪದೇಶವನ್ನು ಕೊಡಿರಿ. ಮತ್ತು ಈ ಜಗತ್ತಿನಲ್ಲಿ ಕ್ಷರ ಯಾವುದು ಅಕ್ಷರ ಯಾವುದು ಇದನ್ನು ತಿಳಿಸಿರಿ. ಶುಭ ಯಾವುದು? ಅಶುಭ ಯಾವುದು? ಕ್ಷೇಮ ಯಾವುದು? ಅಕ್ಷೇಮ ಯಾವುದು? ಇದನ್ನು ನನಗೆ ತಿಳಿಸಿ ಹೇಳಿರಿ.

**ವಶಿಷ್ಠ:-** ಮಹಾರಾಜ ಜನಕ, ಈ ಜಗತ್ತೆಲ್ಲವೂ ''ಕ್ಷರತಿ'' ಎಂದರೆ ನಾಶವಾಗುತ್ತದೆ ಆದುದರಿಂದ ಇದಕ್ಕೆ ಕ್ಷರ ಎನ್ನುವರು. ಹನ್ನೆರಡು (ದೇವತಾ ಮಾನದ) ಸಾವಿರ ವರ್ಷಗಳು ತಿರುಗಿದರೆ ಒಂದು ಮಹಾಯುಗ. ಸಾವಿರ ಮಹಾಯುಗ ತಿರುಗಿದರೆ ಬ್ರಹ್ಮದೇವರ ಒಂದು ಹಗಲು. ಅಷ್ಟೇ ರಾತ್ರಿ ಆ ರಾತ್ರಿಯ ಕೊನೆಯ ಭಾಗದಲ್ಲಿ ಅನಂತರ ಪುರುಷೋತ್ತಮ, ವಾಸುದೇವ, ಪದ್ಮನಾಭ ಎಂದು ಕರೆಯಲ್ಪಡುವ ಆ ಭಗವಂತನು ಪ್ರಬುದ್ಧನಾಗುತ್ತಾನೆ. ಯೋಗನಿದ್ರೆಯಿಂದ ಜೀವಜಾತಿ ಜನ ಜಂಗುಳಿಯನ್ನೆಲ್ಲ ನಿರ್ಮಾಣ ಮಾಡುತ್ತಾನೆ. ಕೊನೆಗೆ ನಾಶ ಮಾಡುತ್ತಾನೆ. ಅವನಿಗೆ ಮಾತ್ರ ನಾಶವಿಲ್ಲ. ಆದುದರಿಂದಲೇ ಅವನು ಅಕ್ಷರ.

ನಾಶವಿಲ್ಲದವ ಜನನ ಮರಣ ಎರಡೂ ಇಲ್ಲದ ಅವನು ಅಕ್ಷರ ಪುರುಷೋತ್ತಮ ಎನಿಸುವ. ಅವನಿಗೆ ಜನ್ಮವಿಲ್ಲ. ಅಸಂಖ್ಯ ಜೀವಿಗಳನ್ನು ಜನ್ಮಕ್ಕೆ ತರುತ್ತಾನೆ. ಸ್ವಯಂ ಅಮೂರ್ತನಾದರೂ ಪ್ರಾಕೃತ ದೇಹ ರಹಿತನಾದರೂ ಆ ಪರಮಾತ್ಮನು ಅನಂತ ಜೀವಿಗಳಿಗೆ ದೇಹಗಳನ್ನು ಕೊಡುತ್ತಾನೆ. ಸ್ವಯಂ ಚತುರ್ಮುಖ ಬ್ರಹ್ಮನಲ್ಲಿ ನಿಂತು ತದಂತರ್ಗತನಾಗಿ ಆ ಪರಮಾತ್ಮನು ಮೊಟ್ಟ ಮೊದಲು ವಿಶ್ವವನ್ನೆಲ್ಲ ತಾನೇ ಹುಟ್ಟಿಸುತ್ತಾನೆ. ಆ ಶಕ್ತಿಯನ್ನು ಅವನಿಗೂ ಕೊಟ್ಟು ಬ್ರಹ್ಮದೇವರನ್ನು ಮೊದಲು ತಾನೇ ಹುಟ್ಟಿಸಿದನು. ಅವನಿಗೆ ಪುರುಷ ಎಂತಲೂ, ಕರೆಯುವರು. ಭಗವಂತನ ಜಗದಾತ್ಮಕವಾದ ವಿರಾಟ್‌ದೇಹವನ್ನು ಬ್ರಹ್ಮದೇವರು ವ್ಯಾಪಿಸಿ ನಿಂತುಕೊಂಡರು. ಅವರಿಗೆ ಹಿರಣ್ಯಗರ್ಭ ಎಂತಲೂ ಕರೆಯುತ್ತಾರೆ. ಆ ಬ್ರಹ್ಮದೇವನು ಭಗವಂತನ ಆಜ್ಞೆಯಿಂದ ಸೃಷ್ಟಿಕರ್ಮದಲ್ಲಿ ಉನ್ಮುಖನಾದನು. ಭಗವದಿಚ್ಛೆ, ಜೀವರ ಅದೃಷ್ಟ, ಮುಂತಾದವುಗಳಿಂದ ಅವ್ಯಕ್ತವು ವಿಕಾರ ಹೊಂದಿ ಮಹತತ್ವರ ಉತ್ಪತ್ತಿಗೆ ಕಾರಣವಾಯಿತು. ಪ್ರಧಾನವು ಅವ್ಯಕ್ತವಾಗಿದ್ದರೂ ಮಹತತ್ವದ ಅಭಿವ್ಯಕ್ತಿಗೆ ಕಾರಣವಾಯಿತು. ಮಹತತ್ವದಿಂದ ಅಹಂಕಾರ ತತ್ವವು ಉದಿಸಿತು. ಮೊದಲನೆಯ ಸೃಷ್ಟಿ ಮಹತತ್ವದ ಸೃಷ್ಟಿ. ಎಡನೆಯ ಸೃಷ್ಟಿ ಅಹಂಕಾರದ ಸೃಷ್ಟಿ. ಮೂರನೆಯ ಸೃಷ್ಟಿಯು ಪಂಚಮಹಾಭೂತಗಳ ಸೃಷ್ಟಿಯು. ವೈಕಾರಿಕ ಅಹಂಕಾರಿಕ ಸೃಷ್ಟಿಯು ನಾಲ್ಕನೆಯ ಸೃಷ್ಟಿ. ವೈಕಾರಿಕ ಅಹಂಕಾರ ದಿಂದಲೇ ಮನಸ್ಸು ಮತ್ತು ದೇವತೆಗಳ ದೇಹಗಳು ಹುಟ್ಟಿದವು.

ತಾಮಸ ಅಹಂಕಾರದಿಂದ ಆಕಾಶವಾಯು ತೇಜ ಅಗ್ನಿ ಪೃಥ್ವಿ ಎಂಬ ಪಂಚ ಮಹಾಭೂತಗಳು ಮತ್ತು ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ತನ್ಮಾತ್ರೆಗಳೂ ಕೂಡಿಯೇ ಹುಟ್ಟಿದವು. ತೈಜಸ ಅಹಂಕಾರದಿಂದ ಪಂಚಕರ್ಮೇಂದ್ರಿಯ ಮತ್ತು ಪಂಚ ಜ್ಞಾನೇಂದ್ರಿಯ ಇವು ಐದು ಹುಟ್ಟಿದವು. ಕಿವಿ, ಕಣ್ಣು, ತೊಗಲು, ಮೂಗು, ನಾಲಿಗೆ ಇವು ಐದು ಜ್ಞಾನೇಂದ್ರಿಯಗಳು ಕೈ ಕಾಲು ವಾಗಿಂದ್ರಿಯ ಹಿಂದಿನ ಇಂದ್ರಿಯ ಮತ್ತು ಮುಂದಿನ ಇಂದ್ರಿಯ ಇವು ಐದು ಕರ್ಮೇಂದ್ರಿಯಗಳು ಉತ್ಪನ್ನವಾದವು. ಮನಸ್ಸು ಹನ್ನೊಂದನೆಯ ಇಂದ್ರಿಯ. ಪಂಚಮಹಾಭೂತಗಳು ಪಂಚತನ್ಮಾತ್ರೆಗಳು. ಒಟ್ಟು ಇಪ್ಪತ್ತು ಮನಸ್ಸನ್ನು ಕೂಡಿಸಿದರೆ ಇಪ್ಪತ್ತೊಂದು. ಮಹತತ್ವ, ಅಹಂಕಾರತತ್ವ, ಬುದ್ಧಿತತ್ವಕೂಡಿ ಒಟ್ಟು ಇಪತ್ನಾಲ್ಕು ತತ್ವಗಳು ಬ್ರಹ್ಮದೇವರಿಂದ ಸೃಷ್ಟಿಯಾದವು ಈ ಚತುರ್ವಿಂಶತಿ ತತ್ವಗಳಿಂದಲೇ ಈ ಜಗತ್ತೆಲ್ಲವೂ ರೂಪಗೊಂಡಿದೆ. ಈ ಎಲ್ಲ ತತ್ವಗಳು ಕೂಡಿ, ಬ್ರಹ್ಮದೇವರ ಪಿಂಡಾಂಡ ಬ್ರಹ್ಮಾಂಡ ರಚನೆಗೆ ಕಾರಣವಾದವು. ಭಗವದಿಚ್ಛೆಯಿಂದ ಕೊನೆಗೆ ಇವೆಲ್ಲವೂ ನಾಶ ಹೊಂದುತ್ತವೆ. ಆದ್ದರಿಂದ ಇವುಗಳಿಗೆ ''ಕ್ಷರ'' ಎಂದು ಹೆಸರು. ಈ ಚತುರ್ವಿಂಶತಿ ತತ್ವಗಳನ್ನು ಬ್ರಹ್ಮದೇವರ ಮುಖಾಂತರವಾಗಿ ಸೃಜಿಸಿ, ನಿಯಮಿಸಿ ಅವುಗಳೆಲ್ಲದಕ್ಕೂ ಸತ್ತಾಪ್ರದನೂ ನಿಯಾಮಕನೂ ಅಂತರ್ಯಾಮಿಯೂ ಪ್ರೇಕರನೂ, ಕಾರಕನೂ, ಆಗಿ ನಿಂತುಕೊಂಡ ಶ್ರೀಹರಿಯೆ ಅಕ್ಷರ ಎಂಬ ಇಪ್ಪತ್ತೈದನೆಯ ತತ್ವ. ಇಪ್ಪತ್ನಾಲ್ಕು ತತ್ವಗಳಿಂದ ರೂಪಿತವಾದ ಜಗತ್ತೆಲ್ಲ ಅನಿತ್ಯ. ಆದರೆ ಇದನ್ನು ರೂಪಿಸಿದ ರೂವಾರಿ ಇಪ್ಪತ್ತೈದನೆಯ ತತ್ವ ಮಾತ್ರ ಅವ್ಯಕ್ತ, ಸತ್ಯ, ನಿತ್ಯ, ಎಲ್ಲರ ಹೃದಯಾಕಾಶದಲ್ಲಿ ಇರುವವನೇ ಅವನು. ಎಲ್ಲರಲ್ಲಿಯೂ ಚೈತನ್ಯವನ್ನು ತುಂಬಿರುವವನೂ, ಚೇಷ್ಟಾಪ್ರದನಾದವನೂ ಆ ಭಗವಂತನೇ ಅವನು ಸರ್ವಮೂರ್ತಿಯೂ ಹೌದು, ಅಮೂರ್ತಿಯೂ ಹೌದು, ಅವನು ಸಗುಣನೂ ಹೌದು, ನಿರ್ಗುಣನೂ ಹೌದು. ಸಗುಣ ಎಂದರೆ ಸರ್ವಸದ್ಗುಣ ಸಂಪನ್ನ ಎಂದು ಅರ್ಥನಿರ್ಗುಣ ಎಂದರೆ ಪ್ರಾಕೃತವಾದ ಸತ್ವಾದಿ ಗುಣರಹಿತ ಎಂದು ಅರ್ಥ.

ಸಾವಿರಾರು ಸಲ ಇಂಥ ಸೃಷ್ಟಿಗಳನ್ನು, ಸಾವಿರಾರು ಸಲ ಇವುಗಳಿಗೆ ಪ್ರಳಯಗಳನ್ನು ತಂದು ಕೊಟ್ಟು ಕಾಲಾತೀತನಾಗಿ ಕಾಲನಿಯಾಮಕನಾಗಿ ನಿಂತುಕೊಂಡವನೇ ಪರಮಾತ್ಮ. ಅವನಿಗೆ ಎಂದೂ ಪ್ರಳಯವೂ ಇಲ್ಲ. ನಾಶವೂ ಇಲ್ಲ.

## ಬ್ರಹ್ಮಪುರಾಣ ಉಪಸಂಹಾರ

**ವಶಿಷ್ಠ:-** ಕರಾಲಜನಕನೆ, ನೀನು ಈಗ ನನ್ನನ್ನು ಪ್ರಶ್ನಿಸಿದಂತೆ ಹಿಂದೆ ನಾನು ಬ್ರಹ್ಮದೇವರನ್ನು ಕೇಳಿದ್ದೆ. ಅವರು ಹೇಳಿದ ಸಾಂಖ್ಯಯೋಗ ಕ್ಷರಾಕ್ಷರ ವಿಚಾರ ಪಂಚ ವಿಂಶತಿ ತತ್ತ್ವ ಜೀವ, ಪರಮಾತ್ಮ ಮುಂತಾದ ವಿಷಯಗಳನ್ನೆಲ್ಲ ಅದೇ ರೀತಿಯಿಂದ ನಿನಗೆ ನಾನು ಹೇಳದ್ದೇನೆ. ನಿನಗಾವ ಭಯವೂ ಇಲ್ಲ. ಪರಬ್ರಹ್ಮದ ಸ್ವರೂಪ ಭೂತವಾದ ನಿಜವಾದ ತತ್ತ್ವಜ್ಞಾನವನ್ನು ನೀನು ಭಕ್ತಿಯಿಂದ ಕೇಳಿರುವೆ. ನೀನು ಆ ಪರಬ್ರಹ್ಮನ ಪೂರ್ಣ ಪ್ರಸಾದಕ್ಕೆ ಪಾತ್ರನಾಗಿರುವೆ.

**ವೇದವ್ಯಾಸ:-** ಈ ದಿವ್ಯವಾದ ಸಾಂಖ್ಯಯೋಗ ತತ್ತ್ವಜ್ಞಾನವನ್ನು ವಶಿಷ್ಠರು ಪೂರ್ವಕಾಲದಲ್ಲಿ ಬ್ರಹ್ಮದೇವರಿಂದ ಕೇಳಿ ತಿಳಿದುಕೊಂಡಿದ್ದರು. ವಶಿಷ್ಠರು ನಾರದರಿಗೆ ಹೇಳಿದರು. ನಾರದರು ನನಗೆ ಹೇಳಿದರು. ನಾರದರು ಹೇಳಿದ ಆ ಯಥಾರ್ಥ ತತ್ತ್ವವನ್ನೆ ಋಷಿಗಳೇ ಈಗ ನಾನು ನಿಮಗೆ ಹೇಳಿದೆ. ಈ ಕ್ಷರಾಕ್ಷರ ವಿಜ್ಞಾನವನ್ನು ತಿಳಿದವನಿಗೆ ಸಂಸಾರದಲ್ಲಿ ಯಾವದೇ ಭಯಾಪಾಯವಿರುವದಿಲ್ಲ. ಇದನ್ನು ನಾಸ್ತಿಕರಿಗೂ ಭಕ್ತಿ ಇಲ್ಲದವರಿಗೂ ಸರ್ವಥಾ ಹೇಳಬಾರದು.

**ಸೂತ:-** ಶೌನಕಾದಿ ಮುನಿಗಳೇ, ಹಿಂದೆ ಭಗವಾನ್ ವೇದವ್ಯಾಸರು ತಮ್ಮನ್ನು ಕೇಳಲಿಕ್ಕೆ ಬಂದ ಮಹರ್ಷಿಗಳಿಗೆ ಬ್ರಹ್ಮಪುರಾಣವನ್ನು ತಮ್ಮ ತತ್ವಾರ್ಥೋಪ ಬೃಂಹಿತವಾದ ವಾಣಿಯಿಂದ ಯಥಾರ್ಥವಾಗಿ ನಿರೂಪಿಸಿದ್ದನ್ನು ಕೇಳಿ ಋಷಿಗಳಿಗೆಲ್ಲ ತೃಪ್ತಿ ಆಯಿತು. ಸಂತೋಷವೂ ಆಯಿತು. ಹದಿನೆಂಟು ಪುರಾಣಗಳಲ್ಲಿ ಮೊಟ್ಟ ಮೊದಲನೆಯ ಪುರಾಣವೇ ಬ್ರಹ್ಮಪುರಾಣ. ಇದು ವೇದಸಮ್ಮಿತ. ಅದನ್ನು ಕೇಳಿದ ಮುನಿಮಹರ್ಷಿಗಳೆಲ್ಲರೂ ಪರಮಪ್ರೀತರಾಗಿ ವೇದವ್ಯಾಸರಿಗೆ ನಮಿಸಿ, ''ಪೂಜ್ಯರೆ, ನೀವು ಸರ್ವಜ್ಞರು. ನಿಮ್ಮ ಮುಖದಿಂದ ಈ ಆದ್ಯ ಪುರಾಣವನ್ನು ಕೇಳಿ ನಾವು ಧನ್ಯರಾದೆವು. ಮಹಾಭಾರತವನ್ನು ರಚಿಸಿದ ಜ್ಞಾನ ಸ್ವರೂಪಿಗಳಾದ ನಿಮಗೆ ನಮೋನಮಃ. ಅಜ್ಞಾನದ ಕತ್ತಲೆಯಲ್ಲಿ ಕುರುಡರಾಗಿ ಕುಳಿತ ಮಾನವರ ಕಣ್ಣುಗಳನ್ನು ಜ್ಞಾನಾಂಜನ ಶಲಾಕೆಯಿಂದ ತಾವು ತೆರೆದಿದ್ದೀರಿ. ಜ್ಞಾನ ಜ್ಯೋತಿಯನ್ನು ಬೆಳಗಿದ್ದೀರಿ ನಮ್ಮನ್ನೆಲ್ಲ ಪಾವನಗೊಳಿಸಿದ್ದೀರಿ'' ಎಂದು ಹೇಳಿ ಅವರನ್ನು ಪೂಜಿಸಿ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು.

ಶೌನಕಾದಿಗಳೇ, ನೀವು ಪ್ರಶ್ನೆ ಮಾಡಿದ್ದರಿಂದ ನಾನು ವೇದವ್ಯಾಸರ ಅನುಗ್ರಹದಿಂದ ಈ ಇಡೀ ಬ್ರಹ್ಮಪುರಾಣವನ್ನು ಹೇಳಿದ್ದೇನೆ ಇದನ್ನು ಕೇಳಿದ ಬ್ರಾಹ್ಮಣ ಕ್ಷತ್ರಿಯ, ಶೂದ್ರ, ವೈಶ್ಯ ಸ್ತ್ರೀ ಪುರುಷ ಸಮಸ್ತರಿಗೂ ಧರ್ಮ, ಅರ್ಥ, ಆಯುಷ್ಯ, ಆರೋಗ್ಯ, ಸೌಭಾಗ್ಯ ಪ್ರಾಪ್ತಿ ಆಗುತ್ತದೆ.

*ಇಲ್ಲಿಗೆ ಬ್ರಹ್ಮ ಮಹಾಪುರಾಣದಲ್ಲಿ ಐವತ್ತೊಂದನೆಯ ಅಧ್ಯಾಯ ಮುಗಿಯುವುದರೊಂದಿಗೆ*

*ಬ್ರಹ್ಮಮಹಾಪುರಾಣ ಸಂಪೂರ್ಣಂ*

ಸರ್ವೇಜನಾಃ ಸುಖಿನೋ ಭವಂತು

ಓಂ ಶಾಂತಿಃ ಶಾಂತಿಃ ಶಾಂತಿಃ

